# ಇತಿಹಾಸ ದರ್ಶನ

ಸಂಪುಟ ೨೭

ಸಂಪಾದಕರು

ಡಾ॥ ಪಿ.ವಿ. ಕೃಷ್ಣಮೂರ್ತಿ

ಜಿ.ಕೆ. ದೇವರಾಜಸ್ವಾಮಿ




೨೦೧೨

ಕರ್ನಾಟಕ ಇತಿಹಾಸ ಅಕಾದೆಮಿ(ರಿ.), ಬೆಂಗಳೂರು

# ಇತಿಹಾಸ ದರ್ಶನ

## ಸಂಪುಟ ೨೭/೨೦೧೨



೨೦೧೧ರ ಸೆಪ್ಟೆಂಬರ್ ೯ ರಿಂದ ೧೧ ರವರೆಗೆ ಕರ್ನಾಟಕ ಇತಿಹಾಸ ಅಕಾದೆಮಿ ಹಾಗೂ ಬಿ.ಆರ್.ಆರ್. ಫ್ಯಾಮಿಲಿ ಟ್ರಸ್ಟ್, ಬೆಂಗಳೂರು ಇವರ ಸಂಯುಕ್ತ ಸಹಯೋಗದಲ್ಲಿ ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ ವಿದ್ವತ್ ಪ್ರಬಂಧಗಳ ಸಂಪುಟ.

ಸಂಪಾದಕರು

**ಡಾ॥ ಪಿ.ವಿ. ಕೃಷ್ಣಮೂರ್ತಿ**

**ಜಿ.ಕೆ. ದೇವರಾಜಸ್ವಾಮಿ**

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾ
ಗ್ರಂಥ ಭಂಡಾರ
ಕ್ರಮ ಸಂಖ್ಯೆ PERIODICALS
ವರ್ಗ
ವರ್ಗ ಸಂಖ್ಯೆ History
ಬಂದ ತಾ॥ 14/8/2019
ಬೆಲೆ Donated by Mr SG Shankaranarayana Member BMSP




**ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು**

# ITIHĀSA DARŚANA - *Volume 27 / 2012*

The Volume of the Scholarly papers presented and the General body Proceedings of the 25th Annual Conference of

**The Karnataka Ithihasa Academy** (Regd.,)
held at The Mythic Society, Bangalore.
on 9th, 10th & 11th September 2011


Pages : 464 + Lxiv + Plates XII

Edited by : **Dr. P. V. Krishna murthy**
**G.K. Devaraja Swamy**

Published by

Karnataka Itihasa Academy (Regd.)
B.M. Shri Kalabhavana premises
3rd Main, Narasimharaja Colony
Bangalore - 560 019.

e-mail **karnatakaitihasaacademy25@gmail.com**

Price : ₹ **400**

ಬೆಲೆ : ₹ ೪೦೦

ಪುಟಗಳು : ೪೬೪ + Lxiv + Plates XII



© ಆಯಾ ಲೇಖಕರದು



ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಗ್ರಂಥ ಭಂಡಾರ
ಕ್ರಮ ಸಂಖ್ಯೆ..........
ವರ್ಗ..........
ವರ್ಗ ಸಂಖ್ಯೆ..........
ಬಂದ ತಾ|| ..........
ಬೆಲೆ..........



ISBN No. 978-81-921255-2-7

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



## ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠ

ಬಾಳೇಹೊನ್ನೂರು-೫೭೭ ೧೧೨ ಚಿಕ್ಕಮಗಳೂರು ಜಿಲ್ಲೆ

**ಶ್ರೀಮದ್ ರಂಭಾಪುರಿ ವೀರಸಿಂಹಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು**

ದಿನಾಂಕ : ೦೧.೦೯.೧೨

## ಶುಭಾಶೀರ್ವಾದ ಸಂದೇಶ

ವಾಸ್ತವ್ಯ : ಶ್ರೀಪೀಠ, ಬಾಳೆಹೊನ್ನೂರು

ಆಧ್ಯಾತ್ಮಿಕತೆ ಬೆಳೆಸಿದ ದೇಶ ನಮ್ಮೀ ಭಾರತ. ಧರ್ಮ, ಸಂಸ್ಕೃತಿ, ಪರಂಪರೆ ಮತ್ತು ಆದರ್ಶಗಳೇ ಈ ದೇಶದ ಉಸಿರು. ಧರ್ಮಕ್ಕೆ ಧರ್ಮವೇ ಅಡಿಪಾಯ ಹೊರತು ಭೌತಿಕ ಸಂಪತ್ತಲ್ಲ. ನಿಜವಾದ ಅಧ್ಯಾತ್ಮ ಜ್ಞಾನವೇ ದೇಶದ ಅಮೂಲ್ಯ ಸಂಪತ್ತು. ಇತಿಹಾಸ ಮತ್ತು ಪರಂಪರೆಯ ಪ್ರಜ್ಞೆ ಎಲ್ಲರಲ್ಲೂ ಜಾಗೃತಗೊಳ್ಳಬೇಕು. ಮಾನವೀಯ ವತನವನ್ನು ಜೋಪಾನದಿಂದ ಕಾಪಾಡಿಕೊಂಡು ಬರದಿದ್ದರೆ ಸಮಾಜ ಪತನದತ್ತ ಸಾಗುವುದರಲ್ಲಿ ಅನುಮಾನವಿಲ್ಲ. ಅಜ್ಞಾನ ಮತ್ತು ಅಶಿಸ್ತು ಮನುಷ್ಯನ ಪ್ರಗತಿಗೆ ಅಡ್ಡಿಯೆಂದರೆ ತಪ್ಪಾಗದು.

ಬೆಳಕಿನಲ್ಲಿ ಬೆಳಕಿಗೆ ಬೆಲೆಯಿಲ್ಲದೇ ಇರಬಹುದು. ಆದರೆ ಕತ್ತಲೆಯಲ್ಲಿ ಕಿರಿ ದೀಪಕ್ಕೂ ಹಿರಿದಾದ ಮಹತ್ವ ಉಂಟು. ಗುಣಕ್ಕೆ, ಜ್ಞಾನಕ್ಕೆ, ಕರ್ತವ್ಯಕ್ಕೆ ಮನ್ನಣೆ ಕೊಡುವ ಕಾಲವೊಂದಿತ್ತು. ಆದರೆ ಇಂದು ಹಣ, ರಾಜಕೀಯ ಮತ್ತು ವಶೀಲಿಗೆ ಮನ್ನಣೆ ಸಿಗುತ್ತಿರುವುದರಿಂದ ಸುಸಂಸ್ಕೃತಿ ಸ್ವಲ್ಪ ಮಟ್ಟಿಗೆ ಕಡಿಮೆ ಆಗುತ್ತಿರುವುದು ನೋವಿನ ಸಂಗತಿ. ಬಿತ್ತಿದ ಬೀಜಕ್ಕೆ ನೀರು ಮತ್ತು ಗಾಳಿ ಎಷ್ಟು ಅವಶ್ಯಕವೋ ನೀತಿಗೆ ಧರ್ಮವು ಅಷ್ಟೇ ಅವಶ್ಯಕವಾಗಿದೆ. ಸ್ವಾರ್ಥಕ್ಕಾಗಿ ಆದರ್ಶಗಳು ನಾಶವಾಗಬಾರದು. ಅವು ಎಂದಿಗೂ ನಾಶವಾಗುವುದಿಲ್ಲ.

ಹಣ ಗಳಿಸುವುದೊಂದೇ ಮನುಷ್ಯನ ಧರ್ಮವಲ್ಲ. ಹಣ ಗಳಿಸಲು ನಮ್ಮೆಲ್ಲ ಆರೋಗ್ಯ ತ್ಯಾಗ ಮಾಡುತ್ತೇವೆ. ಆನಂತರ ಆರೋಗ್ಯ ಮರಳಿ ಗಳಿಸಲು ನಮ್ಮೆಲ್ಲ ಹಣವನ್ನು ಖರ್ಚು ಮಾಡುತ್ತೇವೆ. ಇಂಥ ವಿಪರ್ಯಾಸ ಆಗದಂತೆ ಎಚ್ಚರ ವಹಿಸಬೇಕಾದುದು ನಮ್ಮೆಲ್ಲರ ಧರ್ಮ. ಜಗದಲ್ಲಿ ಧರ್ಮ-ಸಂಸ್ಕೃತಿ ಶ್ರೇಷ್ಠವಾದದ್ದು. ಅದು ಎಲ್ಲರನ್ನೂ ಒಗ್ಗೂಡಿಸಿಕೊಂಡು ಹೋಗುವ ಕೊಂಡಿ ಎಂದರೆ ತಪ್ಪಾಗದು. ಸತ್ಯ ಸಂಸ್ಕೃತಿಯ ಬಗೆಗೆ ಮಾತನಾಡುವುದು ಸುಲಭ. ಆದರೆ ಅದನ್ನು ಉಳಿಸಿ ಬೆಳೆಸುವುದು ಕಷ್ಟದ ಕೆಲಸ.

ಬೆಳಕು ಎಲ್ಲಿಂದ ಬಂದರೂ ಅದಕ್ಕೆ ಸ್ವಾಗತ. ಆದರೆ ನಾವು ನಿಂತ ನೆಲ ಕುಸಿಯದಂತೆ ಎಚ್ಚರ ವಹಿಸಬೇಕು. ಹಗಲಿನಲ್ಲಿ ಸೂರ್ಯ, ಇರುಳಿನಲ್ಲಿ ಚಂದ್ರ ಬೆಳಕು ಕೊಡಬಲ್ಲ. ಆದರೆ ಎಲ್ಲಾ ಕಾಲದಲ್ಲೂ ಎಲ್ಲರಿಗೂ ಬೆಳಕು ನೀಡುವುದು ಧರ್ಮವೊಂದೆ. ಪ್ರಾಚೀನ ಇತಿಹಾಸ ಮತ್ತು ಸಂಸ್ಕೃತಿ ಭವಿಷ್ಯತ್ತಿನ ಬಾಳಿಗೆ ಬಲ ಮತ್ತು ದಿಕ್ಸೂಚಿ. ಸತ್ಯ ಮತ್ತು ದಯೆಯಿಂದ ಕೂಡಿದ ಮಾತಿಗೆ ಜಗತ್ತನ್ನು ಬದಲಾಯಿಸುವ ಮಹಾನ್ ಶಕ್ತಿ ಇದೆ. ನಂಬಿಕೆ ವಿಶ್ವಾಸಗಳಿಲ್ಲದ ಬದುಕು ಸೂರ್ಯನಿಲ್ಲದ ಆಕಾಶದಂತೆ ನಿಷ್ಪ್ರಯೋಜನ ಎಂಬುದನ್ನು ಯಾರೂ ಮರೆಯಬಾರದು.

ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು ಈ ಸಂಸ್ಥೆ ನಿರಂತರವಾಗಿ ವಾರ್ಷಿಕ ಸಮ್ಮೇಳನವನ್ನು ನಡೆಸಿಕೊಂಡು ಬರುತ್ತಿದೆ. ವಾರ್ಷಿಕ ಇತಿಹಾಸ ಸಮ್ಮೇಳನದಲ್ಲಿ ಮಂಡಿಸಲಾದ ಪ್ರಬಂಧಗಳನ್ನು ಸಂಕಲನಗೊಳಿಸಿ 'ಇತಿಹಾಸ ದರ್ಶನ ೨೭' ಸಂಪುಟವನ್ನು ಇದೀಗ ಹೊರತರಲಿರುವುದು ಸಂತೋಷದ ಸಂಗತಿ. ಸತ್ಯವನ್ನು ಸಾಧಿಸಲು ಹೊರಟರೆ ಸ್ತುತಿನಿಂದೆ ಬಂದೇ ಬರುತ್ತದೆ. ಇವುಗಳಿಗೆ ಅಂಜದೇ ಸತ್ಯದ ಇತಿಹಾಸವನ್ನು ಪ್ರಕಟಪಡಿಸುವುದು ಈ ಸಂಸ್ಥೆಯ ಧ್ಯೇಯ. ಸಂಸ್ಕೃತಿ, ಸಾಹಿತ್ಯ, ಪರಂಪರೆ ಮತ್ತು ಇತಿಹಾಸದ ಕುರುಹುಗಳನ್ನು ಬೆಳೆಸಿಕೊಂಡು ಬರುತ್ತಿದೆ. ಈ ನಿಟ್ಟಿನಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು ಅತ್ಯುತ್ತಮ ಕಾರ್ಯ ಮಾಡುತ್ತಿದೆ. ಡಾ. ದೇವರಕೊಂಡಾರೆಡ್ಡಿ ಮತ್ತು ಎಲ್ಲ ಸಂಪಾದಕ ಮಂಡಳಿಯ ಸಹಕಾರದಿಂದ ಇತಿಹಾಸ ದರ್ಶನ ೨೭ನೇ ಸಂಪುಟ ಸುಂದರವಾಗಿ ಮೂಡಿ ಬಂದಿರುವುದನ್ನು ಯಾರೂ ಮರೆಯಲಾಗದು. ಪ್ರತಿ ವರ್ಷದಂತೆ ಈ ವರ್ಷವೂ ಬಾಳೆಹೊನ್ನೂರು ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠದಿಂದ ರೂ. ೨೫೦೦೦/- (ಇಪ್ಪತ್ತೈದು ಸಾವಿರ)ಗಳನ್ನು ಸಂತೋಷದಿಂದ ಕೃತಿಯ ಮುದ್ರಣಕ್ಕಾಗಿ ಆಶೀರ್ವದಿಸಲಾಗಿದೆ. ಇದಕ್ಕಾಗಿ ಶ್ರಮಿಸಿದ ಸಂಸ್ಥೆಗೂ ಹಾಗೂ ಶ್ರಮಿಸಿದ ಎಲ್ಲ ಸದಸ್ಯರಿಗೂ ಶುಭ ಹಾರೈಕೆಗಳು.

ಪರಮದಯಾಳು ಶ್ರೀ ಪಾರ್ವತಿಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸಕಲರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

ಶುಭಾಶೀರ್ವಾದಗಳೊಂದಿಗೆ
**ಶ್ರೀ ರಂಭಾಪುರಿ ಜಗದ್ಗುರುಗಳು**
ಬಾಳೆಹೊನ್ನೂರು

**ವಾರ್ಷಿಕನಿಧಿ ರೂ. ೨೫ ಸಾವಿರ ಕೊಡುಗೆ ಆರಂಭಿಸಿದ ವರ್ಷ : ೨೦೦೫**

ಕರ್ನಾಟಕ ಇತಿಹಾಸ ಅಕಾದೆಮಿಯ
ರಜತೋತ್ಸವ ವರ್ಷದ ಸಮ್ಮೇಳನ
ದಾಸೋಹ ದಾನಿಗಳು



**ಬೈಸಾನಿ ಶ್ರೀಮತಿ ರುಕ್ಮಣಮ್ಮ, ಶ್ರೀ ರತ್ನಂ ಶೆಟ್ಟಿ**
**ಇವರ ಸ್ಮರಣಾರ್ಥ ಕುಟುಂಬ ವರ್ಗದವರು**
**ಸಾಮಗುಟ್ಟಪಲ್ಲಿ, ಕುಪ್ಪಂ ಮಂಡಲ, ಚಿತ್ತೂರು ಜಿಲ್ಲೆ, ಆಂಧ್ರ**




ಬೆಂಗಳೂರಿನ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದಲ್ಲಿ ಗಣ್ಯರೊಂದಿಗೆ ಪ್ರಶಸ್ತಿ ವಿಜೇತ ವಿದ್ಯಾರ್ಥಿಗಳು



ಕರ್ನಾಟಕದ ಕೋಟೆಗಳು – ಪರಂಪರೆ ವಸ್ತು ಸ್ಥಿತಿ ವಿಚಾರ ಸಂಕಿರಣ ಉದ್ಘಾಟನೆ



ಅಕಾದೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಸಭಿಕರು

ಮಿಥಿಕ್ ಸೊಸೈಟಿ ಬೆಂಗಳೂರಿನಲ್ಲಿ ನಡೆದ
ರಜತೋತ್ಸವ ವರ್ಷದ ಸಮ್ಮೇಳನಾಧ್ಯಕ್ಷರು



ಡಾ॥ ಎಚ್.ಎಸ್. ಗೋಪಾಲರಾವ್



ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೇ ವಾರ್ಷಿಕ ಸಮ್ಮೇಳನದ ಉದ್ಘಾಟನಾ ಸಂದರ್ಭದಲ್ಲಿ
ಶತಾಯುಷಿ ಜಿ. ವೆಂಕಟಸುಬ್ಬಯ್ಯ, ಸಮ್ಮೇಳನಾಧ್ಯಕ್ಷ ಡಾ॥ ಎಚ್.ಎಸ್. ಗೋಪಾಲರಾವ್, ಡಾ॥ ಎಸ್.ವಿ. ವೆಂಟೇಶಯ್ಯ,
ಡಾ॥ ಸೂರ್ಯನಾಥ ಕಾಮತ್, ಡಾ॥ ಎಂ.ಕೆ.ಎಲ್.ಎನ್. ಶಾಸ್ತ್ರೀ, ಡಾ॥ ದೇವರಕೊಂಡಾರೆಡ್ಡಿ, ಮತ್ತು ಮೊಹಮ್ಮದ್ ಶರೀಫ್



ಕರ್ನಾಟಕ ಇತಿಹಾಸ ಅಕಾದೆಮಿಯ ಇತಿಹಾಸ ದರ್ಶನದ ರಜತೋತ್ಸವ ಸಂಚಿಕೆ ಬಿಡುಗಡೆ ಸಮಾರಂಭ



ಇತಿಹಾಸ ದರ್ಶನದ ೨೫ ಸಂಪುಟಗಳ ಲೇಖನ–ಲೇಖಕರ ಸೂಚಿ ಬಿಡುಗಡೆ ಸಮಾರಂಭ



ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನಾಧ್ಯಕ್ಷ ಡಾ|| ಎಚ್.ಎಸ್.
ಗೋಪಾಲರಾವ್ ಅವರಿಗೆ ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರಿಂದ ಗೌರವಾರ್ಪಣೆ




ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾದ ಡಾ|| ಎಚ್.ಎಸ್. ಗೋಪಾಲರಾವ್ ಅವರಿಂದ ಅಧ್ಯಕ್ಷೀಯ ಭಾಷಣ



ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನದಲ್ಲಿ
ಬಾ.ರಾ. ಗೋಪಾಲ್ ಪ್ರಶಸ್ತಿ ಪುರಸ್ಕೃತ ಕೆ. ಮೊಹಮ್ಮದ್ ಶರೀಫ್ ಅವರಿಗೆ ಪ್ರಶಸ್ತಿ ಪ್ರದಾನ

# ಕರ್ನಾಟಕದ ಕೋಟೆಗಳು–ಪರಂಪರೆ ವಸ್ತುಸ್ಥಿತಿ : ವಿಚಾರ ಸಂಕಿರಣ



ವಿಚಾರ ಸಂಕಿರಣ ಸಮಾರಂಭದಲ್ಲಿ ಡಾ॥ ಕೆ.ಆರ್. ರಾಮಕೃಷ್ಣ, ಡಾ॥ ದೇವರಕೊಂಡಾರೆಡ್ಡಿ, ಶ್ರೀ ಬಸವರಾಜ್ ಡಾ॥ ಸೂರ್ಯನಾಥ ಕಾಮತ್, ಡಾ॥ ಎಂ.ಜಿ. ನಾಗರಾಜ್



ಸುಂಕಂ ಗೋವರ್ಧನ್ ಅವರ ಕನ್ನಡ ನಾಡಿನ ಪ್ರಮುಖ ಕೋಟೆಗಳು ಪುಸ್ತಕ ಬಿಡುಗಡೆ ಸಮಾರಂಭ



ವಿಚಾರ ಸಂಕಿರಣ ಸಭೆಯಲ್ಲಿ ಗಣ್ಯರು



ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಬಸವರಾಜ್ ಭಾ.ಆ.ಸೇ ಅವರು ವಿಚಾರ ಸಂಕಿರಣವನ್ನು ಉದ್ದೇಶಿಸಿ ಮಾತನಾಡುತ್ತಿರುವುದು.



ವಿಚಾರ ಸಂಕಿರಣ ಸಮಾರಂಭದಲ್ಲಿ ಪಾಲ್ಗೊಂಡ ಗಣ್ಯರು

# ಅಧ್ಯಕ್ಷರ ನುಡಿ

ಕರ್ನಾಟಕ ಇತಿಹಾಸ ಅಕಾದೆಮಿಯು ರಜತಮಹೋತ್ಸವವನ್ನು ಪೂರೈಸಿ ೨೬ನೆಯ ವರ್ಷಕ್ಕೆ ಕಾಲಿಟ್ಟಿದೆ. ಇದುವರೆಗೂ ಅಕಾದೆಮಿಯ ಸದಸ್ಯರು ಮತ್ತು ಪದಾಧಿಕಾರಿಗಳು ಇದನ್ನು ಜತನದಿಂದ ಕಾಪಾಡಿಕೊಂಡು ಬಂದಿದ್ದಾರೆ. ಇದರೊಂದಿಗೆ ತಾವೂ ಬೆಳೆದಿದ್ದಾರೆ. ಡಾ. ಸೂರ್ಯನಾಥ ಯು. ಕಾಮತರ ನೇತೃತ್ವದಲ್ಲಿ ಇತಿಹಾಸದ ಮೇಲಿನ ಪ್ರೀತಿಯಿಂದ ಪ್ರಾರಂಭವಾದ ಈ ಸಂಸ್ಥೆ ಪಂಡಿತ–ಪಾಮರರಲ್ಲಿ ಸುಪ್ತವಾಗಿದ್ದ ಜ್ಞಾನಭಂಡಾರವನ್ನು ಬರವಣಿಗೆ ಮಾಧ್ಯಮದಲ್ಲಿ ದಾಖಲಿಸುವ ಸಲುವಾಗಿ ಅದೇ ವರ್ಷ 'ಇತಿಹಾಸ ದರ್ಶನ' ಎಂಬ ವಾರ್ಷಿಕ ಸಂಪುಟವನ್ನು ಪ್ರಾರಂಭಿಸಿತು. ಇಂದು ಇದು ೨೬ನೆಯ ಸಂಪುಟವಾಗಿ ಹೊರಹೊಮ್ಮುತ್ತಿದೆ. ಇತಿಹಾಸ ದರ್ಶನದಲ್ಲಿ ತಮ್ಮ ಆರಂಭಿಕ ಸಂಶೋಧನಾ ಪ್ರಬಂಧಗಳನ್ನು ಬರೆದ ಅಂದಿನ ಅನೇಕ ಯುವ ವಿದ್ವಾಂಸರು ಇಂದು ಪ್ರೌಢಸಂಶೋಧಕರಾಗಿದ್ದಾರೆ. ಹೊಸ–ಹೊಸ ಹುಡುಕಾಟಗಳಲ್ಲಿ ತೊಡಗಿ ಇತಿಹಾಸ ದರ್ಶನಕ್ಕಾಗಿ ಹೊಸತನ್ನು ತಂದು ಸೇರಿಸುತ್ತಿದ್ದಾರೆ. ೨೬ ವರ್ಷಗಳ ಕಾಲ ಸಮ್ಮೇಳನಗಳಲ್ಲಿ ಭಾಗವಹಿಸಿ ವಿದ್ವತ್ಪೂರ್ಣ ಲೇಖನಗಳನ್ನು ಮಂಡಿಸಿ ತಮ್ಮ ತಮ್ಮ ಕ್ಷೇತ್ರಗಳನ್ನು ಈ ಮೂಲಕ ಶ್ರೀಮಂತಗೊಳಿಸಿದ್ದಾರೆ. ಇಂದಿಗೂ ಅನೇಕ ಯುವ ಶೋಧಕರ ಬರವಣಿಗೆಯ ಆಶ್ರಯವಾಗಿ 'ಇತಿಹಾಸ ದರ್ಶನ' ಹೊರಬರುತ್ತಿದೆ.

೨೦೧೨ರ ಮಾರ್ಚ್ ತಿಂಗಳ ೨೫ ಮತ್ತು ೨೬ರಂದು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಹಾಗೂ ಪರಂಪರೆ ಇಲಾಖೆ ಇವರ ಆರ್ಥಿಕ ನೆರವಿನೊಂದಿಗೆ 'ಕರ್ನಾಟಕದ ಕೋಟೆಗಳು – ಪರಂಪರೆ, ವಸ್ತುಸ್ಥಿತಿ' ಎಂಬ ವಿಚಾರ ಸಂಕಿರಣವನ್ನು ಬೆಂಗಳೂರಿನಲ್ಲಿ ಹಮ್ಮಿಕೊಳ್ಳಲಾಗಿತ್ತು. ಕೋಟೆಗೆ ಸಂಬಂಧಿಸಿದ ಅನೇಕ ಹೊಸ ವಿವರಗಳು, ಆಕರಗಳು, ರಕ್ಷಣೆಗೆ ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಪ್ರಬಂಧಗಳ ಮಂಡನೆಯಾಯಿತು. ವಿದ್ವತ್ ವಲಯದಿಂದ ಇದರ ಬಗ್ಗೆ ಒಳ್ಳೆಯ ಅಭಿಪ್ರಾಯ ಮೂಡಿಬಂತು.

ಕರ್ನಾಟಕ ಇತಿಹಾಸ ಅಕಾದೆಮಿಯ ಚಟುವಟಿಕೆ ಇಷ್ಟಕ್ಕೆ ಸೀಮಿತವಾಗಿಲ್ಲ. ರಾಜ್ಯದಲ್ಲಿ ಅನಾದಾರಣೆಗೆ ಒಳಗಾಗಿರುವ ಕರ್ನಾಟಕದ ದೇವಾಲಯಗಳು, ಮೂರ್ತಿಶಿಲ್ಪಗಳು, ಕೋಟೆಗಳು, ಶಾಸನಗಳು ನಶಿಸುತ್ತಿರುವ ಕೆರೆಗಳು, ಐತಿಹಾಸಿಕ ಮಹತ್ವವುಳ್ಳ ಹಿಂದೂ, ಇಸ್ಲಾಂ, ಕ್ರೈಸ್ತ ಕಟ್ಟಡಗಳು ಹಾಗೂ ಇತರ ಸ್ಮಾರಕಗಳ ಮಹತ್ವವನ್ನು ಸ್ಥಳೀಯರಿಗೆ ತಿಳಿಸಿ ಅವಕ್ಕೆ ಅವರಿಂದ ಹಾನಿಗೊಳಾಗಾಗದಂತೆ ತಡೆಯುವ ಪ್ರಯತ್ನವನ್ನು ಮಾಡುವ ಸಲುವಾಗಿ 'ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ' ಎಂಬ ಕಾರ್ಯಕ್ರಮವನ್ನು ಹಮ್ಮಿಕೊಂಡು ಕಾರ್ಯಪ್ರವೃತ್ತವಾಗಿದೆ. ಬೆಂಗಳೂರಿನಲ್ಲಿ ಸಾಂಕೇತಿಕವಾಗಿ ಪ್ರಾರಂಭವಾಗುವ ಈ ಕಾರ್ಯಕ್ರಮವು ರಾಜ್ಯದಾದ್ಯಂತ ಇರುವ ನಮ್ಮ ಸದಸ್ಯರು ಸ್ವಯಂಪ್ರೇರಿತವಾಗಿ ತಮ್ಮ ಸ್ಥಳಗಳಲ್ಲಿ ನಡೆಸುತ್ತಿದ್ದಾರೆ. ಇಂದು ಕರ್ನಾಟಕದಾದ್ಯಂತ ಸ್ವಲ್ಪಮಟ್ಟಿನ ಯಶಸ್ಸನ್ನು ಕಂಡಿದೆ. ಆರಂಭದಲ್ಲಿ 'ಸ್ಟೇಟ್ ಬ್ಯಾಂಕ್ ಆಫ್ ಮೈಸೂರು' ಇವರ ಆರ್ಥಿಕ ಸಹಾಯದಿಂದ ಆರಂಭವಾದ ಈ ಕಾರ್ಯ ಇಂದು ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು, ವಸ್ತುಸಂಗ್ರಾಹಾಲಯ ಮತ್ತು ಪರಂಪರೆಯ ಇಲಾಖೆಯ ಉದಾರ ಧನ ಸಹಾಯದಿಂದ ಇನ್ನೂ ವಿಸ್ತಾರಗೊಂಡಿದೆ.

ಈ ಸಂಪುಟದಲ್ಲಿ ಪ್ರಕಟವಾಗಿರುವ ಲೇಖನಗಳು ಕಳೆದ ವರ್ಷ ಬೆಂಗಳೂರಿನ ಶತಮಾನದ ಸಂಸ್ಥೆ ಎಂಬ ಹೆಗ್ಗಳಿಕೆ ಹೊಂದಿರುವ 'ದಿ ಮಿಥಿಕ್ ಸೊಸೈಟಿ' ಮತ್ತು ಬೆಂಗಳೂರಿನ 'ಬಿ.ಆರ್.ಆರ್. ಫ್ಯಾಮಿಲಿ ಟ್ರಸ್ಟ್' ಸಹಯೋಗದಲ್ಲಿ ನಡೆದ ೨೫ನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳಾಗಿವೆ ಈ ಸಂಪುಟದಲ್ಲಿ ಒಟ್ಟು ೧೦೩ ಪ್ರಬಂಧಗಳು ಪ್ರಕಟವಾಗಿದ್ದು, ಇವು ಕರ್ನಾಟಕ ಇತಿಹಾಸದ ಪೂರಕ ಕೊಂಡಿಗಳಂತಿವೆ.

ಈ ಸಂಪುಟವನ್ನು ಡಾ॥ ಪಿ.ವಿ. ಕೃಷ್ಣಮೂರ್ತಿ ಮತ್ತು ಶ್ರೀ ಜಿ.ಕೆ. ದೇವರಾಜಸ್ವಾಮಿಯವರು ಅಚ್ಚುಕಟ್ಟಾಗಿ ಶ್ರಮವಹಿಸಿ ಸಂಪಾದಿಸಿದ್ದಾರೆ. ಇವರಿಗೆ ಹೃತ್ಪೂರ್ವಕ ವಂದನೆಗಳು.

ದಿನೇ ದಿನೇ ಸಂಪುಟದ ಪ್ರಕಟಣಾ ವೆಚ್ಚ ಹೆಚ್ಚಾಗುತ್ತಲೇ ಇದೆ. ಈ ಸಲ ಸಂಪುಟದ ಪ್ರಕಟಣೆಗಾಗಿ ೨೦೦೫ನೆಯ ಇಸವಿಯಿಂದ ಶ್ರೀಶ್ರೀಶ್ರೀ ರಂಭಾಪುರೀ ಜಗದ್ಗುರುಗಳು ರೂ. ೨೫೦೦೦/–ವನ್ನು ಇದರ ಪ್ರಕಟಣೆಗಾಗಿ ಆಶೀರ್ವಾದ ಪೂರ್ವಕವಾಗಿ ನೀಡುತ್ತಾ ಬಂದಿದ್ದಾರೆ. ಹಾಗೆಯೇ ಕಳೆದ ವರ್ಷದಿಂದ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳು ಹಾಗೂ ಪರಂಪರೆಯ ಇಲಾಖೆಯು ಒಂದು ಲಕ್ಷ ರೂಪಾಯಿಗಳ ನೆರವು ನೀಡಿದ್ದು ಈ ಸಂಪುಟವು ಅಚ್ಚುಕಟ್ಟಾಗಿ ಮುದ್ರಣಗೊಂಡು ಹೊರ ಬರಲು ನೆರವಾಗುತ್ತಿದೆ. ಈ ಸಂಸ್ಥೆಯ ಆಯುಕ್ತರನ್ನು ತುಂಬು ಹೃದಯದಿಂದ ನೆನೆಯುತ್ತೇವೆ. ಈ ಸಂಪುಟವನ್ನು ವಿದ್ವತ್‌ವಲಯದ ಜನರು ಹಾರ್ದಿಕವಾಗಿ ಸ್ವಾಗತಿಸುತ್ತಾರೆಂದು ಆಶಿಸುತ್ತೇವೆ.

೧೮ ಸೆಪ್ಟೆಂಬರ್ ೨೦೧೨
ಬೆಂಗಳೂರು

**ದೇವರಕೊಂಡಾರೆಡ್ಡಿ**
ಅಧ್ಯಕ್ಷರು
ಕರ್ನಾಟಕ ಇತಿಹಾಸ ಅಕಾದೆಮಿ

# ಸಂಪಾದಕೀಯ

ಸಹ್ಯಾದ್ರಿ ಘಟ್ಟಗಳ ಪ್ರಶಾಂತ ರಮಣೀಯ ತಪ್ಪಲಿನಲ್ಲಿ ಗಿರಿಶೃಂಗಗಳ ನಿಸರ್ಗಮೋಹಕ ಪರಿಸರದ ನಡುವೆ, ತುಂಗಾನದಿಯ ತಟದಲ್ಲಿ ಆದಿ ಶಂಕರಾಚಾರ್ಯರಿಂದ ಸ್ಥಾಪಿತವಾಗಿರುವ ಶೃಂಗೇರಿಯು ಇಂದು ಕರ್ನಾಟಕ ರಾಜ್ಯದ ಚಿಕ್ಕಮಗಳೂರು ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರವಾಗಿದೆ. ಐತಿಹ್ಯಗಳಂತೆ ವಿಭಾಂಡಕ ಮುನಿಗಳು, ಇವರ ಪುತ್ರರಾದ ಋಷ್ಯಶೃಂಗ ಮುನಿಗಳು ತಪಸ್ಸು ಮಾಡಿದ ಪ್ರದೇಶವೆಂಬ ಕಾರಣದಿಂದ ಇದಕ್ಕೆ ಋಷ್ಯಶೃಂಗಗಿರಿಯೆಂಬ ಹೆಸರು ಪ್ರಸಿದ್ಧವಾಗಿ ಇದೇ ಕಾಲಾನಂತರ ಶೃಂಗೇರಿಯಾಗಿದೆ ಎಂಬ ಅಂಶ ಗಮನಾರ್ಹ. ಆದರೆ ಶೃಂಗೇರಿಯಲ್ಲಿನ ಸಿಂಹಗಿರಿಯೇ ಪ್ರಾಚೀನ ಶೃಂಗೇರಿಯೆಂಬ ವಿವರ ಕೂಡ ಗಮನಾರ್ಹವೆನಿಸಿದ್ದು ಸಿಂಹಗಿರಿ ಎಂಬ ರೂಪವೇ ಸಿಂಗೇರಿ, ಶೃಂಗೇರಿ ಎಂದಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಕ್ರಿ.ಶ. ಸುಮಾರು ೮ ನೆಯ ಶತಮಾನದಲ್ಲಿ ಆದಿ ಶಂಕರಾಚಾರ್ಯರು ಧರ್ಮಪೀಠವನ್ನು ಸ್ಥಾಪಿಸಿದರೆಂದು ಪ್ರತೀತಿ. ಅಂದಿನಿಂದ ಇಂದಿನವರೆಗೂ ಇಲ್ಲಿನ ಜಗದ್ಗುರುಗಳ ಪೀಳಿಗೆ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ವಿದ್ಯಾತೀರ್ಥರು, ವಿದ್ಯಾರಣ್ಯರ ತಪೋಭೂಮಿ ಇದಾಗಿದೆ. ಇದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಣೆ, ಪ್ರೋತ್ಸಾಹಗಳನ್ನು ಇತ್ತ ಧರ್ಮಸಂಸ್ಥಾನವೆಂದು ಖ್ಯಾತಿ ಪಡೆದಿದೆ. ಇಲ್ಲಿನ ಕ್ರಿ.ಶ. ಸುಮಾರು ೧೩೩೮ ರಲ್ಲಿ ನಿರ್ಮಿಸಲಾದ ವಿದ್ಯಾಶಂಕರ ದೇಗುಲವೆಂದು ಪ್ರಸಿದ್ಧಿಪಡೆದಿರುವ ವಿದ್ಯಾತೀರ್ಥರ ಸಮಾಧಿ ದೇಗುಲವು ಗಜಪೃಷ್ಠಾಕಾರದ ನಿರ್ಮಿತಿಯಾಗಿದ್ದು ಭರತಖಂಡದಲ್ಲೇ ಅದ್ವಿತೀಯವಾದುದಾಗಿದೆ. ಇದರಂತೆಯೇ ಕಿಗ್ಗದ ದೇವಾಲಯ, ಚತುರ್ಮೂರ್ತಿ ವಿದ್ಯೇಶ್ವರ ದೇಗುಲಗಳು, ಶಾರದೆಯ ದೇಗುಲ, ಮಲ್ಲಿಕಾರ್ಜುನ ದೇಗುಲ, ಜೈನ ಬಸದಿ, ನರಸಿಂಹವನ ಮುಂತಾದ ಸ್ಥಳಗಳು ಪ್ರಖ್ಯಾತಿ ಪಡೆದಿವೆ. ಭಾರತದಲ್ಲೇ ವಿವಿಧ ಸಾಮ್ರಾಜ್ಯಗಳು, ವ್ಯಕ್ತಿಗಳು ನೀಡಿದ ಅಪಾರ ಸಂಖ್ಯೆಯ ದಾನ ದತ್ತಿಗಳ ವಿವರಗಳನ್ನು ಒಳಕೊಂಡ ಕಡತಗಳು ಪತ್ತೆಯಾಗಿ, ಪ್ರಕಟವಾಗಿರುವುದು ಶೃಂಗೇರಿಯಲ್ಲಿಯೇ ಎಂಬುದು ಗಮನಾರ್ಹ ಅಂಶವಾಗಿದೆ. ಇವೇ ಅಲ್ಲದೆ ಅಪಾರ ಸಂಖ್ಯೆಯ ತಾಮ್ರಪಟಗಳು, ಶಿಲಾಶಾಸನಗಳು, ಕಾಗದದ ದಾಖಲೆ ಪತ್ರಗಳು ಶೃಂಗೇರಿಯ ಸಾಂಸ್ಕೃತಿಕ ಇತಿಹಾಸವನ್ನು ಅರಿಯುವಲ್ಲಿ ಸಹಾಯ ಮಾಡುತ್ತವೆ. ಶೃಂಗೇರಿಯಲ್ಲಿ ಇಂದಿಗೂ ಸಂಸ್ಕೃತ ಪಾಠಶಾಲೆ, ವೇದ ಸಂಸ್ಕೃತಿಯ ವಿದ್ಯಾಭ್ಯಾಸ ಪರಂಪರೆಯನ್ನು ಮುಂದುವರೆಸಿಕೊಂಡು ಬರಲಾಗುತ್ತಿದೆ. ಜೊತೆಗೆ ಇತರ ರೀತಿಯ ಸಾಮಾಜಿಕ ಕಾರ್ಯಗಳನ್ನು ಕೂಡ ನಡೆಸಿಕೊಂಡು ಬರಲಾಗುತ್ತಿದೆ.

ಶೃಂಗೇರಿಯಲ್ಲಿ ಇದೇ ಸೆಪ್ಟೆಂಬರ್ ೨೨, ೨೩, ೨೪ ರಂದು ಶನಿವಾರ, ಭಾನುವಾರ ಮತ್ತು ಸೋಮವಾರ ಕರ್ನಾಟಕ ಇತಿಹಾಸ ಅಕಾದೆಮಿಯ ೨೬ನೆಯ ವಾರ್ಷಿಕ ಸಮ್ಮೇಳನವು ನಡೆಯುತ್ತಿದೆ. ಇದು ನಡೆಯುವುದಕ್ಕೆ ಸ್ಥಳಾವಕಾಶ ಹಾಗೂ ಪೂರ್ಣ ಸಹಕಾರ ಕಲ್ಪಿಸಿಕೊಟ್ಟ ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠ, ಶೃಂಗೇರಿಯ ಜಗದ್ಗುರುಗಳಾದ ಶ್ರೀ ಶ್ರೀ ಭಾರತೀ ತೀರ್ಥ ಮಹಾಸ್ವಾಮಿಗಳಿಗೆ ಭಕ್ತಿಪೂರ್ವಕವಾಗಿ ನಮಸ್ಕಾರಗಳನ್ನೂ, ಆಡಳಿತಾಧಿಕಾರಿಗಳಾದ ಪದ್ಮಶ್ರೀ ಡಾ॥ ವಿ. ಆರ್. ಗೌರೀಶಂಕರ್ ಅವರಿಗೆ ಕರ್ನಾಟಕ ಇತಿಹಾಸ ಅಕಾದೆಮಿಯ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಕರ್ನಾಟಕ ಇತಿಹಾಸ ಅಕಾದೆಮಿಯು ತನ್ನ ರಜತ ಹಬ್ಬವನ್ನು ಪೂರೈಸಿ ಇಪ್ಪತ್ತಾರನೆಯ ವರ್ಷಕ್ಕೆ ಕಾಲಿಟ್ಟಿದೆ. ಡಾ॥ ಜಿ.ಎಸ್. ದೀಕ್ಷಿತ್ ಅವರ ಮಾರ್ಗದರ್ಶನದಲ್ಲಿ ೧೯೮೬ರಲ್ಲಿ ಡಾ॥ ಸೂರ್ಯನಾಥ ಯು. ಕಾಮತ್, ಪ್ರೊ॥ ಲಕ್ಷ್ಮಣ್ ತೆಲಗಾವಿ ಮುಂತಾದ ಅನೇಕರು ಜೊತೆಗೂಡಿ ಸಂಘಟಿಸಿದ ಸಂಸ್ಥೆ ಇದಾಗಿದ್ದು ಇಂದು ಸುಮಾರು ೧೬೫೦ ಕ್ಕೂ ಹೆಚ್ಚಿನ ಸದಸ್ಯರನ್ನು ಹೊಂದಿ ಕ್ರಿಯಾಶೀಲವಾಗಿದೆ.

ಈ ಸಂದರ್ಭದಲ್ಲಿ ೨೬ನೆಯ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷತೆಯನ್ನು ಖ್ಯಾತ ಪುರಾತತ್ತ್ವವಿದರಾದ ಡಾ ॥ ಎಸ್.ವಿ. ವೆಂಕಟೇಶಯ್ಯ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ದಕ್ಷಿಣ ಭಾರತ ವಲಯದ ಪ್ರಾದೇಶಿಕ ನಿರ್ದೇಶಕರು (ನಿವೃತ್ತ), ಅವರು ವಹಿಸಿರುವುದು ಸಂತಸದ ಸಂಗತಿಯಾಗಿದೆ. ಈ ಬಾರಿಯ ಡಾ॥ ಬಾ.ರಾ. ಗೋಪಾಲ ಶಾಸನ ಪ್ರಶಸ್ತಿಗೆ ಹಿರಿಯ ಶಾಸನ ತಜ್ಞರಾದ ಶ್ರೀ ಸೀತಾರಾಮ ಜಾಗೀರದಾರರು ಆಯ್ಕೆಯಾಗಿದ್ದಾರೆ. ಈ ಇಬ್ಬರು ವಿದ್ವಾಂಸರಿಗೂ ನಮ್ಮ ಅಭಿನಂದನೆಗಳು. ಈ ವರ್ಷದಿಂದ 'ಇತಿಹಾಸ ಸಂಸ್ಕೃತಿ ಶ್ರೀ' ಎಂಬ ವಿಶಿಷ್ಟ ಪ್ರಶಸ್ತಿಯನ್ನು ಶ್ರೇಷ್ಠ ಇತಿಹಾಸ ತಜ್ಞರಿಗಾಗಿ ನೀಡಲು ಬಿ.ಆರ್.ಆರ್. ಟ್ರಸ್ಟ್‌ನ ಸನ್ಮಾನ್ಯ ಅಶೋಕ್‌ಕುಮಾರ್‌ರವರು ಸ್ಥಾಪಿಸಿರುತ್ತಾರೆ. ಈ ವಿಶೇಷ ಪುರಸ್ಕಾರಕ್ಕೆ ಮೊದಲಿಗೆ ಪ್ರೊ. ಲಕ್ಷ್ಮಣ್ ತೆಲಗಾವಿ ಅವರು ಆಯ್ಕೆಯಾಗಿದ್ದಾರೆ ಎಂಬುದನ್ನು ತಿಳಿಸಲು ಸಂತೋಷವಾಗುತ್ತದೆ.

ಇತಿಹಾಸ ದರ್ಶನದ ಮುದ್ರಣಕ್ಕೆ ಕಳೆದ ೨೦೦೫ ನೆಯ ಸಾಲಿನಿಂದಲೂ ೨೫ ಸಾವಿರ ರೂಪಾಯಿಗಳ ನಿಧಿ ನೆರವನ್ನು ನೀಡಿ ಅದರ ಸಾಂಸ್ಕೃತಿಕ ವಿಸ್ತಾರಕ್ಕೆ ಆಶೀರ್ವದಿಸುತ್ತಿರುವ ಶ್ರೀ ಮದ್ರಂಭಾಪುರಿ ವೀರ ಸಿಂಹಾಸನ ಜ॥ ಪ್ರಸನ್ನ ರೇಣುಕ ವೀರಸೋಮೇಶ್ವರರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸನ್ನಿಧಿಯವರಿಗೆ ಭಕ್ತಿಪೂರ್ವಕ ಪ್ರಣಾಮಗಳು. ಇತಿಹಾಸ ಪರಂಪರೆ ಉಳಿಸಿ ಕಾರ್ಯಕ್ರಮಕ್ಕೂ ಇತಿಹಾಸ ದರ್ಶನದ ಸಂಪುಟದ ಪ್ರಕಟನೆಗೂ ಉದಾರವಾಗಿ ಆರ್ಥಿಕ ನೆರವು ನೀಡುತ್ತಿರುವ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ, ಪರಂಪರೆ ಇಲಾಖೆಯ ಆಯುಕ್ತರಾದ ಕೆ.ಆರ್. ರಾಮಕೃಷ್ಣ, ಐ.ಎ.ಎಸ್. ಅವರಿಗೂ ಇಲಾಖೆಯ ನಿರ್ದೇಶಕರಾದ ಡಾ॥ ಆರ್. ಗೋಪಾಲ್ ಅವರಿಗೂ ನಾವು ಕೃತಜ್ಞರಾಗಿದ್ದೇವೆ.

ಇತಿಹಾಸ ದರ್ಶನದ ಸಂಪಾದನಾ ಸಂದರ್ಭದಲ್ಲಿ ಅಕಾದೆಮಿಯ ಗೌರವಾಧ್ಯಕ್ಷರು, ಕಾರ್ಯಾಧ್ಯಕ್ಷರು, ಪದಾಧಿಕಾರಿಗಳು ಮುಂತಾದವರು ಸಕಾಲಿಕ ಸಲಹೆ, ಸಹಕಾರ, ನೆರವು ನೀಡಿದ್ದಾರೆ. ಎಲ್ಲರಿಗೂ ನಮ್ಮ ಕೃತಜ್ಞತೆಗಳು. ಸನ್ಮಿತ್ರರಾದ ಎಸ್. ಕಾರ್ತಿಕ್ ಅವರು ಸಂಪ್ರಬಂಧಗಳ ಕರಡಚ್ಚನ್ನು ತಿದ್ದಿಕೊಟ್ಟಿರುವುದಲ್ಲದೆ ಸಂಪಾದನೆಯ ಕಾರ್ಯದಲ್ಲಿಯೂ ನೆರವು ನೀಡಿದ್ದಾರೆ. ಅವರಿಗೆ ನಮ್ಮ ಕೃತಜ್ಞತೆಗಳು.

ಇತಿಹಾಸ ದರ್ಶನ ಸಂಪುಟವನ್ನು ೧೯೮೬ರಿಂದಲೂ ಅಚ್ಚುಕಟ್ಟಾಗಿ ಮುದ್ರಿಸಿಕೊಡುತ್ತಿರುವ ಶ್ರೀ ಅಶೋಕ್‌ಕುಮಾರ್ ಅವರಿಗೂ, ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಕೆ.ಎಸ್. ಮಂಜು ಅವರಿಗೂ, ಅಕ್ಷರ ಜೋಡಣೆ ವಿನ್ಯಾಸ ಸಿದ್ಧಪಡಿಸಿದ ಶ್ರೀ ವಿ.ಎಸ್. ಪ್ರಸನ್ನ ಕುಮಾರ್, ಪಿ.ಎಸ್. ಸುಬ್ರಮಣಿ ಬಾಬು, ಶ್ರೀಮತಿ ಮಾಲಾ ಅವರಿಗೂ ಹಾಗೂ ಇತರ ಸಿಬ್ಬಂದಿ ವರ್ಗದವರಿಗೂ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.

ಪ್ರಸ್ತುತ ಇತಿಹಾಸ ದರ್ಶನ ಸಂಪುಟ ೨೭ ಕಳೆದ ವರ್ಷ ಬೆಂಗಳೂರಿನ 'ದಿ ಮಿಥಿಕ್ ಸೊಸೈಟಿ'ಯಲ್ಲಿ ಸಮಾವೇಶಗೊಂಡಿದ್ದ ಅಕಾದೆಮಿಯ ರಜತ ವರ್ಷದ ಸಮ್ಮೇಳನದಲ್ಲಿ ಮಂಡಿತವಾದ ಪ್ರಬಂಧಗಳ ಸಂಕಲನವಾಗಿದೆ. ಈ ಸಂಪುಟದ ಸಂಪಾದನೆಯ ಕಾರ್ಯದಲ್ಲಿ ನಾವು ಅನುಸರಿಸಿರುವ ಕ್ರಮಗಳು ಹಾಗೂ ಇತರ ಸೂಚನೆಗಳು ಇಂತಿವೆ :

೧. ಲೇಖಕರ ಅಭಿಪ್ರಾಯಗಳನ್ನು ಯಾವುದೇ ರೀತಿಯಿಂದಲೂ ತಿದ್ದಲು ಹೋಗಿಲ್ಲ. ಅನಿವಾರ್ಯವಾದ ಕಡೆ ಮಾತ್ರ ಸಂಪಾದಕೀಯ ಟಿಪ್ಪಣಿಗಳನ್ನು ಬರೆಯಲಾಗಿದೆ.

೨. ಲೇಖನಗಳನ್ನು ಮೂಲಕ್ಕೆ ಧಕ್ಕೆಯೊದಗದಂತೆ ಭಾಷೆ, ಬಂಧ, ವಾಕ್ಯರಚನೆ, ವಸ್ತುವಿಷಯದ ದೃಷ್ಟಿಯಿಂದ ಪರಿಷ್ಕರಿಸಲಾಗಿದೆ. ಅನೇಕ ಲೇಖಕರು ಆಧಾರಗ್ರಂಥ ಸೂಚಿ ಮತ್ತು ಟಿಪ್ಪಣಿಗಳನ್ನು ಸಮರ್ಪಕವಾಗಿ ನೀಡಿರುವುದಿಲ್ಲ. ತಪ್ಪುಗಳೂ ಸಾಕಷ್ಟಿವೆ. ಇವುಗಳನ್ನು ಯಥಾಶಕ್ತಿಯಾಗಿ ಸರಿಪಡಿಸಲಾಗಿದೆ.

೩. ನಮ್ಮ ಗಮನಕ್ಕೆ ಬಂದಂತಹ ಬೇರೆಡೆ ಈ ಮೊದಲೇ ಪ್ರಕಟವಾದಂತಹ ಒಬ್ಬರೇ ಲೇಖಕರ ಪ್ರಬಂಧಗಳನ್ನು ನೇರವಾಗಿ ತಿರಸ್ಕರಿಸಲಾಗಿದೆ. ಜೊತೆಗೆ ಬೇರೊಬ್ಬರಿಂದ ಪ್ರಕಟವಾಗಿದ್ದು ಇಲ್ಲಿ ಮತ್ತೊಬ್ಬರು ಅದನ್ನೇ ಪ್ರಕಟಿಸಲು ಕಳುಹಿಸಿಕೊಟ್ಟವುಗಳನ್ನು ಕೂಡ ತಿರಸ್ಕರಿಸಲಾಗಿದೆ.

೪. ಒಂದೇ ವಿಷಯವನ್ನು [ಉದಾಹರಣೆಗೆ : ಶಾಸನ, ನಾಣ್ಯ, ಪುರಾತತ್ತ್ವ ಇತ್ಯಾದಿ] ಒಂದೇ ರೀತಿಯಲ್ಲಿ ಇಬ್ಬರು ಮತ್ತು ಹೆಚ್ಚು ಲೇಖಕರು ಮಂಡಿಸಿರುವುದು ಕಂಡುಬಂದ ಹಿನ್ನೆಲೆಯಲ್ಲಿ ಅಂತಹ ಸಂಪ್ರಬಂಧಗಳನ್ನು ತಿರಸ್ಕರಿಸಲಾಗಿದೆ.

೫. ಕರ್ನಾಟಕ ಇತಿಹಾಸ ಅಕಾದೆಮಿಯು ಗೌರವಾನ್ವಿತ ಸಂಸ್ಥೆಯಾಗಿದ್ದು ಇತಿಹಾಸ ದರ್ಶನದಲ್ಲಿ ಪ್ರಕಟಿಸಲು ಕಳುಹಿಸಿಕೊಡುವ ಸಂಶೋಧನ ಲೇಖನಗಳು ಉತ್ತಮ ಕಾಗದದಲ್ಲಿ ಒಂದೇ ಬದಿಯಲ್ಲಿ ಸ್ಫುಟವಾಗಿ ಬರೆದು ಅಥವಾ ಡಿ.ಟಿ.ಪಿ. ಮಾಡಿ ಸಿ.ಡಿ. ಅನ್ನು ಕಳುಹಿಸಿಕೊಡುವುದು ಸಂಶೋಧಕರಿಗೊಂದು ಶೋಭೆ.

೬. ಸಂಶೋಧಕರು ನೇರವಾಗಿ ಸ್ಪಷ್ಟವಾಗಿ ವಿಷಯಕ್ಕೆ ಸಂಬಂಧಿಸಿದ ಅಂಶಗಳನ್ನು ಮಾತ್ರ ತಮ್ಮ ಸಂಪ್ರಬಂಧಗಳಲ್ಲಿ ಚರ್ಚಿಸಲು ಕೋರಲಾಗಿದ್ದು, ಆಯಾ ವಿಷಯಕ್ಕೆ ಸಂಬಂಧಿಸದ ಅಂಶಗಳಿದ್ದಲ್ಲಿ ಮತ್ತು ಇತರೆಡೆ ದೊರಕುವ ಸಾಮಾನ್ಯ [=General] ವಿಷಯಗಳನ್ನು ಆದಷ್ಟು ಮಟ್ಟಿಗೆ ಚರ್ಚಿಸದಿರಲು ಕೋರಿದೆ.

೭. ಸಾಹಿತ್ಯ, ಜಾನಪದ, ಮತೀಯ ಇತ್ಯಾದಿ ವಿಷಯಗಳನ್ನು ಚರ್ಚಿಸಲು ಅದರದ್ದೇ ಆದ ವೇದಿಕೆಗಳಿರುವುದರಿಂದ ಇಲ್ಲಿ ಅದರ ಅವಶ್ಯಕತೆ ಕಂಡುಬರುವುದಿಲ್ಲ. ನಮ್ಮ ಇತಿಹಾಸ ಅಕಾದೆಮಿಯು ಇತಿಹಾಸ, ಶಾಸನ, ಪುರಾತತ್ತ್ವ, ನಾಣ್ಯ ಇಂತಹ ಚಾರಿತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಸಂಶೋಧನೆಗೆ ಹೆಚ್ಚಿನ ಮಹತ್ತ್ವ ನೀಡುತ್ತದೆ ಎಂದು ತಮ್ಮ ಗಮನಕ್ಕೆ ತರಬಯಸುತ್ತೇವೆ.

೮. ಇತಿಹಾಸ ದರ್ಶನದ ಪ್ರಕಟನೆಗೆ ಅಕಾದೆಮಿಯ ಸೀಮಿತ ಆರ್ಥಿಕತೆಯಿಂದ ವಿಸ್ತಾರ ಗಾತ್ರದಲ್ಲಿ ಪ್ರಕಟನೆ ಕಷ್ಟಸಾಧ್ಯ. ಆದ್ದರಿಂದ ನಮ್ಮ ಸಂಶೋಧಕರ ಬರಹಗಳು ಸಾಧ್ಯವಾದಷ್ಟು ಪುಟ ಮಿತಿಯನ್ನು ಹೊಂದಿರಲಿ ಎಂದು ಕೋರುತ್ತೇವೆ.

೯. ಯುವ ಸಂಶೋಧಕರು ಸಮ್ಮೇಳನದಲ್ಲಿ ಮಂಡಿಸಿದ ಸಂಪ್ರಬಂಧಗಳನ್ನು ಲೇಖನ ರೂಪದಲ್ಲಿ ಕೊಡುವದಕ್ಕೆ ಮೊದಲು ಆಯಾ ಕ್ಷೇತ್ರದ ಅನುಭವಿ ಹಿರಿಯ ವಿದ್ವಾಂಸರಿಂದ ಪರಿಶೀಲನೆಗೊಳಪಡಿಸಿ ಕೊಡುವುದು ಸೂಕ್ತ. ಏಕೆಂದರೆ ಇತಿಹಾಸ ದರ್ಶನದ ಬರಹಗಳು ರಾಷ್ಟ್ರಮಟ್ಟದಲ್ಲೂ ಮಾನ್ಯತೆ ಪಡೆದಿರುವ ಕಾರಣದಿಂದ ಹಾಗೂ ಇನ್ನೂ ಹೆಚ್ಚಿನ ರೀತಿಯಲ್ಲಿ ಅತ್ಯುತ್ತಮ ಸಂಶೋಧನ ಸಂಪುಟವನ್ನಾಗಿ ತರುವ ಜವಾಬ್ದಾರಿ ನಮ್ಮ ನಿಮ್ಮ ಮೇಲಿದೆ.

೧೦. ಲೇಖಕರು ಲೇಖನದ ಜೊತೆಯಲ್ಲಿ ವಿಳಾಸಗಳನ್ನು ಪಿನ್‌ಕೋಡ್, ಇ–ಮೇಲ್, ದೂರವಾಣಿ ಸಂಖ್ಯೆಗಳ ಸಹಿತ ಕಡ್ಡಾಯವಾಗಿ ನೀಡಬೇಕು. ಇದನ್ನು ಅಕಾದೆಮಿಯಲ್ಲಿಯೂ ಸಹ ದಾಖಲಿಸಬೇಕು. ವಿಳಾಸ ಬದಲಾದಲ್ಲಿ ಕೂಡಲೇ ಪತ್ರಮುಖೇನ ಸರಿಯಾಗಿ ತಿಳಿಸಬೇಕು.

ಬೆಂಗಳೂರು : ೧೯.೯.೨೦೧೨
ಶ್ರೀ ನಂದನ ಸಂವತ್ಸರ
ನಿಜ ಭಾದ್ರಪದ ಶುದ್ಧ ಚೌತಿ ಬುಧವಾರ
(ಗಣೇಶ ಚತುರ್ಥಿ)

**ಪಿ.ವಿ. ಕೃಷ್ಣಮೂರ್ತಿ**
**ಜಿ.ಕೆ. ದೇವರಾಜಸ್ವಾಮಿ**

**ಇ–ಮೇಲ್ ವಿಳಾಸ : karnatakaitihasaacademy25@gmail.com**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು


**ಕಾರ್ಯಕಾರಿ ಸಮಿತಿ**

(೧೪.೧೧.೨೦೧೦ರಲ್ಲಿ ಆಯ್ಕೆಯಾದವರು)

**ಗೌರವ ಅಧ್ಯಕ್ಷರು**

ಡಾ॥ ಸೂರ್ಯನಾಥ ಕಾಮತ್

**ಕಾರ್ಯಾಧ್ಯಕ್ಷರು**

ಡಾ॥ ದೇವರಕೊಂಡಾರೆಡ್ಡಿ

**ಉಪಾಧ್ಯಕ್ಷರು**

ಡಾ॥ ಎಂ.ಜಿ.ನಾಗರಾಜ್

ಡಾ॥ ಬಿ. ರಾಜಶೇಖರಪ್ಪ

**ಪ್ರಧಾನ ಕಾರ್ಯದರ್ಶಿ**

ಶ್ರೀ ಶಿ. ರಾಜೇಂದ್ರಪ್ಪ

**ಕಾರ್ಯದರ್ಶಿಗಳು**

ಡಾ॥ ಪಿ.ವಿ. ಕೃಷ್ಣಮೂರ್ತಿ

ಡಾ॥ ಡಿ.ಎನ್. ಯೋಗೀಶ್ವರಪ್ಪ

**ಕೋಶಾಧ್ಯಕ್ಷರು**

ಡಾ॥ ತುಳಸಿರಾಮನಾಯಕ್

**ಸದಸ್ಯರು**

*ಡಾ॥ ಎಚ್.ಎಸ್. ಗೋಪಾಲರಾವ್*

*ಡಾ॥ ಶ್ರೀಮತಿ ಸ್ಮಿತಾ ಸುರೇಬಾನಕರ, ಬೆಳಗಾವಿ*

*ಡಾ॥ ಎಚ್.ಎಸ್. ಉಷಾರಾಣಿ, ಮೈಸೂರು*

*ಡಾ॥ ಜಯಮ್ಮ ಕರಿಯಣ್ಣ, ಬೆಂಗಳೂರು*

*ಶ್ರೀ ಕುಂ.ಬಾ. ಸದಾಶಿವಪ್ಪ, ಹರಪನಹಳ್ಳಿ*

*ಡಾ॥ ಎ.ಕೆ. ಶಾಸ್ತ್ರಿ, ಶಿರಸಿ*

*ಶ್ರೀ ಜಯದೇವಪ್ಪ ಜೈನಕೇರಿ, ಶಿವಮೊಗ್ಗ*

*ಡಾ॥ ಎಫ್.ಟಿ. ಹಳ್ಳಿಕೇರಿ, ಹಂಪಿ*

*ಶ್ರೀ ಶಿವಪ್ಪ ಎನ್. ನೀರಲಗಿ, ಬಾಗಲಕೋಟೆ*

*ಡಾ॥ ಎಸ್. ಮೇಲಕಾರ, ಧಾರವಾಡ*

*ಡಾ॥ ಡಿ.ಜಿ. ಕುಲಕರ್ಣಿ, ಬಾಗಲಕೋಟೆ*

*ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ರಾಯಚೂರು*

*ಡಾ॥ ರು.ಮ. ಷಡಕ್ಷರಯ್ಯ, ಧಾರವಾಡ*

*ಡಾ॥ ಜಗದೀಶಶೆಟ್ಟಿ, ಉಡುಪಿ*

*ಶ್ರೀಮತಿ ಶಕುಂತಲಾ ಸಿಂಧೂರ, ಗದಗ*

# ಪರಿವಿಡಿ

* ಈ ಲೇಖನದ ಶೀರ್ಷಿಕೆ ಈ ಸಂಪುಟದ ಪುಟ ೪೦೯ರಲ್ಲಿ 'ರೆವರೆಡೆಂಡ್' ಎಂದು ತಪ್ಪಾಗಿ ಮುದ್ರಿತವಾಗಿದೆ. –ಸಂ.

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ/ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|
| ೧. | ೧೫-೧೭ ಮೇ ೧೯೮೭ ಬೆಂಗಳೂರು | *ಕರ್ನಾಟಕ ಇತಿಹಾಸ ಅಕಾದೆಮಿ* | ಡಾ|| ಎಂ. ಚಿದಾನಂದಮೂರ್ತಿ |
| ೨. | ೨೩-೨೪ ಅಕ್ಟೋಬರ್ ೧೯೮೮ ತುಮಕೂರು | *ಸಿದ್ಧಗಂಗಾಕ್ಷೇತ್ರ : ಡಾ। ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು* | ಡಾ|| ಜಿ. ಎಸ್. ಗಾಯಿ |
| ೩. | ೧೦-೧೧ ಜೂನ್ ೧೯೮೯ ಗದಗ | *ಶ್ರೀ ಮ. ನಿ. ಪ್ರ. ಜ|| ಡಾ|| ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ* | ಡಾ|| ಶ್ರೀನಿವಾಸ ರಿತ್ತಿ |
| ೪. | ೨೧-೨೨ ಜುಲೈ ೧೯೯೦ ದಾವಣಗೆರೆ | *ಡಾ|| ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ* | ಡಾ|| ಎಸ್. ಆರ್. ರಾವ್ |
| ೫. | ೧೨-೧೪ ಜುಲೈ ೧೯೯೧ ಚಿತ್ರದುರ್ಗ | *ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ* | ಡಾ|| ಬಾ. ರಾ. ಗೋಪಾಲ್ |
| ೬. | ೧೧-೧೩ ಜುಲೈ ೧೯೯೨ ರಾಯಚೂರು | *ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು* | ಡಾ|| ಕೆ. ವಿ. ರಮೇಶ್ |
| ೭. | ೨೩-೨೫ ಜುಲೈ ೧೯೯೩ ಮೈಸೂರು | *ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ* | ಡಾ|| ಅ. ಸುಂದರ |
| ೮. | ೯-೧೦ ಜುಲೈ ೧೯೯೪ ಸೊಂಡೂರು | *ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ* | ಡಾ|| ಎಂ. ಎಂ. ಕಲಬುರ್ಗಿ |

| ಸಂಖ್ಯೆ | ದಿನಾಂಕ-ವರ್ಷ/ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|
| ೯. | ೯-೧೧ ಸೆಪ್ಟೆಂಬರ್ ೧೯೯೫ ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ | ಡಾ|| ಎ.ವಿ. ನರಸಿಂಹಮೂರ್ತಿ |
| ೧೦. | ೭-೯ ಜೂನ್ ೧೯೯೬ ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ | ಡಾ|| ಜಿ. ಎಸ್. ದೀಕ್ಷಿತ್ |
| ೧೧. | ೨೫-೨೭ ಅಕ್ಟೋಬರ್ ೧೯೯೭ ಸಿರಸಿ | ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | ಪ್ರೊ|| ಕೆ. ಅಭಿಶಂಕರ್ |
| ೧೨. | ೧೪-೧೬ ನವೆಂಬರ್ ೧೯೯೮ ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ ದಿ ಮಿಥಿಕ್ ಸೊಸೈಟಿ, ಬೆಂಗಳೂರು | ಡಾ|| ಎಸ್. ನಾಗರಾಜು |
| ೧೩. | ೧೧-೧೩ ಜೂನ್ ೧೯೯೯ ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ | ಡಾ|| ಶ್ರೀನಿವಾಸ ಹಾವನೂರ |
| ೧೪. | ೮-೧೦ ಜುಲೈ ೨೦೦೦ ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ | ಶ್ರೀ ಸಿ. ಟಿ. ಎಂ. ಕೊಟ್ರಯ್ಯ |
| ೧೫. | ೧೩-೧೫ ಅಕ್ಟೋಬರ್ ೨೦೦೧ ಉಡುಪಿ | ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ | ಡಾ|| ಜ್ಯೋತ್ಸ್ನಾ ಕಾಮತ್ |
| ೧೬. | ೨೨-೨೪ ಸೆಪ್ಟೆಂಬರ್ ೨೦೦೨ ಹೊಸನಗರ | ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು ಶ್ರೀ ರಾಮಚಂದ್ರಾಪುರ ಮಠ | ಡಾ. ಎ.ಕೆ. ಶಾಸ್ತ್ರಿ |
| ೧೭. | ೧೩-೧೫ ಸೆಪ್ಟೆಂಬರ್ ೨೦೦೩ ಬಾದಾಮಿ | ವಿಶ್ವಚೇತನ ಸಂಸ್ಥೆ ಬಾದಾಮಿ | ಡಾ. ಎಸ್. ರಾಜಶೇಖರ್ |

| ಸಂಖ್ಯೆ | ದಿನಾಂಕ-ವರ್ಷ/ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು | |
|---|---|---|---|---|
| ೧೮. | ೨೪-೨೬ ಸೆಪ್ಟೆಂಬರ್ ೨೦೦೪<br>ಹೊನ್ನಾಳಿ | ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ<br>ಚನ್ನ-ಚೇತನ ಪ್ರಕಾಶನ<br>ಮತ್ತು ಹಿರೇಕಲ್ಮಠ | ಶ್ರೀ ಕೆಳದಿ ಗುಂಡಾ ಜೋಯಿಸ್ |  |
| ೧೯. | ೧೧-೧೩ ಸೆಪ್ಟೆಂಬರ್ ೨೦೦೫<br>ಸೇಡಂ | ಶ್ರೀ ಕೊತ್ತಲ ಬಸವೇಶ್ವರ<br>ಭಾರತೀಯ ಶಿಕ್ಷಣ ಸಂಸ್ಥೆ | ಡಾ. ಬಿ.ವ್ಹಿ. ಶಿರೂರ |  |
| ೨೦. | ೯-೧೧ ಸೆಪ್ಟೆಂಬರ್ ೨೦೦೬<br>ನಂಜನಗೂಡು | ಶ್ರೀ ರಾಘವೇಂದ್ರ ಸ್ವಾಮಿಗಳ ಮಠ<br>ನಂಜನಗೂಡು | ಡಾ. ಸೂರ್ಯನಾಥ ಕಾಮತ್ |  |
| ೨೧. | ೮-೧೦ ಸೆಪ್ಟೆಂಬರ್ ೨೦೦೭<br>ರಾಮನಗರ, ಹಗರಿಬೊಮ್ಮನಹಳ್ಳಿ | ಹಗರಿಬೊಮ್ಮನಹಳ್ಳಿಯ<br>ಶ್ರೀರಾಮ ಯುವಕ ಸಂಘ | ಪ್ರೊ. ಲಕ್ಷ್ಮಣ್ ತೆಲಗಾವಿ |  |
| ೨೨. | ೧೮-೨೦ ಸೆಪ್ಟೆಂಬರ್ ೨೦೦೮<br>ಧರ್ಮಸ್ಥಳ | ಧರ್ಮಸ್ಥಳ ಮಂಜುನಾಥೇಶ್ವರ<br>ದೇವಾಲಯ ಸಂಸ್ಥೆ | ಡಾ. ವಸುಂಧರಾ ಫಿಲಿಯೋಜಾ |  |
| ೨೩. | ೧೦-೧೨ ಅಕ್ಟೋಬರ್ ೨೦೦೯<br>ಬಾಳೆಹೊನ್ನೂರು | ಶ್ರೀ ಜಗದ್ಗುರು ರಂಭಾಪುರಿ<br>ವೀರ ಸಿಂಹಾಸನ ಮಹಾಸಂಸ್ಥಾನ<br>ಪೀಠ | ಡಾ. ಎಂ.ಜಿ. ನಾಗರಾಜ್ |  |
| ೨೪. | ೧೩-೧೫ ನವೆಂಬರ್ ೨೦೧೦<br>ಆದಿಚುಂಚನಗಿರಿ | ಶ್ರೀ ಆದಿಚುಂಚನಗಿರಿ<br>ಮಹಾ ಸಂಸ್ಥಾನ ಮಠ | ಡಾ. ಎಂ.ಎಸ್. ಕೃಷ್ಣಮೂರ್ತಿ |  |



# ಡಾ॥ ಬಾ.ರಾ. ಗೋಪಾಲ್ ಶಾಸನ ದತ್ತಿ ಪ್ರಶಸ್ತಿ ಸನ್ಮಾನಿತರು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು | |
|---|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ ಅಕ್ಟೋಬರ್ ೨೦೦೧ | ಉಡುಪಿ | *ಡಾ. ಕೆ.ವಿ. ರಮೇಶ* |  |
| ೨ | ೧೬ನೇ ವಾರ್ಷಿಕ ಸಮ್ಮೇಳನ ಸೆಪ್ಟಂಬರ್ ೨೦೦೨ | ಹೊಸನಗರ | *ಡಾ. ಶ್ರೀನಿವಾಸ ರಿತ್ತಿ* |  |
| ೩ | ೧೭ನೇ ಸಮ್ಮೇಳನದ ಸೆಪ್ಟಂಬರ್ ೨೦೦೩ | ಬಾದಾಮಿ | *ಡಾ. ದೇವರಕೊಂಡಾರೆಡ್ಡಿ* |  |
| ೪ | ೧೮ನೇ ಸಮ್ಮೇಳನ ಸೆಪ್ಟಂಬರ್ ೨೦೦೪ | ಹೊನ್ನಾಳಿ | *ಡಾ. ಬಿ. ರಾಜಶೇಖರಪ್ಪ* |  |
| ೫ | ೧೯ನೇ ಸಮ್ಮೇಳನ ಸೆಪ್ಟಂಬರ್ ೨೦೦೫ | ಸೇಡಂ | *ಡಾ. ಕೆ.ಆರ್. ಗಣೇಶ್* |  |
| ೬ | ೨೦ನೇ ಸಮ್ಮೇಳನ ಸೆಪ್ಟೆಂಬರ್ ೨೦೦೬ | ನಂಜನಗೂಡು | *ಡಾ. ಎಂ.ಜಿ. ನಾಗರಾಜ್* |  |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು | |
|---|---|---|---|---|
| ೭ | ೨೧ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೭ | ಹಗರಿಬೊಮ್ಮನಹಳ್ಳಿ | **ಡಾ. ಎಚ್.ಎಸ್. ಗೋಪಾಲರಾವ್** |  |
| ೮ | ೨೨ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೮ | ಧರ್ಮಸ್ಥಳ | **ಡಾ. ಪಿ.ಎನ್. ನರಸಿಂಹಮೂರ್ತಿ** |  |
| ೯ | ೨೩ನೇ ಸಮ್ಮೇಳನ<br>ಅಕ್ಟೋಬರ್ ೨೦೦೯ | ಬಾಳೇಹೊನ್ನೂರು | **ಶ್ರೀಮತಿ ಹನುಮಾಕ್ಷಿ ಗೋಗಿ** |  |
| ೧೦ | ೨೪ನೇ ಸಮ್ಮೇಳನ<br>ನವೆಂಬರ್ ೨೦೧೦ | ಆದಿಚುಂಚನಗಿರಿ | **ಡಾ. ಪಿ.ವಿ. ಕೃಷ್ಣಮೂರ್ತಿ** |  |
| ೧೧ | ೨೫ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೧೧ | ಬೆಂಗಳೂರು | **ಶ್ರೀ ಕೆ. ಮೊಹಮ್ಮದ್ ಶರೀಫ್** |  |
| ೧೨ | ೨೬ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೧೨ | ಶೃಂಗೇರಿ | **ಶ್ರೀ ಸೀತಾರಾಮ್ ಜಾಗೀರ್‌ದಾರ್** |  |



# ಕರ್ನಾಟಕ ಇತಿಹಾಸ ಅಕಾದೆಮಿ ೨೫ನೆಯ ವಾರ್ಷಿಕ ಸಮ್ಮೇಳನ

**ಮಿಥಿಕ್ ಸೊಸೈಟಿ, ಬೆಂಗಳೂರು : ದಿನಾಂಕ ೯ ಸೆಪ್ಟೆಂಬರ್ ೨೦೧೧**

ಸಮ್ಮೇಳನಾಧ್ಯಕ್ಷರು : ಡಾ|| ಎಚ್.ಎಸ್. ಗೋಪಾಲರಾವ್*

## ಅಧ್ಯಕ್ಷ ಭಾಷಣ

ಕರ್ನಾಟಕ ಇತಿಹಾಸ ಅಕಾದೆಮಿಯ ರಜತ ವಾರ್ಷಿಕ ಸಮ್ಮೇಳನವನ್ನು ಉದ್ಘಾಟಿಸಿದ ಹಾಗೂ ಬಹುತೇಕ ಇಲ್ಲಿ ಸಮಾವೇಶಗೊಂಡಿರುವ ಎಲ್ಲರಿಗಿಂತ ಹಿರಿಯರಾದ ೯೮ ವರ್ಷಗಳ ತುಂಬು ಹರೆಯದ ಪ್ರೊ|| ಜಿ. ವೆಂಕಟಸುಬ್ಬಯ್ಯ ನವರೇ, ಅಕಾದೆಮಿಯ ಇತಿಹಾಸ ದರ್ಶನದ ೨೬ನೇಯ ವಾರ್ಷಿಕ ಸಂಚಿಕೆಯನ್ನು ಬಿಡುಗಡೆ ಮಾಡಿದ ಆತ್ಮೀಯರಾದ ಡಾ|| ಆರ್ ಗೋಪಾಲ್ ಅವರೇ, ಮುಖ್ಯ ಅತಿಥಿಗಳಾಗಿ ಆಗಮಿಸಿರುವ ಆತ್ಮೀಯರಾದ ಮತ್ತು ಮಿಥಿಕ್ ಸೊಸೈಟಿಯ ಅಧ್ಯಕ್ಷರಾದ ಪ್ರೊ|| ಸೂರ್ಯನಾಥ ಕಾಮತ್ ಅವರೇ, ಎಲ್ಲಕಿಂತ ಹೆಚ್ಚಾಗಿ ಇಲ್ಲಿ ಪ್ರೀತಿ, ವಿಶ್ವಾಸ ಮತ್ತು ಕುತೂಹಲ ಗಳಿಂದ ಸಮಾವೇಶಗೊಂಡಿರುವ ಕರ್ನಾಟಕ ಇತಿಹಾಸ ಅಕಾದೆಮಿಯ ಆತ್ಮೀಯ ಸದಸ್ಯರೇ ಮತ್ತು ಇತಿಹಾಸಾಭಿ ಮಾನಿಗಳೆ ನಿಮಗೆಲ್ಲರಿಗೂ ನನ್ನ ಗೌರವಪೂರ್ವಕ ನಮಸ್ಕಾರ ಗಳು.

ನಾನು ಇತಿಹಾಸ ಕ್ಷೇತ್ರಕ್ಕೆ ಆಗಂತುಕ. ಯಾವುದೇ ಆಗಂತುಕ ಎದುರಿಸಬೇಕಾದ ಬಹುತೇಕ ಎಲ್ಲ ಆತಂಕಗಳನ್ನೂ ನಾನು ಎದುರಿಸಿದ್ದೇನೆ. ಆದ್ದರಿಂದ ಕುಗ್ಗುವುದರ ಬದಲು ಆ ಆತಂಕ ಗಳನ್ನೇ ಔಷಧ ಮಾಡಿ ಕುಡಿದು ಬಲ ಪಡೆದಿದ್ದೇನೆ. ಯಾವುದೇ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕನೂ ಆಗಿರದ, ಆದರೆ ಕನ್ನಡ ಸಂಸ್ಕೃತಿಯ ಬೋಧನೆಯನ್ನು ಪ್ರೀತಿಸುವ ನನ್ನಂತಹವನನ್ನು ಕಾರ್ಯಕಾರಿ ಸಮಿತಿಯ ಕೆಲವು ಸದಸ್ಯರ ಸೂಚನೆಯ ಮೇರೆಗೆ, ಸರ್ವಾನುಮತದಿಂದ ಸಮ್ಮೇಳನಾಧ್ಯಕ್ಷ ನನ್ನಾಗಿ ಆಯ್ಕೆ ಮಾಡಿರುವ ಅಕಾದೆಮಿಯ ಪದಾಧಿಕಾರಿಗಳಿಗೆ ನಾನು ಕೃತಜ್ಞನಾಗಿದ್ದೇನೆ. ನಾನು ಕರ್ನಾಟಕ ಇತಿಹಾಸ ಅಕಾದೆಮಿಯ ಆರಂಭದ ದಿನಗಳಿಂದಲೂ ಅದರ ಜೊತೆಗೇ ಇದ್ದೇನೆ. ಮೊದಲ ಎರಡು ವರ್ಷ ಕಾರ್ಯದರ್ಶಿಯಾಗಿ ನಂತರದ ಎರಡು ವರ್ಷಗಳು ಕಾರ್ಯಕಾರೀ ಸಮಿತಿಯ ಸದಸ್ಯನಾಗಿ ಮತ್ತು ನಂತರ ಸತತ ೨೪ ವರ್ಷಗಳ ಕಾಲ ಪ್ರಧಾನ ಕಾರ್ಯದರ್ಶಿಯಾಗಿ ಅಕಾದೆಮಿಯ ಸೇವೆ ಸಲ್ಲಿಸುವ ಅವಕಾಶ ನೀಡಿದ ಅಕಾದೆಮಿಯ ಎಲ್ಲ ಸದಸ್ಯರಿಗೆ ನಾನು ಕೃತಜ್ಞನಾಗಿದ್ದೇನೆ. ಅಕಾದೆಮಿಯ ಜೊತೆಗೇ ನಾನು ಬೆಳೆದಿದ್ದೇನೆ ಎಂದು ಹೆಮ್ಮೆಯಿಂದ ದಾಖಲಿಸಬಯಸುತ್ತೇನೆ.

ಅಕಾದೆಮಿಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಈವರೆಗೆ ಇಪ್ಪತ್ತನಾಲ್ಕು ಜನ ಹಿರಿಯ ವಿದ್ವಾಂಸರು ಅಲಂಕರಿಸಿದ್ದಾರೆ. ಈ ಮೊದಲು ಹಗರಿಬೊಮ್ಮನಹಳ್ಳಿಯಲ್ಲಿ ೨೦೦೭ರಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿ ೨೧ನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾಗಿದ್ದ ಪ್ರೊ|| ಲಕ್ಷ್ಮಣ್ ತೆಲಗಾವಿ ಹೊರತುಪಡಿಸಿದರೆ ವಯಸ್ಸಿನಲ್ಲಿ ನಾನೇ ಕಿರಿಯ ಸಮ್ಮೇಳನಾಧ್ಯಕ್ಷ. ಹಾಗೆ ಹೇಳಿಕೊಳ್ಳುವ ಗರ್ವ ನನ್ ಪಾಲಿನದು. ಶಾಸನಶಾಸ್ತ್ರದ ಬಗ್ಗೆ ಪ್ರೀತಿ ಹುಟ್ಟಿಸಿದ ಡಾ|| ಎಂ. ಚಿದಾನಂದಮೂರ್ತಿ, ಶಾಸನಶಾಸ್ತ್ರದಲ್ಲಿ ಗಂಭೀರವಾಗಿ ತೊಡಗಿಸಿಕೊಳ್ಳಲು ಕಾರಣರಾದ ಡಾ|| ಬಾ.ರಾ. ಗೋಪಾಲ್, ಹಲವು ಸಂದರ್ಭಗಳಲ್ಲಿ ಮಾರ್ಗದರ್ಶನ ನೀಡುತ್ತಿದ್ದ ಪ್ರೊ|| ಜಿ.ಎಸ್. ದೀಕ್ಷಿತ್, ನನ್ನ ಅಪರೂಪದ ಮತ್ತು ಆಕಸ್ಮಿಕ ಗೈರುಹಾಜರಿಗಳ ಸಂದರ್ಭದಲ್ಲಿ ಆದ ತ್ರೀವ್ರ ತೊಂದರೆಗಳನ್ನು ಸಹಿಸಿದ ಡಾ|| ಸೂರ್ಯನಾಥ ಕಾಮತ್ ಮತ್ತು ಈವರೆಗಿನ ಎಲ್ಲ ಸಮ್ಮೇಳನಾಧ್ಯಕ್ಷರನ್ನೂ ಗೌರವದಿಂದ ಸ್ಮರಿಸುತ್ತಾ, ಈ ಗೌರವದ ಸ್ಥಾನವನ್ನು ಒಪ್ಪಿಕೊಂಡು ಇತಿಹಾಸಕ್ಕೆ ಸಂಬಂಧಿಸಿದ ನನ್ನ ಕೆಲವು ಅನಿಸಿಕೆಗಳನ್ನು ನಿಮ್ಮೊಡನೆ ಹಂಚಿಕೊಳ್ಳಬಯಸುತ್ತೇನೆ.

ಅಕಾದೆಮಿಯು ಎಂದಿಗೂ ವೃತ್ತಿಪರ ಮತ್ತು ಪ್ರವೃತ್ತಿಪರ ಎಂದು ಯಾರ ಬಗ್ಗೆಯೂ ಪ್ರತ್ಯೇಕತಾ ಮನೋಭಾವವನ್ನು ಇಟ್ಟುಕೊಂಡಿಲ್ಲ. ಅಕಾದೆಮಿಗೆ ಇತಿಹಾಸವನ್ನೇ ಬೋಧಿಸುವ ಪ್ರಾಧ್ಯಾಪಕರಿಂದ ಆರಂಭಿಸಿ, ಇತಿಹಾಸವನ್ನು ಪ್ರೀತಿಸುವ ಸಾಮಾನ್ಯ ರೈತನವರೆಗೆ ಎಲ್ಲರೂ ಒಂದೇ. ಇತಿಹಾಸದ ಅಧ್ಯಯನಕ್ಕೆ ಅಗತ್ಯವಾದ ಮೂಲ ಆಕರಗಳನ್ನು ಸಂಗ್ರಹಿಸಿ, ವಿಶ್ಲೇಷಿಸುವ ಪುರಾತತ್ವಜ್ಞರು ಮತ್ತು ಶಾಸನತಜ್ಞರ ಹಾಗೆಯೇ ಭಾಷಿಕ ವಿದ್ವಾಂಸರು, ಹಸ್ತಪ್ರತಿ ಸಂಗ್ರಹಕಾರರು, ಜಾನಪದ

* # ೧೪೪, ಸ್ವಸ್ತಿಶ್ರೀ ಸ್ಕಂದ, ಐ.ವೈ.ಡಿ. ರಸ್ತೆ, ಅರಿಶಿನಕುಂಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ವಿದ್ವಾಂಸರು ಮತ್ತು ಕಲಾತಜ್ಞರೂ ಮುಖ್ಯವಾಗಿದ್ದಾರೆ. ವೃತ್ತಿಯಿಂದ ಇತಿಹಾಸಕ್ಕೆ ಸಂಬಂಧಪಡದವರು ಎಂದು ನಿರಾಕರಿಸಿಬಿಡಬಹುದಾದ, ವಿಜ್ಞಾನಿಗಳು, ಭೂವಿಜ್ಞಾನಿಗಳು, ವೃತ್ತಿಪರ ವೈದ್ಯರು ಮತ್ತು ಎಂಜಿನಿಯರುಗಳೂ ನಮ್ಮ ಬಳಗದಲ್ಲಿದ್ದು ಇತಿಹಾಸದ ಅಧ್ಯಯನವನ್ನು ಶ್ರೀಮಂತ ಗೊಳಿಸುತ್ತಿದ್ದಾರೆ. ವೃತ್ತಿಪರ ಇತಿಹಾಸಕಾರರಿಗೆ ಪ್ರವೃತ್ತಿಪರ ಇತಿಹಾಸಕಾರರ ಅಭಿಪ್ರಾಯಗಳ ಬಗ್ಗೆ ಸ್ವಲ್ಪಮಟ್ಟಿನ ಅನುಮಾನಗಳಿದ್ದರೂ, ಪೂರ್ಣ ನಿರಾಕರಣೆ ಇಲ್ಲ ಎಂಬುದು ಸಮಾಧಾನಕರ ಸಂಗತಿ.

ಇತಿಹಾಸದ ಆಂತರ್ಯವನ್ನು ತಿಳಿಯಲು ಕ್ಷೇತ್ರ ಕಾರ್ಯವು ಮಹತ್ವದ ನೆರವು ನೀಡುತ್ತದೆ ಎಂಬುದು ಬಹುತೇಕ ನಮ್ಮ ಅಕಾದೆಮಿಯ ಸದಸ್ಯರಿಗೆ ಚೆನ್ನಾಗಿ ತಿಳಿದಿದೆ. ಅಕಾದೆಮಿಯ ವಾರ್ಷಿಕ ಸಮ್ಮೇಳನಕ್ಕೆ ಮೊದಲು ನಮ್ಮ ಸಕ್ರಿಯ ಸದಸ್ಯರು ಬಹುವಾಗಿ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಗಳನ್ನೇ ವಿನಿಮಯ ಮಾಡಿಕೊಳ್ಳುತ್ತಾರೆ. ಅಕಾದೆಮಿಯಲ್ಲಿ ಶುದ್ಧ ಇತಿಹಾಸದ ವಿದ್ವಾಂಸರು ಮತ್ತು ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ಸಾಹಿತ್ಯದ ವಿದ್ವಾಂಸರು ಮತ್ತು ವಿದ್ಯಾರ್ಥಿಗಳೇ ಹೆಚ್ಚಾಗಿದ್ದಾರೆ ಎಂಬ ಸತ್ಯವನ್ನು ಇತಿಹಾಸದ ಅಭ್ಯಾಸಿಯಾಗಿ ಹೇಳಲೇಬೇಕಾದ್ದು ಕರ್ತವ್ಯ ಎಂದು ಭಾವಿಸುತ್ತೇನೆ. ಇಲ್ಲಿ ಸತ್ಯವನ್ನು ನಂಬಿರುವವರು ನಾವು. ಇತಿಹಾಸ ಎಲ್ಲರಿಗೂ ಸೇರಿದ್ದು; ನಾನು ಇತಿಹಾಸದಲ್ಲಿ ಸೇರುವುದಿಲ್ಲ ಎಂದು ಯಾರೂ ಹೇಳಲು ಸಾಧ್ಯವಿಲ್ಲ. ದೇವರುಗಳು ಪುರಾಣದಲ್ಲಿ ಸೇರಿಹೋಗುವಂತೆಯೇ ಪ್ರತಿಯೊಬ್ಬ ಮನುಷ್ಯನೂ ಇತಿಹಾಸದಲ್ಲಿ ಸೇರುತ್ತಾನೆ. ಅಲ್ಲಿ ಶಿಷ್ಟ ಮತ್ತು ಜಾನಪದ ದೇವರುಗಳೆಂದು ಬೇರಾಗಿರು ವಂತೆಯೇ ಇಲ್ಲೂ ಪ್ರಮುಖ ಮತ್ತು ಗೌಣ ಪಾತ್ರಗಳು ಬೇರಾಗಿ ಉಳಿಯುತ್ತವೆ. ಇತಿಹಾಸ ಅಧ್ಯಯನ ಬೇಡ ಎನ್ನುವ ಸ್ವಾತಂತ್ರ್ಯ ಎಲ್ಲರಿಗೂ ಇದೆ. ಆದರೆ ಇತಿಹಾಸ ಬೇಡ ಎನ್ನುವ ಸ್ವಾತಂತ್ರ್ಯ ಯಾರಿಗೂ ಇಲ್ಲ. ಇತಿಹಾಸವನ್ನು ಒಂದು ಶಿಸ್ತಾಗಿ ಕಲಿಯುವುದು ಅವರವರ ಪಾಲಿಗೆ ಬಿಟ್ಟ ವಿಷಯ. ಅದಕ್ಕೆ ಅಕಾದೆಮಿಯ ಒಬ್ಬ ಸದಸ್ಯ ಶ್ರೀ ಕೆ.ಟಿ. ಪಾಟೀಲರನ್ನು ಉದಾಹರಣೆಯಾಗಿ ಕೊಡಬಯಸುತ್ತೇನೆ. ಸಣ್ಣ ಪ್ರಮಾಣದ ರೈತರಾದರೂ, ಗತಕಾಲದ ಅವಶೇಷಗಳ ನಡುವೆ ಅವರು ನಡೆಸುವ ಹುಡುಕಾಟ ಯಾವುದೋ ಒಂದು ಸಂಗತಿಯನ್ನು ಬೆಳಕಿಗೆ ತರುತ್ತದೆ. ಆದ್ದರಿಂದ ಅಂತಹವರು ನನ್ನಂತಹವರಿಗೆ ಗುರು ಹಿರಿಯರಷ್ಟೇ ಮುಖ್ಯರಾಗುತ್ತಾರೆ.

ಈ ಸಂದರ್ಭದಲ್ಲಿ ನಾನು ನನಗೆ ಲಿಪಿಶಾಸ್ತ್ರವನ್ನು ಕಲಿಸಿದ ಹಿರಿಯರಾದ ಶ್ರೀ ಎ.ಎಂ. ಅಣ್ಣಿಗೇರಿ ಮತ್ತು ಗೆಳೆಯ–ಗುರು ಡಾ॥ ಆರ್. ಶೇಷಶಾಸ್ತ್ರಿ ಅವರನ್ನು ನೆನಪು ಮಾಡಿಕೊಳ್ಳುತ್ತಾ, ನಾನು ಕಾದಂಬರಿಕಾರನೆಂದು ಗುರುತಿಸಿ ಕೊಂಡಾಗಲೇ ಸಂತೋಷಪಟ್ಟು, ಲಿಪಿಯ ಅಭ್ಯಾಸ ಮಾಡು ತ್ತಿದ್ದೇನೆ ಎಂದು ತಿಳಿದಾಗ ಸಂಭ್ರಮದಿಂದ ಬೆನ್ನು ತಟ್ಟಿ, ಆಶೀರ್ವದಿಸಿದ ನನ್ನ ತಾತ ಹಿರಿಯ ಶಾಸನತಜ್ಞ ನೆಲಮಂಗಲ ಲಕ್ಷ್ಮೀನಾರಾಯಣರಾಯರನ್ನು ಅತ್ಯಂತ ಗೌರವದಿಂದ ಸ್ಮರಿಸುತ್ತೇನೆ.

ಹಿರಿಯರ ಬಲವಂತಕ್ಕೆ ಕಟ್ಟುಬಿದ್ದು ಎಂದೂ ನನ್ನ ಪ್ರೀತಿಯ ವಿಷಯವಾಗದ ಎಂಜಿನಿಯರಿಂಗ್ ಶಿಕ್ಷಣ ಪಡೆದು, ಕೆಲವು ವರ್ಷಗಳು ಮಾತ್ರ ಮೋಸವಾಗದಂತೆ ಎಂಜಿನಿಯರಿಂಗ್‌ಗೆ ಸಂಬಂಧಿಸಿದ ವೃತ್ತಿ ಮಾಡಿ, ನಂತರ ಭಾಷೆಗೆ ಸಂಬಂಧಿಸಿದ ಕೆಲಸವನ್ನು ಪ್ರೀತಿಯಿಂದ ಮಾಡಿ, ಹೊಟ್ಟೆಯ ಪಾಡಿನ ವೃತ್ತಿಗೆ ವಿದಾಯ ಹೇಳಿದರೂ, ಅದೇ ವಿದ್ಯಾಭ್ಯಾಸ ಮತ್ತು ವೃತ್ತಿಜೀವನ ಇಂದಿಗೂ ನನಗೆ ಅನ್ನ ನೀಡುತ್ತಿದೆ ಎಂದು ಋಣಭಾವದಿಂದ ಸ್ಮರಿಸುತ್ತೇನೆ. ಆ ಸಂದರ್ಭದಲ್ಲಿಯೂ ಭ್ರಷ್ಟನಾಗದೆ, ಪ್ರಾಮಾಣಿಕವಾಗಿ ವೃತ್ತಿಬದುಕಿಗೆ ಸಹಕಾರವಿತ್ತ ನನ್ನ ಸಹೋದ್ಯೋಗಿಗಳನ್ನು ಪ್ರೀತಿಯಿಂದ ನೆನೆಯುತ್ತೇನೆ.

ಈವರೆಗೆ ಸಮ್ಮೇಳನಾಧ್ಯಕ್ಷರಾಗಿದ್ದ ನಾಡು, ನುಡಿ ಮತ್ತು ಸಂಸ್ಕೃತಿಗಳಿಗೆ ಸೇವೆ ಸಲ್ಲಿಸಿದ ನನ್ನ ಪೂರ್ವಸೂರಿಗಳಿಗೆ ಗೌರವ ಸಲ್ಲಿಸುತ್ತಾ, ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ ಯನ್ನು ತಮಗೆ ಅವಕಾಶ ದೊರೆತಂತೆ ಸಮೃದ್ಧಗೊಳಿಸಿರುವ ವಿದೇಶೀ ವಿದ್ವಾಂಸರು ಮತ್ತು ಸ್ವದೇಶೀ ವಿದ್ವಾಂಸರಿಗೆ ಗೌರವ ಸಲ್ಲಿಸುತ್ತಾ, ನನ್ನ ಹಿರಿಯರು ನಿರೀಕ್ಷಿಸಿದ್ದ ಕೆಲಸಗಳ ಪೈಕಿ ಆಗಿರುವ ಮತ್ತು ಇನ್ನೂ ಆಗಬೇಕಾಗಿರುವ ಕೆಲವು ಕೆಲಸಗಳನ್ನು ನೆನಪು ಮಾಡಿಕೊಳ್ಳಬಯಸುತ್ತೇನೆ. ಆಕರ ಸಾಮಗ್ರಿಗಳ ವ್ಯಾಖ್ಯಾನ, ವಿಮರ್ಶೆಗಳತ್ತ ಮಾತ್ರವಲ್ಲದೆ, ಅವುಗಳನ್ನು ಆಧರಿಸಿ, ಕರ್ನಾಟಕದ ಸಮಗ್ರ ಇತಿಹಾಸ ರಚನೆ ಆಗಿಲ್ಲ ಎನ್ನುವ ಅಭಿಪ್ರಾಯ ಇತ್ತು. ಆದರೆ ಈಗ ಅಷ್ಟೊಂದು ನಿರಾಶಾದಾಯಕ ವಾತಾವರಣವಿಲ್ಲ. ಪಿ.ಎಚ್‌.ಡಿ.ಯ ನೆಪದಿಂದಾದರೂ ಕೆಲವು ರಾಜಮನೆತನಗಳ ಅಧ್ಯಯನ ಮಾಡಿ, ಅವುಗಳ ಫಲಿತಗಳನ್ನು ವಿದ್ವಾಂಸರು ಪುಸ್ತಕ ರೂಪದಲ್ಲಿ ಪ್ರಕಟಿಸಿದ್ದಾರೆ. ಅವರೆಲ್ಲರಿಗೂ ಕರ್ನಾಟಕ ಇತಿಹಾಸದಲ್ಲಿ ಆಸಕ್ತಿ ಇಟ್ಟವರು ಕೃತಜ್ಞರಾಗಿರುತ್ತಾರೆ. ಅಲ್ಲದೆ,

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಇತಿಹಾಸ ವಿಭಾಗವು ಕೆಲವು ವರ್ಷಗಳ ಹಿಂದೆ, ಏಳು ಸಂಪುಟಗಳಲ್ಲಿ ಕರ್ನಾಟಕ ಚರಿತ್ರೆಯನ್ನು ಎಂಟು ಸಂಪುಟಗಳಲ್ಲಿ ಪ್ರಕಟಿಸಿದೆ. ಮೂಲ ಆಕರಗಳಿಗೆ ಸಂಬಂಧಿಸಿದಂತೆ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ದಕ್ಷಿಣ ಭಾರತ ಅಧ್ಯಯನ ವಿಭಾಗ ಪರಿಷ್ಕರಿಸಿ ಪ್ರಕಟಿಸುತ್ತಿದ್ದ ಎಪಿಗ್ರಾಫಿಯಾ ಕರ್ನಾಟಿಕಾದ ಪರಿಷ್ಕರಣ ಕಾರ್ಯ, ವಿಭಾಗದಲ್ಲಿನ ಸಿಬ್ಬಂದಿಯ ಕೊರತೆಯಿಂದಾಗಿ ಹೊರಗಿನ ಶಾಸನತಜ್ಞರ ಮೂಲಕ ಮುಂದುವರಿದಿದೆಯಾದರೂ, ವೇಗ ಸಾಧಿತವಾಗಿಲ್ಲ. ಎರಡು ಸಂಪುಟಗಳು ಸಿದ್ಧಗೊಂಡು ಮುದ್ರಣವಾಗಿದ್ದರೂ, ಬಿಡುಗಡೆ ಆಗದಿರುವುದರಿಂದ ಜವಾಬ್ದಾರಿ ಒಪ್ಪಿಕೊಂಡಿದ್ದ ಇತರ ಶಾಸನತಜ್ಞರಿಗೆ ಉಮೇದು ಬಂದಿಲ್ಲ. ಕೇವಲ ವಿಷಯದ ಮೇಲಿನ ಪ್ರೀತಿಯಿಂದ ಪರಿಷ್ಕರಣೆಯ ಜವಾಬ್ದಾರಿಯನ್ನು ಒಪ್ಪಿಕೊಂಡಿರುವ ಶಾಸನತಜ್ಞರಿಗೆ ತಮ್ಮ ಶ್ರಮ ಸಾರ್ಥಕವಾಗುತ್ತದೆ ಎಂಬ ವಿಶ್ವಾಸ ಬರದ ಹೊರತು ಕೆಲಸ ಆಗುವುದಿಲ್ಲ. ಇಲ್ಲಿ ಹಣ, ಪ್ರತಿಷ್ಠೆ ಇತ್ಯಾದಿಗಳಿಗಿಂತ ಶ್ರಮ ಸಾರ್ಥಕತೆಯ ವಿಷಯವೇ ಪ್ರಧಾನವಾಗಿದೆ ಎಂಬುದನ್ನು ಮರೆಯುವಂತಿಲ್ಲ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಶಾಸನ ಶಾಸ್ತ್ರ ವಿಭಾಗವು ೧೯೯೮ರಲ್ಲಿ ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದ ಶಾಸನ ಸಂಪುಟವನ್ನು ಪ್ರಕಟಿಸಿದಾಗ, ಉತ್ತರ ಕರ್ನಾಟಕದ ಎಲ್ಲ ಜಿಲ್ಲೆಗಳ ಬಹು ನಿರೀಕ್ಷಿತ ಶಾಸನ ಸಂಪುಟಗಳ ಪ್ರಕಟನೆಯ ಬಗ್ಗೆ ಬಹಳ ನಿರೀಕ್ಷೆಗಳನ್ನು ಇಟ್ಟುಕೊಳ್ಳಲಾಯಿತು. ಆ ಪೈಕಿ ಈವರೆಗೆ ಹಂಪಿಯ ಶಾಸನಗಳ ಪ್ರತ್ಯೇಕ ಸಂಪುಟವಲ್ಲದೆ. ಬಳ್ಳಾರಿ, ಕೊಪ್ಪಳ, ರಾಯಚೂರು ಮತ್ತು ಬಾಗಲಕೋಟೆ ಜಿಲ್ಲೆಗಳ ಶಾಸನ ಸಂಪುಟಗಳು ಮಾತ್ರ ಪ್ರಕಟವಾಗಿವೆ., ಉಳಿದ ಜಿಲ್ಲೆಗಳ ಶಾಸನ ಸಂಪುಟಗಳೂ ಪ್ರಕಟವಾಗದಿರಲು ಕಾರಣಗಳೇನು ಎಂದು ಅಧಿಕಾರಶಾಹಿಗಳ ರೀತಿ ಪತ್ತೆ ಕಾರ್ಯದಲ್ಲಿ ತೊಡಗಿ ಮತ್ತಷ್ಟು ಸಮಯವನ್ನು ಹಾಳು ಮಾಡುವುದರ ಬದಲು, ಅವುಗಳ ಪ್ರಕಟನೆಗ ಇರುವ ಅಡ್ಡಿ ಅತಂಕಗಳು ಬಗೆಹರಿದು, ಬಹು ಬೇಗ ಉಳಿದ ಎಲ್ಲಾ ಜಿಲ್ಲಾ ಸಂಪುಟಗಳೂ ಪ್ರಕಟವಾಗಲಿ ಎಂಬ ನಿರೀಕ್ಷೆ ಶಾಸನಾಭ್ಯಾಸಿಗಳಿಗಿದೆ. ೧೯೯೮ರಲ್ಲಿ ಗೆಳೆಯ ಡಾ॥ ದೇವರಕೊಂಡಾರೆಡ್ಡಿ ಅವರ ಸಂಪಾದಕತ್ವದಲ್ಲಿ ಆರಂಭವಾದ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳ ಪ್ರಕಟಣಾ ಕಾರ್ಯವು ೨೦೦೬ರಲ್ಲಿ ಪ್ರಕಟವಾದ ಬಾಗಲಕೋಟೆ ಜಿಲ್ಲೆಯ ಶಾಸನ ಸಂಪುಟಕ್ಕೆ ನಿಂತಿದೆ. ಈ ನಡುವೆಯೂ ಡಾ॥ ಪರಮಶಿವಮೂರ್ತಿ ಅವರ ಸಂಪಾದಕತ್ವದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 'ಕೃಷ್ಣದೇವರಾಯನ ಶಾಸನಗಳು' ಮತ್ತು ಪ್ರೌಢದೇವರಾಯನ ಶಾಸನಗಳು' ಸಂಪುಟಗಳು ಅಲ್ಲಿ ಉತ್ಸಾಹ ಮತ್ತು ಬದ್ಧತೆ ಬತ್ತಿಲ್ಲ ಎಂದು ಮನವರಿಕೆ ಮಾಡಿಕೊಡುತ್ತವೆ. ಡಾ॥ ಎಂ.ಎಂ. ಕಲಬುರ್ಗಿ ಅವರು ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಅವರ ಆಸಕ್ತಿಯ ಕಾರಣದಿಂದ ಕನ್ನಡ ವಿಶ್ವವಿದ್ಯಾಯ ಶಾಸನ ಸಂಪುಟಗಳ ಯೋಜನೆಯ ಅಡಿಯಲ್ಲೇ ಕರ್ನಾಟಕದ ಹೊರಗಿನ ಆಂಧ್ರ, ತಮಿಳುನಾಡು ಮತ್ತು ಮಹಾರಾಷ್ಟಗಳ ಕನ್ನಡ ಶಾಸನ ಸಂಪುಟಗಳು ಪ್ರಕಟವಾಗಿವೆ. ಅದಕ್ಕಾಗಿ ಶಾಸನಾಭ್ಯಾಸಿಗಳು ಡಾ॥ ಎಂ.ಎಂ. ಕಲಬುರ್ಗಿ ಅವರಿಗೆ ಕೃತಜ್ಞರು. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಇತಿಹಾಸ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ, ಜಾನಪದ ಅಧ್ಯಯನ, ಲಲಿತ ಕಲೆಗಳು, ಇತ್ಯಾದಿ ಬಹುತೇಕ ವಿಭಾಗಗಳು ತಮ್ಮ ವಿಭಾಗಗಳಿಂದ ಹಂಪಿ ಮತ್ತು ಪರಿಸರದ ಪ್ರಾಗಿತಿಹಾಸ, ಪುರಾತತ್ವ, ಇತಿಹಾಸ, ಜಾನಪದ ಕಲೆ, ಹಸ್ತಪ್ರತಿಗಳು, ಬುಡಕಟ್ಟು ಜನಾಂಗಗಳು ಇತ್ಯಾದಿ ವಿಷಯಗಳನ್ನು ಕುರಿತಂತೆ ನಡೆಸುತ್ತಿರುವ ಅಧ್ಯಯನ ಮತ್ತು ಮಾಡುತ್ತಿರುವ ಪ್ರಕಟಣೆಗಳು ಕರ್ನಾಟಕ ಇತಿಹಾಸ ಮತ್ತು ಕನ್ನಡ ಸಂಸ್ಕೃತಿಗೆ ಸಂಬಂಧಿಸಿದ ಮಹತ್ವದ ಮಾಹಿತಿಗಳನ್ನು ಅನಾವರಣಗೊಳಿಸುತ್ತಿವೆ. ಆದ್ದರಿಂದ ಇಡಿಯಾಗಿ ಹಂಪಿ ವಿಶ್ವವಿದ್ಯಾಲಯಕ್ಕೆ ಕರ್ನಾಟಕದ ಸಂಶೋಧಕರು ಆಭಾರಿಗಳಾಗಿರಬೇಕಾಗಿದೆ. ಈ ಕೃತಿಗಳು ಇಂಗ್ಲೀಷ್ ಭಾಷೆಯಲ್ಲೂ ಪ್ರಕಟಗೊಂಡರೆ, ಕನ್ನಡೇತರ ವಿದ್ವಾಂಸರಿಗೂ ಪ್ರಯೋಜನವಾಗುತ್ತದೆ. ಆದರೆ ಕನ್ನಡಕ್ಕೆ ಆದ್ಯತೆ ಯಾವುದೇ ಕಾರಣದಿಂದ ತಪ್ಪಬಾರದು. ಕರ್ನಾಟಕದ ಇನ್ನೂ ಕೆಲವು ವಿಶ್ವವಿದ್ಯಾಲಯಗಳು ಮಧ್ಯಕಾಲೀನ ಇತಿಹಾಸ, ಆಧುನಿಕ ಇತಿಹಾಸ, ಉಪಸಂಸ್ಕೃತಿಗಳ ಇತಿಹಾಸ ಎಂದು ತಮ್ಮ ಅಧ್ಯಯನಗಳಿಗೆ ಮಿತಿ ಹಾಕಿಕೊಂಡಿರುವಂತೆ ಭಾಸವಾಗುತ್ತದೆ. ಇತಿಹಾಸ ಎಂದಾಗ ಅದು ಸಮಗ್ರ ಅಲ್ಲಿ ಇಂತಹ ವಗೀಕರಣದಿಂದ ಆಗುವ ಹಾನಿಯೇ ಹೆಚ್ಚು ಯಾವುದೇ ಮಡಿವಂತಿಕೆಯ ಫಲ ಉತ್ತಮವಾಗಿರುವುದಿಲ್ಲ ಎಂಬ ನಂಬಿಕೆ ನನ್ನದು. ಯಾವ ಇತಿಹಾಸಕಾರನ್ನೂ ಯಾವುದೇ ರೀತಿಯ ಹಣೆಪಟ್ಟಿ ಅಂಟಿಸಿಕೊಳ್ಳುವುದನ್ನು ನಾನು ಮನಸ್ವೀ ಒಪ್ಪಲಾರೆ. ನನಗೂ ಒಂದು ಕಾಲಕ್ಕೆ ಇವರು ಶಾಸನಾಭ್ಯಾಸಿ; ಆದ್ದರಿಂದ ಇವರು ಕೇವಲ ಪ್ರಾಚೀನ ಇತಿಹಾಸಾಸಕ್ತ ಎಂದು ಹಣೆಪಟ್ಟಿ ಹೆಚ್ಚುವ ಸಂಭವವಿತ್ತು; ಆದರೆ, 'ಕರ್ನಾಟಕ ಏಕೀಕರಣ ಇತಿಹಾಸ'ವನ್ನು ಸಂಪಾದಿಸಿ ಕೊಡಿ ಎಂದು ನವಕರ್ನಾಟಕ ಪ್ರಕಾಶ ಸಂಸ್ಥೆ ಕೇಳಿದಾಗ, ನಾನು ಅದನ್ನು ಸವಾಲಾಗಿ ಸ್ವೀಕರಿಸಿ, ಹೊಸ ಅನುಭವ ಪಡೆದೆ. ಎಲ್ಲ ಇತಿಹಾಸಕಾರರಿಗೂ

ಇಂತಹ ಅನುಭವ ಗಳಾದರೆ, ಅವರೂ ಶ್ರೀಮಂತರಾಗುತ್ತಾರೆ ಎಂಬ ನಂಬಿಕೆ ನನ್ನದು ಸುತ್ತ ಬೇಲಿಯನ್ನು ಹಾಕಿಕೊಂಡು ಕಂಡಷ್ಟು ನೋಟ ವನ್ನೇ ವಿಶ್ವ ಎಂದುಕೊಳ್ಳುವುದರ ಬದಲು ಗೋಡೆಗಳನ್ನು ದಾಟಿ ವಿಶಾಲ ಪ್ರಪಂಚವನ್ನು ನಮ್ಮದಾಗಿಸಿಕೊಳ್ಳುವುದರಲ್ಲಿ ದುರಾಸೆಗಿಂತ ಸಾರ್ಥಕತೆ ಹೆಚ್ಚು. ಇಂತಹ ಸಂದರ್ಭದಲ್ಲಿ ವಿಶ್ವಮಾನ್ಯ ಕವಿ ರವೀಂದ್ರನಾಥ ಠಾಕೂರರ 'ಎಲ್ಲಿ ಮನಕಿಲ್ಲ ಭಯ, ಎಲ್ಲಿ ತಲೆ ಎತ್ತಿಹುದೊ, ಎಲ್ಲಿ ಜ್ಞಾನವು ಮುಕ್ತ, ಎಲ್ಲಿ ನಾವಿಕ ವಸುಧೆ ಶತಖಂಡವಾಗಿಲ್ಲ' ಎಂಬ ಮಾತುಗಳು ನೆನಪಾಗುತ್ತವೆ. ಪ್ರಾದೇಶಿಕ ಇತಿಹಾಸದ ತಳಪಾಯದ ಮೇಲೆ ಸಮಗ್ರ ಇತಿಹಾಸವನ್ನು ಅಭ್ಯಾಸ ಮಾಡುವ ಅವಕಾಶ ಎಲ್ಲರಿಗೂ ದಕ್ಕಬೇಕು.

ಕೇಂದ್ರ ಮತ್ತು ರಾಜ್ಯ ಪುರಾತತ್ವ ಇಲಾಖೆಗಳು ತಮಗೆ ಅವಶ್ಯಕ ಎನಿಸುವಷ್ಟು ಸಿಬ್ಬಂದಿ ಇಲ್ಲದಿದ್ದರೂ, ಹಲವು ಕೊರತೆಗಳ ನಡುವೆಯೂ ಶೋಧ, ಉತ್ಖನನ, ಸಂರಕ್ಷಣೆ ಇತ್ಯಾದಿ ಕಾರ್ಯಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡು ಒಳ್ಳೆಯ ಕೆಲಸವನ್ನೇನೋ ಮಾಡುತ್ತಿವೆ. ಆದರೆ, ಅವುಗಳ ಫಲಿತಗಳು ವರದಿಗಳ ರೂಪದಲ್ಲಿ ಬರುವುದು ವಿಳಂಬ ವಾಗುತ್ತಿದೆ. ವರದಿಗಳ ಪ್ರಕಟಣಾ ಕಾರ್ಯವು ಆಯಾ ಇಲಾಖೆ ಗಳದೇ ಆದ್ದರಿಂದ, ಅವು ಪ್ರಕಟವಾಗುವವರೆಗೆ ಆಸಕ್ತರು ಕಾಯುತ್ತಲೇ ಇರಬೇಕಾಗುತ್ತದೆ. ಅಲ್ಲಿ ಬೇರೆಯವರಿಗೆ ಪ್ರವೇಶ ವನ್ನಂತೂ ಬಹಳ ಎಚ್ಚರಿಕೆಯಿಂದ ನಿರ್ಬಂಧಿಸಲಾಗುತ್ತದೆ. ಗೌಪ್ಯತೆಯನ್ನು ಕಾಪಾಡಿಕೊಳ್ಳುವುದೇ ಆದ್ಯತೆಯಾದರೆ, ಶೋದಗಳ ಪ್ರಕಟಣೆಯೂ ಆದ್ಯತೆಯದಾಗಬೇಕು ಎಂದು ಆಸಕ್ತರು ನಿರೀಕ್ಷಿಸುತ್ತಾರೆ. ಭಾರತೀಯ ಪುರಾತತ್ವ ಇಲಾಖೆಯದೇ ಭಾಗವಾದ ಶಾಸನ ಇಲಾಖೆಯು ತನ್ನ ಸಂಗ್ರಹದಲ್ಲಿರುವ ಎಲ್ಲ ಶಾಸನಗಳನ್ನು ಇಲಾಖೆಯ ನಿವೃತ್ತ ಶಾಸನ ತಜ್ಞರು ಮತ್ತು ಅನಿವಾರ್ಯವಾದರೆ ಇಲಾಖೇತರ ಶಾಸನತಜ್ಞರ ನೆರವು ಪಡೆದು, ಪಡಿಯಚ್ಚು, ಟಿಪ್ಪಣಿ ಇತ್ಯಾದಿ ದಾಖಲೆಗಳು ನಾಶವಾಗುವ ಮುನ್ನ ಪ್ರಕಟಿಸದರೆ ಆಸಕ್ತರಿಗೆ ಉಪಯೋಗ ಆಗುತ್ತದೆ. ತನ್ನ ೧೫೦ನೆಯ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳುತ್ತಿರುವ ಭಾರತೀಯ ಪುರಾತತ್ವ ಇಲಾಖೆ ಆ ನೆನಪಿಗಾದರೂ ಪ್ರಕಟಣಾ ಕಾರ್ಯವನ್ನು ಚುರುಕು ಗೊಳಿಸಿದರೆ ಸಂಭ್ರಮಿಸಬಹುದು.

ಭಾರತೀಯ ಪುರಾತತ್ವ ಇಲಾಖೆಯ ಹಂಪಿ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಇಟಗಿ ಮುಂತಾದ ಸ್ಥಳಗಳಲ್ಲಿ ಮಾಡಿರುವ ಸಂರಕ್ಷಣಾ ಕಾರ್ಯವು ದಾಖಲೆಯ ಕೆಲಸವಾಗಿದೆ. ಈಗಂತೂ ಬಾದಾಮಿಯ ಕಣ್ಮನಗಳನ್ನು ತಣಿಸುತ್ತದೆ. ಇದಕ್ಕೆ ಕಾರಣರಾದ ಎಲ್ಲರೂ ಅಭಿನಂದನೆಗಳಿಗೆ ಪಾತ್ರರಾಗುತ್ತಾರೆ.

ಈ ನಿಟ್ಟಿನಲ್ಲಿ ಇತ್ತೀಚಿನ ದಿನಗಳಲ್ಲಿ ರಾಜ್ಯ ಪುರಾತತ್ವ ಇಲಾಖೆ ಚುರುಕಾಗಿದೆ. ಇದು ಜಿಲ್ಲಾ ಪುರಾತತ್ವ ಮತ್ತು ಇತಿಹಾಸ ಸಮ್ಮೇಳನಗಳ ಮೂಲಕ ಇತಿಹಾಸಾಭ್ಯಾಸಿಗಳ ನಡುವೆ ಸೇತುವೆಯನ್ನು ನಿರ್ಮಿಸುತ್ತಿದೆ. ಹೊಸ ವಿಚಾರಗಳ ಶೋಧ, ಪ್ರಕಟಿತ ವಿಚಾರಗಳ ವಿಮರ್ಶೆ ಇತ್ಯಾದಿಗಳ ವಿನಿಮಯಕ್ಕೆ ವೇದಿಕೆಯನ್ನು ಸಜ್ಜುಗೊಳಿಸವುದು ಮಾತ್ರವಲ್ಲದೆ, ಮಂಡಿತ ಸಂಪ್ರಬಂಧಗಳ ಪ್ರಕಟಣೆ ಮಾಡುವುದರ ಮೂಲಕ ಹೆಚ್ಚಿನ ಅಧ್ಯಯನಕ್ಕೆ ಅವಕಾಶಗಳನ್ನು ಒದಗಿಸುತ್ತಿದೆ. ಇದೇ ರೀತಿಯಲ್ಲಿ ಪ್ರತಿವರ್ಷ ಹಂಪಿ, ಉತ್ಸವದ ಸಂದರ್ಭದಲ್ಲಿ ವಿಜಯನಗರ ಅಧ್ಯಯನ ಕುರಿತು ವಿಚಾರ ಸಂಕಿರಣಗಳನ್ನು ನಡೆಸಿ, ಮಂಡಿತವಾದ ಸಂಪ್ರಬಂಧಗಳನ್ನು ಪ್ರಕಟಿಸುತ್ತದೆ. ಸ್ವತಂತ್ರವಾಗಿ ಮತ್ತು ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್‌ನ ಜೊತೆಗೆ ಹಲವು ದೇವಾಲಯಗಳನ್ನು ಸಂರಕ್ಷಿಸುತ್ತಿದೆ. ಅಣ್ಣಿಗೇರಿಯಲ್ಲಿ ದೊರೆತ ತಲೆಬುರುಡೆಗಳ ವಿಚಾರವೂ ಸಧ್ಯದಲ್ಲೇ ದೊರೆಯಲಿರುವುದು ಇಲಾಖೆಯ ಕ್ರಿಯಾ ಶೀಲತೆಯ ಗುರುತ್ತಾಗಿದೆ. ಇಲಾಖೆಯು ಶಿಲ್ಪಗಳ ಕಳವು, ಸ್ಮಾರಕಗಳ ನಾಶ ಇತ್ಯಾದಿಗಳ ಬಗ್ಗೆ ಗಮನ ಹರಿಸುವುದು ಒಳಿತು. ಈಗ ಕರ್ನಾಟಕದಲ್ಲಿ ರಾಜ್ಯ ಪತ್ರಾಗಾರ ಇಲಾಖೆಯ ಜೊತೆಗೆ ಪರಂಪರೆ ಇಲಾಖೆಯೂ ಸಹ ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಪರಂಪರಾ ಕೂಟಗಳನ್ನು ಸ್ಥಾಪಿಸಿ, ಪರಂಪರೆಯ ಬಗ್ಗೆ ಕಾಲೇಜು ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುತ್ತಿರುವುದು ಶ್ಲಾಘನೀಯ ವಿಚಾರ.

ಭಾರತೀಯ ಇತಿಹಾಸ ಅನುಸಂಧಾನ ಪರಿಷತ್ ಈ ಹಿಂದೆ ಡಾ॥ ಜಿ.ಎಸ್. ಗಾಯಿ ಅವರ ಸಂಪಾದಕತ್ವದಲ್ಲಿ ಕದಂಬ ಶಾಸನ ಸಂಪುಟವನ್ನೂ, ಡಾ॥ ಕೆ.ವಿ. ರಮೇಶ್ ಅವರ ಸಂಪಾದಕತ್ವದಲ್ಲಿ ಗಂಗರ ಶಾಸನ ಸಂಪುಟವನ್ನೂ ಪ್ರಕಟಿಸಿತ್ತು. ಅದೇ ಸಂಸ್ಥೆ ಕೆಲವು ವರ್ಷಗಳ ಹಿಂದೆ ಡಾ॥ ಶ್ರೀನಿವಾಸ ರಿತ್ತಿ ಮತ್ತು ಡಾ॥ ಬಿ.ಆರ್. ಗೋಪಾಲ್ ಅವರ ಸಂಪಾದಕತ್ವದಲ್ಲಿ ವಿಜಯನಗರ ಶಾಸನ ಸಂಪುಟಗಳನ್ನು ಪ್ರಕಟಿಸಲು ಆರಂಭಿಸಿತು. ದೆಹಲಿಯಿಂದ ಪ್ರಕಟವಾದ ಮೊದಲನೆಯ ಸಂಪುಟವು ದುಬಾರಿ ಆದ ಕಾರಣದಿಂದ, ನಂತರದ ಸಂಪುಟಗಳ ಪ್ರಕಟನೆಯ ಜವಾಬ್ದಾರಿಯನ್ನು ಬೆಂಗಳೂರಿನ ಪ್ರಾದೇಶಿಕ ಕೇಂದ್ರವೇ ವಹಿಸಿಕೊಂಡು, ಸುಲಭ ಬೆಲೆಯಲ್ಲಿ ೨,೩ (ಕನ್ನಡ) ಮತ್ತು ೪ (ತೆಲುಗು)ನೆಯ ಸಂಪುಟ ಗಳನ್ನು ಪ್ರಕಟಿಸಿದೆ. ೫ (ತಮಿಳು ಶಾಸನಗಳು) ಮತ್ತು ೬

(ಸಂಸ್ಕೃತ) ಶಾಸನ ಸಂಪುಟಗಳೂ ಶೀಘ್ರವೇ ಪ್ರಕಟಗೊಳ್ಳುವ ಸೂಚನೆಗಳಿವೆ. ಡಾ॥ ಎಸ್.ವಿ. ಪಾಡಿಗಾರ್ ಅವರ ಸಂಪಾದಕತ್ವದಲ್ಲಿ ಇತ್ತೀಚೆಗಷ್ಟೇ ಬಾದಾಮಿ ಚಲುಕ್ಯ ಶಾಸನ ಸಂಪುಟವೂ ಪ್ರಕಟವಾಗಿದೆ. ಇತಿಹಾಸ ಅನುಸಂಧಾನ ಪರಿಷತ್‌ನ ಮತ್ತೊಂದು ಗಮನಾರ್ಹ ಕೊಡುಗೆ ಎಂದರೆ ಬಿ.ಎಲ್. ರೈಸ್ ಅವರು ಸಂಪಾದಿಸಿದ್ದ ಎಲ್ಲಾ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಗಳನ್ನು ಒಳಗೊಂಡ ಸಿ.ಡಿ. ದಕ್ಷಿಣ ಭಾರತಕ್ಕೆ, ಅದರಲ್ಲೂ ವಿಶೇಷವಾಗಿ ಬೆಂಗಳೂರಿಗೆ ಸಂಬಂಧಿಸಿದ ವಿಶೇಷ ಮಾಹಿತಿಗಳ ಸಂಗ್ರಹ ಮತ್ತು ಅವುಗಳ ಪ್ರದರ್ಶನದ ವ್ಯವಸ್ಥೆಯ ಜೊತೆಗೆ ಹಲವು ಮಹತ್ತ್ವದ ವಿಚಾರ ಸಂಕಿರಣಗಳನ್ನು ಮಾಡಿ, ಅವುಗಳನ್ನೆಲ್ಲ ಪ್ರಕಟಿಸುವುದರ ಮೂಲಕ ಉತ್ತಮ ಕೆಲಸ ಮಾಡುತ್ತಿದೆ.

ಬೆಂಗಳೂರಿನಲ್ಲಿ ಒಂದು ನೂರು ವರ್ಷಗಳಿಂದಲೂ ಇತಿಹಾಸಪ್ರಜ್ಞೆಯನ್ನು ಜಾಗೃತವಾಗಿರಿಸುತ್ತಾ, ತನ್ನ ಗ್ರಂಥ ಭಂಡಾರದ ಮೂಲಕ ಮಾತ್ರವಲ್ಲದೆ, ಇಂಗ್ಲಿಷ್ ತ್ರೈಮಾಸಿಕ QJMS ಮೂಲಕ ವಿಶ್ವದ ವಿದ್ವಾಂಸರ ಗಮನ ಸೆಳೆದಿರುವ ಮಿಥಿಕ್ ಸೊಸೈಟಿ ಉಪನ್ಯಾಸಗಳು ಮತ್ತು ಹಲವು ವಿಶೇಷ ಉಪನ್ಯಾಸಗಳು ಮತ್ತು ವಿಚಾರ ಸಂಕಿರಣಗಳ ಮೂಲಕ ಇತಿಹಾಸಾಸಕ್ತರ ಆಸಕ್ತಿಯನ್ನು ರಕ್ಷಿಸುತ್ತಿದೆ.

ಮೈಸೂರು, ಧಾರವಾಡ, ಬೆಂಗಳೂರು, ಹಂಪಿ ವಿಶ್ವವಿದ್ಯಾಲಯಗಳ ಕೆಲವು ನಿಯತಕಾಲಿಕೆಗಳು ಬಹಳ ಮುಖ್ಯ ಆಕರ ಗ್ರಂಥಗಳಾಗಿದ್ದು, ಅವುಗಳ ಪ್ರಕಟಣೆ ನಿರಂತರ ಗತಿಯಲ್ಲಿ ಆಗದಿರುವುದು ಬೇಸರದ ವಿಷಯ.

ಹಿಂದಿನ ಒಂದು ಸಮ್ಮೇಳನದ ಅಧ್ಯಕ್ಷರಾಗಿದ್ದ ಹಿರಿಯ ವಿದ್ವಾಂಸರೊಬ್ಬರು ಇತಿಹಾಸ ಬೋಧನೆಯ ವಿಷಯದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಮ್ಮ ಅಧ್ಯಕ್ಷ ಭಾಷಣದಲ್ಲಿ ವ್ಯಕ್ತಪಡಿಸಿದ್ದರು. ಈ ಬಗ್ಗೆ ಚರ್ಚಿಸದಿರುವುದೇ ಸೂಕ್ತ ಎನ್ನುವ ನಿರಾಶಾದಾಯಕ ಪರಿಸ್ಥಿತಿ ಎದುರಾಗಿದೆ. ಯಾವ ಹಂತದಲ್ಲಿ ಯಾವ ಇತಿಹಾಸವನ್ನು ಬೋಧಿಸಬೇಕು ಎಂಬ ವಿಚಾರದಲ್ಲಿ ರಾಜಕೀಯ ನಾಯಕರು ಮತ್ತು ಅಧಿಕಾರಿಗಳು ಹಸ್ತಕ್ಷೇಪ ಮಾಡುವುದನ್ನು ನಿಲ್ಲಿಸದ ಹೊರತು ವಿದ್ಯಾರ್ಥಿಗಳ ಆಸಕ್ತಿಯನ್ನು ಹೆಚ್ಚಿಸುವ ಇತಿಹಾಸವನ್ನು ಬೋಧಿಸಲು ಸಾಧ್ಯವಿಲ್ಲ. ತಮ್ಮ ಪಕ್ಷಗಳ ಸಿದ್ದಾಂತಕ್ಕೆ ತಕ್ಕಂತೆ ಇತಿಹಾಸದ ಪಠ್ಯವನ್ನು ಸಿದ್ಧಪಡಿಸಬೇಕು ಎಂಬ ರಾಜಕೀಯ ನಾಯಕರ ಪ್ರತಿಷ್ಠೆ ಮತ್ತು ಅವರನ್ನು ಎದುರಿಸಲಾಗದ ಅಧಿಕಾರಿಗಳ ಬಲಪ್ರಯೋಗದ ನಿವಾರಣೆ ಆಗುವವರೆಗೆ ಜನರಿಗೆ ಬೇಕಾದ ಇತಿಹಾಸ ಲಭ್ಯವಾಗುವುದಿಲ್ಲ ಎಂದು ವಿಷಾದದಿಂದ ಹೇಳಬೇಕಾಗಿದೆ. ಶಿಕ್ಷಣದ ಬೇಕುಬೇಡಗಳನ್ನು ಶಿಕ್ಷಣತಜ್ಞರು ನಿರ್ಧರಿಸಬೇಕೇ ಹೊರತು, ರಾಜಕೀಯ ನಾಯಕರಲ್ಲ ಮತ್ತು ಅಧಿಕಾರಿಗಳಲ್ಲ. ಎಲ್ಲಿಯವರೆಗೆ ಇತಿಹಾಸ, ಭಾಷೆ ಮತ್ತು ಕಲಾಮಾಧ್ಯಮಗಳ ಮೇಲೆ ರಾಜಕಾರಣದ ಪ್ರಭಾವ ಇರುತ್ತದೆಯೋ ಅಲ್ಲಿಯವರೆಗೆ ಅವು ಜನಪರವಾಗುವುದಿಲ್ಲ. ಒಂದು ಪ್ರದೇಶದಲ್ಲಿ ಬದುಕುವ ಯಾವುದೇ ವ್ಯಕ್ತಿಗೆ ಆಯಾ ಪ್ರದೇಶಗಳ ಇತಿಹಾಸ, ಪರಂಪರೆ ಮತ್ತು ಸಂಸ್ಕೃತಿಗಳು ತಿಳಿದಿರಬೇಕು. ಅದು ಪ್ರತಿಯೊಬ್ಬನ ಹಕ್ಕು. ಮೊದಲೇ ನಿರಾಸಕ್ತ ವಿಷಯ ಎನಿಸಿಕೊಂಡ ಇತಿಹಾಸವನ್ನು ಕಡ್ಡಾಯ ಮಾಡಿದರೂ ತಪ್ಪಾಗುವುದಿಲ್ಲ; ಅದರಿಂದ ತಮ್ಮ ಪರಂಪರೆಯ ಬಗ್ಗೆ ಸ್ವಲ್ಪವಾದರೂ ಅರಿವಿರುತ್ತದೆ. ತೂಕಡಿಸುವವನಿಗೆ ಹಾಸಿಗೆ ಹಾಸಿಕೊಟ್ಟಂತೆ, ಇಸವಿ ಪ್ರಧಾನವಾದ ಮತ್ತು ತಮಗೆ ನೇರವಾಗಿ ಸಂಬಂಧಿಸದ ಇತಿಹಾಸವನ್ನು ಬಲವಂತವಾಗಿ ಬೋಧಿಸುವುದರ ಬದಲು ಜನಪ್ರೀತಿ ಗಳಿಸುವಂತಹ ಇತಿಹಾಸವನ್ನು ಬೋಧಿಸುವುದರಿಂದ ವಿದ್ಯಾರ್ಥಿಗಳು ಇತಿಹಾಸವನ್ನು ಪ್ರೀತಿಸುತ್ತಾರೆ. ತನ್ನ ಹಿರಿಯರ ಒಳಿತು ಮತ್ತು ಕೆಡುಕುಗಳ ಬಗ್ಗೆ ತಿಳಿಯದ ಯಾರೂ ಉತ್ತಮವಾದುದನ್ನು ಸಾಧಿಸಲು ಸಾಧ್ಯವಿಲ್ಲ ಎಂಬ ಅರಿವು ಎಲ್ಲ ನಾಗರಿಕರಲ್ಲಿ ಇರಬೇಕು. ತನ್ನ ಪರಂಪರೆಯ ಅರಿವಿಲ್ಲದ ವ್ಯಕ್ತಿಯು ಮಾತು ಬಾರದ ಪ್ರಾಣಿಗೆ ಸಮನಾಗುತ್ತಾನೆ. ಮಾಡಿದ ತಪ್ಪನ್ನು ಮಾಡುತ್ತಲೇ ಇರುತ್ತಾನೆ. ಮನೆಯಲ್ಲಿ ಪುರಾಣ, ಪುಣ್ಯಕಥೆಗಳನ್ನು ಹಿರಿಯರು ಹೇಳುತ್ತಿರಲಿ; ಅದು ಮನೆಯ ಒಳಗಡೆಯ ಮಾತು. ಮನೆಯ ಆಚೆ ಇತಿಹಾಸದ ಅಧ್ಯಯನ ಆಗುತ್ತಲೇ ಇರಬೇಕು. ಪ್ರೌಢಶಾಲೆಯ ಹಂತದಲ್ಲಿ ಆಯಾ ರಾಜ್ಯಗಳ ಇತಿಹಾಸ ಬೋಧಿಸಲ್ಪಡಬೇಕು. ಪದವಿಪೂರ್ವ ಹಂತದಲ್ಲಿ ಒಂದು ವರ್ಷ ಇಡಿಯಾಗಿ ಭಾರತದ ಮತ್ತೊಂದು ವರ್ಷ ಆಯಾ ರಾಜ್ಯಗಳ ಸಮಗ್ರ ಇತಿಹಾಸ ಬೋಧಿಸಲ್ಪಡಬೇಕು. ಪದವಿಯ ಹಂತದಲ್ಲಿ ವಿದ್ಯಾರ್ಥಿಗಳು ತಮಗೆ ಪ್ರಿಯವಾದ ವಿಷಯಗಳ ಅಧ್ಯಯನ ಮಾಡಲು ಅವಕಾಶವಿರಬೇಕು. ಸ್ನಾತಕೋತ್ತರ ಹಂತದಲ್ಲಿ ವಿದ್ಯಾರ್ಥಿಗಳು ಸಂಶೋಧನೆಗೆ ಅನುಕೂಲವಾದ ಅಧ್ಯಯನಕ್ಕೆ ತೊಡಗಲು ಅವಕಾಶ ಇರಬೇಕು. ಆಗ ಮಾತ್ರ ಇತಿಹಾಸದ ಬೇರು ಭದ್ರವಾಗುತ್ತದೆ. ಆಯಾ ಪ್ರದೇಶಗಳಲ್ಲಿ ಅಧಿಕಾರ ನಡೆಸುವ ಪ್ರತಿಯೊಬ್ಬ ಅಧಿಕಾರಿಗೂ ಸ್ಥಳೀಯ ಭಾಷೆಯ ಪರಿಚಯ ಇರಬೇಕು ಎಂದು ನಿರೀಕ್ಷಿಸುವಂತೆಯೇ ಆಯಾ ಪ್ರದೇಶದ ಇತಿಹಾಸವೂ ತಿಳಿದಿರಬೆಕು. ಅದಕ್ಕೆಂದೇ ರಾಜ್ಯ ಮತ್ತು ಜಿಲ್ಲಾ ಗ್ಯಾಸೆಟಿಯರ್‌ಗಳು ಪ್ರಕಟಗೊಳ್ಳುತ್ತವೆ. ಎಷ್ಟು ಜನ ಅಧಿಕಾರಿಗಳು ಮತ್ತು ರಾಜಕಾರಣಿಗಳು ಗ್ಯಾಸೆಟಿಯರ್

ಬಗ್ಗೆ ತಿಳಿದಿದ್ದಾರೆ ಎಂದು ಸರ್ವೇಕ್ಷಣೆ ಮಾಡಬೇಕಾದ ಪರಿಸ್ಥಿತಿ ಇದೆ. ಯಾವುದೇ ಪಠ್ಯ ಬದಲಾಗಬಾರದು ಎಂದು ಯಾರೂ ವಾದಿಸುವುದಿಲ್ಲ. ಇತಿಹಾಸದಲ್ಲೂ ಹೊಸ ವಿಚಾರಗಳು ತಿಳಿದಾಗ ಪಠ್ಯ ಬದಲಾಗಬೇಕು. ಹೇಳಿದ್ದನ್ನೇ ಹೇಳಿಕೊಂಡು ಕೂರುವುದು ಜಾಣತನವಲ್ಲ. ಆದರೆ ಆಗಲೂ ಯಾವುದೇ ಪಂಥ, ವರ್ಗ ಮತ್ತು ಹಿತಾಸಕ್ತಿಗಳ ಮಾತಿಗೆ ಬೆಲೆ ನೀಡಿ ಪಠ್ಯಕ್ರಮವನ್ನು ಬದಲಾವಣೆ ಮಾಡುವುದು ತಾರ್ಕಿಕ ಕ್ರಮ ವಾಗುವುದಿಲ್ಲ. ಪ್ರಾಚೀನ, ಮಧ್ಯಕಾಲೀನ, ಆಧುನಿಕ ಎಂಬ ವರ್ಗೀಕರಣವು ಅಧ್ಯಯನದ ಅನುಕೂಲತೆಗೆ ಸರಿ ಎನ್ನಿಸ ಬಹುದಾದರೂ, ಇತಿಹಾಸ ಎಂದಿಗೂ ಸಮಗ್ರ ಎನ್ನುವುದು ಒಪ್ಪಿಕೊಳ್ಳುವುದು ಅನಿವಾರ್ಯ. ಯಾವುದೇ ರೀತಿಯ ವರ್ಗೀಕರಣವು ಇತಿಹಾಸಕರರಲ್ಲೇ, ಆಕರಗಳ ಬಗ್ಗೆಯೇ ಅನುಮಾನ ಹುಟ್ಟಿಸುತ್ತವೆ. ಇಂತಹ ಅಪಾಯಗಳ ನಿವಾರಣೆಗಾಗಿ ನಮ್ಮ ಅಧ್ಯಯನಕ್ಕೆ ನಡುಗೋಡೆಗಳನ್ನು ಹಾಕಿಕೊಳ್ಳದಿರುವುದು ಸೂಕ್ತ. ಇತಿಹಾಸವು ಆನ್ವಯಿಕ ಜ್ಞಾನ ಆಗಬೇಕಾದ್ದು ಅತ್ಯಂತ ಅವಶ್ಯಕ. ಇದರಿಂದ ಎಷ್ಟೋ ಸಮಸ್ಯೆಗಳು ಬಗೆಹರಿಯುವ ಭರವಸೆ ಇದೆ.

ಇತಿಹಾಸದ ವಿದ್ವಾಂಸರು, ಭಾಷಾ ವಿದ್ವಾಂಸರು ಮಾತ್ರವಲ್ಲದೆ, ಭೂಗೋಳ, ಖಗೋಳ, ರಾಜ್ಯಶಾಸ್ತ್ರ, ಇತ್ಯಾದಿ ಮಾನವಿಕ ಶಾಸ್ತ್ರದ ವಿದ್ವಾಂಸರು ಹಾಗೂ ಕಲಾಮಾಧ್ಯಮಗಳ ಚಿತ್ರಕಲಾವಿದರು, ಶಿಲ್ಪಿಗಳು, ನರ್ತಕರು, ಗಾಯಕರು, ವಾದಕರು ಇತ್ಯಾದಿ ಎಲ್ಲಾ ಮಾಧ್ಯಮಗಳ ಪರಿಣಿತರೂ ಸೇರಿ, ಯಾವುದೇ ಬಿಡೆಯಿಲ್ಲದೆ, ಒಟ್ಟಾಗಿ ಅಧ್ಯಯನ ಮಾಡಿದಾಗಲೇ ಯಾವುದೇ ಪ್ರದೇಶದ ಇತಿಹಾಸ ಲಭ್ಯವಾಗುವುದು. ನೃತ್ಯಕ್ಕೆ ಸಂಬಂಧಿಸಿ ದಂತೆ, ಡಾ॥ ತುಳಸಿ ರಾಮಚಂದ್ರ, ಡಾ॥ ಹೇಮಾ ಗೋವಿಂದ ರಾಜು, ಡಾ॥ ಕರುಣಾ ವಿಜಯೇಂದ್ರ ಇತ್ಯಾದಿ ವಿಷಯ ಪರಿಣಿತರು ಈಗಾಗಲೇ ಒಂದಷ್ಟು ಕೆಲಸ ಮಾಡಿರುವ ರಾದರೂ, ಆ ಬಗೆಗಿನ ಕೆಲಸ ಅಷ್ಟೇ ಎಂದು ಸುಮ್ಮನೆ ಕೂರುವಂತಿಲ್ಲ. ಇನ್ನೂ ಬೇಕಾದಷ್ಟು ಅಧ್ಯಯನ ಉಳಿದಿದೆ. ಹಾಗೆಯೇ ಚಿತ್ರ, ಶಿಲ್ಪ ಇತ್ಯಾದಿ ವಿಷಯಗಳ ಇತಿಹಾಸಕ್ಕೆ ಸಂಬಂಧಿಸಿದ ಇತಿಹಾಸವನ್ನು ಆಯಾ ಕ್ಷೇತ್ರದ ಪರಿಣತರೇ ಮಾಡುವುದು ಸೂಕ್ತ. ಆದರಿಂದ ಅಂತಹವರಿಗೂ ಇತಿಹಾಸದ ಅಭ್ಯಾಸ ಮಾಡಿಸುವುದು ಅವಶ್ಯಕ.

ಆಧುನಿಕ ಇತಿಹಾಸಕಾರರಿಗೆ ಶಾಸನಗಳ ಬಗ್ಗೆ ತಿರಸ್ಕಾರ ಅಥವಾ ಉಪೇಕ್ಷೆ ಮತ್ತು ಗುಮಾನಿಗಳು ಇರುವುದನ್ನು ಅಲ್ಲಗಳೆಯುವಂತಿಲ್ಲ. ಶಾಸನಗಳಲ್ಲಿ ರಾಜರುಗಳಿಗೆ ಸಂಬಂಧಿಸಿದ ಉತ್ಪ್ರೇಕ್ಷೆಗಳು ಇರುವುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಶಾಸನಗಳಲ್ಲಿ ಐತಿಹಾಸಿಕ ಸತ್ಯಗಳೂ ಇವೆ ಎನ್ನುವುದನ್ನು ನಿರಾಕರಿಸುವಂತಿಲ್ಲ. ಚರ್ವಿತ ಚರ್ವಣದಂತಿರುವ ಬಿರುದಾವಳಿಗಳನ್ನು ಹೊರತುಪಡಿಸಿ, ಸತ್ಯ ಸಂಗತಿಗಳನ್ನು ಹೆಕ್ಕಿ ತೆಗೆಯುವ ಕೆಲಸ ಕಷ್ಟವೇನೂ ಅಲ್ಲ. ತಾಳಗುಂದ ಶಾಸನದ ಪ್ರಕಾರ, ವೀರಶರ್ಮ ಮಯೂರವರ್ಮನ ಗುರು ಎಂದಷ್ಟೇ ತಿಳಿದಿತ್ತು. ಆದರೆ ಗುಡ್ನಾಪುರ ಶಾಸನವು ವೀರಶರ್ಮನು ಮಯೂರವರ್ಮನ ತಾತ ಎನ್ನುವುದನ್ನು ಸ್ಪಷ್ಟಪಡಿಸಿತು. ಮಯೂರವರ್ಮನ ಗೆಲುವುಗಳನ್ನು ಪ್ರಾಕೃತ ಭಾಷೆಯಲ್ಲಿ ದಾಖಲಿಸಿದೆ ಎಂದು ತಿಳಿಯಲಾಗಿದ್ದ ವಿಚಾರವು ಗೆಳೆಯ ಡಾ॥ ಬಿ. ರಾಜಶೇಖರಪ್ಪ ಅಂತಹವರ ಪರಿಶ್ರಮದ ಫಲವಾಗಿ ಚಂದ್ರವಳ್ಳಿಯ ಶಾಸನವು ಕೆರೆಯ ದುರಸ್ತಿಯ ವಿಷಯವನ್ನು ಸಂಸ್ಕೃತ ಭಾಷೆಯಲ್ಲಿ ದಾಖಲಿಸಿದೆ ಎಂದು ಸ್ಪಷ್ಟವಾಯಿತು. ಶಾಸನಗಳ ಪುನರಧ್ಯಯನದಿಂದ ಎಷ್ಟೋ ಹೊಸ ವಿಷಯಗಳು ಅನಾವರಣಗೊಳ್ಳುತ್ತವೆ. ನನ್ನ ಅಭಿಪ್ರಾಯವೇ ಅಂತಿಮ ಎಂಬ ಘೋಷಣೆಗೆ ಇತಿಹಾಸದಲ್ಲಿ ಸ್ಥಾನವೇ ಇಲ್ಲ. ಯಾವುದೇ ವಿಷಯಕ್ಕೆ ಸಂಬಂಧಿಸಿದಂತೆ ಹೊಸ ಆಕರಗಳು ದೊರೆತಂತೆ ಅಭಿಪ್ರಾಯಗಳೂ ಬದಲಾಗವುದು ಅನಿವಾರ್ಯ. ಭಾರತದ ಮಾತಿರಲಿ, ಕರ್ನಾಟಕದಲ್ಲೇ ಅಪ್ರಕಟಿತ ಶಾಸನಗಳ ಸಂಖ್ಯೆ ಹೆಚ್ಚೇ ಇವೆ. ಅಂತೆಯೇ ಹಸ್ತಪ್ರತಿಗಳು. ಇವುಗಳ ಶೋಧ ಮತ್ತು ಪ್ರಕಟಣೆ ಆಗದಿದ್ದರೆ, ಎಷ್ಟೋ ಅಮೂಲ್ಯ ಆಕರಗಳು ಶಾಶ್ವತವಾಗಿ ಕೈತಪ್ಪಿಹೋಗುತ್ತವೆ. ಬೆಳೆಯುತ್ತಿರುವ ನಗರಗಳು ಏನೇನನ್ನು ನುಂಗಿ ಜೀರ್ಣಿಸಿಕೊಳ್ಳುತ್ತವೆಯೋ ಹೇಳಲಾಗುವುದಿಲ್ಲ. ಬೆಂಗಳೂರಿಗೆ ಹೊಂದಿಕೊಂಡಂತೆಯೇ ಇದ್ದ ಮತ್ತು ಈಗ ಬೆಂಗಳೂರಿನ ಭಾಗವೇ ಆಗಿರುವ ಸುಲ್ತಾನಪಾಳ್ಯದ ಬಂಡೆಯ ಮೇಲಿದ್ದ ಒಂದು ಮುಖ್ಯ ಶಾಸನ ಈಗ ಚೂರುಚೂರಾಗಿ, ಯಾರ ಮನೆಯ ತಳಪಾಯದಲ್ಲಿ ಸೇರಿಹೋಗಿದೆಯೋ ತಿಳಿದಿಲ್ಲ. ಕೃಷ್ಣದೇವರಾಯನ ತಂದೆ ನರಸನಾಯಕನು ಯಲಹಂಕ ನಾಡನ್ನು ಆಳುತ್ತಿದ್ದ ವಿಷಯ ಅದರಲ್ಲಿ ದಾಖಲಾಗಿತ್ತು. ಅದೃಷ್ಟವಶಾತ್ ಆ ಶಾಸನ ಪ್ರಕಟವಾಗಿತ್ತು. ಇಂತಹ ಎಷ್ಟೋ ಉದಾಹರಣೆಗಳಿವೆ. ಆದ್ದರಿಂದ ಇನ್ನು ಮುಂದಾದರೂ ಶಾಸನಗಳ ಅಧ್ಯಯನ ವೇಗ ಹೆಚ್ಚಿಸಿಕೊಳ್ಳಬೇಕಾದ ಅವಶ್ಯಕತೆ ಇದೆ. ಈ ಕೆಲಸ ಕೇವಲ ಶಾಸನ ಇಲಾಖೆಗೆ ಮಾತ್ರ ಸೀಮಿತ ಎಂದು ತಿಳಿಯಬೇಕಾದ ಅವಶ್ಯಕತೆ ಇಲ್ಲ. ಪ್ರತಿಯೊಂದು ವಿಶ್ವವಿದ್ಯಾಲಯಗಳ ಇತಿಹಾಸ, ವಿಶೇಷವಾಗಿ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗಗಳು ಮಾತ್ರವಲ್ಲದೆ, ಕನ್ನಡ ವಿಭಾಗಗಳು ಈ ನಿಟ್ಟಿನಲ್ಲಿ ಶ್ರಮಿಸಿದರೆ ಉಪಕಾರ

ಆಗುತ್ತದೆ. ನನಗೆ ತಿಳಿದಿರುವಂತೆ ಕರ್ನಾಟಕ ವಿಶ್ವವಿದ್ಯಾಲಯದ ಭಾರತೀಯ ಪ್ರಾಚೀನ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗದಲ್ಲಿ ಶಾಸನಶಾಸ್ತ್ರದ ಬೋಧನೆ ಆಗುತ್ತಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗದಲ್ಲೂ ಶಾಸನ ಶಾಸ್ತ್ರದ ಬೋಧನೆಗೆ ಅವಕಾಶ ಇದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಶಾಸನಶಾಸ್ತ್ರ ವಿಭಾಗವೇ ಪ್ರತ್ಯೇಕವಾಗಿರುವುದು ಸಂತೋಷದ ವಿಷಯ. ಇವುಗಳನ್ನು ಹೊರತುಪಡಿಸಿದರೆ, ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸುಮರು ೩೫ ವರ್ಷಗಳಿಂದ ನಿರಂತರವಾಗಿ ನಡೆದುಕೊಂಡು ಬಂದಿರುವ ಶಾಸನಶಾಸ್ತ್ರ ತರಗತಿಗಳು ಒಳ್ಳೆಯ ಶಾಸನತಜ್ಞರನ್ನು ನಾಡಿಗೆ ನೀಡಿದೆ. ಅಲ್ಲಿ ಲಿಪಿಯ ಕಲಿಕೆಗೆ ಹೆಚ್ಚಿನ ಆದ್ಯತೆ ಇರುವುದು ಪ್ರಮುಖ ಅಂಶ.

ಹಸ್ತಪ್ರತಿ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಮೈಸೂರಿನ ಓರಿಯಂಟಲ್ ಇನ್‌ಸ್ಟಿಟ್ಯೂಟ್, ಮೈಸೂರಿನ ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಕೇಂದ್ರಕ್ಕೆ ಹೊಂದಿಕೊಂಡ ಹಸ್ತಪ್ರತಿ ವಿಭಾಗ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಡಾ॥ ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕನ್ನಡ ಸಂಶೋಧನ ಸಂಸ್ಥೆ, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ಹೊಂದಿಕೊಂಡ ಹಸ್ತಪ್ರತಿ ವಿಭಾಗ, ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಅಧ್ಯಯನ ವಿಭಾಗಗಳನ್ನು ಹೊರತುಪಡಿಸಿದರೆ, ಖಾಸಗಿಯಾಗಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಬಿ.ಎಂ.ಶ್ರೀ ಪ್ರತಿಷ್ಠಾನ, ಧರ್ಮಸ್ಥಳದ ಹಸ್ತಪ್ರತಿ ಕೇಂದ್ರ ಮತ್ತು ಕೆಳದಿಯ ವಸ್ತುಸಂಗ್ರಹಾಲಯ ಮತ್ತು ಹಸ್ತಪ್ರತಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆಯಾದರೂ, ಇವುಗಳಲ್ಲಿ ಕೆಲವು ಸಿಬ್ಬಂದಿಯ ಕೊರತೆಯಿಂದ ದುರ್ಬಲವಾಗಿವೆ. ಯಾವುದೇ ಕಾರಣದಿಂದ ಈ ಹಸ್ತಪ್ರತಿ ಸಂಶೋಧನಾ ಕೇಂದ್ರಗಳು ದುರ್ಬಲವಾಗದಂತೆ ಎಚ್ಚರ ವಹಿಸಬೇಕಾದ್ದು ಸಂಬಂಧಿಸಿದ ವಿಶ್ವವಿದ್ಯಾಲಯಗಳು ಮತ್ತು ಇಲಾಖೆಗಳ ಹೊಣೆ ಆಗಿರುತ್ತದೆ. ಈ ವಿಷಯದಲ್ಲಿ ಕೇಂದ್ರ ಸರ್ಕಾರವು ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಅಧ್ಯಯನಕ್ಕೆ ಉತ್ತೇಜನ ನೀಡುತ್ತಿರುವದು ಶುಭ ಸೂಚನೆಯಾಗಿದೆ. ಕೆಲವು ಆಸಕ್ತರು ಹಸ್ತಪ್ರತಿಗಳ ದಾಖಲೀಕರಣ (ಎ.ಆರ್. ಗುರು) ಮತ್ತು ರಕ್ಷಣೆಯ ನಿಟ್ಟಿನಲ್ಲಿ (ಜಿ.ಕೆ. ದೇವರಾಜಸ್ವಾಮಿ) ಹೊಸ ಮಾದರಿಗಳನ್ನು ಕಂಡುಕೊಳ್ಳುತ್ತಿರುವುದು ಸದ್ದುಗದ್ದಲವಿಲ್ಲದೆ ಆಗುತ್ತಿರುವ ಕೆಲವು ಕೆಲಸಗಳಿಗೆ ಸಾಕ್ಷಿಯಾಗಿದೆ.

ಕವಿರಾಜಮಾರ್ಗಕಾರನು ಕನ್ನಡ ಪ್ರದೇಶದ ಎಲ್ಲೆಗಳನ್ನು ಗೋದಾವರಿ ಮತ್ತು ಕಾವೇರಿಗಳ ನಡುವೆ ಗುರುತಿಸಿದ್ದರೂ, ಆ ಮೊದಲು, ಅಶೋಕನ ಕಾಲಕ್ಕೆ ಬ್ರಹ್ಮಗಿರಿಯ ದಕ್ಷಿಣಕ್ಕೆ ಚೋಳ–ಪಾಂಡ್ಯ ರಾಜ್ಯವಿತ್ತು ಎಂಬ ಹೇಳಿಕೆ ಹಾಗೂ ಹಿಂದಿನ ತಮಿಳುನಾಡು ಈಗಿನ ಕರ್ನಾಟಕ ಮತ್ತು ಆಂಧ್ರದ ಬಹುಭಾಗಗಳನ್ನು ಒಳಗೊಂಡಿತ್ತು ಎಂಬ ಕೆ.ಎಲ್.ಎನ್. ಶಾಸ್ತ್ರಿ, ಬರ್ಟನ್ ಸ್ಟೀನ್ ಇತ್ಯಾದಿ ವಿದ್ವಾಂಸರ ಹೇಳಿಕೆಗಳನ್ನು ಪರಿಶೀಲಿಸಿ, ಸೂಕ್ತ ಉತ್ತರ ನೀಡಬೇಕಾದ ಅವಶ್ಯಕತೆಯಂತೂ ಇದೆ. ಈ ನಿಟ್ಟಿನಲ್ಲಿ ವಿಳಂಬ ಮಾಡದೆ ಸಂಶೋಧನೆ ಆಗಬೇಕಾದ ಅವಶ್ಯಕತೆ ಇದೆ. ತಲಕಾಡಿನ ಉತ್ಖನನವು ಮಹತ್ತ್ವದ ಸುಳಿವುಗಳನ್ನು ನೀಡುತ್ತಿದೆಯಾದರೂ, ಗಂಗಪೂರ್ವ ಕರ್ನಾಟಕದ ಬಗ್ಗೆ ಹೆಚ್ಚು ತಿಳಿಯಬೇಕಾದ ಅನಿವಾರ್ಯತೆ ಎದುರಿಗಿದೆ. ರಾಷ್ಟ್ರಕೂಟರಿಗೂ ಮೊದಲಿನ ಕರ್ನಾಟಕದ ದಕ್ಷಿಣದ ಗಡಿಯನ್ನು ಖಚಿತವಾಗಿ ಗುರುತಿಸಬೇಕಾದ ಅವಶ್ಯಕತೆ ಇದೆ. ಶಂ.ಬಾ. ಜೋಶಿ ಒಬ್ಬ ಅಕೆಡೆಮಿಕ್ ವಿದ್ವಾಂಸರಾಗಿದ್ದರೆ ಅವರ ಅಭಿಪ್ರಾಯಗಳಿಗೆ ದೊರೆಯುತ್ತಿದ್ದ ಬೆಲೆಯೇ ಬೇರೆ. ಈಗಲೂ ಕರ್ನಾಟಕ ಮತ್ತು ಕನ್ನಡಿಗರ ನೆಲೆಯ ಬಗ್ಗೆ ಅವರ ಅಭಿಪ್ರಾಯಗಳನ್ನು ಒಪ್ಪುವ ಹಲವು ವಿದ್ವಾಂಸರು ಇದ್ದಾರೆ. ಆದರೆ, ಅದೇಕೋ ಅವರ ಅಭಿಪ್ರಾಯಗಳನ್ನು ಒಪ್ಪದವರ ಸಂಖ್ಯೆಯೇ ಹೆಚ್ಚಾಗಿದೆ. ಆದ್ದರಿಂದ ಶಂ.ಬಾ. ಅವರ ಅಭಿಪ್ರಾಯಗಳನ್ನು ಮತ್ತಷ್ಟು ಪರಿಶೀಲಿಸಿ, ಹೆಚ್ಚು ವಿದ್ವಾಂಸರು ಒಪ್ಪುವಂತಹ ಅಭಿಪ್ರಾಯವೊಂದು ರೂಪುಗೊಳ್ಳಬೇಕಾಗಿದೆ. ಹಿಂದೆ ಈ ಬಗ್ಗೆ ಒಂದಷ್ಟು ಪ್ರಯತ್ನಗಳಾಗಿವೆಯಾದರೂ, ಅವು ಸಮರ್ಥ ಪ್ರಯತ್ನಗಳಾಗಲಿಲ್ಲ. ಆದ್ದರಿಂದ ಪ್ರಯತ್ನಗಳು ಮುಂದುವರಿಯಬೇಕಾಗಿದೆ.

ಗಂಗಪೂರ್ವ ಕರ್ನಾಟಕದ ಗಡಿಗಳನ್ನು ಗುರುತಿಸಿ, ಬಾದಾಮಿ ಚಲುಕ್ಯ ಅಥವಾ ರಾಷ್ಟ್ರಕೂಟ ಅಥವಾ ಕಲ್ಯಾಣ ಚಾಲುಕ್ಯರ ಕಾಲದ ಕರ್ನಾಟಕಕ್ಕೆ ಬೇಡಿಕೆ ಸಲ್ಲಿಸುವ ಹುನ್ನಾರವಂತೂ ಇದಲ್ಲ. ಇದು ಒಂದು ಐತಿಹಾಸಿಕ ಯಾತ್ರೆ ಅಷ್ಟೆ. ಕರ್ನಾಟಕದ ಪರಂಪರೆಯ ಬಗ್ಗೆ ತಿಳಿಯಬೇಕೆನ್ನುವ ಈ ಪ್ರಾಮಾಣಿಕ ಪ್ರಯತ್ನದ ಹಿಂದೆ ಕೇವಲ ಒಬ್ಬ ಇತಿಹಾಸಕಾರ ಅಥವಾ ಸಂಶೋಧಕ ಇರುತ್ತಾನೆ; ಅವನನ್ನು ಎಂದೂ ರಾಜಕಾರಣಿಯಾಗಲು ಬಿಡುವುದಿಲ್ಲ. ನಿಜವಾದ ಇತಿಹಾಸಕಾರ ಎಂದಿಗೂ ರಾಜಕಾರಣಿ ಆಗಲಾರ. ಆಕಸ್ಮಾತ್ ಆದರೆ ಅವನು ಇತಿಹಾಸಕಾರ ಎನಿಸಿಕೊಳ್ಳುವುದಿಲ್ಲ. ಎರಡು ಕರ್ನಾಟಕ, ಮೂರು ಕರ್ನಾಟಕ ಬೇಕು ಎಂದು ಗೊಂದಲ

ಹುಟ್ಟಿಸುತ್ತಿರುವವರಲ್ಲಿ ಇತಿಹಾಸಕಾರರಿಲ್ಲ ಮತ್ತು ಸಾಹಿತಿಗಳಿಲ್ಲ. ಅಧಿಕಾರದ ರುಚಿ ಹತ್ತಿರುವ ಮತ್ತು ಅದರ ಬೆನ್ನು ಹಿಡಿದಿರುವ ಕೆಲವು ರಾಜಕಾರಣಿಗಳು ಮಾತ್ರ ಇಂತಹ ವಾದಗಳ ಹಿಂದಿರುತ್ತಾರೆ. ಅವರಿಂದ ರಚನಾತ್ಮಕವಾದ ಯಾವ ಕೆಲಸವೂ ಆಗುವುದಿಲ್ಲ ಎಂದು ಅವರನ್ನು ಬಲ್ಲವರು ಬಲ್ಲರು. ಪ್ರಯಾಸ ದಿಂದ ಒಂದಾಗಿರುವವರನ್ನು, ತಮ್ಮ ಪ್ರತಿಷ್ಠೆಯನ್ನು ಉಳಿಸಿ ಕೊಳ್ಳಲು ಒಡೆಯುವುದು ವಿಚ್ಛಿದ್ರಕಾರಕರು ಎನಿಸಿಕೊಳ್ಳುತ್ತಾರೆ. ಪ್ರೀತಿಯಿಂದ ಸಾಧಿಸಲಾಗದ್ದನ್ನು ದ್ವೇಷದಿಂದ ಸಾಧಿಸಲು ಸಾಧ್ಯವಿಲ್ಲ ಎಂಬ ಕಟುಸತ್ಯ ಎಲ್ಲರಿಗೂ, ವಿಶೇಷವಾಗಿ ರಾಜಕಾರಣಿಗಳಿಗೆ ತಿಳಿಯಬೇಕು. ಬಿತ್ತಿದ್ದನ್ನು ಬೆಳಕೊಳ್ಳಬೇಕು. ರಾಜಕಾರಣಿಗಳನ್ನು ದೂರ ಇಟ್ಟರೆ, ನಮ್ಮ ಎಷ್ಟೋ ರಾಷ್ಟ್ರೀಯ ಸಮಸ್ಯೆಗಳು ಸುಲಭವಾಗಿ ಬಗೆಹರಿಯುತ್ತವೆ. ರಾಜಕಾರಣ ವನ್ನೇ ವೃತ್ತಿಯಾಗಿಸಿಕೊಂಡ ಮಹನೀಯರಿಗೆ ಇದು ಅರ್ಥವಾಗುವ ಮಾತಲ್ಲ. ಇತಿಹಾಸ ಎಂದೂ ರಾಜಕಾರಣದಿಂದ ದೂರ ಉಳಿಯಬೇಕು. ವರ್ತಮಾನದ ರಾಜಕಾರಣಿಗಳ ಬಣ್ಣವನ್ನು ಮುಂದಿನ ಇತಿಹಾಸಕಾರರು ಒರೆಗೆ ಹಚ್ಚಿ ದಾಖಲಿಸುತ್ತಾರೆ.

ಅಕಾದೆಮಿಯ ಮೊದಲ ಅಧ್ಯಕ್ಷರೂ, ಅಕಾದೆಮಿಯ ಹತ್ತನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರೂ ಆಗಿದ್ದ ಇತಿಹಾಸ ಪ್ರಾಧ್ಯಾಪಕ ಪ್ರೊ॥ ಜಿ.ಎಸ್. ದೀಕ್ಷಿತ್ ಪ್ರಾಚೀನ ಕರ್ನಾಟಕದ ಸ್ಥಳೀಯ ಆಡಳಿತದ ಬಗ್ಗೆ ಆಳವಾದ ಮತ್ತು ವ್ಯಾಪಕವಾದ ಅಧ್ಯಯನ ಮಾಡಿದ್ದರು. ಹಾಗೆಯೇ ಪ್ರಾಚೀನ ಕರ್ನಾಟಕದ ನೀರಾವರಿ ವ್ಯವಸ್ಥೆಯ ಬಗ್ಗೆ ಮಹತ್ವದ ಅಧ್ಯಯನ ಮಾಡಿದ್ದ ಪ್ರೊ॥ ದೀಕ್ಷಿತರು ತಮ್ಮ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿ ನೀರಿನ ಸಮಸ್ಯೆಗೆ ಪರಿಹಾರಗಳನ್ನು ಸೂಚಿಸಿದ್ದರು. ಬಹುತೇಕ ನಮ್ಮನ್ನು ಆಳುವ ಅಧಿಕಾರಿಗಳು ಮತ್ತು ರಾಜಕಾರಣಿಗೆಳಿಗೆ ಈ ವಿಷಯ ತಿಳಿದಿಲ್ಲ ಎನಿಸುತ್ತದೆ. ತಿಳಿದಿದ್ದರೂ ಪ್ರಯೋಜನವಿಲ್ಲ ಎಂಬ ನಿರಾಶೆಯ ಮಾತು ಗಳನ್ನೇ ಆಡಬೇಕಾಗುತ್ತದೆ. ಹಳ್ಳಿಯ ಜನರಿಗೆ ಕುಡಿಯುವ ನೀರಿನ ಅನುಕೂಲಕ್ಕಾಗಿ ಕೊಳವೆ ಬಾವಿಗಳನ್ನು ಕೊರೆಸಿ, ಭಗೀರಥನಾಗಲು ಪ್ರಯತ್ನಿಸಿದ ನೀರುಸಾಬರೆಂದೇ ಜನಪ್ರಿಯರಾದ ಅಪರೂಪದ ರಾಜಕಾರಣಿ ನಜೀರ್ ಸಾಹೇಬರ ಉದ್ದೇಶ ಈ ದಿಕ್ಕುತಪ್ಪಿದೆ. ಈಗ ಕುಡಿಯಲು ಮಾತ್ರವಲ್ಲದೆ, ವ್ಯವಸಾಯವನ್ನೂ ಹೊರತುಪಡಿಸಿ, ಕೊಳವೆ ಬಾವಿಗಳ ನೀರನ್ನು ವಾಣಿಜ್ಯ ಬಳಕೆಗೆ ಮಾರಾಟ ಮಾಡಲಾಗುತ್ತಿದೆ. ನಜೀರ್ ಸಾಹೇಬರ ಬಗ್ಗೆ ಈಗ ಅಯ್ಯೋ ಪಾಪ ಎನಿಸುತ್ತದೆ. ಹೆಚ್ಚುತ್ತಿರುವ ಕೊಳವೆಬಾವಿಗಳು ಅಂತರ್ಜಲವನ್ನು ಖಾಲಿ ಮಾಡುತ್ತಿವೆ. ಹೀಗೇ ಮುಂದುವರಿದರೆ ಇನ್ನು ಕೆಲವೇ ವರ್ಷಗಳಲ್ಲಿ ದುರಾಸೆಯ ಮನುಷ್ಯ ಅನಿವಾರ್ಯವಾಗಿ ನೀರಿನ ಬರವನ್ನು ಎದುರು ಗೊಳ್ಳಬೇಕಾಗುತ್ತದೆ. ಮಯೂರವರ್ಮನ ಕಾಲಕ್ಕೇ ಒಂದು ಕೆರೆಯ ದುರಸ್ತಿ ಆಗಿದೆ ಎನ್ನುವುದು ತಿಳಿದಿದೆ. ಆದ್ದರಿಂದ ಕೆರೆಗಳ ನಿರ್ಮಾಣ ಕಾರ್ಯ ಮತ್ತು ದುರಸ್ತಿಯ ಕಾರ್ಯ ಸಹಜವಾಗಿಯೇ ಪ್ರಮುಖವಾಗಿತ್ತು. ವಿಜಯನಗರದ ದೊರೆ ದೇವರಾಯನ ಕಾಲದ ಮಂತ್ರಿ ಲಕ್ಷ್ಮೀಧರನ ತಾಯಿ ಮಗನಿಗೆ ಹಾಲು ಕುಡಿಸುವಾಗ, ಅವನ ಕಿವಿಯಲ್ಲಿ, 'ಕೆಱೆಯಂ ಕಟ್ಟಿಸು ಬಾವಿಯಂ ಸವೆಸು ಅನಾಥರ್ಗಿಂಬುಗೆಯಿ' ಎಂಬ ಮಾತುಗಳನ್ನು ಹೇಳುತ್ತಿದ್ದಳಂತೆ. ಪ್ರಾಚೀನ ಕರ್ನಾಟಕದಲ್ಲೇ ಅದೆಷ್ಟೊಂದು ಕೆರೆಗಳ ನಿರ್ಮಾಣವಾಗಿತ್ತು ಎಂದು ಶಾಸನ ಗಳಿಂದ ತಿಳಿದಿದೆ. ಈ ಕೆಲಸ ಮಧ್ಯಕಾಲೀನ ಕರ್ನಾಟಕದಲ್ಲೂ ಮುಂದುವರಿದಿತ್ತು. ಬ್ರಿಟಿಷ್ ಅಧಿಕಾರಿಗಳು, ಹೊಸ ಕೆರೆಗಳ ನಿರ್ಮಾಣಕ್ಕಿಂತ, ಇದ್ದ ಕೆರೆಗಳ ಜೀರ್ಣೋದ್ಧಾರ ಕಾರ್ಯವೇ ಸೂಕ್ತ ಎಂದು ತಿಳಿದಿದ್ದರು. ಈಗ ಕರೆಗಳನ್ನು ಮುಚ್ಚುವ ಮತ್ತು ಆ ಜಾಗದಲ್ಲಿ ವಸತಿ ಸಂಕೀರ್ಣಗಳನ್ನು ನಿರ್ಮಿಸುವ ಕೆಲಸ ನಿರ್ಭಿಡೆಯಿಂದ ನಡೆಯುತ್ತಿದೆ. ಜಲಾನಯನ ಪ್ರದೇಶ ಗಳಿಂದ ಕೆರೆ, ಕಟ್ಟೆಗಳಿಗೆ ಬರುವ ನೀರು ಅಲ್ಲಿ ನಿರ್ಮಾಣವಾದ ವಸತಿ ಸಂಕೀರ್ಣಗಳಿಗೆ ನುಗ್ಗುತ್ತಿದೆ. ಪ್ರಕೃತಿಯ ಯಾವುದೇ ಕೆಲಸಕ್ಕೆ ಅಡ್ಡಿಮಾಡಿದರೆ ಎಂತಹ ಅನಾಹುತಗಳಾಗುತ್ತವೆ ಎಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕಾಗಿಲ್ಲ. ಆದರೂ ಮನುಷ್ಯ ಬುದ್ಧಿ ಕಲಿತಿಲ್ಲ. ಇತಿಹಾಸದಿಂದ ವರ್ತಮಾನದ ಮನುಷ್ಯ ಯಾವ ಒಳ್ಳೆಯದನ್ನೂ ಕಲಿತಿಲ್ಲ ಎಂದು ಸ್ಪಷ್ಟವಾಗುತ್ತದೆ. ಆಧುನಿಕ ಎಂಜಿನಿಯರುಗಳಿಗೆ ಕೆಲವು ಸರಳ ತತ್ತ್ವಗಳು ಏಕೆ ಅರ್ಥವಾಗುವುದಿಲ್ಲ ಎಂದು ಅನುಮಾನ ಬರುತ್ತದೆ. ಹಳೆಯದನ್ನೆಲ್ಲಾ ಅರ್ಥಹೀನ ಎಂದು ತಿರಸ್ಕರಿಸು ವುದು ಸರಿಯಲ್ಲ. ನಮ್ಮ ಪ್ರಾಚೀನರ ಪರಿಸರ ಪ್ರಜ್ಞೆಯನ್ನು ಅರ್ಥ ಮಾಡಿಕೊಳ್ಳುವುದು ಒಳಿತು. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ನಿರಾಕರಿಸಬೇಕು ಎಂದು ಯಾರೂ ಹೇಳುವುದಿಲ್ಲ. ಜೊತೆಗೆ ಪರಂಪರೆಯ ಜ್ಞಾನವನ್ನೂ ಮರೆಯಬೇಡಿ ಎಂದು ಹೇಳುವ ಇತಿಹಾಸಕಾರನ ಮಾತುಗಳನ್ನು ತಳ್ಳಿಹಾಕುವುದು ಬೇಡ ಎಂದಷ್ಟೇ ನನ್ನ ಮನವಿ. ಇತಿಹಾಸವನ್ನು ಅನ್ವಯಿಕ ಜ್ಞಾನವನ್ನಾಗಿ ಬಳಸಿಕೊಂಡರೆ ಒಳಿತೇ ಹೆಚ್ಚು. ಇತಿಹಾಸದಲ್ಲಿ ಅನುಭವದ ಪಾಲು ಹೆಚ್ಚು ಪ್ರಯೋಗಗಳ ಮೂಲಕ ಹೊಸ ಆವಿಷ್ಕಾರಗಳು ಬೇಕು ಎನ್ನುವ ಹೊತ್ತಿನಲ್ಲೇ ಹಿಂದಿನವರ ಅನುಭವಗಳ ಮೂಲಕವೂ ಹಳೆಯದರಲ್ಲಿರುವ ಹೊಸದನ್ನು ಪಟ್ಟು ಬಿಡದೆ

ಉಪಯೋಗಿಸಿಕೊಳ್ಳುವ ಜಾಣ್ಮೆ ಇರಬೇಕು. ಈ ಸಂದರ್ಭದಲ್ಲಿ ಸಹಜವಾಗಿಯೇ ಡಿ.ವಿ.ಜಿ. ಅವರ ಮಂಕುತಿಮ್ಮನ ಕಗ್ಗದ 'ಹೊಸ ಚಿಗುರು ಹಳೇ ಬೇರು ಕೂಡಿರಲು ಮರ ಸೊಬಗು! ಹೊಸ ಯುಕ್ತಿ ಹಳೆ ತತ್ತ್ವದೊಡಗೂಡೆ ಧರ್ಮ ! ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ । ಜಸವು ಜನಜೀವನಕೆ–ಮಂಕುತಿಮ್ಮ' ಎಂಬ ಸಾಲುಗಳು ನೆನಪಿಗೆ ಬರುತ್ತದೆ. ವರ್ತಮಾನದ ಚಲನಶೀಲ ಬದುಕಿಗೆ ಇತಿಹಾಸ ಹೊಸ ಶಕ್ತಿ ನೀಡಬಲ್ಲದು.

ಇತಿಹಾಸದ ಅಧ್ಯಯನಕ್ಕೆ ಪ್ರಾಚೀನ ಕಾವ್ಯಗಳು ಸಹಜವಾಗಿಯೇ ನೆರವಿಗೆ ಬರುತ್ತವೆ. ಶ್ರೀವಿಜಯನನ್ನಾಗಲೀ, ಪಂಪ, ರನ್ನ, ಪೊನ್ನ, ಕುಮಾರವ್ಯಾಸ, ಇತ್ಯಾದಿ ಕವಿಗಳನ್ನಲ್ಲದೆ, ಶಾಸನಕವಿಗಳು ಮತ್ತು ವಚನಕಾರರನ್ನು ಕೈಬಿಟ್ಟು ಇತಿಹಾಸವನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿಲ್ಲ. ಹಾಗೆಯೇ ಮೌಖಿಕ ಕಾವ್ಯಪರಂಪರೆಯೂ ಗೌಣವಲ್ಲ. ಇತಿಹಾಸದ ಅವಿಭಾಜ್ಯ ಅಂಗವಾದ ಕುಮಾರರಾಮನ ಬಗ್ಗೆ ತಿಳಿಯಲು ಮೌಖಿಕ ಕಾವ್ಯಗಳೇ ನಮಗೆ ಆಧಾರ.

ಅಂತೆಯೇ ಹಸ್ತಪ್ರತಿಗಳ ಮಹತ್ತ್ವವನ್ನು ಮರೆಯುವಂತಿಲ್ಲ. ಇತ್ತೀಚೆಗೆ ಡಾ॥ ಎಸ್.ಎಲ್. ಶ್ರೀನಿವಾಸಮೂರ್ತಿ ಮತ್ತು ಡಾ॥ ವಸಂತಶ್ರೀ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿರುವ ಪೂಜ್ಯ ಮಾಸ್ತಿ ಅವರ ಸಂಗ್ರಹದಲ್ಲಿದ್ದ 'ಜಂಗ್‌ನಾಮಾ' ಟಿಪ್ಪುಸುಲ್ತಾನನ ಕೈಬರಹದಲ್ಲೇ ಇದೆ ಎನ್ನಲಾದ 'ಟಿಪ್ಪು ಸುಲ್ತಾನನ ಕನಸುಗಳು', ಕೆಲವು ವರ್ಷಗಳ ಹಿಂದೆ ನನ್ನ ಸಂಪಾದನೆಯ ಮೂಲಕ ಬೆಳಕು ಕಂಡ 'ವಕೀಲ ರಾಮಪ್ಪನ ಕೈಫಿಯತ್ತು' ಮತ್ತು ಡಾ॥ ಎಂ.ಜಿ. ಮಂಜುನಾಥ್ ಸಂಪಾದಿಸಿ ಪ್ರಕಟಿಸಿದ 'ಬೆಂಗಳೂರಿನ ಬಖೈರುಗಳು' ೧೮ನೆಯ ಶತಮಾನದ ಕೊನೆಯ ಕಾಲದ ರಾಜಕೀಯ ಗೊಂದಲಗಳನ್ನು ತಿಳಿಸುತ್ತವೆ. ಅಂತೆಯೇ ಶಿರಸಿಯ ಡಾ. ಎ.ಕೆ. ಶಾಸ್ತ್ರಿ, ಕೆಳದಿಯ ಶ್ರೀ ಗುಂಡಾ ಜೋಯಿಸ್ ಮತ್ತು ಇತರರು ಕೆಳದಿಯ ಮತ್ತು ಆಸುಪಾಸಿನ ಅದೆಷ್ಟೋ ಹಸ್ತಪ್ರತಿಗಳಲ್ಲಿನ ಐತಿಹಾಸಿಕ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಈ ನಿಟ್ಟಿನಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗ ಮತ್ತು ಬುಡಕಟ್ಟು ಅಧ್ಯಯನ ವಿಭಾಗಗಳ ಕೆಲಸವು ಅತ್ಯಂತ ಮೌಲಿಕವಾಗಿದೆ. ಜಾನಪದ ಆಚರಣೆಗಳಲ್ಲೂ ಮನುಷ್ಯ ನಡೆದು ಬಂದ ಹಾದಿಯಲ್ಲಿರುವ ಹೆಜ್ಜೆ ಗುರುತುಗಳನ್ನು ಗುರುತಿಸಲು ಸಾಧ್ಯವಿದೆ. ಯಾವುದೇ ಜಾನಪದ ಆಚರಣೆಯನ್ನು ಈಗ ಮೂಢನಂಬಿಕೆ ಎಂಬ ಕಾರಣ ಹೇಳಿ ತಳ್ಳಿಹಾಕಿಬಿಡಬಹುದು; ಆದರೆ, ಅವು ಹುಟ್ಟಿಕೊಂಡ ಕಾಲಕ್ಕೆ ಅವುಗಳಿಗೊಂದು ಅರ್ಥ ಇದ್ದಿರಲೇಬೇಕು. ಅದನ್ನು ತಿಳಿದರೆ, ಮನುಷ್ಯ ಜೀವನದ ನಂಬಿಕೆಗಳು ಅರ್ಥವಾಗತೊಡಗುತ್ತವೆ. ಬದುಕಿನಲ್ಲಿ ಶಿಷ್ಟ ಎನಿಸಿಕೊಂಡ ಪ್ರಧಾನ ಸಂಸ್ಕೃತಿಯಷ್ಟೇ ಮುಖ್ಯವಲ್ಲ. ಜಾನಪದೀಯವಾದ ಉಪಸಂಸ್ಕೃತಿಗಳ ತಿಳುವಳಿಕೆಯೂ ಮುಖ್ಯ.

ವಿಶ್ವ–ರಾಷ್ಟ್ರ–ರಾಜ್ಯಗಳ ಇತಿಹಾಸವನ್ನು ಸ್ವಲ್ಪಮಟ್ಟಿಗಾದರೂ ತಿಳಿದುಕೊಳ್ಳುವ ಪ್ರಯತ್ನಗಳು ನಡೆದಿವೆ. ಅಲ್ಲೂ ರಾಜಕೀಯ ಇತಿಹಾಸಕ್ಕೆ ದೊರೆತಿರುವಷ್ಟು ಮಹತ್ವ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಇತಿಹಾಸದ ಅಧ್ಯಯನ ಸಮರ್ಪಕವಾಗಿ ಆಗಿಯೇ ಇಲ್ಲ. ಎಲ್ಲೋ ಅಪರೂಪಕ್ಕೆ ಆಗಿರುವ ಕೈಬೆರಳಷ್ಟು ಅಧ್ಯಯನಗಳು ಮುಂದಿನ ಅಧ್ಯಯನಕ್ಕೆ ದಾರಿಯಾಗುವ ಶಕ್ತಿ ಪಡೆದಿವೆ. ಆ ದಾರಿಯಲ್ಲಿ ನಮ್ಮ ಮುಂದಿನ ಪೀಳಿಗೆ ನಡೆಯಬೇಕಾದ ಅವಶ್ಯಕತೆ ಇದೆ. ಮುಂದಿನ ಸಂಶೋಧಕರಿಗೆ ಒಂದು ಕಿವಿಮಾತನ್ನು ಬಹಿರಂಗವಾಗಿ ಮತ್ತು ಘಟ್ಟಿಯಾಗಿ ಹೇಳಲೇಬೇಕಾಗಿದೆ. ಬೋಧನೆ ಮತ್ತು ಸಂಶೋಧನೆ ಎರಡಕ್ಕೂ ಶಕ್ತಿ ಸಂಚಯನ ಅಗತ್ಯ. ಹೆಸರಿಗಷ್ಟೇ ಪಿಎಚ್.ಡಿ. ಪಡೆಯುವುದು ಸಂಶೋಧನೆ ಎನಿಸಿಕೊಳ್ಳುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ಪಿಎಚ್.ಡಿ. ಮತ್ತು ಡಿ.ಲಿಟ್. ಪದವಿಗಳ ಬಗ್ಗೆ ನಡೆಯುತ್ತಿರುವ ಮಾತುಗಳನ್ನು ಕೇಳಿದಾಗ ಆತಂಕವಾಗುತ್ತದೆ. ಈ ಬಗ್ಗೆ ಮಾತನಾಡದಿರುವುದೇ ಕ್ಷೇಮ. ಹೇಗೋ ಹೆಸರಿನ ಹಿಂದೆ ಡಾಕ್ಟರ್ ಎಂಬ ಅಂಕಿತ ಇದ್ದರೆ ಸಾಕು ಎನ್ನುವ ಮನೋಭಾವ ಹೆಚ್ಚುತ್ತಿರುವುದು ಆರೋಗ್ಯಕರ ವಲ್ಲ. ಈಗ ಡಿ.ಲಿಟ್. ಪದವಿಯನ್ನು ಹಲವು ಕಾರಣಗಳಿಂದ ನೀಡುತ್ತಿಲ್ಲ. ಪಿಎಚ್.ಡಿ./ಎಂ.ಫಿಲ್. ಪದವಿಗಳಿಗೆ ಪ್ರವೇಶ ಪರೀಕ್ಷೆ ಇದೆ. ಇದು ಒಳ್ಳೆಯ ಮಾರ್ಗವಾದರೂ, ಎಷ್ಟೋ ಜನ ಅರ್ಹ ವಿದ್ಯಾರ್ಥಿಗಳಿಗೆ ಪ್ರವೇಶವೇ ಸಿಗದಿರಬಹುದು. ಆದ್ದರಿಂದ ಸಂಶೋಧನೆಗೆ ಪ್ರವೇಶ ನೀಡುವ ಪರೀಕ್ಷೆಗಳಲ್ಲಿ ಅನುಸರಿಸುವ ಮಾನದಂಡಗಳ ಬಗ್ಗೆ ಪರಿಷ್ಕರಣೆ ಅಗತ್ಯ ಎನಿಸುತ್ತದೆ. ಸಂಶೋಧಕನೇ ಸಂಶೋಧನೆ ಮಾಡಬೇಕು ಮತ್ತು ನಿಬಂಧವನ್ನು ಬರೆಯಬೇಕು. ಮಾರ್ಗದರ್ಶಿಯ ಕೆಲಸ ಮಾರ್ಗದರ್ಶನ ಮಾಡುವುದಷ್ಟೇ ಆಗಬೇಕು. ಸಂಶೋಧನ ನಿಬಂಧ ಹೊರಬಂದ ತೃಪ್ತಿಯಷ್ಟೇ ಮುಖ್ಯ. ಅವನಿಗೆ ಮತ್ತಾವುದೇ ರೀತಿಯ ಲಾಭ ಇರುವುದಿಲ್ಲ ಮತ್ತು ಇರಬಾರದು. ಇದ್ದರೆ ಸಂಶೋಧನೆಯೂ ವ್ಯವಹಾರ ಆಗಿಬಿಡುವ ಸಂಭವ ಇರುತ್ತದೆ. ಮೂಲ ಆಕರಗಳನ್ನೇ ಪ್ರಸ್ತಾಪಿಸದೆ, ತಮ್ಮದೇ ಆಕರ ಎಂಬಂತೆ ದಾಖಲಿಸಿ

ಕೊಳ್ಳುವುದು ಅಪ್ರಾಮಾಣಿಕತೆ ಎಂಬುದನ್ನು ಮಾರ್ಗದರ್ಶಕರು ವಿದ್ಯಾರ್ಥಿಗಳಿಗೆ ಸ್ಪಷ್ಟಪಡಿಸಬೇಕು. ತಮ್ಮ ಮಾತೇ ಅಂತಿಮ ಎಂದು ಮೊಂಡುವಾದ ಮಾಡುವುದನ್ನು ತಡೆಯಬೇಕು. ವಿದ್ಯಾರ್ಥಿಗಳಿಗೆ ಪ್ರಾಮಾಣಿಕತೆ ಮತ್ತು ವಿನಯ ಎರಡೂ ಮುಖ್ಯವಾಗುತ್ತದೆ.

ಕೆಲವು ಐತಿಹಾಸಿಕ ಕಾದಂಬರಿಗಳು ಇತಿಹಾಸಕ್ಕೆ ಮಾಡಿರುವ ಅಪಚಾರವನ್ನು ತೀವ್ರವಾಗಿ ಖಂಡಿಸಬೇಕಾದ್ದು ಇತಿಹಾಸಕಾರನ ಕರ್ತವ್ಯ. ಕಾದಂಬರಿಗಳು ಸೃಜನಾತ್ಮಕವಾದರೂ, ಅಲ್ಲಿ ಕಲ್ಪನೆಗೆ ಹೇರಳ ಅವಕಾಶಗಳಿವೆಯಾದರೂ, ಸತ್ಯಸಂಗತಿಗಳಿಗೆ ಅಪಚಾರ ಮಾಡಿ ಅಲ್ಲ ಎಂಬುದನ್ನು ಐತಿಹಾಸಿಕ ಕಾದಂಬರಿಕಾರರು ತಿಳಿಯಬೇಕು. ಇತಿಹಾಸದಲ್ಲಿ ಇಲ್ಲದ ಜಕ್ಕಣಾಚಾರಿ ಎಂಬ ವ್ಯಕ್ತಿಯನ್ನು ಈಗ ಬಲವಂತವಾಗಿ ಯಾದರೂ ಇತಿಹಾಸಕ್ಕೆ ಸೇರಿಸಬೇಕಾಗಿದೆ. ಹಾಗೆಂದು ರಾಜಕಾರಣಿಗಳು ಫರ್ಮಾನು ಹೊರಡಿಸಿದರೂ, ಇತಿಹಾಸ ಕಾರರು ವಿರೋಧಿಸುವಂತಿಲ್ಲ. ರಾಣಿ ಶಾಂತಲೆಯು ಶಿವಗಂಗೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಳೆಂಬ ಕಾದಂಬರಿಯ ವಿಚಾರವು ಈಗ ಸತ್ಯ ಘಟನೆಯಂತೆ ಅಭಿವ್ಯಕ್ತಗೊಳ್ಳುತ್ತಿದೆ. ಇತಿಹಾಸವನ್ನು ಐತಿಹ್ಯ ಮಾಡುವಂತಹ ಇಂತಹ ಅಭಿಪ್ರಾಯಗಳು ಇತಿಹಾಸಕ್ಕೆ ಅಪಚಾರ ಮಾಡುತ್ತವೆ. ಯಾವುದೋ ಒಂದು ಕಾಲ್ಪನಿಕ ಶಾಸನ ಅಥವಾ ಯಾವುದೋ ಒಗಟಿನಂತಹ ಬರವಣಿಗೆಯ ಬೆನ್ನು ಹತ್ತಿ ನಿಧಿಯನ್ನು ಪತ್ತೆಹಚ್ಚುವ ರೋಮಾಂಚಕ ಪತ್ತೇದಾರಿ ಕಾದಂಬರಿಗಳು ಸೃಷ್ಟಿಸುವ ಸುಳ್ಳುಗಳು ಇತಿಹಾಸದ ದಾರಿ ತಪ್ಪಿಸುತ್ತಿವೆ. ಐತಿಹಾಸಿಕ ಕಾದಂಬರಿ ಬರೆಯುವ ಸ್ವಾತಂತ್ರ್ಯ ಯಾರಿಗಾದರೂ ಇದೆ. ಆದರೆ ಅದು ಇತಿಹಾಸಕ್ಕೆ ಅಪಚಾರ ಮಾಡಿಯಲ್ಲ ಎಂಬ ಎಚ್ಚರ ಕಾದಂಬರಿಕಾರರಿಗಿದ್ದರೆ ಇತಿಹಾಸಕ್ಕೆ ಕ್ಷೇಮ.

ಐತಿಹ್ಯಗಳು ಮತ್ತು ಕೆಲವು ಕಾದಂಬರಿಗಳು ಹುಟ್ಟಿಸಿರುವ ನಿಧಿಯ ಭ್ರಮೆಯ ಬಗ್ಗೆ ಒಲ್ಲದ ಮನಸ್ಸಿನಿಂದ ಕೆಲವು ಮಾತುಗಳನ್ನು ಹೇಳಬೇಕಾಗಿದೆ. ನಮ್ಮ ಹಿರಿಯರು ಯಾರೂ ತಾವು ಗಳಿಸಿದ ಸಂಪತ್ತನ್ನು ನೆಲದಲ್ಲಿ ಹೂಳದೆ, ರಾಜನ ಮತ್ತು ಅಧಿಕಾರಿಗಳ ದುಷ್ಟ ಕಣ್ಣುಗಳಿಗೆ ಬೀಳದಂತೆ, ಕೆರೆಯನ್ನು ಕಟ್ಟಿಸುವ, ದೇವಾಲಯಗಳನ್ನು ನಿರ್ಮಿಸುವ ಮತ್ತು ಆ ಮೂಲಕ ಸಮಾಜದ ಒಳಿತಿಗೆ ವಿನಿಯೋಗ ಮಾಡುತ್ತಿದ್ದರು. ದೇವಾಲಯಗಳಲ್ಲಿ ತಾವು ಅಥವಾ ಇತರ ಭಕ್ತರು ನೀಡುತ್ತಿದ್ದ ಒಡವೆಗಳು ಮತ್ತು ಕಾಣಿಕೆಗಳನ್ನು ಉಗ್ರಾಣದಲ್ಲಿ ಜೋಪಾನ ಮಾಡುತ್ತಿದ್ದರು. ನಗದು ರೂಪದ ಕಾಣಿಕೆಗಳನ್ನು ಸಾಲವಾಗಿ ನೀಡಿ, ಬಂದ ಬಡ್ಡಿಯ ಹಣದಿಂದ ದೇವಾಲಯದ ಖರ್ಚುವೆಚ್ಚಗಳನ್ನು ಸರಿದೂಗಿಸುತ್ತಿದ್ರು, ಉಗ್ರಾಣದಲ್ಲಿ ಸಂರಕ್ಷಿತವಾಗಿರುತ್ತದೆ ವಸ್ತುಗಳೇ ಈಗ ತಿರುವನಂತಪುರದ ಪದ್ಮನಾಭ ದೇವಾಲಯದಲ್ಲಿ ದೊರೆತಿರುವುದು. ಅದು ಹೂತಿಟ್ಟ ನಿಧಿಯಲ್ಲ. ಶಾಸನ ಓದಿದರೆ ನಿಧಿ ದೊರೆಯುತ್ತದೆ, ದೇವಾಲಯದಲ್ಲಿ ಪ್ರತಿಷ್ಠಾಪಿತ ಮೂರ್ತಿಯ ಕೆಳಗೆ ನಿಧಿ ಇದೆ ಎಂದು ಭ್ರಮೆ ಹುಟ್ಟಿಸುವ ವಂಚಕರು ನಮ್ಮ ಹಿರಿಯರನ್ನು ಮೂರ್ಖರೆಂದು ಪರಿಚಯಿಸುತ್ತಿದ್ದಾರೆ. ಕಲ್ಲಿನ ನಂದಿಯ ಮತ್ತು ಗಣೇಶನ ಹೊಟ್ಟೆಯಲ್ಲಿ ನಿಧಿ ಇದೆ ಎಂದು ಆಸೆ ಹುಟ್ಟಿಸುವ ವಂಚಕರನ್ನು ಯಾರೂ ನಂಬಬಾರದು. ಅಂತಹವರ ಮಾತು ಸತ್ಯವಾಗಿದ್ದರೆ ಎ.ಎಂ. ಅಣ್ಣಿಗೇರಿ, ಮೇವುಂಡಿ ಮಲ್ಲಾರಿ ಅವರಂತೆ ಇನ್ನೂ ಅನೇಕರು ಬಡವರಾಗಿಯೇ ಉಳಿಯುತ್ತಿರಲಿಲ್ಲ.

ಹಣ, ಅಧಿಕಾರ, ಆಸ್ತಿ, ಪ್ರತಿಷ್ಠೆ, ಜಾತಿ, ಮತ, ಧರ್ಮ, ದ್ವೇಷಗಳು ಬದುಕಿನ ಕೊನೆಯ ಆದ್ಯತೆಗಳಾಗಬೇಕು. ಉಪನಿಷತ್ತಿನ ಋಷಿಗಳು, ಬುದ್ಧ ಮತ್ತು ಬಸವಣ್ಣ ನಿರೀಕ್ಷಿಸಿದ ಸಮಾಜ ಇದಲ್ಲ. ಅವರ ನಿರೀಕ್ಷೆಗಳನ್ನು ಹುಸಿ ಮಾಡಿರುವ ನಾವು ಕೃತಘ್ನರು. ಇತ್ತೀಚಿನ ದಿನಗಳಲ್ಲಿ ಇಡೀ ವಿಶ್ವದ ಆಗುಹೋಗುಗಳನ್ನು ಗಮನಿಸಿದಾಗ ಗಾಬರಿ ಆಗುತ್ತದೆ. ಅಪರಾಧಿಗಳಿಗೆ ನಿರಾತಂಕ; ಆತಂಕವೆಲ್ಲಾ ನಿರಪರಾಧಿಗಳಿಗೆ, ಇತಿಹಾಸದಿಂದ ನಾವು ಕಲಿಯಲೇಬೇಕಾದ್ದನ್ನು ಕಲಿತೇ ಇಲ್ಲ. ಕಲಿಯಬಾರದ ಎಲ್ಲವನ್ನೂ ಕಲಿತಿದ್ದೇವೆ. ಇಂತಹ ವಿಪರ್ಯಾಸಕ್ಕೆ ಅಂತ್ಯವಿದೆ ಎಂಬ ಆಶಾವಾದಿ ನಾನು. ಪಂಪನ 'ಮನುಷ್ಯ ಕುಲಂ ತಾನೊಂದೆ ವಲಂ' ಎಂಬ ಮಾತಿಗೆ, ಕುವೆಂಪು ಕಂಡ ವಿಶ್ವಮಾನವ ಪ್ರಜ್ಞೆಗೆ ಅರ್ಥ ಬರಬೇಕಾದರೆ, ಜಾತಿ, ಮತ, ಧರ್ಮ, ಜನಾಂಗೀಯ ವೈಮನಸ್ಯಗಳು ದೂರವಾಗಬೇಬೇಕು. ಅಂತಹ ದಿನಗಳು ನಮ್ಮ ಮೊಮ್ಮಕ್ಕಳ ಕಾಲಕ್ಕಾದರೂ ಬರಲಿ ಎಂಬ ಆಸೆ ನನ್ನದು.

ಕರ್ನಾಟಕ ಇತಿಹಾಸ ಅಕಾದೆಮಿಯ ಜೊತೆಗೆ ನಾನೂ ಬೆಳೆದಿದ್ದೇನೆ. ಇಲ್ಲಿಯವರೆಗೆ ಇಲ್ಲಿ ಎಲ್ಲರೂ ಒಂದೇ ಎನ್ನುವ ಭಾವ ಉಳಿಯಲಿ ಮತ್ತು ವರ್ಷದಿಂದ ವರ್ಷಕ್ಕೆ ಅಕಾದೆಮಿಯ ಶಕ್ತಿ ಹೆಚ್ಚುತ್ತಿರಲಿ ಎಂಬ ಆಸೆಯೊಂದಿಗೆ, ಈ ವೇದಿಕೆಯ ಮೇಲಿನಿಂದ ಈ ನನ್ನ ಮಾತುಗಳನ್ನಾಡಲು ಅವಕಾಶ ಮಾಡಿಕೊಟ್ಟ ಎಲ್ಲರಿಗೆ ಧನ್ಯವಾದಗಳನ್ನು ತಿಳಿಸಬಯಸುತ್ತೇನೆ.

# ಸಂಕ್ಷಿಪ್ತ ಇತಿವೃತ್ತ

**ಜನನ** : ೧೮-೧೧-೧೯೪೬, ನೆಲಮಂಗಲ.

**ಹಿರಿಯರ ಊರು** : ಹುಲ್ಲೇಗೌಡನಹಳ್ಳಿ, ಮೊದಲಿಗೆ ನೆಲಮಂಗಲ ತಾಲ್ಲೂಕು, ಈಗ ಬೆಂಗಳೂರು ಉತ್ತರ ತಾಲ್ಲೂಕು.

**ತಂದೆ** : ಶ್ರೀ ಎಚ್.ಎನ್. ಸೂರ್ಯನಾರಾಯಣ ರಾವ್, ಪ್ರಾಥಮಿಕ ಶಾಲಾ ಶಿಕ್ಷಕರು.

**ತಾಯಿ** : ಶ್ರೀಮತಿ ಮಹಾಲಕ್ಷ್ಮಮ್ಮ, ಗೃಹಿಣಿ.

**ವಿದ್ಯಾರ್ಹತೆ** : ೧. ಡಿಪ್ಲೊಮಾ (ಎಲೆಕ್ಟ್ರಿಕಲ್ ಎಂಜಿನಿಯರಿಂಗ್)-೧೯೬೬.

೨. ಶಾಸನಶಾಸ್ತ್ರ-ಪ್ರೌಢ (ಕನ್ನಡ ಸಾಹಿತ್ಯ ಪರಿಷತ್)-೧೯೭೫.

೩. ಎಂ.ಎ., ಕನ್ನಡ (ಮೈಸೂರು ವಿಶ್ವವಿದ್ಯಾನಿಲಯ)-೧೯೮೪(ಎರಡು ಚಿನ್ನದ ಪದಕಗಳೊಂದಿಗೆ)

೪. ಪಿಎಚ್.ಡಿ.,(ಮೈಸೂರು ವಿಶ್ವವಿದ್ಯಾನಿಲಯ)-೧೯೯೧(ಒಂದು ಚಿನ್ನದ ಪದಕದೊಂದಿಗೆ)

**ಉದ್ಯೋಗ** : ಸ.ಕಾ.ನಿ. ಎಂಜಿನಿಯರ್(ವಿ.,)/ಕನ್ನಡ ಸಮನ್ವಯಾಧಿಕಾರಿ (ನಿವೃತ್ತ), ಕನ್ನಡ ಘಟಕ, ನಿಗಮದ ಕಾರ್ಯಾಲಯ, ಕ.ವಿ.ಪ್ರ.ನಿ.ನಿ., ಬೆಂಗಳೂರು.

**ನಿರ್ವಹಿಸಿದ ಗೌರವ ಹುದ್ದೆ** : ೧. ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು (೨೦ ವರ್ಷಗಳು)

೨. ಶಾಸನಶಾಸ್ತ್ರ ಬೋಧಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (೧೬ವರ್ಷಗಳು )

**ಪಿಎಚ್.ಡಿ., ಮಾರ್ಗದರ್ಶನ** : ಕನ್ನಡ ವಿಶ್ವವಿದ್ಯಾಲಯ ಹಂಪಿ. (ಡಾ॥ ಕರುಣಾ ವಿಜಯೇಂದ್ರ ಪಿಎಚ್.ಡಿ., ಪದವಿ ಪಡೆದಿದ್ದಾರೆ)

ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, (ಶ್ರೀ ಸುಭಾಷ್ ಕಮ್ಮಾರ ಪಿಎಚ್.ಡಿ.,ಗೆ ಅಧ್ಯಯನ ಮಾಡುತ್ತಿದ್ದಾರೆ)

**ಎಂ.ಫಿಲ್., ಮಾರ್ಗದರ್ಶನ** : - ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ. (೧. ಶ್ರೀಮತಿ ಮಮತಾ ರಾಣಿ, )

**ಗೌರವ** : ೧. **ಕರ್ನಾಟಕ ಸಾಹಿತ್ಯ ಅಕಾದೆಮಿ ಬಹುಮಾನ** : ಕರ್ನಾಟಕ ಏಕೀಕರಣ ಇತಿಹಾಸ ಕೃತಿಗೆ ೧೯೯೬.

೨. ೧೪-೪-೨೦೦೧ರಂದು ಶಿವಗಂಗೆಯಲ್ಲಿ ನಡೆದ ಎರಡನೆಯ ನೆಲಮಂಗಲ **ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.**

೩. ಕನ್ನಡ ಗೆಳೆಯರ ಬಳಗದಿಂದ **ಶಂ.ಬಾ.ಸಂಶೋಧಕ ಪ್ರಶಸ್ತಿ** - ೨೦೦೭ (೪-೨-೨೦೦೭)

೪. **ಡಾ॥ ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ** - ೨೦೦೭ (೨೦-೧೧-೨೦೦೭)

೫. ನೆಲಮಂಗಲದ ಕನ್ನಡ ಗೆಳೆಯರ ಬಳಗ - ೨೦೦೮

೬. ಬೆಂಗಳೂರಿನಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷತೆ - ೨೦೧೧

**ಸಾಧನೆಗಳು: ಪ್ರಕಟಣೆಗಳು ಕಾದಂಬರಿಗಳು** : ೧. ಜೇನು ನಂಜು (ಎರಡು ಮುದ್ರಣಗಳು) ೧೯೭೫, ೨೦೦೨

೨. ಗತಿ (ಎರಡು ಮುದ್ರಣಗಳು) ೧೯೭೬, ೨೦೦೨

೩. ಬಿನ್ನ (ಎರಡು ಮುದ್ರಣಗಳು) ೧೯೭೮, ೨೦೦೨.

೪. ಪರಿಗ್ರಹಣ (ಎರಡು ಮುದ್ರಣಗಳು) ೧೯೭೯, ೨೦೦೨.

ಮಕ್ಕಳ ನಾಟಕ : ೧. ಗುಲ್ಲುಪ್ಪಿ ಮುನ್ನುಪ್ಪಿ (ಎರಡು ಮುದ್ರಣಗಳು) ೧೯೮೦, ೧೯೮೨.

**(೧೯೭೮ ರಲ್ಲಿ ನಡೆದ ರಾಜ್ಯ ಮಟ್ಟದ ಮಕ್ಕಳ ನಾಟಕ ರಚನಾ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆದಿದೆ. ೧೯೯೬ರಲ್ಲಿ ತೆಲುಗಿಗೆ ಅನುವಾದಗೊಂಡಿದೆ.)**

ನಾಟಕ : ೨. ಸಂಸ್ಥಾನಕ ಪ್ರಕರಣವು – ೨೦೦೯.

ಸಂಕೀರ್ಣ : ೧. ನಮ್ಮ ನಾಡು ಕರ್ನಾಟಕ (ಏಳು ಮುದ್ರಣಗಳು) ೧೯೯೩, ೧೯೯೫. ೧೯೯೬, ೧೯೯೭, ೨೦೦೭, ೨೦೧೦, ೨೦೧೨.

೨. ಬಾದಾಮಿ, ಐಹೊಳೆ, ಪಟ್ಟದ ಕಲ್ಲು (ನವ ಸಾಕ್ಷರರಿಗಾಗಿ) ೧೯೯೫.

೩. ಉಡುಪಿ (ನವ ಸಾಕ್ಷರರಿಗಾಗಿ) ೧೯೯೫.

೪. ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು: ಒಂದು ಸಾಂಸ್ಕೃತಿಕ ಅಧ್ಯಯನ. **(ಪಿಎಚ್.ಡಿ., ಮಹಾ ಪ್ರಬಂಧ)** ೧೯೯೩

೫. ಕರ್ನಾಟಕ ಏಕೀಕರಣ ಇತಿಹಾಸ **(೧೯೯೬ರಲ್ಲಿ ಕರ್ನಾಟಕ ಸಾಹಿತ್ಯ ಅಕಾದೆಮಿ ಬಹುಮಾನ) ೧೯೯೬, ೨೦೦೫, ೨೦೦೮, ೨೦೧೧, ೨೦೧೨.**

೬. ಇತಿಹಾಸದ ಅಧ್ಯಯನ – ಅಂದು ಇಂದು ೧೯೯೭.

೭. ಗೋದಾವರಿಯ ಆಸುಪಾಸಿನಲ್ಲಿ ( ಮಹಾರಾಷ್ಟ್ರದ ಪ್ರವಾಸ ಕಥನ) ೧೯೯೯.

೮. ಚಂಗಾಳ್ವರು ೨೦೦೦.

೯. ರಾ.ಶಿ. ೨೦೦೨, ೨೦೦೫.

೧೦. ಶಾಸನ ಸಂಕಲನ ೨೦೦೨.

೧೧. ಭಾರತೀಯ ಬಹುಮುಖೀ ಸಂಸ್ಕೃತಿ (ಬಿ.ಎಸ್. ಉಪಾಧ್ಯಾಯರ Feeders of Indian cultureನ ಅನುವಾದ)–೨೦೦೫.

೧೨. ಇದು ನಮ್ಮ ಕರ್ನಾಟಕ (ನವ ಸಾಕ್ಷರಿಗಾಗಿ) – ೨೦೦೬.

೧೩. ಒಂದುಗೂಡಿದ ಕರ್ನಾಟಕ (ನವಸಾಕ್ಷರಿಗಾಗಿ) – ೨೦೦೬.

೧೪. ಇತಿಹಾಸದ ಇಣುಕು ನೋಟ – ೨೦೦೮.

೧೫. ರಾಷ್ಟ್ರಕೂಟ ಶಿಲ್ಪಕಲೆ – ೨೦೦೮.

೧೬. ನಮ್ಮದಿದು ಇತಿಹಾಸ, ೨೦೧೧.

ಸಂಪಾದಿತ : ೧. ನಾಗಾಭಿನಂದನ (ಶ್ರೀ ಎಂ.ಜಿ. ನಾಗರಾಜ್ ಅಭಿನಂದನ ಗ್ರಂಥ) ೧೯೯೪.

೨. ನೆಲದ ಸಿರಿ (ಬೆಂಗಳೂರು ಗ್ರಾಮಾಂತರ ಜಿಲ್ಲೆ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ) ೧೯೯೭.

೩. ಎಪಿಗ್ರಫಿಕಲ್ ಸ್ಟಡೀಸ್ (ಎನ್.ಎಲ್. ರಾವ್ ಅವರ ಲೇಖನಗಳು – ಸಹ ಸಂಪಾದನೆ) ೧೯೯೭.

೪. ಕನಕ ಸಿರಿ ( ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆ– ಸಹ ಸಂಪಾದನೆ) ೧೯೯೯.

೫. ತಮಿಳು ನಾಡಿನ ಕನ್ನಡ ಶಾಸನಗಳು (ಸಹ ಸಂಪಾದನೆ) ೨೦೦೦.

೬. ಇತಿಹಾಸದ ಪರಾಮರ್ಶೆ (ಹೊಸತು ವಾಚಿಕೆ) – ೨೦೦೬.

೭. -- ೧೪ ಸುವರ್ಣ ಕರ್ನಾಟಕ ಶಿಲ್ಪಕಲಾ ಮಾಲೆ (೧. ಇತಿಹಾಸ ಪೂರ್ವ ಮತ್ತು ಆರಂಭ, ೨. ಬಾದಾಮಿ ಚಲುಕ್ಯ, ೩. ಗಂಗ, ೪. ರಾಷ್ಟ್ರಕೂಟ, ೫. ಕಲ್ಯಾಣ ಚಾಲುಕ್ಯ, ೬. ಹೊಯ್ಸಳ, ೭. ವಿಜಯನಗರ, ೮. ಪಲ್ಲವ –ಚೋಳ)

೧೫. ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು (ಸಂಪಾದನೆ) – ೨೦೦೯.

೧೬. ವಕೀಲ ರಾಮಪ್ಪನ ಕೈಫಿಯತ್ತು, (ಸಂಪಾದನೆ).

೧೭. ಕುಕ್ಕೆ ಸುಬ್ರಹ್ಮಣ್ಯದ ಶಾಸನಗಳು – ೨೦೧೨.

**ಸಧ್ಯದ ಕೆಲಸಗಳು :** ೧. ಆಧುನಿಕ ಭಾರತದ ಇತಿಹಾಸ (ಬಿಪಿನ್ ಚಂದ್ರ ಆವರ ಮಾಡರ್ನ್‌ಹಿಸ್ಟರಿ ಆಫ್ ಇಂಡಿಯಾದ ಅನುವಾದ) (ಬಿಡುಗಡೆಗೆ ಸಿದ್ಧವಾಗಿದೆ)

೨. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ --೨೫ (ತುಮಕೂರು ಜಿಲ್ಲೆ)

೩. ಸಮಗ್ರ ಕರ್ನಾಟಕ ದರ್ಶನ

೪. ಕನ್ನಡ ಶಾಸನ ಪದಕೋಶ

೫. ಕರ್ನಾಟಕ ಜನ ಇತಿಹಾಸ

**ಪ್ರಕಟಿತ ಲೇಖನಗಳು :** ಸುಮಾರು ೧೫೦ ಕನ್ನಡದಲ್ಲಿ ಮತ್ತು ಸುಮಾರು ೫೦ ಇಂಗ್ಲಿಷ್‌ನಲ್ಲಿ ಬಹುತೇಕ ಲೇಖನಗಳು ಭಾರತೀಯ ಶಾಸನ ತಜ್ಞರ ವಾರ್ಷಿಕ ಸಮ್ಮೇಳನ, ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನ, ಮತ್ತು ಇತರ ವಿಚಾರ ಗೋಷ್ಠಿಗಳಲ್ಲಿ ಮಂಡಿತವಾಗಿವೆ ಹಾಗೂ ಹಲವಾರು ಅಭಿನಂದನ ಗ್ರಂಥಗಳು ಹಾಗೂ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

**ಕರ್ಮವೀರ ವಾರಪತ್ರಿಕೆಯಲ್ಲಿ ೫೩ ವಾರಗಳು 'ನಮ್ಮದಿದು ಇತಿಹಾಸ ' ಅಂಕಣ ಬರಹ – ೨೦೦೬.**

**ಸಾಕ್ಷ್ಯ ಚಿತ್ರ :** ೧. ವಿಶ್ವ ಕನ್ನಡ ಸಮ್ಮೇಳನದ ಸಂದರ್ಭ ಟಿ.ಎಸ್. ನಾಗಾಭರಣ ನಿರ್ದೇಶನದಲ್ಲಿ ನಿರ್ಮಾಣವಾದ ಕರ್ನಾಟಕದ ದೇವಾಲಯಗಳು ಸಾಕ್ಷ್ಯಚಿತ್ರಕ್ಕೆ ವಿಷಯ ತಜ್ಞನಾಗಿ ನೆರವು ಶ್ರವಣಬೆಳಗೊಳಕ್ಕೆ ಸಂಬಂಧಿಸಿದ ಮಹಾಮಸ್ತಕಾಭಿಷೇಕ ಸಾಕ್ಷ್ಯಚಿತ್ರಕ್ಕೆ ಇತಿಹಾಸಕ್ಕೆ ಸಂಬಂಧಿಸಿದ ವಿಷಯಗಳ ನಿರೂಪಣೆ.



## ೨೦೧೧ರ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಸ್ವೀಕರಿಸಿದ ಸಂದರ್ಭದಲ್ಲಿ ಮಾಡಿದ ಭಾಷಣ

# ಕರ್ನಾಟಕದ ಮಹ್ಮದೀಯ ಶಾಸನಗಳು – ಒಂದು ಸಮೀಕ್ಷೆ

**ಕೆ. ಮೊಹಮ್ಮದ್ ಶರೀಫ್***

ಕರ್ನಾಟಕ ಇತಿಹಾಸ ಅಕಾದೆಮಿಯ ರಜತೋತ್ಸವ ವರ್ಷದ ಸಮ್ಮೇಳನದ ಇಂದಿನ, ಹಿಂದಿನ ಹಾಗೂ ಮುಂದಿನ ಸಮ್ಮೇಳನಗಳ ಅಧ್ಯಕ್ಷರುಗಳೇ, ಡಾ॥ ಬಾ.ರಾ. ಗೋಪಾಲ್ ಪ್ರಶಸ್ತಿ ಪುರಸ್ಕೃತರಾದ ನನ್ನ ಹಿಂದಿನ ಹಾಗೂ ಮುಂದೆ ಪುರಸ್ಕಾರಕ್ಕೆ ಭಾಜನರಾಗುವ ಪ್ರಶಸ್ತಿ ಪುರಸ್ಕೃತರೇ ಈ ವರ್ಷದ ಪ್ರಶಸ್ತಿಯನ್ನು ನನಗೆ ಕೊಡಲು ಸರ್ವಾನುಮತದಿಂದ ಆಯ್ಕೆ ಮಾಡಿರುವಂತ ಈ ಅಕಾದೆಮಿಯ ಗೌರವಾಧ್ಯಕ್ಷರು ಆದ ಡಾ॥ ಸೂರ್ಯನಾಥ ಯು. ಕಾಮತರೇ, ಅಧ್ಯಕ್ಷರಾದ ಡಾ॥ ದೇವರಕೊಂಡಾರೆಡ್ಡಿಯವರೇ, ಉಪಾಧ್ಯಕ್ಷರುಗಳಾದ ಡಾ॥ ಎಂ.ಜಿ. ನಾಗರಾಜ್ ಹಾಗೂ ಡಾ॥ ಬಿ. ರಾಜಶೇಖರಪ್ಪ ಅವರುಗಳೇ, ಪ್ರಧಾನ ಕಾರ್ಯದರ್ಶಿಗಳಾದ ಎಸ್. ರಾಜೇಂದ್ರಪ್ಪರನವರೇ, ಕಾರ್ಯದರ್ಶಿಗಳಾದ ಡಾ॥ ಪಿ.ವಿ. ಕೃಷ್ಣಮೂರ್ತಿ, ಡಾ॥ ಡಿ.ಎನ್. ಯೋಗೀಶ್ವರಪ್ಪ ಅವರೇ, ಕೋಶಾಧಿಕಾರಿಗಳಾದ ಡಾ॥ ತುಳಸಿರಾಮನಾಯಕ್‌ರೇ ಹಾಗೂ ಕಾರ್ಯಕಾರಿ ಸದಸ್ಯರೇ, ಅಕಾದೆಮಿಯ ಎಲ್ಲ ಇತಿಹಾಸ ಪ್ರೇಮಿಗಳು, ಇಲ್ಲಿ ನೆರೆದಿರುವ ನನ್ನ ಹಿರಿಯ–ಕಿರಿಯ ಸನ್ಮಿತ್ರರೇ ಎಲ್ಲರಿಗೂ ವಂದನೆಗಳು.

ಸನ್ಮಿತ್ರರೇ, ವಿದ್ವತ್‌ಭರಿತ ಅಭಿಮಾನಿಗಳು ಭಾಗವಹಿಸಿರುವ ಇಂತಹ ಅಕಾದೆಮಿಯ ರಜತೋತ್ಸವ ವರ್ಷದ ಸಮ್ಮೇಳನದಲ್ಲಿ ನಾನೂ ಹಾಗೂ ನನ್ನ ಶ್ರೀಮತಿಗೂ ಪಾಲ್ಗೊಳ್ಳುವುದೇ ತುಂಬಾ ಸಂತೋಷದ ಸಂಗತಿ. ಅದರಲ್ಲೂ ಹಿರಿಯ ಶಾಸನತಜ್ಞರೂ, ಸುಮಾರು ೧೪ ವರ್ಷಗಳಷ್ಟು (೧೯.೦೨.೧೯೭೩ ರಿಂದ ೩೧.೦೧.೧೯೮೭ ರವರೆಗೆ) ನನ್ನ ಆತ್ಮೀಯ ಸಹೋದ್ಯೋಗಿಗಳೂ, ಹಿರಿಯ ಮಿತ್ರರೂ ಆಗಿದ್ದ ಡಾ॥ ಬಾ.ರಾ. ಗೋಪಾಲ್ ಅವರ ಹೆಸರಿನಲ್ಲಿ ಅಕಾದೆಮಿಯು ನನಗೆ ಈ ವರ್ಷದ ಪ್ರಶಸ್ತಿ ನೀಡಿ ಗೌರವಿಸಿರುವುದು ನನಗೂ, ನನ್ನ ಶ್ರೀಮತಿಯವರಿಗೂ, ನನ್ನ ಆತ್ಮೀಯರೆಲ್ಲರಿಗೂ ಸಂತೋಷವನ್ನುಂಟು ಮಾಡಿದೆ. ಈ ಪ್ರಶಸ್ತಿ ಈಗಾಗಲೇ ಅನೇಕ ಹಿರಿಯ–ಕಿರಿಯ ಮಿತ್ರರಿಗೆ ಸಂದಿದೆ. ಈ ಪ್ರಶಸ್ತಿಯನ್ನು ನಾಡಿನ ಹಿರಿಯ ಶಾಸನತಜ್ಞರ ಗೌರವ ಸ್ಮರಣೆ, ಗುರುಹಿರಿಯರ ಆಶೀರ್ವಾದ, ಕಿರಿಯ ಶಾಸನತಜ್ಞರ ಪ್ರೀತಿ ವಿಶ್ವಾಸಗಳೊಂದಿಗೆ ತುಂಬು ಕೃತಜ್ಞತೆಯಿಂದ ಅಷ್ಟೇ ವಿನಮ್ರತೆಯಿಂದ ನಾನು ಈ ಎಲ್ಲ ಇತಿಹಾಸ ಪ್ರೇಮಿಗಳ ಹಾಗೂ ಆತ್ಮೀಯ ಸಭಿಕರ ಸಮಕ್ಷಮದಲ್ಲಿ ಇಂದು ಸ್ವೀಕರಿಸಿದ್ದೇನೆ.

ಈ ಪ್ರಶಸ್ತಿಯನ್ನು ಡಾ॥ ಬಾ.ರಾ. ಗೋಪಾಲ್ ಅವರಿಗೆ ಪ್ರಿಯವಾಗಿದ್ದ ಶಾಸನ ಕ್ಷೇತ್ರದ ಸಂಶೋಧನೆ ಸಾಧನೆಗೆಂದೇ ಈ ವಿಶೇಷ ಪ್ರಶಸ್ತಿ ಸ್ಥಾಪನೆ ಮಾಡಿರುವ ಅವರ ಕುಟುಂಬದ ಎಲ್ಲ ಸದಸ್ಯರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳು. ಈ ಪ್ರಶಸ್ತಿ ಕೇವಲ ನನಗಷ್ಟೇ ಅಲ್ಲ, ನಾನು ಈ ಕ್ಷೇತ್ರದಲ್ಲಿ ಕೆಲಸ ಮಾಡಲು ಕಾರಣಕರ್ತರಾದ ಡಾ॥ ಹಾ.ಮಾ. ನಾಯಕ, ಡಾ॥ ಬಾ.ರಾ. ಗೋಪಾಲ್, ಡಾ॥ ಎ.ವಿ. ನರಸಿಂಹಮೂರ್ತಿ, ಡಾ॥ ಎಸ್. ನಾಗರಾಜು, ಡಾ॥ ಬಿ.ಕೆ. ಗುರುರಾಜರಾವ್ ಮುಂತಾದ ಗುರುಹಿರಿಯರಿಗೂ, ಪುರಾತತ್ತ್ವ ಪದವಿಯನ್ನು ವ್ಯಾಸಂಗ ಮಾಡಲು ಪ್ರೋತ್ಸಾಹಿಸಿದ ನನ್ನ ತಂದೆ ಶ್ರೀ ಕೆ.ಹೆಚ್. ಶೇಖ್ ಖತಾಲ್ ಸಾಹೇಬ್, ತಾಯಿ ಶ್ರೀಮತಿ ಅಮನ್‌ಬಿ ಹಾಗೂ ನನ್ನ ಶಾಸನ ಕ್ಷೇತ್ರದಲ್ಲಿ ಬರವಣಿಗೆಗೆ ಸಹಕರಿಸಿದ ನನ್ನ ಪತ್ನಿ ಶ್ರೀಮತಿ ಬಿ.ಇ. ನೂರುನ್ನಹರ್ ಮುಂತಾದ ಎಲ್ಲರಿಗೂ ತುಂಬು ಹೃದಯದಿಂದ ಈ ಸಂದರ್ಭದಲ್ಲಿ ನೆನಸಿ ಅವರ ಆಶೀರ್ವಾದ, ಶುಭಹಾರೈಕೆಗಳನ್ನು ಬಯಸಿ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

"ಡಾ॥ ಬಾ.ರಾ. ಗೋಪಾಲ್ ಅವರ ವಿಜಯನಗರ ಸಮಗ್ರ ಶಾಸನಗಳ ನಾಲ್ಕು ಸಂಪುಟಗಳು ಪ್ರಕಟವಾಗಿವೆ. ಇನ್ನೂ ಮೂರು ಸಂಪುಟಗಳ ಬೆರಳಚ್ಚು ಹಸ್ತಪ್ರತಿ ತಮ್ಮ ಬಳಿ ಇದೆ" ಎಂದು ಅವರ ಶಿಷ್ಯರು, ಅವರ ಮಾರ್ಗದರ್ಶನದಲ್ಲಿ ಪಿಹೆಚ್.ಡಿ ಪದವಿ ಪಡೆದವರು, ೨೦೦೭ರಲ್ಲಿ ಬಾ.ರಾ.ಗೋ. ಪ್ರಶಸ್ತಿ ಪಡೆದವರೂ ನನ್ನ ಸನ್ಮಿತ್ರರೂ ಆದ ಡಾ॥ ಎಚ್.ಎಸ್. ಗೋಪಾಲ್‌ರಾವ್ ಇತಿಹಾಸ ದರ್ಶನ ಸಂಚಿಕೆಯಲ್ಲಿ ಹೇಳಿದ್ದಾರೆ. ಅಲ್ಲದೆ "ಬಾ.ರಾ.ಗೊ.ರವರ ಎಲ್ಲ ಕೆಲಸಗಳನ್ನು ಮುಂದುವರೆಸಿ, ಮುಗಿಸುವ ಆಸೆ ನನಗಿದೆ" ಎಂದೂ ಹೇಳಿದ್ದಾರೆ. ಇದು ನನ್ನ ಆಸೆಯೂ ಹೌದು. ಕಾರಣ ದಯಮಾಡಿ ಇದನ್ನು ಮುಗಿಸಿ ಆದಷ್ಟು ಶೀಘ್ರವಾಗಿ ಪ್ರಕಟಿಸಿ ಎಂದು ಸನ್ಮಿತ್ರರಲ್ಲಿ ಮನವಿ ಮಾಡುತ್ತೇನೆ.

* # ೭೪೯, ೧೩ನೇ ಮುಖ್ಯರಸ್ತೆ, ೪ನೇ ಹಂತ, ಟಿ.ಕೆ. ಬಡಾವಣೆ, ಮೈಸೂರು-೫೭೦ ೦೦೯.

ಕರ್ನಾಟಕದಲ್ಲಿ ಪ್ರಕಟವಾಗಿರುವ ಬಹಳಷ್ಟು ಮಹಮ್ಮದೀಯ ಶಾಸನಗಳ ಜಿಲ್ಲಾವಾರು ಶಾಸನಗಳ ಅಭ್ಯಾಸವನ್ನು ಮಾಡಿ ಅನೇಕ ಸಮ್ಮೇಳನಗಳಲ್ಲಿ ಪ್ರಬಂಧಗಳನ್ನು ಮಂಡಿಸಿದ್ದೇನೆ. ಕೆಲವು ಹೊಸ ಶಾಸನಗಳು ಪ್ರಕಟಿಸಿದ್ದೇನೆ. ಹೀಗೆ ಇವುಗಳ ಮಹತ್ತ್ವವನ್ನು ಸವಿವರವಾಗಿ ಹೇಳಿದ್ದೇನೆ.

ಕರ್ನಾಟಕವು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಅತ್ಯಂತ ಸಂಪದ್ಭರಿತ ರಾಜ್ಯವಾಗಿದೆ. ಈ ರಾಜ್ಯದಲ್ಲಿ ನಮಗೆ ದೊರೆತಿರುವ ಸ್ಮಾರಕಗಳು, ಶಾಸನಗಳು ಈ ಸಂಪತ್ತಿನ ಬಹುಮುಖ್ಯ ಭಾಗಗಳಾಗಿವೆ. ಕರ್ನಾಟಕ ಶಾಸನ ಸಂಪತ್ತು ಶ್ರೀಮಂತವಾದುದು. ಇದು ನಮ್ಮ ಜನಾಂಗದ ಆಸ್ತಿ. ಇಲ್ಲಿ ಕನ್ನಡ, ತಮಿಳು, ಸಂಸ್ಕೃತ ಮತ್ತು ಇತರ ಭಾಷೆಗಳ ಶಾಸನಗಳ ಹಾಗೆ ಅರೇಬಿಕ್, ಪರ್ಶಿಯನ್ ಹಾಗೂ ಉರ್ದು ಭಾಷೆಗಳಲ್ಲೂ ಶಾಸನಗಳಿವೆ. ಇವು ಇತರ ಭಾಷೆಗಳ ಶಾಸನಗಳಂತೆಯೇ ನಮ್ಮ ನಾಡಿನ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಘಟನೆಗಳ ಅಧ್ಯಯನಕ್ಕೆ ಅಮೂಲ್ಯವಾದ ಆಕರಗಳಾಗಿವೆ. ಕರ್ನಾಟಕದಲ್ಲಿ ನಮಗೆ ಸಿಕ್ಕಿರುವ ಅರೇಬಿಕ್, ಪರ್ಶಿಯನ್ ಮತ್ತು ಉರ್ದು ಭಾಷೆಗಳ ಶಾಸನಗಳಲ್ಲಿ ಪರ್ಶಿಯನ್ ಭಾಷೆಯ ಶಾಸನಗಳೇ ಹೆಚ್ಚು. ಕೆಲವು ಶಾಸನಗಳು ಅರೇಬಿಕ್ ಭಾಷೆಯಲ್ಲೂ ಇನ್ನೂ ಕೆಲವು ಅರೇಬಿಕ್ ಮತ್ತು ಪರ್ಶಿಯನ್ ಭಾಷೆಗಳಲ್ಲಿ ಇವೆ. ಇವುಗಳಲ್ಲದೆ ಕನ್ನಡ, ಮರಾಠಿ, ಹಿಂದಿ, ಆಂಗ್ಲ ಮುಂತಾದ ಭಾಷೆಗಳಲ್ಲೂ ನಾವು ಮಹಮ್ಮದೀಯ ಅರಸರ ಶಾಸನಗಳನ್ನು ಕಾಣಬಹುದು. ಮಡಕೇರಿ, ಬಿಜಾಪುರ ಮುಂತಾದ ಸ್ಥಳಗಳಲ್ಲಿ ಕೆಲವು ದ್ವಿಭಾಷಾ ಶಾಸನಗಳು ಶಿವಮೊಗ್ಗ ಜಿಲ್ಲೆಯ ಶಿರಗುಪ್ಪ ಎಂಬಲ್ಲಿ ತ್ರಿಭಾಷಾ ಶಾಸನಗಳು ಸಿಕ್ಕಿರುವುದಂತೂ ತುಂಬಾ ಕುತೂಹಲಕಾರಿಯಾದ ಸಂಗತಿ. ಇವು ಅಂದು ಬಳಕೆಯಲ್ಲಿದ್ದ ಸ್ಥಳೀಯ ಆಡುಮಾತಿನ ಮಾದರಿಯನ್ನೊದಗಿಸುವುದರ ಜೊತೆಗೆ ಯಾವ ಯಾವ ಸ್ಥಳಗಳಲ್ಲಿ ಎಷ್ಟೆಷ್ಟರ ಮಟ್ಟಿಗೆ ಇವುಗಳ ಬಳಕೆ ಹಾಗೂ ಪ್ರಭಾವ ಇದ್ದಿತೆಂಬುವುದರ ಅಧ್ಯಯನಕ್ಕೆ ಸಹಾಯಕಾರಿಯಾಗಿವೆ. ದ್ವಿಭಾಷಾ ಶಾಸನಗಳಲ್ಲಿ ಹೆಚ್ಚಿನವು ಪರ್ಶಿಯನ್ ಮತ್ತು ಕನ್ನಡ ಭಾಷೆಯವು. ಇವು ನಮ್ಮ ನಾಡಿನ ಅನೇಕ ಹಿಂದೂ ರಾಜರು ಸಂಸ್ಕೃತ–ಕನ್ನಡ ದ್ವಿಭಾಷಾ ಶಾಸನಗಳನ್ನು ಬರೆಸಿ ಹಾಕಿಸಿದಂತಿವೆ. ಮಹಮ್ಮದೀಯ ಅರಸರು ಸ್ಥಳೀಯ ಜನರಿಗೆ ತಮ್ಮ ಆಜ್ಞೆಗಳ ಅರಿವಾಗಲೆಂದು ಇತರ ಭಾಷೆಗಳಲ್ಲೂ ಶಾಸನಗಳನ್ನು ಬರೆಸಿಹಾಕಿಸಿರಬಹುದು.

ಕರ್ನಾಟಕದಲ್ಲಿ ನಾವು ಅರೇಬಿಕ್ ಮತ್ತು ಪರ್ಶಿಯನ್ ಶಾಸನಗಳನ್ನು ಕ್ರಿ.ಶ. ಹದಿನಾಲ್ಕನೆಯ ಶತಮಾನದಿಂದೀಚೆಗೆ ಅಂದರೆ ಅಲ್ಲಾವುದ್ದೀನನ ಕಾಲ ಮತ್ತು ಅಲ್ಲಿಂದೀಚೆಗೆ ಕಾಣುತ್ತೇವೆ. ಅಲ್ಲದೆ ಇಲ್ಲಿ ಈವರೆಗೆ ಸಿಕ್ಕಿರುವ ಶಾಸನಗಳ ಸಂಖ್ಯೆ ಸುಮಾರು ಎಂಟನೂರರಿಂದ ಒಂಬೈನೂರು. ಈ ಶಾಸನಗಳ ಪೈಕಿ ಸುಮಾರು ಏಳು ಶಾಸನಗಳನ್ನು ಖಿಲ್ಜಿ ಮತ್ತು ತುಘಲಕ್ ಅರಸರ ಕಾಲಕ್ಕೂ, ಸುಮಾರು ಇಪ್ಪತ್ತು ಶಾಸನಗಳನ್ನು ಹದಿನಾಲ್ಕನೆಯ ಶತಮಾನಕ್ಕೂ ಮೂವತ್ತು ಶಾಸನಗಳನ್ನು ಹದಿನೈದನೆಯ ಶತಮಾನಕ್ಕೂ, ಒಂದುನೂರ ಐವತ್ತು ಶಾಸನಗಳನ್ನು ಹದಿನಾರನೆಯ ಶತಮಾನಕ್ಕೂ, ಎಪ್ಪತ್ತೈದು ಶಾಸನಗಳನ್ನು ಹದಿನೇಳನೆಯ ಶತಮಾನಕ್ಕೂ, ಅರವತ್ತು ಶಾಸನಗಳನ್ನು ಹದಿನೆಂಟನೆಯ ಶತಮಾನಕ್ಕೂ ಮತ್ತು ಎಪ್ಪತ್ತೈದು ಶಾಸನಗಳನ್ನು ಹತ್ತೊಂಭತ್ತನೆಯ ಶತಮಾನಕ್ಕೂ ಸೇರಿಸಬಹುದು. ಉಳಿದ ಶಾಸನಗಳು ಕಾಲ ಮತ್ತು ಚಾರಿತ್ರಿಕ ಅಂಗಗಳಿಲ್ಲದವು. ಇವುಗಳಲ್ಲಿ ಹೆಚ್ಚಿನವು ಬಿಜಾಪುರ, ಧಾರವಾಡ, ಗುಲ್ಬರ್ಗ, ರಾಯಚೂರು ಮತ್ತು ಬೀದರ್ ಜಿಲ್ಲೆಗಳಲ್ಲೂ, ಉಳಿದವು ಬೆಂಗಳೂರು, ಬೆಳಗಾಂ, ಮಂಡ್ಯ, ಹಾಸನ, ತುಮಕೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಇತರೆ ಜಿಲ್ಲೆಗಳಲ್ಲಿ ಇವೆ. ಈ ಶಾಸನಗಳ ಪೈಕಿ ಅನೇಕ ಶಾಸನಗಳು ಖಿಲ್ಜಿ, ತುಘಲಕ್, ಬಹಮನಿ, ಆದಿಲ್‌ಷಾಹಿ, ಬರೀದ್‌ಷಾಹಿ, ನಿಜಾಮ್‌ಷಾಹಿ ಮುಂತಾದ ವಂಶಗಳ ಅರಸರಿಗೆ ಸೇರಿದವು. ಇವುಗಳಲ್ಲದೆ ಮೊಗಲರಿಗೂ, ಸವಣೂರು ನವಾಬರಿಗೂ ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರು, ಮೈಸೂರು ಒಡೆಯರು, ಕೊಡಗಿನ ಅರಸರು ಹಾಗೂ ಆಂಗ್ಲರ ಆಡಳಿತಕ್ಕೂ ಸೇರಿದ ಶಾಸನಗಳೂ ಇವೆ. ಇಲ್ಲಿ ಮುಖ್ಯವಾದ ಕೆಲವು ಶಾಸನಗಳನ್ನು ಉಲ್ಲೇಖಿಸಿದೆ.

ನಮಗೆ ಸಿಕ್ಕಿರುವ ಶಾಸನಗಳಲ್ಲೆಲ್ಲಾ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕು ರಕ್ಕಸಗಿ (ನಾಲ್ವತ್ತವಾಡ) ಪರ್ಶಿಯನ್ ಭಾಷೆಯ ಶಾಸನವೇ ಅತ್ಯಂತ ಪ್ರಾಚೀನವಾದದು.[೧] ಇದು ಖಿಲ್ಜಿವಂಶದ ಅರಸ ಅಲ್ಲಾವುದ್ದೀನನಿಗೆ ಸೇರಿದೆ. ಇದರ ಕಾಲ ಕ್ರಿ.ಶ. ೧೩೧೫. ಇದು ಅಲ್ಲಾವುದ್ದೀನ್ ಖಿಲ್ಜಿಯ ಸೇವಕನಾದ ಭಕ್ತಿಯಾರ್ ಖಾನ್‌ನ ಹಿಜರಿ ವರ್ಷ ೭೧೫ ಅಂದರೆ ಕ್ರಿ.ಶ. ೧೩೧೫ರಲ್ಲಿ ನಾಲ್ವತ್ತನಾಡ ಊರಿನಲ್ಲಿ ಪರಿಶ್ರಮದಿಂದ ಒಂದು ಮಸೀದಿಯನ್ನು ಕಟ್ಟಿಸಿದನೆಂದು ಹೇಳಿದೆ. ಅಲ್ಲಾವುದ್ದೀನ್ ಖಿಲ್ಜಿಯ ದಖ್ಖನಿನ ಬಹುಭಾಗಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದ್ದನು. ಇದಕ್ಕೆ ಪೂರಕವಾಗಿ ಅರಸನ ಆಡಳಿತಾಧಿಕಾರಿಯಾಗಿ ಭಕ್ತಿಯಾರ್ ಖಾನ್‌ನು ಬಿಜಾಪುರ ಪ್ರಾಂತ್ಯದ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದನೆಂದು ಈ ಶಾಸನದಿಂದ ತಿಳಿದು ಬರುತ್ತದೆ.

ಬಿಜಾಪುರ ಜಿಲ್ಲೆ ಬಿಜಾಪುರದಲ್ಲಿ ಮುಬಾರಕ್ ಶಾ ಖಿಲ್ಜಿಯ ಕಾಲದ ಮಾಹಿತಿಯುಳ್ಳ ಪರ್ಶಿಯನ್ ಭಾಷೆಯ

ಒಂದು ಶಾಸನ ದೊರೆತಿದೆ.[೨] ಇದರ ಕಾಲ ಹಿಜರಿ ವರ್ಷ ೭೨೦ ಅಂದರೆ ಕ್ರಿ.ಶ. ೧೩೨೦-೨೧. ಮಲಿಕ್-ಇ-ಮಲಿಕುಷ್-ಷರ್ಖ್ ಕರೀಮುದ್ದೌಲತ್ ನದ್‌ದೀನ್‌ನು ಮಸೀದಿಯಲ್ಲಿ ಬಡಿಗೆ ಕೆಲಸ ಮಾಡಿದ ರಿಬ್ಯಾ ಅಥವಾ ರೇವಯ್ಯನೆಂಬುವನಿಗೆ ೨೪ ನಿತಾನದಷ್ಟು ಅಳತೆಯ ಭೂಮಿಯನ್ನು, ಬೇನೂರ ಗ್ರಾಮದಲ್ಲಿ ನೀಡಿದ ನೆಂದು ಇದರಲ್ಲಿ ಹೇಳಿದೆ. ಹೆಸರೇ ಸೂಚಿಸುವಂತೆ ಈ ಬಡಗಿಯು ಒಬ್ಬ ಹಿಂದುವಾಗಿದ್ದ. ಈ ಶಾಸನ ಮುಸಲ್ಮಾನರ ಆಳ್ವಿಕೆಯ ಪ್ರಾರಂಭಿಕ ಕಾಲದಲ್ಲಿ ಕೈಗೊಂಡ ಪ್ರಾದೇಶಿಕ ಕೆಲಸಗಳ ಬಗ್ಗೆ ಬೆಳಕನ್ನು ಚೆಲ್ಲುತ್ತವೆ.

ಬೀದರ್ ಜಿಲ್ಲೆಯ ಬಸವ ಕಲ್ಯಾಣ ತಾಲ್ಲೂಕಿನ ಬಸವ ಕಲ್ಯಾಣದಲ್ಲಿ ನಮಗೆ ದೊರೆತಿರುವ ಒಂದು ಅರೇಬಿಕ್ ಮತ್ತು ಪರ್ಶಿಯನ್ ಭಾಷೆಯ ಶಾಸನವು ತುಘಲಕ್ ಖಾನ್ ಅಂದರೆ ಘಿಯಾಸುದ್ದೀನ್ ತುಘಲಕ್‌ನ ಕಾಲದಲ್ಲಿ ಉಲುಗ್ ಕ್ಯುತುಲುಗ್ ಮಲಿಕ್ ಮಲಿಕುಶ್-ಶರ್ಕ್ ಇಕ್ತಿಯಾರ್‌ವುದ್ದೀನ್ ಷಾಹಿನ್ ಮಲಿಕ್ ಸುಲ್ತಾನಿ ಎಂಬುವನು ಕಲ್ಯಾಣದಲ್ಲಿ ದೊಡ್ಡ ಜಾಮಿಮಸೀದಿಯನ್ನು ಕಟ್ಟಿಸಿದನೆಂದು ಹೇಳಿದೆ. ಇದರ ಕಾಲ ಹಿಜರಿ ೭೨೩ ಅಂದರೆ ಕ್ರಿ.ಶ. ೧೩೨೩. ಬೀದರ್ ಜಿಲ್ಲೆ ತಾಲ್ಲೂಕಿನ ಬೀದರ್‌ನಲ್ಲಿರುವ ಹಿಜರಿ ೭೨೭ ಅಂದರೆ ಕ್ರಿ.ಶ. ೧೩೨೬-೨೭ರ ಕಾಲದ ಪರ್ಶಿಯನ್ ಭಾಷೆಯ ಶಾಸನವು[೪] ಕುಬ್ಲಿ ಸುಲ್ತಾನಿಯು ಅಲ್ಲಿ ಒಂದು ಮಸೀದಿಯನ್ನು ಕಟ್ಟಿಸಿದುದಾಗಿ ಹೇಳಿದೆ. ತುಘಲಕರು ಮತ್ತು ಅವರ ಅಧಿಕಾರಿಗಳನ್ನು ಕುರಿತ ಮತ್ತು ಅವರು ಕಟ್ಟಿಸಿದ ಕಟ್ಟಡಗಳನ್ನು ಕುರಿತ ಮಾಹಿತಿಗಳನ್ನು ಈ ಶಾಸನಗಳು ಕೊಡುತ್ತವೆ.

ಬಹಮನಿ ಸುಲ್ತಾನರ ರಾಜಧಾನಿಯಾದ ಗುಲ್ಬರ್ಗಾ ಜಿಲ್ಲೆ ಗುಲ್ಬರ್ಗಾ ತಾಲ್ಲೂಕು ಗುಲ್ಬರ್ಗಾದಲ್ಲಿ ದೊರೆತಿರುವ ಪರ್ಶಿಯನ್ ಭಾಷೆಯ ಶಾಸನವು[೫] ಹಜರತ್ ಖ್ವಾಜಾ ಸಿರಾಜುದ್ದೀನ್ ಜುಬೈಲಾ ಎಂಬುವನ ಗೋರಿಯ ಆವರಣದಲ್ಲಿ ಮೆಟ್ಟಿಲು ಬಾವಿಯೊಂದನ್ನು ಕಟ್ಟಿದುದನ್ನು ದಾಖಲಿಸಿದೆ. ಬಹಮನಿ ಸುಲ್ತಾನ ಒಂದನೆಯ ಮುಹಮದ್‌ನ ಕಾಲದಲ್ಲಿ ಅಂದರೆ ಹಿಜರಿ ೭೬೮ ಅಂದರೆ ಕ್ರಿ.ಶ. ೧೩೬೭ರಲ್ಲಿ ಈ ಗೋರಿಯ ದರ್ಶನಕ್ಕೆ ಬರುವವರಿಗಾಗಿ ಈ ಮೆಟ್ಟಿಲು ಬಾವಿಯನ್ನು ಅಬುಮುಹಮದ್ ತಬ್ರಾಜಿ ಎಂಬುವನು ಮುಹಮದ್ ಖಾಲ್ ಖಾಲಿಯ ಮಗನಾದ ಖ್ವಾಜಾ ಕಬೀರನ ಮೇಲ್ವಿಚಾರಣೆಯಲ್ಲಿ ಕಟ್ಟಿಸಿದನೆಂದು ಈ ಶಾಸನದಲ್ಲಿ ಹೇಳಿದೆ. ಈ ಸಾರ್ವಜನಿಕ ಕಟ್ಟಡ ಕಟ್ಟಿಸಿದವನು ಖ್ವಾಜಾ ಸಿರಾಜುದ್ದೀನ್ ಜುನೈದಿಯ ಮೇಲೆ ಇಟ್ಟ ಭಕ್ತಿ ಮತ್ತು ಗೌರವವನ್ನು ಇದು ಸೂಚಿಸುತ್ತದೆ.

ನಮ್ಮ ನಾಡಿನ ಮುಹಮ್ಮದೀಯ ಶಾಸನಗಳಲ್ಲಿ ಬಹುಪಾಲು ಮಸೀದಿ, ಗೋರಿ ಮುಂತಾದ ಧಾರ್ಮಿಕ ಕಟ್ಟಡಗಳು, ಕೋಟೆ, ಹೆಬ್ಬಾಗಿಲು, ಅರಮನೆ, ಕಣಜ ಮುಂತಾದ ಧಾರ್ಮಿಕೇತರ ಕಟ್ಟಡಗಳು ಹಾಗೂ ಕೆರೆ, ಬಾವಿ, ಕಲ್ಯಾಣಿ, ಹೊಂಡ, ಉದ್ಯಾನವನ, ಆಣೆಕಟ್ಟು, ಏರಿ, ಮುಸಾಫರ್ ಖಾನ, ತಂಗುದಾಣ, ರಸ್ತೆ, ದುರ್ಗದ ದಾರಿ ಮುಂತಾದ ಲೋಕೋಪಯೋಗಿ ವಸ್ತುಗಳಿರುವ ಸ್ಥಳಗಳಲ್ಲಿ ಬೆಳ್ಳಿಯ ಬಟ್ಟಲು, ಬೆಳ್ಳಿಯ ಪಂಚಾರತಿ, ನಾಣ್ಯಗಳು, ತೋಪುಗಳು, ಘಂಟೆ, ನಗಾರಿ ಮುಂತಾದ ಚರ ವಸ್ತುಗಳ ಮೇಲೂ ದೊರೆಯುತ್ತವೆ. ಇವು ಅವುಗಳ ನಿರ್ಮಾಣ, ನಿರ್ಮಿಸಿದ ವ್ಯಕ್ತಿಯ ಹೆಸರು, ಅಂದಿನ ಅರಸು, ಅದರ ಕಾಲ ಮುಂತಾದ ಹತ್ತು ಹಲವು ವಿಷಯಗಳನ್ನೊಳಗೊಂಡಿರುತ್ತವೆ.

ಮಹಮ್ಮದೀಯ ಶಾಸನಗಳಲ್ಲಿ ಇತರ ಭಾಷೆಯ ಶಾಸನಗಳಲ್ಲಿರುವಂತೆ ರಾಜಕೀಯ ವಿಷಯಗಳನ್ನು ತಿಳಿಸುವ ಶಾಸನಗಳು ಹೆಚ್ಚಾಗಿಲ್ಲ. ಇದಕ್ಕೆ ಕಾರಣ ಮಹಮ್ಮದೀಯ ಅರಸರು ಅಂತಹ ವಿಷಯಗಳನ್ನು ಹೆಚ್ಚು ಹೆಚ್ಚಾಗಿ ಕಾಗದಗಳ ಮೇಲೆ ಬರೆಸುತ್ತಿದ್ದರು. ಆದರೂ ಕೆಲವು ಶಾಸನಗಳು ಒಂದು ಗೊತ್ತಾದ ವಂಶದ ಅಥವಾ ಕಾಲದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸ್ಥಿತಿಗತಿಗಳ ಅಧ್ಯಯನಕ್ಕೆ ಬಹುಮುಖ್ಯವಾದ ಆಕರಗಳಾಗಿವೆ ಎಂಬುವುದರಲ್ಲಿ ಸಂದೇಹವಿಲ್ಲ.

ಬೆಳಗಾವಿ ಜಿಲ್ಲೆ ರಾಯಬಾಗ್ ತಾಲ್ಲೂಕಿನ ಕುಡಚಿ ಒಂದು ಯಾತ್ರಾಸ್ಥಳ. ಇಲ್ಲಿ ಬಹಳಷ್ಟು ದರಗಾ (ಗೋರಿ)ಗಳಿವೆ. ಇದು ಬಹಮನಿ ರಾಜ್ಯದ ಸಂಸ್ಥಾಪಕನಾದ ಅಲ್ಲಾಉದ್ದೀನ್‌ನ ಜನ್ಮಸ್ಥಳವೂ ಹೌದು. ಕೃಷ್ಣಾ ನದಿಯ ದಂಡೆಯ ಮೇಲೆ ನಾಲ್ಕು ಪುರಾತನ ದರಗಾಗಳಿವೆ. ಇಲ್ಲಿಯ ಸುಂದರವಾದ ಮಖ್‌ದೂಮ್ ಷಾವಲಿ ದರಗಾದ ಮುಖ್ಯ ದ್ವಾರದ ಕಮಾನಿನಲ್ಲಿ ಪರ್ಶಿಯನ್ ಭಾಷೆಯ ಎರಡು ಶಾಸನಗಳಿವೆ.[೬] ಇವು ಕ್ರಿ.ಶ. ೧೫೨೧-೨೨ರ ಕಾಲದವು. ಇವುಗಳಲ್ಲೊಂದು ಶಾಸನದಲ್ಲಿ ಸಯ್ಯದ್ ಮಖ್‌ದೂಮ್ ಷಾವಲಿಯ ಮಗ ಪಖ್ರ್ ಇ ಜೌಲಯ ಕುಂದ್ ಮೀರ್ ಕಮಲ್‌ನ ನಿಧನದ ವಿಷಯವನ್ನು ದಾಖಲಿಸಿದೆ. ಇನ್ನೊಂದು ಶಾಸನದಲ್ಲಿ ಮಖ್‌ದೂಮ್ ತನ್ನ ಮಗ ಕುಂದ್‌ಮೀರ್ ಕಮಲ್‌ನ ಪರವಾಗಿ ದೇವರಲ್ಲಿ ಪ್ರಾರ್ಥಿಸಿಕೊಂಡಿರುವ ವಿಷಯವಿದೆ.

ಬಿಜಾಪುರ ಜಿಲ್ಲೆ ಬಿಜಾಪುರದಲ್ಲಿರುವ ಅರಬ್ಬೀ ಹಾಗೂ ಪರ್ಶಿಯನ್ ಭಾಷೆಯಲ್ಲಿರುವ ಶಾಸನವು[೭] ಯೂಸೂಫ್ ಅವರ ಜಾಮೀಯ ಮಸೀದಿಯ ಬಳಿಯ ಭಗ್ನದ್ವಾರದ

ಅವಶೇಷಗಳಲ್ಲಿ ಸಿಕ್ಕಿದೆ. ಇದರ ಕಾಲ ಕ್ರಿ.ಶ. ೧೫೩೬–೩೭ ಬರೆದವನು. ಹಫೀಜ್ ನಿಜಾಮುದ್ದೀನ್ ಎಂಬುವನು. ಈ ಮಸೀದಿಯನ್ನು ಮಜ್‌ಲಿಸ್–ರಫೀ–ಇಬ್ರಾಹಿಂ ಆದಿಲ್‌ಖಾನ್ (ಇಬ್ರಾಹಿಂ ಆದಿಲ್ ಷಾ I) ರಾಜನ ಆಳ್ವಿಕೆಯಲ್ಲಿ ಕಟ್ಟಲಾಯಿತೆಂದು ಇದರಲ್ಲಿ ಹೇಳಿದೆ. ಮಲಿಕ್ ಅಮೀನ್–ಉಲ್–ಮುಲ್ಕ್ ಘಾಜೀ ಎಂಬುವನು ಒಂದು ಮನೆ ಹಾಗೂ ೩೬ ಅಂಗಡಿಗಳನ್ನು ಒಂದು ಸಾಲಿನಲ್ಲಿ ಕಟ್ಟಿಸಿ, ಧರ್ಮದತ್ತಿಯಾಗಿ ನೀಡಿರುವ ವಿಷಯ ಇದರಲ್ಲಿದೆ. ಈ ಅಂಗಡಿ ಮತ್ತು ಮನೆಗಳಿಂದ ಬರುವ ಬಾಡಿಗೆಯಲ್ಲಿ ನೀರಿನ ವ್ಯವಸ್ಥೆ, ನೀರ್‌ಕಟ್ಟೆ ಹಾಗೂ ಕಟ್ಟಡದ ಜೀರ್ಣೋದ್ಧಾರ ಕೆಲಸಗಳನ್ನು ಮಾಡಬೇಕೆಂದು ಇದರಲ್ಲಿ ಹೇಳಿದೆ.

ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲ್ಲೂಕು ಹುಕ್ಕೇರಿಯ ಮೆಟ್ಟಿಲುಗಳುಳ್ಳ ಹಳೆಯ ಬಾವಿಯ ಅವಶೇಷದಲ್ಲಿ ದೊರೆತ ಪರ್ಶಿಯನ್ ಭಾಷೆಯ ಶಾಸನದ[೮] ಕಾಲ ಕ್ರಿ.ಶ. ೧೫೪೮ ಆ ಊರಿನ ಸರ್ವ ಜನಾಂಗದವರೂ ಸೇರಿ ತೆಗೆದು ಕೊಂಡಿರುವ ಮಹತ್ತ್ವಾದ ಮಹಜರ್ ಅಥವಾ ನಿರ್ಣಯ ಈ ಶಾಸನದ ಮುಖ್ಯವಸ್ತು. ಈ ಶಾಸನದಲ್ಲಿ ಬರುವ ಶಾಪಪದ್ಯ ಗಮನಾರ್ಹವಾಗಿದೆ. ಇದರಲ್ಲಿ ಹೇಳಿರುವಂತೆ ವಿವಿಧ ಕೋಮಿನ ಜನರು, ವಿವಿಧ ವೃತ್ತಿಯ ಮುಖ್ಯಸ್ಥರು, ಎಲ್ಲರೂ ಸೇರಿ ಬಾವಿಯ (ಕರೆಂಜಾ) ಅಭಿವೃದ್ಧಿಗಾಗಿ, ದೇವರಿಗಾಗಿ, ಸಾರ್ವಜನಿಕ ಉಪಯೋಗಕ್ಕಾಗಿ ಮನ್ಸೂರ್ ಖಾನ್ ಕಟ್ಟಿಸಿದ ಮೆಹಮಾನ್ ಖಾನಾ ಅಥವಾ ಅತಿಥಿಗೃಹದ ನಿರ್ವಹಣೆಗಾಗಿ ಕೊಟ್ಟ ದತ್ತಿಯ ಬಗೆಗೆ ತೆಗೆದುಕೊಂಡ ಮಹತ್ತ್ವದ ನಿರ್ಣಯದ ಸಭೆಯಲ್ಲಿ ಸರ್ವರೂ ಸೇರಿ ಮಾಡಿದ ಪ್ರಮಾಣವೇನೆಂದರೆ ಈ ನಿರ್ಣಯವನ್ನು ಒಂದು ವೇಳೆ ಮುಸಲ್ಮಾನ ಮುರಿದರೆ ಅವನು ಕ್ರೈಸ್ತನಾಗಿ ಪರಿವರ್ತನೆ ಹೊಂದಿದ ಪಾಪಕ್ಕೆ ಗುರಿಯಾದನೆಂದು ಭಾವಿಸಬೇಕು. ಒಂದು ವೇಳೆ ಒಬ್ಬ ಹಿಂದೂ ಇದನ್ನು ರದ್ದುಪಡಿಸಿದರೆ ಆತ ಗೋವನ್ನು ಕೊಂದು ಅದನ್ನು ಕಾಶಿಯಲ್ಲಿ ತಿಂದು ಪಾಪ ಮಾಡಿದವನೆಂದು ಪರಿಗಣಿಸಬೇಕು. ಇಲ್ಲಿ ಮುಸ್ಲಿಮರ ಬಗೆಗೆ ಹೇಳುವಾಗ ಮಕ್ಕಾದಲ್ಲಿ ಹಂದಿ ಕೊಂದ ಪಾಪಕ್ಕೆ ಹೋಗುವರು ಎಂಬ ಸಾಮಾನ್ಯವಾಗಿ ಶಾಸನಗಳಲ್ಲಿ ಬರುವ ಶಾಪ ಪದ್ಯಕ್ಕೆ ಬದಲಾಗಿ ಈ ಮೇಲಿನಂತೆ ಹೇಳಿದೆ. ಅಂದರೆ ಒಬ್ಬ ಮುಸಲ್ಮಾನ ಕ್ರೈಸ್ತನಾಗಿ ಪರಿವರ್ತನೆ ಹೊಂದುವುದೂ ಪಾಪ ಎಂದು ಆ ಕಾಲದಲ್ಲಿ ಭಾವಿಸಲಾಗುತ್ತಿತ್ತು ಎಂಬ ಮಹತ್ತ್ವದ ಸಂಗತಿ ಈ ಶಾಸನದಿಂದ ತಿಳಿದುಬರುತ್ತದೆ.

ಬೀದರ್ ಜಿಲ್ಲೆ ಕಲ್ಯಾಣ ತಾಲ್ಲೂಕು ಕಲ್ಯಾಣದಲ್ಲಿರುವ ಪರ್ಶಿಯನ್ ಭಾಷೆಯಲ್ಲಿರುವ ಶಾಸನವು[೯] ಚಾಂದನಿ ಚಬೂತರದ ಬಳಿಯ ಬುರ್ಜಿನ ಮೇಲಿದೆ. ಇದು ಆಲಿ ಆದಿಲ್ ಷಾಃ ದೊರೆಯ ಆಳ್ವಿಕೆಗೆ ಸೇರಿದ ಶಾಸನ. ಮಲಿಖುಷ್ ಷರ್ಫ್ ಮಲಿಕ್ ಇಸ್ಮಾಯಿಲ್ ಎಂಬ ವ್ಯಕ್ತಿಯ ನಾಯಿಬ್–ಇ–ಘೆಬತ್ ಮಾಮ್ಲಾ ಅಂದರೆ ಜಿಲ್ಲೆಯ ರಾಜಪ್ರತಿನಿಧಿಯ ಹುದ್ದೆಯಲ್ಲಿರುವಾಗ ಕಲ್ಯಾಣ ನಗರದ ಕೋಟೆಯ ಗೋಡೆಯನ್ನು ಖಾನ್ ದಿಲಾವರ್ ಖಾನ್ ಎಂಬುವನು ೬೦೦೦ ಹೊನ್ನುಗಳ ಖರ್ಚಿನಲ್ಲಿ ಕಟ್ಟಿಸಿದುದಾಗಿ ಇದರಲ್ಲಿ ಹೇಳಿದೆ. ಇದರ ಕಾಲ ಕ್ರಿ.ಶ. ೧೫೮೦.

ಬೆಳಗಾವಿ ಜಿಲ್ಲೆ ರಾಮದುರ್ಗ ತಾಲ್ಲೂಕು ತೋರಗಲ್ಲಿನ ಕೋಟೆಯ ಗೋಡೆಯ ಮೇಲಿರುವ ಪರ್ಶಿಯನ್ ಭಾಷೆಯ ಶಾಸನದ ತಳಭಾಗದಲ್ಲಿ ಕೆಲವು ಕನ್ನಡ ಪಂಕ್ತಿಗಳಿವೆ.[೧೦] ಈ ಶಾಸನವು ಎರಡನೆಯ ಇಬ್ರಾಹಿಂನ ಕಾಲಕ್ಕೆ ಸೇರಿದ್ದು. ಅದರಲ್ಲಿರುವ ಹಿಜರಿ ೯೯೧ ಕ್ರಿ.ಶ. ೧೫೮೩ಕ್ಕೆ ಸರಿಹೊಂದುತ್ತದೆ. ಇದರಲ್ಲಿ ಈ ಕೋಟೆಯ ಇನ್ನೊಂದು ಭಾಗವನ್ನು ಕಟ್ಟಿಸಿರುವ, ಬಹುಶಃ ಕೋಟೆಯನ್ನು ವಿಸ್ತರಿಸಿರುವ ಉಲ್ಲೇಖವಿದೆ. ಈ ತೋರಗಲ್ಲು ತದನಂತರ ಮೊಗಲರ ಆಳ್ವಿಕೆಗೆ ಒಳಪಟ್ಟು ನಂತರ ಮರಾಠರ ಆಳ್ವಿಕೆಗೆ ಒಳಪಟ್ಟಿತು. ಆಗ ಶಿವಾಜಿಯು ಈ ಕೋಟೆಯನ್ನು ವಿಸ್ತರಿಸಿದುದಾಗಿಯೂ ತಿಳಿದುಬರುತ್ತದೆ.[೧೧] ತೋರಗಲ್ಲಿನಲ್ಲಿ ಆದಿಲ್‌ಷಾಹಿ ಕಾಲಕ್ಕೆ ಸೇರಿರುವ ಸುಂದರವಾದ ಮೂರು ಮಸೀದಿಗಳು ಹಾಗೂ ನಾಲ್ಕು ದರಗಾಗಳಿವೆ.

ಗುಲ್ಬರ್ಗಾ ಜಿಲ್ಲೆ ಗುಲ್ಬರ್ಗದಲ್ಲಿನ ಹಿರಾಪುರದ ಹೊಕ್ಕು ತುಂಬುವ ಬಾವಿಯಲ್ಲಿ ಒಂದು ಪರ್ಶಿಯನ್ ಶಾಸನವಿದೆ.[೧೨] ಘನತೆವೆತ್ತ ನವಾಬ್ ಇಬ್ರಾಹಿಂ ಆದಿಲ್ ಷಾಃ ದೊರೆಯು ಈ ಸ್ಥಳದಲ್ಲಿ ತನ್ನ ಸೇನಾಸಮೇತ ಬಿಡಾರ ಬಿಟ್ಟಾಗ, ಇಲ್ಲೊಂದು ಕಾರಂಜೀ ಬಾವಿ ಹಾಗೂ ಫಲಭರಿತ ತೋಟವನ್ನು ಮಾಡಿಸುವುದಾಗಿ ರಾಜನ ತಾಯಿ ಮಖ್ದೂಮಾ–ಇ–ಜಹಾನ್ ಹರಕೆ ಹೊತ್ತಿದ್ದಳು. ಅವರು ಸಂತ ಸಯ್ಯೀದ್ ಮೊಹಮ್ಮದ್ ಹುಸೈನಿ ಗೇಸುದರಾಜ್ ಅವರ ದರ್ಗಾಕ್ಕೆ ಯಾತ್ರೆ ಹೊರಟಿದ್ದರು. ಯಾತ್ರೆಯನ್ನು ಹೊರಟಿದ್ದು ಹಿಜರಿ ೯೮೯ರಲ್ಲಿ ಅಂದರೆ ಕ್ರಿ.ಶ. ೧೫೮೧ರಲ್ಲಿ ಹಾಗೂ ಹರಕೆಯನ್ನು ಈಡೇರಿಸಿದುದು ಹಿಜರಿ ೯೯೪ರಲ್ಲಿ ಅಂದರೆ ಕ್ರಿ.ಶ. ೧೫೮೫–೮೬ರಲ್ಲಿ.

ಗದಗ ಜಿಲ್ಲೆ ಬೀಳಗಿ ತಾಲ್ಲೂಕು ಬೀಳಗಿ ಗ್ರಾಮದ ರಾಯರಬಾವಿಗೆ ಸೇರಿಸಿರುವ ಕಲ್ಲಿನ ಮೇಲೆ ಒಂದು ಕನ್ನಡ ಲಿಪಿ ಹಾಗೂ ಭಾಷೆಯ ಶಾಸನವಿದೆ.[೧೩] ಈ ಶಾಸನದ ಕಾಲ ಶಕ ೧೫೨೬ ಅಂದರೆ ಕ್ರಿ.ಶ. ೧೬೦೫. ಈ ಶಾಸನವು ಗಣೇಶ, ಶಾರದೆ ಹಾಗೂ ಶಂಬುವಿನ ಸ್ತುತಿಗಳಿಂದ ಪ್ರಾರಂಭ ವಾಗಿದೆ. ಬಿಜಾಪುರದ ಸುಲ್ತಾನನಾದ ಅಲಿ ಆದಿಲ್ ಶಹನ ಮಗ ಇಭರಾಹಿಮ (ಇಬ್ರಾಹೀಂ) ಆದಿಲ್‌ಶಾಹಿಯ ಆಳ್ವಿಕೆ

ಯಲ್ಲಿ ಅವನ ವಜಿರನಾಗಿ ಯಾಕೊತಖಾನನು ಬೀಳಗಿ ಸಮತವನ್ನು ನೋಡಿಕೊಳ್ಳುತ್ತಿದ್ದನೆಂದು ಹೇಳಿದೆ. ಆಗ ಶೇನಕ ಗೋತ್ರದ ತಿಂಮಾಜಿ ಪಂಡಿತನ ಮಗ ಖಂಡೇರಾಯ ಪಂಡಿತನಿಗೆ ಈ ಸಮತಿ ಠಾಣೆಯ ಉಸ್ತುವಾರಿಯನ್ನು ನೀಡಿದ್ದನೆಂದು ಶಾಸನದಲ್ಲಿ ಹೇಳಿದೆ. ಆಗ ಈ ಮೇಲಿನ ಖಂಡೇರಾಯ ಪಂಡಿತನು ಬೀಳಗಿ ಗ್ರಾಮದ ಪಶ್ಚಿಮ ಭಾಗದಲ್ಲಿ ಸರರ ಉಪಯೋಗಕ್ಕಾಗಿ ಅಂದರೆ ಸಾರ್ವಜನಿಕರ ಉಪಯೋಗಕ್ಕಾಗಿ ಬಾವಿಯೊಂದನ್ನು ತೋಡಿಸಿದನೆಂದು ಇದರಲ್ಲಿ ಹೇಳಿದೆ. ಈ ಬಾವಿಯನ್ನು ಈತ ಕ್ರಿ.ಶ. ೧೬೦೩ರ ಜೂನ್‌ನಲ್ಲಿ ತೋಡಿಸಲು ಆರಂಭಿಸಿದನೆಂದೂ ಇದನ್ನು ಹೀಗೆ ತೋಡಲು ತಗಲಿದ ಅವಧಿ ಒಂದು ವರುಷ ಏಳು ತಿಂಗಳು ಹತ್ತೊಂಬತ್ತು ದಿವಸಗಳೆಂದೂ ಶಾಸನದಲ್ಲಿ ಹೇಳಿದೆ. ಅಲ್ಲದೆ ಈ ಬಾವಿಯನ್ನು ತೋಡಲು ತಾನು ಕಷ್ಟಪಟ್ಟು ಸಂಪಾದಿಸಿದ ಹಣವನ್ನು ಖರ್ಚು ಮಾಡಿದುದಾಗಿಯೂ ಈ ಶಾಸನದಲ್ಲಿ ಹೇಳಿರುವುದು ಗಮನಾರ್ಹ ಸಂಗತಿ. ಇದಕ್ಕೆ 'ಅರ್ಧ ಚಾವುರ ಭೂಮಿಯನು ವಂದು ತೋಂಟವನು ಮಾನ್ಯ ಕೊಡಿಸಿದರೆಂದು" ಶಾಸನದಲ್ಲಿ ಹೇಳಿದೆ. ಕೊನೆಯಲ್ಲಿ ಈ ಧರ್ಮವನ್ನು ಹಾಳು ಮಾಡುವ ಹಿಂದುಗಳು ಹಾಗೂ ಮುಸ್ಲಿಮರಿಗೆ ಸಂಬಂಧಿಸಿದಂತೆ ಶಾಪಪದ್ಯಗಳಿವೆ. ಇದರ ಜೊತೆಗೆ ಇತರೆ ಶಾಸನಗಳಲ್ಲಿ ಬರುವ ಸಾಮಾನ್ಯ ಶಾಪಪದ್ಯಗಳು ಈ ಶಾಸನದಲ್ಲಿ ಇವೆ. ಈ ಶಾಸನದ ಕೊನೆಯ ಭಾಗದಲ್ಲಿ 'ಶ್ರೀಕೃಷ್ಣಾರ್ಪಣಮಸ್ತು' ಎಂದು ಹೇಳಿ 'ಕೂಪ ಸಪೂನ್ನವಾಯಿತು' ಅಂದರೆ ಬಾವಿ ಸಂಪೂರ್ಣವಾಯಿತು ಎಂದು ಹೇಳಿದೆ. ಇದೇ ಗ್ರಾಮದ ರಾಯರ ಬಾವಿಗೆ ಸೇರಿರುವ ಇನ್ನೊಂದು ಶಾಸನವು[೧೪] ಈ ಮೇಲೆ ಹೇಳಿದ ಶಾಸನದ ನಕಲಾಗಿದ್ದು ಇದು ನಾಗರಿಲಿಪಿ ಹಾಗೂ ಮರಾಠಿ ಭಾಷೆಯಲ್ಲಿದೆ. ಅಂದರೆ ಈ ಶಾಸನದಲ್ಲಿ ಈ ಮೇಲಿನ ಶಾಸನದಲ್ಲಿ ಹೇಳಿರುವ ವಿಷಯವನ್ನೇ ಮರಾಠಿ ಭಾಷೆಯಲ್ಲಿ ಹೇಳಿದೆ ಎಂದರ್ಥ. ಇದು ಮರಾಠಿ ಭಾಷೆಯನ್ನಾಡುವ ಪ್ರಜೆಗಳ ಅರಿವಿಗೆ ಹಾಕಿಸಿದಂತೆ ತೋರುತ್ತದೆ.

ಬೀದರ್ ಜಿಲ್ಲೆ ಬೀದರ್‌ನಲ್ಲಿರುವ ಅಹಮ್ಮದ್ ಷಾಃ ವಲೀ ಅವರ ಸಮಾಧಿ ಬಳಿಯ ಬಾವಿಯಲ್ಲಿರುವ ಪರ್ಶಿಯನ್ ಶಾಸನವು[೧೫] ಈ ಹೊಕ್ಕು ತುಂಬುವ ಬಾವಿ (Stop Well)ಯನ್ನು ಕ್ರಿ.ಶ. ೧೬೮೯-೧೦ರಲ್ಲಿ ಮಿರ್ಜಾವಲೀ ಅಂದರೆ ಅಮೀರ್ ಬರೀದ್ II ರಾಜನ ಆಳ್ವಿಕೆಯಲ್ಲಿ ಎಲಹಂಡು ಪಂಚಾಲ ದೌಲತಿ ಮಗ ಜಗಪತಿ ರಾವ್ ಕಟ್ಟಿಸಿದನೆಂದು ಹೇಳಿದೆ.

ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕು ಮುಧೋಳ ಗ್ರಾಮದ ಕಲ್ಲೇಶ್ವರ ದೇವಾಲಯದ ಪ್ರವೇಶ ದ್ವಾರದ ಲಲಾಟ ಬಿಂಬದ ಮೇಲೆ ಒಂದು ಕನ್ನಡ ಲಿಪಿ ಮತ್ತು ಭಾಷೆಯ ಶಾಸನವಿದೆ.[೧೬] ಇದು ವಿಜ್ಯಪುರ ಅಂದರೆ ಬಿಜಾಪುರ ದೊರೆ ಇಸ್ಮಾಯಿಲ್ ಬಾದಶಾಹನ ಕಾಲಕ್ಕೆ ಸೇರಿದ್ದು ಆಗ ಈ ದೊರೆ ರಾಜ್ಯಭಾರ ಮಾಡುತ್ತಿದ್ದನೆಂದು ಅದರಲ್ಲಿ ಹೇಳಿದೆ. ಈ ಶಾಸನದ ಕಾಲ ಶಕ ೧೫೪೦, ಕಲಿವರ್ಷ ೪೭೧೭. ಇದು ಕ್ರಿ.ಶ. ೧೬೧೮ಕ್ಕೆ ಸರಿಹೊಂದುತ್ತದೆ. ಈ ಶಾಸನವು ಗಣಪತಿ ಶಾರದೆಯರ ಸ್ತುತಿಗಳಿಂದ ಪ್ರಾರಂಭವಾಗಿದೆ. ಮುದವಳನಾಡಿನ ಕಲ್ಲೇಶ್ವರ ದೇವಾಲಯವನ್ನು ದೇಶ ಕುಲಕರಣಿ ನರಸಪ ಕೊಂಡಪನ ಸೋದರನ ಮಗ ಹೊನ್ನಪನು ಜೀರ್ಣೋದ್ಧಾರ ಮಾಡಿದುದನ್ನು ಈ ಶಾಸನದಲ್ಲಿ ದಾಖಲಿಸಿದೆ. ಈ ಶಾಸನದಲ್ಲಿ ಮುಧೋಳು ಗ್ರಾಮವನ್ನು ಮುದವಳ ಎಂದು ಕರೆದಿದೆ ಹಾಗೂ ಇದೊಂದು ನಾಡಾಗಿದ್ದುದನ್ನು ಗಮನಿಸಬಹುದು.

ಬಿಜಾಪುರ ಜಿಲ್ಲೆ ಬಿಜಾಪುರದಲ್ಲಿರುವ ಇಬ್ರಾಹಿಂ ಕಾಜಾದಲ್ಲಿನ ಒಂದು ಪರ್ಶಿಯನ್ ಶಾಸನವು[೧೭] ಕ್ರಿ.ಶ. ೧೬೨೮ಕ್ಕೆ ಸೇರಿದ್ದು ಇದು ಅಂದು ಇಬ್ರಾಹಿಂ ಆದಿಲ್ ಷಾಃನ ನಿಧನವನ್ನು ದಾಖಲಿಸಿದೆ. ಇದೇ ಇಬ್ರಾಹಿಂ ರೌಜಾದಲ್ಲಿರುವ ಪರ್ಶಿಯನ್ ಪದ್ಯದಲ್ಲಿರುವ ಶಾಸನವು[೧೮] ತಾಜ್ ಸುಲ್ತಾನನು ೧.೫ ಲಕ್ಷ ಹಾಗೂ ಒಂಬತ್ತು ನೂರು ಹೊನ್ನುಗಳನ್ನು ಎಂದರೆ ೧,೫೦,೯೦೦ ಹೊನ್ನುಗಳನ್ನು ವ್ಯಯಿಸಿ ಈ ರೌಜಾವನ್ನು ಕ್ರಿ.ಶ. ೧೬೩೦ರಲ್ಲಿ ಕಟ್ಟಿಸಿದನೆಂದೂ ಹಾಗೂ ಅದರ ನೇತೃತ್ವದಲ್ಲಿ ಮಲಿಕ್ ಸಂದಲ್ ಹೊಂದಿದ್ದನೆಂದೂ ದಾಖಲಿಸಿದೆ. ಮುಸ್ತಫಾಬಾದ್ ಅಂದರೆ ರಾಯಬಾಗ್ ಬುರ್ಜಿನ ಮೇಲೆ ಇರುವ 'ದಲ್ ಖಂಡಲ್' ಎಂಬ ತೋಪಿನ ಮೇಲೆ ಒಂದು ಪರ್ಶಿಯನ್ ಶಾಸನವಿದೆ.[೧೯] ರಾಜಾಜ್ಞೆಯ ಮೇರೆಗೆ ನಮ್ರ ಸೇವಕನಾದ ಮಲಿಕ್ ಸಂದಲ್‌ನು ಮುಸ್ತಫಾಬಾದಿನಲ್ಲಿ (ರಾಯಬಾಗ್) ಇದ್ದ ತೋಪನ್ನು ಹಿಜರಿ ೧೦೪೨ ಎಂದರೆ ಕ್ರಿ.ಶ. ೧೬೩೨ರಲ್ಲಿ ಮೊಹಮ್ಮದ್ ಆದಿಲ್ ಷಾಃ ಸನ್ನಿದಿಗೆ ತಂದು ಒಪ್ಪಿಸಿದನು. ಈ ತೋಪಿಗೆ "ಪತೇ-ಇ-ಲಷ್ಕರ್" ಅಂದರೆ "ಸೇನೆಯ ಸಂಹಾರಿ" ಅಂದರೆ ಸೇನೆಯ ವಿಜಯ ಎಂಬ ಹೆಸರಿದೆ.

ಶಿವಮೊಗ್ಗ ಜಿಲ್ಲೆ ಅದೇ ತಾಲ್ಲೂಕು ಮಾಸೂರು ಗ್ರಾಮದಲ್ಲಿರುವ ಪರ್ಶಿಯನ್ ಭಾಷೆಯಲ್ಲಿರುವ ಶಾಸನವು[೨೦] ಮಾಸೂರಿನ ಮದಗದ ಕೆರೆಯ ಕೋಡಿಯ ಮೇಲಿದೆ. ಕೋಟೆಯನ್ನು ಮುಖ್ಯ ಸೇನಾಪತಿ ರಾಜ ಫರೀದ್ ಅವರ ಪುತ್ರ ಮೊಹಮ್ಮದ್ ಖಾನನು ಹಿಜರಿ ೧೦೪೨ ಎಂದರೆ ಕ್ರಿ.ಶ. ೧೬೩೨-೩೩ರಲ್ಲಿ ಆರಂಭಿಸಿದ್ದು ೧೬೩೫-೩೬ರಲ್ಲಿ

ಇದರ ಕೆಲಸ ಪೂರ್ಣವಾಯಿತು ಎಂದಿದೆ. ಈ ಕಾರ್ಯವು ಮೊಹಮ್ಮದ್ ಆದಿಲ್ ಷಾಃ ದೊರೆಯ ಕಾಲದಲ್ಲಿ ನಡೆಯಿತು ಎಂದು ಶಾಸನದಲ್ಲಿ ಹೇಳಿದೆ.

ಬಿಜಾಪುರ ಜಿಲ್ಲೆ ಬಿಜಾಪುರದಲ್ಲಿರುವ ಅಮೀನ್ ಚಿಂದಗಿ ಪೀರ್ ದರ್ಗಾದ ಕಂಬದ ಮೇಲಿರುವ ಶಾಸನವು[೨೧] ಅರಬ್ಬಿ ಹಾಗೂ ಪರ್ಶಿಯನ್ ಭಾಷೆಗಳಲ್ಲಿದೆ. ಇದು ಮಂತ್ರಿಗಳಲ್ಲಿ ಮುಖ್ಯನಾದವನೂ, ರಾಜರು ದಯಪಾಲಿಸುತ್ತಿದ್ದ ಫರ್‌ಜಂದ್ (ಕುಮಾರ) ವಿಂಬ ಬಿರುದನ್ನು ಪಡೆದವನೂ, ಮಲೆನಾಡು-ಕರ್ನಾಟಕಗಳಲ್ಲಿ ಜಯಿಸಿರುವವನೂ, ಕೋಟೆಗಳನ್ನು ಅಧೀನಪಡಿಸಿ ಕೊಂಡವನೂ ಆದ ಅಫ್ಜಲ್‌ಖಾನ್ ಮೊಹಮ್ಮದ್.ಆಹಿಯ ರಾಜಾಜ್ಞೆಯ ಮೇರೆಗೆ ಮತ್ತು ಅಧೀನ ಅಧಿಕಾರಿಯಾದ ಮೊಹಮ್ಮದನ ವಿನಂತಿಯ ಮೇರೆಗೆ ಕೌವ್ಲನಾಮ ಅಂದರೆ ಕೌವ್ಲ ಕರಾರುಪತ್ರವನ್ನು ಹೊರಡಿಸ ಲಾಗಿದೆ. ಇದು ಆತನೇ ನಿರ್ಮಿಸಿದ ಪೇಟೆಯನ್ನು (ಹೆಸರು ಹೇಳಿಲ್ಲ) ಕುರಿತಾದದ್ದು. ಈ ಕೌವ್ಲನಾಮಾ ವಿವರಿಸುವು ದೇನೆಂದರೆ : ವ್ಯಾಪಾರಿಗಳು, ರತ್ನಪಡಿ ವ್ಯಾಪಾರಿಗಳು, ಚಾತಿಗಳು (?) ಮತ್ತು ಸಣ್ಣ ದೊಡ್ಡ ಕಿರಾಣಿ ವ್ಯಾಪಾರಿಗಳು ತಮ್ಮ ಆಸ್ತಿಗೆ ಹಕ್ಕುದಾರರಾದ ಔರಸ ಪುತ್ರರು ಇಲ್ಲದೆ ಮರಣ ಹೊಂದಿದಾಗ ಕಂದಾಯಾಧಿಕಾರಿಗಳು ಮತ್ತು ಖಾಜಿ ಎದುರಿಗೆ ತಮ್ಮ ಸ್ಥಿರ ಇಲ್ಲವೆ ಚರ ಆಸ್ತಿಯನ್ನು ಮತ್ತು ರತ್ನ ಇತ್ಯಾದಿ ಅಮೂಲ್ಯ ಆಭರಣಗಳನ್ನು ನಿಧನ ಹೊದಿದ ವ್ಯಕ್ತಿಯ ಸಂಬಂಧಿಗಳಲ್ಲಿ ಆ ಸಂಬಂಧಿಗಳ ಸಂಬಂಧಿಗಳಲ್ಲಿ ಬಡವರು ಶ್ರೀಮಂತರು ಎನ್ನದೆ ಹಂಚಬೇಕು ಇಲ್ಲದಿದ್ದರೆ ಆತನಿಗೆ ಪುಣ್ಯವಾಗಲಿಯೆಂದು ದಾನ ಮಾಡಬೇಕು ಈ ಶಾಸನವು ಹಿಜರಿ ೧೦೬೨ ಅಂದರೆ ಕ್ರಿ.ಶ. ೧೬೫೨ ರದ್ದಾಗಿದ್ದು ಮೊಹಮ್ಮದ್ ಆದಿಲ್ ಷಾಃ ದೊರೆಯ ಆಳ್ವಿಕೆಗೆ ಸಂಬಂಧಿಸಿದೆ. ಅಫ್ಜಲ್ ಖಾನಿ ಇದರ ಲಿಪಿಕಾರ, ಅಲೀ ಉಲ್ ಹುಸ್ಯೆನೀ ಪುತ್ರ ಹಾಜಿ ಸಯ್ಯಿದ್ ಹಖ್ವಾನಿ ಇದನ್ನು ರಚಿಸಿದ ಎಂದು ಶಾಸನದಲ್ಲಿ ಹೇಳಿದೆ.

ಕ್ರಿ.ಶ. ೧೬೮೭ರಲ್ಲಿ ಮೊಘಲ ದೊರೆ ಔರಂಗಜೇಬನು ಕರ್ನಾಕಟವನ್ನು ತನ್ನ ಅಧೀನಕ್ಕೆ ಒಳಪಡಿಸಿಕೊಂಡನು. ರಾಯಚೂರು ಜಿಲ್ಲೆ ಲಿಂಗಸಗೂರು ತಾಲ್ಲೂಕಿನ ಜಲದುರ್ಗದಲ್ಲಿರುವ ಮೊಹಮ್ಮದ್ ಸರ್ವರ್ ಅವರ ದರಗಾದ ಬಳಿಯ ಕೋಟೆಯೊಳಗೆ ಹಿಂದೀ ಹಾಗೂ ಪರ್ಶಿಯನ್ ಭಾಷೆಗಳಲ್ಲಿರುವ ಔರಂಗಜೇಬನ ಕಾಲದ ಶಾಸನ[೨೨] ದೊರೆತಿದೆ. ಇದರಲ್ಲಿ ಔರಂಗಜೇಬನ ಮನೆಯಲ್ಲಿ ನೌಕರನಾಗಿ ಹುಟ್ಟಿದ ಚಿತ್ರಾಂಗದ ಬುಂದೇಲನ ಮಗ ತಾಕೋಕ್ ಸಿಂಗ್‌ನ ಹೆಸರನ್ನು ಉಲ್ಲೇಖಿಸಿದೆ. ಈ ಶಾಸನ ಕಾಲ ಹಿಜರಿ ೧೧೧೧ ಅಂದರೆ ಇದು ಕ್ರಿ.ಶ. ೧೬೯೯-೧೭೦೦ಕ್ಕೆ ಸಮನಾಗುತ್ತದೆ. ಜಲದುರ್ಗ ಕೋಟೆಯಲ್ಲಿ ದೊರಕಿರುವ ಈ ಶಾಸನದಿಂದ ಈ ಕೋಟೆಯು ತಾಕೋಕನ ವಶದಲ್ಲಿತ್ತೆಂದು, ಒಟ್ಟಾರೆಯಾಗಿ ಈ ಪ್ರಾಂತ್ಯವು ಔರಂಗಜೇಬನ ಅಧೀನಕ್ಕೆ ಒಳಪಟ್ಟಿತ್ತೆಂದು ದೃಢಪಡುತ್ತದೆ.

ಬೆಳಗಾವಿ ಜಿಲ್ಲೆ ರಾಯಬಾಗ್ ತಾಲ್ಲೂಕು ರಾಯಬಾಗ್ ನಗರದ ಮೈದಾನವೊಂದರ ಅಂಚಿನಲ್ಲಿ ಸ್ಟೇಷನ್ ರಸ್ತೆಯ ಮೋರಿಯ ಹತ್ತಿರದಲ್ಲಿ ಕಲ್ಲುಚಪ್ಪಡಿಯ ಮೇಲೆ ಒಂದು ಪರ್ಶಿಯನ್ ಭಾಷೆಯ ಶಾಸನವಿದೆ.[೨೩] ಇದು ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿದೆ. ಇದರಲ್ಲಿ ಮುಸ್ತಫಾಖಾನನು ಮುಸ್ತಾಫಾಬಾದ್ ಎಂಬ ಹೆಸರಿನ ಪೇಟೆಯೊಂದನ್ನು ನಿರ್ಮಿಸಿದ ವಿಷಯವಿದೆ. ಅಲ್ಲದೆ ಹಣ್ಣುಗಳನ್ನು ಬೆಳೆಯುವ ತೋಟಗಳಿಗೆ ಕೆಲವು ತೆರಿಗೆಗಳ ರಿಯಾಯಿತಿ ಮಾಡಿರುವ ವಿಷಯವೂ ಇದರಲ್ಲಿ ದಾಖಲಿಸಿದೆ. ರಾಯಬಾಗ್ ವಸತಿ ಪ್ರದೇಶಕ್ಕೆ ಹತ್ತಿರುವಿರುವ ಹೊಳೆಯ ದಂಡೆಯ ಮೇಲಿರುವ ಕಲ್ಲುಚಪ್ಪಡಿಯ ಮೇಲೆ ಒಂದು ತ್ರುಟಿತವಾದ ಪರ್ಶಿಯನ್ ಭಾಷೆಯ ಶಾಸನವಿದೆ.[೨೪] ತೇದೀ ವಿವರಗಳಿಲ್ಲದಿದ್ದರೂ ಇದನ್ನು ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿಸಬಹುದು. ಇದು ಮೂರು ವರ್ಷಗಳವರೆಗೆ ಹಣ್ಣಿನ ತೋಟಗಳಿಗೆ ಕೊಟ್ಟ ತೆರಿಗೆಯ ವಿನಾಯಿತಿಯನ್ನು ದಾಖಲಿಸಿದಂತಿದೆ. ರಾಯ್‌ಬಾಗ್ ಇಂದಿಗೂ ಹಣ್ಣಿನ ತೋಟಗಳಿಗೆ ವಿಶೇಷವಾಗಿ ಬಾಳೆಹಣ್ಣಿನ ತೋಟಗಳಿಗೆ ಪ್ರಸಿದ್ಧಿ ಪಡೆದಿರುವುದನ್ನು ನಾವು ಗಮನಿಸಬಹುದು. ಹೀಗೆ ನಾವು ಈ ಎರಡು ಶಾಸನಗಳಲ್ಲಿ ಹಣ್ಣುಗಳನ್ನು ಬೆಳೆಯುವ ರೈತರಿಗೆ ತೆರಿಗೆ ರಿಯಾಯಿತಿ ಮಾಡಿ ಬೆಳೆಗಾರರಿಗೆ ಹೆಚ್ಚು ಹೆಚ್ಚು ಹಣ್ಣುಗಳನ್ನು ಬೆಳೆಯಲು ಪ್ರೋತ್ಸಾಹಿಸಿದುದನ್ನು ಕಾಣಬಹುದು.

ತುಮಕೂರು ಜಿಲ್ಲೆ ಶಿರಾ ತಾಲ್ಲೂಕು ಶಿರಾದ ಮಲಿಕ್ ರಿಹಾನ್‌ನ ಸಮಾಧಿಯಲ್ಲಿರುವ ಪರ್ಶಿಯನ್ ಭಾಷೆಯ ಶಾಸನವು[೨೫] ಶಿರಾದ ಸುಬೇದಾರನಾದ ಮಲಿಕ್ ರಿಹಾನ್‌ಸಾ ನೌಕರಿಗಾಗಿ ಈ ಪ್ರದೇಶಕ್ಕೆ ಹಿಜರಿ ೧೦೪೭ರಲ್ಲಿ ಅಂದರೆ ಕ್ರಿ.ಶ. ೧೬೩೭-೩೮ರಲ್ಲಿ ಬಂದನು ಮತ್ತು ಹಿಜರಿ ೧೦೬೧ ಅಂದರೆ ಕ್ರಿ.ಶ. ೧೬೫೦-೫೧ ರಲ್ಲಿ ನಿಧನ ಹೊಂದಿದನೆಂದ ಈ ಶಾಸನ ತಿಳಿಸುತ್ತದೆ. ಈ ಶಾಸನವು ರಿಹಾನನ ಗುಣಗಾನ ದೊಂದಿಗೆ ಅವನು ಈ ಪ್ರದೇಶದ ಸೌಂದರ್ಯವನ್ನು ಹೆಚ್ಚಿಸಲೋಸುಗ ಇಲ್ಲಿಗೆ ಬಂದನೆಂದಿದೆ.

ಶಿವಮೊಗ್ಗ ಜಿಲ್ಲೆ ಚನ್ನಗಿರಿ ತಾಲ್ಲೂಕಿ ಮುಹಿದಿನ್ ಪುರದಲ್ಲಿ ಬಡೇ ಸಾಹೇಬರ ಕೆರೆಯ ಬಳಿ ದೊರೆತಿರುವ ಪರ್ಶಿಯನ್ ಶಾಸನವು[೨೬] ಹಿಜರಿ ವರ್ಷ ೧೦೬೪ ಅಂದರೆ ಕ್ರಿ.ಶ. ೧೬೫೩-೫೪ ತೇದಿಯನ್ನು ಹೊಂದಿದ್ದು ಮುಹಮ್ಮದ್ ಆದಿಲ್ ಷಾಹನ ಕಾಲಕ್ಕೆ ಸೇರಿದೆ. ಮಂತ್ರಿ ಮತ್ತು ಪ್ರಧಾನ

ದಂಡನಾಯಕನಾದ ಖಾನ್-ಐ-ಖಾನ್‌ನ ಬಳಿಯಿದ್ದ, ಸುಲ್ತಾನ್ ನಗರದ ಮುಆಮ್ಲದ ಹವಾಲ್ದಾರನಾದ ಬರೇ ಮನಲಿಕ್ ಎಂಬುವನು ವಲಿ-ಸರೋವರ ಎಂಬ ಕೆರೆಯನ್ನು ಕಟ್ಟಿಸಿದನೆಂದು ಈ ಶಾಸನದಲ್ಲಿ ಹೇಳಿವೆ. ವಲಿಪುರವೆಂಬ ಸ್ಥಳವನ್ನು ಬರೇಮಲಿಕ್‌ನ ಮಗನಾದ ಶೇಕ್ ಮಲಿಕ್‌ನಿಗೆ ಶಾಶ್ವತವಾಗಿ ನೀಡಿದುದಾಗಿಯೂ ಇದರಲ್ಲಿ ಹೇಳಿದೆ. ಈ ಶಾಸನದಲ್ಲಿ ಹೇಳಿರುವ ಸ್ಥಳನಾಮಗಳು ಮತ್ತು ವಸತಿ ನೆಲೆಗಳು ಹೊಸ ಮಾಹಿತಿಗಳಾಗಿವೆ.

ಶಿವಮೊಗ್ಗ ಜಿಲ್ಲೆ ಹೊನ್ನಾಳಿ ತಾಲ್ಲೂಕು ಹೊನ್ನಾಳಿಯ ಜಾಮಿಯಾ ಮಸೀದಿಯಲ್ಲಿರುವ ಪರ್ಶಿಯನ್ ಶಾಸನವು[೨೭] ಕ್ರಿ.ಶ. ೧೬೭೩ಕ್ಕೆ ಸೇರಿದ ಶಾಸನ. ಈ ಶಾಸನವು ಹೊಯ್ನಹಳ್ಳಿ ಅಂದರೆ ಹೊನ್ನಾಳಿ ಗ್ರಾಮವನ್ನು ಗೋವಿಂದರಾವ್ ಎಂಬುವನು ದಿಯಾನತ್ ರಾವ್‌ಗೆ ನೀಡಿದನೆಂದು ಮತ್ತು ದಿಯಾನತ್ ಬುರುಜು ಕಟ್ಟಿಸಿದನೆಂದು ಹಳಿದೆ. ಆದಿಲ್‌ಶಾಹಿ ಮನೆತನದ ದೊರೆ ಸಿಕಂದರ್‌ಶಾಃನ ಹೆಸರೂ ಈ ಶಾಸನದಲ್ಲಿದೆ. ಇದು ಗೋವಿಂದರಾವ್ ಎಂಬುವನು ಬುರುಜು ಕಟ್ಟಿಸಿದ ಹಾಗೂ ಹೊನ್ನಾಳಿಯಲ್ಲಿ ದಿಯಾಸತ್ ರಾವ್‌ಗೆ ನೀಡಿದ ಮಾಹಿತಿಯನ್ನು ನೀಡುವ ಏಕೈಕ ಶಾಸನವಾಗಿದೆ.

ಬಿಜಾಪುರ ಜಿಲ್ಲೆ ಬಿಜಾಪುರದಲ್ಲಿರುವ ಮಲಿಕ್ ಮೈದಾನ ತೋಪಿನ ಮೇಲಿರುವ ಪರ್ಶಿಯನ್ ಶಾಸನ[೨೮] ರಾಜನ ಹೆಸರು ಆಲಂಗೀರ್ ಎಂದಿವೆ. ಅಂದರೆ ಔರಂಗ್‌ಜೇಬ್, ಇದರ ಕಾಲ ಹಿಜರಿ ೧೦೯೭ ಅಂದರೆ ಕ್ರಿ.ಶ. ೧೬೮೫–೮೬ ಈ ಶಾಸನದಲ್ಲಿ ಔರಂಗ್‌ಜೇಬ್ ಬಾದಶಹನು ಬಿಜಾಪುರ ರಾಜ್ಯವನ್ನು ಗೆದ್ದನೆಂದೂ ಈ ತೋಪನ್ನು ವಶಪಡಿಸಿ ಕೊಂಡನೆಂದೂ ಇಲ್ಲಿ ಉಲ್ಲೇಖಿಸ ಲಾಗಿದೆ.

ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕು ಕವಲೇ ದುರ್ಗದಲ್ಲಿರುವ ಪುರಾತನ ಮಸೀದಿಯೊಂದರ ಒಳಗಡೆ 'ಮಿಹರಾಬ್'ನ ಎಡ ಮತ್ತು ಬಲಭಾಗಗಳಲ್ಲಿ ಅರಬಿ ಭಾಷೆಯ ಎರಡು ಶಾಸನಗಳಿವೆ.[೨೯] ಇವುಗಳಲ್ಲಿ ಒಂದನೆಯ ಶಾಸನ ದಲ್ಲಿ 'ಮಸ್ಜಿದಿ ಬಾಲಾ' ಎಂದಿದೆ. 'ಮಸಿದಿ' ಎನ್ನುವುದು ಉರ್ದುವಿನಲ್ಲಿ 'ಮಸ್ಜಿದ್' ಅಂದರೆ ಮಸೀದಿ ಅಥವಾ ಪ್ರಾರ್ಥನಾ ಸ್ಥಳ ಎಂದರ್ಥ. ಇದನ್ನು ಅರಬ್ಬೀ ಭಾಷೆಯಲ್ಲಿ 'ಮಸ್ಜಿದುಲ್', ಮಸ್ಜಿದೂನ್ ಎನ್ನುವರು. 'ಬಾಲಾ' ಅಂದರೆ ಎತ್ತರವಾದ, ಉನ್ನತವಾದ, ಶ್ರೇಷ್ಠವಾದ ಅಥವಾ ಪವಿತ್ರವಾದ ಎಂದರ್ಥೈಸಬಹುದು. ಅಂದರೆ ಇದೊಂದು ಶ್ರೇಷ್ಠವಾದ ಅಥವಾ ಪವಿತ್ರವಾದ ಮಸೀದಿ ಎಂದರ್ಥ. ಹೀಗೆ ಈ ಮಸೀದಿಯನ್ನು 'ಮಸ್ಜಿದಿ ಬಾಲಾ' ಅಂದರೆ 'ಶ್ರೇಷ್ಠವಾದ' ಅಥವಾ 'ಪವಿತ್ರವಾದ ಮಸೀದಿ' ಎಂದು ಕರೆದಿದೆ. ಎರಡನೆಯ ಶಾಸನವು 'ಬಿಸ್ಮಿಲ್ಲಾಹಿ ರ್ರಹಮಾನಿರ್ರಹೀಮ್' ಅಂದರೆ ಆ 'ಪರಮ ದಯಾಮಯಿಯೂ ಕರುಣಾನಿಧಿಯೂ ಆಗಿರುವ ಅಲ್ಲಾಹ್‌ನ ನಾಮದಿಂದ' ಎಂಬ ಅರ್ಥದಲ್ಲಿ ಮುಸ್ಲಿಮರ ದೇವನಾದ 'ಅಲ್ಲಾಹ್'ನ ಸ್ತುತಿಯಿಂದ ಪ್ರಾರಂಭಿಸುವಾಗ ಈ ಮೇಲಿನ ಸ್ತುತಿಯಿಂದ ಪ್ರಾರಂಭಿಸುತ್ತಾನೆ. ಈ ಶಾಸನದ ಎರಡು ಮತ್ತು ಮೂರನೆಯ ಸಾಲಿನಲ್ಲಿ 'ಲಾಯಿಲಾಹ ಇಲ್ಲಿಲ್ಲಾಹು ಮೊಹಮ್ಮದ್ ರಸೂಲಿಲ್ಲಾಹ್' ಎಂದಿದೆ. ಇದರ ಅರ್ಥ 'ಅಲ್ಲಾಹ್‌ನನ್ನು ಹೊರತುಪಡಿಸಿ ಬೇರೆ ಯಾವ ದೇವರೂ ಇಲ್ಲ, ಮೊಹಮ್ಮದ್ ಅಲ್ಲಾಹ್‌ನಿಂದ ಕಳುಹಿಸಲ್ಪಟ್ಟ ಪ್ರವಾದಿ ಅಂದರೆ ಸಂದೇಶವಾಹಕ ಎಂದರ್ಥ. ಈ ಶಾಸನದ ಕೊನೆಯ ಎರಡು ಪಂಕ್ತಿಗಳಲ್ಲಿ 'ಅಬೂಬಕರ್, ಉಮರ್, ಉಸ್ಮಾನ್, ಅಲಿ ರೆಜ್ವಾದ್' ಎಂದು ನಾಲ್ಕು ಖಲೀಫರ ಅಂದರೆ ಮೊಹಮ್ಮದ್ ಪೈಗಂಬರ (ಸ.ಅಸ) ನಂತರದ ಇಸ್ಲಾಂ ಧರ್ಮಪ್ರಸಾರಕರ ಹೆಸರುಗಳಿವೆ. ಈ ಶಾಸನಗಳಲ್ಲಿ ತೇದಿ ವಿವರಗಳಿಲ್ಲದಿದ್ದರೂ ಇವು ಕೆಳದಿ ಅರಸ ವೆಂಕಟಪ್ಪ ನಾಯಕನು ಕಟ್ಟಿಸಿ ದತ್ತಿ ಬಿಟ್ಟಿರುವ ಮಸೀದಿಯಲ್ಲಿರುವುದರಿಂದ (ಕ್ರಿ.ಶ. ೧೬೨೭) ಇವನ್ನ ಕ್ರಿ.ಶ. ೧೭ನೆಯ ಶತಮಾನಕ್ಕೆ ಸೇರಿಸಬಹುದು.

ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕು ಅಜ್ಜಿಗುಡ್ಡೆ ಗ್ರಾಮದ ಜೋಡೀದಾರ್ ವೆಂಕಟೇಶಯ್ಯನವರ ವಶದಲ್ಲಿದ್ದ ಒಂದೇ ಹಲಗೆಯ ತಾಮ್ರಶಾಸನವು[೩೦] ಪರ್ಶಿಯನ್ ಭಾಷೆಯಲ್ಲಿದೆ. ಇದರಲ್ಲಿ ರಸೂಲ್‌ಪುರ ಅಥವಾ ಚಿಕ್ಕನಾಯಕನಹಳ್ಳಿ ವೈದ್ಯ ನುಸ್ರು ಪಂಡಿತ್, ಸಷು ಪಂಡಿತ್ ಎಂಬುವರಿಗೆ ಬೊಮ್ಮಲಾಪುರದ ಜಮೀನನ್ನು ಇನಾಂ ಆಗಿ ಕೊಟ್ಟಿರುವ ಸಂಗತಿ ಇದೆ. ಅಲ್ಲದೆ ಇದರಲ್ಲಿ ಎಫ಼್‌ಬೊನ್ ಪತಿ, ಮೊಹಿಮ್ ಪತಿ, ಲಫಿಮ್ ಪತಿ ಮುಂತಾದ ತೆರಿಗೆಗಳನ್ನು ಸೇರಿಸಿ ಈ ಜಮೀನನ್ನು ದಾನವಾಗಿ ಕೊಟ್ಟಿರುವ ವಿಷಯವಿದೆ. ಖಾನ್-ಏ-ಆಜಂ ರಣದುಲ್ಲಾಖಾನ್ ಹಾಗೂ ಅವನ ಮಹಲ್ದಾರ್‌ರ ಸಮಕ್ಷಮದಲ್ಲಿ ಈ ದಾನ ಮಾಡಿರುವುದಾಗಿ ಇದರಲ್ಲಿ ಹೇಳಿದೆ. ಇದರಲ್ಲಿ ಕೊಟ್ಟಿರುವ ಹಿಜರಿ ಶಕೆ ೧೦೮೭ ಕ್ರಿ.ಶ. ೧೬೭೬ಕ್ಕೆ ಸರಿಹೊಂದುತ್ತದೆ. ಇಲ್ಲಿ ಚಿಕ್ಕನಾಯಕನ ಹಳ್ಳಿಯನ್ನು ರಸೂಲ್‌ಪುರ ಎಂದು ಕರೆದಿರುವುದು ಗಮನಾರ್ಹ.

ತುಮಕೂರು ಜಿಲ್ಲೆ ಶಿರಾ ತಾಲ್ಲೂಕು ಓಜ, ಕುಂಟೆ ಗ್ರಾಮದ ಮನೆಯೊಂದರ ಗೋಡೆಗೆ ಸೇರಿಸಿ ಕಟ್ಟಿರುವ ಕಲ್ಲಿನಲ್ಲಿರುವ ಕ್ರಿ.ಶ. ೧೬೮೯ರ ಪರ್ಶಿಯನ್ ಭಾಷೆಯ ಶಾಸನವು[೩೧] ಅಲ್ಲಾಹ್ ಅಥವಾ ಮುಸ್ಲಿಮರ ದೇವರ ಸ್ತುತಿಯಿಂದ ಪ್ರಾರಂಭವಾಗಿ 'ಅಲ್ಲಾಹ್‌ನೊಬ್ಬನೇ ಆರಾಧನೆಗೆ ಯೋಗ್ಯನಾದವನು' ಮತ್ತು 'ಮೊಹಮ್ಮದ್ ದೇವರು

ಕಳುಹಿಸಿದ ಪ್ರವಾದಿ' ಎಂಬ ಇಸ್ಲಾಂ ಧರ್ಮದ ಪ್ರಥಮ ತತ್ತ್ವವನ್ನು ದಾಖಲಿಸಿದೆ.

ಕೊಪ್ಪಳ ಜಿಲ್ಲೆ ಯಲಬುರ್ಗ ತಾಲ್ಲೂಕು ಕುಕನೂರಿನಲ್ಲಿರುವ ಪರ್ಶಿಯನ್ ಭಾಷೆಯ ಶಾಸನವು[೩೨] ಕುಕನೂರು ಕೋಟೆಯೊಳಗಿನ 'ಮಸ್ಜಿದ್ ಅಂದ್ರೂನಿ ಕಿಲಾ' ಎಂಬ ಮಸೀದಿಯಲ್ಲಿದೆ. ಇದರ ಅರ್ಥ ಕುಕನೂರು ಕೋಟೆಯೊಳಗಿರುವ ಮಸೀದಿಯಲ್ಲಿ ಶಾಸನ ಎಂದು. ಇದನ್ನು ಚಕ್ರವರ್ತಿ ಔರಂಗಜೇಬ್ ಬಾದಷಾಃನ ಆಳ್ವಿಕೆಯ ಕಾಲದಲ್ಲಿ ಬರೆಯಲಾಗಿದೆ. ಇದರಲ್ಲಿ ಮಸೀದಿಯ ನಿರ್ಮಾಣದ ವಿಷಯವಿದೆ. ರಾಜನ ಆಳ್ವಿಕೆಯ ೪೦ನೇ ವರ್ಷದಲ್ಲಿ ಷೇರ್ ಖಾನ್‌ನೆಂಬ ಫೌಜ್‌ದಾರನ ಕದಕ್ ಅಂದರೆ ಗದಗದ ಅದಿಕಾರಿಯ ಸಹೋದರ ಅಬ್ದುಲ್ ರಸೂಲ್ ಎಂಬಾತನು ಹಿಜರಿ ೧೧೦೮ ಎಂದರೆ ಕ್ರಿ.ಶ. ೧೬೯೮ರಲ್ಲಿ ಈ ಮೇಲಿನ ಮಸೀದಿಗೆ ಅಸ್ತಿಭಾರ ಹಾಕಿದನೆಂದು ಹೇಳಿದೆ. ಇಲ್ಲಿ ಗದಗವನ್ನು ಕದಕ್ ಎಂದು ಕರೆದಿರುವುದು ಹಾಗೂ ಆಡಳಿತಕ್ಕೆ ಸಂಬಂಧಪಟ್ಟಂತೆ 'ಫೌಜ್‌ದಾರ್' ಎಂಬ ಹೆಸರು ಈ ಶಾಸನದಲ್ಲಿ ಬಂದಿರುವುದು ಗಮನಾರ್ಹವಾಗಿದೆ.

ತುಮಕೂರು ಜಿಲ್ಲೆ ಶಿರಾ ತಾಲ್ಲೂಕು ಬರಗೂರು ಗ್ರಾಮದ ಪಟೇಲರ ವಶದಲ್ಲಿದ್ದ ಒಂದೇ ಹಲಗೆಯ ತಾಮ್ರಶಾಸನವು[೩೩] ಕನ್ನಡ ಲಿಪಿ ಮತ್ತು ಭಾಷೆಯಲ್ಲಿದೆ. ಇದರಲ್ಲಿ ಮೊಗಲ್ ದೊರೆಯು (ವಿಷಯ ಹೇಳಿಲ್ಲ) ಹೊಸೂರು ಗ್ರಾಮದ ಆದಾಯ ದುರುಪಯೋಗವಾಗುತ್ತಿದ್ದುದನ್ನು ಸರಿಪಡಿಸಿದ ವಿಷಯವಿದೆ. "ಮೊಗಲಾಯಿ ಪಾತುಶಾಹಿ ಸುಬೇದಾರ ನವಾಬ ದರಗಾ ಕುಲಿಖಾನ ಸಾಹೇಬರ ನಾಯಖ ಸೀರ್‍ಯೆಯಸೀಮೆಯ ಅಮಿಾನ ಪಉಜುದಾರ ಅಮಿಾರಬೇಗ ಸಹೇಬರು" ಹೊಸೂರು ಗ್ರಾಮದ ಆದಾಯ ದುರುಪಯೋಗವಾಗುತ್ತಿದ್ದುದರ ಬಗ್ಗೆ ಬಂದ ದೂರನ್ನು ಸ್ವೀಕರಿಸಿ ವಿಚಾರಣೆಯನ್ನು ಮಾಡಿದನು "ಹುಣುಸಿಹಳ್ಳಿಯ ತಿಂಮ್ಮೆಯ"ನೆಂಬುವ ಅನುಪಸ್ಥಿತಿಯಲ್ಲಿ ಆತನಿಗೆ ಕೊಟ್ಟ ಗುತ್ತಿಗೆಯನ್ನು ತಡೆಹಿಡಿದು ಈ ಗುತ್ತಿಗೆಯನ್ನು ಬೇರೊಬ್ಬರಿಗೆ ಹೆಚ್ಚಿನ ಆದಾಯ ಬರುವಂತೆ ಕೊಟ್ಟಿದ್ದಾಗಿಯೂ ತಿಳಿದುಬಂದಿದ್ದರಿಂದ "ಅಮಿಾನ ಪಉಜದಾರ ಅಮಿಾರಬೇಗ್ ಸಾಹೇಬರು" ಆ ಸ್ಥಳದ ಹಂನೆರಡು ಮಂದಿ "ಆಯಗಾರರನ್ನು ಕರೆಸಿ" ವಿಚಾರಿಸಿ ಅವರ ಹೇಳಿಕೆ ಪಡೆದು ನಿಜವಾದ ಹಕ್ಕುದಾರನಾದ "ಹುಣಸಿಹಳ್ಳಿ ತಿಂಮ್ಮೆಯನಿಗೆ" ಆ ದತ್ತಿಯನ್ನು ಅಂದರೆ ಗುತ್ತಿಗೆಯನ್ನು ಕೊಡಿಸಿದುದಾಗಿ ಈ ಶಾಸನದಲ್ಲಿ ಹೇಳಿದೆ. ಶಾಸನದ ಕೊನೆಯ ಭಾಗದಲ್ಲಿ ಸವಿವರವಾದ ಸಾಕ್ಷಿಗಳ ಪಟ್ಟಿಯನ್ನು ಕೊಟ್ಟಿದೆ. ಹೀಗೆ ಮೊಗಲ್ ದೊರೆಯೊಬ್ಬ ದುರುಪಯೋಗವಾಗಿದ್ದ ದತ್ತಿಯನ್ನು ವಿಚಾರಣೆ ಮಾಡಿಸಿ ನಿಜವಾದ ಹಕ್ಕುದಾರನಿಗೆ ಒಪ್ಪಿಸಿದ ವಿಷಯ ಇಲ್ಲಿ ಗಮನಾರ್ಹ. ಇಲ್ಲಿ ಹೇಳಿರುವ ಶಕವರ್ಷ ೧೬೪೨ ಕ್ರಿ.ಶ. ೧೭೨೦ಕ್ಕೆ ಸರಿ ಹೊಂದುತ್ತದೆ.

ಧಾರವಾಡ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕು ರಾಣಿಬೆನ್ನೂರು ಕೋಟೆಯ ಮಸೀದಿಯ ಮುಖ್ಯ ಪ್ರವೇಶದ್ವಾರದಲ್ಲಿರುವ ಪರ್ಶಿಯನ್ ಶಾಸನವು[೩೪] ಕೋಟೆಯ ರಕ್ಷಕ ಮೊಹಮ್ಮದ್ ರಹೀಮ್ ಸಾದಿಖ್ ಎಂಬಾತನು ಅಮೀರುಲ್ ಉಮ್ರಾ ನವಾಬ್ ಅಬ್ದುಲ್ ಮಜೀದ್ ಖಾನ್ ಹಾಗೂ ಮೊಘಲ್ ಚಕ್ರವರ್ತಿ ಮೊಹಮ್ಮದ್ ಷಾ ದೊರೆಯ ಆಡಳಿತದ ಕಾಲದಲ್ಲಿ ಹಿಜರಿ ೧೧೫೫ ಎಂದರೆ ಕ್ರಿ.ಶ. ೧೭೪೨ರಲ್ಲಿ ಈ ಮಸೀದಿಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ.

ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲ್ಲೂಕು ಎಳೆನಡು ಗ್ರಾಮದ ದೊಡ್ಡಮನೆ ಸಿದ್ದರಾಮೇಗೌಡರ ಬಳಿ ಇದ್ದ ಒಂದೇ ಹಲಗೆಯುಳ್ಳ ತಾಮ್ರಶಾನವು[೩೫] ಕನ್ನಡ ಲಿಪಿ ಮತ್ತು ಭಾಷೆಯಲ್ಲಿದೆ. ಈ ತಾಮ್ರ ಶಾಸನದ ಮೇಲುಗಡೆ ಇರುವ ಮೊಹರು ಮೂರು ಪಂಕ್ತಿಗಳಲ್ಲಿದ್ದು, ಇದು ಪರ್ಶಿಯನ್ ಲಿಪಿ ಹಾಗೂ ಭಾಷೆಯಲ್ಲಿದೆ. ಈ ಮೊಹರಿನಲ್ಲಿ "೧೧೩೨ ಮಹಮ್ಮದ್ ಷಾಹಿ ಬಾದಷಾಗಾಸಿ ಇಸ್ಮಾಲ್ ಖಾನ್ ಫಿದ್ವಿ' ಎಂದಿದೆ. ಇದೊಂದು ಮಹಮ್ಮದೀಯ ಶಾಸನವಾದರೂ ಇದು ಶಂಭುವಿನ ಸ್ತುತಿಯಿಂದ ಪ್ರಾರಂಭವಾಗಿರುವುದು ಗಮನಾರ್ಹವಾಗಿದೆ. ಇದು "ಬೂದಿಹಾಳು ಸ್ಥಳದ ಯಳನಡಿವಿನ ಗೌಡ ಸಿದ್ದನಗವುಡನ ಮಗ ಮರಿಸಿದ್ದೆಗವುಡಗೆ ಬರಸಿಕೊಟ್ಟ ಭೂಸ್ವಾಸ್ಥೆ ದಾನಪಟ್ಟೆ" ಎಂದು ಶಾಸನದಲ್ಲಿ ಹೇಳಿದೆ. ಅಲ್ಲದೆ "ನೀನು (ಮರಿಸಿದ್ದೆಗವುಡ) ನಂಮ್ಮ ಅರಮನೆಗೆ ಸ್ವಾಮಿಕಾರ್‍ಯ ಮುಖ್ಯವಾಗಿ ನಡಕೊಂಬದರಿಂದಲ್ಲು ಯಳನಡಿವಿನ ಗ್ರಾಮದ ಕೋಟೆ ಕೊತ್ತಲ ಹೊಸ್ತಾಗಿ ಹಾಕಿಸಿ ಬಹಳ ಮೆಹನತು ಮಾಡಿ ಯೇಕನಿಷ್ಠೆಯಲ್ಲಿ ನಡಕೊಂಬದರಿಂದಲ್ಲು ನಿನಗೆ ಯಿನಾಮತಿಸ್ವಾಸ್ಥೆ" ಎಂದು ಹೇಳಿದೆ. ಅಂದರೆ ಮರಿಸಿದ್ದೇಗೌಡನು ನಿಷ್ಠೆಯಿಂದ ಯಳನಾಡು ಕೋಟೆಯನ್ನು ಕಟ್ಟಿಕೊಟ್ಟುದುದನ್ನು ಮೆಚ್ಚಿ ಈ ದತ್ತಿಯನ್ನು ಕೊಟ್ಟಿದೆ. ಇಲ್ಲಿ ಹೇಳಿರುವ ಬೂದಿಹಾಳು ಮೊಗಲರ ಶಿರಾಪ್ರಾಂತ್ಯದ ಏಳು ಪರಗಣಗಳಲ್ಲಿ ಒಂದು.[೩೬] ಇಲ್ಲಿ ದತ್ತಿ ಕೊಟ್ಟಿರುವವರ ಹೆಸರನ್ನು ಹೇಳಿಲ್ಲ; ಬಹುಶಃ ಇದನ್ನು ಕೊಟ್ಟವರು ಈ ಮೊಹರಿನಲ್ಲಿ ಹೇಳಿರುವ ಇಸ್ಮಾಯಿಲ್ ಖಾನ್ ಅಥವಾ ಮೊಗಲ್ ದೊರೆ ಮುಹಮ್ಮದ್ ಷಾಃನಾಗಿರಬೇಕು. ಶಾಸನದ ಕೊನೆಯ ಭಾಗದಲ್ಲಿ ದತ್ತಿ ಕೊಟ್ಟ ಜಮೀನಿನ ಹಾಗೂ ಮನೆಯ ವಿವರಗಳ ಜೊತೆಗೆ" ನೀನು ನಿಂನ ಮಕ್ಕಳುಮರಿ ಪಾರಂಪರ್ಯವಾಗಿ ಅನುಭವಿಸಿಕೊಂಡು ಸುಕದಲ್ಲಿ ಯಿರುವದು" ಎಂದು ಹೇಳಿದೆ. ಇಲ್ಲಿ

ಕೊಟ್ಟಿರುವ ಶಾಲಿವಾಹನ ಶಕ ವರ್ಷ ೧೬೬೮ ಕ್ರಿ.ಶ. ೧೭೪೬ಕ್ಕೆ ಸರಿಹೊಂದುತ್ತದೆ.

ಕರ್ನಾಟಕದಲ್ಲಿ ನಮಗೆ ದೊರೆತಿರುವ ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ಶಾಸನಗಳು ಅವರ ರಾಜಕೀಯ ಕೊಡುಗೆಯ ಮೇಲೆ ಬಹಳಷ್ಟು ಬೆಳಕನ್ನು ಚೆಲ್ಲುತ್ತವೆ. ಸದ್ಯ ನನ್ನ ಗಮನಕ್ಕೆ ಬಂದಿರುವ ಇವರ ಶಾಸನಗಳ ಸಂಖ್ಯೆ ೭೬. ಇವುಗಳಲ್ಲಿ ೧೨ ಶಾಸನಗಳು ಹೈದರ್ ಅಲಿಯ ಕಾಲಕ್ಕೆ ಉಳಿದ ೬೪ ಶಾಸನಗಳು ಟಿಪ್ಪು ಸುಲ್ತಾನನ ಕಾಲಕ್ಕೂ ಸೇರಿವೆ. ಇವುಗಳಲ್ಲಿ ಬಹುಮುಖ್ಯವಾದ ಕೆಲವು ಶಾಸನಗಳನ್ನು ಇಲ್ಲಿ ಹೆಸರಿಸಿದೆ. ಇವರ ಶಾಸನಗಳಲ್ಲಿ ಹೆಚ್ಚಿನವು ಪರ್ಶಿಯನ್ ಮತ್ತು ಅರಬ್ಬೀ ಭಾಷೆಗಳಲ್ಲೂ ಉಳಿದವು ಉರ್ದು ಹಾಗೂ ಕನ್ನಡ ಭಾಷೆಗಳಲ್ಲಿ ಇವೆ. ಘಂಟೆಯ ಮೇಲಿರುವ ಒಂದು ಶಾಸನ ಲ್ಯಾಟಿನ್ ಭಾಷೆಯಲ್ಲಿದೆ.

ಹೈದರ್ ಅಲಿಯ ಕಾಲಕ್ಕೆ ಸೇರಿದ ಕ್ರಿ.ಶ. ೧೭೬೮ರ, ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕು ಆನವಟ್ಟಿ ಗ್ರಾಮದಲ್ಲಿರುವ ಕನ್ನಡ ಭಾಷೆಯ ಶಾಸನವು[೩೭] ಹಜ್ರತ್ ನವಾಬನು ಅಂದರೆ ನವಾಬ್ ಹೈದರ್ ಅಲಿಯು ಬೈಗ್ ಎಂಬುವನಿಗೆ ಆನವಟ್ಟಿಯ ಉಸ್ತುವಾರಿಗೆ ನೇಮಿಸಿದನೆಂದೂ ಅಲ್ಲಿ ಒಂದು ಮಸೀದಿಯನ್ನು ಕಟ್ಟಿಸಿದನೆಂದೂ ಹೇಳಿದೆ.

ತುಮಕೂರು ಜಿಲ್ಲೆ ಶಿರಾ ತಾಲ್ಲೂಕು ಶಿಬೀ ಅಗ್ರಹಾರದ ನರಸಿಂಹಸ್ವಾಮಿ ದೇವಾಲಯದ ಧರ್ಮಕರ್ತೃಗಳಿಂದ ಕರಣಿಕ ನಲ್ಲಪ್ಪನವರ ವಶದಲ್ಲಿದ್ದ ಶಾಸನದ ನಕಲು[೩೮] ಕನ್ನಡ ಭಾಷೆಯ ಶಾಸನವು ವರಾಹ ಸ್ತುತಿಯಿಂದ ಪ್ರಾರಂಭವಾಗುತ್ತದೆ. ಸೀರ್ಯಸೀಮೆ ಹುಂಜನಾಳ ಸಮ್ಮತಿನ ಶಿಬಿ ಗ್ರಾಮಕ್ಕೆ ಸೇರಿದ ಚಿಕ್ಕಶಿಬಿ ಗ್ರಾಮದಲ್ಲಿ ಗಿಡಗಳು ಬೆಳೆದು ಕಾಡಾಗಿ ಪರಿವರ್ತನೆಗೊಂಡಿತ್ತು. ಹೀಗೆ ಕಾಡಾಗಿ ಬೆಳೆದ ಗಿಡಗಳನ್ನೆಲ್ಲಾ ಕತ್ತರಿಸಿ ಶುಚಿ ಮಾಡಿದುದಾಗಿಯೂ ಪೂರ್ವದಲ್ಲಿ ಈ ಗ್ರಾಮದ ಭೂಮಿ ದೇವಸ್ಥಾನಕ್ಕೆ ಸೇರಿದ್ದರಿಂದ ಶೀರ್‍ಯದ ಸುಬೇದಾರ ಭಾಜೆ ಅಬ್ದುಲ್ಲ ರಹೀಂ ಮತ್ತು ಬಾಜೆ ಆಬ್ದುಲ್ಲರವರು, ಶೀರ್‍ಯದ ಕಟ್ಟೀಮನೆ ಸರ್ವಜನರ ಸಮ್ಮತಿಯಿಂದ ಪುನಃ ಅದೇ ದೇವಸ್ಥಾನಕ್ಕೆ ಖಾಯಂಯಾಗಿ ದತ್ತಿಯಾಗಿ ನೀಡಿದರೆಂದು ಈ ಶಾಸನದಲ್ಲಿ ಹೇಳಿದೆ. ಶಾಸನವು ಕೆಲವು ಶಾಪ ಪದ್ಯಗಳಿಂದಲೂ ಕೆಲವು ಸಾಕ್ಷಿದಾರರ ಒಪ್ಪಿತದಿಂದಲೂ ಕೊನೆಗೊಂಡಿದೆ. ಕ್ರಿ.ಶ. ೧೭೭೭ರ ಈ ಶಾಸನವು ಹೈದರ್ ಅಲಿಯ ಕಾಲಕ್ಕೆ ಸೇರಿದೆ.

ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕು ಗಂಜಾಮ್ ನಲ್ಲಿರುವ ಗುಂಬಜಿನ ಪಶ್ಚಿಮ ಗೋಡೆಯ ಮೇಲಿರುವ ಪರ್ಶಿಯನ್ ಭಾಷೆಯಲ್ಲಿರುವ ಕ್ರಿ.ಶ. ೧೭೮೨ರ ಶಾಸನವು[೩೯] ಹೈದರ್ ಅಲಿಯ ನಿಧನವನ್ನು ಮತ್ತು ಆತನ ಬೃಹತ್ ಗೋರಿಯ ನಿರ್ಮಾಣವನ್ನು ದಾಖಲಿಸಿದೆ. "ಚಿತ್ತೂರಿನ ಬಳಿ ಇರುವ ನರಸಿಂಗರಾಯನಪೇಟೆ ಎಂಬಲ್ಲಿ ನಡೆದ ಯುದ್ಧ ಒಂದರಲ್ಲಿ ತನ್ನ ಅರವತ್ತನೆಯ ವಯಸ್ಸಿನಲ್ಲಿ ೭ನೇ ಡಿಸೆಂಬರ್ ೧೭೮೨ರಲ್ಲಿ ಸಾವನ್ನಪ್ಪಿದ ಹೈದರ್‌ನ ಕಳೇಬರವನ್ನು ಮೊದಲು ಕೋಲಾರದಲ್ಲಿ ಫತೇ ಮಹಮ್ಮದನ ಗೋರಿಯ ಬಳಿಯೇ ಹೂಳಲಾಯಿತು. ನಂತರ ಅದನ್ನು ಅಲ್ಲಿಂದ ತೆಗೆದು ಟಿಪ್ಪು ನಿರ್ಮಿಸಿದ್ದ ಈ ಬೃಹತ್ ಗೋರಿಯಲ್ಲಿ ಹೂಳಲಾಯಿತು.[೪೦] ಈ ಶಾಸನವು ಕೆಲವು ಧರ್ಮಪ್ರವರ್ತಕರ ಹೆಸರುಗಳಿಂದ ಪ್ರಾರಂಭವಾಗಿ ನಂತರ ಗುಂಬಜಿನ ಬಹು ಸುಂದರವಾದ ವರ್ಣನೆಯನ್ನು ಕೊಡುತ್ತದೆ. ಇದರಲ್ಲಿ ಕವಿಯು ಗುಂಬಜನ್ನು ಚಂದ್ರ ಹಾಗೂ ಸೂರ್ಯರಿಗೆ ಹೋಲಿಸಿದ್ದಾನೆ. ಅದರ ಕಲಶದಿಂದ ಚಂದ್ರನು ಬೆಳಕು ತೆಗೆದು ಕೊಂಡಿದ್ದಾನೋ ಎಂಬಂತಿದೆ ಎಂಬುವುದಾಗಿಯೂ ಆ ಗುಂಬಜನ್ನು 'ಸುಂದರವಾದ ಮಲಗುವ ಕೊಠಡಿ' ಎಂಬುವುದಾಗಿ ಕವಿಯು ಕರೆದಿರುವುದು ಗಮನಾರ್ಹ ಸಂಗತಿ.

ಶ್ರೀರಂಗಪಟ್ಟಣ ಗಂಜಾಮ್‌ನಲ್ಲಿರುವ ಗುಂಬಜ್‌ನ ದಕ್ಷಿಣ ಗೋಡೆಯ ಮೇಲಿರುವ ಪರ್ಶಿಯನ್ ಭಾಷೆಯ ಶಾಸನವು[೪೧] ಇಸ್ಲಾಂ ಧರ್ಮದ ನಾಲ್ಕನೆಯ ಖಲೀಫನಾದ ಅಲಿ ಹೈದರ್ ಹಿಜಾಜ್ ಪ್ರದೇಶದ ಖೈಬರನ ಏಳುಕೋಟೆಯನ್ನು ಗೆದ್ದಂತೆ ಕರ್ನಾಟಕದ ಕೆಲವು ಭಾಗಗಳನ್ನು ಹೈದರ್ ಅಲಿಯು ಗೆದ್ದನೆಂದು ತಿಳಿಸುತ್ತದೆ.

ಶ್ರೀರಂಗಪಟ್ಟಣದಲ್ಲಿನ ಮಸಿದೀಗೆ ಸೇರಿದ ಕ್ರಿ.ಶ. ೧೭೮೨ರ ಪರ್ಶಿಯನ್ ಭಾಷೆಯ ಶಾಸನವು[೪೨] ಶ್ರೀರಂಗಪಟ್ಟಣದಲ್ಲಿ ಟಿಪ್ಪುಸುಲ್ತಾನನು ಕಟ್ಟಿಸಿದ ಬೃಹದಾಕಾರವಾದ ಮಸೀದಿಯ ವರ್ಣನೆಯನ್ನು ಹಾಗೂ ಅದರ ಕಾಲವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಟಿಪ್ಪುಸುಲ್ತಾನನು ಕಟ್ಟಿಸಿದ ಈ ಮಸೀದಿಯನ್ನು ಈ ಹಿಂದೆ ಸಾಲೋಮನ್ನನು ಕಟ್ಟಿಸಿದ ಎನ್ನಲಾದ 'ಅಕ್ಷ' ಎಂಬ ಅತಿ ಎತ್ತರವಾದ ಜೆರುಸೆಲಂನಿನ ಮಂದಿರಕ್ಕೆ ಹೋಲಿಸಿದೆ. ಈ ಮಸೀದಿಯ ಪ್ರಾರ್ಥನಾ ಸಭಾಗೃಹವನ್ನು 'ಮಾರ್ವ' ಎಂಬ ಅರಬ್ ದೇಶದ ಮಕ್ಕಾದಲ್ಲಿರುವ ಪರ್ವತಕ್ಕೆ ಹೋಲಿಸಿ ಅದರ ಮಿಹರಾಬ್ (pulpet) ಅನ್ನು ಮುಸ್ಲಿಮರ ಪವಿತ್ರ ಸ್ಥಳ ಮಕ್ಕಾದ ಇನ್ನೊಂದು ಹೆಸರಾದ 'ಬತ್' ಎಂದು ಶಾಸನದಲ್ಲಿ ಕರೆದಿದೆ.

ಕೋಲಾರ ಜಿಲ್ಲೆ ಕೋಲಾರದ ಬಗುಬಾವಿಯ ಮೇಲಿರುವ ಶಾಸನವು[೪೩] ಪರ್ಶಿಯನ್ ಭಾಷೆಯಲ್ಲಿದ್ದು ಹಿಜರಿ ೧೨೦೦ ಅಂದರೆ ಕ್ರಿ.ಶ. ೧೭೮೫ಕ್ಕೆ ಸೇರಿದ್ದ ಇದರಲ್ಲಿರುವ ಶಾಸನ ಪಾಠ ಹೀಗಿದೆ : "೧೨೦೦ ಹುವಲ್ ಹಾಫಿಜ್ ಕುಲೋಷಯಿನ್ ತನಲ್ ಮಾಯಿ ಕಡಬುಹ್" ಎಂದರೆ "ದೇವರು ಸರ್ವ ರಕ್ಷಕ ಮತ್ತು ಎಲ್ಲಾ ಜೀವಿಗಳ

ಬದುಕು ನೀರಿನಿಂದಲೇ" ಎಂಬ ಮಾತುಗಳು ಗಮನಾರ್ಹ ವಾಗಿದೆ.

ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಮೇಲುಕೋಟೆಯ ಕ್ರಿ.ಶ. ೧೭೮೫ರ ಕನ್ನಡ ಭಾಷೆಯಲ್ಲಿರುವ ಶಾಸನದಲ್ಲಿ[೪೪] ಟಿಪ್ಪು ಸುಲ್ತಾನನು ಮೇಲುಕೋಟೆಯ ನಾರಾಯಣಸ್ವಾಮಿ, ನರಸಿಂಹಸ್ವಾಮಿ ದೇವಸ್ಥಾನಗಳಿಗೆ ತನ್ನ ರಾಜಧಾನಿ ಶ್ರೀರಂಗಪಟ್ಟಣದಿಂದ ತನ್ನ ಹುಜೂರನಾಯಕ ಅಂದರೆ ಆಸ್ಥಾನ ನಾಯಕನಾದ ಶ್ರೀನಿವಾಸಚಾರಿ ಮತ್ತು ಹರಿಭಕ್ತಿಯ ಮುಖಾಂತರ ೨ ಗಂಡಾನೆ ಹಾಗೂ ೧೦ ಹೆಣ್ಣಾನೆಗಳನ್ನು ಮೇಲುಕೋಟೆಯ ಪಾರಪತಿ ಕಾಶಿರಾಉ ಹಾಗೂ ಮಿಾರ್‌ಜೈನ್ ಉಲ್‌ರ ಮೂಲಕ ದಾನ ಮಾಡಿದುದಾಗಿ ಹೇಳಿದೆ.

ಶ್ರೀರಂಗಪಟ್ಟಣದ ಗಂಜಾನಮ್‌ನಲ್ಲಿರುವ ಗುಂಬಜಿಗೆ ಸೇರಿದ ಪರ್ಶಿಯನ್ ಮತ್ತು ಅರೇಬಿಕ್ ಭಾಷೆಯ ಎರಡು ಶಾಸನಗಳು[೪೫] ಟಿಪ್ಪುಸುಲ್ತಾನನು ಅವಿಶ್ವಾಸಿಗಳ ಬಗ್ಗೆ ಅವನ ಸೈನಿಕರು ಅನುಸರಿಸಲು ಹೇಳಿದ ಮಾರ್ಗಗಳನ್ನು ತಿಳಿಸುತ್ತದೆ. ಧರ್ಮನಿಂದಕರೆನ್ನಲಾದ ಬನಿಖುರೈಜಗಳು ಸೋತು ಓಡಿ ಹೋದ ಮೇಲೂ ಅವರ ಜೊತೆಗೆ ಯುದ್ಧವನ್ನು ಮುಂದವರಿಸಬೇಕೆಂದು ಆಜ್ಞೆಯನ್ನು ಹೊರಡಿಸಿದುದಾಗಿ ಕ್ರಿ.ಶ. ೧೭೮೭ರ ಶಾಸನದಿಂದ ತಿಳಿದುಬರುತ್ತದೆ. ಅವರು ಮುಸ್ಲಿಮರೊಂದಿಗಿನ ಸ್ನೇಹ ಸಂಬಂಧಗಳನ್ನು ಕಡಿದುಕೊಂಡು ವೈರಿಗಳೊಂದಿಗೆ ಸೇರಿ ಆ ಒಕ್ಕೂಟಕ್ಕೆ ಸಹಾಯ ಮಾಡಿದುದೆ ಯುದ್ಧ ಮುಂದುವರಿಸುವ ಕಾರಣವೆಂದು ಈ ಶಾಸನದಿಂದ ತಿಳಿದುಬರುತ್ತದೆ. ಈ ಶಾಸನದಲ್ಲಿ ಮುಸ್ಲಿಮರ ಪವಿತ್ರ ಗ್ರಂಥ ಖುರಾನಿನ ಒಂದು ಪದ್ಯ ಅರೇಬಿಕ್ ಭಾಷೆಯಲ್ಲೇ ಬಂದಿರುವುದು ಗಮನಾರ್ಹ.

ಶ್ರೀರಂಗಪಟ್ಟಣದ ಗಂಜಾಮ್‌ನಲ್ಲಿರುವ ಗುಂಬಜಿನ ಸಂಕಿರ್ಣದಲ್ಲಿ ಪರ್ಶಿಯನ್ ಹಾಗೂ ಉರ್ದು ಭಾಷೆಗಳ ಸುಮಾರು ಇಪ್ಪತ್ತು ಶಾಸನಗಳಿದ್ದು[೪೬] ಅವುಗಳಲ್ಲಿ ಟಿಪ್ಪುಸುಲ್ತಾನನ ಕಾಲದ ಸುಮಾರು ಇಪ್ಪತ್ತು ಪ್ರಮುಖ ವ್ಯಕ್ತಿಗಳು ದೈವಾಧೀನರಾದ ಸಂಗತಿಗಳಿವೆ. ಈ ಎಲ್ಲಾ ಶಾಸನಗಳು ಕ್ರಿ.ಶ. ೧೭೮೮ ರಿಂದ ೧೮೧೦ರ ಕಾಲಕ್ಕೆ ಸೇರಿವೆ.

ಶ್ರೀರಂಗಪಟ್ಟಣದಲ್ಲಿರುವ ಕೋಟೆಯ ಆನೆಯ ಬಾಗಿಲ ಮೇಲಿರುವ ಕ್ರಿ.ಶ. ೧೭೯೧ರ ಪರ್ಶಿಯನ್ ಭಾಷೆಯ ಶಾಸನವು[೪೭] ಟಿಪ್ಪುಸುಲ್ತಾನನು ಕಟ್ಟಿಸಿದ ಕೋಟೆಯ ಶಂಕುಸ್ಥಾಪನೆಯ ವಿಚಾರವನ್ನು ಅದರ ಕಾಲವನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಅತ್ಯಂತ ಗಮನಾರ್ಹವಾದ ಸಂಗತಿಯೆಂದರೆ ಗ್ರಹಗತಿಗಳ ವರ್ಣನೆ. ಕೋಟೆಗಳನ್ನು, ಮಂದಿರಗಳನ್ನು ಕಟ್ಟುವಾಗ ಅಥವಾ ಇತರೆ ಶುಭಕಾರ್ಯಗಳನ್ನು ಮಾಡುವಾಗ ಆರಂಭಿಸುವಾಗ ಜ್ಯೋತಿಷ್ಯಶಾಸ್ತ್ರಕ್ಕೆ ಜನತೆ ಕೊಡುತ್ತಿದ್ದ ಮಹತ್ತ್ವವನ್ನು ಈ ವರ್ಣನೆಯಿಂದ ತಿಳಿದುಕೊಳ್ಳಬಹುದು.

ಬೆಂಗಳೂರು ಜಿಲ್ಲೆ ಬೆಂಗಳೂರು ವಸ್ತುಸಂಗ್ರಹಾಲಯದಲ್ಲಿರುವ ಪರ್ಶಿಯನ್ ಭಾಷೆಯ ಶಾಸನವು[೪೮] ಮೂಲತಃ ಟಿಪ್ಪುಸುಲ್ತಾನನ ಬೆಂಗಳೂರು ಅರಮನೆಗೆ ಸಂಬಂಧಿಸಿದೆ. ಇದರಲ್ಲಿ ಈ ಅರಮನೆಯನ್ನು 'ಫರೂಖ್ ಮಹಲ್' ಎಂದು ಹೆಸರಿಸಿದೆ. ಇದನ್ನು ಕ್ರಿ.ಶ. ೧೭೮೧–೮೨ರಲ್ಲಿ ಕಟ್ಟಲಾಯಿತೆಂದೂ, ಅದರಲ್ಲಿ ಚಿತ್ರಣ ಕೆಲಸ ಹಾಗು ಅಲಂಕರಣ ಕೆಲಸ ಕ್ರಿ.ಶ. ೧೭೯೧–೯೨ರಲ್ಲಿ ಸಂಪೂರ್ಣಗೊಂಡವೆಂದೂ ಈ ಶಾಸನದಲ್ಲಿ ಹೇಳಿದೆ. ಇಲ್ಲಿ ಈ ಅರಮನೆಗೆ 'ಫರೂಖ್ ಮಹಲ್' ಎಂದಿತ್ತು ಎಂಬ ಅಂಶ ಈ ಶಾಸನದಿಂದ ತಿಳಿದಿರುವುದು ಗಮನಾರ್ಹ ಸಂಗತಿ.

ಮೈಸೂರು ಜಿಲ್ಲೆ ಅದೇ ತಾಲ್ಲೂಕಿನ ಆನಂದೂರು ಗ್ರಾಮಕ್ಕೆ ಸೇರಿದ ಕ್ರಿ.ಶ. ೧೭೯೭ರ ಶಾಸನವು[೪೯] ಪರ್ಶಿಯನ್ ಭಾಷೆಯಲ್ಲಿದೆ. ಈ ಶಾಸನದ ಕಾಲದ ವಿವರಗಳನ್ನು 'ಮೌಲೂದಿ' ಮತ್ತು 'ಹಿಜರಿ' ಈ ದರಡೂ ಶಕೆಗಳಲ್ಲಿ ಕೊಟ್ಟಿರುವುದು ಗಮನಾರ್ಹವಾಗಿದೆ. ಇದು ಟಿಪ್ಪುಸುಲ್ತಾನನು ಕಾವೇರಿ ನದಿಗೆ ಅಡ್ಡಲಾಗಿ ಕಟ್ಟಿರುವ ಅಣಿಕಟ್ಟಿನ ವಿಷಯವನ್ನು ತಿಳಿಸುತ್ತದೆ. ಅವನು ಲಕ್ಷೋಪಲಕ್ಷ ಹಣವನ್ನು ವ್ಯಯಿಸಿ ಧರ್ಮಾರ್ಥ ಉದ್ದೇಶಕ್ಕಾಗಿ ೭೦ ಅಡಿಗಳಿಗಿಂತಲೂ ಹೆಚ್ಚಿನ ಎತ್ತರವಾದ ಈ ಅಣೆಕಟ್ಟನ್ನು ಕಟ್ಟಿಸಿದುದಾಗಿ ಶಾಸನದಲ್ಲಿ ಹೇಳಿದೆ. ಇದನ್ನು ದೇವರ ದಂಡೆ ಹಾಗೂ ಪ್ರವಾದಿ ಮೊಹಮ್ಮದ್ (ಸ.ಅ.ಸ) ರ ಆಶೀರ್ವಾದಗಳಿಂದ ತಾನು ಕಟ್ಟಿಸಿದುದಾಗಿ ಶಾಸನದಲ್ಲಿ ಹೇಳಿದೆ. ಇಂತಹ ಕೆಲಸಗಳನ್ನು "ನಾವು ಪ್ರಾರಂಭ ಮಾಡುತ್ತೇವೆ ದೇವರು ಅದನ್ನು ಪೂರ್ಣಗೊಳಿಸುತ್ತಾನೆ" ಎನ್ನುವ ಶಾಸನದಲ್ಲಿ ಬರುವ ಮಾತುಗಳು ಗಮನಾರ್ಹವಾಗಿವೆ. ಟಿಪ್ಪುಸುಲ್ತಾನನು ಕೃಷಿಯ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದುದಕ್ಕೆ ಈ ಅಣೆಕಟ್ಟು ಕಟ್ಟಿಸಿರುವುದು ಒಂದು ಉತ್ತಮ ಸಾಕ್ಷಿಯಾಗಿದೆ. ಈ ಭೂಮಿಯನ್ನು ಉಳುವ ರೈತರು ಬೆಳೆದ ಬೆಳೆಯ ಉತ್ಪನ್ನದ ೧/೩ ಭಾಗವನ್ನು ತಾವು ಇಟ್ಟುಕೊಂಡು ಮಿಕ್ಕದ್ದನ್ನು ಸರ್ಕಾರಕ್ಕೆ ಕೊಡಬೇಕು. ಈ ಭೂಮಿಯ ಮೇಲಿನ ಹಕ್ಕು ಉಳುವವರಿಗೆ ಸಂಬಂಧಿಸಿದ್ದು; ಇದು ಭೂಮಿ ಆಕಾಶ ಇರುವವರೆಗೆ ವಂಶಪಾರಂಪರ್ಯವಾಗಿ ಮುಂದುವರಿಯುತ್ತದೆ ಎಂಬ ಮಾತುಗಳು ಈ ಶಾಸನದಲ್ಲಿದೆ. ಇದರಲಿ ಇನ್ನೊಂದು ಗಮನಾರ್ಹ ಸಂಗತಿ ಎಂದರೆ ಗ್ರಹಗಳ ವರ್ಣನೆ: ಈ ಶಾಸನದಲ್ಲಿ ಮೈಸೂರು ರಾಜ್ಯವು ಟಿಪ್ಪುಸುಲ್ತಾನನಿಗೆ 'ಸರ್ಕಾರೇ ಖುದಾದಾದ್' ಅಂದರೆ 'ದೈವದತ್ತವಾದ ರಾಜ್ಯ' ಎಂದು

ಹೇಳಿದೆ. ಅಲ್ಲದೆ ದೇವರು ತನ್ನನ್ನು ಈ ರಾಜ್ಯಕ್ಕೆ ಬಾದಶಹನನ್ನಾಗಿ ನೇಮಿಸಿದ್ದಾರೆ ಎಂಬ ಮಾತುಗಳು ಈ ಶಾಸನದಲ್ಲಿದೆ. ಈ ಶಾಶ್ವತವಾದ ದತ್ತಿಯನ್ನು ಯಾರು ಹಾಳು ಮಾಡುತ್ತಾರೋ ಅವರು ಕೇವಲ ಈ ಕೃಷಿಕರ ಕುಲಕ್ಕೆ ಅಲ್ಲದೆ ಇಡೀ ಪ್ರಪಂಚದ ಮಾನವ ಕುಲಕ್ಕೆ ಪಾಪಿಷ್ಠ ಸೈತಾನರು ಅಂದರೆ ದೆವ್ವಗಳು ಎಂಬುವುದಾಗಿ ಇಲ್ಲಿನ ಶಾಪಪದ್ಯದಲ್ಲಿ ಹೇಳಿದೆ. ಸಯ್ಯದ್ ಜಾಫರ್ ಎಂಬುವನು ಈ ಶಾಸನವನ್ನು ಬರೆದಿದ್ದಾನೆ. ಇದೇ ವಿಷಯವನ್ನು ಶ್ರೀರಂಗಪಟ್ಟಣ ತಾಲ್ಲೂಕು ಕೃಷ್ಣರಾಜಸಾಗರ ಅಣೆಕಟ್ಟಿನ ಪ್ರವೇಶ ಸ್ಥಳದಲ್ಲಿರುವ ಪರ್ಶಿಯನ್ ಶಾಸನದಲ್ಲೂ ವಿವರವಾಗಿ ಹೇಳಿದೆ.[೫೦]

ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕು ಗಂಜಾಮ್‌ನಲ್ಲಿರುವ ಗುಂಬಜಿನ ಪಶ್ಚಿಮ ದ್ವಾರದ ಎಡಭಾಗದಲ್ಲಿರುವ ಕ್ರಿ.ಶ. ೧೭೯೯ರ ಪರ್ಶಿಯನ್ ಹಾಗೂ ಅರೇಬಿಕ್ ಭಾಷೆಗಳಲ್ಲಿರುವ ಶಾಸನವು[೫೧] 'ಮೈಸೂರು ಹುಲಿ' ಎನ್ನಿಸಿದ ಟಿಪ್ಪುಸುಲ್ತಾನನ ವೀರ ಮರಣವನ್ನು ಅದರಿಂದಾದ ಶೋಕವನ್ನು ಹೃದಯಕ್ಕೆ ನಾಟುವಂತೆ ಬಹುಸುಂದರವಾಗಿ ಚಿತ್ರಿಸಿದೆ. ಈ ಶಾಸನದಲ್ಲಿ ಬರುವ ಏಳು ಪದ್ಯಗಳು ಪರ್ಶಿಯನ್ ಭಾಷೆಯಲ್ಲೂ, ಎರಡು ಪದ್ಯಗಳು ಅರೇಬಿಕ್ ಭಾಷೆಯಲ್ಲೂ ಇದೆ. ಈ ಶಾಸನದ ಮೊದಲ ಮೂರು ಪರ್ಶಿಯನ್ ಭಾಷೆಯ ಪದ್ಯಗಳನ್ನು ಮೀರ್ ಹುಸೇನ್ ಅಲಿ ಎಂಬುವನು ರಚಿಸಿದ್ದಾನೆ. ನಂತರದ ಮೂರು ಪರ್ಶಿಯನ್ ಪದ್ಯಗಳನ್ನು ಗುಲಾಂ ಹುಸೈನ್, ಒಂದು ಪರ್ಶಿಯನ್ ಪದ್ಯವನ್ನು ಷಾಹಿರ್ ಹಾಗೂ ಎರಡು ಅರೇಬಿಕ್ ಭಾಷೆಯಲ್ಲಿರುವ ಪದ್ಯಗಳನ್ನು ಸಯ್ಯದ್ ಷೇಕ್ ಅಲ್ ಜಾಫರ್ ಎಂಬುವರು ರಚಿಸಿದ್ದಾರೆ. ಈ ಮೇಲಿನ ಎಲ್ಲಾ ಪದ್ಯಗಳನ್ನು ಮೀರ್ ಹುಸೇನ್ ಅಲಿ ಸಂಗ್ರಹಿಸಿದ್ದಾನೆ ಹಾಗೂ ಸಯ್ಯದ್ ಅಬ್ದುಲ್ ಖಾದರ್ ಕೆತ್ತಿದ್ದಾನೆ. 'ಯಾವ ರಾಜ್ಯವು ಒಬ್ಬರ ಕೈಯಿಂದ ಇನ್ನೊಬ್ಬರಿಗೆ ಹೋಗುತ್ತದೋ ಅದು ದೈವ ಕೃಪೆಯಿಂದ' ಎಂಬ ಸ್ವಾರಸ್ಯಕರವಾದ ಮಾತುಗಳು ಈ ಶಾಸನದಲ್ಲಿದೆ. ಈತ ಹೈದರನ ಪುತ್ರ, ಭಾರತ ಹಾಗೂ ತುರ್ಕಿ (ಟರ್ಕಿ)ಯ ಗೌರವ ಅಥವಾ ವೈಭಮೂರ್ತಿ, ಇವನ ವೀರಮರಣದಿಂದಾಗಿ ಭಾರತ ಮತ್ತು ತುರ್ಕಿ ಇವೆರಡೂ ದೇಶಗಳ ಕೀರ್ತಿಗೂ ಕುಂದು ಬಂದಿದೆ ಎಂದು ಕವಿಯು ಈ ಶಾಸನದಲ್ಲಿ ವರ್ಣಿಸಿದ್ದಾನೆ. ಹೀಗೆ ಟಿಪ್ಪುಸುಲ್ತಾನನ ವೀರ ಮರಣ ಹಾಗೂ ಶ್ರೀರಂಗಪಟ್ಟಣದ ಪತನದ ವಿವರಗಳು ಈ ಶಾಸನದಲ್ಲಿವೆ.

ಟಿಪ್ಪುಸುಲ್ತಾನನಿಗೆ ಸೇರಿದ್ದು ತೇದಿ ವಿವರಗಳಿಲ್ಲದ ಕೆಲವು ಶಾಸನಗಳು[೫೨] ಮಂಡ್ಯ ಜಿಲ್ಲೆಯ ಪಾಂಡವಪುರ ತಾಲ್ಲೂಕು ಮೇಲುಕೋಟೆಯ ತಿರುನಾರಾಯಣಸ್ವಾಮಿ, ನರಸಿಂಹ ಸ್ವಾಮಿ ದೇವಸ್ಥಾನಗಳಿಗೆ ದತ್ತಿ ಕಾಣಿಕೆಯನ್ನು ಶ್ರೀರಂಗಪಟ್ಟಣದ ರಂಗನಾಥಸ್ವಾಮಿ ದೇವಸ್ಥಾನಕ್ಕೆ ಬೆಳ್ಳಿಯ ಬಟ್ಟಲುಗಳನ್ನು ಪಂಚಾರತಿಯನ್ನು ತುಮಕೂರು ಜಿಲ್ಲೆ ಕುಣಿಗಲ್ಲು ತಾಲ್ಲೂಕು ಎಡೆಯೂರು ಸಿದ್ಧಲಿಂಗೇಶ್ವರ ದೇವಸ್ಥಾನಕ್ಕೆ ಎರಡು ಘಂಟೆಗಳನ್ನು, ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನ ಕಳಲೆ ಗ್ರಾಮದ ಲಕ್ಷ್ಮೀಕಾಂತ ದೇವಸ್ಥಾನಕ್ಕೆ ಬೆಳ್ಳಿಯ ಬಟ್ಟಲುಗಳನ್ನು, ದೊಡ್ಡ ಬೆಳ್ಳಿಯ ತಟ್ಟೆಯನ್ನು ಟಿಪ್ಪುಸುಲ್ತಾನನು ಕೊಟ್ಟಿರುವ ವಿಷಯಗಳನ್ನು ದಾಖಲಿಸಿವೆ.

ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕು ನಗರದ ಕ್ರಿ.ಶ. ೧೭೧೩ರ ಶಾಸನವು ನಗರದ ವೆಂಕಟರಮಣಸ್ವಾಮಿ ದೇವಾಲಯದಲ್ಲಿರುವ ಲ್ಯಾಟಿನ್ ಭಾಷೆಯಲ್ಲಿರುವ ಶಾಸನದಲ್ಲಿ[೫೩] ಈ ಘಂಟೆಯನ್ನು ಕ್ರಿ.ಶ. ೧೭೧೩ರಲ್ಲಿ ಅಂಸ್ಟೆರ್‌ಡಮ್‌ನಲ್ಲಿ ತಯಾರಿಸಿದೆ ಎಂದು ಇದರಲ್ಲಿ ಹೇಳಿದೆ. ಇದು ಟಿಪ್ಪುಸುಲ್ತಾನನು ಕೆನರ ಅಂದರೆ ದಕ್ಷಿಣ ಕನ್ನಡ ಅಥವಾ ಮಲಬಾರಿನ ಕ್ರೈಸ್ತ ಚರ್ಚುಗಳಿಂದ ತೆಗೆದುಕೊಂಡು ಬಂದನೆಂದು ಹೇಳಲಾಗಿರುವ ಘಂಟೆಗಳಲ್ಲೊಂದಾಗಿರಬಹುದೆಂದು ತೋರುತ್ತದೆ.[೫೪]

ದಿವಾನ್ ಪೂರ್ಣಯ್ಯ ಅವರಿಗೆ ಸಂಬಂಧಿಸಿದಂತೆ ಒಂದೆರಡು ಶಾಸನಗಳು ನಮಗೆ ದೊರೆತಿವೆ. ಶ್ರೀರಂಗಪಟ್ಟಣಕ್ಕೆ ಉತ್ತರದಲ್ಲಿ ಕಾವೇರಿ ನದಿಗೆ ಕಟ್ಟಿರುವ ಸೇತುವೆಯ ಉತ್ತರದಲ್ಲಿರುವ ಒಂದೇ ಕಲ್ಲಿನಲ್ಲಿ ಎರಡು ಶಾಸನಗಳಿವೆ. ಒಂದು ಪರ್ಶಿಯನ್ ಭಾಷೆಯಲ್ಲೂ ಮತ್ತೊಂದು ಆಂಗ್ಲ ಭಾಷೆಯಲ್ಲೂ ಇವೆ.[೫೫] ಆದರೆ ಇವೆರಡರಲ್ಲೂ ಹೇಳಿರುವ ವಿಷಯ ಹೆಚ್ಚು ಕಡಿಮೆ ಒಂದೇ ಆಗಿದೆ. ಅವುಗಳಲ್ಲಿ ಮೈಸೂರು ಅರಸರಾದ ಕೃಷ್ಣರಾಜ ವೊಡೆಯರು, ಅಂದಿನ ದಿವಾನರಾಗಿದ್ದ ಪೂರ್ಣಯ್ಯನವರ ನೇತೃತ್ವದಲ್ಲಿ ಅದರ ಮೇಲ್ವಿಚಾರಣೆಯಲ್ಲಿ ಆ ಸೇತುವೆಯನ್ನು ಕಟ್ಟಿಸಿ ಆಗ ಭಾರತದ ಗೌರ್ನರ್ ಜನರಲ್ ಆಗಿದ್ದ ರಿಚರ್ಡ್ ಮಾರ್ಕ್ವಿಸ್ ವೆಲ್ಲಸ್ಲಿಗೆ ಕೃತಜ್ಞತಾ ಪೂರ್ವಕವಾಗಿ, ಸಾರ್ವಜನಿಕ ಸಾಕ್ಷಿಯಾಗಿ, ಸಾರ್ವಜನಿಕ ಸೇವೆಗಾಗಿ ಸಮರ್ಪಿಸಿದುದಾಗಿ ಹೇಳಿದೆ. ಇದೊಂದು ದ್ವಿಭಾಷಾ ಶಾಸನವಾಗಿದ್ದು ಈ ಸೇತುವೆಯ ಕೆಲಸವನ್ನು ಕ್ರಿ.ಶ. ೧೮೦೨ರ ಆಗಸ್ಟ್ ತಿಂಗಳಲ್ಲಿ ಪ್ರಾರಂಭ ಮಾಡಿ ೧೮೦೪ನೇ ಅಕ್ಟೋಬರ್ ತಿಂಗಳಲ್ಲಿ ಮುಗಿಸಿದುದಾಗಿ ಈ ಶಾಸನಗಳಲ್ಲಿ ಹೇಳಿದೆ. ಅಲ್ಲದೆ ಇಲ್ಲಿ ಈ ಸೇತುವೆಯನ್ನು 'ವೆಲ್ಲಸ್ಲಿ ಬ್ರಿಡ್ಜ್' ಎಂದು ಕರೆದಿರುವುದೂ ಗಮನಾರ್ಹ ಹೀಗೆ ರಾಷ್ಟ್ರೀಯ ರಸ್ತೆ ಮತ್ತು ಸೇತುವೆಗಳ ಬಗೆಗಿನ ಮಾಹಿತಿಯು ಈ ಶಾಸನದಿಂದ ತಿಳಿದು ಬರುತ್ತದೆ.

ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನ್‌ಗಿರಿಯ ದಾದಾ ಹಯಾತ್ ಮೀರ್ ಖಳಂದರ್‌ರ ಗುಡಿಯ ಬಾಗಿಲ ಎದುರಿನ ಕಂಬದ ಮೇಲಿರುವ ಪರ್ಶಿಯನ್ ಭಾಷೆ ಹಾಗೂ ಅರೇಬಿಕ್ ಲಿಪಿಯಲ್ಲಿರುವ ಶಾಸನದಲ್ಲಿ[೫೬] 'ಬಿಸ್ಮಿಲ್ಲಾಹಿರ್ ರಹಮಾನಿರ್ರಹೀಮ್' ಅಂದರೆ 'ಪರಮ ದಯಾಮಯಿಯೂ ಕರುಣಾನಿಧಿಯೂ ಆದ ಅಲ್ಲಾಹ್‌ನ (ದೇವರ) ನಾಮದಿಂದ' ಸ್ತುತಿಯಿಂದ ಪ್ರಾರಂಭವಾಗಿ ಅದರಲ್ಲಿ ಪ್ರವಾದಿ ಮೊಹಮ್ಮದ್ (ಸ.ಅ.ಸ) ಅವರ ಅಳಿಯ ಹಜರತ್ ಅಲಿ, ಮಗಳು ಫಾತಿಮಾ ಹಾಗೂ ಮೊಮ್ಮಕ್ಕಳು ಹಸನ್ ಮತ್ತು ಹುಸೇನರ ಉಲ್ಲೇಖವಿದೆ. ನಂತರ ಅದು ಹಜರತ್ ಹಯಾತ್ ಮೀರ್ ಖಲಂದರ್ ಅವರ ಮಹತ್ತ್ವವನ್ನು ವರ್ಣಿಸುತ್ತದೆ. ಇದರಲ್ಲಿರುವ ಹಿಜರಿ ತೇದಿ ವಿವರಗಳು ಅಂದರೆ ಹಿಜರಿ ೩೯೬ನೇ ಹಿಜರಿ ಶಕೆ ೧೧೦೫-೦೬ಕ್ಕೆ ಸಮನಾದರೂ ಲಿಪಿಯ ಮತ್ತು ಇತರ ಲಕ್ಷಣಗಳು ಈ ತೇದಿಗೆ ಸರಿ ಹೊಂದುವುದಿಲ್ಲ. ಪರ್ಶಿಯನ್ ಭಾಷೆಯ ಪದ್ಯರೂಪದಲ್ಲಿರುವ ಈ ಶಾಸನವು ಪುರಾತನ ದಾಖಲೆಯ ಪ್ರತಿಯಂತಿದೆ.[೫೭] ಬಹುಶಃ ಕ್ರಿ.ಶ. ೧೧೦೫-೦೬ರಲ್ಲಿ ದಾದಾ ಹಯಾತ್ ಮೀರ್ ಖಲಂದರ್ ಅವರಿಗೆ ಈ ಕೋಃಜಾ ಅಂದರೆ ಗುಹೆಯನ್ನು ನಿರ್ಮಿಸಿರಬೇಕು. ಹೀಗಾಗಿ ಈ ಮೇಲಿನ ಶಾಸನವು ದಾದಾ ಹಯಾತ್ ಮೀರ್ ಖಲಂದರ್‌ರ ಗುಹೆಯ ಅಥವಾ ಗುಡಿಯ ಕಾಲವನ್ನು ತಿಳಿಸುತ್ತಿರಬೇಕು. 'ಯಾರು ತನ್ನನ್ನು ತಾನು ಗುರುತಿಸಿಕೊಳ್ಳುತ್ತಾನೋ ಅವನು ದೇವರನ್ನು ಗುರುತಿಸುತ್ತಾನೆ' (Who ever recognises his own self recagnses god) ಎಂಬ ಪ್ರವಾದಿ ಮೊಹಮ್ಮದರ (ಸಅಸಂ) ಮಾತುಗಳು ಈ ಶಾಸನದಲ್ಲಿ ಉಲ್ಲೇಖಿಸಿರುವುದು ಗಮನಾರ್ಹವಾದ ಸಂಗತಿ ಎನ್ನಬಹುದು.

ಬಾಬಾ ಬುಡನ್‌ಗಿರಿಯ ಮೇಲೆ ಭಂಡಾಖಾನಾ ಬಾಗಿಲಲ್ಲಿರುವ ಪರ್ಶಿಯನ್ ಭಾಷೆಯ ಶಾಸನವು[೫೮] ಹಿಜರಿ ೧೨೬೯ಕ್ಕೆ ಅಂದರೆ ಕ್ರಿ.ಶ. ೧೮೫೩ಕ್ಕೆ ಸೇರಿದೆ. ಈ ಶಾಸನವು ದಾದಾ ಹಜರತ್ ಮೀರ್ ಖಲಂದರ್ ಅವರ ಪವಿತ್ರ ನೆಲೆಯ ಸುಂದರ ವರ್ಣನೆಯೊಂದಿಗೆ ಸಜ್ಜಾದಾಹ್ ನಿಷಿನ್ ಎಂಬುವರು ಪವಿತ್ರವಾದ ಬಾಬಾಬುಡನ್ ಬೆಟ್ಟದಲ್ಲಿ ವಿಶ್ರಾಂತಿ ಗೃಹವೊಂದನ್ನು ಕಟ್ಟಿಸಿದ ವಿಷಯವನ್ನು ತಿಳಿಸುತ್ತದೆ. ಈ ಪವಿತ್ರ ನೆಲೆಯು ಬಡವ ಹಾಗೂ ಶ್ರೀಮಂತರ ಪವಿತ್ರ ಯಾತ್ರಾಸ್ಥಳವೆಂಬ ಕಾರಣಕ್ಕಾಗಿ ಈ ವಿಶ್ರಾಂತಿ ಗೃಹವನ್ನು ಜನರು ಉಪಯೋಗಕ್ಕಾಗಿ, ಅನುಕೂಲಕ್ಕಾಗಿ ಅವರು ಕಟ್ಟಿಸಿದುದಾಗಿ ಅದರಲ್ಲಿ ಹೇಳಿದೆ.

ಬೆಂಗಳೂರು ಜಿಲ್ಲೆ ಬೆಂಗಳೂರಿನಲ್ಲಿರುವ ಸಂತ ಬಾಬಾ ತವಕ್ಕಲ್ ಮಸ್ತಾನ್ ಸಮಾಧಿಯ ಸಂಕೀರ್ಣದಲ್ಲಿರುವ ಮುರಾದ್‌ಬೀಬಿಯ ಸಮಾಧಿಯ ಮೆಲೊಂದು ಉರ್ದು ಭಾಷೆಯ ಶಾಸನವಿದೆ.[೫೯] ಇದರಲ್ಲಿ ಅವರ ನಿಧನವನ್ನು ಹಿಜರಿ ೧೨೬೩ ಅಂದರೆ ಕ್ರಿ.ಶ. ೧೮೪೬ ಎಂದು ದಾಖಲಿಸಿದೆ. ಮುರಾದ್‌ಬೀಬಿಯ ಶೇಕ್ ಇಮಾಮ್ ಸುಬೇದಾರ್ ಸರ್‌ದಾರ್ ಬಹದೂರ್ ಎಂಬುವರ ಪತ್ನಿ ಶಾಸನವನ್ನು ನಾಝಿಮ್ ರಚಿಸಿದ್ದಾನೆ.

ಧಾರವಾಡ ಜಿಲ್ಲೆ ಸವಣೂರು ತಾಲ್ಲೂಕು ಸವಣೂರಿನಲ್ಲಿರುವ ಗದ್ದಿಮೊಹಲ್ಲಾ ಮಸೀದಿಯಲ್ಲಿ ದೊರೆತಿರುವ ಪರ್ಶಿಯನ್ ಭಾಷೆಯ ಶಾಸನವು[೬೦] ಸವಣೂರಿನ ನವಾಬ ದಿಲೇರ್‌ಖಾನ್ ಜಂಗ್‌ನ ಹೆಸರನ್ನು ಉಲ್ಲೇಖಿಸಿ ಆತನ ಆದೇಶದಂತೆ ಬೀಬಿ ಅಹಮದ್‌ನು ನಾಗರಿಕರ ನೆರವಿನೊಂದಿಗೆ ಮೇಲೆ ತಿಳಿಸಿದ ಮಸೀದಿ, ಶಾಲೆ ಮತ್ತು ತಂಗುದಾಣವನ್ನು ಹಿಜರಿ ೧೨೭೨ ಅಂದರೆ ಕ್ರಿ.ಶ. ೧೮೫೫-೫೬ರಲ್ಲಿ ನಿರ್ಮಿಸಿದನೆಂದು ಹೇಳಿದೆ.

ಮಂಡ್ಯ ಜಿಲ್ಲೆ ಮಳವಳ್ಳಿ ಕುಡಿ ನೀರುಕಟ್ಟೆ ಎಂಬಲ್ಲಿ ಗೋರಿಯಲ್ಲಿರುವ ಶಾಸನವು[೬೧] ಮಧ್ಯದಲ್ಲಿ ಕನ್ನಡದಲ್ಲೂ, ಮೇಲುಗಡೆ ಇಂಗ್ಲೀಷಿನಲ್ಲೂ, ಕೆಳಗಡೆ ಪರ್ಶಿಯನ್‌ನಲ್ಲಿ ಇದೆ. ಹೀಗೆ ಇದೊಂದು ತ್ರಿಭಾಷಾ ಶಾಸನ. ಇದು ಕ್ರಿ.ಶ. ೧೮೪೯ರ ಕಾಲಕ್ಕೆ ಸೇರಿದ್ದು ಮಳವಳ್ಳಿ ತಾಲ್ಲೂಕಿನ ಮಾಮಲೆದಾರರಾಗಿದ್ದ 'ಜೋಸಫ್ ಸಿಬಾಲ್ ಮತ್ತವರ ಪತ್ನಿಯಾದ ಲಿಲ್ಲೆಲ್‌ಮೈನ ಇವರಿಗೆ 'ಅತಿ ಪ್ರೇಮ ಉಳ್ಳ ಕುವರಿಯಾದ ಜೆನ್ನೆಂಬುವಳ' ಜನನ ಮತ್ತು ಸ್ವರ್ಗಸ್ಥಳಾದ ವಿವರವನ್ನು ಕೊಡುತ್ತ ಆ ಪಿತೃಗಳ ವಾತ್ಸಲ್ಯವನ್ನು ವ್ಯಕ್ತಪಡಿಸುತ್ತದೆ.

ಧಾರವಾಡ ಜಿಲ್ಲೆ ಸವಣೂರು ತಾಲ್ಲೂಕು ಸವಣೂರಿನಲ್ಲಿರುವ ಜುಮ್ಮಾ ಮಸೀದಿಯ ಆವರಣದಲ್ಲಿರುವ ಉರ್ದು ಭಾಷೆಯ ಶಾಸನವು ಸವಣೂರು ನವಾಬನ ಸಮಾಧಿಯಲ್ಲಿದೆ.[೬೨] ನವಾಬ ಅಬುತ್, ತಬ್ರಿಜ್‌ಖಾನ್‌ನು ಹಿಜರಿ ೧೩೧೦ರಲ್ಲಿ ಅಂದರೆ ಕ್ರಿ.ಶ. ೧೮೯೨ರಲ್ಲಿ ಮರಣ ಹೊಂದಿದನೆಂದು ದಾಖಲಿಸಿದೆ.

ಬೆಂಗಳೂರಿನ ಕಬ್ಬನ್‌ಪಾರ್ಕ್ ಒಳಗಿನ ಮಹಾರಾಜರ ಪುತ್ಥಳಿಯ ಕೆಳಗೆ ಇರುವ ಉರ್ದು ಭಾಷೆಯ ಶಾಸನದಲ್ಲಿ[೬೩] ಶ್ರೀ ಚಾಮರಾಜೇಂದ್ರ ಒಡೆಯರರ ಪುತ್ಥಳಿ ಎಂದು ಸೂಚಿಸುವ ಇದರಲ್ಲಿ ಕ್ರಿ.ಶ. ೧೮೮೧-೧೮೯೪ ಎಂದು ಮಹಾರಾಜರು ಆಳಿದ ಅವಧಿಯನ್ನು ಹೇಳಿದೆ.

ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕು ಕೃಷ್ಣರಾಜ ಸಾಗರ ವೃಂದಾವನದ ಪಾರ್ಕಿನಲ್ಲಿರುವ ಮಹಾರಾಜರ ಪುತ್ಥಳಿಯ ಕೆಳಗಿರುವ ಉರ್ದು ಭಾಷೆಯ ಶಾಸನವು[೬೪]

ಮಹಾರಾಜ ಶ್ರೀಕೃಷ್ಣರಾಜ ಒಡೆಯರ್ ಬಹಾದೂರ್ ಜೂನ್ ೧೮೮೪ರಲ್ಲಿ ಜನಿಸಿ ೪೬ ವರ್ಷಗಳ ಕಾಲ ಆಡಳಿತವನ್ನು ನಡೆಸಿ ಕ್ರಿ.ಶ. ೧೯೪೦ರ ಆಗಸ್ಟ್ ೩ರಂದು ದೈವಾಧೀನರಾದರು ಎಂದಿದೆ.

ಬೆಂಗಳೂರು ನಗರದಲ್ಲಿರುವ ಸಂತ ತವಕ್ಕಲ್ ಮಸ್ತಾನ್‌ರ ಸಮಾಧಿಯಲ್ಲಿ ದೊರೆತಿರುವ ಪರ್ಶಿಯನ್ ಭಾಷೆಯಲ್ಲಿರುವ ಶಾಸನವು ಹಿಜರಿ ೧೩೫೮ ಅಂದರೆ ಕ್ರಿ.ಶ. ೧೯೩೯–೪೦ರಲ್ಲಿ ಒಂದಿಷ್ಟು ಜೀರ್ಣೋದ್ಧಾರ ಮಾಡಿದ ಸಂದರ್ಭದಲ್ಲಿ ಕವಿ ಕೈಫಿ ಎಂಬುವನು ಇಲ್ಲಿನ ಪದ್ಯಗಳನ್ನು ರಚಿಸಿದ್ದಾನೆ ಎಂದು ಇಲ್ಲಿ ಹೇಳಿದೆ. ಈ ಶಾಸನದಲ್ಲಿ ಸಂತ ತವಕ್ಕಲ್ ಮಸ್ತಾನ್‌ರ ಪ್ರಶಂಸೆಯೂ ಇದೆ.

ಮಹಮ್ಮದೀಯ ಶಾಸನಗಳು ಅನೇಕ ವೇಳೆ ನಮಗೆ ರಾಜಕೀಯ ಘಟನೆಗಳನ್ನು ತಿಳಿಸುತ್ತವೆ ಎಂಬುವುದಕ್ಕೆ ಅನೇಕ ಉದಾಹರಣೆಗಳಿವೆ. ಕ್ರಿ.ಶ. ೧೫೨೨ರಲ್ಲಿ ವಿಜಯನಗರದ ಅರಸ ಕೃಷ್ಣದೇವರಾಯನು ಬಿಜಾಪುರವನ್ನು ಮುತ್ತಿದುದನ್ನು ಹಾಗೂ ನಾಲ್ಕು ದಿವಸಗಳ ಅನಂತರ ಆ ಸ್ಥಳದಿಂದ ಹಿಂತಿರುಗಿದುದನ್ನು ಆ ಊರಿನ ಒಂದು ಶಾಸನದಿಂದ ತಿಳಿಯಬಹುದು.[೬೫] ರಕ್ಕಸತಂಗಡಿ ಅಥವಾ ತಾಳಕೋಟೆ ಯುದ್ಧದ ಉಲ್ಲೇಖ ಆ ವರ್ಷದಲ್ಲೇ ಬರೆಸಿ ಹಾಕಿಸಿದ ಒಂದು ಶಾಸನದಲ್ಲಿದೆ.[೬೬] ಬಿಜಾಪುರದ ಅರಸ ಅಲಿ ಆದಿಲ್ ಷಾಹನು ಬಂಕಾಪುರದ ಕೋಟೆಯನ್ನು ವಶಪಡಿಸಿಕೊಂಡ ವಿಚಾರವು ಮುದಗಲ್ಲಿನ ಶಾಸನದಿಂದ ತಿಳಿಯುತ್ತೆ.[೬೭] ಷಹಜಹಾನನ ದಳಪತಿಯಾದ ಖಾನ್–ಇ–ದೌರಾನ್‌ನು ಬೀದರ್ ಜಿಲ್ಲೆಯಲ್ಲಿರುವ ಉದ್‌ಗೀರ್ ಕೋಟೆಯನ್ನು ನೆಲಸಮ ಮಾಡಿದ ವಿಚಾರವು ನಮಗೆ ತಿಳಿಯುವುದು ಅಲ್ಲಿಯ ಒಂದು ಶಾಸನದಿಂದ[೬೮] ಕ್ರಿ.ಶ. ೧೬೧೦–೧೧ರ ಉದ್‌ಗಿರ್‌ನ ಇನ್ನೊಂದು ಶಾಸನದಲ್ಲಿ ನಿಜಾಂಷಾಹಿ ಅಧಿಕಾರಿಯೊಬ್ಬನು ಯುದ್ಧಲ್ಲಿ ಸತ್ತ ವಿಚಾರವಿದೆ.[೬೯] ಇವುಗಳಲ್ಲದೆ ಹೈದರ್‌ಅಲಿ, ಆತನ ಮಗ ಟಿಪ್ಪುಸುಲ್ತಾನ್, ಆತನ ಮಗ ನಿಜಾಮುದ್ದೀನ್ ಮತ್ತು ಟಿಪ್ಪುಸುಲ್ತಾನನ ಸೈನ್ಯದ ಅಧಿಕಾರಿ ಸಯ್ಯದ್ ಹಮೀದ್ ಮುಂತಾದ ಇತಿಹಾಸ ಪ್ರಮುಖರು ದೈವಾಧೀನರಾದ ವಿಚಾರಗಳನ್ನು ತಿಳಿಸುವ ಶಾಸನಗಳು ಹೇರಳವಾಗಿವೆ.[೭೦] ಇವೆಲ್ಲವೂ ಈ ಮೇಲಿನ ಹೇಳಿಕೆಗೆ ಕೆಲವು ಉದಾಹರಣೆಗಳು.

ಇನ್ನು ಕೆಲವೊಮ್ಮೆ ಈ ಶಾಸನಗಳು ರಾಜಕೀಯ ವಿಷಯಗಳನ್ನೊದಗಿಸುವುದರ ಜೊತೆಗೆ ಯಾವುದಾದರೊಂದು ಐತಿಹಾಸಿಕ ವಿಚಾರದಲ್ಲಿ ವಿದ್ವಾಂಸರಲ್ಲಿ ವಿರುದ್ಧಾಭಿಪ್ರಾಯಗಳಿದ್ದಾಗ ಅವುಗಳನ್ನು ಹೋಗಲಾಡಿಸಿ ಖಚಿತವಾದ ಅಭಿಪ್ರಾಯ ಏನೆಂಬುದನ್ನು ತಿಳಿಯಲು ತುಂಬಾ ಸಹಾಯಕಾರಿಯಾಗಿವೆ. ಉದಾಹರಣೆಗೆ ಅನೇಕ ಇಂಗ್ಲಿಷ್ ಬರಹಗಾರರು ಟಿಪ್ಪುಸುಲ್ತಾನನನ್ನು ಮತಾಂಧ ಮತ್ತು ಕ್ರೂರಿ ಎಂದು ಚಿತ್ರಿಸಿದ್ದಾರೆ. ಆದರೆ ಇವನ ಶಾಸನಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿದವರಿಗೆ ಇವರ ಅಭಿಪ್ರಾಯದಲ್ಲಿ ಹುರುಳಿಲ್ಲವೆಂದು ಗೊತ್ತಾಗುತ್ತದೆ. ಇದಕ್ಕೆ ಬದಲಾಗಿ ಅವನು ಮುಸ್ಲಿಮೇತರರನ್ನು ಬಹಳ ಔದಾರ್ಯದಿಂದಲೇ ನಡೆಸಿ ಕೊಂಡನೆಂದು ತಿಳಿಯುತ್ತದೆ. ಹಿಂದುಗಳ ದೇವಸ್ಥಾನಗಳಿಗೂ, ಬ್ರಾಹ್ಮಣರಿಗೂ ಇನ್ನು ಅನೇಕರಿಗೂ ಬಿಟ್ಟ ದತ್ತಿಗಳನ್ನು ಹೆಸರಿಸುವ ಅನೇಕ ಶಾಸನಗಳಿರುವುದು ಈ ಅಂಶವನ್ನು ಖಚಿತಗೊಳಿಸುತ್ತದೆ.[೭೧]

ಅನೇಕ ವೇಳೆ ಈ ಶಾಸನಗಳು ಒಂದು ವಂಶದ ರಾಜರ ಸರಿಯಾದ ವಂಶಾವಳಿಯನ್ನು ಕೊಡುವುದರಲ್ಲಿ ಸಹಾಯಕಾರಿಯಾಗಿದೆ. ಈ ಸಂದರ್ಭದಲ್ಲಿ ನಾವು ಗುಲ್ಬರ್ಗ ಜಿಲ್ಲೆಯ ಸಾಗರ ಎಂಬಲ್ಲಿ ದೊರೆತ ಮೊಹಮೂದ್ ಷಾಹ್ ಬಹಮನಿಯ ಮಗ ವಲೀಉಲ್ಲಾಹ್‌ನ ಕಾಲಕ್ಕೆ ಸೇರಿರುವ ಒಂದು ಶಾಸನವನ್ನು ಉದಾಹರಿಸಬಹುದು.[೭೨] ಇದಲ್ಲದೆ ಕೆಲವು ಅರಸರ ಸರಿಯಾದ ಹೆಸರು ಅವರ ಬಿರುದುಗಳು ಇತ್ಯಾದಿ ವಿಷಯಗಳನ್ನು ತಿಳಿಯುವಲ್ಲಿ ಇವು ತುಂಬಾ ಸಹಾಯಕಾರಿಯಾಗಿದೆ. ಬಿಜಾಪುರ ಸುಲ್ತಾನರ ಹೆಸರುಗಳ ಕಾಗುಣಿತ, 'ಸವಾಇ' ಎಂಬ ಬಿರುದಿನ ಸರಿಯಾದ ಅರ್ಥ, ಅಲ್ಲದೆ ಬೆಳಗಾವಿಯಲ್ಲಿ ಅದಿಲ್‌ಷಾಹಿ ಸುಲ್ತಾನರ ಪ್ರಾಂತಾಧಿಕಾರಿಯಾದ ಅಸದ್‌ಖಾನ್ ಎಂಬುವನ ಸರಿಯಾದ ಹೆಸರು ಮುಂತಾದ ವಿಷಯಗಳನ್ನು ತಿಳಿಯಲು ಅವರ ಶಾಸನಗಳೇ ಉಪಯೋಕರವಾಗಿವೆ ಎಂಬುದನ್ನು ಇಲ್ಲಿ ಸ್ಮರಿಸಬಹುದು.[೭೩]

ಈ ಶಾಸನಗಳು ಸ್ಥಳೀಯ ಇತಿಹಾಸ ರಚನೆಯಲ್ಲಿ ಮಹತ್ತ್ವವಾದ ಪಾತ್ರವನ್ನು ವಹಿಸುತ್ತವೆ ಎನ್ನುವುದು ಇವುಗಳ ಅಧ್ಯಯನದಿಂದ ತಿಳಿದುಬರುವ ಇನ್ನೊಂದು ಅಂಶ. ಬಿಜಾಪುರ, ಬೀದರ್ ಜಿಲ್ಲೆಯ ಕಲ್ಯಾಣ, ರಾಯಚೂರು, ಸಾಗರ, ಗುಲ್ಬರ್ಗ ಜಿಲ್ಲೆಯ ಷಾಹ್‌ಪುರ ಮುಂತಾದ ಸ್ಥಳಗಳಲ್ಲಿ ಪ್ರಾಂತಾಧಿಕಾರಿಗಳಾಗಿಯೋ, ಪಟ್ಟಣಾಧಿಕಾರಿಗಳಾಗಿಯೋ, ದಳವಾಯಿಗಳಾಗಿಯೋ ಅಥವಾ ಇನ್ನಾವ ಹುದ್ದೆಗಳಲ್ಲಿಯೋ ಸೇವೆ ಸಲ್ಲಿಸಿದವರಲ್ಲಿ ಅನೇಕರು ನಮಗೆ ತಿಳಿದುಬರುವುದೇ ಈ ಶಾಸನಗಳಿಂದ ಎಂದು ಹೇಳಿದರೆ ತಪ್ಪಾಗಲಾರದು. ಖಿಲ್ಜಿ ವಂಶದ ಸುಲ್ತಾನರ ಕಾಲಕ್ಕೆ ಸೇರಿದ ಬಖ್ತ್ಯಾರ್ ಖಾನೀ ಮತ್ತು ಮಾಲಿಕುಷ್ ಷರ್ಖ್ ಕರೀಮುದ್ದೀನ್, ತುಘಲಕ್‌ರ ಕಾಲಕ್ಕೆ ಸೇರಿದ ಅಲೀ ಜಖ್ನೆರಿಯ ಮಗ ಅಹಮದ್, ಉಲುಘ್ ಖುತ್ಲುಘ್ ಮಲೀಕುಷ್ ಷರ್ಕ್, ಮಲೀಕ್ ಷಾಹೀನ್ ಸುಲ್ತಾನೀ ಮತ್ತು ಮಲಿಕುಷ್ ಷರ್ಕ್ ಖಿವಾಮುದ್ದೀನ್, ಬಹಮನಿ ಸುಲ್ತಾನರ ಕಾಲದ ಅಮೀರ್

ಇ ತುರ್ಕಾನ್, ರಜಬ್, ಅಬೂ ಮುಹಮ್ಮದ್ ತಬ್ರೀಜಿ, ಅಜಂ ಹುಮಾಯೂನ್, ಕ್ವಾಜ ಬಹಾನ್, ಮಲಿಕುಷ್ ಷರ್ಕ್ ಅಬಾಜೀ, ಷಹೀಮ್, ಖನ್ ಇ ಆಜಂ, ಗಾಲಿಬ್ ಖಾನ್, ದಸ್ತೂರ್ ಖಾನ್, ಬರೀದ್ ಷಾಹಿ ಸುಲ್ತಾನರ ಕಾಲಕ್ಕೆ ಸೇರಿದ ಮಹಮ್ಮದ್ ಷಾಹ್, ಖಾನ್–ಇ ಆಜಂ, ಮನ್‌ಸೂರ್ ಖಾನ್, ಜಗಪತೀರಾವ್ ಮತ್ತು ಕ್ವಾಜ ಬುಸ್ತಾನ್, ಆದಿಲ್ ಷಾಹಿಸುಲ್ತಾಗರ ಕಾಲಕ್ಕೆ ಸೇರಿದ ಬಲ್ತಿಯಾರ್ ಖಾನೆ, ಮಲೀಕ್ ಅಮೀನುಲ್ ಮುಲ್ಕ್, ಬಾಬಾಜಿ ದಾಬಿತ್ ಖಾನ್, ಫೌಲಾದ್ ಖಾನ್, ಮುಹಮ್ಮದ್ ಮುಸ್ತಫಾಖಾನ್, ಅರಬ್‌ಖಾನ್, ಕಿಷ್‌ವರ್ ಖಾನ್, ಮುಹಮ್ಮದ್ ಹೈದರ್, ಮನ್‌ಸೂರ್ ಖಾನ್ ಇನ್ನೂ ಮುಂತಾದ ವ್ಯಕ್ತಿಗಳ ಹೆಸರು ನಮಗೆ ತಿಳಿದಿರುವುದು ಆ ಕಾಲದ ಶಾಸನಗಳಿಂದಲೇ. ಮೇಲೆ ಹೇಳಿರುವ ಸ್ಥಳೀಯ ಅಧಿಕಾರಿಗಳಲ್ಲದೆ ಅರಮನೆಗೆ ಇಲ್ಲವೆ ಅರಸರಿಗೆ ಸಂಬಂಧಿಸಿದ ಅನೇಕ ಹೆಸರುಗಳನ್ನು ಸಹ ಈ ಶಾಸನಗಳಲ್ಲಿ ನಾವು ಕಾಣಬಹುದು. ಉದಾಹರಣೆಗೆ ಬಹುಮನಿ ರಾಜ ಮಾತೆ ಬೀಬೀ ಷಹನಾಜಿ, ಇಬ್ರಾಹಿಂ ಆದಿಲ್‌ಷಾಹ್‌ನ ರಾಣಿ ತಾಜ್ ಸುಲ್ತಾನ, ಆದಿಲ್‌ಷಾಹಿ ಸರದಾರ ಅಬ್ದುಲ್ ಮುಹಮ್ಮದನ ಹೆಂಡತಿಯಾಗಿದ್ದ ಬೀಬೀ ಹಲೀಮ, ಟಿಪ್ಪು ಸುಲ್ತಾನನ ಸೈನ್ಯದ ಅಧಿಕಾರಿ ಸಯ್ಯದ್ ಹಮೀದ್, ಸೈನ್ಯದ ಮುಖ್ಯಸ್ಥ ಜಹಾಂಗೀರ್, ಟಿಪ್ಪುಸುಲ್ತಾನನ ಸಹೋದರಿ ಸುಲ್ತಾನ್ ಬೇಗಂ, ರಾಣಿ ಫಾತಿಮಾ ಬೇಗಂ, ಅಳಿಯ ನವಾಬ್ ಸೈಯ್ಯದ್ ಷಹಬಾಜ್ ಮುಂತಾದವರು.

ಈ ನಾನಾ ಇಲಾಖೆಗಳ ಅಧಿಕಾರಿಗಳನ್ನು ತಿಳಿದುಕೊಳ್ಳುವುದರ ಜೊತೆಗೆ ಅವರ ಸ್ಥಾನಮಾನ, ಆಡಳಿತಕ್ಕೆ ತಕ್ಕ ಪ್ರಾಂತ ವಿಂಗಡಣೆ, ಅದಕ್ಕೆ ತಕ್ಕ ಹುದ್ದೆಗಳು ಮುಂತಾದ ಆಡಳಿತಕ್ಕೆ ಸಂಬಂಧಿಸಿದ ವಿವರಗಳನ್ನು ನಾವು ಈ ಶಾಸನಗಳಿಂದ ತಿಳಿಯಬಹುದು. ತುಘಲಕ್, ಬಹಮನಿ ಮತ್ತು ಬರೀದ್‌ಷಾಹಿ ವಂಶಗಳಿಗೆ ಸೇರಿರುವ ಶಾಸನಗಳಲ್ಲಿ ಬರುವ ಇಖ್‌ಲಮ್ ಅಂದೆ ಪ್ರಾಂತ, ಮುಆಮಲ ಅಂದರೆ ಜಿಲ್ಲೆ, ಖಸ್ಬ ಅಥವ ಥಾನಾ ಅಂದರೆ ಪಟ್ಟಣ ಅಥವಾ ಉಪವಿಭಾಗ ಮುಂತಾದ ಭೂಮಿ ಭಾಗಗಳ ಹೆಸರುಗಳೂ ದಿವಾನ್ ಇ ಕದಾ ಅಂದರೆ ನ್ಯಾಯಾಂಗ ಇಲಾಖೆ, ನಾಯಿಬ್ ಇ ದಿವಾನ್ ಇ ಕದಾ ಅಂದರೆ ನ್ಯಾಯಾಂಗ ಇಲಾಖೆಯ ಉಪ ಅಧಿಕಾರಿ, ಕೊತ್ವಾಲ್, ಖತರ್‌ಖಾನ್, ನಾಯಿಜ್ ಇ ಸರ್‌ಪರ್‌ದಾರ್, ಥಾನಾದಾರ್ ಮುಂತಾದವು. ಆದಿಲ್ ಷಾಹಿ ಶಾಸನಗಳಲ್ಲಿ ಬರುವ ದಿವಾನ್ ಇ ಆಲಂ, ಸುಬೇದಾರ್, ಹವಲ್ದಾರ್, ಅಮೀರ್ ಇ ಜುಮ್ಲ, ಅಮೀನ್, ಮಹಾಜನ್ ಮುಂತಾದವು, ಮೊಗಲರ ಶಾಸನಗಳಲ್ಲಿ ಬರುವ ಫೌಜ್‌ದಾರ್, ಖಿಲಾದಾರ್ ಮತ್ತು ಟಿಪ್ಪು ಸುಲ್ತಾನರ ಶಾಸನಗಳಲ್ಲಿ ಬರುವ ಸಿಪಾಹ್‌ದಾರ್ (ಸೈನ್ಯದ ಅಧಿಕಾರಿ), ಸರ್ ಇ ಅಸ್ಕದ್ (ಸೈನ್ಯದ ಮುಖ್ಯಸ್ಥ) ಮೀರ್ ಇ ಮೀರಾನ್ (ಸೈನ್ಯದ ಮುಖ್ಯಸ್ಥ), ಅಮೀಲ್ (ಕಂದಾಯದ ಅಧಿಕಾರಿ) ಮುಂತಾದ ಹುದ್ದೆಗಳ ಹೆಸರುಗಳನ್ನು ನಾವು ಈ ಸಂದರ್ಭದಲ್ಲಿ ಉದಾಹರಿಸಬಹುದು.

ಇವುಗಳಿಂದ ತಿಳಿದು ಬರುವ ಇನ್ನೊಂದು ಅಂಶವೆಂದರೆ ಅರಸರಿಂದಲೋ ಅಥವಾ ಇನ್ನಾವ ಅಧಿಕಾರಿಗಳಿಂದಲೋ ವಿಧಿಸಲ್ಪಟ್ಟ ಹೊಸ ತೆರಿಗೆಗಳ ವಿಚಾರ, ದಂಡ, ವಿನಾಯತಿ, ಬಲಾತ್ಕಾರದಿಂದ ಆಚರಣೆಗೆ ತಂದ ನ್ಯಾಯಬಾಹಿರ ಪದ್ಧತಿಗಳು ಮುಂತಾದ ಆಡಳಿತಕ್ಕೆ ಸಂಬಂಧಿಸಿದ ಪ್ರಮುಖ ಅಂಶಗಳು. ಕ್ರಿ.ಶ. ೧೫೧೫ರ ಶಾಸನವೊಂದರಲ್ಲಿ ನೇಕಾರರು, ಗಾಣಿಗರು, ಚಿಲ್ಲರೆ ವ್ಯಾಪಾರಿಗಳು ಮುಂತಾದವರಿಗೆ ತೆರಿಗೆ ಮನ್ನಾ ಮಾಡಿದ ವಿಚಾರವಿದೆ.[೭೪] ತೆರಿಗೆ ವಿನಾಯ್ತಿಯ ಜೊತೆಗೆ ಅವುಗಳನ್ನು ಹಾಕಬೇಕಾದ ಸಂದರ್ಭಗಳಲ್ಲಿ ತೆರಿಗೆಯ ಪ್ರಮಾಣಗಳನ್ನು ತಿಳಿಸುವ ಶಾಸನಗಳು, ಅಲ್ಲದೆ ಕಟ್ಟಡ ಮುಂತಾದುವುಗಳನ್ನು ಕಟ್ಟಿಸಲು ತಗುಲಿದ ವೆಚ್ಚ ಇತ್ಯಾದಿ ವಿವರಗಳನ್ನೊದಗಿಸುವ ಶಾಸನಗಳೂ ಇವೆ.[೭೫] ಇವು ಅಂದಿನ ಆರ್ಥಿಕ ಸ್ಥಿತಿಯನ್ನು ಅರಿಯಲು ನಮಗೆ ಸಹಾಯಕಾರಿಯಾಗಿದೆ. ಇವುಗಳಲ್ಲದೆ ಸಂತೆಗಳ ಅಥವಾ ಪಟ್ಟಣಗಳ ಪ್ರಾರಂಭ, ವ್ಯವಸಾಯ ಅಭಿವೃದ್ಧಿಗಾಗಿ ಸಿಕ್ಕ ಪ್ರೋತ್ಸಾಹ, ಮುಸಾಪರ್‌ಖಾನ ಅಂದರೆ ಅತಿಥಿಗೃಹ, ರಸ್ತೆ, ಕೆರೆ ಕಾಲುವೆಗಳ ನಿರ್ಮಾಣ ಮುಂತಾದ ಜನೋಪಕಾರಿ ಕಾರ್ಯಗಳ ಪ್ರಸ್ತಾಪ ಕೆಲವು ಶಾಸನ ಗಳಲ್ಲಿವೆ.[೭೬] ಮೈಸೂರಿಗೆ ಹತ್ತಿರವಿರುವ ಈಗಿನ ಕೃಷ್ಣರಾಜ ಸಾಗರ ಆಣೆಕಟ್ಟೆಯ ಹತ್ತಿರವೇ ಟಿಪ್ಪುಸುಲ್ತಾನನು ಕಾವೇರಿ ನದಿಗೆ ಅಡ್ಡಲಾಗಿ ಅಣೆಕಟ್ಟೆಯೊಂದನ್ನು ಕಟ್ಟಿಸಲು ಅದರ ನಾಲೆಗಳಿಂದ ನೀರನ್ನು ಬಳಸಿ ಬೆಳೆಯನ್ನು ಬೆಳೆಯಲು ರೈತರಿಗೆ ಪ್ರೋತ್ಸಾಹಿಸಿದ್ದ ಅಲ್ಲಿಯ ಶಾಸನವೊಂದರಿಂದ ತಿಳಿದಿದೆ.[೭೭] ಧಾನ್ಯ ಸಂಗ್ರಹಣೆಗಾಗಿ ಕಣಜಗಳನ್ನು ಕಟ್ಟಿಸಿದ್ದು ಸಹ ಕೆಲವು ಶಾಸನಗಳಿಂದ ನಮಗೆ ತಿಳಿದುಬರುತ್ತದೆ.[೭೮]

ಈ ಶಾಸನಗಳ ಅಧ್ಯಯನದಿಂದ ಸಾಮಾಜಿಕ ಸ್ಥಿತಿಗತಿಗಳ ಬಗೆಗೂ ನಮಗೆ ಅಲ್ಲಲ್ಲಿ ಮಾಹಿತಿಗಳು ದೊರೆಯುತ್ತವೆ. ಉದಾಹರಣೆಗೆ 'ನಿಪುತ್ರಿಕ್' ಎಂಬ ಪದ್ಧತಿ. ಉತ್ತರ ಕರ್ನಾಟಕ ಮತ್ತು ಕೊಂಕಣದಲ್ಲಿ ಪ್ರಚಾರದಲ್ಲಿದ್ದ ಈ ಪದ್ಧತಿಯ ಪ್ರಕಾರ ಮಗನಿಲ್ಲದೆ ಮರಣ ಹೊಂದಿದ ವ್ಯಕ್ತಿಯ ಆಸ್ತಿಯು ಸರ್ಕಾರಕ್ಕೆ ಹೋಗುತ್ತಿತ್ತು. ಹೆಣ್ಣು ಮಕ್ಕಳಾಗಲಿ ಅಥವಾ ಹತ್ತಿರದ ಬಂಧುಗಳಾರಿಗೂ ಇದರ ಹಕ್ಕಿರಲಿಲ್ಲ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಈ ಪದ್ಧತಿ ಕೆಲವು ಸ್ಥಳಗಳಲ್ಲಿ ಎಲ್ಲಾ ಕೋಮಿನ ಜನರಿಗೂ

ಇನ್ನು ಕೆಲವು ಸ್ಥಳಗಳಲ್ಲಿ ಕೆಲವೇ ಕೋಮಿನ ಜನರಿಗೂ ಅನ್ವಯಿಸುತ್ತಿತ್ತು[೭೯]. ಈ ಸಂದರ್ಭಗಳಲ್ಲಿ ನಾವು ಆದಿಲ್‌ಷಾಹಿ ಸುಲ್ತಾನರು ಈ ಪದ್ಧತಿಯನ್ನು ರದ್ದುಪಡಿಸಲೋಸುಗ ಹೊರಡಿಸಿದ ಅನೇಕ ಆಜ್ಞೆಗಳನ್ನು ಕಾಣಬಹುದು. ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಕೆಲವು ಕೋಮಿನ ಜನರು ಕೆಲವು ಕೆಲಸಗಳನ್ನು ಕಡ್ಡಾಯವಾಗಿ ಮಾಡಲೇಬೇಕಿತ್ತು. ಇಂತಹ ಕಡ್ಡಾಯ ಸೇವೆಗಳನ್ನು ಕೆಲವು ಕೋಮಿನ ಜನರಿಗೆ ಮನ್ನಾ ಮಾಡಿ ಹೊರಡಿಸಿದ ಅಪ್ಪಣೆಗಳನ್ನು ನಾವು ಕಾಣಬಹುದು.[೮೦] ಉದಾಹರಣೆಗೆ ನಾಯಿಂದ ಕೋಮಿನ ಜನರು ಸೈನ್ಯದಲ್ಲಿ ಕಡ್ಡಾಯ ಸೇವೆ ಸಲ್ಲಿಸಬೇಕಾಗಿರಲಿಲ್ಲ.

ಕೆಲವು ಶಾಸನಗಳಲ್ಲಿ ಸ್ಥಳನಾಮಗಳ ವಿವರಣೆ, ಯಾವುದಾದರೊಂದು ಊರಿನ ಹಳೆಯ ಹೆಸರು ಹಳೆಯ ಹೆಸರಿಗೆ ಬದಲಾಗಿ ಇಟ್ಟ ಹೊಸ ಹೆಸರು ಇತ್ಯಾದಿ ವಿವರಗಳಿರುತ್ತವೆ. ರಾಯ್‌ಬಾಗ್‌ಅನ್ನು ಮಸ್ತಫಾಬಾದ್ ಎಂದು, ಬಿಜಾಪುರವನ್ನು ಮಹಮ್ಮದಪುರ ಎಂದು ಕೋಲಾರ ಜಿಲ್ಲೆ ಮುಳಬಾಗಿಲ ತಾಲ್ಲೂಕಿನ ಮೈಲಾಪುರವನ್ನು ಮುಹಮ್ಮದ್‌ನಗರ ಎಂದು, ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿಯನ್ನು ರಸೂಲ್‌ಪುರ ಎಂದು, ಬಾಗಲಕೋಟೆ ಜಿಲ್ಲೆ ಮುದೋಳನ್ನು ಮುದವಳ ಎಂದು, ಹೊನ್ನಾಳಿಯನ್ನು ಹೊನ್ನಹಳ್ಳಿ ಎಂದು, ಗದಗವನ್ನು ಕದಕ್ ಎಂದು ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣ ತಾಲ್ಲೂಕು ಪಾಲಹಳ್ಳಿಯನ್ನು ರಹಮತ್‌ನಗರ ಎಂದು ಕರೆಯುತ್ತಿದ್ದುದನ್ನು ನಾವು ಉದಾಹರಿಸಬಹುದು.[೮೧]

ಅಳತೆಗೆ ಸಂಬಂಧಿಸಿದಂತೆ ನೀತನ್, ಚಾವರ್, ಚೀಫಾ, ಗಜ್ ಮುಂತಾದ ಶಬ್ದಗಳ ಬಳಕೆಯನ್ನು, ನಾಣ್ಯಗಳಿಗೆ ಸಂಬಂಧಿಸಿದಂತೆ ಹೊನ್, ಪ್ರತಾಪ್, ಟಂಕ, ಜೀಕಾಣಿ, ಜೀತಾಲ್ ಮುಂತಾದ ಪದಗಳ ಬಳಕೆಯನ್ನು ಈ ಶಾಸನಗಳಲ್ಲಿ ಕಾಣುತ್ತೇವೆ.[೮೨] ಕೆಲವೊಮ್ಮೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಇರುವ ದೂರವನ್ನೇ ಅರಸರಿಗೆ ಸೇರಿದ ರಾಜ್ಯದ ಎಲ್ಲೆಯನ್ನೋ ಅಥವಾ ಮಸೀದಿ, ಈದ್‌ಗಾಹ್ ಅಥವಾ ಪ್ರಾರ್ಥನಾಸ್ಥಳ, ಖಬರಸ್ಥಾನ ಅಥವಾ ಸ್ಮಶಾನ ಭೂಮಿ ಮುಂತಾದ ಧಾರ್ಮಿಕ ಸ್ಥಳಗಳಿಗೆ ದತ್ತಿಯಾಗಿ ನೀಡಿದ ಭೂಮಿಗಳ ಚಕ್ಕುಬಂದಿಗಳ ವಿವರಗಳನ್ನು ತಿಳಿಸುವ ಶಾಸನಗಳೂ ಇವೆ.[೮೩]

ಕರ್ನಾಟಕದಲ್ಲಿ ದೊರೆತ ತೋಪುಗಳ ಮೇಲಿರುವ ಅನೇಕ ಶಾಸನಗಳು ಅವುಗಳನ್ನು ತಯಾರು ಮಾಡಲು ಅಪ್ಪಣೆಕೊಟ್ಟ ಅರಸ, ಅವನ್ನು ರವಾನಿಸಿದ ಸ್ಥಳ, ಯಾವ ಯಾವ ಅರಸರ ಕಾಲದಲ್ಲಿ ಅವುಗಳನ್ನು ಹೆಚ್ಚು ಹೆಚ್ಚಾಗಿ ತಯಾರಿಸುತ್ತಿದ್ದರು ಎಂಬಂತಹ ಅನೇಕ ವಿಷಯಗಳನ್ನು ತಿಳಿಯಲು ಸಹಾಯಕಾರಿಯಾಗಿವೆ. ನಿಜಾಂ ಷಾಹಿ ಮತ್ತು ಬರೀದ್‌ಷಾಹಿ ಸುಲ್ತಾನರು, ಆದಿಲ್‌ಷಾಹಿ ಸುಲ್ತಾನರಿಗಿಂತ ಹೆಚ್ಚು ಫಿರಂಗಿಗಳನ್ನು ತಯಾರಿಸಿದಂತೆ ಕಂಡುಬರುತ್ತದೆ. ಹತ್ತೊಂಬತ್ತನೆಯ ಶತಮಾನದ ಆದಿಭಾಗದವರೆಗೂ ಈ ಕೈಗಾರಿಕೆಯು ಜೀವಂತವಾಗಿತ್ತೆಂಬುದು ಕಲ್ಯಾಣಿನವಾಬರ ಆರು ಫಿರಂಗಿಗಳ ಮೇಲಿರುವ ಶಾಸನಗಳಿಂದ ತಿಳಿದು ಬರುತ್ತದೆ.[೮೪]

ನಮ್ಮ ನಾಡಿನ ಸಾಹಿತ್ಯ ಚರಿತ್ರೆಯ ಜೊತೆಗೆ ಲೇಖನ ಕಲೆಯ ದೃಷ್ಟಿಯಿಂದಲೂ ಈ ಶಾಸನಗಳ ಮೌಲ್ಯ ಹೆಚ್ಚಿನದು. ಅನೇಕ ಕವಿಗಳು, ಸುಂದರ ಲಿಪಿಕಾರರು ಅಥವಾ ಶಿಲ್ಪಿಗಳು ನಮಗೆ ತಿಳಿದಿರುವುದು ಈ ಶಾಸನಗಳಿಂದಲೇ, ಪದ್ಯರೂಪದಲ್ಲಿ ಬರೆದಿರುವ ಅನೇಕ ಶಾಸನಗಳಲ್ಲಿ ಕವಿಗಳ ಹೆಸರು ಉಳಿದು ಬಂದಿದೆ. ಇದರಲ್ಲಿ ಪರ್ಶಿಯನ್ ಭಾಷೆಯ ಕವಿಗಳೇ ಹೆಚ್ಚು. ಒಬ್ಬಿಬ್ಬರು ಅರಬ್ಬೀ ಭಾಷೆಯ ಕವಿಗಳೂ ಇದ್ದಾರೆ. ಇಲ್ಲಿ ಫರೀದ್, ನದೀಮ್, ಮುಹಮ್ಮದ್, ಅಮೀನ್, ಅಬ್ದುಲ್ ಖಾನಮ್, ಆಬಿದ್, ಬಾದ್‌ಷಾಹ್, ಮೊಹಿಯುದ್ದೀನ್, ಮೀರ್ ಹುಸೇನ್ ಅಲಿ, ಗುಲಾಮ್ ಹುಸೇನ್, ಷಹೀರ್ ಮುಂತಾದ ಕವಿಗಳನ್ನು ಮಹಮದ್ ಬಿನ್‌ದಿಯಾ (೧೩೨೩), ಮಿರಾತ್ ಹಿರೆವೀ (೧೫೧೭), ಖಾಜಿ ನಿಜಾಮ್ ದವ್ವಾನೀ (೧೫೧೮), ಹಾಫೀಜ್ ನಿಜಾಮುದ್ದೀನ್ (೧೫೩೬-೩೭), ಹಿದಾಯುತುಲ್ಲಾಹ್ (೧೫೮೧) ಕರೀಮುದ್ದೀನ್ ಅಲಿ (೧೫೮೩), ಅಬ್ದುಲ್ ಅಜೀಜ್ (೧೬೩೩-೩೪) ಮುಂತಾದ ಸುಂದರ ಲಿಪಿಕಾರರನ್ನು ಉದಾಹರಿಸಬಹುದು. ಬಿಜಾಪುರದ ಸುಲ್ತಾನನಾದ ಅಲಿ ಆದಿಲ್‌ಷಾಹನು ರಚಿಸಿದ ಪರ್ಶಿಯಾ ಭಾಷೆಯ ಕವಿತೆಯೊಂದು ಶಾಸನದಲ್ಲಿ ಇಂದಿಗೂ ಸುರಕ್ಷಿತವಾಗಿದೆ.[೮೫] ಹದಿನಾರು ಹದಿನೇಳನೆಯ ಶತಮಾನದಲ್ಲಿ ದಖನಿ ಎಂದು ಪ್ರಸಿದ್ಧವಾಗಿದ್ದ ಹಳೆಯ ಉರ್ದು ಭಾಷೆಯ ಮಾದರಿಯಲ್ಲಿ ಎರಡು ಶಾಸನಗಳಲ್ಲಿ ದೊರಕಿರುವುದನ್ನು ನಾವು ಕಾಣಬಹುದು. ಇವುಗಳಲ್ಲೊಂದು ಹದಿನೈದು ಪದ್ಯಗಳ ನ್ನೊಳಗೊಂಡಿದೆ. ಮತ್ತೊಂದರಲ್ಲಿ ಎರಡು ಸಾಲಿನ ಒಂದೇ ಒಂದು ಪದ್ಯವಿದೆ.[೮೬] ಸ್ಥಳೀಯ ಭಾಷೆಗಳ ಅನೇಕ ಶಬ್ದಗಳು ಈ ಶಾಸನಗಳ ಮಧ್ಯೆ ಮಧ್ಯೆ ಕಂಡುಬರುವುದು ಭಾಷಾಶಾಸ್ತ್ರದ ದೃಷ್ಟಿಯಿಂದ ಅದರಲ್ಲೂ ಕನ್ನಡ ಮತ್ತು ಇತರ ಭಾಷೆಗಳಲ್ಲಿ ಎಷ್ಟರಮಟ್ಟಿಗೆ ಕೊಳ್ಳು-ಕೊಡಿಗೆ ನಡೆದಿದೆ ಎಂಬುವುದನ್ನು ಅಭ್ಯಾಸ ಮಾಡಲು ಸಹಾಯಕವಾಗಿದೆ. ಉದಾಹರಣೆಗೆ ನಾವು ಈ ಮುಂದಿನ ಶಬ್ದಗಳನ್ನು ಗಮನಿಸಬಹುದು. ಸುತನ್, ನೀತನ್, ಹುಲ್‌ಮುಕ್, ಬಾಯಿನ್, ಬಾವೀನ್, ಮಹಾಜನ್,

ಬಾಲೋಕಿಯನ್, ಗಗನ್, ಘನನ್, ದಿಡ್ಡಿ, ಚಾವರ್, ಕರಂಜಿ (ಇದು ಪರ್ಶಿಯನ್ ಭಾಷೆಯ ಕಾರೀಜ್ ಎಂಬುವುದರ ಅಪಬ್ರಂಶ), ಕಾಕ, ಪೇಟ್ ಅಥವಾ ಪೆಂಟ್, ನಾಡ್ ಇತ್ಯಾದಿ.

ಬಿದರೆ, ಬಿಜಾಪುರ, ರಾಯಚೂರು, ಗುಲ್ಬರ್ಗ ಮತ್ತು ಇತರ ಸ್ಥಳಗಳಲ್ಲಿ ಬಳಕೆಯಲ್ಲಿದ್ದ 'ಷುಹುರ್' ಮತ್ತು 'ಹಿಜರ್ ಶಕೆಗಳ ವಿಚಾರ ನಮಗೆ ತಿಳಿಯುವುದು ಈ ಶಾಸನಗಳಿಂದಲೇ[೮೭] ಟಿಪ್ಪು ಸುಲ್ತಾನನು ಬಳಕೆಗೆ ತಂದ 'ಮೌಲೂದಿ ಶಕೆ' ಅವನ ಕೆಲವು ಶಾಸನಗಳಿಂದ ತಿಳಿಯ ಬಹುದು. ಕೀರ್ಮಾನಿಯವರು ಈ ಶಕೆಯನ್ನು 'ಮಹಮ್ಮದಿ ಶಕೆ' ಎಂದು ಕರೆದಿದ್ದಾರೆ.[೮೮] ಹಿಜರಿ ಶಕೆಯನ್ನು ಬರೆಯುವಾಗ ಅಂಕೆಗಳನ್ನು ಎಡದಿಂದ ಬಲಕ್ಕೆ 'ಮೌಲೂದಿ ಶಕೆ'ಯನ್ನು ಬರೆಯುವಾಗ ಅಂಕೆಗಳನ್ನು ಬಲದಿಂದ ಎಡಕ್ಕೂ ಸಾಮಾನ್ಯವಾಗಿ ಬರೆಯುವ ಪದ್ಧತಿ ಇದ್ದು ಈ ಪದ್ಧತಿಯನ್ನು ನಾವು ಟಿಪ್ಪುಸುಲ್ತಾನನ ಕೆಲವು ಶಾಸನಗಳಲ್ಲಿ ಕಾಣುತ್ತೇವೆ.[೮೯] ಇವೆರಡು ಶಕೆಗಳಿವೆ ವ್ಯತ್ಯಾಸವೆಂದರೆ 'ಹಿಜರಿ' ಶಕೆಯು ಇಸ್ಲಾಂ ಮತ ಸ್ಥಾಪಕನಾದ ಮೊಹಮ್ಮದ್ ಪೈಗಂಬರ್ (ಸ.ಅ.ಸ) ಮಕ್ಕಾ ನಗರದಿಂದ ಮದಿನಾ ನಗರಕ್ಕೆ ವಲಸೆ ಹೋದ ದಿನದಿಂದ ಅಂದರೆ ಕ್ರಿ.ಶ. ೬೨೨ರಲ್ಲಿ ಪ್ರಾರಂಭ ವಾಯಿತೆಂದು ನಮಗೆ ತಿಳಿದೇ ಇದೆ. ಆದರೆ ಪೈಗಂಬರರು ತಾವು ದೇವದೂತ ಅಥವಾ ಧರ್ಮಪ್ರಚಾರಕರೆಂದು ಮೊದಲ ಬಾರಿಗೆ ಹೇಳಿಕೊಂಡಿದ್ದ ಕ್ರಿ.ಶ. ೬೦೯ರಲ್ಲಿ. ಅಂದಿನಿಂದ ಈ 'ಮಾಲೂದಿ ಶಕೆ' ಪ್ರಾರಂಭವಾಯಿತು.ಇವೆರಡಕ್ಕೂ ಇರುವ ಅಂತರ ಹದಿಮೂರು ವರ್ಷಗಳು. ಟಿಪ್ಪುಸುಲ್ತಾನನ ಬಹಳಷ್ಟು ಶಾಸನಗಳಲ್ಲಿ ಪರ್ಶಿಯನ್ ಭಾಷೆಯ ಪದ್ಯಗಳಿದ್ದು ಅವು ತೇದಿಯ ವಿವರಗಳನ್ನು ಹೊಂದಿವೆ.[೯೦]

ಅನೇಕ ಮುಸಲ್ಮಾನರ ಕಟ್ಟಡಗಳ ಅವಶೇಷಗಳನ್ನು ಗುರುತಿಸುವುದು ಅಲ್ಲದೆ ಅವುಗಳನ್ನು ಕಟ್ಟಿಸಿದವರು ಇಲ್ಲವೆ ಅವುಗಳ ಜೀರ್ಣೋದ್ಧಾರ ಮಾಡಿಸಿದವರ ಹೆಸರು, ಅವುಗಳ ಕಾಲ ಇನ್ನೂ ಮುಂತಾದ ವಿವರಗಳನ್ನು ನಾವು ತಿಳಿಯುವುದು ಈ ಶಾಸನಗಳಿಂದಲೇ ಮುಸ್ಲಿಂ ವಾಸ್ತುಶಿಲ್ಪದ ಅಧ್ಯಯನದ ದೃಷ್ಟಿಯಿಂದ ಈ ಶಾಸನಗಳ ಮೌಲ್ಯ ಅಮೋಘವಾದುದು. ಈ ವಾಸ್ತುಶಿಲ್ಪ ಬೆಳೆದುಬಂದ ರೀತಿ, ಅದನ್ನು ಬೆಳೆಸಲು ಪ್ರೋತ್ಸಾಹಿಸಿದ ಅರಸರ ವಿಚಾರ. ಕಾಲಕಾಲಕ್ಕೆ ಬಂದ ವಾಸ್ತುಶಿಲ್ಪದ ವಿವಿಧ ಶೈಲಿಗಳ ಅಧ್ಯಯನ, ಮುಂತಾದ ವಿಷಯಗಳ ದೃಷ್ಟಿಯಿಂದ ಈ ಶಾಸನಗಳು ತುಂಬಾ ಉಪಯುಕ್ತವಾಗಿವೆ. ಕೋಟೆಗಳನ್ನೋ, ಮಂದಿರಗಳನ್ನೋ ಕಟ್ಟಿಸಬೇಕಾದರೆ ಹಾಗೂ ಇತರ ಶುಭಕಾರ್ಯಗಳನ್ನು ಮಾಡಬೇಕಾದರೆ ಜನತೆ ಜ್ಯೋತಿಷ್ಯ ಶಾಸ್ತ್ರಕ್ಕೆ ಕೊಡುತ್ತಿದ್ದ ಮಹತ್ತ್ವವನ್ನು ನಾವು ಕೆಲವು ಶಾಸನಗಳಿಂದ ತಿಳಿಯುತ್ತೇವೆ.[೯೧] ಬೆಂಗಳೂರಿನ ಕೋಟೆಯಲ್ಲಿರುವ ಟಿಪ್ಪುಸುಲ್ತಾನನ ಅರಮನೆಗೆ 'ಫರೂಕ್ ಮಹಲ್' ಎಂಬ ಹೆಸರಿದ್ದಿತೆಂದು ತಿಳಿಯುವುದೇ ನಾವು ಅವನ ಶಾಸನದಲ್ಲಿ.[೯೨]

ಮಸೀದಿ, ಗೋರಿ, ಈದ್‌ಗಾಹ್ ಮುಂತಾದ ಧಾರ್ಮಿಕ ಕಟ್ಟಡಗಳ ಮೇಲೆ ಕಂಡುಬರುವ ಶಾಸನಗಳಲ್ಲಿ ಮುಸ್ಲಿಮರ ಪವಿತ್ರ ಗ್ರಂಥವಾಗಿರುವ ಖುರಾನಿನಲ್ಲಿರುವ ಪದ್ಯಗಳೇ ಹೆಚ್ಚಾಗಿರುತ್ತವೆ. ಅಲ್ಲದೆ ಕೆಲವು ಶಾಸನಗಳಲ್ಲಿ ಮುಸ್ಲಿಮರ ದೇವರು ಅಲ್ಲಾಹ್ ಹಾಗೂ ಇಸ್ಲಾಂ ಧರ್ಮದ ಸ್ಥಾಪಕ ಮೊಹಮ್ಮದ್ ಪೈಗಂಬರ್ (ಸ.ಅ.ಸ)–ಇವರ ವಿವಿಧ ತೊಂಬತ್ತೊಂಬತ್ತು ಹೆಸರುಗಳನ್ನು ಕಾಣಬಹುದು.[೯೩] ಹೀಗೆ ಇವು ಧಾರ್ಮಿಕ ಇತಿಹಾಸದ ರಚನೆಯಲ್ಲಿ ಮಹತ್ತ್ವವಾದ ಪಾತ್ರವನ್ನು ವಹಿಸಿಕೊಂಡಿವೆ.

ಹೀಗೆ ಕರ್ನಾಟಕದ ಮಹಮ್ಮದೀಯ ಶಾಸನಗಳು ಖಿಲ್ಜಿಯ ಅರಸರ ಕಾಲದಿಂದ ಮೈಸೂರು ಒಡೆಯರ ಕಾಲದವರೆಗೂ ಕರ್ನಾಟಕದಲ್ಲಿ ಆದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ಆಡಳಿತಾತ್ಮಕ ಬದಲಾವಣೆಗಳನ್ನು, ವಿವಿಧ ವ್ಯಕ್ತಿಗಳು, ಅಧಿಕಾರಿಗಳು, ಆಡಳಿತಾಧಿಕಾರಿಗಳು ಕಟ್ಟಿಸಿದ ಸ್ಮಾರಕಗಳನ್ನು ಕುರಿತು ಅಧ್ಯಯನ ನಡೆಸಲು ಉಪಯುಕ್ತ ಆಕರಗಳಾಗಿವೆ. ಇವು ಆಯಾಯ ವಿಷಯಗಳನ್ನು ಕುರಿತು ನೇರ ಮಾಹಿತಿಗಳನ್ನು ನೀಡುತ್ತವೆ. ಕರ್ನಾಟಕದ ವಿವಿಧ ಜಿಲ್ಲೆಗಳು ಹಾಗೂ ಪ್ರಾಂತ್ಯಗಳನ್ನು ಕುರಿತ ಅಧ್ಯಯನ ನಡೆಸುವುದಕ್ಕೆ ತುಂಬಾ ಸಹಕಾರಿಯಾಗಿವೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *Epigraphia Indo Moslimica* (EIM), 1927-28, Page 17.

೨. **ಕರ್ನಾಟಕದ ಪರ್ಶಿಯನ್ ಅರೇಬಿಕ್ ಮತ್ತು ಉರ್ದು ಶಾಸನಗಳು** (ಕ.ಪ.ಉ.ಶಾ) ಪ್ರಸಾರಾಂಗ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಶಾಸನ ಸಂಖ್ಯೆ ೨೧೭.

೩. ಅದೇ ಶಾಸನ ಸಂಖ್ಯೆ ೯೧.

೪. ಅದೇ ಶಾಸನ ಸಂಖ್ಯೆ ೩೫.

೫. ಅದೇ ಶಾಸನ ಸಂಖ್ಯೆ ೨೫೦.

೬. *Karnataka state gazetteer* (K.S.G.), Government of Karnataka Belgaum district 1987, Page 861-62.

೭. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೧೧೬.

೮. ಅದೇ ಶಾಸನ ಸಂಖ್ಯೆ ೧೯.

೯. ಅದೇ ಶಾಸನ ಸಂಖ್ಯೆ ೯೯.

೧೦. *K.S.G.* Governmant of Karnataka, Balgaum district, 1987, Page 949.

೧೧. ಅದೇ ಪುಟ ೯೪೯.

೧೨. **ಕ.ಪ.ಅ.ಉ.ಶಾ.** ಶಾಸನ ಸಂಖ್ಯೆ ೨೬೬.

೧೩. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** ೯, ಬಾಗಲಕೋಟೆ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಮಾರ್ಚಿ ೨೦೦೬, ಶಾಸನ ಸಂಖ್ಯೆ ೧೩, ಪುಟ ೭೦ ಮತ್ತು ೭೧.

೧೪. ಅದೇ ಸಂಪುಟ, ಶಾಸನ ಸಂಖ್ಯೆ ೧೪, ಪುಟ ೭೧ ಮತ್ತು ೭೨.

೧೫. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೫೬.

೧೬. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೯,** ಶಾಸನ ಸಂಖ್ಯೆ ೬, ಪುಟ ೧೩೪–೩೫.

೧೭. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೧೫೫.

೧೮. ಅದೇ ಶಾಸನ ಸಂಖ್ಯೆ ೧೩೯.

೧೯. ಅದೇ ಶಾಸನ ಸಂಖ್ಯೆ ೧೫೫.

೨೦. ಅದೇ ಶಾಸನ ಸಂಖ್ಯೆ ೪೧೫.

೨೧. ಅದೇ ಶಾಸನ ಸಂಖ್ಯೆ ೧೬೩, ೧೬೪.

೨೨. ಅದೇ ಶಾಸನ ಸಂಖ್ಯೆ ೩೬೦.

೨೩. **K.S.G.** Governmant of Karnataka, Balgaum district, 1987, Page 932.

೨೪. ಅದೇ ಪುಟ ೯೩೨.

೨೫. **ಎಪಿಗ್ರಾಫಿಯ ಕರ್ನಾಟಿಕ** (ಎ.ಕ.) ಸಂಪುಟ XII, ಬಿ.ಎಲ್. ರೈಸ್, ೧೮೯೪, ಶಾಸನ ಸಂಖ್ಯೆ ಸಿರಾ ೬೬ (ಬಿ) ಹಾಗೂ ಕ.ಪ.ಅ.ಉ.ಶಾ. ಶಾಸನ ಸಂಖ್ಯೆ ೪೧೮.

೨೬. ಕ.ಪ.ಅ.ಉ.ಶ. ಶಾಸನ ಸಂಖ್ಯೆ ೪೧೬.

೨೭. ಅದೇ ಶಾಸನ ಸಂಖ್ಯೆ ೪೧೨.

೨೮. ಅದೇ ಶಾಸನ ಸಂಖ್ಯೆ ೧೭೪.

೨೯. **ಎ.ಕ. ಸಂಪುಟ** ೧೩, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ (ಕು.ಕ.ಅ.ಸಂ.) ೨೦೦೬, ತೀರ್ಥಹಳ್ಳಿ (ತೀರ್ಥ) ಶಾಸನ ಸಂಖ್ಯೆ ೩೮, ೩೯.

೩೦. **ಮೈಸೂರು ಆರ್ಕಿಯಾಲಜಿಕಲ್ ರಿಪೋರ್ಟ್** (ಎಂ.ಎ.ಆರ್) ೧೯೨೩, ಶಾಸನ ಸಂಖ್ಯೆ ೧೨೮.

೩೧. ಎ.ಕ. ಸಂಪುಟ XII, ಬಿ.ಎಲ್. ರೈಸ್, ೧೮೯೪, ಶಾಸನ ಸಂಖ್ಯೆ ಶಿರಾ ೭೫.

೩೨. ಕ.ಸ.ಅ.ಉ.ಶಾ. ಶಾಸನ ಸಂಖ್ಯೆ ೩೬೧.

೩೩. ಎ.ಕ. ಸಂಪುಟ XII, ಬಿ.ಎಲ್. ರೈಸ್, ೧೯೦೪ ಶಾಸನ ಸಂಖ್ಯೆ ಶಿರಾ ೧೧೨.

೩೪. ಕ.ಸ.ಅ.ಉ.ಶಾ. ಶಾಸನ ಸಂಖ್ಯೆ ೨೨೮.

೩೫. ಎ.ಕ. ಸಂಪುಟ XII, XVI, ಶಾಸನ ಸಂಖ್ಯೆ ಚಿಕ್ಕನಾಯಕನಹಳ್ಳಿ, ೯೪.

೩೬. ಉಳಿದ ಆರು ಪರಗಣಗಳು, ಬಸವಾಪಟ್ಟಣ, ಪೆನುಗೊಂಡ, ದೊಡ್ಡಬಳ್ಳಾಪುರ, ಹೊಸಕೋಟೆ, ಕೋಲಾರ ಮತ್ತು ಶಿರಾ.

೩೭. ಎ.ಕ. ಸಂಪುಟ VIII, ಬಿ.ಎಲ್. ರೈಸ್, ೧೮೯೪, ಶಾಸನ ಸಂಖ್ಯೆ ಸೊರಬ, ೩೫೫.

೩೮. ಎ.ಕ. ಸಂಪುಟ XII, ಬಿ.ಎಲ್. ರೈಸ್, ೧೮೯೪, ಶಾಸನ ಸಂಖ್ಯೆ ಶಿರಾ, ೯೬.

೩೯. ಎ.ಕ. ಸಂಪುಟ VI (1977), ಶ್ರೀರಂಗಪಟ್ಟಣ (ಶ್ರೀಪ) ೫೯.

೪೦. **ಕರ್ನಾಟಕ ಪರಂಪರೆ,** ಸಂಪುಟ ೨, ಪುಟ ೨೫೧.

೪೧. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೩೩೭.

೪೨. ಎ.ಕ. ಸಂಪುಟ VI, (1977), ಶ್ರೀಪ ೪೮.

೪೩. ಎ.ಕ. ಸಂಪುಟ X, ಬಿ.ಎಲ್. ರೈಸ್, ಕೋಲಾರ ೧೧೮.

೪೪. ಎ.ಕ. ಸಂಪುಟ VI, (1977), ಪಾಂಡವಪುರ (ಪಾಂಪು) ೧೯೭.

೪೫. ಅದೇ ಸಂಪುಟ ಶ್ರೀಪ ೫೦.

೪೬. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೩೧೦, ೩೧೨-೧೭, ೩೧೯, ೩೨೦, ೩೨೬, ೩೨೮-೩೬ ಮುಂತಾದವು.

೪೭. ಎ.ಕ. ಸಂಪುಟ VI, (1977), ಶ್ರೀಪ ೪೬.

೪೮. ಕ.ಸ.ಅ.ಉ.ಶಾ. ಶಾಸನ ಸಂಖ್ಯೆ ೩.

೪೯. ಎ.ಕ. V, (1976), ಸಂಪುಟ ಮೈಸೂರು (ಮೈ) ೧೧೨.

೫೦. ಕ.ಸ.ಅ.ಉ.ಶ. ಶಾಸನ ಸಂಖ್ಯೆ ೩೦೭.

೫೧. ಎ.ಕ. ಸಂಪುಟ VI (1977), ಶ್ರೀಪ ೬೦, ಕ.ಸ.ಅ.ಉ.ಶಾ, ಶಾಸನ ಸಂಖ್ಯೆ ೩೨೩.

೫೨. ಎ.ಕ. ಸಂಪುಟ VI (1977), ಪಾಂಡವಪುರ (ಪಾಂಪು ೧೭೧); ಶ್ರೀಪ ೧೨, ೧೩, ೧೪, ೧೬.
ಎ.ಕ. ಸಂಪುಟ XVI (ಪ್ರೊ॥ ಕೆ.ಎ. ನೀಲಕಂಠಶಾಸ್ತ್ರಿ) ಕುಣಿಗಲ್ಲು ೮೨, ೮೩, ಎ.ಕ. ಸಂಪುಟ III (1974), ನಂಜನಗೂಡು ೩೬೨, ೩೬೩ ಇತ್ಯಾದಿ.

೫೩. ಎ.ಕ. ಸಂಪುಟ XV, ಕೆ. ಮೊಹಮ್ಮದ್ ಶರೀಫ್, ೨೦೦೯, ಹೊಸನಗರ, ೨೧.

೫೪. ಅದೇ ಸಂಪುಟ XV, ಪೀಠಿಕೆ ಪುಟ ೯೮.

೫೫. ಎ.ಕ. ಸಂಪುಟ VI, ಶ್ರೀರಂಗಪಟ್ಟಣ ೫೩, ೫೪.

೫೬. ಎ.ಕ. ಸಂಪುಟ XI (1998), ಶಾಸನ ಸಂಖ್ಯೆ ಚಿಕ್ಕಮಗಳೂರು (ಚಿ.ಮ.) ೧೯೩.

೫೭. ಕ.ಪ.ಅ.ಉ.ಶ. ಶಾಸನ ಸಂಖ್ಯೆ ೩೩೦, ಪುಟ ೧೪೦.

೫೮. ಎ.ಕ. ಸಂಪುಟ XI, ಶಾಸನ ಸಂಖ್ಯೆ (ಚಿ.ಮ.) ೧೯೫.

೫೯. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೮.

೬೦. ಅದೇ ಶಾಸನ ಸಂಖ್ಯೆ ೨೩೩.

೬೧. ಎ.ಕ. VII (1979), ಸಂಪುಟ ಮಳವಳ್ಳಿ (ಮವ) ೧.

೬೨. ಕ.ಪ.ಅ.ಉ.ಶಾ, ಶಾಸನ ಸಂಖ್ಯೆ ೨೩೫.

೬೩. ಅದೇ ಶಾಸನ ಸಂಖ್ಯೆ ೧೦.

೬೪. ಅದೇಶ ಶಾಸನ ಸಂಖ್ಯೆ ೩೦೮.

೬೫. *Annual Report on Indian Epigraphy* (A.R.I.E.) 1964-65 No. D. 278.

೬೬. EIM, 1939-40, pp. 17-18.

೬೭. A.R.I.E., 1959-60, No. D. 172.

೬೮. E.I.M., 1929-30, p. 22.

೬೯. ಅದೇ ಪುಟ ೨೧.

೭೦. ನೋಡಿ ಎ.ಕ. ಸಂಪುಟ VI (1877), ಶ್ರೀಪ ಶಾಸನ ಸಂಖ್ಯೆ ೫೯, ೬೦, ೬೧, ೬೪ ಇತ್ಯಾದಿ.

೭೧. ನೋಡಿ ಅದೇ ಸಂಪುಟ ಪಾಂಡವಪುರ (ಪಾಂಪು) ಶಾಸನ ಸಂಖ್ಯೆ ೧೭೧ ಮತ್ತು ೧೯೭, ಶ್ರೀ ಪ. ಶಾಸನಸಂಖ್ಯೆ ೧೨, ೧೩, ೧೪, ೧೬ ಇತ್ಯಾದಿ.

೭೨. EIM, 1931-32, pp. 19-20.

೭೩. ವಿವರಗಳಿಗೆ ನೋಡಿ Z.A. Desai : *Archaealogy of Karnataka* (Ed. Dr. A.V. Narasimha Murthy) : Mysore, 1988, pp. 184-85.

೭೪. A.R.I.E., 1970-71, No. D. 127.

೭೫. ಅದೇ, 1970-71, No. D. 126-127, 1963-64, No. D. 266, 1964-65, No. D. 284.

೭೬. ಅದೇ, 1958-59, No. D. 49, 85, 138, 1963-64, No. D. 258 ಇತ್ಯಾದಿ.

೭೭. ಅದೇ, 1958-59, No. D. 258.

೭೮. ಅದೇ, 1958-59, No. D. 138.

೭೯. Z.A. Desai, Indian History Congress, 33rd Session, Muzaffarpur, 1972, p. 646.

೮೦. *Epigraphia Indica-Arabic and Persian Suppliment* 1962, pp. 63-64.

೮೧. ಕ.ಸ.ಅ.ಉ.ಶ. ೧೫೫, ೧೭೮, ಎ.ಕ. X, ಬಿ.ಎಲ್. ರೈಸ್, ಮುಳುಬಾಗಿಲು ೨೪೬, M.A.R. 1923-No. 128. ಬಿಜಾಪುರ ಜಿಲ್ಲಾ ಗೆಜೆಟಿಯರ್ ೧೯೬೬, ಪುಟ ೫೦೪, ಕ.ಪ.ಅ.ಉ.ಶಾ. ಶಾಸನ ಸಂಖ್ಯೆ ೪೧೨, ಅದೇ ಶಾಸನ ಸಂಖ್ಯೆ ೩೬೫. ಎ.ಕ.ಸಂ. VI (1977), ಶ್ರೀಪ ೬೮ ಇತ್ಯಾದಿ.

೮೨. A.R.I.E, 1964-65, No. D. 287.

೮೩. ಅದೇ ೯೫೨–೫೩, No. D. 39; 1965-66, No. D. 233, 234, 242, 243 ಮುಂತಾದವು.

೮೪. ಅದೇ 1965-66, No. D. 262-66.

೮೫. ಅದೇ ೧೯೬೪–೬೫, No. D, 287.

೮೬. ಅದೇ ೧೯೬೨–೬೩, No. D. 163, 1965-66, No. D. 225.

೮೭. ಅದೇ 1955-56, No. D. 109, 1962-63, No. D. 179, 181, 1964-65, No. D. 330, 1968-69, No. D. 408 ಇತ್ಯಾದಿ.

೮೮. ನೋಡಿ : Mohibbul Hasan : *History of Tippu Sultan,* page 400.

೮೯. ಅದೇ ಪುಟ ೩೯೬ ಮತ್ತು ಎ.ಕ. ಸಂಪುಟ VI (1977), ಶ್ರೀಪ ೯೨, ಇತ್ಯಾದಿ.

೯೦. ಎ.ಕ. ಸಂಪುಟ VI (1977), ಶ್ರೀಪ. ೪೮, ೬೦, ೬೧ ಇತ್ಯಾದಿ.

೯೧. ಅದೇ ಸಂಪುಟ, ಶ್ರೀಪ. ೪೬.

೯೨. A.R.I.e. 1963-64, No. D. 242.

೯೩. ಎ.ಕ. ಸಂಪುಟ ಶ್ರೀಪ. ೪೯, ೫೦, A.R.I.E. 1962-63, No. D. 165, 167, 176 ಮತ್ತು 1964-65, No. D. 278, 280, 296 ಇತ್ಯಾದಿ.

# ಸ್ವ–ವಿವರ

ಪೂರ್ಣ ಹೆಸರು : **ಶ್ರೀ ಕೆ. ಮೊಹಮ್ಮದ್ ಶರೀಫ್**
ಮೂಲ ವಿಳಾಸ : ಕವಲೇದುರ್ಗ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.
ಖಾಯಂ ವಿಳಾಸ : ಮನೆ ಸಂಖ್ಯೆ ೬೪೯, ೧೩ನೇ ಮುಖ್ಯರಸ್ತೆ, ೪ನೆಯ ಹಂತ, ಟಿ.ಕೆ. ಬಡಾವಣೆ, ಮೈಸೂರು–೫೭೦ ೦೦೯. ದೂರವಾಣಿ : ೦೮೨೧–೨೫೪೧೧೯೭.
ಪದವಿ : **ಬಿ.ಎಸ್ಸಿ., ಎಂ.ಎ., ಡಿಪ್ ಇನ್ ಟ್ರಾನ್ಸ್** / ದ್ವಿತೀಯ ಭಾಷೆ : ಸಂಸ್ಕೃತ.
ಹುದ್ದೆ : ಶಾಸನ ತಜ್ಞ, ಸುಮಾರು ೩೫ ವರ್ಷಗಳ ಅನುಭವ.
ಕೆಲಸ ಮಾಡಿದ ಸಂಸ್ಥೆ : ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು–೫೭೦೦೦೬.

**ಪ್ರಕಟಣೆಗಳು**

ಅ) ೧. **'ಇಸ್ಲಾಂ ಮತ್ತು ಸಮಾಜ'** ಭಾಷಾಂತರ ಕೃತಿ ಸುಲ್ತಾನ್ ಶಹೀದ್ ಎಜುಕೇಷನ್ ಟ್ರಸ್ಟ್, ಮೈಸೂರ ಇವರಿಂದ ೧೯೯೯ರಲ್ಲಿ ಪ್ರಕಟವಾಗಿದೆ.

೨. **ಮೊಹಮ್ಮದ್ ಪೈಗಂಬರ್ ಜೀವನ ಚರಿತ್ರೆ** – ರಾಜ್ಯ ಸಂಪನ್ಮೂಲ ಕೇಂದ್ರ, ಕರ್ನಾಟಕ ಮೈಸೂರು ೮ ಇವರಿಂದ
೩. **ಮೊಹರಂ ಆಚರಣೆ** – ೨೦೦೭ರಲ್ಲಿ ಪ್ರಕಟಗೊಂಡಿವೆ.

೪. **ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೧೫** (ಹೊಸನಗರ ಮತ್ತು ಸಾಗರ ತಾಲ್ಲೂಕಿನ ಶಾಸನಗಳು) ೨೦೦೯ರಲ್ಲಿ ಕುವೆಂಪು ಅಧ್ಯಯನ ಸಂಸ್ತೆ ಮಾನಸ ಗಂಗೋತ್ರಿ, ಮೈಸೂರು–೫೭೦೦೦೬.

ಆ) ಕಾರ್ಯಾಲಯದಲ್ಲಿ ಶ್ರವಣಬೆಳಗೊಳ, ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಿಗೆ ಸಂಬಂಧಿಸಿದಂತೆ **'ಎಪಿಗ್ರಾಫಿಯಾ ಕರ್ನಾಟಿಕ'** ಮಾಲೆಯ ೧೩ ಸಂಪುಟಗಳು ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾಸನಗಂತೋತ್ರಿ, ಮೈಸೂರು ೬ ಇಂದ ಪ್ರಕಟಗೊಂಡಿವೆ.

ಇ) ಇತಿಹಾಸ, ಶಾಸನಶಾಸ್ತ್ರ, ಸಾಹಿತ್ಯ, ಕಲೆ, ವಾಸ್ತುಶಿಲ್ಪ, ಧರ್ಮ ಮತ್ತು ಸಿದ್ಧಾಂತ, ಆತ್ಮಚರಿತ್ರೆ ಮುಂತಾದ ವಿಷಯಗಳ ಬಗ್ಗೆ ಇಲ್ಲಿಯವರೆಗೆ ಸುಮಾರು ೧೨೫ ಲೇಖನಗಳು ಪ್ರಕಟಗೊಂಡಿವೆ.

ಈ) ಸುಮಾರು ೩೫ ವರ್ಷಗಳಿಂದ ಶಾಸನ ಶಾಸ್ತ್ರದಲ್ಲಿ ಸಂಶೋಧನಾ ಅನುಭವವನ್ನು ಪಡೆದಿದ್ದೇನೆ. ಅನೇಕ ಶಾಸನಗಳ ಅನ್ವೇಷಣಾ ಪ್ರವಾಸದ ಸಮಯದಲ್ಲಿ ಸುಮಾರು ೭೫ಕ್ಕಿಂತಲೂ ಹೆಚ್ಚು ಹೊಸ ಶಾಸನಗಳನ್ನು ಪತ್ತೇ ಮಾಡಿದ್ದೇನೆ. ಇವುಗಳಲ್ಲಿ ೫ ತಾಮ್ರ ಶಾಸನಗಳು ಇವೆಲ್ಲವೂ ಎಪಿಗ್ರಾಫಿಯ ಕರ್ನಾಟಿಕ ಹಾಗೂ ಇತರೆ ಕಡೆಗಳಲ್ಲಿ ಪ್ರಕಟವಾಗಿವೆ.

ಉ) ಇತಿಹಾಸ, ನಾಣ್ಯಗಳು, ಧರ್ಮ, ಹಬ್ಬಗಳು, ಆತ್ಮಚರಿತ್ರೆ ಮುಂತಾದ ಹತ್ತು ಹಲವು ವಿಷಯಗಳನ್ನೊಳಗೊಂಡಂತೆ ಸುಮಾರು ೮೨ ಕಿರು (ಕೆಲವು ಅರ್ಧ ಗಂಟೆಗಳವು) ಭಾಷಣಗಳನ್ನು ಮೈಸೂರ ಆಕಾಶವಾಣಿ ಕೇಂದ್ರಗಳಿಂದ ಹಾಗೂ ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ಜ್ಞಾನವಾಹಿನಿ ಇಂದ ಪ್ರಸಾರಗೊಂಡಿವೆ.

**ಸಮ್ಮೇಳನಗಳು**

ಸುಮಾರು ೨೫ಕ್ಕಿಂತಲೂ ಹೆಚ್ಚು ಸಮ್ಮೇಳನಗಳಲ್ಲಿ ಭಾಗವಹಿಸಿ ಶಾಸನಶಾಸ್ತ್ರ, ಇತಿಹಾಸ ಧರ್ಮ ಮತ್ತು ಸಮಾಜ ಮುಂತಾದ ವಿಷಯಗಳ ಬಗ್ಗೆ ಪ್ರಬಂಧಗಳನ್ನು ಮಂಡಿಸಿದ್ದೇನೆ. ಇವುಗಳಲ್ಲಿ ಬಹಳಷ್ಟು ಪ್ರಬಂಧಗಳು ಪ್ರಕಟಗೊಂಡಿದೆ.

ಇವುಗಳಲ್ಲದೆ ಶಾಸನಶಾಸ್ತ್ರ, ಸ್ವಾತಂತ್ರೋತ್ಸವ, ಕರ್ನಾಟಕ ರಾಜ್ಯೋತ್ಸವ, ಧಾರ್ಮಿಕ ವಿಷಯಗಳ ಬಗ್ಗೆ ಹಲವಾರು ಸಂಘ ಸಂಸ್ಥೆಗಳು ನಡೆಸಿದ ವಿವಿಧ ಸಮಾರಂಭಗಳಲ್ಲಿ ಭಾಗವಹಿಸಿ ಹತ್ತು ಹಲವಾರು ವಿಷಯಗಳ ಬಗೆಗೆ ಮಾತನಾಡಿದ್ದೇನೆ.

ಇವಲ್ಲದೆ ತೊಣಚೀಕೊಪ್ಪಲು ನಾಲ್ಕನೆಯ ಹಂತದ ನಿವಾಸಿ ಸಂಘದಲ್ಲಿ ೧೯೮೫ ರಿಂದ ೯೨ ರವರೆಗೆ ಕಾರ್ಯಕಾರಿ ಸಮಿತಿ ಸದಸ್ಯ, ಸಹ ಕಾರ್ಯದರ್ಶಿ ಹಾಗೂ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದೇನೆ. ಮೈಸೂರು ಜಿಲ್ಲಾ ಬರಹಗಾರರ ಸಂಘದ ಕಾರ್ಯಕಾರಿ ಸಮಿತಿ ಸದಸ್ಯ (೧೯೮೭), ಮೈಸೂರು ವಿಶ್ವವಿದ್ಯಾನಿಲಯದಿಂದ ಹೊರಬರುತ್ತಿರುವ ಮಾನವಿಕ **ಕರ್ನಾಟಕ** ಸಂಚಿಕೆಗಳ ಸಂಪಾದನಾ ಸಮಿತಿ ಸದಸ್ಯ ಹಾಗೂ ಸಂಪಾದಕನಾಗಿದ್ದೆ. ಹೀಗೆ ಇವುಗಳಲ್ಲದೆ ಇನ್ನೂ ಅನೇಕ ಸಂಘ ಸಂಸ್ಥೆಗಳಲ್ಲಿ ದುಡಿದಿದ್ದೇನೆ.

ಅಲ್ಲದೆ ಕುವೆಂಪು ಶತಮಾನೋತ್ಸವ ಸಮಾರಂಭದ ಸನ್ಮಾನ, ಇಲವಾಲಾದಲ್ಲಿ ನೂತನ ಮಸೀದಿಯ ಉದ್ಘಾಟನಾ ಸಮಾರಂಭದಲ್ಲಿ ನಡೆದ ಧಾರ್ಮಿಕ ಸಭೆಯಲ್ಲಿ ಸನ್ಮಾನ, ೨೦೦೪ರಲ್ಲಿ ಕನ್ನಡ ಉರ್ದುಬಾಂಧವ್ಯ ಕ್ಷೇತ್ರದಲ್ಲಿ ಸಲ್ಲಿಸಿರುವ ನಾಡಸೇವೆಯನ್ನು ಪರಿಗಣಿಸಿ (೧ನೇ ನವೆಂಬರ್ ೨೦೦೪ ರಲ್ಲಿ) ಕರ್ನಾಟಕ ದಸರಾ ವಸ್ತುಪ್ರದರ್ಶನ ಪ್ರಾಧಿಕಾರದ ವತಿಯಿಂದ ಸನ್ಮಾನವನ್ನು ಪಡೆದಿದ್ದೇನೆ.





# ಅಣ್ಣಿಗೇರಿಯಲ್ಲಿ ಪುರಾತತ್ತ್ವ ಉತ್ಖನನ

**ಡಾ. ಎಂ.ಎಸ್. ಕೃಷ್ಣಮೂರ್ತಿ* ಡಾ. ಆರ್. ಗೋಪಾಲ್** ಟಿ.ಎಸ್. ಗಂಗಾಧರ್*****

**ಅ**ಣ್ಣಿಗೇರಿ ಅಥವಾ ಅಣ್ಣಿಗೆರೆ (೧೫° ೨೫' ೩೪" ಉತ್ತರ ಮತ್ತು ೭೫°೨೬'೧೭" ಪೂರ್ವ) ಹುಬ್ಬಳ್ಳಿಯಿಂದ ಬೆಳ್ಳಾರಿಗೆ ಹೋಗುವ ಮಾರ್ಗದಲ್ಲಿ, ಸುಮಾರು ೩೫ ಕಿ.ಮೀ. ದೂರದಲ್ಲಿದೆ. ಪ್ರಾಚೀನ ಪ್ರಸಿದ್ಧವಾದ ಈ ಊರು, ಆದಿಕವಿ ಪಂಪನ ಹುಟ್ಟೂರು ಎಂದೂ ಹೆಸರುವಾಸಿಯಾಗಿದೆ. ಅಣ್ಣಿಗೇರಿ ಸನ್ ೨೦೧೦ರ ಸೆಪ್ಟೆಂಬರ್ ಮಾಹೆಯಲ್ಲಿ, ಇದಕ್ಕಿದ್ದಂತೆ ಪ್ರಸಿದ್ಧಿಗೆ ಬಂತು. ಕಾರಣ, ಈ ಊರಿನಲ್ಲಿ, ಚರಂಡಿ ದುರಸ್ತಿ ಕಾರ್ಯದ ಸಮಯದಲ್ಲಿ, ಭೂಮಿಯಿಂದ ಹೊರಕ್ಕೆ ಬಂದ ಅನೇಕ ಮಾನವ ತಲೆ ಬುರುಡೆಗಳು ಮತ್ತು ಅಸ್ಥಿಗಳು. ಕುತೂಹಲ ಭರಿತರಾದ ಜನರು, ಆಡಳಿತ ವರ್ಗ, ಪತ್ರಕರ್ತರು, ದೃಶ್ಯ-ಶ್ರಾವ್ಯ ಮಾಧ್ಯಮದವರು, ಪುರಾತತ್ತ್ವಜ್ಞರು, ವಿದ್ವಾಂಸರು, ವೈದ್ಯರು ಮುಂತಾದವರು ಅಣ್ಣಿಗೇರಿಗೆ ಧಾವಿಸಿ ಸ್ಥಳವನ್ನು ಪರೀಕ್ಷಿಸಿದರು, ವಿಸ್ಮಯ ಗೊಂಡರು, ಸಮಾಧಿಯ ಬಗ್ಗೆ ವಿವಿಧ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.

ಯಂತ್ರದಿಂದ ಚರಂಡಿಯ ಮಣ್ಣನ್ನು ಉತ್ಖನನ ಮಾಡುತ್ತಿದ್ದುದರಿಂದ, ಈ ಸಮಾಧಿಯು ಬಹಳಷ್ಟು ಜಖಂ ಆಗಿತ್ತು. ಸೇರಿದ್ದ ಜನಸಂದಣಿ ತಮ್ಮಿಷ್ಟ ಬಂದಂತೆ ಬುರುಡೆ ಗಳನ್ನು ಹೊರತೆಗೆದಿದ್ದರು. ಚರಂಡಿಯ ಕೊಳಚೆಯ ನೀರಿನ ಮಧ್ಯದಲ್ಲಿ ಐವತ್ತಕ್ಕೂ ಹೆಚ್ಚು ಮಾನವ ತಲೆಬುರುಡೆಗಳು ಮೇಲ್ನೋಟಕ್ಕೆ ಕಾಣುತ್ತಿದ್ದವು. ತಲೆ ಬುರುಡೆಗಳನ್ನು, ಮೂಲತಃ ಸಾಲು-ಸಾಲಾಗಿ, ವ್ಯವಸ್ಥಿತವಾಗಿ ಜೋಡಿಸಿ ಸಮಾಧಿ ಮಾಡಲಾಗಿತ್ತು. ಬುರುಡೆಗಳ ಜೋಡಣೆಗೆ ಹೊಂದಿಕೊಂಡಂತೆ ದಕ್ಷಿಣ ತುದಿಯಲ್ಲಿ ಕೈಕಾಲು ಹಾಗೂ ಇನ್ನಿತರ ಮೂಳೆಗಳನ್ನು ರಾಶಿ ಸುರಿದಿದ್ದರು.

ಇಂತಹ ಪರಿಸ್ಥಿತಿಯಲ್ಲಿದ್ದ ಅಸ್ಥಿ ಅವಶೇಷಗಳನ್ನು ಮೇಲ್ನೋಟದಲ್ಲಿ ಪರಿಶೀಲಿಸಿದ ತಜ್ಞರು ವಿವಿಧವಾದ ಅಭಿಪ್ರಾಯಗಳನ್ನು ಸೂಚಿಸಿದ್ದರು. ಅವುಗಳಲ್ಲಿ ಮುಖ್ಯವಾದವು ಗಳೆಂದರೆ:

ಇಲ್ಲಿ ಹೂಳಲಾದ ಮನುಷ್ಯರ ತಲೆ ಬುರುಡೆಗಳನ್ನು ದೇಹದಿಂದ ಪ್ರತ್ಯೇಕಮಾಡಿ ಹೂತಿರುವುದರಿಂದ, ಈ ದೇಹಗಳು ಯಾವುದೋ ನರ ಹತ್ಯೆಯಲ್ಲಿ ಶಿರಚ್ಛೇದನವಾದ ಮನುಷ್ಯರ ಅಸ್ಥಿ ಅವಶೇಷಗಳು ಆಗಿರಬೇಕು. ಈ ಸಮಾಧಿ ರಾಜದ್ರೋಹಿಗಳದ್ದಾಗಿರಬಹುದು ಅಥವಾ ಯುದ್ಧ ಖೈದಿಗಳದ್ದಾಗಿರಬಹುದು, ಈ ನರಮೇಧ ಧರ್ಮದ್ವೇಷಿ ಗಳಿಂದಾಗಿರಬಹುದು ಅಥವಾ ೧೮೫೭ರಲ್ಲಿ ಸಂಭವಿಸಿದ ನರಗುಂದ ಬಂಡಾಯದಲ್ಲಿ ನಡೆದಿರಬಹುದಾದ ನರಹತ್ಯೆಯ ಭಾಗವಾಗಿರಬಹುದು. ಅಸ್ಥಿ ಅವಶೇಷಗಳು ಸಾಕಷ್ಟು ಗಟ್ಟಿಯಾಗಿದ್ದುದರಿಂದ ಈ ಸಮಾಧಿ ಸುಮಾರು ಇನ್ನೂರು ವರ್ಷಗಳಷ್ಟು ಹಳೆಯದಿರಬಹುದೆಂದೂ ಸೂಚಿಸಲಾಗಿತ್ತು.

ಹುಬ್ಬಳ್ಳಿಯ 'ಕಿಮ್ಸ್' (KIMS) ಸಂಸ್ಥೆಯಿಂದ ಬಂದು ಸ್ಥಳ ಪರಿಶೀಲಿಸಿದ ವೈದ್ಯರ ತಂಡವೊಂದು, ಈ ಸಮಾಧಿ ಯಿಂದ ಮೂರು ತಲೆಬುರುಡೆ ಮಾದರಿಗಳನ್ನು ಸಂಗ್ರಹಿಸಿ ಹೆಚ್ಚಿನ ಪರೀಕ್ಷೆಗಾಗಿ ಕೊಂಡೊಯ್ದಿತ್ತು. ವೈದ್ಯರ ವರದಿಯ ಪ್ರಕಾರ, ಆ ಮೂರು ತಲೆಬುರುಡೆಗಳಲ್ಲಿ ಎರಡು ಪುರುಷರ ತಲೆಬುರುಡೆಗಳು, ಒಂದು ಸ್ತ್ರೀ ತಲೆಬರುಡೆಯೆಂದು ತಿಳಿಸ ಲಾಯಿತು. ಅಲ್ಲದೆ ಈ ಬುರುಡೆಗಳು ಸುಮಾರು ೩೦-೪೦ ವರ್ಷ ವಯಸ್ಸಿನ ವ್ಯಕ್ತಿಗಳದ್ದೆಂದೂ ಸಹ ವರದಿ ತಿಳಿಸಿತು. ಆಶ್ಚರ್ಯದ ಸಂಗತಿಯೆಂದರೆ ಸಮಾಧಿಯಲ್ಲಿ ಮೇಲ್ನೋಟಕ್ಕೆ ಕಾಣುತ್ತಿದ್ದ ಬುರುಡೆಗಳಿಗೂ, ಹಾಗೂ ವೈದ್ಯರು ಪರಿಶೀಲಿಸಿದ ತಲೆಬುರುಡೆಗಳೂ ಈ ಎರಡಕ್ಕೂ ಕೆಳದವಡೆ ಕಾಣೆಯಾಗಿತ್ತು. ಜೊತೆಗೆ ತಲೆ ಬುರುಡೆಯ ಕೆಳಭಾಗದಲ್ಲಿ ಬಲವಾಗಿ ಕಚ್ಚಿಕೊಂಡಿರುವಂತಹ ಮೊದಲನೆಯ ಕಶೇರುಮಣಿಯೂ ಸಹ ಕಾಣದಾಗಿತ್ತು.

ವಿದ್ವಾಂಸರ ವಿವಿಧ ಅಭಿಪ್ರಾಯಗಳ ಹಾಗೂ ವೈದ್ಯರ ವರದಿಯ ಹಿನ್ನೆಲೆಯಲ್ಲಿ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯವು, ಪುರಾತತ್ತ್ವ ಉತ್ಖನನವನ್ನು ಅಣ್ಣಿಗೇರಿಯಲ್ಲಿ ಪ್ರಾರಂಭಿಸಿತು. ಡಾ. ಎಂ.

* ಪ್ರೊಫೆಸರ್ ಎಮೆರಿಟಸ್, ಪುರಾತತ್ತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಮೈಸೂರು.
*** ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಮೈಸೂರು.

ಎಸ್. ಕೃಷ್ಣಮೂರ್ತಿ, ಪ್ರೊಫೆಸರ್ ಎಮೆರಿಟಸ್, ಮೈಸೂರು ವಿಶ್ವವಿದ್ಯಾನಿಲಯ; ಡಾ। ಆರ್. ಗೋಪಾಲ್, ನಿರ್ದೇಶಕರು; ಶ್ರೀ ಟಿ. ಎಸ್. ಗಂಗಾಧರ್, ಉಪ-ನಿರ್ದೇಶಕರು, ಇವರುಗಳ ನೇತೃತ್ವದಲ್ಲಿ ಉತ್ಖನನವು ನಡೆಯಿತು. ಉತ್ಖನನ ೨೦೧೧ ನೆಯ ಸಾಲಿನ ಫೆಬ್ರವರಿ-ಮಾರ್ಚ್ ತಿಂಗಳುಗಳಲ್ಲಿ, ಐವತ್ತು ದಿನಗಳ ಕಾಲ ನಡೆಯಿತು. ಇದರ ಫಲವಾಗಿ ಬಹಳ ಸ್ವಾರಸ್ಯ ಕರವಾದ ವಿಷಯಗಳು, ಸಮಾಧಿಯ ಬಗ್ಗೆ ಹೊರಬಂದವು.

ತಲೆ ಬುರುಡೆಗಳ ಸಮಾಧಿ ಇದ್ದ ಸ್ಥಳ, ಕೊಳಚೆ ನೀರಿನ ಚರಂಡಿಯ ತಳಮಟ್ಟದಲ್ಲಿತ್ತು. ಇದರಿಂದಾಗಿ ಇಡೀ ಸಮಾಧಿಸ್ಥಳ ಕೊಳಚೆಗುಂಡಿಯಂತೆಯೇ ಇತ್ತು. ಬಹಳ ವಿಚಕ್ಷಣೆಯಿಂದ ಇಡೀ ಜಾಗವನ್ನು ಜೌಗು ರಹಿತವನ್ನಾಗಿ ಮಾಡಿ, ವೈಜ್ಞಾನಿಕವಾಗಿ ಉತ್ಖನನವನ್ನು ನಡೆಸಲಾಯಿತು. ಉತ್ಖನನದಿಂದ ಹೊರಬಂದ ಪ್ರಮುಖ ವಿಷಯಗಳೆಂದರೆ:

೧. ಈ ಸಮಾಧಿಯನ್ನು ಎಲ್ಲಿಂದಲೋ ಸಂಗ್ರಹಿಸಲಾದ ತಲೆಬುರುಡೆಗಳು ಮತ್ತು ಮೂಳೆಗಳಿಗಾಗಿ ಮಾಡ ಲಾಗಿದೆ.

೨. ಬುರುಡೆಗಳು ಮತ್ತು ಮೂಳೆಗಳ ಸ್ಥಿತಿಯನ್ನು ಗಮನಿಸಿದಾಗ ಅವುಗಳು ಸಮಾಧಿಗೆ ಮುಂಚೆ ಕನಿಷ್ಠ ಆರುತಿಂಗಳಿಗೂ ಹೆಚ್ಚುಸಮಯ ಬಯಲಿನಲ್ಲಿ, ಕಾಲ ಮತ್ತು ನಿಸರ್ಗದ ವಿಕೋಪಕ್ಕೆ ತುತ್ತಾಗಿವೆ ಎಂದು ಎನಿಸುತ್ತದೆ.

೩. ಈ ರೀತಿ ನಿಸರ್ಗದ ವಿಕೋಪಕ್ಕೆ ತುತ್ತಾಗಿರುವುದರಿಂದ ತಲೆ ಬುರುಡೆಗೆ ಭದ್ರವಾಗಿ ಅಂಟಿಕೊಂಡಿರುವ ಕೆಳದವಡೆ ಮತ್ತು ಮೊದಲ ಕಶೇರು ಮಣಿಗಳು ಈಗ ಬುರುಡೆಗಳಿಂದ ಬೇರ್ಪಟ್ಟಿವೆ.

೪. ಅಸ್ಥಿ ರಾಶಿಯಲ್ಲಿ ಹೆಚ್ಚಾಗಿ ದೊಡ್ಡ-ದೊಡ್ಡ ಮೂಳೆಗಳು ಮಾತ್ರ ಇವೆ. ಇವುಗಳೂ ಸಹ ಕೀಲುಗಳಲ್ಲಿ ಬೇರ್ಪಟ್ಟಿವೆ, ಕೆಲವು ಮುರಿದಿವೆ, ಕಲವು ಸೀಳಿವೆ, ಕೆಲವು ಜಜ್ಜಿಹೋಗಿವೆ.

೫. ಸಮಾಧಿಯಲ್ಲಿ, ಸುಸ್ಥಿತಿಯಲ್ಲಿರುವ, ಒಡೆದಿರುವ. ಜಜ್ಜಿರುವ, ಪುಡಿಯಾಗಿರುವ ಹಾಗೂ ಚರಂಡಿಯ ಅಗೆತದಿಂದ ನಾಶವಾಗಿರಬಹುದಾದ ಎಲ್ಲಾ ಬುರುಡೆ ಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ, ಈ ಸಮಾಧಿಯಲ್ಲಿ ಮೂಲತಃ ಸುಮಾರು ಆರುನೂರು ತಲೆ ಬುರುಡೆಗಳು ಇದ್ದಿರಬಹುದೆಂದು ಹೇಳಬಹುದು.

೬. ಇಷ್ಟು ಅಗಾಧವಾದ ಬುರುಡೆಗಳ ಸಂಖ್ಯೆಗೆ ಹೋಲಿಸಿ ದರೆ, ಸಮಾಧಿಯಲ್ಲಿ ದೊರೆತಿರುವ ಮೂಳೆಗಳ ಪ್ರಮಾಣ ಬಹಳ ಕಡಿಮೆಯೆನ್ನಬಹುದು.

೭. ಇಲ್ಲಿ ಸಮಾಧಿಗೆ ಅಗೆದಿರುವ ಗುಂಡಿ ಹೆಚ್ಚೆಂದರೆ ೧೫ ಸೆಂ.ಮೀ ಆಳವಾಗಿದೆ.

೮. ಆಳವಲ್ಲದ ಈ ರೀತಿಯ ಗುಂಡಿ, ಈ ಸಮಾಧಿ, ಕೇವಲ ಒಣಗಿದ ಮೂಳೆಗಳಿಗೆ ಮಾಡಲಾಗಿದೆ ಎನಿಸುತ್ತದೆ.

೯. ಹಾಗೆಯೇ ಸಮಾಧಿಯ ಮೇಲೆ ಮುಚ್ಚಿದ್ದ ಮಣ್ಣೂ ಸಹ ಸುಮಾರು ೧೫ ಸೆಂ.ಮೀ. ಗಾತ್ರದ ತೆಳು ಪದರವಾಗಿತ್ತು.

೧೦. ಅಸ್ಥಿ ಅವಶೇಷಗಳ ಗಟ್ಟಿತನ, ದೃಢತೆಯನ್ನು ಪರಿಶೀಲಿಸಿ ದಾಗ ಅವುಗಳು ಸುಮಾರು ೨೦೦ ವರ್ಷಗಳಷ್ಟು ಹಳೆಯವು ಎಂದು ಹೇಳಬಹುದು.

೧೧. ಮೇಲೆ ಉಲ್ಲೇಖವಾದ ಅಂಶಗಳಿಂದಾಗಿ ಈ ಸಮಾಧಿ ಬಹುಕಾಲ ಬಯಲಿನಲ್ಲಿ, ನಿಸರ್ಗದ ವಿಕೋಪಕ್ಕೆ ಗುರಿಯಾದ ಅಸ್ಥಿಗಳಿಗೆ ಮಾಡಲಾಗಿತ್ತೇ ವಿನಃ ರಕ್ತ ಮಾಂಸಗಳಿಂದ ಕೂಡಿದ್ದ ದೇಹಗಳಿಗೆ ಈ ಸಮಾಧಿ ಯನ್ನು ಮಾಡಲಾಗಿರಲ್ಲಿಲ್ಲ ಎನ್ನಬಹುದು.

೧೨. ಈ ಸಮಾಧಿಯ ತಲೆಬುರುಡೆಗಳು, ಅಸ್ಥಿಗಳು ಅವುಗಳ ಕೀಲುಗಳಿಂದ ಬೇರೆಯಾಗಿರುವುದು ಸಹಜವಾಗಿ, ಕಾಲಪುರುಷನ ಹಾವಳಿಯಿಂದಲೇ ಹೊರತು, ಅವು ಗಳನ್ನು ಕತ್ತರಿಸಿ ಬೇರ್ಪಡಿಸಿದಂತೆ ತೋರುವುದಿಲ್ಲ.

೧೩. ಈ ಸಮಾಧಿಯ ಹಲವಾರು ತಲೆಬುರುಡೆಗಳನ್ನು ಉತ್ಖನನಾನಂತರ ಪರೀಕ್ಷೆ ಮಾಡಿದ ತಜ್ಞರು ಈ ಬುರುಡೆಗಳ ಸಮೂಹದಲ್ಲಿ ವಿವಿಧ ವಯಸ್ಸಿನ ಪುರುಷರ, ಸ್ತ್ರೀಯರ ಮತ್ತು ಮಕ್ಕಳ, ಜನರ ತಲೆಬುರುಡೆ ಗಳು ಇವೆ ಎಂದು ವರದಿ ನೀಡಿದ್ದಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಇಷ್ಟು ಅಗಾಧ ಸಂಖ್ಯೆಯಲ್ಲಿ ಏಕಕಾಲದಲ್ಲಿ ಆಗಿರುವ ಜನರ ಸಾವಿಗೆ ಕಾರಣ, ಈ ಮುಂಚೆ ಊಹಿಸಿದಂತೆ ರಾಜದ್ರೋಹಿಗಳ ಶಿರಚ್ಛೇದನ ವಲ್ಲ, ಯುದ್ಧದಲ್ಲಿ ಸೈನಿಕರ ಹತ್ಯೆಯಲ್ಲ, ಧರ್ಮದ್ವೇಷದಿಂದ ಮಾಡಿದ ಹತ್ಯೆಯಲ್ಲ, ಅಥವಾ ರೋಗ-ರುಜಿನ ಮಾರಿಗಳಲ್ಲ. ಇಂತಹ ಸಂದರ್ಭಗಳಲ್ಲಿ ಸತ್ತವರ ಹೆಣವನ್ನು ಇಡಿಯಾಗಿ ಹೂತಿರುತ್ತಾರೆ. ಅಂಗಾಂಗಗಳನ್ನು ಕತ್ತರಿಸಿ ಅಥವಾ ಶಿರಚ್ಛೇದನವನ್ನು ಮಾಡಿ ಹೂಳುವುದಿಲ್ಲ. ಹೆಣಗಳನ್ನು ಕೂಡಲೇ ಪೂರ್ಣವಾಗಿ ಹೂಳುತ್ತಾರೆ. ಅನೇಕ ದಿನಗಳ ಕಾಲ ಕೊಳೆತು ನಾರುವುದಕ್ಕೆ ಅಂಗಗಳನ್ನು ಬೇರ್ಪಡಿಸುವುದಕ್ಕೆ ಬಿಡುವುದಿಲ್ಲ. ಹೀಗಾಗಿ ಪ್ರಸ್ತುತ ಸಮಾಧಿಯಲ್ಲಿ ಹೂಳಲ್ಪಟ್ಟಿರುವ ತಲೆ ಬುರುಡೆಗಳ, ಅಸ್ಥಿಗಳ ಜನರ ಸಾವಿಗೆ ಕಾರಣ ಬೇರೇನೋ ಇರಬೇಕು ಎನಿಸುತ್ತದೆ.

ಇತಿಹಾಸದ ಪುಟಗಳನ್ನು ತಿರುವಿದಾಗ ನಮಗೆ ತಿಳಿದುಬರುವ ಅಂಶವೆಂದರೆ, ಒಂದು ಘೋರವಾದ ನೈಸರ್ಗಿಕ ಪ್ರಕೋಪದ ಫಲವಿದು. ಅದೇಂದರೇ, ಇಂದಿಗೆ ೨೨೨ ವರ್ಷಗಳ ಹಿಂದೆ, ದಖನ್ನಿನಲ್ಲಿ ಅದರಲ್ಲೂ ಉತ್ತರ ಕರ್ನಾಟಕದಲ್ಲಿ ತಲೆದೋರಿದ (ಸಂಭವಿಸಿದ) ಡವಗಿಬರ ಅಥವಾ ಬುರುಡೆಬರ[೧] **(Endnotes)** ಈ ಡವಗಿಬರ ಇಂದಿಗೂ ಉತ್ತರ ಕರ್ನಾಟಕದ ಜನಪದದಲ್ಲಿ ಮಸಕು ಮಸಕಾಗಿ ನೆನಪಿನಲ್ಲಿದೆ. ಡವಿಗೆ/ಡವುಗೆ/ಡವಗಿ (ಆಡುಭಾಷೆ) ಎಂದರೆ ತಲೆ ಬುರುಡೆ. 'ನಿನ್ನ ಡವಗಿ ಸೀಳುತ್ತೇನೆ ನೋಡು' ಎಂಬುದು ಈಗಲೂ ಸಹ ಬಳಸುವ ಒಂದು ಸಾಮಾನ್ಯ ನುಡಿ (ನುಡಿಗಟ್ಟು).

ಡವಗಿಬರ ಅಥವಾ ಬುರುಡೆಬರ ೧೭೮೯-೯೨ ರ ನಡುವೆ ಸಂಭವಿಸಿತ್ತು. ಈ ಬರ ಅಥವಾ ಕ್ಷಾಮದಿಂದಾಗಿ ಲಕ್ಷಾಂತರ ಜನರು ಅಸು ನೀಗಿದರು. ಆ ಕಾಲದ ಬ್ರಿಟಿಷ್ ಆಡಳಿತ ವರದಿಗಳಲ್ಲಿ ಈ ಕ್ಷಾಮವನ್ನು 'ಡೊಂಗಿಬುರ' ಅಥವಾ 'ಸ್ಕಲ್ ಫ್ಯಾಮೈನ್' (Skull-Famine) ಎಂದು ದಾಖಲಿಸಿದ್ದಾರೆ. ಈ ಬರದ ಭೀಕರತೆ ಬ್ರಿಟಿಷ್ ದಾಖಲೆಗಳಲ್ಲಿ ಮತ್ತು ನಂತರದ ಕೆಲವು ಗ್ಯಾಜೆಟಿಯರ್‌ಗಳಲ್ಲಿ ಪ್ರಕಟವಾಗಿದೆ. ಡವಗಿಬರದ ಭೀಕರತೆ ಎಷ್ಟಿತ್ತೆಂದರೇ, ಹಸಿವು, ನೀರಡಿಕೆಗಳಿಂದ ಸತ್ತು ಗತಿಗಾಣದೆ ಬಿದ್ದಿದ್ದವರ ಶವಗಳು, ಮೂಳೆಗಳು ಮತ್ತು ತಲೆಬುರುಡೆಗಳು, ಚೆಲ್ಲಾಪಿಲ್ಲಿಯಾಗಿ ರಸ್ತೆಗಳು ಮತ್ತು ಪಕ್ಕದ ಬಯಲುಗಳನ್ನೆಲ್ಲಾ ಬಿಳುಪು ಮಾಡಿದ್ದವು" ಎಂದು ಹೇಳಲಾಗಿದೆ. ಬಿಜಾಪುರ ಜಿಲ್ಲೆಯಲ್ಲಿ "ಎಲ್ಲಾ ಪ್ರದೇಶಗಳೂ ಗತಿಗಾಣದೆ ಬಿದ್ದಿದ್ದ ತಲೆ ಬುರುಡೆಗಳಿಂದ ಆವೃತವಾಗಿತ್ತು" ಎನ್ನಲಾಗಿದೆ. ಸ್ಥಳೀಯ ಜನಪದದ ಪ್ರಕಾರ "ಕ್ಷಾಮ ಪೀಡಿತ ವಾಗಿದ್ದ ಪ್ರದೇಶಗಳಲ್ಲೆಲ್ಲಾ ತಲೆ ಬುರುಡೆಗಳೇ ಕಾಣುತ್ತಿದ್ದವು". "ಹಸಿವು-ಬಾಯಾರಿಕೆಗಳಿಂದ ಸತ್ತು ಗತಿಗಾಣದೆ ಬಿದ್ದಿದ್ದವರ ಮೂಳೆ/ಬುರುಡೆಗಳಿಂದಾಗಿ ಈ ಬರವನ್ನು 'ಡವಗಿಬರ' ಅಥವಾ 'ಬುರುಡೆಬರ' ಎಂದೇ ಜನರು ನೆನಪಿಸಿಕೊಳ್ಳುತ್ತಾರೆ". "ಗೋಕಾಕಿನಲ್ಲಿ ಹೆಂಗಸೊಬ್ಬಳು ಹಸಿವು ನೀಗಿಸಿಕೊಳ್ಳಲು ತನ್ನ ಮಕ್ಕಳನ್ನೇ ಕೊಂದು ತಿಂದಳಂತೆ. ಅದಕ್ಕಾಗಿ ಜನರು ಅವಳನ್ನು ಎಮ್ಮೆಯ ಕಾಲಿನಿಂದ ತುಳಿಸಿ ಸಾಯಿಸಿದರಂತೆ" ಎಂದು ದಾಖಲೆಗಳು ಹೇಳುತ್ತವೆ.

'ಧಾರವಾಡ, ಬೆಳಗಾವಿ, ರಾಯಚೂರು, ಬಿಜಾಪುರ ಜಿಲ್ಲೆಗಳು ಡವಗಿಬರದಿಂದ ಹೆಚ್ಚು ಸಂಕಷ್ಟಕ್ಕೀಡಾದ ಪ್ರದೇಶ ಗಳು. ಬಹಳಷ್ಟು ಜನ ತಮ್ಮ ಊರುಗಳನ್ನು ತೊರೆದು ಬೇರೆಡೆಗೆ ವಲಸೆ ಹೋದರು. ಕ್ಷಾಮಕಾಲದ ಮೂರನೇ ವರ್ಷ ಇನ್ನೂ ಹೆಚ್ಚು ಭಯಂಕರವಾಗಿತ್ತು. ರೋಗ-ರುಜಿನ ಗಳು ಹರಡಿ ಇನ್ನೂ ಹೆಚ್ಚು ಸಾವು-ನೋವುಗಳುಂಟಾದವು. ಸತ್ತವರ ಸಂಸ್ಕಾರಕ್ಕೆ ಜನಗಳೇ ಇರಲ್ಲಿಲ್ಲ. ರಸ್ತೆ-ರಸ್ತೆಗಳಲ್ಲಿ ಜನರು ಸತ್ತು ಬಿದ್ದಿದ್ದರು. ಪ್ರಾಣಿ-ಪಕ್ಷಿಗಳು ಹೆಣಗಳನ್ನು ಹರಿದು ತಿಂದವು. ಅಳಿದುಳಿದ ಬುರುಡೆಗಳು, ಮೂಳೆಗಳು ರಸ್ತೆ ಬಯಲುಗಳಲ್ಲೆಲ್ಲಾ ಹರಡಿ ಬಿದ್ದಿದ್ದವು'.

ಕ್ಷಾಮಕಳೆದ ಮೇಲೆ ಸ್ವಸ್ಥಳಕ್ಕೆ ಹಿಂದಿರುಗಿದ ಅಣ್ಣಿಗೇರಿಯ ಜನರು ತಮ್ಮ ಊರಿನ ಸುತ್ತ-ಮುತ್ತ ಚೆಲ್ಲಾಪಿಲ್ಲಿ ಯಾಗಿ ಬಿದ್ದಿದ್ದ ಬುರುಡೆ/ಮೂಳೆಗಳನ್ನು ಸಂಗ್ರಹಿಸಿ ಅವುಗಳಿಗೆ ಸೂಕ್ತ ರೀತಿಯಲ್ಲಿ ಸಮಾಧಿ ಮಾಡಿದಂತೆ ತೋರುತ್ತದೆ. ಈ ಎಲ್ಲಾ ತಲೆಬುರುಡೆಗಳಿಗೆ ಕೆಳದವಡೆ ಮತ್ತು ಮೊದಲ ಕಶೇರು ಮಣಿ ಕಳಚಿಕೊಂಡಿದ್ದವು. ಮೂಳೆಗಳು ಕೀಲುಗಳಿಂದ ಕಳಚಿ ಕೊಂಡಿದ್ದವು, ಮುರಿದಿದ್ದವು, ಜಜ್ಜಿದ್ದವು, ಸೀಳಿದ್ದವು, ಜಖಂ ಆಗಿದ್ದವು. ಸಮಾಧಿ ಮಾಡುವಾಗ ತಲೆ ಭಾಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡುವುದು ವಾಡಿಕೆ. ಹೀಗಾಗಿ, ಸಂಗ್ರಹಿಸಿದ ತಲೆಬುರುಡೆಗಳನ್ನು ವ್ಯವಸ್ಥಿತವಾಗಿ ಜೋಡಿಸಿ ಸಮಾಧಿ ಮಾಡಿದ್ದಾರೆ. ಪ್ರಾಣಿ-ಪಕ್ಷಿಗಳು ತಿಂದ ನಂತರ ಉಳಿದಿದ್ದ ದೊಡ್ಡ ದೊಡ್ಡ ಮೂಳೆಗಳನ್ನು ಸಂಗ್ರಹಿಸಿ ರಾಶಿಯಾಗಿ ಒಂದು ತುದಿಯಲ್ಲಿ ಸುರಿದಿದ್ದಾರೆ. ಈ ಮೂಳೆಗಳ ರಾಶಿಯಲ್ಲಿ ಸಂಗ್ರಹಿಸಲಾದ ಕೆಳದವಡೆಗಳು, ಮುರಿದ-ಚೂರಾದ ತಲೆಬುರುಡೆಗಳು, ಬೆನ್ನು ಮೂಳೆಗಳು ಜೊತೆಗೆ ಒಂದು ಪೂರ್ಣ ಅಸ್ಥಿಪಂಜರ, ಎಲ್ಲವು ಕಂಡುಬಂದಿವೆ.

ಉತ್ಖನನದಲ್ಲಿ ದೊರೆತ ಈ ಎಲ್ಲಾ ಅಂಶಗಳೂ, ಈ ಸಮಾಧಿ, ಡವಗಿಬರಕ್ಕೆ ಬಲಿಯಾದ ಮನುಷ್ಯರ ಮೂಳೆಗಳಿ ಗಾಗಿ ಮಾಡಿದ್ದು ಎಂದು ಹೇಳುವುದಕ್ಕೆ ಪುಷ್ಟಿ ನೀಡುತ್ತವೆ. ಮೂಳೆಯ ಗಟ್ಟಿತನದ ಆಧಾರದ ಮೇಲೆ ನೀಡಿರುವ ಕಾಲಮಾನ, ಹಾಗೂ ಪದರಶಾಸ್ತ್ರದ ಮುಖಾಂತರ ನೀಡಬಹುದಾದ ಕಾಲವೂ ಸಹ ಈ ಮೂಳೆಗಳು ಸುಮಾರು ೨೦೦ ವರ್ಷಗಳಷ್ಟು ಹಳೆಯವು ಎಂಬ ಅನುಮಾನಕ್ಕೆ ಪುಷ್ಟಿ ನೀಡುತ್ತವೆ. ಆದ್ದರಿಂದ ೧೭೮೯-೯೨ ರಲ್ಲಿ ಸಂಭವಿಸಿದ ಡವಗಿಬರದಲ್ಲಿ ಅಸುನೀಗಿದವರ ಅಸ್ಥಿಗಳಿಗಾಗಿ ಈ ಸಮಾಧಿಯನ್ನು ಅಣ್ಣಿಗೇರಿಯ ಮಹಾಜನರು ಮಾಡಿದ್ದಾರೆ ಎಂದು ಹೇಳಬಹುದು. ಹೀಗಾಗಿ ಈ ಬುರುಡೆಯ ಸಮಾಧಿಯ ಬಗ್ಗೆ ಈ ಮುಂಚೆ ಹೇಳಲಾಗಿರುವ ಅಭಿಪ್ರಾಯ ಗಳನ್ನು, ಈಗ ಲಭ್ಯವಾಗಿರುವ ಪುರಾತತ್ತ್ವದ ಆಧಾರದ ಮೇಲೆ, ಎಲುಬು ವಿಜ್ಞಾನದ ಆಧಾರದ ಮೇಲೆ ಮತ್ತು ಬ್ರಿಟಿಷ್ ಆಡಳಿತದ ದಾಖಲೆಗಳ ಆಧಾರಗಳ ಮೇಲೆ ಸಮಂಜಸವಲ್ಲ ವೆಂದು ತಿರಸ್ಕರಿಸಬಹುದು.

ಕೊನೆಯಲ್ಲಿ ಈ ಸಮಾಧಿಯ ಬಗ್ಗೆ ಹೇಳಬಹುದಾದ ಕೆಲವು ಮುಖ್ಯ ತೀರ್ಮಾನಗಳೆಂದರೆ: ಈ ರೀತಿಯಲ್ಲಿ ನೂರಾರು ಮಾನವ ತಲೆ ಬುರುಡೆಗಳನ್ನು ವ್ಯವಸ್ಥಿತವಾಗಿ

ಜೋಡಿಸಿಟ್ಟು ಮತ್ತು ಅದಕ್ಕೆ ಸಂಬಂಧಿಸಿದ ಅಸ್ಥಿಗಳನ್ನು ಒಂದೇ ಸ್ಥಳದಲ್ಲಿ, ಒಂದೇ ಸಮಯದಲ್ಲಿ ಹೂತಿರುವ ಸನ್ನಿವೇಶ ಭಾರತೀಯ ಪುರಾತತ್ವ ಇತಿಹಾಸದಲ್ಲೇ ಪ್ರಪ್ರಥಮವೂ, ವಿಶಿಷ್ಟವೂ ಆದದ್ದು. ಈ ಸಮಾಧಿ ನೈಸರ್ಗಿಕ/ ಹವಾಮಾನ ಪ್ರಕೋಪದಿಂದ ಸಾವಿಗೀಡಾದ ದುರ್ದೈವಿಗಳದ್ದು ಎಂಬುದು ಮತ್ತೊಂದು ಹೊಸ ವಿಷಯ. ಜಾತಿ, ಮತ, ವರ್ಗ, ಲಿಂಗ ಭೇದವಿಲ್ಲದೆ ಅಸ್ಥಿಗಳನ್ನು ಕೂಡಿಸಿ ಮಾಡಿದ ಸಮೂಹ ಸಮಾಧಿಯಿದು. ಆ ಕಾಲದ ಅಣ್ಣಿಗೇರಿಯ ಮಹಾಜನರ ಸಜ್ಜನಿಕೆಯ ಪ್ರತೀಕವಾಗಿ ನಿರ್ಮಾಣವಾದ ಸಮಾಧಿ ಇದಾಗಿದೆ. ಇದುವರೆಗೆ ನಮಗೆ ಡವಗಿಬರದ ಭೀಕರತೆಯು ಇತಿಹಾಸ ದಿಂದ, ಜಾನಪದದಿಂದ ಮಾತ್ರ ತಿಳಿದಿತ್ತು. ಆದರೆ ಈಗ ಡವಗಿಬರದ ಭಯಂಕರ ಭೌತಿಕ ಪರಿಚಯ ನಮಗೆ ಈ ಸಮಾಧಿಯಿಂದ ಆಗಿದೆ.

ಉತ್ಖನಿತ ಪುರಾತತ್ವಿಕ ಮಾಹಿತಿಗಳು, ಅಸ್ಥಿ ವಿಜ್ಞಾನ ವಿಶ್ಲೇಷಣೆ ಹಾಗೂ ಬ್ರಿಟಿಷ್ ಸರ್ಕಾರದ ಆಡಳಿತದ ದಾಖಲೆ ಗಳು, ಇವೆಲ್ಲವುಗಳನ್ನೂ ಕೂಲಂಕಷವಾಗಿ ಅಧ್ಯಯನ ಮಾಡಿ, ಅಣ್ಣಿಗೇರಿಯ ತಲೆ ಬುರುಡೆ ಸಮಾಧಿಯು ಕ್ರಿ.ಶ. ೧೭೮೯–೯೨ ರ ನಡುವೆ ಸಂಭವಿಸಿದ ಭೀಕರ ಕ್ಷಾಮದಲ್ಲಿ (ಡವಗಿಬರ) ಮೃತರಾದವರಿಗೆ, ಸಾವು ಸಂಭವಿಸಿದ ಕೆಲವಾರು ವರ್ಷಗಳ ನಂತರ, ಅಣ್ಣಿಗೇರಿಯ ಸತ್ಪ್ರಜೆಗಳು ಮಾಡಿದ ಶವ (ಅಸ್ಥಿ) ಸಂಸ್ಕಾರದ ಕ್ರಿಯೆ ಎಂದು ಹೇಳಿದ್ದೇವೆ. ಆದರೇ, ಪುರಾತತ್ವ ಶಾಸ್ತ್ರಜ್ಞರು ಸಮಾಧಿಯ ಮೂಳೆಗಳ ಬಗ್ಗೆ ನೀಡಿರುವ ಈ ಕಾಲಮಾನ ಎಷ್ಟರ ಮಟ್ಟಿಗೆ ಸರಿ ಎಂಬ ಅನುಮಾನ ಬರುವುದು ಸಹಜ. ಇದರಿಂದಾಗಿ ಅಣ್ಣಿಗೇರಿಯ ಬುರುಡೆಗಳ ತುಣುಕುಗಳನ್ನು ಮತ್ತು ಹಲ್ಲುಗಳನ್ನು ವೈಜ್ಞಾನಿಕ ಪ್ರಯೋಗಾಲಯ ಪರೀಕ್ಷೆಗಾಗಿ ಅಮೇರಿಕಾ ಸಂಯುಕ್ತ ಸಂಸ್ಥಾನದ (USA) ಮಿಯಾಮಿ, ಫ್ಲಾರಿಡಾದಲ್ಲಿರುವ ಬೀಟಾ ಅನಾಲಿಟಿಕ್ ಇನ್‌ಕಾರ್ಪೊರೇಷನ್ ಸಂಸ್ಥೆಯ ಪ್ರಯೋಗಾಲ ಯಕ್ಕೆ, ವೈಜ್ಞಾನಿಕ ಕಾಲನಿರ್ಣಯಕ್ಕಾಗಿ ಕಳುಹಿಸಲಾಯಿತು. ವೈಜ್ಞಾನಿಕ ಪರೀಕ್ಷಾ ವರದಿ ನೀಡಿರುವ ಅಲ್ಲಿಯ ತಜ್ಞರು ಈ ಮೂಳೆಗಳು ಮತ್ತು ಹಲ್ಲುಗಳು ಸುಮಾರು ೧೮೦–೨೦೦ ವರ್ಷಗಳಷ್ಟು ಮಾತ್ರ ಹಳೆಯವು ಎಂದು ತೀರ್ಮಾನಿಸಿದ್ದಾರೆ. ಪುರಾತತ್ವವಿದರು ನೀಡಿರುವ ಕಾಲಮಾನಕ್ಕೆ (೨೨೦ ವರ್ಷಗಳು) ಹೆಚ್ಚು ಕಡಿಮೆ ವೈಜ್ಞಾನಿಕ ವಿಶ್ಲೇಷಣೆಯ ಕಾಲಮಾನವೂ ಸರಿ ಹೊಂದುತ್ತದೆ. ಹೀಗಾಗಿ ಅಣ್ಣಿಗೇರಿಯ ತಲೆಬುರುಡೆ ಸಮಾಧಿಯು ಕ್ರಿ.ಶ. ೧೭೮೯–೯೨ ರಲ್ಲಿ ಸಂಭವಿಸಿದ ಡವಗಿಬರಕ್ಕೆ ಆಹುತಿಯಾದವರ ತಲೆಬುರುಡೆಗಳು ಮತ್ತು ಮೂಳೆಗಳಿಗಾಗಿ ಮಾಡಿದ್ದಾಗಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಅಣ್ಣಿಗೇರಿಯ ತಲೆ ಬುರುಡೆ ಸಮಾಧಿಯ ಬಗ್ಗೆ ಡಾ। ಎಂ.ಎಂ. ಕಲ್ಬುರ್ಗಿಯವರೂ ಸಹ ತಮ್ಮ ಅಭಿಪ್ರಾಯವನ್ನು ಕೆಲವಾರು ಪತ್ರಿಕಾ ಮಾಧ್ಯಮಗಳಲ್ಲಿ ವ್ಯಕ್ತಪಡಿಸಿದ್ದಾರೆ. ಅವರು ಈ ತಲೆ ಬುರುಡೆಗಳ ಸಮಾಧಿ, ಮಾಹೇಶ್ವರರೆಂದು ಕರೆಯಲ್ಪಡುವ ಪರಮ ಶಿವಭಕ್ತರ ಸ್ವಯಂ ಛೇದಿತ (ಆತ್ಮಾಹುತಿ ಮಾಡಿಕೊಂಡ) ಶಿರಗಳದ್ದೆಂದು ಹೇಳಿದ್ದಾರೆ. ಅವರ ವಾದಕ್ಕೆ ಪೋಷಕವಾಗಿ ಮನುಷ್ಯರ ತಲೆಗಳನ್ನು ಪಕ್ಕಪಕ್ಕದಲ್ಲಿ, ವ್ಯವಸ್ಥಿತವಾಗಿ ಜೋಡಿಸಿಟ್ಟಿರುವುದನ್ನು ಬಿಂಬಿಸುವ ಉಬ್ಬುಶಿಲ್ಪದ, ಶ್ರೀಶೈಲದ, ಪ್ರಾಚೀನ ಶಿಲಾಫಲಕವನ್ನು ಉಲ್ಲೇಖಿಸುತ್ತಾರೆ. ಹಾಗೂ ಈ ಸಮಾಧಿ ಸುಮಾರು ಎಂಟುನೂರು ವರ್ಷಗಳಷ್ಟು ಹಳೆಯದಿರಬಹು ದೆಂದೂ ಅಭಿಪ್ರಾಯಪಡುತ್ತಾರೆ. ಡಾ। ಕಲ್ಬುರ್ಗಿಯವರು ಕೊಟ್ಟಿರುವ ಶಿಲ್ಪಯುತ ಶಿಲಾಫಲಕ ಅಣ್ಣಿಗೇರಿಯ ಉತ್ಖನಿತ ಬುರುಡೆ ಸಮಾಧಿಯ ಚಿತ್ರವನ್ನು ನೆನಪಿಗೆ ತರಬಹುದು. ಆದರೆ ಕಲ್ಬುರ್ಗಿಯವರ ವಾದವನ್ನು ಅಣ್ಣಿಗೇರಿಯ ತಲೆ ಬುರುಡೆ ಸಮಾಧಿಯೊಂದಿಗೆ ಸಮೀಕರಿಸಲು ಪುರಾತತ್ವಿಕ ಮತ್ತು ಅಸ್ಥಿ ವೈಜ್ಞಾನಿಕ ಕುರುಹುಗಳು ಅಡ್ಡ ಬರುತ್ತವೆ. ಏಕೆಂದರೆ ಅಣ್ಣಿಗೇರಿಯ ಬುರುಡೆಗಳಾವುದಕ್ಕೂ ಕೆಳದವಡೆ ಮತ್ತು ಮೇಲಿನ ಕಶೇರುಮಣಿ ಇರುವುದು ಕಂಡು ಬಂದಿಲ್ಲಾ. ಯಾವುದೇ ಮಾನವ ಶವ ಸಂಸ್ಕಾರ ಪದ್ಧತಿಯಲ್ಲಿ ಕತ್ತರಿಸಿದ ಶಿರವನ್ನು ಹೂಳುವಾಗ ಕೆಳದವಡೆಯನ್ನು ತಲೆಬುರುಡೆಯಿಂದ ಬೇರ್ಪಡಿಸುವ ಪದ್ಧತಿ ಕಂಡಿಲ್ಲ, ಕೇಳಿಲ್ಲ. ಅಂತೆಯೇ ಆ ಶಿರಗಳಿಗೆ ಸಂಬಂಧಿಸಿದ ಇತರ ಭಾಗಗಳನ್ನು ಕತ್ತರಿಸಿ, ಛೇದಿಸಿ ಗುಡ್ಡೆಯಾಗಿ ಹಾಕಿ ಶವಸಂಸ್ಕಾರ ಮಾಡಿರುವ ಅಥವಾ ಮಾಡುವ ಪದ್ಧತಿಯಿರಲಿಲ್ಲ. ಇಂತಹ ಶವಗಳ ಸಮಾಧಿಯನ್ನು ಕೇವಲ ಆರು ಇಂಚು ಆಳದ ಗುಂಡಿಯಲ್ಲಿ ಹೂಳುವ ಮತ್ತು ಅದರ ಮೇಲೆ ಕೇವಲ ಆರು ಇಂಚು ದಪ್ಪದ ಮಣ್ಣು ಮುಚ್ಚಿರುವ ಸಂಗತಿ ಅಥವಾ ಅಭ್ಯಾಸ ಇರಲಿಲ್ಲ. ಅಲ್ಲದೇ ಈ ಬುರುಡೆಗಳ ಸಮೂಹದಲ್ಲಿ, ವಿವಿಧ ವಯಸ್ಸಿನ ಸ್ತ್ರೀಯರ, ಪುರುಷರ ಮತ್ತು ಮಕ್ಕಳ ಬುರುಡೆಗಳು ಕಂಡು ಬಂದಿವೆ. ಆತ್ಮಾರ್ಪಣೆಯನ್ನು ಮಾಡಿಕೊಳ್ಳುತ್ತಿದ್ದ ಮಾಹೇಶ್ವರರ ಸಮೂಹದಲ್ಲಿ ಸ್ತ್ರೀಬಾಲರು ಇರುತ್ತಿದ್ದರೇ ಎಂಬುದು ಪ್ರಶ್ನಾರ್ಹ. ಮಾನ್ಯ ಕಲ್ಬುರ್ಗಿಯವರು ಅವರ ವಾದವನ್ನು ಮಂಡಿಸುವ ಮುನ್ನ, ಉತ್ಖನನದಲ್ಲಿ ಕಂಡು ಬಂದಿರುವ ಈ ಎಲ್ಲಾ ಅಂಶಗಳಿಗೆ ಸಮರ್ಪಕವಾದ ಉತ್ತರ ನೀಡಬೇಕಾಗಿತ್ತು. ಆದರೆ ಅವರು ಅವುಗಳ ಗೋಜಿಗೆ ಹೋಗಿಲ್ಲ. ಹೀಗಾಗಿ, ಅವರ ವಾದವನ್ನು ಸತ್ಯಕ್ಕೆ ದೂರವಾದ, ಕೇವಲ ವೈಯಕ್ತಿಕ ಅಭಿಪ್ರಾಯವೆಂದು ಪರಿಗಣಿಸಬಹುದು.

[ಈ ಸಂಶೋಧನೆಯನ್ನು 'ಡವಗಿ ಬರ'ದತ್ತ ಗಮನಹರಿಸಲು ಸಲಹೆ ನೀಡಿದ ಡಾ॥ ಶ್ರೀಮತಿ ವಸುಂಧರಾ ಫಿಲಿಯೋಜ ಅವರಿಗೆ ಲೇಖಕರು ಕೃತಜ್ಞರಾಗಿದ್ದಾರೆ.]





# ಹೊಳಲ್ಕೆರೆ ತಾಲ್ಲೂಕಿನಲ್ಲಿ ಕೆಲವು ಬೃಹತ್ ಶಿಲಾಯುಗದ ನೆಲೆಗಳ ಶೋಧ

**ಎನ್.ಎಸ್. ಮಹಂತೇಶ***

**ಹೊ**ಳಲ್ಕೆರೆ ತಾಲೂಕು ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ಸಂಸ್ಕೃತಿಯಲ್ಲಿ ತನ್ನದೇ ಆದ ಒಂದು ವಿಶೇಷವಾದ ಸ್ಥಾನವನ್ನು ಪಡೆದುಕೊಂಡಿದೆ. ರಾಬರ್ಟ್ ಬ್ರೂಸ್‌ಪೂಟ್ ಅವರು ಕ್ರಿ.ಶ. ೧೮೬೩ರಲ್ಲಿ ಹೊಳಲ್ಕೆರೆ ತಾಲೂಕಿನ ತಾಳ್ಯದಲ್ಲಿ ಆದಿ ಹಳೇಶಿಲಾಯುಗದ ಮೂರು ಆಯುಧಗಳನ್ನು ಪತ್ತೆಹಚ್ಚಿ ಪ್ರಕಟಿಸಿದ್ದರು. ತರುವಾಯ ಅನೇಕ ಸಂಶೋಧಕರು ಈ ತಾಲೂಕಿನ ವಿವಿಧೆಡೆ ಹಲವು ಪ್ರಾಗೈತಿಹಾಸಿಕ ನೆಲೆಗಳನ್ನು ಪತ್ತೆಹಚ್ಚಿ ಪ್ರಕಟಿಸುತ್ತಾ ಬರುತ್ತಿರುವುದು ಇಲ್ಲಿನ ಪ್ರಾಗೈತಿಹಾಸ ಸಂಸ್ಕೃತಿಯ ಅಗಾಧತೆಗೆ ಸಾಕ್ಷಿಯಾಗಿದೆ. ಈಗಾಗಲೇ ಪತ್ತೆಯಾಗಿ ಪ್ರಕಟಗೊಂಡಿರುವ ನೆಲೆಗಳು ಹಳೇಶಿಲಾಯುಗ, ಬೃಹತ್ ಶಿಲಾಯುಗ ಹಾಗೂ ಆರಂಭಿಕ ಇತಿಹಾಸ ಕಾಲಕ್ಕೆ ಸೇರಿದವುಗಳಾಗಿವೆ.

ಹೊಳಲ್ಕೆರೆ ತಾಲೂಕಿನಲ್ಲಿ ನಾನು ಕೈಗೊಂಡ ಸಂಶೋಧನಾ ಕ್ಷೇತ್ರಕಾರ್ಯದಲ್ಲಿ ಪತ್ತೆಹಚ್ಚಿರುವ ಬೃಹತ್ ಶಿಲಾಯುಗದ ನೆಲೆಗಳನ್ನು ಕುರಿತು ಈ ಲೇಖನದಲ್ಲಿ ವಿವರಿಸಿದ್ದೇನೆ. ಹೊಳಲ್ಕೆರೆ ತಾಲೂಕಿನಲ್ಲಿ ಪತ್ತೆಯಾಗಿರುವ ಬೃಹತ್ ಶಿಲಾಯುಗದ ನೆಲೆಗಳೆಂದರೆ : ೧. ಸಿರಾಪ್ಪನಹಳ್ಳಿ, ೨. ಗೂಳಿಹೊಸಹಳ್ಳಿ, ೩. ಹಳೇಹಳ್ಳಿ ಲಂಬಾಣಿಹಟ್ಟಿ, ೪. ಹುಲಿಕೆರೆ.

## ೧. ಸಿರಾಪ್ಪನ ಹಳ್ಳಿ

ಹೊಳಲ್ಕೆರೆ ತಾಲೂಕಿನ ತಾಳ್ಯದ ಸಮೀಪವಿರುವ ಸಿರಾಪ್ಪನಹಳ್ಳಿಯು ಈ ಪರಿಸರದ ಪ್ರಮುಖ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಒಂದು. 'ಸಿರಿಯಪ್ಪ' ಎಂಬ ಜನಪದ ವೀರನ ಸ್ಮರಣಾರ್ಥವಾಗಿ ಈ ಗ್ರಾಮಕ್ಕೆ ಸಿರಾಪ್ಪನಹಳ್ಳಿ ಹೆಸರು ಬಂದಿದೆ ಎಂದು ಸ್ಥಳೀಯರು ಹೇಳುತ್ತಾರೆ. ಸಿರಾಪ್ಪನಹಳ್ಳಿ ಪರಿಸರದಲ್ಲಿ ಬಿಳಿಕಣಶಿಲೆ, ಕೆಂಪು ಬೆಣಚುಕಲ್ಲು ಹಾಗೂ ಕಪ್ಪು ಶಿಲೆಗಳ ಬೆಟ್ಟ-ಗುಡ್ಡಗಳನ್ನು ಅಪಾರವಾಗಿ ಕಾಣಬಹುದು.

ಈ ಗ್ರಾಮದಿಂದ ಪಶ್ಚಿಮ ದಿಕ್ಕಿಗೆ ಕರಿಯಪ್ಪ ಅವರ ತೋಟದ ಪಕ್ಕದಲ್ಲೇ 'ಪಾಂಡವರಗುಂಡು' ಎಂದು ಕರೆಯಲ್ಪಡುವ ಮೂರು ಬೃಹದಾಕಾರದ ಕಲ್ಲಿನ ಹೆಬ್ಬಂಡೆಗಳಿವೆ. ಪಾಂಡವರು ವನವಾಸಕ್ಕೆ ಬಂದಾಗ ಇಲ್ಲೇ ನೆಲೆನಿಂತು ಅಡುಗೆಗೋಸ್ಕರ ಈ ಕಲ್ಲು ಗುಂಡುಗಳನ್ನು ಹೂಡಿ ಒಲೆಯಾಗಿ ಮಾಡಿಕೊಂಡು ಅಡುಗೆ ಮಾಡಿಕೊಳ್ಳುತ್ತಿದ್ದರೆಂದು ಹೇಳಲಾಗುತ್ತದೆ. ಇದಕ್ಕೆ ಹೊಂದಿಕೊಂಡಂತೆ ಇರುವ ಬೆಟ್ಟದ (ಗೂಬೆಕಲ್ಲು) ಹಿಂಭಾಗದಲ್ಲಿ 'ಭೀಮನಗುಂಡು' ಎಂದು ಕರೆಯಲ್ಪಡುವ ಅತ್ಯಂತ ಬೃಹದಾಕಾರದ ಸುಮಾರು ೨೫ ಅಡಿ ಎತ್ತರದ ಬಂಡೆ ಇದ್ದು ಅದನ್ನು ಭೀಮನು ಒಲೆಗೋಸ್ಕರ ಹೊತ್ತು ತರುತ್ತಿರುವಾಗ ಅಷ್ಟರೊಳಗೆ ಆತನ ಕುಟುಂಬದವರು ಕಲ್ಲುಗುಂಡುಗಳನ್ನು ಹೂಡಿ ಅಡುಗೆ ಮಾಡುತ್ತಿದ್ದರು. ಆಗ ಭೀಮನು ಆ ಕಲ್ಲುಗುಂಡನ್ನು ಅಲ್ಲಿಯೇ ಬಿಟ್ಟು ಬಂದನು ಎಂದು ಅಲ್ಲಿನ ಸ್ಥಳೀಯರು ಕಥೆ ಹೇಳುತ್ತಾರೆ. ಹೀಗೆ ಪಾಂಡವರ ಐತಿಹ್ಯವಿರುವ ಈ ಪರಿಸರವು 'ಬೃಹತ್ ಶಿಲಾಯುಗ'ದ ನೆಲೆಯಾಗಿದೆ. ಪಾಂಡವರ ಗುಂಡುಗಳಿರುವ ಜಾಗದಿಂದ ದಕ್ಷಿಣ ದಿಕ್ಕಿಗೆ ಇದೇ ಗ್ರಾಮದ ಶೇಖರಪ್ಪ ಅವರ ಹೊಲದಲ್ಲಿ ೨೮ ಬೃಹತ್ ಶಿಲಾಸಮಾಧಿಗಳಿವೆ. ಶಿಲಾವೃತ್ತಗಳಾಗಿರುವ ಇವುಗಳ ರಚನೆಗೆ ಸ್ಥಳೀಯವಾದ ಶಿಲಾ ಮಾದರಿಗಳನ್ನೇ ಬಳಸಿದ್ದಾರೆ. ವೃತ್ತ ಮಾದರಿಗಳ ಮಧ್ಯದಲ್ಲಿ ಸಣ್ಣಗಾತ್ರದ ಉರುಟುಗಲ್ಲುಗಳು, ಬೆಣಚು



**ಕುಂತಿಯ ಗುಂಡುಗಳು**

* ಇತಿಹಾಸ ಅಧ್ಯಾಪಕ, ಸಂಜೀವಿನಿ ನಿಲಯ, ೮ನೇ ಕ್ರಾಸ್, ಸಿ.ಕೆ. ಪುರ, ಕೆಳಗೋಟೆ, ಚಿತ್ರದುರ್ಗ - ೫೭೭೫೦೧.

ಕಲ್ಲುಗಳನ್ನು ತುಂಬಿದ್ದಾರೆ. ವೃತ್ತಗಳಿಗೆ ಬಳಸಿರುವ ಕಲ್ಲುಗಳು ಸುಮಾರು ೪ ಅಡಿ ಅಗಲ, ೩ ಅಡಿ ಎತ್ತರದ ದೊಡ್ಡದಾದ ಆಕಾರದಲ್ಲಿವೆ. ಕೆಲವು ಶಿಲಾಸಮಾಧಿಗಳಿಗೆ ಬಳಸಿರುವ ಕಲ್ಲುಗಳು ೧.೫ ಅಡಿ ಅಗಲ ೨ ಅಡಿ ಎತ್ತದ ಚಿಕ್ಕ ಆಕಾರದಲ್ಲಿವೆ. ಈ ಶಿಲಾವೃತ್ತಗಳ ಸುತ್ತಳತೆಯು ೬೦ ಅಡಿ, ೭೦ ಅಡಿ, ೮೦ ಅಡಿ ಇವೆ. ಕಡಿಮೆ ಸುತ್ತಳತೆ ಹೊಂದಿರುವ ಶಿಲಾಸಮಾಧಿಗಳಿಗೆ ೧೦ ರಿಂದ ೧೫ ಕಲ್ಲುಗುಂಡುಗಳನ್ನು ಇಟ್ಟಿದ್ದಾರೆ. ಕೆಲವು ಶಿಲಾಸಮಾಧಿಗಳಿಗೆ ಕಪ್ಪು ಶಿಲೆಗಳನ್ನು ಮತ್ತು ಕೆಲವಕ್ಕೆ ಬಿಳಿಕಣಶಿಲೆಗಳನ್ನು ಬಳಸಿದ್ದಾರೆ. ಮಧ್ಯದಲ್ಲಿರುವ ಹಾಸಿರುವ ಹಾಸುಗಲ್ಲು ೩/೪ ಅಡಿ ದಪ್ಪ ೧೫ x ೨೦ ಅಡಿ ಇವೆ. ಅದೇ ರೀತಿ ಪಾಂಡವರ ಗುಂಡುಗಳು ಇರುವ ಪ್ರದೇಶದಿಂದ ಉತ್ತರ ದಿಕ್ಕಿಗೆ ರುದ್ರಯ್ಯ ಅವರ ಹೊಲದಲ್ಲಿ ಸುಮಾರು ೨೫ ಬೃಹತ್ ಶಿಲಾಸಮಾಧಿಗಳಿವೆ. ಇವುಗಳು ಶಿಲಾವೃತ್ತ ಮಾದರಿಗೆ ಸೇರಿದವುಗಳಾಗಿದ್ದು ಇವುಗಳ ರಚನೆಯಲ್ಲಿ ಸುತ್ತಲೂ ಗುಂಡುಕಲ್ಲುಗಳನ್ನು ಕೆಲವಕ್ಕೆ ನೆಟ್ಟಿದ್ದರೆ, ಕೆಲವಕ್ಕೆ ಕಲ್ಲುಚಪ್ಪಡಿಗಳನ್ನು ಬಳಸಿದ್ದಾರೆ.



ಸಿರಾಪ್ಪನಹಳ್ಳಿಯ ಬೃಹತ್ ಶಿಲಾ ಸಮಾಧಿ

### ಕಬ್ಬಿಣ ತಯಾರಿಕಾ ನೆಲೆ

ಸಿರಾಪ್ಪನಹಳ್ಳಿಯ ಪರಿಸರವು ಬೃಹತ್ ಶಿಲಾಯುಗ ಕಾಲಘಟ್ಟದ ಒಂದು ಅತ್ಯಂತ ದೊಡ್ಡನೆಲೆಯಾಗಿದೆ. ಈ ಪರಿಸರದಲ್ಲಿ ಕಾಣಬರುವ ಮಲಸಿಂಗನಹಳ್ಳಿಯ ಸುತ್ತಮುತ್ತಲೂ ಅಪಾರವಾದ ಕಬ್ಬಿಣದ ತಯಾರಿಕೆಗೆ ಸಂಬಂಧಿಸಿದ ಕಿಟ್ಟದ ಅವಶೇಷಗಳು, ಮಣ್ಣಿನ ಮೂಸೆಗಳು ಅಪಾರವಾಗಿವೆ. ಅದೆಷ್ಟೋ ಎಕರೆ ಭೂಪ್ರದೇಶದಲ್ಲಿ ಕಿಟ್ಟದ ಅವಶೇಷಗಳು ಹರಡಿಕೊಂಡಿವೆ. ಬೃಹತ್ ಶಿಲಾಯುಗದ ಕಾಲದಲ್ಲೇ ಈ ಪರಿಸರದಲ್ಲಿ ಕಬ್ಬಿಣ ತಯಾರಿಕೆ ಕಾರ್ಯಗಳು ನಡೆದಿರುವ ಸಾಧ್ಯತೆ ಇದೆ.

### ೨. ಗೂಳಿಹೊಸಹಳ್ಳಿ

ಹೊಳಲ್ಕೆರೆ ತಾಲೂಕಿನ ಪ್ರಸಿದ್ಧ ಹೊರಕೆರೆದೇವಪುರದ ಸಮೀಪ ಕಂಡುಬರುವ ಗೂಳಿಹೊಸಹಳ್ಳಿಯು ಈ ಪರಿಸರದ ಪ್ರಮುಖ ಪ್ರಾಗೈತಿಹಾಸಿಕ ನೆಲೆಗಳಲ್ಲಿ ಒಂದಾಗಿದೆ. ಈ ಗ್ರಾಮದ ಈಶಾನ್ಯ ದಿಕ್ಕಿನಲ್ಲಿ ಜುಂಜಪ್ಪನ ದೇವಾಲಯದ ಉತ್ತರ ಭಾಗಕ್ಕೆ ೭ ಬೃಹತ್ ಶಿಲಾಸಮಾಧಿಗಳು ಕಂಡುಬರುತ್ತವೆ. ಇವುಗಳು ಶಿಲಾವೃತ್ತ ಮಾದರಿಗೆ ಸೇರಿವೆ. ಈ ಪರಿಸರದಲ್ಲಿ ಭೌಗೋಳಿಕವಾಗಿ ಚಕ್ಕೆ ಕಲ್ಲುಗಳು ಕಂಡುಬರುತ್ತವೆ. ಆ ಕಲ್ಲುಗಳನ್ನೇ ಈ ಶಿಲಾಸಮಾಧಿಗಳ ರಚನೆಗೆ ಬಳಸಿದ್ದಾರೆ. ಸುತ್ತಲೂ ದೊಡ್ಡ ಗಾತ್ರದ ಚಿಕ್ಕಕಲ್ಲುಗಳನ್ನು ನೆಟ್ಟು ಮಧ್ಯದಲ್ಲಿ ಚಿಕ್ಕಗಾತ್ರದ ಶಿಲೆಗಳನ್ನು ತುಂಬಿದ್ದಾರೆ.

### ೩. ಹಳೇಹಳ್ಳಿ ಲಂಬಾಣಿಹಟ್ಟಿ

ಹೊಳಲ್ಕೆರೆ ತಾಲೂಕಿನ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಲಂಬಾಣಿಹಟ್ಟಿಯು ಒಂದು. ಈ ಗ್ರಾಮವು ಶಿವಗಂಗಾ ಮತ್ತು ಹೊಳಲ್ಕೆರೆ ಮಾರ್ಗದಲ್ಲಿದೆ. ಹಳೇಹಳ್ಳಿ ಲಂಬಾಣಿಹಟ್ಟಿಯಿಂದ ಗಿಲಕೇನಹಳ್ಳಿಗೆ ಹೋಗುವ ಮಾರ್ಗದಲ್ಲಿ ಆಂಜನೇಯ ದೇವಾಲಯದ ಪರಿಸರದಲ್ಲಿ



ಹಳೇಹಳ್ಳಿ ಲಂಬಾಣಿಹಟ್ಟಿಯ ಬೃಹತ್ ಶಿಲಾ ಸಮಾಧಿ

ಬೃಹತ್ ಶಿಲಾಸಮಾಧಿ ನೆಲೆ ಇದೆ. ಈ ಪರಿಸರವು ಭೌಗೋಳಿಕವಾಗಿ ಬೆಟ್ಟ-ಗುಡ್ಡ, ತಗ್ಗು-ದಿನ್ನೆಗಳಿಂದ ಕೂಡಿದ್ದು ಇಲ್ಲೇ ಗ್ರ್ಯಾನೈಟ್ ಬೆಟ್ಟವಿದೆ. ಆದುದರಿಂದ ಅದಕ್ಕೆ ಸಮೀಪದಲ್ಲೇ ಕಲ್ಲು ಗಣಿಗಾರಿಕೆಯು ನಡೆಯುತ್ತಿದೆ. ಇಲ್ಲಿನ ಆಂಜನೇಯ ದೇವಾಲಯದ ಹತ್ತಿರ ಸುಮಾರು ೫೦ ಬೃಹತ್ ಶಿಲಾಸಮಾಧಿಗಳು ಪತ್ತೆಯಾದವು. ಇವುಗಳು ವೃತ್ತಮಾದರಿಗೆ ಸೇರಿವೆ. ಇವುಗಳ ರಚನೆಗೆ ಒಳಭಾಗಕ್ಕೆ ಬಿಳಿಕಣಶಿಲೆಯ ಚಪ್ಪಡಿಗಳನ್ನು ಬಳಸಿ ಮೇಲೆ ಅದೇ ಕಲ್ಲಿನ ಚಪ್ಪಡಿಯ ಹಾಸುಬಂಡೆಗಳನ್ನು ಹಾಕಿದ್ದಾರೆ. ಅಲ್ಲದೇ ಸಮಾಧಿಯ ಸುತ್ತಲೂ ಕಪ್ಪು ದುಂಡುಶಿಲೆಗಳನ್ನು ಬಳಸಿದ್ದಾರೆ. ಒಟ್ಟಾರೆ ಇಲ್ಲಿ ಭೌಗೋಳಿಕವಾಗಿ ದೊರೆಯುವ ಶಿಲಾ ಮಾದರಿಗಳನ್ನೇ ಬಳಸಿ ಸಮಾಧಿಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ.

## ೪. ಹುಲಿಕೆರೆ

ಹುಲಿಕೆರೆ ಗ್ರಾಮವು ಹೊಳಲ್ಕೆರೆ ತಾಲೂಕಿಗೆ ಸೇರಿದ್ದು ಹೊಸದುರ್ಗ ತಾಲೂಕಿನ ಗೂಳಿಹಟ್ಟಿ ಗ್ರಾಮಕ್ಕೆ ಸನಿಹದಲ್ಲಿದೆ. ಇದರ ಸ್ಥಳನಾಮವು ಪ್ರಾಣಿವಾಚಿಯಿಂದ ಕೂಡಿದೆ. ಈ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಹಾಳೂರು ಅಥವಾ ಹಳೇಊರು ಪರಿಸರವಿದೆ. ಇಲ್ಲಿನ ತಿಪ್ಪೇಸ್ವಾಮಿ ಅವರ ಹೊಲದಲ್ಲಿ ೩ ಬೃಹತ್ ಶಿಲಾಗೋರಿಗಳು ಪತ್ತೆಯಾಗಿದ್ದು ಅವುಗಳು ಸ್ವಸ್ತಿಕ ಮಾದರಿಗೆ ಸೇರಿವೆ. ಇವುಗಳ ಬದಿಗಳಲ್ಲಿ ಕಪ್ಪು, ಕೆಂಪು ಹಾಗೂ ಕಪ್ಪು-ಕೆಂಪು ಬಣ್ಣದ ಮಡಿಕೆ ಚೂರುಗಳು ದೊರೆತಿವೆ. ಬೃಹತ್ ಶಿಲಾಗೋರಿಗಳ ಬದಿಯಲ್ಲೇ ಒಂದು ಬೃಹದಾಕಾರದ ಬೆಟ್ಟದ ಗವಿ ಇದೆ. ಆದರೆ ಒಳಗೆ ಹೋಗುವ ಯಾವ ಪ್ರವೇಶದ್ವಾರಗಳು ಇರದೇ ಮುಚ್ಚಿಹೋಗಿವೆ. ಆದರೆ ಗವಿಗಳ ಹೊರವಲಯಗಳಲ್ಲಿ ಬೃಹತ್ ಶಿಲಾಸಂಸ್ಕೃತಿಯ ಮಡಿಕೆ ಚೂರುಗಳು ದೊರೆತಿವೆ. ಬಹುಶಃ ಇವುಗಳು ಮಾನವರ ವಾಸ್ತವ್ಯದ ಗುಹೆಗಳಾಗಿದ್ದಿರಬಹುದು.

ನೂತನ ಶಿಲಾಯುಗದ ನಂತರದ ಕಾಲದಲ್ಲಿ ಕಂಡುಬರುವ ಬೃಹತ್ ಶಿಲಾ ಸಂಸ್ಕೃತಿಯ ಪ್ರಧಾನವಾದ ಲಕ್ಷಣಗಳೆಂದರೆ – ಬೃಹದಾಕಾರದ ಸಮಾಧಿಗಳ ನಿರ್ಮಾಣ ಹಾಗೂ ಮೊತ್ತ ಮೊದಲ ಬಾರಿಗೆ ಕಬ್ಬಿಣ ಉಪಯೋಗದ ಪರಿಚಯ. ಆದುದರಿಂದ ಈ ಕಾಲವನ್ನು 'ಕಬ್ಬಿಣಯುಗ' ಎಂದು ಕರೆಯಲಾಗಿದೆ. ಚಿತ್ರದುರ್ಗ ಜಿಲ್ಲೆಯ ಬಹುಭಾಗಗಳಲ್ಲಿ ಬೃಹತ್ ಶಿಲಾಸಮಾಧಿಗಳು ಹಾಗೂ ನೆಲೆಗಳು ಅಪಾರ ಪ್ರಮಾಣದಲ್ಲಿ ಕಂಡುಬಂದಿವೆ. ಈ ಜಿಲ್ಲೆಯ ಬೃಹತ್ ಶಿಲಾಸಮಾಧಿಗಳ ಕಾಲಮಾನವನ್ನು ಕ್ರಿ.ಪೂ. ೨೦೦ ರಿಂದ ಕ್ರಿ.ಶ. ೧ನೇ ಶತಮಾನ ಎಂದು ಅಂದಾಜಿಸಲಾಗಿದೆ. ಹೊಳಲ್ಕೆರೆ ತಾಲೂಕಿನ ಸಿರಾಪ್ಪನಹಳ್ಳಿ, ಗೂಳಿಹೊಸಹಳ್ಳಿ, ಹಳೇಹಳ್ಳಿ, ಲಂಬಾಣಿಹಟ್ಟಿ, ಹುಲಿಕೆರೆ ಗ್ರಾಮಗಳ ಪರಿಸರಗಳಲ್ಲಿ ಕಂಡುಬಂದಿರುವ ಬೃಹತ್ ಶಿಲಾಸಮಾಧಿಗಳು ಇದೇ ಮೊದಲ ಬಾರಿಗೆ ಈ ಲೇಖನದ ಮೂಲಕ ಪ್ರಕಟಗೊಳ್ಳುತ್ತಿವೆ.



**ನಿಧಿಗಾಗಿ ಬೃಹತ್ ಶಿಲಾ ಸಮಾಧಿಯನ್ನು ಹಾಳು ಮಾಡಿರುವುದು. ಹುಲಿಕೆರೆ**

[ಕೃತಜ್ಞತೆ : ಹೊಳಲ್ಕೆರೆ ತಾಲ್ಲೂಕಿನ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ದುಗ್ಗಾವರದ ಬಿ.ಪಿ. ಸಂತೋಷ್‌ಕುಮಾರ್, ನನ್ನ ಆತ್ಮೀಯ ಗೆಳೆಯ ಆರ್.ಎಸ್. ಉಮೇಶ ಇವರಿಗೆ ವಂದನೆಗಳು.]



### ಆಧಾರಸೂಚಿ


೧. Gopal. B.R., (Ed)., 1995, *Sheshachandrika* (A Compendium of Dr. M. Seshadri's works), Directorate of Archaeology and Museums, Mysore.

೨. Gururaja Rao. B.K., 1972, *Megalithic Culture in South India,* University of Mysore, Mysore.

೩. ಷೇಕ್‌ಅಲಿ. ಬಿ (ಪ್ರ.ಸಂ)., ೧೯೯೭, **ಕರ್ನಾಟಕದ ಚರಿತ್ರೆ,** ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಶಿವತಾರಕ್. ಕೆ.ಬಿ., ೨೦೦೧, **ಕರ್ನಾಟಕದ ಪುರಾತತ್ತ್ವ ನೆಲೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. **ಇತಿಹಾಸ ಮತ್ತು ಪುರಾತತ್ತ್ವ, ಕನ್ನಡ ವಿಷಯ ವಿಶ್ವಕೋಶ,** ೨೦೦೯, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬ ಗೋಪಾಲ್. ಆರ್ (ಸಂ)., ೨೦೦೫, **ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ,** ಕರ್ನಾಟಕ ಪ್ರಾಚ್ಯ ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.



# ಕೂನಬೇವು ಪರಿಸರದ ಇತ್ತೀಚಿನ ಪ್ರಾಗೈತಿಹಾಸಿಕ ಶೋಧನೆಗಳು

ಎಸ್. ನಾಗರಾಜಪ್ಪ* ಕೆ.ಎಸ್. ಶರತ್‌ಬಾಬು**

**ಕೂ**ನಬೇವು ಗ್ರಾಮವು ಚಿತ್ರದುರ್ಗದಿಂದ ಈಶಾನ್ಯಕ್ಕೆ ಸುಮಾರು ೨೦ ಕಿ.ಮೀ. ದೂರದಲ್ಲಿರುವ ಸಣ್ಣ ಹಳ್ಳಿ. ಚಿತ್ರದುರ್ಗ ತಾಲೂಕು ತುರುವನೂರು ಹೋಬಳಿಗೆ ಸೇರಿರುವ ಈ ಗ್ರಾಮ ಪರಿಸರದಲ್ಲಿ ಸಣ್ಣ ಸಣ್ಣ ಮಟ್ಟಿಗಳು, ಹಳ್ಳಗಳು, ಉತ್ತಮ ಹವಾಗುಣದೊಡನೆ ಕೃಷಿಗೆ ಯೋಗ್ಯ ಮತ್ತು ಫಲವತ್ತಾದ ಭೂಮಿ, ಅಲ್ಲಲ್ಲಿ ಸ್ಲೇಟ್‌ಶಿಲೆ ಮತ್ತು ಫಿಲ್ಲೈಟ್ ಶಿಲೆಗಳನ್ನು ಹೆಚ್ಚಿನದಾಗಿ ಕಾಣಬಹುದು. ಬಹುಶಃ ಹಿಂದೊಮ್ಮೆ ದಟ್ಟವಾದ ಕಾಡು ಉತ್ತಮ ಹವಾಗುಣ ಮತ್ತು ನೀರಿನ ಸೌಲಭ್ಯ ಹೊಂದಿದ್ದ ಈ ಪರಿಸರದಿಂದ ಆಕರ್ಷಿತನಾದ ಮಾನವ ಇಲ್ಲಿ ನೆಲೆ ನಿಂತನೆನ್ನಬಹುದು. ಕೂನಬೇವು ಪರಿಸರದಲ್ಲಿ ನಾವು ಇತ್ತೀಚೆಗೆ ಕೈಗೊಂಡ ಅನ್ವೇಷಣೆಯಲ್ಲಿ ಎರಡು ಆದಿಹಳೆ ಶಿಲಾಯುಗದ ಆಯುಧಗಳು ಮತ್ತು ಒಂದು ನವಶಿಲಾಯಗದ ಕಲ್ಲಿನ ಕೊಡಲಿ ಪತ್ತೆಯಾದವು. ಪ್ರಸ್ತುತ ಲೇಖನದಲ್ಲಿ ಇವುಗಳ ವಿಶ್ಲೇಷಣೆ ಮಾಡುವ ಪ್ರಯತ್ನವನ್ನು ಮಾಡಲಾಗಿದೆ.

ಕೂನಬೇವು ಗ್ರಾಮದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿರುವ ಮಟ್ಟಿಯೊಂದನ್ನು ಸ್ಥಳೀಯರು 'ಮೊರೇರಮಟ್ಟಿ' ಎಂದು ಕರೆಯುತ್ತಾರೆ. 'ಮೊರೇರ ಮಟ್ಟಿ', 'ಮೊರೇರ ಮನೆ' ಎಂಬ ಹೆಸರಿನ ಸ್ಥಳಗಳು ಬೃಹತ್ ಶಿಲಾಗೋರಿಗಳಿಗೆ ಸಂಬಂಧಪಟ್ಟ ಸ್ಥಳಗಳೆಂಬುದು ಈಗಾಗಲೇ ಧೃಢಪಟ್ಟ ಅಂಶ. ಅಂತೆಯೇ ಇಲ್ಲಿ ಈ ಹಿಂದೆ ಶಿಲಾವೃತ್ತ ಮಾದರಿಯ ಬೃಹತ್ ಶಿಲಾಸಮಾಧಿಗಳು ಬೆಳಕಿಗೆ ಬಂದಿವೆ. ಇವುಗಳ ಸುತ್ತಮುತ್ತಲ ಪರಿಸರದಲ್ಲಿ ಕೈಗೊಂಡ ಕ್ಷೇತ್ರಕಾರ್ಯದಲ್ಲಿ ಎರಡು ಆದಿಹಳೇ ಶಿಲಾಯುಗದ ಆಯುಧಗಳು ಪತ್ತೆಯಾದವು. ಕ್ವಾರ್ಟ್‌ಜೈಟ್ ಶಿಲೆಯಿಂದ ತಯಾರಿಸಿದ ಕೈಕೊಡಲಿ ಮತ್ತು ಸೀಳುಗತ್ತಿ ಮಾದರಿಯ ಈ ಉಪಕರಣಗಳು ಕ್ರಮವಾಗಿ ೧೦.೫ ಮತ್ತು ೯.೫ ಸೆಂ.ಮೀ. ಉದ್ದ ಇವೆ. ಇವುಗಳಲ್ಲಿ ಅಂಡಾಕಾರದಲ್ಲಿರುವ ಕೈಕೊಡಲಿಯ ಎರಡೂ ಬದಿಯಲ್ಲಿ ಚಕ್ಕೆಗಳನ್ನು ತೆಗೆದು ಅಂಚಿನ ಭಾಗವನ್ನು ಸ್ವಲ್ಪಮಟ್ಟಿಗೆ ಚೂಪು ಮಾಡಿಕೊಳ್ಳಲಾಗಿದೆ. ಆದಿ ಹಳೇಶಿಲಾಯುಗದಲ್ಲಿ ಕೈಕೊಡಲಿಯನ್ನು ಬಳಕೆ ಹೆಚ್ಚಿನದಾಗಿದ್ದು, ಪ್ರಾಣಿಗಳನ್ನು ಕೊಲ್ಲಲು ಬಳಸುತ್ತಿದ್ದರೆನ್ನಬಹುದು. ಸೀಳುಗತ್ತಿ ಇಲ್ಲಿ ದೊರೆತ ಇನ್ನೊಂದು ಉಪಕರಣ. ಸಾಧಾರಣವಾಗಿ ಸೀಳುಗತ್ತಿಗಳು ಹೆಚ್ಚಿನದಾಗಿ ಇಂಗ್ಲಿಷಿನ 'ಯು' ಅಥವಾ 'ವಿ' ಅಕ್ಷರದ ಆಕಾರದಲ್ಲಿರುತ್ತವೆ. ಕೂನಬೇವು ಗ್ರಾಮದ ವ್ಯಾಪ್ತಿಯಲ್ಲಿ ದೊರೆತ ಸೀಳುಗತ್ತಿಯ ಹರಿತವಾದ ಬಾಯಿ ಅಗಲವಾಗಿದ್ದು ಕೊಯ್ಯುವ ಅಥವಾ ಕತ್ತರಿಸುವ ಅಂಚುಗಳನ್ನು ಹೊಂದಿರುವುದನ್ನು ಕಾಣಬಹುದು. ಪ್ರಾಚೀನ ಕಾಲದ ಮಾನವರು ತಮ್ಮ ಕೈಯಿಂದ ಪ್ರಾಣಿಗಳನ್ನು ಕೊಲ್ಲಲು ಹಾಗೂ ಗೆಡ್ಡೆ ಗೆಣಸುಗಳನ್ನು ಸಂಗ್ರಹಿಸಲು ಈ ಬಗೆಯ ಆಯುಧಗಳನ್ನು ಬಳಸುತ್ತಿದ್ದರು. ಇವು ಮಾನವನ ಬೇಟೆ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ.

ಕೂನಬೇವು ಗ್ರಾಮದ ಕೊಂಚೆ ಶಾಂತರುದ್ರಪ್ಪನವರ ಕೃಷಿ ಭೂಮಿಯಲ್ಲಿ ದೊರೆತ ಉಪಕರಣವು ನೂತನ ಶಿಲಾಯಗ ಕಾಲಘಟ್ಟದ್ದು. ಡೈಕ್ ಶಿಲೆ ಬಳಸಿ ತಯಾರಿಸಿದ ಈ ಆಯುಧವು ೧೨.೫ ಸೆಂ. ಮೀ. ಉದ್ದವಿದೆ. ಆಯುಧದ ತುದಿಯು ಚೂಪಾಗಿ ಮತ್ತು ಅಗಲವಾಗಿದೆಯಲ್ಲದೆ ಅದರ ಹಿಂಬದಿಯು ಸಣ್ಣದಾಗುತ್ತಾ ಹಾಗೂ ದುಂಡಾಗುತ್ತಾ ಹೋಗಿರುವುದನ್ನು ಕಾಣಬಹುದು. ಕಲ್ಲಿನ ಈ ಉಪಕರಣವು ಮಾನವನ ಕೃಷಿ ಸಂಸ್ಕೃತಿಯ ಸಂಕೇತವೂ, ಕೃಷಿ ಆರಂಭಿಸಲು ಉಪಯೋಗಿಸಲ್ಪಟ್ಟ ಮೊದಲ ಸಾಧನವೂ ಆಗಿದೆ. ಕೃಷಿಯ ಆರಂಭದಿಂದ ಮಾನವ ಮುಂದೆ ತನ್ನ ಪರಿವಾರದೊಡನೆ ಒಂದೆಡೆ ನೆಲೆನಿಂತು ಆರಂಭಿಸಿದ ಗ್ರಾಮ ಸಂಸ್ಕೃತಿಗೆ ಇದು ಮೂಲ ಪ್ರೇರಕ ಸಾಧನವಾಯಿತೆನ್ನಬಹುದು. "ಪ್ರಸ್ತುತ ಪತ್ತೆಯಾಗಿರುವ ಆಯುಧಗಳು ಪ್ರಾಗಿತಿಹಾಸ ಕಾಲದ ವಿವಿಧ ಕಾಲಘಟ್ಟಗಳನ್ನು ಪ್ರತಿನಿಧಿಸುವ ಮಹತ್ವದ ಆಕರಗಳಾಗಿವೆ ಯಲ್ಲದೆ ಇವು ಚಿತ್ರದುರ್ಗ ತಾಲೂಕು ಪರಿಸರದಲ್ಲಿ ಕಂಡುಬಂದ ಅಪರೂಪದ ಹಾಗೂ ಆದಿಹಳೆ ಶಿಲಾಯುಗ ಕಾಲದ ಕುರುಹಾಗಿ ದೊರೆತ ಮೊಟ್ಟಮೊದಲ ಶಿಲಾಯಧ

* ಸಹಾಯಕ ಶಾಸನ ಶಾಸ್ತ್ರಜ್ಞ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ ಇಲಾಖೆ, ಫೋರ್ಟ್ ಸೆಂಟ್ ಜಾರ್ಜ್, ಚೆನ್ನೈ-೬೦೦೦೦೯.
** ಸಂಶೋಧಕ, ಕೂನಬೇವು, ಚಿತ್ರದುರ್ಗ ಜಿಲ್ಲೆ.

ಗಳಾಗಿವೆಯೆಂದು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗದ ಸಹಾಯಕ ಪ್ರಾಧ್ಯಾಪಕ ಡಾ. ಎಸ್.ವೈ. ಸೋಮಶೇಖರ್ ಅಭಿಪ್ರಾಯಪಟ್ಟಿದ್ದಾರೆ". ಈ ಹಿಂದೆ ಜಿಲ್ಲೆಯ ತಾಳ್ಯ ಮತ್ತು ಜಾನಕಲ್ಲು ಗ್ರಾಮಗಳಲ್ಲಿ ಆದಿ ಹಳೇಶಿಲಾಯುಗಕ್ಕೆ ಸಂಬಂಧಿಸಿದ ಉಪಕರಣಗಳನ್ನು ರಾಬರ್ಟ್ ಬ್ರೂಸ್ ಫೂಟ್ ಹಾಗೂ ಎಂ. ಶೇಷಾದ್ರಿಯವರು ಪತ್ತೆಹಚ್ಚಿದ್ದರು.

ಕಬ್ಬಿಣಯುಗವನ್ನು ಸಂಕೇತಿಸುವ ಬೃಹತ್ ಶಿಲಾಯುಗದ ಶಿಲಾವೃತ್ತ ಮಾದರಿಯ ಸಮಾಧಿಗಳು, ಕುಟ್ಟಿ ಮೂಡಿಸಿದ ರೇಖಾಕೃತಿಗಳು ಮತ್ತು ಸಮಾಧಿಯೊಂದರಿಂದ ಶವ ಸಂಸ್ಕಾರದ ಸಮಯದಲ್ಲಿ ಶವದ ಜೊತೆಗೆ ಇಟ್ಟಿದ್ದ ಕಪ್ಪು ವರ್ಣದ, ಕಪ್ಪು ಮತ್ತು ಕೆಂಪು ವರ್ಣದ ವಿವಿಧ ಆಕಾರದ ಮಡಕೆಗಳು ಮತ್ತು ಕಬ್ಬಿಣದ ವಸ್ತುಗಳನ್ನು ಡಾ. ಎಸ್.ವೈ. ಸೋಮಶೇಖರ್ ಮತ್ತು ಡಾ. ಎಸ್. ತಿಪ್ಪೇಸ್ವಾಮಿ ಯವರು ಈ ಹಿಂದೆ ಗ್ರಾಮದ ವ್ಯಾಪ್ತಿಯಲ್ಲಿ ಪತ್ತೆಹಚ್ಚುವ ಮೂಲಕ ಕೂನಬೇವು ಗ್ರಾಮದ ಇತಿಹಾಸವನ್ನು ಕ್ರಿ.ಪೂ. ೧೦೦೦ ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ದಿದ್ದರು. ಆದರೆ ಪ್ರಸ್ತುತ ಪತ್ತೆಯಾದ ಉಪಕರಣಗಳಿಂದ ಕೂನಬೇವು ಪರಿಸರದಲ್ಲಿ ಮಾನವನ ಇತಿಹಾಸವನ್ನು ಕ್ರಿ.ಪೂ. ೬೦೦೦ ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ಯಬಹುದು.

### ಆದಿ ಹಳೇಶಿಲಾಯುಗದ ಆಯುಧಗಳ ರೇಖಾಚಿತ್ರಗಳು ಮತ್ತು ಛಾಯಾಚಿತ್ರಗಳು




ಒಟ್ಟಾರೆ ಚಿತ್ರದುರ್ಗ ತಾಲೂಕಿನಲ್ಲಿ ಪ್ರಪ್ರಥಮ ಬಾರಿಗೆ ದೊರೆತ ಆದಿಹಳೆ ಶಿಲಾಯುಗದ ಆಯುಧಗಳು ಪ್ರಸ್ತುತ ಸಂಶೋಧನೆಯ ಮಹತ್ವವನ್ನು ಹೆಚ್ಚಿಸಿವೆ ಹಾಗೂ ಇದರಿಂದ ಚಿತ್ರದುರ್ಗ ಜಿಲ್ಲೆಯ ಪ್ರಾಗೈತಿಹಾಸಿಕ ಯುಗದ ಅಧ್ಯಯನಕ್ಕೆ ಹೊಸ ಗರಿಯೊಂದು ಸೇರ್ಪಡೆಯಾದಂತಾಗಿದೆ.







### ಆಧಾರಸೂಚಿ


೧. ತಿಪ್ಪೇಸ್ವಾಮಿ ಎಸ್., ೨೦೦೭, *ಚಿತ್ರದುರ್ಗ ತಾಲೂಕಿನ ಮತ್ತಷ್ಟು ಪ್ರಾಗೈತಿಹಾಸಿಕ ನೆಲೆಗಳು*, **ಇತಿಹಾಸ ದರ್ಶನ,** ಸಂ–೨೨, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೨. ಲಕ್ಷ್ಮಣ್ ತೆಲಗಾವಿ, ೨೦೦೪, *ಬೆಳಗಟ್ಟ ಗ್ರಾಮ ಪರಿಸರದ ಎದ್ದುಲುಬಂಡೆಯ ಬಯಲುಬಂಡೆ ರೇಖಾಕೃತಿಗಳು*, **ಇತಿಹಾಸ ದರ್ಶನ,** ಸಂ.೧೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೩. ಶಿವತಾರಕ್ ಕೆ.ಬಿ., ೨೦೦೧, **ಕರ್ನಾಟಕದ ಪುರಾತತ್ತ್ವ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪. ಸುಂದರ ಅ., ೧೯೯೭, **ಕರ್ನಾಟಕ ಚರಿತ್ರೆ,** ಸಂ.–೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. Foote R.B., 1916, *Prehistoric and Protohistoric Antiquities Madras,* Government Museum, Madras.

೬. ನಾಗರಾಜಪ್ಪ ಎಸ್., ಮತ್ತು ಶರತ್‌ಬಾಬು ಕೆ.ಎಸ್., ಕೂನಬೇವು: *ಶಿಲಾಯುಗದ ಕೊಡಲಿಗಳು ಪತ್ತೆ*, ೧೯.೦೩.೨೦೧೨ರ **ಕನ್ನಡಪ್ರಭ** ದಿನಪತ್ರಿಕೆಯಲ್ಲಿ ಪ್ರಕಟವಾದ ಲೇಖನ.




# ಬುಕ್ಕಾಪಟ್ಟಣ ಪರಿಸರದಲ್ಲಿ ಬೃಹತ್ ಶಿಲಾಗೋರಿಗಳ ನೆಲೆ

**ಪದ್ಮ ಬಿ.ಎಸ್.* ಚಿರಂಜೀವಿ ಎನ್.ಟಿ.**

ಕರ್ನಾಟಕ ಭೂ ಪ್ರದೇಶವು ಪ್ರಾಗೈತಿಹಾಸ ಹಾಗೂ ಇತಿಹಾಸ ಕಾಲದ ಘಟನೆಗಳ ಪ್ರಮುಖ ತಾಣವಾಗಿದ್ದು, ತನ್ನ ಒಡಲಲ್ಲಿ ಅನೇಕ ಪುರಾತತ್ವ ಅವಶೇಷಗಳನ್ನು ಇರಿಸಿಕೊಂಡಿದೆ. ಕರ್ನಾಟಕದಲ್ಲಿ ಪ್ರಾಗಿತಿಹಾಸಕ್ಕೆ ಸಂಬಂಧಿಸಿದಂತೆ ಹಳೇಶಿಲಾಯುಗ, ನೂತನಶಿಲಾಯುಗ, ಸೂಕ್ಷ್ಮ ಶಿಲಾಯುಗದ ಅವಶೇಷಗಳ ಜೊತೆಗೆ ನೂರಾರು ಸಂಖ್ಯೆಯ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆ ಹಾಗೂ ಗೋರಿಗಳನ್ನು ಕಾಣಬಹುದು.[೧] ಬೃಹತ್‌ಶಿಲಾಯುಗದ ನೆಲೆಗಳು ಕರ್ನಾಟಕದ ಎಲ್ಲಾ ಜಿಲ್ಲೆಯಲ್ಲಿ ಕಂಡುಬಂದಿವೆ. ತುಮಕೂರು ಜಿಲ್ಲೆಯಲ್ಲಿಯೂ ಸಹ ಬೃಹತ್‌ಶಿಲಾಗೋರಿಗಳು ದೊರೆತಿವೆ. ಈ ಜಿಲ್ಲೆಯ ಹತ್ತು ತಾಲ್ಲೂಕುಗಳಲ್ಲಿ ಶಿರಾ ತಾಲ್ಲೂಕು ಒಂದಾಗಿದೆ. ಈ ತಾಲ್ಲೂಕಿನಲ್ಲಿ ಪ್ರಾಗಿತಿಹಾಸದ ವಿವಿಧ ನೆಲೆಗಳು, ಅವಶೇಷಗಳು ಕಂಡುಬಂದಿವೆ, ಶಿರಾ ತಾಲ್ಲೂಕಿನ ವ್ಯಾಪ್ತಿಯಲ್ಲಿ ಐದು ಹೋಬಳಿಗಳು ಇದ್ದು, ಅದರಲ್ಲಿ ಬುಕ್ಕಾಪಟ್ಟಣ ಹೋಬಳಿಯೂ ಒಂದು. ಈ ಪ್ರದೇಶದಲ್ಲಿ ನವಶಿಲಾಯುಗದ ಉಪಕರಣಗಳು, ಬೃಹತ್ ಶಿಲಾಯುಗದ ವಸತಿ ನೆಲೆ, ಕಪ್ಪು–ಕೆಂಪು ಮಡಕೆ ಭಾಗಗಳು ಹಾಗೂ ಇತಿಹಾಸ ಆರಂಭ ಕಾಲಕ್ಕೆ ಸಂಬಂಧಿಸಿದ ಕಪ್ಪು–ಕೆಂಪು, ಮಡಕೆ ಅವಶೇಷಗಳ ಬಗ್ಗೆ ಈ ಹಿಂದೆ ಪುರಾತತ್ವಶಾಸ್ತ್ರಜ್ಞರು ಸಂಶೋಧಿಸಿ ಪ್ರಕಟಿಸಿದ್ದಾರೆ.[೨]

ಬುಕ್ಕಾಪಟ್ಟಣ ಹೋಬಳಿಗೆ ಸೇರಿದಂತೆ ೯೭ ಗ್ರಾಮಗಳಿವೆ. ಈ ಗ್ರಾಮಗಳಲ್ಲಿ ೯೦ ಗ್ರಾಮಗಳು ಜನವಸತಿ ಹೊಂದಿದ ಗ್ರಾಮಗಳಾಗಿವೆ. ಆದರೆ ಬೊರೆನಾಳು, ಸೂಲದಾಳು, ಕಂಬದಾಳು, ವೆಂಕಟಾಪುರ, ಮರಿದಾಸರಹಳ್ಳಿ, ಕಣಿವೆರಾಂಪುರ ಹಾಗೂ ಮಾದನಹಳ್ಳಿ ಬೇಚೆರಾಕ್ ಗ್ರಾಮಗಳು ಅರಣ್ಯ ಪ್ರದೇಶದಲ್ಲಿ ಇದ್ದು, ಅಲ್ಲಿ ಜನವಸತಿ ಇರುವುದಿಲ್ಲ.[೩] ಬುಕ್ಕಾಪಟ್ಟಣ ಪರಿಸರದ ಸುತ್ತಲೂ ಅರಣ್ಯ ಪ್ರದೇಶವು ಆವರಿಸಿದ್ದು, ಅರಣ್ಯದಲ್ಲಿ ವನ್ಯಮೃಗಗಳಾದ ಕರಡಿ, ಚಿರತೆಗಳು ಇವೆ. ಇವಲ್ಲದೆ ನರಿ, ತೋಳ, ಮೊಲ, ನವಿಲು, ಕೋಗಿಲೆ ಮುಂತಾದ ಪಶುಪಕ್ಷಿಗಳ ಜೊತೆಗೆ ಸರೀಸೃಪಗಳೂ ಕಂಡುಬಂದಿವೆ. ಈ ಅರಣ್ಯ ಪ್ರದೇಶದ ಪೂರ್ವ–ಪಶ್ಚಿಮದ ಕಡೆಗೆ ಬೆಟ್ಟ ಗುಡ್ಡಗಳ ಸಾಲು ಹಬ್ಬಿದೆ. ಅಲ್ಲಲ್ಲಿ ಚಿಕ್ಕ ಮತ್ತು ದೊಡ್ಡಹಳ್ಳಗಳು ಇದ್ದು, ಸರ್ವ ಋತುಗಳಲ್ಲಿಯೂ ನೀರಿನ ವ್ಯವಸ್ಥೆ ಇರುವುದು ಕಂಡುಬಂದಿದೆ. ಈ ಭೌಗೋಳಿಕ ಪರಿಸರವು ಪ್ರಾಗಿತಿಹಾಸ ಕಾಲದ ಜನರು ವಾಸಿಸಲು ಯೋಗ್ಯವಾಗಿತ್ತು. ನಾವು ಅರಣ್ಯ ಪ್ರದೇಶದಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡಾಗ ಬೃಹತ್ ಶಿಲಾಯುಗದ ಸುಮಾರು ೧೪ ಶಿಲಾವೃತ್ತ ಸಮಾಧಿಗಳು ಕಂಡುಬಂದಿವೆ. ಈ ರೀತಿಯ ಗೋರಿಗಳು ಶಿರಾ ತಾಲ್ಲೂಕಿನಲ್ಲಿ ಇಲ್ಲಿಯವರೆಗೆ ಕಂಡುಬಂದಿಲ್ಲ. ತುಮಕೂರು ಜಿಲ್ಲೆಯ ಗೌಡನಕಟ್ಟೆ, ಚಿನವಾರ, ಬೆಳ್ಳಿಬಟ್ಟಲಹಳ್ಳಿ ಹಾಗೂ ಪಾವಗಡ ತಾಲ್ಲೂಕಿನ ಕಣಿಕಲ ಬಂಡೆ, ಕತ್ತಿಕ್ಯಾತರಹಳ್ಳಿ, ನಿಡುಗಲ್ಲು, ಪಳವಳ್ಳಿ, ಬೂದಿಬೆಟ್ಟ ಇನ್ನೂ ಮುಂತಾದ ಪ್ರದೇಶಗಳಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳನ್ನು ಪುರಾತತ್ತ್ವ ಶಾಸ್ತ್ರಜ್ಞರು ಗುರುತಿಸಿದ್ದಾರೆ.

## ಬೃಹತ್ ಶಿಲಾಯುಗದ ಗೋರಿ ನೆಲೆಯ ಶೋಧನೆ

ಬೃಹತ್ ಶಿಲಾಯುಗದ ಸಮಾಧಿಗಳಿರುವ ನೆಲೆಯು ತುಮಕೂರು ಜಿಲ್ಲೆಯ ಶಿರಾತಾಲ್ಲೂಕಿನಿಂದ ೨೬ ಕಿ.ಮೀ ದೂರದ ಬುಕ್ಕಾಪಟ್ಟಣ ಪರಿಸರಕ್ಕೆ ಸೇರಿದ್ದು, ರಾಜ್ಯ ಅರಣ್ಯ ಪ್ರದೇಶದಲ್ಲಿ ಕಂಡುಬಂದಿದೆ. ಈ ನೆಲೆಯು ಇತಿಹಾಸ ಪೂರ್ವಕಾಲದ ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ಪ್ರದೇಶವಾಗಿದೆ. ನೆಲೆಯನ್ನು ತಲುಪಲು ಯಾವುದೇ ರೀತಿ ಮುಖ್ಯ ರಸ್ತೆಗಳಲ್ಲದೆ, ಕಾಲುದಾರಿ (ಕಿರುದಾರಿ)ಯ ಮೂಲಕ ಹೋಗಬಹುದು. ಬುಕ್ಕಾಪಟ್ಟಣದಿಂದ ಹುಳಿಯಾರು ಮಾರ್ಗವಾಗಿ ಹೋಗುವ ಮುಖ್ಯ ರಸ್ತೆಯಲ್ಲಿರುವ ಶನಿಮಹಾತ್ಮ ದೇವಾಲಯದ ಬಲಕ್ಕೆ ಇರುವ ಗಣೇಶ ದೇವಸ್ಥಾನ ಮುಂಭಾಗದ ಕಾಲುದಾರಿಯ ಮೂಲಕ ಈ ನೆಲೆಯನ್ನು ತಲುಪಬಹುದು. ಬುಕ್ಕಾಪಟ್ಟಣದ ಸ್ಥಳೀಯ ಜನರು, ನೆಲೆ ಇರುವ ಸ್ಥಳವನ್ನು ಮರಿದಾಸರಹಳ್ಳಿ ಅಥವಾ

* ಸಂಶೋಧನಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ–೫೮೩೨೭೬.



**ಬುಕ್ಕಾಪಟ್ಟಣ ಪರಿಸರದಲ್ಲಿ ದೊರೆತ ಬೃಹತ್ ಶಿಲಾವೃತ್ತ ಸಮಾಧಿ.**

ಮರಿದಾಸನಹಳ್ಳಿ ಎಂದು ಕರೆಯುತ್ತಾರೆ. ಈ ಪ್ರದೇಶದಲ್ಲಿ ಹಳ್ಳಕ್ಕೆ ಒಂದು ಕಟ್ಟೆ ನಿರ್ಮಿಸಿದ್ದಾರೆ. ಅರಣ್ಯ ಇಲಾಖೆಯವರು ಈ ಕಟ್ಟೆಗೆ ಒಂದು ಚೆಕ್‌ಡ್ಯಾಮ್ ಕಟ್ಟಿದ್ದಾರೆ. ಕಟ್ಟೆ ಪರಿಸರದ ಸುಮಾರು ೨೦೦ ಮೀ. ಅಂತರದಲ್ಲಿ ಬೃಹತ್ ಶಿಲಾ ವೃತ ಗೋರಿಗಳು ವ್ಯಾಪಿಸಿವೆ. ನೆಲೆಯ ಮಣ್ಣು ಬೂದು ಮತ್ತು ಕಪ್ಪು ಬಣ್ಣದ್ದಾಗಿದ್ದು, ಅರಣ್ಯ ಇಲಾಖೆಯವರು ಗಿಡ ಮರಗಳನ್ನು ಹೆಚ್ಚಾಗಿ ಬೆಳೆಸಿರುವುದರಿಂದ ಛಾಯಾ ಚಿತ್ರವನ್ನು ತೆಗೆದರೂ ಸ್ಪಷ್ಟ ರೂಪದಲ್ಲಿ ಕಾಣುವುದಿಲ್ಲ.

ಬೃಹತ್ ಶಿಲಾಸಂಸ್ಕೃತಿಯ ಶಿಲಾಗೋರಿಗಳ ನೆಲೆಯು ತುಮಕೂರಿನಿಂದ ೭೬ ಕಿ.ಮೀ. ಶಿರಾದಿಂದ ೨೬ ಕಿ.ಮೀ. ಹಾಗೂ ಬುಕ್ಕಾಪಟ್ಟಣದಿಂದ ೬ ಕಿ.ಮೀ. ಅಂತರದಲ್ಲಿ ಇದೆ. ನೆಲೆಯು ಸುಮಾರು ೧೪ ಗೋರಿಗಳನ್ನು ಹೊಂದಿದ್ದು, ಸರಾಸರಿ ಉತ್ತರ ದಕ್ಷಿಣಕ್ಕೆ ೨೧ ಅಡಿ, ಪೂರ್ವ ಮತ್ತು ಪಶ್ಚಿಮಕ್ಕೆ ೨೦ ಅಡಿ ಅಂತರವನ್ನು ಹೊಂದಿದ್ದು, ಸಮಾಧಿಯ ಸುತ್ತಲೂ ಸಣ್ಣ ಬಂಡೆಗಳನ್ನು ನೆಲ ಮಟ್ಟದಲ್ಲಿ ವೃತ್ತಾಕಾರವಾಗಿ ಜೋಡಿಸಿರುತ್ತಾರೆ. ಒಂದು ಸಮಾಧಿಗೆ ಒಂದು ಕಲ್ಲು ವೃತ್ತವಿದ್ದು, ಸಮಾಧಿಯ ಮಧ್ಯದಲ್ಲಿ ಸಣ್ಣ ಸಣ್ಣ ಕಲ್ಲುಗಳನ್ನು ಹಾಕಲಾಗಿದೆ, ಕಲ್ಲು ಗೋರಿಗಳ ವಿನ್ಯಾಸ ರಚನೆ ವಿಶಿಷ್ಟವಾಗಿದೆ. ಈ ಸ್ಥಳಗಳಲ್ಲಿ ಅನ್ವೇಷಣೆ ಮಾಡಿದಂತೆ ಇನ್ನೂ ಹೆಚ್ಚು ಹೆಚ್ಚು ಅವಶೇಷಗಳು ಸಿಗುವ ಸಾಧ್ಯತೆ ಇದೆ.

ನೆಲೆಯು ಅರಣ್ಯ ಪ್ರದೇಶದಲ್ಲಿ ಇರುವುದರಿಂದ ಅರಣ್ಯ ಇಲಾಖೆಯವರು ಈಗಾಗಲೇ ಅವುಗಳು ಕಾಣದಂತೆ ಗಿಡ ಮರಗಳನ್ನು ಹಾಕಿದ್ದಾರೆ. ಅವು ಕಾಲ ಕ್ರಮೇಣ ಸಂಪೂರ್ಣವಾಗಿ ಕಾಲಗರ್ಭದಲ್ಲಿ ಹುದುಗಿ ಕಣ್ಮರೆಯಾಗುವ ಮುನ್ನ ಅವುಗಳ ರಕ್ಷಣೆ ದಾಖಲಾತಿ ಅಗತ್ಯವಾಗಿರುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ನರಸಿಂಹಮೂರ್ತಿ ಎ.ವಿ., ೧೯೭೯, **ಕರ್ನಾಟಕ ಪುರಾತತ್ತ್ವ ಶೋಧನೆ,** ಐಬಿಎಚ್ ಪ್ರಕಾಶನ, ಗಾಂಧಿನಗರ, ಬೆಂಗಳೂರು.

೨. ಶಿವತಾರಕ್ ಕೆ.ಬಿ., ೨೦೦೧, **ಕರ್ನಾಟಕ ಪುರಾತತ್ತ್ವ ನೆಲೆಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೧೩.

೩. ನಂದೀಶ್ವರ ಎನ್., ೨೦೦೮, **ಶಿರಾ ತಾಲ್ಲೂಕು ದರ್ಶನ,** ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಬಾಲಾಜಿನಗರ, ಶಿರಾ, ತುಮಕೂರು, ಪು. ೩೫೨.

೪. ಸುಂದರ ಅ., ೧೯೭೦, **ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕ ಪ್ರಾಗೈತಿಹಾಸ,** ಇಂಡಿಯಾ ಬುಕ್ ಹೌಸ್, ಬೆಂಗಳೂರು.

೫. Serinivas M.V., 2011, *Studies in Karnataka History and Culture,* vol. x, Karnataka History Congress, p 115.

೬. Gururaja Rao B.K., 1971, *Megalithic Culture in South India,* Mysore University, Mysore.



# ಅರಸೀಕೆರೆ ತಾಲೂಕಿನ ಪ್ರಾಗೈತಿಹಾಸಿಕ ನೆಲೆಗಳು

**ಪ್ರವೀಣ್ ಬೆಳ್ತಂಗಡಿ***

ಬರವಣಿಗೆಯ ಪೂರ್ವದಲ್ಲಿನ ಮಾನವ ಸಂಸ್ಕೃತಿಯ ಕಾಲವನ್ನು 'ಪ್ರಾಗೈತಿಹಾಸಿಕ ಕಾಲ' ಎಂಬುದಾಗಿ ಗುರುತಿಸಲಾಗಿದೆ. ಹಿಂದೆ ಹಲವು ಆಕಸ್ಮಿಕ ಶೋಧಗಳಿಂದ ದೊರೆತ ಪ್ರಾಗೈತಿಹಾಸಿಕ ಕಾಲದ ನಿವೇಶನಗಳನ್ನು ಮತ್ತು ಅವಶೇಷಗಳನ್ನು ಪ್ರಾಕ್ತನ ಶಾಸ್ತ್ರಜ್ಞರು ಪರೀಕ್ಷಿಸಿ ಮಾನವ ಜೀವನ ಮತ್ತು ಸಂಸ್ಕೃತಿಯ ಪ್ರಾಚೀನತೆ ಮತ್ತು ಬೆಳವಣಿಗೆಯಲ್ಲಿ ಕೆಲವು ಹಂತಗಳನ್ನು ಗುರುತಿಸಿದ್ದಾರೆ. ಕಾಲಾನುಕ್ರಮವಾಗಿ ಹಳೇ ಶಿಲಾಯುಗ, ಹೊಸ ಶಿಲಾಯುಗ, ಕಂಚಿನಯುಗ ಮತ್ತು ಕಬ್ಬಿಣಯುಗ ಅಥವಾ ಬೃಹತ್ ಶಿಲಾಯುಗಗಳೆಂದು ವಿಂಗಡಿಸಬಹುದಾಗಿದೆ.[೧]

ಕಬ್ಬಿಣಯುಗದ ಜನರಲ್ಲಿ ಒಂದು ವಿಶಿಷ್ಟ ಪದ್ಧತಿ ಇತ್ತು. ಅದೇನೆಂದರೆ ಬಹುದೊಡ್ಡ ಕಲ್ಲುಚಪ್ಪಡಿಗಳಿಂದ ಸುಮಾರು ಒಂದು ಮೀಟರಿನಷ್ಟು ಉದ್ದ ಅಗಲವುಳ್ಳ, ಅಷ್ಟೇ ಎತ್ತರವುಳ್ಳ ಕೋಣೆಗಳನ್ನು ಕಟ್ಟುವುದು, ಅದರಲ್ಲಿ ಸತ್ತ ಜನರ ಎಲುಬುಗಳನ್ನು ಸಂಗ್ರಹಿಸಿಡುವುದು, ಕಲ್ಲುರಾಶಿಗಳು ಚದುರದ ಹಾಗೆ ಚೌಕಾಕಾರದ ಅಥವಾ ದುಂಡಾದ ಕಟ್ಟೆಯನ್ನು ಕಟ್ಟುವುದು. ಈ ಕಲ್ಲು ಚಪ್ಪಡಿಗಳು ಗುಡ್ಡಗಳಲ್ಲಿ ಸಿಗುತ್ತವೆ. ಅವುಗಳನ್ನು ಎಬ್ಬಿಸಿ, ಉಳಿಯಿಂದ ಕೆತ್ತದೆ, ಸುತ್ತಿಗೆಯಿಂದ ಅಲ್ಲಲ್ಲಿ ಸರಿಮಾಡಿಕೊಂಡು ಉಪಯೋಗಿಸುತ್ತಿದ್ದರು. ಕಲ್ಲುಗಳು ಒರಟಾಗಿ ದಪ್ಪ ಹೆಚ್ಚು ಕಡಿಮೆ ಇರುತ್ತಿತ್ತು. ಆದುದರಿಂದ ಇತಿಹಾಸಕಾರರು ಇದನ್ನು ಬೃಹತ್ ಶಿಲಾಯುಗವೆಂಬುದಾಗಿ ಕರೆಯುತ್ತಾರೆ.[೨]

ಬೃಹತ್ ಶಿಲಾಯುಗದ ಗೋರಿಗಳು ಒರಟಾದ ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಲ್ಪಟ್ಟಿವೆ. ಒಂದೊಂದು ಪ್ರದೇಶದಲ್ಲಿ ಇವು ಬೇರೆ ಬೇರೆಯ ಆಕಾರಗಳಲ್ಲಿ ಬಹಳವಾಗಿ ಇರುತ್ತವೆ. ಆದುದರಿಂದ ಹೇರಳವಾಗಿ ಕಲ್ಲು ಹಲಗೆಗಳು, ತುಂಡು ಕಲ್ಲುಗಳು ಸಿಗುವ ಬೆಟ್ಟಗಳ ಬಯಲುಗಳಲ್ಲಿ, ಬುಡದಲ್ಲಿ ಇಂತಹ ಸ್ಥಳಗಳು ಹೆಚ್ಚಾಗಿ ಕಾಣಸಿಗುವುವು.[೩] ಕರ್ನಾಟಕದಲ್ಲಿ ಬೃಹತ್ ಶಿಲಾಯುಗದ ಕಾಲಕ್ಕೆ ಸಂಬಂಧಿಸಿದಂತೆ ಸಂಶೋಧನೆ ನಡೆದಾಗ ಆಧಾರಗಳು ಅಧಿಕ ಪ್ರಮಾಣದಲ್ಲಿ ಕಾಣಬಂದಿವೆ. ಬೃಹತ್ ಶಿಲಾಯುಗದ ಹಂತದಲ್ಲಿ ಕಾಣಬರುವ ಪ್ರಮುಖ ಪ್ರಕಾರಗಳಲ್ಲಿ ಕಲ್ಲುಗೋರಿಗಳು, ನಿಲಸುಗಲ್ಲುಗಳು, ಸಮಾಧಿ ದಿನ್ನೆಗಳು, ಶಿಲಾವೃತ್ತಗಳನ್ನು ಹೆಸರಿಸಬಹುದಾಗಿದೆ. ನಿಲಸುಗಲ್ಲುಗಳು ಪ್ರಾಕ್ಚಾರಿತ್ರಿಕ ಸಮಾಧಿ ಎಡೆಗಳಲ್ಲಿ ಸ್ಥಾಪನೆಗೊಂಡ ನೆನಪಿನ ಶಿಲೆಗಳು.[೪]

ಸುತ್ತಲೂ ಬೆಟ್ಟಗುಡ್ಡಗಳು ಹಾಗೂ ಜನವಸತಿಯನ್ನು ಹೊಂದಿರುವ ಅರಸೀಕೆರೆ ಪ್ರದೇಶವನ್ನು, ಶೋಧಗೊಂಡಿರುವ ಹೆಚ್ಚಿನ ಸಂಖ್ಯೆಯ ಕಲ್ಲುಗೋರಿಗಳು ಮತ್ತು ನಿಲಸುಗಲ್ಲುಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಪ್ರದೇಶ ಹಿಂದೆ ಬೃಹತ್ ಶಿಲಾಯುಗದ ಜನರ ಶಾಶ್ವತ ನೆಲೆಯಾಗಿತ್ತು ಎಂದು ಹೇಳಬಹುದಾಗಿದೆ.

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಬಾಣಾವರ ಹೋಬಳಿಯ ಕಲ್ಲುಸಾದರಹಳ್ಳಿ ಮತ್ತು ಶಾನೆಗೆರೆ, ಬಾಣಾವರ–ಕಣಕಟ್ಟೆ ಗ್ರಾಮಗಳು ರಾಜ್ಯ ಹೆದ್ದಾರಿಯಲ್ಲಿ ಸಾಗುವಾಗ ಕಾಣಸಿಗುತ್ತವೆ. ಕಲ್ಲುಸಾದರಹಳ್ಳಿ ಗ್ರಾಮವು ಸಮುದ್ರಮಟ್ಟದಿಂದ ಸುಮಾರು ೭೯೮ ಮೀಟರ್‌ಗಳಷ್ಟು ಎತ್ತರದಲ್ಲಿರುವ ಭೂಪ್ರದೇಶವಾಗಿದೆ. ಈ ಗ್ರಾಮದ ಪಶ್ಚಿಮಕ್ಕೆ ಗರುಡನಗಿರಿ ಕೋಟೆ ಕಾಣಸಿಗುತ್ತದೆ. ದಕ್ಷಿಣ ಭಾಗದಲ್ಲಿ ಶಾನೆಗೆರೆ ಗ್ರಾಮ ಕಾಣಬರುತ್ತದೆ. ಈ ಪ್ರದೇಶವು ಬಹುತೇಕ



**ಕಲ್ಲುಸಾದರಹಳ್ಳಿಯಲ್ಲಿರುವ ನಿಲುವುಗಲ್ಲುಗಳು**

* ಇತಿಹಾಸ ಉಪನ್ಯಾಸಕರು, ಶ್ರೀ ಗೋಕರ್ಣನಾಥೇಶ್ವರ ಪದವಿ ಪೂರ್ವ ವಿದ್ಯಾಲಯ, ಗಾಂಧಿನಗರ, ಮಂಗಳೂರು, ದಕ್ಷಿಣ ಕನ್ನಡ–೫೭೫೦೦೩.



ಶಾನೆಗೆರೆಯಲ್ಲಿರುವ ಡಾಲ್ಮೆನ್

ಕೃಷಿ ಪ್ರಧಾನವಾದುದಾಗಿದೆ. ಗ್ರಾಮದ ಸುತ್ತಮುತ್ತಲೂ ಕೃಷಿ ಜಮೀನುಗಳಿದ್ದು, ಪಶ್ಚಿಮ ಭಾಗದಲ್ಲಿ ವ್ಯಾಪಕವಾಗಿ ಚಾಚಿಕೊಂಡಿರುವ ಗರುಡನಗಿರಿ ಬೆಟ್ಟ ಕಾಣಸಿಗುವುದು. ಈ ಪ್ರದೇಶವು ಬೃಹತ್ ಶಿಲಾಯುಗದ ನೆಲೆಯಾಗಿತ್ತೆಂಬುದಕ್ಕೆ ಇಲ್ಲಿನ ಕೃಷಿ ಭೂಮಿಯಲ್ಲಿ ದೊರೆತಿರುವ ಪ್ರಾಗೈತಿಹಾಸಿಕ ಕಾಲದ ಕುರುಹುಗಳೇ ಸಾಕ್ಷಿಯಾಗಿವೆ.

ಪ್ರಸ್ತುತ ಕಲ್ಲುಸಾದರಹಳ್ಳಿಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿರುವ ನಿಲಸುಗಲ್ಲುಗಳು ಕಾಣಬಂದಿವೆ. ಈ ನಿಲಸುಗಲ್ಲುಗಳ ಮೇಲೆ ಯಾವುದೇ ರೀತಿಯ ಕೆತ್ತನೆ ಇಲ್ಲದೇ ಸ್ವಾಭಾವಿಕ ರೂಪದಲ್ಲಿದೆ. ನಿಲಸುಗಲ್ಲುಗಳು ಸಮೂಹ ಸಮಾಧಿಗಳನ್ನು ಗುರುತಿಸಲು ನೆಟ್ಟಿರುವ ಕಲ್ಲುಗಳು.[೫] ಪ್ರಸ್ತುತ ಕಲ್ಲಸಾದರಹಳ್ಳಿಯಲ್ಲಿ ಜನ ವಾಸ್ತವ್ಯವಿರುವ ಜಾಗದಲ್ಲಿಯೇ ನಿಲಸುಗಲ್ಲುಗಳು ಕಾಣಸಿಗುತ್ತವೆ. ಮೊದಲನೆಯ ನಿಲಸುಗಲ್ಲು ೧೧.೫ ಅಡಿ ಎತ್ತರ, ೮.೫ ಅಡಿ ಅಗಲ, ಹಾಗೂ ೦.೫ ಅಡಿ ದಪ್ಪವಿದೆ. ತ್ರಿಕೋನಾಕಾರದಲ್ಲಿರುವ ಈ ಶಿಲೆಯು ಪೂರ್ವಭಾಗಕ್ಕೆ ವಾಲಿಕೊಂಡಿದ್ದು, ಪಶ್ಚಿಮಾಭಿಮುಖವಾಗಿದೆ. ಈ ಶಿಲೆಯ ಎಡಭಾಗಕ್ಕೆ ಎರಡನೆಯ ನಿಲಸುಗಲ್ಲು ಇದ್ದು ಈ ಶಿಲೆ ೩.೬ ಅಡಿ ಎತ್ತರ, ೩.೪ ಅಡಿ ಅಗಲ, ಮತ್ತು ೦.೫ ಅಡಿ ದಪ್ಪವನ್ನು ಹೊಂದಿದೆ. ಆಯತಾಕಾರದಲ್ಲಿ ಕಾಣಸಿಗುವ ಈ ಶಿಲೆ ಕೂಡಾ ಪೂರ್ವಭಾಗಕ್ಕೆ ವಾಲಿಕೊಂಡಿದ್ದು ಪಶ್ಚಿಮಾಭಿಮುಖವಾಗಿದೆ. ಈ ಎರಡು ನಿಲಸುಗಲ್ಲುಗಳ ಆಗ್ನೇಯ ಭಾಗದಲ್ಲಿ ಇಂತಹ ನಿಲಸುಗಲ್ಲುಗಳ ಅವಶೇಷಗಳು ಕಂಡುಬಂದ್ದಾಗ್ಯೂ ಅವುಗಳು ರಸ್ತೆ ಕಾಮಗಾರಿ ಮತ್ತು ವಿದ್ಯುತ್ ಇಲಾಖೆಯ ಕಾಮಗಾರಿಯಿಂದಾಗಿ ಹಾನಿಗೀಡಾಗಿವೆ.

ಬಾಣಾವರ ಕಣಕಟ್ಟೆ ರಾಜ್ಯ ಹೆದ್ದಾರಿಯಲ್ಲಿ ಸಾಗುವಾಗ ಸಿಗುವ ಮತ್ತೊಂದು ಪ್ರದೇಶವೇ ಶಾನೆಗೆರೆಯಾಗಿದೆ. ಇದು ಕೂಡಾ ಬೃಹತ್ ಶಿಲಾಯುಗದ ಒಂದು ನೆಲೆ ಎಂಬುದಕ್ಕೆ ಇಲ್ಲಿ ದೊರೆತಿರುವ ಕುರುಹುಗಳೇ ಸಾಕ್ಷಿಯಾಗಿವೆ. ಈ ಪ್ರದೇಶ ಸಮುದ್ರ ಮಟ್ಟದಿಂದ ೭೪೯ ಮೀಟರ್‌ಗಳಷ್ಟು ಎತ್ತರದಲ್ಲಿ. ಈ ಪ್ರದೇವಿದೆ ಶಾನೆಗೆರೆಯಲ್ಲಿ ಬೃಹತ್ ಶಿಲಾಯುಗದ ಎರಡು ಪ್ರಕಾರಗಳಾದ ಡಾಲ್ಮೆನ್ಸ್ ಮತ್ತು ಸಮಾಧಿ ದಿನ್ನೆಯು ಕಾಣಸಿಗುತ್ತದೆ. ಶಾನೆಗೆರೆ ಗ್ರಾಮದ ಪ್ರವೇಶ ದ್ವಾರದ ಬಲಭಾಗಕ್ಕೆ ರಾಜ್ಯ ಹೆದ್ದಾರಿಯ ಮಗ್ಗುಲಲ್ಲೇ ಒಂದು ಬೃಹತ್ ಶಿಲಾಯುಗದ ಡಾಲ್ಮೆನ್ಸ್ ಕಾಣಸಿಗುತ್ತದೆ. ಇದರ ಮೂರು ಭಾಗಗಳಲ್ಲಿಯೂ ಕಲ್ಲು ಚಪ್ಪಡಿಗಳಿದ್ದು, ಪೂರ್ವದ ಭಾಗವು ತೆರೆದುಕೊಂಡಿದೆ. ಸುಮಾರು ೩.೫' ಎತ್ತರವಿರುವ ಇದರ ಮೇಲ್ಭಾಗದಲ್ಲಿ ಬೃಹತ್ ಕಲ್ಲುಚಪ್ಪಡಿಯೊಂದನ್ನು ಜೋಡಿಸಲಾಗಿದೆ. ಇದರ ಪಶ್ಚಿಮ ಭಾಗದಲ್ಲಿ ಚಿಕ್ಕ ಕೆರೆಯೊಂದು ಕಾಣಸಿಗುತ್ತದೆ.

ಶಾನೆಗೆರೆಯಿಂದ ಕಣಕಟ್ಟೆಗೆ ಸಾಗುವ ರಾಜ್ಯ ಹೆದ್ದಾರಿಯಲ್ಲಿ ಮುಂದಕ್ಕೆ ಸಾಗುವಾಗ ಗಂಜಿಗೆರೆ ರಸ್ತೆಯು ಎಡಭಾಗದಲ್ಲಿ ಕಾಣಸಿಗುತ್ತದೆ. ಈ ರಸ್ತೆಯ ಬಲಭಾಗದಲ್ಲಿ ಬೃಹತ್ ದಿಬ್ಬವೊಂದು ಕಾಣುತ್ತದೆ. ಇದು ಶಾನೆಗೆರೆ ಗ್ರಾಮದ ವಾಯವ್ಯಕ್ಕೆ ಸುಮಾರು ೨ ಫರ್ಲಾಂಗಗಳಷ್ಟು ದೂರದಲ್ಲಿದೆ. ಸುಮಾರು ಒಂದು ಎಕರೆಯಷ್ಟು ಪ್ರದೇಶದಲ್ಲಿ ಈ ದಿನ್ನೆಯು ವ್ಯಾಪಿಸಿಕೊಂಡಿದೆ. ಸ್ಥಳೀಯರು ಇದನ್ನು 'ಮಾಲೇದಿಬ್ಬ' ಎಂದು ಕರೆಯುತ್ತಾರೆ. ಕೃಷಿ ಜಮೀನಿಗೆ ಬೇಕಾದ ಮಣ್ಣನ್ನು ಈ ದಿಬ್ಬದ ಒಂದು ಪಾರ್ಶ್ವದಿಂದ ಅಗೆಯುವ ಸಂದರ್ಭದಲ್ಲಿ ಇಲ್ಲಿ ಬೃಹತ್ ಪ್ರಮಾಣದ ಮಡಕೆಯ ಅವಶೇಷಗಳು ಗೋಚರಿಸಲ್ಪಟ್ಟಿವೆ. ಹಾಗಾಗಿ ಮುಂದೆ ಅಗೆತದ ಕೆಲಸವನ್ನು ಸ್ಥಗಿತಗೊಳಿಸಲಾಗಿದೆ. ಇಲ್ಲಿ ಅಗೆತಕ್ಕೊಳಗಾದ ಭಾಗದಲ್ಲಿ ಎರಡು ಬೃಹತ್ ಮಡಕೆಗಳ ಅರ್ಧ ಭಾಗ ಮಾತ್ರ ಕಾಣಸಿಗುತ್ತವೆ. ಉಳಿದಂತೆ ಭಾಗಶಃ ಹಾನಿಗೀಡಾಗಿದೆ. ತಳಮಟ್ಟದಿಂದ ಸುಮಾರು ೧೫ ಅಡಿಗಳಷ್ಟು ಎತ್ತರವನ್ನು ದಿಬ್ಬವು ಹೊಂದಿದೆ. ಮಡಕೆಗಳ ಅವಶೇಷಗಳು ನೆಲಮಟ್ಟದಿಂದ ಸುಮಾರು ೫ ಅಡಿಗಳಷ್ಟು ಎತ್ತರದಲ್ಲಿ ಸಮಾನಾಂತರದಲ್ಲಿ ಹೂತುಕೊಂಡಿವೆ. ಅಗೆತಕ್ಕೊಳಗಾದ



ಶಾನೆಗೆರೆಯಲ್ಲಿರುವ ಬೃಹತ್ ಶಿಲಾಯುಗದ ದಫನ ದಿನ್ನೆ



ಶಾನೆಗೆರೆಯಲ್ಲಿರುವ ಬೃಹತ್ ಶಿಲಾಯುಗದ ದಫನ ದಿನ್ನೆ (ಮಾಲೆ ದಿಬ್ಬ)

ಜಾಗದ ಎಲ್ಲೆಡೆ ಮಡಕೆಯ ಚೂರುಗಳು ಹರಡಿಕೊಂಡಿವೆ. ಇಲ್ಲಿ ದೊರೆತಿರುವ ಬಹುತೇಕ ಮಡಕೆ ಚೂರುಗಳು ಕಪ್ಪು ಮತ್ತು ಕಂದು ಮಣ್ಣಿನಿಂದ ತಯಾರಿಸಲ್ಪಟ್ಟಿವೆ. ಕಪ್ಪು ಮಣ್ಣಿನಿಂದ ಆವೃತವಾಗಿರುವ ಈ ದಿಬ್ಬವು ಬೃಹತ್ ಶಿಲಾಯುಗದ ಸಮಾಧಿ ದಿನ್ನೆ ಆಗಿರಬಹುದೆಂದು ಊಹಿಸಬಹುದಾಗಿದೆ. ಈ ದಿಬ್ಬದ ಆಸುಪಾಸುಗಳಲ್ಲಿ ತೆಂಗಿನ ಮರದ ತೋಪು ಗೋಚರಿಸುತ್ತದೆ. ಪ್ರಸ್ತುತ ಈ ದಿಬ್ಬವಿರುವ ಜಾಗವು ಜಗಣ್ಣ ಎಂಬವರ ಒಡೆತನಕ್ಕೆ ಸೇರಿದ್ದಾಗಿದ್ದು, ಸುತ್ತಲೂ ವ್ಯವಸಾಯ ಪ್ರಧಾನವಾಗಿ ನಡೆಯುತ್ತಲೇ ಇದೆ.

ಹೀಗೆ ಅರಸೀಕೆರೆ ತಾಲ್ಲೂಕಿನ ಬಾಣಾವರ ಹೋಬಳಿಯ ಕಲ್ಲುಸಾದರಹಳ್ಳಿ ಮತ್ತು ಶಾನೆಗೆರೆ ಪ್ರದೇಶಗಳು ಬೃಹತ್ ಶಿಲಾಯುಗದ ನೆಲೆಗಳಾಗಿದ್ದವು ಎಂಬುದಾಗಿ ಹೇಳಬಹುದಾಗಿದೆ. ಆ ಕಾಲದ ಜನತೆಯ ಜೀವನದ ಅಗತ್ಯತೆಗಳನ್ನು ನಿವಾರಿಸುವುದಕ್ಕೆ ಈ ಪ್ರದೇಶಗಳನ್ನು ಬಳಸಿಕೊಂಡಿರುವ ಸಾಧ್ಯತೆಗಳಿವೆ. ಈ ನೆಲೆಯ ಪರಿಸರವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ನೆಲವು ಫಲವತ್ತಾಗಿಯೂ ಹಾಗೂ ಬೆಟ್ಟಗುಡ್ಡಗಳಿಂದ ಸುತ್ತುವರೆದಿರುವುದರಿಂದ ಕೃಷಿಗೆ ಮತ್ತು ಬೇಟೆಗೆ ಬಹಳ ಅನುಕೂಲವಾಗಿದ್ದಂತೆ ಕಾಣಬರುತ್ತದೆ. ಈ ಎರಡೂ ಪ್ರದೇಶದಲ್ಲಿ ಈಗಲೂ ಕೃಷಿ ಪ್ರಧಾನ ಕಸುಬಾಗಿದ್ದು ಜೊತೆಗೆ ಕುರಿ ಸಾಕಾಣಿಕೆ ಹಾಗೂ ಬೇಟೆಗಾರಿಕೆ ಜನರ ಉಪಕಸಬುಗಳಾಗಿವೆ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ಪ್ರದೇಶಗಳು ಪ್ರಾಗೈತಿಹಾಸಿಕ ಕಾಲದ ಪ್ರಮುಖ ಜನ ವಾಸ್ತವ್ಯದ ನೆಲೆಗಳಾಗಿದ್ದವೆಂಬುದು ತಿಳಿದುಬರುತ್ತದೆ. ಈ ದಿಕ್ಕಿನಲ್ಲಿ ಅಧ್ಯಯನ ಸಾಗಬೇಕಿದೆ.

[ಕೃತಜ್ಞತೆ : ಈ ಪ್ರಬಂಧವನ್ನು ರಚನೆ ಮಾಡುವಲ್ಲಿ ಸಲಹೆ ಹಾಗೂ ಮಾರ್ಗದರ್ಶನ ನೀಡಿರುವ ನನ್ನ ಗುರುಗಳು ಹಾಗೂ ಸಂಶೋಧನಾ ಮಾರ್ಗದರ್ಶಕರಾಗಿರುವ ಶ್ರೀ ಡಾ. ಹನುಮನಾಯಕರವರಿಗೆ ಮತ್ತು ಕ್ಷೇತ್ರಕಾರ್ಯದಲ್ಲಿ ನೆರವಾಗಿರುವ ನನ್ನ ಆತ್ಮೀಯ ಮಿತ್ರರಾದ ಶ್ರೀ ಸಂದೀಪ್ ಕುಮಾರ್ ಶೆಟ್ಟಿ ಹಾಗೂ ಶಾನೆಗೆರೆ-ಕಲ್ಲುಸಾದರಹಳ್ಳಿ ಗ್ರಾಮಸ್ಥರಿಗೂ ನಾನು ಆಭಾರಿಯಾಗಿರುತ್ತೇನೆ.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಅ. ಸುಂದರ., **ಪ್ರಾಚ್ಯವಸ್ತು ಸಂಶೋಧನೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೨, ಪುಟ ೧೧.

೨. ಡಾ. ಅ. ಸುಂದರ., **ಇತಿಹಾಸಪೂರ್ವ ಕರ್ನಾಟಕ ಅಥವಾ ಕರ್ನಾಟಕ ಪ್ರಾಗೈತಿಹಾಸ**, ಇಂಡಿಯಾ ಬುಕ್ ಹೌಸ್, ಬೆಂಗಳೂರು, ೧೯೭೦, ಪುಟ-೮೨.

೩. ಡಾ. ಅ. ಸುಂದರ., **ಪ್ರಾಚ್ಯವಸ್ತು ಸಂಶೋಧನೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೨, ಪುಟ ೨೩.

೪. ಲಕ್ಷ್ಮಣ್ ತೆಲಗಾವಿ., *'ಬಳ್ಳಾರಿ ತಾಲ್ಲೂಕು ಹಳೇನೆಲ್ಲುಡಿ ಗ್ರಾಮದ ಸ್ಮಾರಕಗಳು-ಈಚಿನ ಶೋಧಗಳ ಹಿನ್ನೆಲೆಯಲ್ಲಿ'*, **ಇತಿಹಾಸ ದರ್ಶನ**, ಸಂಪುಟ-೧೧, ಬೆಂಗಳೂರು ೧೯೯೬, ಪುಟ ೨೧.

೫. ಹನುಮನಾಯಕ., *'ಚೆಲುವನಹಳ್ಳಿಯ ಗವಿಮಠ ಒಂದು ಪ್ರಾಗೈತಿಹಾಸಿಕ ನೆಲೆ'*, **ಇತಿಹಾಸ ದರ್ಶನ**, ಸಂಪುಟ ೯, ಬೆಂಗಳೂರು, ೧೯೯೪, ಪುಟ ೬-೮.



# ಕೋಲಾರ ತಾಲ್ಲೂಕು ಬೆಳ್ಳೂರು ಪರಿಸರದ ಪ್ರಾಚ್ಯಾವಶೇಷಗಳು

ಆದಪ್ಪ ಪಾಸೋಡಿ*

**ಬೆಂ**ಗಳೂರು ಕೋಲಾರ ರಾಷ್ಟ್ರೀಯ ಹೆದ್ದಾರಿ (ಎಚ್.ಎಚ್.-೪) ಯಲ್ಲಿ ನರಸಾಪುರ ಗ್ರಾಮದಿಂದ ಪಶ್ಚಿಮಕ್ಕೆ ಒಂದು ಕಿಲೋಮೀಟರ್ ದೂರದಲ್ಲಿರುವ ಗ್ರಾಮ ಬೆಳ್ಳೂರು. ಹಿಂದೆ ಮಾಲೂರು ತಾಲ್ಲೂಕಿಗೆ ಸೇರಿದ್ದ ಬೆಳ್ಳೂರು ಈಗ ಕೋಲಾರ ತಾಲ್ಲೂಕಿಗೊಳಪಟ್ಟಿದೆ. ಕೋಲಾರದಿಂದ ೧೪ ಕಿ.ಮೀ. ದೂರದಲ್ಲಿದೆ.

ಬೆಳ್ಳೂರು ಗ್ರಾಮದ ಊರ ಬಾಗಿಲಿನ ಬಳಿಯ ಶಾಸನವು ೮ನೇ ಶತಮಾನದ ಶ್ರೀಪುರುಷನ ಕಾಲದ್ದಾಗಿದ್ದು ಒಬ್ಬ ದಂಡನಾಯಕ ಹಾಗೂ ಕೋಳೂರು ಗ್ರಾಮವನ್ನು ಉಲ್ಲೇಖಿಸುತ್ತದೆ. ಕೆರೆಯ ತೂಬಿನ ಬಳಿಯಿರುವ ವೀರಗಲ್ಲು ಶಾಸನವು ಸೆಬ್ಬೆನಾಡಿನ ೩೨ ಮಹಾಜನರು ಹಾಗೂ ಆಳ ಎಂಬ ಸೇವಕನನ್ನು ಪ್ರಶಂಸಿಸುತ್ತದೆ.[೧] ಈ ಶಾಸನಗಳು ಬೆಳ್ಳೂರು ಗ್ರಾಮ ಪರಿಧಿಯಲ್ಲಿ ಹಾಕಿಸಲ್ಪಟ್ಟ ಕಾರಣದಿಂದ ಕ್ರಿ.ಶ. ೮ನೇ ಶತಮಾನದಲ್ಲಿ ಗಂಗದೊರೆ ಶ್ರೀಪುರುಷನ ಕಾಲಕ್ಕಾಗಲೇ ಬೆಳ್ಳೂರು ಗ್ರಾಮ ಪ್ರಸಿದ್ಧಿ ಪಡೆದಿತ್ತೆಂದು ಹೇಳಬಹುದು. ಇದು ಹೊಯ್ಸಳರ ಕಾಲದಲ್ಲಿ ಅಗ್ರಹಾರ ಪಟ್ಟಣವಾಗಿತ್ತು. ಶ್ರೀ ವೈಷ್ಣವ ಪಂಡಿತರ ನೆಲೆವೀಡಾಗಿದ್ದ ಬೆಳ್ಳೂರು ಗ್ರಾಮದಲ್ಲಿ ೧೪, ೧೫ನೇ ಶತಮಾನದಲ್ಲಿ ಆಗಿಹೋದ ಶ್ರೀ ವೈಷ್ಣವ ಗುರು ಮನ್ವಾಳ ಮಹಾಮುನಿಯ ಶಿಷ್ಯ ಪ್ರತಿವಾದಿ ಭಯಂಕರ ಅಣ್ಣನವರ ವಂಶಜರು ಇರುವರೆಂದು ಹೇಳಲಾಗುತ್ತದೆ.[೨] ಕೈವಾರ ನಾಡಿನ ನಿಗಿರಿಲಿ ಚೋಳಮಂಡಲದ ವ್ಯಾಪ್ತಿಗೊಳಪಟ್ಟ ಮಹತ್ವದ ಐತಿಹಾಸಿಕ ಕೇಂದ್ರವೂ ಇದಾಗಿತ್ತು ಎಂದು ಶಾಸನಗಳಿಂದ ತಿಳಿದು ಬರುತ್ತದೆ.[೩]

ಶಾಸನಗಳ ಆಧಾರದಲ್ಲಿ ಕಾಲಾನುಕ್ರಮವಾಗಿ ಬೆಳ್ಳೂರು ಗ್ರಾಮನಾಮವು ಈ ಕೆಳಕಂಡಂತೆ ಉಲ್ಲೇಖವಾಗಿರುವುದನ್ನು ಕಾಣುತ್ತೇವೆ.

ವೆಲ್ಲಿಯೂರ > ಬೆಳ್ಳಿಯೂರ > ಬೆಳ್ಳೂರ ; 'ವ' ಕಾರಕ್ಕೆ 'ಬ'ಕಾರ, 'ಲ' ಅಕ್ಷರಕ್ಕೆ ಬದಲಾಗಿ 'ಳ' ಅಕ್ಷರ ಆಗಮವಾಗಿರುವುದನ್ನು, ಬಿಟ್ಟರೆ ಸುಮಾರು ಸಾವಿರ ವರ್ಷಗಳ ಅವಧಿಗೂ ಊರಿನ ಹೆಸರಿನಲ್ಲಿ ಹೆಚ್ಚಿನ ಬದಲಾವಣೆಗಳಾಗಿರುವುದಿಲ್ಲ. ಪ್ರಸಕ್ತ ಬೆಳ್ಳೂರು ಗ್ರಾಮವು ಪಂಚಾಯಿತಿ ಕೇಂದ್ರ ಸ್ಥಾನವಾಗಿದ್ದು, ಸುತ್ತಲಿನ ಲಕ್ಷ್ಮೀಸಾಗರ, ರಾಮಸಂದ್ರ, ಮಲ್ಲಸಂದ್ರ, ಜೋಡಿಕೃಷ್ಣಾಪುರ, ಅಪ್ಪಸಂದ್ರ, ಕೆ.ಬಿ. ಹೊಸಹಳ್ಳಿ, ಕರಡುಬಂಡೆ, ಉದಪನಹಳ್ಳಿ ಹಾಗೂ ಭೈರಸಂದ್ರ ಗ್ರಾಮಗಳು ಇದರ ವ್ಯಾಪ್ತಿಗೊಳಪಡುತ್ತವೆ.

### ಬೆಳ್ಳೂರು ಪರಿಸರದ ಪ್ರಾಚ್ಯಾವಶೇಷಗಳು

**ವೆಂಕಟರಮಣಪ್ಪನ ಹೊಲದಲ್ಲಿರುವ ಬೃಹತ್ ಶಿಲಾಗೋರಿ**

ಬೆಳ್ಳೂರು ಗ್ರಾಮದ ವಾಯವ್ಯ ದಿಕ್ಕಿನಲ್ಲಿ ಮುನಿತಿಮ್ಮಪ್ಪನವರ ವೆಂಕಟರಮಣಪ್ಪನ ಹೊಲದಲ್ಲಿ ಬೃಹತ್ ಶಿಲಾಗೋರಿ



ವೆಂಕಟರಮಣಪ್ಪನ ಹೊಲದಲ್ಲಿರುವ ಬೃಹತ್ ಶಿಲಾಗೋರಿ

* ಆಂಗ್ಲಭಾಷಾ ಶಿಕ್ಷಕ, ಸರ್ಕಾರಿ ಪ್ರೌಢಶಾಲೆ, ಅಗರ, ಬೆಂಗಳೂರು-೩೪.

ಯೊಂದು ಪತ್ತೆಯಾಗಿದೆ. ಸ್ಥಳೀಯರು ಇದನ್ನು 'ಮೊಟಪು' ಎಂದು ಹೇಳುತ್ತಾರೆ. 'ಮಂಟಪ' ಪದದ ಅಪಭ್ರಂಶ ಇದಾಗಿರಬಹುದು. ಭೂಮಿಯ ಮಟ್ಟದಿಂದ ಮೂರು ಅಡಿ ಎತ್ತರವಿರುವ ಆರು ಮೋಟುಗಲ್ಲುಗಳನ್ನು ನೆಟ್ಟು, ಅವುಗಳ ಮೇಲೆ ಒಂದು ಬೃಹತ್ ಕಲ್ಲು ಚಪ್ಪಡಿಯನ್ನು ಹೊದಿಸಲಾಗಿದೆ. ನೆಟ್ಟಿರುವ ಮೂರು ಕಲ್ಲುಗಳು ಸದ್ಯ ಉರುಳಿಬಿದ್ದ ಸ್ಥಿತಿಯಲ್ಲಿದ್ದು, ಉಳಿದ ಮೂರು ಕಲ್ಲುಗಳ ಮೇಲೆ ಮುಚ್ಚಳಕಲ್ಲು ನಿಂತುಕೊಂಡಿದೆ. ಈ ಹೊದಿಕೆಕಲ್ಲು ಅರ್ಧ ಅಡಿ ಎರಡು ಇಂಚುಗಳಷ್ಟು ದಪ್ಪ, ಹನ್ನೊಂದು ಅಡಿ ಉದ್ದ ಹಾಗೂ ಐದೂವರೆ ಅಡಿ ಅಗಲವಾಗಿರುತ್ತದೆ. ಇದರ ಅಗಲ ಮಧ್ಯಭಾಗದಲ್ಲಿ ಹೆಚ್ಚಿದ್ದು, ಎರಡೂ ಬದಿಗಳಲ್ಲಿ ಕಡಿಮೆ ಯಾಗುತ್ತ ಹೋಗುತ್ತದೆ. ಬೃಹತ್ ಶಿಲಾಗೋರಿಗೆ ಬಳಸಲಾದ ಎಲ್ಲ ಕಲ್ಲು ಚಪ್ಪಡಿಗಳು ನೈಸರ್ಗಿಕವಾಗಿ ಎದ್ದಿರುವ ಪದರುಗಳಾಗಿದ್ದು, ಇವುಗಳ ದಪ್ಪ-ಉದ್ದಗಲಗಳಲ್ಲಿ ವ್ಯತ್ಯಾಸ ಕಾಣುತ್ತದೆ. ಶಿಲಾಗೋರಿಯು ದಕ್ಷಿಣೋತ್ತರ ನಿರ್ಮಿತಿ ಯಾಗಿದ್ದು, ಹತ್ತಿರದಲ್ಲೇ ನೈಋತ್ಯ ಮತ್ತು ವಾಯವ್ಯ ದಿಕ್ಕುಗಳಲ್ಲಿ ವಿಶಾಲವಾದ ನೆಲಬಂಡೆ ಶ್ರೇಣಿ ಹಾಗೂ ಗೋರಿಗಳ ನಿರ್ಮಾಣಕ್ಕೆ ಅಗತ್ಯವಾದ ಕಲ್ಲುಚಪ್ಪಡಿ ಹಾಗೂ ಗುಂಡುಗಲ್ಲುಗಳ ಬೆಟ್ಟದ ಸಾಲುಗಳು, ಕಣಿವೆ ಪ್ರದೇಶಗಳಿವೆ. ಬೃಹತ್ ಗಾತ್ರದ ಈ ಶಿಲಾಗೋರಿಯು ಸಮುದಾಯ ಅಥವಾ ಬುಡಕಟ್ಟಿನ ಯಜಮಾನ ವ್ಯಕ್ತಿಯದಾಗಿರುತ್ತದೆ. ಇದರ ಸುತ್ತಮುತ್ತಲು ಸಮೀಪದಲ್ಲಿ ಬೇರೆ ಶಿಲಾಗೋರಿಗಳಿರುವುದಿಲ್ಲ. ಶಿಲಾಗೋರಿಯ ಪೂರ್ವಕ್ಕೆ ಮತ್ತು ದಕ್ಷಿಣಕ್ಕೆ ಸಾಗುವಳಿ ಮಾಡುತ್ತಿರುವ ಕೃಷಿ ಭೂಮಿಯಿರುತ್ತದೆ. ಪಶ್ಚಿಮದಲ್ಲಿ ಜಲ ಸಂಪನ್ಮೂಲ ಒದಗಿಸುವ ನೀರಿನ ಕೊಳವಿದೆ. ಬೃಹತ್ ಗಾತ್ರದ ಕಲ್ಲುಚಪ್ಪಡಿಗಳನ್ನು ಸಮಾಧಿಗಾಗಿ ಬಳಸಿರುವುರಿಂದ ಇದೊಂದು ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಾಧಿ ನೆಲೆಯೆನ್ನಬಹುದು; ಇದು ಕೋಲಾರ ತಾಲ್ಲೂಕಿನ ಅರಾಭಿ ಕೊತ್ತನೂರಿನ ಬೃಹತ್ ಶಿಲಾಗೋರಿಯಷ್ಟು ದೊಡ್ಡದಾಗಿಲ್ಲವಾದರೂ, ಅನುಸರಿಸಿದ ರಚನಾ ವಿನ್ಯಾಸ ಎರಡೂ ಕಡೆ ಒಂದೇ ಆಗಿರುತ್ತದೆ.

### ಸೂರಪ್ಪನ ಹೊಲದಲ್ಲಿರುವ ಕಲ್ಮನೆ

ಬೆಳ್ಳೂರು ಗ್ರಾಮದ ಉತ್ತರ ದಿಕ್ಕಿನಲ್ಲಿ ಕೆರೆಗೆ ಹೋಗುವ ಮಾರ್ಗದಲ್ಲಿ ಸಾಗಿ, ಬಲಕ್ಕೆ ತಿರುಗಿದರೆ ಸೂರಪ್ಪನ ಹೊಲ ಸಿಗುತ್ತದೆ. ಇಲ್ಲಿ ನೆಲಮಟ್ಟದಿಂದ ಮೂರು ಅಡಿ ಎತ್ತರದ ಹನ್ನೆರಡು ಕಲ್ಲು ಚಪ್ಪಡಿಗಳನ್ನು ನೆಟ್ಟು ಅವುಗಳ ಮೇಲೆ ೮' ೧೦' x ೧೦' ವಿಸ್ತೀರ್ಣವುಳ್ಳ ನಾಲ್ಕೂವರೆ ಇಂಚುಗಳ ದಪ್ಪನೆಯ ಕಲ್ಲು ಚಪ್ಪಡಿ ಹೊದಿಸಲಾಗಿದೆ. ಮುಚ್ಚಳ ಕಲ್ಲಿನ ಎರಡು ಮೂಲೆಗಳು ಮುರಿದು ಹೋಗಿರುತ್ತವೆ. ಕಲ್ಮನೆಗಳಲ್ಲಿ ಸಾಮಾನ್ಯವಾಗಿ ಯಾವುದಾದರೊಂದು ಗೋಡೆಕಲ್ಲು ಅಥವಾ ಮುಚ್ಚಳ ಕಲ್ಲಿನಲ್ಲಿ ವಿವಿಧ ಆಕಾರದ ತೂತುಗಳಿರುತ್ತವೆ' ಎಂಬ ವಿಷಯಕ್ಕೆ ಪೂರಕವಾಗಿರುವಂತೆ ಮುಚ್ಚಳ ಕಲ್ಲಿನ ಪೂರ್ವದಂಚಿನಲ್ಲಿ ಒಂದೂವರೆ ಅಡಿ ಬಿಟ್ಟು ರಂಧ್ರವಿರುತ್ತದೆ. ಹೊದಿಕೆ ಕಲ್ಲಿನ (Cap Stone) ಮೇಲೆ ಬಲ ಅಂಚಿನ ಗುಂಟ ಏಳು, ಮುಂಭಾಗದಲ್ಲಿ ಎಂಟು ಚಿಕ್ಕ ಚಿಕ್ಕ ಕುಳಿಗಳಿರುತ್ತವೆ. ಈ ಕಲ್ಮನೆಯ ಹಿಂಭಾಗದಲ್ಲಿ ಮತ್ತೆ ಮೂರು ಕಲ್ಲುಚಪ್ಪಡಿ ನಿಲ್ಲಿಸಿ ಮುಂದಿನಕ್ಕೆ ಸೇರ್ಪಡೆ ಮಾಡಲಾಗಿದೆ. ಇದರ ಮೇಲೆ ಇರುವ ಹೊದಿಕೆ ಚಪ್ಪಡಿಯ ೭' x ೬' ವಿಸ್ತೀರ್ಣವುಳ್ಳದ್ದಾಗಿದೆ. ಇದರ ಮೇಲೂ ಎಡ-ಬಲ ಮೂಲೆಗಳಲ್ಲಿ ಕುಳಿಗಳಿರುತ್ತವೆ. ಉಪಕರಣಗಳ ಮೊನೆಗಳನ್ನು ಮಸೆದಿರುವುದರಿಂದ ಈ ಬಗೆಯ ಕುಳಿಗಳಾಗಿರುವ ಸಾಧ್ಯತೆ ಇದೆ. ಕಲ್ಮನೆ ನಿರ್ಮಾಣದ ನಂತರದಲ್ಲಿ ಕುಳಿಗಳಾಗಿರಬಹುದು. ದೊಡ್ಡ ಗ್ರಾನೈಟ್ ಬಂಡೆಗಳಿಂದ ಕತ್ತರಿಸಿ ಎರಡೂ ಮುಖಗಳಲ್ಲಿ ಕಲ್ಲು ಮುಳ್ಳನ್ನು ತೆಗೆದಿರುವ ಚಪ್ಪಡಿಗಳನ್ನು ಈ ಕಲ್ಮನೆಯ ನಿರ್ಮಾಣಕ್ಕೆ ಬಳಸಲಾಗಿದೆ.

### ಕೋಟೆಪ್ಪನ ಹೊಲದಲ್ಲಿರುವ ಕಲ್ಮನೆ

ಬೆಳ್ಳೂರಿನ ಕೆರೆಯಂಗಳದ ಉತ್ತರದಂಚಿನಲ್ಲಿ ಕೋಟೆಪ್ಪನ ಹೊಲವಿದೆ. ಇಲ್ಲಿಯೂ 'ಮೊಟಪು' ಎನ್ನಲಾಗುವ ಆಯತಾಕಾರದ ಕಲ್ಮನೆಯಿರುತ್ತದೆ. ಇದೂ ಸಹ ಪೂರ್ವಾಭಿಮುಖವಾಗಿದ್ದು, ಮುಂಭಾಗದಲ್ಲಿ ಎರಡು ಕಲ್ಲುಚಪ್ಪಡಿ, ಎಡ-ಬಲಕ್ಕೆ ಎರಡೆರಡು ಗೋಡೆಕಲ್ಲುಗಳು ಹಾಗೂ ಹಿಂಭಾಗದಲ್ಲಿ ಒಂದು ಗೋಡೆಕಲ್ಲು, ಹೀಗೆ ಒಟ್ಟು ಏಳು ಚಪ್ಪಡಿಕಲ್ಲುಗಳ ಮೇಲೆ ಎರಡು ಬೃಹತ್ ಗಾತ್ರದ ಮುಚ್ಚಳ ಕಲ್ಲುಗಳನ್ನು ಹೊದಿಸಲಾಗಿದೆ. ಹಿಂಭಾಗದ ಮುಚ್ಚಳ ಕಲ್ಲು ಕೆಳಗೆ ಬಿದ್ದಿದ್ದು, ಅರ್ಧ ಅಡಿ ದಪ್ಪವಿರುತ್ತದೆ. ಬಲಕ್ಕೆ ನಿಲ್ಲಿಸಿರುವ ಮೊದಲನೇ ಗೋಡೆ ಕಲ್ಲಿನ ಒಳಭಾಗದಲ್ಲಿ ಆರು, ಎರಡನೇ ಗೋಡೆ



ಬೃಹತ್ ಶಿಲಾಗೋರಿ

ಕಲ್ಲಿನಲ್ಲಿ ಎರಡು ಹಾಗೂ ಮುಚ್ಚಳಕಲ್ಲಿನ ಮೇಲೆ ಎಂಟು ಕುಳಿಗಳಿರುತ್ತವೆ. ಕಲ್ಮನೆಯು ಪೂರ್ವ ಪಶ್ಚಿಮದಲ್ಲಿ ಹದಿನಾಲ್ಕು ಅಡಿ ಉದ್ದ, ಮುಂಭಾಗದಲ್ಲಿ ಎಂಟು ಅಡಿ, ಹಿಂಭಾಗದಲಿ ಆರು ಅಡಿ ಅಗಲ ಹೊಂದಿದೆ. ನೆಲಮಟ್ಟದಿಂದ ಮೇಲೆ ಇರುವ ಎತ್ತರಕ್ಕಿಂತಲೂ ನೆಲದೊಳಗೆ ನೆಟ್ಟಿರುವ ಭಾಗವೇ ಹೆಚ್ಚು. ನಿಧಿಶೋಧಕರು ಕುತೂಹಲದಿಂದ ನೆಲ ಅಗೆದಿರುವ ಪ್ರಯತ್ನದಿದಾಂಗಿ ಮುಚ್ಚಳಕಲ್ಲು ಕೆಳಗೆ ಬಿದ್ದಿರುತ್ತದೆ. ಹಾಳಾಗಿರುವ ಕಲ್ಮನೆಗಳ ರಚನಾ ವಿನ್ಯಾಸವನ್ನು ಇಲ್ಲಿ ತಿಳಿಯಲು ಸಾಧ್ಯವಾಗುತ್ತದೆ. ಹಾಳಾಗಿರುವ ಈ ಕಲ್ಮನೆಯ ತಳಭಾಗ ಹಾಗೂ ದಫನ ಸಾಮಗ್ರಿಗಳ ಬಗೆಗಿನ ಮಾಹಿತಿಗಾಗಿ ಹೆಚ್ಚಿನ ಉತ್ಖನನದ ಅಗತ್ಯ ಕಾಣುತ್ತದೆ.

### ಬನದ ಭೈರಪ್ಪನ ವೀರಗಲ್ಲು

ಬೆಳ್ಳೂರು ಕೆರೆಯ ದಕ್ಷಿಣದ ದಂಡೆಯ ಮೇಲೆ ಬನದ ಭೈರಪ್ಪ ಎಂದು ಕರೆಯಲಾಗುವ ವೀರಗಲ್ಲು ಇರುತ್ತದೆ. ಆರು ಅಡಿ ಉದ್ದ, ಮೂರು ಅಡಿ ಅಗಲವಿರುವ ಕಲ್ಲು ಚಪ್ಪಡಿಯನ್ನು ಬಳಸಿದ್ದು, ವೀರಗಲ್ಲಿನ ೨' ೪" ರಷ್ಟು ಭಾಗವನ್ನು ನೆಲದಲ್ಲಿ ನೆಡಲಾದ ಗುರುತು ಇದೆ. ವೀರಗಲ್ಲಿನ ಮೇಲಿನ ನಾಲ್ಕು ಅಡಿ ಭಾಗದಲ್ಲಿ ವೀರನನ್ನು ಕಂಡರಿಸಲಾಗಿದೆ. ವೀರನ ಶಿಲ್ಪ ತ್ರಿಭಂಗಿಯಲ್ಲಿದ್ದು, ಚಾಚಿದ ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಕು ಹಿಡಿದಿರುತ್ತಾನೆ. ವೀರನ ಟೊಂಕದ ಭಾಗದಲ್ಲಿ ಶತ್ರು ಪಾಳೆಯದ ಬಾಣ ತಾಕಿದೆ. ಸೊಂಟಕ್ಕೆ ಬಟ್ಟೆ, ಕೊರಳಲ್ಲಿ ಕಂಠಹಾರ, ತಲೆ ಮೇಲೆ ಮುಡಿ ಕಟ್ಟಲಾಗಿದೆ. ವೀರಗಲ್ಲಿನ ಮೇಲ್ಭಾಗದಲ್ಲಿ ಕನ್ಯೆಯರಿಬ್ಬರು ವೀರನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವುದನ್ನು ಮತ್ತು ವೀರನ ಗೌರವಕ್ಕಾಗಿ ಚೌರಾ ಬೀಸುವುದನ್ನು ತೋರಿಸಲಾಗಿದೆ.

### ಬೆಳ್ಳೂರ ಕೆರೆಯ ಉತ್ತರ ದಿಕ್ಕಿನಲ್ಲಿರುವ ಶಿಲಾವೃತ್ತಗಳು

ಕೋಟೆಪ್ಪನ ಹೊಲದಲ್ಲಿರುವ ಕಲ್ಮನೆಯಿಂದ ಉತ್ತರಕ್ಕೆ ಅರ್ಧ ಕಿ.ಮೀ. ದೂರ ಸಾಗಿದರೆ ಕುರುಚಲು ಪೊದೆ ಬೆಳೆದಿರುವ ವಿಶಾಲವಾದ ಜಮೀನಿನಲ್ಲಿ ಹತ್ತು ಶಿಲಾವೃತ್ತ (Stone Circles)ಗಳಿರುವ ನೆಲೆ ಇದೆ. ಅವುಗಳಲ್ಲಿ ನಾಲ್ಕು ಮಾತ್ರ ಗುರುತಿಸುವ ಸ್ಥಿತಿಯಲ್ಲಿದ್ದು, ಉಳಿದವುಗಳು ಹಾಳಾಗಿರುತ್ತವೆ. ಸುಸ್ಥಿತಿಯಲ್ಲಿರುವ ಶಿಲಾವೃತ್ತಗಳು ೩೫ ಅಡಿಗಳಷ್ಟು ವ್ಯಾಸವನ್ನು ಹೊಂದಿರುತ್ತವೆ. ಒಂದು ಶಿಲಾವೃತ್ತದಿಂದ ಇನ್ನೊಂದು ಶಿಲಾವೃತ್ತಕ್ಕೆ ೫೦ ಅಡಿಗಳಷ್ಟು ಅಂತರವಿದೆ. ಶಿಲಾವೃತ್ತಗಳಿಗೆ ಸ್ಥಳೀಯವಾಗಿ ಲಭ್ಯವಿರುವ ಸ್ವಾಭಾವಿಕ, ಅನಿರ್ದಿಷ್ಟ ಆಕಾರದ ಮೋಟು ಕಲ್ಲುಗಳನ್ನು ಬಳಸಲಾಗಿರುವುದರಿಂದ ಇವುಗಳನ್ನು ಗುಂಡುಗಲ್ಲು ವೃತ್ತಗಳೆಂದು ಕರೆಯುಬಹುದು. ನೆಲಮಟ್ಟದಿಂದ ಮೇಲ್ಭಾಗದಲ್ಲಿ ಪ್ರತಿಯೊಂದು ಕಲ್ಲುಗಳು ಒಂದೂವರೆಯಿಂದ ಎರಡು ಅಡಿ ಎತ್ತರವಾಗಿರುತ್ತವೆ. ಶಿಲಾವೃತ್ತಗಳ ಒಳಗೆ ಹಳದಿ-ಕೆಂಪು ಬಣ್ಣದ ಹೂ ಬಿಡುವ ಕುರುಚಲು ಪೊದೆ ಬೆಳೆದಿದ್ದು, ಶಿಲಾವೃತ್ತಗಳ ಪರಿಧಿ ಅಥವಾ ವ್ಯಾಸವನ್ನು ಗುರುತಿಸುವುದು ಕಷ್ಟವೆನಿಸುತ್ತದೆ. ಕೆರೆಯಿಂದ ಮರಳು ಸಾಗಿಸವು ವಾಹನಗಳು ಈ ಶಿಲಾವೃತ್ತಗಳಿರುವ ಜಮೀನಿನ ಆಗ್ನೇಯ ದಿಕ್ಕಿನಿಂದ ವಾಯವ್ಯದ ಮೂಲೆಗೆ ಹಾಯ್ದು ಹೋಗುವುದರಿಂದ ಬಹುತೇಕ ಏಳೆಂಟು ಶಿಲಾವೃತ್ತಗಳ ಕಲ್ಲುಗಳು ಚಲ್ಲಾಪಿಲ್ಲಿಯಾಗಿ ಹರಡಿ, ವೃತ್ತ ವಿನ್ಯಾಸಗಳು ಕಾಣುತ್ತಿಲ್ಲ.



ಶಿಲಾವೃತ್ತ, ದಿಣ್ಣೆಹೊಸಹಳ್ಳಿ

### ದಿಣ್ಣೆಹೊಸಹಳ್ಳಿಯ ಸರ್ವೇ ನಂ. ೫೬ರಲ್ಲಿರುವ ಶಿಲಾಗೋರಿಗಳು

ಕೋಲಾರ ತಾಲ್ಲೂಕಿನ ದಿಣ್ಣೆಹೊಸಹಳ್ಳಿಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿ ನೆಲೆಯಿದ್ದು, ಶಿಲಾವೃತ್ತಗಳು ಕಂಡು ಬಂದಿವೆಯೆಂಬ ಮಾಹಿತಿಯು ೧೯೮೧-೮೨ರ ಇಂಡಿಯನ್ ಆರ್ಕಿಯಾಲಾಜಿಕಲ್ ರಿಪೋರ್ಟ್‌ನಲ್ಲಿ ವರದಿಯಾಗಿರುತ್ತದೆ. ಬೆಳ್ಳೂರು, ಲಕ್ಷ್ಮೀಸಾಗರ ಮತ್ತು ದಿಣ್ಣೆ ಹೊಸಹಳ್ಳಿ ಭಾಗದಲ್ಲಿ ಬಿಳಿ ಗ್ರಾನೈಟ್ ಹೆಚ್ಚಾಗಿ ದೊರಕುವ ಬೆಟ್ಟಶ್ರೇಣಿಗಳಿರುತ್ತವೆ. ಬಂಡೆಗಳನ್ನು, ಕಲ್ಲು ಚಪ್ಪಡಿಗಳನ್ನು ಜಲ್ಲಿ ಮಾಡುವ ಸ್ಟೋನ್ ಕ್ರಶರ್‌ಗಳು ಸುಮಾರು ಹತ್ತು ಹನ್ನೆರಡು ಕಡೆಗಳಲ್ಲಿ ಸ್ಥಾಪನೆಗೊಂಡು ಕಾರ್ಯ ನಡೆಸುತ್ತಿರುವ ಪ್ರಯುಕ್ತ ಬೆಳ್ಳೂರು ಪರಿಸರದಲ್ಲಿರುವ ಪ್ರಾಚ್ಯಾವಶೇಷಗಳು ಹಾಳಾಗುತ್ತವೆಯೆಂಬ ಅನಿಸಿಕೆಯಿಂದ ದಿಣ್ಣೆ ಹೊಸಹಳ್ಳಿ ಶಿಲಾಗೋರಿಗಳ ಮಾಹಿತಿಯನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

ದಿಣ್ಣೆ ಹೊಸಹಳ್ಳಿಯಿಂದ ದಕ್ಷಿಣಕ್ಕೆ ಅಂದರೆ ಬೆಳ್ಳೂರು ಕಲ್ಲುಬಂಡೆಯ ದಾರಿಗುಂಟ ಸುಮಾರು ಒಂದು ಕಿ.ಮೀ.



ಶಿಲಾ ತೊಟ್ಟಿ, ದಿಣ್ಣೆಹೊಸಹಳ್ಳಿ

ದೂರ ಕ್ರಮಿಸಿದರೆ ಹೈ ಟೆನ್ಶನ್ ವಿದ್ಯುತ್ ಕಂಬಗಳ ಸಾಲು ಸಿಗುತ್ತದೆ. ಇಲ್ಲಿ ಹುಟ್ಟುಬಂಡೆಯ ಮೇಲೆ ಎರಡು ಅಂಕಿಗಳು ಮತ್ತು ಒಂದು ಅಕ್ಷರದ ಶಿಲಾಶಾಸನ ಇದ್ದು, ಅದರ ಕಣ್ಣಕಲು ಹೀಗಿದೆ : ೧೦ನೊ

ಹಾಗೇ ಮುಂದೆ ಸಾಗಿದರೆ ಉಲ್ಲೇಖಿತ ದಿಣ್ಣೆ ಹೊಸಹಳ್ಳಿ ಸರ್ವೆ ನಂ. ೫೬ರಲ್ಲಿರುವ ಬೃಹತ್ ಶಿಲಾಯುಗ ಸಂಸ್ಕೃತಿಯ ಗೋರಿನೆಲೆ ಸಿಗುತ್ತದೆ. ಇಲ್ಲಿರುವ ಶಿಲಾಗೋರಿ ಗಳನ್ನು ಗುಂಡುಗಲ್ಲುವೃತ್ತ, ಚಪ್ಪಡಿಕಲ್ಲು ವೃತ್ತಗಳೆಂಬ ಶಿಲಾವೃತ್ತಗಳು ಮತ್ತು ಕಲ್ಲುಪ್ಪೆಗಳೆಂದು ವರ್ಗೀಕರಿಸ ಬಹುದಾಗಿದೆ. ಗೋರಿನೆಲೆ ಪ್ರದೇಶದಲ್ಲಿ ನೀಲಗಿರಿ ತೋಪು ಇದ್ದು, ಸುತ್ತಲಿನ ಜಮೀನುಗಳು ಸಾಗುವಳಿ ಯಾಗುತ್ತಿವೆ. ಇನ್ನು ಕೆಲವು ಶಿಲಾವೃತ್ತಗಳು ಕೃಷಿ ಸಾಗುವಳಿ ಚಟುವಟಿಕೆ ಗಳಿಂದಾಗಿ ತಮ್ಮ ಸ್ವರೂಪವನ್ನು ಕಳೆದು ಕೊಂಡಿರುತ್ತವೆ. ಮೊದಲನೇ ಶಿಲಾವೃತ್ತವು ೩೧ ಅಡಿ ವ್ಯಾಸ ಹೊಂದಿದ್ದು, ಇಪ್ಪತ್ತು ದೊಡ್ಡ ದೊಡ್ಡ ಗುಂಡುಗಲ್ಲುಗಳನ್ನು ವೃತ್ತಾಕಾರವಾಗಿ ನೆಡಲಾಗಿದೆ. ಶಿಲಾವೃತ್ತದ ಉತ್ತರ ದಿಕ್ಕಿನ ಅರ್ಧ ಭಾಗಕ್ಕೆ (North hemi) ಜೋಡಿಸಿರುವ ಗುಂಡುಗಲ್ಲುಗಳ ಒಳಬದಿಯಲ್ಲಿ ಎರಡನೇ ಸುತ್ತು ಕಲ್ಲು ನೆಟ್ಟಿರುವುದು ಕಂಡು ಬಂತು. ಎರಡನೇ ಶಿಲಾವೃತ್ತವು ೨೫ ಅಡಿ ವ್ಯಾಸವುಳ್ಳ ದ್ದಾಗಿದ್ದು, ಇಲ್ಲಿಯೂ ಹತ್ತು ಗುಂಡುಗಲ್ಲುಗಳನ್ನು ವೃತ್ತಾಕಾರ ವಾಗಿ ನೆಡಲಾಗಿದೆ. ಮೂರನೇ ಶಿಲಾವೃತ್ತದಲ್ಲಿ ಹದಿನಾರು ಗುಂಡುಗಲ್ಲುಗಳಿರುತ್ತವೆ. ಶಿಲಾವೃತ್ತ ನಾಲ್ಕರಲ್ಲಿ ಗುಂಡುಗಲ್ಲು ಮತ್ತು ಕಲ್ಲು ಚಪ್ಪಡಿಗಳನ್ನು ವೃತ್ತಾಕಾರದಲ್ಲಿ ಹಾಕಲಾಗಿದೆ. ಐದನೇ ಶಿಲಾವೃತ್ತದಲ್ಲಿ ಬರೀ ಕಲ್ಲು ಚಪ್ಪಡಿಗಳನ್ನೇ ನಿಲ್ಲಿಸಲಾಗಿದೆ. ಆರನೇ ಶಿಲಾವೃತ್ತದ ಕಲ್ಲುಗಳನ್ನು ಪಕ್ಕದ ಜಮೀನಿನವರು ಸಾಗುವಳಿ ಸಂದರ್ಭಕ್ಕಾಗಿ ನೀಲಗಿರಿ ತೋಪಿನೆಡೆಗೆ ಒಡ್ಡು ನಿರ್ಮಿಸಿದಂತೆ ಜೋಡಿಸಿಟ್ಟಿದ್ದಾರೆ. ಈ ಶಿಲಾವೃತ್ತದ ಗುಂಡುಗಲ್ಲುಗಳು ಸ್ಥಳಾಂತರವಾಗಿರುವದು ಇದರಿಂದ ಸ್ಪಷ್ಟವಾಗುತ್ತದೆ. ಶಿಲಾವೃತ್ತದ ಮೂಲಸ್ಥಳದಲ್ಲಿ ಹುರುಳಿ ಮತ್ತು ರಾಗಿಬೆಳೆಯ ದಂಟುಗಳು ಮಾಮೂಲಿ ಬೆಳೆಗಿಂತ ಎತ್ತರವಾಗಿ ಬೆಳೆದಿರುತ್ತವೆ. ಏಳನೇ ಶಿಲಾವೃತ್ತದಲ್ಲಿ ಎತ್ತರದ ಪಾಪಾಸುಕಳ್ಳಿ ಹಾಗೂ ಆಡು ತಿನ್ನುವ ಸೊಪ್ಪಿನ ಸಸ್ಯಗಳು ಎತ್ತರವಾಗಿ ಬೆಳೆದಿರುವುದರಿಂದ ಗುಂಡುಗಲ್ಲು ಹಾಗೂ ಚಪ್ಪಡಿಗಲ್ಲುಗಳ ಸಂಖ್ಯೆ ನಿಖರವಾಗಿ ತಿಳಿಯುವುದಿಲ್ಲ. ಇದರಲ್ಲಿ ನೆಟ್ಟಿರುವ ಕಲ್ಲುಚಪ್ಪಡಿಗೆ ಮತ್ತೊಂದು ಚಪ್ಪಡಿಯನ್ನು ಆಧಾರವಾಗಿ ನಿಲ್ಲಿಸಿರುವುದು ಕಂಡುಬಂತು. ಎಂಟನೇ ಶಿಲಾವೃತ್ತಕ್ಕೆ ಚಪ್ಪಡಿಗಳನ್ನು ನೆಟ್ಟಿರುವುದರಿಂದ ಭೂಮಿಮಟ್ಟದ ವರೆಗಿನ ಭಾಗಗಳನ್ನು ಒಡೆದು ತೆಗೆದುಕೊಂಡು ಹೋಗಿರು ವುದು ತಿಳಿಯುತ್ತದೆ. ಇನ್ನೂ ಸುಮಾರು ೨೦ ರಿಂದ ೨೫ ಶಿಲಾವೃತ್ತಗಳು ಹಾಳಾಗಿದ್ದು, ಅವುಗಳ ಗುರುತುಗಳು ಕಾಣಿಸುತ್ತದೆ.

ಶಿಲಾಗೋರಿಗಳಿರುವ ಜಮೀನಿನ ವಾಯವ್ಯ ದಿಕ್ಕಿನಲ್ಲಿ ಆರು ಕಲ್ಲುಗ್ಗುಪ್ಪೆಗಳು ಇರುತ್ತವೆ. ಇವು ನೆಲಮಟ್ಟದಿಂದ ಮಧ್ಯಭಾಗದಲ್ಲಿ ಉಬ್ಬಿದ ಹಾಗೆ ಕೆಲವೊಮ್ಮೆ ಚಿಕ್ಕ ದಿಬ್ಬದ ಹಾಗೆ ಕಾಣಿಸುತ್ತವೆ. ಕಲ್ಲುಗ್ಗುಪ್ಪೆಗಳ ಮೇಲೆ ಕಲ್ಲುಚಕ್ಕೆಗಳ ರಾಶಿಯಿದ್ದು, ಅಲ್ಲಲ್ಲಿ ಸುತ್ತಲೂ ದೊಡ್ಡ ದೊಡ್ಡ ಗುಂಡುಗಲ್ಲುಗಳು ಬಿದ್ದಿರುತ್ತವೆ. ದಿಣ್ಣೆಹೊಸಹಳ್ಳಿಯ ಶಿಲಾಗೋರಿ ನೆಲೆಯ ಪಶ್ಚಿಮದ ಅಂಚಿನಲ್ಲಿ ಭೂಮಿಯ ಮಟ್ಟದಿಂದ ಕೆಳಗೆ, ಮೂರು ಶಿಲಾತೊಟ್ಟಿಗಳು ಅಗೆದು ಹಾಕಿರುವ ಸ್ಥಿತಿಯಲ್ಲಿ ಕಂಡು ಬಂದಿವೆ. ಗ್ರಾನೈಟ್ ಬಂಡೆಗಳನ್ನು ಕತ್ತರಿಸಿ, ದೊಡ್ಡ ದೊಡ್ಡ ಚಪ್ಪಡಿಗಳನ್ನು ಮಾಡಿಕೊಂಡು ಅವುಗಳನ್ನು ಅಗೆದ ಗುಂಡಿಯಲ್ಲಿ ಆಯತಾಕಾರವಾಗಿ ಜೋಡಿಸಲಾಗಿದೆ. ಒಂದು ಕಲ್ಲು ಚಪ್ಪಡಿ ಮತ್ತೊಂದು ಚಪ್ಪಡಿ ಕಳಚಿ ಬೀಳದಂತೆ ಶಿಲಾತೊಟ್ಟಿಗಳನ್ನು ರಚಿಸಲಾಗಿದೆ. ಇಲ್ಲಿ ಕ'ಂಡುಬಂದಿರುವ ಮೂರೂ

ಶಿಲಾತೊಟ್ಟಿಗಳು ವಿಸ್ತೀರ್ಣದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಹೊಂದಿವೆ. ಶಿಲಾ ಕೋಣೆಗಳನ್ನು ನಿರ್ಮಿಸುವಾಗ ಪೂರ್ವಭಾಗದ ಆರ್ತೋಸ್ಟಾಟ್‌ನಲ್ಲಿ ಒಂದು ವೃತ್ತಾಕಾರದ ದೊಡ್ಡ ಕಿಂಡಿ (Port hole) ಯನ್ನು ಇಡಲಾಗುತ್ತದೆ.[೫] ಆದರೆ ದಿಣ್ಣೆ ಹೊಸಹಳ್ಳಿಯ ಶಿಲಾಗೋರಿ ನೆಲೆಯಲ್ಲಿ ಕಂಡು ಬಂದ ಈ ಮೂರೂ ಶಿಲಾತೊಟ್ಟಿಗಳ ಪೂರ್ವಭಾಗದ ಚಪ್ಪಡಿಕಲ್ಲುಗಳು ಇರುವುದಿಲ್ಲ. ಅವುಗಳನ್ನು ನಿಧಿಗಳ್ಳರು ಒಡೆದು ಹಾಕಿರುವ ಶಂಕೆಯಿದೆ. ಆಯತಾಕಾರದ ಈ ಶಿಲಾತೊಟ್ಟಿಗಳ ಅಡಿಯಲ್ಲಿ ಹಾಕಿದ ಕಲ್ಲುಚಪ್ಪಡಿ (Bottom slab) ಗಳೂ ಅಗೆಯಲ್ಪಟ್ಟು, ಒಡೆದು ಚೂರು ಚೂರಾಗಿರುವುದನ್ನು ಇಲ್ಲಿ ನೋಡಬಹುದು. ಬೆಳ್ಳೂರು ಪರಿಸರದಲ್ಲಿ ಕಂಡುಬಂದ ಶಿಲಾಗೋರಿಗಳ ಅಧ್ಯಯನದಿಂದ ತಿಳಿದುಬರುವುದೇನೆಂದರೆ ಮುನಿತಿಮ್ಮಪ್ಪ ನವರ ವೆಂಕಟರಮಣಪ್ಪನ ಹೊಲದಲ್ಲಿರುವ ಶಿಲಾಗೋರಿ ಯನ್ನು ಶವದ ಅಸ್ಥಿಗಳನ್ನು ಸಂಗ್ರಹಿಸಿ ಮಡಕೆಗಳಲ್ಲಿಟ್ಟು ಸಮಾಧಿ ಮಾಡುವ ವಿಧಾನಕ್ಕೆ ಪೂರಕವಾದ ಭೂಮಿಯ ಮೇಲಿನ ಶಿಲಾತೊಟ್ಟಿಯ ಪ್ರಕಾರಕ್ಕೆ ಸೇರಿಸಬಹುದಾದರೆ, ಕೋಟೆಪ್ಪನವರ ಹೊಲದಲ್ಲಿರುವ ಶಿಲಾಗೋರಿಗಳನ್ನು ಅರ್ಧಭಾಗ ಹೊರಗೆ ಆರ್ತೋಸ್ಟಾಟ್‌ಗಳು ಕಾಣುವಂತೆ ರಚಿಸಲಾಗಿರುವ ಶಿಲಾತೊಟ್ಟಿಗಳೆಂದೂ ಇನ್ನು ದಿಣ್ಣೆ ಹೊಸಹಳ್ಳಿ ಶಿಲಾಗೋರಿಗಳ ನೆಲೆಯಲ್ಲಿ ಕಂಡುಬರುವ ಮೂರು ಶಿಲಾತೊಟ್ಟಿಗಳನ್ನು ಭೂಮಿಯೊಳಗೆ ಗುಂಡಿ ತೋಡಿ ಕೆಳಗೆ ಒಂದು ಕಲ್ಲುಚಪ್ಪಡಿ ಹಾಸಿ, ಗುಂಡಿಯೊಳಗೆ ಹುದುಗಿ ಹೋಗುವಂತೆ ಆರ್ತೋಸ್ಟಾಟ್‌ಗಳನ್ನು ನಿರ್ಮಿಸುವ ವಿಧಾನವೆಂದು ವರ್ಗೀಕರಿಸಬಹುದು. ಬೃಹತ್ ಶಿಲಾಯುಗ ಸಂಸ್ಕೃತಿಯ ವಿಶಿಷ್ಟ ಹಾಗೂ ವೈವಿಧ್ಯಪೂರ್ಣ ಸಮಾಧಿ ಪ್ರಕಾರಗಳಾದ ಮೂರು ಬಗೆಯ ಶಿಲಾತೊಟ್ಟಿಗಳು, ಎರಡು ಪ್ರಕಾರಗಳ ಶಿಲಾವೃತ್ತಗಳು ಹಾಗೂ ಕಲ್ಗುಪ್ಪೆಗಳು ಬೆಳ್ಳೂರು ಪರಿಸರದಲ್ಲಿ ಕಂಡುಬಂದಿವೆ. ಸತ್ತವರ ಅಂತ್ಯಸಂಸ್ಕಾರವನ್ನು ಇಷ್ಟೊಂದು ವಿಧಿವತ್ತಾಗಿ ಮಾಡುತ್ತಿದ್ದ ಅಂದಿನವರು ಹಾಗೂ ನೂರಾರು ವರ್ಷಗಳಿಂದ ಈ ಪ್ರದೇಶದಲ್ಲಿ ವಾಸಿಸುತ್ತಿರುವ ನಾಯಕ ಜನಾಂಗದವರ ಹಿನ್ನೆಲೆಯನ್ನು ಪರಿಶೀಲಿಸ ಬಹುದಾಗಿದೆ. ಶಿಲಾಗೋರಿಗಳಿರುವ ಬಹುತೇಕ ಹೊಲ ಗದ್ದೆಗಳು ಇಂದಿಗೂ ಇದೇ ಜನಾಂಗದವರ ಮಾಲೀಕತ್ವ ಕ್ಕೊಳಪಟ್ಟಿರುತ್ತವೆ. ಆದ್ದರಿಂದ ಈ ಸಮುದಾಯಕ್ಕೆ ಸೇರಿದ ಪ್ರಾಚೀನರೇ ತಮ್ಮ ಸಂಸ್ಕೃತಿಯ ಸಾಕ್ಷಿಗಳನ್ನು ಬಿಟ್ಟು ಹೋಗಿರುತ್ತಾರೆಂಬ ಮಾತುಗಳನ್ನಾಡಬಹುದಾಗಿದೆ.

### ಕುಂತೆಮ್ಮನ ಒರಳುಕಲ್ಲು

ಸುಮಾರು ಮೂವತ್ತು ಅಡಿ ವ್ಯಾಸದ ಒರಳಿನಾಕಾರದ ಟೊಳ್ಳುಭಾಗ ಹೊಂದಿರುವ ಅಖಂಡ ಶಿಲೆಯೊಂದು ಬೆಳ್ಳೂರು ಗ್ರಾಮದಿಂದ ವಾಯವ್ಯ ದಿಕ್ಕಿಗೆ ಮೂರು ಕಿ.ಮೀ. ದೂರದಲ್ಲಿದೆ. ನೈಸರ್ಗಿಕ ಬಾವಿಯಂತಿರುವ ಇದರೊಳಗೆ ಮಳೆನೀರು ಸಂಗ್ರಹವಾಗಿ ತುಂಬಿ ಹೊರಗೆ ಹರಿದಿರುವ ಗುರುತು ಮೂಡಿದೆ. ಸ್ಥಳೀಯರು ಇದನ್ನು 'ಕುಂತೆಮ್ಮನ ಒರಳಕಲ್ಲು' ಎನ್ನುತ್ತಾರೆ. ಇದರ ಹತ್ತಿರದಲ್ಲೇ ಇರುವ ಕಲ್ಲಾಸರೆಗಳನ್ನು 'ಪಾಂಡವರ ಕಲ್ಲು' ಮತ್ತು 'ಪೆದ್ದೋರ್ ಗುಡ್ಲು' ಎನ್ನಲಾಗುತ್ತದೆ. 'ಭೀಮನ ತೊಟ್ಟಿಲು' ಎಂಬ ಬೃಹತ್ ಶಿಲೆ ಈಗ ನೋಡಲೂ ಇಲ್ಲಿ ಸಿಗುವುದಿಲ್ಲ. ಕುಂತೆಮ್ಮನ ಒರಳುಕಲ್ಲು, ಪಾಂಡವರ ಕಲ್ಲು ಮತ್ತು ಭೀಮನ ತೊಟ್ಟಿಲು– ಈ ಎಲ್ಲ ಪದಪ್ರಯೋಗಗಳು ಸಾಮಾನ್ಯವಾಗಿ ಬೃಹತ್ ಶಿಲಾಯುಗದ ಸಮಾಧಿ, ಸ್ಥಳಗಳನ್ನು ಉಲ್ಲೇಖಿಸುತ್ತಾರೆ. ಜನರು ಈಗಾಗಲೇ ಬೆಳ್ಳೂರಿನ ಹೊಲಗಳಲ್ಲಿರುವ ಶಿಲಾಗೋರಿಗಳು ಆ ಸಂಸ್ಕೃತಿಯ ಸಮಾಧಿ ನೆಲೆಯೆಂಬ ಸಂಗತಿ ತಿಳಿದಿದೆ. ಕುಂತೆಮ್ಮನ ಒರಳುಕಲ್ಲು, ಪಾಂಡವರ ಕಲ್ಲು/ಗುಡ್ಡ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಕ್ಷೇತ್ರ ಕಾರ್ಯವಾದರೆ ಮಾಹಿತಿಗಳು ಲಭ್ಯವಾಗುತ್ತದೆ. ಬೇಸಿಗೆ ಕಾಲ ಇದಕ್ಕೆ ಸೂಕ್ತ ಸಮಯವೆಂದು ಅಭಿಪ್ರಾಯ ಪಡಲಾಗಿದೆ. ಇಲ್ಲಿ ಸ್ಥಾಪಿತವಾಗಿರುವ ಸ್ಟೋನ್ ಕ್ರಶರ್‌ನ ಕಾರ್ಯಕ್ಕೆ ಪ್ರಸ್ತುತ ಹೆಬ್ಬಂಡೆಗಳು ಆಹುತಿಯಾಗಲಣಿಯಾಗಿವೆ.

### ಬೆಳ್ಳೂರಿನ ಕಣ್ವೇಶ್ವರ ದೇವಾಲಯ

ಬೆಳ್ಳೂರಿನ ಕಣ್ವೇಶ್ವರ ದೇವಾಲಯವು ಹೊಯ್ಸಳರ ದ್ರಾವಿಡ ಶೈಲಿಯಲ್ಲಿದೆ. ಸ್ಥಳೀಯರು ಈಶ್ವರ ದೇವಸ್ಥಾನ ಎಂದು ಕರೆಯುತ್ತಾರೆ. ಪೂರ್ವಕ್ಕೆ ಮುಖ ಮಾಡಿರುವ ಮುಖ್ಯ ಗರ್ಭಗೃಹದ ಮೇಲೆ ಮಾತ್ರ ಶಿಖರವಿದೆ. ದೇವಾಲಯವು ೧೨ ಮತ್ತು ೧೩ನೇ ಶತಮಾನದ ಶಿಲಾಶಾಸನಗಳಲ್ಲಿ ಉಲ್ಲೇಖವಾಗಿದೆ. ಮುಖ್ಯ ಗರ್ಭಗೃಹ, ಅಂತರಾಳಗಳು ೧೨ನೇ ಶತಮಾನದಲ್ಲಿ ಕಟ್ಟಿಸಲ್ಪಟ್ಟಿವೆ. ಸಭಾಮಂಟಪ ದಕ್ಷಿಣಕ್ಕೆ ಮುಖ ಮಾಡಿರುವ ಗರ್ಭಗೃಹಗಳು ನಂತರದ ಜೋಡಣೆಯಾಗಿರುತ್ತವೆ.



ಕಣ್ವೇಶ್ವರ ದೇವಾಲಯ



ಭಿತ್ತಿ, ಜಾಲಂಧ್ರ–ಕಣ್ವೇಶ್ವರ ದೇವಾಲಯ

ಮುಖ್ಯ ಗರ್ಭಗೃಹದ ದ್ವಾರವು ೪' ೭" ಎತ್ತರವಿದ್ದು, ಅಲಂಕಾರರಹಿತ ದ್ವಾರಶಾಖೆಗಳಿರುತ್ತವೆ. ೬' x ೬' ಚೌರಸ ವಿಸ್ತೀರ್ಣದ ಗರ್ಭಗೃಹದಲ್ಲಿ ಎತ್ತರವಾದ ಪಾಣಿಪೀಠದ ಮೇಲೆ ಬಾಣಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಗೋಡೆಗಳು ಎರಡು ಅಡಿ ದಪ್ಪವಿದ್ದು, ಛತ್ತಿನಲ್ಲಿ ಆರು ದಳಗಳ ಅರಳಿದ ಕಮಲ ಬಿಡಿಸಲಾಗಿದೆ. ಸಭಾಮಂಟಪ ದಿಂದ ಅಂತರಾಳಕ್ಕೆ ೨' ೫" ಅಗಲ ಹಾಗೂ ೪' ೭" ಎತ್ತರದ ಪ್ರವೇಶದ್ವಾರವಿದೆ. ದ್ವಾರಶಾಖೆಗಳಿಗೆ ಎರಡು ಗೆರೆ ಎಳೆದು ಕಲ್ಲಿನ ಮೂಲೆಗಳನ್ನು ತೆಗೆದುಹಾಕಿದೆ. ದ್ವಾರಬಂಧದ ಇಕ್ಕೆಲಗಳಲ್ಲಿ, ಗೋಡೆಯಲ್ಲಿ ಎರಡು ಅರ್ಧಕಂಬ ಮಾದರಿ, ಅವುಗಳ ಪಕ್ಕದಲ್ಲಿ ಎರಡು ಪೂರ್ಣಕಂಬ ಮಾದರಿಗಳನ್ನು ತೋರಿಸಲಾಗಿದೆ. ಅಂರಾಳ ಛತ್ತಿಗೆ ನಾಲ್ಕು ಕಲ್ಲು ಚಪ್ಪಡಿಗಳನ್ನು ಹೊದಿಸಿ ಛತ್ತಿನ ಮಧ್ಯದಲ್ಲಿ ಎರಡು ವೃತ್ತಗಳು, ಎಂಟು ದಳಗಳ ಅರಳಿದ ಕಮಲ ಮಧ್ಯದಲ್ಲಿ ಮತ್ತೆ ಎರಡು ವೃತ್ತಗಳನ್ನು ಕಂಡರಿಸಲಾಗಿದೆ. ಸಭಾಮಂಟಪದಲ್ಲಿರುವ ಗರ್ಭಗೃಹವು ದಕ್ಷಿಣಕ್ಕೆ ಮುಖ ಮಾಡಿದ್ದು, ೬' ೧" x ೬೪" ವಿಸ್ತೀರ್ಣ ಹೊಂದಿದೆ. ಇದರ ಮೇಲೆ ಶಿಖರವಿಲ್ಲ. ದಕ್ಷಿಣದಿಂದ ಪ್ರವೇಶ್ವಾರ ಹೊಂದಿರುವ ಸಭಾಮಂಟಪವು ದಕ್ಷಿಣೋತ್ತರವಾಗಿ ೧೬' ೧೦" ಹಾಗೂ ಪೂರ್ವ ಪಶ್ಚಿಮದಲ್ಲಿ ೨೫' ೧" ಅಳತೆಯದ್ದಾಗಿದೆ. ಸಭಾಮಂಟಪದಲ್ಲಿ ಆರು ಸರಳ ಪೂರ್ಣ ಕಂಬಗಳು, ಅವುಗಳ ಮೇಲೆ ಸಾದಾ ಬೋದಿಗೆಗಳಿವೆ. ಕಂಬಗಳ ಪಿಂಡಿ ಭಾಗವು ಎರಡು ಅಡಿ ಎತ್ತರವಿದ್ದು, ಚತುರ್ಮುಖ ಹೊಂದಿವೆ. ಅಷ್ಟಮುಖಗಳುಳ್ಳ ಮಧ್ಯಭಾಗವು ೧' ೮" ಎತ್ತರ ಹಾಗೂ ಅದರ ಮೇಲೆ ೧' ೭" ಎತ್ತರದ ಚತುರ್ಮುಖ ಪುನರಾವರ್ತನೆಯಾಗುತ್ತದೆ. ಒಟ್ಟು ೫' ೨" ಎತ್ತರದ ಕಂಬಗಳು ಸಭಾಮಂಟಪದಲ್ಲಿರುತ್ತವೆ. ಒಂಭತ್ತು ಇಂಚು ಎತ್ತರದ ಸರಳ ಬೋದಿಗೆಗಳ ಮೇಲೆ ಶಿಲಾತೊಲೆಗಳನ್ನು ಜೋಡಿಸಲಾಗಿದೆ. ಛತ್ತಿನಲ್ಲಿ ದಕ್ಷಿಣೋತ್ತರ ವಾಗಿ ಒಟ್ಟು ನಾಲ್ಕು ಅಂಕಣಗಳನ್ನು ಮಾಡಲಾಗಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದ ಎದುರಿಗೆ ಸಭಾಮಂಟಪದ ಪೂರ್ವದ ಗೋಡೆಯಲ್ಲಿ ಐದು ಸಣ್ಣ ಕಿಂಡಿಗಳ ಒಂದು ಜಾಲಂಧ್ರವಿರುತ್ತದೆ.

ಕಣ್ವೇಶ್ವರ ದೇವಾಲಯದ ಗರ್ಭಗೃಹದ ಹೊರ ಗೋಡೆಯಲ್ಲಿ ಮೂರು ದೇವಕೋಷ್ಠಗಳಿರುತ್ತವೆ. ಬಲಭಾಗದ ದೇವಕೋಷ್ಠದ ಇಕ್ಕೆಲಗಳಲ್ಲಿ ಕಂಬ ಮಾದರಿಗಳು, ಮೇಲ್ಭಾಗದಲ್ಲಿ ವೃತ್ತಾಕಾರದ ಎರಡು ಗೆರೆಗಳು, ಅದರೊಳಗೆ ಆರು ಎಲೆಯಾಕಾರ ಚಿತ್ರಿಸಲಾಗಿದೆ. ಹಿಂಭಾಗದ ದೇವಕೋಷ್ಠದ ಮೇಲೆ ವೃತ್ತ, ಅದರೊಳಗೆ ರೆಕ್ಕೆ ಬಿಚ್ಚುತ್ತಿರುವ ಹಕ್ಕಿಯನ್ನು ಕಂಡರಿಸಲಾಗಿದೆ. ಎಡಪಕ್ಕದ ದೇವಕೋಷ್ಠದಲ್ಲಿ ಬಲಭಾಗದ ವೃತ್ತವನ್ನೇ ಪುನರಾವರ್ತಿಸಿ, ನಾಲ್ಕು ಮೂಲೆಗಂಬ ಮಾದರಿ, ಆರು ಅರ್ಧಗಂಬ ಮಾದರಿಗಳನ್ನು ಗರ್ಭಗೃಹದ ಹೊರಗೋಡೆಯಲ್ಲಿ ಕಾಣಿಸಲಾಗಿದೆ. ಅಂತರಾಳದ ಹೊರಗೋಡೆಯಲ್ಲಿ ಎರಡು ಕೋಷ್ಠಗಳು, ಎರಡು ಮೂಲೆಗಂಬ ಮಾದರಿಗಳಿರುತ್ತವೆ. ದಕ್ಷಿಣಾಭಿಮುಖ ಗರ್ಭ ಗೃಹದ ಹೊರಗೋಡೆಯಲ್ಲಿ ಮೂರು ದೇವಕೋಷ್ಠಗಳು, ನಾಲ್ಕು ಮೂಲೆಗಂಬ ಮಾದರಿ, ಆರು ಅರ್ಧಕಂಬ ಮಾದರಿಗಳಿರುತ್ತವೆ. ಸಭಾಮಂಟಪದ ಹೊರಗೋಡೆಯ ಭಿತ್ತಿಯಲ್ಲಿ ಹತ್ತು ಅರ್ಧಕಂಬ, ಆರು ಮೂಲೆಕಂಬ ಮಾದರಿಗಳನ್ನು ಮಾಡಲಾಗಿದೆ. ದೇವಾಲಯದ ಅಧಿಷ್ಠಾನದಲ್ಲಿ ಒಂದು ಅಡಿ ಎತ್ತರದ ಜಗತಿ, ಎಂಟೂವರೆ ಇಂಚು ಎತ್ತರದ ತ್ರಿಪಟ್ಟ ಕುಮುದ, ಅರ್ಧ ಅಡಿ ಕಂಪ, ಅರ್ಧ ಅಡಿಗಳ, ಕಂಪ ಹಾಗೂ ಒಂಬತ್ತೂವರೆ ಇಂಚು ಎತ್ತರದ ಪ್ರತಿ ಭಾಗಗಳು ಇರುತ್ತವೆ. ಮುಂದುವರೆದು ಭಿತ್ತಿ, ಉತ್ತರ, ವಾಜನ, ವಲ್ಲಭಿ ಹಾಗೂ ಕಪೋತ ಭಾಗಗಳು ಸೇರಿ ಆರು ಅಡಿ ಎತ್ತರ ಇರುತ್ತವೆ. ಇದೊಂದು ತ್ರಿತಲ ದೇವಾಲಯವಾಗಿದ್ದು, ಕಪೋತದವರೆಗಿನ ಭಾಗಗಳನ್ನು ಹಳೆಯ ಕಲ್ಲುಗಳನ್ನು ಬಳಸಿ ಮೊದಲಿನಂತೆಯೇ ಜೋಡಿಸಿ ಕಟ್ಟಲಾಗಿದೆ. ನಂತರದ ದ್ವಿತಲ, ತ್ರಿತಲ ಭಾಗಗಳಿಗೆ ಹೊಸ ಕಲ್ಲುಗಳನ್ನು ಮೂಲ ವಾಸ್ತುಶಿಲ್ಪದ ಅನುಸಾರವಾಗಿ

ಉಪಯೋಗಿಸಲಾಗಿದೆ. ದೇವಾಲಯದ ಪುನರ್ನಿರ್ಮಾಣ ಕಾರ್ಯ ಧರ್ಮಸ್ಥಳದ ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆಯವರ ಸಹಕಾರದಿಂದ, ಐತಿಹಾಸಿಕ ಪರಂಪರೆಗನುಗುಣವಾಗಿ ನಡೆದು ಸಂಪೂರ್ಣಗೊಂಡಿರುತ್ತದೆ. ಕಣ್ವೇಶ್ವರ ದೇವಾಲಯದ ಹಿಂಭಾಗದಲ್ಲಿ ವಾಯವ್ಯ ಮೂಲೆಯಲ್ಲಿ 'ಅಮ್ಮನ ಗುಡಿ' ಎಂದು ಹೇಳಲಾಗುವ ಪರಿವಾರ ದೇವಾಲಯ ಇರುತ್ತದೆ. ಇಲ್ಲಿಯೂ ಗರ್ಭಗೃಹ ಮತ್ತು ಮುಖಮಂಟಪಗಳಿದ್ದು, ಮುಖಮಂಟಪದಲ್ಲಿ ೧೬ ಕಲ್ಲುಕಂಬಗಳಿರುತ್ತವೆ. ಒಂದು ಕಂಬದ ಮೇಲೆ ನಂದಿ, ಇನ್ನೊಂದು ಕಂಬದ ಮೇಲೆ ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣ ಹಿಡಿದುಕೊಂಡ ವ್ಯಕ್ತಿ ಶಿಲ್ಪವಿದೆ. ಪಕ್ಕದಲ್ಲಿ ಟಗರಿನ ಕೊಂಬು ಇರುವ ಮನುಷ್ಯಾಕೃತಿಯನ್ನು ಕಂಡರಿಸಲಾಗಿದೆ. ಮುಖಮಂಟಪದ ಪ್ರವೇಶದಲ್ಲಿ ತದನಂತರದಲ್ಲಿ ಸೇರಿಸಲಾದ ಎರಡು ಕಲ್ಲುಕಂಬಗಳ ಮೇಲೆ ಗಜಲಕ್ಷ್ಮಿಯ ಶಿಲ್ಪವಿದೆ. ನೈಋತ್ಯ ಮೂಲೆಯಲ್ಲಿ ಇನ್ನೊಂದು ಪರಿವಾರ ದೇವಾಲಯವಿದ್ದು ಗಣಪತಿ ವಿಗ್ರಹ ಪ್ರತಿಷ್ಠಾಪಿಸಲಾಗಿದೆ. ಕಣ್ವೇಶ್ವರ ದೇವರ ಉತ್ಸವ ಮೂರ್ತಿಗಳನ್ನು ಸದ್ಯಕ್ಕೆ ಇದೇ ಗಣಪತಿ ದೇವಾಲಯ ದಲ್ಲಿಡಲಾಗಿದೆ. ಉತ್ಸವಮೂರ್ತಿಗಳಲ್ಲಿರುವ ಚತುರ್ಭುಜ ಈಶ್ವರನು ತನ್ನ ಎಡಗಾಲನ್ನು ಮಡಿಚಿ, ಬಲಗಾಲು ಕೆಳಗಿಟ್ಟು ಪೀಠವೊಂದರ ಮೇಲೆ ಕುಳಿತಿರುತ್ತಾನೆ. ಒಂದನೇ ಬಲಗೈ ಅಭಯಮುದ್ರೆ ಎರಡನೇ ಬಲಗೈಯ ತೋರಬೆರಳು ಮಧ್ಯದ ಬೆರಳುಗಳಲ್ಲಿ ಮನುಷ್ಯನ ಚಿಕಣಿ ಶಿಲ್ಪವನ್ನು ಹಿಡಿದಿರುವಂತಿದೆ. ಮೊದಲನೆಯ ಎಡಗೈ ಬೆರಳುಗಳನ್ನು ನೆಲಕ್ಕೆ ಚಾಚಿದ್ದು, ಎರಡನೆಯ ಕೈಯಲ್ಲಿ ತೋರಬೆರಳು ನಡುಬೆರಳುಗಳ ಮಧ್ಯ ಜಿಂಕೆಯ ಹಿಂಗಾಲುಗಳನ್ನು ಹಿಡಿದಿರುವುದನ್ನು ತೋರಿಸ ಲಾಗಿದೆ. ತಲೆಯ ಮೇಲೆ ಉದ್ದನೆಯ ಕರಂಡಕ, ಬಲಕಿವಿಯಲ್ಲಿ ಕರ್ಣಕುಂಡಲ, ಎಡಕಿವಿಯಲ್ಲಿ ಸ್ವಲ್ಪ ದೊಡ್ಡದಾದ ಕರ್ಣಕುಂಡಲ, ಕಾಲುಕಡಗ ಇರುತ್ತವೆ. ಈಶ್ವರನ ಎಡಕ್ಕೆ ದೇವತೆ ಇದ್ದು, ತಲೆಯ ಮೇಲೆ ಶಂಕುವಿನಾಕಾರದ ಕರಂಡಕ ಧರಿಸಿದ್ದಾಳೆ. ಬಲಗೈಯಲ್ಲಿ ಹೂವಿನ ದಳ, ಎಡ ಹಸ್ತವನ್ನು ಕೆಳಗೆ ನೆಲಕ್ಕೆ ಚಾಚಲಾಗಿದೆ. ಈಶ್ವರ–ಪಾರ್ವತಿ ವಿಗ್ರಹಗಳ ಮಧ್ಯದಲ್ಲಿ ಪೀಠದ ಮೇಲೆ ತ್ರಿಭಂಗಿಯಲ್ಲಿರುವ ಚಿಕಣಿ ಮೂರ್ತಿಯೊಂದನ್ನು ನಿಲ್ಲಿಸಲಾಗಿದೆ.

ಕಣ್ವೇಶ್ವರ ದೇವಾಲಯದ ಪೂರ್ವಗೋಡೆಯ ಮೇಲಿರುವ ಕ್ರಿ.ಶ. ೧೧೨೯ರ ಶಾಸನದಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ಸಾಮಂತನಾದ ನಿಮಂಡವಲಿದೇವನು ಬೆಳ್ಳೂರಿನ ತಿರುಕಾಳೀಶ್ವರಂ ಉದಿಯ ಮಹದೇವರ್ ಅಥವಾ ಶ್ರೀ ಕೈಲಾಸಂ ದೇವಾಲಯದ ಕುಟ್ಟಾಂದುನ್ ದೇವರ ದೀಪಕ್ಕಾಗಿ ಹಣ ನೀಡಿದ ಉಲ್ಲೇಖ[೬] ಇದೆ. ದಕ್ಷಿಣದ ತಳಪಾದಿ ಕಲ್ಲಿನ ಮೇಲಿರುವ ಕ್ರಿ.ಶ. ೧೧೪೯ರ ಶಾಸನದಲ್ಲಿ ಕಂಬೀಶ್ವರ ದೇವಾಲಯು ನಿರ್ಮಾಣವಾಯಿತೆನ್ನಲಾಗಿದೆ.[೭] ದಕ್ಷಿಣ ಗೋಡೆಯುಲ್ಲಿರುವ ಕ್ರಿ.ಶ. ೧೪೦೬ರ ಶಾಸನವು ವಿಜಯನಗರದ ಅರಸು ಒಂದನೆಯ ದೇವರಾಯನ ಕಾಲದ್ದಾಗಿದ್ದು, ಬೊಮ್ಮಣ ದಂಡನಾಯಕನ ಮಗನಾದ ದೇವರಾಯ ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲವಾದ ಬೆಳ್ಳೂರ ಸೋಮಯದೇವರಿಗೆ ಅಂಗರಂಗ ಭೋಗ, ಅಮೃತಪಡಿಗೆ ಬೆಳ್ಳೂರು ಸ್ಥಳದ ಬಯಿಚನಕುಂಟೆ ಎಂಬ ಹಳ್ಳಿಯನ್ನು ದಾನ ಬಿಟ್ಟ ಬಗ್ಗೆ ತಿಳಿಸುತ್ತದೆ. ಮುಂದುವರೆದು ಇದೇ ಶಾಸನದಲ್ಲಿ ಉಲ್ಲೇಖಿತ ಸೋಮಯದೇವರ ಅಂಗರಂಗ ಭೋಗ, ಅಮೃತಪಡಿಗೆ ದೇವರಾಯ ಒಡೆಯರ ಆದೇಶದಂತೆ ಬೆಳಿಮಾರನಹಳ್ಳಿಯ ದಾವುಲಸೂರೆನಾಯಕನು ತನ್ನೂರಿನ ಬಿದಿರಕುಂಟೆ ಹಾಗೂ ಅದಕ್ಕೆ ಸಲ್ಲುವ ಹೊಲ, ಶ್ರೀ ಗಿರಿನಾಥನಿಗೆ ಸಲ್ಲುವ ಬಯಿರಗೊಂಡನಹಳ್ಳಿ, ಮಾರಗುಳಿ ಕುಂಟೆಗಳನ್ನು ದಾನ ಬಿಟ್ಟ ಬಗ್ಗೆ ಹೇಳಲಾಗಿದೆ.[೮] ಪೂರ್ವ ದಿಕ್ಕಿನ ಗೋಡೆ ಮೇಲಿರುವ ವಿಜಯನಗರ ದೊರೆ ಇಮ್ಮಡಿ ಸಾಳುವ ನರಸಿಂಹನ ಕ್ರಿ.ಶ. ೧೪೯೮ರ ಶಾಸನದಲ್ಲಿ ನರಸಣ ನಾಯಕರಿಗೆ ಧರ್ಮವಾಗಲೆಂದು ರಾಮಿಯಪ್ಪ ರಾಹುತರು ಅನಾದಿ ಅಗ್ರಹಾರ ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲವಾದ ಬೆಳೂರ ಸೋಮಯದೇವರಿಗೆ ಅಂಗರಂಗ ವೈಭೋಗ, ಅಮೃತಪಡಿ, ನಂದಾದೀವಿಗೆಗೆ, ತರಟೆ, ರಾಮಾಪುರದ ಸುತ್ತಲಿನ ಭೂಮಿದಾನ ಮಾಡಿದ್ದನೆಂದು ತಿಳಿದುಬರುತ್ತದೆ.[೯]

ಕ್ರಿ.ಶ. ೧೫೩೨ರಲ್ಲಿ ಇದೇ ದೇವಾಲಯದ ಧ್ವಜಸ್ತಂಭದ ಕೆಳಗೆ ಬರೆಸಿದ ಶಾಸನದಲ್ಲಿ ವಿಲಿಸೆಟ್ಟಿಯ ಮಗ ಹಿರಿಯ ವೀರನು ಬೆಳ್ಳೂರ ಸೋಮಯದೇವರ ಗುಡಿಯ ಮುಂದೆ ನಿಲ್ಲಿಸಿದ ಕಂಬ ಎನ್ನಲಾಗಿದೆ. ಮೇಲ್ಕಂಡ ಎಲ್ಲ ಶಿಲಾಶಾಸನ ಗಳು ಕಣ್ವೇಶ್ವರ ದೇವಾಲಯದ ತಳಪಾದಿ ಕಲ್ಲು, ಗೋಡೆ, ಭಿತ್ತಿ, ಧ್ವಜಸ್ತಂಭಗಳ ಮೇಲೆಯೇ ಹಾಕಿಸಲ್ಪಟ್ಟಿದ್ದು, ಎಲ್ಲಿಯೂ ಕಣ್ವೇಶ್ವರ ಎಂದು ಉಲ್ಲೇಖವಾಗಿರುವುದಿಲ್ಲ. ಹಾಗಾದರೆ ಶಾಸನೋಕ್ತ ಕುಟ್ಟಾಂದುನ್, ಕಂಬೀಶ್ವರ, ಸೋಮಯದೇವ ಎಂಬ ಹೆಸರುಗಳು ಕಣ್ವೇಶ್ವರನ ಪರ್ಯಾಯ ನಾಮಗಳಾಗಿರ ಬಹುದು. ಕಂಬೀಶ್ವರನೇ ಕಣ್ವೇಶ್ವರನೆಂದು ಪ್ರಚಲಿತವಾಗಿರುವ ಸಾಧ್ಯತೆಗಳಿವೆ. ಒಟ್ಟಾರೆ ಕಣ್ವೇಶ್ವರ ದೇವಾಲಯವು ಕ್ರಿ.ಶ. ೧೧೨೯ಕ್ಕಿಂತ ಮುಂಚೆಯೇ ನಿರ್ಮಾಣವಾದ ಹೊಯ್ಸಳ ನಿರ್ಮಿತಿಯಾಗಿರುತ್ತದೆ. ಕಡಿಮೆ ಅಲಂಕರಣ, ಸರಳ ವಾಸ್ತುಪ್ರಕಾರಗಳು ಇಲ್ಲಿಯ ಗುಣಲಕ್ಷಣಗಳಾಗಿವೆ.

## ಬೆಳ್ಳೂರಿನ ಶ್ರೀ ರಾಮದೇವರ (ರಾಮನಾಥ) ದೇವಾಲಯ

ಗ್ರಾಮದ ಪಶ್ಚಿಮ ದಿಕ್ಕಿಗೆ ಶ್ರೀ ರಾಮದೇವರ ದೇವಾಲಯವಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ಸಭಾಮಂಟಪಗಳಿರುತ್ತವೆ. ಸಭಾಮಂಟಪಕ್ಕೆ ಪೂರ್ವ ಹಾಗೂ ದಕ್ಷಿಣ ದಿಕ್ಕುಗಳಿಂದ ಪ್ರವೇಶ ದ್ವಾರಗಳಿವೆ. ದಕ್ಷಿಣದ ಪ್ರವೇಶ ದ್ವಾರವನ್ನು ಗೋಡೆ ಕಟ್ಟಿ ಸದ್ಯಕ್ಕೆ ಮುಚ್ಚಲಾಗಿದೆ. ೭' ೭" ಥ ೮' ವಿಸ್ತೀರ್ಣದ ಗರ್ಭಗೃಹವಿದ್ದು, ಛತ್ತಿನಲ್ಲಿ ಕತ್ತರಿಗಲ್ಲುಗಳ ಮೇಲ್ಹಾವಣಿ ಹಾಕಲಾಗಿದೆ. ಛತ್ತಿನ ಮಧ್ಯದಲ್ಲಿ ಅರಳಿದ ಕಮಲ, ಅದರ ಸುತ್ತಲೂ ಎಂಟು ವೃತ್ತಗಳನ್ನು ಎಳೆದು ಅಲಂಕಾರ ಮಾಡಲಾಗಿದೆ. ಗರ್ಭಗೃಹದಲ್ಲಿ ವರದರಾಜ ಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿದೆ. ಎಡಬಲಕ್ಕೆ ಶ್ರೀದೇವಿ ಭೂದೇವಿಯರಿರುತ್ತಾರೆ. ಸುಮಾರು ೧೪ನೇ ಶತಮಾನದ ಲಕ್ಷಣಗಳನ್ನು ಹೊಂದಿರುವ ಈ ವಿಗ್ರಹವನ್ನು ಶ್ರೀನಿವಾಸಪುರ ತಾಲ್ಲೂಕಿನ ದಳಸನೂರಿನಿಂದ ತಂದು ಇಲ್ಲಿಡಲಾಗಿದೆಯೆಂದು ಹೇಳಲಾಗುತ್ತದೆ.[೧೦] ಗರ್ಭಗೃಹದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ಕಟ್ಟಲಾದ ೧೭ನೇ ಶತಮಾನದ ಶಿಖರವಿದ್ದು, ಶಿಥಿಲಾವಸ್ಥೆಯಲ್ಲಿದೆ. ಅಂತರಾಳವೂ ಗರ್ಭಗೃಹದಂತೆ ೭' x ೭" ೮' ವಿಸ್ತೀರ್ಣವುಳ್ಳದುದ. ಛತ್ತಿನಲ್ಲಿ ಮೂರು ಕಲ್ಲು ಚಪ್ಪಡಿಗಳು, ಮಧ್ಯದಲ್ಲಿ ವೃತ್ತಾಲಂಕಾರವಿದೆ. ಅಂತರಾಳದ



ರಾಮದೇವರ ದೇವಾಲಯ



ರಾಮದೇವರ ದೇವಾಲಯದ ಕಂಬಗಳು

ಎಡಕ್ಕೆ ಎರಡೂವೆ ಅಡಿ ಎತ್ತರದ ಕಟ್ಟೆ ಕಟ್ಟಲಾಗಿದೆ. ಅಂತರಾಳದ ಇಕ್ಕೆಲಗಳಲ್ಲಿ ಎರಡು ಅರ್ಧಗಂಬ, ಎರಡು ಪೂರ್ಣಗಂಬ ಮಾದರಿಗಳಿರುತ್ತವೆ. ದ್ವಾರಶಾಖೆಯ ಪಕ್ಕದಲ್ಲಿ ಸಿಮೆಂಟ್‌ನಿಂದ ಮಾಡಿರುವ ದ್ವಾರಪಾಲಕರ ವಿಗ್ರಹಗಳಿವೆ. ಸಭಾಂಗಣವು ದಕ್ಷಿಣೋತ್ತರ ೨೬ ಅಡಿ, ಪೂರ್ವ ಪಶ್ಚಿಮದಲ್ಲಿ ೨೭ ಅಡಿ ಇರುತ್ತದೆ. ಇಲ್ಲಿ ೧೬ ಪೂರ್ಣಗಂಬಗಳಿದ್ದು ಗರ್ಭಗೃಹದೆದುರಿನ ನಾಲ್ಕು ಕಂಬಗಳ ಅಲಂಕಾರ ಉಳಿದ ಕಂಬಗಳಿಗಿಂತ ಸ್ವಲ್ಪ ಹೆಚ್ಚು. ಛತ್ತಿನಲ್ಲಿ ಐದು ಅಂಕಣಗಳಿದ್ದು, ಮಧ್ಯಭಾಗದ ಅಂಕಣದಲ್ಲಿ ವೃತ್ತ, ಅದರೊಳಗೆ ನಾಲ್ಕು ದಳಗಳನ್ನು ತೋರಿಸಲಾಗಿದೆ. ಮೇಲ್ಹಾವಣಿಯ ಮಧ್ಯದ ನಾಲ್ಕು ಅಂಕಣಗಳ ಛತ್ತು ಸಮತಟ್ಟಾಗಿದ್ದು, ಮುಂಭಾಗದ ಐದನೇ ಅಂಕಣದ ಛತ್ತು ಇಳಿಜಾರಾಗಿದೆ. ಸಭಾಮಂಟಪದ ಹೊರಗೋಡೆಯಲ್ಲಿ ಬಲಕ್ಕೆ ಎರಡು ಮೂಲೆಗಂಬ, ಐದು ಕಂಬ ಮಾದರಿಗಳು, ಅಂತರಾಳದ ಹೊರಗೋಡೆಯಲ್ಲಿ

ಬಲಕ್ಕೆ ಒಂದು ದೇವಕೋಷ್ಠ, ಒಂದು ಅರ್ಧಗಂಬ; ಗರ್ಭಗೃಹದ ಹೊರಗೋಡೆಯಲ್ಲಿ ಎರಡು ಮೂಲೆಗಂಬ, ಎರಡು ಅರ್ಧಗಂಬ; ಗರ್ಭಗೃಹದ ಹಿಂದೆ ಒಂದು ದೇವಕೋಷ್ಠ, ಎರಡು ಮೂಲೆಗಂಬ, ಎರಡು ಅರ್ಧಕಂಬ ಮಾದರಿಗಳನ್ನು ಕಂಡರಿಸಲಾಗಿದೆ. ಸಭಾಮಂಟಪದ ಎದುರಿನ ಹೊರಗೋಡೆಗೆ ಎರಡು ಅರ್ಧಗಂಬ ಮಾದರಿಗಳು, ಎರಡು ಮೂಲೆಗಂಬ ಮಾದರಿಗಳಿರುತ್ತವೆ. ದೇವಾಲಯದ ಸಭಾಮಂಟಪದ ಎಡಪಾರ್ಶ್ವದಲ್ಲಿ ಎರಡು ಮೂಲೆಗಂಬಗಳು ಮಾತ್ರ ಇದ್ದು, ಗೋಡೆಯು ನಂತರದ ಸೇರ್ಪಡೆಯಾಗಿರುತ್ತದೆ. ಪೂರ್ವದ ಪ್ರವೇಶ ದ್ವಾರಕ್ಕೆ ಹೊಂದಿಕೊಂಡಿರುವ ದೇವಸ್ಥಾನದ ಮಹಾದ್ವಾರವು ವಿಜಯನಗರ ಕಾಲದ ವಾಸ್ತುವಿನ್ಯಾಸವನ್ನೊಳಗೊಂಡಿದೆ. ಸಭಾಮಂಟಪದ ಗೋಡೆಗಳು ೨’ ೧೦”, ಅಂತರಾಳ ಮತ್ತು ಗರ್ಭಗೃಹಗಳ ಗೋಡೆಗಳು ೨’ ೭” ದಪ್ಪ ಹೊಂದಿರುತ್ತವೆ.

ರಾಮನಿಗೆ ಅರ್ಪಿಸಲಾದ ದೇವಾಲಯವೇ ರಾಮ ದೇವಾಲಯವಾಗಿದ್ದು, ರಾಮನನ್ನು ತಮಿಳು ಶಾಸನಗಳಲ್ಲಿ ವಳವಂಡ ಪೆರುಮಾಳ್ ಎಂದು ಕರೆಯಲಾಗಿದೆ.[೧೧] ಈ ದೇವಾಲಯದ ದಕ್ಷಿಣ ಗೋಡೆಯಲ್ಲಿರುವ ಕ್ರಿ.ಶ. ೧೧೮೭ರ ಶಾಸನದಲ್ಲಿ ಗಂಗಪೆರುಮಾಳ್ ಹಾಗೂ ಅವನ ಪತ್ನಿ ಅರನವಲ್ಲಿ ವೆಲ್ಲಿಯೂರಿನ ವಳವಂಡ ಪೆರುಮಾಳ ದೇವರಿಗೆ ಸುಂದರವಾದ ಮಂಟಪವನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ.[೧೨] ಉತ್ತರದ ತಳಪಾದಿ ಕಲ್ಲಿನ ಮೇಲಿರುವ ಕ್ರಿ.ಶ. ೧೨೮೬ರ ಶಾಸನವು ಹೊಯ್ಸಳ ದೊರೆ ರಾಮನಾಥನ ಆಳ್ವಿಕೆಯ ಕಾಲದ್ದಾಗಿದ್ದು, ಗಂಗ ಪೆರುಮಾಳನು ವೆಲ್ಲಿಯೂರ್‌ನಿಂದ ತನಗೆ ಸಲ್ಲಬೇಕಾದ ಎಲ್ಲ ತೆರಿಗೆಗಳನ್ನು ವಳವಂಡ ಪೆರುಮಾಳ್ ದೇವರಿಗೆ ಬಿಟ್ಟನೆಂದು ತಿಳಿಸುತ್ತದೆ.[೧೩] ವಿಜಯನಗರದ ದೊರೆ ಒಂದನೇ ದೇವರಾಯನ ಕಾಲದ ಕ್ರಿ.ಶ. ೧೪೦೭ರ ಶಿಲಾಶಾಸನವು ದೇವಾಲಯದ ಪೂರ್ವದ ತಳಪಾದಿ ಕಲ್ಲಿನ ಮೇಲೆ ಬಾಗಿಲಿಗೆ ಬಲಗಡೆಯಿದೆ. ಇದರಲ್ಲಿ ಮಹಾಪ್ರಧಾನ ಬೊಮ್ಮೆ ದಣ್ಣಾಯಕ ಮಗ ಮುಳುವಾಗಿಲ ದೇವರಾಯ ಒಡೆಯರ ಆದೇಶದಂತೆ ಮಲ್ಲಿಗ ದೇವರಾಣಿಯರ ಮಗ ಮಲಿದೇವರಾಣಿಯರು ಶ್ರೀ ವಿಷ್ಣುವರ್ಧನ ಚತುರ್ವೇದಿ ಮಂಗಲವಾದ ಬೆಳ್ಳೂರು ಗ್ರಾಮಾಧಿದೈವರಾದ ಶ್ರೀ ರಾಮದೇವರಿಗೆ ಸಲ್ಲುವ ಮಡವಳ ಸೀಮೆಯನ್ನು ಸಮರ್ಪಿಸಿದನೆಂದೂ ದೇವರಿಗೆ ಕಾಣಿಕೆಯಾಗಿ ಬಂದ ಹಣವನ್ನು ದೀಪಮಾಲೆಗೆ ಉಪಯೋಗವಾಗಲಿ ಯೆಂದೂ ತಿಳಿಸಿದ್ದಾನೆ.[೧೪] ಕ್ರಿ.ಶ. ೧೪೯೮ರ ಶಿಲಾಶಾಸನವು ಬೆಳ್ಳಿಯೂರ್‌ನ ರಾಮಚಂದ್ರ ದೇವರ ಉತ್ಸವಕ್ಕೆ ತೇರು ಮಾಡಿಸಿಕೊಟ್ಟ ಕಳವರದ ಪೆರುಮಾಳದೇವನ ಮಗನಾದ ಅಧಿಕಾರಿ ತಿಮ್ಮಯ್ಯನನ್ನು ಉಲ್ಲೇಖಿಸುತ್ತದೆ.[೧೫] ಒಟ್ಟಿನಲ್ಲಿ ಬೆಳ್ಳೂರಿನ ಕಣ್ವೇಶ್ವರ, ರಾಮದೇವರ ದೇವಾಲಯಗಳ ಬಗ್ಗೆ ಇರುವ ಶಿಲಾಶಾಸನಗಳು, ಕಲಾ ಇತಿಹಾಸದ ಅಂಶಗಳನ್ನು ಅವಲೋಕಿಸಿದಾಗ, ಎರಡು ದೇವಾಲಯಗಳು ಹೊಯ್ಸಳರ ಅವಧಿಯಿಂದಲೂ ಪ್ರಸಿದ್ಧವಾಗಿದ್ದವೆಂದು ತಿಳಿದುಬರುತ್ತದೆ.

**ಲಕ್ಷ್ಮೀಸಾಗರ ಕೋಟೆ**

ಬೆಳ್ಳೂರು, ಗ್ರಾಮಪಂಚಾಯ್ತಿಗೊಳಪಡುವ ಒಂದು ಹಳ್ಳಿ ಲಕ್ಷ್ಮೀಸಾಗರ. ಇಲ್ಲಿರುವ ಹಳೆಯ ಊರಿನ ಪಕ್ಕದ ಬೆಟ್ಟದ ಮೇಲೆ ಲಕ್ಷ್ಮೀಸಾಗರ ಕೋಟೆ ಇರುತ್ತದೆ. ಬೆಟ್ಟದ ಮೇಲೆ ಸಿಗುವ ಬಿಳಿ ಗಟ್ಟಿಕಲ್ಲಿನ ಪದರುಗಳನ್ನು ತೆಗೆದು, ಅವುಗಳನ್ನು ಚಿಕ್ಕ ಚಿಕ್ಕ ಆಯತಾಕೃತಿಯಲ್ಲಿ ರಚಿಸಿಕೊಂಡು, ಸುಮಾರು ಎಂಟು ಅಡಿ ಎತ್ತರದ ಕೋಟೆಗೋಡೆಯನ್ನು ಕಲ್ಲುಗಳಿಂದ, ಅದರ ಮೇಲಿನ ಐದು ಅಡಿ ಎತ್ತರದ ಕೋಟೆಯನ್ನು ಇಟ್ಟಿಗೆಯಲ್ಲಿ ಕಟ್ಟಲಾಗಿದೆ. ಕಲ್ಲುಗಳ ನಡುವೆ ಗಾರೆ ಅಥವಾ ಸಿಮೆಂಟ್ ಬಳಕೆ ಮಾಡಿರುವುದಿಲ್ಲ. ಇಟ್ಟಿಗೆಗಳ ಮಧ್ಯ ಕೆಸರನ್ನು ಬಳಸಿರುವಂತೆ ಕಾಣುತ್ತದೆ. ಇಟ್ಟಿಗೆಗಳು ಒಂದು ಅಡಿ ಉದ್ದ, ಅರ್ಧ ಅಡಿ ಅಗಲವಾಗಿರುತ್ತದೆ. ಕೋಟೆಗೆ ಪಶ್ಚಿಮ ದಿಕ್ಕಿನಿಂದ ೬’ ೬” ಎತ್ತರದ ಪ್ರವೇಶದ್ವಾರವಿದೆ. ಒಳಬಾಗಿಲಿಗೆ ಲಾಳಕಿಂಡಿ ಹಾಕಲು ಗೋಡೆಯಲ್ಲಿ ದೊಡ್ಡ ರಂಧ್ರ ಬಿಡಲಾಗಿದೆ. ಕೋಟೆ ಗೋಡೆಯ ೪’ ೭” ದಪ್ಪವನ್ನು ಹೊಂದಿದ್ದು, ಪ್ರವೇಶ ದ್ವಾರದಲ್ಲಿ ಎರಡು ಕಲ್ಲುಗಂಬಗಳನ್ನು ನಿಲ್ಲಿಸಿ, ಅವುಗಳ ಮೇಲೆ ಮೂರು ಕಲ್ಲು ಚಪ್ಪಡಿಗಳನ್ನು ಹೊದಿಸಲಾಗಿದೆ. ಬಾಗಿಲುಗಳನ್ನು ಕೂಡಿಸಲು ಮೇಲಣ ಚಪ್ಪಡಿಗಳಿಗೆ ನಾಲ್ಕು ಇಂಚುಗಳ ವ್ಯಾಸದ ರಂಧ್ರಗಳಿರುತ್ತವೆ. ಕೋಟೆಯ ಒಳ ವಿಸ್ತೀರ್ಣವು ೭೫’ x ೭೫’ ಆಗಿರುತ್ತದೆ. ಕೋಟೆಯೊಳಗಿನ ಕಲ್ಲುಹಾಸಿನ ಮೇಲೆ ನಾಲ್ಕು ಇಂಚು ವ್ಯಾಸದ ನಾಲ್ಕು ಹಾಗೂ ೧’ ೪” ವ್ಯಾಸದ ಒಂದು ರಂಧ್ರಗಳನ್ನು ಕೊರೆಸಲಾಗಿದೆ. ಕೋಟೆಯ ಹಿಂಭಾಗಕ್ಕೆ ಅಂದರೆ ಪೂರ್ವದ ಗೋಡೆಯಲ್ಲಿ ೧’ ೬” x ೧’ ೬” ವಿಸ್ತೀರ್ಣದ ಚೌಕದ ಕಿಂಡಿಯನ್ನು ನೆಲದಿಂದ ಒಂದು ಅಡಿ ಎತ್ತರದಲ್ಲಿ ಮಾಲೂರು ರಸ್ತೆಯಲ್ಲಿರುವ ಜೋಡಿ ಕೃಷ್ಣಾಪುರ ಗ್ರಾಮ ಹಾಗೂ ಬೆಟ್ಟಗಳ ಹಿನ್ನೆಲೆಯ ಪ್ರಾಕೃತಿಕ ಸೊಬಗು ಕಾಣಿಸುತ್ತದೆ. ಕೋಟೆಯ ನಾಲ್ಕು ದಿಕ್ಕುಗಳಲ್ಲಿ ಗೋಡೆಗಿಂತಲೂ ಎತ್ತರದ ವೃತ್ತಾಕಾರದ ಬುರುಜುಗಳನ್ನು ನಿರ್ಮಿಸಲಾಗಿದೆ. ಕೋಟೆಯ ಲಕ್ಷಣಗಳ ಆಧಾರದಿಂದ ಇದೊಂದು ೧೭ ಅಥವಾ ೧೮ನೇ ಶತಮಾನದ ಕೋಟೆಯೆನ್ನಬಹುದು. ಕೋಟೆಯು ಬೃಹತ್ತಾದ ಏಕಶಿಲಾ ಬೆಟ್ಟದ ಮೇಲಿದ್ದು, ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಬಂಡೆಸ್ಫೋಟ ನಡೆಯುತ್ತಿತ್ತು.



ಲಕ್ಷ್ಮೀಸಾಗರ ಕೋಟೆ (ಬೆಳ್ಳೂರು ಪರಿಸರ)

ವೆಲ್ಲಿಯೂರಿನ ಪ್ರಖ್ಯಾತ ಸಭಾ (Great Assembly of Villiyur) ದ ಸದಸ್ಯನಾದ ಮುರುಗನ್ ತನ್ನ ಹಳ್ಳಿ ಬೆಳ್ಳೂರಿಗೆ ಸೇವೆ ಸಲ್ಲಿಸಿದ ವ್ಯಕ್ತಿಯೊಬ್ಬನಿಗೆ ಕುಡಂಗ್ಯೆ ಭೂದಾನ ಮಾಡಿರುವುದು; ವಿಲಿಸೆಟ್ಟಿಯ ಮಗ ವೀರನು ಕಟ್ಟಿಸಿದ ಕಲ್ಲುಕಟ್ಟಿನ ಬಾವಿ, ಒರಳುಗಳ ನಿರ್ಮಾಣ; ಅತ್ರೇಯ ಗೋತ್ರದ ಪುಳ್ಳಿಯಯ್ಯ ಮಾಡಿಸಿದ ಕೆರೆಯ ತೂಬು[೧೬] ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಬೆಳ್ಳೂರು ಪರಿಸರದಲ್ಲಿ ನಿರಂತರವಾಗಿ ಸಮಾಜ ಸೇವಾ ಕೈಂಕರ್ಯ ನಡೆದಿರುವುದು ಸ್ಪಷ್ಟವಾಗುತ್ತದೆ.

[ಸಲಹೆಗಳಿನ್ನಿತ್ತ ಪೂಜ್ಯ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿ, ಕ್ಷೇತ್ರ ಕಾರ್ಯದಲ್ಲಿ ನೆರವಾದ ಬೆಳ್ಳೂರಿನ ಅನಿಲ್ ಹಾಗೂ ತಿಮ್ಮರಾಯಪ್ಪನವರಿಗೆ ಅಭಾರಿಯಾಗಿರುತ್ತೇನೆ.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್** ೧೯೧೪, ಪುಟ ೩೫, ೩೮.
೨. **ಗೆಜೆಟಿಯರ್ ಆಫ್ ಇಂಡಿಯಾ, ಕೋಲಾರ ಡಿಸ್ಟ್ರಿಕ್ಟ್,** ೧೯೬೮, ಸಂಪಾದಕರು : ಕೆ. ಅಭಿಶಂಕರ್, ಪುಟ ೫೩೪.
೩. **ಭಾರತದ ಗೆಜೆಟಿಯರ್, ಕೋಲಾರ ಜಿಲ್ಲೆ,** ಸಂಪಾದಕರು : ಎಚ್. ಚಿತ್ತರಂಜನ್, ಪುಟ ೮೮೭.
೪. ಡಾ. ಕೆ.ಜಿ. ಶಿವತಾರಕ್., ತುಮಕೂರು ಜಿಲ್ಲಾ ಪ್ರದೇಶದ ಬೃಹತ್ ಶಿಲಾಯುಗ ಸಂಸ್ಕೃತಿ, **ಇತಿಹಾಸ ದರ್ಶನ,** ಸಂ. ೧೭, ಪು೧ ೧೬.
೫. **ಕನ್ನಡ ವಿಶ್ವಕೋಶ,** ಸಂ. ೧೪, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಪುಟ ೫೮೭.
೬ **ಎಪಿಗ್ರಾಫಿಯಾ ಕರ್ನಾಟಿಕ** ೧೭, ಕೋಲಾರ ಜಿಲ್ಲೆ ಪುರವಣಿ, ಶಾಸನ ಸಂಖ್ಯೆ ೧೪೫.
೭. ಅದೇ, ಕೋಲಾರ ೧೪೨. ೮. ಅದೇ, ಕೋಲಾರ ೯೪. ೯. ಅದೇ, ಕೋಲಾರ ೧೪೬.
೧೦. **ಗೆಜೆಟಿಯರ್ ಆಫ್ ಇಂಡಿಯಾ, ಕೋಲಾರ್ ಡಿಸ್ಟ್ರಿಕ್ಟ್** ೧೯೬೮, ಸಂ. ಕೆ. ಅಭಿಶಂಕರ್, ಪುಟ ೭೯.
೧೧. ಅದೇ, ಪುಟ ೫೩೪.
೧೨. **ಎಪಿಗ್ರಾಫಿಯಾ ಕರ್ನಾಟಿಕ** ೧೭, ಕೋಲಾರ ಜಿಲ್ಲೆ ಪುರವಣಿ, ಕೋಲಾರ ೧೫೦.
೧೩. ಅದೇ, ಕೋಲಾರ ೧೫೧.
೧೪. ಅದೇ, ಕೋಲಾರ ೧೫೨.
೧೫. ಅದೇ, ಕೋಲಾರ ೧೪೭.
೧೬. **ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್** ೧೯೧೪, ಪುಟ ೩೮, ೪೪, ೫೧.

# ಘಾಟಿ ಪರಿಸರದ ಪ್ರಾಗೈತಿಹಾಸಿಕ ನೆಲೆಗಳು ಒಂದು ಶೋಧ

**ಡಿ. ಸ್ಮಿತಾರೆಡ್ಡಿ***

**ಬೆಂ**ಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ದಕ್ಷಿಣ ಭಾರತದ ಪ್ರಮುಖ ನಾಗಾರಾಧನಾ ಸ್ಥಳವಾಗಿದ್ದು, ಪುಣ್ಯ ಕ್ಷೇತ್ರವೆಂದು ಪರಿಗಣಿತವಾಗಿದೆ. ಸುತ್ತಲೂ ಬೆಟ್ಟಗುಡ್ಡಗಳನ್ನೊಳಗೊಂಡ ಕಣಿವೆಯಲ್ಲಿ ಸುಬ್ರಹ್ಮಣ್ಯ ದೇವಾಲಯವಿರುವುದರಿಂದ, ಈ ಗ್ರಾಮವನ್ನು ಘಾಟಿ ಸುಬ್ರಹ್ಮಣ್ಯವೆಂದೂ ಸಹ ಕರೆಯುತ್ತಾರೆ. ಪ್ರಕೃತಿಯ ಸೊಬಗಿನಿಂದ ಮನೋಹರವಾದ ಸ್ಥಳದಲ್ಲಿರುವ ಈ ಗ್ರಾಮ ಆಸ್ತಿಕರನ್ನು ಮಾತ್ರವಲ್ಲದೆ, ನಿಸರ್ಗಪ್ರಿಯರನ್ನೂ ಸಹ ಆಕರ್ಷಿಸುತ್ತಿದೆ. ಇದು ಉತ್ತರ ಪಿನಾಕಿನಿ ನದಿಯ ವ್ಯಾಪ್ತಿಯಲ್ಲಿ ಬರುವುದರಿಂದ ಈ ಸ್ಥಳ ವ್ಯವಸಾಯಕ್ಕೆ ತಕ್ಕಂತಹ ವಾತಾವರಣವನ್ನು ಹೊಂದಿದೆ. ಹಾಗಾಗಿ ಘಾಟಿ ಮತ್ತು ಅದರ ಕಣಿವೆಯಲ್ಲಿ ಬರುವ ಗ್ರಾಮಗಳು ಹಿಂದೊಮ್ಮೆ ಪ್ರಾಗೈತಿಹಾಸಿಕ ಮಾನವನ ನೆಲೆಯಾಗಿತ್ತೆಂಬುದರಲ್ಲಿ ಸಂಶಯವೇ ಇಲ್ಲ.

ಘಾಟಿ ಗ್ರಾಮಕ್ಕೆ ಸುಮಾರು ಎರಡು ಕಿ.ಮೀ.ಗಳ ಅಂತರದಲ್ಲಿ ಲಗುಮೇನಹಳ್ಳಿ ಎಂಬ ಒಂದು ಪುಟ್ಟ ಗ್ರಾಮವಿದೆ. ಗ್ರಾಮಕ್ಕೆ ಹೊಂದಿಕೊಂಡಂತಿರುವ ಹೊಲಗಳಲ್ಲಿ ಹಾಗೂ ಮನೆಗಳ ಅಕ್ಕಪಕ್ಕದಲ್ಲಿಯೇ ಹಲಾವರು ಚೌಕಾಕಾರದ ಕಿಂಡಿಕೋಣೆಯ (ಸ್ವಲ್ಪ ಮಟ್ಟಿಗೆ ಸ್ವಸ್ತಿಕ ಆಕಾರದ) ಶಿಲಾ ಗೋರಿಗಳಿವೆ ಇವು ಸುಮಾರು ಅರ್ಧ ಕಿ.ಮೀ. ಸುತ್ತಳತೆಯಲ್ಲಿ ಪ್ರಸರಿಸಿವೆ. ಆದರೆ ವ್ಯವಸಾಯ ಕಾರ್ಯ ಮನೆಗಳ ನಿರ್ಮಾಣ, ಅವುಗಳ ಬಗೆಗಿನ ಅವಜ್ಞೆ ಹಾಗೂ ನಿಧಿಗಳ್ಳರಿಂದಾಗಿ ಬಹುತೇಕ ಎಲ್ಲಾ ಶಿಲಾಗೋರಿಗಳೂ ನಾಶವಾಗಿ ಅವಶೇಷಗಳ ರೂಪದಲ್ಲಿ ಉಳಿದಿವೆ. ಗ್ರಾಮಕ್ಕೆ ಹೊಂದಿಕೊಂಡ ಹೊಲದಲ್ಲಿ ಇಂತ ಭಗ್ನಾವಸ್ಥೆಯಲ್ಲಿರುವ ಸುಮಾರು ಹದಿನಾರು ಬೃಹತ್ ಶಿಲಾ ಗೋರಿಗಳನ್ನು ಕಾಣಬಹುದು. (ಹೊಲಗಳಲ್ಲಿ ಈ ಶಿಲಾಸಮಾಧಿಗಳಿರುವುದರಿಂದ ಹೆಚ್ಚಿನವು ಕಣ್ಮರೆಯಾಗಿವೆ.) ಇವುಗಳ ಉದ್ದ ಸುಮಾರು ಎಂಟು ಅಡಿ ಇದ್ದು ಅಗಲ



ಗ್ರಾಮದಲ್ಲಿರುವ ಶಿಲಾಗೋರಿ

* ನಂ. ೬೦೨, ಬಿ–೨, ಕೃಷ್ಣಾ ಬ್ಲಾಕ್ ರಾಷ್ಟ್ರೀಯ ಕ್ರೀಡಾಗ್ರಾಮ ವಸತಿ ಸಂಕೀರ್ಣ ಕೋರಮಂಗಲ, ಬೆಂಗಳೂರು–೫೬೦೦೪೭.

ಸುಮಾರು ಮೂರು ಅಡಿಗಳಷ್ಟಿದೆ. ಆದರೆ ಮೇಲ್ಭಾಗದ ಚಪ್ಪಡಿಕಲ್ಲು ಎಷ್ಟು ವಿಸ್ತೀರ್ಣವಿತ್ತು ಎಂಬುದನ್ನು ಹೇಳುವುದು ಕಷ್ಟವಾದರೂ ಅಲ್ಲಿ ಚದುರಿ ಬಿದ್ದಿರುವ ಅವಶೇಷಗಳ ಆಧಾರದ ಮೇಲೆ ಅವು ಸುಮಾರು ಎಂಟು ಅಡಿ ಉದ್ದ ಹಾಗೂ ಐದು ಅಡಿ ಅಗಲವನ್ನು ಹಾಗೂ ಸುಮಾರು ೧ ೧/೨ ಅಡಿ ದಪ್ಪವನ್ನು ಹೊಂದಿದ್ದಿರಬಹುದೆಂದು ಊಹಿಸ ಬಹುದು. ಗ್ರಾಂದ ಬಹುತೇಕ ಎಲ್ಲ ಶಿಲಾಗೋರಿಗಳೂ ಇದೇ ಸ್ವರೂಪದಲ್ಲಿವೆ. ಶಿಲಾಗೋರಿಗಳ ಕೋಣೆ ಕಿಂಡಿಯು ಸುಮಾರು ಒಂದು ಅಡಿ ವ್ಯಾಸವನ್ನು ಹೊಂದಿದೆ.

ಲಗುಮೇನಹಳ್ಳಿಯಿಂದ ಪೂರ್ವದಿಕ್ಕಿನ ಕಡೆಗಿರುವ ಬೆಟ್ಟದ ಮೇಲೆ ಬೃಹತ್ತಾದ ನೈಸರ್ಗಿಕವಾದ ಒಂದು ಕಲ್ಮನೆಯಿದ್ದು, ಇದು ಸುಮಾರು ೧೪ ಅಡಿಗಳಷ್ಟು ಉದ್ದ, ಹತ್ತು ಅಡಿಗಳಷ್ಟು ಅಗಲವಿದೆ. ಹಾಗೂ ಬಂಡೆಯ ದಪ್ಪವೂ ಸಹ ಸುಮಾರು ೨ ೧/೨ ಅಡಿಗಳಷ್ಟು ದಪ್ಪವಿದೆ. ಮುಂಭಾಗವು ಸುಮಾರು ಮೂರು ಅಡಿಗಳಿಗಿಂತಲೂ ಹೆಚ್ಚು ದಪ್ಪವನ್ನು ಹೊಂದಿದೆ. ಈ ಕಲ್ಮನೆಯ ಕೆಳಗೆ ಸುಮಾರು ೬ ಮಂದಿ ಮಲಗಬಹು ದಾದಷ್ಟು ಸ್ಥಳಾವಕಾಶವಿದೆ. (ಇದರ ಆಸುಪಾಸಿನಲ್ಲೇ ಇನ್ನೂ ನಾಲ್ಕು ಶಿಲಾಸಮಾಧಿಗಳಿವೆ.) ಹಾಗೆಯೇ ಸ್ವಲ್ಪ ಮುಂದೆ ಬೆಟ್ಟದ ನಡುನೆತ್ತಿಯನ್ನು ತಲುಪಿದರೆ, ಅಲ್ಲಿ ಸ್ವಾಭಾವಿಕವಾದ ಬೃಹತ್ ಕಲ್ಲುಬಂಡೆಗಳಿವೆ. ಒಂದಕ್ಕೊಂದು ತಗುಲಿ ಕೊಂಡಿರುವ ಎಡರು ಬಂಡೆಕಲ್ಲುಗಳ ಕೆಳಭಾಗದಲ್ಲಿ ನುಸುಳಿ ದರೆ, ಎಡಭಾಗದ ದೊಡ್ಡ ಬಂಡೆಯ ಕೆಳಗೆ ಒಬ್ಬ ವ್ಯಕ್ತಿ ಒಳಗೆ ನುಸುಳಬಹುದಾದಷ್ಟು ಸಣ್ಣ ಕಿಂಡಿಯಿದೆ. ಈ ಕಿಂಡಿಯ ಮೂಲಕ ಒಳಗೆ ಹೋದರೆ ಆ ಬಂಡೆಯ ಕೆಳಗೆ ಸುಮಾರು ೧೨ ಜನ ಮಲಗುವಷ್ಟು ವಿಶಾಲವಾದ ಸ್ಥಳವಿದೆ. ಆ ಸ್ಥಳದಲ್ಲಿ ಇಂದಿಗೂ ಮಡಿಕೆ ಕುಡಿಕೆಗಳನ್ನಿಟ್ಟು ಪೂಜೆ ಮಾಡುವ ಪದ್ಧತಿಯಿದೆ. ಪದ್ಧತಿ ಗಮನಿಸಿದರೆ ಹಿಂದೆ ಆ ಸ್ಥಳದಲ್ಲಿ ಪ್ರಾಗೈತಿಹಾಸಿಕ ಕಾಲದ ಮಾನವರು ವಾಸಿಸುತ್ತಿದ್ದು, ಅವನಿಗೆ ಸಂಬಂಧಿಸಿದ ಅವಶೇಷಗಳು ಅಲ್ಲಿ ಇದ್ದಿರಲೂ ಬಹುದು. ಈ ಜಾಗದಲ್ಲೆ ನವಶಿಲಾಯುಗದ ಕಾಲಕ್ಕೆ ಸೇರಿರುವ ಒಂದು ಒರಟಾದ ಶಿಲಾಯುಧ (ಕಲ್ಲಿನ ಗುಂಡು) ಸಹ ಇದೆ (ಈ ಶಿಲಾಯುಧವು ಬೆಣಚುಕಲ್ಲಿನದ್ದಾಗಿದ್ದು, ಚೌಕಾಕಾರದಲ್ಲಿದೆ. ಇದನ್ನು ಅಲ್ಲಲ್ಲಿ ಚಕ್ಕೆ ಎಬ್ಬಿಸಿ ಬಳಸಿರುವುದು ಚಿತ್ರದಿಂದ ಸ್ಪಷ್ಟವಾಗುತ್ತದೆ. ಇದು ಸುಮಾರು ೬"x೩" ಇದೆ.) ಈಗ ಅಲ್ಲಿ ಸೋಮವಾರ ಮುನೇಶ್ವರ ದೇವರ ಹೆಸರಿನಲ್ಲಿ ಪೂಜೆ ಮಾಡುತ್ತಾರೆ. ಬೆಟ್ಟದಿಂದ ಗ್ರಾಮಕ್ಕೆ ಇಳೀಯುವಾಗ ಒಂದು ಕಡೆ ಕಲ್ಲುಗಳನ್ನಿಟ್ಟು ಪೂಜಿಸ ಲಾಗುತ್ತದೆ. ಅಲ್ಲಿ ಒಂದು ಕಲ್ಲಿನ ಮೇಲೆ ಒಂದು ರೇಖಾ ಚಿತ್ರವಿದ್ದು ಅದು ಗೂಳಿಯ ರೇಖಾಚಿತ್ರವಿರಬಹುದೆಂದು ಊಹಿಸಬಹುದು.

ಲಗುಮೇನಹಳ್ಳಿ ಗ್ರಾಮದಿಂದ ದಕ್ಷಿಣಕ್ಕೆ ಸುಮಾರು ೨.ಕಿ.ಮೀ ದೂರ ಕ್ರಮಿಸಿದರೆ ಅಲ್ಲಿ ಮತ್ತೊಂದು ಬೆಟ್ಟವಿದೆ. ಬೆಟ್ಟವನ್ನು ಹತ್ತುತ್ತಿದ್ದಂತೆಯೇ ಪ್ರಾರಂಭದಲ್ಲಿಯೇ ಉತ್ತರಾಭಿ ಮುಖವಾಗಿ ಒಂದು ಸ್ವಾಭಾವಿಕವಾದ ಗುಹೆಯಿದ್ದು, ಗುಹೆಯ ಒಳಗೆ ದೊಡ್ಡದಾದ ಸುರಂಗ ಮಾದರಿಯ ರಚನೆಯಿದೆ. ಗುಹೆಯ ಸ್ವಾಭಾವಿಕ ರಚನೆಯಾಗಿದೆ. ಗುಹೆಯ ಬೆಟ್ಟದ ಕೆಳಗಿದ್ದರೂ, ಗುಹೆಯ ಮೇಲ್ಭಾಗವನ್ನು ದೊಡ್ಡ ದೊಡ್ಡ ಕಲ್ಲು ಚಪ್ಪಡಿಗಳನ್ನು ಒಂದರ ಮೇಲೊಂದು ಜೋಡಿಸಿರು ವಂತಿದೆ. ಬೆಟ್ಟದ ಆ ಭಾಗದ ರಚನೆಯೂ ಸಹ ವಿಶಿಷ್ಟ ವಾಗಿದ್ದು, ಅದನ್ನು ನೋಡಿದಾಕ್ಷಣವೇ ಅದು ಹಿಂದೊಮ್ಮೆ ಮಾನವನ ನೆಲೆಯಾಗಿತ್ತೆಂದು ಸ್ಪಷ್ಟವಾಗುತ್ತದೆ.

ಗುಹೆಯಿರುವ ಭಾಗದಿಂದ ಬೆಟ್ಟದ ಮೇಲೆಯೇ ಹಿಂದಕ್ಕೆ ಸಾಗಿದರೆ ಬೆಟ್ಟ ಸಮತಟ್ಟಾಗಿದ್ದು, ವಿಶಾಲವಾದ ಬಯಲು ಪ್ರದೇಶವಿದೆ. ಈ ಪ್ರದೇಶ ಪ್ರಾಗೈತಿಹಾಸಿಕ ಮಾನವನ ನಿವಾಸವಾಗತ್ತೆಂಬುದಕ್ಕೆ ಪೂರಕವಾಗಿ ಈ ಬೆಟ್ಟದ ಮೇಲೆ ಎರಡು ಪ್ರಾಕೃತಿಕ ದೊಣೆಗಳಿದ್ದು, ಎಲ್ಲಾ ಋತುಗಳಲ್ಲಿಯೂ ಅಲ್ಲಿ ನೀರು ಇರುತ್ತದೆಂದು ಸ್ಥಳೀಯರು ಹೇಳುತ್ತಾರೆ. ಆ ದೊಣೆಯ ಮೇಲ್ಭಾಗದಲ್ಲಿ ಒಂದು ಭಗ್ನಾವಸ್ಥೆಯ ನಿಲುವುಗಲ್ಲು ಸಹ ಇದೆ. ಪ್ರಾಗೈತಿಹಾಸಿಕ ಕುರುಹುಗಳಿರುವ ಬೆಟ್ಟದ ಪ್ರದೇಶಗಳಲ್ಲಿ ಸರ್ವೇಸಾಧಾರಣವಾಗಿ ಕಂಡು ಬರುವಂತೆ ಇಲ್ಲಿಯೂ ಸಹ ಕಲ್ಲುಗಳ ಮೇಲೆ ಕಲ್ಲುಗಳನ್ನು ಪೇರಿಸುವ ವ್ಯವಸ್ಥೆಯನ್ನು ಕಾಣಬಹುದು. ಮದುವೆ ಯಾಗದಿರುವವರು, ಮಕ್ಕಳಾಗದಿರುವವರು ಹಾಗೂ ಮನೆಯನ್ನು ಕಟ್ಟಬೇಕೆಂಬ ಆಕಾಂಕ್ಷೆ ಇರುವವರು ತಮ್ಮ ಆಸೆಗಳು ಈಡೇರುತ್ತವೆಂಬ ಆಶಯದಿಂದ ಈಗಲೂ ಇದೇ ಪದ್ಧತಿಯನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಬೆಟ್ಟದ ಮೇಲೆ ಅಲ್ಲಲ್ಲಿ ಕಲ್ಮನೆಗಳು ಭಗ್ನಗೊಂಡಿರುವ ಕುರುಹುಗಳು ಕಂಡು ಬರುತ್ತದೆ.

ರಮಣೀಯವಾದ ಸುತ್ತಲೂ ಬೆಟ್ಟಗುಡ್ಡಗಳ ನ್ನೊಳಗೊಂಡ ಕಣಿವೆಯಲ್ಲಿರುವ ಘಾಟಿ ಸುಬ್ರಹ್ಮಣ್ಯ ಕ್ಷೇತ್ರವು ಇಲ್ಲಿಯವರೆಗೆ ಪುಣ್ಯಕ್ಷೇತ್ರವೆಂದು ಪರಿಗಣಿಸಲ್ಪಟ್ಟಿತ್ತು. ಈ ಶೋಧದಿಂದ ಈ ಪರಿಸರವು ಕ್ರಿ.ಸ್ತಶಕದ ಪ್ರಾರಂಭದ ವೇಳೆಗಾಗಲೇ ಮಾನವನಿಗೆ ಆವಾಸಸ್ಥಾನವಾಗಿತ್ತೆಂದು ಇಲ್ಲಿನ ಶಿಲಾಗೋರಿ, ಕಲ್ಮನೆ, ಗುಹೆಗಳು ಹಾಗೂ ನಿಲುವುಗಳಿಂದ ಸ್ಪಷ್ಟವಾಗುತ್ತದೆ.

[ಕ್ಷೇತ್ರ ಕಾರ್ಯಕ್ಕೆ ನನ್ನೊಂದಿಗೆ ಬಂದು ನೆರವು ನೀಡಿದ ಪತಿ ಎನ್.ಸಿ. ಬಾಬುರೆಡ್ಡಿಯವರಿಗೆ ಹಾಗೂ ಮಗಳು ಎಸ್.ಬಿ. ಸೃಷ್ಟಿಗೆ ಕೃತಜ್ಞತೆಗಳು.]





# ಕರ್ನಾಟಕದಲ್ಲಿ ಇತಿಹಾಸ ಪೂರ್ವ ಕಾಲದ ಪ್ರಮುಖ ಕಲ್ಲಿನ ಆಯುಧಗಳು ಮತ್ತು ವೃತ್ತಿ : ಒಂದು ಅಧ್ಯಯನ

ರೋಹಿತ್ ಎಮ್.*

(ಹಳೇ ಶಿಲಾಯುಗದಿಂದ ಸೂಕ್ಷ್ಮ ಶಿಲಾಯುಗದವರೆಗೆ)

ಆಧುನಿಕ ಯುಗದಲ್ಲಿ ಇತಿಹಾಸದ ಅಧ್ಯಯನವು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿದೆ. ಗತಕಾಲದ ಘಟನೆಗೊಳನ್ನೊಳಗೊಂಡಂತೆ ಇತಿಹಾಸದ ವಿವಿಧ ಆಯಾಮಗಳು ಗಟ್ಟಿಗೊಳ್ಳುತ್ತಿವೆ. ಈ ನಿಟ್ಟಿನಲ್ಲಿ ಇತಿಹಾಸದ ಪ್ರಾರಂಭಿಕ ಅವಧಿಯು ಗಮನಾರ್ಹವಾದುದಾಗಿದೆ. ಬರಹ ರೂಪವು ಆರಂಭವಾಗುವುದಕ್ಕಿಂತ ಪೂರ್ವಕಾಲದ ಇತಿಹಾಸದ ಅಧ್ಯಯನಕ್ಕೆ ನೆರವಾಗುವ ಆಕರಗಳು ವಿಶಿಷ್ಟವಾಗಿವೆ.

ಈ ದಿಸೆಯಲ್ಲಿ ನಾವು ಇತಿಹಾಸ ಪೂರ್ವ ಕಾಲದ ವಿವಿಧ ಅವಧಿಗಳು ಮತ್ತು ಆಕರಗಳನ್ನು ಪರಿಶೀಲಿಸಿದಾಗ ವ್ಯತ್ಯಾಸವು ತಿಳಿಯುತ್ತದೆ. ಮುಖ್ಯವಾಗಿ ಇತಿಹಾಸ ಪೂರ್ವ ಕಾಲದಲ್ಲಿ ಕಾಣಬರುವ ಹಳೇ ಶಿಲಾಯುಗ ಮತ್ತು ಸೂಕ್ಷ್ಮ ಶಿಲಾಯುಗದ ಕಾಲಘಟ್ಟಗಳಲ್ಲಿ ಕಾಣಸಿಗುವ ಆಕರಗಳು ಮತ್ತು ಆಯುಧಗಳ ವಿನ್ಯಾಸಗಳಲ್ಲಿ ಬದಲಾವಣೆಗಳನ್ನು ಸ್ಪಷ್ಟವಾಗಿ ಗಮನಿಸಬಹುದು.

ಭೌಗೋಳಿಕವಾಗಿ ಕರ್ನಾಟಕವು ಪ್ರಾಚೀನ ಭಾರತದ ಒಂದು ಭಾಗವಾಗಿದ್ದು, ದಖ್ಖನ್ ಪ್ರದೇಶದಲ್ಲಿದೆ. ಈ ಪ್ರದೇಶದ ಜನರ ಜೀವನದ ನಡತೆಯು ಪ್ರಾದೇಶಿಕ ಭೌಗೋಳಿಕತೆಯ ಲಕ್ಷಣಗಳನ್ನು ಆಧರಿಸಿ ಕೊಂಡಿದೆ. ಕರ್ನಾಟಕದಲ್ಲಿ ಇತಿಹಾಸ ಪೂರ್ವದ ಅವಧಿಯು ಸಾಕಷ್ಟು ವಿಕಾಸ ಹೊಂದಿರುವುದನ್ನು ನಾವು ಗಮನಿಸಬಹು ದಾಗಿದೆ. ಇತಿಹಾಸ ಪೂರ್ವ ಕಾಲದ ಜೀವನ ಪ್ರಕೃತಿಯೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವ ಪ್ರಯತ್ನವಾಗಿದ್ದಿತು. ಅವರು ಗುಹೆಗಳಲ್ಲಿ ವಾಸ ಮಾಡುತ್ತಿದ್ದು, ಕಲ್ಲಿನ ಆಯುಧಗಳು ಮತ್ತು ಮೂಲ ಸಾಧನಗಳನ್ನು ಬಳಕೆ ಮಾಡುತ್ತಿದ್ದರು. ಕಾಲಕ್ರಮೇಣ ಈ ಜನತೆಯು ಅಭಿವೃದ್ಧಿಯತ್ತ ಸಾಗತೊಡಗಿ ಕೃಷಿಯ ಕಲೆ ಮತ್ತು ಒಂದೆಡೆ ಸ್ಥಿರ ನೆಲೆಸುವಿಕೆಯ ಜೀವನವನ್ನು ಮಾಡತೊಡಗಿದರು.

ಕರ್ನಾಟಕದ ಇತಿಹಾಸ ಪೂರ್ವ ಕಾಲದ ಬಗೆಗೆ ಅಧ್ಯಯನ ನಡೆಸಿರುವ ವಿದ್ವಾಂಸರುಗಳ ಕೃತಿಗಳನ್ನು ಗಮನಿಸಿದಾಗ ಇಲ್ಲಿನ ಹಳೇ ಶಿಲಾಯುಗ, ನವ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ನೆಲೆಗಳನ್ನು ಹಾಗೂ ಆ ಜನತೆ ಬಳಸಿರುವ ವಿವಿಧ ಬಗೆಯ ವಸ್ತುಗಳಾದ ಮಣಿಗಳು, ಬಳೆಗಳು, ಮಡಿಕೆ-ಕುಡಿಕೆಗಳು, ಕಬ್ಬಿಣದ ವಸ್ತುಗಳು ಕಲ್ಲಿನ ಆಯುಧಗಳು ಮತ್ತು ಅವರ ಕರಕುಶಲತೆಯ ಬಗೆಗೆ ವಿಶೇಷ ಗಮನಹರಿಸಲಾಗಿದೆ ಎನ್ನಬಹುದು.[೧] ಬಿ.ಕೆ. ಗುರುರಾಜರಾವ್ ಅವರ ಪ್ರಕಾರ, ಕರ್ನಾಟಕದಲ್ಲಿ ಹಳೇ ಶಿಲಾಯುಗಕ್ಕೆ ಸೇರಿರುವ ಪ್ರಮುಖ ನೆಲೆಗಳು ತುಮಕೂರು, ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ, ಗುಲ್ಬರ್ಗ, ಬಿಜಾಪುರ ಮತ್ತು ಬೆಳಗಾವಿ ಜಿಲ್ಲೆಗಳಲ್ಲಿವೆ. ಈ ಎಲ್ಲಾ ಪ್ರದೇಶಗಳಲ್ಲಿ ಆದಿಮಾನವನು ಬಳಸಿರುವ ಕೈಕೊಡಲಿಗಳು, ಕೈಗತ್ತಿಗಳು ಮತ್ತು ತೆಳುಪದರದ ಆಯುಧಗಳು ಸಂಶೋಧನೆಗೊಳಪಟ್ಟಿವೆ. ಈ ಅವಧಿಯಲ್ಲಿ ಪ್ರಾಣಿಗಳ ಬೇಟೆಯಾಡುವಿಕೆಗಾಗಿ ಅವರು ಬಳಸುತ್ತಿದ್ದ ಆಯುಧಗಳು ಕೂಡ ವ್ಯತ್ಯಾಸವನ್ನು ಹೊಂದಿವೆ. ಭರ್ಜಿಗಳು ಮತ್ತು ಈಟಿಗಳನ್ನು ಹರಿತವಾದ ಮೊನೆಗಳುಳ್ಳ ಕಲ್ಲು ಹಾಗೂ ಮೂಳೆಗಳಿಂದ ರಚಿಸುತ್ತಿದ್ದರು. ಕೈಕೊಡಲಿಗಳು ಮತ್ತು ತೆಳುಪದರದ ಕಲ್ಲಿನ ಆಯುಧಗಳನ್ನು ಮಾಂಸವನ್ನು ಕತ್ತರಿಸಲು ಹಾಗೂ ತಾತ್ಕಾಲಿಕ ವಾಸಸ್ಥಾನಗಳ ರಚನೆಗಾಗಿ ಮರಗಳನ್ನು ಕತ್ತರಿಸಲು ಬಳಕೆ ಮಾಡುತ್ತಿದ್ದರು. ಬೇಟೆಗಾರಿಕೆಯ ಜನರ ಜೀವನದ ಮುಖ್ಯ ಭಾಗವಾಗಿದ್ದು ಸಾಮಾಜಿಕ ಜೀವನ ಮತ್ತು ಆರ್ಥಿಕತೆಯ ಒಂದು ಬಗೆಯಾಗಿತ್ತು ಎಂದು ಹೇಳಬಹುದಾಗಿದೆ.

## ಹಳೇ ಶಿಲಾಯುಗದ ನೆಲೆಗಳು ಮತ್ತು ಆಯುಧಗಳು

ಹಳೇ ಶಿಲಾಯುಗದ ನೆಲೆಯಾಗಿರುವ ತುಮಕೂರಿನ ಬಾಣಸಂದ್ರ ಬೆಟ್ಟ ಪ್ರದೇಶವನ್ನು ಡಾ. ಎಮ್. ಶೇಷಾದ್ರಿ ಅವರು ಪತ್ತೆಹಚ್ಚಿದ್ದರು. ಬಾಗಲಕೋಟೆ ಜಿಲ್ಲೆಯ ನಂದಿಕೇಶ್ವರದಲ್ಲಿನ ನೆಲೆಯನ್ನು ಎಮ್.ಎನ್. ದೇಶಪಾಂಡೆ ಅವರು ಪತ್ತೆಹಚ್ಚಿದ್ದಾರೆ. ಇಲ್ಲಿ ಮುಖ್ಯವಾಗಿ ದೊರೆತಿರುವ

* ಇತಿಹಾಸ ಉಪನ್ಯಾಸಕರು, ರೊಜಾರಿಯೊ ಪದವಿ ಪೂರ್ವ ವಿದ್ಯಾಲಯ, ಪಾಂಡೇಶ್ವರ, ಮಂಗಳೂರು, ದಕ್ಷಿಣ ಕನ್ನಡ-೫೭೫೦೦೧.

ಆಯುಧಗಳೆಂದರೆ ಕೈ ಕೊಡಲಿಗಳು, ಕೈಗತ್ತಿಗಳು ಮತ್ತು ಬೆಣಚುಕಲ್ಲಿನ ಮಚ್ಚುಕತ್ತಿಗಳೇ ಆಗಿವೆ[೨]. ಧಾರವಾಡ ಜಿಲ್ಲೆಯ ಚೆನ್ನಾಪುರ ಬಳಿಯಲ್ಲಿನ ನೆಲೆಯಿಂದ ಎಮ್.ಎಸ್. ನಾಗರಾಜರಾವ್ ಅವರು ಅವಶೇಷಗಳನ್ನು ಸಂಗ್ರಹಿಸಿದ್ದಾರೆ.[೩]

ಶ್ರೀ ಆರ್.ಎಸ್. ಪಪ್ಪುರವರು ಹಳೇ ಶಿಲಾಯುಗದ ಆಯುಧಗಳಾದ ಕೈಕೊಡಲಿಗಳು, ಕೈಗತ್ತಿಗಳು, ಮಂಡಲಾಕೃತಿಯ ಆಯುಧ, ತೆಳು ಪದರಗಳುಳ್ಳ ಆಯುಧಗಳು, ತಿರುಳು ಆಯುಧಗಳು ಮತ್ತು ಬೆಣಚುಕಲ್ಲಿನ ಆಯುಧಗಳನ್ನು ಬೆಳಗಾವಿ, ಬಿಜಾಪುರ ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ಪತ್ತೆಹಚ್ಚಿದ್ದಾರೆ.[೪] ಡಾ. ಕೆ. ಪದ್ದಯ್ಯ ಅವರು ಮಧ್ಯಶಿಲಾಯುಗದ ಆಯುಧಗಳಾದ ನಯಗೊಳಿಸಿದ ಕಲ್ಲು, ರಂಧ್ರ ಕೊರೆಯುವ ಆಯುಧಗಳು ಹಾಗೂ ಮೊನೆಯುಳ್ಳ ಆಯುಧಗಳನ್ನು ಹುಣಸಗಿ, ಇಸಾಂಪುರ, ಮಚ್ಚನಾಡು, ವನಹಳ್ಳಿ ಮತ್ತು ಸಾಲಗೊಂದಿಗಳಲ್ಲಿ ಸಂಶೋಧಿಸಿದ್ದಾರೆ.[೫] ದಕ್ಷಿಣ ಕನ್ನಡ ಜಿಲ್ಲೆಯ ಉಪ್ಪಿನಂಗಡಿಯಲ್ಲಿ ಹಳೇ ಶಿಲಾಯುಗದ ಕಾಲದ ಮಚ್ಚುಗತ್ತಿಗಳನ್ನು ಪಿ. ರಾಜೇಂದ್ರನ್ ಸಂಶೋಧಿಸಿದ್ದಾರೆ.[೬]

ಈ ಮೇಲಿನ ಎಲ್ಲಾ ನೆಲೆಗಳನ್ನು ಮತ್ತು ದೊರಕಿರುವ ಆಯುಧಗಳನ್ನು ಗಮನಿಸಿದಾಗ ಕರ್ನಾಟಕದಲ್ಲಿ ಹಳೇ ಶಿಲಾಯುಗದ ಜನತೆ ಹೆಚ್ಚಿನ ಪ್ರಮಾಣದಲ್ಲಿ ಕಲ್ಲಿನ ಆಯುಧಗಳನ್ನು ಬಳಕೆ ಮಾಡಿರುವುದು ಗೋಚರಿಸುತ್ತದೆ. ಅಲ್ಲದೇ ಅವರು ಬೇಟೆಗಾರಿಕೆ ಮತ್ತು ಆಹಾರ ಸಂಗ್ರಹಣೆಯ ಸಂಸ್ಕೃತಿಯನ್ನು ರೂಢಿಸಿಕೊಂಡಿರುವುದು ಸ್ಪಷ್ಟಗೊಳ್ಳುತ್ತದೆ. ಬೇಟೆಗಾರಿಕೆಯು ಅವರ ಪ್ರಧಾನ ವೃತ್ತಿಯಾಗಿತ್ತು. ಹಾಗಾಗಿ ಅವರು ಕಲ್ಲಿನಿಂದ ರಚಿಸಲ್ಪಟ್ಟ ಆಯುಧಗಳಾದ ಭರ್ಜಿಗಳು, ಕಲ್ಲಿನ ಅಥವಾ ಮೂಳೆಯ ಹರಿತವಾದ ಮೊನೆಗಳುಳ್ಳ ಈಟಿಗಳು, ಕೈಕೊಡಲಿಗಳನ್ನು ವ್ಯಾಪಕವಾಗಿ ಬಳಸುತ್ತಿದ್ದರು. ಮಾಂಸ ಕತ್ತರಿಸಲು ಬಳಸುವ ನಯಗೊಳಿಸಿದ ಕಲ್ಲಿನ ಆಯುಧಗಳು ಹಾಗೂ ಮರಗಳ ರೆಂಬೆ ಮತ್ತು ಕೊಂಬೆಗಳನ್ನು ಕತ್ತರಿಸಲು ಬಳಸಿರುವ ಆಯುಧಗಳನ್ನು ಪತ್ತೆಹಚ್ಚಲಾಗಿದೆ.

ಮಧ್ಯಶಿಲಾಯುಗದ ಅವಧಿಯಲ್ಲಿ ರಚಿಸಲ್ಪಟ್ಟಿರುವ ಆಯುಧಗಳಲ್ಲಿಯೂ ಸಾಕಷ್ಟು ಕೌಶಲ್ಯವು ಕಾಣಸಿಗುತ್ತದೆ. ಈ ಕಾಲದ ಆಯುಧಗಳು ಮತ್ತು ವಿಧಾನಗಳನ್ನು ಕರ್ನಾಟಕದಲ್ಲಿ ಹಲವೆಡೆ ಸಂಶೋಧನೆಯ ವೇಳೆಯಲ್ಲಿ ಪತ್ತೆಹಚ್ಚಲಾಗಿದೆ. ಮುಖ್ಯವಾಗಿ ಈ ಕಾಲದಲ್ಲಿ ಬಳಕೆಯಾಗಿರುವ ಸಲಕರಣೆಗಳಲ್ಲಿ ಬೆಣಚುಕಲ್ಲಿನ ಆಯುಧಗಳು, ಹರಳುಕಲ್ಲುಗಳು ಅತ್ಯಂತ ಸೂಕ್ಷ್ಮ ಗಾತ್ರದಲ್ಲಿದ್ದು ಇವುಗಳ ರಚನೆಯಲ್ಲಿ ಸೂಕ್ಷ್ಮ ಕೌಶಲ್ಯತೆಯನ್ನು ಕಾಣಬಹುದು. ಈ ಕಾಲದ ಆಯುಧಗಳು ಮತ್ತು ಸಾಧನಗಳನ್ನು ಮರದ ಬೇರಿನ ಅಗೆತಕ್ಕಾಗಿ, ಮರಗಳ ಕಡಿಯುವಿಕೆ ಮತ್ತು ಪ್ರಾಣಿಗಳ ಕೊಲ್ಲುವಿಕೆಗಾಗಿ ಬಳಸಿರುವುದು ಸ್ಪಷ್ಟವಾಗುತ್ತದೆ.

**ಸೂಕ್ಷ್ಮ ಶಿಲಾಯುಗದ ನೆಲೆಗಳು ಮತ್ತು ಆಯುಧಗಳು**

ಕರ್ನಾಟಕದ ವಿವಿಧ ಭಾಗಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಗಳು ಪತ್ತೆಯಾಗಿವೆ. ಈ ಜನರು ಪ್ರಮುಖವಾಗಿ ಮೀನುಗಾರಿಕೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದು ಗಮನಾರ್ಹವಾದುದು. ಈ ಕಾಲದ ಜನತೆಯು ಜಲಚರಗಳಾದ ಮೀನು ಮತ್ತು ಏಡಿಯ ಹಿಡಿಯುವಿಕೆಯ ಕಲೆಯಲ್ಲಿ ಪರಿಣಿತರಾಗಿದ್ದು ಆಹಾರ ಉತ್ಪಾದನೆಯ ಹಾದಿಯಲ್ಲಿ ಮುಂದುವರಿದಿರುವುದು ಸ್ಪಷ್ಟಗೊಳ್ಳುತ್ತದೆ. ಅರ್ಧಚಂದ್ರಾಕೃತಿಯ ಮೊನೆಗಳುಳ್ಳ ಆಯುಧಗಳು, ದಬ್ಬಣಗಳು, ಉಜ್ಜುವ ಸಾಧನಗಳು, ಮೀನು ಹಿಡಿಯಲು ಬಳಸಿರುವ ಗಾಳ ಹಾಗೂ ಬಲೆಗಳು ಪ್ರಮುಖವಾದ ಸಾಧನಗಳಾಗಿವೆ.

ಈ ಕಾಲದ ಪ್ರಮುಖ ನೆಲೆಗಳು ಬೆಂಗಳೂರಿನ ಆಸುಪಾಸಿನಲ್ಲಿರುವ ಜಾಲಹಳ್ಳಿ, ಎಚ್.ಎ.ಎಲ್. ವಿಮಾನ ನಿಲ್ದಾಣ ವಲಯದಲ್ಲಿ ಇರುವ ಸೂಡಸಂದ್ರ ಮತ್ತು ಸಿದ್ದಾಪುರ, ತುಮಕೂರು ಬಳಿಯ ಕಿಬ್ಬನಹಳ್ಳಿ, ಗುಲ್ಬರ್ಗದ ಕೋವಳ್ಳಿ ಮತ್ತು ಶೋರಾಪುರ ದೋ ಅಬ್ ಹಾಗೂ ಬಿಜಾಪುರ ಜಿಲ್ಲೆಯಲ್ಲಿ ಕಾಣಸಿಕ್ಕಿವೆ[೭].

ಎಮ್.ಎಸ್. ನಾಗರಾಜರಾವ್ ಅವರು ಧಾರವಾಡ ಜಿಲ್ಲೆಯ ನಲ್ವಗಾಲ್ ಮತ್ತು ನದಿಹರಳ ಹಳ್ಳಿಯಲ್ಲಿ ಈ ಯುಗದ ನೆಲೆಗಳನ್ನು ಸಂಶೋಧಿಸಿದ್ದಾರೆ[೮]. ಇದೇ ಜಿಲ್ಲೆಯ ಹಳ್ಳಿಗಳಲ್ಲಿ ಸೂಕ್ಷ್ಮ ಶಿಲಾಯುಗದ ಕಲ್ಲಿನ ಅಲಗು ತಯಾರಿಕಾ ಪ್ರದೇಶವನ್ನು ಪತ್ತೆಹಚ್ಚಲಾಗಿದೆ[೯]. ಬಿಜಾಪುರ ಜಿಲ್ಲೆಯ ತೇರದಾಳದಲ್ಲಿ ಬಹುಸಂಖ್ಯೆಯ ಸೂಕ್ಷ್ಮಶಿಲೆಗಳು, ರಂಧ್ರ ಕೊರೆಯುವ ಸಾಧನಗಳು ಅರ್ಧಚಂದ್ರಾಕೃತಿಯ ಸಾಧನಗಳು ಎರಡು ಬದಿಯಲ್ಲಿಯೂ ಅಲಗುಗಳುಳ್ಳ ವಿನ್ಯಾಸಗಳನ್ನು ಸಂಶೋಧಿಸಲಾಗಿದೆ[೧೦]. ಉತ್ತರ ಕನ್ನಡ ಜಿಲ್ಲೆಯಲ್ಲಿ ಕೆಲವೊಂದು ಸೂಕ್ಷ್ಮ ಶಿಲಾಯುಗ ಕಾಲದ ನೆಲೆಗಳು ಹಾಗೂ ಆಯುಧಗಳು ಪತ್ತೆಯಾಗಿವೆ. ಮುಖ್ಯವಾಗಿ ಸ್ಪರ್ಶಶಿಲೆ, ನಯಗೊಳಿಸಿದ ಕಲ್ಲಿನ ಆಯುಧಗಳು, ಮೊನೆಗಳು, ಅಲಗುಗಳು ಮತ್ತು ತೆಳುಪದರಗಳುಳ್ಳ ಆಯುಧಗಳು ಪತ್ತೆಯಾಗಿವೆ[೧೧].

ಬಿಜಾಪುರ ಜಿಲ್ಲೆಯ ತಾಳಿಕೋಟೆಯ ಬಳಿಯ ಸಾಲ್ವಡಗಿಯಲ್ಲಿ ದೊರೆತಿರುವ ಆಯುಧಗಳ ಗುಂಪು ವಿಶೇಷತೆಯನ್ನು ಹೊಂದಿದೆ. ಮುಖ್ಯವಾಗಿ ಇಲ್ಲಿ ಚೂರಿಯಾಕಾರದ ಅಲಗುಗಳು, ರಂಧ್ರ ಕೊರೆಯುವ

ಸಾಧನಗಳು ಮತ್ತು ನಯಗೊಳಿಸಿರುವ ಕಲ್ಲಿನ ಆಯುಧಗಳು ಲಭ್ಯವಾಗಿವೆ[೧೨]. ಬ್ರಹ್ಮಗಿರಿಯಲ್ಲಿಯೂ ಕಲ್ಲಿನ ಆಯುಧಗಳು ಮತ್ತು ಸೂಕ್ಷ್ಮ ಶಿಲಾಯುಗದ ಸಲಕರಣೆಗಳು ಪತ್ತೆಯಾಗಿವೆ[೧೩].

ಹೀಗೆ ಇತಿಹಾಸಪೂರ್ವ ಕಾಲದಲ್ಲಿ ರಚನೆಯಾಗಿರುವ ಕಲ್ಲಿನ ಆಯುಧಗಳು ಮತ್ತು ಅವಶೇಷಗಳ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಅವರ ಕೌಶ್ಯಲತೆ, ನಿಪುಣತೆ ಮತ್ತು ಪರಿಣತಿಗಳಲ್ಲಿ ವ್ಯತ್ಯಾಸಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಮಾನವ ಜೀವನದಲ್ಲಿನ ಬದಲಾವಣೆ ವಿಕಾಸವಾಗಿರುವುದು ಇದರಿಂದ ಖಚಿತವಾಗುತ್ತದೆ. ಹಳೇ ಶಿಲಾಯುಗದ ಜನತೆಯು ಜೀವನ ನಡೆಸುವ ಹಾದಿಯಲ್ಲಿ ಬಳಸಿರುವ ಆಯುಧಗಳು ಮತ್ತು ಸಲಕರಣೆಗಳ ರಚನೆಯಲ್ಲಿ ಕೌಶಲ್ಯ ಕಂಡುಬರುತ್ತದೆ. ವಿಶೇಷವಾಗಿ ಈ ಕಾಲದಲ್ಲಿ ಆಯುಧಗಳ ರಚನೆಯಲ್ಲಿ ಕೌಶಲ್ಯ ಹೊಂದಿದ ವರ್ಗ ಭಾಗಿಯಾಗಿರುವುದು ಸ್ಪಷ್ಟವಾಗುತ್ತದೆ. ಬಹುತೇಕವಾಗಿ ದೊರೆತಿರುವ ಎಲ್ಲಾ ಆಯುಧಗಳನ್ನು ಪರಿಶೀಲಿಸಿದಾಗ ಈ ಅಂಶ ಗೋಚರಿಸುತ್ತದೆ. ಮಾನವನ ವಿಕಾಸದ ಹಾದಿಯಲ್ಲಿ ಕಾಣಸಿಗುವ ಮತ್ತೊಂದು ಕಾಲವೇ ಮಧ್ಯಶಿಲಾಯುಗ. ಈ ಯುಗದಲ್ಲಿ ರಚನೆಗೊಂಡಿರುವ ಆಯುಧಗಳು ಮತ್ತು ಸಾಧನಗಳು ಹಾಗೂ ಜನರ ಜೀವನ ಪದ್ಧತಿಯನ್ನು ಅವಲೋಕಿಸಿದಾಗ ಖಚಿತವಾದ ಬದಲಾವಣೆಯು ಕಾಣಸಿಗುವುದು. ಇಲ್ಲಿಯೂ ಕಾಣಸಿಗುವ ಆಯುಧಗಳ ರಚನೆಯಲ್ಲಿ ಕಲ್ಲುಕುಟಿಗ ವರ್ಗದ ಪರಿಶ್ರಮ ಮತ್ತು ನಿಪುಣತೆ ಗೋಚರಿಸುತ್ತದೆ.

ಮಾನವ ಜೀವನದ ವಿಕಾಸದ ಮುಂದಿನ ಹಾದಿಯಲ್ಲಿ ಸೂಕ್ಷ್ಮ ಶಿಲಾಯುಗವು ಕಂಡುಬರುವುದು. ಈ ಯುಗದಲ್ಲಿಯೂ ಮನುಷ್ಯನ ಬುದ್ಧಿಶಕ್ತಿಯ ಬೆಳವಣಿಗೆಯಾಗಿದ್ದು ಮಾತ್ರವಲ್ಲದೇ, ತನ್ನ ಜೀವನೋಪಾಯಕ್ಕೆ ಬಳಕೆಯಾಗುವ ಆಯುಧಗಳು ಮತ್ತು ಉಪಕರಣಗಳಲ್ಲಿ ಬದಲಾವಣೆ ಮಾಡಿರುವುದು ಗೋಚರಿಸುತ್ತದೆ. ಒಟ್ಟಾರೆಯಾಗಿ ಕರ್ನಾಟಕದ ಪೂರ್ವ ಇತಿಹಾಸ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಕರಕುಶಲಕರ್ಮಿಗಳು ಅಂದರೆ ಕಲ್ಲಿನ ಕೆಲಸಗಳಲ್ಲಿ ನಿಪುಣತೆಯನ್ನು ಹೊಂದಿರುವ ವರ್ಗ ನಿರ್ವಹಿಸಿರುವ ಪಾತ್ರಗಳನ್ನು ನಾವು ಅಲ್ಲಗಳೆಯುವಂತಿಲ್ಲ.

ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಕರ್ನಾಟಕದ ಇತಿಹಾಸ ಪೂರ್ವ ಕಾಲದಲ್ಲಿನ ಸಾಮಾಜಿಕ ವ್ಯವಸ್ಥೆಯಲ್ಲಿ ಕಲ್ಲುಕುಟಿಗ ವರ್ಗದ ನಿಪುಣತೆ ಪ್ರಧಾನವಾಗಿ ಗೋಚರಿಸುತ್ತದೆ. ಲಭ್ಯವಾಗಿರುವ ಕಲ್ಲಿನ ಆಯುಧಗಳು, ಸಾಧನೋಪಕರಣಗಳು ಹಾಗೂ ಇವುಗಳ ನೆಲೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ ವಿಚಾರವು ಸ್ಪಷ್ಟಗೊಳ್ಳುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Gururaja Rao. B.K., *Pre-History of Karnataka,* Avalokana, H.S. Krishnaswami. Ayyangar (Ed), Directorate of Kannada and culture,Bangalore, 1985, pp. 45-46.

೨. Indian Archaeology, A Review, 1955-1956, A.S.I. 1956, P. 68.

೩. Ibid, 1959-60, op. cit, 1960, P. 38.

೪. Ibid, 1963-64, op. cit, 1967, P. 23.

೫. Ibid, 1979-80, op. cit, 1983, P. 34.

೬ Ibid, 1981-82, op. cit, 1984, P. 27.

೭. Gururaja Rao. B.K. op. cit, P. 48.

೮. *Indian Arcahaeology A Review,* 1960-61, op.cit, 1961, P. 28.

೯. Ibid, 1964-65, op. cit, 1969, Pp. 30-31.

೧೦. Ibid, 1965-66, op. cit, 1973, P. 34.

೧೧. Ibid, 1972-73, op. cit, 1978, Pp. 25-27.

೧೨. Diwakar. R.R. (Chief Editor), *Karnataka through the Ages,* Vol-1, 1968, Page-92.
ಡಾ. ಎಂ. ಶೇಷಾದ್ರಿ, ಕರ್ನಾಟಕದ ಪ್ರಾಕ್ ಚಾರಿತ್ರದ ಸಂಸ್ಕೃತಿಗಳು, **ಕರ್ನಾಟಕ ಪರಂಪರೆ,** ಸಂಪುಟ-೧, ೧೯೭೦, ಪು. ೧೦೫-೧೦೭.

೧೩. M.A.R., 1940, P. 70.



# ಚಳ್ಳಕೆರೆ ತಾಲ್ಲೂಕು ಭೋಗನಹಳ್ಳಿಯ ಪ್ರಾಚ್ಯಾವಶೇಷಗಳು

**ಬಿ. ಪರಮೇಶ್***

ಭೋಗನಹಳ್ಳಿ ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನಲ್ಲಿರುವ ಒಂದು ಗ್ರಾಮ ಇದು ಚಳ್ಳಕೆರೆಗೆ ೨೮ ಕಿ.ಮೀ ದೂರದಲ್ಲಿದೆ. ಚಳ್ಳಕೆರೆಯಿಂದ ಈಶಾನ್ಯ ದಿಕ್ಕಿಗೆ ಇರುವ ಗ್ರಾಮವಾಗಿದೆ. ಈ ಗ್ರಾಮಕ್ಕೆ ಭೋಗನಹಳ್ಳಿ, ಭೋಗನಪಲ್ಲಿ ಎಂದು ಕರೆಯುತ್ತಾರೆ. ಈ ಗ್ರಾಮವು ಪ್ರಾಚೀನ ಗ್ರಾಮವಾಗಿದ್ದು ವೇದಾವತಿ ನದಿ ಎಡ ದಂಡೆಯ ಮೇಲಿದ್ದು ಪ್ರಾಕ್‌ಚಾರಿತ್ರಿಕ ಮಹತ್ವ ಪಡೆದುಕೊಂಡಿದೆ. ವಿಶೇಷವಾಗಿ ಕರ್ನಾಟಕ ಹಾಗೂ ಆಂಧ್ರ ಪ್ರದೇಶದ ಗಡಿ ಭಾಗದಲ್ಲಿರುವ ಈ ಗ್ರಾಮವು ಭೌಗೋಳಿಕವಾಗಿ ಸಂಪತ್ ಭರಿತವಾಗಿದೆ. ಈ ಗ್ರಾಮಕ್ಕಿರುವ ಹೊಸಕೆರೆ ಮತ್ತು ಹಳೆ ಕೆರೆಗಳಲ್ಲದೆ. ಪಕ್ಕದಲ್ಲಿರುವ ವೇದಾವತಿ ನದಿಯ ಪರಿಸರವು ಸಹಜ ವಾಗಿಯೇ ಪ್ರಾಚೀನ ಮಾನವನು ನೆಲೆಸಲು ಅವಕಾಶ ಕಲ್ಪಿಸಿ ದಂತಿದೆ ಎಂಬುದು ಗಮನಾರ್ಹವಾಗಿದೆ.

ಭೋಗನಹಳ್ಳಿಯು ಜಿನಗಿಹಳ್ಳ ಮತ್ತು ವೇದಾವತಿ ನದಿಗಳು ಈ ಗ್ರಾಮವನ್ನು ಸುತ್ತುವರಿದು ಮುಂದೆ ಸಂಧಿಸುತ್ತವೆ. ಜಿನಗಿಹಳ್ಳ ಮತ್ತು ವೇದಾವತಿ ನದಿಯ ಎಡ ಹಾಗೂ ಬಲ ದಂಡೆಗಳ ಮೇಲೆ ಪ್ರಾಚೀನ ಮಾನವನ ನೆಲೆಗಳು ಪತ್ತೆಯಾಗಿರುವುದನ್ನು ವಿದ್ವಾಂಸರು ಈಗಾಗಲೇ ದಾಖಲಿಸಿದ್ದಾರೆ. ಮುಖ್ಯವಾಗಿ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಭೋಗನಹಳ್ಳಿಯ ಪರಿಸರ ಹಾಗೂ ಗ್ರಾಮದಲ್ಲಿರುವ ಪ್ರಾಚ್ಯಾವಶೇಷಗಳು ಮತ್ತು ಸ್ಮಾರಕಗಳಿಂದ ಪ್ರಾಚೀನ ಕಾಲದಿಂದಲೂ ತನ್ನದೇ ಆದಂತಹ ಪಾತ್ರವನ್ನು ವಹಿಸುವ ಮೂಲಕ ಇತಿಹಾಸಕ್ಕೆ ತನ್ನದೇ ಆದ ಕೊಡುಗೆ ನೀಡಿದೆ. ಈ ಗ್ರಾಮವು ಇತಿಹಾಸ ಪ್ರಸಿದ್ಧ ಬ್ರಹ್ಮಗಿರಿಯಿಂದ ೬೦ ಕಿ.ಮೀ, ಚಂದ್ರವಳ್ಳಿ ಯಿಂದ ೬೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಪೂರ್ವಕ್ಕೆ ನಾಯಕನಹಟ್ಟಿ ಕಡೆಯಿಂದ ಜಿನಗಿಹಳ್ಳ ಹರಿದು ಬಿ.ಟಿ.ಪಿ ಡ್ಯಾಮ್‌ಗೆ ಸೇರುತ್ತದೆ ಹಾಗೂ ವೇದಾವತಿ ನದಿ ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತದೆ. ಜಿನಗಿಹಳ್ಳ ಮತ್ತು ವೇದಾವತಿ ನದಿಗಳು ಸಂಧಿಸುವ ಜಾಗದ ಪಶ್ಚಿಮ ಮತ್ತು ಉತ್ತರದ ಮಧ್ಯ ಇರುವ ಗ್ರಾಮವೇ ಭೋಗನಹಳ್ಳಿ. ಗೌರಸಮುದ್ರ ಮಾರಮ್ಮನ ಜಾತ್ರೆಯಾದ ತಿಂಗಳ ನಂತರ, ಜಾತ್ರೆಯಾದ ಮರುದಿನ ಮಾರಮ್ಮನ ನೆರೆಯನ್ನು ಮಾಡುತ್ತಾರೆ. ಈ ಗ್ರಾಮದಲ್ಲಿ ಈಶ್ವರ ದೇವಾಲಯ ಹನುಮಂತ ದೇವಾಲಯ, ತಿಮ್ಮಪ್ಪನ ಗುಡಿ, ಬುರುಜು ಮಾರಮ್ಮ, ಹೊರಮಠ, ಕೋಟೆ ಗೋಡೆ, ಪುಷ್ಕರಣಿ, ಸಭಾಮಂಟಪ, ಮುಂತಾದಂತಹ ಸ್ಮಾರಕಗಳಿವೆ. ಗ್ರಾಮದೊಳಗಿರುವ ವೀರಗಲ್ಲುಗಳು ಇಂದಿಗೂ ಅಳಿದುಳಿದುಕೊಂಡಿರುವ ಕೋಟೆ ಕೊತ್ತಲಗಳ ಅವಶೇಷಗಳು ಈ ಗ್ರಾಮಕ್ಕಿರುವ ಐತಿಹಾಸಿಕ ಹಿನ್ನೆಲೆಯನ್ನು ಸಾರುತ್ತವೆ ಅಂದಿನ ಬದುಕಿನ ವಿವಿಧ ಮಜಲುಗಳನ್ನು ಸಾರುವ ಇಂತಹ ಸಾಂಸ್ಕೃತಿಕ ಹಾಗೂ ಪ್ರಾಕ್‌ಚಾರಿತ್ರಿಕ ಅವಶೇಷಗಳು ಕಾಲದ ದವಡೆಗೆ ಸಿಕ್ಕಿ ಹೇಳ ಹೆಸರಿಲ್ಲದೆ ಕಣ್ಮರೆಯಾಗುತ್ತಿರುವುದು ವಿಷಾದಕರ ಸಂಗತಿಯಾಗಿದೆ. ಈ ನಿಟ್ಟಿನಲ್ಲಿ ಭೋಗನಹಳ್ಳಿಯ ಅನೇಕ ಸ್ಮಾರಕಗಳು ಈಗಾಗಲೇ ವಿನಾಶದ ಅಂಚನ್ನು ತಲುಪಿವೆ. ಹಿಂದಿನ ಘಟನೆಗಳನ್ನು ಬದುಕಿನ ವೈಭವತೆಗಳನ್ನು ಅಕ್ಷರಸ್ಥ ಹಾಗೂ ಅನಕ್ಷರಸ್ಥ ಸಮಾಜಕ್ಕಲ್ಲದೆ, ಭವಿಷ್ಯಕ್ಕೆ ಪಾಠ ಹೇಳುವ ಇಂತಹ ಅಪರೂಪದ ಸ್ಮಾರಕಗಳನ್ನು ಕುರಿತು ಇತಿಹಾಸದಲ್ಲಿ ದಾಖಲಿಸುವುದು ಈ ಲೇಖನದ ಆಶಯವಾಗಿದೆ.

## ೧. ಈಶ್ವರ ದೇವಾಲಯ ಅಥವಾ ವಿರೂಪಾಕ್ಷ ದೇವಾಲಯ:

ಈ ಗ್ರಾಮದ ಮಧ್ಯ ಭಾಗದಲ್ಲಿ ಪೂರ್ವಾಭಿಮುಖವಾಗಿ ಈ ದೇವಾಲಯವಿದೆ ಗರ್ಭಗುಡಿ, ಸಭಾ ಮಂಟಪಗಳನ್ನು ಒಳಗೊಂಡಿರುವ ಈ ದೇವಾಲಯವನ್ನು ಇತ್ತೀಚೆಗೆ ಜೀರ್ಣೋದ್ಧಾರಗೊಳಿಸಿದ್ದಾರೆ. ಗರ್ಭಗುಡಿಯು ಪೂರ್ವ ಪಶ್ಚಿಮ ೬.೫ ಅಡಿ ಉತ್ತರ ದಕ್ಷಿಣ ೬.೫ ಅಡಿ ವಿಸ್ತೀರ್ಣ ಹೊಂದಿದೆ. ಗರ್ಭಗುಡಿಯಲ್ಲಿ ಸುಂದರವಾದ ಕಪ್ಪು ಶಿಲೆಯ ೨ ಅಡಿಯ ಎತ್ತರದ ಶಿವಲಿಂಗವಿದೆ. ಆದರೆ ಸಭಾ ಮಂಟಪದಲ್ಲಿರುವ ನಾಲ್ಕು ಸುಂದರವಾದ ಕಂಬಗಳು

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಚಳ್ಳಕೆರೆ–೫೭೭೫೨೨.





ವಿಜಯನಗರೋತ್ತರ ರಚನೆಯನ್ನು ಹೋಲುತ್ತವೆ. ಕಂಬಗಳ ಮೇಲೆ ಅನೇಕ ಉಬ್ಬು ಶಿಲ್ಪಗಳಿವೆ ನವಿಲು ಹನುಮಂತ, ಭಕ್ತರು, ಬೇಡರ ಕಣ್ಣಪ್ಪ, ವಿನಾಯಕ, ನಾರದ, ಭುವನೇಶ್ವರಿ, ನಂದಿ, ಶಿವಲಿಂಗ, ಪದ್ಮ, ನಾಗಬಂಧ, ಗರುಡ ಮುಂತಾದ ಉಬ್ಬುಶಿಲ್ಪಗಳಿವೆ. ದೇವಾಲಯದ ಹೊರಭಾಗದ ಭಿತ್ತಿಯಲ್ಲಿ ಮೀನು, ಹಾವು, ಮೊಸಳೆ, ಆಮೆ, ಮುಂತಾದ ಉಬ್ಬು ಶಿಲ್ಪಗಳಿವೆ. ಸಭಾ ಮಂಟಪದಲ್ಲಿ ನಂದಿ ಶಿಲ್ಪವಿದೆ. ಇದರ ಅಲಂಕಾರ ಸೊಗಸಾಗಿದ್ದು ಕೊರಳಲ್ಲಿ ಗೆಜ್ಜೆ, ಗಂಟೆಸರ, ಕೊರಳಪಟ್ಟಿಯ, ಅಲಂಕಾರಗಳಿವೆ. ಈ ದೇವಾಲಯದ ಗರ್ಭಗೃಹದ ಬಾಗಿಲ ಚೌಕಟ್ಟುಗಳು ಕಲ್ಲಿನಿಂದ ನಿರ್ಮಿತವಾಗಿದೆ. ಎಡ ಮತ್ತು ಬಲ ಭಾಗದಲ್ಲಿ ದ್ವಾರಪಾಲಕರ ಚಿತ್ರವಿದೆ. ಮೇಲೆ ಹಣೆ ಪಟ್ಟಿಕೆಯಲ್ಲಿ ಗಣಪತಿ ಶಿಲ್ಪವಿದೆ. ಗಾಳಿ ಮತ್ತು ಬೆಳಕಿನ ವ್ಯವಸ್ಥೆಯಿಲ್ಲ. ಈ ದೇವಾಲಯದ ಸುತ್ತಲು ತೆರೆದ ಕಲ್ಲು ಗೋಡೆಯಿಂದ ಸುತ್ತುವರಿದ ಪ್ರದಕ್ಷಿಣಾ ಪಥವಿದೆ.

### ೨. ಬುರುಜು ಮಾರಮ್ಮ

ಈ ದೇವಾಲಯವು ಕೋಟೆ ಗೋಡೆಯ ವಾಯವ್ಯ ಭಾಗದಲ್ಲಿದೆ. ಕೋಟೆ ಗೋಡೆಯ ಬುರುಜಿನ ಮೇಲೆ ನಿರ್ಮಾಣ ಮಾಡಿದ್ದಾರೆ. ಈಗ ಜೀರ್ಣೋದ್ಧಾರ ಗೊಳಿಸಿದ್ದಾರೆ ಇದರ ದ್ವಾರ ಬಾಗಿಲು ಅಗ್ನಿ ದಿಕ್ಕಿಗೆ ಮುಖ ಮಾಡಿರುವುದು ವಿಶೇಷವಾಗಿದೆ. ಇದು ಊರಿನ ಗ್ರಾಮದೇವತೆಯು ಇದು ಪ್ರತಿ ಮಂಗಳವಾರ ಪೂಜೆ ನಡೆಯುತ್ತದೆ.

### ೩. ಹನುಮಂತ ದೇವಾಲಯ

ಈ ದೇವಾಲಯವು ಕೋಟೆಯ ಪ್ರವೇಶ ದ್ವಾರವಿರುವ ಉತ್ತರ ಭಾಗದಲ್ಲಿದ್ದು ಈಗ ಬಿದ್ದು ಹಾಳಾಗಿದೆ. ಪ್ರಸ್ತುತ ದೀಪಸ್ಥಂಬ ಮಾತ್ರ ಇದ್ದು ಅವಶೇಷಗಳು ಉಳಿದಿವೆ. ಹನುಮಂತನ ಉಬ್ಬು ಶಿಲ್ಪವಿದ್ದು ಈ ಶಿಲ್ಪದಲ್ಲಿ ಹನುಮಂತನ ಬಾಲವು ತಲೆಯ ಭಾಗದವರೆಗೂ ಇರುವುದು ವಿಶೇಷ. ಪ್ರತಿ ಶನಿವಾರ ಪೂಜೆ ನಡೆಯುತ್ತದೆ. ಈಗ ಈ ದೇವಾಲಯವನ್ನು ಊರಿನ ಹೊರಗಡೆ ಕಟ್ಟಿಸಿದ್ದಾರೆ.

### ೪. ತಿಮ್ಮಪ್ಪನ ಗುಡಿ

ಇದು ಕೋಟೆಯ ಉತ್ತರ ದಿಕ್ಕಿನಲ್ಲಿದ್ದು ಹನುಮಂತ ದೇವಾಲಯದ ಪಶ್ಚಿಮದಲ್ಲಿದೆ. ಈ ದೇವಾಲಯವು ಈಗ ಸಂಪೂರ್ಣವಾಗಿ ಹಾಳಾಗಿದ್ದು ಅವಶೇಷಗಳು ಮಾತ್ರ ಉಳಿದಿವೆ

### ೫. ಕೋಟೆ

ಇದನ್ನು ಈಶ್ವರ ದೇವಾಲಯದ ಸುತ್ತಲು ನಿರ್ಮಾಣ ಮಾಡಿದ್ದು ಊರಿನ ರಕ್ಷಣೆಗೆ ನಿರ್ಮಿಸಿದ್ದಾರೆ. ನಾಲ್ಕು ಮೂಲೆಗಳಲ್ಲಿ ನಾಲ್ಕು ಬುರುಜುಗಳಿವೆ ಕೆಂಪು ಮತ್ತು ಕಪ್ಪು ಕಲ್ಲುಗಳನ್ನು ಜೋಡಿಸಿ ಕೋಟೆಯನ್ನು ನಿರ್ಮಿಸಲಾಗಿದೆ. ಈ ಕೋಟೆ ೧೫ ಅಡಿ ಎತ್ತರವಿದೆ ಪ್ರಸ್ತುತ ಹಾಳಾಗಿದ್ದು ಅಲ್ಪಸ್ವಲ್ಪ ಕೋಟೆ ಸಾಲು ಮಾತ್ರ ಇದೆ. ಕೋಟೆಯ ಸುತ್ತಲು ಪೂರ್ವ ಮತ್ತು ದಕ್ಷಿಣ ಭಾಗದಲ್ಲಿ ಕಂದಕವನ್ನು ನಿರ್ಮಿಸಿದ್ದಾರೆ. ಶತ್ರುಗಳ ಹಾವಳಿಯನ್ನು ತಪ್ಪಿಸಲು ಕಂದಕದಲ್ಲಿ ನೀರು ಮತ್ತು ಪಾಪಸ್ ಕಳ್ಳಿಯನ್ನು ಹಾಕುತ್ತಿದ್ದರು, ಈ ಕೋಟೆಯ ಬುರುಜುಗಳ ಮೇಲೆ ಕಾವಲುಗಾರರು ಇರುತ್ತಿದ್ದರೆಂದು ಊರಿನ ಹಿರಿಯರ ಅಭಿಪ್ರಾಯ.

### ೬. ವೀರಗಲ್ಲು

ಇದು ೨ ಪಟ್ಟಿಕೆಗಳಿಂದ ಕೂಡಿದ ವೀರಗಲ್ಲು ೭.$^{೧}/_{೨}$ ಅಡಿ ಎತ್ತರ ೨ $^{೩}/_{೪}$ ಅಗಲ ಇದ್ದು ೯ ಇಂಚು ದಪ್ಪವಿರುವ

ಉಬ್ಬು ಶಿಲ್ಪಗಳಿರುವ ವೀರಗಲ್ಲು ಇದಾಗಿದ್ದು ವೀರನು ಬೇಟೆಯಾಡಿ ಮರಣಹೊಂದಿದ ನೆನಪಿಗೋಸ್ಕರ ನೆಡಲಾಗಿದೆ. ವೀರಗಲ್ಲಾಗಿದೆ ಇದು ಬೂದಿಹಳ್ಳಿ ಪೂಜಾರಿ ಪಾಲಜ್ಜನ ಜಮೀನಿನಲ್ಲಿದ್ದು ಹಾಗೂ ಬಿ.ಟಿ.ಪಿ ಡ್ಯಾಮ್‌ನ ಹಿನ್ನೀರು ಈ ಜಮೀನಿನ ವರೆಗೂ ನಿಲ್ಲುತ್ತವೆ. ಮೇಲಿನ ಭಾಗದಲ್ಲಿ ವೀರನು ಕುಳಿತ ಶಿಲ್ಪ ಪಕ್ಕದಲ್ಲಿ ಸ್ತ್ರೀಯರು ನಿಂತಿರುವ ಉಬ್ಬು ಶಿಲ್ಪಗಳಿವೆ. ಕೆಳಭಾಗದಲ್ಲಿ ವೀರ ಹುಲಿಯನ್ನು ಬೇಟೆಯಾಡುತ್ತಿರುವ ಚೂಪಾದ ಆಯುಧದಿಂದ ಹುಲಿಗೆ ತಿವಿಯುತ್ತಿರುವ ಶಿಲ್ಪವಿದೆ. ವೀರನ ಹಿಂದೆ ಸ್ತ್ರೀ ಶಿಲ್ಪವಿದೆ

### ೭. ಇತರೆ ಸ್ಮಾರಕಗಳು

ಹಳೇ ಮಠ: ಇದು ಈಶ್ವರ ದೇವಾಲಯದ ಮಾದರಿಯಲ್ಲಿದ್ದು ಇದು ಊರಿನ ಪಶ್ಚಿಮ ದಿಕ್ಕಿಗೆ ಇದೆ. ಯತಿಗಳು ವಾಸಮಾಡುತ್ತಿರುವ ಮಠವಾಗಿದೆ. ಪಕ್ಕದಲ್ಲಿ ಈ ಮಂಟಪಕ್ಕೆ ಹೊಂದಿಕೊಂಡಿರುವ ಮಜ್ಜನ ಬಾವಿ ಇದೆ. ಈ ಮಠವು ಚಿಕ್ಕದಾದ ಗರ್ಭಗೃಹ ಹೊಂದಿದ್ದು ಶಿವಲಿಂಗವಿದೆ ಈಗ ಪೀಠ ಮಾತ್ರವಿದೆ ನಾಲ್ಕು ಕಂಬಗಳಿರುವ ಒಂದೇ ಸಾಲಿನ ಸಭಾಮಂಟಪವಿದೆ. ಈ ಸಭಾಮಂಟಪದಲ್ಲಿ ಚಿಕ್ಕದಾದ ನಂದಿ ಇದ್ದು ಪಶ್ಚಿಮ ದಿಕ್ಕಿಗೆ ಮುಖ ಮಾಡಿರುವ ಶಿಲ್ಪವಿದೆ. ಕೊರಳಲ್ಲಿ ಹಾರ, ಹಣೆಪಟ್ಟಿ ಇದೆ, ಕಾಲಿನಲ್ಲಿ ಕಡಗವಿದೆ, ಬೆನ್ನಿನ ಮೇಲೆ ಯಾವುದೇ ಅಲಂಕಾರ ಇಲ್ಲ ಈ ದೇವಾಲಯದ ವಿಶೇಷ ಎಂದರೆ ನೆಲ ಮಟ್ಟದಿಂದ ಕೆಳಗಡೆ ಇದೆ.

### ೮. ಮಜ್ಜನ ಬಾವಿ

ಇದು ಊರಿನ ಪಶ್ಚಿಮ ಭಾಗದಲ್ಲಿದೆ ಇದರ ಪಕ್ಕದಲ್ಲಿ ಹೊರಮಠ ಮಂಟಪವಿದೆ ಇಲ್ಲಿ ಋಷಿಗಳು, ಯತಿಗಳು ಸ್ನಾನ ಮಾಡಿ ಮಂಟಪದಲ್ಲಿ ವಾಸ ಮಾಡುತ್ತಿದ್ದರೆಂದು ಊರಿನ ಹಿರಿಯರ ಅಭಿಪ್ರಾಯವಾಗಿದೆ.

### ೯. ಪೊಲೀಸ್ ಠಾಣೆ

ಇದು ಈಶ್ವರ ದೇವಾಲಯದ ಉತ್ತರ ಭಾಗದ ಕೋಟೆ ಗೋಡೆಗೆ ಹೊಂದಿಕೊಂಡಿದೆ ಉತ್ತರದ ಕಡೆ ಬಾಗಿಲು ಇದೆ ಇದು ಕಲ್ಲಿನ ಕಂಬಗಳ ಮಂಟಪವಾಗಿದೆ. ಈಗ ಬಿದ್ದು ಹಾಳಾಗಿದ್ದು ೩ ಕಂಬಗಳು ಮೇಲೆ ಹಾಸು ಬಂಡೆಯಿರುವ ಸ್ಮಾರಕ ಈಗಲೂ ಇದೆ ಇದು ಗಡಿ ಗ್ರಾಮವಾಗಿದ್ದರಿಂದ ಪೊಲೀಸ್ ಠಾಣೆ ಇತ್ತೆಂದು ದಾಖಲೆಗಳು ಹೇಳುತ್ತವೆ. ತಳುಕು ಹೋಬಳಿ ಬಿಟ್ಟರೆ ಇದು ಎರಡನೇ ಉಪಠಾಣೆಯಾಗಿದೆ ಈಗ ಇದನ್ನು ಜಾಜೂರಿಗೆ ವರ್ಗಾಯಿಸಲಾಗಿದೆ.

### ೧೦. ಸೇದುವ ಬಾವಿ

ಇದು ಈಶ್ವರ ದೇವಾಲಯ ಹಾಗೂ ಪೊಲೀಸ್ ಠಾಣೆಯ ಉತ್ತರ ಭಾಗದಲ್ಲಿದೆ ಈ ಬಾವಿ ತುಂಬಾ ಆಳವಾಗಿದ್ದು ಈ ಬಾವಿಗೆ ನಿಲ್ಲಿಸಿರುವ ಬಂಡೆಗಲ್ಲುಗಳ ಒಂದು ಬಂಡೆಯಲ್ಲಿ ಶಾಸನವಿದೆ. ಅದರಲ್ಲಿ ಶ್ರೀರಸ್ತು ಮಾತ್ರ ಕಾಣುತ್ತದೆ ಕೆಳಕಡೆ ಅಕ್ಷರಗಳು ಸರಿಯಾಗಿ ಕಾಣುತ್ತಿಲ್ಲ.

[ನಾನು ಕ್ಷೇತ್ರ ಕಾರ್ಯಕ್ಕೆ ಹೋದಾಗ ನನಗೆ ಸಲಹೆ ಸೂಚನೆ ನೀಡಿದ ಡಾ॥ ಎಸ್. ತಿಪ್ಪೇಸ್ವಾಮಿ, ಪಿ. ಪಾಲಣ್ಣ ಇಂಗ್ಲಿಷ್ ಉಪನ್ಯಾಸಕರು ಕ್ಷೇತ್ರಕಾರ್ಯಕ್ಕೆ ಸಹಕರಿಸಿದ ಪೂಜಾರಿ ಅಜ್ಜಪ್ಪ, ಮಲ್ಲಜ್ಜ, ವೀರಭದ್ರ ಗೌಡ, ವಿ. ಶೋಭ, ಮೇಘನ. ಪಿ. ಅವರನ್ನು ನಾನು ಈ ಸಂದರ್ಭದಲ್ಲಿ ನೆನೆಯುತ್ತೇನೆ.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ.
೨. ಚಿತ್ರದುರ್ಗ ಜಿಲ್ಲಾ ದರ್ಶಿನಿ, ಟಿ. ಗಿರಿಜ.
೩. ಕರ್ನಾಟಕದ ಪರಂಪರೆ, ಭಾಗ–೧, ಮೈಸೂರು ರಾಜ್ಯ ಸರ್ಕಾರ, ೧೯೭೦.
೪. ಎಪಿಗ್ರಾಫಿಯ ಕರ್ನಾಟಕ, ಸಂಪುಟ–೧೧, ಚಿತ್ರದುರ್ಗ ಜಿಲ್ಲೆ (ರೈಸ್ ಆವೃತ್ತಿ).
೫. ಕರ್ನಾಟಕದ ವೀರಗಲ್ಲುಗಳು, ಡಾ. ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೧೯೮೨, ೨೦೦೪.
೬ ಇತಿಹಾಸ ದರ್ಶನ, ಸಂಪುಟ–೨೧, ೨೦೦೬, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.
೭. ಕ್ಷೇತ್ರಾಧಾರಿತ ವರದಿ.
೮. ಮೌಖಿಕ ಸಂದರ್ಶನದ ವರದಿ.




# ಕಮ್ಮಾರಗಟ್ಟೆಯ ಪರಿಸರದ ಪ್ರಾಚ್ಯಾವಶೇಷಗಳು

**ಕೆ. ಸಿದ್ದಪ್ಪ***

**ದಾ**ವಣಗೆರೆ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನಲ್ಲಿ ಒಂದು ಐತಿಹಾಸಿಕ ನೆಲೆಯಾಗಿರುವ ಕಮ್ಮಾರ ಗಟ್ಟೆಯು ಹೊನ್ನಾಳಿಯಿಂದ ಬಸವಾಪಟ್ಟಣಕ್ಕೆ ಹೋಗುವ ರಸ್ತೆಯಲ್ಲಿ ೭ ಕಿ.ಮೀ. ದೂರದಲ್ಲಿದೆ. ಕರ್ಮಹರ ಕ್ಷೇತ್ರವೆಂದು ಪ್ರಸಿದ್ಧಿ ಪಡೆದಿರುವ ಕಮ್ಮಾರಗಟ್ಟೆಯು ತುಂಗಭದ್ರಾ ನದಿಯ ದಡದಲ್ಲಿದ್ದು, ಅನೇಕ ಪ್ರಾಚ್ಯಾವಶೇಷಗಳನ್ನು ತನ್ನ ಗರ್ಭದಲ್ಲಿ ಅಡಗಿಸಿಟ್ಟುಕೊಂಡು, ಒಂದು ಐತಿಹಾಸಿಕ ನೆಲೆಯೂ ಆಗಿದೆ.

ಹಿಂದೆ ಇಲ್ಲಿ ಬಹುಪಾಲು ಜನ ಕಮ್ಮಾರರು ವಾಸವಾಗಿದ್ದರೆಂದು, ಅವರು ಈ ನಾಡಿನ ಪಾಳೆಗಾರರಿಗೆ ಕತ್ತಿ, ಗುರಾಣಿ, ಭರ್ಚಿ, ಬಾಣ ಮುಂತಾದ ಯುದ್ಧ ಸಾಮಗ್ರಿಗಳನ್ನು ತಯಾರಿಸಿ ಕೊಡುತ್ತಿದ್ದುದಾಗಿ ತಿಳಿಯುತ್ತದೆ. ಇದಕ್ಕೆ ಸಾಕ್ಷಿಯಾಗಿ ಪುರಾತನ ಕುಲುಮೆಯ ಅವಶೇಷಗಳನ್ನು ಕಾಣಬಹುದು. ಆದ್ದರಿಂದಲೇ ಕಮ್ಮಾರರ ಕೊಪ್ಪಲು, ಕಮ್ಮಾರಕಟ್ಟೆ, ಕಮ್ಮಾರಗಟ್ಟೆಯಾಗಿರುವುದಾಗಿ ಹೇಳಲಾಗುತ್ತಿದೆ.

ಈ ಗ್ರಾಮದ ಬಗ್ಗೆ ಅನೇಕ ದಂತ ಕಥೆಗಳಿರುತ್ತವೆ. ಒಂದು ಕಥೆ ಪ್ರಕಾರ – ಹಿಂದೆ ಪರುಶುರಾಮನು ತನ್ನ ತಾಯಿ ರೇಣುಕೆಯ ಶಿರ ಕಡಿದು ಭೂಮಂಡಲದ ಕ್ಷತ್ರಿಯರ ವಧೆಮಾಡಿ ತನ್ನ ರಕ್ತಸಿಕ್ತವಾದ ಪರಶುವನ್ನು (ಕೊಡಲಿ) ಎಲ್ಲಿ ತೊಳೆದರೂ ಅದರ ರಕ್ತ ಕಲೆ ಹೋಗಿರಲಿಲ್ಲ ವಾದ್ದರಿಂದಾಗಿ ಅಲೆಯುತ್ತಾ ಬಂದ ಅವನು, ಇಲ್ಲಿನ ತುಂಗಭದ್ರಾ ನದಿಯಲ್ಲಿ ಆ ಕೊಡಲಿಯನ್ನು ತೊಳೆಯಲು ಅದಕ್ಕೆ ಹತ್ತಿದ್ದ ರಕ್ತ ಹೋಗಿ, ಆತನ ಕರ್ಮಹರಿದ ಕಾರಣ ಈ ಸ್ಥಳವು ಕರ್ಮಹರ ಕ್ಷೇತ್ರವೆಂದು ಹೆಸರಾಯಿತೆನ್ನುವುದು ಜನ–ಜನಿತವಾಗಿದೆ.

ಮತ್ತೊಂದು ಕಥಾನಕದಂತೆ ತ್ರೇತಾಯುಗದಲ್ಲಿ ಶ್ರೀರಾಮ, ಲಕ್ಷ್ಮಣ, ಸೀತೆಯರು ಹನುಮಂತನೊಂದಿಗೆ ತಿರುಗಾಡುತ್ತಾ ಇಲ್ಲಿಗೆ ಬಂದು ಹಲವು ದಿನ ನೆಲೆಸುತ್ತಾರೆ. ಆ ಸಂದರ್ಭದಲ್ಲಿ ಅಡುಗೆಗೆ ಬೇಕಾದ ಹುಣಸೇಹಣ್ಣನ್ನು ತರಲು ಸೀತಾಮಾತೆಯು ಆಂಜನೇಯನಿಗೆ ಹೇಳಲು, ಹಣ್ಣುತರುವ ಬದಲು ಇಡೀ ಮರವನ್ನೇ ಕಿತ್ತು ತುರುತ್ತಾನೆ. ಸೀತಾದೇವಿ ಬೈದು ತನಗೆ ಬೇಕಾಗುವಷ್ಟು ಹಣ್ಣನ್ನು ಕಿತ್ತುಕೊಂಡು ಮರವನ್ನು ಎಸೆಯಲು ಹೇಳುತ್ತಾಳೆ, ಅಲ್ಲಿಂದಲೇ ಹುಣಸೇ ಮರವನ್ನು ಎಸೆದ ಫಲವಾಗಿ ಅದು ಬುಡಮೇಲಾಗಿ ಬಿದ್ದು ಅದು ಹಾಗೇ ಚಿಗುರಿ ಫಲ ಕೊಡುತ್ತಿರುವ ಮರವನ್ನು ಮರವನ್ನು ಇಂದಿಗೂ ಕಾಣಬಹುದಾಗಿದೆ.

೧೭–೧೮ ನೇ ಶತಮಾನದ ಮಧ್ಯಕಾಲದಲ್ಲಿದ್ದ ಶರಣೆ, ಅಪರೂಪದ ಮಹಿಳಾ ದಾಸ ಸಾಹಿತಿ "ಹೆಳವನಕಟ್ಟೆ ಗಿರಿಯಮ್ಮ" ಈ ಪವಿತ್ರ ಕರ್ಮಹರಿದ ಕ್ಷೇತ್ರದಲ್ಲಿ ಜೀವ ಸಮಾಧಿಯಾಗಲು ಇಚ್ಛಿಸಿ, ನಾಗರ ಪಂಚಮಿಯಂದು ತುಂಗಭದ್ರಾ ನದಿಯಲ್ಲಿ ದೇಹ ತ್ಯಾಗ ಮಾಡಿದಳು ಎಂಬುದೇ ಕುತೂಹಲಕಾರಿ ಸಂಗತಿ. ಆ ಸಮಯದಲ್ಲಿ ಗಿರಿಯಮ್ಮನ ದೈವನಾಗಿದ್ದ ಆಂಜನೇಯ ದರ್ಶನ ಕೊಟ್ಟನೆಂದ ಬಗ್ಗೆ ಕುರುಹಾಗಿ, ಆಂಜನೇಯನು ಹುಣಸೇಮರವನ್ನು ಕಿತ್ತು ಬುಡಮೇಲು ಹಾಕಿದನೆಂದು ಹೇಳಲಾಗುತ್ತದೆ. ನದಿ ತಟದಲ್ಲಿ ಈಗಲೂ ಮೇಲಿನ ಫೋಟೊದಲ್ಲಿರುವಂತೆ ವಿಚಿತ್ರಕಾರದ ಹುಣಸೇಮರವಿರುವುದನ್ನು ಕಾಣಬಹುದಾಗಿದೆ.

ಹೀಗೆ ಜನಪದ ಮಾತು ಹಾಗೂ ಕತೆಗಳನುಸಾರ ಈ ಗ್ರಾಮವು ಪ್ರಾಚೀನತೆಯ ಸೊಗಡನ್ನು ಹೊಂದಿದ್ದು, ಅದಕ್ಕೆ ಸಾಕ್ಷಿ ಎಂಬಂತೆ ಅನೇಕ ಪ್ರಾಚೀನ ಅವಶೇಷಗಳು ಇಲ್ಲಿ ಕಾಣಸಿಗುತ್ತವೆ. ಅವುಗಳನ್ನು ಸಂಕ್ಷೇಪವಾಗಿ ಅವಲೋಕಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಸಿದ್ದೇಶ್ವರ ದೇವಸ್ಥಾನ**

ಕಮ್ಮಾರಗಟ್ಟೆಯ ದಕ್ಷಿಣ ದಿಕ್ಕಿಗೆ ತುಂಗಭದ್ರಾ ನದಿಯ ತಟದ ಸ್ವಲ್ಪ ದೂರದಲ್ಲಿ ಎತ್ತರವಾದ ದಿಣ್ಣೆಯೊಂದು ಇದ್ದು, ಅದು ಗಿಡಗಂಟಿಗಳು ಬೆಳೆದು ಮುಚ್ಚಿಹೋಗಿತ್ತು, ಅದರ ಅಡಿಯಲ್ಲಿ ದೇವಾಲಯವಿರುವುದು ತಿಳಿದಿರಲಿಲ್ಲ, ಇದು ನದಿಯ ಪ್ರವಾಹಕ್ಕೆ ಸಿಕ್ಕಿ ಮುಚ್ಚಿರಬೇಕು, ಅಥವಾ ಪರಕೀಯರ ದಾಳಿಯಿಂದ ರಕ್ಷಿಸಲು ಜನರೇ ಮಣ್ಣಿನಿಂದ ಮುಚ್ಚಿರಬಹುದು, ದಿನಗಳದಂತೆ ಮಳೆಯ ಸವೆತಕ್ಕೆ ದೇವಾಲಯದ ಮೇಲ್ಭಾಗ

* ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ದಾವಣಗೆರೆ ಜಿಲ್ಲೆ–೫೭೭೨೧೭.

ಕಾಣಿಸಿಕೊಂಡಿತು. ದಿಬ್ಬದ ಅಡಿಯಲ್ಲಿ ದೇವಾಲಯ ಇರುವುದನ್ನು ತಿಳಿದ ಗ್ರಾಮಸ್ಥರು ೧೯೮೮-೧೯೯೯ರಲ್ಲಿ ದಿಬ್ಬದ ಮಣ್ಣನ್ನು ತೆರವುಗೊಳಿಸಲಾರಂಭಿಸಿದರು, ಆಶ್ಚರ್ಯವೆಂದರೆ ಆ ಉತ್ಖನನದ ಫಲವಾಗಿ ಈ ಸುಂದರ ದೇವಾಲಯ ಕಂಗೊಳಿಸಿತು.

ಕಲ್ಯಾಣ ಚಾಲುಕ್ಯ ಶೈಲಿಯನ್ನು ಹೋಲುವ ಈ ದೇವಸ್ಥಾನ ತುಂಬಾ ಸರಳ ರಚನೆಯಿಂದ ಕೂಡಿದೆ. ಗರ್ಭಗುಡಿ ಹಾಗೂ ಮುಖ ಮಂಟಪ ಹೊಂದಿದ್ದು ದೇವಾಲಯದ ನಿರ್ಮಾಣಕ್ಕೆ ಬಳಪದ ಕಲ್ಲನ್ನು ಬಳಸಿದ್ದಾರೆ. ಮುಖಮಂಟಪವು ೧೬ ಕಂಬಗಳಿಂದ ಕೂಡಿದ್ದು ೪ ಕಂಬಗಳು ಮಾತ್ರ ತಿರುಗಣೆ ಯಂತ್ರವನ್ನು ಬಳಸಿ ತಯಾರಿಸಲಾಗಿದೆ. ಉಳಿದ ಕಂಬಗಳನ್ನು ಗೋಡೆಗೆ ಹೊಂದಿಸಿ ಆಧಾರವಾಗಿ ನಿಲ್ಲಿಸಲಾಗಿದ್ದು, ಅವುಗಳೂ ಸಹ ಸುಂದರ ಕಲಾತ್ಮಕ ಕೆತ್ತನೆಯಿಂದ ಕೂಡಿದೆ. ಬೋದಿಗೆಗಳ ಮೇಲೆ ತೊಲೆಗಳಿದ್ದು, ಮೇಲೆ ಹಾಸುಗಲ್ಲುಗಳನ್ನು ಹಾಕಲಾಗಿದ್ದು, ಮುಖಮಂಟಪದ ಮಧ್ಯಭಾಗದಲ್ಲಿ ಸರಳ ಭವನೇಶ್ವರಿಯ ಚಿತ್ರವಿದೆ. ದೇಗುಲದ ಮೇಲೆ ಯಾವುದೇ ಗೋಪುರವಿಲ್ಲ ಅಥವಾ ಹಾಳಾಗಿರುವ ಕುರುಹುಗಳು ಇರುವುದಿಲ್ಲ. ದ್ವಾರಬಾಗಿಲು ಮತ್ತು ಗರ್ಭಗುಡಿಯ ಬಾಗಿಲುಗಳ ಪಕ್ಕದಲ್ಲಿ ಜಾಲಂದ್ರಗಳಿದ್ದು ಚೌಕಾಕಾರದಲ್ಲಿ ತುಂಬಾ ಸರಳವಾಗಿ ನಿರ್ಮಿಸಿದ್ದಾರೆ. ಗರ್ಭಗುಡಿಯ ಬಾಗಿಲು ತುಂಬಾಸರಳವಾಗಿದ್ದು ಒಂದೇ ಕಲ್ಲಿನಲ್ಲಿ ೫ ಪಟ್ಟಿಕೆಗಳನ್ನು ನಿರ್ಮಿಸಿ, ಅವುಗಳ ಮೇಲೆ ಬಳ್ಳಿ ಕೋನಾಕೃತಿಯ ಚಿತ್ರಗಳನ್ನು ಕೆತ್ತಲಾಗಿದ್ದು, ಕೆಳಗೆ ದ್ವಾರಪಾಲಕರ ಚಿತ್ರಗಳಿವೆ. ಗರ್ಭಗುಡಿಯಲ್ಲಿ ಶಿವಲಿಂಗವಿದ್ದು ಮುಂಭಾಗದಲ್ಲಿ ನಂದಿಯ ಶಿಲ್ಪವಿದೆ. ದೇವಾಲಯದ ಹೊರಭಾಗದ ತಳವಿನ್ಯಾಸ ಹೊರಚಾಚುಗಳಿಂದ ಕೂಡಿದ್ದು, ಮೇಲ್ಭಾಗದಲ್ಲೂ ಕಲಾತ್ಮಕ ಹೊರಚಾಚು ರಕ್ಷಣೆಗಿದೆ. ದೇವಾಲಯದ ಸುತ್ತಲೂ ಒಂದು ಅಡಿ ವ್ಯಾಸದಲ್ಲಿ ಚೌಕ ಕೋನಾಕೃತಿಯ ಹೂಗಳ ಪಟ್ಟಿಯಿಂದ ಸುತ್ತುವರೆದಿದೆ. ಹಾಗು ಹೊರಭಾಗದಲ್ಲಿ ૩ ದಿಕ್ಕಿಗೆ ૩ ಗೂಡುಗಳಿವೆ. ಗೂಡುಗಳು ಹೊರಚಾಚಿದ ಕಂಬಗಳಿಂದ ಕೂಡಿದ್ದು, ಗೂಡಿನಲ್ಲಿ ಯಾವುದೇ ಮೂರ್ತಿಶಿಲ್ಪವಿಲ್ಲ.

ಗ್ರಾಮಸ್ಥರ ಆಸಕ್ತಿಯಿಂದ ಜೀರ್ಣೋದ್ದಾರ ಗೊಂಡಿದ್ದು, ದೇವಾಲಯುಕ್ಕೆ ಯಾವುದೇ ದಕ್ಕೆಯನ್ನುಂಟುಮಾಡದಂತೆ ಮೇಲ್ಚಾವಣಿಯನ್ನು ದುರಸ್ತಿ ಗೊಳಿಸಿ, ದೇವಾಲಯದ ಮುಂಭಾಗದಲ್ಲಿ ಛಾವಣಿಯನ್ನು ನಿರ್ಮಿಸಿದ್ದಾರೆ.

ದೇವಾಲಯದ ಮಣ್ಣನ್ನು ತೆಗೆಯುವಾಗ ಎರಡು ವೀರಗಲ್ಲುಗಳು, ಕಲ್ಲಿನ ಮಣೆ, ಸಪ್ತಮಾತೃಕೆಯರ ಶಿಲ್ಪ, ಜಡೆಮುನಿ, ಪಾಣಿ ಪೀಠಗಳು, ದೇವಾಲಯ ಕಟ್ಟಡದ ಬೇರೆ ಬೇರೆ ಭಾಗದ ಅಲಂಕೃತ ಪಟ್ಟಿಕೆಗಳು, ಅಧಿಕಶಿಲ್ಪಗಳು ದೊರೆತಿವೆ. ಇವುಗಳನ್ನು ನೋಡಿದರೆ ಇನ್ನೂ ಒಂದು ದೇವಾಲಯವಿದ್ದು ಹಾಳಾಗಿರಬಹುದೆಂಬ ಅನುಮಾನ ಬರುತ್ತದೆ.

**ಜಡೆಮುನಿ ಶಿಲ್ಪ :** ಸಿದ್ದೇಶ್ವರ ದೇವಸ್ಥಾನದ ಮುಂಭಾಗದಲ್ಲಿ ಸುಮಾರು ಮೂರು ಅಡಿ ಎತ್ತರದ ಜಡೆ ಮುನಿ ಶಿಲ್ಪವಿದೆ. ಪದ್ಮಾಸನದಲ್ಲಿ ಕುಳಿತು ಗಡ್ಡದಾರಿಯಾಗಿದ್ದು, ಕೈಯಲ್ಲಿ ಲಿಂಗವನ್ನು ಹಿಡಿದಿದೆ, ಇನ್ನೊಂದು ಕೈಯಲ್ಲಿ ರುದ್ರಾಕ್ಷಿಯನ್ನು ಹಿಡಿದು ಜಪಿಸುವಂತಿದ್ದು, ಈ ಕ್ಷೇತ್ರದಲ್ಲಿ ಋಷಿ ಮುನಿಗಳು ವಾಸಿಸುತ್ತಿರುವ ಕುರುಹುವಾಗಿರ ಬಹುದೆನಿಸುತ್ತದೆ.

ಕೊರಳು, ತೋಳು, ಕೈಗಳು ಹಾಗೂ ಕಿವಿಗಳು ರುದ್ರಾಕ್ಷಿ ಹಾರದಿಂದ ಕಂಗೊಳಿಸುತ್ತಿದೆ. ಶಿರಭಾರ ಪೇಟದಂತೆ ಅಲಂಕೃತವಾಗಿದ್ದು ಉದ್ದನೆಯ ಜಡೆಇದೆ, ಆ ಜಡೆಯು ಬಳ್ಳಿಗಳ ಶಿಲ್ಪದಿಂದ ಅಲಂಕೃತವಾಗಿದೆ. ಯೋಗಿಶಿಲ್ಪ ನಗುಮೊಗದ ಏಕಾಗ್ರತೆಯಿಂದ ಕೂಡಿ ಧ್ಯಾನದ ಭಂಗಿಯನ್ನು ಕಾಣಬಹುದು. ಇಲ್ಲಿಗೆ ೧೫ ಕಿ.ಮೀ., ದೂರದ "ಕುರುವ"ದಲ್ಲೂ ಇಂಥಹ ಶಿಲ್ಪಗಳಿದ್ದು ಈ ಸ್ಥಳವನ್ನು ಶ್ರೀ.ರಾಮಭಟ್ಟರವರು ಅಧ್ಯಯನ ನಡೆಸಿ -"ಕುರುವ" ಸ್ಥಳವನ್ನು 'ಕಾಳಮುಖರ ತವರೂರು' ಎಂದಿದ್ದಾರೆ. ಇದನ್ನು ಗಮನಿಸಿದಾಗ ಕಮ್ಮಾರಗಟ್ಟೆ ಹಾಗೂ ಇಲ್ಲಿನ ಪಾರ್ಥನಾಥೇಶ್ವರ ದೇವಾಲಯದ ಪರಿಸರವೂ ಕೂಡ ಕಾಳಾಮುಖರ ಪ್ರದೇಶವಾಗಿರಬಹುದೆನಿಸುತ್ತದೆ.

### ಮಹಾಸತಿ ಶಿಲ್ಪ

ಕಮ್ಮಾರಗಟ್ಟೆ ಗ್ರಾಮದ ಒಳಗೆ ಸುಮಾರು ೧೭ನೇ ಶತಮಾನಕ್ಕೆ ಸೇರಿದ ಮಾಸತಿ ಶಿಲ್ಪವಿದ್ದು ತಲೆಯ ಹಿಂಭಾಗ ಸುಂದರವಾಗಿ ಅಲಂಕೃತವಾಗಿದ್ದು, ಕೊರಳು, ಸೊಂಟ, ಕೈಗಳು ಆಭರಣಗಳಿಂದ ಶೃಂಗಾರಗೊಂಡಿವೆ. ಒಂದು ಕೈಯನ್ನು ಮೇಲೆ ಎತ್ತಿದ್ದು, ಮತ್ತೊಂದು ಕೈಯಲ್ಲಿ ನಿಂಬೇಹಣ್ಣನ್ನು ಹಿಡಿದಿದ್ದಾಳೆ. ಪಕ್ಕದಲ್ಲಿ ಸಣ್ಣದಾದ ಕೈಮುಗಿದು ನಿಂತ ವ್ಯಕ್ತಿಯ (ಪತಿ) ಚಿತ್ರವಿದೆ.

ವಿಶೇಷವೆಂದರೆ ಈ ಶಿಲ್ಪದ ಎರಡೂ ಬದಿಗೆ ಇಬ್ಬರು ವೀರರ ಶಿಲ್ಪಗಳಿವೆ, ಇಬ್ಬರೂ ಖಡ್ಗಧಾರಿಗಳಾಗಿದ್ದು, ತಲೆ ಮುಡಿಯನ್ನು ಕಟ್ಟಿದ್ದು, ಎರಡೂ ವೀರರ ಪಕ್ಕದಲ್ಲಿ ಅಲಂಕೃತವಾದ ನೀರಿನ ಹೂಜಿಯ ಚಿತ್ರವಿದೆ. ವೀರನ ಶಿಲ್ಪದ ಪಕ್ಕದಲ್ಲಿ "ಡಾಂಬಿಕೇಯ" (ಡಾಂಬಿಕಯ್ಯ) ಎಂಬ ಬರಹ ಇದೆ. ಈ ಮೂರು ಶಿಲ್ಪಗಳಿಗೂ ಕಲ್ಲುಗಳನ್ನು





ನಿಲ್ಲಿಸಿ ಗುಡಿಗಳನ್ನು ಕಟ್ಟಿದ್ದಾರೆ. ಸತಿ ಹೋದವಳು ಇಲ್ಲಿನ ರಾಣಿಯಾಗಿರಬೇಕೆನಿಸುತ್ತದೆ. ಈ ಡಾಂಬಿಕೇಯ ಯಾರು? ಇವರನ್ನು ಸತಿ ಶಿಲ್ಪದ ಪಕ್ಕದಲ್ಲಿ ಏಕೆ ಸಿಲ್ಲಿಸಿದ್ದಾರೆ? ಸತಿ ಶಿಲ್ಪಕ್ಕೂ ಈ ವೀರರಿಗೂ ಏನು ಸಂಭಂಧ ಎಂಬುದನ್ನು ಪತ್ತೆಮಾಡಬೇಕಿದೆ. ಅಲ್ಲದೇ ಸತಿ ಶಿಲ್ಪಕ್ಕೂ ಮತ್ತು ಇಬ್ಬರು ವೀರರ ಶಿಲ್ಪಗಳು ಕಾಲಮಾನಗಳ ವ್ಯತ್ಯಾಸವೂ ಇದೆ ಎನಿಸುತ್ತದೆ.

ಕಮ್ಮಾರಗಟ್ಟೆಯ ಶಾಲೆಯ ಪಕ್ಕದ ರಸ್ತೆಯಲ್ಲಿ ಐನಾರ ನೀಲಮ್ಮನವರ ಮನೆಯ ಹಿತ್ತಲಲ್ಲಿ ಮೇಲೆ ತಿಳಿಸಿದ ಮಹಾಸತಿ ಶಿಲ್ಪದಿಂದ ಸ್ವಲ್ಪ ದೂರದಲ್ಲಿ ಮತ್ತೊಂದು ಮಹಾಸತಿಯ ಶಿಲ್ಪವಿದೆ. ಇದು ನೆಲಮಟ್ಟದಿಂದ ಸುಮಾರು ೫ ಅಡಿ ಎತ್ತರವಿದ್ದು ಬಹಳ ಸುಂದರವಾಗಿದೆ. ತಲೆಯ ಹಿಂಬಾಗ ಕೇದಿಗೆಯಿಂದ ಅಲಂಕೃತವಾಗಿದೆ. ತೋಳು, ಕೈಗಳು, ಮತ್ತು ಸೊಂಟ ಆಭರಣಗಳಿಂದ ಅಲಂಕೃತಗೊಂಡಿದ್ದು, ಸೀರೆಯ ನೆರಿಗೆಗಳನ್ನು ಬಹಳ ಸುಂದರವಾಗಿ ಕೆತ್ತಲಾಗಿದೆ. ಪಕ್ಕದಲ್ಲಿ ಕೈಮುಗಿದು ಕುಳಿತ ವ್ಯಕ್ತಿ (ಪತಿ)ಯ ಚಿತ್ರವಿದೆ.

ಈ ಶಿಲ್ಪದ ಮುಂಭಾಗದಲ್ಲಿ ವಿಶಾಲ ಪಾಳು ಜಾಗವಿದೆ. ಇದು ಸಂಪೂರ್ಣ ಗಿಡಗಂಟಿಗಳಿಂದ ಕೂಡಿದ್ದು ಅದನ್ನು "ಅಗ್ನಿಕುಂಡ" (ಬೆಂಕಿಕೊಂಡ) ಎಂದು ಕರೆಯುತ್ತಾರೆ. ಬಹುಶಃ ಇದೇ ಸ್ಥಳದಲ್ಲಿ ಚಿತೆಯನ್ನು ಮಾಡಿರಬಹುದೆನಿಸುತ್ತದೆ. ಈ ಚಿತೆಗೆ ಹಾರಿ ಪ್ರಾಣ ಕಳೆದುಕೊಂಡ ಸ್ತ್ರೀಯ ಸತಿಕಲ್ಲು ಆಗಿರಬಹುದು.

### ಈಶ್ವರ ದೇವಾಲಯ

ಕಮ್ಮಾರಗಟ್ಟೆಯ ಉತ್ತರ ದಿಕ್ಕಿಗೆ ಊರ ಹೊರಗೆ ಮತ್ತೊಂದು ದಿಬ್ಬವಿದ್ದು, ಸುತ್ತಲೂ ಪೆಳೆ, ಗಿಡ, ಮರಗಳಿಂದ ಕೂಡಿದ್ದು, ದೇವಾಲಯ ಸಂಪೂರ್ಣ ನೆಲಸಮವಾಗಿದೆ. ಒಳಗೆ ಹೋಗುವುದು ತುಂಬಾಕಷ್ಟ, ಇಲ್ಲಿ ವರ್ಷಕ್ಕೊಮ್ಮೆ ವಿಶೇಷ ಸಂದರ್ಭಗಳಲ್ಲಿ ಮಾತ್ರ ಪೂಜೆ ನಡೆಯುತ್ತದೆ. ಇಲ್ಲಿರುವ ಶಿವ ಲಿಂಗ ಸಂಪೂರ್ಣ ಮಣ್ಣಿನಿಂದ ಮುಚ್ಚಿದ್ದು ಪೀಠದ ಮೇಲ್ಬಾಗ ಮಾತ್ರ ಕಾಣಿಸುತ್ತದೆ.

ಮುಂದೆ ಭಗ್ನಗೊಂಡ ನಂದಿಯು ಶಿಲ್ಪವಿದೆ. ಶಿವಲಿಂಗದ ಹಿಂದೆ (ಸೂರ್ಯ ವಿಗ್ರಹ) ಒಂದು ಮೂರ್ತಿ

ಶಿಲ್ಪವಿದ್ದು ಅದೂ ಸಹ ನೆಲ್ಲದಲ್ಲಿ ಹೂತಿದೆ. ಈ ಗ್ರಾಮದ ಸುತ್ತಲೂ ೧೦೧ ಲಿಂಗಗಳಿವೆ ಎಂದು ಸ್ಥಳೀಯರು ತಿಳಿಸುತ್ತಾರೆ. ಈ ಸ್ಥಳವನ್ನು ಉತ್ಖನನ ನಡೆಸಿದರೆ ಇನ್ನೂ ಹೆಚ್ಚಿನ ವಿವರಗಳು ಸಿಗುವುದರಲ್ಲಿ ಅನುಮಾನವಿಲ್ಲ.

### ಬುರುಜು

ಹೊನ್ನಾಳಿ ತಾಲ್ಲೂಕಿನ ಹೆಚ್ಚಿನ ಹಳ್ಳಿಗಳಲ್ಲಿ ಅನೇಕ ಬುರುಜುಗಳನ್ನು ಕಾಣಬಹುದು. ವಿಜಯನಗರೋತ್ತರ ಕಾಲದಲ್ಲಿ ನಿರ್ಮಿಸಲಾಗಿರುವ ಇಂಥಹ ಬುರುಜುಗಳನ್ನು ಮಾಸಡಿ, ಕೋಟೆಮಲ್ಲೂರು, ಕಮ್ಮಾರಗಟ್ಟೆ, ಗೊವೀನಕೋವಿ, ಹಿರೇಗೋಣಿಗೆರೆ, ಉಜ್ಜನಿಪುರ., ಮುಂತಾದ ಸ್ಥಳಗಳಲ್ಲಿ ಕಾಣಬಹುದು.

ಕಮ್ಮಾರಗಟ್ಟೆಯ ಈ ಬುರುಜು ಉತ್ತಮ ಸ್ಥಿತಿಯಲ್ಲಿದ್ದು, ತಳಹಂತದಲ್ಲಿ ತಳಪಾಯಕ್ಕೆ ದೊಡ್ಡ ದೊಡ್ಡ ಕಲ್ಲುಗಳನ್ನು ಬಳಸಿದ್ದಾರೆ. ತಳವಿನ್ಯಾಸದಿಂದ ಮೇಲೆ ಬಹಳಷ್ಟು ಸಣ್ಣ ಸಣ್ಣ ಕಲ್ಲು ಮತ್ತು ಮಣ್ಣುಗಳನ್ನು ಬಳಸಿ ವೃತ್ತಾಕಾರವಾಗಿ ನಿರ್ಮಿಸಿದ್ದಾರೆ. ೫೦ ಅಡಿಗಿಂತಲೂ ಹೆಚ್ಚು ಎತ್ತರವಾಗಿದ್ದು, ಮೇಲ್ಭಾಗದಲ್ಲಿ ಸುತ್ತಲೂ ಶತೃಗಳ ವೀಕ್ಷಣೆಗೆ ವೀಕ್ಷಣಾ ಕಿಂಡಿಗಳಿದ್ದು, ರಕ್ಷಣೆಗೆ ಸೂಕ್ತವಾಗಿದೆ. ಸುಮಾರು ೩೦ ಅಡಿ ಎತ್ತರದಲ್ಲಿ ಬುರುಜಿಗೆ ಕಲ್ಲಿನ ಬಾಗಿಲನ್ನು ನಿಲ್ಲಿಸಲಾಗಿದೆ. ಈ ಕಟ್ಟಡದ ಕೌಶಲ್ಯವನ್ನು ನೋಡಿಯೇ ಸವಿಯಬೇಕು, ಇದನ್ನು ಯಾರು, ಯಾವಾಗ ನಿರ್ಮಿಸಿದರೆಂಬುದಕ್ಕೆ ಯಾವುದೇ ಲಿಖಿತ ದಾಖಲೆಗಳು ಇನ್ನೂ ಲಭ್ಯವಾಗಿಲ್ಲ.

ಸುಮಾರು ೩೦೦ ರಿಂದ ೪೦೦ ವರ್ಷದಿಂದ ಮಳೆ, ಗಾಳಿ, ಬಿಸಿಲಿಗೆ ಮೈಯೊಡ್ಡಿದರೂ ಸುರಕ್ಷಿತವಾಗಿಯೇ ಇದೆ. ಆದರೆ ಇಂಥಹ ಸುಂದರ ಸ್ಮಾರಕದ ಸುತ್ತಲೂ ಒತ್ತುವರಿ ಮಾಡಿರುವುದರಿಂದ ರಕ್ಷಣೆಗೆ ತೊಂದರೆಯಾಗಿದೆ. ಗ್ರಾಮಸ್ಥರು ಈ ಐತಿಹಾಸಿಕ ಪರಂಪರೆಯ ತಾಣವನ್ನು ರಕ್ಷಿಸುವಲ್ಲಿ ಪ್ರಯತ್ನಿಸುತ್ತಿದ್ದು. ಪುರಾತತ್ವ ಇಲಾಖೆಯ ನೆರವೂ, ಜೊತೆಗೆ ಸ್ಥಳೀಯರ ಆಸಕ್ತಿಯೂ ಬೇಕಿದೆ.

### ಮುರುಡ ಬಸವೇಶ್ವರ ದೇವಸ್ಥಾನ

ಕಮ್ಮಾರಗಟ್ಟೆ ಗ್ರಾಮದ ದಕ್ಷಿಣ ದಿಕ್ಕಿಗೆ ತುಂಗಭದ್ರಾ ನದಿಯ ದಡದಲ್ಲಿ ಈ ದೇವಾಲಯವಿದೆ. ಹೊನ್ನಾಳಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆಯ ವಿಧ್ಯಾರ್ಥಿಗಳ ಶ್ರಮದಾನದಿಂದ ಸ್ವಚ್ಚಗೊಳಿಸಿದಾಗ ಈ ಸರಳ ರಚನೆಯ ದೇವಸ್ಥಾನ ಕಂಡುಬಂತು.

ಆರು ಕಂಬಗಳ ಮೇಲೆ ಮೇಲ್ಛಾವಣಿ ಇದ್ದು, ಸುತ್ತಲೂ ಇಳಿಜಾರಿನ ರೀತಿ ಕಲ್ಲುಗಳನ್ನು ಏರಿಸಿ ಗುಮ್ಮಟಾಕಾರವಾಗಿ ದೇವಾಲಯ ನಿರ್ಮಿಸಿದ್ದಾರೆ. ಆರಂಭಿಕ ಕಾಲದ ದೇವಾಲಯದಂತೆ ಕಾಣುತ್ತದೆ. ಯಾವುದೇ ನಾಜೂಕಿನ ಕೆಲಸವಿಲ್ಲ, ಬಾಗಿಲು, ಮೆಟ್ಟಿಲು ಸಂಪೂರ್ಣವಾಗಿ ಹಾಳಾಗಿದ್ದು ಸುಮಾರು ನಾಲ್ಕು ಅಡಿ ಎತ್ತರದ ಎರಡು ನಾಗರಕಲ್ಲುಗಳು ದ್ವಾರಬಾಗಿಲಲ್ಲಿವೆ. ಒಳಗಡೆ ಯಾವುದೇ ವಿಗ್ರಹವಿಲ್ಲ, ಅಥವಾ ಮಣ್ಣಲ್ಲಿ ಮುಚ್ಚಿರ ಬಹುದು, ಇದು ಮುರುಡ ಬಸವೇಶ್ವರ ದೇವಾಲಯ, ಮೊದಲು ಇಲ್ಲಿ ದನಕರುಗಳಿಗೆ "ಉಣ್ಣೆ" ಯಾದರೆ ತೆಂಗಿನಕಾಯಿ ಉರುಳಿಬಿಡುತ್ತಿದ್ದುದಾಗಿ ಸ್ಥಳಿಯರು ತಿಳಿಸುತ್ತಾರೆ.

### ಸೂರ್ಯನ ವಿಗ್ರಹ

ಸುಮಾರು ಮೂರು ಅಡಿ ಎತ್ತರದ ಸೂರ್ಯನ ವಿಗ್ರಹ ಮುರುಡ ಬಸವೇಶ್ವರ ದೇವಸ್ಥಾನದ ಬಳಿ ಪಾಯ ತೆಗೆಯುವಾಗ ಸಿಕ್ಕಿದೆ.

ಈ ಮೂರ್ತಿಯ ಬಹಳಷ್ಟು ಭಾಗ ಭಗ್ನಗೊಂಡಿದ್ದು, ಕಿರೀಟ ಆಭರಣಗಳಿಂದ ಸರ್ವಾಂಗ ಸುಂದರವಾಗಿ ಅಲಂಕೃತವಾಗಿದೆ. ಈ ಭಾಗದಲ್ಲಿ ಎರಡು ಸೂರ್ಯನ ವಿಗ್ರಹಗಳು ಪತ್ತೆಯಾದಂತಾಗಿವೆ.

ಹೀಗೆ ಈ ಕಮ್ಮಾರಗಟ್ಟೆ ಪರಿಸರ ಅಪಾರವಾದ ಪ್ರಾಚ್ಯಾವಶೇಷಗಳ ಸಂಪತ್ತನ್ನು ತನ್ನ ಮಡಿಲಲ್ಲಿ ಅಡಗಿಸಿಟ್ಟು ಕೊಂಡಿದ್ದು, ಅಪಾರ ಐತಿಹಾಸಿಕ ಮಾಹಿತಿಗಳನ್ನು ಒದಗಿಸುವ ನೆಲೆಯಾಗಿದೆ ಎಂದು ಹೇಳಬಹುದು.

(ಈ ಲೇಖನ ಬರೆಯಲು ಸಹಕಾರ, ಮಾರ್ಗದರ್ಶನ ನೀಡಿದ. ಶ್ರೀ ಬುರುಡೇಕಟ್ಟೆ ಮಂಜಪ್ಪ, ಶ್ರೀ ಯು.ಎನ್. ಸಂಗನಾಳ್ ಮಠ. ಡಾ॥ ಕೊಟ್ರೇಶ್ ಉತ್ತಂಗಿ. ಶ್ರೀ ದೇವರಕೊಂಡಾರೆಡ್ಡಿ, ವಿನಾಯಕ ಶೆಟ್ರು, ಹಾಗೂ ಒಂದು ವಾರಗಳ ಕಾಲ ಕ್ಷೇತ್ರಕಾರ್ಯದಲ್ಲಿ ನೆರವಾದ ಹೊನ್ನಾಳಿ, ಸರ್ಕಾರಿ ಪ.ಪೂ. ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆಯ ವಿದ್ಯಾರ್ಥಿಗಳಿಗೆ ಮತ್ತು ಕಮ್ಮಾರಗಟ್ಟೆಯ ಜನತೆಗೆ ಧನ್ಯಾವಾದಗಳು.)



### ಆಧಾರಸೂಚಿ


೧. **ಕಾಳಾಮುಖ ದರ್ಶನ,** ಎಸ್.ಎಸ್. ಹಿರೇಮಠ, ಸಮತಾ ಪ್ರಕಾಶನ, ಹರಪನಹಳ್ಳಿ, ೨೦೦೪.
೨. **ಕರ್ನಾಟಕದ ವೀರಗಲ್ಲುಗಳು,** ಡಾ॥ ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತತು, ೧೯೮೨.
೩. **ಹೊನ್ನಲೆಗಳು,** ಡಾ॥ ನಾ. ಕೊಟ್ರೇಶ್ ಉತ್ತಂಗಿ, ಸಹನಾದ್ರಿ ಪ್ರಕಾಶನ, ಹೊನ್ನಾಳಿ, ೨೦೦೪.
೪. ಅಪರೂಪದ ಮಹಿಳಾ ದಾಸ ಸಾಹಿತಿ, **ಪ್ರಜಾವಾಣಿ** ಲೇಖನ, ಲೇ: ಎಂ. ನಟರಾಜನ್
೫. ಐತಿಹಾಸಿಕ ಹಿನ್ನೆಲೆಯ ಹೆಳವನಕಟ್ಟೆ, **ಕರ್ಮವೀರ** ಲೇಖನ, ಲೇ: ರಾಮಚಂದ್ರ ನಾಡಿಗ್.




# ಬದನಗುಪ್ಪೆ ಪರಿಸರದ ಪ್ರಾಚ್ಯಾವಶೇಷಗಳ ಶೋಧನೆ

**ಡಾ. ಬಿ. ಬಸವರಾಜು ತಗರಪುರ***

ಬದನಗುಪ್ಪೆಯು ಚಾಮರಾಜನಗರದ ಪಶ್ಚಿಮ ದಿಕ್ಕಿಗೆ ಸುಮಾರು ೧೦ ಕಿಲೋಮೀಟರ್ ದೂರದಲ್ಲಿದೆ. ಈ ಗ್ರಾಮದಲ್ಲಿ ಇಲ್ಲಿಯ ತನಕ ಎಲ್ಲಿಯೂ ಪ್ರಕಟಗೊಳ್ಳದ ಪ್ರಾಚ್ಯಾವಶೇಷಗಳು ಕಂಡುಬರುತ್ತವೆ. ಅವುಗಳು ಈ ಕೆಳಕಂಡಂತೆ ಕಂಡುಬರುತ್ತವೆ.

೧) ಬೃಹತ್ ಶಿಲಾ ಸಮಾಧಿಯ ಮಾದರಿಯ ಗುಡಿ.
೨) ಬೃಹತ್ ಶಿಲಾ ಸಮಾಧಿಯ ಗುಡಿ ಒಳಗೆ ರಾವಳೇಶ್ವರ ಶಿಲ್ಪ.
೩) ಬೃಹತ್ ಶಿಲಾ ಸಮಾಧಿಗೆ ಬಳಸಿರುವ ಚಪ್ಪಡಿಗಳು.
೪) ಕಾಳೇಶ್ವರ ದೇವಾಲಯದಲ್ಲಿ ರಾವಳೇಶ್ವರ ಶಿಲ್ಪ.
೫) ಊರಿನ ಹೊರ ಭಾಗದಲ್ಲಿ ಸಂಪೂರ್ಣವಾಗಿ ದುಃಸ್ಥಿತಿ ಹೊಂದಿರುವ ಶಿವ ದೇವಾಲಯ.
೬) ಕೆಲವು ವೀರಗಲ್ಲುಗಳು.

## ೧. ಬೃಹತ್ ಶಿಲಾ ಸಮಾಧಿ

ಭಾರತದಲ್ಲಿ ಆದಿ ಹಳೆಯ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ೧೮೬೩ರ ಸಂದರ್ಭದಲ್ಲಿಯೇ ಬೆಳಕಿಗೆ ಬಂದಿದೆ. ಆದಿ ಹಳೆಯ ಶಿಲಾಯುಗ ಸಂಸ್ಕೃತಿಯ ನೆಲೆಗಳು ರಾಜ್ಯದ ಕಂಡುಬಂದಿದ್ದರೂ ಈ ನೆಲೆಯಲ್ಲಿ ಯಾರೂ ಗುರುತಿಸಿರಲಿಲ್ಲ.



ಬೃಹತ್ ಶಿಲಾ ಸಮಾಧಿ (ದೇವರ ಗುಡಿ)

ಬದನಗುಪ್ಪೆ ಗ್ರಾಮದಲ್ಲಿ ದೊರೆತಿರುವ ಬೃಹತ್ ಶಿಲಾ ಸಮಾಧಿಯ ಕುರುಹುಗಳಿಂದ ಈ ಸ್ಥಳದ ಸಂಸ್ಕೃತಿಯನ್ನು ಕ್ರಿ.ಪೂರ್ವದ ಕಾಲಕ್ಕೆ ಕೊಂಡೊಯ್ಯಬಹುದಾಗಿದೆ. ಈ ಭಾಗದಲ್ಲಿ ಶಿಲಾಯುಗ ಸಂಸ್ಕೃತಿ ಇರಲು ಕಾರಣ ವೇನೆಂದರೆ ಈ ಗ್ರಾಮವು ವ್ಯವಸಾಯಕ್ಕೆ ಯೋಗ್ಯ ಪ್ರದೇಶವಾಗಿದ್ದು, ಅಲ್ಲದೆ ಶಿಲಾಗೋರಿ ನಿರ್ಮಿಸಲು ಯೋಗ್ಯ ಭೂಮಿಯೆಂದು ಈ ಸ್ಥಳದಲ್ಲಿ ಬೃಹತ್ ಶಿಲಾ ಸಮಾಧಿಯನ್ನು ಬಳಸಿರ ಬೇಕೆಂದು ಸೂಕ್ಷ್ಮವಾಗಿ ಹೇಳಬಹುದಾಗಿದೆ. ಈ ಸಮಾಧಿಗೆ ಬಳಸಿರುವ ಚಪ್ಪಡಿಗಳು ಆಯಾತಕಾರವಾಗಿವೆ. ಚಪ್ಪಡಿಗಳು ಸುಮಾರು ೧೦ ಅಡಿ ಉದ್ದ ೫ ಅಡಿ ಎತ್ತರವನ್ನು ಹೊಂದಿರುತ್ತದೆ. ಹೀಗೆ ನೋಡಿದರೆ ಒಂದು ಕಡೆ ಚಪ್ಪಡಿಯನ್ನು ಮುಚ್ಚಿಲ್ಲ. ಉಳಿದ ಎಲ್ಲಾ ಕಡೆ ಚಪ್ಪಡಿಗಳಿದ್ದು, ಮೇಲೆ ಬಲವಾದ ಚಪ್ಪಡಿಯನ್ನು ಮುಚ್ಚಲಾಗಿದೆ.

## ೨. ಬೃಹತ್ ಶಿಲಾ ಸಮಾಧಿಯ ಗುಡಿಯ ಒಳಗೆ ರಾವಳೇಶ್ವರ ಶಿಲ್ಪ

ಸಮಾಧಿ ಒಳಗೆ ಒಂದು ರಾವಳೇಶ್ವರನ ಶಿಲ್ಪವನ್ನು ಇಡಲಾಗಿದ್ದು, ಈಗ ಇದನ್ನು ದೇವರ ಗುಡಿಯೆಂದು ಕರೆಯುವ ವಾಡಿಕೆ ಇದೆ. ಪ್ರಾಯಶಃ ಈ ಭಾಗದಲ್ಲಿ ರಾವಳೇಶ್ವರ ಶಿಲ್ಪಗಳು ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಈ ಶಿಲ್ಪಗಳು ಕಂಡುಬರುವ ಎಲ್ಲಾ ಊರಿನಲ್ಲಿ ಶಿಲ್ಪವನ್ನು ರಾಜ ಎಂದು ಗುರುತಿಸಿ ಪ್ರತ್ಯೇಕ ದೇವತಾ ಎಂದು ಕರೆಯುತ್ತಾರೆ.

ರಾವಳೇಶ್ವರ ಶಿಲ್ಪವು ಎರಡೂವರೆ ಅಡಿ ಎತ್ತರ, ಒಂದೂವರೆ ಅಡಿ ಅಗಲ ಇದೆ. ರಾವಳೇಶ್ವರನಿಗೆ ಒಂದು ತಲೆ ಇದ್ದು ನಾಲ್ಕು ಕೈಗಳು ಇರುವುದರಿಂದ ಸಾಮಾನ್ಯವಾಗಿ ದೇವರು ಎಂಬುದಾಗಿ ಕರೆಯುವ ವಾಡಿಕೆ ಇದೆ. ಇದರಲ್ಲೂ ಉಬ್ಬು ಶಿಲ್ಪ ರಚನೆ ಇದೆ. ರಾವಳೇಶ್ವರನ ಬಲಗೈಯಲ್ಲಿ ಚಕ್ರ, ಮೇಲಿನ ಎಡಗೈಯಲ್ಲಿ ಬಿಲ್ಲು, ಕೆಳಗಿನ ಎಡ ಕೈಯಲ್ಲಿ

* # ೩೧೩, ತಗರಪುರ, ತಿಲಕವಾಡಿ ಅಂಚೆ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ-೫೭೧೪೪೦.

ಶಾಂತ ಮುದ್ರೆಯಿಂದ ಕೂಡಿದ ಗದೆ ಇದೆ. ಮತ್ತೊಂದು ಕೈಯಲ್ಲಿ ವೀರ (ರಾಜ) ಗಾಂಭೀರ್ಯದಿಂದ ಇಳಿಬಿಟ್ಟ ಖಡ್ಗ, ಕೈಸೊಂಟದ ಮೇಲ್ಭಾಗದಲ್ಲಿದೆ. ವೇಷಭೂಷಣಗಳನ್ನು ರಾಜನಂತೆಯೇ ಇದೆ. ಕಾಲುಗಳಲ್ಲಿ ಪಾದುಕೆ ಧರಿಸಿರುವುದು ಕಂಡುಬರುತ್ತದೆ. ಪೀಠದಲ್ಲಿ ಹೋರಾಟದ ಟಗರುಗಳು ಇವೆ. ಈ ರೀತಿಯ ಶಿಲ್ಪಗಳನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದರೆ ಶಿಲ್ಪ ಬೇರೆ ಬೇರೆ ಸಂದರ್ಭಕ್ಕೆ ಕಥೆಯನ್ನು ಹೇಳಬಹುದು. ಕೆಲವು ವಿದ್ವಾಂಸರು ಈ ರೀತಿಯ ಶಿಲ್ಪಗಳನ್ನು ಬೇರೆ ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಿರುತ್ತಾರೆ.



ಖ್ಯಾತ ಸಂಶೋಧಕರಾದ ಡಾ. ಸೂರ್ಯನಾಥ ಕಾಮತ್‌ರವರು ಈ ಪ್ರಬಂಧವನ್ನು ಮಂಡಿಸುವ ಸಂದರ್ಭದಲ್ಲಿ ಇದು ಸಮಾಧಿಯಲ್ಲ ಎಂದು ತಿಳಿಸಿರುತ್ತಾರೆ. ಆದರೆ ಇಂತಹ ಸಮಾಧಿಯನ್ನು ತೆಗೆದು ನೋಡಿದಾಗ ಭೂಮಿಯಲ್ಲಿ ತಲೆ ಬುರುಡೆ, ಕೈಕಾಲು, ಮೂಳೆಗಳು ಕಂಡುಬಂದಿರುವುದುಂಟು. ಉದಾಹರಣೆಗೆ ಕೊಳ್ಳೇಗಾಲ ತಾಲ್ಲೂಕು ತಗರಪುರ ಗ್ರಾಮದಲ್ಲಿ ಲಿಂಗಾಯಿತ ಬೀದಿಯ ಬಸವಣ್ಣ ಗುಡಿಯ ಪಕ್ಕದಲ್ಲಿ ಭೂಮಿಯನ್ನು ಅಗೆಯುವಾಗ ಮಾನವನಿಗೆ ಸೇರಿದ ತಲೆ ಬುರುಡೆಗಳು ದೊರೆತವು. ಈಗಲೂ ಸಹ ಅಲ್ಲಿ ಈ ರೀತಿಯ ಸಮಾಧಿಯಿದ್ದು, ಸಮಾಧಿಯ ಒಳಗೆ ಸುಮಾರು ವೀರಗಲ್ಲುಗಳನ್ನು ನಿಲ್ಲಿಸಿರುವುದನ್ನು ಕಾಣಬಹುದಾಗಿದೆ. ಈ ಎಲ್ಲಾ ಹಿನ್ನೆಲೆಯಿಂದ ಬದನಗುಪ್ಪೆಯ ಈ ಅವಶೇಷವನ್ನು ಸಮಾಧಿ ಎಂದು ಗುರುತಿಸಲಾಗಿದೆ.

### ೩. ಬೃಹತ್ ಶಿಲಾ ಸಮಾಧಿಗೆ ಬಳಸಿರುವ ಚಪ್ಪಡಿಗಳು

ಬದನಗುಪ್ಪೆ ಕೊಳದ ದಂಡೆಯಲ್ಲಿ ಬೃಹತ್ ಶಿಲಾ ಸಮಾಧಿಗೆ ಬಳಸಿರುವ ಚಪ್ಪಡಿಗಳು ಕಂಡುಬಂದಿವೆ. ಈಗಾಗಲೇ ಹಲವಾರು ಸಂಶೋಧಕರು ಬೃಹತ್ ಶಿಲಾಸಂಸ್ಕೃತಿಯ ಬಗ್ಗೆ ಸಂಶೋಧನೆ ನಡೆಸಿ ಬೃಹತ್ ಶಿಲಾ ಸಂಸ್ಕೃತಿಗೆ ಪೂರಕವಾದ ಸಮಾಧಿಗಳನ್ನು ಗುರುತಿಸಿದ್ದಾರೆ. ಅವರ ಒಂದು ಸಂಶೋಧನೆಯ ಆಧಾರದ ಮೇಲೆ ನೋಡುವುದಾದರೆ ಇಲ್ಲಿಯು ಸಹ ಅದೇ ಮಾದರಿಯ ಚಪ್ಪಡಿಗಳು ದೊರೆತಿರುವುದರಿಂದ, ಅಲ್ಲದೆ ಈಗಾಗಲೇ ಮೇಲೆ ಚರ್ಚಿಸಿರುವ ಆಧಾರದ ಮೇಲೆ ದೊರಕಿರುವ ಚಪ್ಪಡಿಗಳನ್ನು ಬೃಹತ್ ಶಿಲಾ ಸಮಾಧಿಗೆ ಬಳಸಿರುವ ಚಪ್ಪಡಿಗಳು ಎಂದು ಗುರುತಿಸಲಾಗಿದೆ. ಈ ಎಲ್ಲಾ ಆಧಾರಗಳಿಂದ ಬದನಗುಪ್ಪೆ ಗ್ರಾಮದ ಪರಿಸರದಲ್ಲಿ ಪ್ರಾಚೀನ ಕಾಲದಲ್ಲಿ ಬೃಹತ್ ಶಿಲಾ ಸಮಾಧಿಗಳು ನಿರ್ಮಿತಗೊಂಡಿದ್ದವು ಎಂಬುದು ಗೋಚರವಾಗುತ್ತದೆ.

### ೪. ಕಾಳೇಶ್ವರ ದೇವಾಲಯದಲ್ಲಿ ರಾವಳೇಶ್ವರ ಶಿಲ್ಪ

ಬದನಗುಪ್ಪೆಯ ಕೊಳದ ಪಕ್ಕದಲ್ಲಿ ಅಂದರೆ ಬೃಹತ್ ಶಿಲಾ ಸಮಾಧಿಯ ಪಕ್ಕದಲ್ಲಿ ಪೂರ್ವಾಭಿಮುಖವಾಗಿ ಕಾಳೇಶ್ವರ ದೇವಾಲಯ ನಿರ್ಮಾಣಗೊಂಡಿದೆ. ಇದು ಪ್ರಾಚೀನ ದೇವಾಲಯವಾಗಿದ್ದರೂ ಕೂಡ ಇತ್ತೀಚಿನ ವರ್ಷಗಳಲ್ಲಿ ಪುನರ್ ನಿರ್ಮಾಣಗೊಂಡಿದೆ. ಈ ದೇವಾಲಯವನ್ನು ಈಗ ಕಾಳೇಶ್ವರ ದೇವಾಲಯ ಎಂದು ಕರೆಯಲಾಗುತ್ತದೆ.

ರಾವಳೇಶ್ವರನನ್ನು ರಾವಳೇಶ್ವರ, ರಾವಣೇಶ್ವರ, ಕಾಳರಾಯ, ಕಂದಗಾರಪ್ಪ, ಬೆಂದಗಾಳರಾಯ, ಕಾಮರಾಯ, ರಾವಳಪ್ಪ, ಹೊನ್ನಸಿದ್ಧೇಶ್ವರ, ಮಹಾಲಿಂಗೇಶ್ವರ, ಬ್ರಹ್ಮೇಶ್ವರ, ವೀರಪ್ಪ, ವೈದ್ಯನಾಥೇಶ್ವರ, ಕಥಗಾರಯ್ಯ, ಕಾಳಮಂಟರಾಯ, ಕರ್ಪಸ್ವಾಮಿ ಇನ್ನೂ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ದೇವಾಲಯದ ಒಳಗೆ ಇರುವ ಶಿಲ್ಪ ಅಲ್ಲದೆ ಬೃಹತ್ ಶಿಲಾ ಸಮಾಧಿ ಒಳಗೆ ಇರುವ ಶಿಲ್ಪವೂ ಒಂದೇ ರೀತಿ ಇರುವುದರಿಂದ ಈ ಶಿಲ್ಪದ ಬಗ್ಗೆ ವಿವರಣೆಯನ್ನು ನೀಡಲಾಗಿಲ್ಲ.

ಈ ದೇವಾಲಯವು ೧೫ x ೧೫ ಅಡಿ ಚದುರ ಸುತ್ತಳತೆಯಿಂದ ನಿರ್ಮಿತವಾಗಿದ್ದು, ಶುದ್ಧ ದ್ರಾವಿಡ ಶೈಲಿಯನ್ನು ಹೊಂದಿದ್ದು, ದೇವಾಲಯದ ವಿಮಾನದ

ಸುತ್ತಲೂ ವಿವಿಧ ರೀತಿಯ ಶೈವ ಪರಂಪರೆಯ ಗಾರೆ ಶಿಲ್ಪಗಳನ್ನು ಕಡೆಯಲಾಗಿದೆ. ಪ್ರಾಯಶಃ ಇದು ಸಹ ಅಂದು ಸಮಾಧಿಯಾಗಿರಬಹುದು. ಆದರೆ ಇತ್ತೀಚಿನ ವರ್ಷಗಳಲ್ಲಿ ದೇವಾಲಯವನ್ನು ಮಾಡಿರಬಹುದೆಂದು ಹೇಳಬಹುದು. ಏಕೆಂದರೆ ಈ ಊರಿನ ಹೊರಭಾಗದ ಕೊಳದ ದಂಡೆಯಲ್ಲಿ ಬೃಹತ್ ಶಿಲಾ ಗೋರಿಗೆ ಸಂಬಂಧಿಸಿದಂತೆ ಚಪ್ಪಡಿಗಳು ದೊರಕುವುದರಿಂದ ಇದು ಸಹ ಬೃಹತ್ ಶಿಲಾ ಸಮಾಧಿಯಾಗಿರಬಹುದೆಂದು ಹೇಳಬಯಸುತ್ತೇನೆ.

**೫. ಊರಿನ ಹೊಸ ಭಾಗದಲ್ಲಿ ಸಂಪೂರ್ಣವಾಗಿ ದುಸ್ಥಿತಿ ಹೊಂದಿರುವ ಶಿವ ದೇವಾಲಯ**

ಶಿವದೇವಾಲಯವು ಬದನಗುಪ್ಪೆಯ ಪಶ್ಚಿಮ ದಿಕ್ಕಿಗೆ ಹಾಗೂ ಪಣ್ಯದಹುಂಡಿಯ ದಿಕ್ಕಿಗೆ ಊರಿನ ಹೊರಭಾಗದ ರೈಲ್ವೆ ಹಳಿಯ ಪಕ್ಕದಲ್ಲಿ ಕಂಡುಬರುತ್ತದೆ. ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಸಂಪೂರ್ಣವಾಗಿ ದುಸ್ಥಿತಿ ಹೊಂದಿದೆ. ಆದರೆ ಈ ದೇವಾಲಯ ಯಾವ ಶತಮಾನದಲ್ಲಿ ನಿರ್ಮಾಣಗೊಂಡಿದೆ ಎಂದು ಹೇಳುವುದಕ್ಕೆ ಯಾವುದೇ ಆಧಾರಗಳಿಲ್ಲ. ಆದರೂ ಸಹ ಈ ದೇವಾಲಯದ ಗರ್ಭಗೃಹದಲ್ಲಿ ಶಿವಲಿಂಗವಿರುವುದರಿಂದ ಇದೊಂದು ಶಿವದೇವಾಲಯವಾಗಿತ್ತೆಂದು ಮಾತ್ರ ಹೇಳಲು ಸಾಧ್ಯ.

**೬. ಕೆಲವು ವೀರಗಲ್ಲು**

ಬದನಗುಪ್ಪೆಯ ಪಶ್ಚಿಮ ದಿಕ್ಕಿಗೆ ಮತ್ತು ಪಣ್ಯದ ಹುಂಡಿಯ ಪೂರ್ವ ದಿಕ್ಕಿಗೆ ಇರುವ ಒಂದು ಹೊಲದಲ್ಲಿ ವೀರಗಲ್ಲುಗಳಿವೆ. ಹೊಲದಲ್ಲಿ ದೊರೆತಿರುವ ವೀರಗಲ್ಲನ್ನು ಗಮನಿಸಿದರೆ ಇದು ಮೂರು ಅಂತಸ್ತಿನಿಂದ ಕೂಡಿದ್ದು, ಕೆಳಭಾಗದ ಅಂತಸ್ತಿನಲ್ಲಿ ಇಬ್ಬರು ಯೋಧರು ವೀರಾವೇಶ ದಿಂದ ಹೋರಾಡುತ್ತಿರುವ ದೃಶ್ಯಾವಳಿಯನ್ನು ಮನೋಜ್ಞವಾಗಿ ಶಿಲ್ಪದಲ್ಲಿ ಕೆತ್ತಲಾಗಿದೆ. ಈ ಶಿಲ್ಪವನ್ನು ನೋಡಿದರೆ ರಾಜನೇ ಹೋರಾಟ ಮಾಡುತ್ತಿರುವ ದೃಶ್ಯ ಕಂಡುಬರುತ್ತದೆ. ಏಕೆಂದರೆ ರಾಜನ ವೇಷ-ಭೂಷಣಗಳನ್ನು ಹೊಂದಿರುವ ಒಬ್ಬ ರಾಜ ಸೊಂಟದಲ್ಲಿ ಖಡ್ಗವನ್ನು ಕಟ್ಟಿಕೊಂಡಿದ್ದು, ಮತ್ತೊಂದು ಕೈಯಲ್ಲಿ ಖಡ್ಗ ಗುರಾನಿಯನ್ನು ಹಿಡಿದುಕೊಂಡಿರುವುದು ಕಂಡುಬರುತ್ತದೆ.

ಇದರ ಮೇಲಿನ ಹಂತದಲ್ಲಿ ಮೂರು ಜನ ವ್ಯಕ್ತಿಗಳ ಉಬ್ಬು ಶಿಲ್ಪಗಳು, ಮಡಿದವರನ್ನು ಸ್ವರ್ಗಕ್ಕೆ ಕೊಂಡೊಯ್ಯು ತ್ತಿರುವ ದೃಶ್ಯಾವಳಿಯ್ನು ಸೂಕ್ಷ್ಮವಾಗಿ ಕೆತ್ತಲಾಗಿವೆ. ಇದರ ಮೇಲಿನ ಭಾಗ ೩ನೇ ಅಂತಸ್ತಿನದಾಗಿದ್ದು, ಇಲ್ಲಿ ನಂದಿಯ ಶಿಲ್ಪವಿದ್ದು, ಭಕ್ತಿ ಪೂರ್ವಕವಾಗಿ ಕೈಮುಗಿಯುತ್ತಿರುವ ಶಿಲ್ಪ ಸುಂದರವಾಗಿ ಮೂಡಿಬಂದಿದೆ. ಈ ಮೇಲಿನ ಎಲ್ಲಾ ಆಧಾರ ಗಳಿಂದ ಮಾನವನ ಸಾಂಸ್ಕೃತಿಕ ಬೆಳವಣಿಗೆಯ ಚರಿತ್ರೆಯಲ್ಲಿ ಕಂಡುಬರುವ ಹಲವಾರು ಮಹತ್ವದ ಸಾಧನೆಗಳಲ್ಲಿ ಒಂದು ಎಂದು ಹೇಳಬಹುದು. ಅಲ್ಲದೆ ಪ್ರಾಗೈತಿಹಾಸಿಕ ಕಾಲದಲ್ಲಿ ಮಾನವನು ಜೀವನ ನಡೆಸುತ್ತಿರುವಾಗ ತನ್ನ ಸುತ್ತಮುತ್ತಲಿನ ಪರಿಸರದಲ್ಲಿ ನಡೆಯುವ ಪ್ರಕೃತಿಯತ್ತ ವಿಶೇಷ ಗಮನಹರಿಸತೊಡಗಿದನು. ಜೀವಿಗಳ ಜನನ-ಮರಣಗಳು ಪ್ರಕೃತಿಯ ಅದ್ಭುತ ದೃಷ್ಟಿ ವಿಶೇಷ ಪರಿಣಾಮಕಾರಿ ಪ್ರಸಂಗಗಳು ಇವನ್ನೆಲ್ಲ ಹಲವು ಕಾಲಗಳ ಸತತ ಗಮನಿಸುವಿಕೆಯಿಂದ ಮಾನವನು ಕಂಡುಕೊಂಡನು. ಆತ ಪ್ರಕೃತಿಯು ತನಗಿಂತಲೂ ಅಧಿಕ ಶಕ್ತಿಯುಳ್ಳದ್ದೆಂದೂ ಅದರಲ್ಲಿಯೇ ಜನನ-ಜೀವನ- ಮರಣವೆಂದೂ ಅರಿತು ಅದನ್ನು ಗೌರವ ಮತ್ತು ಭಯ ಭಕ್ತಿಯಿಂದ ಕಾಣತೊಡಗಿದನು. ಈ ಹಿನ್ನೆಲೆಯಿಂದ ಅಂದು ಮಾನವನು ತನ್ನ ರಾಜನನ್ನು, ಯಜಮಾನರನ್ನು, ಪ್ರಮುಖರನ್ನು, ಯೋಧರನ್ನು, ಮರಣ ಹೊಂದಿದ ನಂತರ ಸುಂದರವಾದ ಕಲ್ಲಿನಿಂದ ನಿರ್ಮಿತ ಗೊಂಡ ಸಮಾಧಿಯನ್ನು ನಿರ್ಮಿಸಿ ಶವ ಸಂಸ್ಕಾರವನ್ನು ಮಾಡುತ್ತಿದ್ದರು. ಅದು ಬದನಗುಪ್ಪೆಯ ಪರಿಸರದಲ್ಲೂ ಕಂಡುಬಂದಿರುವುದನ್ನು ಪ್ರಸ್ತುತ ಈ ಪ್ರಬಂಧದಲ್ಲಿ ಪ್ರಸ್ತುತಪಡಿಸಲಾಗಿದೆ.



**ಆಧಾರಸೂಚಿ**


೧. ಬಿ.ಎಲ್. ರೈಸ್., **ಮೈಸೂರ್ ಅಂಡ್ ಕೂರ್ಗ್ ಫ್ರಂ ಇನ್ಸ್ಕ್ರಿಪ್ಷನ್ಸ್,** Archibold Constable and Co.LTD., London, ೧೯೦೯.

೨. ಮಲೆಯೂರು ಗುರುಸ್ವಾಮಿ, ಹೊನ್ನಹೊಳೆ, ಬಿ.ಎನ್. ನಾಗರತ್ನ., **ಸಾಂಸ್ಕೃತಿಕ ರಾಜಧಾನಿ ತೆರಕಣಾಂಬಿ,** ಚಾಮರಾಜನಗರ, ೨೦೦೭.

೩. ಪಿ.ಬಿ. ದೇಸಾಯಿ ಮತ್ತು ಇತರರು., **ಹಿಸ್ಟರಿ ಆಫ್ ಕರ್ನಾಟಕ,** ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿ.ವಿ. ಧಾರವಾಡ, ೧೯೭೦.

೪. ಎಚ್. ತಿಪ್ಪೇರುದ್ರಸ್ವಾಮಿ., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ.**

೫. ಎಸ್. ಶ್ರೀಕಂಠಶಾಸ್ತ್ರಿ., **ಪುರಾತತ್ತ್ವ ಶೋಧನೆ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೬೦, ೧೯೭೫.

೬. ಕೆ.ಬಿ. ಶಿವತಾರಕ್., **ಕರ್ನಾಟಕದ ಪುರಾತತ್ತ್ವ ನೆಲೆಗಳು,** ಹಂಪಿ, ಕನ್ನಡ ವಿವಿ. ೨೦೧೧.




# 'ಹೊಸದುರ್ಗ ತಾಲ್ಲೂಕಿನ ಅಜ್ಜಿಗುಡ್ಡದಲ್ಲಿ ಪ್ರಾಗಿತಿಹಾಸ ಕಾಲದ ತಾಮ್ರದ ಕೊಡಲಿಯ ಪತ್ತೆ'

ಡಾ. ಎಸ್. ತಿಪ್ಪೇಸ್ವಾಮಿ*

**ಪ್ರಾ**ಚೀನ ಮಾನವನ ಸಾಂಸ್ಕೃತಿಕ ವಿಕಾಸ ಹಾಗೂ ಕರ್ನಾಟಕದ ಪ್ರಾಗಿತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುವ ಅಪರೂಪವಾದ ತಾಮ್ರದ ಕೊಡಲಿಯೊಂದು ಹೊಸದುರ್ಗ ತಾಲ್ಲೂಕಿನ ಗರಗ ಪರಿಸರದ ಹನುಮನಹಟ್ಟಿ ಗ್ರಾಮಕ್ಕೆ ಸಮೀಪವಿರುವ ಅಜ್ಜಿಗುಡ್ಡ ಕಾವಲಿನಲ್ಲಿ ಪತ್ತೆಯಾಗಿದೆ. ಈ ಕೊಡಲಿಯನ್ನು ಪ್ರಸ್ತುತ ಲೇಖನದ ಲೇಖಕರು ಕ್ಷೇತ್ರಕಾರ್ಯದ ಮೂಲಕ ಬೆಳಕಿಗೆ ತಂದಿದ್ದಾರೆ.

ಅಜ್ಜಿಗುಡ್ಡ ಕಾವಲು ಎಂದು ಕರೆಯುವ ಈ ಸ್ಥಳವು ಊರಿನ ಗೋಮಾಳವಾಗಿದ್ದು, ಇಲ್ಲಿ ಬಿಳಿ ಬೆಣಚುಕಲ್ಲಿನ ಒಂಟಿ ಗುಡ್ಡವೊಂದಿದೆ. ಗೃಹನಿರ್ಮಾಣಕ್ಕೆಂದು ಹನುಮನ ಹಟ್ಟಿಯ ರಾಮಾನಾಯ್ಕ ಎಂಬುವರು ಈ ಬೆಣಚುಕಲ್ಲು ಗುಡ್ಡದಿಂದ ಬಂಡೆಯನ್ನು ಸೀಳುತಿದ್ದಾಗ ಆಕಸ್ಮಿಕವಾಗಿ ಈ ಕೊಡಲಿ ಸಿಕ್ಕಿದೆ. ಕೊಡಲಿ ದೊರೆತಿರುವ ಪಕ್ಕದಲ್ಲಿಯೇ ಬೃಹತ್ ಶಿಲಾ ಸಮಾಧಿಯ ಕುರುಹುಗಳು ಇವೆ. ಈ ಪರಿಸರವು ಹಳ್ಳಕೊಳ್ಳಗಳಿಂದ ಹಾಗೂ ಅರಣ್ಯ ಪ್ರದೇಶದಿಂದ ಕೂಡಿದ್ದು ಅಲ್ಲಲ್ಲಿ ಪ್ರಾಗಿತಿಹಾಸ ಕಾಲದ ವಸತಿ ನೆಲೆಗಳಿಗೆ ಅನುಕೂಲಿಸುವ ವಾತಾವರಣ ಕಂಡುಬರುತ್ತದೆ.

ತಾಮ್ರ-ಶಿಲಾಯುಗದ ಕಾಲಮಾನವು ಬೇರೆ ಬೇರೆ ದೇಶಗಳಿಗೆ ವಿಭಿನ್ನವಾಗಿದ್ದು ಭಾರತದಲ್ಲಿ ನವಶಿಲಾಯುಗದ ಕೊನೆ ಮತ್ತು ಬೃಹತ್ ಶಿಲಾಯುಗದ ಕಾಲಗಳಲ್ಲಿ ಕಂಡುಬರುತ್ತದೆ. ಪ್ರಸ್ತುತ ನೆಲೆಯು ಸಹ ನವ ಶಿಲಾಯುಗಕ್ಕೆ ಸೇರಿದ್ದೆನ್ನಬಹುದು. ಇದು, ಆ ಯುಗದ ಬೆಟ್ಟದ ಮೇಲಿನ ವಸತಿ ನಿವೇಶನದ ವರ್ಗಕ್ಕೆ ಸೇರುತ್ತದೆ ಎನ್ನಬಹುದು.

ಗಮನಾರ್ಹ ಅಂಶವೆಂದರೆ, ಈ ಬೆಟ್ಟದ ಮೇಲ್ಭಾಗದಲ್ಲಿ, ಅಂದರೆ ಉತ್ತರ ದಿಕ್ಕಿನ ಪಾರ್ಶ್ವಭಾಗದಲ್ಲಿ ಮುಂಚಾಚಿರುವ ಹುಟ್ಟು ಬಂಡೆಯ ಮೇಲೆ ಆಳವಾಗಿ ಉಜ್ಜಿ ಮೂಡಿಸಲಾದ ವಿವಿಧ ಅಳತೆಯ ಸುಮಾರು ೧೬ ಕುಳಿಗಳನ್ನು ಕಾಣಬಹುದು. ಚಿತ್ರದುರ್ಗ ಜಿಲ್ಲೆಯಲ್ಲಿ ಈ ವರೆಗೆ ಜಾನಕಲ್ಲು, ತಾಳ್ಯ, ಬ್ರಹ್ಮಗಿರಿ, ಸೊಂಡೇಕೆರೆ ಮುಂತಾದ ಸ್ಥಳಗಳಲ್ಲಿ ಇಂತಹ ಕುಳಿಗಳನ್ನು ಗುರುತಿಸಲಾಗಿದೆ. ಇವುಗಳು ಶಿಲಾಯುಗದ ಮಾನವನು ತನ್ನ ಆಯುಧಗಳನ್ನು ಬಂಡೆಗಳ ಮೇಲೆ ಉಜ್ಜಿ, ಸಿದ್ಧಪಡಿಸಿ ಕೊಳ್ಳುತಿದ್ದುದರಿಂದ ಉಂಟಾದುದು ಎಂದು ಪುರಾತತ್ತ್ವಜ್ಞರು



ಅಭಿಪ್ರಾಯ ಪಟ್ಟಿದ್ದಾರೆ. ಈ ಸಾಲಿಗೆ ಅಜ್ಜಿಗುಡ್ಡವು ಸೇರುವುದರಿಂದ ಈ ಪರಿಸರದಲ್ಲಿ ಶಿಲಾಯುಗದ ಅಸ್ತಿತ್ವ ಹೆಚ್ಚು ಖಚಿತವಾಗುತ್ತದೆ.

ಈ ತಾಮ್ರದ ಕೊಡಲಿಯು ೧೬.೫ ಸೆ.ಮೀ ಉದ್ದವಾಗಿದ್ದು ಹಿಡಿಯ ಭಾಗವು ೨ ಸೆಂಮೀ ಅಗಲವಾಗಿದೆ. ಆದರೆ ಬಾಯಿಯ ಅಗಲ ೫.೮ ಸೆಂ.ಮೀಟರ್‌ನಷ್ಟಿದೆ. ಇಡಿ ಕೊಡಲಿಯು ೧ ಸೆಂ. ಮೀ. ದಪ್ಪವಾಗಿದ್ದು ೫೮೬ ಗ್ರಾಂ ತೂಕವಿದೆ.

ಸಾಮಾನ್ಯವಾಗಿ ತಾಮ್ರದ ಕೊಡಲಿಯ ಆಕಾರ, ಗಾತ್ರ ಮತ್ತು ವಿನ್ಯಾಸವನ್ನು ಸೂಕ್ಷ್ಮವಾಗಿ ಗಮನಿಸಿದರೆ, ಇದು

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ-೫೭೭೫೦೧.



ಬಹುತೇಕ ನವಶಿಲಾಯುಗದ ಅಂತಿಮ ಹಾಗೂ ಬೃಹತ್ ಶಿಲಾಯುಗ ಸಂಸ್ಕೃತಿಯ ಆರಂಭದ ಕಾಲದಲ್ಲಿನದು (ಕ್ರಿ.ಪೂ ಸು ೧೫೦೦ ರಿಂದ ೧೦೦೦) ಎಂದು ಎನ್ನಬಹುದಾಗಿದೆ. ಇಂತಹ ಅಪರೂಪದ ತಾಮ್ರದ ಕೊಡಲಿಯೊಂದು ಮೇಲುಸ್ಥರದಲ್ಲಿ (Surface level) ಪತ್ತೆಯಾಗುತ್ತಿರುವುದು ದಕ್ಷಿಣ ಭಾರತದಲ್ಲಿ ಇದೇ ಮೊದಲು ಎನ್ನಬಹುದು.

ಈ ರೀತಿಯ ತಾಮ್ರದ ಕೊಡಲಿಗಳು, ಕರ್ನಾಟಕದ ವಿವಿಧ ಕಡೆ ನಡೆದ ಉತ್ಖನನಗಳಲ್ಲಿ ಪತ್ತೆಯಾಗಿವೆ. ಹಾವೇರಿ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನ ಹಳ್ಳೂರಿನಲ್ಲಿ ಎರಡು ಅಲುಗುಳ್ಳ ತಾಮ್ರದ ಕೊಡಲಿಯು, ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಕಲ್ಲೂರಿನಲ್ಲಿ ತಾಮ್ರದ ಕೊಡಲಿ ಚೂರುಗಳು, ಬಾಗಲಕೋಟೆ ಜಿಲ್ಲೆಯ ಜಮಕಂಡಿ ತಾಲ್ಲೂಕಿನ ತೇರದಾಳದಲ್ಲಿ ಹಾಗು ಬಳ್ಳಾರಿ ಜಿಲ್ಲೆಯ ಶಿರಗುಪ್ಪ ತಾಲ್ಲೂಕಿನ ತೆಕ್ಕಲಕೋಟೆಗಳಲ್ಲಿ ಇದೇ ರೀತಿಯ ಕೊಡಲಿಗಳು ದೊರಕಿವೆ. ಆದರೆ ಮೇಲ್ಕಂಡ ನಿವೇಶನಗಳಲ್ಲಿ ಕಂಡುಬಂದಿರುವ ಕೊಡಲಿಗಳಿಗೂ ಈಗ ಜಿಲ್ಲೆಯಲ್ಲಿ ಪತ್ತೆಯಾಗಿರುವ ಈ ಕೊಡಲಿಗೂ ಆಕಾರ ಮತ್ತು ವಿನ್ಯಾಸಗಳಲ್ಲಿ ತುಂಬಾ ವ್ಯತ್ಯಾಸಗಳನ್ನು ಗಮನಿಸಬಹುದಾಗಿದೆ.

ಅವುಗಳೆಂದರೆ, ಈ ಕೊಡಲಿಯನ್ನು ಅಚ್ಚಿನಿಂದ ತಯಾರಿಸಲಾಗಿರುವುದು. ಈ ಅಂಶವನ್ನು ಕೊಡಲಿಯ ಪಾರ್ಶ್ವಗಳ ಅಂಚುಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. ಕೊಡಲಿಯ ನಾಲ್ಕು ಮೇಲ್ಮೈಗಳು ಅತ್ಯಂತ ನುಣುಪಾಗಿವೆ ಹಾಗೂ ನೀಳವಾಗಿವೆ. ಕೊಡಲಿಯ ಬಾಯಿಯು ಸೇರಿದಂತೆ ಇಡಿ ಕೊಡಲಿಯನ್ನು ನಯವಾಗಿಸಲಾಗಿದೆ. ಕೊಡಲಿಯ ಮೇಲಿರುವ ಗುರುತುಗಳನ್ನು ಗಮನಿಸಿದರೆ ಬಹುತೇಕ ಇದು ಅಂದಿನ ದಿನ ನಿತ್ಯದ ಬಳಕೆಗಾಗಿ ಉಪಯೋಗವಾದಂತಿದೆ. ಬೇರೆಯ ಕೊಡಲಿಗಳು ಇಂತಹ ನಯವಾದ ಕೆಲಸಗಾರಿಕೆಯನ್ನು ಹೊಂದಿಲ್ಲ. ನವ ಶಿಲಾಯುಗದ ನಯಗೊಳಿಸಿದ ಕಲ್ಲಿನ ಕೊಡಲಿಯ ಮಾದರಿಯಲ್ಲಿಯೇ ಈ ತಾಮ್ರದ ಕೊಡಲಿ ಇರುವುದು ಗಮನಾರ್ಹವಾಗಿದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ಈ ಹಿಂದೆ ಕ್ರಿ.ಶ. ೧೯೪೯ ರಿಂದ ೧೯೪೭ ರವರೆಗೆ ಆರ್. ನರಸಿಂಹಾಚಾರ್. ಎಂ. ಎಚ್. ಕೃಷ್ಣ ಮುಂತಾದವರು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ನಡೆಸಿದ ಉತ್ಖನನಗಳಲ್ಲಿ ಕೇವಲ ತಾಮ್ರದ ಕೆಲ ವಸ್ತುಗಳು ಮಾತ್ರ ಪತ್ತೆಯಾಗಿರುವುದನ್ನು ಇಲ್ಲಿ ಸ್ಮರಿಸಬಹುದು .ಆದರೆ ತಾಮ್ರವನ್ನ ಕರಗಿಸಿ ಶುದ್ಧ ಮಾಡುವ ಅಥವಾ ಸಂಸ್ಕರಿಸುವ ತಂತ್ರಗಾರಿಕೆಯ ಬಗ್ಗೆ ಖಚಿತ ಪುರಾವೆಗಳು ಇಲ್ಲಿಯವರೆಗೆ ಜಿಲ್ಲೆಯಲ್ಲಿ ದೊರಕಿಲ್ಲ. ಆದರೆ ತಾಮ್ರದ ಅದಿರು ನಿಕ್ಷೇಪಗಳು ಇಂಗಳದಾಳು ಪರಿಸರದಲ್ಲಿವೆ. ಇಲ್ಲಿನ ಬೃಹತ್ ಶಿಲಾಗೋರಿಗಳಲ್ಲಿ ತಾಮ್ರ-ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದಂತೆ ಕುರುಹುಗಳು ಸಹ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ಅಜ್ಜಿಗುಡ್ಡದಲ್ಲಿ ದೊರಕಿರುವ ಈ ಕೊಡಲಿಯಿಂದ ಜಿಲ್ಲೆಯಲ್ಲಿ ತಾಮ್ರ-ಶಿಲಾಯುಗ ಸಂಸ್ಕೃತಿಯ ಅಸ್ತಿತ್ವದ ಬಗ್ಗೆ ಮತ್ತಷ್ಟು ಸಂಶೋಧನೆ ನಡೆಸಲು ಪ್ರೇರಕವಾಗಿದೆ.

ಒಟ್ಟಾರೆ ಕರ್ನಾಟಕದಲ್ಲಿ ಪ್ರಾಗೈತಿಹಾಸಿಕ ತಾಮ್ರಯುಗದ ಮಾನವನ ಸಾಂಸ್ಕೃತಿಕ ವಿಕಾಸದ ಒಂದು ಪ್ರಮುಖ ಘಟ್ಟವನ್ನು ಅರಿಯಲು ಈ ಸಂಶೋಧನೆಗಳು ಸಹಾಯಕವಾಗುತ್ತವೆ. ಅಂದಿನ ಆಯುಧೋಪಕರಣಗಳನ್ನು ಉತ್ಪನ್ನ ಮಾಡುತಿದ್ದ ಕ್ರಮವನ್ನು ಅರಿಯಲು ಸಹ, ಈ ಕೊಡಲಿಯು ಪ್ರಮುಖ ಆಕರವಾಗುವುದರಲ್ಲಿ ಸಂಶಯವಿಲ್ಲ.

[ಈ ಕೊಡಲಿಯ ಇರುವಿಕೆಯ ಬಗ್ಗೆ ನನಗೆ ಮಾಹಿತಿ ನೀಡಿ ಸಹಕರಿಸಿದ ಗರಗ ಗ್ರಾಮದವರಾದ ಸಬ್‌ಇನ್ಸ್‌ಪೆಕ್ಟರ್ ಮಂಜುನಾಥ್, ರಮೇಶ್, ರೇಣುಕಪ್ಪ, ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಸ್ನಾತಕೋತ್ತರ ಇತಿಹಾಸ ವಿದ್ಯಾರ್ಥಿಗಳಾದ ಗುರುಮೂರ್ತಿ, ದೇವರಾಜ್ ಮತ್ತು ಹೆಚ್ಚಿನ ಅಧ್ಯಯನಕ್ಕೆ ನನಗೆ ಕೊಡಲಿಯನ್ನು ಕೊಟ್ಟು ಸಹಕರಿಸಿದ ರಾಮಾನಾಯ್ಕ ಹಾಗೂ ತಾಮ್ರಶಿಲಾಯುಗ ಸಂಸ್ಕೃತಿಯ ಕೊಡಲಿಯ ಬಗ್ಗೆ ನನಗೆ ವಿಶೇಷ ಮಾಹಿತಿ ನೀಡಿದ ಖ್ಯಾತ ಪುರಾತತ್ವ ಶಾಸ್ತ್ರಜ್ಞರಾದ ಡಾ. ಅ. ಸುಂದರ, ಡಾ. ಎಂ.ಎಸ್. ಕೃಷ್ಣಮೂರ್ತಿ, ಡಾ. ಎಸ್.ವೈ. ಸೋಮಶೇಖರ್ ಮತ್ತು ಡಾ. ಜಿ. ಮನೋಜ್ ಇವರಿಗೆಲ್ಲ ನನ್ನ ಕೃತಜ್ಞತೆಗಳು.]





# ಈಸೂರಲ್ಲಿ ಶಾತವಾಹನರ ಕಾಲದ ಇಟ್ಟಿಗೆಗಳು ಮತ್ತು ಪ್ರಾಚ್ಯಾವಶೇಷಗಳು

**ಜಯದೇವಪ್ಪ ಜೈನಕೇರಿ***

**ಈಸೂರಿನ ಗಜಪೃಷ್ಠಾಕಾರದ ದೇವಾಲಯ :** ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದಿಂದ ೧೦ ಕಿ.ಮೀ. ದಕ್ಷಿಣಕ್ಕೆ ಕುಮದ್ವತಿ ನದಿಯ ಬಲದಂಡೆಯ ಮೇಲಿರುವ ಗ್ರಾಮ ಐತಿಹಾಸಿಕ ಪ್ರಸಿದ್ಧ 'ಈಸೂರು' ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕನ್ನಡ ನಾಡಿಗೆ ಹೆಮ್ಮೆ ಮತ್ತು ಪ್ರಸಿದ್ಧಿ ಪಡೆದ ಗ್ರಾಮ. ದೇಶದ ಸ್ವಾತಂತ್ರ್ಯಕ್ಕಾಗಿ ೫ ಜನ ದೇಶಭಕ್ತರು ನೇಣಿಗೇರಿದರು ಮೂವರು ಸ್ತ್ರೀಯರೂ ಸೆರೆಮನೆವಾಸ ಅನುಭವಿಸಿದ ಇತಿಹಾಸ ಪ್ರಸಿದ್ಧ ಊರು ಈಸೂರು. ಐತಿಹಾಸಿಕವಾಗಿಯೂ ಈಸೂರು ಪ್ರಸಿದ್ಧವಾಗಿದ್ದು, ಈ ಮಾತಿಗೆ ಸಾಕ್ಷಿಯಾಗಿ ಗ್ರಾಮದಲ್ಲಿ ಶಾಸನ ಶಿಲ್ಪಗಳು, ವೀರಗಲ್ಲುಗಳು, ಮಹಾಸತಿ ಶಿಲ್ಪಗಳು ಮತ್ತು ಪ್ರಾಚೀನ ಸ್ಮಾರಕಗಳ ಪಳೆಯುಳಿಕೆಗಳು ಕಂಡು ಬರುತ್ತಿವೆ. ಗ್ರಾಮದಲ್ಲಿರುವ ವೀರಭದ್ರ ದೇವಾಲಯ ಕಲ್ಯಾಣ ಚಾಳುಕ್ಯರ ಕಾಲದ ಅತ್ಯಂತ ಕಲಾತ್ಮಕ ೪ ಸ್ಥಂಭಗಳಿಂದ ಕೂಡಿದೆ. ಬಾಗಿಲುವಾಡ ಮತ್ತು ಭುವನೇಶ್ವರಿ ಯಲ್ಲಿ ನವಗ್ರಹ ಶಿಲ್ಪಕೆತ್ತನೆ ಸುಂದರವಾಗಿದೆ. ಈಗ ರೂಪಾಂತರಗೊಂಡಿರುವ ಈ ದೇವಾಲಯದ ಗರ್ಭಗುಡಿಯಲ್ಲಿರುವ ಶಿವಲಿಂಗದ ಪೀಠದ ಮೇಲೆ ವೀರಭದ್ರ ಮತ್ತು ಕಾಳೀ ವಿಗ್ರಹಗಳನ್ನು ಸ್ಥಾಪಿಸಿ ಪೂಜಿಸಲಾಗುತ್ತಿದೆ. ಗ್ರಾಮಸ್ಥರು ಕೆಲವು ಸ್ಮಾರಕಗಳನ್ನು ಸಂರಕ್ಷಿಸಿ ಪೂಜಿಸುತ್ತಿದ್ದಾರೆ. ಇನ್ನೂ ಹತ್ತಾರು ಶಾಸನಗಳು ಗ್ರಾಮದಲ್ಲಿದ್ದ ಕೋಟೆಯ ಸುತ್ತ ಅನಾಥವಾಗಿ ಬಿದ್ದಿವೆ. ಹೊಗಳಲ್ಲಿ ನದಿ ದಂಡೆಯಲ್ಲಿ ಸಹ ಶಾಸನಗಳಿವೆ. ಪ್ರಾಚೀನ ಮಡಕೆಗಳು ನದಿದಂಡೆಯ ಹೊಲಗಳಲ್ಲಿ ದೊರಕಿವೆ. ಹಲವಾರು ಶಾಸನಗಳು ಈಗಾಗಲೇ ಬಿ.ಎಲ್. ರೈಸ್ ಅವರಿಂದ ಮತ್ತು ಇತರ ವಿದ್ವಾಂಸರಿಂದ ಬೆಳಕಿಗೆ ಬಂದಿವೆ. ೧೨ನೇ ಶತಮಾನದ ಶರಣೆ ಆಯ್ದಕ್ಕಿ ಲಕ್ಕಮ್ಮನ ಸಮಾಧಿ ಎಂದು ಸ್ಥಳೀಯ ಜಯಪ್ಪನವರು ಹೇಳುವ ಸ್ಮಾರಕ ಈಗ ಹಾಳಾಗಿದ್ದು ಶಿವಲಿಂಗ ಬಸವಣ್ಣ ಮೂರ್ತಿಗಳು ಬಯಲಿನಲ್ಲಿ ಅನಾಥವಾಗಿ ಬಿದ್ದಿವೆ.

'ಈಸವೂರು' (ಈಸೂರು) ಎಂಬ ಉಲ್ಲೇಖವಿರುವ ನಾಣ್ಯವನ್ನು ಶ್ರೀ ನಿತ್ಯಾನಂದ ಪೈ ಗುರುತಿಸಿದ್ದಾರೆ. ಗ್ರಾಮದಲ್ಲಿರುವ ರಾಮೇಶ್ವರ ದೇವಾಲಯದ ಅಧಿಷ್ಠಾನ ಗಜ ಪೃಷ್ಠಾಕೃತಿಯಲ್ಲಿದ್ದು ಹೊಯ್ಸಳ ವಾಸ್ತು ಶೈಲಿಯಲ್ಲಿದೆ. ಮೇಲಿನ ದೇವಾಲಯ ಪೂರ್ಣ ನಾಶವಾಗಿದೆ. ಸುಮಾರು ೮–೯ನೇ ಶತಮಾನದ ಶಿವಲಿಂಗದ ಪೀಠವಿದೆ. ಗಣಪತಿ, ಶಿವ, ವಿಷ್ಣು, ಅನಂತ ಶಯನ ವಿಗ್ರಹಗಳು ಭಗ್ನಗೊಂಡಿವೆ. ಇನ್ನೂ ಹಲವಾರು ದೇವಾಲಯದ ಭಾಗಗಳು ಅಲ್ಲಲ್ಲಿ ಅನಾಥವಾಗಿವೆ. ಇತ್ತೀಚೆಗೆ ಗ್ರಾಮಸ್ಥರು ಈ ಅಧಿಷ್ಠಾನದ ಮೇಲೆ ದೇವಾಲಯ ನಿರ್ಮಿಸಲು ಗುಂಡಿ ತೆಗೆಯುವಾಗ ದೊಡ್ಡ ಅಳತೆಯ ೨೨ x ೧೧ x ೩ ೧/೨ ದಪ್ಪದ ಸುಟ್ಟ ಇಟ್ಟಿಗೆ ಅಧಿಷ್ಠಾನ ದೊರಕಿರುವುದು ಬೆಳಕಿಗೆ ಬಂದಿದೆ. ಈ ಇಟ್ಟಿಗೆಗಳು ಶಾತವಾಹನ ಕಾಲಕ್ಕೆ ಅಂದರೆ ಕ್ರಿ.ಶ. ೨ನೇ ಶತಮಾನಕ್ಕೆ ಸೇರಿವೆ. ಇದೇ ಮಾದರಿಯ ಇಟ್ಟಿಗೆ ಕಟ್ಟಡಗಳು ಬಳ್ಳಿಗಾವಿ, ತಾಳಗುಂದ, ಹರಿಷಿ, ಬನವಾಸಿ ಮುಂತಾದ ಕಡೆ ದೊರೆತಿವೆ.

ಇತ್ತೀಚೆಗೆ ಸ್ಥಳೀಯರು ಈ ದೇವಾಲಯಕ್ಕೆ ಜೀರ್ಣೋದ್ಧಾರ ಮಾಡಬೇಕೆಂದು ಒಂದು ನಕಾಶೆಯನ್ನು ತಯಾರಿಸಿ ಅದರ ಪ್ರಕಾರ ಕಾರ್ಯವನ್ನು ಆರಂಭಿಸಿದರು. ದೊಡ್ಡ ದೊಡ್ಡ ಕಾಂಕ್ರೀಟು ಕಂಬಗಳನ್ನು ಇಡಲು ಗುಂಡಿಗಳನ್ನು ತೋಡಿದಾಗ ಈ ಶಿಲಾ ದೇವಾಲಯದ ಸುಮಾರು ಒಂದು ಮೀಟರ್ ಕೆಳಗೆ ಇಟ್ಟಿಗೆ ಕಟ್ಟಡವೊಂದು ಗೋಚರಿಸಿತು. ಕಂಭಗಳಿಗೋಸ್ಕರ ತೆಗೆದ ಗುಂಡಿಗಳಲೆಲ್ಲ ಇಟ್ಟಿಗೆ ಗೋಡೆ ಕಾಣಿಸಿತು. ಈ ರೀತಿ ಕಾಣಿಸಿಕೊಂಡ ಇಟ್ಟಿಗೆ ಗೋಡೆ ಬಗ್ಗೆ ವಿಜಯ ಕರ್ನಾಟಕ ದಿನ ಪತ್ರಿಕೆಯಲ್ಲಿ ಸಣ್ಣ ವರದಿ ಪ್ರಕಟವಾಯಿತು. ಇದನ್ನು ಗಮನಿಸಿ ದಿನಾಂಕ ೧೪–೦೮–೨೦೧೧ ರಂದು ಡಾ. ಅ. ಸುಂದರ, ಪ್ರಾಧ್ಯಾಪಕರು (ನಿವೃತ್ತ) ಮತ್ತು ಪುರಾತತ್ತ್ವಜ್ಞ, ಶ್ರೀ ಜಯದೇವಪ್ಪ ಜೈನಕೇರಿ, ಶಿವಮೊಗ್ಗ ಸೇರಿ ಈ ಸ್ಥಳ ಪರಿಶೀಲಿಸಿದರು. ಈ ಪರಿಶೀಲನೆಯಲ್ಲಿ ಆ ಇಟ್ಟಿಗೆ ಕಟ್ಟಡವು ಒಂದು ದೊಡ್ಡ ಗಜಪೃಷ್ಠಾಕಾರದ ದೇವಾಲಯವಾಗಿ

* # ೮೭, 'ಶಾಂತಲಾ' ಕುವೆಂಪು ರಸ್ತೆ, ಶಿವಮೊಗ್ಗ–೫೭೭೨೦೧.



ಗಜಪೃಷ್ಠಾಕಾರದ ರಾಮೇಶ್ವರ ದೇವಾಲಯದ ಅಡಿಪಾಯ, ಹೊಯ್ಸಳ ವಾಸ್ತು ಶೈಲಿಯ ಶಿಲಾ ದೇಗುಲ
ಜಲಹರಿ ಇದರ ಕೆಳಗೆ ಶಾತವಾಹನರ ಕಾಲದ ಇಟ್ಟಿಗೆ ಅಡಿಪಾಯವಿದೆ.

ಕಾಣಿಸುತ್ತದೆ ಇದರಿಂದ ಸುಮಾರು ಒಂದು ಮೀಟರ್ ಮೇಲೆ ಇದ್ದ ರಾಮೇಶ್ವರ ದೇವಾಲಯ ಗಜಪೃಷ್ಠಾಕಾರದದಲ್ಲಿದೆ. ಈ ದೇವಾಲಯ ಹೊಯ್ಸಳ ಕಾಲದ್ದಾಗಿದ್ದು ತುಂಬಾ ದುಸ್ಥಿತಿಯಲ್ಲಿದೆ. ಕೇವಲ ಇದರ ಅಧಿಷ್ಠಾನದ ಕೆಲವು ಭಾಗಗಳು ಅಲ್ಲಲ್ಲಿ ಇದೆ.

ಈ ಇಟ್ಟಿಗೆ ಕಟ್ಟಡವನ್ನು ಕೂಲಂಕಷವಾಗಿ ಪರಿಶೀಲಿಸಿದಾಗ ಇಟ್ಟಿಗೆಗಳ ಅಳತೆ ಮತ್ತು ಮಾಡಿದ ತಂತ್ರವನ್ನು ನೋಡಿದಾಗ ಈ ಕಟ್ಟಡವು ಶಾತವಾಹನರ ಕಾಲದ್ದು ಎಂದು ಖಚಿತವಾಯಿತು. ಈ ದೇವಾಲಯ ಕಾಲ ಕ್ರಮೇಣ ದುಸ್ಥಿತಿಗೆ ಬಂದಿದೆ. ಅದೇ ವಿನ್ಯಾಸದಲ್ಲಿ ಹೊಯ್ಸಳರ ಕಾಲದಲ್ಲಿ ಶಿಲಾ ದೇವಾಲಯವನ್ನು ನಿರ್ಮಿಸಲಾಗಿದೆ. ಅಂದರೆ ಈಗಿರುವ ರಾಮೇಶ್ವರ ದೇವಾಲಯ ಸುಮಾರು ಮೂಲದಲ್ಲಿ ೨೦೦೦ ವರ್ಷ ಪ್ರಾಚೀನ ದೇವಾಲಯ, ಜೀರ್ಣೋದ್ಧಾರ ಹೊಂದುತ್ತಾ ಇವತ್ತಿಗೂ ಉಳಿದುಕೊಂಡಿರುವುದು ಇತಿಹಾಸದ ಮಹತ್ವದ ಸಂಗತಿ. ಈ ಸ್ಥಳವು ಹೊಯ್ಸಳ ದೊರೆ ವಿಷ್ಣುವರ್ಧನ ಪಟ್ಟದ ರಾಣಿ ಶಾಂತಲೆಯ ಹುಟ್ಟೂರು ಆಗಿದ್ದಂತೆ ತೋರುತ್ತದೆ. ಇಲ್ಲಿಯ ಸನಿಹದ ಬಳ್ಳಿಗಾವೆಯಲ್ಲಿ ಆಕೆಯ ವಿದ್ಯಾಭ್ಯಾಸ ಆಗಿದೆ. ಆಕೆಯು ತನ್ನ ಹುಟ್ಟೂರಿನ ಹೆಸರನ್ನೊಳಗೊಂಡ 'ಈಸಪುರ' ನಾಣ್ಯವನ್ನು ಹೊರಡಿಸಿ ದ್ದಾಳೆ. ಅಲ್ಲದೇ ಬಾದಾಮಿ ಚಾಲುಕ್ಯರ ಕಾಲದ ಶಾಸನವೊಂದರ ಶಾಪಾಶಯ ಭಾಗದಲ್ಲಿ ಸಾಗರ ತಾಲೂಕಿನ ಗೌಜ, ಶಿಕಾರಿಪುರ ತಾಲೂಕಿನ ಬಂದಳಿಕೆ ಮತ್ತು ಈಸವೂರು ಮತ್ತು ಪ್ರಾಯಶಃ ಬಾದಾಮಿಯನ್ನು ಹೆಸರಿಸಿದೆ. ಈ ವಿವರಗಳು ಈಸೂರಿಗೆ ಇರುವ ಪ್ರಾಮುಖ್ಯತೆಯನ್ನು ಮನದಟ್ಟು ಮಾಡಿಕೊಡುತ್ತವೆ. ಅಲ್ಲದೆ ಐತಿಹಾಸಿಕವಾಗಿ ಮಹತ್ವ ಪಡೆದಿತ್ತೆಂದು ತೋರುತ್ತದೆ.

ಅಷ್ಟೇ ಪ್ರಾಚೀನ ದೇವಾಲಯ ನಿರ್ಮಾಣದಲ್ಲಿ ಇದು ಒಂದು ವಿನ್ಯಾಸದ ಪ್ರಕಾರ. ಮೌರ್ಯ ಚಕ್ರವರ್ತಿ ಅಶೋಕನ ಕಾಲದಿಂದ ಈ ವಿನ್ಯಾಸದಲ್ಲಿ ಬೌದ್ಧಗುಹಾಲಯಗಳು ರಚನೆಯಾಗುತ್ತಾ ಬಂದಿವೆ. ಅದರಂತೆ ಕೊನೆಯ ಪಕ್ಷ ಎರಡನೆಯ ಶತಮಾನದಲ್ಲಿ ಈ ಭಾಗದಲ್ಲಿ ಅಲ್ಲಲ್ಲಿ ಈ ವಿನ್ಯಾಸದ ದೇವಾಲಯಗಳು ಉತ್ಖನನದಲ್ಲಿ ಕಂಡುಬಂದಿವೆ. ಉದಾಹರಣೆಗೆ ಮಥುರಾ, ನಾಗಾರ್ಜುನಕೊಂಡ, ಬನವಾಸಿ ಇತ್ತೀಚೆಗೆ ರಾಜಘಟ್ಟ. ಎಂಟನೆಯ ಶತಮಾನದ ನಂತರ ಶಿಲಾ ದೇವಾಲಯಗಳಾಗಲೀ ಇಟ್ಟಿಗೆ ದೇವಾಲಯಗಳಾಗಲೀ ಈ ವಿನ್ಯಾಸದಲ್ಲಿ ಇರುವುದು ನಮಗೆ ತಿಳಿದ ಮಟ್ಟಿಗೆ ಕಂಡುಬಂದಿಲ್ಲ. ಆದರೆ ಇದಕ್ಕೆ ಕರಾವಳಿ ಪ್ರದೇಶ ಅಪವಾದ



ಶಾತವಾಹನರ ಕಾಲದ ಇಟ್ಟಿಗೆ ಅಡಿಪಾಯ

ವಾಗಿದೆ. ಗೋಕರ್ಣದಲ್ಲಿ ಪರಶುರಾಮೇಶ್ವರ ದೇವಾಲಯ, ಹಿರೇಗುತ್ತಿಯಲ್ಲಿ ಸುಮಾರು ೧೦–೧೧ನೆಯ ಶತಮಾನದ ಈ ವಿನ್ಯಾಸದ ದೇವಾಲಯಗಳಿವೆ. ಇಲ್ಲಿಂದ ಕೇರಳದ ತಿರುವನಂತಪುರದವರೆಗೆ ಬಹಳಷ್ಟು ಶಿಲಾ ದೇವಾಲಯಗಳು ಈ ವಿನ್ಯಾಸದಲ್ಲಿರುವುದು ಕುತೂಹಲಕಾರಿಯಾಗಿದೆ.

ಕರ್ನಾಟಕದಲ್ಲಿ ಬೃಹತ್ ಶಿಲಾಯುಗದ ಕಾಲ ದಿಂದಲೂ ಗಜಪೃಷ್ಠಾಕಾರದ ಕಟ್ಟಡಗಳು ನಿರ್ಮಾಣವಾಗು ತ್ತಿರುವುದನ್ನು ಎಚ್.ಎಸ್. ಗೋಪಾಲರಾಯರು ಗುರುತಿಸಿದ್ದಾರೆ. ದೇವಾಲಯಗಳ ಅಧಿಷ್ಠಾನದ ವಿನ್ಯಾಸವನ್ನು ಆಧರಿಸಿ ನಾಲ್ಕು ವಿಧಗಳು ಕಂಡುಬರುತ್ತವೆ ಅವುಗಳನ್ನು ೧. ಚಚ್ಚೌಕ, ೨. ಆಯತ, ೩. ವೃತ್ತ ಮತ್ತು ೪. ಗಜಪೃಷ್ಠಗಳೆಂದು ಗುರುತಿಸಲಾಗಿದೆ. ಐಹೊಳೆಯಲ್ಲಿ ಕ್ರಿ.ಶ. ೧೮೬೬ರಲ್ಲಿ ಬೆಳಕಿಗೆ ಬಂದ ದುರ್ಗಾ ದೇವಾಲಯದ ಹಿನ್ನೆಲೆಯಲ್ಲಿ ಕೆ.ಆರ್. ಶ್ರೀನಿವಾಸನ್ ಅವರು ಗಜಪೃಷ್ಠಾಕಾರದ ದೇವಾಲಯಗಳ ಮೂಲವನ್ನು ಚರ್ಚಿಸಿದ್ದಾರೆ. ಪಾಶ್ಚಾತ್ಯ ವಿದ್ವಾಂಸರು ಇದರ ಮೂಲವನ್ನು ಬೌದ್ಧರ ಚೈತ್ಯಗಳಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ ಬನವಾಸಿ ಸಮೀಪ ನಡೆದ ಉತ್ಖನನದಲ್ಲಿ ಗಜಪೃಷ್ಠಾಕಾರದ ಕಟ್ಟಡದ ಅವಶೇಷಗಳನ್ನು ಕೇಂದ್ರ ಪುರಾತತ್ವ ಇಲಾಖೆ ಪತ್ತೆ ಮಾಡಿದೆ. ಚಿತ್ರದುರ್ಗ ಸಮೀಪ ಚಂದ್ರವಳ್ಳಿಯ ಉತ್ಖನನದಲ್ಲಿಯೂ ಗಜಪೃಷ್ಠಾಕಾರದ ಅವಶೇಷಗಳು ಪತ್ತೆಯಾಗಿವೆ. ಇವುಗಳು ಸಹ ಬೌದ್ಧ ಅಥವಾ ಶಿವ ದೇವಾಲಯಗಳಾಗಿರಬಹುದೆಂದು ಊಹಿಸಲಾಗಿದೆ. ಬೆಳಗಾವಿ ಸಮೀಪದ ವಡಗಾವ್ ಮಾಧವಪುರದಲ್ಲಿ ಸಹ ಇಂತಹುದೇ ನಿವೇಶನ ಪತ್ತೆಯಾಗಿದೆ. ಬೃಹತ್ ಶಿಲಾಯುಗದ ಕೆಲವು ಸಮಾಧಿಗಳು ಚೈತ್ಯವನ್ನು ಹೋಲುತ್ತವೆ. ಬನವಾಸಿ ಸಮೀಪ ಗುಡ್ನಾಪುರದಲ್ಲಿ ಮತ್ತು ರಾಜಘಟ್ಟದಲ್ಲಿ ನಡೆದ ಉತ್ಖನನದಲ್ಲಿ ಶಾತವಾಹನರ ಕಾಲದ ಚೈತ್ಯಾಲಯವೊಂದು ಬೆಳಕಿಗೆ ಬಂದಿವೆ. ಸುಟ್ಟ ಇಟ್ಟಿಗೆಗಳಿಂದ ಕ್ರಿ.ಶ. ಸು. ೪ ರಿಂದ ೬ನೇ ಶತಮಾನದಲ್ಲಿ ಶಾತವಾಹನರ, ಕದಂಬರ ಮತ್ತು ದಕ್ಷಿಣದಲ್ಲಿ ಗಂಗರ ಆಳ್ವಿಕೆಯಿದ್ದ ಸಂದರ್ಭದಲ್ಲಿ ಬನವಾಸಿ ಮತ್ತು ರಾಜಘಟ್ಟಗಳಲ್ಲಿ ಗಜಪೃಷ್ಠಾಕಾರದ ಚೈತ್ಯಾಲಯಗಳು ನಿರ್ಮಾಣವಾಗಿವೆ.

ಐಹೊಳೆಯ ದುರ್ಗಾ ದೇವಾಲಯ ಅತ್ಯಂತ ಪ್ರಾಚೀನ ಸಂರಕ್ಷಿತ ದೇವಾಲಯವಾಗಿ ಇಂದಿಗೂ ಮಾದರಿಯಾಗಿದೆ ಸಮೂಪದ ಮಹಾಕೂಟದಲ್ಲಿಯೂ ಕ್ರಿ.ಶ. ೫ನೇ ಶತಮಾನಕ್ಕೆ ಸೇರಿದ ಗಜಪೃಷ್ಠಾಕಾರದ ಗರ್ಭಗೃಹವಿರುವ ಶಿವ ದೇವಾಲಯವಿದೆ. ಪಶ್ಚಿಮ ಕರಾವಳಿ ಭಾಗದಲ್ಲಿ ಸುಮಾರು ೭ ರಿಂದ ೧೧ನೇ ಶತಮಾನದವರೆಗೆ ನಿರ್ಮಾಣವಾಗಿರುವ ಸುಮಾರು ೨೦ ಗಜಪೃಷ್ಠಾಕಾರದ ದೇವಾಲಯಗಳನ್ನು ಪಿ. ಗುರುರಾಜ ಭಟ್ಟರು ಗುರುತಿಸಿದ್ದಾರೆ ಉಡುಪಿ ಶ್ರೀ ಕೃಷ್ಣ ಮಠದ ಸಮೀಪ ಇರುವ ಅನಂತೇಶ್ವರ ದೇವಾಲಯ ಗಜಪೃಷ್ಠಾಕಾರದ ದೇವಾಲಯದ ಉತ್ತಮ ಮಾದರಿಯಾಗಿದೆ. ಬಹುತೇಕ ಎಲ್ಲ ಗಜಪೃಷ್ಠಾಕಾರದ ಗರ್ಭಗೃಹಗಳಿರುವ ದೇವಾಲಯಗಳೂ ಶಿವ ಶಕ್ತಿಯರ ದೇವಾಲಯಗಳೇ ಆಗಿರುವುದು ವಿಶೇಷ. ೧೧ನೇ ಶತಮಾನದ ನಂತರ ಹೊಯ್ಸಳ ವಾಸ್ತು ವಿನ್ಯಾಸಕಾರರು ಪ್ರಯೋಗಗಳ ಮೂಲಕ ಗಜಪೃಷ್ಠಾಕಾರದ ಗರ್ಭಗೃಹ ವಿನ್ಯಾಸವು ನಕ್ಷತ್ರಕಾರಕ್ಕೆ ತಿರುಗಿ ರುವ ಸಾಧ್ಯತೆಗಳನ್ನು ಡಾ. ಎಚ್.ಎಸ್. ಗೋಪಾಲರಾವ್ ಗುರುತಿಸಿದ್ದಾರೆ.

## ಆಧಾರಸೂಚಿ

೧. **ಗುಣಮಧುರ**, (ಡಾ. ದೇವರಕೊಂಡಾರೆಡ್ಡಿ ಅಭಿನಂದನ ಗ್ರಂಥ), ಸಂ. ಡಾ. ಪಿ.ವಿ. ಕೃಷ್ಣಮೂರ್ತಿ ಮತ್ತು ಇತರರು, ಬೆಂಗಳೂರು, ೨೦೧೦.



# ಕಲಘಟಗಿ ಪ್ರದೇಶದ ಪುರಾತತ್ತ್ವ ಹಾಗೂ ಇತಿಹಾಸ

**ಡಾ. ಎಸ್.ಕೆ. ಜೋಶಿ***

ಎರಡೂವರೆ ಸಾವಿರ ದೀರ್ಘ ಇತಿಹಾಸ ಕರ್ನಾಟಕದ, ಒಂದು ಮಲೆನಾಡಿನ ಪ್ರದೇಶವಾದ ಕಲಘಟಗಿ ಪ್ರದೇಶವು, ಒಂದು ಸಾವಿರ ವರುಷಗಳ ಪ್ರಶಾಂತ ಹಾಗೂ ನಿವಾಂತ ಸಾಂಸ್ಕೃತಿಕ ಬದುಕನ್ನು ಬೆಳೆದು, ಇಡಿಯಾದ ಕರ್ನಾಟಕದ ಸಾಂಸ್ಕೃತಿಕ ಬದುಕಿನಲ್ಲಿ ಭಾಗಿಯಾಗಿದೆ.

ಕಲಘಟಗಿ ಪ್ರದೇಶದಲ್ಲಿ ಕ್ಷಾತ್ರ ತೇಜದಿ ಮೆರೆದ ವೀರಗಲ್ಲುಗಳಿವೆ, ಮಹಾಸತಿ ಕೈಗಳಿವೆ, ಮೃದ್‌ಕೋಟೆ, ದೇವಸ್ಥಾನ, ಬಸದಿಗಳಿವೆ, ಕಿವಿವೆತ್ತ ಕಿವುಡರಿಗೆ ಇತಿಹಾಸದ ಕೂಗನ್ನು ಹೇಳುವ ಶಿಲಾಶಾಸನಗಳಿವೆ, ಸಾರ್ವಜನಿಕ ಉಪಯೋಗದ ಪ್ರಾಚೀನ ಕೆರೆ ಬಾವಿ, ಪುಷ್ಕರಣಿಗಳಿವೆ. ಈ ರೀತಿಯ ಪ್ರಾದೇಸಿಕ ಕೊಡುಗೆಗಳಾದ ಈ ಶಿಲ್ಪದ ಸಂಪುಷ್ಪ ತಲ್ಪಗಳು ಹೇಗೆ ಅರಳಿವೆ ಎಂಬುದನ್ನು ನೋಡಲು ಪ್ರಯತ್ನಿಸಲಾಗಿದೆ.

ಈ ರೀತಿ ಮುಂದುವರೆಯುತ್ತ, ಕನ್ನಡ ಸಾಹಿತ್ಯಸಿರಿ ಹಾಗೂ ಕನ್ನಡ ಶಿಲ್ಪ ಸಂಪುಟಗಳೆರಡನ್ನೂ ಜೋಡಿಸಿ ನೋಡಿದಾಗ ಹಾಗೂ ಪ್ರಾಚೀನ ತಲಘಟಗಿ (ಕಲ್ಲುತುಟಿಕೆ)ಗಳ ಪ್ರದೇಶಗಳು ಸ್ಮರಣೀಯ ಕೊಡುಗೆ ನೀಡಿವೆ. ಕರ್ನಾಟಕದ ಸಂಸ್ಕೃತಿಯಾಗುವಲ್ಲಿ ಅನೇಕ ವಿವೇಕಗಳು ಈ ನಾಡಿನಲ್ಲಿ ಕೈ ಜೋಡಿಸಿವೆ. ಕನ್ನಡದ ಕೈಗಳು ಶಿಲ್ಪಗಳನ್ನು ಕೊರೆದರೆ, ಅದೇ ಕೈಗಳ ಬೆರಳುಗಳು ಲೆಕ್ಕಣಿಕೆ ಹಿಡಿದು ಸಾಹಿತ್ಯ ಬರೆದಿವೆ.

**ಕಲಘಟಗಿ ತಾಲೂಕಿನಲ್ಲಿ ಐತಿಹಾಸಿಕವಾಗಿ ಹರಡಿದ ತಾಣಗಳು:** ಕಲಘಟಗಿ, ತಂಬೂರು, ಕಂದಲಿ, ಕಾಮಧೇನು, ಮಿಶ್ರಕೋಟಿ, ಸಂಗಮೇಶ್ವರ, ನೀರಸಾಗರ, ಗಂಜೀಗಟ್ಟಿ.

ಇವುಗಳೆಲ್ಲ ಅಲ್ಪಸಂಖ್ಯೆಯಲ್ಲಿದ್ದರೂ, ಭಾವದ ಬೆಡಗನ್ನು ಕಲ್ಲಿನಲ್ಲಿ ಮೂಡಿಸಿವೆ. ಸತ್ತವರ ಕೃತಿಗಳಲ್ಲ ಅವು, ಎಚ್ಚತ್ತವರ ವಿಸ್ಮೃತಿಗಳು ಮೇಲಿನ ತಾಣಗಳು ಒಂದಿಲ್ಲೊಂದು ಐತಿಹಾಸಿಕ ಅಂಶಗಳಲ್ಲಿ ಕೋಟೆ, ಕೆರೆ, ದೇವಸ್ಥಾನ, ಶಿಲಾಲೇಖ, ಸ್ಥಳಮಹಾತ್ಮೆ ಇತ್ಯಾದಿ ಗಳಲ್ಲಿ ದಾಖಲೆಗೊಂಡಿವೆ. (ಕರ್ನಾಟಕ ರಾಜ್ಯ ಗ್ಯಾಝೆಟಿಯರ್, ಧಾರವಾಡ ಜಿಲ್ಲೆ, ಪರಿಷ್ಕೃತ ಆವೃತಿ, ಸಂ. ಸೂರ್ಯನಾಥ ಕಾಮತ, ೧೯೯೫).

ಇವುಗಳಲ್ಲದೆ ಕೆಳಗಿನವು ಕಂದಾಯ ಗ್ರಾಮಗಳ ಪಟ್ಟಿಕೆಯಲ್ಲಿ ದಾಖಲಿಸಲಾಗಿದೆ. ಕಲಘಟಗಿ ತಾಲೂಕು ಒಟ್ಟು ೮೨ ಗ್ರಾಮಗಳನ್ನೊಳಗೊಂಡಿದೆ. ಮಲಕನಕೊಪ್ಪ, ಹುಣಸಿಕಟ್ಟಿ, ಮಾಚಾಪುರ, ಮುಕ್ಕಲ, ಮುತ್ತಗಿ, ಹಲವದಾಳ, ಲಿಂಗನಕೊಪ್ಪ, ಸಿಂಗನಹಳ್ಳಿ, ಸಿದ್ಧನಭಾವಿ, ಶಿವನಾಪುರ, ಸಂಗದೇವರಕೊಪ್ಪ, ಸೂರಶೆಟ್ಟಿಕೊಪ್ಪ, ಸಂಗಟಿಕೊಪ್ಪ, ಸೂಳೆಕಟ್ಟೆ, ಸೋಮನಕೊಪ್ಪ, ಸೋಲಾರಗೊಪ್ಪ, ಹಟಕಿನಾಳ, ಹನುಮಾಪುರ, ಹಟಕಿನಾಳ, ಹಲತುಂಬಿ, ಹಾರೋಗೇರಿ, ಹಿಂಡಸಗೇರಿ, ಹುಲಗಿನಕೊಪ್ಪ,




ರಾಮನಾಳ, ಹರಲಾಪುರ ಹಾಗೂ ಬೀರವಳ್ಳಿ, ಬುದ್ರುಗ ಸೀಗಿಹಳ್ಳಿ, ಬೆಂಡಿಗೇರಿ ಬೇಗೂರು, ಧುಮ್ಮವಾಡ, ನಾಗನೂರ, ತಾವರಗೇರಿ, ತಬಕದ ಹೊನ್ನಳ್ಳಿ, ಜಮ್ಮಿಹಾಳ, ಜಿನ್ನೂರ, ದಿಂಬವಳ್ಳಿ, ಜುಂಜನಬೈಲು, ಚಳಮಟ್ಟಿ, ಬಸವನಕೊಪ್ಪ, ಗುಡ್ಡದ ಹುಲಿಕಟ್ಟಿ, ಗಂಟ್ಯಾಪುರ, ಗಂಜಿಗಟ್ಟಿ, ಗಂಗಿನಕಟ್ಟಿ,

** # ೩೦, ಸಿಲ್ವರ್ ಆರ್ಚರ್ಡ್, ಪುರಾತತ್ತ್ವವಿದ, ಧಾರವಾಡ-೫೮೦೦೦೧.

ಗಳಗಿ, ಖಾಲಸಾಹುಣಸಿಕಟ್ಟಿ, ಕಾಡನಕೊಪ್ಪ, ಅಸ್ತಕಟ್ಟಿ, ಕಂದ್ಲಿ, ಅರಳಿಹೊಂಡ ಹಾಗೂ ಅರೆಬಸವನ ಕೊಪ್ಪ.

ಈ ಮೇಲಣ ಎಲ್ಲ ತಾಣಗಳು ಇತಿಹಾಸ ನೀಡಿಲ್ಲ ವಾದರೂ, ಇಡೀ ಮಾನವನ ಬೆಳವಣಿಗೆಯ ಇತಿಹಾಸದಲ್ಲಿದ್ದು ಕೊಂಡು ಬದುಕಿಕೊಂಡು ಕಲಘಟಗಿ ನಾಡಿನ ಮೈಗಂಟಿ ಕೊಂಡಿವೆ. ಇವುಗಳಲ್ಲಿ ಎದ್ದು ಕಾಣುವ ಇತಿಹಾಸ ಚರಿತೆಯ ಎಂಟೊಂಬತ್ತು ತಾಣಗಳನ್ನು ಈ ಕೆಳಗೆ ಸಮೀಕ್ಷಿಸುವಾ:

**ಕಲಘಟಗಿ :** ತಾಲ್ಲೂಕಾ ಕೇಂದ್ರ ಧಾರವಾಡ ಜಿಲ್ಲೆಯಲ್ಲಿ ಅಕ್ಕಿಯ ಕಣಜವಿದು. ಕಲಘಟಗಿ ಅಕ್ಕಿ ಎಂದೇ ಪ್ರಸಿದ್ಧ. ಮಲೆನಾಡಿನಲ್ಲಿಬರುವ ಇದು ಮಳೆಗಾಲದಲ್ಲಿ ಸುತ್ತೆಲ್ಲ ಹಸಿರು, ಕೆರೆಬಾವಿಗಳ ತವರು ಶಾಸನೋಕ್ತ 'ಕಲ್ಲುಕುಟಿಕೆ' ಎಂಬ ಹೆಸರು ಇದಕ್ಕೆ. ಐದು ತ್ರುಟಿತ ಶಾಸನಗಳು ಲಭ್ಯ. ೬ನೆಯ ಕಲ್ಯಾಣ ವಿಕ್ರಮಾದಿತ್ಯನ (ಕ್ರಿ.ಶ. ೧೦೮೦) ಆಳ್ವಿಕೆಯಲ್ಲಿಯ ಮಹಾಮಂಡಳೇಶ್ವರ ಗುವಲದೇವನು ಆಳುತ್ತಿದ್ದ ಉಣಕಲ್ಲು-೩೦ ಹಾಗೂ ಸಬ್ಬೆ-೩೦ ಮಂಡಲಗಳೂ ಸಬ್ಬೆಯ ಭಾಗವು ಕಲಘಟಗಿ ಆಗಿತ್ತು. ಬ್ರಾಹ್ಮಣರಿಗೆ ಹಾಗೂ ಜೈನರಿಗೆ ದಾನ ನೀಡಿದ ಶಾಸನಗಳು, ಕೆಲವು ಚೆಲ್ಲುವರಿದ ಮೂರ್ತಿಶಿಲ್ಪಗಳು, ಎರಡು ಜೈನಬಸ್ತಿಗಲ್ಲಿ ೧೧-೧೨ ಶತಮಾನದ ಜೈನ ತೀರ್ಥಂಕರ ಸುಂದರ ಮೂರ್ತಿಗಳು, ಇವುಗಳ ಜೊತೆಗೆ ಹನುಮಂತ, ಗ್ರಾಮದೇವತೆ, ಕಾಳಮ್ಮ ದ್ಯಾಮವ್ವನ ಬಸವಣ್ಣನ ಇತ್ತೀಚಿನ ಗುಡಿಗಳಿವೆ. ದ್ಯಾಮವ್ವ ಜಾತ್ರೆ ಪ್ರಸಿದ್ಧ, ರುಸ್ತುಮ್ ಸಾಹೇಬನ ದರ್ಗಾ, ನೈಋತ್ಯಕ್ಕೆ ಹೊರವಲಯದಲ್ಲಿ 'ಸಾತ್ ಶಹೀದ್' ಎಂಬ ಏಳು ಸೂಫಿಗಳ ಹುತಾತ್ಮರ ಸಮಾಧಿಗಳಿವೆ. ಬಿಜಾಪುರದ ಹಾಸಿಮ್ ಪೀರ್‌ನ ಅನಯಾಯಿಗಳಿವರು. ಬಿಜಾಪುರದ ಆದಿಲ್‌ಶಹನಿಂದ ಸನದು ಪಡೆದುಕೊಂಡ ಜಮೀನಲ್ಲಿ ಕಾಡು ಕಡಿದು ನೆಲೆ ನಿಲ್ಲುವ ಪ್ರಯತ್ನದಲ್ಲಿ ವಿರೋಧವಾಗಿ ಹುತಾತ್ಮರಾದರು (ಕ್ರಿ.ಶ. ೧೬೫೫). ಕಲಘಟಿಯ ಬಣ್ಣದ ತೊಟ್ಟಿಲುಗಳು, ಗಡಿಗೆ ಮಡಿಕೆಗಳು ಪ್ರಸಿದ್ಧ.

**ತಂಬೂರು :** ಕಲಘಟಗಿಯಿಂದ ದಕ್ಷಿಣಕ್ಕೆ ೧೧ ಕಿ.ಮೀ. ದೂರ. ಶಾಸನೋಕ್ತವಾಗಿ 'ತಮ್ಮಿಯೂರ', 'ತಾಂಬ್ರಪುರ', 'ತಮ್ಮ ಊರು' ಕರೆದುಕೊಂಡು ರಾಷ್ಟ್ರಕೂಟರ ಕಾಲದಷ್ಟು ಪುರಾತನ. ಹಲಸಿ-೧೨೦೦೦ಗೆ ಸೇರಿದ ತಮ್ಮಿಯೂರು-೧೨ರ ಆಡಳಿತ ಕೇಂದ್ರ. ರಾಷ್ಟ್ರಕೂಟರ ೪ನೆಯ ಗೋವಿಂದನ (ಕ್ರಿ.ಶ. ೯೩೨) ಶಾಸನವು ಊರುಳವಿಗಾಗಿ ಹೋರಾಟದ ಅಣ್ಣಿಗನ ಬಗ್ಗೆಯೂ ಹಾಗೂ ಇಲ್ಲಿ ೧೦೦೦ ಮಹಾಜನರ ನ್ನೊಳಗೊಂಡ ಆಗ್ರಹಾರದ ಬಗ್ಗೆಯೂ ಹೇಳುತ್ತದೆ. ಕ್ರಿ.ಶ. ೧೧೨೦ರ ಮತ್ತೊಂದು ಶಾಸನವು ಕದಂಬ ಗುವಲದೇವ ನಾಳುತ್ತಿರುವಾಗ ಸೇನಿಗಾವುಂಡ ಫಣಿರಾಜನು ದೇವಾಲಯ ವೊಂದನ್ನು ಕಟ್ಟಿಸಿದ ಬಗ್ಗೆಯೂ, ಜಯದೇವನೆಂಬ ಪ್ರಮುಖನಿಂದ ವಿಷ್ಣುದೇವಾಲಯ ಕಟ್ಟಿಸಿ ಭೂದಾನ ಮಾಡಿದ ವಿಷಯ ತಿಳಿಸುತ್ತದೆ. ಕ್ರಿ.ಶ. ೧೧೨೫ರಲ್ಲಿ ಬರ್ಮಚಯ್ಯ ನಾಯ್ಕ ಹಾಗೂ ರಾಜಮಲ್ಲನಾಯ್ಕರು ಜಿನದೇವಾಲಯ ಕಟ್ಟಿಸಿದ ಬಗ್ಗೆ, ಭೂದಾನದ ಬಗ್ಗೆ ಹೇಳುತ್ತದೆ ಇನ್ನೊಮದು ಶಾಸನ. ಊರಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ಬಸವಣ್ಣ (ಈಶ್ವರ) ದೇವಾಲಯವಿದೆ, ಇದನ್ನು ಭಾರತೀಯ ಪುರಾತತ್ವ ಇಲಾಖೆ ರಕ್ಷಿಸುತ್ತಿದೆ. ಶ್ರೀ ಕಲ್ಮೇಶ್ವರ ದೇವಾಲಯವೂ ಜೀರ್ಣೋದ್ಧಾರಗೊಂಡಿದೆ. ಊರ ಹೊರಗೆ ಗುಡ್ಡದ ಮೇಲೆ 'ಉತ್ತರ ಕುಮಾರ'ನ ಗುಡಿ ನವರಂಗ, ಅಂತರಾಳ, ಗರ್ಭಗೃಹ ಗಳಿಂದೊಡಗೂಡಿದ್ದು, ಕದಂಬನಾಗರ ಶೈಲಿಯ ಶಿಖರ ಹೊಂದಿದೆ. ಹಲವಾರು ವೀರಗಲ್ಲುಗಳು ಮಾಸ್ತಿಕಲ್ಲುಗಳು ಇರುವದರಿಂದ ೧೨ನೇ ಶತಮಾನದಲ್ಲಿ ದೊಡ್ಡ ಕಾಳಗವೊಂದು ಜರುಗಿರಲು ಸಾಕು. ಊರಿನ ಸುತ್ತ ಕೋಟೆಯಿದ್ದ ಅವಶೇಷಗಳು ಮಾತ್ರ ಉಳಿದಿವೆ. ಮಸೀದಿ ಹಾಗೂ ದರ್ಗಾಗಳೂ ಇಲ್ಲಿವೆ. ಐತಿಹಾಸಿಕವಾಗಿ ಇದು ಈ ಭಾಗದಲ್ಲಿಯ ಅತ್ಯಂತ ಚಟುವಟಿಕೆಯ ತಾಣವಾಗಿತ್ತೆಂದು ತಿಳಿಯುತ್ತದೆ.

**ಕಂದಲಿ :** ಕಲಘಟಗಿಯಿಂದ ನೈಋತ್ಯಕ್ಕೆ ೫ ಕಿ.ಮೀ. ದೂರದಲ್ಲಿರುವ ಪುಟ್ಟಗ್ರಾಮ. ಕಲ್ಯಾಣ ಚಾಲುಕ್ಯರ ಎರಡು ಶಾಸನಗಳಿವೆ. ಅವುಗಳಲ್ಲಿ ಗೋವೆ ಕದಂಬ ಅರಸ ಇಮ್ಮಡಿ ಚಟ್ಟಿದೇವನ ಕ್ರಿ.ಶ. ೧೦೫೦ ಶಾಸನವು ಬಾದುಬ್ಬೆ (ಬನಶಂಕರಿ) ವಿಗ್ರಹ ಸ್ಥಾಪನೆ ಮಾಡಿದ ವಿವರ ತಿಳಿಸುತ್ತದೆ. ಎರಡನೆಯ ಶಾಸನವು ಕ್ರಿ.ಶ. ೧೧೫೨ರದಿದ್ದು, ಅಜ್ಜಿಗಾವೆಯ ತೈಲಜ ಸಾಮಂತನು ಕಿರುವತ್ತಿಯನ್ನು ಮುತ್ತಿದಾಗ ಅಹವಮಲ್ಲಯ್ಯ ನಾಯಕನು ಹೋರಾಡುತ್ತ ಮಡಿದ ವಿಷಯವನ್ನು ಸೂಚಿಸುತ್ತದೆ. ಈ ತಾಣವು ತ್ಯಾಗ ಬಲಿದಾನದ ನೆನಪನ್ನು ನೀಡುತ್ತದೆ.

**ಕಾಮಧೇನು :** ಇದೂ ಕಲಘಟಗಿಯಿಂದ ಈಶಾನ್ಯಕ್ಕೆ ೧೦ ಕಿ.ಮೀ. ದೂರದಲ್ಲಿದೆ. ಪ್ರಾಚೀನ ಶಾಸನಗಳಲ್ಲಿ 'ಸಾಸಲು' ಎಂದೇ ಕರೆಯಲ್ಪಟ್ಟಿದ್ದು ಕಾಮಧೇನು ಎಂಬ ಹೆಸರು ಹೇಗೆ ಬಂತು ? ಇದರ ಬಗ್ಗೆ ದಾಖಲೆಗಳೇನೂ ಇಲ್ಲ. ಈ ಊರ ದಕ್ಷಿಣಕ್ಕಿರುವ ಶ್ರೀ ಕಲ್ಲೇಶ್ವರ ದೇವಸ್ಥಾನದಲ್ಲಿ ೩ ಶಿಲಾಶಾಸನಗಳು ಲಭ್ಯವಾಗಿವೆ. ೨ನೇ ಸೋಮೇಶ್ವರ (ಕ್ರಿ.ಶ. ೧೧೪೯) ಶಾಸನವು ಹಲಸನಾಡಿನ ಶಾಸನವೆಂದು ದಾಖಲಿಸಿ, ಸಾಸಲು ಗ್ರಾಮದ ಸೌಂದರ್ಯೀಕರಣ ಬಗ್ಗೆ ಹಾಗೂ ಅದರ ಪ್ರಾಕೃತಿಕ ಸೌಂದರ್ಯ ವರ್ಣಿಸುತ್ತದೆ. ಮಲ್ಲಶೆಟ್ಟಿ ಎಂಬುವನು ಈ ದೇವಸ್ಥಾನಕ್ಕೆ ಭೂಮಿ ಹಾಗೂ ಹಣ ದಾನ ಮಾಡಿದ್ದನ್ನು ಹೇಳುತ್ತದೆ. ಕ್ರಿ.ಶ. ೧೧೭೧ರ ಶಾಸನವು ಕುಮಾರ ಮಲ್ಲಯ್ಯನು ಕಲಿದೇವರಿಗೆ ದಾನ ಕೊಟ್ಟದ್ದು ಹೇಳುತ್ತದೆ. ೧೩ನೇ ಶತಮಾನದ ಶಾಸನವು ಮಾಂಟಲಿಕ ಮಾದಿಗನನ್ನು

ಉಲ್ಲೇಖಿಸುತ್ತದೆ. ಈ ದೇವಸ್ಥಾನ ವಾಸ್ತುಶಿಲ್ಪದ ಎಲ್ಲ ಅಂಗಗಳನ್ನು ಮುಖಮಂಟಪ, ಸಭಾಮಂಟಪ, ಅಂತರಾಳ, ಗರ್ಭಗೃಹ ಒಳಗೊಂಡು, ಬಾಗಿಲವಾಡ ಜಾಲಂಧ್ರಗಳು, ಅಲಂಕರಿಕ ಕಂಬಗಳು, ಕಾರ್ತಿಕೇಯ, ಸಪ್ತಮಾತ್ರಿಕೆಯರ ಶಿಲ್ಪಗಳು, ಗಣಪತಿ, ಮಹೀಷಮರ್ದಿನಿ, ಕೇಶವನ ಬಿಡಿ ಸುಂದರ ಮೂರ್ತಿಗಳಿವೆ. ಈ ದೇವಸ್ಥಾನವು ಅತ್ಯಂತ ಸುಂದರ ದೇವಸ್ಥಾನವಾಗಿದ್ದು ಕಲಘಟಗಿ ತಾಲೂಕಿಗೆ ಶಿಲ್ಪ ಸೌಂದರ್ಯ ವನ್ನು ಎಳೆದುತಂದಿದೆ.

**ಮಿಶ್ರಕೋಟಿ :** ಕಲಘಟಗಿಯಿಂದ ಈಶಾನ್ಯಕ್ಕೆ ೧೦ ಕಿ.ಮೀ. ದೂರ ಇದೆ. ಇಲ್ಲಿ ೩ ಶಾಸನಗಳು, ಒಂದು ರಾಮಲಿಂಗೇಶ್ವರ ದೇವಸ್ಥಾನ, ಒಂದು ಸುತ್ತುವರದಿ ಮಣ್ಣಿನ ಕೋಟೆ (Mud fort) ಬುರುಜಗಳೊಂದಿಗೆ (Bastions) ದೊರೆಯುತ್ತವೆ. ಕೋಟೆಗೆ ನಿರ್ದಿಷ್ಟ ಹಂತಗಳಲ್ಲಿ ಈ ಬುರುಜುಗಳಿವೆ ಹನ್ನೆರಡು. ಪ್ರಾಚೀನ ಮೃದ್ ಕೋಟೆಗಳು ಬನವಾಸಿ ಕದಂಬರ ಕಾಲದಲ್ಲಿ ಉತ್ತರ ಕನ್ನಡ ಹಾಗೂ ದಕ್ಷಿಣ ಕನ್ನಡ ಭಾಗಶಃ ಧಾರವಾಡ ಪ್ರದೇಶಗಳಲ್ಲಿ ಕಾಣಸಿಗುತ್ತವೆ. ಸ್ಥಳ ದುರ್ಗ, ವನದುರ್ಗ, ಗಿರಿದುರ್ಗ ಹಾಗೂ ಜಲದುರ್ಗಗಳು, ಒಂದು ಪ್ರಕಾರವಾದ ಸ್ಥಳದುರ್ಗ (Ground fort) ಇದಾಗಿದೆ. ಇಲ್ಲಿ ಕ್ರಿ.ಶ. ೧೧೨೬, ಕ್ರಿ.ಶ. ೧೧೫೬ ಹಾಗೂ ಕ್ರಿ.ಶ. ೧೧೫೮ರ ಶಾಸನಗಳು ದೊರೆಯುತ್ತವೆ. ವಿಶೇಷವಾಗಿ ಕ್ರಿ.ಶ. ೧೧೫೮ರ ಶಾಸನವು ಗೋವಾ ಕದಂಬರ 'ಪೆರ್ಮಾಡಿದೇವನ' ಕೊಡುಗೆಯನ್ನು ವಿವರಿಸುತ್ತದೆ. ಗೋವೆಯರು ಕನಾಟಕದ ಒಂದು ಭಾಗವಾಗಿತ್ತೆಂದು ಈ ಶಾಸನವು ಸತ್ಯಸ್ಯ ಸತ್ಯ ಹೇಳುತ್ತದೆ.

**ಸಂಗಮೇಶ್ವರ :** ಇದು ಕಲಘಟಗಿಯಿಂದ ಪಶ್ಚಿಮಕ್ಕೆ ೧೦ ಕಿ.ಮೀ. ದೂರದಲ್ಲಿದೆ. ಇಲ್ಲಿ ಐದು ಶಾಸನಗಳು ದೊರೆತಿವೆ. ಊರ ಹೊರಗೆ ಇರುವ ಕಲ್ಮೇಶ್ವರ ಗುಡಿ (ಶಾಸನೋಕ್ತ ಹಮ್ಮೇಶ್ವರ)ಯ ತೊರೆಯ ಮೇಲೆ ಮೂರು ಇವೆ. ಗೋವೆಯ ಕದಂಬ ಒಂದನೆಯ ಜಯಕೇಶಿಯ (ಕ್ರಿ.ಶ. ೧೦೬೮ರ ಶಾಸನ) ಚಟ್ಟಗೊಡಬನೆಂಬುವನು ಈ ದೇವಾಲಯಕ್ಕೆ ಭೂದಾಣ ಮಾಡಿದ ವಿವರವಿದೆ. ಕ್ರಿ.ಶ. ೧೦೮೨) ರ ಶಾಸನವೊಂದು ಅಲ್ಲಿಯ ಶಿವಾಲಯಕ್ಕೆ ದಾನ ಮಾಡಿದ ನಾಗಣ್ಣನನ್ನು ಸ್ಮರಿಸುತ್ತದೆ. ೧೦೮೯ರಲ್ಲಿ ವೀರಸ್ವರ್ಗವನ್ನೇರಿದ ಯೋಧನ ವೀರಗಲ್ಲೊಂದಿದೆ. ಹಲಸಿಗೆ-೧೨೦೦೦ಕ್ಕೆ ಸೇರಿದ್ದ ಈ ಊರಿಗೆ 'ಸಂಗಮೇಶ್ವರ' ಹೆಸರು ಬರಲು ಕಾರಣ ದೊಡ್ಡಹಳ್ಳ ಮತ್ತು ಮಂಗ್ಯಾನಹಳ್ಳಿ ಹಂಪಾಹಳ್ಳ ಹಾಗೂ ಸಂಗಮೇಶ್ವರಗಳ ನಡುವೆ ಕೂಡಿದ್ದು ಅದು ಇಂದಿನ ಸಂಗಮೇಶ್ವರದಿಂದ ಎರಡು ಕಿ.ಮೀ. ದೂರದಲ್ಲಿ ಸಂಗಮ ವಾಗಿರುವುದರಿಂದ ಈ ಊರಿಗೆ ಆ ಹೆಸರು. ಈ ಕಲ್ಮೇಶ್ವರ ಗುಡಿಯು ದೇವಾಲಯ ಎಲ್ಲ ವಿನ್ಯಾಸದ ಅಂಗಗಳನ್ನು ಹೊಂದಿದ್ದು, ಮಹಿಷಮರ್ದಿನಿ, ಸರಸ್ವತಿ ಭೈರವ, ಸಪ್ತಮಾತ್ರಿಕೆಯರು, ಗಣಪತಿ, ಕಾರ್ತಿಕೇಯ, ಶಿವಪಾರ್ವತಿ, ಅನಂತಪದ್ಮನಾಭ, ಸುಂದರ ಶಿಲ್ಪಗಳಿವೆ. ಶೈವ ಹಾಗೂ ವೈಷ್ಣವ ಭಾವಗಳನ್ನು ಸಂಗಮಿಸುವ ಈ ದೇವಾಲಯವು ಸಂಗಮೇಶ್ವರ ಊರಿಗೆ ಭಾವೈಕ್ಯದ ಹೆಮ್ಮೆ ತಂದಿದೆ.

**ಗಂಜೀಗಟ್ಟಿ :** ಕಲಘಟಗಿಯಿಂದ ೧೨ ಕಿ.ಮೀ. ದೂರದಲ್ಲಿದ್ದು, ಮಿಶ್ರಕೋಟಿಯ ನೆರೆಯ ಗ್ರಾಮವಾಗಿದೆ. ಊರ ಹೊರಗೆ ಗುಡ್ಡದ ಮೇಲೆ ೧೨ನೇ ಶತಮಾನದ ಶ್ರೀ ನಾಗಲಿಂಗೇಶ್ವರ ಗುಡಿ ಇದೆ. ಪೂರ್ವಾಭಿಮುಖವಾದ ಈ ಗುಡಿಯು ನವರಂಗ, ಅಂತರಾಳ ಹಾಗೂ ಗರ್ಭಗುಡಿ ಹೊಂದಿದ್ದು, ಕದಂಬನಾಗರ ಶಿಖರ ಶೈಲಿ ಹೊಂದಿದೆ. ನವರಂಗದ ಮುಂಭಾಗ ಹಾಳಾಗಿದೆ. ದೇವಕೋಷ್ಟಗಳಲ್ಲಿ ಗಣಪತಿ, ಭೈರವ ಸಪ್ತಮಾತೃಕೆ ಯರು, ವೀರಭದ್ರರ ಮೂರ್ತಿಗಳಿವೆ.

**ಹುಣಸಿಕಟ್ಟೆ :** ಕಲಘಟಗಿಯಿಂದ ಆಗ್ನೇಯಕ್ಕೆ ೧೦ ಕಿ.ಮೀ. ದೂರ. ಹಲಸಿಗೆ-೧೨೦೦೦ ಪ್ರಾಂತ್ಯಕ್ಕೆ ಸೇರಿದ, ಮಾವಳ್ಳಿ-೫೦೦ ನಾಡಿನ, ಹುಲಿಗೋಡ ೧೨ಕ್ಕೆ ಸೇರಿದ ಗ್ರಾಮ ವಾಗಿದೆ ಈ ಹುಣಸಿಕಟ್ಟಿ, ಇಲ್ಲಿ ಮಲ್ಲಿಕಾರ್ಜುನ ದೇವಸ್ಥಾನ ಕಲ್ಯಾಣ ಚಾಲುಕ್ಯರ ಮುಮ್ಮಡಿ ಸೋಮೇಶ್ವರನಿಗೆ ಸಂಬಂಧಿ ಸಿದೆ (ಕ್ರಿ.ಶ. ೧೧೩೦-೩೧ ಎಂದು ಇಲ್ಲಿಯ ಶಾಸನವೊಂದು ತಿಳಿಸುತ್ತದೆ. ಗೋವೆಯ ಕದಂಬ ಪೆರ್ಮಾಡಿದೇವನ ಕಾಲದ ಕ್ರಿ.ಶ. ೧೧೪೨ರ ಶಾಸನವು ಹುಳಿಗೋಡ ಮುದ್ದಗಾವುಂಡನು ಹೋಬೇಶ್ವರ ದೇವರಿಗೆ ಭೂದಾನ ಕೊಟ್ಟ ವಿಷಯ ತಿಳಿಸು ತ್ತದೆ. ಅಂತರಾಳದಲ್ಲಿ ನಂದಿ ಹಾಗೂ ಕೇಶವನ ಶಿಲ್ಪಗಳಿವೆ. ಚತುರ್ಭುಜ ಈ ಕೇಶವನ ವಿಗ್ರಹ ೨.೫ ಅಡಿ ಎತ್ತರವಾಗಿದ್ದು ಬಹಳ ಸುಂದರವಾಗಿದೆ. ಇವುಗಳಲ್ಲದೆ ಹನುಮಂತ, ದ್ಯಾಮವ್ವ, ಈಶ್ವರ, ಬಸವಣ್ಣರ ಗುಡಿಗಳೂ, ಮಸೀದಿ ಹಾಗೂ ದರ್ಗಾ ಗಳೂ ಇವೆ. ಇದು ಕೂಡ ಶೈವ ವೈಷ್ಣವ, ಹಿಂದು-ಮುಸ್ಲಿಂ, ಭಾವೈಕ್ಯದ ತಾಣವಾಗಿದೆ.

ಈ ತರಹದ ಇನ್ನೂ ಹತ್ತು ಹಲವಾರು ಐತಿಹಾಸಿಕ ತಾಣಗಳು ಕಲಘಟಗಿ ತಾಲೂಕಿನಲ್ಲಿವೆ. ಆದರೆ ಅವು ಗೌಣ ವಾಗಿದೆ. ಅಂತತಃ, ಉಪಸಂಹಾರದಲ್ಲಿ ಹೇಳುವುದಾದರೆ, ಕಲಘಟಗಿಯು ತನ್ನ ಬದುಕಿನುದ್ದಕ್ಕೂ ತನ್ನದೇ ಆದ, ಏರು-ಪೇರುಗಳಿಲ್ಲದ ಪ್ರಶಾಂತ ಹಾಗೂ ನಿವಾಂತ ಐತಿಹಾಸಿಕ ಜೀವನ ವನ್ನು ಬಾಳಿದೆ. ಕದಂಬರ ನಾಡಾಗಿ, ಕದಂಬ ವಾಸ್ತುಶೈಲಿಯ ದೇವಾಲಯವನ್ನು ಶಿಲ್ಪಗಳನ್ನು ಹೊಂದಿ ಅಲ್ಲಲ್ಲಿ ಕೆಲ ಮೃದ್ ದುರ್ಗಗಳನ್ನು ಕಟ್ಟಿಸಿಕೊಂಡು, ಶಾಸನಗಳ ಹೇಳಿಕೆಗಳನ್ನು ಮಾಡಿಸಿ, ತನ್ನದೇ ಆದ ಪ್ರಾದೇಶಿಕ ಇತಿಹಾಸ ಕಟ್ಟಿಕೊಂಡಿದೆ. ಪಕ್ಕದ ನಾಡಾದ ಧಾರವಾಡದ ಸಾಹಿತ್ಯಿಕ ಸಿರಿಯನ್ನು ಹೊರ ದಿದ್ದರೂ, ಶಿಲ್ಪಕಲೆಯ ದೃಷ್ಟಿಯಿಂದ ತನ್ನೊಡಲಿನಲ್ಲಿ ಸಾವಿರ ವರುಷದ ಶಿಲ್ಪದ ಸಂಪುಷ್ಟ ತಲ್ಪ ಹೊಂದಿದೆ ಎಂದು ಅಭಿಮಾನ ದಿಂದ ಹೇಳಬಹುದು.





# ಬಗ್ಗಡನಾಳು ಪ್ರದೇಶದ ಪ್ರಾಚ್ಯಾವಶೇಷಗಳು

ಡಾ. ಬಿ.ಸಿ. ರಾಕೇಶ್*

ಬಗ್ಗಡನಾಳು ಗ್ರಾಮವು ಜನವಸತಿಯಿಲ್ಲದ ಹರಿಹರ ಮತ್ತು ಹೊನ್ನಾಳಿ ಗಡಿಯಲ್ಲಿಯ ಹರಿಹರ ತಾಲ್ಲೂಕಿನ ಕೊನೆಯ ಗ್ರಾಮ ಈ ಗ್ರಾಮವು ಮಲೇಬೆನ್ನೂರು ಹೋಬಳಿ ಹರಿಹರ ತಾಲ್ಲೂಕು ದಾವಣಗೆರೆ ಜಿಲ್ಲೆಯಲ್ಲಿ ಕಂಡುಬರುತ್ತದೆ. ಇಲ್ಲಿ ಕೊತ್ತಳ, ಪಾಳುಬಿದ್ದ ದೇವಾಲಯ, ಚೌಡಮ್ಮನ ದೇವಾಲಯಗಳು, ಶಾಸನ ಮತ್ತು ಇತರೆ ಅವಶೇಷಗಳನ್ನು ಹೊಂದಿದೆ. ಈ ಗ್ರಾಮವು ಹೊನ್ನಾಳಿಯಿಂದ ನಂದಿಗುಡಿಗೆ ಬರುವ ಮಾರ್ಗದಲ್ಲಿ ೧೮ ಕಿ.ಮಿ. ದೂರದಲ್ಲಿದ್ದು ಮಾರ್ಗದ ಎಡ ಭಾಗದಲ್ಲಿ ಅಂದರೆ ತುಂಗಭದ್ರ ನದಿ ದಂಡೆಯ ಬಲ ಪಕ್ಕದಲ್ಲಿದೆ. ತುಂಗಭದ್ರಾ ನದಿ ಪಾತ್ರದಲ್ಲಿ ಬರುವಂತಹ ಈ ಗ್ರಾಮವು ನೈಸರ್ಗಿಕವಾಗಿ ರಕ್ಷಣೆಯನ್ನು ಪಡೆದುಕೊಂಡಿದೆ. ಈ ಗ್ರಾಮವು ಪೂರ್ವಕ್ಕೆ ಆಳವಾದ ಹಳ್ಳವನ್ನು ದಕ್ಷಿಣಕ್ಕೆ ಕೂಡ ಆಳವಾದ ಹಳ್ಳವನ್ನು ಹೊಂದಿದ್ದು ಪಶ್ಚಿಮಕ್ಕೆ ತುಂಗಭದ್ರ ನದಿಯ ರಕ್ಷಣೆಯನ್ನು ಪಡೆದಿದೆ. ಉತ್ತರಕ್ಕೆ ಜಮೀನುಗಳನ್ನು ಹೊಂದಿದೆ. ಒಟ್ಟಾರೆಯಾಗಿ ನೈಸರ್ಗಿಕವಾಗಿ ರಕ್ಷಣೆಯನ್ನು ಹೊಂದಿದೆ. ಈ ಊರಿನ ಪೂರ್ವಕ್ಕೆ ಮೂಗಿನ ಗೊಂದಿ, ಉತ್ತರಕ್ಕೆ ಗೋವಿನಹಾಳು, ದಕ್ಷಿಣಕ್ಕೆ ಕೋಣನತಲೆ (ಹೊನ್ನಾಳಿ ತಾಲ್ಲೂಕು) ಪಶ್ಚಿಮಕ್ಕೆ ತುಂಗಭದ್ರ ನದಿಯನ್ನು ಹೊಂದಿದ್ದು ಇವುಗಳ ಮಧ್ಯೆ ಸುಮಾರು ೧೫೦೦ ಎಕರೆ ಜಮೀನನ್ನು ಹೊಂದಿದೆ.

ಈ ಗ್ರಾಮವು ಐತಿಹಾಸಿಕವಾಗಿ ಮಹತ್ವವನ್ನು ಪಡೆದ ಗ್ರಾಮವಾಗಿದೆ. ಇಲ್ಲಿರುವ ದೇವಾಲಯದ ಅವಶೇಷಗಳು ಮತ್ತು ಕೊತ್ತಳಗಳು ಈ ಗ್ರಾಮಕ್ಕೆ ಐತಿಹಾಸಿಕ ಮೆರಗನ್ನು ನೀಡಿದೆ. ನೈಸರ್ಗಿಕ ರಕ್ಷಣೆಯನ್ನು ಪಡೆದಿದ್ದರಿಂದ ಈ ಊರು ಅತ್ಯಂತ ಪ್ರಾಚೀನ ಕಾಲದಿಂದಲೂ ಇದ್ದಿರಬಹುದು ಎಂದು ಹೇಳಬಹುದು ಇಲ್ಲಿರುವ ಎಲ್ಲಾ ಸೌಕರ್ಯವನ್ನು ಗಮನದಲ್ಲಿ ಇಟ್ಟುಕೊಂಡು ಸುಮಾರು ೫೦೦ ವರ್ಷಗಳಷ್ಟು ಪ್ರಾಚೀನತೆಯನ್ನು ಹೊಂದಿರಬಹುದು. ಇದಕ್ಕೆ ಮೊದಲನೆಯದು ನೈಸರ್ಗಿಕ ರಕ್ಷಣೆ, ಎರಡನೆಯದು ಕುಡಿಯುವ ನೀರು, ಮೂರನೆಯದು ಸುತ್ತಲು ಇರುವ ಪ್ರಮುಖ ಐತಿಹಾಸಿಕ ಅವಶೇಷಗಳು, ಈ ಪ್ರದೇಶವು ನೊಳಂಬ ಪಲ್ಲವರು ಮತ್ತು ಹೋಯ್ಸಳರ ಕಾಲದಲ್ಲಿ ಆಳ್ವಿಕೆ ನಡೆಸಿದ ಕುರುಹುಗಳು ಈ ಗ್ರಾಮದ ಸುತ್ತಲು ನಮಗೆ ಸಿಗುತ್ತದೆ.

ಊರಮ್ಮನ ಜಾತ್ರೆಯಲ್ಲಿ ಕೋಣನ ತಲೆಯನ್ನು ಪಕ್ಕದ ಊರಿನವರು ಅಂದರೆ ಈಗಿನ ಕೋಣನ ತಲೆ (ಹೊನ್ನಾಳಿ ತಾ॥) ಗ್ರಾಮದವರು ತೆಗೆದುಕೊಂಡು ಹೋಗಿದ್ದರಿಂದ ಈ ಊರಿಗೆ ಕೋಣನತಲೆ ಎಂದು ಹೆಸರು ಬಂತು ಎನ್ನುವಂತಹ ವಿಚಾರಗಳನ್ನು ಕುರಿತು ಹಲವಾರು ಹಿರಿಯರು ಹೇಳುತ್ತಾರೆ. ಸುಮಾರು ಕ್ರಿ.ಶ. ೧೯೦೦ ಕಾಲಘಟ್ಟಕ್ಕೆ ಮಾರು ಹೊಳೆ ಅಂದರೆ ಪ್ರವಾಹ ಬಂದಿದ್ದುದರಿಂದ ಅಲ್ಲಿಂದ ಊರು ಸ್ಥಳಾಂತರಗೊಂಡಿರುವ ಸಾಧ್ಯತೆ ಇದೆ. ಈ ಕಾಲ ಘಟ್ಟದಲ್ಲಿ ಹಲವಾರು ಹಳ್ಳಿಗಳು ನದಿ ಪಾತ್ರ ದಿಂದ ಎತ್ತರದ ಪ್ರದೇಶಕ್ಕೆ ಸ್ಥಳಾಂತರಗೊಂಡ ಉದಾಹರಣೆಗಳನ್ನು ನಾವು ನೋಡಬಹುದು. ಇಲ್ಲಿಂದ ಸ್ಥಳಾಂತರಗೊಂಡವರು ಮೂಗಿನ ಗೊಂದಿ ಮತ್ತು ಗೋವಿನಹಾಳು ಹಳ್ಳಿಗಳಿಗೆ ಹೋಗಿ ನೆಲೆಸಿದ್ದಾರೆ. ಶ್ರಾವಣ ಮಾಸದಲ್ಲಿ ಇಲ್ಲಿರುವ ಚೌಡಮ್ಮ ದೇವಾಲಯಕ್ಕೆ ಬಂದು ಪೂಜೆ ಸಲ್ಲಿಸುತ್ತಾರೆ. ಮತ್ತು ಪ್ರಾಣಿ ಬಲಿಕೊಡುವ ಪದ್ಧತಿ ಇದೆ.

೧) **ಕೊತ್ತಳ :** ಕೊತ್ತಳವು ಸುವ್ಯಸ್ಥಿತವಾಗಿದ್ದು ಇದು ನೋಡಲು ಸುಂದರವಾಗಿದೆ ಇದು ಸುಮಾರು ನೆಲದಿಂದ ೩೫ ಅಡಿ ಎತ್ತರವಿದ್ದು ಸುಮಾರು ೧೫೦ ಅಡಿಗಳಷ್ಟು ಸುತ್ತಳತೆಯನ್ನು ಹೊಂದಿದ್ದು ಕಲ್ಲುಗಳಿಂದ ಇದನ್ನು ಕಟ್ಟಿದ್ದಾರೆ. ಈ ರೀತಿ ಕಟ್ಟಿದ್ದರಿಂದ ಅದು ಸವ್ಯವಸ್ಥಿತವಾಗಿದ್ದು ಅದರ ಸುತ್ತಲು, ಮೇಲೆ ಮತ್ತು ಪಕ್ಕದಲ್ಲಿ ಗಿಡಗಳು ಬೆಳೆದುಕೊಂಡಿವೆ ಇದಕ್ಕೆ ಹೊಂದಿಕೊಂಡಂತೆ ಪೂಜೆಯನ್ನು ಮಾಡುವ ಕೋಟೆ ಭರ್ಮಪ್ಪ ಮತ್ತು ಒಂದು ಶಾಸನವನ್ನು ಇರಿಸಿದ್ದಾರೆ. ಕಟ್ಟಡವು ದುಂಡಾಗಿದ್ದು ನೆಲದಿಂದ ಅಡಿಪಾಯದ ಮೇಲೆ ಕಟ್ಟಿದ್ದಾರೆ. ಕಟ್ಟಡದ ಮಧ್ಯಭಾಗದಲ್ಲಿ ಉದ್ದನೆಯ ಸಂಧುಗಳನ್ನು ಬಿಟ್ಟಿದ್ದಾರೆ. ಈ ಸಂಧುಗಳು ಅರ್ಧ ಅಡಿಗಳಷ್ಟು ಅಗಲ ಮತ್ತು ನಾಲ್ಕು ಅಡಿ ಉದ್ದವಾಗಿದ್ದು ಇವುಗಳನ್ನು ಗಾಳಿ ಒಳಬರದಂತೆ ಮಾಡಲಾಗಿದೆ ಇವುಗಳನ್ನು ನೋಡಿದರೆ ಅದರಲ್ಲಿ ಇರುವಂತಹ

* ಸಹಾಯಕ ಪ್ರಾಧ್ಯಾಪಕರು, ಎ.ಆರ್.ಎಂ. ಪ್ರಥಮ ದರ್ಜೆ ಕಾಲೇಜು, ಎಸ್. ನಿಜಲಿಂಗಪ್ಪ ಬಡಾವಣೆ, ದಾವಣಗೆರೆ-೫೭೭೦೦೪.

ದವಸ ದಾನ್ಯಗಳು ಧನಕನಕಗಳು ಹಾಳಗಾದಂತೆ ಮತ್ತು ರಕ್ಷಣೆ ಮಾಡಲು ಸೂಕ್ಷ್ಮವಾದ ವ್ಯವಸ್ಥೆಯನ್ನು ಕಲ್ಪಿಸಿರಬಹುದು ಎಂದು ಹೇಳಬಹುದಾಗಿದೆ.

೨) ಕೊತ್ತಳಕ್ಕೆ ಹೊಂದಿಕೊಂಡಂತೆ ಒಂದು ಶಾಸನ ವನ್ನು ನಿಲ್ಲಿಸಿದ್ದಾರೆ. ಈ ಶಾಸನವು ಸುಮಾರು ನಾಲ್ಕು ಅಡಿ ಎತ್ತರವಿದ್ದು ಸುಸ್ಥಿತಿಯಲ್ಲಿದೆ ಈ ಶಾಸನವು ಆರು ಸಾಲುಗಳನ್ನು ಹೊಂದಿದ್ದು ಇದರಲ್ಲಿ ಹಾಲಸ್ವಾಮಿ ಎನ್ನುವಂತಹ ಹೆಸರನ್ನು ಸ್ಥಳದ ಹೆಸರನ್ನು ನಾವು ಕಾಣಬಹುದಾಗಿದೆ ಸುಮಾರು ೨೦೦ ವರ್ಷಗಳಷ್ಟು ಅಳೆಯದು ಇರಬಹುದು ಸ್ಥಳೀಯವಾಗಿ ದೊರೆಯುವಂತಹ ಕಲ್ಲನ್ನು ಬಳಸಿಕೊಂಡು ಇದನ್ನು ಕೆತ್ತಲಾಗಿದೆ. ಈ ರೀತಿಯಲ್ಲಿ ನಾವು ನೋಡುವುದಾದರೆ ೧೭ನೇ ಶತಮನದಲ್ಲಿ ಊರಿನ ಬಗ್ಗೆ ಈ ಶಾಸನವು ಮಾಹಿತಿ ಯನ್ನು ನೀಡುತ್ತದೆ.

೩) ಪಾಳುಬಿದ್ದ ದೇವಾಲಯ ತುಂಗಭದ್ರ ನದಿಯ ಬಲಭಾಗದಲ್ಲಿ ಸ್ವಲ್ಪ ದೂರದಲ್ಲಿ ಇರುವಂತಹ ದೇವಾಲಯವು ಕೊತ್ತಳದ ಹಿಂದೆ ಅಂದರೆ ನದಿ ಮತ್ತು ಕೊತ್ತಳದ ಮಧ್ಯೆ ಕಂಡುಬರುತ್ತದೆ. ಈ ದೇವಾಲಯ ಬಿದ್ದು ಹೋಗಿದ್ದು ಆರು ಕಂಬಗಳು ಮಾತ್ರ ಉಳಿದಿವೆ. ಮೇಲೆ ಬೋದಿಗೆ, ಬೋಧಿಗೆಯ ಮೇಲೆ ತೊಲೆಗಳನ್ನು ನಾವು ಕಾಣಬಹುದು. ಈ ಕಂಬಗಳನ್ನು ನಾವು ನೋಡಿದಾಗ ಎತ್ತರವಾದ ಅಡಿಪಾಯದ ಮೇಲೆ ಈ ಕಂಬಗಳನ್ನು ನಿಲ್ಲಿಸಿದ್ದಾರೆ ಕಂಬಗಳು ೮ ಅಡಿಗಳಷ್ಟು ಎತ್ತರ ವಾಗಿದ್ದು ಕೆಳಗಿನಿಂದ ಕಿರಿದಾಗುತ್ತ ಮೇಲೆ ಸಾಗಿವೆ. ಕಂಬಗಳು ಸರಳ ಅಲಂಕಾರದಿಂದ ಅಲಂಕೃತ್ತವಾಗಿವೆ. ಕಂಬಗಳನ್ನು ಮೂರು ಭಾಗಗಳನ್ನಾಗಿ ಮಾಡಿಕೊಂಡು ಕೆಳಗಿನ ಭಾಗ ನಾಲ್ಕು ಮುಖವನ್ನು ಹೊಂದಿದ್ದು ಮಧ್ಯದ ಮೇಲಿನ ಭಾಗವು ಅಷ್ಟಕೋನ ಭಾಗವನ್ನು ಹೊಂದಿದೆ ಮೇಲೆ ನಾಲ್ಕು ಮುಖ ವನ್ನು ಹೊಂದ್ದಿದ್ದು ಸರಳ ಅಲಂಕಾರಗಳಿಂದ ಅಲಂಕೃತ ಗೊಂಡಿವೆ. ಇಲ್ಲಿರುವ ಅಡಿಪಾಯ ಎತ್ತರವಾದ ಭಾಗವನ್ನು ಕಂಬಗಳ ಲಕ್ಷಣ ಮೇಲಿನ ತಲೆಭಾಗ ಮತ್ತು ಜೋಡಣೆಯನ್ನು ನಾವು ನೋಡಿದರೆ ಇಲ್ಲಿ ದೇವಾಲಯ ಇದೇ ಎಂದು ಹೇಳಬಹುದು ಅದರೆ ಇಲ್ಲಿ ಯಾವ ದೇವಾಲಯ ಇತ್ತು ಎಂದ ಹೇಳಲು ಆಗವುದಿಲ್ಲ ಮತ್ತು ದೇವಾಲಯದ ಬಗ್ಗೆ ಯಾವುದೇ ಮಾಹಿತಿ ನಮಗೆ ದೊರೆಯುವುದಿಲ್ಲ.

೪) ಒರಳುಕಲ್ಲು, ಕೊತ್ತಳದಿಂದ ಸುಮಾರು ೩೦೦ ಮೀ. ಅಂತರದಲ್ಲಿ ಒಂದು ಒರಳು ಕಲ್ಲು ಕಂಡುಬರುತ್ತದೆ. ಇದು ಸುಸ್ತಿಯಲ್ಲಿದ್ದು ಸುಮಾರು ೩ ಅಡಿ ವಿಸ್ತೀರ್ಣವಾಗಿದ್ದು ಮಧ್ಯದಲ್ಲಿ ಒರಳನ್ನು ಮಾಡಿದ್ದಾರೆ. ಇದು ಗಾತ್ರದಲ್ಲಿ ದೊಡ್ಡದ್ದು, ಇದ್ದುದರಿಂದ ಇದನ್ನು ಸ್ಥಳಾಂತರ ಮಾಡಲಾಗಿಲ್ಲ. ಇಂತಹ ಕಲ್ಲುಗಳು ಈ ಪ್ರದೇಶದಲ್ಲಿ ಹೆಚ್ಚಾಗಿ ನಮಗೆ ದೊರೆಯುತ್ತವೆ.

**೫) ಚೌಡಮ್ಮನ ದೇವಾಲಯಗಳು**

ಮೊದಲನೆಯ ಚೌಡಮ್ಮನ ದೇವಾಲಯವು ಸರಳ ವಾಗಿದ್ದು ಕಲ್ಲುಗಳಿಂದ ಇದನ್ನು ಕಟ್ಟಿ ಅದರ ಮೇಲೆ ಕಲ್ಲುಗಳನ್ನು ಹೊದಿಸಿರುತ್ತಾರೆ. ಈ ದೇವಾಲಯವು ನದಿಯ ದಂಡೆಯಲ್ಲಿ ಕಂಡುಬರುತ್ತದೆ. ಇಲ್ಲಿ ಆಶಾಡ ಮಾಸದಲ್ಲಿ ಚೌಡಮ್ಮನ ಜಾತ್ರೆಯನ್ನು ಮಾಡಿ ಪೂಜೆಯನ್ನು ಮಾಡುತ್ತಾರೆ ಮತ್ತ ಗುಂಡಾದ ಕಲ್ಲುಗಳಿಗೆ ಸುಣ್ಣವನ್ನು ಬಳಿದು ಅವುಗಳಿಗೆ ದೇವರ ರೀತಿಯಲ್ಲಿ ಪೂಜೆಯನ್ನು ಮಾಡುತ್ತಾರೆ. ಅದರೊಂದಿಗೆ ಪ್ರಾಣಿಗಳನ್ನು ಬಲಿ ಕೊಡತ್ತಾರೆ. ಜೊತೆಗೆ ಕುಂಬಗಳು ಇರುವುದರಿಂದ ಮಹತ್ವ ದೇವತಾರಾಧನೆಯ ಸಂಕೇತವಾಗಿದೆ. ಈ ಪ್ರದೇಶದಲ್ಲಿ ಅಥವಾ ಪಕ್ಕದ ಊರುಗಳೆಲ್ಲ ಜಾನುವಾರುಗಳು ಕರುಗಳನ್ನು ಹಾಕಿದರೆ ಗಿಣ್ಣವನ್ನು ಮತ್ತು ಜಾನುವಾರುಗಳು ಹಾಲು ಕೊಡುವುದನ್ನು ನಿಲ್ಲಿಸಿದರೆ ಈ ದೇವರಿಗೆ ನೈವೇದ್ಯ ನೀಡುವ ವಾಡಿಕೆ ಇದೆ. ಇಲ್ಲಿರುವ ರೈತರು ಭತ್ತವನ್ನು ನಾಟಿ ಮಾಡುವ ಸಂದರ್ಭ ಮತ್ತು ದಸರಾ ಕಾಲದಲ್ಲಿ ಈ ಚೌಡಮ್ಮನಿಗೆ ವಿಶೇಷ ಪೂಜೆಯನ್ನು ಸಲ್ಲಿಸುತ್ತಾರೆ.

ಇವುಗಳು ಹೊಲದಲ್ಲಿ ಇರುವುದರಿಂದ ಇವುಗಳ ಪೂಜೆ ಪುನಸ್ಕಾರಗಳನ್ನು ಹೊಲದವರೆ ಮಾಡಿಕೊಂಡು ಬಂದಿದ್ದಾರೆ ಬಗ್ಗಡನಾಳ್ ಪ್ರದೇಶದಲ್ಲಿ ಹಲವು ಚೌಡಮ್ಮನ ದೇವಾಲಯುಗಳನ್ನು ನಾವು ಕಾಣಬಹುದಾಗಿದೆ. ಒಟ್ಟಾರೆಯಾಗಿ ಚೌಡಮ್ಮನ ದೇವಾಲಯಗಳು ಈ ಪ್ರದೇಶ ದಲ್ಲಿ ಉಳಿಮೆ ಮಾಡಿರುವುದರಿಂದ ಅನೇಕ ಅವಶೇಷಗಳು ಮಣ್ಣಲ್ಲಿ ಮುಚ್ಚಿಕೊಂಡಿರುವ ಸಾಧ್ಯತೆ ಇದೆ. ಆದ್ದರಿಂದ ಅವುಗಳ ರಕ್ಷಣೆ ನಮ್ಮೆಲ್ಲರ ಹೊಣೆಯಾಗಿದೆ. ಈ ಮೇಲಿನ ಅಂಶಗಳನ್ನು ಅವಲೋಕಿಸಿದಾಗ ಇಂತಹ ಅನೇಕ ಐತಿಹಾಸಿಕ ಮಹತ್ವವುಳ್ಳ ನೆಲೆಗಳು ಇಲ್ಲಿ ದೊರೆತಿರುವ ನೂತನ ಶಿಲಾ ಯುಗದ ಈ ನೆಲೆ ಅಂದರೆ ಹಳ್ಳೂರು, ಆ ಕಾಲದಿಂದ ಈ ಪ್ರದೇಶದಲ್ಲಿ ಜನರು ನೆಲೆಸಿರುವಂತಹ ಅನೇಕ ಉದಾಹರಣೆ ಗಳು ನಮಗೆ ಸಿಗುತ್ತವೆ. ಈ ಪ್ರದೇಶವು ಕಟ್ಟಡ ಜನವಸತಿಯು ಇರುವುದು ನಮ್ಮ ಗಮನಕ್ಕೆ ಬರುತ್ತದೆ. ಈ ಸ್ಥಳವನ್ನೇ ವಾಸಕ್ಕೆ ಯಾಕೆ ಆಯ್ಕೆ ಮಾಡಿಕೊಂಡರು ಎಂದರೆ ಇದು ನೈಸರ್ಗಿಕ ರಕ್ಷಣೆಯನ್ನು ನೀಡುವಂತಹ ಸ್ಥಳವಾಗಿತ್ತು. ಕಾರಣ ಸುತ್ತಲು ಹಳ್ಳ ಮತ್ತು ನದಿಗಳಿಂದ ಕೂಡಿದ್ದು ಒಂದು ಕಡೆ ಮಾತ್ರ ಸಮತಟ್ಟಾಗಿದ್ದು ಇಂತಹ ಒಂದು ಪ್ರದೇಶವನ್ನು ಆಯ್ಕೆ ಮಾಡಿಕೊಂಡಿದ್ದು ಸೂಕ್ತವೆನಿಸುತ್ತದೆ.

[ಈ ಪ್ರಬಂಧವನ್ನು ರಚಿಸುವಲ್ಲಿ ಸಹಕರಿಸಿದ ರಾಜು ಹೆಚ್.ಪಿ. ಅವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.]





# ಮಾದನಭಾವಿ ಗ್ರಾಮದಲ್ಲಿ ದೊರೆತ ಸುಂದರ ಶಿಲ್ಪ ಹಾಗೂ ಸುತ್ತಮುತ್ತಲಿನ ಪ್ರಾಚ್ಯಾವಶೇಷಗಳು

ಡಾ. ಎಸ್. ಚಲವಾದಿ* ಡಾ. ಎಸ್. ಮೇಲಕಾರ**

**ಧಾ**ರವಾಡ ಜಿಲ್ಲೆ ಸಾಂಸ್ಕೃತಿಕ ಮತ್ತು ಐತಿಹಾಸಿಕವಾಗಿ ಮಹತ್ವವನ್ನು ಪಡೆದ ಪ್ರದೇಶವಾಗಿದೆ. ಈ ಜಿಲ್ಲೆಯಲ್ಲಿ ಶಿಲಾ ಸಂಸ್ಕೃತಿಯಿಂದ ಹಿಡಿದು ಶಾತವಾಹನ, ಕದಂಬರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ವಿಜಯನಗರ, ಬಹಮನಿ, ಆದಿಲ್‌ಶಾಹಿ ಹಾಗೂ ಬ್ರಿಟೀಷರ ಆಳ್ವಿಕೆಗೆ ಸಂಬಂಧಿಸಿದ ಶಾಸನ, ಮೂರ್ತಿ ಶಿಲ್ಪ, ದೇವಾಲಯ, ಕೋಟೆ, ಕೊತ್ತಳ ಇತ್ಯಾದಿ ಪ್ರಾಚ್ಯಾವ ಶೇಷಗಳು, ಜಿಲ್ಲೆಯ ಪ್ರತಿಯೊಂದು ಗ್ರಾಮದಲ್ಲಿ ಕಂಡುಬರುತ್ತವೆ.

ಧಾರವಾಡ ತಾಲೂಕಿನ ಕೇಂದ್ರ ಸ್ಥಳದಿಂದ ಸು. ೨೨ ಕಿ.ಮೀ. ದೂರದ ಮಾದನಭಾವಿ ಗ್ರಾಮದಲ್ಲಿ ಅತ್ಯಂತ ಸುಂದರವಾದ ಶಿಲ್ಪ ಇತ್ತೀಚೆಗೆ ನೆಲ ಅಗೆಯುವಾಗ ಪತ್ತೆಯಾಗಿರುತ್ತದೆ. ಇದು ಸುಮಾರು ೭೦೦ ವರ್ಷಗಳ ಹಿಂದಿನದ್ದು, ಅಂದರೆ ೧೩ನೇ ಶತಮಾನದ ಒಬ್ಬ ಅಧಿಕಾರಿಯ ಸುಂದರ ಶಿಲ್ಪವಾಗಿದೆ. ಕೇಂದ್ರ ಸರಕಾರದ ಉದ್ಯೋಗ ಖಾತ್ರಿ ಯೋಜನೆಯ ಅಡಿಯಲ್ಲಿ ತೆಂಗಿನ ಸಸಿ ನೇಡಲು ಗ್ರಾಮದ ಶ್ರೀ ಲಕ್ಷ್ಮಣ್ಣ ದೊಡವಾಡ ಇವರ ಮನೆಯ ಹಿತ್ತಲದಲ್ಲಿ ತಗ್ಗು ತೊಡುವಾಗ ಮೂರು ಫೂಟು ಆಳದ ಭೂಮಿಯಲ್ಲಿ ಈ ಸುಂದರ ಶಿಲ್ಪವೊಂದು ಪತ್ತೆಯಾಗಿದೆ. ಇದೊಂದು ಉಬ್ಬು ಶಿಲ್ಪವಾಗಿದ್ದು, ಮೈಮೇಲೆ ವಸ್ತ್ರಾಭರಣ ಗಳನ್ನು ಧರಿಸಿ ಪದ್ಮಾಸನದಲ್ಲಿ ಕುಳಿತಿದ್ದಾನೆ. ಕೈಗಳು ಅಂಜಲಿ ಮುದ್ರೆಯಲ್ಲಿವೆ. (ಅಂದರೆ ಕೈ ಮುಗಿದು ಕುಳಿತ್ತಿರುವುದು) ತಲೆಯ ಕೂದಲನ್ನು ಮೇಲೆ ಸಿಂಬಿಯನ್ನು ಕಟ್ಟಿದ್ದಾನೆ. ಮುಖದ ಭಾವದಲ್ಲಿ ಶಾಂತತೆಯಿದೆ. ಕಿವಿಗಳಲ್ಲಿ ಕುಂಡಲಗಳಿವೆ. ಕೊರಳಲ್ಲಿ ಮಣಿ ಮುತ್ತಿನ ಹಾರವಿದೆ. ಕೈಗಳಲ್ಲಿ ಬಳೆಗಳಿವೆ. ಸೊಂಟಕ್ಕೆ ವಸ್ತ್ರವನ್ನು ಸುತ್ತಿಕಟ್ಟಿದ್ದಾನೆ. ಅದರ ನಿರಗಿಯನ್ನು ಮುಂದೆ ಇಳಿಬಿಟ್ಟಿದ್ದಾನೆ. ಈತನನ್ನೇ ಅಲಂಕಾರ ಯುಕ್ತ ಸ್ತಂಭ ತೋರಣದ ಮಧ್ಯ ಖಂಡರಿಸಲಾಗಿದೆ. ಶಿಲ್ಪದ



ತೋರಣದ ಒಳಸುತ್ತಿನಲ್ಲಿ ಮಣಿಗಳ ಅಲಂಕಾರವಿದೆ. ಕುಂಭಗಳ ಮೇಲೆ ಲತ ಸುರುಳಿ ಪಟ್ಟಿಗಳಿವೆ. ಈತನ ದೇಹಾಂಗ ವಸ್ತ್ರಾಭರಣ ಸ್ತಂಭ ತೋರಣದ ಕಲಾ

* ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩.
** ಸಹಾಯಕ ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩.

ಲಕ್ಷಣದಿಂದ ಈ ಮೂರ್ತಿ ಕ್ರಿ.ಶ. ೧೩ನೇ ಶತಮಾನದ್ದೆಂದು ಗುರ್ತಿಸಲಾಗಿದೆ. ಕೈಮುಗಿದು ಕುಳಿತಿರುವುದನ್ನು ನೋಡಿದರೆ ಈ ಶಿಲ್ಪ ಒಬ್ಬ ಅಧಿಕಾರಿಯದ್ದಾಗಿರಬೇಕು. ಇಲ್ಲವೇ ದೇವಾಲಯವನ್ನು ಸ್ಥಾಪಿಸಿರುವ ಒಬ್ಬ ಅಧಿಕಾರಿಯದ್ದಾಗಿರುವ ಸಾಧ್ಯತೆ ಕಂಡು ಬರುತ್ತದೆ. ಆದರೆ ಈತನು ಯಾವ ಧರ್ಮದ ಭಕ್ತನೆಂದು ತಿಳಿದುಬರುವುದಿಲ್ಲ. ಈ ಶಿಲ್ಪವನ್ನು ಶಿಸ್ಟ್ ಶಿಲೆಯಿಂದ ಖಂಡರಿಸಲಾಗಿದೆ. ದೇಹಾಂಗ ನುಣುಪಾಗಿ ಇರುವುದರಿಂದ ಇದು ನೋಡಲು ತುಂಬಾ ಆಕರ್ಷಣೀಯ ವಾಗಿದೆ. ಶಿಸ್ಟ್ ಶಿಲೆಯನ್ನು ಬಳಸಿ ತಯಾರಿಸಿದ ಶಿಲ್ಪಗಳು ಈ ಭಾಗದಲ್ಲಿ ಸಿಗುವುದು ತುಂಬಾ ವಿರಳವೆಂದು ಡಾ. ಆರ್.ಎಂ. ಷಡಕ್ಷರಯ್ಯನವರು ಅಭಿಪ್ರಾಯಪಟ್ಟಿದ್ದಾರೆ.

ಅದೇ ರೀತಿ ಹತ್ತು ವರ್ಷದ ಹಿಂದೆ ಡಾ. ಎಸ್. ಕೆ. ಮೇಲಕಾರವರು ಇದೇ ಗ್ರಾಮದಲ್ಲಿ ಕ್ರಿ.ಶ. ೧೨ನೇ ಶತಮಾನದ ಸರಸ್ವತಿ ವಿಗ್ರಹವನ್ನು ಶೋಧಿಸಿ ಬೆಳಕಿಗೆ ತಂದಿರುತ್ತಾರೆ. ಮಾದನಭಾವಿ ಗ್ರಾಮದಲ್ಲಿ ಗೋವೆಯ ಕದಂಬ ಅರಸ ೨ನೇ ಜಯಕೇಶಿಯ ಕಾಲದ ಕ್ರಿ.ಶ. ೧೧೩೪ರ ಶಾಸನವಿದ್ದು, ಅದರಲ್ಲಿ ಜಯಕೇಶಿ ಯುವರಾಜ ಪೆರ್ಮಾಡಿ ಕುಮಾರ ವಿಜಯಾದಿತ್ಯರೊಡನೆ ರಾಣಿ ಮೈಳಲಾದೇವಿ ಮಂದೂರ ಕಲಿದೇವಸ್ವಾಮಿಗೆ ಆರು ಮತ್ತರು ಭೂಮಿ ಇತ್ಯಾದಿ ದಾನದತ್ತಿಗಳು ನೀಡಿದ ವಿಷಯವನ್ನೊಳಗೊಂಡಿದೆ.

ಕಳೆದ ೯ ತಿಂಗಳ ಹಿಂದೆ ನಾವು ಮತ್ತು ಸ್ನೇಹಿತರಾದ ಡಾ. ಎಸ್.ಜಿ. ಚಲವಾದಿಯುವರು, ಶ್ರೀ ಎಸ್.ಬಿ. ದೇಸನೂರವರು ಬಸವರಾಜ ದೊಡವಾಡ, ಡಾ. ಬಿ. ಆರ್. ರಾಠೋಡ ಇವರೊಂದಿಗೆ ಹೊಸದಾಗಿ ಶೋಧವಾದ ಸುಂದರ ಮೂರ್ತಿ ನೋಡಲು ಹೋದಾಗ ಮಾದನಭಾವಿ ಗ್ರಾಮದ ಸುತ್ತಮುತ್ತಲಿನ ಪ್ರದೇಶದಲ್ಲಿ ಶೈವ ದೇವಾಲಯಗಳು ಭಿನ್ನವಾದ ಗಣಪತಿ ಶಿಲ್ಪ, ಹನುಮಾನ್ ಶಿಲ್ಪ, ನಂದಿ ಶಿಲ್ಪಗಳು, ಶಿವಲಿಂಗಗಳು ಹುಲಿಯೊಂದಿಗೆ ಹೋರಾಡುತ್ತಿರುವ ವೀರಗಲ್ಲು, ಕತ್ತೆಯ ಉಬ್ಬು ಚಿತ್ರವಿರುವ ಶಿಲ್ಪ, ಗಜಲಕ್ಷ್ಮಿ ಶಿಲ್ಪ, ದೇವಾಲಯದ ಕಂಬಗಳು ಊರ ಗ್ರಾಮದಲ್ಲಿ ಮತ್ತು ಧಾರವಾಡಕ್ಕೆ ಬರುವ ಮಾರ್ಗದಲ್ಲಿ ಹೊಲಗಳಲ್ಲಿ ಚದುರಿಕೊಂಡು ಅನಾಥವಾಗಿ ಬಿದ್ದುಕೊಂಡಿವೆ. ಅವೆಲ್ಲವುಗಳು ಸಾಮಾನ್ಯವಾಗಿ ೧೦ ರಿಂದ ೧೧-೧೨ನೇ ಶತಮಾನದ ವರೆಗಿನ ಇತಿಹಾಸದ ಮೇಲೆ ಬೆಳಕು ಚಲ್ಲುವ ಪ್ರಾಚ್ಯಾವಶೇಷ ಗಳಾಗಿವೆ. ಇವೆಲ್ಲವುಗಳನ್ನು ಒಂದೆಡೆ ದಾಖಲಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

[ಮೂರ್ತಿಶಿಲ್ಪಗಳನ್ನು ಗುರ್ತಿಸಲು ಮತ್ತು ಅಧ್ಯಯನವನ್ನು ಮಾಡಲು ಸಹಾಯ ಮಾಡಿದ. ಡಾ. ಆರ್.ಎಂ. ಷಡಕ್ಷರಯ್ಯ ಅವರಿಗೂ, ಶ್ರೀ ಎಸ್.ಬಿ. ದೇಸನೂರು, ಡಾ. ಬಿ.ಆರ್. ರಾಠೋಡ, ಶ್ರೀ ಬಸವರಾಜ, ದೊಡವಾಡ ಹಾಗೂ ಮಾದನಭಾವಿ ಗ್ರಾಮದ ಹಿರಿಯರಿಗೆ ಕೃತಜ್ಞತೆಗಳು.]



## ಆಧಾರಸೂಚಿ


೧) ಡಾ. ಆರ್. ಗೋಪಾಲ, ೨೦೦೯, **ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ರಾಜ್ಯ ಪುರಾತತ್ತ್ವ ಮತ್ತು ವಸ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು.

೨) **ಧಾರವಾಡ ಜಿಲ್ಲೆಯ ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ, ಬೆಂಗಳೂರು.

# ದಕ್ಷಿಣ ಕನ್ನಡ ಜಿಲ್ಲೆ, ಸುಳ್ಯ ತಾಲ್ಲೂಕು ಬೆಳ್ಳಾರೆ ಗ್ರಾಮದ ಪ್ರಾಚ್ಯಾವಶೇಷಗಳು

**ಡಾ. ಲಕ್ಷ್ಮಿ ಜಿ. ಪ್ರಸಾದ್***

**ಬೆಳ್ಳಾರೆ** ಸುಳ್ಯ ತಾಲೂಕಿನ ವ್ಯಾಪ್ತಿಗೆ ಗ್ರಾಮ ಹಿಂದೆ ಬೆಳ್ಳಾರೆ ಮಾಗಣೆಯಾಗಿದ್ದ ಬಗ್ಗೆ ಇತಿಹಾಸಜ್ಞರು ತಿಳಿಸಿದ್ದಾರೆ. ಬೆಳ್ಳಾರೆಯನ್ನು ಸಾಮಂತ ಬಲ್ಲಾಳ ಅರಸರು ಆಳುತ್ತಿದ್ದರು. ಇವರು ಬೆಳ್ಳಾರೆ, ಮುಂಡೂರು, ಸರ್ವೆ, ಕೆದಂಬಾಡಿ, ಕೆಯ್ಯೂರು, ಕಾಣಿಯೂರು, ಐವರ್ನಾಡು, ಪಾಲ್ತಾಡಿ, ಪುಣ್ಚಪಾಡಿ, ಸವಣೂರು, ಚಾರ್ವಕ, ಪೆರುವಾಜೆ, ಕೆದಿಲ, ಬಾಳಿಲ, ಕಳಂಜ, ಮುಪ್ಪೇರ್ಯ, ಮುರುಳ್ಯ, ಕ್ಯಾಮಣ, ಕುದ್ಮಾರು ಮತ್ತು ಕೊಳ್ತಿಗೆ ಎಂಬ ಇಪ್ಪತ್ತೊಂದು ಗ್ರಾಮಗಳನ್ನು ಆಳುತ್ತಿದ್ದರು. ಬೆಳ್ಳಾರೆಯನ್ನು ಆಳಿದ ಸಾಮಂತರು ಯಾರ ಸಾಮಂತರಾಗಿದ್ದರು ಎಂಬ ಬಗ್ಗೆ ಇದಮಿತ್ಥಂ ಎಂಬ ಮಾಹಿತಿ ಸಿಗುವುದಿಲ್ಲ.

೧೭೬೩ರಲ್ಲಿ ಹೈದರಾಲಿಯು ಬಿದನೂರನ್ನು ವಶಪಡಿಸಿಕೊಂಡಾಗ ತುಳುನಾಡು ಅವನ ವಶವಾಯಿತಾದರೂ, ಕೊಡಗಿನ ಅರಸನೊಂದಿಗೆ ಒಪ್ಪಂದ ಮಾಡಿಕೊಂಡು ಪಂಜ ಮತ್ತು ಕೊಡಗಿನ ಮಾಗಣೆಗಳನ್ನು ಕೊಡಗಿಗೆ ಬಿಟ್ಟುಕೊಟ್ಟನು. ಕ್ರಿ.ಶ. ಆದಿ ಭಾಗದಲ್ಲಿ ಬನವಾಸಿಯ ಕದಂಬ ಚಂದ್ರವರ್ಮನು ಕೊಡಗನ್ನು ಆಳಿಕೊಂಡಿದ್ದನು. ನಂತರ ಕೊಡಗು ಅನೇಕ ವಂಶದವರ ಆಳ್ವಿಕೆಗೆ ಒಳಗಾಯಿತು. ಸುಮಾರು ಕ್ರಿ.ಶ. ೧೬೦೦ ರಲ್ಲಿ ಇಕ್ಕೇರಿ ನಾಯಕರ ವಂಶದ ಹಾಲೇರಿ ಕುಟುಂಬದ ವೀರರಾಜನು ಕೊಡಗನ್ನು ಆಳ್ವಿಕೆ ಮಾಡಿದ ಬಗ್ಗೆ ರಾಜೇಂದ್ರ ನಾಮೆಯಲ್ಲಿ ಉಲ್ಲೇಖವಿದೆ. ಕ್ರಿ.ಶ. ೧೭೭೫ರಲ್ಲಿ ಅಮರ ಸುಳ್ಯ ಮತ್ತು ಬೆಳ್ಳಾರಗಳನ್ನು ಹೈದರಾಲಿ ಪುನಃ ವಶಪಡಿಸಿಕೊಂಡನು. ೧೭೯೧ರಲ್ಲಿ ದೊಡ್ಡ ವೀರರಾಜೇಂದ್ರನು ವಶಪಡಿಸಿಕೊಂಡನು. ೧೭೯೨ರಲ್ಲಿ ಟಿಪ್ಪುಸುಲ್ತಾನನ ಮನವಿಯ ಮೇರೆಗೆ ಬೆಳ್ಳಾರೆ ಮತ್ತು ಪಂಜ ಮಾಗಣೆಗಳನ್ನು ದೊಡ್ಡ ವೀರರಾಜೇಂದ್ರನು ಟಿಪ್ಪು ಸುಲ್ತಾನನಿಗೆ ಬಿಟ್ಟುಕೊಟ್ಟನು.

**೧. ಬೆಳ್ಳಾರೆಯ ಕೋಟೆ ಮತ್ತು ಬ್ರಿಟಿಷರ ಖಜಾನೆ:** ಟಿಪ್ಪುವಿನ ಮರಣಾನಂತರ ಬೆಳ್ಳಾರೆ ಮಾಗಣೆಯ ೩೭ ಗ್ರಾಮಗಳನ್ನು ದೊಡ್ಡ ವೀರರಾಜೇಂದ್ರನ ವಶಕ್ಕೆ ಬ್ರಿಟಿಷರು ನೀಡಿದ್ದಾರೆ. ಕೊಡಗಿನ ಕೊನೆಯ ಅರಸ ಚಿಕ್ಕ ವೀರರಾಜೇಂದ್ರನನ್ನು ೧೮೩೪ರಲ್ಲಿ ಬ್ರಿಟಿಷರು ಪದಚ್ಯುತಗೊಳಿಸಿ ಬೆಳ್ಳಾರೆ ಸೇರಿದಂತೆ, ಸುಳ್ಯ, ಪಂಜ ಸೀಮೆಯ ೧೧೦ ಗ್ರಾಮಗಳನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಸೇರಿಸಿದರು. ಕೊಡಗರಸರ ಕಾಲದಲ್ಲಿ ವಸ್ತುರೂಪದಲ್ಲಿ ಭೂ ಕಂದಾಯವನ್ನು ನಗದು ರೂಪಕ್ಕೆ ಬದಲಾಯಿಸಿದರು. ಇದರ ಪ್ರತಿಫಲವಾಗಿ ಒಂದು ಸ್ವಾತಂತ್ರ್ಯ ಸಂಗ್ರಾಮ ನಡೆಯಿತು. ಅದನ್ನು ಬ್ರಿಟಿಷರು ಕಲ್ಯಾಣಪ್ಪನ ಕಾಟುಕಾಯಿ ಎಂದು ಕರೆದರು. ಸುಳ್ಯದ ರೈತಾಪಿ ಜನರು ಕೆದಂಬಾಡಿ ರಾಮೇಗೌಡ,ಕೂಜುಕೋಡು ಮಲ್ಲಪ್ಪ ಗೌಡ ಮೊದಲಾದವರ ನೇತೃತ್ವದಲ್ಲಿ ಬ್ರಿಟಿಷರನ್ನು ಹೊಡೆದೋಡಿಸಲು ತೀರ್ಮಾನಿಸಿದರು. ಪುಟ್ಟ ಬಸಪ್ಪನೆಂಬ ಜಂಗಮನನ್ನು ಕಲ್ಯಾಣಸ್ವಾಮಿ ಎಂದು ಕರೆದು ಈತ ಕೊಡಗಿನ ಅರಸರ ವಂಶದವನು ಎಂದು ಜನರನ್ನು ನಂಬಿಸಿದರು. ಮೊದಲಿಗೆ ಬೆಳ್ಳಾರೆಯ ಕೋಟೆಯ ಒಳಗಿದ್ದ ಬ್ರಿಟಿಷ್ ಖಜಾನೆಯನ್ನು ವಶಪಡಿಸಿಕೊಂಡರು. ಬೆಳ್ಳಾರೆ ಕೋಟೆಯಲ್ಲಿ ಕಲ್ಯಾಣಸ್ವಾಮಿಗೆ ಪಟ್ಟ ಕಟ್ಟಿದರು. ಬ್ರಿಟಿಷರಿಂದ ವಶಪಡಿಸಿಕೊಂಡ ಬೆಳ್ಳಾರೆಯ ಖಜಾನೆ ಮತ್ತು ಕೋಟೆ ಇಂದಿಗೂ ಇದೆ. ಈಗ ಬಂಗ್ಲೆ ಗುಡ್ಡೆ ಎಂದು ಕರೆಯಲ್ಪಡುವ ಕೋಟೆಯ ಮೇಲೆ ಇರುವ ಒಂದು ಕಟ್ಟಡವೇ ಆ ಖಜಾನೆ ಈ ಕಟ್ಟಡದಲ್ಲಿ ಈಗ ವಿಲೇಜಾಫೀಸ್ ಇದೆ. ಕೋಟೆಯ ಸುತ್ತ ತೋಡಿದ ಕಂದಕದ ಕುರುಹು ಇದೆ. ಈ ಕೋಟೆಯನ್ನು ಕ್ರಿ.ಶ. ೧೬೦೧ರಲ್ಲಿ ಇಕ್ಕೇರಿಯ ಅರಸರು ಕಟ್ಟಿಸಿದ್ದಾರೆ.

**೨. ಬೆಳ್ಳಾರೆಯ ಮಾಸ್ತಿ ಕಟ್ಟೆ:** ಬೆಳ್ಳಾರೆಯ ಮೇಲಿನ ಪೇಟೆಯಲ್ಲಿ ಮಾಸ್ತಿ ಕಟ್ಟೆ ಎಂಬ ಪ್ರದೇಶ ಇದೆ. ಇಲ್ಲಿ ನಾಲ್ಕು ಶಿಲಾ ಸ್ತಂಭಗಳನ್ನು ನಾಲ್ಕು ದಿಕ್ಕಿಗೆ ನೆಡಲಾಗಿದ್ದು, ಕೆಳಗೆ ಶಿಲೆಯನ್ನು ಹಾಸಲಾಗಿತ್ತು. ಇಲ್ಲಿ ಒಂದು ಸ್ತ್ರೀಯ ಚಿತ್ರ, ಅವಳ ಎತ್ತಿದ ಕೈಯ ಚಿತ್ರ ಹಾಗೂ ಅರ್ಧ ಚಂದ್ರನ ಚಿತ್ರವನ್ನು ಕೆತ್ತಿರುವ ಶಿಲೆ ಇತ್ತು. ಎಂದು ಇದನ್ನು ನೋಡಿರುವ ಪುಷ್ಪರಾಜರು ಹೇಳುತ್ತಾರೆ. ಇಲ್ಲಿ ಮಹಾಸತಿಕಲ್ಲು ಇತ್ತೆಂದು

* ಕನ್ನಡ ಭಾಷಾ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಬೆಳ್ಳಾರೆ, ಸುಳ್ಯ (ತಾ), ದಕ್ಷಿಣ ಕನ್ನಡ ಜಿಲ್ಲೆ–೫೭೪೨೧೨.



ಬ್ರಿಟಿಷರ ಖಜಾನೆ

ತಿಳಿಯುತ್ತದೆ. ಕಟ್ಟೆ ಕೂಡಾ ಇರುವುದರಿಂದ ಇದನ್ನು ಮಹಾಸತಿಕಟ್ಟೆ ಎಂದಾಗಿದೆ, ಈಗ ಈ ಪ್ರದೇಶದವನ್ನು ಸಮತಟ್ಟಾಗಿಸಿದ್ದು, ಮಹಾಸತಿ ಕಟ್ಟೆ ಇದ್ದ ಕುರುಹುಗಳು ಅಳಿಸಿ ಹೋಗಿದೆ. ೩-೪ ವರ್ಷಗಳ ಹಿಂದಿನ ತನಕ ಮಹಾಸತಿ ಕಟ್ಟೆ ಇತ್ತು, ಸುಮಾರು ೨೦-೨೫ ವರ್ಷಗಳ ಮೊದಲು ಇಲ್ಲಿ ಮಹಾಸತಿ ಕಲ್ಲು ಇದ್ದುದನ್ನು ನೋಡಿದವರಿದ್ದಾರೆ, ತುಳುನಾಡಿನಲ್ಲಿ ಸತಿ ಸಹಗಮನ ಪದ್ಧತಿ ಅಷ್ಟಾಗಿ ಪ್ರಚಲಿತವಿರಲಿಲ್ಲ, ಆದ್ದರಿಂದ ಸಹಗಮನ ಮಾಡಿದವರ ಸಂಖ್ಯೆ ತೀರಾ ಕಡಿಮೆ ಇದೆ. ಉಡುಪಿ, ಕಾಸರಗೋಡು ಸೇರಿದಂತೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೬-೭ ಮಹಾಸತಿ ಕಲ್ಲು/ಕಟ್ಟೆಗಳು ಇವೆ. ಬೆಳ್ಳಾರೆಯಲ್ಲಿ ಮಹಾಸತಿ ಕಲ್ಲು ಹಾಗೂ ಕಟ್ಟೆ ಇದ್ದಿದ್ದರೂ ಕೂಡಾ ಇಲ್ಲಿ ಹೆಚ್ಚಿನ ಮಾಹಿತಿ ಸಿಕ್ಕಿಲ್ಲ.

**೩. ಬೆಳ್ಳಾರೆಯ ಬೀಡು ಮತ್ತು ಪಟ್ಟದ ಚಾವಡಿ:** ಬೆಳ್ಳಾರೆಯನ್ನು ಜೈನ ಪಾಳೆಯಗಾರರು ಆಳಿದ್ದಕ್ಕೆ ಕುರುಹಾಗಿ ಬೆಳ್ಳಾರೆಯ ಕೋಟೆಯ ಹಿಂಭಾಗದಲ್ಲಿ ಬೀಡಿನ ಅವಶೇಷ ಈಗಲೂ ಇದೆ. ಬಲ್ಲಾಳರ ಬೀಡಿನ ಅವಶೇಷದ ವಾಯುವ್ಯ ಭಾಗದಲ್ಲಿ ಬೆಳ್ಳಾರೆಯ ಪ್ರಧಾನ ದೈವ ಅಡ್ಯಂತಾಯ ಭೂತದ ಚಾವಡಿ ಇದೆ. ಭೂತದ ನೇಮದ ಸಂದರ್ಭದಲ್ಲಿ ಇದು ಪಟ್ಟದ ಚಾವಡಿ ಎಂದು ಕರೆಸಿಕೊಂಡು ಭೂತದ ನುಡಿಯಾಗುತ್ತದೆ. ಇದರಿಂದಾಗಿ ಜೈನ ಪಾಳೆಯಗಾರರಾದ ಬಲ್ಲಾಳರಸರ ಪಟ್ಟಾಭಿಷೇಕ ಇಲ್ಲಿಯೇ ಆಗುತ್ತಿತ್ತೆಂದು ತಿಳಿದು



ಬರುತ್ತದೆ. ಅಡ್ಯಂತಾಯ ಭೂತದ ಚಾವಡಿಯ ಗುಡಿಯಲ್ಲಿ ಕಂಚಿನಿಂದ ನಿರ್ಮಿಸಲ್ಪಟ್ಟ ಒಂದು ಸ್ತ್ರೀ ರೂಪದ ಮೂರ್ತಿ, ಒಂದು ಪುರುಷನ ರೂಪದ ಮೂರ್ತಿ. ಹಾಗೂ ಆಯುಧಗಳು ಇವೆ. ಇಲ್ಲಿ ಆರಾಧಿಸಲ್ಪಡುವ ದೈವ ಅಡ್ಯಂತಾಯ ಬೀಡಿನ ಹಿರಿಯ (ಮೂಲ?) ಅರಸನಾಗಿದ್ದು ಪುರುಷಾಕೃತಿಯ ಮೂರ್ತಿ ಆತನದೇ ಇರಬಹುದು, ಈ ಬಗ್ಗೆ ಅಧ್ಯಯನ ವಾಗಬೇಕಾಗಿದೆ.



ಪಟ್ಟದ ಚಾವಡಿ

**೪. ಆನೆ ಕಟ್ಟುವ ಕಲ್ಲು:** ಪಟ್ಟದ ಚಾವಡಿಯ ತೆಂಕು ಭಾಗದಲ್ಲಿ ಬೀಡಿನರಮನೆ ಇತ್ತು,ಇದರ ಬಳಿಯೂ ಜೈನ ಬಸದಿ ಕೂಡ ಇತ್ತು.ಕೆಲವರ್ಷಗಳ ಹಿಂದಿನ ತನಕ ಈ ಬಸದಿಯ ಅವಶೇಷ ಕಾಣಿಸುತ್ತಿತ್ತು ಈಗ ನೆಲಸಮವಾಗಿ ಕುರುಹುಗಳು ಅಳಿಸಿ ಹೋಗಿವೆ, ಸಮೀಪದಲ್ಲಿ ಆನೆಗಳನ್ನು ಕಟ್ಟಿ ಹಾಕುವ ಕಲ್ಲುಗಳು ಇದ್ದವು.ಅಂಥಹ ಒಂದು ಆನೆ ಕಟ್ಟುವ ಕಲ್ಲನ್ನು ಈಗ ಕೂಡ ಕಾಣಬಹುದು.



**೫. ಬಂಡಿ ಮಜಲು:** ಹಿಂದೆ ಬೆಳ್ಳಾರೆ ಪಟ್ಟಣವಾಗಿತ್ತು. ಸರಕು ಸಾಗಾಟ ಎತ್ತಿನ ಬಂಡಿಗಳ ತಂಗುದಾಣ ಆಗಿದ್ದ ಪ್ರದೇಶವನ್ನು ಬಂಡಿ ಮಜಲು ಎಂದು ಕರೆಯುತ್ತಿದ್ದರು, ಬಂಡಿ ಮಜಲು ಎಂಬ ಈ ವಿಶಾಲವಾದ ಬಯಲು ಪ್ರದೇಶ ಬೆಳ್ಳಾರೆ ಪೇಟೆಯಿಂದ ತುಸು ದೂರದಲ್ಲಿ ಈಗ ಕೂಡ ಇದೆ.

**೬. ದೈವತ್ವವನ್ನು ಪಡೆದ ಬೆಳ್ಳಾರೆಯ ರಾಜಕುಮಾರ–ನೈದಾಲಪಾಂಡಿ ಭೂತ:** ಸಂಪಾಜೆಯಿಂದ ಏಳೆಂಟು ಕಿಲೋಮೀಟರ್ ಒಳಭಾಗದ ಕಾಡಿನಲ್ಲಿ ಅರೆಕಲ್ಲು ಎನ್ನುವ ಸ್ಥಳವಿದೆ. ಇಲ್ಲಿ ಒಂದು ಅಯ್ಯಪ್ಪ ಮತ್ತು ಶಿವನ ಗುಡಿಗಳು ಇವೆ.ಇಲ್ಲಿ ಪೂಜಾ ಕಾರ್ಯಗಳನ್ನು ಕೊಡಗಿನ ಗಾಳಿಬೀಡಿನ ಪಾಂಡೀರ ರಾಜ ವಂಶದವರು ಬಂದು ನಡೆಸುತ್ತಾರೆ. ಇಲ್ಲಿ ಏಳು ವರ್ಷಗಳಿಗೊಮ್ಮೆ "ನೈದಾಲ ಪಾಂಡಿ" ಎಂಬ ಭೂತಕ್ಕೆ ನೇಮ ನೀಡಿ ಆರಾಧನೆ ಸಲ್ಲಿಸುತ್ತಾರೆ.



ಇದರಲ್ಲಿ ಮೊದಲನೆಯ ಪಾತ್ರಿಯಾಗಿ ಪೂಮಲೆ ಕುಡಿಯರು ಎರಡನೆಯ ಪಾತ್ರಿಗಳಾಗಿ ಪಾಂಡಿ ಮನೆಯವರು ಭಾಗವಹಿಸುತ್ತಾರೆ. ನೈದಾಲಪಾಂಡಿ ಭೂತವನ್ನು ಪೂಮಲೆ ಕುಡಿಯ ಜನಾಂಗದ ಭೂತ ಪಾತ್ರಿಗಳಲ್ಲಿ ಹಿರಿಯರೊಬ್ಬರಿಗೆ ಹೇಳಿ ಕಟ್ಟಿಸುತ್ತಾರೆ. ನೈದಾಲಪಾಂಡಿ ಭೂತ ಕಟ್ಟಿದವರು ತುಸುಕಾಲದಲ್ಲಿಯೇ ಮರಣವನ್ನಪ್ಪುತ್ತಾರೆ ಎಂಬ ನಂಬಿಕೆ ಪ್ರಚಲಿತವಿರುವುದರಿಂದ ವಯಸ್ಸಾದ ವೃದ್ಧರೇ ನೈದಾಲ ಪಾಂಡಿ ಭೂತವನ್ನು ಕಟ್ಟುತ್ತಾರೆ.

ನೈದಾಲಪಾಂಡಿ ಭೂತಕ್ಕೂ ಬೆಳ್ಳಾರೆಗೂ ಅವಿನಾಭಾವ ಸಂಬಂಧವಿದೆ. ಪಾಂಡಿ ಮನೆಯ ಹಿರಿಯರು ಈ ಬಗ್ಗೆ ಮಾಹಿತಿ ನೀಡಿರುತ್ತಾರೆ. ಬೆಳ್ಳಾರೆಯನ್ನು ಓರ್ವ ತುಂಡರಸ ಆಳಿಕೊಂಡಿದ್ದನು. ಅವನು ಪಾಂಡು ರೋಗಿಯಾಗಿದ್ದನು. ಅವನ ನಂತರ ಅವನ ಮಗ ಬೆಳ್ಳಾರೆಯನ್ನು ಆಳಿಕೊಂಡಿದ್ದನು. ಇವನನ್ನು ಶತ್ರುಗಳು ಆಕ್ರಮಿಸಿದಾಗ ಬೆಳ್ಳಾರೆಯಿಂದ ತಪ್ಪಿಸಿಕೊಂಡು ಹೋಗಿ, ಪೂಮಲೆ ಕಾಡಿಗೆ ಹೋಗಿ ಪೂಮಲೆ ಕುಡಿಯರ ಮನೆಯೊಂದರಲ್ಲಿ ಆಶ್ರಯ ಪಡೆಯುತ್ತಾನೆ. ಅಲ್ಲಿಗೆ ಕೊಡಗರಸರ ತಂಗಿ ಬಂದಾಗ ಬೆಳ್ಳಾರೆಯ ರಾಜ ಕುಮಾರ ಮತ್ತು ಅವಳ ಪರಿಚಯವಾಗಿ ಅದು ಪ್ರೇಮಕ್ಕೆ ತಿರುಗುತ್ತದೆ. ನಂತರ ಅವರು ಮದುವೆಯಾಗಿ ಕೊಡಗಿನಲ್ಲಿ ಇರುತ್ತಾರೆ. ಇದು ಬೆಳ್ಳಾರೆಯ ರಾಜನ ಶತ್ರುಗಳಿಗೆ ತಿಳಿದು ಕೊಡಗಿಗೆ ಹೋಗಿ ಅವನ ಮೇಲೆ ಆಕ್ರಮಣ ಮಾಡುತ್ತಾರೆ. ಆಗ ಶತ್ರುಗಳ ಎದುರಿನಿಂದಲೇ ತಪ್ಪಿಸಿಕೊಂಡು ಹೋಗಿ ಅರೆಕಲ್ಲಿಗೆ ಬಂದು ಶಿವನಲ್ಲಿ ಐಕ್ಯನಾಗುತ್ತಾನೆ. ನಂತರ ದೈವತ್ವಕ್ಕೇರಿ ನೈದಾಲ ಪಾಂಡಿ ಎಂಬ ಹೆಸರಿನ ಭೂತವಾಗಿ ಆರಾಧನೆ ಪಡೆಯುತ್ತಾನೆ.

ನೈದಾಲಪಾಂಡಿ ಭೂತಕ್ಕೆ ಅರಸು ದೈವಕ್ಕೆ ಕಟ್ಟುವಂತೆ ದೊಡ್ಡದಾದ ಮೀಸೆ, ತಲೆಗೆ ಪಗಡಿ ರೂಪದ ಕಿರೀಟದಂತೆ ಇರುವ ಮುಡಿ ಕಟ್ಟುತ್ತಾರೆ. ಬೆಳ್ಳಾರೆಯ ತುಂಡರಸ ಪಾಂಡುರೋಗಿಯಾಗಿದ್ದರಿಂದ ಅವನ ಮಗನನ್ನು 'ಪಾಂಡಿ' ಎಂದು ಕರೆಯುತ್ತಿದ್ದರು. ಈತ ಪೂಮಲೆಯಲ್ಲಿ ಉಳಿದುಕೊಂಡ ಪ್ರದೇಶದ ಹೆಸರು ನೈದಾಲ್ ಎಂದು. ಎರಡು ವಂಶಗಳನ್ನು ನೆಯ್ದು ಅಂದರೆ ಬೆಸೆದ ಕಾರಣ ಆತನನ್ನು ನೈದಾಲ ಪಾಂಡಿ ಎಂದು ಕರೆಯುತ್ತಾರೆ ಎಂಬ ಐತಿಹ್ಯವೂ ಇದೆ. ನೈದಾಲಿನ ಪಾಂಡಿ ಎಂಬರ್ಥದಲ್ಲಿ ನೈದಾಲ ಪಾಂಡಿ ಎಂಬ ಹೆಸರು ಬಂದಿದೆ ಎಂದು ನೈದಾಲ ಪಾಂಡಿಯ ವಂಶದ ಹಿರಿಯರು ಹೇಳುತ್ತಾರೆ. ನೈದಾಲ ಪಾಂಡಿ ಭೂತದ ನೇಮದ ಸಂದರ್ಭದಲ್ಲಿ ಒಂದು ಹಾಡನ್ನು ಹಾಡುತ್ತಾರೆ. ಅದರಲ್ಲಿ ನೈದಾಲಪಾಂಡಿಯನ್ನು ಅಜ್ಜಯ್ಯ ಎಂದೂ, ಕಾಸರಗೋಡು ಕಾಳೆಯ್ಯ ಎಂದೂ ಕರೆದಿದ್ದಾರೆ. ಗಾಳಿ ಬೀಡಿನಲ್ಲಿರುವ ನೈದಾಲಪಾಂಡಿಯ ವಂಶದ ಹಿರಿಯರು ನೈದಾಲಪಾಂಡಿಯ ಮೊದಲ ಹೆಸರು ಕಾಳೆಯ್ಯ ಎಂದೂ, ಮದುವೆಯಾದ ಮೇಲೆ ಆತ ಲಿಂಗಾಯತ ಧರ್ಮಕ್ಕೆ ಮತಾಂತರ ಮಾಡಿದನೆಂದೂ ಹೇಳಿದ್ದಾರೆ. ನೈದಾಲ ಪಾಂಡಿಯ ಕಥಾನಕ ಸುಮಾರು ೧೩೦ ರಿಂದ ೧೮೦ ವರ್ಷಗಳ ಹಿಂದೆ ನಡೆದ ಘಟನೆಯಾಗಿದೆ.



**ಆಧಾರಸೂಚಿ**


೧. ಕಾನಕುಡೇಲು, ಗಣಪತಿ ಭಟ್ಟ, **ಪಂಜ ಸೀಮಾ ದರ್ಶನ.**

೨. ಎನ್.ಎಸ್. ದೇವಿಪ್ರಸಾದ, **ಅಮರಸುಳ್ಯದ ಸ್ವಾತಂತ್ರ್ಯ ಹೋರಾಟ.**

೩. ಡಾ॥ ಲಕ್ಷ್ಮೀ ಜಿ. ಪ್ರಸಾದ, **ತುಳುನಾಡಿನ ಅಪೂರ್ವ ಭೂತಗಳು.**



# ಬಸ್ತಿಹೊಸಕೋಟೆಯ ಜೈನ ಅವಶೇಷಗಳು ಒಂದು ಅವಲೋಕನ

ಲಿಂಗರಾಜು*

**ಮಂಡ್ಯ** ಜಿಲ್ಲೆ ಕರ್ನಾಟಕ ರಾಜ್ಯದ ದಕ್ಷಿಣ ಭಾಗದ ಮಧ್ಯದಲ್ಲಿದೆ. ಮೈಸೂರು ಜಿಲ್ಲೆಗೆ ಸೇರಿದ್ದ ಮಂಡ್ಯ ೧೯೩೯ ರ ಜುಲೈ ೧ ರಂದು ಸ್ವತಂತ್ರ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿತು. ಜಿಲ್ಲೆಯ ಒಟ್ಟು ವಿಸ್ತೀರ್ಣ ೪೯೬೧ ಚ.ಕಿ.ಮೀ ಸಮುದ್ರ ಮಟ್ಟಕ್ಕಿಂತ ೭೬೨ ರಿಂದ ೯೧೪ ಮೀಟರ್ ಎತ್ತರದಲ್ಲಿದೆ. ಜಿಲ್ಲೆಯಲ್ಲಿ ಒಟ್ಟು ಏಳು ತಾಲ್ಲೂಕುಗಳಿವೆ. ಪ್ರಾಚೀನ ಕಾಲದಿಂದಲೂ ಮಂಡ್ಯ ಜಿಲ್ಲೆಯ ನಾನಾ ಕಡೆಗಳಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ಬಸದಿಗಳು, ಗೊಮ್ಮಟನ ವಿಗ್ರಹಗಳು, ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ. ನಾಗಮಂಗಲದ ಕಂಬದಹಳ್ಳಿಯ ಪಂಚಕೂಟ ಬಸದಿ, ಬೆಳ್ಳೂರಿನ ವಿಮಲ ತೀರ್ಥಂಕರ ಬಸದಿ, ಕೆ.ಆರ್. ಪೇಟೆಯ ಹೊಸಹೊಳಲಿನ ಹಾಗೂ ಮುರುಕನಹಳ್ಳಿಯ ಪಾರ್ಶ್ವನಾಥ ಬಸದಿಗಳು, ಬಸ್ತಿಹೊಸಕೋಟೆಯ ಬಸದಿಗಳು ಮತ್ತು ಗೊಮ್ಮಟನ ವಿಗ್ರಹ, ಅರೆತಿಪ್ಪೂರಿನ ಗೊಮ್ಮಟನ ವಿಗ್ರಹ ಪ್ರಮುಖವಾದವು. ಇವುಗಳಲ್ಲಿ ಕೆ.ಆರ್. ಪೇಟೆ ತಾಲ್ಲೂಕಿನ ಬಸ್ತಿಹೊಸಕೋಟೆಯ ಜೈನ ಅವಶೇಷಗಳ ಇಂದಿನ ಸ್ಥಿತಿಗತಿಯ ಬಗ್ಗೆ ಸಂಬಂಧ ಪಟ್ಟ ಇಲಾಖೆಯ, ಅಧಿಕಾರಿಗಳ ಹಾಗೂ ಆಸಕ್ತ ಇತಿಹಾಸ ಸಂಶೋಧಕರ ಗಮನ ಸೆಳೆಯಲು ಪ್ರಯತ್ನಿಸಿದ್ದೇನೆ.

**ಬಸ್ತಿಹೊಸಕೋಟೆ:** ಬಸ್ತಿ ಹೊಸಕೋಟೆ ಮಂಡ್ಯ ಜಿಲ್ಲೆಯ ತಾಲ್ಲೋಕು ಕೇಂದ್ರವಾದ ಕೆ.ಆರ್. ಪೇಟೆಯಿಂದ ಸು. ೨೮ ಕಿ.ಮೀ. ದಕ್ಷಿಣದಲ್ಲಿ ಕೆ.ಆರ್.ಎಸ್. ಹಿನ್ನೀರಿಗೆ ಹೊಂದಿಕೊಂಡಂತಿದೆ. ಮಾವಿನಕೆರೆಗೆ ಎರಡು ಕಿ.ಮೀ. ದೂರದಲ್ಲಿ ಕಣಿವೆ ಪ್ರದೇಶದಿಂದ ಕೂಡಿದೆ. ಬಸ್ತಿಯಲ್ಲಿ ಹಿಂದೆ ಅಧಿಕ ಸಂಖ್ಯೆಯಲ್ಲಿ ಜೈನರಿದ್ದರು ಆದರೆ ಇಂದಿನ ಬಸ್ತಿಯಲ್ಲಿ ಕುರುಬ ಜನಾಂಗ ದವರು ಅಧಿಕ ಸಂಖ್ಯೆಯಲ್ಲಿರುವುದರಿಂದ ಕುರುಬರ ಬಸ್ತಿಯೆಂದು ಕರೆಯುತ್ತಿದ್ದಾರೆ. ಇಂದಿನ ಬಸ್ತಿ ಹೊಸಕೋಟೆಯಲ್ಲಿ ಹರಿಜನರು ಅಧಿಕ ಸಂಖ್ಯೆಯಲ್ಲಿರುವು ದರಿಂದ ಎ.ಕೆ. ಬಸ್ತಿ ಎಂದು ಕರೆಯುತ್ತಿದ್ದಾರೆ. ಹರಿಜನರು ತಮಗೆ ಸಮೀಪದ ಬಸ್ತಿಯನ್ನು ಒಕ್ಕಲಗೇರಿ ಎಂದೇ ಕರೆದು ಕೊಳ್ಳುತ್ತಾರೆ[೧] ಈ ಎರಡು ಗ್ರಾಮಗಳಿಗೆ ಹೊಂದಿಕೊಂಡಂತೆ ಹಿಂದೆ ಬಸ್ತಿ ಅಥವ ಬಸ್ತಿಹೊಸಕೋಟೆ ಇದ್ದಿತ್ತೆಂದು ಹೇಳಬಹುದು. ಇಂದಿನ ಕುರುಬರ ಬಸ್ತಿ ಹಾಗೂ ಎ.ಕೆ. ಬಸ್ತಿ ಎಂಬ ಗ್ರಾಮಗಳ ಬಳಿಯ ಕೆ.ಆರ್.ಎಸ್. ಹಿನ್ನೀರಿನ ಗುಡ್ಡದಲ್ಲಿ ಗಂಗರಸರ ಹಾಗೂ ಹೊಯ್ಸಳರ ಕಾಲಗಳ ಗೊಮ್ಮಟನ ವಿಗ್ರಹ, ತೀರ್ಥಂಕರರ ಮೂರ್ತಿಶಿಲ್ಪಗಳೂ, ಜೈನ ಬಸದಿಯ ಅವಶೇಷಗಳು, ಹಾಗೂ ಸುಂದುರ ಕೆತ್ತನೆಯಿಂದ ಕೂಡಿರುವ ಜೈನ ಅವಶೇಷಗಳ ಕುರುಹುಗಳನ್ನು ಕಾಣಬಹುದು. ಇದು (ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೋಕಿನ) ಬಸ್ತಿಹೊಸಕೋಟೆಯು ಹಿಂದೆ ಜೈನ ಧರ್ಮಿಯರ ಪ್ರಮುಖ ಕೇಂದ್ರವಾಗಿತ್ತೆಂದು ಸೂಚಿಸುತ್ತದೆ. ಕಣ್ಣಾಂಬಾಡಿ (ಕನ್ನಾಂಬಾಡಿ) ಅಣೆಕಟ್ಟೆಯ ನಿರ್ಮಾಣದಿಂದ ಹಿನ್ನೀರಿನಲ್ಲಿ ಮುಳುಗಡೆಯಾಗುತ್ತಿದ್ದ ಗೊಮ್ಮಟನ ಪ್ರತಿಮೆಯನ್ನು ಇತರೆ ತೀರ್ಥಂಕರರ ಶಿಲ್ಪಾಕೃತಿಗಳನ್ನು, ಬಸದಿಯ ಸುಂದರ ಕೆತ್ತನೆಯ ಅವಶೇಷಗಳನ್ನು ಕೆ.ಆರ್.ಎಸ್. ಹಿನ್ನೀರಿನಿಂದ ರಕ್ಷಿಸಲು, ಹಿನ್ನೀರಿನ ಗುಡ್ಡಕ್ಕೆ ತಂದು ಸಂರಕ್ಷಿಸ ಲಾಗಿದೆ ಎಂಬುದು ಕೆಲವರ ಅಭಿಪ್ರಾಯವಾಗಿದೆ. ಈ ಹಿನ್ನೆಲೆ ಯಲ್ಲಿ ಬಸ್ತಿ ಹೊಸಕೋಟೆಯ ಜೈನ ಅವಶೇಷಗಳಿಗೆ ಸಂಬಂಧಿಸಿದಂತೆ ನನ್ನ ಸಂಶೋಧನಾ ಲೇಖನವನ್ನು ಪುನರ್‌ರಚಿಸಲು ಪ್ರಯತ್ನಿಸಿದ್ದೇನೆ. ಡಾ. ಪಿ.ಎನ್. ನರಸಿಂಹಮೂರ್ತಿ ಅವರ ಜೊತೆ ಬಸ್ತಿಹೊಸಕೋಟೆಗೆ ಕ್ಷೇತ್ರ ಕಾರ್ಯ ಕೈಗೊಂಡಾಗ ಇಂದು ಅಲ್ಲಿ ಕಂಡು ಬಂದ ಜೈನ ಬಸದಿಗಳು, ಗೊಮ್ಮಟನ ವಿಗ್ರಹ ಹಾಗೂ ಇತರ ಅವಶೇಷಗಳು ನಿರ್ಮಾಣಗೊಂಡಿರುವ ಶೈಲಿಯ ಹಿನ್ನೆಲೆಯಲ್ಲಿ, ಹೊಯ್ಸಳರ ಕಾಲದ ಎರಡು ಶಾಸನಗಳು, ಹಾಗೂ ಸ್ಥಳಿಯ ಜನತೆಯ ಮೌಖಿಕ ಆಧಾರಗಳನ್ನು ಬಳಸಿಕೊಂಡು, ಬಸ್ತಿ ಹೊಸಕೋಟೆಯ ಜೈನ ಬಸದಿಗಳು, ಗೊಮ್ಮಟನ ವಿಗ್ರಹ ಹಾಗೂ ಇತರ ಅವಶೇಷಗಳು ಗಂಗರ

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಮಹಾವಿದ್ಯಾಲಯ, (ಸ್ವಾಯತ್ತ), ಮಂಡ್ಯ-೫೭೧೪೦೧.

ಕಾಲಕ್ಕೆ ಸಂಬಂಧಿಸಿದ್ದಾಗಿವೆ ಅಥವಾ ಹೊಯ್ಸಳರ ಕಾಲಕ್ಕೆ ಸಂಬಂಧಿಸಿದ್ದಾಗಿವೆ.

**ಬಸ್ತಿಯ ಗೊಮ್ಮಟನ ವಿಗ್ರಹ:** ಗೊಮ್ಮಟ ಮೂರ್ತಿಯಿರುವುದು ಮುಳುಗಡೆಯಾಗಿರುವ ಬಸ್ತಿಯ ಕೆ.ಆರ್.ಎಸ್. ಹಿನ್ನೀರಿನ ಗುಡ್ಡದಲ್ಲಿದೆ. ಬಸ್ತಿಯ ಅವಶೇಷಗಳು ಹಾಗೂ ಗೊಮ್ಮಟಮೂರ್ತಿ ಮಾತ್ರ ಹಳೆಯ ಕುರುಹಾಗಿ ಇಂದಿಗೂ ಇವೆ.

ಜೈನ ಸಂಪ್ರದಾಯದಂತೆ ಗೊಮ್ಮಟನ ವಿಗ್ರಹವನ್ನು ಕಾಯೋತ್ಸರ್ಗ ಶೈಲಿಯಲ್ಲಿ (ಸ್ಥಾನಿಕ\ಖಡ್ಗಾಸನ) ನಿರ್ಮಿಸಲಾಗಿದೆ.[೨] ಇದೇ ಶೈಲಿಯಲ್ಲಿ ಬಸ್ತಿಯ ಗೊಮ್ಮಟ ಮೂರ್ತಿಯಿದೆ. ಗೊಮ್ಮಟ ಮೂರ್ತಿಯ ಎತ್ತರಕ್ಕೂ ಕಮಾನಿನಾಕಾರದ ಗೂಡಿನಂತಹ ಗುಡಿಯನ್ನು ರಕ್ಷಣೆಗೆ ಕಟ್ಟಲಾಗಿದೆ. ಈ ಗೂಡಿನೊಳಗೆ ಸು. ೧೮ ಅಡಿ ಎತ್ತರದ ಸುಂದರವಾದ ಗೊಮ್ಮಟನ ವಿಗ್ರಹ ಪ್ರಮುಖವಾದುದ್ದು. ಇಂದಿಗೂ ಗೊಮ್ಮಟಮೂರ್ತಿ ಸುಸ್ಥಿತಿಯಲ್ಲಿದೆ. ಗೊಮ್ಮಟ ಮೂರ್ತಿಯ ಮುಖ ಮುದ್ರೆಯಲ್ಲಿ ಯೋಗಿಯ ಲಕ್ಷಣಗಳಿವೆ. ತಲೆಗೂದಲು ಗುಂಗುರು ಕೂದಲಿನಿಂದ ಕೂಡಿದೆ. ಪಾದದಿಂದ ಮಂಡಿಯವರೆಗೆ ಲತಾ ಬಳ್ಳಿಗಳು ಹಬ್ಬಿರುವಂತೆ ಸುಂದರವಾಗಿ ಕೆತ್ತಿ ಅಲಂಕರಿಸಲಾಗಿದೆ. ಆದರೆ ಸೂಕ್ಷ್ಮತೆಯಲ್ಲಿ ಶ್ರವಣ ಬೆಳ್ಗೊಳದ ಬಾಹುಬಲಿ ಶಿಲ್ಪದಲ್ಲಿರವ ಪ್ರಶಾಂತ ಭಾವವನ್ನಾಗಲೀ, ಪಕ್ಕದ ಹುತ್ತಗಳ ಮೇಲಿನಿಂದ ಬಳ್ಳಿಗಳು ಹಬ್ಬಿ ತೋಳಿನವರೆಗೆ ಹಬ್ಬಿರುವದನ್ನಾಗಲೀ, ಹುತ್ತದಿಂದ ಕುಕ್ಕಟ ಸರ್ಪಗಳು ಹೊರ ಬಂದಿರುವಂತಾಗಲೀ, ವಿಶಾಲವಾದ ಎದೆ, ಬಾಲಮುಗ್ದ ನೆಗೆ, ಸಣ್ಣ ನಡುವನ್ನು ಹೊಂದಿರುವ ಪೂರ್ಣ ಶಿಲ್ಪವಾಗಿ ಈ ಗೊಮ್ಮಟ ಮೂರ್ತಿಯನ್ನು ಶಿಲ್ಪಿಗಳು ಕೆತ್ತಿಲ್ಲ ಆದ್ದರಿಂದ ಶ್ರವಣಬೆಳ್ಗೊಳದ ಬಾಹುಬಲಿ ಶಿಲ್ಪಕ್ಕಿಂತ ಮೊದಲೇ ಈ ಮೂರ್ತಿ ಗಂಗರಸರ ಕಾಲದಲ್ಲಿ ನಿರ್ಮಾಣ ವಾಗಿದೆಯೆಂದು ಡಾ. ಪಿ.ಎನ್. ನರಸಿಂಹಮೂರ್ತಿ ಅಭಿಪ್ರಾಯಪಡುತ್ತಾರೆ. ಆದರೆ ಅನಂತರಾಮು. ಕೆ.ರವರು ತಮ್ಮ ಸಕ್ಕರೆ ಸೀಮೆ ಕೃತಿಯಲ್ಲಿ ವಿಷ್ಣುವರ್ಧನನ ಮಂತ್ರಿ ಪುಣಿಸಮಯ್ಯ ಬಸದಿಯೊಂದನ್ನು ನಿರ್ಮಿಸಿ ಈ ಗೊಮ್ಮಟಮೂರ್ತಿಯನ್ನು ನಿರ್ಮಿಸಿರಬಹುದೆಂದು ತಿಳಿದುಬರುತ್ತದೆ ಎಂದು ಉಲ್ಲೇಖಿಸಿದ್ದಾರೆ.[೩] ಗೊಮ್ಮಟನ ರಕ್ಷಣೆಗೆ ಗೊಮ್ಮಟನ ಎತ್ತರಕ್ಕೂ ಕಮಾನಿನಾಕಾರದ ಗೂಡಿನಂತಹ ಗುಡಿಯನ್ನು ಇತ್ತೀಚಿಗೆ ಜೈನ ಭಕ್ತರು ನಿರ್ಮಿಸಿರಬಹುದು.

**ಬಸ್ತಿಯ ಬಸದಿಗಳು:** ಕರ್ನಾಟಕದಲ್ಲಿ ಬಸದಿಯ ಪ್ರಯೋಗ ಮೊದಲು ಕ್ರಿ.ಶ. ೮ನೇ ಶತಮಾನದ ಶ್ರವಣ ಬೆಳ್ಗೊಳದ ಶಾಸನದಲ್ಲಿ ದಾಖಲಿಸಿದೆ. ನಂತರ ಕ್ರಿ.ಶ. ೮–೯ನೇ ಶತಮಾನದ ಸಂಪಿಗೆ ಮರದ ಶಾಸನದಲ್ಲಿ ಬಸದಿ ಎಂಬ ಶಬ್ದವಿದೆ.[೪]

ಬಸ್ತಿಹೊಸಕೋಟೆಯಲ್ಲಿ ಇರುವ ಜೈನ ಬಸದಿಗಳ ಸ್ಥಿತಿಗತಿಗಳನ್ನು ಕೆಳಗಿನಂತೆ ಅವಲೋಕಿಸಬಹುದು.

ಗೊಮ್ಮಟನ ಮೂರ್ತಿಯ ಹಿಂಬಾಗ ನಾಲ್ಕು ಸ್ತಂಭಗಳಿಂದ ಕೂಡಿರುವ ಬಸದಿ ಶಿಥಿಲಾವಸ್ಥೆಯಲ್ಲಿರುವುದು ಕಂಡುಬರುತ್ತದೆ. ಈ ಬಸದಿಯ ಗೋಪುರದ ಸ್ಥೂಪಿ ಭಾಗ ಕೆಳಗೆಡೆ ಬಿದ್ದಿದೆ. ದಕ್ಷಿಣ ಭಾಗದ ಸ್ತಂಭಗಳು ತರಂಗ ಬೋಧಿಗೆಯಲ್ಲಿದ್ದರೆ ಉತ್ತರ ಭಾಗದ ಸ್ತಂಭಗಳು ಸಾಮಾನ್ಯ ಶೈಲಿಯಲ್ಲಿವೆ. ಮೇಲ್ಭಾಗದ ತೊಲೆಯ ಛಾವಣಿಯಲ್ಲಿ ವಿವಿಧ ಮಾದರಿಯ ಮೃದಂಗ, ತಾಳ, ಕೊಳಲು, ಶಂಖಗಳನ್ನು ನುಡಿಸುತ್ತಿರುವ ವಿವಿಧ ನೃತ್ಯ ಭಂಗಿಯಲ್ಲಿರುವ ಶಿಲ್ಪಾಕೃತಿಗಳ ಸಾಲು ನೋಡುಗರನ್ನು ಆಕರ್ಷಿಸುತ್ತವೆ.

ಗೊಮ್ಮಟನ ಮೂರ್ತಿಯ ಉತ್ತರ ಭಾಗದಲ್ಲಿ ಪೂರ್ವಕ್ಕೆ ಪ್ರವೇಶದ್ವಾರವಿರುವ ಆರು ಸ್ತಂಭಗಳಿಂದ ಕೂಡಿರುವ ಬಸದಿಯು ಸಹ ಶಿಥಿಲಾವಸ್ತೆಯಲ್ಲಿರುವುದು ಕಂಡುಬರುತ್ತದೆ.

ಈ ಬಸದಿಯ ತೊಲೆಯಲ್ಲಿರುವ ವೈವಿದ್ಯಮಯವಾದ ಶಿಲ್ಪಾಕೃತಿಗಳು ನೋಡುಗರನ್ನು ಆಕರ್ಷಿಸುತ್ತವೆ.

ಗೊಮ್ಮಟ ಮೂರ್ತಿಯ ಉತ್ತರ ಭಾಗದ ಕೆ.ಆರ್.ಎಸ್ ಹಿನ್ನೀರಿನಲ್ಲಿ ಆರು ಸ್ತಂಭಗಳಿಂದ ಕೂಡಿರುವ ಉತ್ತರಕ್ಕೆ ಪ್ರವೇಶ ದ್ವಾರವಿರುವ ಬಸದಿಯು ಸಹ ಶಿಥಿಲಾವಸ್ಥೆಯಲ್ಲಿದೆ.

ಈ ಬಸದಿಯು ಕೆ.ಆರ್.ಎಸ್.ನ ಹಿನ್ನೀರಿನಿಂದ ಆವೃತವಾಗಿದ್ದರಿಂದ ಬಸದಿಯ ಬಳಿ ಹೋಗಲು ಸಾಧ್ಯವಾಗಲಿಲ್ಲ. ಇದು ಸಹ ಸಾಮಾನ್ಯ ಶೈಲಿಯಲ್ಲಿ ನಿರ್ಮಾಣವಾಗಿದೆ. ಬಹುಶಃ ಈಬಸದಿ ಹೊಯ್ಸಳರ ದಂಡನಾಯಕ ಪುಣಿಸಮಯ್ಯನ ಕಾಲದಲ್ಲಿ ನಿರ್ಮಾಣವಾಗಿರಬಹುದು.

ಮತ್ತೆ ಕೆಲವು ಬಸದಿಗಳಿರುವುದಕ್ಕೆ ಸಂಬಂಧಿಸಿದ ಕುರುಹುಗಳು ಕೆ.ಆರ್.ಎಸ್. ಹಿನ್ನೀರಿನ ದಡದಲ್ಲಿ ಬಿದ್ದಿರುವ ಮೇಲ್ಛಾವಣಿಯ ಚಪ್ಪಡಿಗಳ ಕುರುಹುಗಳಿಂದ, ಅಲ್ಲಲ್ಲಿ ಬಿದ್ದಿರುವ ಸ್ತಂಭಗಳು, ಹಾಗೂ ತರಂಗ(ಸ್ತಂಭ) ಬೋಧಿಗೆಗಳಿಂದ ತಿಳಿದು ಬರುತ್ತದೆ. ಇಲ್ಲಿನ ಬಸದಿಗಳ ಅವಶೇಷಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ.

ಒಟ್ಟಾರೆ ಈ ಬಸದಿಗಳ ನಿರ್ಮಾಣ ಶೈಲಿ, ಸ್ತಂಭಗಳು, ತರಂಗ(ಸ್ತಂಭ) ಬೋಧಿಗೆಗಳು, ಸ್ಥೂಪಿಗಳ ನಿರ್ಮಾಣ ಶೈಲಿಯನ್ನು ನೋಡಿದರೆ ಇವು ಗಂಗರ ಕಾಲದಲ್ಲಿ ನಿರ್ಮಾಣವಾಗಿವೆಯೆಂದು ಡಾ. ಪಿ.ಎನ್. ನರಸಿಂಹಮೂರ್ತಿರವರು ಅಭಿಪ್ರಾಯಪಡುತ್ತಾರೆ. ಆದರೆ ಕೆ.ಆರ್. ಪೇಟೆ ತಾಲ್ಲೋಕಿನ ಬಸ್ತಿ ಎಂಬ ಗ್ರಾಮದ ಹೊಯ್ಸಳರ ಕಾಲದ ಎರಡು ಶಾಸನಗಳು ಬಸ್ತಿಹೊಸಕೋಟೆಯ ಬಸದಿಯ ಬಗ್ಗೆ

ಮಾಹಿತಿ ನೀಡುತ್ತವೆ. ಈ ಶಾಸನಗಳ ಹಿನ್ನೆಲೆಯಲ್ಲಿ ನೋಡಿದಾಗ ಕೆಲವು ಬಸದಿಗಳು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾಗಿರುವುದಕ್ಕೆ ನಿದರ್ಶನಗಳಾಗಿವೆ. ಕೆ.ಆರ್. ಪೇಟೆ ತಾಲ್ಲೋಕ್‌ನ ಬಸ್ತಿಯ ೧೦೭ನೇ ಶಾಸನ ಬಸದಿಯ ಉತ್ತರ ದಿಕ್ಕಿನಲ್ಲಿರುವ ಪಾಳು ಮಂಟಪದ ಪೂರ್ವ ಬಾಗಿಲ ಹೊಲೆಕಲ್ಲಿನಲ್ಲಿರುವ ಸ್ವಸ್ತಿ ಶ್ರೀ ಮನ್ಮಹಾಮಂಡಲೇಶ್ವರ ವಿಷ್ಣುವರ್ಧನ ಹೊಯ್ಸಳ ದೇವರು......ತತ್ಪಾದ ಪದ್ಮೋಪಜೀವಿ ಶ್ರೀ ಮನ್ಮಹಾ ಪ್ರಧಾನಂ ದಣ್ಣನಾಯಕ ಪುಣಿಸಮಯ್ಯ ಬಸದಿಯೊಂದನ್ನು ನಿರ್ಮಿಸಿ ಮೊದೂರು ನಾಡಿನ ಮಾಣಿಕ್ಯದೊಡಲೂರು, ಮತ್ತು ಮಾವಿನ ಕೆರೆಗಳನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೫] ಬಹುಶಃ ಕೆ.ಆರ್.ಎಸ್.ನ ಹಿನ್ನೀರಿನಿಂದ ಆವೃತವಾಗಿರುವ ಬಸದಿಯು ಈತನನಿಂದ ನಿರ್ಮಿಸಲ್ಪಟ್ಟ ಬಸದಿಯಾಗಿರಬಹುದು.

ಗುರುವಿನ ಅಣತಿಯಂತೆ ಪುಣಿಸಮಯ್ಯನು ಬಸ್ತಿ ಹೊಸಕೋಟೆಯಲ್ಲಿ 'ವಿಷ್ಣುವರ್ಧನ ಹೊಯ್ಸಳ ಜಿನಾಲಯದ' ಮೂಲ ಸ್ಥಾನ ಬಸದಿಯನ್ನು (ಮತ್ತೊಂದು ಚಾಮರಾಜ ನಗರದಲ್ಲಿನ ಪಾರ್ಶ್ವನಾಥ ಬಸದಿ) ಅಲ್ಲಿ ಅವನ ಪತ್ನಿ ದಂಡನಾಯಕಿತ್ತಿ ಜಕ್ಕಿಯಬ್ಬೆ ಒಂದು ಶಿಲಾ ಬಸದಿಯನ್ನು ನಿರ್ಮಿಸಿದಳು.[೬]

ಕೆ.ಆರ್. ಪೇಟೆ ತಾಲ್ಲೋಕಿನ ಬಸ್ತಿಯ ೧೦೬ನೇ ಶಾಸನ ಜಿನದೇವರ ಬಸದಿಯ ಮುಂದಿರುವ ಮಾನಸ್ತಂಭದ ಮೇಲಿರುವ ಶಾಸನದ ವಿವರ ೧ನೇ ನರಸಿಂಹನ (ವಿಷ್ಣುವರ್ಧನ) ಕಾಲಕ್ಕೆ ಸಂಬಂಧಿಸಿದ ಕ್ರಿ.ಶ. ೧೧೬೫ರ ಶಾಸನ ಶ್ರೀಮನ್ಮಹಾಪ್ರಧಾನಂ ಹೆರ್ಗಡೆ ಶಿವರಾಜನ ನಂಬಿಕಸ್ತ ಅಧಿಕಾರಿ ಸೋಮಯ್ಯನು ಮಾಣಿಕ್ಯವೊಳಲಿನ ಹೊಯ್ಸಳ ಜಿನಾಲಯಕ್ಕೆ ಪಾರ್ಥಿವ ಸಂವತ್ಸರದ ಆಷಾಡ ಶುದ್ಧ ಪಾಡಿವ ಆದಿವಾರದಂದು ಮಾಣಿಕ್ಯವೊಳಲಿನಲ್ಲಿ ಗದ್ದೆ ಹಾಗೂ ಮುಗ್ಗದೆರೆಗಳನ್ನು ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೭] ಹೀಗೆ ಈ ಶಾಸನಗಳಿಂದ ದಿನನಿತ್ಯದ ಪೂಜೆಗಾಗಿ ಪುಣಿಸಮಯ್ಯ ಹಾಗೂ ಸೋಮಯ್ಯ ಬಸದಿಹಳ್ಳಿ, ಮಾಣಿಕ್ಯದೊಡಲೂರು, ಮಾವಿನ ಕೆರೆ ಗ್ರಾಮಗಳನ್ನು ದತ್ತಿ ಬಿಟ್ಟಿರುವುದನ್ನೂ, ಮತ್ತು ಸೋಮಯ್ಯನು ಈ ಬಸದಿಗಳ ನಿರ್ವಹಣೆಗೆ ಧನಸಹಾಯ ಮಾಡಿರುವುದನ್ನು ತಿಳಿಸುತ್ತವೆ. ಬಹುಶಃ ಈ ಶಾಸನದಲ್ಲಿ ಉಲ್ಲೇಖಿಸಿರುವ ಮಾನಸ್ತಂಭ ಕೆ.ಆರ್.ಎಸ್. ಹಿನ್ನೀರಿನಲ್ಲಿ ಮುಳುಗಡೆಯಾಗಿರಬಹುದು

ಮೇಲಿನ ಶಾಸನಗಳನ್ನು ಅವಲೋಕಿಸಿದಾಗ ಕ್ರಿ.ಶ. ೧೨ನೇ ಶತಮಾನದಲ್ಲಿ ಬಸ್ತಿಹೊಸಕೋಟೆಗೆ ಹಿಂದೆ 'ಮಾಣಿಕ್ಯದೊಡಲೂರು', 'ಮಾಣಿಕ್ಯವೊಳಲು' ಎಂಬ ಹೆಸರುಗಳಿಂದ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ.[೮]

**ಬಸ್ತಿಯ ತೀರ್ಥಂಕರರ ಶಿಲ್ಪಾಕೃತಿಗಳು:** ಜೈನ ಭಕ್ತಾದಿಗಳು ಮೂಲ ಗೊಮ್ಮಟನ ಮೂರ್ತಿಯ ಎರಡುಬದಿಯಲ್ಲಿ ಇಟ್ಟಿರುವ ತೀರ್ಥಂಕರರ ಸುಂದರವಾದ ಶಿಲ್ಪಾಕೃತಿಗಳು ಗಮನ ಸೆಳದವು. ಇವುಗಳಲ್ಲಿ ಕೆಲವು ಗಂಗರ ಕಾಲಕ್ಕೆ ಸಂಬಂಧಿಸದ್ದಿರುಬಹುದು. ಒಂದು ಸುಂದರವಾದ ತೀರ್ಥಂಕರನ ಶಿಲ್ಪಾಕೃತಿಯ ತಳಭಾಗದಲ್ಲಿ ಸಿಂಹದ ಚಿಹ್ನೆಯಿರುವುದರಿಂದ ಇದು ಮಹಾವೀರನ ಶಿಲ್ಪಕೃತಿಯೆಂದು ತಿಳಿದುಬರುತ್ತದೆ.

ಜೈನ ಧರ್ಮದಲ್ಲಿ ಯಕ್ಷ-ಯಕ್ಷಿಣಿಯರ ಆರಾಧನೆ ರೂಢಿಯಲ್ಲಿತ್ತೆಂಬುದನ್ನು ಮಹಾವೀರನ ಮೂರ್ತಿ ಶಿಲ್ಪದಲ್ಲಿರುವ ಸುಂದರವಾದ ಕೆತ್ತನೆಯಿಂದ ಕೂಡಿರುವ ಯಕ್ಷರ ಶಿಲ್ಪಾಕೃತಿಗಳಿಂದ ತಿಳಿದುಕೊಳ್ಳಬಹುದು.[೯] ತೀರ್ಥಂಕರರಿಗೆ ಸಲ್ಲಬೇಕಾದ ಪೂಜೆಯ ಜೊತೆ ಅವನ ಪಕ್ಕದಲ್ಲಿರುತ್ತಿದ್ದ ಯಕ್ಷ-ಯಕ್ಷಿಣಿಯರಿಗೂ ಪೂಜೆ ಸಲ್ಲಿಸಲಾಗುತ್ತಿತ್ತು. ಇದನ್ನೆ ಡಾ|| ದೇಸಾಯಿರವರು 'ಯಕ್ಷೀ ಆರಾಧನಾ' ಎಂದು ಕರೆದಿದ್ದಾರೆ.[೧೦] ಇದಲ್ಲದೆ ನಾಲ್ಕು ಜೈನ ತೀರ್ಥಂಕರರ ಶಿಲ್ಪಕೃತಿಗಳು ಕಂಡುಬರುತ್ತವೆ. ಇವುಗಳಲ್ಲಿ ಒಂದು ತೀರ್ಥಂಕರರ ಶಿಲ್ಪಾಕೃತಿಯ ಶಿರದ ಭಾಗ ನಾಶವಾಗಿದ್ದರೆ. ಕಾಯೋತ್ಸರ್ಗ ಹಾಗೂ ಪದ್ಮಾಸನ ಶೈಲಿಯ ತೀರ್ಥಂಕರರ ಶಿಲ್ಪಗಳು ಮುಕ್ಕಾಗಿರುವುದನ್ನು ಕಾಣಬಹುದು.

ಆದರೆ ಈ ತೀರ್ಥಂಕರರ ಶಿಲ್ಪಕೃತಿಗಳು ಯಾವ ತೀರ್ಥಂಕರರಿಗೆ ಸಂಬಂಧಿಸಿದ್ದವು ಎಂಬುದನ್ನು ತಿಳಿಯಲು ಈ ತೀರ್ಥಂಕರರ ತಳಭಾಗದಲ್ಲಿ ಯಾವುದೇ ಚಿಹ್ನೆ ಕಂಡು ಬರುವುದಿಲ್ಲ. ಆದರೂ ಈ ಶಿಲ್ಪಾಕೃತಿಗಳನ್ನು ಆದಿನಾಥ, ಶಾಂತಿನಾಥ, ನೇಮಿನಾಥ ತೀರ್ಥಂಕರರಿಗೆ ಸಂಬಂಧಿಸಿರ ಬಹುದು. ಏಕೆಂದರೆ ೨೪ ಮಂದಿ ತೀರ್ಥಂಕರರ ಶಿಲ್ಪ ವಿಶೇಷತೆಯ ಲಕ್ಷಣಗಳಲ್ಲಿ ವ್ಯತ್ಯಾಸ ಕಂಡುಬರದೆ ಒಂದೇ ತೆರನಾಗಿ ಕಂಡು ಬರುವುದರಿಂದ ತೀರ್ಥಂಕರರನ್ನು ಗುರ್ತಿಸುವಾಗ ಪೀಠಭಾಗದಲ್ಲಿರುವ ಲಾಂಛನದಿಂದ ಗುರ್ತಿಸಬೇಕಾಗುತ್ತದೆ. ಅಲ್ಲದೆ ಜೈನ ಪರಂಪರೆಯ ೨೪ ಮಂದಿ ತೀರ್ಥಂಕರರಲ್ಲಿ ೨೧ ಮಂದಿ ತೀರ್ಥಂಕರರು ಕಾಯೋತ್ಸರ್ಗ ಭಂಗಿಯಲ್ಲಿ (ಸ್ಥಾನಿಕ\ಖಡ್ಗಾಸನ) ನಿರ್ಮಾಣವಾಗಿದ್ದರೆ ಉಳಿದ ಮೂವರು ತೀರ್ಥಂಕರರಾದ ಆದಿನಾಥ, ನೇಮಿನಾಥ, ಮಹಾವೀರ ತೀರ್ಥಂಕರರು ಪದ್ಮಾಸನ ಮಾದರಿಯಲ್ಲಿ ಧ್ಯಾನಸಕ್ತರಾಗಿರುವಂತೆ ನಿರ್ಮಿಸಿರುವುದರಿಂದ ಮೇಲಿನಂತೆ ವಿಶ್ಲೇಷಿಸಬಹುದು.[೧೧] ಕ್ರಿ.ಶ. ೧೧೪೭ರಲ್ಲಿ ಹೊಯ್ಸಳ ದೊರೆ ವಿಷ್ಣುವರ್ಧನನ ಮಹಾಪ್ರಧಾನ ದಂಡನಾಯಕ ಪುಣಿಸಮಯ್ಯನು ಜೈನ ತೀರ್ಥಂಕರರಾದ ಆದಿನಾಥ, ಶಾಂತಿನಾಥ, ನೇಮಿನಾಥ

ಹಾಗೂ ಮಹಾವೀರರ ಸುಂದರವಾದ ಶಿಲ್ಪಾಕೃತಿಗಳನ್ನು ಬಳಪದ ಕಲ್ಲಿನಿಂದ ನಿರ್ಮಿಸಿರುವನೆಂದು ಮೂಲ ಗೊಮ್ಮಟನ ಮೂರ್ತಿಯ ಒಳಭಾಗದಲ್ಲಿ ಶ್ರೀಮಹಾವೀರ ಸಂಘ, ಬೆಂಗಳೂರುರವರು ಹಾಕಿಸಿರುವ ಫಲಕದಿಂದ ತಿಳಿದು ಬರುತ್ತದೆ.

ಭಾರಿ ಗಾತ್ರದ ಯಕ್ಷ-ಯಕ್ಷಿಣಿಯರ ಸುಂದರವಾದ ಶಿಲ್ಪಾಕೃತಿಗಳು ಬಹು ಆಕರ್ಷಣೀಯವಾಗಿವೆ. ಸುಂದರ ಕೆತ್ತನೆಯಿಂದ ಕೂಡಿರುವ ಹಂಸಗಳ ಹಾಗೂ ಇತರೆ ಶಿಲ್ಪಾಕೃತಿಗಳಿಂದ ಕೂಡಿರುವ ಪ್ರವೇಶದ್ವಾರದ ತೊಲೆ, ಸುಂದರವಾಗಿ ಕೆತ್ತಲ್ಪಟ್ಟಿರುವ ಅಷ್ಟದಿಕ್ಪಾಲಕರ ಶಿಲ್ಪಾಕೃತಿಗಳನ್ನೊಳಗೊಂಡ ಮೇಲ್ಚಾವಣಿಯ ಭಾಗದ ಚಪ್ಪಡಿಯ ಭಾಗಗಳನ್ನು ಮೂಲಗೊಮ್ಮಟ ಮೂರ್ತಿಯ ಬದಿಯಲ್ಲಿ ಬೆಂಗಳೂರಿನ ಜೈನ ಭಕ್ತಾದಿಗಳು ಸಂರಕ್ಷಿಟ್ಟಿರುವುದನ್ನು ಕಾಣಬಹುದು.

ಇವುಗಳಲ್ಲದೆ, ಸ್ತಂಭಗಳು, ವಿವಿಧ ಶಿಲ್ಪಾಕೃತಿಗಳು, ತರಂಗ ಬೋಧಿಗೆಗಳು, ಸ್ತಂಭ ಬೋಧಿಗೆಗಳು, ಇಟ್ಟಿಗೆಗಳು, ಎಲ್ಲಿಂದರಲ್ಲಿ ಬಿದ್ದಿರುವುದರಿಂದ ಒಂದು ರೀತಿ "ಬಯಲು ವಸ್ತು ಸಂಗ್ರಹಾಲಯದಂತೆ" ಗೋಚರಿಸುತ್ತದೆ.[೨] ಜೈನ ಭಕ್ತಾದಿಗಳು ಇಲ್ಲಿನ ಸ್ತಂಭಗಳಿಗೆ ಬಣ್ಣ ಬಳಿದು ವಿರೂಪಗೊಳಿಸುವುದರ ಮೂಲಕ ಸ್ತಂಭಗಳ ಮೂಲ ಸ್ವರೂಪಕ್ಕೆ ಧಕ್ಕೆಯನ್ನುಂಟು ಮಾಡಲಾಗಿದೆ.

**ಉಪಸಂಹಾರ:** ಬಸ್ತಿಹೊಸಕೋಟೆಯಲ್ಲಿ ಕಂಡು ಬರುವ ಜೈನ ಅವಶೇಷಗಳಿಂದಾಗಿ ಈ ಪ್ರದೇಶದಲ್ಲಿ ಹಿಂದೆ ಜೈನ ಧರ್ಮದ ಪ್ರಾಬಲ್ಯ ಹೆಚ್ಚಾಗಿತ್ತೆಂದು ತಿಳಿದುಬರುತ್ತದೆ. ಆದರೆ ಇಂದು ಈ ಪ್ರದೇಶದಲ್ಲಿ ಜೈನ ಧರ್ಮಿಯರಾರು ಕಂಡು ಬರುವುದಿಲ್ಲ, ಆದರೆ ಮಂಡ್ಯ ಜಿಲ್ಲೆ ಗಂಗರಸರ ಹಾಗೂ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿದ್ದ ಸಂದರ್ಭದಲ್ಲಿ ಜೈನ ಧರ್ಮೀಯರು ಅಧಿಕ ಸಂಖ್ಯೆಯಲ್ಲಿ ನೆಲೆಸಿದ್ದರು ಎಂಬುದಕ್ಕೆ ಈ ಪ್ರದೇಶದಲ್ಲಿರುವ ಬಸ್ತಿಪುರ, ಬಸ್ತಿಹಳ್ಳಿ, ಬಸ್ತಿಕಟ್ಟೆ, ಬಸ್ತಿಹೊಸಕೋಟೆಗೆ ಬದಲು ಕುರುಬರಬಸ್ತಿ ಹಾಗೂ ಎ.ಕೆ. ಬಸ್ತಿ ಎಂಬ ಹೆಸರಿನ ಗ್ರಾಮಗಳು ಜೈನ ಬಸದಿಯ ಹೆಸರಿನಲ್ಲಿರುವುದೇ ನಿದರ್ಶನವಾಗಿದೆ. ಈ ಪ್ರದೇಶದಲ್ಲಿದ್ದ ಜೈನ ಧರ್ಮಿಯರು ಕಾಲಾನಂತರ ಯಾವ ಕಾರಣದಿಂದ ಬೇರೆ ಕಡೆ ಹೋಗಿದ್ದಾರೆ ಎಂಬುದನ್ನು ಅರಿಯಲು ಹೆಚ್ಚಿನ ಸಂಶೋಧನೆ ಆಸಕ್ತ ಇತಿಹಾಸಕಾರರಿಂದ ಆಗಬೇಕಾಗಿರುವುದು ಅಗತ್ಯವಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಪುಟ ೫೬೫-೫೬೬, ಅನಂತರಾಮು, **ಸಕ್ಕರೆಯ ಸೀಮೆ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೪.

೨. ಪುಟ ೬೪, ಭಟ್‌ಸೂರಿ ಕೆ.ಜಿ. **ಹಾಡುವಳ್ಳಿ ಜೈನ ಶಾಸನ ವಾಸ್ತು-ಮೂರ್ತಿಶಿಲ್ಪ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೧೧.

೩. ಪುಟ ೫೬೭, ಅನಂತರಾಮು, **ಸಕ್ಕರೆಯ ಸೀಮೆ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೪.

೪. ಪುಟ ೧೮, ಭಟ್‌ಸೂರಿ ಕೆ.ಜಿ. **ಹಾಡುವಳ್ಳಿ ಜೈನ ಶಾಸನ ವಾಸ್ತು-ಮೂರ್ತಿಶಿಲ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೧೧.

೫. ಪುಟ ೯೬, **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೬, ೧೯೭೭. (ಪರಿಷ್ಕೃತ).

೬ ಪುಟ ೨೪೫, ಕೃಷ್ಣರಾವ್ ಎಂ.ವಿ., ಕೇಶವ ಭಟ್. ಎಂ. **ಕರ್ನಾಟಕ ಇತಿಹಾಸ ದರ್ಶನ,** ಕರ್ನಾಟಕ ಸಹಕಾರಿ ಪ್ರಕಾಶನ,ಬೆಂಗಳೂರು,೧೯೭೦.

೭. ಪುಟ ೯೫, **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೬, ೧೯೭೭, (ಪರಿಷ್ಕೃತ).

೮. ಪುಟ ೫೬೭, ಕೆ. ಅನಂತರಾಮು, **ಸಕ್ಕರೆಯ ಸೀಮೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೪.

೯. ಪುಟ ೨೩೮, ಗೋಪಾಲ್. ಆರ್. (ಸಂ) **ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ ಪ್ರಾಚ್ಯವಸ್ತು** ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೮.

೧೦. ಪುಟ ೧೦೦. ಚಿದಾನಂದಮೂರ್ತಿ. ಎಂ. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪ್ರಸಾರಾಂಗ, ಮೈಸೂರು ವಿ.ವಿ., ೧೯೬೬.

೧೧. ಪುಟ ೩೭, ಭಟ್ ಸೂರಿ ಕೆ.ಜಿ. **ಹಾಡುವಳ್ಳಿ ಜೈನ ಶಾಸನ ವಾಸ್ತು-ಮೂರ್ತಿಶಿಲ್ಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೧೨. ಪುಟ ೧೭, ತೈಲೂರು ವೆಂಕಟಕೃಷ್ಣ, **ಮಂಡ್ಯ ಜಿಲ್ಲೆಯ ದೇವಾಲಯಗಳು ಒಂದು ಅವಲೋಕನ,** ಭಾನು ಪ್ರಕಾಶನ, ಮಂಡ್ಯ, ೨೦೧೦.



# ಕದಂಬ ರವಿವರ್ಮನ ದಾವಣಗೆರೆಯ ತಾಮ್ರ ಶಾಸನ

ಡಾ. ದೇವರಕೊಂಡಾರೆಡ್ಡಿ*

**ಈ** ಶಾಸನದ ಜೆರಾಕ್ಸ್ (ನೆರಳಚ್ಚು) ಪ್ರತಿಯು ಗಂಗಾವತಿಯ ಶರಣಬಸವ ಎಂಬುವವರ ಕಡೆಯಿಂದ ನನ್ನ ಕಡೆಗೆ ಬಂತು. ಇವರಿಗೂ ದಾವಣಗೆರೆಯ ಕಡೆಯವರೊಬ್ಬರು ನೀಡಿದರಂತೆ. ಈ ಶಾಸನ ದೊರೆತ ಸ್ಥಳವಾಗಲೀ, ಯಾರಿಂದ ಬಂತೆಂಬ ಬಗ್ಗೆಯಾಗಲೀ ಅವರು ತಿಳಿಸಲಿಲ್ಲ. ಈಗ ಅವರ ದೂರವಾಣಿ ಸಂಖ್ಯೆಯೂ ಬದಲಾಗಿದ್ದು ಅವರನ್ನು ಸಂಪರ್ಕಿಸುವುದು ಸಾಧ್ಯವಾಗುತ್ತಿಲ್ಲ. ಹೀಗಾಗಿ ಈ ಶಾಸನಕ್ಕೆ ಸಂಬಂಧಿಸಿದ ಅನೇಕ ವಿವರಗಳು ನೇಪಥ್ಯದಲ್ಲಿಯೇ ಉಳಿದಿವೆ. ಈ ಶಾಸನ ಮೇಲ್ನೋಟಕ್ಕೆ ಮೂರು ಪತ್ರಗಳನ್ನು ಹೊಂದಿದ್ದು ಮೊದಲ ಮತ್ತು ಕಡೆಯ ಫಲಕಗಳಲ್ಲಿ ಒಳಭಾಗದಲ್ಲಿ ಮಾತ್ರ ಬರೆದಿರುವಂತೆ ತಿಳಿಯುತ್ತದೆ. ಉಂಗುರ ಇತ್ತೇ ಇಲ್ಲವೇ ? ಇದ್ದಲ್ಲಿ ಮುದ್ರೆ ಯಾವುದಿತ್ತು, ಹೇಗಿತ್ತು ಎಂಬ ಬಗೆಗೂ ವಿವರಗಳು ತಿಳಿಯುತ್ತಿಲ್ಲ. ಈ ಎಲ್ಲಾ ಕಾರಣಗಳಿಂದ ಇದು ದಾವಣಗೆರೆಯಲ್ಲಿ ದೊರೆತಿರುವುದರಿಂದ ಇದಕ್ಕೆ ರವಿವರ್ಮನ ದಾವಣಗೆರೆ ತಾಮ್ರಶಾಸನವೆಂದು ಕರೆದಿದ್ದೇನೆ.

ಶಾಸನ ಚಿತ್ರವನ್ನು ಜೆರಾಕ್ಸ್ ಮಾಡಿಸಿದ್ದು ಜೆರಾಕ್ಸ್ ಕಾಗದವನ್ನು ಮಡಚಿ ತಂದ ಕಾರಣದಿಂದ ಕಾಗದದ ಮಡತೆ ಬಳಿಯ ಅಕ್ಷರಗಳ ಕಪ್ಪು ಬಣ್ಣ ಹಾಳಾಗಿದೆ. ಇದರಿಂದ ಶಾಸನದ ಅಕ್ಷರಗಳನ್ನು ಗುರುತಿಸಲು ಅಲ್ಲಲ್ಲಿ ತೊಂದರೆಯಾಗಿದೆ. ೧೬ ಸಾಲು ಪಾಠವನ್ನು ಹೊಂದಿರುವ ಈ ಶಾಸನದಲ್ಲಿ ಪ್ರತಿಯೊಂದು ಹಲಗೆಯಲ್ಲಿ ನಾಲ್ಕು ನಾಲ್ಕು ಸಾಲುಗಳಿವೆ. ಅಕ್ಷರಗಳನ್ನು ಬಿಡಿಬಿಡಿಯಾಗಿ ಬರೆಯಲಾಗಿದೆ. ಅಕ್ಷರಗಳ ತಲೆಯ ಮೇಲೆ ಚೌಕಾಕಾರದ ತಲೆಕಟ್ಟಿಲ್ಲ. ಅಕ್ಷರಗಳ ಒಟ್ಟು ವಿನ್ಯಾಸವೂ ಚೌಕಾಕಾರದಿಂದ ಬಿಡುಗಡೆಗೊಂಡಿರುವುದನ್ನು ಕಾಣಬಹುದು. 'ಚ' ಮತ್ತು 'ವ' ಅಕ್ಷರಗಳ ಸ್ಪಷ್ಟ ವ್ಯತ್ಯಾಸ, 'ತ' ಮತ್ತು 'ನ' ಕಾರಗಳ ವ್ಯತ್ಯಾಸ 'ಶ' ಮತ್ತು 'ಗ' ಕಾರಗಳ ಬರೆವಣಿಗೆಯಲ್ಲಿ ಎದ್ದು ಕಾಣುವಂತಹ ವ್ಯತ್ಯಾಸವನ್ನು ತೋರಿಸಲಾಗಿದೆ. ಒಟ್ಟಾರೆ ಅಕ್ಷರಗಳನ್ನು ಗಮನಿಸಿದಾಗ ಕ್ರಿ.ಶ. ೬ನೆಯ ಶತಮಾನ ಆರಂಭ ಕಾಲದ ಅಕ್ಷರ ಲಕ್ಷಣಗಳನ್ನು ಒಳಗೊಂಡಿದೆ. ಲಿಪಿ ಮತ್ತು ಪಾಠದ ಅಧ್ಯಯನದಿಂದ ಇದೊಂದು ನೈಜ ಶಾಸನವೆಂದು ಹೇಳಬಹುದಾಗಿದೆ.

ಶಾಸನದಲ್ಲಿ ಬನವಾಸಿಯನ್ನಾಳಿದ ಕದಂಬರ ಪಾರಂಪರಿಕ ವಿಶೇಷಣಗಳನ್ನು ಬಳಸಿದ್ದು ಮುಂದೆ ಕದಂಬ ರಾಜ ರವಿವರ್ಮನನ್ನು ಹೆಸರಿಸಿದೆ. ಸಂಸ್ಕೃತ ಭಾಷೆ, ಕನ್ನಡ ಲಿಪಿಯಲ್ಲಿರುವ ಈ ಶಾಸನದಲ್ಲಿ ಕೊನೆಯ ಅಂದರೆ ೧೬ನೆಯ ಸಾಲು ಕನ್ನಡ ಭಾಷೆಯಲ್ಲಿರುವುದು ವಿಶೇಷ. ಸಂಸ್ಕೃತ ಭಾಷಾ ಬರೆವಣಿಗೆಯಲ್ಲಿ ಅಲ್ಲಲ್ಲಿ ಸ್ಖಾಲಿತ್ಯಗಳನ್ನು ಕಾಣಬಹುದು.

ವೈಜಯನ್ತಿಯಲ್ಲಿ ಮಾತೃಗಣಗಳಿಂದ ಅಭಿಷಿಕ್ತನಾದ ಮಹಾಸೇನನ [ಕೃಪೆಗೆ ಪಾತ್ರರಾದ], ಮಾನವ್ಯಸ ಗೋತ್ರಕ್ಕೆ ಸೇರಿದ ಹಾರೀತಿಯ ಮಕ್ಕಳೆನಿಸಿದ ಸ್ವ-ಅಧ್ಯಯನ, ಚರ್ಚೆ ಮೊದಲಾದವುಗಳನ್ನು ನಡೆಸುವ ಕದಂಬ ವಂಶದ ಶ್ರೀ ರವಿವರ್ಮನು ವೈಜಯನ್ತಿಯಿಂದ ರಾಜ್ಯಭಾರ ಮಾಡುತ್ತಿದ್ದ. ಈ ರವಿವರ್ಮನು ಕೌಣ್ಡಿನ್ಯ ಗೋತ್ರಕ್ಕೆ ಸೇರಿದ ವೇದಗಳಲ್ಲಿ ಪಾರಂಗತನಾದ ಷಟ್ಕರ್ಮ್ಮಗಳಲ್ಲಿ ನಿರತನಾದ ದೇವಶರ್ಮ್ಮ ಎಂಬ ಬ್ರಾಹ್ಮಣನಿಗೆ ಕೊಳಯಿ ಎಂಬ ಗ್ರಾಮದಲ್ಲಿ ಪುಕ್ಕೊಳಿ ಕ್ಷೇತ್ರದಲ್ಲಿ ೭೪ ನಿವರ್ತನದಷ್ಟು ಭೂಮಿಯನ್ನು ಮಹಾಪೌರ್ಣಮಿಯಂದು ನೀಡಿದಂತೆ ಹೇಳಿದೆ. ಮುಂದೆ ಶಾಪಾಶಯ ಮುಗಿದ ಮೇಲೆ ಕೊನೆಯಲ್ಲಿ ದೇವರ ಸ್ವಾಮಿಗಳ್ಗೆ ಮತ್ತು ಭೀಮಣೋ[ಜ]ಗೆ ಏನನ್ನೋ ನೀಡಿದಂತೆ ಹೇಳಿದೆ. ಕದಂಬರ ಶಾಸನಗಳಲ್ಲಿ ಕನ್ನಡ ಭಾಷೆ ಸ್ವಲ್ಪ ಸ್ವಲ್ಪವೇ ನುಸುಳುತ್ತಿದ್ದುದರ ಸಂಕೇತ ಇದಾಗಿದೆ. ಈ ಕಾಲಕ್ಕಾಗಲೇ ಹಲ್ಮಿಡಿ ಶಾಸನ ರಚನೆಯಾಗಿತ್ತು. ಕೆಲಗುಂದ್ಲಿ ಶಾಸನ ಕನ್ನಡದಲ್ಲಿಯೇ ರಚನೆಯಾಗಿದೆ. ಇದರಲ್ಲಿ ಪೂರ್ವದ ಹಳಗನ್ನಡ ಭಾಷೆಯ ಸ್ಪಷ್ಟ ಬಳಕೆ ಕಂಡುಬರುತ್ತದೆ. ಇದು ರವಿವರ್ಮನ ಕಾಲದ್ದೇ ಆದ ಶಾಸನವೆಂಬುದು ಗಮನಾರ್ಹ ಅಂಶವಾಗಿದೆ. ಹೀಗಾಗಿ ರವಿವರ್ಮನ ಕಾಲಕ್ಕೆ ಕನ್ನಡವನ್ನು ಶಾಸನಗಳಲ್ಲಿ ಬಳಸುತ್ತಿದ್ದುದು ಹೆಚ್ಚಾಗಿ ಕಂಡುಬಂದಿದೆ. ಇದರಲ್ಲಿ ಅಕ್ಷರ ಸ್ಖಾಲಿತ್ಯಗಳು ಇರುವ ಪ್ರಯೋಗಗಳೂ ಹೇರಳವಾಗಿವೆ.

* # ೩೫/೧, ೨೦ 'ಎ' ಮುಖ್ಯರಸ್ತೆ, ವೆಂಕಟೇಶ್ವರ ಲೇಔಟ್, ಮಾರುತಿನಗರ, ಬಿ.ಟಿ.ಎಂ. ಮೊದಲ ಹಂತ, ಬೆಂಗಳೂರು-೫೬೦೦೬೮.


ಮೂರನೆಯ ಹಲಗೆಯ ಮುಂಭಾಗ

ಇವನ ಕಾಲದ ಒಂದು ಶಾಸನದಲ್ಲಿ ನಿವರ್ತನ ಎಂಬ ಶಬ್ದದ ಸ್ಥಾನದಲ್ಲಿ ಮತ್ತರು ಎಂಬ ಪ್ರಯೋಗವೂ ಬಂದಿದೆ. ಶಾಸನ ಪಾಠದಲ್ಲಿ ಚೌಕ ಕಂಸದಲ್ಲಿ [ ] ಸೂಚಿಸಿರುವುದು ಊಹಾಪಾಠವಾಗಿದ್ದು, [ *] ಈ ರೀತಿಯ ಕಂಸದಲ್ಲಿ ಸೂಚಿಸಿರುವುದು ಅಸ್ಪಷ್ಟಾಕ್ಷರ ಸಂದರ್ಭದ ಪಾಠವೆಂದು ತಿಳಿಯಬೇಕು.

## ಶಾಸನಪಾಠ

**ಮೊದಲನೆಯ ಹಲಗೆಯ ಹಿಂಭಾಗ**

೧ ಸ್ವಸ್ತಿ ವಿಜಯ ವೈಜಯನ್ತ್ಯಾ[ಮ್]ಸ್ವಾಮಿಮಹಾಸೇನ ಮಾ[ತೃ]

೨ ಗಣಾನುದ್ಧ್ಯತಾಭಿಷಿಕ್ತಾ[ಮ್] ಮಾನವ್ಯಸ ಗೋತ್ರೋ ಹಾರೀತೀ

೩ ಪುತ್ರಃ ಪ್ರತಿಕೃತ ಸ್ವಾದ್ಧ್ಯಾಯ ಚರ್ಚಾಮ್ಕದಮ್ಬಾನಾಂ

೪ ಮಹಾರಾಜಾ ಶ್ರೀ ರವಿವರ್ಮ್ಮಾ ಕೌಣ್ಡಿನಿ ಸಗೋ

**ಎರಡನೆಯ ಹಲಗೆಯ ಮುಂಭಾಗ**

೫ ತ್ರಾಯ ವೇದ ಪಾರಗಾಯ ಷಟ್ಕರ್ಮ್ಮ ನಿರತಾಯದೇವ

೬ ಶರ್ಮ್ಮಣೇ ಕೊಳಯಿ ಗ್ರಾಮೇ ಪುಕ್ಕೊಳಿ ಕ್ಷೇತ್ರಂ ರಾಜ

೭ ಮಾನೇನ ಚತುಸ್ಸಪ್ತತಿ ನಿವರ್ತ್ತನಂ ವಟಾಕ ಬ * . ಯ

೮ ದುದಕ ಸ್ರಾವೇ ಸರ್ವ್ವ ಪರಿಹಾರ ಯುಕ್ತಂ ಮಹ

**ಎರಡನೆಯ ಹಲಗೆ ಹಿಂಭಾಗ**

೯ ಪೌರ್ಣ್ಣಮಾಸ್ಯಾ[ಮ್] ಸ್ವವರ್ಧ್ದಮಾನ ವಿಜಯ ಸಂವತ್ಸರೇ .

೧೦ . . . . ಕದತ್ತ ವಾ . ನು . ರಿಕೂಲ್ಯೇಷಣ್ಣಿವರ್ತ್ತನಗ್ರಹಾ

೧೧ . . . ಪೂರ್ವರಾಜ ಸ್ಥಿತ್ಯಾ . . ಯೋಸ್ಯಾಪಹರ್ತ್ತಾಸ

೧೨ ಮಹಾ ಪಾತಕ ಸಂಯುಕ್ತೋ ಭವತಿ ಯೋಭಿ ರಕ್ಷಿತಾ

**ಮೂರನೆಯ ಹಲಗೆಯ ಮುಂಭಾಗ**

೧೩ ಸಪುಣ್ಯ ಫಲ ಭಾಗ್ಬವತೀತ್ಯುಕ್ತಞ್ಚ [ಬ][ಹುಭಿ*]

೧೪ ರ್ವ್ವಸುಧಾಭುಕ್ತಾ ರಾಜಭಿಸ್ಸಗರಾದಿಭಿರ್ಯ್ಯಸ್ಯ

೧೫ ಯಸ್ಯ ಯದಾ ಭೂಮಿ ತಸ್ಯ ತಸ್ಯ ತದಾ ಫಲಮಿ

೧೬ ತಿ ದೇವರ ಸ್ವಾಮಿಗಳ್ಗೆ ಭೀಮಣೋ[ಜ]ಗೆ [ಸ್ವ]ದತ್ತಂ॥

---

* ಇಲ್ಲಿ ಅಕ್ಷರ ಅಸ್ಪಷ್ಟವಾಗಿದ್ದು ಓದಲು ಸಾಧ್ಯವಾಗುತ್ತಿಲ್ಲ.

# ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕಿನ ಕ್ಯಾಸವಾರ ಗ್ರಾಮದ ಅಪ್ರಕಟಿತ ಶಾಸನ ಮತ್ತು ವಿಷ್ಣುಶಿಲ್ಪ

ಎಸ್. ಕಾರ್ತಿಕ್* ಡಾ. ಪಿ.ವಿ. ಕೃಷ್ಣಮೂರ್ತಿ**

ಕರ್ನಾಟಕ ರಾಜ್ಯದ ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೂಕು ಹೊಳವನಹಳ್ಳಿ ಹೋಬಳಿಗೆ ಸೇರಿರುವ ಕ್ಯಾಸವಾರ (ಕೇಶವಾರ) ಗ್ರಾಮವು ಸುಮಾರು ೬೯೭ ಎಕರೆ ವಿಸ್ತೀರ್ಣದಿಂದ ಕೂಡಿದೆ. ಈ ಗ್ರಾಮದ ಶ್ರೀಯುತ ವೆಂಕಟ ರಾವ್ ಅವರ ಮೊಮ್ಮಗ ಶ್ರೀಯುತ ನರೇಂದ್ರ ಅವರ ಹೊಲದಲ್ಲಿ ಪ್ರಕೃತ ಪ್ರಕಟವಾಗುತ್ತಿರುವ, ನಮ್ಮ ಗಮನಕ್ಕೆ ಬಂದಂತೆ ಇದುವರೆಗೂ ಅಪ್ರಕಟಿತವಾಗಿರುವ ಶಾಸನವಿದೆ (ಚಿತ್ರ–೧). ಪ್ರಕಟನೆಗಾಗಿ ಈ ಶಾಸನದ ಛಾಯಾಚಿತ್ರವನ್ನು ಹಾಗೂ ಶಾಸನವಿರುವ ಸ್ಥಳದ ಭೌಗೋಳಿಕ ವಿವರಗಳನ್ನು ನಮಗೆ ನೀಡಿದ ಕೇಶವಾರದವರೇ ಆದ ಕಥೆಗಾರ ಶ್ರೀ ನಾರಾಯಣ ಭಗವಾನ್ ಅವರಿಗೆ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಈ ಪ್ರದೇಶಕ್ಕೆ ಸ್ವತಃ ಹೋಗಿ ಕ್ಷೇತ್ರಕಾರ್ಯವನ್ನು ಮಾಡಲು ಈ ಸಂದರ್ಭದಲ್ಲಿ ನಮಗೆ ಸಾಧ್ಯವಾಗಲಿಲ್ಲ.

ಈ ಶಾಸನವಿರುವ ಸ್ಥಳ ಜಯಮಂಗಲಿ, ಸುವರ್ಣ ಮುಖೀ ನದಿಗಳ ಸಂಗಮದಿಂದ ಅರ್ಧಕಿಲೋಮೀಟರ್ ದೂರ ಪಶ್ಚಿಮಕ್ಕಿದೆ. ಜೊತೆಗೆ ಶಾಸನವಿರುವ ಸ್ಥಳದಿಂದ ೨೦೦ ಮೀಟರ್ ಹಿಂದೆ ಮೊದಲು ಕೆರೆ ಇದ್ದಿತೆಂದು ತಿಳಿದುಬರುತ್ತದೆ. ಕೆರೆ ಇದ್ದ ಕುರುಹಾಗಿ ಈಗ ಕಟ್ಟೆ ಮಾತ್ರ ಕಂಡುಬರುತ್ತದೆ. ಇಲ್ಲಿಯೇ ಭಗ್ನವಾಗಿರುವ ಕೇಶವನ ಶಿಲ್ಪವೂ ಇದೆ (ಚಿತ್ರ–೨). ಶಾಸನದಲ್ಲಿ ವಿಷ್ಣುವಿನ ದೀಪಕ್ಕಾಗಿ ದಾನವನ್ನು ನೀಡಿರುವ ವಿಚಾರವನ್ನು ಹೇಳಿರುವುದರಿಂದ ಈ ಸ್ಥಳದಲ್ಲಿ ಕೇಶವ ದೇವಾಲಯವಿದ್ದಿರಬಹುದಾದ ಸಾಧ್ಯತೆಯಿದೆ. ಈ ಪ್ರದೇಶದಲ್ಲಿ ಉತ್ಖನನ ಹಾಗೂ ಕ್ಷೇತ್ರಕಾರ್ಯ ನಡೆದರೆ ಹೆಚ್ಚಿನ ಕುರುಹುಗಳು ದೊರಕಬಹುದಾಗಿದೆ. ಜೊತೆಗೆ ಪ್ರಕೃತ ಶಾಸನವಿರುವ ಗ್ರಾಮದ ಹೆಸರು ಕ್ಯಾಸವಾರ ಅಥವಾ ಕೇಶವಾರ ಎಂದಿರುವುದು ಗಮನಾರ್ಹ. ಇದರ ಮೂಲ ರೂಪ ಬಹುಶಃ ಕೇಶವಪುರ ಎಂದಿರಬಹುದೆಂದು ಕಾಣುತ್ತದೆ.

ಶಾಸನಪಾಠವು ಸಂಸ್ಕೃತ ಭಾಷೆಯಲ್ಲಿ, ಕನ್ನಡ ಲಿಪಿಯಲ್ಲಿ ರಚಿತವಾಗಿದೆ. ಶಾಸನದಲ್ಲಿ ಕಾಲವನ್ನು ಸೂಚಿಸಿಲ್ಲ. ಆದರೂ ಲಿಪಿಯ ಆಧಾರದಿಂದ ಕ್ರಿ.ಶ. ಸುಮಾರು ೮ ನೆಯ ಶತಮಾನವೆಂದು ಹೇಳಬಹುದಾಗಿದೆ. ಶಾಸನದ ಮೊದಲನೆಯ ಸಾಲಿನಲ್ಲಿ ಸ್ವಸ್ತಿ ಮತ್ತು ಶ್ರೀ ಅಕ್ಷರಗಳ ನಡುವೆ ಸುದರ್ಶನ ಚಕ್ರವನ್ನು ಕೆತ್ತಲಾಗಿದೆ. ಈ ಚಕ್ರವನ್ನು ಗಡಿಗಲ್ಲೆಂದು ಭಾವಿಸಬಹುದೇ? ವಿಚಾರಣೀಯ. ಏಕೆಂದರೆ ಅನೇಕ ದತ್ತಿಯ ಶಾಸನಗಳಲ್ಲಿ ಗಡಿಗಳನ್ನು ಸೂಚಿಸುವಾಗ ಈ ರೀತಿ ಚಕ್ರವನ್ನು ಕೆತ್ತಲಾಗಿದೆ. ಆದ ಕಾರಣ ಇವುಗಳನ್ನು ಚಕ್ರಕಲ್ಲು ಶಾಸನಗಳೆಂದು ಕರೆಯುವ ರೂಢಿಯುಂಟು. ಪ್ರಕೃತ ಶಾಸನವನ್ನೂ ಇದೇ ಗುಂಪಿಗೆ ಸೇರಿಸಬಹುದೇ ? ಎಂಬುದು ವಿಚಾರಾರ್ಹ. ಆದರೆ ಶಾಸನವು ವಿಷ್ಣುವಿನ ದೀಪಕ್ಕೆ ದಾನವನ್ನು ನೀಡಿರುವ ವಿವರವನ್ನು ದಾಖಲಿಸಿರುವ ಕಾರಣ ಇದನ್ನು ಸುದರ್ಶನ ಚಕ್ರವೆಂದು ಕೂಡ ಹೇಳಬಹುದಾಗಿದೆ. ಇದನ್ನು ಗಡಿಗಲ್ಲು ಶಾಸನವೆಂದೇ ಪರಿಗಣಿಸಿದರೆ ಕ್ರಿ.ಶ. ಸುಮಾರು ಎಂಟನೆಯ ಶತಮಾನದಲ್ಲಿ ಈ ಶಾಸನ ದೊರಕಿರುವುದು ಕಾಲದ ದೃಷ್ಟಿಯಿಂದ ಮಹತ್ತ್ವದೆನ್ನಿಸುತ್ತದೆ. ಮೊದಲು ಶಾಸನ ಪಾಠವನ್ನು ಯಥಾವತ್ತಾಗಿ ದಾಖಲಿಸಲಾಗಿದೆ.

**ಶಾಸನಪಾಠ**

೧ ಸ್ವಸ್ತಿ ಶ್ರೀ
೨ ವಿಷ್ಣವೇ ದೀಪಾಯ
೩ ಶಿವಶರ್ಮ್ಮಣಾ ಭೂ
೪ ಮಿರಿಯಮ್ ದತ್ತಾ
೫ {ತ್ತಾರ್ಯ್ಯ}ರಿಯಮ್ ಧರ್ಮ್ಮರಕ್ಷ
೬ ಣೀಯಃ

**ಶಾಸನಪಾಠದ ಅನ್ವಯ :** ಸ್ವಸ್ತಿ. ಶಿವಶರ್ಮಣಾ ಇಯಂ ಭೂಮಿಃ ವಿಷ್ಣವೇ ದೀಪಾಯ ದತ್ತಾ. ಇಯಂ ಧರ್ಮೋ ರಕ್ಷಣೀಯಃ

**ಶಾಸನಪಾಠದ ಅರ್ಥ :** ಸ್ವಸ್ತಿ. ಶಿವಶರ್ಮನಿಂದ ವಿಷ್ಣುದೇವರ ದೀಪಕ್ಕಾಗಿ ಈ ಭೂಮಿಯು ಕೊಡಲ್ಪಟ್ಟಿದೆ. ಈ ಧರ್ಮವು ರಕ್ಷಿಸಲ್ಪಡಬೇಕು.

* # ೩೫, [೧ನೇ ಮಹಡಿ], ೩ನೆಯ ಅಡ್ಡರಸ್ತೆ, ಶಿಕ್ಷಕರ ಬಡಾವಣೆ, ೧ನೆಯ ಹಂತ, ಜೆ.ಪಿ. ನಗರ ಅಂಚೆ, ಬೆಂಗಳೂರು-೭೮.
** # ೩೭, ಶ್ರೀಕೃಷ್ಣ ಕೃಪ, ೩ನೆಯ ಅಡ್ಡರಸ್ತೆ, ಸುಬ್ಬಣ್ಣ ಲೇಔಟ್, ಹರಿನಗರ ಕ್ರಾಸ್, ಬೆಂಗಳೂರು-೫೬೦ ೦೬೨.

ಮೇಲ್ಕಂಡ ಶಾಸನದಲ್ಲಿ ಅಕ್ಷರಗಳನ್ನು ಆಳವಾಗಿ ಸ್ಪಷ್ಟವಾಗಿ ಕಂಡರಿಸಲಾಗಿದ್ದರೂ ಅಕ್ಷರಗಳ ಕಂಡರಣೆ ಒಂದೇ ಗಾತ್ರದಲ್ಲಿ ಮೂಡಿಲ್ಲ. ಇದರಿಂದಾಗಿ ಒಂದೆರಡು ಕಡೆ ಅಸ್ಪಷ್ಟತೆ ಯಿದೆ. ಮೂರನೆಯ ಸಾಲಿನಲ್ಲಿ ಶಿವಶಮ್ಮಣಾ ಎಂದಿರುವುದು ಪ್ರಾಕೃತ ಭಾಷೆಯ ರೂಪವಾಗಿದೆ. ಪುಷ್ಪಾವರಣವನ್ನು ಹಾಕಿರುವ ಐದನೆಯ ಸಾಲಿನ ಮೊದಲ ಎರಡು ಅಕ್ಷರಗಳನ್ನು ತೀರಾ ಒತ್ತಾಗಿ ಕಂಡರಿಸಿರುವ ಕಾರಣ ಸ್ಪಷ್ಟವಾಗಿ ಓದಲು ಸಾಧ್ಯವಾಗುತ್ತಿಲ್ಲ. ಈ ಭಾಗದ ಪಾಠ ಕೆಟ್ಟಿದೆ. ಇದನ್ನು ಶಾಸನದ ಒಟ್ಟು ಅರ್ಥದ ದೃಷ್ಟಿಯಿಂದ ಗಮನಿಸಿ ತಾತ್ಕಾಲಿಕವಾಗಿ ಹೇಳಬಹುದಾದರೆ ಅನಗತ್ಯ ಪಾಠ ಎಂದು ಭಾವಿಸಬಹುದು. ಇದರ ಅರ್ಥವನ್ನು ಸ್ಥೂಲವಾಗಿ ಬರೆಯಲಾಗಿದೆ. ಇದಕ್ಕಿಂತ ಹೆಚ್ಚಿಗೆ ಇದನ್ನು ಅರ್ಥೈಸಲು ಸದ್ಯದಲ್ಲಿ ಸಾಧ್ಯವಾಗುತ್ತಿಲ್ಲ. ಆರನೆಯ ಸಾಲಿನಲ್ಲಿ ಕೆಲವು ಅಕ್ಷರಗಳು ಇರುವಂತೆ ಕಾಣುತ್ತದೆ ಯಾದರೂ ಅವು ಸಂಪೂರ್ಣವಾಗಿ ಸವೆದುಹೋಗಿವೆ.

ಇದೇ ಸ್ಥಳದ ಸಮೀಪದಲ್ಲಿಯೇ ಕರಿಯ ಕಲ್ಲಿನಲ್ಲಿ ಕೆತ್ತಲಾಗಿರುವ ಈಗ ಭಗ್ನವಾಗಿರುವ ಚತುರ್ಭುಜನಾದ ವಿಷ್ಣುವಿನ ಶಿಲ್ಪವೂ ದೊರೆತಿದ್ದು ಸ್ಥೂಲವಾಗಿ ಅದರ ಮೂರ್ತಿ ಲಕ್ಷಣಗಳಿಂತಿದೆ.

೧. ಈ ಮೂರ್ತಿಯ ಹಣೆ, ಕಣ್ಣು, ಕಿರೀಟಗಳ ಭಾಗ ಭಿನ್ನವಾಗಿದೆ. ಮಕರ ಕುಂಡಲ, ಕಂಠಾಭರಣ, ಕೇಯೂರ ಕಂಕಣಗಳು, ದಪ್ಪ ಯಜ್ಞೋಪವೀತ, ಉದರಬಂಧ ಹಾಗೂ ಕಟಿಬಂಧಗಳು ಕಂಡುಬರುತ್ತವೆ. ಭಗ್ನವಾಗಿದ್ದರೂ ಕ್ರಿ.ಶ. ಸುಮಾರು ೮ ನೆಯ ಶತಮಾನದ ತಲಕಾಡು ಗಂಗ-ನೊಳಂಬ ಶೈಲಿಯ ಶಿಲ್ಪಲಕ್ಷಣಗಳನ್ನು ಹೊಂದಿದೆ. ಮೂರ್ತಿಯು ಸಮಭಂಗದಲ್ಲಿ ನಿಂತಿದ್ದು ಕಟಿಪ್ರದೇಶದಿಂದ ಕೆಳಗೆ ಹೂತುಹೋಗಿದ್ದು ಬಹುಶಃ ಗದೆ, ಕಾಲು ಮತ್ತು ಪೀಠವಿರುವ ಭಾಗ ಕೂಡ ಹೂತು ಹೋಗಿರುವಂತೆ ಕಂಡುಬರುತ್ತದೆ.

೨. ಮೂರ್ತಿಯ ಮೇಲಿನ ಬಲಗೈಯುಲ್ಲಿ ಚಕ್ರ, ಮೂರ್ತಿಯ ಕೆಳಗಿನ ಬಲಗೈಯಲ್ಲಿ ಅಭಯ /ಪದ್ಮ, ಮೂರ್ತಿಯ ಮೇಲಿನ ಎಡಗೈಯಲ್ಲಿ ಶಂಖ, ಮೂರ್ತಿಯ ಕೆಳಗಿನ ಎಡಗೈಯಲ್ಲಿ ಗದೆ (?)

೩. ಸ್ಥೂಲವಾಗಿ ಹೇಳಬಹುದಾದರೆ ಈ ಶಿಲ್ಪವು ಸುಮಾರು ೧.೨ ಮೀಟರ್ ಎತ್ತರ, ೬೫ ರಿಂದ ೭೦ ಸೆಂ. ಮೀಟರ್ ಅಗಲವಿದೆ ಹಾಗೂ ಎದೆಯ ಭಾಗವು ಸುಮಾರು ೩೦ ಸೆಂ.ಮೀಟರ್ ದಪ್ಪವಿದೆ.

ಮೇಲಿನ ಲಕ್ಷಣಗಳಿಂದ ಕೂಡಿರುವ ಇದನ್ನು ಜನಾರ್ದನ ಮೂರ್ತಿಯ ಶಿಲ್ಪವೆಂದು ಹೇಳಬಹುದು. ಜನಾರ್ದನ ಮೂರ್ತಿಯ ಲಕ್ಷಣವನ್ನು ಪಾಂಚರಾತ್ರ ಕ್ರಿಯಾಪಾದದಲ್ಲಿರುವಂತೆಯೇ ಮುಮ್ಮಡಿ ಕೃಷ್ಣರಾಜರ (ಕ್ರಿ.ಶ. ೧೭೯೪-೧೮೬೮) ಶ್ರೀತತ್ತ್ವನಿಧಿಯಲ್ಲಿ **{ಶ್ರೀತತ್ತ್ವನಿಧಿ (ದ್ವಿತೀಯ ಸಂಪುಟ, ವಿಷ್ಣುನಿಧಿ), ಪ್ರಾಚ್ಯವಿದ್ಯಾ ಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೨೦೦೨, ಪುಟ ೩೩}** ದಾಖಲಿಸಿದ್ದು ಸಂಬಂಧಿಸಿದ ಪಠ್ಯವಿಂತಿದೆ.

**ಜನಾರ್ದನೋ ರಕ್ತವರ್ಣಶ್ಚಕ್ರಶಙ್ಖಗದಾಭೃತ್**
**ವಾಮೋರ್ಧ್ವಕರೇ ಶಙ್ಖಃ । ವಾಮಾಧಃ ಕರೇ ಗದಾ ।**
**ದಕ್ಷಾಧಃ ಕರೇ ಪದ್ಮಮ್ । ದಕ್ಷೋರ್ಧ್ವಕರೇ ಚಕ್ರಮ್**

ಮೇಲಿನ ವಿಶ್ಲೇಷಣೆಯಿಂದ ಹೇಳಬಹುದಾದರೇ ಇಲ್ಲಿ ಜನಾರ್ದನ ದೇವಾಲಯವಿದ್ದಿತು. ಈ ಸ್ಥಳವನ್ನು ಉತ್ಖನನಕ್ಕೆ ಒಳಪಡಿಸಿದರೆ ಹೆಚ್ಚಿನ ಮಾಹಿತಿ ಲಭ್ಯವಾಗುವುದರಲ್ಲಿ ಸಂದೇಹವೇನಿಲ್ಲ. ಆದರೆ ಕ್ರಿ.ಶ. ೮ನೆಯ ಶತಮಾನಕ್ಕೆ ಸೇರುವ ಈ ಮೂರ್ತಿಯ ವಿವರಗಳು ಮತ್ತು ಶಾಸನೋಕ್ತ ವಿವರಗಳ ಬಗೆಗೆ ವಿಶ್ಲೇಷಣೆ ನಡೆಯಬೇಕು. ಇಲ್ಲಿ ಯಾವ ರೀತಿ ವಿಷ್ಣುವಿನ ಆರಾಧನೆ ನಡೆಯುತ್ತಿದ್ದಿತು, ಅದು ಯಾವ ರೂಪದಲ್ಲಿ ಮುಂತಾದ ವಿವರಗಳನ್ನೆಲ್ಲಾ ವಿಮರ್ಶಿಸಿದರೆ ಈ ಪ್ರದೇಶದ ವಿಷ್ಣುವಿನ ಆರಾಧನೆಯ ಒಂದು ಮಜಲನ್ನು ಚಿತ್ರಿಸಬಹುದು. ಕೇಶವನ ಆರಾಧನೆ ಪ್ರಚಲಿತವಾದದ್ದು ಸಾಮಾನ್ಯವಾಗಿ ಕ್ರಿ.ಶ. ಹನ್ನೊಂದನೆಯ ಶತಮಾನದ ಸುಮಾರಿಗೆ. ಕ್ಯಾಸವಾರ ಅಥವಾ ಕೇಶವಾರದ ಮೂಲ ಹೆಸರು ಕೇಶವಪುರವೆಂದು ಇದ್ದಿರಬಹುದು ಎಂಬ ಅಂಶವನ್ನು ಮೇಲೆ ಹೇಳಿದ್ದರೂ ಪ್ರಕೃತ ಶಾಸನದ ಕಾಲದಲ್ಲಿ ಅಂದರೆ ಕ್ರಿ.ಶ. ಎಂಟನೆಯ ಶತಮಾನದ ಸುಮಾರಿಗೆ ಈ ಪ್ರದೇಶದ ಹೆಸರು ಏನಿತ್ತು ಎಂಬುದರ ಬಗೆಗೂ ಅಧ್ಯಯನ ನಡೆಯ ಬೇಕಿದೆ.

ಪ್ರಕೃತ ಶಾಸನದಂತೆಯೇ ಪ್ರತಿಯೊಂದು ಜಿಲ್ಲೆ ಮತ್ತು ತಾಲ್ಲೂಕಿನ ಗ್ರಾಮಗಳಲ್ಲಿಯೂ ಅನೇಕ ಅಪ್ರಕಟಿತ ಶಾಸನಗಳು ಕಂಡುಬರುವ ಸಾಧ್ಯತೆ ಬಹಳವಾಗಿದೆ. ಇವೆಲ್ಲವುಗಳನ್ನು ಕ್ಷೇತ್ರಕಾರ್ಯದ ಮೂಲಕ ಪತ್ತೆಮಾಡಿ ಪ್ರಕಟಿಸಬೇಕು. ಇದರಿಂದ ಹೆಚ್ಚಿನ ಅಧ್ಯಯನ ಸಾಧ್ಯವಾಗುತ್ತದೆ. ಈ ಕಾರ್ಯ ನಿರಂತರವಾಗಿ ನಡೆಯಲೆಂದು ಹಾರೈಸುತ್ತೇವೆ.

[ಈ ಶಾಸನ ಪಾಠವನ್ನು ಮತ್ತು ವಿಷ್ಣುವಿನ ಶಿಲ್ಪದ ಬಗೆಗಿನ ವಿವರಗಳನ್ನು ಬರೆಯುವಲ್ಲಿ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಸಂಶೋಧಕ ವಿದ್ವಾಂಸರಾದ ಎಸ್. ಜಗನ್ನಾಥ ಅವರೂ, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ಬೆಂಗಳೂರು ವಲಯದ ನಿವೃತ್ತ ಉಪ ಅಧೀಕ್ಷಕ ಪುರಾತತ್ತ್ವವಿದರಾದ ಎಂ.ವಿ. ವಿಶ್ವೇಶ್ವರ ಅವರೂ ಬಹಳವಾಗಿ ನೆರವು ನೀಡಿದ್ದಾರೆ. ಇವರುಗಳಿಗೆ ನಮ್ಮ ಕೃತಜ್ಞತೆಗಳನ್ನು ಸೂಚಿಸುತ್ತೇವೆ]



೨೧

# ಹೂವಿನಹೊಳೆಯ ಪ್ರಾಚೀನ ಸ್ಮಾರಕಗಳು ಮತ್ತು ಅಪ್ರಕಟಿತ ಶಾಸನ

ಡಾ. ಮುತ್ತುರಾಜು*

**ಹೂ**ವಿನಹೊಳೆ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲ್ಲೂಕಿನ ಒಂದು ಗ್ರಾಮ. ಇದನ್ನು ಹೂವಿನಹಳ್ಳಿ, ಹೂನಳ್ಳಿ ಎಂತಲೂ ಕರೆಯಲಾಗುತ್ತಿದೆ. ಸುವರ್ಣಮುಖಿ ನದಿ ಇಲ್ಲಿ ಹರಿಯುತ್ತಿದ್ದು, ಹೊಳೆ ಎಂಬ ಜಲಸಂಬಂಧಿ ಉತ್ತರಪದ ಬಂದಿದ್ದು ಸಸ್ಯವಾಚಕವಾದ 'ಹೂವು' ಪದ ಪೂರ್ವಪದ ವಾಗಿದೆ. ಈ ನದಿಯ ದಡದಲ್ಲಿ ವಿಸ್ತಾರವಾಗಿ ಗ್ರಾಮ ಬೆಳೆದು ಬಂದಿದೆ. ಈಶ್ವರಗೆರೆಯಿಂದ ಈ ಊರಿಗೆ ಪ್ರವೇಶ ಮಾಡುವ ಮುನ್ನ ಸಿಗುವ ಬ್ರಿಡ್ಜ್ ಒಂದರ ಮಗ್ಗುಲಲ್ಲಿ 'ಮಸಿಯಮ್ಮ' ಎಂದು ಕರೆಯುವ ಮೂರ್ತಿಯೊಂದು ಇದೆ. ಪ್ರಸ್ತುತ ಇದನ್ನು ಕಟ್ಟೆಯೊಂದರ ಮೇಲೆ ನಿಲ್ಲಿಸಲಾಗಿದ್ದು ಗುಡಿ ಇಲ್ಲದೇ ಪೂಜಿಸಲಾಗುತ್ತಿದೆ. ನಂಬಿಕೆಯಂತೆ ಈ ಮೂರ್ತಿಗೆ ಕೆಂಪು ಸೀರೆ ಹಸಿರು ಬಳೆಗಳನ್ನು ತೊಡಿಸಿ ಸಾಂಪ್ರದಾಯಕವಾಗಿ ಜನತೆ ಪೂಜೆ ಸಲ್ಲಿಸುತ್ತಿದ್ದಾರೆ.

ವಾಸ್ತವವಾಗಿ ಇದೊಂದು ಮಹಾಸತಿ ಸ್ಮಾರಕವಾಗಿದ್ದು ಪತಿಯ ಮರಣದ ಕಾರಣವನ್ನು ತನ್ನ ಚಿತ್ರಣದಲ್ಲಿಯೇ ಹೇಳುವಂತಹದ್ದಾಗಿದೆ. ಇದು ನಾಲ್ಕು ಅಡಿ ಎತ್ತರ ಮತ್ತು ಎರಡು ಅಡಿ ಅಗಲದ ಸಿಸ್ಟ್ ಶಿಲೆಯಿಂದ ಮಾಡಿರುವಂತಹ ದ್ದಾಗಿದೆ. ಹತ್ತು ಅಡಿಗಳ ದುಂಡುಕಟ್ಟೆಯ ಮಧ್ಯದಲ್ಲಿ ನಿಂತಿರುವ ಈ ಸ್ಮಾರಕದ ಪಾದಗಳು ಮಾತ್ರ ತುಂಡಾಗಿ ಬಳಿಯಲ್ಲಿಯೆ ಮಣ್ಣಿನಲ್ಲಿ ಬೆರೆತುಹೋಗಿವೆ. ಇತರ ಮಹಾಸತಿಯ ಮೂರ್ತಿಗಳಂತೆ ಎತ್ತಿದ ಬಲಗೈ ಇದ್ದು ಇದರಲ್ಲಿ ನಿಂಬೆಹಣ್ಣನ್ನು ಹಿಡಿಯಲಾಗಿದೆ. ಇಳಿಬಿಟ್ಟ ಎಡದ ಕೈನಲ್ಲಿ ಕನ್ನಡಿಯನ್ನು ಹಿಡಿಯಲಾಗಿದೆ. ಶಿರದ ಹಿಂದೆ ಪ್ರಭಾವಳಿ ಇದ್ದು ಎತ್ತಿ ಕಟ್ಟಿದ ತುರುಬು ಶಿರದ ಬಲಭಾಗದಲ್ಲಿ ಬಂದಿದೆ. ಕರ್ಣಗಳಲ್ಲಿ ಹಿರಿದಾದ ಆಭರಣಗಳಿದ್ದು ಮುಂಗೈ, ತೋಳು ಮತ್ತು ಎದೆಯ ಮೇಲೆ ಮತ್ತು ನಡುವಿನಲ್ಲೂ ಆಭರಣಗಳಿವೆ. ನಡುವಿನ ಆಭರಣಕ್ಕೆ ಹೊಂದಿಕೊಂಡಂತೆ ಅಲಂಕಾರಯುಕ್ತವಾದ ವಸ್ತ್ರದ ಉಡುಗೆ ಇದೆ. ಈ ವಸ್ತ್ರದ ಅಲಂಕಾರಿಕ ನೆರಿಗೆಗಳು ಗಮನಾರ್ಹವಾಗಿವೆ. ಈ ಸ್ಮಾರಕದ ಮುಖದ ಭಾವ ಸವೆದುಹೋಗಿದೆ. ಸಮಭಂಗಿಯಲ್ಲಿ ನಿಂತಿರದೆ ಎಡಗಾಲನ್ನು ತುಸು ಭಾಗಿಸಿ ನಿಂತ ಮೂರ್ತಿ ಇದಾಗಿದೆ.



ಈ ಮೂರ್ತಿಯ ಬಲಭಾಗದ ಕೆಳಗಡೆ ಮಡಿದ ಮಹಾಸತಿಯ ಪತಿಯ ಪುಟ್ಟ ಪ್ರಮಾಣದ ಚಿತ್ರಣವಿದ್ದು ಈತ ತನ್ನ ಬಿಚ್ಚುಗತ್ತಿಯಿಂದ ತನ್ನ ಮೇಲೆ ಆಕ್ರಮಣ ಮಾಡುತ್ತಿರುವ ಹುಲಿಯೊಂದನ್ನು ಇರಿಯುತ್ತಿದ್ದಾನೆ. ಹುಲಿಯು ತನ್ನ ಬಾಯಿಯನ್ನು ತೆರೆದು ಇವನ ಮೇಲೆ ಎರಗಿ ಬಂದಿದೆ. ವೀರನ ಶಿರದ ಹಿಂದೆ ಖಡ್ಗವೊಂದರ ಚಿತ್ರಣವಿದೆ. ಈ ವೀರನು ಹುಲಿಯಿಂದ ತನ್ನನ್ನು ರಕ್ಷಿಸಿಕೊಳ್ಳುವಲ್ಲಿ ವಿಫಲನಾಗಿ ಹತನಾಗಿದ್ದಾನೆ. ಪತಿಯನ್ನು ಸಾವಿನಲ್ಲೂ ಹಿಂಬಾಲಿಸುವ ನಂಬಿಕೆಯ ಪದ್ಧತಿಯಿಂದ ಈತನ ಪತ್ನಿ ಚಿತೆ ಏರಿ ಸಹಗಮನ ಮಾಡಿದ್ದಾಳೆ. ಮಾಸ್ತಿ ಕಲ್ಲು ಸ್ಮಾರಕಗಳಲ್ಲಿ ಕಲ್ಲಿಗೆ ಹೊಂದಿ ಕೊಂಡಂತೆಯೇ ಶಿಲ್ಪಗಳನ್ನು ಬಿಡಿಸಿರುವುದು ಈವರೆಗೆ ಕರ್ನಾಟಕದಲ್ಲಿ ದೊರೆತಿರುವ ಸ್ಮಾರಕಗಳಲ್ಲಿ ಸಿಂಹಪಾಲಿನವು ಗಳಾಗಿವೆ. ವಿರಳವಾಗಿ ಸ್ಮಾರಕಗಳನ್ನು ಮೂರ್ತಿಗಳನ್ನಾಗಿ ಕೆತ್ತಿರುವ ಕೆಲವು ಸ್ಮಾರಕಗಳಲ್ಲಿ ಇದೂ ಒಂದು ಆಗಿರುವುದು. ವಿಶೇಷವಾಗಿದೆ. ಅಮರಳಾದ ಈ ಮಹಾಸತಿಯನ್ನು

* ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಉಡುವಳ್ಳಿ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ-೫೭೭೫೯೮.



ಅಂದಿನಿಂದ ಪೂಜಭಾವದಿಂದ ದೈವತ್ವಕ್ಕೇರಿಸಿ ಪೂಜಿಸಿಕೊಂಡು ಬರಲಾಗುತ್ತಿದೆ. ಮಾಸ್ತಿ ಸ್ಮಾರಕಗಳ ಆಧಾರದ ಮೇಲೆ ಈ ಸ್ಮಾರಕದ ಕಾಲಮಾನವನ್ನು ಕ್ರಿ.ಶ. ಸುಮಾರು ಹದಿಮೂರನೇ ಶತಮಾನವೆಂದು ನಿರ್ಧರಿಸಬಹುದಾಗಿದೆ.

ಇಲ್ಲಿಯ ಗೊಲ್ಲರಹಟ್ಟಿ ಬಳಿಯ ಗೌಡಜ್ಜ ಎಂಬುವರ ಹೊಲದಲ್ಲಿ ಮಣ್ಣಿನಲ್ಲಿ ಹೂತು ಹೋಗಿದ್ದ ತುರುಕಾಗಳಗದ ವೀರಗಲ್ಲುವೊಂದನ್ನು ಇತ್ತೀಚೆಗೆ ಹೊರತೆಗೆದು ಇಲ್ಲಿಯೇ ನಿಲ್ಲಿಸಲಾಗಿದೆ. ಇದನ್ನು ಪಶ್ಚಿಮಾಭಿಮುಖವಾಗಿ ನಿಲ್ಲಿಸಲಾಗಿದೆ. ಎಂಟು ಅಡಿ ಎತ್ತರ ಮತ್ತು ಐದುಕಾಲು ಅಡಿ ಅಗಲವನ್ನು ಹೊಂದಿದೆ. ಈ ವೀರಗಲ್ಲು ಸ್ಮಾರಕವು ಮೂರ ಹಂತಗಳ ಚಿತ್ರಣವನ್ನು ಹೊಂದಿದೆ. ಕೆಳಹಂತದ ಬಲಭಾಗದಲ್ಲಿ ನಾಲ್ಕು ಗೋವುಗಳು ಬಲಮುಖವಾಗಿ ಚಲಿಸುತ್ತಿರುವ ಚಿತ್ರಣವಿದೆ. ಈ ಗೋವುಗಳ ಹಿಂದೆ ಖಡ್ಗವಿಡಿದು ಎದುರಾಳಿಗಳಾದ ಇಬ್ಬರು ಗೋವು ಅಪಹರಣಕಾರರ ಜೊತೆ ಹೋರಾಡುತ್ತಿರುವ ಚಿತ್ರಣವಿದೆ. ವೀರನು ತನ್ನ ಬಲಗೈನಲ್ಲಿ ಹಿಡಿದ ಖಡ್ಗವನ್ನು ಶತ್ರುಗಳ ಮೇಲೆ ಪ್ರಯೋಗಿಸಲು ಬಲವಾಗಿ ಬೀಸುತ್ತಿದ್ದಾನೆ. ಎದುರಾಳಿ ಗಳಾದ ಶತ್ರುಗಳು ತಮ್ಮ ಧನಸ್ಸಿನಿಂದ ಈತನ ಮೇಲೆ ಬಾಣಪ್ರಯೋಗ ಮಾಡಿದ್ದಾರೆ. ಈ ಬಾಣಗಳು ವೀರನ ಉದರಕ್ಕೆ ತಾಗಿಕೊಂಡಿವೆ. ವೀರನು ಹತನಾಗಿ ವೀರಮರಣ ವನ್ನು ಹೊಂದಿದ್ದಾನೆ. ಆದರೆ ಶತ್ರುಗಳ ಸೆರೆಯಿಂದ ಗೋವುಗಳನ್ನು ರಕ್ಷಿಸಿದ್ದಾನೆ.



ಎರಡನೆಯ ಹಂತದಲ್ಲಿ ನಾಲ್ವರು ಅಪ್ಸರೆಯರು ವೀರನನ್ನು ಪಲ್ಲಕ್ಕಿಯೊಂದರಲ್ಲಿ ಕುಳ್ಳಿರಿಸಿಕೊಂಡು ಚಾಮರಸೇವೆ ಸಹಿತ ಸಂಗೀತ ವಾದ್ಯಗಳನ್ನು ನುಡಿಸುತ್ತ ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ.

ಮೂರನೆಯ ಹಂತದಲ್ಲಿ ಈ ನಾಲ್ವರು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದುತಂದಿದ್ದು ಶಿಲ್ಪದ ಇಕ್ಕೆಲಗಳಲ್ಲೂ ಇಬ್ಬರು ಅಪ್ಸರೆಯರು ಪಲ್ಲಕ್ಕಿಯನ್ನು ಮಂಡಿಯೂರಿ ಹಿಂದಕ್ಕೆ ಬಲಗಾಲುಗಳನ್ನು ಚಾಚಿ ಕೈಗಳಿಂದ ಹಿಡಿದುಕೊಂಡು ಇಳಿಸುತ್ತಿದ್ದು ಇನ್ನಿಬ್ಬರು ಚಾಮರಸೇವೆಯಲ್ಲಿ ನಿರತರಾಗಿದ್ದಾರೆ. ವೀರನು ಮಧ್ಯದ ಪೀಠದ ಮೇಲೆ ಪಾರ್ಶ್ವಮುಖಿಯಾಗಿ ಕುಳಿತಿದ್ದಾನೆ.

ಎರಡನೆ ಹಂತದ ಬಲಭಾಗದಲ್ಲಿ ೧೩ ಅಕ್ಷರಗಳ ಪುಟ್ಟ ಶಾಸನವು ಲಿಪಿಸ್ವರೂಪದಲ್ಲಿ ನೊಳಂಬರ ಕಾಲದ ಆರಂಭದ ಲಿಪಿಗಳಾಗಿವೆ. ನಾಲ್ಕು ಸಾಲುಗಳ ಈ ಪುಟ್ಟ ಶಾಸನದ ಬರಹ ಇಂತಿದೆ.

ಸ್ವತ್ರಶ್ರೀ
ಣೊಟಣ್ಬ
ನೇ ಅಟ್ಕ
ಕಲೀರಯ

ಲಿಪಿಯ ಆರಂಭದಲ್ಲಿ ಸ್ವಸ್ತಿಶ್ರೀ ಬದಲು ಸ್ವತ್ರಶ್ರೀ ಎಂದು ಬರೆಯಲಾಗಿದೆ. ನೊಳಂಬರ ಕಾಲದಲ್ಲಿ ಕಲೀರಯ ಎಂಬ ವೀರನು ಮಡಿದ ವಿಷಯವನ್ನು ಶಾಸನವು ತಿಳಿಸುತ್ತಿದ್ದು ಇದರ ಕಾಲ ಕ್ರಿ.ಶ. ಸುಮಾರು ೮೫೦ ಆಗಿದೆ. ಲಿಪಿಯನ್ನು ಹೊಂದಿದ ಹಿರಿಯೂರಿನ ತಾಲ್ಲೂಕಿನ ಪ್ರಾಚೀನ ಸ್ಮಾರಕ ಇದಾಗಿದೆ.

ಈ ಗ್ರಾಮದಲ್ಲಿ ದೊರೆತ ಪ್ರಾಚೀನ ವೀರ ಮತ್ತು ಮಾಸ್ತಿಕಲ್ಲುಗಳ ಕುರುಹುಗಳಿಂದಾಗಿ ಈ ಗ್ರಾಮದಲ್ಲಿ ಕ್ರಿ.ಶ. ಸುಮಾರು ೮೫೦ಕ್ಕೆ ಮುನ್ನವೇ ಜನಜೀವನವಿದ್ದು ಅಂದಿನಿಂದ ನಿರಂತರವಾಗಿ ಸಾಮಾಜಿಕ ಧಾರ್ಮಿಕ ಮತ್ತು ರಾಜಕೀಯವಾಗಿ ಮುಂದುವರೆದುಕೊಂಡು ಬಂದಿದೆ.



# ಆರನೆಯ ವಿಕ್ರಮಾದಿತ್ಯನ ಹಾವೇರಿ ಜಿಲ್ಲೆ ಹಾನಗಲ್ ತಾಲ್ಲೂಕಿನ ಅಪ್ರಕಟಿತ ಶಾಸನ

ಡಾ. ಕೆ.ಎಸ್. ಪಾಟೀಲ*

**ಹಾ**ವೇರಿ ಜಿಲ್ಲೆಯ ತಾಲ್ಲೂಕು ಕೇಂದ್ರವಾದ ಹಾನಗಲ್ಲದ ಶ್ರೀ ಕುಮಾರೇಶ್ವರ ಮಠದ ಆವರಣದಲ್ಲಿ ೨೦೦೧ರ ಫೆಬ್ರುವರಿ ೬ರಂದು ನೂತನ ಕಟ್ಟಡ ನಿರ್ಮಾಣಕ್ಕಾಗಿ ಪಾಯ ತೊಡುತ್ತಿದ್ದ ಸಂದರ್ಭದಲ್ಲಿ ಕಲ್ಯಾಣದ ಚಳುಕ್ಯ ಮನೆತನದ ಆರನೆಯ ವಿಕ್ರಮಾದಿತ್ಯನ ಅಪ್ರಕಟಿತ ಶಾಸನ ಪತ್ತೆಯಾಗಿದೆ. ಈ ಶಾಸನವನ್ನು ಕಪ್ಪುಮಿಶ್ರಿತ ನೀಲಿಛಾಯೆಯ ಬಳಪದ ಶಿಲೆಯ ಮೇಲೆ ಬರೆಯಲಾಗಿದೆ. ಈ ಶಿಲೆಯು ೧೮೦ ಸೆಂ.ಮೀ. ಎತ್ತರ ಮತ್ತು ೮೦ ಸೆಂ.ಮೀ. ಅಗಲವಾಗಿದೆ. ಇದರಲ್ಲಿ ಒಟ್ಟು ೪೪ ಸಾಲುಗಳಿವೆ. ಶಿಲೆಯ ಮೇಲ್ಭಾಗದಲ್ಲಿ ಉಬ್ಬುಶಿಲ್ಪ ಪಟ್ಟಿಕೆಯಿದೆ. ಇದರ ಮಧ್ಯದಲ್ಲಿ ಶಿವಲಿಂಗ, ಬಲಪಾರ್ಶ್ವದಲ್ಲಿ ನಂದಿ, ಎಡಪಾರ್ಶ್ವದಲ್ಲಿ ಒಬ್ಬ ಯತಿ ನಿಂತಿದ್ದಾನೆ. ಯತಿ ಎಡಗೈಯಲ್ಲಿ ಘಂಟೆ ಮತ್ತು ಬಲಗೈಯಲ್ಲಿ ಧೂಪಾರತಿಯನ್ನು ಹಿಡಿದುಕೊಂಡು ಶಿವಲಿಂಗಕ್ಕೆ ಪೂಜೆಗೈಯುತ್ತಿದ್ದಾನೆ. ಇಕ್ಕೆಲಗಳಲ್ಲಿ ಸೂರ್ಯ ಮತ್ತು ಚಂದ್ರರ ಚಿತ್ರಗಳಿವೆ. ಶಾಸನವನ್ನು ಕನ್ನಡ ಲಿಪಿ ಮತ್ತು ಭಾಷೆಯಲ್ಲಿ ಬರೆಯಲಾಗಿದೆ. ಅಕ್ಷರಗಳು ಸ್ಪಷ್ಟವಾಗಿವೆ. ಶಾಸನದಲ್ಲಿ ಉಲ್ಲಿಖಿತವಾಗಿರುವ ತೇದಿಯ ಆಧಾರದ ಮೇಲೆ ಈ ಶಾಸನದ ಕಾಲವು ಕ್ರಿ.ಶ. ೧೧೧೯ರ ನವೆಂಬರ್ ೬, ಗುರುವಾರಕ್ಕೆ ಸಮನಾಗುತ್ತದೆ. ಶಾಸನದ ಪಾಠ, ಸಾರಾಂಶ ಮತ್ತು ಮಹತ್ವವನ್ನು ಈ ಕೆಳಗಿನಂತೆ ಗಮನಿಸಬಹುದು.

**ಶಾಸನದ ಪಾಠ**[೧]

೧ @ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯನಗರಾಂಭ

೨ ಮೂಲಸ್ತಂಭಾಯ ಸಂಭವೇ ॥ ಸ್ವಸ್ತಿ ಶ್ರೀಪೃಥ್ವೀವಲ್ಲಭ

೩ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಸತ್ಯಾ

೪ ಶ್ರಯ ಕುಳತಿಳಕಂ ಚಾಳುಕ್ಯಭರಣಂ ಶ್ರೀಮತ್ತ್ರಿಭುವನ ಮಲ್ಲ

೫ ದೇವರ ವಿಜಯರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂ

೬ ದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ॥ ತತ್ಪಾದ ಪದ್ಮೋಪಜೀವಿ ಸ್ವಸ್ತಿ ಶಮದಿಶತ

೭ ಪಂಚಮಹಾಸಬ್ಧ ಮಹಾಮಂಡಳೇಶ್ವರಂ ಬನವಾಸಿ ಪುರವರಾಧೀಶ್ವ

೮ ರಂ ಜಯನ್ತಿ ಮಧುಕೇಶ್ವರದೇವಲಬ್ಧವರಪ್ರಸಾದ ಮ್ರಿಗಮದಾಮೋದ ತ್ರಕ್ಷ

೯ ಕ್ಷ್ಮಾಸಂಭವಂ ಚತುರಾಸಿತಿನಗ್ರರಾದಿಷ್ಠಿತಂ ಲಲಾಟಲೋಚನಂ ಚತುರ್ಭುಜಂ

೧೦ ಜಗದ್ವಿದಿತಾಷ್ಟದಸಾಶ್ವಮೇಧ ದೀಕ್ಷಾದೀಕ್ಷಿತ ಹಿಮವದ್ಗಿರೀಂದ್ರ ರುಂದ್ರಶಿಖರ ಸ

೧೧ ಕ್ತಿ ಸಂಸ್ಥಾಪಿತ ಸ್ಫಟಿಕಸಿಳಾಸ್ತಂಭ ಭದ್ರಮಗಜ ಮಹಾಮಹಿಮಾಭಿರಾಮ ಕಾ

೧೨ ದಂಬಚಕ್ರಿ ಮಯೂರವರ್ಮ ಮಹಾಮಹಿಪಾಳ ಕುಳಭೂಷಣಂ ಪೆರ್ಮ

೧೩ ಟ್ಟಿತೂರ್ಯ್ಯನಿರ್ಘೋಷಣಂ ಶಾಖಾಚರೇಂದ್ರಧ್ವಜ ವಿರಾಜಮಾನ ಮಾನೋತ್ತುಂಗ ಸಿಂಹ

೧೪ ಲಾಂಛನಂ ದತ್ತಾರ್ತಿಕಾಂಚನಂ ಸಮರಜಯಕಾರಣಂ ಕಾಡಂಬರಾಭರಣ ಮಾ

೧೫ ಕ್ಕೊಳ್ವರಗಂಡಂ ಪ್ರತಾಪಮಾರ್ತಂಡ ಸಾಹಸೋ ತ್ತುಂಗ ಶ್ರೀಮತ್ತ್ರಿಭುವನ

೧೬ ಮಲ್ಲದೇವ ಪಾದಾಬ್ಜಭ್ರಿಂಗನಾಮಾದಿ ಸಮಸ್ತಪ್ರಶಸ್ತಿ ಸಹಿತಂ ಶ್ರೀಮನ್ಮಹಾಮಂಡ

೧೭ ಳೇಶ್ವರಂ ತೈಲಪದೇವರು ॥ ಸರಣೆಂದರ್ಗಿಂದ್ರ ಬಾಹಕು. ದ.ಳ ಸತ್ವಂ

೧೮ ಜರಂತ. ತುಕೊಳಲುಪರ.. ರ್ಕತಕಂ ಮಾಪ್ಪಧರ ಸೆಳಿಲುಪೆರ್ಮ್ಮ

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುಂದಗೋಳ ಜಿಲ್ಲೆ, ಧಾರವಾಡ-೫೮೧೧೧೩.



೧೯ ರಿಕಾಳೋರಗಂ ಬಲುಮೆರೆವುತ್ತಿರ್ಪುಗ್ರ ಸಿಂಹಂನಿ–ನಯನದಾವನ

೨೦ ವುರಿಯಂದಳ್ಳುರಿಯಂನ್ತೆ (ನಟ್ಟಿ) ಕೋಲ್ಲುಗ್ದುರೆಗಳು ಭಂಡೀ ತೈಲಭೂಪಾಳ

೨೧ ದೇವಂ ಶ್ರೀಮನ್ಮಹಾಮಂಡಳೇಶ್ವರಂ ತೈಲಪದೇವರು ಪಾನುಂಗಲ್ಲೈಯೂನಜಿ

೨೨ ಉಭಯಸಾಮ್ಯಮುಮಂ ಬನವಾಸಿ ಪನ್ನಿರ್ಚಾಸಿರ ಮುಮಂ ದುಷ್ಟ

೨೩ ನಿಗ್ರಹ ಸಿಷ್ಟಪ್ರತಿಪಾಳನದಿಂದಾಳುರಾಜ್ಯಂಗೆಯುತ್ತಮಿರೆ॥ ಶ್ರೀಮ

೨೪ .ತು ಪಾಂನ್ತಿಪುರದ ಶ್ರೀಮಚ್ಚಾಳುಕ್ಯವಿಕ್ರಮವರ್ಷದ ೪೪ ವಿಕಾರಿ

೨೫ ಸಂವತ್ಸರದ ಮಾರ್ಗ್ಗಸಿರ ಸುದ್ಧ ೨ ಬ್ರಿಹವಾರ ಸಂಕ್ರಾನ್ತಿಬ್ಯತಿಯ

೨೬ ಪಾತದಂದು ಶ್ರೀಸ್ವಯಂಭುಕೊನ್ತೇಸ್ವರ ದೇವರಂ[ಗ] ಭೋಗ ನಿವೇದ್ಯಕಂ

೨೭ ಖಂಡಸ್ಪುಟಿತಜೀರ್ನ್ನೋರ್ದ್ಧಾರಕಂ ಅಲ್ಲಿಂಯ ತಪೋಧನರಗ್ರಾಸಕಂ ಸ್ವಸ್ತಿ

೨೮ ಯಮನಿಯಮಸ್ವಾಧ್ಯಾಯಧ್ಯಾನಧಾರಣಮೋನಾ ಷ್ಠಾಣಜಪಸ

೨೯ ಮಾಧಿಸೀಳಗುಣ ಸಂಪನ್ನರಪ್ಪ ಶ್ರೀಮತುತತ್ಪುರುಷ ಪಂಡಿತ

೩೦ ದೇವರ ಕಾಲಂಕರ್ಚ್ಚಿ ಧಾರಾಪೂರ್ವ್ವಕಂಮಾಡಿ ಗೆಜ್ಜೆಯ ಹಳ್ಳಿಯ ಸರ್ವ

೩೧ ನಮಸ್ಯವಾಗಿ ಬಿಟ್ಟರು ಅವಱಗೆರೆಯ ಕೆಳಗೆಗದ್ದೆ ಮತ್ತಲುಮೂ

೩೨ ರು ಸುಳೆಯ ಬಯಲಲು ಗದ್ದೆ ಮತ್ತಲು ಮೂರು ಸರಸ್ವತಿದೇವಿಗೆ

೩೩ ಅವಱಗೆರೆಯ ಕೆಳಗೆ ಮತ್ತಲೊಂದು ಮಾಬೇಸ್ವರ ದೇವರಿಗೆ ಸುಳೆಯ

೩೪ ಬಯಲಲು ಗದ್ದೆಕಮ್ಮಅಯ್ವತ್ತು ಶ್ರೀಕೊನ್ತೇಸ್ವರದೇವರ ಅವಱಗೆರೆಯೊಳರಕ

೩೫ ಣ್ಣುಗೆಯ ಬಟ್ಟೆಯಿಂ ಬಡಗಲು ಹಕಲು ಮತ್ತಲು ಮೂಱು ಹಣದ ಕಪಸಾಧ

೩೬ .......... ರಿಯಮರಗದ್ದೆಯಂ .......... ಸರ್ವನಮಸ್ಯವಾಗಿ ಬಿಟ್ಟರು ಸುಂಕದಕಾನಾಳು

೩೭ ............... ಸಹಿತವಾಗಿ ಸಮಸ್ತ ಸುಂಕರಿದ್ದು ಆ ಕೆರೆಯೊಳಗೆ ಲೆಯತ

೩೮ .ಪನ್ನಾಯತನ ಸುಂಕಮ್ಮ ಬಿಟ್ಟರು ಹೆಱು ವವರಲಿ ನೂರೆತ್ತಿನ ಸುಂಕಮಂಬಿ

೩೯ ಟ್ಟರು ಯಿನ್ತೀಧರ್ಮಮಂ ನಾವನೊರ್ವ್ವ ಪ್ರತಿಪಾಳಿಸಿ ದಾತಂಗೆ ವಾರಣಸಿಯಲು ಸ

೪೦ ಹ್ರಸ್ರ ಕವಿಲೆಯಂ ವೇದಪಾರಗರಪ್ಪ ಬ್ರಾಹ್ಮರ್ಗ್ಗೆ ದಾನಕೊಟ್ಟಫಲವಕ್ಕುಯಿ

೪೧ ನ್ತಿ ಧರ್ಮ್ಮವನಳಿದಾತಂಗೆ ಸಹಸ್ರ ಕವಿಲೆವಂನಳಿದು ಸಹಸ್ರ ಬ್ರಾಹ್ಮಣರು

೪೨ ಮಂ ಕೊಂದಮಹಾಪಾತಕನಕ್ಕು ಸ್ವದತ್ತಂ ಪರದತ್ತಂ ವಾಯೋ ಹರೇತಿ

೪೩ ವಸುಂಧರಾ ಷಷ್ಟಿರ್ವರುಸ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿ

೪೪ ಮಿಃ ॥ @@

**ಶಾಸನದ ಸಾರಾಂಶ**

ಈ ಶಾಸನವು ಶೈವಶ್ಲೋಕದೊಂದಿಗೆ ಪ್ರಾರಂಭವಾಗಿದೆ. ತರುವಾಯ ಕಲ್ಯಾಣದ ಚಾಳುಕ್ಯ ಮನೆತನದ ಅರಸನಾದ ಶ್ರೀಮತ್‌ತ್ರಿಭುವನಮಲ್ಲ ಅಂದರೆ ಆರನೆಯ ವಿಕ್ರಮಾದಿತ್ಯನ ಪ್ರಶಸ್ತಿಯನ್ನು ಹೇಳಲಾಗಿದೆ. ಶಾಸನದಲ್ಲಿ ಪಾನುಂಗಲ್ಲು-೫೦೦ ನಾಡಿನ ಮಹಾಮಂಡಳೇಶ್ವರನಾದ ತೈಲಪದೇವನ ಪ್ರಶಸ್ತಿಗಳ ನಿರೂಪಣೆಯಿದೆ. ಈತನು ಪಾನುಂಗಲ್ಲು-೫೦೦ ಮತ್ತು ಬನವಾಸಿ-೧೨,೦೦೦ ಪ್ರಾಂತಗಳನ್ನು ಆಳುತ್ತಿದ್ದನು. ಈತನು ಸ್ವಯಂಭು ಕೊನ್ತೇಶ್ವರದೇವರ ರಂಗಭೋಗಕ್ಕೆ, ನೈವೇದ್ಯಕ್ಕೆ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಮತ್ತು ಅಲ್ಲಿಯ ತಪೋಧನರ ಆಹಾರಕ್ಕೆ ಗೆಜ್ಜೆಹಳ್ಳಿಯನ್ನು ಸರ್ವನಮಸ್ಯವಾಗಿ ದತ್ತಿ ಕೊಟ್ಟನು. ಈ ದಾನವನ್ನು ಕೊನ್ತೇಶ್ವರದೇವಾಲಯದ ಸ್ಥಾನಾಚಾರ್ಯರಾಗಿದ್ದ ತತ್ಪುರುಷ ಪಂಡಿತದೇವರ ಪಾದವನ್ನು ತೊಳೆದು ದಾನ ಮಾಡಲಾಗಿದೆ. ಅಲ್ಲದೆ ಇದೇ ದೇವರಿಗೆ ಅವರಗೆರೆ ಎಂಬ ಹಳ್ಳಿಯ ಕೆಳಗಿನ ೩ ಮತ್ತರು ಗದ್ದೆಯನ್ನು ಮತ್ತು ಸುಳೆಯ ಬಯಲಿನ್ಲಿ ೩ ಮತ್ತರು ಗದ್ದೆಯನ್ನು ದಾನ ನೀಡಲಾಗಿದೆ.

ಅದೇ ರೀತಿಯಾಗಿ ಸರಸ್ವತಿದೇವಾಲಯಕ್ಕೆ ಅವರಗೆರೆಯ ಕೆಳಗೆ ಒಂದು ಮತ್ತರು ಭೂಮಿಯನ್ನು ದಾನ ನೀಡಲಾಗಿದೆ. ಹಾಗೆಯೇ ಮಾಬೇಸ್ವರ ದೇವಾಲಯಕ್ಕೆ ಸುಳೆಯ ಬಯಲಿನಲ್ಲಿ ಐವತ್ತು ಕಮ್ಮಗದ್ದೆಯನ್ನು, ಕೊನ್ತೇಶ್ವರ ದೇವಾಲಯಕ್ಕೆ ಅವರಗೆರೆಯ ಕೆಳಗೆ ಮೂರು ಮತ್ತರು ಗದ್ದೆಯನ್ನು, ಹಣವನ್ನು ಹಾಗೂ ನೂರೆತ್ತಿನ ಸುಂಕವನ್ನು ದಾನ ನೀಡಿದರು.

ಶಾಸನದ ಕೊನೆಯಲ್ಲಿ ಈ ಧರ್ಮವನ್ನು ಪ್ರತಿಪಾಳಿಸಿದವರಿಗೆ ವಾರಣಾಸಿಯಲ್ಲಿ ಸಹಸ್ರ ಬ್ರಾಹ್ಮಣರಿಗೆ ದಾನ ಕೊಟ್ಟ ಫಲ ಬರುವುದೆಂದು, ಇದನ್ನು ನಾಶಪಡಿಸಿದ ವರಿಗೆ ಕೊಂದ ಪಾಪ ಬರುವದೆಂಬ ಶಾಪಾಶಯವಿದೆ.

**ಶಾಸನದ ಮಹತ್ವ**

ಈ ಶಾಸನದಲ್ಲಿ ಕೋನ್ತೇಶ್ವರ, ಮಾಬೇಶ್ವರ, ಮಧುಕೇಶ್ವರ ಮತ್ತು ಸರಸ್ವತಿದೇವಿಯ ಉಲ್ಲೇಖವಿರುವುದು ಮಹತ್ವದ್ದಾಗಿದೆ. ಏಕೆಂದರೆ ಶೈವ ದೇವತೆಗಳೊಂದಿಗೆ ಶಕ್ತಿ ದೇವತೆಗೂ ಪ್ರಾಧಾನ್ಯತೆ ನೀಡಲಾಗಿದೆ. ಹಾನಗಲ್ಲದಲ್ಲಿ ಈಗಾಗಲೇ ಇಮ್ಮಡಿ ತೈಲಪದೇವನಿಗೆ ಸಂಬಂಧಪಟ್ಟ ಶಾಸನಗಳು ಲಭ್ಯವಾಗಿವೆ.[೨] ಆ ಶಾಸನಗಳಲ್ಲಿ ಬಿಲ್ಲೇಶ್ವರ, ಚಿಕ್ಕೇಶ್ವರ, ನಿಂಬೇಶ್ವರ, ಸೋಮೇಶ್ವರ, ದೇವಾಲಯಗಳ ಪ್ರಸ್ತಾಪವಿದೆ. ಮೊದಲನೆಯ ಶಾಸನದಲ್ಲಿ ಶ್ರೀದೇವರಾಶಿಪಂಡಿತ ಎಂದು ಹೇಳಿದರೆ, ಇಲ್ಲಿ ದೊರೆತ ಶಾಸನದಲ್ಲಿ ಶ್ರೀತತ್ಪುರುಷ ಪಂಡಿತದೇವರ ಹೆಸರನ್ನು ಪ್ರಸ್ತಾಪಿಸಲಾಗಿದೆ.

[ಕೃತಜ್ಞತೆಗಳು : ಈ ಶಾಸನವನ್ನು ನನ್ನ ಗಮನಕ್ಕೆ ತಂದು ಕ್ಷೇತ್ರ ಕಾರ್ಯದಲ್ಲಿ ನೆರವು ನೀಡಿದ ಶ್ರೀಕುಮಾರೇಶ್ವರ ಪದವಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ವಿ.ಜಿ. ಶಾಂತಪುರಮಠ ಹಾಗೂ ಈ ಶಾಸನವನ್ನು ಓದಿ ಪಾಠ ಸಂಗ್ರಹಿಸಲು ಮತ್ತು ಲೇಖನದ ಬರವಣಿಗೆಯಲ್ಲಿ ಮಾರ್ಗದರ್ಶನ ಮಾಡಿದ ನನ್ನ ವಿದ್ಯಾಗುರುಗಳಾದ ಡಾ. ರು.ಮ. ಷಡಕ್ಷರಯ್ಯ ಪ್ರಭಾರಿ ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕ.ವಿ.ವಿ. ಧಾರವಾಡ ಇವರಿಗೆ ನನ್ನ ಕೃತಜ್ಞತೆಗಳು.]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಕಪ್ಪುಶಾಯಿಯಿಂದ ತೆಗೆದ ಪಡಿಯಚ್ಚಿನಿಂದ ಓದಲಾಗಿದೆ.

೨. K.I. Vol. V, ಶಾಸನ ಸಂಖ್ಯೆ ೧೮ ಮತ್ತು ೧೯, ಪುಟ ೬೨-೬೮.



# ದಾವಣಗೆರೆ ಜಿಲ್ಲೆಯ ಬಲ್ಲೂರು ಗ್ರಾಮದಲ್ಲಿ ದೊರೆತ ಉಚ್ಚಂಗಿ ಪಾಂಡ್ಯರ ಒಂದು ಶಿಲಾಶಾಸನ

**ಸಂತೇಬೆನ್ನೂರು ಸುಮತೀಂದ್ರ ನಾಡಿಗ್***

೧೧-೧೨ ನೇ ಶತಮಾನದಲ್ಲಿ ಈಗಿನ ದಾವಣಗೆರೆ ಜಿಲ್ಲೆಯ ಉಚ್ಚಂಗಿದುರ್ಗದಿಂದ ಆಗಿನ ನೊಳಂಬವಾಡಿ ೩೨೦೦೦ ಪ್ರಾಂತ್ಯವನ್ನು ಆಳಿದ ಒಂದು ರಾಜವಂಶ ಉಚ್ಚಂಗಿ ಪಾಂಡ್ಯರದು. ದಾವಣಗೆರೆ ಸಮೀಪದ ಬೇತೂರಿನಿಂದಲೂ ಆಳಿದ ಈ ರಾಜವಂಶ ಆ ಕಾಲಕ್ಕೇ ೩೨೦೦೦ ದಂತಹ ದೊಡ್ಡಪ್ರಾಂತ್ಯವನ್ನು ಸಾಕಷ್ಟುಕಾಲ ಆಳಿದರೆಂಬುದಕ್ಕೆ ಅವರು ಹಾಕಿಸಿದ ಶಾಸನಗಳು ಈ ಪ್ರಾಂತ್ಯದಲ್ಲಿ ದೊರೆತಿರುವುದು ಸಾಕ್ಷಿಯಾಗಿವೆ. ಈಗ ಪ್ರಸ್ತುತಪಡಿಸುತ್ತಿರುವ ಶಿಲಾಶಾಸನ ದಾವಣಗೆರೆ ಜಿಲ್ಲಾ ಕಸಬಾ ತಾಲ್ಲೂಕು ಬಲ್ಲೂರು ಗ್ರಾಮದ ಸರ್ವೆ ನಂಬರ ೪೮ ರಲ್ಲಿರುವ ಈಶ್ವರ ದೇವಸ್ಥಾನದ ಉತ್ತರ ದಿಕ್ಕಿನಲ್ಲಿದೆ. ಈ ಶಾಸನ ಕನ್ನಡ ಲಿಪಿ ಮತ್ತು ಭಾಷೆಯಲ್ಲಿದ್ದು ೨೨ ಸಾಲುಗಳನ್ನು ಒಳಗೊಂಡಿದೆ.

ಚಾಳುಕ್ಯ ವಿಕ್ರಮ ವರ್ಷದ ೩೪ನೇ ವಿರೋಧಿ ಸಂವತ್ಸರದ ಉತ್ತರಾಯಣ ಸಂಕ್ರಾತಿಯಂದು ಪೃಥ್ವೀವಲ್ಲಭ, ಮಹಾ ರಾಜಾಧಿರಾಜ ರಾಜಪರಮೇಶ್ವರ, ಪರಮಭಟ್ಟಾರಕ, ಸತ್ಯಾಶ್ರಯ ಕುಲತಿಲಕ, ಚಾಳುಕ್ಯಾಭರಣ ಶ್ರೀ ತ್ರಿಭುವನಮಲ್ಲ ದೇವರು ಆಳುತ್ತಿರುವಾಗ, ಅವನ ಮಾಂಡಲೀಕ ಶ್ರೀ ತ್ರಿಭುವನ ಮಲ್ಲ ಪಾಂಡ್ಯದೇವರು ನೊಳಂಬವಾಡಿ ಮುವತ್ತು ಛಾಸಿರ ಆಳುತ್ತಿರೆ, ಅವನ ಪಾದಪದ್ಮೋಪಜೀವಿ ಶ್ರೀ ಮಹಾಪ್ರಧಾನ ದಂಡನಾಯಕ ದೇವಾಂಡ್ಯರ ತಮ್ಮ ಆಳ್ಕೊಂಡ ನಾಯಕ ಬಲ್ಲೂರು ಆಳುತ್ತಿರುವಾಗ ಬರ್ಮಗಾವುಂಡ ಎಂಬುವನು ಅತ್ತಿಯ ಮಹಾದೇವರ, ಪೂಜೆ ಪುನಸ್ಕಾರ, ನೇವೇದ್ಯ, ನಂದಾದೀವಿಗೆಗಾಗಿ ಗ್ರಾಮದ ಕೆಳಗಣ ಕೆರೆಯ ಕೋಡಿಯ ಹತ್ತಿರದ ಬೆದ್ದಲು, ಗದ್ದೆ ಭೂಮಿಯನ್ನು ಎಡುವ ಸೋವಿಮಯ್ಯನ ಮಗ ಹೆಗ್ಗಡೆ ನಾಗಿಮಯ್ಯ, ಬಲ್ಲೂರು ಗಾವುಂಡ ಕಂಕಳ ಗೋಸಿಯವರ್ಮ ಇವರಿಗೆ ಭೂದಾನವಾಗಿ ಕೊಟ್ಟಿದ್ದನ್ನು ಶಾಸನ ತಿಳಿಸುತ್ತದೆ.

ಈ ಶಾಸನದಿಂದ ಈ ಕೆಳಕಂಡ ವಿಚಾರಗಳು ತಿಳಿಯ ಬಹುದಾಗಿದೆ.

೧. ಇದೊಂದು ದಾನ ಶಾಸನವಾಗಿದ್ದು ವಿಕ್ರಮ ವರ್ಷ ೩೪ನೇ ವಿರೋಧಿ ಸಂವತ್ಸರದ ಸಂಕ್ರಾತಿ ಪುಣ್ಯಕಾಲದಂದು ಹಾಕಿಸಿದ್ದಾಗಿ ತಿಳಿಸುತ್ತದೆ. ಬೇರೆ ಶಾಸನಗಳಂತೆ ಇದರಲ್ಲಿ ತಿಥಿ, ಮಾಸ, ವಾರ ಬರೆದಿಲ್ಲ ವಾದರೂ ಸಂಕ್ರಾತಿಯಂದು ಹಾಕಿಸಿದ ಶಾಸನವೆಂದು ನಮೂದಿಸಿರುವಂತೆ ಸ್ವಾಮಿಕಣ್ಣು ಪಿಳ್ಳೆಯವರ ಎಫಿಮರೀಸ್‌ನಂತೆ ವಿರೋಧಿ ಸಂ॥ದ ಸಂಕ್ರಾತಿ ಅಂದರೆ ಶಾಸನದ ಕಾಲ ಕ್ರಿಶ. ೧೪-೧-೧೧೧೦ ಆಗುತ್ತದೆ ಹಾಗೂ ತಿಥಿ ಪುಷ್ಯ ಬಹುಳ ಸಪ್ತಮಿ ಆಗುತ್ತದೆ.

೨. ಶಾಸನದಲ್ಲಿ ಪ್ರಸ್ತಾಪವಾಗಿರುವ ಬಲ್ಲೂರು ಗ್ರಾಮ ಈಗಲೂ ಅಸ್ತಿತ್ವದಲ್ಲಿದ್ದು ಅದೇ ಹೆಸರಿನಿಂದಲೇ ಕರೆಯಲ್ಪಡು ತ್ತಿದೆ ಮತ್ತು ಶಾಸನ ತಿಳಿಸುವಂತೆ ಅದೊಂದು ಉಚ್ಚಂಗಿ ಪಾಂಡ್ಯರ ದಂಡನಾಯಕ ದೇವಾಂಡ್ಯರ ತಮ್ಮ ಆಳ್ಕೊಂಡ ನಾಯಕ ಅದನ್ನು ಆಳುತ್ತಿದ್ದನೆಂದು ತಿಳಿಸುವುದರಿಂದ, ಈಗ ಅದೊಂದು ಸಣ್ಣಗ್ರಾಮವಾಗಿದ್ದರೂ ಆ ಕಾಲದಲ್ಲಿ ಒಂದು ಪ್ರಾಂತ್ಯದ ರಾಜಧಾನಿಯಾಗಿತ್ತು ಎಂಬುದಾಗಿ ಊಹಿಸಬಹು ದಾಗಿದೆ.

೩. ಶಾಸನದಲ್ಲಿ ಭೂದಾನಕೊಟ್ಟಿರುವುದು ಅತ್ತಿಯ ಮಹಾದೇವರ್ಗೆ ಎಂದು ಉಲ್ಲೇಖಿಸಲ್ಪಟ್ಟಿದೆ. ಅತ್ತಿ ಗ್ರಾಮ ಯಾವುದು ಎಂಬುದು ಸಂದೇಹಾಸ್ಪದವಾಗಿದೆ. ಹಾಗೆಯೇ ಶಾಸನ ದೊರೆತಿರುವ ಸ್ಥಳವಾದ ಬಲ್ಲೂರ ಈಶ್ವರ ದೇವಸ್ಥಾನಕ್ಕೆ ಬರೆದ ದಾನ ಶಾಸನ ಇದಾಗಿರಬೇಕೆಂಬ ನಿರ್ಣಯಕ್ಕೂ ಬರುವುದು ಕಷ್ಟವಾಗುತ್ತದೆ. ಕಾರಣ ಬಲ್ಲೂರು ಗ್ರಾಮದ ಸಮೀಪ ಮತ್ತಿ ಎಂಬ ಗ್ರಾಮವಿದ್ದು, ಅತ್ತಿಯೇ ಈಗ ಮತ್ತಿ ಯಾಗಿ ಏಕೆ ಬದಲಾಗಿರಬಾರದು ಎಂಬ ಸಂದೇಹದ ಜೊತೆಗೆ ಈಗಿನ ಮತ್ತಿಯ ಈಶ್ವರ ದೇವಸ್ಥಾನಕ್ಕೆ ಈ ಶಾಸನದ ಭೂಮಿ ದಾನವಾಗಿ ಏಕೆ ಕೊಟ್ಟಿರಬಾರದೆಂಬ ಸಂದೇಹ ಬರುತ್ತದೆ. ಇದು ಇನ್ನಷ್ಟು ಸಂಶೋಧನೆಗಳಿಂದ ಗಟ್ಟಿಗೊಳ್ಳ ಬೇಕಿದೆ.

೪. ಎಲ್ಲಾ ಶಾಸನಗಳಲ್ಲಿರುವಂತೆ ಈ ಶಾಸನದಲ್ಲೂ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಶಿವಲಿಂಗ, ನಂದಿ, ಆಕಳು.

* ಇತಿಹಾಸ ಸಂಶೋಧಕ ಮತ್ತು ಪತ್ರಕರ್ತ, ಸಂತೇಬೆನ್ನೂರು, ದಾವಣಗರೆ ಜಿಲ್ಲೆ-೫೭೭೫೫೨.

ಕರುಗಳ ಚಿತ್ರಗಳಿದ್ದು ಶಾಸನದ ಪ್ರಾರಂಭದಲ್ಲಿ ನಮಸ್ತುಂಗ, ಶಿರಶ್ಚುಂಬಿ... ... ಎಂಬ ಬಾಣನ ಹರ್ಷ ಚರಿತೆಯ ಸಂಸ್ಕೃತ ಶ್ಲೋಕ ಬರೆಯಲ್ಪಟ್ಟಿದೆ. ಉಳಿದ ಭಾಗ ಅಚ್ಚ ಕನ್ನಡ ಭಾಷೆಯಲ್ಲಿ ರಚಿತವಾಗಿದೆ.

೫. ಉಚ್ಚಂಗಿ ಪಾಂಡ್ಯರು ನೊಳಂಬರ ಅವನತಿಯ ನಂತರ ಕಲ್ಯಾಣದ ಚಾಲುಕ್ಯರ ಸಾಮಂತರಾಗಿ ಅವರ ಉತ್ತರಾಧಿಕಾರಿ ಗಳಾಗಿ ಆಡಳಿತ ಮಾಡಿಕೊಂಡಿದ್ದರು. ಆದ್ದರಿಂದ ಈ ಶಾಸನದ ಮೊದಲಭಾಗದಲ್ಲಿ ತಮ್ಮ ಚಕ್ರವರ್ತಿ ಚಾಳುಕ್ಯ ತ್ರಿಭುವನಮಲ್ಲ ದೇವರ ಹೊಗಳಿಕೆ, ಬಿರುದು ವಂಶದ ವರ್ಣನೆ ಬಂದಿರುವುದು ಸಹಜವಾಗಿದೆ.

೬. ಚಾಳುಕ್ಯರು ತಾವು ಚಂದ್ರವಂಶ, ಯದುವಂಶ ದವರೆಂದು ತಮ್ಮ ಕೀರ್ತಿಪ್ರಕಾಶಕ್ಕಾಗಿ ಹೊಗಳಿ ಕೊಂಡುಬಂದಿರುವುದನ್ನು ನಾವು ಬೇರೆ ಶಾಸನಗಳಿಂದ ತಿಳಿಯಬಹುದಾಗಿದೆ. ಹಾಗೆಯೇ ಉಚ್ಚಂಗಿ ಪಾಂಡ್ಯರು ತಾವು ಯದುಕುಲ ತಿಲಕರೆಂದು ಹೇಳಿಕೊಂಡಿರುವುರಿಂದ ಇರ್ವರೂ ಕುಲ ಸಂಬಂಧಿಗಳಾಗಿರುವ ಸಾಧ್ಯತೆಯೂ ಇದೆ.

೭. ತ್ರಿಭುವನಮಲ್ಲ ಪಾಂಡ್ಯನ ಸುಮಾರು ೪೦ ಕ್ಕೂ ಹೆಚ್ಚು ಶಾಸನಗಳು ಈವರೆಗೆ ಪ್ರಕಟವಾಗಿರುವುದನ್ನು ಇತಿಹಾಸ ಕಾರರು ಗುರುತಿಸಿದ್ದಾರೆ. ಈ ಶಾಸನದಲ್ಲಿ ಉಲ್ಲೇಖಿಸಲಾದ ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ಎಂಬ ವ್ಯಕ್ತಿಯನ್ನು ಬಿಟ್ಟರೆ ಅವನ ಮಹಾ ಪ್ರಧಾನ ದಂಡನಾಯಕ ದೇವಾಂಡ್ಯ, ಅವನ ತಮ್ಮ ಆಳ್ಗೊಂಡನಾಯಕ, ದಾನಕೊಟ್ಟ ಬರ್ಮಗಾವುಂಡ, ದಾನಪಡೆದ ಎಡುವ ಸೋವಿಮಯ್ಯ, ಅವನಮಗ ಹೆರ್ಗಡೆ ನಾಗಿಮಯ್ಯ, ಬಲ್ಲೂರು ಗಾವುಂಡ ಕಂಕಳಗೋಸಿ ಹೆರ್ಗಡೆ ಮುಂತಾದ ಹೆಸರುಗಳು ಹೊಸದಾಗಿ ಈ ಶಾಸನದಿಂದ ಪರಿಚಯವಾಗುತ್ತಾರೆ.

೮. ಶಾಪಾಶಯದ ಕೊನೆಯ ಭಾಗದಲ್ಲಿ ಈಂನ್ತೀ ಧರ್ಮವನ್ನು ಪ್ರತಿಪಾದಿಸಿದಲ್ಲಿ ಪ್ರಯಾಗ, ಕುರುಕ್ಷೇತ್ರಗಳಿಗೆ ಹೋಗಿಬಂದ ಪುಣ್ಯ ಬರಲೆಂದೂ, ಹಾಳು ಮಾಡಿದಲ್ಲಿ ಸಾವಿರ ಕಪಿಲೆಗಳ ಕೊಂದಪಾಪಬರಲಿ ಎಂದೂ ಕೆತ್ತಲಾಗಿದೆ.

೯. ಒಟ್ಟಿನಲ್ಲಿ ಈ ಶಾಸನದಂತೆ ಶಾಸನದೊರೆತ ಬಲ್ಲೂರು ಒಂದು ಪ್ರಾಚೀನ ಗ್ರಾಮವಾಗಿದ್ದು, ಅಲ್ಲಿನ ಈಶ್ವರ ದೇವಾಲಯವು ಈಚೆಗೆ ನವೀಕರಿಸಲ್ಪಟ್ಟಿದ್ದರೂ, ಅಲ್ಲಿರುವ ಗಣಪತಿ, ಷಣ್ಮುಖ, ಭೈರವ, ನಂದಿ, ಈಶ್ವರ ಮುಂತಾದ ವಿಗ್ರಹಗಳಿಂದಾಗಿ ಅವು ಚಾಲುಕ್ಯರ ಕಾಲದ ರಚನೆ ಎಂಬುದಾಗಿ ಗುರುತಿಸಬಹುದಾಗಿದೆ.



**ಶಾಸನ ಪಾಠ**

೧ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ [ತ್ರೈ] ಲೋಕ್ಯನಗರಾರಂಬ

೨ ಮೂಲ ಸ್ತಂಭಾಯ ಸಂಬವೇ॥ ಸ್ವಸ್ತಿ ಸಮಸ್ತ ಭುವನಾಸ್ರಯಂ

೩ [ಶ್ರೀ] ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕ ಸತ್ಯಾಶ್ರ

೪ ಯ ಕುಳತಿಳಕಂ ಚೂಳುಣ್ಯ(ಚಾಳುಕ್ಯಾ)ಭರಣಂ ಶ್ರೀಮತ್ರಿಭುವನ ಮಲ್ಲದೇವರ ವಿ

೫ ಜೆಯ ರಾಜ್ಯಮುತ್ತರೋತ್ತರಾಭಿವ್ರಿಧ್ಧಿ ಪ್ರವರ್ಧಮಾನ ಮಾಚಂದ್ರಾರ್ಕ್ಕತಾರಂಬರಂ ಸ

೬ ಲುತ್ತಮಿರೆ॥ ಸ್ವಸ್ತಿ ಸಮಾಧಿಗತ ಪಂಚಮಹಾಸಬ್ದ ಮಹಾಮಣ್ಡಳೇಶವರ ತ್ರಿಭು

೭ ವನಮಲ್ಲ ಪಾಂಣ್ಡ್ಯದೇವರು ನೊಳಂಬವಾಡಿ ಮೂವತ್ತಿರ್ಚ್ಛಾಸಿರಮನಾಳುತ್ತ

೮ ಮಿರೆ ತತ್ಪಾದಪದ್ಮೋಪಜೀವಿ ಶ್ರೀಮನ್ಮಹಾಪ್ರಧಾನಂ ದಂಡನಾಯಕಂ

೯ ದೇವಾಂಡ್ಯರ ತಂಮ್ಮನಾಳ್ಕೊ [೦] ಡನಾಯಕರು ಬಲ್ಲೂರನಾಳುತ್ತಮಿರಲಾ

೧೦ ಸ್ವಸ್ತಿ ಶ್ರೀ ಮಚ್ಚಾಳುಕ್ಯ ವಿಕ್ರಮ ವರ್ಷದ ೩ಳನೆಯ ವಿರೋಧಿ ಸಂವತ್ಸರಮುತ್ತರಾ

೧೧ ಯಣ ಸಂಕಾನ್ತಿಯಂದು ಆಳ್ಕೊಂಡನಾಯಕರು ಬರ್ಮಗಾಮುಂಡನುಂ ಅ

೧೨ ತ್ತಿಯ ಮಹಾದೇವರ್ಗ್ಗೆ ಪೂಜೆಪುನಸ್ಕಾರ ನಿವೇದ್ಯ ನಂದಾದೀಪಿಗೆಗಂ ಗ್ರಾಮದ ಕೆ[ರೆ]ಯ

೧೩ ಕೋಡಿಯಲು ಬಿಟ್ಟ ಬೆಳ್ದೆಲೆ ಮತ್ತರು ೧ ಹುಲೆಯ ಬಿಳಿಲಲು ಬೆ[ಳ್ದೆ]ಲೆ ಮತ್ತರು

೧೪ ೯ ಗರ್ದ್ದೆ ಕಮ್ಮ ೯೨೦೦ ಎಡದ ಸೋವಿಮಯ್ಯನ ಮಗಂ ಹೆಗ್ಗಡೆ ನಾಗಿಮಯ್ಯ ಬಲ್ಲೂ

೧೫ ರ ಗಾಮುಂಡ ಕಂಕಳ ಗೋಸಿಯ ಮರ್ಮ್ಮ ಹೆಗ್ಗಡೆ ನಾಗಿಮಯ್ಯನ ಕೆ[ರೆ]ಗೆ ಆಕೆ[ರೆ]ಯ

೧೬ ಕೆಳಗೆ ಕೊಡಂಗೆಯ್ಯಾಗೆ ಬೆ[ದ್ದ]ಲೆ ಮತ್ತರು ೧೦೦ ಈನ್ತೀ ಧರ್ಮಂ ಪ್ರತಿಪಾಳಿ

೧೭ ಸಿದವರ್ಗ್ಗೆ ಬಾಣರಾಸಿ ಪ್ರಯಾಗ ಕುರುಕ್ಷೇತ್ರಮಿನ್ತೀ ಪುಣ್ಯತೀರ್ತ್ಥದೊಳೆ[ಸಾಸಿರ್ಬ್ಬ]

೧೮ ಬ್ರಾಹ್ಮಣರ್ಗ್ಗೆ ಧಾರಾದತ್ತಂಗೆಯ್ದು ಸಾವಿರ ಕವಿಲೆಯ ಕೊಮ್ಬುಕೊಳಗಮಂ ಪೊನ್ನ

೧೯ ಲು. ಕಟ್ಟಿಸಿದಾನಂಗೆಯ್ದ ಪಳಮಕ್ಕು ಈ ಧರ್ಮಮನಳಿ ದವರ್ಗ್ಗೆಯಾ ಪುಣ್ಯತೀರ್ತದ

೨೦ ಲು ಸಾ[ಸೆ] . ವೇದಪಾರಗುರುಂ .ಸಾಸಿರ ಕವಿಲೆಯನಳಿದ ಪಂಚಮಹಾಪಾತಕನ

೨೧ ಕ್ಕು॥ ಸ್ವದತ್ತ ಪರದತ್ತ ವಾಯೋ ಹರೇತಿ ವಸುಧರಾ ಸಷ್ಟಿರ್ವರ್ಷ ಸಹಸ್ರಾಣಿವಿಷ್ಟಾಯಾಂ ಜಾಯತೇ ಕ್ರಿಮಿ॥

[ಈ ಶಾಸನ ಇರುವಿಕೆ ಬಗ್ಗೆ ನನಗೆ ಮಾಹಿತಿ ನೀಡಿದ ಬಲ್ಲೂರು ಗ್ರಾಮದ ಯುವ ಮಿತ್ರ ವೀರೇಶರವರಿಗೂ, ಶಾಸನ ಓದಿ ಅದರ ಪಾಠ ಒದಗಿಸಿದ ಚಿತ್ರದುರ್ಗದ ಡಾ॥ ಬಿ. ರಾಜಶೇಖರಪ್ಪನವರಿಗೂ ಧನ್ಯವಾದಗಳು.]



# ಕೃಷ್ಣರಾಜಪೇಟೆ ತಾಲ್ಲೂಕಿನ ಕೈಗೋನಹಳ್ಳಿ ಗ್ರಾಮದ ಅಪ್ರಕಟಿತ ವೀರಗಲ್ಲು ಶಾಸನ

ಡಾ. ಆರ್. ರಂಗಸ್ವಾಮಿ*

ಮಂಡ್ಯ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಕೈಗೋನಹಳ್ಳಿ ಗ್ರಾಮ ಕೆ.ಆರ್. ಪೇಟೆಯಿಂದ ಉತ್ತರಕ್ಕೆ ೬ ಕಿ.ಮೀ. ಅಂತರದಲ್ಲಿದೆ. ಈ ಗ್ರಾಮದಲ್ಲಿ ಹೊಯ್ಸಳರ ಕಾಲದ ಈಶ್ವರ ದೇಗುಲವಿದೆ. ಈ ದೇಗುಲದ ಪರಿಸರದಲ್ಲಿ ಕೃಷ್ಣರಾಜಪೇಟೆಯ ಕಲ್ಪತರು ಕಾಲೇಜಿನ ಎನ್.ಎಸ್.ಎಸ್. ವಿದ್ಯಾರ್ಥಿಗಳು ವಿಶೇಷ ಶಿಬಿರ ಕೈಗೊಂಡು, ದೇಗುಲವನ್ನು ಸ್ವಚ್ಛಗೊಳಿಸುತ್ತಿದ್ದ ಸಂದರ್ಭದಲ್ಲಿ ಪ್ರಸ್ತುತ ಶಾಸನ ಬೆಳಕಿಗೆ ಬಂದಿದೆ[೧]. ಈ ಗ್ರಾಮದಿಂದ ಈಗಾಗಲೇ ಎರಡು ಶಾಸನಗಳು ಎಪಿಗ್ರಾಫಿಯ ಕರ್ನಾಟಕ (ಪರಿಷ್ಕೃತ) ಸಂಪುಟ ೬ರಲ್ಲಿ ಪ್ರಕಟವಾಗಿವೆ[೨]. ಆ ಸಂಗ್ರಹಕ್ಕೆ ಈ ಶಾಸನ ಹೊಸದಾಗಿ ಸೇರ್ಪಡೆಯಾಗಿದೆ. ಕಪ್ಪು ಶಿಲೆಯಿಂದ ಕಂಡರಿಸಲ್ಪಟ್ಟ ಈ ಶಾಸನದ ಶಿಲ್ಪದ ಎರಡು ಅಡ್ಡ ಪಟ್ಟಿಯಲ್ಲಿ ೭ ಸಾಲುಗಳಿರುವ ಶಾಸನದ ಪಾಠವಿದೆ. ಈ ಶಾಸನ ೧೬೦ ಸೆಂ.ಮೀ. ಎತ್ತರ ಮತ್ತು ೮೦ ಸೆ.ಮೀ. ಅಗಲವಾಗಿದೆ. ಈ ತಾಲ್ಲೂಕಿನಲ್ಲಿ ಈವರೆಗೆ ವರದಿಯಾಗಿರುವ ಶಾಸನಗಳಲ್ಲಿ ಕೈಗೋನಹಳ್ಳಿಯ ಅಪ್ರಕಟಿತ ಶಾಸನ ೧೯೫ನೆಯದು.

**ವೀರಗಲ್ಲು ಶಿಲ್ಪದ ವಿವರಗಳು :** ಈ ವೀರಗಲ್ಲಿನಲ್ಲಿ ನಾಲು ಶಿಲ್ಪ ಪಟ್ಟಿಕೆಗಳಿವೆ.

ಮೊದಲನೆಯ ಪಟ್ಟಿಕೆಯಲ್ಲಿ ವೀರನು ತನ್ನ ಎಡಗಾಲನ್ನು ಮುಂದಕ್ಕಿಟ್ಟು, ವೈರಿಯ ವಿರುದ್ಧ ಹೋರಾಡುತ್ತಿರುವನು. ವೀರನ ಹಿಂಭಾಗದಲ್ಲಿ ಇಬ್ಬರು ಸೈನಿಕರು ಹಾಗೂ ಎಂಟು ಹಸುಗಳ ಚಿತ್ರಗಳಿವೆ. ತಳಭಾಗದಲ್ಲಿ ಸೈನಿಕಬೊಬ್ಬನು ಸತ್ತು ಬಿದ್ದಿರುವ ದೃಶ್ಯವಿದೆ. ವೈರಿಯು, ಬಲಗಾಲನ್ನು ಮುಂದಿಟ್ಟು ವೀರನ ವಿರುದ್ಧ ಹೋರಾಡುತ್ತಿರುವನು. ಇವನ ಹಿಂಭಾಗದಲ್ಲಿ ಇಬ್ಬರು ಸೈನಿಕರು ಗುರಾಣಿಯನ್ನು ಹಿಡಿದುಕೊಂಡು ನಿಂತಿದ್ದಾರೆ.

ಎರಡನೆಯ ಪಟ್ಟಿಕೆಯಲ್ಲಿ ಯುದ್ಧಲ್ಲಿ ಮಡಿದ ವೀರನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಅಪ್ಸರೆಯರು ಕೈಗಳಲ್ಲಿ ಹೂವಾಲೆಯನ್ನು ಹಿಡಿದುಕೊಂಡಿದ್ದಾರೆ. ವೀರನು ವಿಮಾನದಲ್ಲಿ ಪದ್ಮಾಸನದಲ್ಲಿ ಕುಳಿತಿದ್ದಾನೆ.



ಮೂರನೆಯ ಪಟ್ಟಿಕೆಯ ಮಧ್ಯದಲ್ಲಿರುವ ಶಿವಲಿಂಗವನ್ನು ಇಬ್ಬರು ಯತಿಗಳು ಪೂಜಿಸುತ್ತಿರುವ ದೃಶ್ಯವಿದೆ.

* ಮುಖ್ಯಸ್ಥರು, ಇತಿಹಾಸ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಶ್ರೀರಂಗಪಟ್ಟಣ–೫೭೧೪೩೮.

ಬಲಪಾರ್ಶ್ವದಲ್ಲಿ ವೀರನು ಕೈಮುಗಿದು ಕುಳಿತಿರುವನು. ಎಡಪಾರ್ಶ್ವದಲ್ಲಿ ಕುಳಿತ ನಂದಿ ಶಿಲ್ಪವಿದೆ.

ನಾಲ್ಕನೆಯ ಪಟ್ಟಿಕೆಯಲ್ಲಿ ಬ್ರಹ್ಮ, ಮಹೇಶ್ವರ ಮತ್ತು ವಿಷ್ಣು ಶಿಲ್ಪಗಳಿವೆ. ಎಡ ಮತ್ತು ಬಲ ಪಾರ್ಶ್ವದಲ್ಲಿ ಭಕ್ತರಿಬ್ಬರು ಕೈಮುಗಿದು ಕುಳಿತಿದ್ದಾರೆ. ಶಿಲ್ಪದ ಮೇಲ್ಭಾಗದಲ್ಲಿ ಸಾಮಾನ್ಯವಾದ ಸೂರ್ಯ ಮತ್ತು ಚಂದ್ರರ ಸಂಕೇತಗಳಿವೆ.

**ಶಾಸನದ ಸಾರಾಂಶ :** ವೀರಗಲ್ಲಿನ ಎರಡು ಅಡ್ಡಪಟ್ಟಿಯಲ್ಲಿ ಕನ್ನಡ ಭಾಷೆ ಮತ್ತು ೧೨ನೆಯ ಶತಮಾನದ ಕನ್ನಡ ಅಕ್ಷರಗಳಿವೆ. ಪ್ರಸ್ತುತ ಶಾಸನದಲ್ಲಿ ಹೊಯ್ಸಳ ಚಕ್ರವರ್ತಿ ವೀರನರಸಿಂಹದೇವನ ಹೆಸರು ಉಲ್ಲೇಖಿತವಾಗಿದೆ. ಇದರಲ್ಲಿ ತೇದಿಯ ಉಲ್ಲೇಖವಿಲ್ಲ. ಛಾಯಾಚಿತ್ರ ಮತ್ತು ಪಡಿಯಚ್ಚು ಸಹಾಯದಿಂದ ಶಾಸನವನ್ನು ಓದಲಾಗಿದೆ. ಪ್ರಸ್ತುತ ಶಾಸನ ಮತ್ತು ಶಿಲ್ಪದ ಮಹತ್ವವನ್ನು ಪರಿಚಯಿಸುವ ಪ್ರಯತ್ನ ನಮ್ಮದಾಗಿದೆ. ನಮಗೆ ತಿಳಿದ ಮಟ್ಟಿಗೆ ಶಾಸನದ ಸಾರಾಂಶ ಅಥವಾ ಪಾಠ ಈವರೆಗೆ ಪ್ರಕಟವಾಗಿಲ್ಲ.

ಹೊಯ್ಸಳ ಮನೆತನದ ವೀರನರಸಿಂಹದೇವನ ಆಳ್ವಿಕೆಯಲ್ಲಿ ವೀರನೊಬ್ಬನು ತುರುಗೋಳ್ ಯುದ್ಧದ ಸಂದರ್ಭದಲ್ಲಿ ವೀರ ಮರಣವನ್ನಪ್ಪಿದ ಉಲ್ಲೇಖವಿದೆ. ಐದು, ಆರು ಮತ್ತು ಏಳನೆಯ ಸಾಲಿನ ಅಕ್ಷರಗಳು ಮಾಸಿ ಹೋಗಿರುವುದರಿಂದ ವಿವರಗಳು ಅಸ್ಪಷ್ಟವಾಗಿದೆ. ಈ ವೀರಗಲ್ಲು ಶಾಸನ ಶಿಲ್ಪ ನಾಲ್ಕು ಪಟ್ಟಿಕೆಗಳಿಂದ ಕೂಡಿದೆ. ನಾಲ್ಕನೆಯ ಪಟ್ಟಿಕೆಯಲ್ಲಿ ಬ್ರಹ್ಮ, ಮಹೇಶ್ವರ ಮತ್ತು ವಿಷ್ಣು ಶಿಲ್ಪಗಳಿರುವುದು ವೈಶಿಷ್ಟ್ಯ. ಧರ್ಮಸಮನ್ವಯದ ತತ್ವವನ್ನು ಶಿಲ್ಪದಲ್ಲಿ ಸಾಮಕೇತಿಕವಾಗಿ ಬಿಡಿಸಲಾಗಿದೆ.

**ಶಾಸನದ ಪಾಠ**

೧ ಸ್ವಸ್ತಿ ಸಮಸ್ತಭುವನಾಶ್ರಯ[ಶ್ರೀ] ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜ ಪರಮೇಶ್ವರಂ ದ್ವಾರಾವತೀ

೨ ಪುರವರಾಧೀಶ್ವರಂ ಯಾದವ ಕುಲಾಂಬರದ್ಯಮಣಿ ಸಮ್ಯಕ್ ಚೂಡಾಮಣಿ ಮಲೆರಾಜ

೩ ರಾಜಮಲಪರೊಳುಗುಂಡ ಕದನ ಪ್ರಚಂಡನಸಹಾಯ ಸೂರ ಸನಿವಾರಸಿದ್ಧಿ ಗಿರಿದುರ್ಗಮ

೪ ಲ್ಲ ಚಲದಂಕರಾಮನೇಕಾಂಗವೀರ ನಿಸ್ಸಂಕಪ್ರತಾಪ ಚಕ್ರವರ್ತಿ ಹೊಯ್ಸಳ ಶ್ರೀ ವೀರನರಸಿಂಹ ದೇವರು ಪ್ರಿಥ್ವೀ

೫ . . . . ದಲಿ ಕಹಿಗೊಂಡನ ಹಳಿಯ ತುಱುವನು [ಜಳೂರ ? ಮನು[ಗೊಂಡ] ಮಾ[ಳಾ ?] . . . . . .

೬ ಕಾಮಯ ಸುರಲೋಕ . . . . . . . . . . . .

೭ . . . . . . . . . . . . . . . . ಶ್ರೀ ಶ್ರೀ

[ಕೃತಜ್ಞತೆಗಳು : ಸಂಪಾದಕರು, ಮಂಡ್ಯ ಜಿಲ್ಲೆ ಗ್ಯಾಸೆಟಿಯರ್ ಇವರಿಗೆ. ಲಿಪಿ ತಜ್ಞರಾದ ಡಾ. ಎಸ್.ವಿ. ಪಾಡಿಗಾರ್ ಮತ್ತು ಡಾ. ಡಿ.ಎಂ. ನಾಗರಾಜುರವರಿಗೆ ಹಾಗೂ ಕಲ್ಪತರು ಕಾಲೇಜಿನ ವ್ಯವಸ್ಥಾಪಕರನ್ನು ಮತ್ತು ಕೈಗೋನಹಳ್ಳಿ ಗ್ರಾಮದ ಮುಖ್ಯಸ್ಥರನ್ನು ನೆನೆಯುತ್ತೇನೆ.]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಪ್ರಜಾವಾಣಿ** ದಿನಪತ್ರಿಕೆ, ೨೦೧೦ರ ಏಪ್ರಿಲ್ ೪, ಪುಟ ೩.

೨. **ಎಪಿಗ್ರಾಫಿಯ ಕರ್ನಾಟಿಕ** (ಪರಿಷ್ಕೃತ) ಸಂಪುಟ ೬, ಕೃಷ್ಣರಾಜಪೇಟೆ ೭೦ ಮತ್ತು ೭೧, ಪುಟ ೫೦–೫೫.

## ಗ್ರಂಥ ಸೂಚಿ

೧. ಶೇಷಶಾಸ್ತ್ರಿ ಆರ್, ೧೯೮೨, **ಕರ್ನಾಟಕದ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨. ಪರಮಶಿವಮೂರ್ತಿ. ಡಿ.ವಿ. ೧೯೯೯, **ಕನ್ನಡ ಶಾಸನ ಶಿಲ್ಪ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. **ಮಂಡ್ಯ ಜಿಲ್ಲೆ ಗ್ಯಾಸೆಟಿಯರ್,** ೨೦೦೩, ಬೆಂಗಳೂರು.

೪. ಡಾ. ಆರ್. ರಂಗಸ್ವಾಮಿ, ೨೦೦೮, **ಕೃಷ್ಣರಾಜಪೇಟೆ ಪ್ರದೇಶದ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ,** (ಅಪ್ರಕಟಿತ ಪಿಎಚ್.ಡಿ, ಮಹಾಪ್ರಬಂಧ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫. **ಇತಿಹಾಸ ದರ್ಶನ,** ೨೦೦೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.



# ಶಿವಮೊಗ್ಗ ಜಿಲ್ಲೆ ಸೂಡೂರಿನ ಅಪ್ರಕಟಿತ ಶಾಸನ

**ಮಧುಗಣಪತಿರಾವ್ ಮಡೆನೂರು***

ಶಿವಮೊಗ್ಗ ತಾಲ್ಲೂಕು ಸುಡೂರು ಗ್ರಾಮದ ಸರ್ಕಾರಿ ಅರಣ್ಯ ಪ್ರದೇಶದಲ್ಲಿ ವಿಜಯನಗರದ ಒಂದನೆಯ ದೇವರಾಯನ ಕಾಲಕ್ಕೆ ಸೇರಿದ, ವೀರ ಬಾಗಿಯೂರ ಕುಮಾರ ಬಸವಂಣನ ವೀರಗಲ್ಲು ಪತ್ತೆಯಾಗಿದೆ. ಕುಮುದ್ವತಿ ನದಿ ಎಡ ದಂಡೆಯ ಪಶ್ಚಿಮಕ್ಕೆ ಆಯನೂರು ಹೊಸನಗರ ಹೆದ್ದಾರಿಯ ಎಡ ಭಾಗದ ಮುನ್ನೂರು ಮೀಟರ್ ದೂರದಲ್ಲಿದೆ. ೧೯೦೦ರ ಸುಮಾರಿಗೆ ಇದ್ದ ಊರು ಪ್ರಕೃತಿ ವಿಕೋಪದಿಂದ ನಾಶವಾಗಿರುವುದಾಗಿ ಗೋಚರಿಸುತ್ತದೆ. ಪ್ರಸ್ತುತ ಅರಣ್ಯ ಪ್ರದೇಶವಾಗಿದ್ದು ಶಿವಮೊಗ್ಗ ಹಾಗು ಹೊಸನಗರ ತಾಲ್ಲೂಕಿನ ಗಡಿಭಾಗದಲ್ಲಿ ಈ ಕಲ್ಲು ದೊರೆತಿದೆ. ೧೯೫೪ರ ಮೊದಲು ಸೂಡೂರು ಬೇಚರಾಕ್ ಗ್ರಾಮವಾಗಿದ್ದು ಸಾಗರ ತಾಲ್ಲೂಕಿನ ಶರಾವತಿ ಕಣಿವೆ ಜಲವಿದ್ಯುತ್ ಯೋಜನೆಯು ೧೯೫೯-೬೦ರಲ್ಲಿನ ಪುನರ್ವಸತಿಯಿಂದಾಗಿ ಜನವಸತಿ ಊರಾಗಿ ಬೆಳೆದಿದೆ. ಗ್ರಾಮದ ನಡುವೆ ಕುಮುದ್ವತಿ ನದಿ ಹರಿದು ಹೋಗುತ್ತಿದೆ. ಸೂಡೂರು ಪ್ರಾಗೈತಿಹಾಸಿಕ ನೆಲೆಯಾಗಿದ್ದು ನವಶಿಲಾಯುಗದ ಪಳೆಯುಳಿಕೆಗಳಾದ ಕಲ್ಲಿನ ಮರಿಗೆ, ಬೆಣಚುಗಲ್ಲಿನ ಕೈಕೊಡಲಿಗಳು ನದಿ ಬಲದಂಡೆಯ ದಿಬ್ಬದಲ್ಲಿ ನೆಲ ಬಗೆದಂತೆಲ್ಲ ಹೇರಳವಾಗಿ ದೊರೆಯುತ್ತಿವೆ. ಈ ದಿಬ್ಬದಲ್ಲಿ ಅನೇಕ ಕುಟುಂಬಗಳು ವಾಸವಿದ್ದು, ನದೀ ಪಾತ್ರದ ತೆಗ್ಗು ಭೂಪ್ರದೇಶವಾಗಿರುವುದರಿಂದ ಅತಿವೃಷ್ಟಿಯಾದಾಗ ಆ ಕುಟುಂಬಗಳು ತೇಲಿಕೊಂಡು ಹೋಗಿರುವ ಸಾಧ್ಯತೆಗಳಿವೆ. ಅಲ್ಲಿ ನೆರೆ ಹತ್ತಿದ ಕುರುಹುಗಳೂ ಕಂಡುಬರುತ್ತಿವೆ.

## ವೀರಗಲ್ಲು

ಶಿಲೆಯು ೪.೬ ಅಡಿ ಎತ್ತರ ಹಾಗು ಎರಡು ಅಡಿ ಅಗಲವಿದ್ದ ನಾಲ್ಕು ಹಂತಗಳಲ್ಲಿ ಕೆತ್ತಲಾಗಿದೆ. ತಳದ ಹಂತದಲ್ಲಿ ಮೃತವೀರ ಹಾಗು ಆತನ ಮಡದಿಯ ವಿಗ್ರಹಗಳೆರಡನ್ನೂ ಕೆತ್ತಲಾಗಿದೆ. ಇದು ವೀರನೊಡನೆ ಸತಿಹೋಗಿರುವುದನ್ನು ತಿಳಿಸುತ್ತದೆ. ಬಹುಶಃ ಕಾಡಿನ ಬೆಂಕಿಯಿಂದ ವೀರನ ಚಿತ್ರ ಚೆಕ್ಕೆ ಎದ್ದುಹೋಗಿದ್ದು ಸತಿಯಿರುವ ಭಾಗ ತುಂಡಾಗಿದೆ. ಸತಿಯು ಅಗಲವಾದ ಕರ್ಣಕುಂಡಲ [ಓಲೆ] ಹಾಗು ಕಿರೀಟ ಧಾರಿಣಿಯಾಗಿದ್ದು ಕೊರಳಹಾರ ಧರಿಸಿರುವಳು. ಬಲಗೈಯನ್ನು ಮೇಲಕ್ಕೆ ಎತ್ತಿದ್ದು ಎಡಗೈಯನ್ನು ಕೆಳಕ್ಕೆ ಚಾಚಲಾಗಿದೆ. ಕೈಯಲ್ಲಿ ಬಳೆ ಹಾಗು ತೋಳಬಂಧಿ ಧರಿಸಿರುವಳು. ಸಣ್ಣದಾದ ಕಟಿ ಹಾಗು ಸೀರೆಯನ್ನು ತೊಟ್ಟಿದ್ದು,



ಶಿಲ್ಪಿಯು ಸತಿಯನ್ನು ಸುಂದರವಾಗಿ ಕೆತ್ತಿರುವುದು ಅಂದಿನ ಸ್ತ್ರೀಯರ ವೇಷಭೂಷಣವನ್ನು ನಿರ್ದರ್ಶಿಸುತ್ತದೆ. ಎರಡನೇ ಹಂತದಲ್ಲಿ ವೀರ ಮತ್ತು ಸತಿಯನ್ನು ಸುರಾಂಗನೆಯರು ಸಂಗೀತ, ನೃತ್ಯ ವಾದ್ಯಮೇಳದೊಂದಿಗೆ ಸ್ವಾಗತಿಸುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನನ್ನು ವಿಮಾನದಲ್ಲಿ ಕುಳ್ಳಿರಿಸಿ ಸ್ವರ್ಗಕ್ಕೆ ಕರೆದೊಯ್ಯುತ್ತಿರುವರು. ನಾಲ್ಕನೇ ಹಂತದಲ್ಲಿ ವೀರ

* ಶ್ರೀ ಮಡೆನೂರು ನಿಲಯ, ಶರಾವತಿ ನಗರ, ಶಿವಮೊಗ್ಗ-೫೭೭೨೦೧.

ಮತ್ತು ಸತಿ ಶಿವ ಸನ್ನಿಧಿಯಲ್ಲಿರುವುದನ್ನು ಚಿತ್ರಿಸಲಾಗಿದೆ. ನೆತ್ತಿಯಲ್ಲಿ ಸೂರ್ಯ, ಚಂದ್ರರರನ್ನು ಕೆತ್ತಿದ್ದು ಮಧ್ಯೆ ಎರಡು ಗೆರೆ ಎಳೆಯಲಾಗಿದೆ. ಚಂದ್ರನಿದ್ದ ಭಾಗ ಮುಕ್ಕಾಗಿದೆ.

**ಬಸವಣ್ಣ**

ಪ್ರಸ್ತಾವಿತ ಶಾಸನವು ವಿಜಯನಗರದ ಅರಸ ಎರಡನೇ ಹರಿಹರನ ಮಗ ಒಂದನೆಯ ದೇವರಾಯನ [೧೪೦೬-೧೪೨೨] ಆಡಳಿತ ಕಾಲದ್ದಾಗಿರುತ್ತೆ.[೧] ಇವನ ರಾಜ್ಯಪಾಲನಾಗಿ ಆರಗವನ್ನು ವೀರವಾರಪ್ಪ ಒಡೆಯರ ಕುವಾರ ಸೋವಣ್ಣವೊಡೆಯ ಆಡಳಿತ ನಡೆಸುತ್ತಿದ್ದ.[೨] ಅಂದು ಸೂಡೂರು ಸಮೃದ್ಧಿಯಿಂದ ತುಂಬಿರಬಹುದು. ಶತ್ರುಗಳು ಊರಿಗೆ ನುಗ್ಗಿ ಕೊಳ್ಳೆಹೊಡೆದು, ದೋಚಿದ ನಂತರ ಊರನ್ನು ನಾಶಪಡಿಸಲು ಬೆಂಕಿಯನ್ನು ಹಚ್ಚರಿಬೇಕು. ಊರಳಿವನ್ನು ತಡೆಗಟ್ಟಲು ಬಾಗಿಯಾದ ಕುವಾರ ಬಸವಂಣನು ಶತ್ರುಗಳೊಡನೆ ಹೋರಾಡಿ....ಸಂವತ್ಸರದ ಆಶ್ವೀಜ ಬ. ೧೧ರ ಆದಿವಾರದಂದು ಮೃತನಾಗುವನು. ಕಲ್ಲು ಮಾಸಿರುವುದರಿಂದ ಸಂವತ್ಸರ ಹಾಗು ವರ್ಷ ತಿಳಿಯುವುದಿಲ್ಲ. ಆರಗದ ಸೋಮಂಣನು ಮೃತ ವೀರನಿಗೆ ದಾನನೀಡುವನು.

**ಬಾಗಿಯಾರ ಬಸವಣ್ಣನ ಶಾಸನ ಪಾಠ**

**ಪಟ್ಟಿಕೆ-೧**

೧ ಬಾಗಿಯಾರ ಕುಮಾರ ಬಸವಂಣನು ಚ
೨ ಹೋ.. .. ..ಸಲಿಸಿ ಊರು [ಊರಳಿದ]

**ಪಟ್ಟಿಕೆ-೨**

೩ ಳುತ ಸಂವತ್ಸರದ ಆಶ್ವೀಜ ಬ ೧೧ ಆದಿವಾರ
೪ ಶ್ರೀಮತು ದೇವರಾಯರ ಕಾಲದಲ್ಲಿ ಆ
೫ ರಗದ ರಾಜ್ಯವನಾಳಿದ ಹೊಳ ಸೋಮಂಣ.

**ಆನೆಗಳ ತಾಣ**

ಸೂಡೂರು ಸುತ್ತೆಲ್ಲ ಕಾಡು ಮತ್ತು ಕುಮದ್ವತಿ ನದಿಯು ಬೇಸಿಗೆಯಲ್ಲೂ ಸದಾ ನೀರಿರುವುದರಿಂದ ಇದು ಆನೆಗಳ ವಾಸದ ತಾಣ. ಭದ್ರಾ ಅಭಯಾರಣ್ಯದಿಂದ ಶಂಕರಗುಡ್ಡದ ತಪ್ಪಲಿನಲ್ಲಿ ಹಾಯ್ದು ಸೂಡೂರಿಗೆ ಇಂದಿಗೂ ಆಗಾಗ್ಗೆ ಆನೆಗಳು ವಲಸೆ ಬಂದು ಬೆಳೆಹಾನಿ ಮಾಡುತ್ತಿರುತ್ತವೆ. ಇದೇ ದೇವರಾಯನ ಕಾಲದಲ್ಲಿ [೧೪೦೭] ಬೆಳೆಹಾನಿ ಮಾಡುತ್ತಿದ್ದ ಆನೆಯನ್ನು ಎದುರಿಸಿದ ವೀರನಿಗೆ ಸಂಬಂಧಿಸಿದ ಶಾಸನ ವೊಂದು ಕುಮದ್ವತಿಯ ಬಲದಂಡೆಯಲ್ಲಿದೆ.

ಸೂಡೂರಿನಲ್ಲಿನ ಚೀಲಗೊಂಡರಸನ ಜಮೀನಿಗೆ ಆನೆಯು ನುಗ್ಗಿ ಬೆಳೆನಾಶಪಡಿಸುತ್ತಿದ್ದ ವೇಳೆ ಅದನ್ನು ಓಡಿಸುವ ಪ್ರಯತ್ನದಲ್ಲಿ ತೊಡಗುವರು. ಆನೆಯು ಬೆನ್ನಟ್ಟಿ ಒಂದು ಚೀಲಗೊಂಡರಸನನ್ನು ಮುಗಿಸಿಯೇ ಬಿಟ್ಟಿತು ಎನ್ನುವಷ್ಟರಲ್ಲಿ ಬೊಮ್ಮಣ್ಣನೆಂಬುವನು ಆನೆಗೆ ಅಡ್ಡಬಂದು ಎದುರಿಸಿ ಚೀಲಗೊಂಡರಸನನ್ನು ಪ್ರಾಣಾಪಾಯದಿಂದ ರಕ್ಷಿಸುವನು. ಆದರೆ ಬೊಮ್ಮಣನು ಆನೆಯ ಧಾಳಿಗೆ ಸಿಕ್ಕು ಹತನಾಗುವನು. ಇದರ ಕಾಲ ಶಕ ವರುಷ ೧೩೨೯ ಅಂದರೆ ಕ್ರಿ.ಶ. ೧೪೦೭, ಸರ್ವಜಿತು ಸಂವತ್ಸರದ ಕಾರ್ತೀಕ ಬಹುಳ ೧೧ ಆಗಿರುತ್ತದೆ.[೩] ಪ್ರಾಣವ ಕಾಪಾಡಿದ ಮೃತ ಬೊಮ್ಮಣ್ಣನ ವಂಶಸ್ತರಿಗೆ ಚೀಲಗೊಂಡರಸನು ಉಂಬಳಿ ನೀಡುವನು.

ಮಲೆಯಶಂಕರ ಗುಡ್ಡದಿಂದ ಅಂಬಲಿಗೊಳದ ವರೆಗೆ ಹಾದುಹೋದ ಪರ್ವತ ಶ್ರೇಣಿಗಳು ೧೯೦೦ರ ಸುಮಾರಿನಲ್ಲಿ ಇದ್ದ ಜನವಸತಿಯು ಪ್ರಕೃತಿ ವಿಕೋಪ ಹಾಗು ಅನಾವೃಷ್ಟಿಯಿಂದ ಜನಸಂಖ್ಯೆ ನಾಶವಾಗಿ ಕಾಡು ಬೆಳೆದುಕೊಂಡಿತ್ತು. ಈ ಭಾಗದಲ್ಲಿ ಆನೆಗಳು ಓಡಾಡುವ ದಾರಿಯೂ ಆಗಿತ್ತು. ಇಂತಹದರಲ್ಲಿ ಸೂಡೂರು ಗ್ರಾಮವೂ ಒಂದು. ಮೇಲಿನಂತೆ ಸೂಡೂರಿನಲ್ಲಿ ವಿಭಿನ್ನ ಘಟನೆಗಳಿಗೆ ಸಂಬಂಧಿಸಿದಂತೆ ವಿಜಯನಗರದ ಒಂದನೇ ದೇವರಾಯನ ಕಾಲದ ಎರಡು ವೀರಗಲ್ಲುಗಳನ್ನು ಕಾಣುತ್ತೇವೆ. ಬೇಚರಾಕ್ ಗ್ರಾಮವು ಶರಾವತಿ ಮುಳುಗಡೆ ರೈತರ ಪುನರ್ವಸತಿ ಯಿಂದಾಗಿ ಸೂಡೂರು ಮತ್ತೆ ಜನವಸತಿಯನ್ನು ಕಂಡಿದೆ. ಸೂಡೂರು ಅಂದು ಆರಗ ಆಡಳಿತ ವ್ಯಾಪ್ತಿಗೆ ಒಳಪಟ್ಟಿತ್ತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಕರ್ನಾಟಿಕ,** ಸಂಪುಟ ೮, (ರೈಸ್ ಆವೃತ್ತಿ), ಭಾಗ-೨, ತೀರ್ಥಹಳ್ಳಿ ೧೨೨.

೨. **ಎಪಿಗ್ರಾಫಿಯಾ ಕರ್ನಾಟಿಕ,** ಸಂಪುಟ ೮, (ರೈಸ್ ಆವೃತ್ತಿ), ಭಾಗ-೨, ತೀರ್ಥಹಳ್ಳಿ ೧೩೨.

೩. **ಎಂ.ಎ.ಆರ್.** ೧೯೨೩, ತೀರ್ಥಹಳ್ಳಿ ೬೦, ಕಾಲ ೧೪೦೭, ಪುಟ ೭೨-೭೩.

# ಕೋಲಾರ ಜಿಲ್ಲೆ ಮುಳಬಾಗಿಲು ತಾಲ್ಲೂಕಿನ ಕುರುಡುಮಲೆ ಶ್ರೀ ವಿನಾಯಕ ದೇವಾಲಯದ ಅಪ್ರಕಟಿತ ಶಾಸನ

ಕೆ.ಆರ್. ನರಸಿಂಹನ್*

ವಿಘ್ನಗಳ ಪರಿಹಾರಕನಾದ ಮಂಗಳಮೂರ್ತಿ ವಿನಾಯಕನು ನೆಲೆಸಿರುವ ಗ್ರಾಮ ಕುರುಡುಮಲೆ. ಕೋಲಾರ ಜಿಲ್ಲೆಯ ಮುಳಬಾಗಿಲಿಗೆ ಸುಮಾರು ಹನ್ನೊಂದು ಕಿ.ಮೀ. ದೂರದಲ್ಲಿರುವ ಈ ಗ್ರಾಮವು ಐತಿಹಾಸಿಕ ಸ್ಥಳವೂ ಆಗಿದೆ. ಪ್ರಕೃತಿದತ್ತವಾದ ಬೆಟ್ಟಗುಡ್ಡಗಳಿಂದ ಕೂಡಿದ ಇಲ್ಲಿರುವ ಬೆಟ್ಟವನ್ನು 'ಕೌಂಡಿಣ್ಯಗಿರಿ' ಎಂದು ಸಂಬೋಧಿಸಲಾಗುತ್ತಿದೆ. ಇದೇ ಹೆಸರಿನ ಹೊಳೆಯು ಇಲ್ಲಿನ ಬೆಟ್ಟದಲ್ಲಿ ಉಗಮವಾಗಿ 'ನಂಗಲಿ ಹೊಳೆ' ಎಂದು ಪ್ರಸಿದ್ಧವಾಗಿದ್ದು ಮುಂದಕ್ಕೆ ಹರಿದು ಪಾಲಾರ್ ನದಿಯನ್ನು ಸೇರುತ್ತದೆ. ಕರ್ನಾಟಕದ ಕೆಲವೇ ಪ್ರಸಿದ್ಧವಾದ ವಿನಾಯಕ ದೇವಾಲಯಗಳಲ್ಲಿ ಕುರುಡುಮಲೆ ಯಲ್ಲಿರುವ ಆಲಯವನ್ನು ವಿಶಿಷ್ಟವಾದದ್ದೆಂದು ಪರಿಗಣಿಸ ಲಾಗಿದ್ದು, ಗ್ರಾಮದಲ್ಲಿ ಇನ್ನೂ ಕೆಲವೊಂದು ದೇವಾಲಯಗಳಿವೆ. ಇವುಗಳಲ್ಲಿ ಈಗಲೂ ಪೂಜೆಗೊಳ್ಳುತ್ತಿರುವ ಶಿವ-ಪಾರ್ವತಿಯರ ದೇವಾಲಯವಿರುತ್ತದೆ. ಕುರುಡುಮಲೆಗೆ ಐತಿಹಾಸಿಕ ಪರಂಪರೆಯನ್ನು, ಜನಪ್ರಿಯತೆಯನ್ನು ತಂದುಕೊಟ್ಟಿರುವುದೇ ವಿನಾಯಕ ದೇವಾಲಯ.

ವಿನಾಯಕನ ವಿಶಾಲವಾದ ಪೂಜಾಮಂದಿರವನ್ನು ಎರಡು ಕಾಲಘಟ್ಟಗಳಲ್ಲಿ ನಿರ್ಮಿಸಲಾಗಿದೆ. ಇಲ್ಲಿನ ಗರ್ಭಗೃಹ ಮತ್ತು ಶುಕನಾಸಿಗಳನ್ನು ಬಹುಶಃ ಹೊಯ್ಸಳ ಅರಸರ ಆಳ್ವಿಕೆಗೆ ಸೇರಿಸಬಹುದಾದರೆ ಮುಂದಿನ ನವರಂಗವು ವಿಜಯನಗರದ ಅರಸರ ಕಾಲದ ಕೊಡುಗೆಯೆಂಬುದು ನಿರ್ವಿವಾದ. ಇಲ್ಲಿನ ನವರಂಗದ ಕಂಬಗಳ ಮೇಲಿನ ಉಬ್ಬುಶಿಲ್ಪಗಳನ್ನು ಇತಿಹಾಸ ಬರಹಗಾರರು ತಮ್ಮ ಕೃತಿಗಳಲ್ಲಿ ವಿವರಣಾತ್ಮಕವಾಗಿ ದಾಖಲಿಸಿರುವುದು ಈ ಆಲಯದ ಚಾರಿತ್ರಿಕ ಹಿರಿಮೆಗೆ ನಿದರ್ಶನವಾಗಿದೆ.

ವಿನಾಯಕ ದೇವಾಲಯವು ಪೂರ್ವಾಭಿಮುಖ ವಾಗಿದ್ದು ಮುಂಭಾಗದಲ್ಲಿ ವಿಶಾಲವಾದ ಮಂಟಪವಿದೆ. ದಕ್ಷಿಣ ದಿಕ್ಕಿಗೆ ಮತ್ತೊಂದು ದ್ವಾರವನ್ನು ಆಲಯಕ್ಕೆ ಅಳವಡಿಸಲಾಗಿದೆ. ದಕ್ಷಿಣ ದಿಕ್ಕಿನ ಬಾಗಿಲು ಸಹಾ ಪೂರ್ವದ ಬಾಗಿಲಿನಂತೆಯೇ ಕಲಾತ್ಮಕವಾದ ಬಾಗಿಲವಾಡವನ್ನು ಹೊಂದಿದೆ. ಇಲ್ಲಿಂದ ಹೊರಗೆ ಹೋಗಲು ಪುಟ್ಟ ಮೆಟ್ಟಿಲುಗಳಿವೆ. ಈ ದಕ್ಷಿಣ ದಿಕ್ಕಿನ ದ್ವಾರದಲ್ಲಿರುವ ಪ್ರಸ್ತುತ ಶಾಸನವು ಹಲವಾರು ಮಹತ್ವದ ಸಂಗತಿಗಳನ್ನು ತಿಳಿಸಿಕೊಡುತ್ತದೆ.

ಆಲಯದ ದಕ್ಷಿಣ ದಿಕ್ಕಿನ ದ್ವಾರದ ಹೊರಗಡೆ ಗೋಡೆಯ ಬಲಭಾಗದಲ್ಲಿರುವ ಕನ್ನಡ ಶಾಸನವು ವಿಜಯನಗರದ ಅರಸರ ಕಾಲದ ಲಿಪಿ-ಬರಹಗಳಿಂದ ಕೂಡಿದೆ. ಅಧಿಷ್ಠಾನ ಹಾಗೂ ಭಿತ್ತಿಗಳ ಮೂರು ದೀರ್ಘವಾದ ಶಿಲಾಪಟ್ಟಿಕೆಗಳನ್ನು ಆವರಿಸಿಕೊಂಡಿರುವ ಶಾಸನದಲ್ಲಿ ಹನ್ನೊಂದು ಸಾಲುಗಳಿವೆ. ಪ್ರತಿ ಸಾಲಿನ ಕೊನೆಯಲ್ಲಿರುವ ಹಲವೊಂದು ಅಕ್ಷರಗಳನ್ನು ದುರಸ್ತಿಯ ಕಾರಣ ಕಟ್ಟಲಾಗಿರುವ, ಬೃಹತ್ ಗೋಡೆಯು ಮುಚ್ಚಿಕೊಂಡಿರುವ ಕಾರಣದಿಂದ ದಾಖಲಿಸಲು ಸಾಧ್ಯವಾಗಿಲ್ಲ. ಆದರೆ ಇದರಿಂದ ಶಾಸನದ ಅರ್ಥಗ್ರಹಿಕೆಗೆ ತೊಂದರೆಯಾಗಿಲ್ಲ. ವಿನಾಯಕ ದೇವಾಲಯದ ನವರಂಗದ ಅಧಿಷ್ಠಾನ ಮತ್ತು ಭಿತ್ತಿಗಳಲ್ಲಿ ಸ್ಪಷ್ಟವಾಗಿ ಪ್ರಕಟಗೊಂಡ ಕನ್ನಡ ಶಾಸನವು ಕುರುಡುಮಲೆಯ ತಮಿಳು ಶಾಸನ ಸಮೂಹದಲ್ಲಿ ಸದ್ಯಕ್ಕೆ ಲಭ್ಯವಾಗಿರುವ ಏಕೈಕ ಕನ್ನಡ ಭಾಷಿಕ ಶಿಲಾ ಶಾಸನವೆಂಬ ಕಾರಣದಿಂದ ಇದೀಗ ಮಹತ್ವದ್ದಾಗಿರುತ್ತದೆ.

ಅಧಿಷ್ಠಾನ ಹಾಗೂ ಗೋಡೆಯ ಮೇಲೆ ಮೂರು ಶಿಲಾಪಟ್ಟಿಕೆಗಳ ಮೇಲೆ ಮೂರು ಭಾಗದಲ್ಲಿ ಶಾಸನವನ್ನು ಹಾಕಲಾಗಿದೆ. ಮೊದಲನೇ ಮತ್ತು ಎರಡನೇ ಶಿಲಾಪಟ್ಟಿಕೆಗಳ ಮೇಲೆ ನಾಲ್ಕು ಸಾಲುಗಳಿದ್ದರೆ ಮೂರನೆಯ ಪಟ್ಟಿಕೆಯು ಮೂರು ಸಾಲುಗಳನ್ನೊಳಗೊಂಡಿದೆ. ಕಡೆಯ ಮೂರು ಸಾಲುಗಳು ತಮಿಳು ಗ್ರಂಥಲಿಪಿಯಲ್ಲಿರುವುದು ವಿಶೇಷ. ಕಡೆಯ ಸಾಲುಗಳು ಬಹುಪಾಲು ಶಿಲಾಬರಹವನ್ನು ಬರೆದವರ ಮತ್ತು ಸಾಕ್ಷಿಯಾದವರ ಹೆಸರು ಇಲ್ಲವೇ

* ನಂ. ೨೦೩, ಸಿಂಚನ, ಮೊದಲನೇ 'ಎ' ಮೇನ್, ಮಾರುತಿನಗರ, ಯಲಹಂಕ, ಬೆಂಗಳೂರು-೫೬೦೦೬೪.

ರುಜುವನ್ನು ತಿಳಿಸುವಂತಿದೆ. ಶಾಸನವನ್ನು ಹಾಕಿಸಿದ ಗಣ್ಯರು, ಸ್ಥಾನಿಕರು, ತಮಿಳು ಮೂಲದವರೇ ಆಗಿದ್ದರೆಂಬುದು ಇದರಿಂದ ಹೊರಪಡುವಂತಿದೆ.

ಈಗಾಗಲೇ ಬಿ.ಎಲ್. ರೈಸ್‌ರವರು ದಾಖಲಿಸಿರುವ 'ಎಪಿಗ್ರಾಫಿಯಾ ಕರ್ನಾಟಿಕ'ದ ಹತ್ತನೇ ಸಂಪುಟದಲ್ಲಿರುವ ಮುಳಬಾಗಿಲು ತಾಲೂಕಿನ ಸಿದ್ದಘಟ್ಟ ಗ್ರಾಮದ ೨೫೫ ಮತ್ತು ೨೬೦ನೇ ಸಂಖ್ಯೆಯ ಎರಡು ಶಾಸನಗಳ ಹಿನ್ನೆಲೆಯಲ್ಲಿ ಪ್ರಸ್ತುತ ಕುರುಡುಮಲೆಯ ಹೊಸ ಶಾಸನವನ್ನು ಪರಿಶೀಲಿಸಬಹುದಾಗಿದೆ. ಸಿದ್ದಘಟ್ಟ ಗ್ರಾಮವು ಕುರುಡುಮಲೆಯ ವಿಶಾಲವಾದ ಬೆಟ್ಟದ ಹಿಂಭಾಗದಲ್ಲಿರುವ ಗ್ರಾಮವಾಗಿದೆ. ಕುರುಡಮಲೆಯನ್ನು ತಮಿಳು ಶಾಸನಗಳಲ್ಲಿ 'ಕುಡುರಿಮಲೈ' ಇಲ್ಲವೇ 'ಕೂತ್ತಾಂಡದೇವನಲ್ಲೂರು' ಎಂದು ಸಂಬೋಧಿಸಲಾಗಿದೆ. ಹೊಯ್ಸಳ ದೊರೆ ನರಸಿಂಹನ ಕಾಲದ ತಮಿಳು ಪ್ರದೇಶದ ಮುಖ್ಯ ಭಾಗವಾಗಿ ಅಥವಾ ಸ್ಥಳೀಯ ರಾಜಧಾನಿಯಾಗಿ ಇದು ಪ್ರಸಿದ್ಧಿ ಪಡೆದಿತ್ತೆಂಬ ವಿಚಾರ ಇತಿಹಾಸದ ಪುಟಗಳಲ್ಲಿದೆ. ಚೋಳ-ಹೊಯ್ಸಳ ಮನೆತನಗಳ ಸಂಬಂಧವನ್ನು ಉತ್ತಮಗೊಳಿಸಿ ಪ್ರಮುಖ ದೇವಾಲಯಗಳ ಸಂರಕ್ಷಣೆ ಮಾಡಿದ ಹಾಗೂ ಕೆಲವು ಹೊಸ ದೇವಾಲಯಗಳನ್ನು ನಿರ್ಮಿಸಿದ 'ಕೂತ್ತಾಡುನ್‌ದೇವ'ನ ದೇವಾಲಯ ಸಂಸ್ಕೃತಿಗೆ ಕಿರೀಟವಿಟ್ಟಂತಿರುವ ಕುರುಡುಮಲೆಯ ವಿನಾಯಕ ದೇವಾಲಯದ ಕನ್ನಡ ಶಾಸನವನ್ನು ಇಲ್ಲಿ ಪ್ರಸ್ತುತಪಡಿಸಲಾಗಿದೆ.

**ಶಾಸನಪಾಠ**

೧ ಶುಭಮಸ್ತು ಸ್ವಸ್ತಿಶ್ರೀ ವಿಜಯಾಭ್ಯುದಯ ಶಕವರುಷ ೧೩೬೮ನೆಯ ದುಂಧುಭಿ ಸಂವತ್ಸರದ ಮಾರ್ಗಸಿರ ಸು೧೦ಲೂ ಸಿದ್ದಪ್ಪಗಳ ಮಕ್ಕಳು ತಿಂಮಣಗಳಿಗೆ ಕುರುಡುಮಲೆಯ ಸ್ತಾನಿ.......

೨ ನಿಲು ವಿನಾಯಕ ದೇವರ ಸಂನಿದಿಯಲಿ ಛತ್ರವನ್ನಿಕ್ಕಿಸೋದಕೆ ನಾಲು ಕ್ರಯುವ ಕೋಟ ಸೀಮೆಗೆ ಸಿದ್ದಸಮುದ್ರದ ಒಳಗಣ ಸಿಮೆ.....

೩ ಆ ಸಿಮೆಗೆ ಕ್ರಯವಾಗಿ ೧೦ ಉಭಯಂ ನೆಲಕಂ ಸೆರಿಸಿಕೊಟ್ಟ ಸಿಮೆಯ ವಳೆಯ ಶಾಸನದ ವಿವರ ಮೇಳಾದೇವಿ ಹಳಿಯು ಸಿಮೆಗೆ ಪಡುವಲು ಮುಳವಾಯಿ ನಾಚಿಯಾರಿಗೆ ಸ....

೪ ಕುಂಟೆಯ ಕೆಳಗಣ ಗದೆಗೆ ಬಡಗಲು ತಾಳೆಕುಂಟೆ ಒಳಗೆ ಯು ವ(ಪ)ಡು ಬಲಕೆ ಮೂಡಲು ಆನೆಕುಂಟೆಯ ಕೆರೆಯ ಕೀಳೇರಿಯ ವುಭಯಮಾಗೆ ದಾರಿಗೆ ಮೂಡಲ ಕುಂ

೫ ಟೆಗೆ ಬಡಗಲು ಅಸಿದ ಬಂಕಣಿಕೆ ಕುಂಟೆ ಸಹ ತಾವರೆಕೆರೆಯ ಹುಣಿಸೆಯ ಕುಂಟೆಗೆ ತೆಂಕಲು ನಡುವೆ ಸಲುವ ಸಿಮೆಗೆ ಬಡಗಲಾಗಿ ಚರುಸಿಮೆಯ ಒಳಗಣ ಕುಂಟೆ ಕೆರೆ ಹಳ್ಳ ಕೋ

೬ ಡಿ ಸಹವಾಗಿ ಕ್ರಯುವನೂ ಕೊಟ್ಟುಕಲ್ಲನಡೆಸಿ ಕೊಟೆವಾಗಿಯೀ ಕ್ರಯುಶಾಸನವನೂ ಮಾಡಿಸಿ ಸಿಮೆಯನು ಅನುಭವಿಸುದುಯೆಂದು ಪ್ರಾಮಾಣಿಸಲಾಗಿ ದಿನಂಪ್ರತಿ ದೇವರ ಸಂನಿದಿಯಲೂ ಆರು ಮಂದಿ ಬ್ರಾ....

೭ ಯಿಕ್ಕಿಸಿ ನಿಮ್ಮ ಪುತ್ರ ಪೌತ್ರ ಪರಂಪರೆ ಆಗಿ ಆಚಂದ್ರರ್ಕಸ್ತಾಯಿ ಆಗಿ ದಾನಾದಿ ಕ್ರಯಗಳಿಗೆ ಯೋಗ್ಯತಾದಿ ಅನಭವಿಸುದುಯಂದು ಕೊಟ್ಟ ಶಾಸನ ಸ್ಥಾನ ಮಾಂನ್ಯ ಸೂತ್ರ....

೮ ರುತಪ್ಪಿದರು ವಿನಾಯಕದೇವರ ಶ್ರೀಪಾದಕೆ ತಪ್ಪಿದವರು ವಾರಣಸಿಯಲಿ ತಂಮ ಮಾತಾ ಪಿತೃಗಳನೂ ವದಿಸಿದ ಪಾಪದಲಿ ಹೊ.... ಯೆಂಬುದಕೆ ಸ್ತಾನಿಕರವೊಪ್ಪ ವಿನಾಯಕ ದೇ

೯ ವರವೊಪ್ಪ ನಾಯನಾರ ಮಕ್ಕಳು ಅಪ್ಪಣ್ಣ ನಾಯನಾರ ಬರಹ* ಅಳಗಿಯ ನಾಯನಾರ್ ರಕ್ಷೈ....

೧೦ ಉತ್ತಮ ನಂಜೈನಾಯನಾರಳುತ್ತು ವಿನಾಯಕ ದೇವರ ಎಳುದು

[* ಇಲ್ಲಿಂದ ಮುಂದಿನ ಭಾಗ ಗ್ರಂಥ ತಮಿಳು ಲಿಪಿಯಲ್ಲಿದೆ]

ಕುರುಡುಮಲೆಯಲ್ಲಿ ಆರು ಬ್ರಾಹ್ಮಣರಿಗೆ ಅನ್ನಸತ್ರವನ್ನಿಕ್ಕಿಸುವ ಕಾರ್ಯವು ಈ ಶಾಸನದ ಆಶಯವೆಂದು ಹೇಳಬೇಕು. ಸಿದ್ದಘಟ್ಟದಲ್ಲಿ ಕಟ್ಟಿದ 'ಕನ್ನೆಕೆರೆ'ಯ ಕೀಳೇರಿಯಲ್ಲಿನ ಗದ್ದೆ ಹುಟ್ಟುವ ನೆಲವು ಮಾದಘಟ್ಟದ ಸೀಮೆಗೆ ಸೇರಿದ ಕಾರಣ ಕುರುಡುಮಲೆಯ ಸೀಮೆಯ ಒಳಗೆ ಮಾದಘಟ್ಟದವರಿಗೆ ಕೆಲವು ಹೊಲ ಗದ್ದೆಗಳನ್ನು ಕೊಡುವ ಸಂಬಂಧದಲ್ಲಿ ಈ ಶಾಸನವನ್ನು ಪ್ರಮುಖವೆಂಬುದಾಗಿ ತಿಳಿಯಬಹುದು. ಶಾಸನೋಕ್ತ ಕೆರೆ ಕುಂಟೆಗಳು ಕುರುಡುಮಲೆಯ ಆಸುಪಾಸಿನಲ್ಲಿದ್ದು ಬೇಸಾಯದಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತವೆ. ಉದಾಹರಣೆಗೆ: ಆನೆಕುಂಟೆ, ತಾಳೆಕುಂಟೆ ಇತ್ಯಾದಿ. ದಾನ ನೀಡಿದ ಇಲ್ಲವೇ ಪರ್ಯಾಯವಾಗಿ ಬಿಟ್ಟುಕೊಟ್ಟ ಜಮೀನಿನ ಎಲ್ಲೆಗಳನ್ನು ಇದರಲ್ಲಿ ಗುರುತಿಸಲಾಗಿದೆ. ಮೇಳಾದೇವಿಹಳ್ಳಿಯ ಹೆಸರು ಶಾಸನೋಕ್ತವಗಿದೆ. ಮುಳಬಾಗಿಲಿನ ಪ್ರಸಿದ್ಧ ಗ್ರಾಮದೇವತೆ ಮುಳುವಾಯ ನಾಚ್ಚಿಯಾರಳ ಉಲ್ಲೇಖವೂ ಇದರಲ್ಲಿದೆ.

ಈ ಶಾಸನದ ಅರ್ಥಸ್ಪಷ್ಟತೆಗೆ ಸಿದ್ಧಘಟ್ಟದಲ್ಲಿ ಹಾಕಲಾಗಿರುವ ಎರಡು ಶಾಸನಗಳ ನೆರವನ್ನು ಪಡೆಯಬಹುದು. ಸಿದ್ದಘಟ್ಟದ ಒಂದು ಶಾಸನವು (ಕ್ರಮಸಂಖ್ಯೆ ೨೫೦ 'ಎಪಿಗ್ರಾಫಿಯಾ ಕರ್ನಾಟಿಕ' ಸಂಪುಟ: ಹತ್ತು. ಮುಳಬಾಗಿಲು ತಾಲೂಕು) ಕುರುಡುಮಲೆ ಹೊಸ ಶಾಸನದ ದಿನಾಂಕಕ್ಕೆ (೧೪೪೨) ಸೇರುತ್ತದೆ. ಇದೊಂದು ಕ್ರಮಧರ್ಮ ಶಾಸನವಾಗಿರುತ್ತದೆ. ಕುರುಡಿಮಲೆಯ ಸೀಮೆಯಲ್ಲಿ ಕಸುಗೋಡ ಬಡಗಣ ಹಳ್ಳವನ್ನು ಸಿದ್ದಸಮುದ್ರವೆಂಬ ಹೆಸರಿನ 'ಕನ್ನೆಗೆರೆ' ಕಟ್ಟುವ ವಿಚಾರವಾಗಿರುತ್ತದೆ. ಕೆರೆಯ ಕೀಳೇರಿಯಲ್ಲಿ ಗದ್ದೆ ಹುಟ್ಟುವ ನೆಲವು ಮಾದಘಟ್ಟದ ಸೀಮೆಗೆ ಸೇರಿದ ಹಲವು ಗದ್ದೆ–ಹೊಲಗಳನ್ನು ಬಿಟ್ಟುಕೊಟ್ಟು ಈ ಸಂಬಂಧ ಸೀಮೆಯ ಕಲ್ಲನ್ನು ನೆಡಲಾಗಿದೆ. ಈ ಗದ್ದೆ ಹೊಲಗಳಲ್ಲಿ ದಸವಂದದ ಗದ್ದೆಯನ್ನು ಕಳೆದು (ಉಳಿದ) ಮಿಕ್ಕ ಗದ್ದೆಹೊಲಗಳನ್ನು ಕ್ರಯಕ್ಕೆ ಕೊಂಡುಕೊಳ್ಳಬೇಕೆಂದು (ಹೇಳಲಾಗಿ) ಇದರ ಧರ್ಮವಾಗಿ ವಿನಾಯಕ ದೇವರ ಸನ್ನಿಧಿಯಲ್ಲಿ ಛತ್ರವನ್ನು ಇಕ್ಕಿಸಬೇಕೆಂದು ಹೇಳಿದ ಕಾರಣ ಅಯಿವತ್ತು ಹೊನ್ನಿಗೆ ಕ್ರಯವ ಕೊಂಡು ಹೊನ್ನನ್ನು ಸಲ್ಲಿಸಿಕೊಳ್ಳಲಾಗಿದೆ. ವಳಯ ಶಾಸನವನ್ನು ಬರೆದುಕೊಟ್ಟಿರುವುದನ್ನು ಈಗ ಲಭ್ಯವಿರುವ ಕುರುಡುಮಲೆಯ ಹೊಸ ಶಾಸನ ಶೋಧದಿಂದ ಮನದಟ್ಟಾಗುತ್ತದೆ. ಅಷ್ಟಭೋಗ ತೇಜಸ್ವಾಮ್ಯವನ್ನು ಅನುಭವಿಸಿಕೊಂಡು ವಿನಾಯಕ ದೇವರ ಸನ್ನಿಧಿಯಲ್ಲಿ ದಿನಂಪ್ರತಿ ಆರು ಮಂದಿ ಬ್ರಾಹ್ಮಣರಿಗೆ ಛತ್ರವನ್ನು ಇಕ್ಕಿಸಿ ಹೋಗಬೇಕೆಂದು ಈ ಕ್ರಯ ಶಾಸನದಲ್ಲಿ ತಿಳಿಸಲಾಗಿದೆ.

'ವಿನಾಯಕ ದೇವರ ಸಂನಿಧಿಯಲಿ ಆರು ಮಂದಿ ಬ್ರಾಹ್ಮರಿಗೆ ಛತ್ರವನಿಕ್ಕಿಸೋದಕ್ಕೆ ತಿಮ್ಮಣ್ಣನಿಗೆ ಕುರುಡುಮಲೆಯ ಸ್ತಾನಿಕರು ಕ್ರಯವ ಕೊಟ್ಟ ಸೀಮೆಯ ವಿವರಗಳನ್ನು' ಒಳಗೊಂಡಿರುವುದೇ ಕುರುಡುಮಲೆಯ ಶಾಸನ. ವಳಯ ಶಾಸನದ ವಿವರವೆಂದು ಹೇಳಿರುವುದು ಇಲ್ಲಿ ಗಮನಾರ್ಹ. ಈ ವಿವರಗಳು ಅಪೂರ್ಣವಾದ ಸಿದ್ದಘಟ್ಟದ ಮತ್ತೊಂದು ಶಾಸನದ ವಿವರಗಳಿಗೆ ಸರಿಹೊಂದುತ್ತದೆ. (ಕ್ರಮ ಸಂಖ್ಯೆ ೨೬೦ 'ಎಪಿಗ್ರಾಫಿಯಾ ಕರ್ನಾಟಿಕ' ಸಂಪುಟ: ಹತ್ತು, ಮುಳಬಾಗಿಲು ತಾಲೂಕು)

ವಿನಾಯಕ ದೇವಾಲಯದ ಸ್ತಾನತ್ತಾರರ ವಿಷಯ ಕುರುಡುಮಲೆಯ ೧೯೧ನೇ ಕ್ರಮಸಂಖ್ಯೆಯ ಶಾಸನದಿಂದ ತಿಳಿದುಬರುತ್ತದೆ. 'ಕೋಯಿಲಿಲ್ ತಾನತ್ತಾರ್ ದಕ್ಷಿಣಾಮೂರ್ತಿ ವಿನಾಯಕರ್' ಎಂದು ಉಲ್ಲೇಖವಿರುವ ಈ ತಮಿಳಿನ ಶಾಸನದ ಕಾಲವನ್ನು ಕ್ರಿ.ಶ. ೧೩೭೩ ಎಂದು ಶಾಸನದಲ್ಲಿ ಉಲ್ಲೇಖಿಸಿರುವುದನ್ನನುಸರಿಸಿ ಅಭಿಪ್ರಾಯಪಡಲಾಗಿದೆ. ದೇವಾಲಯದ ಅಭಿವೃದ್ಧಿಯಲ್ಲಿ ಇವರದ್ದು ನಿರ್ಣಾಯಕ ಪಾತ್ರವಾಗಿದ್ದು ಹೊಸ ಶಾಸನದಲ್ಲಿ ಹೇಳಲಾಗಿರುವಂತೆ ಇಲ್ಲಿನ ಸ್ತಾನಿಕರು ತಿಮ್ಮಣ್ಣನಿಗೆ ನೀಡಿದ ಕ್ರಯಧರ್ಮದ ವಿಚಾರವು ಗಮನಾರ್ಹವಾದದ್ದೆಂದು ಅಭಿಪ್ರಾಯಪಡಬಹುದು.

[ಈ ಶಾಸನದಲ್ಲಿ ಶಕವರ್ಷ ೧೩೬೪ ದುಂಧುಬಿ ಸಂವತ್ಸರ, ಮಾರ್ಗಶಿರ ಶುದ್ಧ ೧೦ ಎಂದು ಮಾತ್ರ ಕಾಲ ಸೂಚಿತವಾಗಿದೆ. ವಾರಸೂಚಿತವಾಗಿಲ್ಲ. ಇದು ಕ್ರಿ.ಶ. ೧೪೪೨ ನವೆಂಬರ್ ೨೨, ಸೋಮವಾರಕ್ಕೆ ಸರಿಹೊಂದುತ್ತದೆ. (ಸಂ)]



೨೭

# ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ಕೈವಾರದ ಸುಗಟೂರು ಅರಸರ ಅಪ್ರಕಟಿತ ಶಾಸನ

ಕುಮಾರಿ ಮುನಿರತ್ನಮ್ಮ ಕೆ.ಹೆಚ್.*

**ಚಿ**ಕ್ಕಬಳ್ಳಾಪುರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ಚಿಕ್ಕ ಗ್ರಾಮ ಕೈವಾರ. ಚಿಂತಾಮಣಿ ಮತ್ತು ಶಿಡ್ಲಘಟ್ಟ ತಾಲ್ಲೂಕಿನ ದಕ್ಷಿಣ ಭಾಗಗಳು, ಕೋಲಾರ ಜಿಲ್ಲೆಯ ವಾಯವ್ಯ ಭಾಗ ಹಾಗೂ ಹೊಸಕೋಟೆ ತಾಲ್ಲೂಕಿನ ಈಶಾನ್ಯಕ್ಕೆ ವಿಲೀನವಾಗಿದ್ದು, ಭೌಗೋಳಿಕವಾಗಿ ಸ್ವಲ್ಪ ಎತ್ತರವಾದ ಪ್ರದೇಶದಲ್ಲಿದೆ. ಅಲ್ಲಲ್ಲಿ ಚದುರಿದಂತೆ ಹಲವು ಬೆಟ್ಟಗುಡ್ಡಗಳಿಂದ ಕೂಡಿದ್ದು, ಅಂಬಾಜಿ ದುರ್ಗ, ಸೀತಿ ಬೆಟ್ಟ, ಕೈಲಾಸಗಿರಿ, ಮುರುಘಮಲೆ, ತಾಪಸಗಿರಿ ಇವು ಮುಖ್ಯವಾದವುಗಳಾಗಿವೆ. ಕೈವಾರದ ಉತ್ತರಕ್ಕೆ ಪಾಪಗ್ನಿ, ಆಗ್ನೇಯಕ್ಕೆ ಪಾಲಾರ್ ಹಾಗೂ ಪಶ್ಚಿಮದಲ್ಲಿ ದಕ್ಷಿಣ ಪಿನಾಕಿನಿ ನದಿಗಳು ಹರಿಯುತ್ತದೆ.[೧] ಕೈವಾರ ಒಂದು ಪ್ರಸಿದ್ಧ ತೀರ್ಥ ಕ್ಷೇತ್ರವಾಗಿದ್ದು ಪೌರಾಣಿಕ ಮಹತ್ವದೊಂದಿಗೆ ಚಾರಿತ್ರಿಕ ಹಿನ್ನೆಲೆಯನ್ನು ಪಡೆದಿದೆ. ಇದನ್ನು ಮಹಾಭಾರತದಲ್ಲಿ ಬರುವ ಏಕಚಕ್ರಪುರವೆಂದು ಕರೆಯಲಾಗುತ್ತದೆ. ಅರಗಿನ ಮನೆಯಿಂದ ತಪ್ಪಿಸಿಕೊಂಡ ಪಾಂಡವರು ಕೆಲವು ಕಾಲ ಇಲ್ಲಿದ್ದರೆಂದು ಈ ಗ್ರಾಮದ ಹತ್ತಿರವಿರುವ ಚಿದಂಬರಗಿರಿ ಅಥವಾ ಚಿಕ್ಕಬೆಟ್ಟದಲ್ಲಿ ಇದ್ದ ಬಕಾಸುರನನ್ನು ಭೀಮ ಕೊಂದು ಅವನ ಶವವನ್ನು ಬೆಟ್ಟದ ಗುಹೆಯೊಂದರಲ್ಲಿ ಮುಚ್ಚಿಟ್ಟನೆಂದು ಸ್ಥಳಪುರಾಣದಿಂದ ತಿಳಿದುಬರುತ್ತದೆ.[೨]

ಕೈವಾರದಲ್ಲಿ ಅಮರನಾರಾಯಣ, ಧರ್ಮರಾಯ, ಭೀಮೇಶ್ವರ, ಅರ್ಜುನೇಶ್ವರ, ನಕುಲೇಶ್ವರ, ಸಹದೇವೇಶ್ವರ ದೇವಾಲಯಗಳಿವೆ. ಇವೆಲ್ಲಾ ಕ್ರಿ.ಶ. ೧೨೮೩ಕ್ಕೆ ಮುಂಚೆಯೇ ಇದ್ದವೆಂದು ಇಲ್ಲಿ ದೊರಕಿರುವ ತಮಿಳುಶಾಸನಗಳಿಂದ ತಿಳಿದುಬರುತ್ತದೆ.[೩] ಆದರೆ ಎಲ್ಲವೂ ಬಹುವಾಗಿ ನವೀಕೃತ ಗೊಂಡಿವೆ. ಕೈವಾರದ ನಾರಾಯಣ ಯೋಗಿಗಳೆಂಬ ಸಂತರು ೧೮ನೇ ಶತಮಾನದಲ್ಲಿ ಈ ಊರಿನಲ್ಲಿ ನೆಲೆಸಿದ್ದರು.

ಈ ಗ್ರಾಮವು ರಾಜಕೀಯವಾಗಿ ನೊಳಂಬರು, ಬಾನರು, ಗಂಗರು, ಹೊಯ್ಸಳರು, ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿದೆ. ಈ ಹಿನ್ನಲೆಯಲ್ಲಿ ನನ್ನ ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ವಿಜಯನಗರ ಕಾಲಕ್ಕೆ ಸೇರಿದ ಒಂದು ಅಪ್ರಕಟಿತ ಶಾಸನ ಲಭ್ಯವಾಗಿದೆ.



ಕೈವಾರದ ದಕ್ಷಿಣ ದಿಕ್ಕಿಗೆ ಸರ್ಕಾರಿ ದವಾಖಾನೆಯಿಂದ ಸ್ವಲ್ಪ ದೂರದಲ್ಲಿ ಬರುವ ಸರ್ವೇ ನಂಬರ್ ೨೦೬ ಬಣಜಿಗರ ವೆಂಕಟಪ್ಪನವರ ಹೊಲದಲ್ಲಿ ಪೂರ್ವಾಭಿಮುಖ ವಾಗಿ ನೆಲದ ಮೇಲೆ ಬಿದ್ದಿದೆ. ಇದು ೫ ಅಡಿ ಉದ್ದ, ೩ ಅಡಿ ಅಗಲ ಮತ್ತು ೪ ಇಂಚು ದಪ್ಪ ಇದೆ, ಗ್ರಾನೈಟ್ ಕಲ್ಲಿನ ಮೇಲೆ ಬರಹವಿದೆ. ಲಿಪಿ ಮತ್ತು ಭಾಷೆ ಕನ್ನಡದಲ್ಲಿದ್ದು ಈ ಶಾಸನ

* ನಂ. ಜಿ-೧, ಅರುಣೋದಯ ನಿಲಯ, ೧ನೇ ಮುಖ್ಯರಸ್ತೆ, ೩ನೆಯ ಅಡ್ಡರಸ್ತೆ, ಗಂಗಮ್ಮನ ಗುಡಿ ರಸ್ತೆ, ಹೊಸಕೋಟೆ ಟೌನ್-೫೬೨೧೧೪.

೧೫ ಸಾಲುಗಳನ್ನು ಒಳಗೊಂಡಿದೆ.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿ ವಾಹನ ಶಕವರ್ಷ ೧೫೧೧ನೆಯ ವಿರೋಧಿ ಸಂವತ್ಸರದಲ್ಲಿ ಹೊರಡಿಸಲಾಗಿದೆ. ಇದರಲ್ಲಿ ಕಂಡು ಬರುವ ವಿಷಯವೆಂದರೆ ಸು. ಕ್ರಿ.ಶ. ೧೫೮೯ರಲ್ಲಿ ಅರವೀಡು ವಂಶದ ಅರಸನಾದ ಎರಡನೇ ವೆಂಕಟನ ಕಾಲದಲ್ಲಿ ಈ ಶಾಸನ ಹೊರಡಿಸಲಾಗಿದೆ. ವೀರಪ್ರತಾಪ ವೆಂಕಟಪತಿ ಮಹಾರಾಯರು ಸುಗಟೂರು ಶ್ರೀಮಾದವಪ್ಪಯ್ಯ ಗೌಡರ ಮಗ ಕೈವಾರದ ಹರಿಗಪ್ಪಯ್ಯನ ಮಗ ಚನ್ನಯ್ಯನಿಗೆ ಬಿಟ್ಟ ಹೊಲ.... ಇದನ್ನು 'ನೆತ್ತರ ಕೊಡುಗೆ' ಯಾಗಿ ನೀಡಲಾಗಿದೆ.

ಶಾಸನಗಳಲ್ಲಿ ಉಲ್ಲೇಖಿಸಿರುವ 'ನೆತ್ತರ ಕೊಡುಗೆ' ಎಂಬ ಪದ ಬಳಕೆಯಾಗಿರುವುದು ಇದರ ವಿಶೇಷತೆಯನ್ನು ಸೂಚಿಸುತ್ತದೆ. ವಿಜಯನಗರ ಅರಸರುಗಳ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭೂಮಾನ್ಯಗಳನ್ನು ಹೊರಡಿಸುವ ಬಗೆ ಶಾಸನಗಳಿಂದ ತಿಳಿದುಬರುತ್ತದೆ, ಹಾಗೂ ಇದಕ್ಕೂ ಪೂರ್ವಕಾಲದಿಂದಲೂ ಸಹ 'ನೆತ್ತರ ಕೊಡುಗೆ'ಯ ಭೂದಾನ ಶಾಸನಗಳನ್ನು ನಾವು ಕಾಣಬಹುದು. ವೀರ ಪರಂಪರೆಯ ದ್ಯೋತಕವಾಗಿ ಶೌರ್ಯ ಬಲಿದಾನಗಳ ಸಂಕೇತವಾಗಿ ನೀಡಲಾಗುತ್ತದೆ. ನೆತ್ತರ ಕೊಡುಗೆಯನ್ನು ವಿಶೇಷ ಸಂದರ್ಭದಲ್ಲಿ ಅಂದರೆ ಯುದ್ದಲ್ಲಿ ಗೆದ್ದು ಬಂದ ವೀರರಿಗೆ ಅಥವಾ ವೀರಮರಣಕ್ಕಾಗಿ ಕೊಟ್ಟ (ದತ್ತಿ) ಭೂಮಿಯನ್ನು ಮಾನ್ಯವಾಗಿ ಅಥವಾ ಬಳುವಳಿಯಾಗಿ ನೀಡುತ್ತಿದ್ದರು.[೪]

**ಶಾಸನ ಪಾಠ**

೧ ಸ್ವಸ್ತಿ ಶ್ರೀ ವಿಜಯಾಬ್ಯುದಯ ಸಲಿವಾ [ಹ]
೨ ನ ಸಕ ವರುಸಂಗಗಳೂ ೧೫೧೧ ಯ ವಿರೋ
೩ ಧಿ ಸಂವತ್ಸರದ ಮ ಬ ೨ ಬು ಲು ರಾ .
೪ ದಿ ರಾಜ ವಿರಪ್ರತಪ ವೆಂಕಟಪತಿ ಮಹರಯ
೫ ರಾಜ್ಯ ಗೆಉತ್ತ ಇರಲು ಸುಗುಟುರ ತಂ(ಯಿಂ)
೬ ಮಡಿ ತಮಪಯ ಗೌಡರ ಪ್ರತಿಪಲಗೆ
೭ ಯ ಕೈವರದ ತಿಂಮ(ರ)ಸನ ಧರ್ಮ ಪರಿಪತ್ಯದಲು
೮ ಕೈವರದ ಹರಿಗಪಪಯನ ಮಗನು ಚೆಂ
೯ ನಯಗೆ ಬಿಟ ನೆತ್ತರ ಗೊಡಗೆ ಬಿಟ್ಟ ಹೊಲಕ್ಕೆ
೧೦ ವರದ ಹಲಸು ಮರದವರು ಭಾಂನು ಮಾನ್ಯ
೧೧ ವಾಗಿಉಳಲು ಇದವನಿವ ಮನ್ಯಕೆ ಆ
೧೨ ರು ತಪಿದವರು ತಂಮ ಹೆಂಡಿರ ಯಾ
೧೩ ಉರ ತೋಟಿ ತಿಂಮನು ಕೇದನು
೧೪ ತಂಮ ಮಕಳು ತಂಮ ಎಡೆಯ
೧೫ ಲಿ ಹೊರಳದಿ ಹೊಗುವರು

[ಕೃತಜ್ಞತೆಗಳು: ಶಾಸನ ಪಾಠ ಓದಿಕೊಟ್ಟ ಪ್ರೊ॥ ಕಲವೀರ ಮನ್ವಾಚಾರ್ಯ ಅವರಿಗೆ ವಂದನೆಗಳು.]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಡಾ. ಪಿ.ವಿ. ಕೃಷ್ಣಮೂರ್ತಿ, 'ಕೈವಾರನಾಡು-ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ' **ಇತಿಹಾಸ ದರ್ಶನ**, ಸಂಪುಟ ೧೧-೯೯೬, ಪುಟ ೨೧೦, **ಕೋಲಾರ ಜಿಲ್ಲೆ ಗ್ಯಾಸೆಟಿಯರ್**, ಸಂ. ಎಚ್. ಚಿತ್ತರಂಜನ್, ೨೦೦೪.

೨. ಡಾ. ಪಿ.ವಿ. ಕೃಷ್ಣಮೂರ್ತಿ, 'ಪುರಾಣ ಪ್ರಸಿದ್ಧ ಏಕಚಕ್ರಪುರವಾದ ಕೈವಾರ ಕ್ಷೇತ್ರದ ಶಾಸನಗಳು-ಒಂದು ಅವಲೋಕನ' **ಶಾಸನ ಮಂಥನ**, ಪುಟ ೧೨೧-೧೩೨.

೩. ಅದೇ.

೪. ಡಾ. ಪಿ.ವಿ. ಕೃಷ್ಣಮೂರ್ತಿ, **ಸುಗುಟೂರು ವೀರಶೈವ ಅರಸು ಮನೆತನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೮.

೨೮

# ತೀರ್ಥಹಳ್ಳಿ ರಾಮಮಂಟಪದ ಸುತ್ತಮುತ್ತಲಿನ ಅಪ್ರಕಟಿತ ಶಾಸನಗಳು

**ಜಿ.ಕೆ. ದೇವರಾಜಸ್ವಾಮಿ***

**ಶಿವಮೊಗ್ಗಾ** ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ತುಂಗಾನದಿಯ ಮಧ್ಯದಲ್ಲಿ ಪರಶುರಾಮ ತೀರ್ಥ ಹಾಗೂ ಕಲ್ಲಿನ ಮಂಟಪವಿದೆ. ಪರಶುರಾಮ ತನ್ನ ತಾಯಿಯನ್ನು ಪರಶುವಿನಿಂದ ಕಡಿದ ನಂತರ ಪಾಪ ಪರಿಹಾರಾರ್ಥವಾಗಿ ತೀರ್ಥಕ್ಷೇತ್ರ ಪರ್ಯಟನೆ ಮಾಡುತ್ತಾನೆ. ಆ ಸಂದರ್ಭದಲ್ಲಿ ಈ ತುಂಗಾನದಿಗೆ ಬಂದಾಗ ತಾಯಿಯನ್ನು ಕಡಿದ ಕೊಡಲಿಯನ್ನು ಇಲ್ಲೂ ತೊಳೆಯುತ್ತಾನಂತೆ. ಸ್ವಲ್ಪವೇ ರಕ್ತ ಸಿಕ್ತವಾದ ಕೊಡಲಿಯು ಸ್ವಚ್ಛವಾಗುತ್ತದಂತೆ. ಈ ಕಥೆಯ ಹಿನ್ನಲೆಯಲ್ಲಿ ಪುಣ್ಯ ತೀರ್ಥವೆಂದಾಗಿದೆ. ಪುರಾಣ, ಐತಿಹ್ಯವು ಜನಮನದಲ್ಲಿ ಹಾಸುಹೊಕ್ಕಾಗಿದೆ. ಈ ಹಿನ್ನಲೆಯಲ್ಲಿ ಪ್ರತಿವರ್ಷವೂ ಡಿಸೆಂಬರ್‌ನಲ್ಲಿ ಜಾತ್ರೆ, ತೀರ್ಥಸ್ನಾನ ಇಲ್ಲಿ ನಡೆಯುತ್ತಾ ಬಂದಿದೆ. ಇದರಿಂದ ಎಲ್ಲಾ ಪಾಪವೂ ಪರಿಹಾರ ವಾಗುತ್ತದೆಂಬ ನಂಬಿಕೆ ಜನರಲ್ಲಿದೆ.

ತುಂಗಾನದಿಯಲ್ಲಿ ನೈಸರ್ಗಿಕವಾಗಿ ನಿರ್ಮಿತವಾದ ಕುಳಿಯಲ್ಲಿ ನೀರುಹರಿಯುತ್ತಿದ್ದು ತೀರ್ಥವೆನಿಸಿಕೊಂಡಿದೆ. ಇದರ ಮೇಲ್ಭಾಗದ ಬಂಡೆಯ ಮೇಲೆ ಕಲ್ಲಿನ ಮಂಟಪವಿದೆ.



* # ೫೩, 'ತ್ರಯೀ', ಮೈಸೂರು ಲ್ಯಾಂಪ್ಸ್ ಲೇಔಟ್, ಚನ್ನನಾಯಕನಪಾಳ್ಯ, ೩ನೇ ಹಂತ, ನಾಗಸಂದ್ರ ಅಂಚೆ, ಬೆಂಗಳೂರು-೫೬೦೦೭೩.

ಪರಶುರಾಮ ತೀರ್ಥದಬಂಡೆಯಲ್ಲಿ ಆಂಜನೇಯನ ಉಬ್ಬು ಶಿಲ್ಪ, ಭಕ್ತರ ರೇಖಾಚಿತ್ರಗಳೂ ಸೇರಿದಂತೆ ನೂರಾರು ಶಾಸನಗಳಿವೆ. ಈ ಶಾಸನಗಳಲ್ಲಿ ಭಕ್ತಾದಿಗಳು, ರಾಜರು ಮುಖ್ಯರಾದವರು ತೀರ್ಥದಲ್ಲಿ ಸ್ನಾಮಾಡಿ ತಮ್ಮಹೆಸರುಗಳನ್ನು ದಾಖಲಿಸಿದ್ದಾರೆ. ಮೇಲಿನ ಮಂಟಪದ ಸುತ್ತ ಮುತ್ತಲೂ ಕಿರುಶಾಸನಗಳನ್ನು (Label Inscriptions) ಕೆತ್ತಲಾಗಿದೆ. ಹಾಗೆಯೇ ನದಿಯಲ್ಲಿನ ಹತ್ತಾರು ಬಂಡೆಗಳಲ್ಲಿಯೂ ಶಾಸನಗಳು ಕಂಡು ಬರುತ್ತವೆ. ಈ ತೀರ್ಥಕ್ಷೇತ್ರದಲ್ಲಿ ಸ್ನಾನದೊಂದಿಗೆ ದಾನ ಧರ್ಮಾದಿಗಳನ್ನು ಮಾಡುವುದು ಪುಣ್ಯವೆಂದು ಪ್ರತೀತಿ. ಕೆಳದಿಶಿವಪ್ಪನಾಯಕ ಮತ್ತು ಚೆನ್ನಮ್ಮಾಜಿಯವರೂ ಈ ಸ್ಥಳದಲ್ಲಿ ಗೋದಾನ ಇತ್ಯಾದಿ ಗಳನ್ನು ಮಾಡಿದ ಬಗ್ಗೆ ತಾಲ್ಲೂಕಿನ ಇತರೆ ಶಾಸನವು ದಾಖಲಿಸಿದೆ.

ಈ ಎಲ್ಲಾ ಶಾಸನಗಳೂ ವಿಜಯನಗರೋತ್ತರ ಕಾಲದ್ದಾಗಿರುತ್ತವೆ. ಬಹುತೇಕ ಶಾಸನಗಳು ಕೆಳದಿ ಅರಸರ ಕಾಲದ್ದಾಗಿವೆ. ಬಹಳ ಹಿಂದಿನಿಂದಲೂ ತೀರ್ಥಕ್ಷೇತ್ರ ವಾಗಿದ್ದರೂ ಕೂಡ ಕೆಳದಿ ಅರಸರ ಹಾಗೂ ನಂತರ ಕಾಲದಲ್ಲಿ ತೀರ್ಥವು ವಿಶೇಷ ಮಹತ್ವ ಪಡೆದಿದೆ ಎನ್ನಬಹುದು.

ಶಾಸನಗಳಲ್ಲಿ ರಾಜವಂಶಸ್ಥರು, ಅಧಿಕಾರಿಗಳು. ಶ್ರೀಸಾಮಾನ್ಯರುಗಳ ಹೆಸರು ಕೆತ್ತಲ್ಪಟ್ಟಿದೆ. ಈ ಮೂಲಕ ಊರುಗಳ ಹೆಸರು, ಉದ್ಯೋಗ ಇತ್ಯಾದಿಗಳನ್ನು ಇವುಗಳಿಂದ ತಿಳಿಯಬಹುದಾಗಿದೆ. ಇವುಗಳ ಅಧ್ಯಯನದ ಮೂಲಕ ಇತಿಹಾಸಕ್ಕೆ ಹೊಸ ವಿಷಯಗಳು ಸೇರ್ಪಡೆಯಾಗಬೇಕಿದೆ.

ಈ ಶಾಸನಗಳ ಭಾಷೆ ಸ್ಖಾಲಿತ್ಯಗಳಿಂದ ಕೂಡಿದ್ದು, ಕೆಲವೆಡೆ ಅಕ್ಷರಗಳನ್ನು ಖಚಿತವಾಗಿ ಓದಲು ಸಾಧ್ಯವಾಗುತ್ತಿಲ್ಲ. ಸಾಲುಗಳ ಸಂಖ್ಯೆಯೂ ಕೆತ್ತಿರುವ ರೀತಿಯಿಂದ ಹಿಡಿತಕ್ಕೆ ಸಿಕ್ಕುವುದಿಲ್ಲ. ಭಾಷೆ, ಬಂಧ ಅರ್ಥದ ದೃಷ್ಟಿಯಿಂದ ಸ್ಥೂಲ ವಾಗಿ ವಿಂಗಡಿಸಲಾಗಿದೆ.

**ಶಾಸನ ಪಾಠ**

೧ ಜಾನಿಕಂಮನ ಬಿಂನಹಾ

೨ ಲಕ್ಷ್ಮೀಪತಿ ಅಯನ ಮಕ್ಕಳು ನರಸಯನ ಬಿಂನಹಾ॥
ವಾಬರಸಯನ ಬಿಂನಹ ಮಹಾಲಕ್ಷ್ಮೀ ಲಕ್ಷ್ಮಿಅಕಂಮ
। ಪುಟಮ ಸೂ (ಶ್ರೀ) ಲಕ್ಷ್ಮಿಯಾ ಬಿಂನಹ

೩ ವೊಂ ನಮೋನಾರಾಯಣಾಯ
ವೊಂ ನಮೋವೆಂಕಟೇಶಾಯ
ದಾನಿಯನ ಮಗ....

೪ ಶ್ರೀರಾಮ ಕೃಷ್ಣಾಯ

೫ ನಮಃ ಘರುವೇನಮಃ
ಚಿಕ್ಕತಿಂಮ್ಮೈಯಣ್ಣ ಸ್ತ್ರಮ
ಭ್ರಂಹಾ ಪುಟ್ಟಂಣ
ನಮಗ ನಾರಸಿಂಹ

೬ ಬಿಳಿಗಿ ಸುಬಯನ ಬಿಂನಹ । ಬಿಳಿಗಿ ಲಿಂಗಣನ
ಬಿಂನಹಾ । ಬಿಳಿಗಿ ದೇಮೌವಾ ಮಗ
ಗುತ್ತಿ ಲಕ್ಷಮ್ನ ಪ್ನಮಗ ಅಚುತನಯ
ದುಡ್ಯಿ ಕೃಷ್ಣದೇವನ ಬಿಂನಹಾ

೭ ಪುರಂದರ ವಿಠಲ (ನಾಗರೀಲಿಪಿ) ೦ ಸಿದಾರ್ತಿ ಸಂ।
ಚೈತ್ರ.ಬ.೫

೮ ನಂಜುಂಡಯನಾ ಇಮಪುಲ
ಕಾಮಪ್ಪಯ್ಯನವರ ಪತ್ನಿ ತಿಂಮಮನವರ ಮಂದಾನ
ಬಿಂನಹಾ ನಂಮಃ॥

೯ ಬಯಲೂರ ಕೂಸಂಣನ ಬಿಂನಹ

೧೦ ಶ್ರೀ ಕೆಳದಿ ಚಂನಂಯಾಜಿಯವರ ಮಗ ನೆಗತ್ತಿ
ಎಡ್ಡಿ ವೆಂಕಂಣನ ಬಿಂನಹಾ

೧೧ ಕೂಳಾಲದ ವೆಂಕಟಯನ
ಕಂದಾಚಾರ । ಸಏಟ್ಟಿ ಫಣಿಯಪ್ಪನ
ದನಿಲಕೈನ ಮಗನ ನಮಸ್ಕಾರ

೧೨ ವಾದಿರಾಜ್ಯೆನ ಬಿಂನಹಾ

೧೩ ಶ್ರೀಮುಖ ಸಂ।
ಮಾರ್ಗಶಿರ
ಬಹುಳ ಚೌತಿಗೆ
ಕಳನೈಮಕ್ಕಳು

೧೪ ಶಾಮಸಂಯಾನ ಸಂಕರನ ಮಾಮಗ

೧೫ ಕಾಯಿಶಾ ಸಬುನಿಸ ಕೋಳಿವಾಡದ ಬೊಮರಸ
ಮಯ್ಯನ ಬಿಂನಹಾ ಶ್ರೀ ಭವಾನಿ ಅಂಮನ
ಬಿಂನಹ ಲಕ್ಷ್ಮಿ

೧೬ ಬಸರೂರ ನೊಳಪ್ಪನ ವಿರಂಮನ ನಮಸ್ಕಾರ

೧೭ ಸೂರಯುನ ಮಗ
ಸೂದುಗೆಪನ ಬಿಂನಹ

೧೮ ಸೂಳೂರ ಶ್ರಿಂ ಪನಾಮಗ
ಅಕರಯ
ನಿಖಯನ
ನ ಬಿಂನಹ

೧೯ ಅಭಿವಾಶಾನರತಿಗತ (ನಾಗರಿಲಿಪಿ)
ಯಿದ ಬರೆಸಿದಾತ ನಾಗಾಭಟರ ಮಗ
ಗಣಪಂಣ

೨೦ ಪ್ರಪ್ಪದೇವಹ
ಯನ ಮಗ ಶಂಕರನಾರಾಯಣ ತುಂಗಭದ್ರೆಗೆ
ಮಾಡುವ ನಮಸ್ಕಾರ

೨೧ ಪುಟ್ಟಿರಸಯ್ಯನ ಮಗ ಯ್ಯೋಗಪ್ಪಯನ ಬಿಂನಹಾ
ನಮಸ್ಕಾರ
೨೨ ಶರಯ ಸ್ತ್ರಿಣಲ್ಲಂ ಮಗ ಬಿಂನಹಾ
೨೩ ಕೆಳಸಂಣ ಕೆಂಚಮನವರು ಭದ್ರಪ್ಪ ಸಿರ್ಸಿಣಿಯ
ರಾಯಸ್ತ ವೆಂಕಯ್ಯನ ಬಿಂನಮ
೨೪ ಲಕ್ಷ್ಮೀಗೋಪಾಲದಾಸೆ (ನಾಗರೀಲಿಪಿ)
೨೫ ಬಯಲೂರ ಸೀನಪ್ಪನ ಬಿಂನಹಾ
೨೬ ಗೋದಾವರಿ ನಮ(ನಾಗರೀಲಿಪಿ)
ಯಿದ ಬರೆಸಿದಾತ ಬಕಾಯಂಗೆ ಸೆಗ
ಟಿ ಸಿಂಗಾಶಯ
೨೭ ಸೂರ್ಯೆಟಿ ಯಳರಾಯಸ್ತ ಶಂಕರನಾರಾಯಣ್ಣೈನ
ಮಗ ಚೆಂನನ ಬಿಂನ
೨೮ ಸದಾಧ್ಯಾನಂ (ನಾಗರೀಲಿಪಿ)
ಬೊನಗಿರಿಯ ಸನರುಮಲ್ಲನ ಮಗ ನಾಗಪ್ಪನ ಬಿಂನಹ
೨೯ ನರಸಪ್ಪಯ್ಯನ
ಬೆಳರೆ ವೆಂಕರಸ್ಯೆಯನ ಮಗ
ಬಿಯದರಟದ ಸೂರಪ್ಪೈಚೆನಾ ಗುಣಿ
ಶುಭನಾಮ ಯೋಡಣ ತನಯ (ನಾಗರೀಲಿಪಿ)
ಶಾಯಣದ ಮ
ದಗದ ದೋಮು
ವೆಂಕಮನ ನಮಸ್ಕಾರ
೩೦ ಪೊಲಿಟ್ಟ ರಾಮಯ್ಯನ
ವೊಂದು ಶಂಕರ ನಾವಯದಳ
ನಮಸ್ಕಾರ.
೩೧ ಶ್ರೀ ಚಉತರ
ಸೀಮೇ ಪುತ್ತಿಗೆ ಹೊಳೆನೀ
ಗಲುರಿ ಮಾದವ ಬಂಟನ
ಮಗ ವೆಂಕಂಣ
ನಮಗ ಮಾನಪ...
ಸಬಾನ ಮಾಯೋಗಣನ ನಮಸ್ತೇ ॥
೩೨ ಶಿವಪ್ಪ, ರಾಚಯ್ಯ,
೩೩ ನಾಲ್ವಪ್ಪ ನಾಗಪ್ಪ
೩೪ ಪಟಿ ತಿಮ್ಮಪನ ಮಗ ಶ್ರೀನಿವಾಸ
೩೫ ಲಕ್ಷ್ಮಿಪತಿ ಮಂಗರಸನ ಬಿಂನಹ
೩೬ ಕವುರಿ ಕಲ್ಲಿರಾಮಪ್ಪ
೩೭ ಬೊಕ್ಕಸದ ಸಿದ್ದಪ್ಪ
೩೮ ಗೆರೆಸ ತಿಂಯ್ಯ
೩೯ ರಾಮಪ್ಪಯ್ಯ ನಂಜುಂಡಯ್ಯ
೪೦ ಕಳಸಪ್ಪ, ದಿವಾಕರ.

ಪರಶುರಾಮ ಮಂಟಪಕ್ಕೆ ಹೊಂದಿಕೊಂಡಂತೆ ನದಿ ಪಾತ್ರವಿದೆ. ನದಿಯ ಮತ್ತೊಂದು ದಡದಲ್ಲಿ ಜೋಗಿಗುಡ್ಡವಿದೆ. ಇಲ್ಲಿಯ ಬಂಡೆಗಳಲ್ಲಿ ಜೈನ ತೀರ್ಥಂಕರರ ರೇಖಾ ಚಿತ್ರಗಳು ಹಾಗೂ ಶಾಸನಗಳಿವೆ. ಅಲ್ಲದೆ ಪ್ರಕೃತಿಯ ನೈಸರ್ಗಿಕವಾದ ಬಂಡೆಯ ದೊಡ್ಡಕುಳಿ(ಬಾವಿ)ಗಳಲ್ಲಿಯೂ ತೀರ್ಥಂಕರರ ಚಿತ್ರ ಹಾಗೂ ಶಾಸನಗಳಿವೆ. ಈ ರೀತಿಯ ಚಿತ್ರ ಹಾಗೂ ಶಾಸನಗಳು ನೈಸರ್ಗಿಕ ಕುಳಿಗಳಲ್ಲಿ ಮತ್ತೆಲ್ಲಿಯೂ ಕಂಡು ಬರುತ್ತಿಲ್ಲವೆನ್ನಬಹುದು.

**ಶಾಸನ ಪಾಠ**

೧ ನಿಕರಸನ ಧರ್ಮ (ಪಕ್ಕದಲ್ಲಿ ಪಾರ್ಶ್ವನಾಥ ತೀರ್ಥಕರನ ರೇಖಾ ಚಿತ್ರವಿದೆ)

**ಬಂಡೆಯ ಮೇಲೆರುವ ಶಾಸನ**

೧ ಪಟ್ಟಸಹಣಿ ಕಲೆಯನ
೨ ಮಡದಿ ಧಾಗಿ[ಪಾರ್ಶ್ವನಾಥ]ಮಾಡಿಸಿದಳು

ಲಿಪಿ ದೃಷ್ಟಿಯಿಂದ ಈ ಶಾಸನವು ಕ್ರಿ.ಶ.ಸು. ಹನ್ನೊಂದ ನೆಯ ಶತಮಾನದ್ದೆನ್ನಬಹುದು ಕಲ್ಲಿನ ಕುಳಿ/ಪೊಟರೆಗಳಲ್ಲಿ ಪಾರ್ಶ್ವನಾಥ ತೀರ್ಥಂಕರನ ರೇಖಾ ಚಿತ್ರ ಹಾಗೂ ಶಾಸನಗಳನ್ನು ಕೆತ್ತಲಾಗಿದ್ದು ಇದು ಸಾಂತರಸರ ಕಾಲದ್ದಾಗಿದೆ.

**ಶಾಸನ ಪಾಠ**

೧ ಶ್ರೀಮತು ಚಲ್ಲದೇವಿ ಮಾಡಿಸಿದ ದೇವರು
೨ ಮಗಳು ಲಕುಮ್ಮಾದೇವಿ ಮಾಡಿಸಿದ ದೇವರು
೩ ವಿಜೆಪಟ್ಟಾಚಾರಿ ಮಡಿದ ದೇವರು

ಮೂರು ಸಾಲುಗಳುಳ್ಳ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಲಿಪಿದೃಷ್ಟಿಯಿಂದ ಕ್ರಿ.ಶ.ಸು.೧೦-೧೧ನೇ ಶತಮಾನದ್ದೆನ್ನ ಬಹುದು. ಚಲ್ಲದೇವಿ (ಚಟ್ಟಲದೇವಿ) ಸಾಂತರರ ರಾಣಿಯಾಗಿದ್ದಳು ಹಾಗೂ ಅವಳ ಮಗಳನ್ನೂ ಉಲ್ಲೇಖಿಸಿದೆ. ದೇವರನ್ನು ಕಂಡರಿಸಿದವನು ವಿಜೆಪಟ್ಟಾಚಾರಿ ಎಂಬುದು ತಿಳಿಯುತ್ತದೆ. ಜೋಗಿ ಗುಡ್ಡವು ಒಂದು ಜೈನ ತೀರ್ಥಕ್ಷೇತ್ರ ವಾಗಿತ್ತು ಎಂಬುದನ್ನು ನನ್ನ ಹಿಂದಿನ ಲೇಖನದಲ್ಲಿ ವಿಸ್ತಾರ ವಾಗಿ ಚರ್ಚಿಸಿದ್ದೇನೆ. ಬರಹಬಾಗಿನ ಹಂಪನಾ ಷಷ್ಟ್ಯಬ್ದ ಗೌರವಗ್ರಂಥ ಸಂ. ಎಚ್.ವಿ. ನಾಗೇಶ್, ಪ್ರ. ಹಂಪನಾ ಅಭಿನಂದನ ಸಮಿತಿ, ೧೯೯೬, ಪು೧ ೩೩-೩೬.

ತೀರ್ಥಹಳ್ಳಿ ಪರಶುರಾಮ ತೀರ್ಥ, ಕಲ್ಲುಸಾರದ ಸುತ್ತ ಮುತ್ತ ಇನ್ನೂ ನೂರಾರು ಕಿರುಶಾಸನಗಳು ಕಂಡುಬರುತ್ತವೆ. ಇವುಗಳ ಪೂರ್ಣ ದಾಖಲಾತಿಯು ಆಗಬೇಕಿದೆ. ಇದರಿಂದ ಇತಿಹಾಸಕ್ಕೆ ಹೊಸ ಆಯಾಮವು ದೊರೆಯುತ್ತದೆ.

[ಕ್ಷೇತ್ರ ಕಾರ್ಯದಲ್ಲಿ ನನ್ನೊಂದಿಗೆ ಸಹಕರಿಸಿದ ಸ್ನೇಹಿತ ಉಪಾಧ್ಯಾಯರಾದ ಎಲ್.ಎಸ್. ರಾಘವೇಂದ್ರ ಹಾಗೂ ಜಿ.ಎನ್. ಸಾತ್ವಿಕ್ ಮತ್ತು ಸ್ಕಂದ ಅವರಿಗೆ ನನ್ನ ಕೃತಜ್ಞತೆಗಳು.]





# ಗದಗ ಜಿಲ್ಲೆ ಮುಂಡರಗಿ ತಾಲ್ಲೂಕಿನ ಹಮ್ಮಿಗಿಯ ಮತ್ತು ಹಾವೇರಿ ಜಿಲ್ಲೆ ಶಿಗ್ಗಾಂವ ತಾಲ್ಲೂಕಿನ ಅರಟಾಳದ ಅಪ್ರಕಟಿತ ಶಾಸನಗಳು

**ಹನುಮಾಕ್ಷಿ ಗೋಗಿ***

**ಮುಂ**ಡರಗಿ ತಾಲೂಕಿನ ತುಂಗಭದ್ರಾ ನದೀ ತೀರದಲ್ಲಿರುವ ಚಿಕ್ಕಹಳ್ಳಿ ಹಮ್ಮಿಗಿ. ಊರಿನಲ್ಲಿ ಬಸದಿಯೊಂದಿದ್ದು, ಅದರಲ್ಲಿ ಸಂಗಮರವರಿ ಕಲ್ಲಿನಲ್ಲಿ ಕೆತ್ತಿದ ಚಂದ್ರಪ್ರಭ ತೀರ್ಥಂಕರ ವಿಗ್ರಹವಿದೆ. ಅದರೊಂದಿಗೆ ಸುಮಾರು ಎರಡು ಅಡಿ ಎತ್ತರದ ಚೌವ್ವಿಸ ತೀರ್ಥಂಕರರ ಲೋಹದ ವಿಗ್ರಹವಿದ್ದು, ಅದರ ಪಾದಪೀಠದಲ್ಲಿ ಪ್ರಸ್ತುತ ಶಾಸನವಿದೆ.

ಶಾಸನವು ಕಾಳುಮೆಣಸಿನ ರಾಣಿಯೆಂದೇ ಪ್ರಸಿದ್ಧಳಾದ ಮಹಾಮಂಡಲೇಶ್ವರ ಚಂನಭೈರಾದೇವಿಯ ಮಹಾಪ್ರಧಾನನಾದ ಹೈವಣನಾಯ್ಕರ ಪತ್ನಿಯೂ ಪಾರಿಸದೇವನಾಯ್ಕರ ಮಗಳೂ ಮಳ್ಳಿಯಲ್ಲಿ ಹುಟ್ಟಿಕೊಂಡ ಆನೆವಳಿಯ ಪದುಮರಸಿ ನಾಯ್ಕತಿಯು ಆಣತಿನೋ[ಂ]ಪಿಯನ್ನು ಕೈಕೊಂಡು, ವ್ರತದ ಉದ್ಯಾಪನೆಯ ಸಮಯದಲ್ಲಿ ತಮಗೆ ಪುಣ್ಯಪ್ರಾಪ್ತಿ ಆಗಬೇಕೆಂದು, ಶಾಸನವನ್ನು ಕೆತ್ತಿಸಿ ಈ ಚೌವ್ವಿಸ ತೀರ್ಥಂಕರ ವಿಗ್ರಹವನ್ನು ಮಾಡಿಸಿದಳೆಂದು ತಿಳಿಸುತ್ತದೆ.

ಇಲ್ಲಿ ಬರುವ ಆಣತಿ ನೋಂಪಿ ಎಂದರೆ ಜೈನ ಶ್ರಾವಕರು ತಮ್ಮ ಗುರುಗಳಾದ ಜೈನಾಚಾರ್ಯರ ಆದೇಶದಂತೆ ಆಚರಿಸುವ ಒಂದು ಪ್ರಕಾರದ ವ್ರತ. ಇಲ್ಲಿ ಯಾವ ರೀತಿಯ ಆಣತಿ ಇದಾಗಿತ್ತು ಎಂಬುದರ ವಿವರವಿಲ್ಲ. ಇದನ್ನು ಜಾತಿ/ಆಣಂತಿ ನೋಂಪಿ ಎಂದೂ ಕರೆಯಲಾಗುತ್ತದೆ. ಭಗವತೀದಾಸನೆಂಬ (೧೭ನೆಯ ಶತಮಾನ) ಹಿಂದಿಯ ಕವಿ 'ಆದತ್ತಿ ವ್ರತರಾಸ' ಎಂಬ ಕೃತಿಯನ್ನು ರಚಿಸಿದ್ದಾನೆ. ಆಣತಿ ವ್ರತವು ಅಭಕ್ಷಣಕ್ಕೆ ಸಂವಾದಿಯಾದುದು. (ಮಹಾಪುರಾಣ, ಪರ್ವ ೭೧, ಶ್ಲೋಕ ೯೪೫) 'ದೇಮಪಾಯಗಳು ಆಣಂತಿಯ ನೋಂಪಿ ನಿಮಿತ್ತವಾಗಿ ಮಾಡಿಸಿದ ಪ್ರತಿಷ್ಠೆ' ಎಂಬ ಉಲ್ಲೇಖ ಶಾಸನದಲ್ಲಿ ಬಂದಿದೆ. (ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್, ೧೯೪೧, ಪು. ೫೧, ಕಾಲ ಕ್ರಿ.ಶ. ೧೨೦೦, ನೋಂಪಿಯ ಕಥೆಗಳು, ಡಾ. ಹಂಪ ನಾಗರಾಜಯ್ಯ, ಹಂಪಿ ವಿವಿ, ೨೦೦೧.)

ಸಾಮಾನ್ಯವಾಗಿ ನೋಂಪಿ ಪಾಲನೆ ಮಂಡಲಗಳಂತೆ ಬೆಸ ಸಂಖ್ಯೆಯಲ್ಲಿ ಇರುತ್ತದೆ. ಆದರೆ ಆಣತಿ ನೋಂಪಿಯು ಒಂದು ದಿನ ಮಾತ್ರ ನಡೆಸುವ ನೋಂಪಿಯೋ ಅಥವಾ ಚಾತುರ್ಮಾಸದುದ್ದಕ್ಕೂ ನಡೆಸುವದೋ ತಿಳಿದುಬರುವುದಿಲ್ಲ. ಹಲವಾರು ರೀತಿಯ ನೋಂಪಿಗಳ ಪಾಲನೆಯ ಕುರಿತು ಡಾ. ಹಂಪನಾ ಅವರು ನೋಂಪಿಯ ಕಥೆಗಳು ಕೃತಿಯಲ್ಲಿ ಸುದೀರ್ಘವಾಗಿ ವಿವರಿಸಿದ್ದಾರೆ. 'ನೋಂಪಿಯನ್ನು ಪ್ರಾರಂಭಿಸುವುದಕ್ಕೆ ಹೇಗೆ ಒಂದು ಶಾಸ್ತ್ರೋಕ್ತ ವಿಧಿ ಇದೆಯೋ ಹಾಗೇ ನೋಂಪಿಯನ್ನು ಪೂರ್ಣಗೊಳಿಸುವುದಕ್ಕೂ ಒಂದು ಕ್ರಮವಿದೆ. ಇದನ್ನು ಉದ್ಯಾಪನ ಎನ್ನುವರು. ವ್ರತ ಸಮಾಪ್ತಿ ಎಂದು ಇದರ ರೂಢಿಯ ಅರ್ಥವಾದರೂ, ವ್ರತವನ್ನು ಪೂರ್ಣಗೊಳಿಸುವ ಕ್ರಮವೇ ಉದ್ಯಾಪನೆ' ಎನ್ನುತ್ತಾರೆ ಅವರು*. ಆ ಸಂದರ್ಭದಲ್ಲಿ ಬಹುತೇಕ ಶ್ರೀಮಂತ ಶ್ರಾವಕರು ತೀರ್ಥಂಕರ ಪ್ರತಿಮೆಗಳನ್ನು ಮಾಡಿಸಿ ಬಸದಿಗಳಿಗೆ ನೀಡುತ್ತಿದ್ದರು. ಇಂತಹ ಹಲವಾರು ವ್ರತಗಳು, ಅವುಗಳ ಉದ್ಯಾಪನೆ ಹಾಗೂ ಆ ಸಂದರ್ಭದಲ್ಲಿ ನೋಂಪಿಯ ಸ್ಮರಣಾರ್ಥವಾಗಿ ಬಸದಿಗೆ ನೀಡಿದ ವಿಗ್ರಹಗಳ ಕುರಿತು ಶಾಸನಗಳಲ್ಲಿ ಸಾಕಷ್ಟು ವಿವರಗಳಿವೆ. ಇಂತಹ ೮೪ ವ್ರತಗಳು ಮತ್ತು ಅವುಗಳ ಬಗ್ಗೆ ಇರುವ ಕಥೆಗಳನ್ನು ನಾಡೋಜ ಡಾ. ಹಂಪನಾ ಅವರು ತಮ್ಮ ಕೃತಿ ನೋಂಪಿಯ ಕಥೆಗಳಲ್ಲಿ ನೀಡಿದ್ದಾರೆ.

ಹಾಡುವಳ್ಳಿಯ ಮಹಾಮಂಡಲೇಶ್ವರ ಎನಿಸಿಕೊಂಡ, ಸ್ವತಃ ಜೈನಧರ್ಮೀಯಳೂ ಆದ ಚನ್ನಭೈರಾದೇವಿಯ ಕಾಲದಲ್ಲಿ ರಚಿತಗೊಂಡ ಈ ಶಾಸನ ಸಹಿತ ಚೌವ್ವಿಸ (೨೪) ತೀರ್ಥಂಕರರ ವಿಗ್ರಹವನ್ನು ಯಾವುದೋ ಕಾಲದಲ್ಲಿ ಕರಾವಳಿಯ ತೀರದಿಂದ ಹಮ್ಮಿಗೆಗೆ ಸಾಗಿಸಲಾಗಿದೆಯೆಂದು

* 'ಕಾರ್ತೀಕ ಶ್ರೀ', ಎಚ್.ಐ.ಜಿ. ೨೭, ನವನಗರ, ಹುಬ್ಬಳ್ಳಿ, ಧಾರವಾಡ ಜಿಲ್ಲೆ – ೫೮೦೦೨೫.

ಊಹಿಸಬಹುದಾಗಿದೆ. ಇದರ ಮೂಲಸ್ಥಾನ ಯಾವ ಊರಾಗಿತ್ತೆಂದು ತಿಳಿಯದು.

ಹಾಡುವಳ್ಳಿ (ಸಂಗೀತಪುರ) ಅರಸರ ಮೂಲಪುರುಷರ ಹೆಸರೂ ಹೈವಣರಸ/ಹೈವಭೂಪ/ಹೈವರಾಜ ಆಗಿತ್ತೆಂದು ಗಮನಿಸಿದಾಗ, ಈ ಅರಸರಲ್ಲಿ ಕೆಲವರು ಹೈವೆ ದೇಶವನ್ನು (ಪ್ರಾಂತ) ಆಳುತ್ತಿದ್ದುದರಿಂದ ಈ ಹೆಸರು ಬಂದಿತ್ತೆಂದು, ಅದೇ ಹೆಸರು ಚನ್ನಭೈರಾದೇವಿಯ ಪ್ರಧಾನನಿಗೂ ಇತ್ತೆಂದು ಗ್ರಹಿಸಬಹುದು. ಪಾರಿಸದೇವ ಎನ್ನುವ ಹೆಸರು ೨೩ನೆಯ ತೀರ್ಥಂಕರ ಪಾರ್ಶ್ವನಾಥ ಹೆಸರಿನ ರೂಪವೇ ಆಗಿದೆ. ವರದೇವತೆ ಪದ್ಮಾವತಿಯು ಪಾರ್ಶ್ವನಾಥನ ಯಕ್ಷಿಯಾಗಿದ್ದು, ಆ ಹೆಸರಿನ ಆಡುನುಡಿಯ ರೂಪವೇ ಪದುಮರಸಿ (ಪದುಮ+ಅರಸಿ) ಆಗಿದ್ದು, ನಾಯಕನೊಬ್ಬನ ಪತ್ನಿಯಾಗಿದ್ದರಿಂದ ನಾಯ್ಕತಿ ಎನ್ನುವ ಉತ್ತರಪದ ಅಂಟಿಕೊಂಡಿದೆಯೆಂದು ಹೇಳಬಹುದು.

ಮಳ್ಕಿ (ಮಕ್ಕಿ–ವಿಜಾತೀಯ ದ್ವಿತ್ವವು ಸಜಾತೀಯ ದ್ವಿತ್ವವಾಗಿದೆ.) ಮತ್ತು ಆನೆವಳಿ (ಆನೆ+ಪಳ್ಳಿ=ಆನೆಪಳ್ಳಿ> ಆನೆವಳ್ಳಿ. ಇಲ್ಲಿ ಪ>ವ ಆಗಿದೆ.) ಇವು ಸ್ಥಳನಾಮಗಳಾಗಿವೆ. ಹಾಗೆಯೇ ಚಂನಭೈರಾದೇವಿ, ಹೈವಣನಾಯ್ಕ, ಪಾರಿಸದೇವ ನಾಯ್ಕ, ಪದುಮರಸಿನಾಯ್ಕತಿ ಇವು ವ್ಯಕ್ತಿನಾಮಗಳಾಗಿವೆ. ಪುಲ್ಲಿಂಗ ರೂಪವಾದ ನಾಯ್ಕ (ನಾಯಕ) ಇದಕ್ಕೆ ಸ್ತ್ರೀಲಿಂಗವಾಚಿ ಇತಿ ಸೇರಿಕೊಂಡು ನಾಯ್ಕತಿ (ನಾಯ್ಕ+ಇತಿ) ಆಗಿದೆ.

ಶಾಸನದ ಕಾಲವನ್ನು 'ಶ್ರೀಮುಖ ಸಂವತ್ಸರದ ಚೈತ್ರ ಶು ೫ಲು' ಎಂದು ಶಾಸನವು ಉಲ್ಲೇಖಿಸುತ್ತಿದ್ದು, ಚೆನ್ನಭೈರಾದೇವಿಯ ಕಾಲವು ಕ್ರಿ.ಶ. ೧೫೫೪–೧೬೦೫ ಆಗಿರುವುದರಿಂದ, ಪ್ರಸ್ತುತ ಶಾಸನದ ಕಾಲವನ್ನು ಕ್ರಿ.ಶ. ಮಾರ್ಚ್ ೮, ೧೫೭೩ ಭಾನುವಾರವಾಗಿದೆಯೆಂದು ಗುರುತಿಸಬಹುದು.

**ಶಾಸನದ ಪೂರ್ಣಪಾಠವು ಕೆಳಗಿನಂತಿದೆ–**

೧ ಶ್ರೀಮುಖ ಸಂವತ್ಸರದ ಚೈತ್ರ ಶು ೫ಲು ಶ್ರೀಮನ್ಮಹಾಮಂಡಲೇಶ್ವರ ಚೆಂ–

೨ ನಭೈರಾದೇವಿ ಅಮ್ಮನವರ ಮಹಾಪ್ರಧಾನ ಹೈವಣನಾಯ್ಕರ ಮ–

೩ ದವಳಿಗೆ ಪಾರಿಸದೇವನಾಯ್ಕರ ಮಗಳು ಮಳ್ಕಿಯಲ್ಲಿ ಹುಟ್ಟಿಕೊಂಡ

೪ ಆನೆವಳಿಯ ಪದುಮರಸಿನಾಯ್ಕತಿಯರು ಆಣತಿ ನೋ[ಂ]ಪಿಯ ವುದ್ಯಾಪ–

೫ ನೆಗೆ ತಮಗೆ ಪುಣ್ಯಾರ್ಥಕೆ ಮಾಡಿಸಿದ ಚವೀಸ ತೀರ್ಥಕ[ಂಕರ]ರಿಗೆ ಮಂಗಲಮಸ್ತು ಶ್ರೀ [॥*]

## ಅರಟಾಳದ ಅಪ್ರಕಟಿತ ಶಾಸನಗಳು

ಇಂದಿನ ಹಾವೇರಿ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಒಂದು ಹಳ್ಳಿ ಅರಟಾಳ. ಶಿಗ್ಗಾಂವಿಯಿಂದ ದಕ್ಷಿಣಕ್ಕೆ ಸುಮಾರು ೨೫ ಕಿ.ಮೀ. ದೂರದಲ್ಲಿದೆ. ಈಗ ದೊರೆಯುವಂತೆ ಕಲ್ಯಾಣಚಾಲುಕ್ಯರ ಪ್ರಾರಂಭಿಕ ಕಾಲದಲ್ಲಿ ನಿರ್ಮಾಣಗೊಂಡ ಗರ್ಭಗೃಹ, ನಾಲ್ಕು ಕಂಬಗಳುಳ್ಳ ನವರಂಗಗಳಿಂದ ಕೂಡಿದ ಬಸದಿಯೊಂದಿದೆ. ಅದರ ನವರಂಗದ ಬಲಮೂಲೆಯಲ್ಲಿ ಶಾಸನದ ಫಲಕವೊಂದು ನಿಂತಿದೆ. ನವರಂಗದಲ್ಲಿಯ ಪಾರ್ಶ್ವನಾಥ ತೀರ್ಥಂಕರನ ವಿಗ್ರಹದ ಪಾದಪೀಠದಲ್ಲಿ ಶಾಸನವಿದೆ. ಶಾಂತಿನಾಥ ತೀರ್ಥಂಕರನ ವಿಗ್ರಹವೊಂದು ಗರ್ಭಗುಡಿಯಲ್ಲಿದ್ದು, ಅದರಮೇಲೆಯೂ ಶಾಸನದ ಸಾಲುಗಳನ್ನು ಕೆತ್ತಲಾಗಿದೆ.

ಊರ ಪ್ರಾರಂಭದಲ್ಲಿಯೇ ವೀರಭದ್ರನ ಗುಡಿಯೆಂದು ಕರೆಯಿಸಿಕೊಳ್ಳುವ ಇತ್ತೀಚಿನ ಗುಡಿಯೊಂದಿದ್ದು, ಅದರ ಎದುರಿಗೆ ಶಾಸನದ ಫಲಕವೊಂದು ಬಿದ್ದಿದೆ. ಕಲ್ಮೇಶ್ವರ ಗುಡಿಯೆಂದು ಕರೆಯಿಸಿಕೊಳ್ಳುವ ಪುರಾತನ ದೇಗುಲ ಜೀರ್ಣಾವಸ್ಥೆಯಲ್ಲಿದ್ದು ಅದರ ಮುಂದೆ ದೊಡ್ಡ ಹೊಂಡವೊಂದಿದೆ. ಅದರ ದಂಡೆಯಲ್ಲಿ ಮೂರು ವೀರಗಲ್ಲುಗಳನ್ನು ನಿಲ್ಲಿಸಿದ್ದು, ಎರಡರ ಮೇಲೆ ಲಿಪಿ ಇದೆ. ವೀರಭದ್ರನ ಗುಡಿ ಎದುರಿನ ಎರಡು ಗಾಲಿಗಳ ಮೇಲೆಯೂ ಅಕ್ಷರಗಳಿವೆ.

ಹೀಗೆ ಇಡೀ ಊರಲ್ಲಿ ದೊರೆಯುವ ಶಾಸನಗಳ ಸಂಖ್ಯೆ ಏಳು. ಆದರೆ ಧಾರವಾಡ ಜಿಲ್ಲೆಯ ಶಾಸನ ಸೂಚಿಯಲ್ಲಿ ಗುರುತಿಸಿರುವಂತೆ ಕೇವಲ ನಾಲ್ಕು ಶಾಸನಗಳ ಕುರಿತು ರಿಪೋರ್ಟಗಳಲ್ಲಿ ವರದಿಯಾಗಿದೆ. ಇನ್ನುಳಿದ ೩ ಶಾಸನಗಳನ್ನು ಗುರುತಿಸಿಲ್ಲ. ಡಾ॥ ಹಂಪನಾ ಅವರ ಸೂಚನೆಯಂತೆ, ಇತ್ತೀಚೆಗೆ ನಾನು ನಡೆಸಿದ ಪರಿವೀಕ್ಷಣೆಯಲ್ಲಿ ಪಡಿಯಚ್ಚು ಮಾಡಿಕೊಂಡ ಈ ಏಳು ಶಾಸನಗಳ ಪಠ್ಯವನ್ನು ಹೊರತರುತ್ತಿದ್ದೇನೆ.

೧

ಬಸದಿಯ ಹಿಂಬದಿಯ ದಿಬ್ಬದಲ್ಲಿ ಹೂತಿರುವ ಶಾಸನ

ಕ್ರಿ.ಶ. ೧೦೬೧

ಶಾಸನದ ಮೇಲಿನ ೧' ಭಾಗದಲ್ಲಿ ಮುಕ್ಕೊಡೆ ಸಹಿತ ಪರ್ಯಂಕಾಸನಸ್ಥ ತೀರ್ಥಂಕರ ಶಿಲ್ಪವಿದ್ದು, ಎಡ–ಬಲಗಳಲ್ಲಿ ಚಾಮರಧಾರಿಗಳಿದ್ದಾರೆ. ತೀರ್ಥಂಕರನ ಎಡಪಕ್ಕದಲ್ಲಿ ಕರುವಿಗೆ ಹಾಲೂಡುತ್ತಿರುವ ಆಕಳಿನ ಉಬ್ಬುಶಿಲ್ಪವಿದ್ದು, ಅದರ ಮೇಲೆ ಚಂದ್ರನಿದ್ದಾನೆ. ಶಾಸನದ ಬಲಭಾಗ ಅಂದಾಜು ೪" ರಿಂದ ೧೦" ಗಾತ್ರದ ಕಲ್ಲು ಒಡೆದು ಕಳೆದಿದೆ. ಈಗ ಲಭ್ಯವಿರುವ ಶಾಸನವೂ ಮಧ್ಯದಲ್ಲಿ ಎರಡು ತುಂಡುಗಳಾಗಿ ಒಡೆದಿದೆ. ೧" ಗಾತ್ರದ ಅಕ್ಷರಗಳನ್ನು ಆಳವಾಗಿ ಕೆತ್ತಲಾಗಿದೆ.

೫೦" ಉದ್ದ ೨೪" ಅಗಲದ ಕರಿಕಲ್ಲಿನ ಮೇಲೆ ಶಾಸನವನ್ನು ಕೆತ್ತಿದ್ದು, ೩೮ ಸಾಲುಗಳನ್ನು ಹೊಂದಿದೆ. ಕಲ್ಯಾಣ ಚಾಲುಕ್ಯ ಚಕ್ರವರ್ತಿ

ತ್ರೈಲೋಕ್ಯಮಲ್ಲ ಮೊದಲನೆಯ ಸೋಮೇಶ್ವರನ ಕಾಲದ ಶಾಸನವಿದಾಗಿದ್ದು, ಶಾಸನದಲ್ಲಿರುವ ಮಿತಿಯು ಕ್ರಿಶ. ೧೦೬೧ರ ಜನವರಿ ೧೪ಕ್ಕೆ ಸರಿಹೊಂದುತ್ತದೆ.

ಗಂಗ ಪೆರ್ಮಾಡಿದೇವರು ಗಂಗವಾಡಿ ತೊಂಬತ್ತಾರು ಸಾವಿರ ಬನವಸೆ ಪನ್ನಿರ್ಚ್ಛಾಸಿರಗಳನ್ನು ಆಳುತ್ತಿರುವಾಗ, ಪಾನುಂಗಲ್ಲು ಐನೂರಿನಲ್ಲಿ ಮಯೂರವರ್ಮನ ಮಗ ಕಾದಂಬ ಚಕ್ರೇಶ್ವರನಾದ ಹರಿಕೇಸರಿ ಮಹಾಮಂಡಳೇಶ್ವರನಾಗಿ ರಾಜ್ಯಭಾರ ಮಾಡುತ್ತಿದ್ದ. ಆತನ ಪತ್ನಿ ದಾನಚಿಂತಾಮಣಿ ಎನಿಸಿದ ಲಚ್ಚಲದೇವಿ ಮಲ್ಲವುರ, ಬಂಕಾಪುರ, ಪುಲ್ಲಣಿಗಳಲ್ಲಿ ಶಿವದೇವಾಲಯಗಳನ್ನು ನಿರ್ಮಿಸಿದಳಂತೆ. ಹಾಗೆಯೇ ಹರಿಯಬ್ಬೆಯ ಬಸದಿ ಹೆಸರಿನ ಜಿನಾಲಯಕ್ಕೆ ದಾನ ಕೊಟ್ಟ ಉಲ್ಲೇಖ ಪ್ರಸ್ತುತ ಶಾಸನದಲ್ಲಿದೆ. ಬಹುಶಃ ಇಲ್ಲಿ ಉಲ್ಲೇಖಿತಳಾದ ಹರಿಯಬ್ಬೆ ಹರಿಕೇಸರಿಯ ಅಜ್ಜಿ ಮತ್ತು ಅಜ್ಜ ಹರಿಕಾಂತದೇವನ ಹೆಂಡತಿಯಾಗಿರಬಹುದೆಂದು ಊಹಿಸಬಹುದಾಗಿದೆ, ಶಾಸನವು ತ್ರುಟಿತಗೊಂಡಿರುವುದರಿಂದ ಅವರಿಬ್ಬರ ನಡುವಣ ಸಂಬಂಧ ಸ್ಪಷ್ಟವಾಗುವುದಿಲ್ಲ.

ಮೂಲಸಂಘ, ಸೇನಗಣ, ಚಂದ್ರಿಕಾವಾಟ ಗಚ್ಛದ ಅಜಿತಸೇನ ಭಟ್ಟಾರಕದೇವರ ನಂತರದ ಆಚಾರ್ಯ ಪರಂಪರೆಯಲ್ಲಿದ್ದ ನರೇಂದ್ರಸೇನಮುನಿ, ಸಮನ್ತಭದ್ರದೇವರು, ಅಷ್ಟೋಪವಾಸಿ, ದೇವಸೇನ ಎಂಬವರನ್ನು ಈ ಶಾಸನ ಬಣ್ಣಿಸುತ್ತದೆ.

ಕದಂಬ ಮಹಾಮಂಡಳೇಶ್ವರ ಹರಿಕೇಸರಿದೇವರು ಹಾಗೂ ಆತನ ಮಡದಿ ಲಚ್ಚದೇವಿಯರು ಸೇರಿ ಹರಿಯಬ್ಬೆಯ ಬಸದಿಯ ಖಣ್ಡಸ್ಫುಟಿತ ಜೀರ್ಣೋದ್ಧಾರಗಳಿಗಾಗಿ ಕೆರೆಯ ಕೆಳಗೆ ಎರಡು ಮತ್ತರು ಭೂಮಿ ದಾನವಾಗಿ ಕೊಟ್ಟುದನ್ನು ಶಾಸನ ದಾಖಲಿಸುತ್ತದೆ.

ಈ ಶಾಸನದಲ್ಲಿ ಉಲ್ಲೇಖಿತನಾದ ಮಹಾಮಂಡಳೇಶ್ವರ ಹರಿಕೇಸರಿದೇವ ಹಾನಗಲ್ಲು ಕದಂಬ ಮಹಾಮಂಡಳೇಶ್ವರ ಮಯೂರವರ್ಮ ಹಾಗೂ ಕಲ್ಯಾಣ ಚಾಲುಕ್ಯ ಚಕ್ರವರ್ತಿಗಳಾಗಿದ್ದ ಐದನೆಯ ವಿಕ್ರಮಾದಿತ್ಯ ಹಾಗೂ ಜಗದೇಕಮಲ್ಲ ಇಮ್ಮಡಿ ಜಯಸಿಂಹರ ಸೋದರಿ ರಣಭೈರವಿ ಎನಿಸಿದ ಅಕ್ಕಾದೇವಿಯರ ಹಿರಿಯ ಮಗ ಎನ್ನುವುದು ಗಮನಾರ್ಹ.

ಈಗಾಗಲೇ ಅರಟಾಳದಲ್ಲಿ ದೊರೆತಿರುವ ಶಾಸನವೊಂದು ಪಯಿರ್ತ್ತಣದ ಬೆಟ್ಟಕೇರಿಯ ಗಂಗರ ಬಮ್ಮಿಸೆಟ್ಟಿ ಮಾಡಿಸಿದ ಬಸದಿಯೊಂದನ್ನು ಹೆಸರಿಸುತ್ತಿದ್ದು, ಈ ಶಾಸನ ಹರಿಯಬ್ಬೆಯ ಬಸದಿ ಎಂಬ ಹೆಸರಿನ ಇನ್ನೊಂದು ಬಸದಿ ಅಲ್ಲಿದ್ದುದನ್ನು ಸೂಚಿಸುತ್ತದೆ. ಈ ಶಾಸನ ದೊರೆತ ಸ್ಥಳದಲ್ಲಿ ಉತ್ಖನನ ನಡೆಸಿದರೆ ಶಾಸನದ ಇನ್ನೊಂದು ತುಣುಕು ಹಾಗೂ ಬಸದಿಯ ಅವಶೇಷಗಳು ದೊರೆಯಬಹುದಾಗಿದೆ.

ಹರಿಕೇಸರಿಯ ಠಾಣ ಅಥವಾ ಹರಿಯಬ್ಬೆಯ ಠಾಣ ಎಂದು ಪ್ರಾರಂಭದಲ್ಲಿ ಕರೆಸಿಕೊಂಡ ಈ ಊರು, ಹರಿಠಾಣ ಎಂದು ಇಲ್ಲಿಯ ಇನ್ನುಳಿದ ಶಾಸನಗಳಲ್ಲಿಯೂ ಉಲ್ಲೇಖಗೊಂಡು, ಹರಿಠಾಣ>ಅರಿಠಾಣ>ಅರಠಾಣ>ಅರಟಾಣ>ಅರಟಾಳ ಎಂದು ಕಾಲಾಂತರದಲ್ಲಿ ಹೆಸರು ಬದಲಿಸಿಕೊಂಡಿದೆ ಎಂದು ಹೇಳಬಹುದು. ಹ>ಅ ಆಗುವುದು, ಠ>ಟ ಆಗುವುದು, ಣ>ಳ ಆಗುವುದು ಕನ್ನಡ ಭಾಷೆಯ ಬೆಳವಣಿಗೆಯಲ್ಲಿ ಸಹಜ ಕ್ರಿಯೆಯಾಗಿದೆ.

ಕಲ್ಯಾಣ ಚಾಲುಕ್ಯರ ಮಹಾಮಂಡಳೇಶ್ವರರಾಗಿ ಸುಮಾರು ಇನ್ನೂರು ವರ್ಷಗಳವರೆಗೆ ಆಳಿದ ಹಾನುಗಲ್ಲು ಕದಂಬರ ಒಂದು ಪ್ರಮುಖ ಶಾಖೆ ಬಂಕಾಪುರವನ್ನು ಕೇಂದ್ರವಾಗಿಟ್ಟುಕೊಂಡು ಆಳಿದೆ. ಈ ವಂಶದ ಪ್ರಮುಖ ಅರಸರ ವಂಶಾವಳಿಯನ್ನು ಹೀಗೆ ನೀಡಬಹುದು.

ಹರಿಕಾಂತದೇವ + ಹರಿಯಬ್ಬೆ
|
ಮಯೂರವರ್ಮ + ಅಕ್ಕಾದೇವಿ
|
-----------------------------------------------
| | |

ಹರಿಕೇಸರಿ+ಲಚ್ಚಲದೇವಿ ತೋಯಿಮದೇವ+ಮಾಳಲದೇವಿ ಹರಿಕಾಂತದೇವ

ಈ ಮನೆತನದ ಇವರೆಲ್ಲರ ವ್ಯಕ್ತಿತ್ವ, ಸಾಧನೆ, ದಾನ-ಧರ್ಮಗಳ ಕುರಿತಾಗಿ ಹಾವಣಗಿ, ಬೆಳವತ್ತಿ, ಗುಡಗುಡಿ, ಬೈಚವಳ್ಳಿ, ಹೊಟ್ಟೂರು, ಶಿಗ್ಗಾಂವ, ಆಡೂರು, ಹಾನಗಲ್ಲು, ಬಂಕಾಪುರ, ನೀರಲಗಿ, ಕಾಗಿನೆಲ್ಲಿ, ಮಂತಗಿ, ಸೂಡಿ, ಹಿರೆಕಣಗಿ, ಉಪ್ಪುಣಸಿ, ಮಲಗುಂದ, ಹಿರೇಬಾಸೂರು, ಅಕ್ಕಿವಳ್ಳಿ, ಅರಳೇಶ್ವರ, ನರೇಗಲ್ಲು ಶಾಸನಗಳು ಸುಂದರವಾಗಿ, ಸುದೀರ್ಘವಾಗಿ ವರ್ಣಿಸುತ್ತವೆ.

## ಶಾಸನದ ಪಾಠ

೧ [ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘ ಲಾಂಛ*]ನಂ ಜೀಯಾ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥

೨ [ಸ್ವಸ್ತಿ ಸಮಸ್ತ ಭುವನಾಶ್ರಯ*] ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಂ ಪರಮ

೩ [ಭಟ್ಟಾರಕಂ ಸತ್ಯಾ*]ಶ್ರಯ ಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರೈಲೋಕ್ಯ-

೪ [ಮಲ್ಲದೇವರ ವಿಜಯ*]ರಾಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾಚಂದ್ರಾ-

೫ [ರ್ಕ್ಕತಾರಂಬರಂ ಸಲು*]ತ್ತಮಿರೆ ತತ್ಪುತ್ರಂ ಸ್ವಸ್ತಿ ಸತ್ಯವಾಕ್ಯ ಕೊಂಗುಣಿವರ್ಮ್ಮ ಧರ್ಮ್ಮ

೬ [ಮಹಾರಾಜಾಧಿರಾಜ ಕೋ*]ಳಾಳ ಪುರವರೇಶ್ವರಂ ಪದ್ಮಾವತೀಲಬ್ಧ ವರಪ್ರಸಾದಂ ಶ್ರೀಮಚ್ಚಾಳುಕ್ಯ ಗಂಗ ಪೆ-

೭ [ರ್ಮ್ಮಾಡಿದೇ*]ವರ್ಗ್ಗಂಗವಾಡಿ ತೊಬತ್ತಱುಸಾಸಿರಮುಂ ಬನವಸೆ ಪನ್ನಿರ್ಚ್ಛಾಸಿರಮುಮಂ

೮ [ದುಷ್ಟನಿಗ್ರಹದಿಂ ಶಿಷ್ಟ ಪ್ರತಿ*]ಪಾಳನದಿಂ ಸುಖಸಂಕಥಾ ವಿನೋದದಿನರಸುಗೆಯ್ಯುತ್ತಮಿರೆ ॥ ಸ್ವಸ್ತಿ ಸಮಧಿಗ-

೯ [ತ ಪಂಚಮಹಾಸಬ್ದ ಮಹಾ*]ಮಣ್ಡಳೇಶ್ವರಂ ಬನವಾಸೀ ಪುರವರೇಶ್ವರಂ ಧರಣೀದೇವತಾ ರುದ್ರ ಒರಸಾದೋತ್ಪಾ-

೧೦ . . . . . . . . . ಮಯೂರವರ್ಮ್ಮ ವಂಸೋದ್ಭವ ಅಷ್ಟಾದಸಾಸ್ವಮೇಧ ದೀಕ್ಷಿತ ಸತ್ಯ ನಿತ್ಯ
೧೧ [. . . . ರಿಪುರಾಜ ಕುಂಜರ ಪ್ರ*]ತಿಪನ್ನ ಮೇರು ಸರಣಾಗತ ವಜ್ರಪಂಜರ ಕಡಂಬರಾಭರಣಂ ಶ್ರೀಮನ್ಮಹಾಮಣ್ಡ–
೧೨ [ಳೇಶ್ವರಂ ಹರಿಕೇಸರಿದೇವರ್ಬ್ಬ]ನವಸೆ ಪನ್ನಿರ್ಚ್ಛಾಸಿರಮುಮಂ ಪಾನುಂಗಲ್ಲಯ್ನೂಱುಮಂ ದುಷ್ಟನಿಗ್ರಹ ವಿಶಿಷ್ಟ ಪ್ರ–
೧೩ [ತಿಪಾಳನದಿಂ ಸುಖಸಂಕಥಾ ವಿನೋದದಿಂ*] ರಾಜ್ಯಂಗೆಯ್ಯುತ್ತಮಿರೆ ॥ ವೃ ॥ ಜಳಧಿವಳಯ ಮಧ್ಯೇ ಕ್ಷತ್ರಿಯಾನ್ವಯಾ
೧೪ . . . . . . . . . . . . ತತ್ಸೂರ್ಯ್ಯ ಸೋಮಾಂಸುಜಾತಾನ್ ಅ . ಶಿರಶಿಚ ತೇಷಾಂ ಬದ್ಧತೇ ರಾಜಪಟ್ಟಂ ತ–
೧೫ . . . . . . . . . . . . ತರಂ ಕುಳನ ॥ ಹರಿರಾಜ ಧ್ವಜ ಸಪ್ತಸಪ್ತತಿ ಕದಂಬಾಧೀಶ ಪೆರ್ಮ್ಮಟ್ಟಿ ತೂರ್ಯ್ಯ–
೧೬ [ರವಾಷ್ಟಾದಶ ವಾಜಿಮೇಧ*]ಚತುರಗ್ರಾಶೀತಿ ಸಂಖ್ಯಾ ಪುರೇಶ್ವರ ರುದ್ರಾನ್ವಯ ಸಿಂಹಲಕ್ಷ್ಮ ಹಿಮಸೈಳೇಂದ್ರೋ
೧೭ [ಪರಿಸ್ಥಾಪಿತ ಸ್ಥಿರಶಕ್ತ್ಯುದ್ಧ*] ಹಿರಣ್ಯಗರ್ಭ್ಭಮಹಿಮಂ ಕಾದಂಬ ಚಕ್ರೇಶ್ವರ ॥ ವಚನ ॥ ಆ ಕಾದಂಬ ಚಕ್ರೇಶ್ವರ
೧೮ . . . . . . . . . . . . . ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರ ಫಳಭೋಗಭಾಗಿನಿ ದ್ವಿತೀಯ
೧೯ [ಲಕ್ಷ್ಮೀ ಸಮಾನೆ ತ್ಯಾಗನಿಧಾ*]ನೆ ಶ್ರಿಂಗಾರ ಗಂಗಾತರಂಗಿಣಿ । ದಾನ ಚಿನ್ತಾಮಣಿ । ಗೌರೀಲಬ್ಧವರಪ್ರಸಾದೆ । ಚಂಪ–
೨೦ [ಕಾಮೋದೆ ವಿವೇಕ ವಿದ್ಯಾಧ*]ರಿ । ಸಕಳ ಕಳಾಧರಿ । ಗೋತ್ರ ಪವಿತ್ರೆ ಶ್ರೀಮದರಿಕೇಸರಿದೇವ ಮನಸ್ಸ–
೨೧ [ರೋವರ ರಾಜಹಂಸೆಯರ*]ಪ್ಪ ಶ್ರೀಮಲ್ಲಚ್ಚಲದೇವಿಯರ್ ॥ ವೃತ್ತ ॥ ಸಾ(?)ಸ ಸಿರಿಯೊಳ್ಮಲಂಗುವಳಿವೆಣ್ದಿರೊಳೇಂ
೨೨ . . . . . . . . . . . ಮೆ ತಂನ್ನ ಮಾಂತನಮೆ ತಂನ್ನಡಗುಂತಿಯೆ ತಂನ್ನ ಪೆಂಪೆ ತಂನೆಸೆವ ಪತಿ
೨೩ . . . . . . . . . . . . ಯೆ ಮೂಱು ಲೋಕಮಂ ಪಸರಿಸಿ . . ದಿಸಿತ್ತೆನಿಸೆ ಲಚ್ಚಲದೇವಿಯಿಂದೇಂ ಕೃತಾರ್ಸ್ಥೆಯೋ ॥
೨೪ . . . . . . . . . . . . ಳ್ವಿಜರಾಜ ಮಲ್ಲವುರದೊಳೆ ಬಂಕಾಪುರದೊಳ್ಪುಲ್ಲಣಿಯೊಳ್ಪುರಹರಾಲಯಂ ಸತ್ರಮಂ
೨೫ . . . . . . . . . . . ಪ್ಪ ಶ್ರೀ ಮನ್ಮಹಾಮಂಡಳೇಶ್ವರಂ ಹರಿಕೇಸರಿದೇವರುಂ ಶ್ರೀಮಲ್ಲಚ್ಚಲದೇವಿಯರುಂ
೨೬ . . . . . . . . . . . . ಯ ಸಾರ್ವ್ವರಿ ಸಂವತ್ಸರದುತ್ತರಾಯಣ ಶಂಕ್ರಾನ್ತಿಯುಮಾದಿತ್ಯವಾರಂ–
೨೭ . . . . . . . . . . . ಮೂಳಸಂಘದ ಸೇನಗಣ ಚಂದ್ರಕಾವಾಟಗಚ್ಛದ ಶ್ರೀ ಮದಜಿತಸೇ–
೨೮ [ನಭಟ್ಟಾರಕರ್ತ್ತದನ್ತೇವಾಸಿಗಳ್ ಕನಕಸೇನ] ಭಟ್ಟಾರಕದೇವರ ಶಿಶ್ಯರ್ ॥ ಕನ್ದ ॥ ಚಾಂದ್ರಂ ಕಾತಂತ್ರಂ ಜೈನೇಂದ್ರಂ ಶಬ್ದಾನುಸಾಸನಂ ಪಾ–
೨೯ [ಣಿನಿ ಮತ್ತೈಂದ್ರಂ ನರೇನ್ದ್ರ*]ಸೇನ ಮುನೀಂದ್ರಂಗೇಕಾಕ್ಷರಂ ಪೆಱಂಗಿವು ಮೊಗ್ಗೇ ॥ ಅನ್ತೆನಿಸಿದ ನರೇಂ–
೩೦ [ದ್ರಸೇನ. . . . . .ಶಿಷ್ಯರ*]ಪ್ಪ ಸಮನ್ತಭದ್ರದೇವರ ವರಶಿಷ್ಯರಷ್ಟೋಪವಾಸಿದೇವಸೇನ
೩೧ . . . . . . . . . . .ಹರಿಯಬ್ಬೆಯ ಬಸದಿಗೆ ಖಣ್ಡಸ್ಫುಟಿತ ಜೀರ್ಣೋದ್ಧರಣಂ[ಕ್ಕಂ*]
೩೨ . . . . . . . . . ಗೆಱೆಯ ಕೆಳಗೆ ಬಿಟ್ಟ ಗಜ್ಜೆಯ ಮತ್ತರೆರಡು ಅದಕ್ಕೆ ಸೀ[ಮೆ*]
೩೩ . . . . . . . . ಡುವಲುಂ ಕೆಱೆಯೇರಿ ಪಡುವಲ್ನಟ್ಟ ಕಲ್ಲು ವಾಯಾವ್ಯದ ಆ . .
೩೪ . . . . . . . ದಲು ಸವಣ್ಗಲ್ಲ ಧಂರ್ಮ್ಮಮಂ ಪ್ರತಿಪಾಳಿಸಿದಾತಂಗೆ ವಾರ[ಣಾಸಿ*]
೩೫ . . . . . . . . . . . . . . . . . . . ಸಾಸಿರ್ವ್ವರು ಬ್ರಾಹ್ಮಣರಿರ್ಗ್ಗೆ ಕೊಟ್ಟ ಫಳವೀ . .
೩೬ . . . . . . . . . . . . . . . . . [ಕ*]ವಿಲೆಯುಮುಮಂ ಸಾಸಿರ್ವ್ವ ಬ್ರಾಹ್ಮಣರುಮನ[ಳಿದ*]
೩೭ [ದೋಷಂ ಸಾರ್ಗ್ಗುಂ ॥ ಸ್ವದತ್ತಾಂ ವಾಯೋ ಹರೇತಿ] ವಸುನ್ಧರಾಃ ಸಷ್ಟಿರ್ವ್ವರ್ಶ ಸಹಸ್ರಾಣಿ[ವಿಷ್ಟಾಯಾಂ*]
೩೮ [ಜಾಯತೇ ಕ್ರಿಮಿಃ ॥*]

೨

ವೀರಭದ್ರಗುಡಿ ಹಿಂದೆ ಕೆರೆದಂಡೆಯಲ್ಲಿರುವ ವೀರಕಲ್ಲು

ARSIE 1943-44 NO.3

ಕ್ರಿ.ಶ. ೧೦೭೯

ವೀರಗಲ್ಲಿನ ಮೊದಲ ಪಟ್ಟಿಕೆಯಲ್ಲಿ ಕುದುರೆಯ ಮೇಲೇರಿದ ನಾಲ್ವರು ವೀರರೊಡನೆ ಧನುರ್ಧಾರಿಯಾದ ವೀರನೊಬ್ಬ ಹೋರಾಡುತ್ತಿದ್ದಾನೆ. ಅವನ ಹಿಂದೆ ತುಱುಗಳು, ಬಾರಿಸುವ ಊದುವ ಮೇಳದವರಿದ್ದಾರೆ. ಎರಡನೆಯ ಪಟ್ಟಿಕೆಯಲ್ಲಿ ೫ ಸಾಲುಗಳ ಶಾಸನವಿದೆ. ಮೂರನೆಯ ಪಟ್ಟಿಕೆಯಲ್ಲಿ ಪಲ್ಲಕ್ಕಿಯಲ್ಲಿ ವೀರನೊಬ್ಬನನ್ನು ಕೂಡಿಸಿಕೊಂಡು ಇಬ್ಬಿಬ್ಬರು ಅಪ್ಸರೆಯರು ಹೊತ್ತೊಯ್ಯುತ್ತಿದ್ದಾರೆ. ನಾಲ್ಕನೆಯ ಪಟ್ಟಿಕೆಯಲ್ಲಿ ೫ ಸಾಲುಗಳ ಶಾಸನ ಮುಂದುವರಿದಿದ್ದು, ಅದರ ಮೆಲೆ ಶಿವಲಿಂಗ–ಪೂಜಾರಿ–ನಂದಿಯರಿದ್ದು, ಹಿಂದೆ ವೀರನೊಬ್ಬ ಕುಳಿತಿದ್ದಾನೆ. ಶಾಸನ ಇಬ್ಭಾಗವಾಗಿ ಸೀಳಿ ಉರುಳಿಬಿದ್ದಿದೆ.

ಕದಂಬ ಮಹಾಮಂಡಳೇಶ್ವರ ತೇಲಪದೇವರು ಆಳುತ್ತಿರುವಾಗ, ಕೇಸವಗಾವುಂಡ ಮಗ ಸಾತಗಾವುಂಡ ತುಱುಗೊಳ್ ಕದನದಲ್ಲಿ ಕಾದಿ ವೀರಮರಣವನ್ನಪ್ಪಿದುದನ್ನು, ಆತನ ತಮ್ಮ ನಾಕಗಾವುಂಡ ಶಾಸನಕ್ಕೆ ಮತ್ತು ಕುಂದಗೋಳದ ಕೇಶವ ಕ್ರಮಿತರಿಗೆ ಬಿಟ್ಟ ಭೂದಾನವನ್ನು ತಿಳಿಸುತ್ತದೆ.

೪ನೆಯ ಸಾಲಿನಲ್ಲಿ, ಶ್ರೀಮತು ಚಾಳುಕ್ಯ ವಿಕ್ರಮವಂಶದ ೧೩ನೆಯ ಕಾಳಯುಕ್ತ ಸಂವತ್ಸರದ ಮಾಘ . . .
ವಾರ ಎಂಬ ಮಿತಿಯಿದ್ದು, ಆರನೆಯ ವಿಕ್ರಮಾದಿತ್ಯನ ೩ನೆಯ ಆಳ್ವಿಕೆಯ ವರ್ಷ ಕಾಳಯುಕ್ತ ಸಂವತ್ಸರವಾಗಿದ್ದು ಜನೆವರಿ ೧೦೭೯ ಆಗುತ್ತದೆ.

## ಶಾಸನದ ಪಾಠ

೧ . . . . . . . ॥ ಹರಿರಾಜಧ್ವಜ ಸಪ್ತಸಪ್ತತಿ ಕಡಂಬಾಧೀಶ ಪೆರ್ಮ್ಮಟ್ಟಿ ತೂರ್ಯ್ಯರವಾಷ್ಟಾದಶ ವಾಜಿಮೇಧ ಚತುರಾ–

೨ ಸೀತಿ ಸಂಖ್ಯಾಪುರೇಶ್ವರ ರುಂದ್ರಾನ್ವಯ ಸಿಂಘಲಕ್ಷ್ಮ ಹಿಮಶೈಳೇಂದ್ರ ಪರಿಸ್ಥಾಪಿತ ಸ್ಥಿರ ಶಕ್ತ್ಯುದ್ಧ

೩ ಮಹಿಮಾಭಿರಾಮಂ ಕಾಡಂಬ ಚಕ್ರೇಶ್ವರ ॥ ಅನ್ತು ವಂಶೋದ್ಭವನೆನಿಸಿದ ಶ್ರೀ ಮನ್ಮಹಾಮಂಡಳೇಶ್ವರಂ ತೈಲಪದೇವರು

೪ . . ಗಾವುಂಡ ಶ್ರೀಮತು ಚಾಳುಕ್ಯ ವಿಕ್ರಮ ವರಿಶದ ೧೩ನೆಯ ಕಾಳಯುಕ್ತ ಸಂವತ್ಸರದ ಮಾಘ . . .

೫ ವಾರದಂದು ಶ್ರೀಮತು ವಾಟಂ ಹರಿಟಾಣದ ತುಱುವಂ ಕೊಳುವಲ್ಲಿ ಕೇಸವಗಾವುಂಡರ ಮಗ ಸಾತಗಾ–

೬ ವುಂಡ ತುಱುಗೋಳ ಕಡು ಕಡೆಗಣಿಸ ಪೋಗದೆಂದು ಕಾದಿ ತುಱುವಂ ಮಗುರ್ಚ್ಚಿ ಸುರಲೋಕಕ್ಕೆ ಸಂದನಾತನ ಗಂಡವಾ–

೭ ತಂ ಮೆಚ್ಚಿ ॥ ಎಸೆದವು ದೇವದುಂದುಭಿಗಳಂಬರದೊಳು । ಸುರಕನ್ನಯರ್ಕ್ಕಳುಂ ಪಸರಿ ಪರ್ಬ್ಬಿ ಬಂದು ಪ್ರಭು ಸಾತಯ–

೮ ನೊಳ್ಕಿದನೆಂದು ರಾಜಗಿಂದೊಸೆದಮಳ್ದಪ್ಪಿಯುಯ್ದರಮರಾವತಿಯ ಸಾಂಕನ್ನೆಯರ್ಕ್ಕಳು ॥ @

೯ ಸಾತಗಾವುಡಂನ ತಮ್ಮ ನಾಕಗಾವುಂಡ ಸಾಸನಕ್ಕೆ ಬಿಟ್ಟ ಗದ್ದೆ ತಮ್ಮ ಏಮೂವತ್ತು । ಕುಂದಗೋಳದ ಕೇಶವಕ್ರಮಿತ

೧೦ ರಿಗೆ ಬಿಟ್ ಗಜ್ದೆ ಕಮ್ಮವಿಪ್ಪತ್ತು । ಮಾಗೆ ಸವಾಸಿ ಅಂಬವಗೆ ಕಮ್ಮ ೧೦.

೩

ಬಸದಿಯ ನವರಂಗದಲ್ಲಿ ಶಾಸನ

ARSIE 1943-44 NO.1

ಕ್ರಿ.ಶ. ೧೧೨೨

೧೬೩ ಸೆ.ಮೀ. ಎತ್ತರ ೯೪ ಸೆ.ಮಿ. ಅಗಲವಿರುವ ಬೆಣಚುಕಲ್ಲಿನ ಶಿಲಾಫಲಕವಿದ್ದು, ನುಣುಪಾಗಿ ಮಾಡಿಕೊಂಡನು ೧೨]" ಗಾತ್ರದ ಅಕ್ಷರಗಳಲ್ಲಿ ಶಾಸನವನ್ನು ಕಂಡಸರಿಸಲಾಗಿದೆ. ಮೇಲಿನ ೩' ಭಾಗದಲ್ಲಿ ಉಬ್ಬುಶಿಲ್ಪಗಳಿವೆ. ಆಕಳು, ಕರು, ಖಡ್ಗ, ಪೀಠದ ಮೇಲೆ ಕುಳಿತ ಸುಖಾಸನಸ್ಥ ಜಿನಬಿಂಬವಿದೆ. ಪಿಂಛ ಕಮಂಡಲಗಳು ಇದ್ದು, ಪ್ರಭಾವಳಿಯ ಮೇಲೆ ಮುಕ್ಕೊಡೆಯಿದೆ. ಎಡಬಲಗಳಲ್ಲಿ ಸೂರ್ಯಚಂದ್ರರಿದ್ದಾರೆ. ಜಿನ ಮಂಗಲಪದ್ಮದೊಂದಿಗೆ ಪ್ರಾರಂಭಗೊಳ್ಳುವ ಶಾಸನ ಕನಕಚಂದ್ರಸಿದ್ಧಾಂತದೇವರ ಗುಡ್ಡ ಗಂಗರ ಬಮ್ಮಿಸೆಟ್ಟಿ ಈ ಬಸದಿಯನ್ನು ಮಾಡಿಸಿದನೆಂದು ತಿಳಿಸುತ್ತದೆ. ಕಲ್ಯಾಣಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯ ವಿಕ್ರಮಾದಿತ್ಯ ಆಳುತ್ತಿರುವಾಗ, ಕದಂಬ ತೈಲಪದೇವರು ಬನವಸೆ ಪನ್ನಿರ್ಚ್ಚಾಸಿರ ಪಾನುಂಗಲ್ ಐನೂರನ್ನು ಅಳುತ್ತಿದ್ದರೆಂದು ತಿಳಿಸುತ್ತದೆ.

ಮೂರುಕೇರಿಯ ಪ್ರಭುಗಾಮುಂಡುಗಳು, ಅರುವತ್ತೊಕ್ಕಲು, ಐನೂರ್ವರು ಸೇರಿ ಕೊನ್ತಕುಳಿಯ ಮೊದಲ ಹಳ್ಳಿ ಪಯಿಟ್ಟಣದ ಬೆಟ್ಟಕೇರಿಯ ಗಂಗರ ಬಮ್ಮಿಸೆಟ್ಟಿಯರು ಮಾಡಿಸಿದ ಬಸದಿಗೆ ಮೂಲಸಂಘದ ಕಾಣೂರ್ಗಣದ ಮೇಷಪಾಷಾಣಗಚ್ಛದ ಕನಕಚಂದ್ರಸಿದ್ಧಾಂತದೇವರ ಕಾಲ್ತೊಳೆದು, ದೇವರ ಅಷ್ಟವಿಧಾರ್ಚನೆಗೆ, ರಿಷಿಯರ ಆಹಾರದಾನಕ್ಕೆಂದು ಬಿಟ್ಟ ಭೂದಾನವನ್ನು ತಿಳಿಸುತ್ತದೆ. ಮುಂದುವರೆದು ಸುಂಕದಾನ ಮತ್ತು ನಂದಾದೀವಿಗೆಗೆ ಬಿಟ್ಟ ಎಣ್ಣೆದಾನವನ್ನು ವಿವರಿಸುತ್ತದೆ.

ಶಾಸನದ ೧೬ನೆಯ ಸಾಲಿನಲ್ಲಿ ಬರುವ "ಸಕವರ್ಷ ೧೦೪೫ನೆಯ ಶುಭಕ್ರಿತ್ಸರದ ಪುಷ್ಯಮಾಸಮವಾಸೆ ಆದಿತ್ಯವಾರ ಸೂರ್ಯ ಗ್ರಹಣದಂದು" ಎನ್ನುವ ಮಿತಿಯಲ್ಲಿ, ೧೦೪೫ನೆಯ ಶಕವರ್ಷ ಕ್ರಿ.ಶ. ೧೧೨೩ರಲ್ಲಿ ಬರುತ್ತಿದ್ದು ಶೋಭನ ಸಂವತ್ಸರವಾಗಿದೆ. ಶುಭಕ್ರಿತ್ ಸಂವತ್ಸರವು ೧೦೪೪ರಲ್ಲಿ ಬರುತ್ತಿದ್ದು ಕ್ರಿ.ಶ. ೧೧೨೨ ಎಂದು ಪರಿಗಣಿಸಿದರೆ ೨೦–೧೨–೧೧೨೨ಕ್ಕೆ ಹೊಂದುತ್ತಿದ್ದು, ವಾರ ಶಾಸನದಲ್ಲಿ ಸೂಚಿಸಿದಂತೆ ಆದಿತ್ಯವಾರವಾಗಿರದೆ ಶನಿವಾರವಾಗಿದೆ. ಎಂಬುದನ್ನು ಗಮನಿಸಬೇಕು.

## ಶಾಸನದ ಪಾಠ

೧ @ ಶ್ರೀಮತ್ಪರ ಗಂಭೀರ ಸ್ಯಾಧ್ವಾದಮೋಘ ಲಾಂಛನಂ ಜೀಯಾ ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥

೨ ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನಧಾರಣ ಮೋನಾನುಷ್ಠಾಣ ಸಮಾಧಿಶೀಳ ಸಂಪನ್ನ–

೩ ರಪ್ಪ ಕನಕಚಂದ್ರಾಸಿದ್ಧಾನ್ತದೇವರ ಗುಡ್ಡಂ ಗಂಗರ ಬಮ್ಮಿಸೆಟ್ಟಿ ಮಾಡಿಸಿದ ಬಸದಿ ॥ ಮಂಗಳ ಮಹಾ ಶ್ರೀಶ್ರೀ

೪ @ ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀವಲ್ಲಭಂ ಮಹಾರಾಜಾಧಿರಾಜಂ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯ ಕು–

೫ ಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ರಿವನಮಲ್ಲದೇವರ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ಧಮಾನ–

೬ ಮಾಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ॥ ತತ್ಪಾದ ಪದ್ಮೋಪಜೀವಿ ॥ ಸ್ವಸ್ತಿ ಸಮಧಿಗತ ಪಂಚಮಹಾಸಬ್ದ ಮಹಾಮಂಡಳೇಶ್ವರ

೭ ಬನವಾಸಿ ಪುರವರಾಧೀಶ್ವರಂ ಜಯನ್ತೀ ಮಧುಕೇಶ್ವರ ಲಬ್ಧವರಪ್ರಸಾದಂ ಮ್ರಿಗಮದಾಮೋದಂ ತ್ರ್ಯಕ್ಷಯಕ್ಷ[ಷಾ*]ಸಂಭ-

೮ ವಂ ಚತುರಾಶೀತಿ ನಗರಾಧಿಷ್ಠಿತಂ ಲಲಾಟಲೋಚನಂ ಚತುರ್ಬ್ಭುಜ ಜಗದ್ವಿದಿತಾಷ್ಟಾದಶಾಶ್ವಮೇಧ ದೀಕ್ಷಾದೀಕ್ಷಿತಂ

೯ ಹಿಮವದ್ಗಿರೀಂದ್ರ ರುದ್ರ ಶಿಖರೀಶಿಖರ ಸಂಸ್ಥಾಪಿತ ಸ್ಫಟಿಕ ಶಿಲಾಬದ್ಧ ಮದಗಜ ಮಹಾಮಹಿಮಾಭಿರಾಮಂ ಕಾ-

೧೦ ದಂಬಚಕ್ರಿ ಮಯೂರವರ್ಮ್ಮ ಮಹಾಮಹೀಪಾಳಕುಳಭೂಷಣಂ ಪೆರ್ಮ್ಮಟ್ಟಿ ತೂರ್ಯ್ಯ ನಿರ್ಘೋಷಣಂ ಶಾಖಾಚರೇಂದ್ರ ಧ್ವ-

೧೧ ಜವಿರಾಜಮಾನ ಮಾನೋತ್ತುಂಗ ಸಿಂಹಲಾಂಛನಂ ದತ್ತಾರ್ತ್ಥಿಕಾಂಚನಂ ಸಮರ ಜಯಕಾರಣಂ ಕಡಂಬರಾಭರಣಂ ಮಾರ್ಕ್ಕೊಳ್ವರ ಗಂ

೧೨ ಡಂ ಪ್ರತಾಪಮಾರ್ತ್ತಂಡಂ ಮಂಡಳಿಕ ಗಂಡ ಬಂಗಾಱಂ ಶ್ರೀಮನ್ಮಹಾಮಂಡಳೇಶ್ವರಂ ತೈಲಪದೇವರ್ಬ್ಬನವಾಸೆ ಪನ್ನಿರ್ಚ್ಛಾಸಿರಮಂ ಪಾನುಂ-

೧೩ ಗಲ್ಗ್ಗೈನೂಱಮನುಭಯ ಸಾಂಮ್ಯಮಾಳುತ್ತ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ ॥ ವ್ರಿತ್ತ ॥ ಹರಿರಾಜದ್ವಜ

೧೪ ಸಪ್ತಸಪ್ತತಿ ಕಡಂಬಾಧೀಶ ಪೆರ್ಮ್ಮಟ್ಟಿ ತೂರ್ಯ್ಯರವಾಷ್ಟಾದಶವಾಜಿಮೇಧ ಚತುರಗ್ರಾಶೀತಿ ಸಂಖ್ಯಾಪುರೇಶ್ವರ ರುದ್ರಾ-

೧೫ ನ್ವಯ ಸಿಂಹಲಕ್ಷ್ಮ ಹಿಮಶೈಳೇಂದ್ರೋ ಪರಿಸ್ಥಾಪಿತ ಸ್ಥಿರಶಕ್ತ್ಯುದ್ಧ ಹಿರಣ್ಯಗರ್ಭ ಮಹಿಮಂ ಕಾದಂಬಚಕ್ರೇಶ್ವರಂ ॥ ವ ॥

೧೬ ಅನ್ತು ಪೆಂಮ್ರ್ಮೆಯನಾನ್ತ ತೈಲಪದೇವರಸರ್ಗ್ಗೆ ॥ ಸಕವರ್ಷ ೧೦೪೫ನೆಯ ಶುಭಕ್ರಿತ್ಸಂವತ್ಸರದ ಪು-

೧೭ ಸ್ಯಮಾಸದಮದಾಸ್ಯೆ ಆದಿತ್ಯವಾರ ಸೂರ್ಯಗ್ರಹಣದಂದು ಕೊನ್ತಕುಳಿಯ ಮೊದಲ ಬಾಡಂ ಪಯಿಟ್ಟಣದ ಬೆಟ್ಟ-

೧೮ ಕೇರಿಯ ಗಂಗರ ಬಮ್ಮಿಸೆಟ್ಟಿಯರು ಮಾಡಿಸಿದ ಬಸದಿಗೆ ಮೂಱುಂಕೇರಿಯ ಪ್ರಭುಗಾಮುಂಡುಗಳುಂ ಅಱುವತ್ತೊಕ್ಕ-

೧೯ ಲು ಅಯಿನೂರ್ವ್ವರುಂ ಕಡಂಬ ಕುಳತಿಳಕಮೆಂದು ಪೆಸರಿಟ್ಟು ಬಿನ್ನಪಂಗೆಯ್ದು ಧರ್ಮ್ಮಪ್ರತಿಪಾಳನಾರ್ತ್ಥಂ ॥ ನತ ಭೂಪಾ-

೨೦ ಳಕ ಮೌಳಿಸ್ಥಿತ ರತ್ನದ್ಯುತಿಗಳಿಂ ಪದದ್ಯುತಿಯೆಸೆಗುಂ ಸತತಂ ಸದ್ಯಾರುಚಿಯವೊಲ ತನ್ನ ಮದೇಭಾರಿ ಕನ-

೨೧ ಕಚಂದ್ರಬ್ರತಿಯ ॥ ವ್ರಿ ॥ ಅನುಪಮರೆಂದು ಬಣ್ಣಿಪುದನಾನಜೆಯೆಂ ತನು ಕಲ್ಲಕಂಭದನ್ತೆನಿತುಂ

೨೨ ಪರೀಷಹ ಪ್ರಬಳಭಾರಮನಾನ್ತುದು ಚಿತ್ತವಾತ್ಮಭಾವನೆಯೊಡಗೂಡಿತೀ ಕನಕಚಂದ್ರ ಮಹಾಮುನಿಪಂಗೆ ಕಾಲವ-

೨೩ ರ್ತ್ತನದವಸರ್ಪ್ಪಣಂ ನೆಗಳದಿರ್ದ್ದಡೆ ನೆಟ್ಟನೆ ರಿದ್ಧಿ ಪುಟ್ಟದೇ । ವೀರ ಮನೋಭವ ಪ್ರಬಳದರ್ಪ್ಪ ವಿಭಂಜನರುದ್ಧತ ತ್ರಿದಂಡಾ-

೨೪ ರಿ ಕುಳಾಚಳೇಂದ್ರ ಕುಳಿಶರ್ಕ್ಕಲಿಕಾಲ ವಿಮೋಹ ರಾಜನಿರ್ಧಾರಕರನ್ಯ ಶೂನ್ಯಮತಸನ್ತಮಸೋದಯ ಚಂ-

೨೫ ದ್ರರೆಂದು ವಿಸ್ತಾರದೆ ಬಣ್ಣಿಕುಂ ಕನಕಚಂದ್ರ ಮುನೀಂದ್ರನ ನಿಜಗರ್ಜ್ಜಮಂ ॥ ಮುನಿಯೆ ಜಂಗಮ ಜೈನಬಿಬನನ ವದ್ಯಾ-

೨೬ ಭಾರನೆ ಜೈನಶಾಸನ ರಕ್ಷಾಮಣಿ ಶಾಂತನೆ ಸಕಳರಾಗ ದ್ವೇಷ ದೋಷ ಪ್ರಭಂಜನನುರ್ವ್ವೀ ನುತನೆ ಗುಣಪ್ರಣಯಿ

೨೭ ತಾನೆಂಬಿನಂ ವಿಶ್ವಮೇದಿನಿಯೊಳು ॥ ಮಾಧವಚಂದ್ರದೇವನೆಸೆದಂ ಚಾರಿತ್ರ ಚಕ್ರೇಶ್ವರಂ ॥ ಜಿನಮತ ಲಕ್ಷ್ಮಿಗಭ್ಯುದ-

೨೮ ಯಮಾದುದು ಭವ್ಯಜನಾನುರಾಗವರ್ತ್ತನೆಗೆ ವಿಶುದ್ಧ ಮಾರ್ಗ್ಗಮಳವಟ್ಟುದು ಸತ್ಯತಪೋನಿಧಾನ ನನ್ದನವನಿ ರಾ-

೨೯ ಜಿ ಪಲ್ಲವಿಸುತಿರ್ದ್ದುದು ಮಾಧವಚಂದ್ರದೇವನೆಂಬನುಪಮ ಯೋಗಿ ಪುಟ್ಟುಮದುವೀ ವಸುಧಾವಳಯಾಂತರಾಳ-

೩೦ ದೊಳು ॥ ಇನ್ತು ನೆಗರ್ತ್ತೆವೆತ್ತ ಶ್ರೀ ಮೂಲಸಂಘದ ಕಾಣೂರ್ಗ್ಗಣದ ಮೇಷ ಪಾಷಾಣಗಚ್ಛದ ಕನಕಚಂದ್ರ ಸಿಧ್ಧಾನ್ತದೇವರ ಪಾ-

೩೧ ದ ಪ್ರಕ್ಷಾಳನಂಗೆಯ್ದು ಧಾರಾಪೂರ್ವ್ವಕಂ ಮಾಡಿ ದೇವರಷ್ಟವಿಧಾರ್ಚನೆಗಂ ರಿಷಿಯರಾಹಾರ ದಾನಕ್ಕಮೆಂದು ಬಿಟ್ಟ ಕೆಯ್ಯ ಸೀಮಾ

೩೨ ಸಮ್ಮಂಧಂ ಬೆಳ್ವಾವಿಯಿಂ ಮೂಡಲು ಗೋಗೆಱೆಯಿಂ ತೆಂಕಲು ಮಲ್ಲಿಗಾಮುಂಡಗೆಱೆಯ ಮೂಡಣ ಕೋಡಿಯಿಂ ಕೆಳಗೆ ಗರ್ದೆ ಪಿರಿಯ ಕೋ-

೩೩ ಲಲು ಮತ್ತರೊಂದು ೧ ಊರಿಂ ಪಡುವಣ ಬೆಂಡೆಕೆಱೆಯ ಕೆಳಗೆ ಗರ್ದ್ದೆ ಕಂಮ್ಮಂ ಇಪ್ಪತ್ತು ೨೦ ಅಲ್ಲಿ ಪೂದೋಂಟವೊಂದು ೧ ಬಸ-

೩೪ ದಿಯುತ್ತರದ ಬೀಡಿಯಿಂ ಬಡಗಲು ಪದಿನಯ್ದು ಕೈ ೧೫ ನಿವೇಶಣ ದಾನಶಾಲೆ ಅಯಿನೂರ್ವ್ವರು ಬಿಟ್ಟ ಧರ್ಮ್ಮ ಅಂಗಡಿ-

೩೫ ಯೊಳು ಸೊಂಟಿಗೆ ಹೊಱಗಣ ಬನ್ದ ಭಂಡಕ್ಕೆ ಹೊಂಗೆ ಸೊಂಟಿಗೆ ಯೊಂದು ೧ ಅಯ್ವತ್ತೊಕ್ಕಲು ದೇವರ ಸೊಡರೆಣ್ಣೆಗೆ ಗಾಣದೊಳು ಕೊ-

೩೬ ಟ್ಟ ಸೊಂಟಿಗೆಯೊಂದು ೧ ಇನ್ತಿನಿತುಮಂ ಸರ್ವ್ವನಮಶ್ಯಮಾಗೆ ಪ್ರತಿಪಾಳಿಸಿದವರ್ಗ್ಗೆ ವಾರಣಾಸಿಯೊಳಂ ಅರ್ಗ್ಘ ತೀರ್ತ್ಥದೊಳಂ

೩೭ ಸಹಸ್ರ ಕಪಿಲೆಯಂ ಸಹಸ್ರ ಬ್ರಾಹ್ಮಣರಂ ಕೊಟ್ಟ ಫಲಮಕ್ಕು ॥ ಇನ್ತೀ ಧರ್ಮ್ಮಮನಳಿದಾತನಾ ಕಪಿಲೆಯುಮನಾ ಬ್ರಾಹ್ಮ-

೩೮ ಣರುಮನಾ ತೀರ್ತ್ಥ[ದೊಳು ವಧಿಸಿದ ಮಹಾಪಾತಕನಕ್ಕುಂ*] ॥ ಸ್ವದತ್ತಾ ಪರದತ್ತಾಂ ವಾಯೋ ಹರೇತಿ ವಸುಂಧರಾಂ ಷಷ್ಠಿರ್ವ್ವ-

೩೯ ರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ॥

## ೪

## ವೀರಭದ್ರ ದೇವಸ್ಥಾನದ ಎದುರಿಗೆ ಬಿದ್ದ ಶಾಸನ

ARSIE 1943-44 No.2

ಕ್ರಿ.ಶ. ೧೧೨೫

೨' ಅಗಲ ೪' ಎತ್ತರದ ಕರಿಕಲ್ಲಿನಲ್ಲಿ ಶಿಲಾಫಲಕವಿದಾಗಿದ್ದು, ಮೇಲೆ ಅರ್ಧ ವೃತ್ತಾಕಾರವಿದೆ. ಮೇಲ್ಭಾಗದ ೧೦" ಭಾಗದಲ್ಲಿ ಖಡ್ಗ, ಪೂಜಾರಿ,

ಸೂರ್ಯ, ಶಿವಲಿಂಗ, ಚಂದ್ರ, ಆಕಳು ಹಾಗೂ ಕರುಗಳಿವೆ. ಕೆಳಗಿನ ೨" ಭಾಗದ ಪಟ್ಟಿಕೆಯಲ್ಲಿ ೨ ಸಾಲುಗಳ ಶಾಸನವಿದೆ. ನಂತರದ ೨' ಭಾಗದ ಫಲಕದಲ್ಲಿ ೨/೪" ಗಾತ್ರದ ಅಕ್ಷರಗಳಲ್ಲಿ ಶಾಸನವನ್ನು ೧೨ನೆಯ ಶತಮಾನದ ಅಕ್ಷರಗಳಲ್ಲಿ ಕೆತ್ತಲಾಗಿದೆ. ಸಾಲುಗಳ ಅಕ್ಷರಗಳು ಅಲ್ಲಲ್ಲಿ ಚಕ್ಕಳೆ ಹಾರಿದ್ದರಿಂದ ತ್ರುಟಿತಗೊಂಡಿದೆ.

ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಆಳುತ್ತಿರುವಾಗ, ಹಾನಗಲ್ಲ ಕದಂಬ ಮಹಾಮಂಡಲೇಶ್ವರ ತೈಲಪ ದೇವರು ಬನವಾಸಿ ಪನ್ನಿರ್ಚ್ಛಾಸಿರ ಪಾನುಂಗಲ್ಲೈನೂರನ್ನು ಆಳುತ್ತಿದ್ದನೆಂದು ತಿಳಿಸುತ್ತದೆ. ಹಾನಗಲ್ ಕದಂಬರ ಸಕಲ ಬಿರುದುಗಳನ್ನು ನೀಡುತ್ತದೆ. ನಂತರ ಹರಿಟಾಣದ ಮೂಲಸ್ಥಾನ ಕೇತೇಶ್ವರದೇವರಿಗೆ ಮಲ್ಲಗಾವುಡಗೆಜೆಯ ಎರಡು ಮತ್ತರು ಗದ್ದೆಯನ್ನು ದತ್ತಿಯಾಗಿ ಬಿಟ್ಟದ್ದನ್ನು ವಿವರಿಸಿ, ಕನ್ನಡ ಮತ್ತು ಸಂಸ್ಕೃತದಲ್ಲಿ ಫಲಶ್ರುತಿಯನ್ನು ಅರಹುತ್ತದೆ. ೨೧ನೆ ಸಾಲಿನಿಂದ ಶಿವಮಂಗಲ ಪದ್ಯದೊಂದಿಗೆ ಪ್ರಾರಂಭವಾಗಿ ಇನ್ನೊಂದು ದತ್ತಿಯನ್ನು ದಾಖಲಿಸುತ್ತದೆ. ಕಡಂಬ ಚಕ್ರೇಶ್ವರನ ಆಣತಿಯಂತೆ ಸಾತಗಾವುಂಡ ಕಣಗಿಲೆ ಬಯಲಲ್ಲಿ ೫೦ ಕಮ್ಮ ಕಾಳಗದ್ದೆ ಬಿಟ್ಟರೆ, ಅರುವತ್ತೊಕ್ಕಲು ಗಾಣದಲ್ಲಿ ಸೊಂಟಿಗೆ ಎಣ್ಣೆಯನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.

ಶಾಸನದ ೧೪-೧೫ನೆಯ ಸಾಲುಗಳಲ್ಲಿ ಬರುವ "ಸಕವರಿಷ ೧೦೪೭ನೆಯ ಕ್ರೋಧಿ ಸಂವತ್ಸರದ ಮಾಘ ಸುದ್ಧ . . . . ವಾರ ಸಂಕ್ರಾನ್ತಿಯುಂ ವ್ಯತಿಪಾತಮುಂ" ಎಂಬ ಮಿತಿಯು ಕ್ರಿ.ಶ. ೧೧೨೫ರ ಜನವರಿ ೨ ರಿಂದ ೨೦ರ ವರೆಗಿನ ಯಾವುದೋ ದಿನಕ್ಕೆ ಸಂಬಂಧಿಸಿದೆ.

## ಶಾಸನದ ಪಾಠ

೧ ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪ್ರಿಥ್ವೀವಲ್ಲಭ ಮಹಾರಾಜಾಧಿರಾಜ
೨ ಪರಮೇಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮ-
೩ ತ್ರಿಭುವನಮಲ್ಲದೇವ ವಿಜಯರಾಜ್ಯಮುತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧಮಾನಮಾ-
೪ ಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ ಇರೆ ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂ-
೫ ಡಳೇಶ್ವರಂ ಬನವಾಸೀಪುರವರಾಧೀಶ್ವರಂ ಜಯಂತೀ ಮಧುಕೇಶ್ವರದೇವ ಲಬ್ಧವರಪ್ರಸಾದಂ ಮೃಗ-
೬ ಮದಾಮೋದಂ ತ್ರಿಯಕ್ಷಯಕ್ಷಾ ಸಂಭವಂ ಚತುರಾಶೀತಿ ನಗರಾಧಿಷ್ಟಿತ . .
೭ ಚತುರರ್ಬ್ಭುಜಂ ಜಗದ್ವಿದತಾಷ್ಟಾದಸಾಸ್ವಮೇಧ ದೀಕ್ಷಾದೀಕ್ಷಿತಂ ಹಿಮವದು ಗಿರೀಂದ್ರ
೮ ರುಂದ್ರಸಿಕರಸಂಸ್ಥಾಪಿತ ಸ್ಫಟಿಕ ಶಿಲಸ್ತಂಭಂ ಮದಗಜ ಮಹಾಮಹಿಮಾಭಿರಾಮಂ
೯ ಕದಂಬಚಕ್ರಿ ಮಯೂರವರ್ಮ್ಮ ಮಹಾಮಹೀ । ಪಾಳಕುಳಭೂಶಣಂ ಪೆರ್ಮ್ಮಟ್ಟಿ ತೂರ್ಯ್ಯ
೧೦ ನಿರ್ಘೋಶಣಂ ಶಾಖಾಚರೇಂದ್ರ ಧ್ವಜ ವಿರಾಜಮಾನ ಮಾನೋತ್ತುಂಗ ಸಿಂಗಲಾಂಚನ ದತ್ತಾರ್ತ್ಥಿ-
೧೧ ಕಾಂಚನಂ ಸಮರಜಯಕಾರಣಂ ಕಡಂಬರಾಭರಣಂ ಮಾರ್ಕ್ಕೊಳ್ವರ ಗಂಡ ಪ್ರತಾಪ ಮಾರ್ತ್ತಂಡ
೧೨ ಮಂಡಳಿಕರ ಗಂಡ ಬಂಗಾಱನಿತ್ಯಖಿಳ ನಾಮಾವಳೀ ವಿರಾಜಿತರಪ್ಪ ಶ್ರೀಮನ್ಮಹಾಮಂಡಳೇಶ್ವರ
೧೩ ತೈಲಪದೇವರು ಬನವಾಸಿ ಪನ್ನಿರ್ಚ್ಛಾಸಿರಮುಮಂ ಪಾನುಂಗಲ್ಲೈನೂಱುಮಂ ದುಷ್ಟನಿಗ್ರಹ ಶಿ-
೧೪ ಷ್ಟ ಪ್ರತಿಪಾಳನದಿಂ ಸುಕಸಂಖತಾ ವಿನೋದದಿಂ ರಾಜ್ಯಂಗೆಯ್ಯುತ್ತಮಿಱ್ದು ಸಕವರಿಷ ೧೦೪೭-
೧೫ ನೆಯ ಕೋಧಿ ಸಂವತ್ಸರದ ಮಾಘ ಸುದ್ಧ . . . . ವರ ಸಂಕ್ರಾನ್ತಿಯುಂ ವ್ಯತಿಪಾತಮುಂ
೧೬ ಸೇರಿದಂದು ಸೀವಟಂ ಹರಿಟಾನದ ಮೂಲಸ್ಥಾನ ಶ್ರೀ ಕೇತೇಶ್ವರದೇವರ್ಗ್ಗೆ ಮಲ್ಲಗವುಡಗೆಜೆಯೊಳ-
೧೭ ಗೆ ಕೊಟ್ಟ ಗೆಜ್ದೆ ಮತ್ತ ೨ ಈ ಧರ್ಮ್ಮಮಂ ಪ್ರತಿಪಾಳಿಸಿದಾತಂ ವಾರಣಾಸಿಯಲುಂ ಗುರುಕ್ಷೇತ್ರ-
೧೮ ದೊಳಂ ಸಾಸಿರ ಕವಿಲೆಯಂ ಸಾಸಿರ್ವ್ವ ಬ್ರಾಹ್ಮಣರ್ಗ್ಗೆಯುಭಯಮುಖಿಯಂ ಕೊಟ್ಟ ಫಳಮಿದು
೧೯ ಧರ್ಮ್ಮವನಳಿದಾತಂ ವಾರಣಾಸಿಯಲು ಗುರುಕ್ಷೇತ್ರದಲುಂ ಸಾಸಿರ ಕವಿಲೆಯುಮಂ ಸಾ-
೨೦ ಸಿರ ಬ್ರಾಹ್ಮಣರು ಕೊಂದ ಫಳ @ ಸ್ವದತ್ತಂ ಪರದತ್ತಂ ವಾಯೋ ಹರೇತಿ ವಸುಂಧರಾ ಶಷ್ಟಿರ್ವ್ವರ್ಶ
೨೧ ಸಹಸ್ರಾಣಿ ವಿಷ್ಟಾಪ್ಟಾಂ ಕ್ರಿಮಿಃ ಜಾಯತೇ ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ
೨೨ ತ್ರೈಲೋಕ್ಯ ನಗರಾರಂಭಂ ಮೂಲಸ್ತಂಭಾಯ ಶಂಭವೇ @ ಫನಿರಾಜೀದ್ವಜ ಸಪ್ತನಸಪ್ತತಿ ಕಡಂ-
೨೩ ಬಾಧೀಶ ಪೆರ್ಮ್ಮಟ್ಟಿ ತೂರ್ಯ್ಯರವಷ್ಟಾದಶ ವಾಜಿಮೇಧ ಚತುರಗ್ರಾಸೀತಿ ಸಂಖ್ಯಾ ಪುರೇಶ್ವರ ರುದ್ರಾ
೨೪ . ಯನಿಂಹಲಕ ॥ ಹಿಮಶೈಳೇಂದ್ರ ಪರಿಸ್ತಾಪಿತ ಸೀತರಶಕ್ಯ್ಯದ್ಧ ಹಿರಣ್ಯಗರ್ಭಮಹಿ-
೨೫ ಮಾ ಕಾಡಂಬ ಚಕ್ರೇಶ್ವರಂ ಆ ಕಡಂಬ ಚಕ್ರೇಶ್ವರನಾ ಬೆಸದಿ ಮತ್ತ ಸಾತಗಾವುಂಡಂ ಕಣಗಿಲೆ ಬ-
೨೬ ಯಲಲು ಬಿಟ್ಟ ಕಾಳಗದ್ದೆ ಕಮ್ಮವಯ್ವತ್ತು ಗಾಣದಲು ಮೂಱುಂ . . ಯೋ ಅರ್ವ್ವತ್ತೊಕ್ಕಲು
೨೭ ಬಿಟ್ಟ ಸೊಂಟಿಗೆ ಎಣ್ಣೆ ಈ ಧರ್ಮ್ಮವಂ ಪ್ರತಿಪಾಳಿಸಿದರ್ಗ್ಗೆ ಮಂಗಳಮಹಾ ಶ್ರೀ ಶ್ರೀ @ @
೨೮ ಶ್ರೀ ಸರಸ್ವತ್ಯಾಯ ನಮಃ । ಗಣಪತ್ಯಾಯ ನಮಃ । @ @

೫
## ಪಾರ್ಶ್ವನಾಥ ಬಸದಿಯ ಶಾಂತಿನಾಥ ತೀರ್ಥಂಕರ ವಿಗ್ರಹದ ಪಾದಪೀಠದಲ್ಲಿರುವ ಶಾಸನ
ಸು ೧೨ನೆಯ ಶತಮಾನ

೩'೮" ಎತ್ತರದ ಕಾಯೋತ್ಸರ್ಗ ಭಂಗಿಯಲ್ಲಿ ನಿಂತ ತೀರ್ಥಂಕರ ವಿಗ್ರಹವಿದು. ಮೇಲೆ ಕೀರ್ತಿ ಮುಖವಿದ್ದು, ಮುಕೊಡೆಯಿದೆ, ಶಿರದ ಎಡ ಬಲಗಳಲ್ಲಿ ಚಾಮರಗಳಿವೆ. ಪಾದದ ಎಡಬಲಗಳಲ್ಲಿ ಯಕ್ಷ ಯಕ್ಷಿಗಳಿದ್ದಾರೆ. ಪಾದದ ಕೆಳಗೆ ಹರಿಣಿಯ ಲಾಂಛನವಿದೆ.

ಈ ಮೂಲಸಂಘದ ಕಾಣೂರ್ಗಣದ ಮೇಷಪಾಷಾಣ ಗಚ್ಚಕ್ಕೆ ಸೇರಿದ ಶ್ರೀ ಕನಕಚಂದ್ರಸಿದ್ಧಾಂತದೇವರ ಶಿಷ್ಯನಾದ ಹುಲ್ಲುಂಗೂರ ಕೇತಿಸೆಟ್ಟಿ ಎನ್ನುವವನ ಮಗ ಪಾರಿಸಯ್ಯ ಹರಿತಾಣದ ಬಸದಿಗೆ ಶಾಂತಿನಾಥ ತೀರ್ಥಂಕರನ ಪ್ರತಿಮೆಯನ್ನು ಮಾಡಿಕೊಟ್ಟನೆಂದು ತಿಳಿಸುತ್ತಿದ್ದು, ಲಿಪಿ ಸ್ವರೂಪದಿಂದ ಸುಮಾರು ೧೨ ಶತಮಾನದ ಶಾಸನವಿದಾಗಿದೆಯೆಂದು ಹೇಳಬಹುದು.

@ ಸ್ವಸ್ತಿ ಶ್ರೀ ಮೂಲಸಂಘದ ಕಾನೂರ್ಗ್ಗಣದ ಮೇಶಪಾ[ಷಾ*]
ಣ ಗಚ್ಛದ ಶ್ರೀ ಕನಕಚಂದ್ರಸಿದ್ಧಾಂತದೇವರ ಗುಡಂ(ಡ್ಡ*)
ಹುಲ್ಲುಂಗೂರ ಕೇತಿಸೆಟ್ಟಿ ಮಗ ಪಾರಿಸಯ್ಯ
ಹರಿತಾಣದ ಬಸದಿಗೆ ಮಾಡಿಸಿಕೊಟ್ಟ ಶಾನ್ತಿನಾಥದೇ
ವರು @ @ @

೬
## ಬಸದಿಯ ಗರ್ಭಗೃಹದ ಪಾರ್ಶ್ವನಾಥ ವಿಗ್ರಹದ ಪಾದಪೀಠದಲ್ಲಿರುವ ಶಾಸನ
ಸು. ೧೨ನೆಯ ಶತಮಾನ

೧೬೫ ಸೆ.ಮಿ. ಎತ್ತರ ೬೩ ಸೆ.ಮಿ. ಅಗಲದ ಕರಿಕಲ್ಲಿನ ಕಾಯೋತ್ಸರ್ಗ ಭಂಗಿಯ ವಿಗ್ರಹವಿದಾಗಿದೆ. ಹಿಂದೆ ಏಳು ಹೆಡೆಯ ಸರ್ಪವಿದೆ ಮೇಲೆ ಮುಕ್ಕೊಡೆಯಿದ್ದು, ಪಾರ್ಶ್ವದಲ್ಲಿ ಚಾಮರಧಾರಿಯರಿದ್ದು, ಪಾದಗಳ ಇಕ್ಕೆಲಗಳಲ್ಲಿ ಧರಣೇಂದ್ರ ಮತ್ತು ಪದ್ಮಾವತಿ ಯಕ್ಷಿಯರಿದ್ದಾರೆ. ಸು. ಹತ್ತನೆಯ ಶತಮಾನದ ಸುಂದರ ಅಕ್ಷರಗಳಲ್ಲಿ ಶಾಸನ ಕೆತ್ತಲಾಗಿದ್ದು, ಎಡಭಾಗದ ಕಲ್ಲಿನ ಚಕ್ಕಳ ಹಾರಿದೆ.

ಶ್ರೀ ಮೂಲಸಂಘದ ಸೂರಸ್ಥಗಣದ ವ್ಯಕ್ತಿಯೊಬ್ಬ ಪಾರ್ಶ್ವನಾಥ ತೀರ್ಥಂಕರನ ವಿಗ್ರಹ ಮಾಡಿಸಿದನೆಂದು, ಕೀರ್ತಿಯನ್ನು ಹೊಂದಲು ಮುಮುಕ್ಷಗಳಿಗಾಗಿ ಪ್ರತಿಷ್ಠಾಪಿಸಿದನೆಂದು ತಿಳಿಸುತ್ತದೆ. ಪ್ರತಿಮೆಯನ್ನು ಮಾಡಿದಾತ ರೂವಾರಿ ದೇವದಾಸಿ ಎಂದು ಹೆಸರಿಸುತ್ತದೆ. ಲಿಪಿ ಸಾದೃಶ್ಯದ ಸುಮಾರು ೧೨ನೆಯ ಶತಮಾನದ ಶಾಸನವಿದೆಂದು ಗುರುತಿಸಬಹುದು.

ಸಿಧಂ ಮೂಲಸಂಘಾನ್ವಯೇ. . . . . . .
ನ್ವಯೇ ಮಾಂ ಯುಧ್ಧಾ . . . . . . .
ಸೂರಸ್ಥ ನಾಮ್ನಾ ಗಣೇ . . . . . . ಲ್ಗ . . .
ಲಯೇ ನಗರಭೃಚ್ಚ್ರಿ ಪಾರ್ಶ್ವನಾಥ . . . .
ಪ್ರಾತಿಷ್ಠಾಮಕರೋನ್ಮು ಮುಷು ತಿಳ . . .
ಕೀರ್ತ್ಯಜ್ಞಯಾ ॥ ರೂವಾರಿ ದೇವರಾ[ಸಿ*]

೭
## ವೀರಭದ್ರದೇವರ ಗುಡಿ ಪಕ್ಕದಲ್ಲಿರುವ ಗಾಲಿಗಳು
ಸು. ೨೦ನೆಯ ಶತಮಾನ

ಸುಮಾರು ೫' ವ್ಯಾಸದ ಕಲ್ಲಿನ ಗಾಲಿಗಳ ಮೇಲೆ ಕೆಳಗಿನಂತೆ ಬರೆಯಲಾಗಿದೆ. ಬೆಳಗಾಂವಿಯ ಕೆ.ಎಲ್.ಇ. ಸಂಸ್ಥೆಯ ಸಂಸ್ಥಾಪಕರಲ್ಲಿ ಒಬ್ಬರಾದ ಅರಟಾಳ ರುದ್ರಗೌಡರು ತಮ್ಮ ಊರಿನ ವೀರಭದ್ರದೇವರಿಗೆ ಮಾಡಿಸಿದ ರಥದ ಗಾಲಿಗಳಿವು.

ಒಂದನೆಯ ಗಾಲಿ

ಓಂ

| | | |
|---|---|---|
| ಶ್ರೀ ವೀರಭದ್ರದೇವರ ಪ್ರೀತ್ಯಾರ್ಥ | ೧ | ಶ್ರೀ ವೀರಭದ್ರದೇವರ |
| ರಾ.ಬ. ರುದ್ರಗವುಡ ಚನ್ನವೀರ | ೨ | ಪ್ರೀತ್ಯರ್ಥ ರಾ.ಬ. ರುದ್ರ |
| ಗವಡ ಅರಟಾಳ ಇವರ ಕಾ | ೩ | ಗವಡ ಚನ್ನವೀರಗವಡ |
| ಣಿಕೆಯು | ೪ | ಅರಟಾಳ ಇವರ ಕಾಣಿಕೆ |

ಎರಡನೆಯ ಗಾಲಿ

ಓಂ





# ತುಮಕೂರು ಜಿಲ್ಲೆ ಮಧುಗಿರಿ ತಾಲ್ಲೂಕಿನ ಕಸಾಪುರ ಮಿಡಿಗೇಶಿ ಹಾಗೂ ಆಂಧ್ರಪ್ರದೇಶದ ಮಡಕಶಿರಾ ತಾಲ್ಲೂಕಿನ ಕೆಲವು ಅಪ್ರಕಟಿತ ಶಾಸನಗಳು

ಡಾ. ಎನ್. ನಂದೀಶ್ವರ*

**ಕಸಾಪುರ ಹರೆ ಶಾಸನ**

ಕಸಾಪುರ ಗ್ರಾಮವು ತಾಲ್ಲೂಕು ಕೇಂದ್ರವಾದ ಮಧುಗಿರಿಯಿಂದ ೨೨ ಕಿ.ಮೀ. ದೂರದಲ್ಲಿ, ಜಿಲ್ಲಾ ಕೇಂದ್ರವಾದ ತುಮಕೂರಿನಿಂದ ೬೩ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಪ್ರಾಗೈತಿಹಾಸದ ಕಾಲದಿಂದಲೂ ಬಹಳ ಪ್ರಸಿದ್ಧವಾದ ಗ್ರಾಮವಾಗಿದೆ. ಈ ಕಸಾಪುರ ಗ್ರಾಮದ ಛಲವಾದಿ (ಆದಿದ್ರಾವಿಡರ) ಬಸಣ್ಣನ ಹತ್ತಿರ ಕಂಚಿನ ಹರೆ ಇದೆ. ಈ ಹರೆ ಮಿಡಿಗೇಶಿಯ ಕುಂಚಿಟಿಗರ ಶೆಟ್ಟೇನವರ ಮನೆದೇವರಾದ ಶ್ರೀಲಕ್ಷ್ಮೀ ದೇವರಿಗೆ ಬಡೆಯುವ ಹರೆಯಾಗಿದ್ದು, ಇದರ ಮೇಲೆ ಅಪ್ರಕಟಿತವಾದ ಶಾಸನವಿದೆ. ಶ್ರೀಲಕ್ಷ್ಮೀ ದೇವತೆಗೆ ಹರೆಯನ್ನು ಮಾತ್ರ ಬಡಿಯುತ್ತಾರೆ. ಹರೆಯನ್ನು ೫ ಕಟ್ಟುಗಳಲ್ಲಿ ರಚಿಸಿ, ೪ ಮನೆಗಳನ್ನು ಮಾಡಲಾಗಿದೆ. ಶಾಸನವನ್ನು ೨ ಭಾಗಗಳಲ್ಲಿ ಬರೆಯಲಾಗಿದೆ.

ಶಾಸನದ ಪ್ರಾರಂಭದಲ್ಲಿ ಚಂದ್ರ ಎಡಭಾಗದಲ್ಲಿ ಬರೆದಿದ್ದರೆ, ಬಲಭಾಗದಲ್ಲಿ ಸೂರ್ಯನನ್ನು ಬರೆಯಲಾಗಿದೆ. ಶಾಸನವು ೬ ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಶಾಸನವು ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಶಾಸನದ ಕಾಲ ೧೭೮೭ ಜೂನ್ ೨೯ ಗುರುವಾರವಾಗಿರುತ್ತದೆ. ಮಿಡಿಗೇಶಿಯ ಕುಂಚಿಟಿಗ ಜನಾಂಗದ ಶೆಟ್ಟೇನವರ ಕುಲದ ಮನೆದೇವರಾದ ಮಿಡಿಗೇಶಿಯ ಶ್ರೀಲಕ್ಷ್ಮೀ ದೇವರಿಗೆ ಬೆಂಗಳೂರಿನ ಶೆಟಿಪನ ಮಗ ಯಿರ ಚಿಕಂಣನು ಮಾಡಿಸಿಕೊಟ್ಟ ಅರೆ. ಮಿಡಿಗೇಶಿಯ ಶಾನುಭೋಗ ಅರುಣಚಲೈನವರು ಬರೆದ ಬರಹವೆಂದು ಇದೆ. ಈ ಹರೆಯನ್ನು ಬಾಳಮಂಡೆ ಬಸಪನ ಮೊಮ್ಮಗನ ಕೊರಳಿಗೆ ಲಕ್ಷ್ಮೀದೇವರಿಗೆ ದೇವರ ಉತ್ಸವ ಹಬ್ಬ ಹರಿದಿನಗಳಲ್ಲಿ ಬಡಿಯಲು ಹಾಕಿಸಿರುವ ಹರೆಯಾಗಿರುತ್ತದೆ.

**ಶಾಸನ ಪಾಠ**

೧ ಪ್ಲವಂಗ ಸಂವತ್ಸರದ ಅಷಾಡ ಶು ೧೪ಲ್ಲು ಮಿ
೨ ಡಿಗೇಶಿ ಶ್ರೀ ಲಕ್ಷ್ಮೀ ದೇವತಿಗೆ ಬೆಂಗಳೂರು ಶೆಟೆಪ್ಪನ
೩ ಮಗ ಯಿರ ಚಿಕಂಣ ಮಾಡಿಶಿ ಕೊಟ ಅರ್‍ರೆ ಮಿಡಿಗೇ
೪ ಶಿ ಶಾನುಬಾಗ ಆರುಣಚಲೈನ ಬರಹ ॥
೫ ಯಿ ಹರ್‍ರೆ ಬಾಳಮಂಡೆ ಬಸಪನ ಮೊಮಗ
೬ ನ ಕೊರಳಿಗೆ ಹಾಕಿದ ಹರೆ ॥

**ಮಿಡಿಗೇಶಿ ಹರೆ ಶಾಸನ**

ಮಿಡಿಗೇಶಿಯ ಆದಿದ್ರಾವಿಡ ಜನಾಂಗದ ಕಾವೇರಪ್ಪನ ಮಗ ಹನುಮಂತರಾಯಪ್ಪನ ಹತ್ತಿರ ಒಂದು ಹರೆ ಇದೆ. ಇದನ್ನು ಗಡಿಭಾಗದ ಆಂಧ್ರಪ್ರದೇಶದ ಗೊಟ್ಟುಗುರಿಕೆಯಿಂದ ತಂದಿಟ್ಟುಕೊಂಡಿರುತ್ತಾರೆ. ಇದನ್ನು ಇಂದು ಎಲ್ಲಾ ದೇವರಿಗೂ ಬಡಿಯುತ್ತಾರೆ. ಇದರ ಮೇಲೆ ಅಪ್ರಕಟಿತವಾದ ಶಾಸನವಿದೆ.

ಹರೆಯನ್ನು ೫ ಕಟ್ಟುಗಳಲ್ಲಿ ರಚಿಸಿ, ೪ ಮನೆಗಳನ್ನು ಮಾಡಲಾಗಿದೆ. ಶಾಸನದ ಪ್ರಾರಂಭದಲ್ಲಿ ಎಡಭಾಗದಲ್ಲಿ ಚಂದ್ರನನ್ನು, ಬಲಭಾಗದಲ್ಲಿ ಸೂರ್ಯನನ್ನು ಬರೆಯಲಾಗಿದೆ. ಶಾಸನವನ್ನು ೨ ಭಾಗಗಳಲ್ಲಿ ಬರೆಯಲಾಗಿದೆ. ಶಾಸನವು ೮ ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಶಾಸನವು ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಶಾಸನದ ಕಾಲ ೧೭೭೭ ಏಪ್ರಿಲ್ ೮, ಸೋಮವಾರವಾಗಿರುತ್ತದೆ.

ಗೊಟ್ಟುಗುರಿಕೆ ಏತಂಣನ ಮಗನಾದ ನಲ್ಲನಿಂಗಣ್ಣನು ಶ್ರೀ ಪಾತಪ್ಪದೇವರಿಗೆ ಹರೆ ಬಡಿಯಲು ಭಕ್ತಿಯಿಂದ ಕೊಟ್ಟಿರುವರು. ಇಂದಿಗೂ ಗೊಟ್ಟುಗುರಿಕೆಯಲ್ಲಿ ತೆರೆದ ಅಂಕಣದಲ್ಲಿ ಶ್ರೀಪಾತಪ್ಪ ದೇವಸ್ಥಾನವಿದ್ದು ಇಂದು ನಾಯಕ (ತಳವಾರ) ಜನಾಂಗದವರ ಮನೆದೇವರಾಗಿದೆ. ಈ ದೇವರನ್ನು ಹಬ್ಬಹರಿದಿನಗಳಲ್ಲಿ ವಿಶೇಷವಾದ ಪೂಜೆ ಮಾಡುತ್ತಾರೆ. ನಾಯಕ ಜನಾಂಗದವರೇ ಅರ್ಚಕರಾಗಿರುತ್ತಾರೆ. ಪಕ್ಕ ಕರ್ನಾಟಕದ ಗಡಿಯಲ್ಲಿ ಗ್ರಾಮ ರೆಡ್ಡಿಹಳ್ಳಿ. ಈ ರಡಿಅಳಿ(ರೆಡ್ಡಿಹಳ್ಳಿ)ಯ ಹಳೆ ಮಗನಾದ ಚೆಲವಾದಿನಾಗನ ಮಗ ನರಸನ ಕೊರಳಿಗೆ ಹಾಕಿಸಿರುವರು. ರತ್ನಗಿರಿಯ ಚಿತ್ರಗಾರ ಪುಟ್ಟಲಿಂಗಪ್ಪ ಶಾಸವನ್ನು ಬರೆದಿರುವನು.

* ಪ್ರಾಂಶುಪಾಲರು, ಎಸ್.ಎಮ್.ಆರ್.ಪಿ.ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ-೫೭೨೧೨೫.

**ಶಾಸನ ಪಾಠ**

ಶ್ರೀ
ಶ್ರೀ ಹೇವಳಂಬಿ ಸಂಮತ್ಸರದ ಚೈತ್ರ ಶುದ ೧ ಯ
ಲ್ಲು ಶ್ರೀ ಮತು ಗೊಟ್ಟು ಗುರಿಕೆ ಏತಂಣನ ಮಗ
ನಲ್ಲ ನಿಂಗಣ ಶ್ರೀಪಾತಪ್ಪ ದೇವರಿಗೆ ಕೊಡಿಶಿದ
ಆರೆ ಭಕ್ತಿ ಸದರಿ ಆರೆ ಅಳೆ ಮಗನಾದ ರಡಿ
ಅಳಿ ಚೆಲವಾದಿ ನಾಗನ ಮಗ ನರಸನ ಕೊ
ಳಿಗೆ ಆಕಿದ ಅರೆ
॥ ರತ್ನಗಿರಿ ಚಿತ್ರಗಾರ
ಪುಟ್ಟಲಿಂಗಪ್ಪ

**ಹೇಮಾವತಿಯ ಶಾಸನ**

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿನ ಹೇಮಾವತಿಯು ನೊಳಂಬರ ರಾಜಧಾನಿಯಾಗಿತ್ತು. ಇಲ್ಲಿನ ಪ್ರಸಿದ್ಧವಾದ ಸಿದ್ದೇಶ್ವರ ದೇವಸ್ಥಾನದ ದ್ವಾರಬಂಧದಲ್ಲಿ ಅಪ್ರಕಟಿತವಾದ ಶಾಸನವಿದೆ. ಬಾಗಿಲುವಾಡಕ್ಕೆ ಹಾಕಿದ್ದ ಬೆಳ್ಳಿಯ ತಗಡನ್ನು ಜೀರ್ಣೋದ್ಧಾರದ ಸಂದರ್ಭದಲ್ಲಿ ತೆಗೆದಿದ್ದರಿಂದ ಈ ಶಾಸನ ಕಂಡುಬಂದಿತು.

ಶಾಸನವು ೨ ಸಾಲುಗಳಲ್ಲಿ ಬರೆಯಲ್ಪಟ್ಟಿದೆ. ಶಾಸನವು ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಲಿಪಿಯು ೧೨ನೇ ಶತಮಾನದ ಲಿಪಿಯನ್ನು ಹೋಲುತ್ತದೆ. ಗರೆಯ ಪಲೆಯಂಬುವನು ಹೂವಿನ ಕಲ್ಲುದ್ವಾರಬಂದವನ್ನು ಮಾಡಿಸಿದ ವಿಷಯ ಎಂದು ಊಹಿಸಬಹುದಾಗಿದೆ.

**ಶಾಸನ ಪಾಠ**

ಶ್ರೀಮತು ಗರೆಯ ಪಲೆಯ ಹುವಿನ ಕಲುದರವಂದ
ಮಾ
ಡಿಸಿದ

**ಪೇಲುಬಂಡೆಯ ಶಾಸನ**

ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿನ ಹೇಮಾವತಿಗೆ ಹತ್ತಿರದ ಗ್ರಾಮ ಪೇಲುಬಂಡೆ. ಇಲ್ಲಿನ ಪ್ರಸಿದ್ಧವಾದ ರಂಗನಾಥಸ್ವಾಮಿ ದೇವಸ್ಥಾನದ ಯಾಗಶಾಲೆಯ ದ್ವಾರಬಂಧದಲ್ಲಿ ಒಂದು ಅಪ್ರಕಟಿತವಾದ ಶಾಸನವಿದೆ.

ಶಾಸನವು ೩ ಸಾಲುಗಳಲ್ಲಿ, ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಲಿಪಿಯು ೧೮ನೇ ಶತಮಾನದ್ದಾಗಿದೆ. ಶಾಸನವು ನಿಡಗಲ್ಲು ಮಹಾನಾಯಕಾಚಾರ್ಯರಾದ ನಡಗಲ್ಲು ಇಮ್ಮಡಿ ತಿಮ್ಮಣ್ಣ ನಾಯಕನು ಯಾಗಶಾಲೆಯನ್ನು ಕಟ್ಟಿಸಿದ ವಿಷಯವನ್ನು ತಿಳಿಸುತ್ತದೆ. ಆದರೆ ಈ ಯಾಗಶಾಲೆಯ ಕಂಬಗಳನ್ನು ನೋಡಿದರೆ ಇದು ಇವರ ಕಾಲದಲ್ಲಿ ನಿರ್ಮಿತವಾದಂತೆ ಕಂಡುಬರುವುದಿಲ್ಲ. ಆದರೆ ಈಗಾಗಲೇ ಅಸ್ತಿತ್ವದಲ್ಲಿದ್ದ ಪೇಲುಬಂಡೆಯ ರಂಗನಾಥ ಸ್ವಾಮಿಯ (ನೊಳಂಬರ ಕಾಲದಲ್ಲಿ ರಚನೆ) ಶಿಥಿಲವಾದ ಪಳೆಯುಳಿಕೆ ಉಪಯೋಗಿಸಿ ಅಥವಾ ರಂಗನಾಥಸ್ವಾಮಿ ದೇವಸ್ಥಾನಕ್ಕೆ ಉಪಯೋಗಿಸಿ ಉಳಿದ ಕಂಬಗಳಿಂದ ಈ ಯಾಗಶಾಲೆಯನ್ನು ನಿರ್ಮಿಸಿರಬಹುದು. ನಿಡಗಲ್ಲು ನಾಯಕರ ವಂಶಾವಳಿಯಲ್ಲಿ ಹಲವಾರು ಜನ ತಿಮ್ಮಣ್ಣ ನಾಯಕರು ಬಂದರೂ ಹರತಿ ವಂಶಾವಳಿಯ ವೀರತಿಮ್ಮಣ್ಣ ನಾಯಕನೇ ಇರಬಹುದು. ಈತನು ೧೭೫೮ ರಿಂದ ೧೭೮೫ರವರೆಗೆ ಆಳ್ವಿಕೆ ನಡೆಸಿರುವನು.

**ಶಾಸನ ಪಾಠ**

೧ ಶುಭಮಸ್ತು ಪಾರ್ಥಿವ ಸಂವತ್ಸರದ ಮಾಘ ಶುಧ ೫
ಲೂ ಶ್ರೀ ಮನ್ಮಹಾನಾಂಯುಕಾಚಾರ್ಯರಾದ
ನಿಡುಗಲಯಿಮಡಿ ತಿಮಣ್ಣ ನಾಯ
೨ ಕ ಅಯ್ಯನವರ ರಾಯಸದ ರಾಂಂಣನೂ ಕಟ್ಟಿಸಿದ
ಪೆಯಲಬಂಡೆ ರಂಗನಾಥನ ಯಾಗಶಾಲೆಯ ಬಾಗಿಲಿ ವಾ
೩ (ವಾ)ಡದ (ಅಂಕಣ ಕ) ಮಂಗಳ ಮಹಾ ಶ್ರೀಶ್ರೀ
ರಾಮಚಂದ್ರ ಸಹಾಯ

[ಶಾಸನ ಓದಲು ನೆರವಾದ ಸುಂಕಂ ಗೋವರ್ಧನ, ಡಾ. ಪಿ.ವಿ. ಕೃಷ್ಣಮೂರ್ತಿ ಹಾಗೂ ಡಾ.ಬಿ. ರಾಜಶೇಖರಪ್ಪ ಅವರಿಗೆ ಕೃತಜ್ಞತೆಗಳು.]



**ಆಧಾರಸೂಚಿ**

**ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೧೨, ತುಮಕೂರು ಜಿಲ್ಲೆ, (ರೈಸ್ ಆವೃತ್ತಿ).

**ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೧೬. ತುಮಕೂರು ಜಿಲ್ಲೆ, ಪುರವಣಿ ಸಂಪುಟ.

**ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೫,** ಆಂಧ್ರಪ್ರದೇಶದ ಕನ್ನಡ ಶಾಸನಗಳು, ಭಾಗ ೧ ಮತ್ತು ೨, (ಸಂ. ಗಣೇಶ ಕೆ.ಆರ್. ಹಾಗೂ ಶೇಷಶಾಸ್ತ್ರಿ ಆರ್.,) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

ಡಾ. ಎನ್. ನಂದೀಶ್ವರ, ೨೦೦೮, **ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು,** ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ.

ಡಾ. ಎನ್. ನಂದೀಶ್ವರ, ೨೦೦೮ **ಸಿರಾ ತಾಲ್ಲೂಕು ದರ್ಶನ,** ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ.

**ಕುಂಚಿಟಿಗರ ಸಂದೇಶ** ಮಾಸ ಪತ್ರಿಕೆ.




# ಗುಬ್ಬಿ ತಾಲ್ಲೂಕು ಚಿಕ್ಕೆಗುಡ್ಡದ ಅಪ್ರಕಟಿತ ಕ್ರಯಪತ್ರ ಶಾಸನ

**ಡಾ. ಪಿ.ವಿ. ಕೃಷ್ಣಮೂರ್ತಿ***

**ತು**ಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು, ಚಿಕ್ಕೆಗುಡ್ಡ ಗ್ರಾಮದಲ್ಲಿ ದೊರೆತ ಈ ಶಾಸನವು ಈಗ ತುಮಕೂರು ವಿಶ್ವವಿದ್ಯಾನಿಲಯದ ಆವರಣದಲ್ಲಿ ಸಂರಕ್ಷಿತವಾಗಿದೆ. ಈ ಶಾಸನವು ನಮ್ಮ ಗಮನಕ್ಕೆ ಬಂದಂತೆ ಇದುವರೆಗೂ ಅಪ್ರಕಟಿತವಾಗಿದೆ. ಇದೊಂದು ಕ್ರಯಪತ್ರ ಶಾಸನವಾಗಿದ್ದು ಕೋನಾಕಾರದ ಕಂಬದಂಥ ನಿಲುಗಲ್ಲಿನ ಕೂಸಿನಮೇಲೆ ಕೆತ್ತಲಾಗಿದೆ. ಈ ಶಾಸನದ ಶಿಲೆಯು ಸುಮಾರು ೧೦/೩೫ ಸೆಂ.ಮೀ. ಅಗಲ, ೧೪೦ ಸೆಂ.ಮೀ. ಎತ್ತರ ಹಾಗೂ ಸುಮಾರು ೧೦/೧೮ ಸೆಂ.ಮೀ. ದಪ್ಪನೆಯ ಕಲ್ಲಿನದಾಗಿದ್ದು ಶಾಸನದ ಅಕ್ಷರಗಳನ್ನು ಮುಂಭಾಗ ಮತ್ತು ಶಾಸನದ ಬಲಬದಿಯಲ್ಲಿ ಕೊರೆಯಲಾಗಿದೆ. ಹತ್ತೊಂಬತ್ತನೆಯ ಶತಮಾನದ ಕನ್ನಡ ಲಿಪಿ ಮತ್ತು ಭಾಷೆಯಲ್ಲಿರುವ ಈ ಶಾಸನದ ಅಕ್ಷರಗಳ ಗಾತ್ರ ಸರಾಸರಿ ೫/೩.೫ ಸೆಂ.ಮೀ. ಪ್ರಮಾಣದಲ್ಲಿದ್ದು ಸಾಕಷ್ಟು ಆಳವಾಗಿ ಕೊರೆಯಲಾಗಿದೆ. ಈ ಶಾಸನದ ಭಾಷಾ ಪ್ರಯೋಗದಲ್ಲಿ ಸಮಕಾಲೀನವಾಗಿ ಪ್ರಚಲಿತವಿದ್ದ ರೀತಿಯನ್ನು ಅಂದರೆ ಪದ ಮಧ್ಯದಲ್ಲಿ ಸ್ವರಗಳ ಬಳಕೆ ಪದಾದಿಯಲ್ಲಿ 'ಈ', 'ಉ' ಸ್ವರಗಳ ಬದಲಾಗಿ ವ್ಯಂಜನ 'ಯೀ' 'ವು' ಗಳ ಪ್ರಯೋಗ, ಇಂತಹ ಪ್ರಯೋಗಗಳು ಸಮಕಾಲೀನ ಹಸ್ತಪ್ರತಿ, ಕೈಫಿಯತ್ತು ಇತ್ಯಾದಿ ಬರಹಗಳಲ್ಲಿ ವಿಶೇಷವಾಗಿ ಕಂಡುಬರುವುದು ಸರಿಯಷ್ಟೆ. ಉದಾ: ತಾಉ (ತಾವು), ನಿಲಿಸಿದೆಉ (ನಿಲ್ಲಿಸಿದೆವು), ಗಉಡ (ಗೌಡ), ಕೆಂಪೈಯ (ಕೆಂಪಯ್ಯ), ಯಿಂತಿ (ಇಂತಿ), ಯಿವರ (ಇವರ) ಇತ್ಯಾದಿ.

ಈ ಶಾಸನದಲ್ಲಿ ವಿಶ್ವಾವಸು ಸಂವತ್ಸರ ಚೈತ್ರ ಶುದ್ಧ ಪಂಚಮಿ ಎಂದು ಮಾತ್ರ ಕಾಲ ಸೂಚಿತವಾಗಿದೆ. ಭಾಷೆ ಮತ್ತು ಲಿಪಿ ೧೯ ನೆಯ ಶತಮಾನದ್ದಾಗಿದೆ. ಈ ಆಧಾರದಿಂದ ಶಾಸನೋಕ್ತ ಕಾಲವು ೧೭-೪-೧೮೪೫, ಶುಕ್ರವಾರಕ್ಕೆ ಸರಿಹೊಂದುತ್ತದೆ.

ಇದು ಶ್ರೀಮನ್ ಮಹಾನಾಯಕನ ಮಕ್ಕಳು ಬಡ ತಿಮ್ಮಯ್ಯನು ಹೆಂಜೆರೀ ಲೆಕ್ಕಯ್ಯನ ಮಗ ಹೆಂಜೆರೀ ಲಕ್ಕಯ್ಯನಿಗೆ ಕೊಟ್ಟ ಕ್ರಯಪತ್ರವಾಗಿದೆ. ಇದರಲ್ಲಿ ಮಲ್ಲಪ್ಪನಹಳ್ಳಿಯಲ್ಲಿರುವ ಹೊಲ, ಗದ್ದೆ, ಹೊರೆ ಹುಲ್ಲು, ಬೀಜ, ಎತ್ತು, ಸುವರ್ಣಾದಾಯ ಎಲ್ಲವನ್ನೂ ಕ್ರಯವಾಗಿ ನಿರಯಸವಾಗಿ ನೀಡಿದ ವಿವರವಿದೆ. ಈ ಸಂದರ್ಭದಲ್ಲಿ ಮಲ್ಲಪ್ಪನಹಳ್ಳಿಯ ಚಿಣ್ಣಪ್ಪಗೌಡನ ಮಗ ನಿಂಗೇಗೌಡ, ಸುರಗಿಹಳ್ಳಿಯ ಮಾಳೇಗೌಡನ ಮಗ ದೊಡ್ಡಕೆಂಪಯ್ಯ, ತೆನಹಳ್ಳಿಯ ಸಿಂಗಯ್ಯ – ಇವುರುಗಳು ಸಾಕ್ಷಿಯಾಗಿರುತ್ತಾರೆ.

ಈ ಕ್ರಯಪತ್ರ ಶಾಸನವನ್ನು ಕೊಟ್ಟಿರುವವರು ಮಹಾನಾಯಕನ ಮಕ್ಕಳೆಂದು ಉಲ್ಲೇಖಗೊಂಡಿರುವುದು ಗಮನಾರ್ಹ ಅಂಶ. ಮಹಾನಾಯಕ, ನಾಯಕಾಚಾರ್ಯ, ಎಂಬುದು ಸಾಮಾನ್ಯವಾಗಿ ವಿಜಯನಗರ ಅರಸರ ಕಾಲದ ನಾಯಕ ಪಾಳೆಯಗಾರ ವಂಶೀಯರಿಗಿದ್ದ ಬಿರುದಾಗಿತ್ತು. ಹಾಗಾಗಿ ಪ್ರಸ್ತುತ ಕ್ರಯಪತ್ರ ಶಾಸನವನ್ನು ಕೊಟ್ಟವರು ನಾಯಕವಂಶಕ್ಕೆ ಸೇರಿದ ಬಡತಿಮ್ಮಯ್ಯ. ಕೊಂಡುಕೊಂಡವರು ಅಥವಾ ಪಡೆದವರು ಹೆಂಜೇರು (ಇಂದಿನ ಆಂಧ್ರದ ಮಡಕಶಿರಾ ತಾಲ್ಲೂಕಿನ ಹೇಮಾವತಿ) ಸ್ಥಳದ ಲೆಕ್ಕಯ್ಯನ ಮಗ ಲಕ್ಕಯ್ಯ. ಕ್ರಯಕ್ಕೆ ಕೊಟ್ಟಿರುವ ಪ್ರದೇಶ ಮಲ್ಲಪ್ಪನಹಳ್ಳಿಯ ಹೊಲ, ಗದ್ದೆ, ಇತ್ಯಾದಿ. ಅವಾದರೂ ಮಹಾನಾಯಕ ಬಡತಿಮ್ಮಯ್ಯನ ಮಕ್ಕಳ 'ಅಶೀಕೀ'ಗೆ ಸಂದಂತಹದ್ದು. ಇಲ್ಲಿ ಪ್ರಯೋಗವಾಗಿರುವ 'ಅಶೀಕೀ ಎಂಬುದು ಪ್ರಾಯಶಃ 'ಅಸಿಕ' ಎಂಬುದರ ಅಪಭ್ರಂಶ ರೂಪವೆಂದು ತೋರುತ್ತದೆ. 'ಅಸಿಕ'ವೆಂದರೆ ಸಣ್ಣ ಕತ್ತಿ, ಕಠಾರಿ ಎಂಬ ಅರ್ಥಗಳಿವೆ. ಬಹುಶಃ ಬಡತಿಮ್ಮಯ್ಯನ ಮಕ್ಕಳು ಹಿಂದೆ ಯಾವುದೋ ಹೋರಾಟದಲ್ಲಿ ಹೋರಾಡಿರಬೇಕು. ಆ ಕಾರಣವಾಗಿ ಅವರಿಗೆ ಈ ಮಲ್ಲಪ್ಪನಹಳ್ಳಿ (ಮಲಪನಹಳ್ಳಿ) ಗ್ರಾಮವು ಬಾಳ್ಗಚ್ಚು ರೀತಿಯ ಅಂದರೆ ಕತ್ತಿ ಕಾಳಗಕ್ಕೆ ನೀಡಲಾಗಿದ್ದ ರಕ್ತಗೊಡಗೆ ರೀತಿಯ ದತ್ತಿ ಭೂಮಿಯಾಗಿದ್ದಿತೆಂದು ತೋರುತ್ತದೆ. ಪ್ರಸ್ತುತ ಆ ಗ್ರಾಮದ ಭೂಮಿಯನ್ನು ಹೆಂಜೇರಿ ಲಕ್ಕಯ್ಯನಿಗೆ ಕ್ರಯಕ್ಕೆ ನೀಡಿರುವ ಸಂಗತಿ ಈ ಕ್ರಯಪತ್ರ ಶಾಸನದಿಂದ ತಿಳಿದುಬರುತ್ತದೆ.

* # ೩೭, ಶ್ರೀಕೃಷ್ಣ ಕೃಪಾ, ೩ನೆಯ ಅಡ್ಡರಸ್ತೆ, ಸುಬ್ಬಣ್ಣ ಲೇಔಟ್, ಹರಿನಗರಕ್ರಾಸ್, ಬೆಂಗಳೂರು–೫೬೦೦೬೨.

ಈ ಶಾಸನದ ಕ್ರಯಪತ್ರದಲ್ಲಿ ಮಾರೆಂತೆಂದರೆ ಎಂಬ ಪ್ರಯೋಗವಿದೆ. ಇದು ಸಾಮಾನ್ಯವಾಗಿ ಇಂತಹ ದಾನಶಾಸನಗಳಲ್ಲಿ ಕಂಡುಬರುವ ಕ್ರಮವೆಂತೆಂದರೆ ಎಂಬುದರ ಪರ್ಯಾಯವೆಂದು ತಿಳಿಯಬಹುದು. ಮಾರು ಎಂದರೆ ವಿಕ್ರಯ ಎಂದು ಕೇಶಿರಾಜನ ಶಬ್ದಮಣಿದರ್ಪಣದ ಧಾತು ಪಾಠದಲ್ಲಿ ಉಕ್ತವಾಗಿದೆ. ಈ ಅರ್ಥವು ಕೂಡಾ ಪ್ರಕೃತ ಶಾಸನದ ದಾಖಲಾತಿಗೆ ಸರಿಹೊಂದುತ್ತದೆ.

ಈ ಶಾಸನದಲ್ಲಿ ಉಕ್ತವಾಗಿರುವ ಮಲ್ಲಪ್ಪನಹಳ್ಳಿಯು ಪ್ರಸ್ತುತ ಶಾಸನ ದೊರೆತ ಬಿಕ್ಕೇಗುಡ್ಡ ಗ್ರಾಮದ ನೆರೆಯಲ್ಲೇ ಇರುವ ಗ್ರಾಮವಾಗಿದೆ. ಶಾಸನೋಕ್ತ ಸುರಗಿಹಳ್ಳಿ, ತೆನಹಳ್ಳಿಗಳು ಗುಬ್ಬಿ ತಾಲ್ಲೂಕಿನ ಗ್ರಾಮಗಳೇ ಆಗಿವೆ.

### ಶಾಸನಪಾಠ

ವಿಶ್ವವಸು ಸಂವತ್ಸರದ ಚ
ಯಿತ್ರ ಶುದ್ಧ ೫ ರಲು ಶ್ರೀಮನು
ಮಹಾನಾಯಕನ ಮಕಳು ಬ
ಡ ತಿಂಮಯ್ಯನೂ ಹೆಂಜೆರೀ
ಲೆಕ್ಕಯ್ಯನ ಮಗ ಹೆಂಜೆರೀ
ಲಕ್ಕಯ್ಯಕೆ ಕೊಟ್ಟ ಕ್ರಯಪ
ತ್ರದ ಮಾರೆಂತೆಂದರೆ ತಂಮ
ಮಕ್ಕಳ ಅಶೀಕೀಗೆ ಸಲುವ
ಮಲ್ಲಪನಹಳಿಯೊಳಗೆ
೧೦ ಸಲುವಂತ ಹೊಲ ಗದ್ದೆ ಹೀ
೧೧ ಯ್ಯ ಚೌಟ್ಟ್ಯ ಹೊರೆ ಹುಲ್ಲು
೧೨ ವೊರ ಭತ್ತ ಚಳಿಕಂತ್ತೆ ಆ
೧೩ ಯದಾಯ ಬೀಜ ಎತ್ತಿನ
೧೪ ಕು ಸುವರ್ಣದಾಯವೆಲ್ಲ
೧೫ ವನು ತಾಉ ನಿಮಗೆ ಕ್ರಯ
೧೬ ವಾಗಿ ಗ ೪ ಅಕ್ಷರದಲು ನಾಲ್ಕು
೧೭ ವರಹಕ್ಕೆ ಕೊಟ್ಟು ನಿರಯಸ
೧೮ ತಾಉ ನಿಲಿಸಿದ[ಕ]ಲು ಯಿಂತಾ
೧೯ ದುದಕ್ಕೆ ಸಾಕ್ಷಿಗಳು ಮಲ್ಲಪ
೨೦ ನಹಳ್ಳಿಯ ಸ್ಥಳದ ಗಉಡ
೨೧ ಚೆಂಣ್ಣಪಗಉಡನ ಮಗ
೨೨ ನಿಂಗೇಗಉಡ ಸುರಗಿಹ
೨೩ ಳ್ಳಿಯ ಮೊಳೆಗಉಡನ ಮಗ
೨೪ ದೊಡ ಕೆಂಪೈಯನು ತೆನಹ
೨೫ ಳ್ಳಿಯ ಪಟಣದ ಸಿಂಗಯ್ಯ
೨೬ ಯಿಂತಿ ಯಿವರ ಉಭೇಯಾನ
೨೭ ತದಿರೇ ಸಾಕ್ಷಿಗಳೊಪ್ಪಿತ ಮುಲ
೨೮ ಕ . . . ಕಪಟವಿನೊಪ್ಪಿತ ಸಂತ್ತೆ
೨೯ ಯನ ಸಹನಿದ . . .
೩೦ ಹಯಗಕ್ಕಾ ಪೂರ್ಣದಾ
೩೧ ಯ್ಯಾ ಅಪರಾಧಿ ಸಲು[ವ ಕ್ರ]

### ಶಾಸನದ ಬಲಭಾಗದಲ್ಲಿರುವ ಬರಹ

೩೨ ಯ ಪತ್ರ
೩೩ ತದ ಪೀ
೩೪ [ತ ?] ಸಾಕಾಲ್ಯ
೩೪ ವಾಗಿ ಸಂತ್ತು
೩೫ ಬಡತಿಂಮ
೩೬ ಯ್ಯನಾ ದೈವ
೩೭ ಹು ಕೈಯ್ಯ
೩೮ ಲದೆ
೩೯ ನಡೆವಾರೂ
೪೦ ಲಕ್ಷ್ಮೀದೇವರು
೪೧ ದಾಯಾದ ಸಾ
೪೨ ವಂತರ ವೊ
೪೩ ಪಿಸಿ ಮಾರಿದೆ
೪೪ ಉ ಶ್ರೀ ಹರಿಹ
೪೫ ರಾದಿಗಳೂ

[ಈ ಶಾಸನದ ಪಡಿಯಚ್ಚು ತೆಗೆದುಕೊಳ್ಳಲು ಎಲ್ಲಾ ವಿಧದ ಅನುಕೂಲಗಳನ್ನು ಮಾಡಿಕೊಟ್ಟು, ಸಹಕಾರವನ್ನು ನೀಡಿದ ತುಮಕೂರು ವಿಶ್ವವಿದ್ಯಾನಿಲಯದ ಡಾ॥ ಡಿ.ವಿ. ಗುಂಡಪ್ಪ ಕನ್ನಡ ಅಧ್ಯಯನ ಕೇಂದ್ರದ ಉಪಪ್ರಾಧ್ಯಾಪಕರಾದ ಡಾ॥ ಶ್ರೀಪಾದಭಟ್ಟರಿಗೂ ಮತ್ತು ವಿಭಾಗದ ಮುಖ್ಯಸ್ಥರಿಗೂ ನಾವು ತುಂಬಾ ಕೃತಜ್ಞರಾಗಿದ್ದೇವೆ].






# ಗೋಕರ್ಣದಲ್ಲಿ ದೊರೆತ ಕೆಳದಿ ಚೆನ್ನಮ್ಮಾಜಿ ಬಸವಪ್ಪನಾಯಕರ ಕಾಲದ ನಿರೂಪಗಳು

**ಡಾ. ಕೆಳದಿ ವೆಂಕಟೇಶ್ ಜೋಯಿಸ್***

**ಗೋ**ಕರ್ಣ ಕ್ಷೇತ್ರದಲ್ಲಿ ಶ್ರೀ ಹೆದ್ಲಿ ಅಶೋಕ್, ಶ್ರೀ ನಿತಿನ್, ಇವರೊಡನೆ ಸರ್ವೇಕ್ಷಣೆ ಕೈಗೊಂಡ ಸಂದರ್ಭದಲ್ಲಿ ಶ್ರೀ ವಿನಾಯಕ ಶಿವರಾಂಭಟ್ ರಮಣಿ ಮನೆ ರಥದ ಬೀದಿ, ಗೋಕರ್ಣ ಇವರಲ್ಲಿ ದೊರೆತ ಕೈಬರಹದ ಪುಸ್ತಕ ಗಮನ ಸೆಳೆಯಿತು. ಇದು ಸುಮಾರು ಹದಿನೆಂಟನೇ ಶತಮಾನದ ಕೊನೆಯ ಕಾಲಘಟ್ಟದಲ್ಲಿ ಪ್ರತಿ ಮಾಡಿಕೊಂಡ ಪುಸ್ತಕವಾಗಿತ್ತು. ಈ ಪುಸ್ತಕದಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ನಿರೂಪಗಳಿಗೆ. ಎಲ್ಲವೂ ಮೋಡಿ ಅಕ್ಷರದಲ್ಲಿ ಬರೆಯಲ್ಪಟ್ಟಿವೆ. ಎರಡು ಮರಾಠಿ ಮೋಡಿಯಲ್ಲಿ ಮತ್ತು ಎರಡು ಅರೆಬಿಕ್‌ನಲ್ಲಿದೆ. ಇವು ಗೋಕರ್ಣ ಇತಿಹಾಸದ ಮೇಲೆ ಬೆಳಕು ಚೆಲ್ಲುವಂತಹುದಾಗಿವೆ. ಈ ನಿರೂಪಗಳು ಬನವಾಸಿ ಕದಂಬರು, ವಿಜಯನಗರದರಸರು, (ಈ ನಿರೂಪವನ್ನು ಹಂಪಿ ಉತ್ಸವ ೨೦೧೧ರಲ್ಲಿ ನಡೆದ ವಿಜಯನಗರ ಇತಿಹಾಸ ವಿಚಾರ ಸಂಕಿರಣದಲ್ಲಿ ಪ್ರಕಟಿಸಲಾಗಿದೆ) ಚನ್ನಭೈರರಸರು, ಉತ್ತರ ಕನ್ನಡ ಜಿಲ್ಲೆಯಲ್ಲಿ ಆಡಳಿತ ನಡೆಸಿದ ತುಂಡರಸರುಗಳು, ಕೆಳದಿ ಸೋಮಶೇಖರನಾಯಕನ ಕಾಲದ ನಿರೂಪ ಕುರಿತು ೨೦೧೦ರಲ್ಲಿ ಆದಿಚುಂಚನಗಿರಿಯಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾಡೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಪ್ರಬಂಧ ಮಂಡಿಸಲಾಗಿದೆ. ಈ ನಿರೂಪದಲ್ಲಿ ಉಲ್ಲೇಖವಾಗಿರುವ ಕುಂಭಕರ್ಣೇಶ್ವರ, ರಾವಣೇಶ್ವರ, ವಿಭೀಷಣೇಶ್ವರ ದೇವಾಲಯಗಳು ಇಂದೂ ಅಲ್ಲಿವೆ. ಅವುಗಳು ಪುರೋಹಿತರ ಮನೆಯ ಒಳಭಾಗದಲ್ಲಿ, ಬಚ್ಚಲ ಹಿಂಭಾಗದಲ್ಲಿ ಸೇರಿಹೋಗಿವೆ. ಇಂದೂ ಅವುಗಳಿಗೆ ಪೂಜೆ ನಡೆಯುತ್ತಿರುವುದು ಕಂಡುಬರುತ್ತದೆ. ಉಳಿದಂತೆ ಕೆಳದಿ ಚೆನ್ನಮ್ಮಾಜಿ ಮತ್ತು ಕೆಳದಿ ಬಸವಪ್ಪನಾಯಕ ಮೊದಲಾದವರುಗಳ ಕಾಲದ ನಿರೂಪಗಳೂ ಅಲ್ಲಿದ್ದು ಅವುಗಳಲ್ಲಿ ಕೆಲವನ್ನಾಧರಿಸಿ ಇಲ್ಲಿ ಪ್ರಬಂಧವನ್ನು ಮಂಡಿಸಲು ಪ್ರಯತ್ನಿಸಿದ್ದೇನೆ. ಶಿಲಾ ಶಾಸನದ ಪ್ರತಿಯೂ ಇದರಲ್ಲಿ ದಾಖಲಾಗಿದೆ. ಈ ಹಳೆಯ ಪುಸ್ತಕವನ್ನು ನನ್ನ ಸಂಶೋಧನೆಗೆ ಒದಗಿಸಿದ ಶ್ರೀ ರಮಣಿರವರಿಗೆ ಸಹಕರಿಸಿದ ಎಲ್ಲರಿಗೂ ನಾನು ಅಭಾರಿಯಾಗಿದ್ದೇನೆ. ಇಂತಹ ದಾಖಲೆಗಳು ದೊರೆತಲ್ಲಿ ಇತಿಹಾಸಕ್ಕೆ ಉತ್ತಮ ಆಕರಗಳಾಗುವುದರಲ್ಲಿ ಎರಡು ಮಾತಿಲ್ಲ.

### ನಿರೂಪದ ಪಾಠ

**ಪುಸ್ತಕದಲ್ಲಿ ದಾಖಲಾಗಿರುವ ಪುಟ ಸಂಖ್ಯೆ ೨೬**

ರುದರೊದ್ಗಾರ್ರಿ ಸಂವತ್ಸರ ಫಾಲ್ಗುಣ ಶು ೧೦ ಲು ಶ್ರಿಮತ್ಕೆಳದಿಚೆ

೦ನಂಮಾಜಿಯವರ್‍ರುದೆವಂಣಗೆ ಬರಶಿಕಳುಹಿದ ಕಾರ್ಯ

ಗೊಕರ್ನದ ಶ್ರಿ ಮಹಾಬಲೆಶ್ವರ ದೆವಸ್ಥಾನದ ಪ್ರಾಕಾರದ ಹೊರ

ಗಣ ಆದಿ ಗೊಕರ್ನೆಶ್ವರ ದೆವಸ್ಥಾನದ ಸಮಿಪದಲ್ಲಿ।ಕಳಸಂ

ಣ ನಾರಾಯಣನ್ನು ದೆವಸ್ಥಾನ ಕಟ್ಟಿಶಿ।ಕಳಶೆಶ್ವರ ದೆವರ ಪ್ರತಿ

ಷ್ಠೆ ಮಾಡಿಶಿ।ಆದೆವತ್ತಾ ವೆಚಕ್ಕೆ। ಮಿಡಿಜೆ ಶಿಮೆ ದೆಶಯಿ

ರಾಮನಾಯ್ಕ। ಬಾಬನಾಯ್ಕ । ಮರ್ತು ನಾಯ್ಕನ ಉಂಬಕ್ಕಿ ಉ

**ಪುಟ ೨೫**

ತ್ತಾರ ದೊಳಗೆ ಅವಂದಿರ ಕೈಯ ಗ ೧೨ ಹಂನ್ನೆರಡು ವರಹಾ

೦ನಾ ಭುವಿಯಂನು ನುರಿಯಿಪತು ವರ ಹೊಂನು ವಿಶ್ವೆ

ಶ್ವರ ದೆವಸ್ತಾನದ ಭಂಡಾರಕ್ಕೆ ಕ್ರಯ ಸಾಧನ ಬರಶಿ।ದೆವತ್ತಾ

ವೆಚ್ಚಕ್ಕೆ ನಡದುಬರುಥೆನೆಂದು ಹೆಳಿಕೊಂಡ ಸಂಮಂಧ।ಮಿ

ಡಿಜೆ ಶಿಮೆ ಯಿಂದಾ ಅವರಿಗೆ । ಉಂಬಳಿ ಉತ್ತಾರವಾದ ಬೆಟ್ಟಕುಳಿ

ವಳಗೆ ಹಂಣೆನಾಗರ ಸ್ತಳದಲ್ಲಿ ಗ ೧೨ ಹಂನ್ನೆರಡು ವರಹಾಂನ್ನು

* ಕ್ಯೂರೇಟರ್, ಕೆಳದಿ ಮ್ಯೂಸಿಯಂ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ-೫೭೭೪೦೧.

ಸ್ತೆಯಂನ್ನು ಕಳಶೇಶ್ವರ ದೇವರ ದೇವತ್ತಾ ವೆಚ್ಚಕ್ಕೆ ಶಿವಾರ್ಪಿತವಾ
ಬಿಟ್ಟು ಯಿದೆವೆ।ಸಾಧನ ಪ್ರಮಾಣ ಸ್ವಾಸ್ತೆ ಭುಮಿಯಂನು
ಹಬಲೆಶ್ವರ ದೆವರ ಸಿಸ್ತಿಗೆ ಕುಡಿಕೊಂಡು ಆ ಕಳಶೆಶ್ವರ
ವ
ದೇವತಾ ಸೆವೆನಡೆಸಿ ಬಹ ರಿತ್ತಿ ಕಟು ಮಾಡಿಶಿ ಯಿದೆವೆ।
ು
ತ್ತಾ ಅವರು ವಿಂಗಡಿಸಿಕೊಟು ಭುಮಿಯಂನು ದೆವಸ್ತಾನದ।
ಣೆಗಾರನ ಹವಾಲೆ ಮಾಡಿ ಕೊಟು ಯಿಾ ಕಾಗದವನು
ನ
ವರ ಕಡಿತಕ್ಕೆ ಬರಶಿ ತಿರುಗಾ ಯಿವರ ವ್ಸಕ್ಕೆ ಕೊಡಿಸುವದು
ುಂದು ಬರಶಿಕೊಟ ನಿರುಪು । ಯಿ ಅಸಲು ಶಿಖೆ ನಿರು
ವೆಂಕದ್ರಿ ರಾಂಭಟನ ವಶಕೆ ಯಿರುತದೆ ಅದರ ನಖಲು

ಸಾರಾಂಶ : ಕೆಳದಿ ಚೆನ್ನಮ್ಮಾಜಿಯವರು ಗೋಕರ್ನದ ಮಹಾಬಲೇಶ್ವರ ದೇವಸ್ಥಾನದ ಪ್ರಾಕಾರದ ಹೊರಗಣ ದಿ ಗೋಕರ್ಣೇಶ್ವರ ದೇವಸ್ಥಾನದ ಸಮೀಪದಲ್ಲಿ ಇರುವ ಳಸಂಣ ನಾಅರಾಯಣ ದೇವಸ್ಥಾನ ಕಟ್ಟಿಸಿ ಕಳಸೇಶ್ವರ ೀವರ ಪ್ರತಿಷ್ಠೆ ಮಾಡಿಶಿ ಆ ದೇವತಾ ವೆಚ್ಚಕ್ಕೆ ಮಿಡಿಜೆ ಶಿಮೆ ೀಸಾಯಿ ರಾಮನಾಯ್ಕೆ, ಬಾಬನಾಯ್ಕ ಮರ್ತು ನಾಯ್ಕ ವರ ಉಂಬಳಿಯಲ್ಲಿ ಅವರಿಂದ ೧೨ ವರಹಾ ಮತ್ತು ಾರ ಯಿಪ್ಪತ್ತು ಹೊನ್ನು ವಿಶ್ವೇಶ್ವರ ದೇವಸ್ಥಾನಕ್ಕೆ ಬರಸಿ ೀವತಾ ವೆಚ್ಚಕ್ಕೆ ನಡದು ಬರುವಂತೆ ಕೇಳಿಕೊಂಡ ಸಂಬಂಧ ಂಣಿನಾಗರ ಸ್ಥಳದಲ್ಲಿ ಗ ೧೨ ವರಹಾಂನ್ನು ಸ್ವಾಸ್ಥೆಯನ್ನು ಳಶೇಶ್ವರ ದೇವರ ದೇವತಾ ವೆಚ್ಚಕ್ಕೆ ಶಿವಾರ್ಪಿತವಾಗಿ ಬಿಟ್ಟ ಾನದ ವಿವರವನ್ನು ಈ ನಿರೂಪ ಒಳಗೊಂಡಿದೆ.

**ುಟ ಸಂಖ್ಯೆ: ೨೭**

ನಂದ ಸಂವತ್ಸರದ ಆಶ್ವಿಜ ಬ ೧೦ಲ್ಲು ಶ್ರೀಮತ್ತು। ಕೆಳದಿ
ಂನಂಮಾಜಿಯವರು।ನಾರಣಪ್ಪಗೆ।ಬರ್ಸಿ ಕಳುಹಿದಕಾ
ರ್ಯ।ಮಿಡಜೆ ಶಿಮೆ ದೆಸಾಯಿ। ಅಚವೆಚಂದ್ರಾಯಿಣಿ ಹೆ
ಾರಗೆ।ಮಿಡಜೆ ಶಿಮೆಯೊಳಗಣ।ಅಚವೆ ಗ್ರಾಮದಿಂದಾ
ಖೆ ಗ ೭೩೭॥ ೦ ದೆಸಾಯಿಗಳ ಪಟೆ ಗ ೧೩॥೦ ಉಭಯ
ಗ ರೆಖೆ ಯೆಳನುರ ಆ್ಯವತ್ತ ವಂದು ವರಹಾ
ಉಂಬಳಿ ಉತ್ತಾರವಾಗಿ ಪರಿಧಾವಿ ಸಂವಸ್ತರದಲ್ಲು ।
ಳ೫೦।ನುಳದು।ಶುಧ ಅರಮನೆಗೆ ಬಾಹ ಸಿಸ್ತು ಗ ೩೦೧ಹಾಂ
ುಂನುರ್ರ ವಂದು ವರಹಾಂನ್ನೂ। ಆ ಶಿಮೆನಾಂಣ್ಯ ವ
ನೆ ತ್ತರ್ರಿಶಿ ಕೊಳುತ್ತಾ ಬಾಹದು। ಯಿ ಶಿಸ್ತಿನವಳಗೆ ಪ್ರಾ
ಕುನಷ್ಟದಿಂದ ಕುಡಿದ ಭುಮಿಗೆ।ಸಸಿ ಹಾಕಿಕೊಂಡು
ಆಉತ್ಪತ್ತಿಯಂನು ಆತನೆ ಅನುಭವಿಶಿಕೊಂಡು
ಬಂದಾನು।ಯಿ ಕಾಗದವ। ಶ್ಯಾನುಭೋಗರ್ರಿಗೆ ಬರಶಿ
ತ್ತಿರ್ರುಗಿ ಯಿತ್ತನ ವಶಕ್ಕೆ ಕೊಡುವದು ಯಂತ್ತಾ ಬರದ
ಶಿಕ್ಕೆ ನಿರ್ರುಪಿನ ನಕಲು
ಯಿನಿರ್ರುಪ ಕಾಗದ ಉ । ಅಚುವೆ ಹೆಬಾರನ ವಶಕ್ಕೆ ಯಿ
ರ್ರುತ್ತಧೆ.

ಸಾರಾಂಶ : ಆನಂದ ಸಂವತ್ಸರದಲ್ಲಿ ಕೆಳದಿ ಚೆನ್ನಮ್ಮಾಜಿಯವರು ನಾರಣಪ್ಪಗೆ ಬರಸಿ ಕಳುಹಿಸಿದ ಕಾರ್ಯ ಇದಾಗಿದೆ. ಮಿಡಜೆ ಶಿಮೆ ದೇಸಾಯಿ ಅಚವೆ ಚಂದ್ರಾಯಿಣಿ ಹೆಬಾರಗೆ ಅಚವೆ ಗ್ರಾಮದಿಂದ ಏಳುನೂರ ಐವತ್ತು ವರಹಾ ಉಂಬಳಿ ಬಿಟ್ಟದ್ದನ್ನು ಈ ನಿರೂಪ ತಿಳಿಸುತ್ತದೆ.

**ಪುಟ ಸಂಖ್ಯೆ : ೮೬**

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ । ತ್ರೈಲೊ
ಕ್ಯ ನಗರಾರಂಭ।ಮೂಲಸ್ತಂಭಾಯ ಶಾಂಭವೆ।ಸ್ವಸ್ತಿ ಶ್ರೀ
ಜಯಾಭ್ಯುದಯ ನೃಪ ಶ್ಯಾಲಿವಾಹನ ಶಖ ವರ್ರುಷ ೧೬೩೮
ನೆಯ ದುರ್ಮುಖಿ ಸಂವತ್ಸರದ। ಕಾರ್ತಿಕ ಶು ೧೦ಲ್ಲು ಶ್ರಿ
ಮ್ಮ
ದ್ದೆಡವ ಮುರಾರ್ರಿ ಕೊಟೆ ಕೊಳಹಳಾ ! ವಿಶುಧ ದ್ವೈತ
ಶಿಧಾ
ಂತ್ತ ಪ್ರತಿಷ್ಟಾಪಕ।ಶಿವಗುರ್ರು ಭಕ್ತಿ ಪರಾಯಣರಾದ ।
ಶ್ರೀಮತ್ಕೆಳದಿ ಸದಾಶಿವನಾಯಕ ರೈಯನವರ। ವಂಶೊ
ದ್ಭವರಾದ । ಶಿವಪ್ಪನಾಯಕರ್ರ ಪುತರ್ರು । ಸೊಮಸೆ
ಖರ್ರನಾಯಕರ ಧರ್ಮಪತ್ನಿಯರಾದ। ಚಂನಂಮಾಜಿಯ
******ಬಸವಪ್ಪನಾಯಕರ್ರೈಯನವರ್ರು।

**ಪುಟ ಸಂಖ್ಯೆ : ೮೭**

ಕಟಿಸ್ತ ಪುರವರ್ಗದ ಚಂನ ಬಸವೆಶ್ವರ ದೆವರ್ರಿಗೆ।ಉತ್ತಾ
ರವಾದ।ಮಿಡಜೆ ಹೊಬಳಿ ವಳಗಣ ಹರ್ರಿಟೆ ಶಿಮೆ ಉಪ್ಪಿನ
ಪ
ಟಣ ಗ್ರಾಮದಲ್ಲು। ನಿರ್ವಾಣ್ಯೆಯನವರ್ರ ಹೆಸ್ರಲ್ಲು। ಹುದಾ
ರ। ಕೊಲುಗುಣಸೆ ಭದ್ರಯ್ಯನು ಕಟಿಸ್ತ ಮಠದ ಧರ್ಮ
ಕ್ಕೆ ಯಿ ಶಿಮೆ ವಳಗುಣ ಸುಂಕದ ಟಾಂಣ್ಯದಲ್ಲು।ಮಿಡಿಜೆ

ಠಾಂಣ್ಯದಲ್ಲು ಸಹಾ । ವ್ಯವಹಾರ ಮಾಡುವ ಶೆಟಿಶರ ಪೆಟೆ ಹರದರ್‍ರು । ಬರಶಿಕೊಟ । ಮುಲ ವಿಸದ ಪಟಿ ಕ್ರಮವೆಂತೆಂದರೆ । ಯಿ ಮಟದಲ್ಲುದಿಗ್ದೆಶದ ಶಿವಭಕ್ತರ್‍ರು ಪರದೆಶಿಗಳಿಗೆ ಮುಂತ್ತಾಗಿ।ಧರ್ಮನಡಸುವ ಬಗ್ಯೆ ನಾಂಉು ಮಾಡುವ ವ್ಯವಹಾರಕ್ಕೆ । ಸ್ಥಳದ ಸರಕು ಅಡಕ್ಕೆ ಮೆಣ್ಸು ಖಂಡಿ ೧ ರ ಹಾ । ೦ ಹಾಗ ಮಾರ್ಗ ಚರಾದಾ

ಯ । ವಿದಳ ಕುಂಬು ೧ರ ಹಾ = ಬೆಳೆ ಅಕ್ಕಿ ಕುಂಬು ಹಾ। ೦ ಹಾ

ಗಾ । ರಾಗಿ ಕುಂಬು ೧ರ ಹಾ = ಬೆಳೆ । ಯೆಂಣೆ ಖಂ ೧ರ ಹಾ ೧ ಹಾ

ಗಾ।ತುಪ್ಪ ಖಂ ೧ರ ಹಾ॥೦ ಅರ್ದಾ ಬೆಲ್ಲಾ ಖಂ ೧ರ ಹಾಂ । ೦ ಹಾ

ಗಾ।ಕಂಬಳಿ ಕೊಡಿ ೧ರ ಹಾ ॥೦ ಅಡ। ಅರಶಿನಾ ಹತಿ ಹೊ।

ಗೆಸಪ್ಪು ಕೊಬರ್‍ರಿ ಖರ್ಜುರಾ ಕಾಚು ! ಕವಾಡ ನಡೆ ೧ರ ಹಾ – ವಿಸಾ । ಲಂವಂಗ ಪತ್ರೆ ಜಾಯಿಕಾಯಿ ಮ ೧ರ ಹಾ – ವಿಸಾ

ರಾಂಪತ್ರಿ ಕಬಾಬಿ ಜಿನಿ ಮುಂತಾವಾದ್ದನ್ನು ಮ ೧ರ ಹಾವ್ಸ ॥ ೦ ಅರವ್ಸಿ

ಹಶಿಸುಂಟಿ ನಿರ್‍ರುಳಿ ಬೆಳುಳ್ಳಿ ಸಹಾ ನಡೆ ೧ರ ಹಾ ೦ ॥ ಅರವಿಸಾ। ಕಾಂಗು ತ್ತು ಶುಧಾ ಖಿಡಿ ಮೂಂತಾಗಿ ಮಾಡಿ ೧ರ

ಹಾ ೦॥೦ ಅರವಿಸಾ । ಪಟೆ ಪಿತಾಂಬರ ಸುರೆ।ಪುಟಾ ಮುಂತಾಗಿ।ತ್ತಾಉು ೧ರ ಹಾ–ವ್ಸಿಸ ಉಪ್ಪುಹರದ ರ್‍ರಿದಾ। ಮಹಾನಾಡ ರ್‍ರಿಂದಾ ಸಹಾ ************

## ಪುಟ ಸಂಖ್ಯೆ: ೮೮

ಹಾವ್ಸಿ ॥ ೦ ಅರವಿಸಾ । ಯಿ ಪ್ರಮಾಣಿ ನ ಪ್ರಹಾರದಲ್ಲು । ಮಠ ದರ್ಮಕ್ಕೆ ನಡಸುವ ಬಗ್ಯೆ।ಶಿವಾರ್ಪಿತವಾಗಿ ಕೊಟೆಉು–ಯಿಾ ಪ್ರಮಾಣು ಸಲುವ ಹಣ ಉಂ। ಪ್ರಾಕು ಯೆತ್ತುವ।ಸುಂಕಾ ಕೊಡುವಿಸ ವರ್ತನೆ ಹೊರತ್ತು।ಯೆತ್ತಿ ಸುಂಕದ ಮಣೆಗಾರನ ಸಂಗಡಾ । ಕಾಲ ಕಾಲಂ ಪ್ರತ್ತಿಯಲ್ಲು । ಕೊಟು ಬಾಹೆಉು ಯಂದು ಬರಶಿಕೊಟ ಮುಲ ವಿಸದ ಪಟೆ । ಯಿದಕ್ಕೆ ಧರ್ಮ ಸಾಕ್ಷಿಗಳು

ಆದಿತ್ಯಚಂದ್ರವ ನಿಲೊನಲಶ್ಚ । ದೌರ್ಬುಮಿ ರಾಪೋಹೃದಯಂ ಯಮಶ್ಚ।ಅಹಶ್ಚ ರಾತ್ರೊಶ್ಚ ಉಭೆಶ್ಚ ಸಂದೊ। ಧರ್ಮಶ್ಯ ಜಾನಾತ್ತಿ । ನರಶ್ಯ ಉ್ರತ್ತಂ ॥ ದಾನಪಾಲನಯೊರ್ಮಧೆ । ದಾನಾಚ್ಛ್ರೆಯನಪಾಲನಂ ॥ ದಾನಸ್ವರ್ಗಮವಾಪ್ನೊತ್ತಿ । ಪಾಲನಂ।ದಚುತ್ತಂ ಪದಂ। ಯಂದು ಬರಕೊಟ ಮುಲವಿಸದ ಪಟೆ ನಖಲಿನ ಪ್ರತ್ತಿ

ಅಸಲು ಯಡವಾರ್‍ರು ಆಯಿಹೊಯಿತ್ತು । ನಕಲ್ಲು ಉಪ್ಪಿನ ಪಟ

ಣದ ಮಠದ ಶಿವಲ್ಲಿಂಗ್ಯೆನ ವಶ್ಯಾ ಅಥೆ.

ಸಾರಾಂಶ : ಶಾಲಿವಾಹನ ಶಕ ೧೬೩೮ ಎಂದರೆ ಕ್ರಿ.ಶ. ೧೭೧೬ರ ನಿರೂಪ ಇದಾಗಿದೆ. ಚೆನ್ನಮ್ಮಾಜಿಯ ಮಗ ಬಸಪ್ಪನಾಯಕನ ಕಾಲದ್ದು. ಇದು ಪುರವರ್ಗದ ಚಂನಬಸವೇಶ್ವರ ದೇವರಿಗೆ ಬಿಟ್ಟ ಉಂಬಳಿಯನ್ನು ಈ ನಿರೂಪ ತಿಳಿಸುತ್ತದೆ. ಮಿಡಜೆ ಹೊಬಳಿಯ ಹರ್‍ರಿಟೆ ಶಿಮೆ ಉಪ್ಪಿನ ಪಟ್ಟಣ ಗ್ರಾಮದಲ್ಲಿ ನಿರ್ವಾಣ್ಯೆಯನವರ ಹೆಸರಲ್ಲಿ ಕೊಲುಗುಣಸೆ ಭದ್ರಯ್ಯನು ಕಟ್ಟಿಸಿದ ಮಠದ ಧರ್ಮಕ್ಕೆ ಯಿ ಶಿಮೆ ಯೊಳಗಿನ ಸುಂಕದ ಠಾಂಣ್ಯದಲ್ಲಿ ಮತ್ತು ಮಿಡಿಜೆ ಠಾಂಣ್ಯದಲ್ಲಿ ವ್ಯವಹಾರ ಮಾಡುವ ಶೆಟಿಶರ ಪೆಟೆ ಹರದರ್‍ರು ಬರಶಿಕೊಟ ಮುಲ ವಿಸದ ಪಟ್ಟಿ ಇದಾಗಿದೆ. ಈ ಮಠದಲ್ಲಿ ಶಿವಭಕ್ತರು ಪರದೇಶಿಗಳಿಗೆ ತಾವು ಮಾಡುವ ವ್ಯವಹಾರದಲ್ಲಿ ಕೆಲ ಭಾಗವನ್ನು ಧರ್ಮವಾಗಿ ನೀಡಿರುವುದನ್ನು ನಿರೂಪ ತಿಳಿಸುತ್ತದೆ.

## ಪುಟ ಸಂಖ್ಯೆ: ೮೯

ಸ್ವಸ್ತಿ ಶ್ರಿ ಜಯಾಭ್ಯುದಯ ನೃಪ ಶಾಲಿವಾಹನ ಶಕ ವರುಶ ೧೬೩೮

ನೆ ದುರ್ಮುಕ್ಕಿ ಸಂವತ್ಸರದ ಕಾರ್ತಿಕ ಶು ೧ ಲು ಶ್ರಿಮದ್ದೆಡವ ಮುರಾ

ರ್‍ರಿಕೊಟೆ ಕೊಳಾಹಳ ವಿಶುದ್ಯಾತ್ಮಕ ಸಿದ್ದಾಂತ ಪ್ರತಿಷ್ಠಾಪಕ ಶಿವಗುರುಭಕ್ತ ಪರಾಯಣರಾದ ಶ್ರಿಮತ್ಕೆಳದಿ ಸದಾಸಿವನಾಯಕರಯ್ಯನವರ್‍ರು ವಂಶೋದ್ಭವರಾದ ಸಿದ್ದಪ್ಪೆನಾಯಕರ ಪುತ್ರರು । ಶಿವಪ್ಪನಾಯಕರು ಪುತ್ರರು । ಸೊಮಸೆಕರನಾಯಕರ ಧರ್ಮಪತ್ನಿಯರಾದ ಚಂನ್ನಮಾಜಿಯವರ ಪುತ್ರರು । ಬಸಪನಾಯಕರಯಕರ । ಯ್ಯನವರ್‍ರು । ಕಟಿಶಿದ ಪುರವರ್ಗದ ಚಂಬಸವೆಶ್ವರದೆ

ರ್ರಿಗೆ। ಉತ್ತಾರವಾದ। ಮಿಡಿಜಿ ಹೊಬಳಿ ವಳಗಣ ಉಪ್ಪಿನ
ಟಣದ ಗ್ರಾಮದಲ್ಲು ನಿರ್ವಾಣಯನವರ ಹೆಸ್ರಲು ಹುದಾ
ಕೊಲಗುಣಸೆ ಭದ್ರಪ್ಪ। ನವರ್ರು ಕಟಿಸಿದ ಮಠದ ಧರ್ಮ
। ಯಿಾ ಸಿಮೆ ಪ್ರಜೆಗಳು ನಡಸುವ ಧರ್ಮಕೆ। ಬರಶಿಕೊಟ
ಟೆ

ಮವೆಂತ್ತೆಂದರೆ । ಯಿ ಮಠದ ಧರ್ಮದ ಬಗ್ಯೆ ನಾಂಉ
ಾಡಿ ಕೊ

ದ್ದು ವರುಶ ೧ ರ ಗ ೧೨ ॥ ೦ ಹಂನೆರಡುವರ್ರೆ
ರಹಾಂನ್ನು ನಾ

ಉ ಅರಮನೆಗೆ ತೆತ್ತು ಬಾಹ ಸಿಸ್ತಿಗೆ । ಬಾಹ ವಂತಿಕೆ
ಮಾಣಿ ।

ಾಡಿಕೊಂಡು ಅಧಿಕಾರ ಮಾಡುವರ ಮುಖದಲ್ಲು ।
ಲಕಾಲಾಂ

ತಿಯಲು ನಡಶಿಕೊಟು ಬಹ ಉ ಯಂದು ಬರಶಿಕೊಟ
ರ್ಮಸಾಧನ ಪಾಟಿ ಯಿದಕೆ ಧರ್ಮ ಸಾಕ್ಷಿಗಳು। ಯಾವಶ್ಚಂ
ಶ್ಚ ಸೂರ್ಯಶ್ಚ ಕಾವಂತ್ರಿಷ್ಠತಿ ಮೆಧಿನಿ। ಯಾವದ್ಯಾಮಕ
ಾ

ೂಕೆ। ಕಾವದ್ರಾಜ್ಯ ವಿಬೆಶಣಾಯಂದು ಬರದ ಪಟೆಗೆ
ಅಜನಾಯಕನ ಬರಹಾ ಶಿಮೆಯಲು*********

**ಟ ಸಂಖ್ಯೆ: ೯೦**

ರಹಾದ ಗುರ್ತಾಯಿಂತಿ ಯಿವರ ಸನ್ಮತದಿಂದಾ। ಸ್ತಳದ
ಡಕರ್ಣಿರವಳಪ್ಯೆನಬರಹಾ ಶಾಂತವಿರಣನ ಬರಹಾ।ಪ್ರತಿ
ಪತಿ ಬರಹಾದ ಧರ್ಮಪಟಿ ಪ್ರತಿ ಕಾಗದಾ ।

ಸಲು ಯೆಡವಾರ್ರಾಯಿತ್ತು ನಕಲು ಸಿದಲಿಂಗಯ್ಯನವಶಕೆ
ಂಟು ।

ರಾಂಶ: ಶಾಲಿವಾಹನ ಶಕ ೧೬೩೮ ಎಂದರೆ ಕ್ರಿ.ಶ. ೭೧೬ರ ನಿರೂಪ ಇದಾಗಿದೆ. ಚೆನ್ನಮ್ಮಾಜಿಯ ಮಗ ಸಪ್ಪನಾಯಕನ ಕಾಲದ್ದು. ಇದು ಪುರವರ್ಗದ ಚಂನ ಸವೇಶ್ವರ ದೇವರಿಗೆ ಬಿಟ್ಟ ಉಂಬಳಿಯನ್ನು ಈ ನಿರೂಪ ಳಿಸುತ್ತದೆ. ಮಿಡಜೆ ಹೊಬಳಿಯ ಹರ್ರಿಟೆ ಶಿಮೆ ಉಪ್ಪಿನ ಟ್ಟಣ ಗ್ರಾಮದಲ್ಲಿ ನಿರ್ವಾಣ್ಯೆಯನವರ ಹೆಸರಲ್ಲಿ ೊಲುಗುಣಸೆ ಭದ್ರಯ್ಯನು ಕಟ್ಟಿಸಿದ ಮಠದ ಧರ್ಮಕ್ಕೆ ಟ್ಟ ದಾನದ ವಿವರವನ್ನು ಈ ನಿರೂಪ ತಿಳಿಸುತ್ತದೆ. ಈ ಠದ ಧರ್ಮಕ್ಕೆ ವರುಶ ೧ ರ ಗ ೧೨॥೦ ಹಂನೆರಡುವರ್ರೆ ರಹಾಂನ್ನು ನಾಂಉ ಅರಮನೆಗೆ ತೆತ್ತು ಬಾಹ ಸಿಸಿತೆ। ಾಹ ವಂತಿಕೆ ಪ್ರಮಾಣಿ । ಮಾಡಿಕೊಂಡು ಅಧಿಕಾರ ಮಾಡುವರ ಮುಖದಲ್ಲು । ಕಾಲಕಾಲಾಂ ಪ್ರತಿಯಲು ನಡಶಿಕೊಟು ಬರುತ್ತೇವೆ ಎಂದು ಬರಸಿದ ಪತ್ರ ಇದಾಗಿದೆ.

**ಪುಟ ಸಂಖ್ಯೆ : ೩೬-೩೫**

ಕ್ರೊಧನ ಸಂವತ್ಸರದ ಮಾಘ ಶು೧೧ಲ್ಲು ಶ್ರೀಮತ್ ಕೆಳದಿ
ಬಸ

ವಪ್ಪನಾಯಕರ್ರುವಿಷ್ಣು ಸ್ಪಭಾಯಿತ್ತಗೆ ಬರಶಿ ಕಳುಹಿದ ಕಾರ್ಯ
।ನಿನು ಹುಜುರ್ರು ಬಂದು।ಗೊಕರ್ನಕ್ಕೆ ಹೊಗುವ ಮಾರ್ಗದಲ್ಲು
ಜುರ್ರು ಬಂದು।ಗೊಕರ್ನದ ಶ್ರಿ ಮಹಾಬಲೆಶ್ವರ ದೆವರಿಗೆ।
ಗೆರಸಪ್ಪೆ ಶಿಮೆ

ವಳಗಣ ಯಿಡಗುಂಜಿ ಶ್ರಿ ವಿಘ್ನೆಶ್ವರ ದೆವರಿಗೆ । ಕೊಲ್ಲುರ
ಮುಕಾಂಬಿಕೆ

ಅಂಮನವರ್ರಿಗೆ ಸಹಾ। ನಮಗೆ ಆಲಶ್ಯಾ ಬಂದಾಗ್ಯೆ
ಯಿಡುಗುಂಜಿವಿ

ಷ್ಣು ಸಭ್ಯೆಯಿತನ್ನು ಹೆಳಿಕೊಂಡು ಯಿಧಾನೆ ಯಂತ್ತಾ ।
ಸಿವಲಿಂಗಪ್ಪನವರು

ಹೆಳಿಕೊಂಡ ಸಂಮ್ಮಂಧಾ । ವಿಷ್ಣು ಸಭ್ಯೆಯಿತನ ಕಯ್ಯಾ
ಅರಮನೆಎ ಕಾಣಿಕೆ

ಗ ೩೨೦ ಮುಂನ್ನುರ್ರು ಯಿಪತ್ತು ವರಹಾಂನ್ನು
ತೆಗೆದುಕೊಂಡು ಮಿಡಿಜೆ

ಶಿಮೆಯೊಗಳಣ ಗೊಕರ್ನ ಮಾಗಣಿ ಬಾರ್ರೆಕೊಡಲು
ಗ್ರಾಮದಲು ಉತಾರವ

ಕೊಟರು ಗ ೩೨ ಮೂವತೆರಡು ವರಹಾನ ಸ್ವಾಸ್ಥೆಯನ್ನೂ
ಶಿವಾ

ರ್ಪಿತವಾಗ್ಯೆ ಬಿಟ್ಟುಕೊಟ್ಟಧೆವೆ। ಗೊಕರ್ನದ ಶ್ರಿಮಹಾಬಲೆಶ್ವರ
ದೆವ

ರ್ರಿಗೆ ಯಿಡಗುಂಜಿ ವಿಘ್ನೆಶ್ವರ ದೆವರಿಗೆ ಕೊಲ್ಲುರ ಶ್ರಿ
ಮುಕಾಂಬಿಕೆ

ಅಂಮನವರ್ರಿಗೆ । ಸಹ ಪುಜೆ ಸಾಂಗವಾಗಿ ಸಡಶಿಕೊಂಡು
ಬಾಹ

ದುಯಿಾ ಕಾಗದ ಸೆನಬೊವರ ಬರಹಕ್ಕೆ ಬರಶಿ । ತಿರುಗಾ।
ನಿನ್ಯು

ತೆಗೆದುಕೊಂಬುವದು ॥ **** ॥ ಯಿದರ ಅಸಲು
ಯೆಡವಾರವಾಗಿ

ಹೊಯಿತಂತ್ತೆ । ವಾಲೆಮೆಲೆ ಬರದ ನಖಲಿನ ಪ್ರತಿ । ಯಿ
ವಾಲೆ ಗಣ

ಪ ಸಭ್ಯಾತನ ಕೈಯಾ ಅಧೆ ।

ಸಾರಾಂಶ : ವಿಭವ ಸಂವತ್ಸರದ ಚೈತ್ರ ಶು ೧೩ಲೂ ಶ್ರೀಮತ್ಕೆಳದಿ ಬಸವಪ್ಪನಾಯಕರು ವಿಷ್ಣು ಸಭ್ಯೈತಗೆ

ಬರಶಿಕಳುಹಿದ ಕಾರ್ಯ ಇದಾಗಿದೆ. ಗೋಕರ್ನದ ಶ್ರಿ ಮಹಾಬಲೇಶ್ವರ ದೇವರಿಗೆ ಗೆರಸಪ್ಪೆ ಶಿಮೆವಳಗಣ ಯಿಡಗುಂಜಿ ಶ್ರಿ ವಿಘ್ನೆಶ್ವರ ದೆವರಿಗೆ । ಕೊಲ್ಲುರ ಮುಕಾಂಬಿಕೆ ಅಂಮನವರ್ರಿಗೆ ಸಹಾ । ನಮಗೆ ಆಲಶ್ಯಾ ಬಂದಾಗ್ಯೆ ಯಿಡುಗುಂಜಿ ವಿಷ್ಣು ಸಭ್ಯೆಯಿತನ್ನು ಹೆಳಿಕೊಂಡು ಯಿಧಾನೆ ಎಂದು ಸಿವಲಿಂಗಪ್ಪನವರು ಹೆಳಿದ್ದರಿಂದ ವಿಷ್ಣು ಸಭ್ಯೆಯಿತನಿಂದ ಅರಮನೆಗೆ ಮುಂನ್ನುರ್ರು ಯಿಪತ್ತು ವರಹಾಂನ್ನು ತೆಗೆದುಕೊಂಡು ಗೊಕರ್ನ ಮಾಗಣಿ ಬಾರ್ರೆಕೊಡಲು ಗ್ರಾಮದಲು ಉತಾರವನ್ನು ಬಿಟ್ಟ ವಿವರವನ್ನು ನಿರೂಪ ಹೇಳುತ್ತದೆ.

**ಪುಟ ಸಂಖ್ಯೆ : ೩೪–೩೫**

ಧಾತು ಸಂವತ್ಸರದ ಜೆಷ್ಟ ಬ ೧೩ರಲ್ಲು ಶ್ರಿಮತ್ಕೆಳದಿ ಬಸಪ್ಪನಾ

ಯಕರು।ವಿಷ್ಣು ಸಭ್ಯೆತಗೆ ಬರಶಿ ಕಳುಹಿದ ಕಾರ್ಯ । ನಿನ್ನು ಹುಜುರ್ರು

ಬಂದು।ಗೊಕರ್ನಕೆ ಹೊಗುವ ಮಾರ್ಗದಲು ಚಂದಾವರ ಶಿಮೆ ವಳಗಣ

ಅಘನಾಶಿನಿ ಗ್ರಾಮದಲು ದೆವಸ್ತಾನದ ಕಟಿಶಿ ಪ್ರತಿಷ್ಟೆ ಮಾಡಿಸಿದ ಶ್ರಿ ಸ

ದಾಶಿವೆಶ್ವರ ದೆವರಿಗೆ ಕಟ್ಟಲೆ ರಥ ಉತ್ಸಹದ ಬಗ್ಗೆ ಸಹಾ ಪ್ರಾಕು ಉ

ತ್ತಾರವ ಕೊಟ್ಟ ಸ್ವಾಸ್ಥೆ ಸಾಲದಿದರಿಂದ । ಮಿಡಜಿ ಶಿಮೆಯಲ್ಲು

ಗಜನಿಭುಮಿಗಳ ಸಾಗುಮಾಡುವ ಬಗ್ಯೆ ಉತ್ತಾರವ ಕೊಟ್ಟಿದ್ದು

ಹಿತಲಮಕ್ಕಿ ಗ್ರಾಮದಿಂದಾ ಗ ೧೭॥೨॥೦ ತ್ತಾರಕ್ಕೆ ಗ್ರಾಮದಿಂದ ಗ ೩೨ ಹಾ ೨॥೦

**ಪುಟ ಸಂಖ್ಯೆ : ೩೩**

ಉಭಯಂ ಗ ೫೦ ಹಾ ಐವತ್ತವರಹಾಂನ್ನ ಸ್ವಾಸ್ಥೆಯಂನ್ನು ಕಟಲೆ ರಥ

ಉತ್ಸಹದ ಬಗ್ಯೆ ಸಹಾ ಉತ್ತಾರವ ಕೊಡುವರ್ರಿತ್ತಿ ಅಪಣೆ ಆಗಬೆಕೆಂ

ದು ಹೆಳಿಕೊಳುತಾನೆಯಂದು ಶಿವಲಿಂಗಪನವರ್ರು ಹೆಳಿಕೊಂಡ ಸಂ

ಮ್ಮಂದ್ಧಾ । ಯಿ ವಿಷ್ಣು ಸಭಾಯಿತನ ಕೈಯಾ ಕಾಣಿಕೆ ಗ ೫೦ ಐವತ್ತುವ

ಚಂದಾವರದ ಶಿಮೆವಳಗಣ ಅಘನಾಶಿನಿ ನಧಿ ತ್ತಿರದ ಸಮಿ

ಪದಲ್ಲು ದೆವಸ್ಥಾನ ಕಟಿಶಿ। ಪತಿಷ್ಟೆ ಮಾಡಿದ ಶ್ರೀ ಸದಾಶಿವೆಶ್ವರ

ದೆವರ್ರಿತೆ ಆಗಶೆ ಗ್ರಾಮದಿಂದಾ। ಪಗುದಿ ಚಕ್ರವಂತ್ತಿಕೆಯಿಂದಾ

**ಪುಟ ೩೫**

ಸಹಾ ಪ್ರಾಕು ಸಂವತ್ಸರದಲ್ಲು । ಉತ್ತಾರವ ಕೊಟದು ಗ ॥೪

ವಂ ಭತ್ತ ೧೧ ಲು ಉತ್ತಾರವಲು। ಸಾಲದು ಯಂದು।ಕ್ರಯ ಕೊ

ಟೆನು ಸ್ವಾಸ್ಥೆ ಉತಾರವ ಕೊಟು ಶಿಲಾಸ್ಥಾಪಿತವ ಮಾಡಿಶಿ

ಕೊಟು ನಿರೂಪಕ್ಕೆ ಅಪ್ಪಣೆ ಆಗಬೆಕೆಂದು। ವಿಷ್ಣು ಸಭ್ಯಾಯಿ

ತನು। ಹೆಳಿಕೊಳುತ್ತಾನೆ ಯಂತ್ತಾ । ಶಿವಲಿಂಗಪ್ಪನವ

ರು ಹೆಳಿಕೊಂಡ ಸಂಬಂಧ । ಸಭಾಯಿತನ ಕೈಯ

ಗ ೨೮೯ ಹಾ ೦ ಯಿಂನುರ ಯೆಂಭತ್ತ ಒಂಬತ್ತು ವರಹಾನ್ನು ಅ

ರಮನೆಗೆ ತೆಗದುಕೊಂಡು । ಉತಾರವ ಕೊಟಿದು । ಮಿಾಡಜಿ

ಶಿಮೆಗೆ ಗೊಕರ್ನದ ಮಾಗಣಿಹಾರೊಮಾಸಗೆರ್ರೆ ಗ್ರಾಮದಲ್ಲು।

ಗ ೨೪ ಹಾ ೦ ಯಿಾ ಗ ಹೆಚಿದ್ದು ಪಗಡಿ ಚಕ್ರವಂತಿಕೆಯಿಂದ ಗ ೪॥೦

ಉಭಯಂ ಗ ೨೮॥೦ ಇಪ್ಪತ್ತಯೆಂಟು ವರ್ರೆ ವರಹಾಂನ್ನ ಸ್ವಾ

ಸ್ಥೆಯನ್ನು । ಗೊಕರ್ನಕ್ಕೆ ಹೊಹ ಮಾರ್ಗದಲ್ಲು । ಅಗನಾಶಿನಿ

ನದಿ ಸಮಿಪದಲ್ಲು । ಚಂದಾವರದ ಶಿಮೆ ಅಗಸೆ ಗ್ರಾಮದಲ್ಲು

ದೆವಸ್ಥಾನದ ಕಟಿಶಿ ಪ್ರತಿಷ್ಟೆ ಮಾಡಿದ । ಶ್ರೀ ಸದಾಶಿವೆಶ್ವರ ದೆವ

ತಾವೆಚ್ಚಕೆ ಶಿವಾರ್ಪಿತವಾಗಿ ಕೊಟು । ವಾಮನ ಮುದ್ರೆ

ಶಿಲಾಸ್ಥಾಪಿತ ಮಾಡಿಸುವ ಬಗ್ಗೆ । ಹುಜುರ್ರಿಂದ । ಉಳಿಗದ

ಶಿದನ ಕಳುಹಿಸಿದೆವೆ । ಚಲು ಗ್ರಾಮದವರ ಕರೆಸಿಕೊಂ

ಡು ಗಡಿ ತತ್ವಾರ ಬಾರದಿದ ರ್ರಿತ್ತಿ । ಯಿವನ ಮುಂತಿಟ್ಟು

ರೆಖೆ ಪ್ರಮಾಣು ಶಿಲಾಸ್ಥಾಪಿತ ಮಾಡಿಶಿ ಕೊಟು । ಯಿಾ ಕಾಗ

ದ ಶಾನಬೊವರ ಬರಹಕ್ಕೆ ಬರಶಿ ತಿರುಗಾ ನಿನು

ತೆಗದುಕೊಂಬುವದಾಗಿ । ಯಿದರ ಅಸಲು ಯಡವಟ್ಟು

ಆಯಿತ್ತಂತೆ ವಾಲೆ ಮೆಲೆ ಬರದ ನಖಲು ಪ್ರತಿ ।

ಸಾರಾಂಶ : ಕ್ರೊಧನ ಸಂವತ್ಸರದಲ್ಲಿ ಶ್ರೀಮತ್ ಕೆಳದಿ ಬಸವಪ್ಪನಾಯಕರ್ರು । ವಿಷ್ಣು ಸ್ಸಭಾಯಿತ್ತಗೆ ಬರಶಿ ಕಳುಹಿದ

ರ್ಯ ಇದಾಗಿದೆ. ಗೊಕರ್ನಕ್ಕೆ ಹೊಗುವ ಮಾರ್ಗದಲ್ಲು ಂದಾವರದ ಶಿಮೆ ವಳಗಣ ಅಘನಾಶಿನಿ ನಧಿ ದಸಮಿಪದಲ್ಲು ದೆವಸ್ಥಾನ ಕಟಿಶಿ । ಪತಿಷ್ಠೆ ಮಾಡಿದ ಶ್ರೀ ನಾಶಿವೆಶ್ವರ ದೆವರ್ರಿಗೆ ಅಗಶೆ ಗ್ರಾಮದಿಂದಾ । ಪಗುದಿ ಕ್ರವಂತ್ತಿಕೆಯಿಂದಾ ಈ ಸಂವತ್ಸರದಲ್ಲಿ ಉತ್ತಾರವ ಕೊಟದ್ದು ಲದಾಗಿದೆ ಎಂದೂ ಕ್ರಯವನ್ನು ಕೊಡುತ್ತೇನೆ ಸ್ವಾಸ್ಥಿ ತ್ತಾರವ ಕೊಟ್ಟು ಶಿಲಾಸ್ಥಾಪಿತವನ್ನು ಮಾಡಿಸಿಕೊಡುವ ರೂಪಕ್ಕೆ ಅಪ್ಪಣೆ ಆಗಬೇಕೆಂದು ವಿಷ್ಣು ಸಭ್ಯಾಯಿತನು । ಳಿಕೊಳುತ್ತಾನೆಂದು ಶಿವಲಿಂಗಪ್ಪನವರು ಹೆಳಿದ್ದರಿಂದ ನಾಯಿತನ ಕೈಯ ಯಿಂನುರ ಯೆಂಭತ್ತ ಒಂಬತ್ತು ವರಹಾನ್ನು ರಮನೆಗೆ ತೆಗೆದುಕೊಂಡು ಉತಾರವ ಕೊಟ್ಟ ವಿವರ ಈ ರೂಪ ತಿಳಿಸುತ್ತದೆ.

**ಟ ಸಂಖ್ಯೆ : ೩೪**

ಭವ ಸಂವತ್ಸರದ ಚಯಿತ್ರ ಶು ೧೩ಲೂ ಶ್ರೀಮತ್ಕೆಳದಿ ಸವ

ನಾಯಕರು । ವಿಷ್ಣು ಸಭೈತಗೆ । ಬರಶಿಕಳುಹಿದ ಕಾರ್ಯ। ನ್ನು ಹು

ಹಾಂನ್ನು ಅರಮನೆಗೆ ತೆಗದುಕೊಂಡು ಮಿಡಜೆ ಶಿಮೆಯಲ್ಲಿ ಜಿ

ಭುಮಿ ಸಾಗು ಮಾಡುವ ಬಗ್ಯೆ ಉತ್ತಾರವ ಬಿಟ್ಟುಕೊಟದು ತಲಮ

ಗ್ರಾಮದಿಂದ ಹದಿನೆಳು ಯೆಳು ಹಣ ಅಡಾಂತ್ತೊರಕೆ ಮದಿಂದಾ

ೂವತ್ತೆರಡು ಯಿಷಣ ಅಡಾ । ಉಭಯಂ ಆೃವತ್ತು ವರ ಹಂ

ಶ್ರಿ ಸದಾಶಿವೇಶ್ವರ ದೆವರ್ರಿಗೆ ಕಟಲೆ ರಥ ಉತ್ಸಹದ ಗ್ಯೆ ಸಹಾ।ಉ

ರವ ಕೊಟು ಪ್ರಾಕು ಉತಾರ ಸ್ವಾಸ್ಥಿಯಿಂದ ಸಹಾ ದೆವತ್ತ ನೆನ

ಶಿ ಬರಹೆಳಿಕೊಟಧೆ। ಪ್ರಾಕು ಉತ್ತಾರ ಸ್ವಾಸ್ಥೆಯಿಂದ ಸಹಾ। ವ

ತ್ತಾ ಸೆವೆ ಸಾಂಗವಾಗಿ ನಡಸುತ್ತಾ ಬಾಹುದು ಯಿ ಕಾಗದ ಶ್ಯಾನಬ

ವರ ಬರಹಾಕ್ಕೆ ಬರಶಿ ತಿರ್ರುಗಾ ತೆಗದುಕೊಂಬುವದೂ ॥ ॥

॥ ಯಿದರ ಅಸಲು ಯೆಡವಾರ್‍ರಲಾಯಿತಂತೆ ವಾಲೆ ಮೆಲೆ ಬರದ ನಖಲಿನಪ್ರತ್ತಿ । ಯಿ ವಾಲೆ ಗಣಪಸಭ್ಯಾತನವ್ವಾಯಿಧೆ।

ಸಾರಾಂಶ : ಧಾತು ಸಂವತ್ಸರದ ಜೆಷ್ಠ ಬ ೧೩ರಲ್ಲಿ ಶ್ರಿಮತ್ಕೆಳದಿ ಬಸಪ್ಪನಾಯಕರು ವಿಷ್ಣು ಸಭೈತಗೆ ಬರಶಿ ಕಳುಹಿದ ಕಾರ್ಯ ಇದಾಗಿದೆ. ಗೊಕರ್ನಕೆ ಹೊಗುವ ಮಾರ್ಗದಲು ಚಂದಾವರ ಶಿಮೆ ವಳಗಣ ಅಘನಾಶಿನಿ ಗ್ರಾಮದಲು ದೆವಸ್ಥಾನದ ಕಟಿಶಿ ಪ್ರತಿಷ್ಠೆ ಮಾಡಿಸಿದ ಶ್ರಿ ಸದಾಶಿವೆಶ್ವರ ದೆವರಿಗೆ ಕಟ್ಟಲೆ ರಥ ಉತ್ಸಹದ ಬಗ್ಗೆ ಸಹಾ ಪ್ರಾಕು ಉತ್ತಾರವ ಕೊಟ್ಟ ಸ್ವಾಸ್ಥಿ ಸಾಲದಿದ್ದರಿಂದ ಮಿಡಜಿ ಶಿಮೆಯಲ್ಲು ಗಜನಿ ಭುಮಿಗಳ ಸಾಗು ಮಾಡುವ ಬಗ್ಯೆ ಉತ್ತಾರವ ಕೊಟಿದ್ದನ್ನು ಈ ನಿರೂಪ ಹೇಳುತ್ತದೆ.

ಹೀಗೆ ಈ ನಿರೂಪಗಳು ಗೋಕರ್ಣ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಲು ಪ್ರಮುಖ ಆಕರಗಳಾಗಿವೆ. ಈ ನಿರೂಪದಲ್ಲಿ ಉಲ್ಲೇಖಗೊಂಡಿರುವ ದೇವಾಲಯಗಳ ಅವಶೇಷಗಳು ಇಂದೂ ಗೋಕರ್ಣದಲ್ಲಿ ಕಾಣಬಹುದಾಗಿದೆ. ಕೆಲವಕ್ಕೆ ಪೂಜೆ ನಡೆಯುತ್ತಿದ್ದರೆ ಇನ್ನು ಕೆಲವು ಪುರೋಹಿತರ ಮನೆಯ ನಡುಮನೆಯಲ್ಲಿವೆ. ಕೆಲ ಕಡೆಗಳಲ್ಲಿ ಹೆಸರು ಮಾತ್ರ ತಿಳಿದುಬರುತ್ತದೆಯಾದರೂ ಲಿಂಗವನ್ನು ತೆಗೆದುಬಿಟ್ಟಿರುವುದನ್ನು ನೋಡಬಹುದಾಗಿದೆ. ಗೋಕರ್ಣೇಶ್ವರನಿಗೆ ಇರುವ ಪ್ರಾಶಸ್ತ್ಯ ಈ ದೇವಾಲಯಗಳಿಗೆ ಇರುವುದಿಲ್ಲ.

ಸಾಮಾಜಿಕ ಮತ್ತು ಧಾರ್ಮಿಕ ಅಧ್ಯಯನ ನಡೆಸಲು ಇಂತಹ ನಿರೂಪಗಳು ಉತ್ತಮ ಆಕರಗಳಾಗಿವೆ. ಇಂತಹ ನಿರೂಪಗಳು ಗೋಕರ್ಣದ ಪ್ರತಿಯೊಬ್ಬರ ಮನೆಯಲ್ಲಿಯೂ ಲಭ್ಯವಿವೆ. ಇವುಗಳನ್ನು ಸಂಗ್ರಹಿಸುವ ಮತ್ತು ಪ್ರಕಟಿಸುವ ಕೆಲಸ ಆಗುತ್ತಿರುವುದು ನಮ್ಮ ಸುದೈವ. ಗೋಕರ್ಣ ಇತಿಹಾಸಕ್ಕೆ ಇದು ಹೊಸ ಸೇರ್ಪಡೆಯಾಗಿದೆ.





# ಗದಗ ಜಿಲ್ಲೆ ರೋಣ ತಾಲ್ಲೂಕಿನ ಬಾಸ್ಲಾಪುರದ ನವಶೋಧಿತ ಶಾಸನ

ಡಾ. ಎಸ್.ಕೆ. ಮೇಲಕಾರ* ಡಾ. ಆರ್.ಎಂ. ಷಡಕ್ಷರಯ್ಯ**

ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಒಂದು ಸಣ್ಣ ಹಳ್ಳಿ ಬಾಸ್ಲಾಪುರ ಗ್ರಾಮ. ಇದು ನವಲಗುಂದದಿಂದ ರೋಣಕ್ಕೆ ಹೋಗುವ ಮಾರ್ಗದಲ್ಲಿ ರೋಣದಿಂದ ೭ ಕಿ.ಮೀ. ದೂರದಲ್ಲಿರುತ್ತದೆ. ಈ ಗ್ರಾಮದಲ್ಲಿ ಪುರಾತನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗಿನ ಇತಿಹಾಸದ ಕುರುಹುಗಳು ಇಲ್ಲಿ ಕಂಡು ಬರುತ್ತವೆ. ಪ್ರಾಚೀನ ಕಾಲದ ಪುಲಗೇರಿ ೩೦೦ಕ್ಕೆ ಸೇರಿದ ರೋಣ ತಾಲ್ಲೂಕು ಈ ಗ್ರಾಮದ ಹತ್ತಿರದಲ್ಲಿಯೇ ಇದ್ದು ಅಲ್ಲಿ ರಾಷ್ಟ್ರಕೂಟ ಕಲ್ಯಾಣದ ಚಾಳುಕ್ಯರು ಕಲಚೂರಿಗಳ ಕಾಲಕ್ಕೆ ಸೇರಿದ ಅಪಾರ ಶಾಸನ, ದೇವಾಲಯಗಳು ಮೂರ್ತಿ ಶಿಲ್ಪಗಳು ಬಸದಿಗಳು, ಕೆರೆ, ಬಾವಿಗಳು ಈ ಪ್ರದೇಶದ ಇತಿಹಾಸವನ್ನು ಸ್ಪಷ್ಟಪಡಿಸುತ್ತವೆ.

ಬಾಸ್ಲಾಪುರ ಗ್ರಾಮದ ವೀರಭದ್ರ ದೇವಾಲಯದ ಈರಣ್ಣನ ಮೂರ್ತಿಯ ಹಿಂದೆ ಬರೆದ ಶಾಸನ ಇತ್ತೀಚಿಗೆ ಶೋಧಿಸಿದ್ದು, ಮೊದಲು ಇದು ಶಾಸನ ಕಲ್ಲಾಗಿದ್ದು, ನಂತರ ಕಾಲದಲ್ಲಿ ಈರಣ್ಣ ದೇವರ ಮೂರ್ತಿಯನ್ನು ಮಾಡಿಸಿ ಕಳೆದ ಎರಡು ನೂರು ವರ್ಷಗಳ ಹಿಂದೆ ಗರ್ಭಗುಡಿಯಲ್ಲಿ ಪ್ರಸ್ತಾಪಿಸಿರುತ್ತಾರೆ. ಅದರ ಎದುರಿಗೆಯೇ ಈಗ ಮತ್ತೊಂದು ಹೊಸ ಗುಡಿ ಕಟ್ಟಿಸುತ್ತಿದ್ದಾರೆ. ಆ ದೇವರಭಕ್ತರೊಬ್ಬರು ಮೂರ್ತಿಯ ಹಿಂದೆ ಶಾಸನದ ಅಕ್ಷರಗಳಿರುವ ಸುಳಿವು ನಮಗೆ ನೀಡಿದರು. ಅವರ ವಿನಂತಿ ಮೇರೆಗೆ ಹೋಗಿ ನೋಡಲಾಗಿ ಶಾಸನ ಇರುವುದು ನಮಗೆ ಸ್ಪಷ್ಟವಾಯಿತು. ಆಗ ಸ್ಥಳೀಯ ಜನರ ಸಹಕಾರದಿಂದ ಮೂರ್ತಿಯ ಹಿಂದೆ ಕಟ್ಟಸಲ್ಪಟ್ಟ ಗದ್ದುಗೆಯನ್ನು ಕೂಲಿ ಆಳುಗಳಿಂದ ಒಡೆಯಿಸಿ ಸಿಮೆಂಟಿನಿಂದ ಮೆತ್ತಿದ ಪಾಲಿಷ್ಯನ್ನು ಸ್ವಚ್ಛಗೊಳಿಸಿ ನಂತರ ಶಾಸನ ಪ್ರತಿ ಹಾಗೂ ಛಾಯಾಚಿತ್ರ ತೆಗೆದು ಕೊಳ್ಳಲಾಯಿತು.

ಈ ಶಾಸನ ಕಲ್ಲು ನಾಲ್ಕು ಪೂಟು ಎತ್ತರವಿದ್ದು ಎರಡುವರೆ ಪುಟ ಅಗಲ, ನಾಲ್ಕು ಇಂಚು ದಪ್ಪವಾಗಿರುತ್ತದೆ. ಕರಿ ಕಲ್ಲಿನಲ್ಲಿ ಬರೆಯಲಸ್ಪಟ್ಟ ಈ ಶಾಸನದ ಶಿರೋಭಾಗದಲ್ಲಿ ಸೂರ್ಯಚಂದ್ರ ಮಧ್ಯ ಲಿಂಗ ಹಾಗೂ ಕರು–ಆಕಳ ಹಾಲನ್ನು ಕುಡಿಯುತ್ತಿರುವ ಉಬ್ಬು ಚಿತ್ರಗಳನ್ನು ಕೆತ್ತಲಾಗಿರುತ್ತದೆ. ಕೆಳಗಡೆ ೧೫ ಸಾಲುಗಳುಳ್ಳ ಶಾಸನ ಬರೆಯಲಾಗಿದ್ದು, ಅಕ್ಷರಗಳನ್ನು ದುಂಡಾಗಿ ಆಳವಾಗಿ ಕೊರೆಯಲಾಗಿದೆ. ಲಿಪಿಯ ಬೆಳವಣಿಗೆಯ ದೃಷ್ಟಿಯಿಂದ ಇದು ಕ್ರಿ.ಶ. ೧೨ನೆಯ ಶತಮಾನದ ಆದಿಭಾಗವೆಂದು ಗುರ್ತಿಸಲಾಗಿರುತ್ತದೆ.

**ಶಾಸನದ ಪಾಠ ಹೀಗಿರುತ್ತದೆ.**

೧ ಸ್ವಸ್ತಿ ಶ್ರೀ . ಖರಾ [ಸ್ವಂಮ್] ಸಂವತ್ಸರದ ಪ್ರವರ್ಧಮಾನೆ

೨ ರೇ ಪುಸ್ಯಾನಕ್ಷತ್ರದೊಳು ಬ್ರಹಸ್ಪತಿವಾರದ

೩ ನ್ದು . . . ತ್ರೈವೇಶ್ವರ (ತ್ರೈಲೋಕೇಶ್ವರ) (ಯ) . .

೪ . . ಇದ ವಸಾ . . . . . ತಿಲೊ . . ನಿ

೫ ಶ್ರೀಮತು . . ಪ್ಪಾಯ್ಯಾರ್ತಿ . . . . . . ಹಿರ್ಗು . . .

೬ ನೈವೇದ್ಯಕ್ಕೆ . . ಮನ್ನೀಯಮ್ ಶ್ರೀ ಇಂದ್ರರೆಬಿಟ್ಟಕ್ಕೇ

೭ ಯ್ಯ ಮತ್ತರೈ ಐವತ್ತು ವಿದ್ಯಾಧಾನಕ್ಕೆ ಬಿಟ್ಟಕ್ಕೇಯ್ಯಮತ್ತ

೮ ರೈ ವತ್ತು ೧೧/– ವೈರ(ದ) . ನ . ಗೊ ನವಿಜಪ್ಪಾರಣೊಯ್ದು

೯ ವೆಕ್ಕೆಂಟಪ್ಪಾ . . . ನೆನುರಾನ . . . ಇ . . . ಜಮಾ

೧೦ ಹತ್ತನೇ ಸಾಲಿನಲ್ಲಿ ಅಕ್ಷರಗಳು ಕಾಣದಂತೆ ಹಾಳಾಗಿವೆ.

೧೧ ಇಂತೀ ಧರ್ಮಮಂ . . . . ರಕ್ಷಿಸದವರು ವಾರಣಾಸಿಯ ಲೊಂದು ಕೋಟಿ ಕವಿಲೆ ಯಮನ ನಿಬರು ವೇದ ಪಾರಗರಪ್ಪ ಬ್ರಾಹ್ಮಣರ್ಗ್ಗೆ ದಾನಂಗೊಟ್ಟ . . . . . . . . . . . . . ಕವಿ ಲೆಯಮನಯಮ ಬ್ರಾಹ್ಮಣರು ಮನಳಿದ ದೋಷ ಮನೆಯ್ಯವರು . . ಮಂಗಳ ಮಹಾಶ್ರೀ

* ಮ್ಯೂಜಿಯಂ ಮೇಲ್ವಿಚಾರಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦೦೦೩.

** ಇತಿಹಾಸ ಮತ್ತು ಪುರಾತತ್ವ ಪ್ರಾಧ್ಯಾಪಕರು, ನಿರ್ದೇಶಕ (ಪ್ರ), ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಶಾಸನದ ಮುಂದಿನ ಭಾಗದಲ್ಲಿ ಈರಣ್ಣನ ಮೂರ್ತಿ ಾಡಿದ್ದ ರಿಂದ ಬಹಳಷ್ಟು ಅಕ್ಷರಗಳು ಹಾಳಾಗಿದ್ದರೆ ಇನ್ನು ಲವು ಅಕ್ಷರಗಳು ಸಿಮೆಂಟ ಮೆತ್ತನೆಯಿಂದಾಗಿ ಅಸ್ಪಷ್ಟವಾಗಿವೆ. ೇಗಾಗಿ ಶಾಸನದಲ್ಲಿ ಉಲ್ಲೇಖಿಸಲ್ಪಟ್ಟ ಅರಸನ ಹೆಸರು ುತ್ತು ಪ್ರಶಸ್ತಿಯ ಕೆಲ ಭಾಗವು ಮತ್ತು ಕಾಲಮಾನದ ಕೆಲವು ವರಗಳಿಲ್ಲ. ಶಾಸನೋಕ್ತ ಬೃಹಸ್ಪತಿವಾರ ಮತ್ತು ಪುಷ್ಯ



ಂಗಳ ಉಲ್ಲೇಖವಿದೆ. ಶಾಸನದ ಮೇಲೆ ಕೆತ್ತಲಾದ ಶಿವಲಿಂಗ, ಕಳು ಮತ್ತು ಕರು ಹಾಗೂ ಕುಳಿತ ನಂದಿಯ ಉಬ್ಬು ತ್ರಗಳ ಕೆಳಗಡೆ ವೃತ್ತಾಕಾರದ ಶಿವಲಿಂಗವನ್ನು ಕೆತ್ತಲಾಗಿದೆ. ದರ ಬದಿಗಳಲ್ಲಿ ಆಯತಾಕಾರದ ರಂಧ್ರಗಳಿವೆ. ಕೊನೆಯಲ್ಲಿ ಾಪಶಯದ ಶ್ಲೋಕವಿರುವುದು. ಈ ಶಾಸನದ ಅಕ್ಷರ ಮತ್ತು ಲ್ಲಿನ ಬಳಕೆ ಇಲ್ಲಿ ದೊರೆತಿರುವ ಇನ್ನಿತರ ಪ್ರಾಚ್ಯಾವಶೇಷಗಳ ಧಾರದ ಮೇಲೆ ಇದರ ಕಾಲಮಾನ ಕ್ರಿ.ಶ. ೧೧-೧೨ನೇ ತಮಾನವೆಂದು ನಿರ್ಧರಿಸಲಾಗಿದೆ.

ಬಾಸ್ಲಾಪುರ ಗ್ರಾಮದ ವೀರಭದ್ರ ದೇವಾಲಯದ ಕ್ಕದಲ್ಲಿ ೧೨ನೇ ಶತಮಾನದ ನಾಗಶಿಲ್ಪ ಮತ್ತು ಲಿಂಗಮುದ್ರೆ ಲ್ಲುಗಳು ಇರುತ್ತವೆ. ಗುಡಿಯ ಮುಂದಿನ ಭಾಗದ ಗೋಡೆಗೆ ತಾಗಿಸಿ ಇಡಲ್ಪಟ್ಟ ಹನುಮಾನ ಮೂರ್ತಿ ೬ ಫೂಟು ಎತ್ತರವಾಗಿದ್ದು, ಅದು ವಿಜಯನಗರ ಕಾಲದ್ದಾಗಿದೆ. ಹಾಗೆಯೇ ೧೭-೧೮ನೇ ಶತಮಾನದ್ದೆನ್ನಲಾದ ದ್ಯಾಮವ್ವನ ಗುಡಿಯ ಮರದ ಬಾಗಿಲು ಬಿದ್ದುಕೊಂಡಿರುತ್ತದೆ. ಈ ಪ್ರಾಚ್ಯ ವಸ್ತುಗಳಿರುವ ಸ್ಥಳದಿಂದ ೨೫ ಮೀಟರ ದೂರದಲ್ಲಿ ೧೮ನೇ ಶತಮಾನದ ಭಾವಿ ಕೂಡ ಇದ್ದಿರುತ್ತದೆ.



ಇವೆಲ್ಲ ಪ್ರಾಚ್ಯಾವಶೇಷಗಳ ಆಧಾರದಿಂದ ಬಾಸ್ಲಾಪುರ ಗ್ರಾಮದ ಪ್ರಾಚೀನತೆ ಹಾಗೂ ಇತಿಹಾಸವನ್ನು ಗುರುತಿಸುವಲ್ಲಿ ಇತಿಹಾಸಕಾರರಿಗೆ ಸಹಾಯಕಾರಿಯಾಗುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ.

[ಈ ಶಾಸನ ಓದಲು ಸಹಾಯ ಮಾಡಿದ ಬಾಸ್ಲಾಪುರ ಗ್ರಾಮದ ಈರಣ್ಣಾ ದೇವರ ಭಕ್ತರಾದ ಶ್ರೀಮತಿ. ಸರಸ್ವತಿ ಮತ್ತು ಊರಿನ ಪ್ರಮುಖರಾದ ಶ್ರೀ ಪಾಲಕ್ಷಯ್ಯ ಹಿರೇಮಠ, ಶ್ರೀ ವೀರಭದ್ರಪ್ಪಾ ಹೂಗಾರ, ಶ್ರೀ ರುದ್ರಗೌಡ ಇವರಿಗೆ ಕೃತಜ್ಞತೆಗಳು ಸಲ್ಲಿಸದೆ ಇರಲಾರೆ. ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ಧರ್ಮಪತ್ನಿ ರಮಾ. ಜಿ. ಇವರಿಗೂ ವಂದನೆಗಳು.]



## ಆಧಾರಸೂಚಿ


ಸೂರ್ಯನಾಥ. ಯು. ಕಾಮತ್, ೧೯೯೫ (ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, **ಧಾರವಾಡ ಜಿಲ್ಲೆ ಗ್ಯಾಸೆಟಿಯರ್**, ಕರ್ನಾಟಕ ಸರಕಾರ ಬೆಂಗಳೂರು, ಪುಟ ೧೦೦೨-೦೩.

ಡಾ. ಜಯಮ್ಮ, ೨೦೧೧, **ಧಾರವಾಡ ಜಿಲ್ಲೆಯ ಪುರಾತತ್ತ್ವ ಅಧ್ಯಯನ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಡಾ. ಆರ್. ಗೋಪಾಲ (ಸಂ), ೨೦೦೮, **ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ಕರ್ನಾಟಕ ರಾಜ್ಯ ಸರಕಾರದ ಪುರಾತತ್ತ್ವ ಇಲಾಖೆ, ಮೈಸೂರು.

**ಇತಿಹಾಸ ದರ್ಶನ** ಸಂಪುಟಗಳು, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.



# ಉಚ್ಚಂಗಿ ಪಾಂಡ್ಯರ ಅಪರೂಪದ ಗದ್ಯಾಣ

**ಮಂದರ್ಕೆ ನಿತ್ಯಾನಂದ ಪೈ***

ಮುಂಭಾಗದಲ್ಲಿ ಕುಳಿತಿರುವ ನಂದಿಯ ಚಿತ್ರವಿರುವ ೨ ಗದ್ಯಾಣಗಳು ಲಭ್ಯವಾಗಿದ್ದು ಅವುಗಳ ವಿವರ ಹೀಗಿವೆ.

**ಗದ್ಯಾಣ : ೧.**

**ಲೋಹ : ಚಿನ್ನ, ವ್ಯಾಸ : ೧೫ ಮಿ.ಮೀ., ತೂಕ : ೩.೭ ಗ್ರಾಂ.**





**ಮುಂಭಾಗ**

ಬಲಗಡೆಗೆ ಮುಖಮಾಡಿ ಪೀಠದ ಮೇಲೆ ಕುಳಿತಿರುವ ನಂದಿಯಿದ್ದು ಮೇಲೆ ಸೂರ್ಯ ಚಂದ್ರರಿದ್ದಾರೆ.

**ಹಿಂಭಾಗ**

ಹೂವಿನ ವಿನ್ಯಾಸದ ನಡುವೆ ಒಂದು ಸಾಲಿನ ೧೧–೧೨ನೇ ಶತಮಾನದ ಕನ್ನಡ ಲಿಪಿಯಲ್ಲಿ "ಶ್ರೀ ಪರಿಚ್ಚೇದಿ ಗನ್ಡ" ಎಂಬ ಬರಹವಿದೆ. ಈ ಬರಹದ ಕೆಲ ಅಕ್ಷರಗಳು ಸ್ವಲ್ಪ ಮಟ್ಟಿಗೆ ಶಿಥಿಲವಾಗಿರುವುದರಿಂದ ನಾಣ್ಯ ತಜ್ಞರು ಈ ಲಿಪಿಯನ್ನು "ಶ್ರೀ ಪರಿಜ್ವಲ ಗನ್ಡ" ಎಂದು ಓದಿ ಈ ನಾಣ್ಯವನ್ನು ಕ್ರಿ.ಶ. ೮೯೭–೯೩೪ರ ನೊಳಂಬ ದೊರೆ ಒಂದನೇ ಅಯ್ಯಪ್ಪ ದೇವನೆಂದು ಹೇಳಿದ್ದರು. ಆದರೆ ಪರಿಜ್ವಲ ಗಂಡ ಎಂಬ ಬಿರುದು ನೊಳಂಬರಿಗೆ ಇಲ್ಲದೇ ಇರುವುದರಿಂದ ಈ ನಾಣ್ಯವು ಖಂಡಿತವಾಗಿಯೂ ಒಂದನೇ ಅಯ್ಯಪ್ಪ ದೇವನದೆಂದು ಹೇಳಲಾಗುವುದಿಲ್ಲ.

**ಗದ್ಯಾಣ : ೨.**

**ಲೋಹ : ಚಿನ್ನ, ವ್ಯಾಸ : ೧೫ ಮಿ.ಮೀ. ತೂಕ : ೩.೮ ಗ್ರಾಂ.**





**ಕೆಲವೊಂದು ಮಾರ್ಪಾಡಿನೊಂದಿಗೆ ಈ ನಾಣ್ಯವು ಮೊದಲಿನ ನಾಣ್ಯದಂತೆ ಇದೆ.**

**ಮುಂಭಾಗ**

ಬಲಗಡೆಗೆ ಮುಖಮಾಡಿ ಪೀಠದ ಮೇಲೆ ಕುಳಿತಿರುವ ನಂದಿಯ ಚಿತ್ರವಿದ್ದು ನಂದಿಯ ಎದುರು ಭಾಗದಲ್ಲಿ ಚಾಮರವಿದೆ. ಚಾಮರದ ಮೇಲೆ 'ಮೀನಿ'ನ ಚಿತ್ರವಿರುವುದು ವಿಶೇಷವಾಗಿದೆ. ಈ ನಾಣ್ಯದ ಮೇಲಿರುವ ನಂದಿಯ ಮೊದಲನೆಯ ನಾಣ್ಯದಲ್ಲಿರುವ ನಂದಿಗಿಂತಲೂ ಹೆಚ್ಚಾಗಿ ಅಲಂಕೃತವಾಗಿದೆ. ನಂದಿಯ ಮೇಲ್ಭಾಗದಲ್ಲಿ ಸೂರ್ಯ ಚಂದ್ರರಿದ್ದು, ನಾಣ್ಯದ ಮೇಲ್ಭಾಗದ ಅಂಚಿನಿಂದ ಸಣ್ಣ ಸಣ್ಣ ಗಂಟೆಗಳನ್ನು ನೇತಾಡಿಸಿದ್ದಂತೆ ಚಿತ್ರಣ ಕಂಡುಬರುತ್ತದೆ.

**ಹಿಂಭಾಗ**

ಹಿಂಬದಿಯ ಹೂವಿನ ವಿನ್ಯಾಸ ಮೊದಲನೆಯ ನಾಣ್ಯಕ್ಕಿಂತ ಸ್ವಲ್ಪ ಭಿನ್ನವಾಗಿದ್ದು ನಾಣ್ಯದ ಮಧ್ಯಭಾಗದಲ್ಲಿ ೧೧–೧೨ನೇ ಶತಮಾನದ ಕನ್ನಡ ಲಿಪಿಯಲ್ಲಿ "ಶ್ರೀ ಪರಿಚ್ಛೇದಿ ಗನ್ಡ" ಎಂಬ ಒಂದು ಸಾಲಿನ ಬರಹ ಇದೆ.

* ಗಣೇಶ್ ಎಂಟರ್‌ಪ್ರೈಸಸ್, ಹಳೇ ಬಸ್ ನಿಲ್ದಾಣ, ಮೂಡುಬಿದ್ರೆ–೫೭೪೨೨೭.

ನೊಳಂಬರ ಅವನತಿಯ ನಂತರ ಅವರ ಉತ್ತರಾಧಿಕಾರಿಯಂತೆ ಉಚ್ಚಂಗಿ ಪಾಂಡ್ಯರು ನೊಳಂಬರ ಕೆಲವು ಪ್ರಾಂತ್ಯಗಳನ್ನು ಆಳಿಕೊಂಡಿದ್ದರು. ಯದುವಂಶಜರೆಂದು ಹೇಳಿಕೊಳ್ಳುವ ಉಚ್ಚಂಗಿ ಪಾಂಡ್ಯರು ಕಲ್ಯಾಣ ಚಾಳುಕ್ಯರ ಸಾಮಂತರಾಗಿ ಕ್ರಿ.ಶ. ೧೧-೧೨ನೇ ಶತಮಾನದಲ್ಲಿ ಚಿತ್ರದುರ್ಗ ಜಿಲ್ಲೆ ಮತ್ತು ಅದರ ಸುತ್ತಮುತ್ತಲಿನ ಪ್ರದೇಶವನ್ನು ಒಳಗೊಂಡ ನೊಳಂಬವಾಡಿ ೩೨೦೦೦ವನ್ನು ಆಳಿಕೊಂಡಿದ್ದರು. ಮಹಾಮಂಡಲೇಶ್ವರ, ಕಾಂಚೀಪುರವರಾಧೀಶ್ವರ ಮುಂತಾದ ಪಲ್ಲವ, ನೊಳಂಬರ ಬಿರುದುಗಳನ್ನು ಧರಿಸಿಕೊಂಡು ಉಚ್ಚಂಗಿಯಿಂದ ಆಳ್ವಿಕೆ ಮಾಡಿಕೊಂಡಿದ್ದರು.

ಆದಿತ್ಯದೇವ ಅಥವಾ ಮಂಗಯ್ಯ ಈ ರಾಜ್ಯದ ಸ್ಥಾಪಕ. ತದನಂತರ ಆಳಿದ ಕೆಲರಾಜರ ಹೆಸರುಗಳು ತಮಿಳು ಮೂಲದ ಪಲಮಾಂದ ಪಾಂಡ್ಯ, ಇರುಕ್ಕವೇಲ್, ಪಲಿಂದ ಪಾಂಡ್ಯ ಎಂದು ಇರುವುದರಿಂದ ಇವರು ತಮಿಳು ನಾಡಿನಿಂದ ಬಂದಿರಬೇಕೆಂದು ಊಹೆಯು ಸಹ ಇದೆ.

ಕಲ್ಯಾಣ ಚಾಳುಕ್ಯ ಚಕ್ರವರ್ತಿ ತ್ರಿಭುವನಮಲ್ಲ ಆರನೇ ವಿಕ್ರಮಾದಿತ್ಯನ (ಕ್ರಿ.ಶ. ೧೦೭೬-೧೧೨೬) ಸಾಮಂತ ಉಚ್ಚಂಗಿ ದೊರೆ ತ್ರಿಭುವನಮಲ್ಲ ಪಾಂಡ್ಯನು ನೊಳಂಬವಾಡಿ ೩೨೦೦೦ವನ್ನು ಆಳುತ್ತಿದ್ದ. ನಂತರ ದೊರೆ 'ತ್ರಿಭುವನಮಲ್ಲ ರಾಯಪಾಂಡ್ಯ' ಇವನು ದಾವಣಗೆರೆಯ ಸಮೀಪದ ಬೆಳತೂರಿನಿಂದ ಆಳ್ವಿಕೆ ಮಾಡುತ್ತಿದ್ದು ಕಳಿಂಗ, ಸಿಂಹಳ, ಸಿಂಗ ಮತ್ತು ಕಲುತ ದೊರೆಗಳನ್ನು ಸೋಲಿಸಿದ್ದ ಎಂದು ಶಾಸನಗಳು ತಿಳಿಸುತ್ತವೆ. ಇವನ ಎರಡನೆಯ ಮಗ 'ವೀರಪಾಂಡ್ಯ'ನ ಕಾಲದಲ್ಲಿ ಉಚ್ಚಂಗಿ ಇವರ ರಾಜಧಾನಿಯಾಗಿತ್ತು. ಇವನಿಗೆ ಚಾಳುಕ್ಯ ರಾಜಕುಮಾರನ ಬಲಭಾಗದಲ್ಲಿ ನಿಲ್ಲುವ ಅಧಿಕಾರವಿತ್ತೆಂದು ಶಾಸನಗಳು ಹೇಳುತ್ತವೆ.

ನಂತರ ದೊರೆ 'ವಿಜಯಪಾಂಡ್ಯ' ಅಥವಾ ಕಾಮದೇವ. ಈತ ಬಹು ಪರಾಕ್ರಮಿಯಾಗಿದ್ದು ಈತನ ಕಿರೀಟಾಗ್ರ ದೊಡ್ಡ ನೀಲಮಣಿಗಳಿಂದ ನಿರ್ಮಿತವಾಗಿತ್ತೆಂದು ಈತನ ಬಾಹುಗಳು ಸುವರ್ಣ ತೋಳು ಬಂದಿಗಳಿಂದ ಅಲಂಕೃತವಾಗಿತ್ತೆಂದು ಕನಕ ಪರ್ವತದಲ್ಲಿ ಈತ 'ಮತ್ಸ್ಯಲಾಂಛನ'ದ ವಿಜಯ ಸ್ತಂಭವನ್ನು ಸ್ಥಾಪಿಸಿದನೆಂದು ಇವನ ಖಜಾನೆಯು ರತ್ನಗಳಿಂದ ಸಂಪತ್ಭರಿತವಾಗಿತ್ತೆಂದು ಈತನ ಕೆಳ ಗೃಹ ಮಲಯ ಪರ್ವತದ ಚಂದನ ವೃಕ್ಷಗಳ ಸಮೂಹದಲ್ಲಿತ್ತೆಂದು ಶಾಸನಗಳು ಹೊಗಳುತ್ತವೆ. ಕ್ರಿ.ಶ. ೧೧೮೪ರ ಸುಮಾರಿಗೆ ಇವನು ಸ್ವತಂತ್ರವಾಗಿ ಆಳ್ವಿಕೆ ನಡೆಸಿರಬೇಕು. ಆ ಕಾಲದ ಶಾಸನದಲ್ಲಿ ಕಲ್ಯಾಣ ಚಾಳುಕ್ಯರ ಹೆಸರು ಇಲ್ಲದೇ ಇರುವುದು ಇದನ್ನು ಸೂಚಿಸುತ್ತದೆ. ಏಕೆಂದರೆ ಈ ಸಮಯ ಕಲ್ಯಾಣ ಚಾಳುಕ್ಯರ ಅವನತಿಯ ಸಮಯವಾಗಿತ್ತು.

ಪ್ರಸ್ತುತ ನಾಣ್ಯದ ಮೇಲಿರುವ 'ಶ್ರೀ ಪರಿಚ್ಛೇದಿ ಗಂಡ' ಎಂಬ ಬಿರುದು 'ತ್ರಿಭುವನಮಲ್ಲ ರಾಯಪಾಂಡ್ಯ' ಮತ್ತು 'ವಿಜಯ ಪಾಂಡ್ಯನ' ಶಾಸನಗಳಲ್ಲಿ ಮಾತ್ರ ಕಂಡುಬರುತ್ತದೆ. 'ಪರಿಚ್ಛೇದಿ ಗಂಟ' ಎಂದರೆ ಸುತ್ತಲೂ ಆಕ್ರಮಿಸಿದ ಶತ್ರುಗಳನ್ನು ಕತ್ತರಿಸುವವನು? ಎಂದಾಗುತ್ತದೆ. (A Champian Cutting on both Sides) ದಾವಣಗೆರೆಯ ಮುಸಾಫಿರ ಬಂಗಲೆಯ ಬಳಿ ೭' ೯" x ೧' ೫" ಗಾತ್ರದ ೪೮ ಸಾಲಿನ ಕಲ್ಯಾಣ ಚಾಳುಕ್ಯ ದೊರೆ ಆರನೇ ವಿಕ್ರಮಾದಿತ್ಯನ ಶಾಸನವಿದೆ. ಇದರ ಕಾಲ ಚಾಳುಕ್ಯ ವಿಕ್ರಮ ವರ್ಷ ೪೮ ಅಂದರೆ ಕ್ರಿ.ಶ. ೧೧೨೩. ಈ ಶಾಸನದ ೧೮, ೧೯, ೨೦, ೨೧ನೇ ಸಾಲಿನಲ್ಲಿ ಸ್ವಸ್ತಿ ಸಮಧಿಗತ ಪಂಚಮಹಾಸಬ್ದ ಮಹಾಮಂಡಲೇಶ್ವರ, ಕಾಂಚೀಪುರವರಾಧೀಶ್ವರಂ ಯದುವಂಸಾಬರ ದ್ಯುಮಣಿ ಸುಭಟ ಚೂಡಾಮಣಿ ನಿಜಕುಳ ಕಮಳ ಮಾರ್ತ್ತಂಡಂ ಪರಿಚ್ಛೇದಿ ಗಣ್ಡಂ ರಾಜಿಜೋಳ ಮನೋಭಗಂ ಶ್ರೀಮತ್ತ್ರಿಭುವನಮಲ್ಲದೇವ ಪಾದಾಬ್ಜ ಭೃಂಗಂ ಶ್ರೀಮನ್ಮಮಹಾ ಮಹಾಮಂಡಳೇಶ್ವರ ತ್ರಿಭುವನ ಮಲ್ಲರಾಯ ಪಾಂಡ್ಯ ದೇವರು ನೊಳಂಬವಾಡಿ ಮೂಮತ್ತಿರ್ಚ್ಛಾಸಿರಮು....ಹಾಗೆಯೇ ಶಾಸನದ ೩೨ನೇ ಸಾಲಿನಲ್ಲಿಯೂ ಸಹಾ 'ಪರಿಚ್ಛೇದಿ ಗಂಡ' ಪಲ್ಲವರಾಯ ಪಡೆವೀಡಿನೊಳ....ಎಂದಿದೆ.

ದಾವಣಗೆರೆಯ ಇನ್ನೊಂದು ೬'೨" x ೨' ಗಾತ್ರದ ೬೨ ಸಾಲಿನ ಉಚ್ಚಂಗಿ ದೊರೆ 'ವಿಜಯಪಾಂಡ್ಯ'ನ ಶಾಸನವಿದೆ. ಚಾಳುಕ್ಯ ವಿಕ್ರಮಶಕೆ ಬದಲು ಶಾಲಿವಾಹನ ಶಕ ೧೦೯೩ ಅಂದರೆ ಕ್ರಿ.ಶ. ೧೧೭೧ ಕಾಲದ ಶಾಸನ ಇದಾಗಿದೆ. ಇಲ್ಲಿ ಚಾಳುಕ್ಯ ಚಕ್ರವರ್ತಿಯ ಹೆಸರಿಲ್ಲಾ ಈ ಸಮಯ ಚಾಳುಕ್ಯರ ಅವನತಿಯ ಕಾಲ ಮತ್ತು ಕಲಚೂರಿಯರ ಉನ್ನತಿಯ ಕಾಲವಾಗಿತ್ತು. ಅಂದರೆ ವಿಜಯ ಪಾಂಡ್ಯನು ಸ್ವತಂತ್ರವಾಗಿ ಆಳ್ವಿಕೆ ನಡೆಸಿರಬೇಕು. ಈ ಶಾಸನದ ೪, ೫, ೬, ೬, ೭, ೮ನೇ ಸಾಲಿನಲ್ಲಿ ಸ್ವಸ್ತಿ ಸಮಧಿಗತ ಮಹಾಶಬ್ದ ಮಹಾಮಂಡಳೇಶ್ವರಂ ಕಾಂಚಿಪುರವರಾಧೀಶ್ವರಂ ಯದು ವಂಶಾಂಬರ ದ್ಯುಮಣಿ ಸುಭಟ ಚೂಡಾಮಣಿ.... ಪಾಂಡ್ಯ ಕುಳ ಕಮಳ ಮಾರ್ತ್ತಂಡಂ 'ಪರಿಚ್ಛೇದಿ ಗಂಡಂ' ರಾಜಿಗಚೋಳ ಮನೋಭಂಗಂ....ಶ್ರೀ ಮದ್ವಿಜಯ ಪಾಂಡ್ಯದೇವ ವಿಜಯ ರಾಜ್ಯಂ....ಎಂದು ಮುಂದುವರಿಯುತ್ತದೆ.

ಅದರಿಂದ 'ಪರಿಚ್ಛೇದಿ ಗಂಡ' ಎಂಬ ಬಿರುದು ಇರುವ ನೊಳಂಬರ ಯಾವುದೇ ಶಾಸನಗಳು ಲಭ್ಯವಿಲ್ಲದಿರು

ವುದರಿಂದ ಈ ನಾಣ್ಯಗಳನ್ನು ಕೇವಲ ಮುಂಭಾಗದಲ್ಲಿರುವ 'ನಂದಿ' ಲಾಂಛನದ ಆಧಾರದಿಂದ ನೊಳಂಬರದ್ದೆಂದು ಹೇಳುವುದು ಕಷ್ಟ. ಅಲ್ಲದೇ ನಂದಿಯ ಎದುರು ಉಚ್ಚಂಗಿ ಪಾಂಡ್ಯರ ಲಾಂಛನವಾದ 'ಮೀನು' (ಉಚ್ಚಂಗಿ ಪಾಂಡ್ಯರು ಪಾಠೀನ ಲಾಂಛನರು, ಅಂದರೆ ಮೀನ ಲಾಂಛನರು) ಇರುವುದರಿಂದ ಮತ್ತು 'ಪರಿಚ್ಛೇದಿ ಗಂಡ' ಎಂಬ ಬಿರುದು ಉಚ್ಚಂಗಿ ಪಾಂಡ್ಯ ರಾಜರುಗಳಾದ 'ರಾಯಪಾಂಡ್ಯ' ಮತ್ತು ವಿಜಯಪಾಂಡ್ಯರಿಗೆ ಇರುವುದರಿಂದ ಈ ನಾಣ್ಯವು ಉಚ್ಚಂಗಿ ಪಾಂಡ್ಯರದ್ದೆಂದು ಖಂಡಿತವಾಗಿಯು ಹೇಳಬಹುದು. ಮಾತ್ರವಲ್ಲದೇ ಈ ನಾಣ್ಯವನ್ನು ಉಚ್ಚಂಗಿ ಪಾಂಡ್ಯರಲ್ಲಿ ಪರಾಕ್ರಮಿ ಹಾಗೂ ಕಲ್ಯಾಣ ಚಾಳುಕ್ಯರಿಂದ ಸ್ವತಂತ್ರವಾಗಿ ಆಳ್ವಿಕೆ ಮಾಡಿದ ಉಚ್ಚಂಗಿ ದೊರೆ ವಿಜಯಪಾಂಡ್ಯ ದೇವನು ಟಂಕಿಸಿರಬಹುದೆಂದು ಊಹಿಸಬಹುದು.

ನೊಳಂಬರ ಅವನತಿಯ ನಂತರ ಅವರ ಪ್ರಾಂತ್ಯವನ್ನು ನೊಳಂಬರ ಉತ್ತರಾಧಿಕಾರಿಯಂತೆ ಆಳಿದ ಪಾಂಡ್ಯರ ಈ ಗದ್ಯಾಣವು ಒಂದು ಮಹತ್ತ್ವದ ಹೊಸ ಶೋಧವಾಗಿದೆ.

[ಈ ಪ್ರಬಂಧವನ್ನು ಮಂಡಿಸಲು ಶಾಸನಗಳ ವಿವರಗಳನ್ನು ಕೊಟ್ಟು ಬಹುವಾಗಿ ಸಹಕರಿಸಿದ ಶ್ರೀ ಟಿ.ಎಸ್. ಗಂಗಾಧರ, ಸಹಾಯಕ ನಿರ್ದೇಶಕರು ಕರ್ನಾಟಕ ಸರಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ಇವರಿಗೆ ಮತ್ತು ಮಾಹಿತಿಗಳನ್ನು ನೀಡಿದ ಡಾ. ಬಿ. ರಾಜಶೇಖರಪ್ಪ ಚಿತ್ರದುರ್ಗ ಇವರಿಗೆ ತುಂಬು ಹೃದಯದ ಕೃತಜ್ಞತೆಗಳು.]



## ಆಧಾರಸೂಚಿ

೧. ಡಾ. ಬಿ. ರಾಜಶೇಖರಪ್ಪ ಇವರು ಪರಿಚ್ಛೇದಿ ಗಂಡ ಎಂಬ ಬಿರುದು ಮೊದಲಿಗೆ ನೊಳಂಬರಿಗೆ ಇದ್ದಿರಬಹುದೇ ಎಂದು ಸಂದೇಹ ವ್ಯಕ್ತಪಡಿಸಿದರಾದರೂ ಅದಕ್ಕೆ ಪೂರಕವಾಗಿ ಯಾವುದೇ ಶಾಸನಗಳು ಸಿಕ್ಕಿಲ್ಲ. ನೊಳಂಬರ ಈ ಬಿರಿದಿರುವ ಶಾಸನಗಳು ಸಿಕ್ಕಿದ್ದರೆ ಮೊದಲಿನ ನಾಣ್ಯ ಅಂದರೆ ನಂದಿಯ ಎದುರು ಮೀನಿನ ಚಿತ್ರ ಇಲ್ಲದಿರುವ ನಾಣ್ಯವನ್ನು ನೊಳಂಬರಿಗೆ ಸೇರಿದ್ದೆಂದು ಹೇಳಬಯಸುತ್ತೇನೆ.

೨. *The Nolambas a Political and Cultural Study,* Dr. M.S. Krishnamurthy, University of Mysore.

೩. *The Nolamabas Coinage and History,* Govinda Prabhu S.

೪. E.C. Vol XI (ರೈಸ್ ಆವೃತ್ತಿ), Dg. No. 2 & No. 32.

೫. **ಕರ್ನಾಟಕದ ಕಿರು ಅರಸು ಮನೆತನಗಳು.**



# ಅನಂತಶಯನ ಶಿಲ್ಪಗಳು

ಡಾ. ಕೆ. ವಸಂತಲಕ್ಷ್ಮಿ*

**ಭಾ**ರತದಲ್ಲಿ ಪ್ರಾಚೀನ ಕಾಲದಿಂದಲೂ ವೈಷ್ಣವ ಧರ್ಮವು ಪ್ರಚಲಿತದಲ್ಲಿದೆ. ವೈದಿಕ ಪರಂಪರೆಯ ದೇವತೆಗಳ ಅರ್ಚನಾ ಮೂರ್ತಿಗಳಲ್ಲಿ ಶಯನಭಂಗಿಯಲ್ಲಿ ಕಾಣಸಿಗುವುದು ವಿಷ್ಣುವಿನ ಮೂರ್ತಿಗಳು ಮಾತ್ರ. ವಿಷ್ಣುವಿನ ಶಯನಭಂಗಿಯ ಮೂರ್ತಿಯನ್ನು ಜಲಶಾಯಿ, ಶೇಷಶಾಯಿ, ರಂಗನಾಥ, ಅನಂತಪದ್ಮನಾಭ, ಅನಂತಶಯನ ಮೂರ್ತಿ ಮುಂತಾದ ಹೆಸರುಗಳಿಂದ ಪೂಜಿಸುತ್ತಾರೆ. ಪುರಾಣಗಳು ತಿಳಿಸುವಂತೆ ವಿಷ್ಣುವಿನ ಪೂರ್ಣರೂಪದ ಶಕ್ತಿಯು ಅನಂತಶಯನ ರೂಪದಲ್ಲಿ ಶಾಶ್ವತವಾಗಿರುತ್ತದೆ ಎಂದು ತಿಳಿಸಿದೆ. ಪರಮಶ್ರೇಷ್ಠರೂಪವಾದ ಈ ಸ್ವರೂಪದ ಬಿಂಬವನ್ನು ಪೂಜಿಸುವುದರಿಂದ ಪರಮಪದವನ್ನು ಪಡೆಯುವರೆಂಬ ನಂಬಿಕೆ ಇದೆ. ಭಾದ್ರಪದ ಮಾಸದ ಶುಕ್ಲಪಕ್ಷದ ಚತುರ್ದಶಿಯಂದು 'ಅನಂತಪದ್ಮನಾಭ'ನನ್ನು ವಿಶೇಷವಾಗಿ ಪೂಜಿಸಲಾಗುತ್ತದೆ. ಅನಂತ ಪದ್ಮನಾಭ ದೇವರ ಸಾಂಕೇತಿಕವಾಗಿ 'ಅನಂತಪದ್ಮನಾಭ ವ್ರತಾಚರಣೆ' ಯಲ್ಲೂ ಗಂಗಾಯಮುನೆಯರನ್ನು 'ಕಲಶ' ರೂಪದಲ್ಲಿ ಪೂಜಿಸಲಾಗುತ್ತದೆ. ವಿಷ್ಣುವು ಪವಡಿಸಿದ್ದ ಅನಂತ ಅಥವಾ ಶೇಷನ ಸಂಕೇತವಾಗಿ ದರ್ಬೆಯಲ್ಲಿ 'ಶೇಷ'ನ ರೂಪವನ್ನು ಹೆಣೆದು ಆ ಕಲಶಗಳೊಂದಿಗೆ ಇಟ್ಟು ಪೂಜಿಸಲಾಗುತ್ತದೆ. ಈ ಹೆಣಿಗೆಯಲ್ಲೂ, ಅನಂತರ 'ನಿಮಿತ್ತ' ಕಟ್ಟಿಕೊಳ್ಳುವ ದಾರದಲ್ಲಿ ಹದಿನಾಲ್ಕು ಗಂಟುಗಳನ್ನು ಹಾಕಿದ್ದು, ಇದು 'ಚತುರ್ದಶಿ'ಯ ಪ್ರಾಮುಖ್ಯತೆಯನ್ನು ಸೂಚಿಸುತ್ತದೆ. ಈ ಅನಂತಪದ್ಮನಾಭ ವ್ರತವನ್ನು, ಪೂಜೆಯನ್ನು ಮಾಡುವುದರಿಂದ 'ಅನಂತಾನಂತ ಫಲಗಳು' ದೊರೆಯುವುದೆಂದು ತಿಳಿಸಲಾಗಿದೆ. ಅನಂತನಾರಾಧನೆಯು ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ನಡೆದುಬಂದಿದ್ದು, ಈ ಪ್ರಬಂಧದಲ್ಲಿ ಕೆಲವು ಅನಂತಶಯನ ಶಿಲ್ಪಗಳನ್ನಾಧರಿಸಿ ವಿಷ್ಣುವಿನ ಈ ಸ್ವರೂಪದ ಆರಾಧನೆಯ ಬಗೆಗೆ ಬೆಳಕು ಚೆಲ್ಲಲು ಯತ್ನಿಸಲಾಗಿದೆ.

ವಿಷ್ಣುವು ಈ ಸ್ವರೂಪದಲ್ಲಿದ್ದಾಗ, ಅದರ ವಿಶೇಷತೆಯನ್ನು ಪುರಾಣಗಳು ಹೀಗೆ ತಿಳಿಸಿದೆ. (ಕಲ್ಪಾಂತ್ಯದಲ್ಲಿ ಜಗತ್ ಪ್ರಳಯವಾಗುವಾಗ ಜಗನ್ನಾಥನಾದ ವಿಷ್ಣುವು ಯೋಗನಿದ್ರೆಗೆ ಒಳಗಾಗುತ್ತಾನೆ) ಮಹಾಪ್ರಳಯದ ಕಾಲದಲ್ಲಿ ಕ್ಷೀರಸಾಗರದ ನಡುವೆ ಭೂಮಿಗೆ ಆಧಾರ ಭೂತವಾಗಿರುವ ಆದಿಶೇಷನನ್ನು ಪರ್ಯಂಕವಾಗಿಸಿಕೊಂಡು ಅದರ ಮೇಲೆ ಪವಡಿಸುತ್ತಾನೆ. ಆದಿಶೇಷನನ್ನು 'ಅನಂತ'ನೆಂದೂ ಕರೆಯುವರು. ಅನಂತನ ಮೇಲೆ ಶಯನಿಸಿದ ವಿಷ್ಣುವಿನ ರೂಪವು 'ಅನಂತಶಯನ', 'ಶೇಷಶಾಯಿ'ಯೆಂದೂ ಸಾಗರದ ನಡುವೆ ನೆಲೆಸುವನಾದ್ದರಿಂದ 'ಜಲಶಾಯಿ' ಎಂದೂ ಕರೆಯುವರು. ಸಕಲ ಕಾರ್ಯಕಾರಣ, ಜಗದೀಶನಾದ ವಿಷ್ಣುವು ಯೋಗನಿದ್ರೆಗೆ ತೊಡಗಿದರೆ, ಇಡೀ ಬ್ರಹ್ಮಾಂಡವೇ ಶೂನ್ಯವಾಗುತ್ತದೆ. ಘೋರವಾದ ತಮಾಂಧಕಾರದಲ್ಲಿ ಮುಳುಗುತ್ತದೆ. ಸೂರ್ಯ ಚಂದ್ರರು, ಚೇತೋಹೀನರಾಗಿ, ಪ್ರಕೃತಿ ವಿಕೋಪಕ್ಕೆ ಒಳಗಾಗುತ್ತದೆ. ಸೃಷ್ಟಿಕ್ರಿಯೆ ಸ್ತಬ್ಧವಾಗಲು ಭೂಭಾರವು ಅಧಿಕವಾಗಿ ಭೂದೇವಿಯು ಸಂಕಟಕ್ಕೀಡಾಗುತ್ತಾಳೆ. ರಕ್ಕಸರ ಶಕ್ತಿ ಪ್ರತಾಪ ಹೆಚ್ಚಿ ಮೇರೆ ಮೀರುತ್ತದೆ ಆಗ ಜಗತ್ತಿನ ರಕ್ಷಣೆಯ ಹೊಣೆ ಹೊತ್ತ ವಿಷ್ಣುವು ತಾನೇ ತಿಳಿಸಿರುವಂತೆ:

**ಪರಿತ್ರಾಣಾಯ ಸಾಧೂನಾಂ ವಿನಾಶಯ ಚ ದುಷ್ಕೃತಾಂ**
**ಧರ್ಮ ಸಂಸ್ಥಾಪನಾರ್ಥಯಾ ಸಂಭವಾಮಿ ಯುಗೇ ಯುಗೇ॥**

ಎನ್ನುವಂತೆ ಮತ್ತೆ ಜಗತ್‌ಸೃಷ್ಟಿಗೆ ಆರಂಭವಾಗುತ್ತದೆ. ವಿಷ್ಣುವು 'ಪದ್ಮನಾಭ'ನೆನಿಸುತ್ತಾನೆ. ಅನಂತನ ಮೇಲೆ ಪವಡಿಸಿದ ಪದ್ಮನಾಭನು 'ಅನಂತ ಪದ್ಮನಾಭ'ನಾಗಿದ್ದಾನೆ. ಸರ್ವಸೃಷ್ಟಿಗೆ ಕಾರಣ ಲೋಕದ ರಕ್ಷಕನಾದ ವಿಷ್ಣುವನ್ನು ದೇವಾನು ದೇವತೆಗಳು, ಮುನಿಗಳು, ಕಿನ್ನರರು, ಕಿಂಪುರುಷರಾದಿಯಾಗಿ ಸ್ತುತಿಸುತ್ತಾರೆ. ಹೀಗಾಗಿ 'ಅನಂತಪದ್ಮನಾಭನ' ಸ್ವರೂಪದಲ್ಲಿ ವಿಷ್ಣುವು ಕ್ಷೀರಸಾಗರದ ಮಧ್ಯದಲ್ಲಿ ಆದಿಶೇಷನ (ಅನಂತನ)

*೧೬೭೭, ೫೯ನೇ 'ಎ' ಅಡ್ಡರಸ್ತೆ, ೧೧ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ಬೆಂಗಳೂರು-೫೦.

ಶರೀರದ ಮೇಲೆ ನಿದ್ರಾವೃತನಾಗಿ ಯೋಗಿಯಂತೆ ಸ್ಥಿರಚಿತ್ತನಾಗಿ ಪವಡಿಸಿರುತ್ತಾನೆ. ತಪೋನಿರತನಂತೆ ಯೋಗನಿದ್ರೆಯಲ್ಲಿ ತಲ್ಲೀನನಾದ ವಿಷ್ಣುವನ್ನು ಸ್ತುತಿಸುತ್ತಿರುವಂತೆ ಶಿಲ್ಪಗಳಲ್ಲಿ ಚಿತ್ರಿಸಬೇಕೆಂದು ಶಾಸ್ತ್ರಗ್ರಂಥಗಳು ತಿಳಿಸಿವೆ.

[ಆಷಾಢದಿಂದ ಕಾರ್ತಿಕದವರೆಗಿನ ಮಾಸಗಳನ್ನು ಒಟ್ಟಾರೆ ಚಾತುರ್ಮಾಸವೆಂದು ಕರೆದಿದ್ದು ಈ ನಾಲ್ಕು ತಿಂಗಳ ಅವಧಿಯು ವೈಷ್ಣವರಿಗೆ ಪವಿತ್ರವೆನ್ನಿಸಿದೆ. ಆಷಾಢ ಶುದ್ಧ ಏಕಾದಶಿಯಿಂದ ವಿಷ್ಣುವು 'ಯೋಗನಿದ್ರೆ'ಗೆ ಹೋಗುವನಲ್ಲದೇ, ಕಾರ್ತೀಕ ಶುದ್ಧ ದ್ವಾದಶಿಯಂದು ಏಳುವನು. ಕೆಲವು ಗ್ರಂಥಗಳು, ಅವನು ಹುಣ್ಣಿಮೆಯಂದು ಮಲಗುವನೆಂದು ತಿಳಿಸಿವೆ. (140 D.V.I. p. 112] ಅವನು ಏಳುವ ದ್ವಾದಶಿಯನ್ನು ಉತ್ಥಾನ ದ್ವಾದಶಿ ಎನ್ನುವರು. ದೇವರು ಮಲಗಿರುವುದರಿಂದ ಯಾವುದೇ 'ನೈಮಿತ್ತಿಕ' 'ಕಾಮ್ಯ'ಗಳನ್ನು ಈ ದಿನಗಳಲ್ಲಿ ಆಚರಿಸಬಾರದೆಂಬ ನಿಯಮವಿದೆ ಎಂದೂ ಹೇಳಲಾಗಿದೆ. (ASIV, p. 394) ಈ ೪ ತಿಂಗಳು ಮಳೆಗಾಲವಾಗಿದ್ದು ಯಾಗ ಯಜ್ಞಗಳನ್ನು ಮಾಡಲು ಸಾಧ್ಯವಾಗುವುದಿಲ್ಲ. ಇದರಿಂದ ಈ ನಂಬಿಕೆ ಮೂಡಿರಬೇಕು].

ವೈಖಾನಸ ಆಗಮ ಗ್ರಂಥವು ವಿಷ್ಣುವಿನ ಶಯನ ರೂಪದ ಮೂರ್ತಿಗಳಲ್ಲಿ ನಾಲ್ಕು ವಿಧದ ಮೂರ್ತಿಗಳನ್ನು ತಿಳಿಸಿದೆ. ಅವೆಂದರೆ: (i) ಯೋಗಶಯನಮೂರ್ತಿ, ೨) ಭೋಗಶಯನಮೂರ್ತಿ, ೩) ವೀರಶಯನಮೂರ್ತಿ ಮತ್ತು ೪) ಅಭಿಚಾರಿಕ ಶಯನಮೂರ್ತಿಗಳು ಈ ವಿಧದ ಶಿಲ್ಪಗಳನ್ನು ರಚಿಸುವಲ್ಲಿಯೂ ಶಿಲ್ಪ ಲಕ್ಷಣಗಳಿಗನುಗುಣವಾಗಿ ಅವುಗಳಲ್ಲಿ ಉತ್ತಮ ವರ್ಗದಶಿಲ್ಪ ಮಧ್ಯಮ ವರ್ಗದಶಿಲ್ಪ ಮತ್ತು ಅಧಮ ವರ್ಗದಶಿಲ್ಪವೆಂದು ಮೂರು ವಿಧಗಳನ್ನು ಗುರುತಿಸಲಾಗಿದೆ. ಆದರೆ ಎಲ್ಲೆಡೆ ಈ ಶಿಲ್ಪಶಾಸ್ತ್ರದ ಲಕ್ಷಣಗಳಿಗನುಗುಣವಾಗಿಯೇ ನಿರ್ಮಿಸಿರದೆ ಕೆಲವೆಡೆ ಅಲ್ಪಸ್ವಲ್ಪ ವ್ಯತ್ಯಾಸಗಳುಳ್ಳ ಶಿಲ್ಪಗಳನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ದೊರೆತಿರುವ ಅನಂತಶಯನ ಶಿಲ್ಪಗಳ ಅಧ್ಯಯನಕ್ಕೆ ತೊಡಗಿದಾಗ ಶಿಲ್ಪಶಾಸ್ತ್ರ ಗ್ರಂಥಗಳ ರಚನೆಗೆ ಮೊದಲೇ ಅಂದರೆ ಬಾದಾಮಿ ಚಾಲುಕ್ಯರ ಕಾಲದಿಂದ (ಸು. ೭ನೇ ಶತ) ಈ ರೂಪದ ಶಿಲ್ಪಗಳು ರಚನೆಯಾಗಿವೆ. ಈ ದಿಸೆಯಲ್ಲಿ ಗಮನಿಸಿದಾಗ ಸು. ೬-೭ನೇ ಶತಮಾನದ ಜನರು ವಿಶೇಷವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಜಗತ್ ಸೃಷ್ಟಿಯ ಕಾಲಚಕ್ರಕ್ಕೆ ಕಾರಣರಾಗಿದ್ದು ಬ್ರಹ್ಮನು ವಿಶ್ವವನ್ನು ಸೃಷ್ಟಿವನು. ವಿಷ್ಣುವು ಅದರ ರಕ್ಷಕನಾದರೆ ಮಹೇಶ್ವರನು ಸೃಷ್ಟಿಯ ಲಯಕರ್ತನಾಗಿದ್ದು, ಈ ಮೂವರಿಂದ ಜಗತ್ತಿನ ಸರ್ವ ವ್ಯವಹಾರಗಳು ಸಾಗುತ್ತಿವೆ ಎಂದು ಭಾವಿಸಿ 'ತ್ರೈಪುರುಷರನ್ನು' ಆರಾಧಿಸುತ್ತಿದ್ದರೆಂದು ತಿಳಿದುಬರುತ್ತದೆ. ಈ ಹಿನ್ನೆಲೆಯಲ್ಲೇ ಬಾದಾಮಿ ಚಾಲುಕ್ಯರ ಕಾಲ ಜಂಬುಕೇಶ್ವರದೇವ ತ್ರಿಕೂಟಾಚಲವಾಗಿ ಮೊದಲು ತ್ರೈಪುರುಷದ್ದಾಗಿದೆ. ಈ ದೇವಾಲಯದ ವಿತಾನದ ಶೇಷಶಾಯಿ ವಿಷ್ಣುವಿನ ಬಿಂಬವಿರುವುದನ್ನು ಗಮನಿಸಬಹುದು. ಕರ್ನಾಟಕದಾದ್ಯಂತ ಗಮನಿಸಿದರೆ ಸುಮಾರು ಇಪ್ಪತ್ತಕ್ಕೂ ಹೆಚ್ಚು ರಂಗನಾಥ ಶಿಲ್ಪಗಳು ದೊರೆಯುತ್ತಿದ್ದು ನಾನಿಲ್ಲಿ ಪ್ರಮುಖವಾದ ಆರು ಶಿಲ್ಪಗಳನ್ನು ಆಧರಿಸಿ ಶಿಲ್ಪದ ವೈಶಿಷ್ಟ್ಯವನ್ನು ಗುರುತಿಸಲು ಯತ್ನಿಸಿದ್ದೇನೆ.

ಕ್ರಿ.ಶ. ೮ನೇ ಶತಮಾನದಲ್ಲಿ ನಿರ್ಮಿಸಿರುವ **ಐಹೊಳೆಯ** ಕೊಂತಿ ಗುಂಡಿ ಸಮೂಹದ ಗುಡಿಯೊಂದರ ವಿತಾನದಲ್ಲಿ ಸುಂದರವಾದ **ಅನಂತಶಯನ** ಶಿಲ್ಪವಿದೆ. ಈ ಶಿಲ್ಪವನ್ನು ಗಮನಿಸಿದರೆ ಕ್ಷೀರಸಾಗರದ ನಡುವೆ ಆದಿಶೇಷನ ಮೇಲೆ ವಿಷ್ಣುವು ಪವಡಿಸಿದ್ದಾನೆ. ವಿತಾನಶಿಲ್ಪವಾದ ಈ ಶಿಲ್ಪ ವಿಷ್ಣುವಿನ ಶರೀರವು ಪೂರ್ಣವಾಗಿ ನಾಗಶಯನದ ಮೇಲೆ ಅಂಗಾತನಾಗಿ ಮಲಗಿದಂತಿದೆ. ವಿಷ್ಣುವಿನ ಶಿರವು ಅಲ್ಲಿನ ಮಕುಟವನ್ನು ಧರಿಸಿದ್ದು, ಶಿರದ ಹಿಂಭಾಗದಲ್ಲಿ ಸಪ್ತಫಣೆಗಳನ್ನು ಪ್ರಭಾವಳಿಯಂತೆ ಬಿಡಿಸಲಾಗಿದೆ. ಫಣಿ ಪ್ರಭಾವಳಿಯ ಪಕ್ಕದಲ್ಲಿ ಬಲಗಡೆ ಚಕ್ರ, ಎಡಗಡೆ ಶಂಖವನ್ನು ಬಿಡಿಸಿದೆ. ಚತುರ್ಭುಜಧಾರಿ ವಿಷ್ಣುವಿನ ಬಲಗೈಯು ಪಲ್ಲಂಗದ ಮೇಲೆ ವಿರಮಿಸಿದೆ. ಮತ್ತೊಂದಕ್ಕೆ ಲೋಲಹಸ್ತವಾಗಿ ಕೆಳ ಚಾಚಿದೆ. ವಿಷ್ಣುವಿನ ಮೇಲಿನ ಎಡಗೈ ತಲೆ ಆಸರೆಯಾಗಿದೆ. ಕೆಳ ಎಡಗೈ ಕಟೀಹಸ್ತದ ಕೆಳಚಾಚಿದೆ. ಮಲಗಿರುವ ವಿಷ್ಣುವಿನ ಕೊರಳಿನಲ್ಲಿ ಕಂಠಿಕೆ, ಪದಕದ ಹಾರವನ್ನು ಬಿಡಿಸಿದ್ದು, ದಪ್ಪದಾದ ಯಜ್ಞೋಪವೀತವನ್ನು ಬಿಡಿಸಿದೆ. ಕಾಲುಗಳು ಕರ್ತರಿ ಭಂಗಿಯಲ್ಲಿವೆ. ಸಪರಿವಾರವಿರುವ ವಿಷ್ಣುವಿನೊಂದಿಗೆ ಬಲಗಡೆ ಪಾದದ ಬಳಿ ಭೂದೇವಿಯು ಅಂಜಲಿ ಬದ್ಧಳಾಗಿದ್ದಾಳೆ. ಇವಳ ಮೇಲೆ ಶಿಶುವಿನಂತಿರುವ ಸನತ್ಕುಮಾರನ ಮೇಲೆ ಎಡಗೈಯನ್ನು ಪಲ್ಲಂಕದ ಮೇಲೆ ಇಲ್ಲಿನ ಲಕ್ಷ್ಮಿದೇವಿಯು ಇದ್ದಾರೆ. ಇವಳ ಮೇಲ್ಭಾಗದಲ್ಲಿ ತುಂಬರರನ್ನು ಬಿಡಿಸಿದೆ. ಇದರಂತೆ ಎಡಭಾಗದಲ್ಲಿ ವಿಷ್ಣುವಿನ ತಲೆಯ ಪಕ್ಕದ ಕೈಮುಗಿದು ನಿಂತಿರುವ ಮಾರ್ಕಾಂಡೇಯ ಮುನಿ. ನಂತರ ಸನಕ, ನಂತರ ಚಾಮರಧಾರಿಣಿಯ ಶಿಲ್ಪ, ಎಡಗಡೆ ವಿಷ್ಣು ಪಾದಗಳ ಪಕ್ಕದಲ್ಲಿ ಮಧುಕೈಟಬರು, ಗದೆ, ಗುರಾಣಿಯನ್ನು ಹಿಡಿದು ಆಲೀಢ'ಭಂಗಿಯಲ್ಲಿ ಉತ್ಸಾಹಭರಿತರಾಗಿರುವಂತೆ ಬಿಡಿಸಿವೆ. ಈ ಶಿಲ್ಪವು ಸುಮಾರು ೮ನೇ ಶತಮಾನದಲ್ಲಿ ನಿರ್ಮಿಸಿದ್ದ ಶಿಲ್ಪವಾಗಿದ್ದು ಈ ಸುಮಾರಿಗೆ ಪುರಾಣಗಳು ಪ್ರಚಲಿತವಿದ್ದು ಅದರ ಪ್ರಭಾವದಿಂದ ನಿರ್ಮಿಸಿದ ಶಿಲ್ಪ ಇದಾಗಿದೆ. [ಒಂದು ಕೈಯಲ್ಲಿ ಗದೆ ಇದ್ದು ಆಯುಧ

ಪುರುಷನಂತೆ ಬಿಡಿಸಿದೆ ಎಂದು ಎಸ್. ರಾಜಶೇಖರ್ ತಿಳಿಸಿದ್ದಾರೆ. ಆದರೆ ಇದು ಮಧುಕೈಟಭರ ಯುದ್ಧಕ್ಕೆ ತೊಡಗಿರುವಂತೆ ಬಿಡಿಸಿರುವ ಶಿಲ್ಪವಾಗಿದೆ.] ಇಂತಹದೇ ಮತ್ತೊಂದು ಸುಂದರವಾದ ಅನಂತಶಯನ ಶಿಲ್ಪವನ್ನು ಐಹೊಳೆಯ ಚಿಕ್ಕಗುಡಿಯ ವಿತಾನವೊಂದರಲ್ಲಿ ಕಾಣಬಹುದಾಗಿದೆ. ಉತ್ತಮ ವರ್ಗದ ಯೋಗಶಯಮೂರ್ತಿ.

**ಬಾದಾಮಿಯ** ಭೂತನಾಥ ದೇವಾಲಯದ ದಕ್ಷಿಣಕ್ಕಿರುವ ಬಂಡೆಯ ಮೇಲಿನ ಶಿಲ್ಪವೊಂದು ಗಮನಾರ್ಹವಾಗಿದೆ. ಈ ಶಿಲ್ಪವು ಕಲ್ಯಾಣ ಚಾಲುಕ್ಯರ ಶೈಲಿಯ ಶಿಲ್ಪವಾಗಿದ್ದು ಸುಮಾರು ೧೧ನೇ ಶತಮಾನ. ಈ ಶಿಲ್ಪದಲ್ಲಿ ಶಿಲ್ಪಿಯು ಉತ್ತಮ ವರ್ಗದ **ಯೋಗಶಯನಮೂರ್ತಿ**ಯ ಲಕ್ಷಣಗಳೆಲ್ಲವನ್ನೂ ಬಿಡಿಸಿದ್ದು, ಶಿಲ್ಪವು ಗಮನಾರ್ಹವಾಗಿದೆ. ಶಿಲ್ಪವನ್ನು ಸರ್ಪಶಯನದ ಮೇಲೆ ಪವಡಿಸಿರುವ ವಿಷ್ಣುವಿನ ಶಿರದ ಹಿಂದೆ ಸಪ್ತಫಣಾವಳಿಯನ್ನು ಬಿಡಿಸಿದೆ. ಫಣಾವಳಿಯಲ್ಲಿನ ಹಾವಿನ ಹೆಡೆಗಳು ಸ್ವಲ್ಪ ಮೇಲೆತ್ತಿರುವುದನ್ನು ಗಮನಿಸಿ. ಇದರಂತೆ, ವಿಷ್ಣುವಿನ ಶರೀರವು ಪೂರ್ಣವಾಗಿ ಪರ್ಯಂಕದ ಮೇಲೆ ಮಲಗಿರದೆ ಕಟಿವರೆಗೆ ಭಾಗ ಆಧರಿಸಿ ವಕ್ಷಸ್ಥಲದಿಂದ ಮೇಲ್ಭಾಗವು ಸ್ವಲ್ಪ ಮೇಲೆತ್ತಿದೆ. ಶಿರವು ಎತ್ತರವಾದ ಕಿರೀಟ ಮಕುಟ ಧರಿಸಿದ್ದ ಬಲಗೈಯೊಂದು ತಲೆಗೆ ಆಸರೆಯಾಗಿದೆ. ಮತ್ತೊಂದು ಬಲಗೈ ಸಂತಾನ ಮಂಜರಿಯನ್ನು ಹಿಡಿದಿದೆ. ವಿಷ್ಣುವು ಬಲಗಾಲನ್ನು ನೇರವಾಗಿ ಚಾಚಿದ್ದು ಪಾದವು ಲಕ್ಷ್ಮಿದೇವಿಯ ತೊಡೆ ಮೇಲಿದೆ. ಲಕ್ಷ್ಮಿ ಪಾದಸೇವೆಯಲ್ಲಿ ತೊಡಗಿದ್ದಾಳೆ. ಎಡಗಾಲು ವಕ್ರವಾಗಿ ಬಾಗಿದ್ದು ಪಲ್ಲಂಕದ ಮೇಲೆ ಭೂಪಾದವಾಗಿದೆ. ಎಡಗೈಯು ಲೋಲಹಸ್ತವಾಗಿ ತೊಡೆಯ ಮೆಲೆ ವಿರಮಿಸಿದೆ. ಪಾದದ ಬಳಿ ಮಾರ್ಕಂಡೇಯ ಮುನಿ ಅಂಜಲೀಬದ್ಧನಾಗಿದ್ದಾನೆ. ವಿಷ್ಣುವಿನ ನಾಭಿಯಿಂದ ಹೊರಟ ಪದ್ಮದಲ್ಲಿ ಚತುರ್ಮುಖ ಬ್ರಹ್ಮನನ್ನು ಬಿಡಿಸಿದೆಯಲ್ಲದೆ ಬ್ರಹ್ಮನೊಂದಿಗೆ ಈ ವಿಷ್ಣುವಿನ ದಶವತಾರದ ಶಿಲ್ಪಗಳನ್ನು ಬಿಡಿಸಲಾಗಿದೆ. ವಿಷ್ಣುವಿನ ಮತ್ತೊಂದು ಎಡಗೈಯಲ್ಲಿ ಕಮಲವನ್ನು ಧರಿಸಿದೆ. ಬಲಭಾಗದಲ್ಲಿ ಶಂಖ ಚಕ್ರಗಳಿದ್ದು ಪರ್ಯಂಕದ ಪದ್ಮ ಉದ್ದವಾಗಿ ಗದೆ ಬಿಡಿಸಿವೆ. ದಶವತಾರ ಶಿಲ್ಪಗಳಲ್ಲಿ ಮತ್ಸ, ಕೂರ್ಮಗಳನ್ನು ಪ್ರಾಣಿಗಳ ರೂಪದಲ್ಲಿ ವರಾಹ, ನಗರಸಿಂಹ ರನ್ನು ಮಾನವ ಅಥವಾ ಪ್ರಾಣಿ ಮುಖದಂತೆ ಬ್ರಹ್ಮನ ಎಡಭಾಗಕ್ಕಿರುವ ಶಿಲ್ಪಗಳು ಮಾನವಾಕಾರದಲ್ಲಿವೆ. ಬ್ರಹ್ಮನ ಪದ್ಮದ ದಂಟಿನ ಸುರುಳಿಯಲ್ಲಿ ಸನತ್ಕುಮಾರ ಗರುಡರ ಚಿಕಣಿ ಶಿಲ್ಪಗಳಾಗಿ ಬಿಡಿಸಿದೆ. ಇದು ಸುಮಾರು ೧೧ನೇ ಶತಮಾನದ ಶಿಲ್ಪವಾಗಿದೆ.

ಸುಮಾರು ಕ್ರಿ.ಶ. ೧೨ನೇ ಶತಮಾನದ ಹೊತ್ತಿಗೆ ಕರ್ನಾಟಕದ ಹೊಯ್ಸಳನಾಡಿನಲ್ಲಿ ಶ್ರೀವೈಷ್ಣವರ ಗುರುಗಳಾದ ಶ್ರೀ ರಾಮಾನುಜಾಚಾರ್ಯರು ಪ್ರವೇಶಿಸಿದರು. ಮೊದಲು ಇವರು 'ಶ್ರೀರಂಗಂ'ನಲ್ಲಿ ನೆಲೆಸಿದ್ದು, ಶ್ರೀರಂಗನಾಥನ ಪರಮಭಕ್ತರಾಗಿದ್ದರು. ಇವರು ರಚಿಸಿದ 'ಶ್ರೀರಂಗರಾಜಸ್ತವ' ಪ್ರಸಿದ್ಧವಾದ ಜನಪ್ರಿಯವಾದ ಸ್ತೋತ್ರವಾಗಿದೆ. ಇವರ ಪ್ರಭಾವದಿಂದ ಹೊಯ್ಸಳನಾಡಿನಲ್ಲಿ ಕಾವೇರಿ ತೀರದಲ್ಲಿರುವ ಶ್ರೀರಂಗಪಟ್ಟಣ ಮತ್ತು ಶಿವನ ಸಮುದ್ರಗಳಲ್ಲಿ ಶ್ರೀರಂಗನಾಥ ದೇವಾಲಯಗಳು ನಿರ್ಮಾಣಗೊಂಡವು. ೧೨ನೇ ಶತಮಾನದಲ್ಲಿ ನಿರ್ಮಿಸಲಾದ **ಶ್ರೀರಂಗಪಟ್ಟಣದ ಶ್ರೀರಂಗನಾಥ**ಸ್ವಾಮಿಯ ಶಿಲ್ಪವು ಪುರಾಣ ಶಾಸ್ತ್ರಗ್ರಂಥಗಳು ತಿಳಿಸುವ ಲಕ್ಷಣಗಳಿಗಿಂತ ತೀರ ಭಿನ್ನವಾಗಿದೆ. ಕಾರಣ ಶ್ರೀ ರಾಮಾನುಜರ ವೈಷ್ಣವಪಂಥವು "ಸಕಲ ಜನರನ್ನು (ನಾರಾಯಣನ ಕಿಂಕರರನ್ನಾಗಿ ತಿರು ದಾಸರನ್ನಾಗಿಸಿ) ಶ್ರೀವೈಷ್ಣವ ಪಂಥಕ್ಕೆ ಸೇರದ ಭಕ್ತನು ಕೇವಲ ದೇವ ದರ್ಶನದಿಂದಲೊ, ದೇವಾಲಯ ಕೈಂಕರ್ಯಗಳನ್ನು ನಡೆಸುವುದರಿಂದ ಮುಕ್ತಿಗಳಿಸಲು ಸಾಧ್ಯವೆಂದು ಸಾರಿತು. ಶ್ರೀವೈಷ್ಣವರಾದ ಎಲ್ಲರಿಗೂ ಮುಕ್ತ ಪ್ರವೇಶ ನೀಡಿತು. ಈ ಧಾರ್ಮಿಕ ಹಿನ್ನೆಲೆಯ ಪ್ರಭಾವದಿಂದ ಶಿಲ್ಪಿಗಳ ರಚನೆಯಲ್ಲೂ ಬದಲಾವಣೆಗಳಾಗಿದ್ದು ಶ್ರೀರಂಗಪಟ್ಟಣದ ಶಿಲ್ಪವು ಕೇವಲ ರಂಗನಾಥನು ಪಂಚಫಣಾವಳಿಯುಳ್ಳ ಸರ್ಪ ಪರ್ಯಂಕರನು ಮೇಲೆ ಪವಡಿಸಿರುವಂತೆ ಬಿಡಿಸಿದೆ. ವಿಷ್ಣುವಿನ ದೇಹದ ಶಿರೋಭಾಗವು ಮಾತ್ರ ಸ್ವಲ್ಪ ಮೇಲೆತ್ತಿದ್ದು, ಬಲಗೈಯೊಂದು ತಲೆಗೆ ದಿಂಬಿನಂತೆ ಆಸರೆಯಾಗಿದೆ. ಸರ್ವಾಲಂಕಾರ ಭೂಷಿತನಾದ ವಿಷ್ಣುವಿನ ಪಾದದ ಬಳಿ ಲಕ್ಷ್ಮಿಯು ಪಾದಸೇವೆಯಲ್ಲಿ ತೊಡಗಿರುವಂತೆ ಇದೆ. ಸರ್ಪ ಪರ್ಯಂಕವು ೮ ಸುತ್ತಿನದೆಂಬುದು ಇಲ್ಲಿ ಗಮನಾರ್ಹ. ಅದರಂತೆ ವಿಷ್ಣುವಿನ ನಾಭಿಯಿಂದ ಉದ್ಭವಿಸಬೇಕಾದ ಬ್ರಹ್ಮನ ಶಿಲ್ಪವು ಇಲ್ಲಿಲ್ಲ. ಮತ್ತು ಈ ಶಿಲ್ಪದಲ್ಲಿ ವಿಷ್ಣುವಿನ ಪರಿವಾರವನ್ನು ಬಿಡಿಸಿಲ್ಲ.

**ರಂಗಸ್ಥಳದ ರಂಗನಾಥ** ದೇವಾಲಯದ ಶಿಲ್ಪವನ್ನು ಗಮನಿಸಿದರೆ, ಸಪ್ತಫಣಾವಳಿಯುಳ್ಳ ಆದಿಶೇಷನ ಮೇಲೆ ರಂಗನಾಥನು ಪವಡಿಸಿದ್ದಾನೆ. ಮೂರು ಸುತ್ತಿನ ಆವೃತ್ತಿಯುಳ್ಳ ಪರ್ಯಂಕದ ಮೇಲೆ ಮಲಗಿರುವ ವಿಷ್ಣುವಿನ ನೀಳಕಾಯವು ಕಂಠದವರೆಗೆ ಪವಡಿಸಿದ್ದು ಶಿರವನ್ನು ಮಾತ್ರ ಕೊಂಚ ಮೇಲೆತ್ತಿದೆ. ಕಾಲುಗಳು ಎರಡು ಸಮವಾಗಿವೆ. ಎಡಗೈ ಲಕ್ಷ್ಮಿ ಪಾದಸೇವೆಯಲ್ಲಿ ನಿರತಳಾಗಿರುವಂತೆ ಬಿಡಿಸಿದೆ. ಪಾದದ ಬಳಿ ಶ್ರೀದೇವಿ ಭೂದೇವಿಯರಿಬ್ಬರೂ ಇದ್ದಾರೆ. ದೇವರ ಹಿಂಭಾಗದ ಭಿತ್ತಿಯ ಪಟ್ಟಿಕೆಯಲ್ಲಿ ಸಪ್ತಋಷಿ ಶಂಖ, ಚಕ್ರ,

ಗದಾ, ಅಪ್ಸರೆಯರು, ಅಷ್ಟದಿಕ್ಪಾಲಕರು ಮುಂತಾದವರ ಉಬ್ಬುಶಿಲ್ಪಗಳಿವೆ. ಈ ಶಿಲ್ಪದ ಲಕ್ಷಣಗಳನ್ನು ಗಮನಿಸಿದಾಗ ದೇವಾಲಯದ ನಿರ್ಮಾಣದ ಕಾಲ ಖಚಿತವಿರದೆ ಮತ್ತು ಶಿಲ್ಪವನ್ನು ವಿಜಯನಗರ ಕಾಲದ್ದೆಂದು ಹೇಳಬಹುದಾಗಿದೆ. ಸಾಮಾನ್ಯವಾಗಿ ವಿಜಯನಗರ ಕಾಲದ ರಂಗನಾಥ ಶಿಲ್ಪಗಳಿಗಿಂತ ಸ್ವಲ್ಪ ಹಿಂದಿನ ಕಾಲ ಶಿಲ್ಪದಂತಿದೆ.

**ಹಳೇಬಿಡಿನ ರಂಗನಾಥ** ದೇವಾಲಯದ ಗರ್ಭಗೃಹದ ಶಿಲ್ಪದಲ್ಲಿ ಸಪ್ತಫಣಾವಳಿಯುಳ್ಳ ಪರ್ಯಂಕದ ಮೇಲೆ ವಿಷ್ಣುವು ಮಲಗಿದ್ದಾನೆ. ವಿಷ್ಣುವಿನ ಪಾದದ ಬಳಿ ಲಕ್ಷ್ಮಿ ಕುಳಿತಿದ್ದರೆ ಭೂದೇವಿಯು ಶಿರದ ಬಳಿ ಇದ್ದಾಳೆ. ವಿಷ್ಣುವಿನ ಎಡಗೈಯೊಂದು ಕಟಿ ಹಸ್ತವಾಗಿವೆ. ಬಲಗೈ ತಲೆಗೆ ಆಸರೆಯಾಗಿದೆ. ಇಲ್ಲಿ ಆಯುಧಗಳನ್ನು ಬಿಡಿಸಿಲ್ಲ. ಶಿರದ ಬಳಿ ಮಾರ್ಕಾಂಡೇಯನ ಚಿಕ್ಕ ಬಿಂಬವಿದೆ. ವಿಷ್ಣುವಿಗೆ ಕಮಾನಿನಂಥ ಪ್ರಭಾವಳಿ ರಚಿಸಿ ಇಲ್ಲಿ ದಶವತಾರ ಶಿಲ್ಪಗಳಿವೆ. ವಿಷ್ಣುವಿನ ಪಾದದ ಬಳಿ ಗರುಡನು ಅಂಜಲೀ ಬದ್ಧನಾಗಿದ್ದಾನೆ. ಇದು ರೂಪ ಮಂಡಣದಲ್ಲಿ ತಿಳಿಸಿರುವ ಲಕ್ಷಣಗಳಿಗೆ ಅನ್ವಯಿಸಿ ಕೆತ್ತಿರುವ ಶಿಲ್ಪವಾಗಿದೆ. ಇಂಥ ಸುಂದರವಾದ ಶಿಲ್ಪವೊಂದನ್ನು **ಬೆಂಗಳೂರಿನ ರಂಗನಾಥಸ್ವಾಮಿ** ಗುಡಿಯಲ್ಲಿ ಕಾಣಬಹುದು.

ವಿಜಯನಗರ ಕಾಲದ ರಂಗನಾಥನ ಶಿಲ್ಪಗಳಿಗೆ **ಕಾರ್ಕಳ ಅನಂತಪದ್ಮನಾಭ** ದೇವಾಲಯದ ಶಿಲ್ಪವನ್ನು ಗಮನಿಸಬಹುದು. ಇಲ್ಲಿ ಮೂರು ಸುತ್ತಿನ ಸಪ್ತ ಫಣಾವಳಿಯ ಆದಿಶೇಷನ ಮೇಲೆ ವಿಷ್ಣುವು ಪವಡಿಸಿದ್ದಾನೆ ವಿಷ್ಣುವಿನ ದೇಹವು ಕಟಿಯವರೆಗೆ ಪರ್ಯಂಕಧಾರವಾಗಿ ವಕ್ಷಸ್ಥಲದಿಂದ ಮೇಲಕ್ಕೆ ಎತ್ತಿದಂತಿದೆ. ಶಿರವು ಸಾಕಷ್ಟು ಮೇಲೆತ್ತಿದೆ. ಚತುರ್ಭುಜನಾದ ವಿಷ್ಣುವಿನ ಬಲಗೈ ಶಂಖವನ್ನು, ಎಡಗೈ ಚಕ್ರವನ್ನು ಧರಿಸಿದ್ದು, ಮುಂದಿನ ಬಲಗೈ ತಲೆಗೆ ಆಸರೆಯಾಗಿದೆ. ಮುಂದಿನ ಎಡಗೈ ಜುರುವಿನ ಮೇಲೆ ವಿರಮಿಸಿದೆ. ನಾಭಿಯಿಂದ ಅರಳಿದ ಪದ್ಮದ ಮೇಲೆ ಬ್ರಹ್ಮನು ಅಂಜಲಿಬದ್ಧನಾಗಿ ಕುಳಿತಿದ್ದಾನೆ. ಪಾದದ ಬಳಿ ಶ್ರೀದೇವಿ ಭೂದೇವಿಯರಿಬ್ಬರನ್ನು ಬಿಡಿಸಿ ಲಕ್ಷ್ಮಿಯು ಪಾದವನ್ನೊತ್ತುತ್ತಿದ್ದಾಳೆ. ಶಿಲ್ಪದ ಅಂಗಸೌಷ್ಠವ ಆಭರಣದ ವಿನ್ಯಾಸಗಳು ಸರ್ಪದ ಪ್ರಭಾವಳಿಯ ವಿನ್ಯಾಸ ಮುಂತಾದವು ಶಿಲ್ಪವನ್ನು ವಿಜಯನಗರ ಕಾಲದ್ದೆಂದು ಸೂಚಿಸುತ್ತಿವೆ. ಇದು ಸುಮಾರು ೧೫ನೇ ಶತಮಾನದ ಶಿಲ್ಪಗಳಾಗಿದ್ದು, ಈ ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಕರ್ನಾಟಕದ್ದಲ್ಲವಾದರೂ **ಶ್ರೀರಂಗದ ಶ್ರೀರಂಗನಾಥನ** ಶಿಲ್ಪವನ್ನು ಗಮನಿಸಲೇ ಬೇಕಾಗುತ್ತದೆ. ಈ ರಂಗನಾಥನ ಶಿಲ್ಪವು ಪಂಚಫಣಾವಳಿ ಮೂರು ಸುತ್ತಿನ ಪರ್ಯಂಕದ ಮೇಲೆ ವಿಷ್ಣುವು ಪವಡಿಸಿರುವಂತೆ ದ್ವಿಭುಜನಾದ ವಿಷ್ಣುವಿನ ಬಲಗೈ ಅಭಯ ಮುದ್ರೆಯಲ್ಲಿದ್ದು ತಲೆಗೆ ಆಸರೆಯಾದರೆ ಎಡಗೈ ಸಮಾನಾಂತರವಾಗಿ ಚಾಚಿದೆ. ಪದ್ಮಪೀಠದಲ್ಲಿರುವ ಪಾದದ ಬಳಿ ಯಾವ ಶಿಲ್ಪವೂ ಇಲ್ಲ. ಸಪರಿವಾರವಿರದ ಈ ಶಿಲ್ಪವು ಅಭಿಚಾರಿಕಾ ವರ್ಗದ ಶಿಲ್ಪವಾಗಿದ್ದು ಮುಕ್ತರಾಗಿ ಸಕಲ ಜನರಿಂದ ಮುಕ್ತ ರೀತಿಯ ಪೂಜಾರಾಧನೆಗೆ ಒಳಪಟ್ಟ ಶಿಲ್ಪವಾಗಿದೆ.

ಇತ್ತೀಚಿಗೆ ಎಲ್ಲರ ಗಮನ ಸೆಳೆದಿರುವ ೧೮' ಉದ್ದದ **ತಿರುವನಂತಪುರದ ಅನಂತಶಯನ ಶಿಲ್ಪವು ಇದರಂತೆ ರಚಿಸಲಾದ ಶಿಲ್ಪವಾಗಿದ್ದು,** ಇದರ ನಾಭಿಯಿಂದರಳಿದ ಪದ್ಮದಲ್ಲಿ ಆಸೀನ ಬ್ರಹ್ಮನನ್ನು ಬಿಡಿಸಲಾಗಿದೆ. ಪರಿವಾರ ರಹಿತವಾದ ಈ ಶಿಲ್ಪವು ಶ್ರೀರಂಗದ ಶಿಲ್ಪದಂತೆ ರಚಿತವಾಗಿರುವ ೧೮ನೇ ಶತಮಾನದ ಶಿಲ್ಪವಾಗಿವೆ.

ಶಿಲ್ಪಶಾಸ್ತ್ರ ಗ್ರಂಥಗಳಿಗೆ ಅನುಗುಣವಾಗಿ ಚಿತ್ರಿಸಲಾಗಿರುವ ವರ್ಣಚಿತ್ರವೊಂದರ ಛಾಯಾಚಿತ್ರ ರಂಗನಾಥ ಶಿಲ್ಪದ ವೈಶಿಷ್ಟ್ಯವನ್ನು ಸ್ಪಷ್ಟಪಡಿಸಿದೆ. ಒಟ್ಟಿನಲ್ಲಿ ಈ ಅಧ್ಯಯನದಿಂದ ತಿಳಿದು ಬರುವ ಅಂಶಗಳೆಂದರೆ :

೧. ಈ ಸ್ವರೂಪವೊಂದು'ಸಮನ್ವಯ ಶಿಲ್ಪ'ವಾಗಿದ್ದು, ತ್ರಿಮೂರ್ತಿಗಳೆಲ್ಲರನ್ನೂ ಒಟ್ಟಾಗಿ ಪೂಜಿಸುವುದರಿಂದ ಮೋಕ್ಷಕಾರಕವಾದ ಈ ಶಿಲ್ಪದ ಆರಾಧನೆ ಅತ್ಯಂತ ಶ್ರೇಷ್ಠವೆನ್ನಿಸಿದೆ.

೨. ಶ್ರೀವೈಷ್ಣವ ಧರ್ಮದ ಪ್ರಭಾವದಿಂದ ಈ ಆರಾಧನೆ ಹೆಚ್ಚು ಪ್ರಚಲಿತವಾಗಿರುವುದನ್ನು ಗಮನಿಸಬಹುದು.

೩. ಇಂದಿಗೂ ವೆಂಕಟೇಶ್ವರ ದೇವಾಲಯದ ಆವರಣದಲ್ಲಿ 'ಗೋವಿಂದರಾಜ'ನೆಂಬ ಹೆಸರಿನಲ್ಲಿ ಸುಂದರವಾದ ರಂಗನಾಥಶಿಲ್ಪಗಳು ಮೂಡಿಬರುತ್ತವೆ. ಬೆಂಗಳೂರಿನ ರಾಜಾಜಿನಗರದ ವೆಂಕಟೇಶ್ವರ ದೇವಾಲಯದ ಆವರಣದಲ್ಲಿ ೧೪' ಉದ್ದದ ಭವ್ಯವಾದ ರಂಗನಾಥನ ಶಿಲ್ಪ ಗಮನಾರ್ಹವಾದುದಾಗಿದೆ.





# ಹೊಸದುರ್ಗ ತಾಲ್ಲೂಕಿನಲ್ಲಿ ದೊರೆತ ಎರಡು ವಿಶಿಷ್ಟ ವಿಗ್ರಹಗಳು

ಡಾ. ಬಿ. ರಾಜಶೇಖರಪ್ಪ*

**ಚಿತ್ರ**ದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕು ಹಲವು ಐತಿಹಾಸಿಕ ವಿಶೇಷಗಳನ್ನು ಹೊಂದಿರುವ ಪ್ರದೇಶ. ಆ ವಿಶೇಷಗಳಲ್ಲಿ ಆ ತಾಲ್ಲೂಕಿನ ದೇವಪುರ ಗ್ರಾಮದ ಎರಡು ವಿಗ್ರಹಗಳನ್ನು ಸೇರಿವೆಯೆಂಬುದನ್ನು ಈ ಸಂಪ್ರಬಂಧದ ಮೂಲಕ ಸಾದರಪಡಿಸಲು ಇಲ್ಲಿ ಯತ್ನಿಸಿದ್ದೇನೆ.

ಆ ಗ್ರಾಮದಲ್ಲಿ 'ವೀರಭದ್ರ ದೇವಾಲಯ' ಎಂದು ಕರೆಯುವ ದೇವಾಲಯದಲ್ಲಿ ಆ ವಿಗ್ರಹಗಳಿವೆ. ಆ ದೇವಾಲಯವನ್ನು ಪ್ರವೇಶಿಸಿದಾಗ ಎದುರಿಗೆ ಗರ್ಭಗೃಹದಲ್ಲಿ ಒಂದು ಪ್ರಾಚೀನ ಶಿವಲಿಂಗ ಮತ್ತು ಅದರ ಎದುರಿಗೆ ಒಂದು ನಂದಿ ಕಾಣಿಸುತ್ತವೆ. ನವರಂಗದ ಬಲಭಾಗದಲ್ಲಿ ಒಂದು ಓವರಿಯಲ್ಲಿರುವ ವಿಗ್ರಹವನ್ನು 'ವೀರಭದ್ರ ದೇವರು ಎಂದು ಜನರು ಕರೆಯುವುದರಿಂದ ಆ ಭಾಗಮಾತ್ರ 'ವೀರಭದ್ರ ದೇವರ ಗುಡಿ' ಎನ್ನಬೇಕಾಗಿದ್ದರೂ ಇಡೀ ದೇವಾಲಯಕ್ಕೆ 'ವೀರಭದ್ರ ದೇವರ ಗುಡಿ' ಎಂದು ಕರೆಯಲಾಗುತ್ತಿದೆ. ಅಂದರೆ ಶಿವಲಿಂಗವೇ ಇಲ್ಲಿಯ ಮುಖ್ಯ ದೈವವಾದರೂ ಜನ "ವೀರಭದ್ರ ದೇವ'ರಿಗೇ ಪ್ರಾಶಸ್ತ್ಯವಿತ್ತಿರುವುದು ಅದರಿಂದ ಸ್ಪಷ್ಟವಾಗಿದೆ. ಈ 'ವೀರಭದ್ರ ದೇವರಿಗೆ ಎದುರಾಗಿ ನವರಂಗದ ಎಡಭಾಗದಲ್ಲಿ ಸ್ಥಾಪಿತವಾಗಿರುವ ಒಂದು ಸ್ತ್ರೀ ವಿಗ್ರಹವಿದ್ದು ಜನ ಅದನ್ನು 'ಕಾಳಮ್ಮ' ಎಂದು ಕರೆಯುತ್ತಾರೆ. ಈ ವಿಗ್ರಹಗಳನ್ನು ಗಮನಿಸಿದಾಗ, ಅವುಗಳನ್ನು ಜನ ಯಾವ ಹೆಸರಿನಿಂದ ಕರೆಯುತ್ತಿದ್ದಾರೋ ಆ ದೇವತಾ ವಿಗ್ರಹಗಳ ಲಕ್ಷಣಗಳಿಗೆ ಭಿನ್ನವಾದ ರೀತಿಯಲ್ಲಿರುವುದು ಗೋಚರಿಸುತ್ತದೆ. ಇವು ಇರುವ ರೀತಿಯನ್ನು ಸ್ವಲ್ಪ ವಿವರವಾಗಿ ನೋಡೋಣ.

## 'ವೀರಭದ್ರ'ನ ದೆನ್ನುವ ವಿಗ್ರಹ

'ವೀರಭದ್ರ ದೇವರು ಎಂದು ಜನ ಕರೆಯುವ ವಿಗ್ರಹವನ್ನು ನೋಡಿದಾಗ ವೀರಭದ್ರ ವಿಗ್ರಹಗಳ ಆಕೃತಿ ಮನಸ್ಸಿನಲ್ಲಿ ಹಾಯುತ್ತದೆ. ವೀರಭದ್ರ ಮೂರ್ತಿ ಹೇಗಿರುತ್ತದೆಂಬುದು ಎಲ್ಲರಿಗೂ ತಿಳಿದ ಸಂಗತಿಯೆ. ಸಾಮಾನ್ಯವಾಗಿ ನಿಂತ ಭಂಗಿಯಲ್ಲಿರುವ ಆ ಪುರುಷ ದೇವತಾ ಮೂರ್ತಿಗೆ ನಾಲ್ಕು (ಅಥವಾ ಕೆಲವೊಮ್ಮೆ ಹೆಚ್ಚು) ಕೈ; ಅವುಗಳಲ್ಲಿ ಖಡ್ಗ ಗುರಾಣಿಗಳ ಜೊತೆ ಬಿಲ್ಲು ಬಾಣ (ಮೊದಲಾದ ಆಯುಧ)ಗಳು, ಲಿಂಗಲಾಂಛನವಿರುವ ಕಿರೀಟ, ರುಂಡಮಾಲೆ, ಕೆಳಗೆ ಒಂದು ಬದಿಯಲ್ಲಿ ಕೈಮುಗಿದುನಿಂತ ಟಗರುದಲೆ ಹೊತ್ತ ಕುಬ್ಜಗಾತ್ರದ ದಕ್ಷ ಬ್ರಹ್ಮ, (ಕೆಲವೊಮ್ಮೆ ಇನ್ನೊಂದು ಬದಿಯಲ್ಲಿ ಕೈಮುಗಿದು ನಿಂತ ಅವನ ಸತಿ), ಕೋರೆಹಲ್ಲು, ಐರುಮೀಸೆ, ರೌದ್ರ (ಇಲ್ಲವೆ ಪ್ರಸನ್ನ) ಕಳೆ, ಧೀರಭಂಗಿ. ಹೀಗಿರುವ ಆ ಮೂರ್ತಿ ಶಿಲ್ಪಿಯ ಕುಶಲತೆಯನ್ನು ಆಧರಿಸಿ ಆಕರ್ಷಕವಿರಬಹುದು, ಇಲ್ಲವೆ ಸಾಧಾರಣವಿರಲೂ ಬಹುದು.



* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ) ३ನೆಯ ಕ್ರಾಸ್ (ಪಶ್ಚಿಮ) ಜಯಚಾಮರಾಜೇಂದ್ರ ಬಡಾವಣೆ ಚಿತ್ರದುರ್ಗ – ೫೭೭೫೦೧.

ವೀರಭದ್ರ ಮೂರ್ತಿ ಸಾಮಾನ್ಯವಾಗಿ ಇರುವುದು ಮೇಲೆ ಹೇಳಿದ ರೀತಿಯಲ್ಲಿ. (ಕೈಯ) ಆದರೆ ಇಲ್ಲಿಯ ವಿಗ್ರಹ ಆ ರೀತಿಯಲ್ಲಿಲ್ಲ. ನಿಂತ ಭಂಗಿಯಲ್ಲಿರುವ ಈ ಪುರುಷಮೂರ್ತಿಯ(ಕೈಯ)ಲ್ಲಿ ಖಡ್ಗ ಗುರಾಣಿಗಳಿದ್ದರೂ ನಾವು ಕಾಣುವುದು ಎರಡೇ ಕೈ; ತಲೆಯಲ್ಲಿ ಕಿರೀಟವಿಲ್ಲ, ಬದಲಿಗೆ ಕಟ್ಟಿಕೊಂಡಿರುವ ಮುಡಿ; ಮೀಸೆ ಇದ್ದರೂ ಕೋರೆಹಲ್ಲುಗಳಿಲ್ಲ; ಬೇರೆ ಬೇರೆ ಸರ–ಹಾರಗಳುಂಟು, ರುಂಡಮಾಲೆಯಲ್ಲ; ಕೆಳಗೆ ಬದಿಯಲ್ಲಿ ದಕ್ಷಬ್ರಹ್ಮ, ಅವನ ಸತಿ ಯಾರೂ ಇಲ್ಲ. ಮುಚ್ಚಿಕೊಂಡಿರುವ ಹಣೆಗಣ್ಣನ್ನು ಸೂಚಿಸುವಂತಹ ರೇಖಾ ಕೆತ್ತನೆ ಹಣೆಯಲ್ಲಿದೆ. ಹೀಗಿರುವ ಈ ವಿಗ್ರಹವನ್ನು 'ವೀರಭದ್ರ' ಎಂದು ಒಪ್ಪಿಕೊಳ್ಳಬಹುದೆ? ಹಾಗಾದರೆ ಇದು ಯಾವುದು? ಈ ಪ್ರಶ್ನೆ ಬರುತ್ತವೆ ( ಈ ವಿಗ್ರಹದ ಎತ್ತರ ೧೧೯ ಸೆಂಮೀ, ಅಗಲ ೫೨ ಸೆಂಮೀ, ದಪ್ಪ ೨೮ ಸೆಂಮೀ, ಈ ವಿಗ್ರಹವನ್ನು ನೋಡುತ್ತಿದ್ದರೆ, ವೀರಶೈವ ಸಾಹಿತ್ಯದಲ್ಲಿ ಬರುವ ಹಿರಿಯ ಶರಣನೊಬ್ಬನ ನೆನಪು ಬರುತ್ತದೆ. ಕ್ರಿ.ಶ. ೧೨ನೆಯ ಶತಮಾನದಲ್ಲಿ, ದೊರೆ ಬಿಜ್ಜಳನು ಶರಣರಾಗಿದ್ದ ಹರಳಯ್ಯ ಮಧುವಯ್ಯರನ್ನು ಕ್ರೂರವಾಗಿ ಶಿಕ್ಷಿಸಿದ್ದಕ್ಕೆ ಬಸವಣ್ಣ ಮನನೊಂದು ಮಂತ್ರಿ ಪದವಿ ತ್ಯಜಿಸಿ. ಕಲ್ಯಾಣವನ್ನು ಬಿಟ್ಟು ಹೊರಟುಹೋದನು. ಇದರಿಂದ ಶರಣರು ಕೆರಳಿದರು; ಕೆಲಕಾದಲ್ಲಿ ದೊರೆ ಬಿಜ್ಜಳ ಹತ್ಯೆಗೀಡಾದ. ಮುಂದೆ ಶರಣರಿಗೂ ಶರಣ ವಿರೋಧಿಗಳಿಗೂ ತೀವ್ರ ಘರ್ಷಣೆಯೇ ಜರುಗಿತು. ಆಗ ಶರಣರಿಗೆ ನಾಯಕನೆಂಬುಂತೆ ನಿಂತು, ವೀರನಂತೆ ಆಯುಧಪಾಣಿಯಾಗಿ ಶರಣವಿರೋಧಿಗಳನ್ನು ಎದುರಿಸಿ ಹೋರಾಡಿದ ಆ ಹಿರಿಯ ಶರಣ ಬೇರಾರು ಅಲ್ಲ, **ಮಡಿವಾಳ ಮಾಚಿದೇವ.** ಶರಣ ಸಾಹಿತ್ಯದಲ್ಲಿ ಅವನನ್ನು **'ವೀರಭದ್ರ ಅವತಾರ'** ಎಂದು ವರ್ಣಿಸಲಾಗಿದೆ. ಹಿಂದೆ ದಕ್ಷಬ್ರಹ್ಮನು ಶಿವನನ್ನು ವಿರೋಧಿಸಿ, ಒಂದು ಯಾಗ ಮಾಡುತ್ತಿದ್ದಾಗ, ಶಿವನ ಕ್ರೋಧದಿಂದ ಉದ್ಭವಿಸಿದ ಉಗ್ರಮೂರ್ತಿ ವೀರಭದ್ರ ಆ ಯಾಗವನ್ನು ಧ್ವಂಸ ಮಾಡಿ ಶಿವನ ವಿರೋಧಿಗಳನ್ನು ಮುರಿದಂತೆ, ಮಾಚಿದೇವ ಕೂಡಾ ಶರಣ ವಿರೋಧಿಗಳನ್ನು ಮುರಿದು ಅಭಿಮಾನಿಗಳ ಕಣ್ಣಲ್ಲಿ ವೀರಭದ್ರನ ರೀತಿಯ ಕೆಲಸವನ್ನೇ ಮಾಡಿದ್ದರಿಂದ **'ವೀರಭದ್ರಾವತಾರ'** ಎನಿಸಿದನು. ಕವಿಗಳಂತೂ ಮಾಚಿದೇವನ ಚರಿತ್ರೆಯನ್ನು **'ವೀರಭದ್ರನ ಚರಿತ್ರೆ'** ಎಂದೇ ಕರೆದಿದ್ದಾರೆ. ಹೀಗಾಗಿ ಮಾಚಿದೇವ ವೀರಭದ್ರನೇ ಎಂದು ಜನತೆ ಸ್ವೀಕರಿಸಿ ಪೂಜಿಸುತ್ತ ಬಂದಿದೆ. ಸಾಹಿತ್ಯ ಕೃತಿಗಳಲ್ಲಿ ಇವನನ್ನು ವೀರಭದ್ರ ಎಂದು ಕರೆಯುವುದರ ಜೊತೆಗೆ ಶಿವನ ನಾಮಾಂತರಗಳನ್ನೂ ಉಪಯೋಗಿಸಿರುವುದುಂಟು. ಉದಾಹರಣೆಗೆ, ಶರಣ ಮಾಚಿದೇವನನ್ನು 'ವೀರಭದ್ರಾವತಾರ' ಎಂದು ಕರೆಯುವುದರ ಜೊತೆಗೆ ನರಸಿಂಹನ ಮದವನ್ನು ಮುರಿಯಲು ವೀರಭದ್ರನು 'ಶರಭಾವತಾರ' ವನ್ನು ತಾಳಿದ ಎಂಬ ನಂಬಿಕೆಯೂ ಇರುವುದರಿಂದ ಮಾಚಿದೇವನನ್ನು **'ವೀರ ಶರಭಾವತಾರ'** ಎಂದು ಕರೆದಿರುವುದೂ ಉಂಟು.

ಇಲ್ಲಿ ಒಂದು ಉದಾಹರಣೆ ಕೊಡುವುದಾದರೆ, ಮಡಿವಾಳ ಮಾಚಯ್ಯನನ್ನು ಕುರಿತು ತಾರಾವಳಿ ಕೃತಿಯೊಂದನ್ನು **'ವೀರಭದ್ರಾವತಾರ ಮಡಿವಾಳ ಮಾಚಯ್ಯಗಳ ತಾರಾವಳಿ'** ಎಂದೇ ಕರೆದಿರುವುದನ್ನು ಗಮನಿಸಬಹುದು. ಅದರಲ್ಲಿ ಮೊದಲಿಗೆ ಬರುವ ಪಲ್ಲವಿ ಹೀಗಿದೆ;

**ಭಾಪುರೆ ಬಲವಂತ** ಮಡಿವಾಳ ಮಾಚಯ್ಯ
**ತಾಪರಹಿತ** ವೀರಭದ್ರಾವತಾರಾ

ಈ ತಾರಾವಳಿಯ ೧ನೆಯ ನುಡಿಯಲ್ಲಿ ವೀರಭದ್ರನು ದಕ್ಷಬ್ರಹ್ಮನ ಯಜ್ಞವನ್ನು ಭಂಗಿಸಿದ ಕಥಾನಕವಿದೆ. ಅದರ ಅಂತ್ಯದಲ್ಲಿ ೨ನೆಯ ನುಡಿಯ ಅಂತ್ಯದಲ್ಲಿ **'ದಕ್ಷನ ದೀರ್ಘತನುವಿಗೆ ಕುರಿದಲೆ ಮಾಡಿದ ಮಾಚಯ್ಯ'** ಎಂದೂ, ೩ನೆಯ ನುಡಿಯ ಅಂತ್ಯದಲ್ಲಿ 'ಪರಮ ಮುಕ್ತಿನಾರಿಯ ರಮಣ **ಮಹಾದೇವನವತಾರಾ'** ಎಂದೂ, ೪ನೆಯ ನುಡಿಯ ಅಂತ್ಯದಲ್ಲಿ **'ದ್ವಿತೀಯ ಶಂಭು** ಕಲಷಾರಿ **ಶಂಕರ ಮಡಿವಾಳ ಮಾಚಯ್ಯ'** ಎಂದೂ ೫ನೆಯ ನುಡಿಯ ಆರಂಭದಲ್ಲಿ

'ವರ ವೀರಶೈವ ಸಮಯವನುದ್ಧರಿಸಲು
ಸುರಗುಣ ವಂದಿತ ಚರಣ ಪಂಕಜ ವೀರೇ
ಶ್ವರ ತಾನೆ ಸ್ವಯಂಭು ಪರಮ ನಿಷ್ಕಲ ಘನ
ಗುರು ಕಲ್ಲಿನಾಥನೊಳ್ ಜನಿಸಿ ಕರಣ ಜಾಲ
ಹರ ಮಂತ್ರಕಾಯ ಮರಣಜಿತ ಸುರಚಿರ
ವರ **ವೀರ ಮಡಿಮಾಳ ಮಾಚಯ್ಯ** ಜಯಘಂಟೆ
ಸುರಗಿಯ ಕೈಯೊಳು ಪಿಡಿದು ಬರುತಲೆಮ್ಮ....'

ಎಂಬ ನಿರೂಪಣೆಯನ್ನು ಗಮನಿಸಬಹುದು. ಹೀಗೇ 'ಮಡಿವಾಳ ಮಾಚಯ್ಯನ ತಾರಾವಳಿ'ಯಲ್ಲಿ ಪಲ್ಲವಿಯಲ್ಲಿ '...... ವೀರಶರಭ ಮಾಚಿದೇವಯ್ಯ' ಎಂದೂ, ಅದರ ೧ನೆ ನುಡಿಯ ಅಂತ್ಯದಲ್ಲಿ **"ಪಣೆಯಗಣ್ಣ ತೆರೆಯಲುದ್ಭವಿಸಿದ ವೀರಾವತಾರಾ"** ಎಂದೂ ಹೇಳಿರುವುದಲ್ಲದೆ, ಇದರಲ್ಲಿ ಮೊದಲಿಗೆ ವೀರಭದ್ರ ದಕ್ಷಬ್ರಹ್ಮನ ಯಜ್ಞವನ್ನು ಧ್ವಂಸಮಾಡಿದ್ದು, ನರಸಿಂಹ ಮದವನ್ನು ಮುರಿಯಲು ಶರಭಾವತಾರ ತಾಳಿ ಅವನನ್ನು ಸಂಹರಿಸಿದ್ದು, ಆ ಮೇಲೆ ಶರಣ ಮಾಚಯ್ಯ ಅಸಾಧಾರಣ ಶಕ್ತಿಯನ್ನು ತೋರಿದ ವಿವಿಧ ಸಂದರ್ಭಗಳು ಇವನ್ನು ನಿರೂಪಿಸಲಾಗಿದೆ. ವೀರಭದ್ರನಿಗೂ ಶರಭನಿಗೂ ಮಾಚಿದೇವನಿಗೂ ಅಭೇದ ಕಲ್ಪನೆ ಮಾಡಿರುವುದು ಕಾಣುತ್ತದೆ.

ಶರಣ ಮಾಚಿದೇವ ಅಪಾರ ಶಕ್ತಿಶಾಲಿ ಮಹಿಮಾಪುರುಷ ಎಂದು ಕವಿಗಳು ನಿರೂಪಿಸಿರುವ ಕೆಲವು ಪ್ರಸಂಗಗಳೂ ಇವೆ. ಅವುಗಳಲ್ಲಿ ಒಂದು ಕೇವಲ ಶರಣರ ಬಟ್ಟೆಗಳನ್ನು ಮಾತ್ರ ಮಡಿಮಾಡಿಕೊಡುತ್ತಿದ್ದ ಮಾಚಯ್ಯನಿಗೆ, ಶರಣನಾಗಿರದಿದ್ದ ಬಿಜ್ಜಳ ದೊರೆ ತನ್ನ ಬಟ್ಟೆಗಳನ್ನು ತೊಳೆದು ಕೊಡುವಂತೆ – ಬಸವಣ್ಣ ಹಾಗೆ ಮಾಡಬೇಡಿ ಎಂದು ವಿನಂತಿ ಮಾಡಿಕೊಂಡರೂ ಕೇಳದೆ – ಹೇಳಿಕಳಿಸಿದಾಗ ಅವನು ದೊರೆಯ ಆಸೆಯನ್ನು ನಿರಾಕರಿಸಿದ. ಅದರ ಪರಿಣಾಮವಾಗಿ (ತನ್ನ ಪ್ರತಿಷ್ಠೆಗೆ ಭಂಗವಾದಂತಾಗಿ) ಕುಪಿತನಾದ ಬಿಜ್ಜಳ ತನ್ನ ಆನೆ ದಂಡು ಇವನ್ನು ಅವನ ಮೇಲೆ ಕಾರ್ಯಾಚರಣೆ ನಡೆಸಲು ಕಳಿಸಿದ. ಆದರೆ, ಮಾಚಿದೇವನ ಎದುರು ಆ ದಂಡಿನ ಆಟ ನಡೆಯಲಿಲ್ಲ. ಬಿಜ್ಜಳನ ಆನೆ, ಸೈನ್ಯ ಎಲ್ಲ ಅವನ ಕೈಯಲ್ಲಿ ನಾಶವಾದುವು. ಬಸವಣ್ಣ ಬೇಡ ಎಂದರೂ ಕೇಳದೆ ಈ ಕೆಲಸಕ್ಕೆ ಕೈಹಾಕಿದ್ದ ಬಿಜ್ಜಳ ಕಡೆಗೆ ಪಶ್ಚಾತ್ತಾಪ ಪಟ್ಟು ಮಾಚಿದೇವನಲ್ಲಿ ಎರಗಿ ಕ್ಷಮೆ ಬೇಡಿದ. ಕೇವಲ ಈ ಘಟನೆಯೊಂದನ್ನೇ ಚಿತ್ರಿಸಿ, 'ಇದು ವೀರಭದ್ರನ ಚರಿತ್ರೆ' ಎಂದು ಕರೆದ ಕವಿಕೃತಿಯೂ (ಮಡಿವಾಳಯ್ಯಗಳ ಸಾಂಗತ್ಯ) ಉಂಟು. ಜನಪದ ಸಾಹಿತ್ಯ ಕೂಡಾ ಮಡಿವಾಳ ಮಾಚಯ್ಯ ವೀರಭದ್ರನ ಅವತಾರವೆಂದೇ ಹೇಳುತ್ತದೆ.

"ವೀರಭದ್ರನೆ ಅಂದು । ವೀರಮಡಿವಾಳಾಗಿ ॥
ಸಾರುತಲಿ ವೀರಧರ್ಮವನೆ । ಜಗಕೆಲ್ಲ ॥
ತೋರಿದನು ಮುಕ್ತಿ ಮಾರ್ಗವನು ॥"

ಈ ಮೇಲಿನ ಅಂಶಗಳನ್ನು ಮನದಂದರೆ, ಪ್ರಸ್ತುತ ದೇವಪುರದ ವಿಗ್ರಹ 'ವೀರಭದ್ರ'ನೇ ಎನಿಸಿದ ಮಾಚಿದೇವನದು ಎನ್ನುವಲ್ಲಿ ಅನುಮಾನವಿಲ್ಲ. ಶರಣ ಮಾಚಯ್ಯ ವೀರಭದ್ರನೇ ಎನ್ನುವ ಭಾವನೆ ಇದ್ದ ಹಿನ್ನೆಲೆಯಲ್ಲಿ ಈ ವಿಗ್ರಹವನ್ನು ವೀರಭದ್ರ ದೇವರು ಎಂದು ಕರೆದಿರಬೇಕೆಂಬುದೂ ಹೀಗಾಗಿ ಈ ವಿಗ್ರಹ ಒಂದು ರೀತಿಯಲ್ಲಿ ವೀರಭದ್ರನದು, ಇನ್ನೊಂದು ರೀತಿಯಲ್ಲಿ ಮಾಚಿದೇವನದು ಎಂಬುದೂ ಸ್ಪಷ್ಟ. ಈ ಹಿನ್ನೆಲೆ ಇಲ್ಲಿರುವ ಜನತೆಗೆ ಮಾತ್ರ ತಿಳಿದ ಹಾಗೆ ಕಾಣುವುದಿಲ್ಲ.

ಮಡಿವಾಳ ಮಾಚಿದೇವನವೆಂದು ತಿಳಿಯಲಾದ ಎರಡು ಮೂರು ಶಿಲ್ಪಗಳು ಈಗಾಗಲೇ ಬೆಳಕಿಗೆ ಬಂದಿವೆ. ಮಾಚಿದೇವ ಬಿಜ್ಜಳನ ಆನೆಯೊಂದನ್ನು ಕತ್ತಿಯಿಂದ ಕೊಲ್ಲುತ್ತಿರುವಂತಹ ಚಿತ್ರಣ ಅವುಗಳಲ್ಲಿದೆ. ವೀರಭದ್ರನ ರೀತಿಯಲ್ಲಿ ಖಡ್ಗ ಗುರಾಣಿಗಳನ್ನು ಹಿಡಿದು ಧೀರ ಉತ್ಸಾಹಿತ ಭಂಗಿಯಲ್ಲಿ ನಿಂತಿರುವ ಮಾಚಿದೇವನ ವಿಗ್ರಹ ಕಂಡುಬರುತ್ತಿರುವುದು ಬಹುಶಃ ಇದೇ ಮೊದಲು ಇದುವರೆಗೂ ಮಾಚಿದೇವ ವೀರಭದ್ರನ ಅವತಾರ ಎಂದು ಸಾಹಿತ್ಯ ಕೃತಿಗಳಲ್ಲಿ ಹೇಳಿದ್ದುದು ನಮಗೆ ಪರಿಚಯವಿತ್ತೇ ಹೊರತು, ಅವನನ್ನು ಹೀಗೆ ವೀರಭದ್ರ ಶೈಲಿಯಲ್ಲೇ ಶಿಲ್ಪಿಸಿ(ದಂತೆ ಕಂಡುಬರುತ್ತಿ)ರುವುದು ಇದೇ ಪ್ರಥಮ ಎಂದು ಹೇಳಬಹುದು. (ಉತ್ತರ ಕರ್ನಾಟಕದ ಕಡೆಯಿಂದ ಪ್ರಚಾರವಾಗಿರುವ) ಈಚಿನ ಕಾಲದ ಮಾಚಿದೇವನ ವರ್ಣಚಿತ್ರಗಳಲ್ಲಿ ಒಂದು, ವೀರಭದ್ರನ ಶೈಲಿಯಲ್ಲಿ ಖಡ್ಗವನ್ನು ಹಿಡಿದು ನಿಂತಂತೆ ಚಿತ್ರಿಸಿದ ಗಡ್ಡಧಾರಿ ಮಾಚಿದೇವನ ಚಿತ್ರ ಪ್ರಸ್ತುತ ವಿಗ್ರಹವನ್ನು ಆಶ್ಚರ್ಯಕರವಾಗಿ ಹೋಲುತ್ತದೆ. ಜೊತೆಗೆ ಮತ್ತೊಂದು ಅಂಶವೆಂದರೆ, ಶರಣನದಾಗಿ ಸರಳವಾಗಿರಬೇಕಾಗಿದ್ದ ಈ ಶಿಲ್ಪ ದೇವರದಾಗಿ ಕಡಗ ಕಂಕಣ ಹಾರ ಕುಂಡಲ ಮೇಖಲಾದಿಗಳಿಂದ ಭೂಷಿತವಾಗಿದೆ. ಇದಕ್ಕೆ ಆ ಕಾಲದ ಜನತೆಯ ಅಥವಾ ಶಿಲ್ಪದ ಶೈಲಿಯನ್ನು ನೋಡಿದರೆ ಇದು ವಿಜಯನಗರ ಪೂರ್ವಾರ್ಧಕಾಲದ ಅರ್ಥಾತ್ ಕ್ರಿ.ಶ. ೧೪ನೆಯ ಶತಮಾನದ ಅವಧಿಯದಿರುವಂತೆ ಕಾಣುತ್ತದೆ. ಇದಕ್ಕೆ ಸಂಬಂಧಿಸಿದ ಯಾವ ಬರಹವೂ ಸದ್ಯಕ್ಕೆ ಲಭ್ಯವಾಗಿಲ್ಲ.

**'ಕಾಳಿಕಾಂಬೆ' ಎನ್ನುವ ವಿಗ್ರಹ**



ಇಲ್ಲಿಯ ಇನ್ನೊಂದು ವಿಗ್ರಹ ಹಿಂದೆಯೇ ಹೇಳಿದಂತೆ 'ಕಾಳಿಕಾಂಬೆ' 'ಕಾಳಮ್ಮ' 'ಅಮ್ಮ' 'ದೇವಿ' ಎಂದು ಜನ ಕರೆಯುತ್ತಿರುವ ವಿಗ್ರಹ. ವೀರಭದ್ರನದೆಂದು ಹೇಳುವ ವಿಗ್ರಹದ ಎದುರಾಗಿ ಈ ವಿಗ್ರಹವಿದೆ. 'ಕಾಳಮ್ಮ' 'ಕಾಳಿ' ಎಂದ ಕೂಡಲೇ ಎರಡಕ್ಕಿಂತ ಹೆಚ್ಚು ಕೈ, ಅವುಗಳಲ್ಲಿ ಖಡ್ಗ ಇತ್ಯಾದಿ ಆಯುಧಗಳು, ಕತ್ತರಿಸಿ ಜುಡ್ಡಿನಿಂದ ಹಿಡಿದಿರುವ ರಾಕ್ಷಸ ಪುರುಷ ರುಂಡ, ಕಿರೀಟ, ಕೋರೆಹಲ್ಲು, ರುಂಡಮಾಲೆ ಇವು ಇರುವ ಮೂರ್ತಿಯೊಂದು ನೆನಪಲ್ಲಿ ಹಾಯುತ್ತದೆ. ಅವಳು ಕೆಲವೆಡೆ ನಿಂತಿದ್ದರೆ, ಕೆಲವೆಡೆ ಸಿಂಹವಾಹನೆ ಯಾಗಿಯೋ ರುಂಡಾಸನೆಯಾಗಿಯೋ ಕುಳಿತಿರುತ್ತಾಳೆ. ರೌದ್ರಳಾಗಿಯೂ ಅಥವಾ ಹಾಗಿದ್ದೂ ಒಂದು ರೀತಿಯಲ್ಲಿ ಪ್ರಸನ್ನೆಯಾಗಿಯೂ ಕಾಣುತ್ತಾಳೆ. ನಮಗೆ ಸುಪರಿಚಿತವಾಗಿರುವ ಕಾಳಿಕಾದೇವಿಯ ವಿಗ್ರಹದ ರೀತಿ ಇದು. ಆದರೆ, ಇಲ್ಲಿಯ ಅಮ್ಮ ಪದ್ಮಾಸನೆಯಾಗಿ ಅಥವಾ ಚಕ್ಕಳ ಮಕ್ಕಳ ಭಂಗಿಯಲ್ಲಿ ಕುಳಿತಿದ್ದಾಳೆ. ಯಾವ ವಾಹನವೂ ಇಲ್ಲ, ಕಿರೀಟವೂ ಇಲ್ಲ. ದೊಡ್ಡದಾದ, ವಿಶಿಷ್ಟ ವಿನ್ಯಾಸದ ಮುಡಿ ಇದೆ. ಕೋರೆಹಲ್ಲೂ ಇಲ್ಲ, ಬದಲಿಗೆ ಪ್ರಸನ್ನ ಮುಖ ರುಂಡಮಾಲೆಯಿಲ್ಲ, ಕೆಲವೇ ಕೆಲವು ಸರ, ಹಾರ. ಹೆಚ್ಚು ಕೈಯಾಗಲಿ ಆಯುಧಗಳಾಗಲಿ ರುಂಡವಾಗಲಿ ಇಲ್ಲ; ಎರಡೇ ಕೈ. ಎಡಗೈಯಲ್ಲೊಂದು ಪುಟ್ಟ ಶಿವಲಿಂಗ (ಇಷ್ಟಲಿಂಗ), ಬಲಗೈ ಅದಕ್ಕೆ ಪೂಜೆ ಸಲ್ಲಿಸುವ ಭಂಗಿಯಲ್ಲಿದೆ. ಅಂದರೆ ಸಾಧಾರಣವಾಗಿ ಕಾಣುವ ಕಾಳಿಯ ಲಕ್ಷಣಗಳೇ ಇಲ್ಲ, ಬದಲಿಗೆ ಶಿವಭಕ್ತೆಯೊಬ್ಬಳ ಶಿಲ್ಪ ಇದು ಎಂಬಂತೆ ಕಾಣುತ್ತದೆ. ಆದರೂ ಜನರಿಗೆ 'ಕಾಳಮ್ಮ' ಎನಿಸಿದಾಳೆ. (ಈ ವಿಗ್ರಹದ ಎತ್ತರ ೮೬ ಸೆಂಮೀ ಅಗಲ ೬೦ ಸೆಂಮೀ ದಪ್ಪ ೨೫ ಸೆಂಮೀ)

ಎಡಗೈಯಲ್ಲಿ ಲಿಂಗವನ್ನು ಇಟ್ಟುಕೊಂಡು ಶಿವಪೂಜಾ ತನ್ಮಯಳಾಗಿರುವ ಇದನ್ನು ನೋಡಿದರೆ, ಕ್ರಿ.ಶ. ೧೨ನೆಯ ಶತಮಾನದ ಪ್ರಸಿದ್ಧ ಶರಣೆಯರಾದ ಅಕ್ಕಮಹಾದೇವಿ, ನೀಲಮ್ಮ, ಅಕ್ಕನಾಗಮ್ಮ ಇವರನ್ನು ಚಿತ್ರಿಸಿರುವ ಕೆಲವು ಚಿತ್ರಗಳ ನೆನಪು ಬರುತ್ತದೆ. ಅದರಲ್ಲೂ ಅಕ್ಕಮಹಾದೇವಿಯ ಚಿತ್ರಣ ಬಹುಜನಪ್ರಿಯವಾದುದು. ಈಚೆಗೆ ಅವಳನ್ನು ಕೇಶಾಂಬರೆಯಾಗಿ ನಿಂತಿರುವಂತೆ ಚಿತ್ರಿಸಿರುವುದೇ ಹೆಚ್ಚು ಅಥವಾ ಅದೇ ಹೆಚ್ಚು ಸುಪರಿಚಿತವಾದ ಚಿತ್ರವಾಗಿದೆ. ಹಾಗೆಯೇ ಅವಳು ಕೇಶಾಂಬರೆಯಾಗಿ ಅಥವಾ ಸೀರೆಯುಟ್ಟುಕೊಂಡು ಕುಳಿತು, ಎಡಗೈಯಲ್ಲಿ ಶಿವಲಿಂಗವನ್ನಿರಿಸಿಕೊಂಡು, ಬಲಗೈಯಲ್ಲಿ ಶಿವಪೂಜೆ ಮಾಡುತ್ತಿರುವ ಚಿತ್ರವೂ ಉಂಟು. ಆದರೆ ಅಂಥ ಚಿತ್ರಗಳು ಪ್ರಚುರವಾಗಿರುವುದು ಇನ್ನೂ ಕಡಮೆ. ಅಂತೂ ಇಲ್ಲಿಯ ವಿಗ್ರಹ ಭಕ್ತಿಭಾವದಿಂದ ಶಿವಲಿಂಗ ಪೂಜೆಯಲ್ಲಿ ತನ್ಮಯಳಾಗಿರುವ ಶರಣೆಯೊಬ್ಬಳ ಶಿಲ್ಪ ಚಿತ್ರಣ ಎನ್ನುವಲ್ಲಿ ಅನುಮಾನವಿಲ್ಲ. ಈ ಶಿಲ್ಪ-ಚಿತ್ರಣ ಒಬ್ಬ ಪ್ರಸಿದ್ಧ ಶರಣೆಯದೇ ಇರಬೇಕೆನಿಸುತ್ತದೆ. ಅಂದರೆ ಇದು ಶರಣೆಯರಲ್ಲಿ ಬಹು ಪ್ರಸಿದ್ಧಳಾಗಿರುವ ಅಕ್ಕಮಹಾದೇವಿಯ ವಿಗ್ರಹವಾಗಿರಬಹುದೆ? ಎನ್ನುವ ಸಂದೇಹ ಮೂಡುತ್ತದೆ. ಇದನ್ನು ಸ್ವಲ್ಪ ಪರಿಶೀಲಿಸಿದರೆ, ಶಿವಶರಣೆಯರಲೆಲ್ಲಾ ನಿಷ್ಠುರ ವೈರಾಗ್ಯ, ನಿಶ್ಚಲ ಪರಮಾತ್ಮಾನು ಸಂಧಾನ ಇವುಗಳಿಂದ ಹೆಚ್ಚು ಸುಪರಿಚಿತಳಾದ ಶರಣೆ ಎಂದರೆ ಅಕ್ಕನೇ ಎನ್ನುವಲ್ಲಿ ಎರಡು ಮಾತಿಲ್ಲ. ಆದರೆ ತೋರ ತುರುಬಿನ ಕೇಶವಿನ್ಯಾಸ, ಅನೇಕ ಆಭರಣ ಅಲಂಕರಣಾದಿಗಳಿಂದ ಕೂಡಿದ ಈ ಶಿಲ್ಪ ಅಕ್ಕನಾಗಿರಲು ಹೇಗೆ ಸಾಧ್ಯ? ಎಂದು ಸೋಜಿಗವನ್ನು ಹುಟ್ಟಿಸಬಹುದು. ಅಕ್ಕನನ್ನು ಕುರಿತಂತೆ ಅವಳು ಈ ಬಗೆಯಲ್ಲಿದ್ದಂತಹ ಕವಿವರ್ಣನೆಯೂ ಇಲ್ಲದಿಲ್ಲ. ಅಕ್ಕ ಲಿಂಗಪೂಜೆಗೆ ಕುಳಿತ ಪ್ರಸಂಗವೊಂದು ಹೀಗೆ ಬರುತ್ತದೆ;

ಹರಿಹರ ಕವಿಯ 'ಮಹಾದೇವಿಯಕ್ಕನ ರಗಳೆ' ಯಲ್ಲಿಯ ಅಂಥ ಪ್ರಸಂಗವೊಂದನ್ನು ನೋಡಬಹುದು. ರಾಜ ಕೌಶಿಕನೊಂದಿಗೆ ವಿವಾಹವಾದ ನಂತರದಲ್ಲಿ ಅಕ್ಕ ಪರಿಮಳ ಭರಿತ ಜಲದಲ್ಲಿ ಸ್ನಾನಮಾಡಿ, ವಿವಿಧ ಹೂವು, ಗಂಧಾನುಲೇಪನ, ದಿವ್ಯ ವಸ್ತ್ರಾಭರಣಗಳನ್ನು ಧರಿಸಿ, ಹೀಗೆಲ್ಲ ಇದ್ದೂ ಅತ್ಯಂತ ವಿರಕ್ತಭಾವದಲ್ಲಿ, ಸಿಂಗಾರಗೊಂಡ ಭಕ್ತಿ ನಡೆದು ಬರುವಂತೆ ಬಂದು, ಸಾಕ್ಷಾತ್ ಪಾರ್ವತಿಯೇ ಎಂಬಂತೆ ಶಿವಪೂಜೆಗೆ ಕುಳಿತು, ಅದರಲ್ಲಿ ಅತ್ಯಂತ ತನ್ಮಯಳಾದುದರ ಚಿತ್ರಣ ಅಲ್ಲಿಬರುತ್ತದೆ. ಅವಳು ಪೂಜಾನಿರತಳಾಗಿದ್ದಾಗ ಶಿವನನ್ನು ಕುರಿತು.

**"ಹರನೆ ಬಾರ ಸುಕೃತಸಾರ ಸರ್ಪಹಾರ ಬಾರ ದೇವ**
**ವೀರಭದ್ರ ದುರಿತಮಥನ ಪುಣ್ಯಕಥನ ರೂಪಬಾರ"**

ಎಂದು ಮುಂತಾಗಿ ಸಂಬೋಧಿಸಿದಳೆಂಬಂತೆ ಕವಿ ಬರೆದಿರುವುದು ಇಲ್ಲಿ ಗಮನಾರ್ಹವೆನಿಸುತ್ತದೆ. ಪ್ರಸ್ತುತ ವಿಗ್ರಹ ಮೇಲೆ ಹೇಳಿದ ರೀತಿಯ ಕವಿವರ್ಣನೆಯನ್ನು ಬಲುಮಟ್ಟಿಗೆ ಆಧರಿಸಿ ಶಿಲ್ಪಿತವಾಗಿರಬಹುದೆ? ಎಂಬ ಸಂದೇಹ ಬಾರದಿರುವುದಿಲ್ಲ. ಈ ವಿಗ್ರಹ ಕೂಡಾ, ಬಹುಶಃ ಹಿಂದೆ ನೋಡಿದ ವೀರಭದ್ರ ಅರ್ಥಾತ್ ಮಾಚಿದೇವ ವಿಗ್ರಹ ರಚನೆಯ ಕಾಲದಲ್ಲೇ ಆದದ್ದಿರಬಹುದು ಎನಿಸುತ್ತದೆ. ಹೀಗಾಗಿ ಇದು ಅಕ್ಕನನ್ನು ಕುರಿತ ಆ ಕಾಲದ ಜನದ ಹಾಗೂ ಶಿಲ್ಪಿಯ ಕಲ್ಪನೆ ಎಂದು ಹೇಳಬಹುದೇನೋ;

ಇಲ್ಲಿ ಇನ್ನೂ ಒಂದು ಪ್ರಶ್ನೆ ಇದೆ. ವೀರಭದ್ರನ ಅವತಾರವೆಂದು ಭಾವಿಸಲಾದ ಮಾಚಿದೇವನ ವಿಗ್ರಹವನ್ನು 'ವೀರಭದ್ರನ ವಿಗ್ರಹ'ವೆಂದು ಕರೆದದ್ದೇನೋ ಸರಿಯೆ. ಆದರೆ ಅಕ್ಕನನ್ನು (ಅಥವಾ ಅಕ್ಕನದೆನ್ನಬಹುದಾದ ವಿಗ್ರಹವನ್ನು)

ಕಾಳಮ್ಮ' ಕಾಳಿಕಾದೇವಿ' ಎಂದು ಕರೆದದ್ದೇಕೆ? ಈ ಪ್ರಶ್ನೇ ತೀರಾ ಸಹಜವಾದದ್ದೆ. ಮಾಚಿದೇವನನ್ನು ವೀರಭದ್ರನ ಅವತಾರ ಎಂದರೆ ಅಕ್ಕನನ್ನೇನೂ ಕಾಳಿಕಾಂಬೆಯ ಅವತಾರ ಎಂದಿಲ್ಲ. ಹರಿಹರ ಕವಿಯೊಬ್ಬ ಮಾತ್ರ ಅವಳನ್ನು ಕೈಲಾಸದಲ್ಲಿಯ ಒಬ್ಬ ರುದ್ರಕನ್ನಿಕೆಯ ಅವತಾರ ಎಂದರೆ ಅವತಾರ ಎಂದು ಹೇಳಿದ್ದಾರೆ. ಇದು ಪರೋಕ್ಷವಾಗಿ, ಅವಳು ಪಾರ್ವತಿಯ ಅವತಾರ ಎಂದಂತಾಗಬಹುದೇ ಹೊರತು ಕಾಳಿ ಅವತಾರ ಎಂದಂತಾಗುವುದಿಲ್ಲ. ಇದಕ್ಕೆ ಇಲ್ಲಿ ಒಂದು ವಿವರಣೆ ಸಾಧ್ಯವೆನಿಸುತ್ತದೆ; ಅದೆಂದರೆ, ಕೆಲವು ವೀರಭದ್ರ ದೇವಾಲಯಗಳಲ್ಲಿ, ನವರಂಗದಲ್ಲಿ ಇಲ್ಲವೆ ಅಂತರಾಳದಲ್ಲಿ, ಒಟ್ಟಿನಲ್ಲಿ ವೀರಭದ್ರ ಸನಿಹದಲ್ಲಿ 'ಭದ್ರಕಾಳಿ' ಎನ್ನುವ ಸ್ತ್ರೀದೇವತೆ ಇರುವುದುಂಟು ಪುರಾಣಗಳ ಪ್ರಕಾರ, ದಕ್ಷ (ಯಾಗ) ಧ್ವಂಸಕ್ಕಾಗಿ ವೀರಭದ್ರ ಉದ್ಭವಿಸಿದಾಗ ಅವನಂತೆಯೇ ಉದ್ಭವಿಸಿದ ಪೂರಕ ಶಕ್ತಿದೇವತೆ ಭದ್ರಕಾಳಿ. ಹಾಗಾಗಿ ಕೆಲವೆಡೆ ವೀರಭದ್ರ ಇದ್ದಲ್ಲಿ ಭದ್ರಕಾಳಿಯೂ ಇರುವುದುಂಟು. ಜನರ ಕಣ್ಣಲ್ಲಿ ಇಲ್ಲಿರುವ ಪುರುಷ(ದೇವತಾ) ವಿಗ್ರಹ 'ವೀರಭದ್ರ' ಎಂದಾದ ಮೇಲೆ ಇಲ್ಲಿಯ ಸ್ತ್ರೀ ವಿಗ್ರಹ ವೀರಭದ್ರನಿಗೆ ಸಂವಾದಿಯಾದ 'ಭದ್ರಕಾಳಿ' (ಅಥವಾ ಕೇವಲ 'ಕಾಳಿ')ಯೇ ಎಂದು ಅನ್ನಿಸಿರಬೇಕು. ಒಟ್ಟಿನಲ್ಲಿ ದೇವತೆಗಳಂತೆ ಕಾಣಿಸಿದ ಅಥವಾ ಭಾವಿಸಿದ ಈ ವಿಗ್ರಹಗಳು ಇಬ್ಬರು ಶರಣರ ವಿಗ್ರಹಗಳು ಎಂದು ಹೇಳಬಹುದು. ಕ್ರಿ.ಶ. ೧೪ನೆಯ ಶತಮಾನದ ಕಾಲಕ್ಕಾಗಲೇ ಶರಣರ ಧಾರ್ಮಿಕಪ್ರಭಾವ ವ್ಯಾಪಕವಾಗಿ ಎಲ್ಲೆಡೆಯಲ್ಲೂ ಪಸರಿಸಿತ್ತು. ಆ ಹಿನ್ನೆಲೆಯಲ್ಲೇ ಇಂಥ ವಿಗ್ರಹಗಳು ಶಿಲ್ಪಗಳು ಮೈದಳೆದಿವೆ ಎಂದು ಹೇಳಬಹುದು.

ಗುಂಡ ಬ್ರಹ್ಮಯ್ಯ ಶಿಲ್ಪಗಳು ಸಾಮಾನ್ಯವಾಗಿ ವೀರಭದ್ರ ದೇವರ ಸನಿಹದಲ್ಲೇ ಕಾಣುವವೆಂದು ನಾನು ಹಿಂದೊಮ್ಮೆ ಅಭಿಪ್ರಾಯ ವ್ಯಕ್ತಪಡಿಸಿದ್ದಂತೆ, ಇಲ್ಲಿ ಒಂದು ಚಿಕ್ಕ ಗುಂಡಬ್ರಹ್ಮಯ್ಯಗಳ ಶಿಲ್ಪವೂ ಇದೆ. ಈ ಶಿಲ್ಪದ ಸ್ಥಾಪನೆ ಕೂಡಾ ಇಲ್ಲಿರುವ ವಿಗ್ರಹ ವೀರಭದ್ರ ದೇವರು ಎಂಬ ಭಾವನೆಯಲ್ಲೇ ಆದದ್ದಲ್ಲಿ ಎಂದೂ ಹೇಳಬಹುದು.

ಕ್ರಿ.ಶ. ೧೨ನೆಯ ಶತಮಾನದ ಶಿವಶರಣರಲ್ಲಿ ಪ್ರಮುಖರಾದ ಇಬ್ಬರನ್ನು ಪ್ರತಿನಿಧಿಸುವ ಪ್ರಸ್ತುತ ಶಿಲ್ಪಗಳನ್ನು ಮಾಡಿಸಿದವರಾರು? ಮಾಡಿದವರಾರು? ಎಂಬ ಸಂಗತಿ ಮಾತ್ರ ಅಜ್ಞಾತವಾಗಿದೆ. ಇಷ್ಟಾದರೂ ಈ ಶಿಲ್ಪಗಳು ಇತಿಹಾಸದ ದೃಷ್ಟಿಯಿಂದ ತುಂಬ ಮಹತ್ತ್ವದ್ದೆನ್ನಬಹುದು. ಇತರ ಕೆಲವೆಡೆಗಳಲ್ಲೂ ಹೀಗೇ ದೇವತೆಗಳ ಹೆಸರುಗಳಿಂದ ಕರೆಯಲ್ಪಡುತ್ತಿರುವ ಶಿವಶರಣ ವಿಗ್ರಹಗಳಿರುವ ಸಾಧ್ಯತೆ ಇದೆ. ಈ ದಿಶೆಯಲ್ಲಿ ಶೋಧ ನಡೆಯಬೇಕೆಂಬುದಕ್ಕೆ ಈ ವಿಗ್ರಹಗಳು ದಿಕ್ಸೂಚಿಗಳೆಂದು ಭಾವಿಸಬಹುದು.

[೧೮-೦೭-೧೯೮೫ ರಲ್ಲಿ ನಾನು ದೇವಪುರಕ್ಕೆ ಹೋದಾಗ ಅಲ್ಲಿ ನನಗೆ ಸ್ಥಳೀಯವಾಗಿ ಸಹಕಾರ ನೀಡಿದವರು ಆ ದೇವಸ್ಥಾನದ ಅರ್ಚಕರಾಗಿದ್ದ ಶ್ರೀ ಪಂಚಾಕ್ಷರಪ್ಪ ಮತ್ತು ಶ್ರೀ ಗಂಗಾಧರ ಅವರು. ಆಗ ಆಸಕ್ತಿ ಪ್ರೀತಿಗಳಿಂದ ನನ್ನೊಡನೆ ಬಂದು ಈ ಶಿಲ್ಪಗಳ ಛಾಯಾಚಿತ್ರಗಳನ್ನು ತೆಗೆದು ಕೊಟ್ಟವರು ಹೊಸದುರ್ಗದ ಮಿತ್ರರಾದ ಶ್ರೀ ಬಿ. ಮೂಲಕೇಶಮೂರ್ತಿ ಅವರು, ಇವರೆಲ್ಲರಿಗೆ ನನ್ನ ಕೃತಜ್ಞತೆಗಳು].



## ಆಧಾರಸೂಚಿ


೧. **ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು,** ಸಂ. ಎಸ್. ಶಿವಣ್ಣ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥನ ಮಠ, ಗದಗ-ಡಂಬಳ, ೧೯೯೪.

೨. **ವೀರಶೈವ ತಾರಾವಳಿ ಸಂಪುಟ,** ಸಂ. ಡಾ. ವೀರಣ್ಣ ರಾಜೂರ, ಗದಗ-ಡಂಬಳ

೩. **ಶಿವಶರಣ ಕಥಾರತ್ನ ಕೋಶ,** ತ.ಸು. ಶಾಮರಾಯ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೭.

೪. **ಹರಿಹರನ ರಗಳೆಗಳು,** ಸಂ. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ವಿ.ವಿ.ಹಂಪಿ, ೧೯೯೯

೫. **ಶಿಲ್ಪಗಳಲ್ಲಿ ಶಿವಶರಣರು,** ಸಂ. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ವಿ.ವಿ.ಹಂಪಿ, ೧೯೯೯

೬. **ಕನ್ನಡ ಜಾನಪದ ಗೀತೆಗಳು,** ಡಾ. ಬಿ.ಎಸ್. ಗದ್ದಗಿಮಠ, ಧಾರವಾಡ, ೧೯೬೬.

೭. **ದುರ್ಗಶೋಧನ,** ಬಿ. ರಾಜಶೇಖರಪ್ಪ, ಕ.ಸಾ.ಪ., ಬೆಂಗಳೂರು, ೨೦೦೧.

೩೭

# ಹರಿಹರೇಶ್ವರ ದೇವಾಲಯದ ಹೊರಭಿತ್ತಿಯಲ್ಲಿರುವ ನೃತ್ಯ ಶಿಲ್ಪಗಳ ವಿವೇಚನೆ

ಡಾ. ಹರಿಹರ ಶ್ರೀನಿವಾಸರಾವ್*

ದಾವಣಗೆರೆ ಜಿಲ್ಲೆಯ ಒಂದು ಸುಪ್ರಸಿದ್ಧವಾದ ಪುಣ್ಯ ಕ್ಷೇತ್ರ ಹರಿಹರ. ಕ್ರಿ.ಶ. ೧೨೨೪[೧] ರಲ್ಲಿ ಪುನರ್ ನಿರ್ಮಾಣಗೊಂಡ ಇಲ್ಲಿಯ ದೇವಾಲಯವು ಹೊಯ್ಸಳರ ಕೊನೆಯ ಕಲದ ಶಿಲ್ಪಶೈಲಿಯನ್ನು ಒಳಗೊಂಡಿದೆ. ಈ ದೇವಸ್ಥಾನದ ಹೊರಭಿತ್ತಿಯಲ್ಲಿ ದೇವ, ದೇವಿಯರ, ಸಾಮಾನ್ಯ ಜನಜೀವನ, ಅನೇಕ ನೃತ್ಯ ಶಿಲ್ಪಗಳ ವಿಶೇಷ ಭಂಗಿ, ಇತ್ಯಾದಿಗಳು ಕಂಡುಬರುತ್ತವೆ. ಇವುಗಳಲ್ಲಿ ಗರುಡ ಕಂಭದಿಂದ ಬಲಪಾರ್ಶ್ವದಲ್ಲಿರುವ ಕೆಲವು ನೃತ್ಯ ಶಿಲ್ಪಗಳನ್ನು ಸಾಧ್ಯವಾದಷ್ಟು ನಾಟ್ಯಶಾಸ್ತ್ರ ಹಾಗೂ ಕನ್ನಡ ಕಾವ್ಯಗಳಲ್ಲಿ ಕಂಡುಬರುವ ನಾಟ್ಯ ವರ್ಣನೆಗಳ ಮೂಲಕ ಗುರುತಿಸಲು ಈ ಸಂಪ್ರಬಂಧದಲ್ಲಿ ಮೊದಲ ಬಾರಿಗೆ ಪ್ರಯತ್ನಿಸಲಾಗಿದೆ. ಇಂತಹ ಭಿತ್ತಿಶಿಲ್ಪಗಳು ಕರ್ನಾಟಕದ ಬೇರೆ ಬೇರೆ ಸ್ಥಳದ ದೇವಾಲಯಗಳಲ್ಲೂ ಸಾಕಷ್ಟು ಕಂಡುಬರುತ್ತವೆ. ಆದರೆ ಅಳಿವಿನ ಅಂಚಿನಲ್ಲಿರುವ, ವಿಶ್ಲೇಷಿಸಿದರೆ ಪ್ರಾದೇಶಿಕವಾಗಿ ವಿಭಿನ್ನವಾಗಿಯೇ ಕಂಡುಬರುವ ಇಲ್ಲಿಯ ಅನೇಕ ಶಿಲ್ಪಗಳ, ಛಾಯಾಚಿತ್ರಗಳ ಮೂಲಕವಾದರೂ ಉಳಿಸಿಕೊಳ್ಳಬೇಕೆಂಬ ಉದ್ದೇಶದಿಂದ ಇಲ್ಲಿ ಪ್ರಸ್ತುತಪಡಿಸಲಾಗಿದೆ.

ಇದರಲ್ಲಿಯ ಚರ್ಮವಾದ್ಯವನ್ನು ಮದ್ದಳೆ, ಅಡ್ಡಾವುಜ[೨] ಅಥವಾ ಮೃದಂಗವೆಂದು ಕರೆಯಲಾಗುತ್ತದೆ. ಈ ವಾದ್ಯ ಹಿಡಿದಿರುವವನ ಪಾದಗಳು ಸ್ವಸ್ಥರದ ರೀತಿಯಲ್ಲಿವೆ. ಮದ್ದಳೆಯನ್ನು ಭೂಮಿಗೆ ಸಮಾನಾಂತರವಾಗಿ ಹಿಡಿದುಕೊಂಡಿದ್ದಾನೆ. ಕೇಶಾಲಂಕಾರ ಪೋಪಿಯ ರೀತಿಯಲ್ಲಿದ್ದು, ಕಿವಿಗಳ ಅಕ್ಕಪಕ್ಕಗಳಲ್ಲಿ ಬಾಚಿ ಕಟ್ಟಿದ ಗುಂಗುರು ಕೂದಲುಗಳಿವೆ. ಗೆಜ್ಜೆಯ ಸರಗಳನ್ನು ಎದೆಯಲ್ಲಿಯೂ ಜನಿವಾರದ ರೀತಿಯಲ್ಲಿ ಧರಿಸಿದ್ದಾನೆ. ತೋಳಬಂದಿ, ಕೈಕಾಲುಗಳಲ್ಲಿ ಕಡಗ ಧರಿಸಿರುವ ಸರಳ ಅಲಂಕಾರವಿದೆ. ಮೃದಂಗ ಹಿಡಿದಿರುವ ರೀತಿ ಹಾಗೂ ವಾದಕನ ಕಣ್ಣುಗಳ ನೋಟ ನೃತ್ಯದ ಪ್ರಾರಂಭಿಕ ಸಿದ್ಧತೆಗಳನ್ನು ವ್ಯಕ್ತಗೊಳಿಸುತ್ತವೆ.

ನಾಗಕುಮಾರ ಚರಿತೆಯಲ್ಲಿ ಬಾಹುಬಲಿಯು ನಾಗಕುಮಾರನು ಮದ್ದಳೆ ನುಡಿಸಿದ ರೀತಿಯನ್ನು ಹೀಗೆ ವರ್ಣಿಸುತ್ತದೆ.[೩]

**ಎತ್ತಿ ಮದ್ದಳೆಯ ಗುಂಡಿಗೆ ಮೆಟ್ಟಿ ಶ್ರುತಿಯ ಚೆ ।**
**ಲ್ವೆತ್ತಾರೈರು ಮೇಳೈಸಿ ॥**
**ತತ್ತವಧಾನದಿ ಕಟ್ಟೆಯೆಡದ ಕ ।**
**ಣ್ಗೊತ್ತಿ ಬೋನವ ನಳವಡಿಸಿ ॥ ೨೨-೬೫ ॥**

**ಆಯತವನು ಕಟ್ಟಾಯತಗಾಣೆಸಿ ।**
**ದಾಯವರಿದು ಭಜಾವಣೆಯ ॥**
**ಬಾಯ ಬಿನ್ನಣದೋರಿ ಬಾಜಿಸಿದನು ಮಝು ।**
**ಬಾಯ ಬಿಟ್ಟಾಲಿಸೆ ಸಭೆಯು ॥ ೨೨-೬೭ ॥**

ಸಾಮಾನ್ಯವಾಗಿ ಎಲ್ಲ ಚರ್ಮವಾದ್ಯಗಳನ್ನು ಮದ್ದಳೆ ಎಂದು ಇತ್ತೀಚೆಗೆ ಗುರುತಿಸುತ್ತಾರಾದರೂ, ಬಾಹುಬಲಿ ಹೇಳುವ ಮದ್ದಳೆಯು ಕರ್ನಾಟಕ ಶಾಸ್ತ್ರೀಯ ಸಂಗೀತ ಹಾಗೂ ನೃತ್ಯಗಳಲ್ಲಿ ಪ್ರಮುಖ ಪಕ್ಕವಾದ್ಯವಾಗಿ ಬಳಸುವ ಮೃದಂಗ ರೂಪವೇ ಆಗಿದೆ. ಭರತನು ನಾಟ್ಯಶಾಸ್ತ್ರದಲ್ಲಿ ಈ ವಾದ್ಯದ ತಯಾರಿಕೆ, ಅದರ ಪ್ರಕಾರಗಳು, ನುಡಿಸಾಣಿಕೆಯ ವಿಧಾನ, ಪಾಠಾಕ್ಷರಗಳು ಇತ್ಯಾದಿ. ಎಲ್ಲಾ ವಿವರಗಳನ್ನು 'ಪುಷ್ಕರ ವಾದ್ಯಗಳು' ಎನ್ನುವ ಅಧ್ಯಾಯದಲ್ಲಿ ವಿವರಿಸಿದ್ದಾನೆ.

ಮೃದಂಗ ಅಥವಾ ಮದ್ದಳೆಯನ್ನು ಮರದಿಂದ ಮಾಡಿದ್ದು, ಅದು ಸುಮಾರು ೬೦ ಸೆಂ.ಮೀ. ಉದ್ದದ, ಪಿಪಾಯಿಯ ಆಕಾರದಲ್ಲಿರುತ್ತದೆ. ಒಂದು ಬಾಯಿಗಿಂತ ಇನ್ನೊಂದು ಬಾಯಿ ಚಿಕ್ಕದಾಗಿರುತ್ತದೆ. ಇವುಗಳನ್ನು ಚರ್ಮದಿಂದ ಬಂಧಿಸಿರುತ್ತಾರೆ. ರಂಧ್ರಗಳ ಮೂಲಕ ಚರ್ಮದ ಪಟ್ಟಿಯಿಂದ ಎರಡೂ ಮುಖಗಳನ್ನು ಕಟ್ಟಿರುತ್ತಾರೆ. ಬಲಭಾಗದ ವೃತ್ತಾಕಾರದ ಮಧ್ಯದಲ್ಲಿ ಜೇಡಿಮಣ್ಣು, ಕಬ್ಬಿಣ ಪುಡಿ, ಗಾರೆ, ಗೋಧಿಹಿಟ್ಟು, ಅಕ್ಕಿಹಿಟ್ಟು ಮುಂತಾದವುಗಳ ಮಿಶ್ರಣವನ್ನು ಚೆನ್ನಾಗಿ ಕಲೆಸಿ, ಉಜ್ಜಿ, ಮೂರು ಪದರುಗಳಲ್ಲಿ ಲೇಪಿಸಿರುತ್ತಾರೆ. ಇದು ಮೃದಂಗದಲ್ಲಿ ಬೇಕಾದ ಸ್ವರ

* ೭೫/೧೫, ಸಮರ್ಥ, ವಿಕಾಸ್ ಹೈಸ್ಕೂಲ್ ಎದುರು, ೫ನೇ ಬ್ಲಾಕ್, ಬನಶಂಕರಿ ೩ನೇ ಹಂತ, ಬೆಂಗಳೂರು-೫೬೦೦೮೫.

ಮೊರಡಿಸಲು ಸಹಕಾರಿಯಾಗುತ್ತದೆ. ಬಲಭಾಗದ ಈ ವೃತ್ತಕ್ಕೆ ಕರಣೆ' ಎನ್ನುತ್ತಾರೆ. ಎಡಭಾಗದಲ್ಲಿ ಮೃದಂಗ ನುಡಿಸುವಾಗ ಮಾತ್ರ ಗೋಧಿ ಹಿಟ್ಟು ಅಥವಾ ಸಣ್ಣ ರವೆಯನ್ನು ಹದವಾಗಿ ಲೆಸಿ ತೆಳ್ಳಗಿನ ಪದರದಂತೆ ಲೇಪಿಸಿರುತ್ತಾರೆ. ಆಗಾಗ ನೀರಿನಿಂದ ಈ ಪದರವನ್ನು ಲೇಪ ಮಾಡುತ್ತಾರೆ. ಇದರಿಂದ ಮೃದಂಗದ ನಾದ ತರಂಗಗಳು ಹೆಚ್ಚು ಪರಿಣಾಮಕಾರಿಯಾಗಿ ೀಳುತ್ತವೆ. ಈ ಲೇಪವನ್ನು 'ಬೋನ' ಎಂದು ಕರೆಯುವರು. ರಣೆಯ ಭಾಗದ ಮುಖದ ಸುತ್ತಲೂ ಲಘು ಪ್ರಹಾರ ಮಾಡುತ್ತಾ ಮೃದಂಗದ 'ಶ್ರುತಿ' ಮಾಡುತ್ತಾರೆ. ನಂತರ ಮೃದಂಗದಲ್ಲಿ 'ತತ್ತಕಾರ' ನುಡಿಸಲು ಆರಂಭಿಸುತ್ತಾರೆ.

ಶ್ರುತಿ : ಹ್ರಸ್ವಾಕ್ಷರ ಉಚ್ಚಾರಣೆಗೆ ತಮಕಾಲವಾಗಿ ಸ್ವರವು ಆರಂಭವಾಗುವ ಧ್ವನಿ ವಿಷಕ್ಕೆ 'ಶ್ರುತಿ' ಎನ್ನುವರು. ಶ್ರುತಿಯಲ್ಲಿ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ದೈವತ, ನಿಷಾದವೆಂಬ ಸ್ವರಗಳು ಹುಟ್ಟಿ, ಇದಕ್ಕೆ 'ಸರಿಗಮಪದನಿ' ಎಂಬ ವರ್ಣಸಂಜ್ಞೆ ಇರುತ್ತದೆ. ಇವು ೨೨ ಭೇದಗಳಾಗಿ ಸಪ್ತಸ್ವರಗಳಲ್ಲಿ ವ್ಯವಸ್ಥಿತವಾಗಿವೆ.

ವಿಶೇಷವೆಂದರೆ ಹರಿಹರೇಶ್ವರ ದೇವಸ್ಥಾನದ ಹೊರಗಡೆ ಆವರಣದಲ್ಲಿರುವ ಶಾಸನಸಂಖ್ಯೆ ದಾವಣಗೆರೆ ೩೫ರಲ್ಲಿ ಕಾಲ ಕ್ರಿ.ಶ. ಸು. ೧೧೬೦) ಕದಂಬ ಕುಲದ ಸೋ(ಮ) ಯಿ ದೇವನ ಸಂಗೀತ ಪ್ರೇಮವನ್ನು ವರ್ಣಿಸುವಾಗ, ಸಂಗೀತದ ಪಾರಿಭಾಷಿಕ ಶಬ್ದಗಳಾದ, ವಿತತೋದ್ವಾದ್ಯ ವಾದ್ಯ), ಶ್ರುತಿ, ಸ್ವರ, ಗ್ರಾಮ, ಮೂರ್ಛನ, ತಾನ, ಗಾನ ಭೇದಗಳನ್ನು ಹೇಳುತ್ತಾ ಆತನನ್ನು ನಾಟ್ಯಶಾಸ್ತ್ರಕರ್ತೃ ಭರತ'ನಿಗೆ ಹೋಲಿಸಿದ್ದಾನೆ.

**ತತವಿತತೋದ್ಯದ್ವಾದ್ಯ**
**ಶ್ರುತಿಸ್ವರಗ್ರಾಮಮೂರ್ಛನಾತಾನಸಮ .**
**. . . . ಗಾನಭೇದದೊಳ್ ತಾ**
**ನತಿಚತುರಂ ಭರತನಂತೆ ಸೋಮನೃಪಾಳಂ**

(೩೭ನೇ ಸಾಲು)

'ತತ' ಶಬ್ದದ ಸೂಕ್ಷ್ಮತೆಯನ್ನು, ಕವಿ ಚಂದ್ರಶೇಖರನು ಪಂಪೆಯ ವಿರೂಪಾಕ್ಷ ದೇವರ ಎದುರು ನಡೆಯುವ ನೃತ್ಯ ಪ್ರಕಾರ ಪ್ರಸಂಗ ವರ್ಣನೆಯನ್ನು 'ವಿರೂಪಾಕ್ಷಾ ಪಂಪಾಸ್ಥಾನ ವರ್ಣನಂ ಕಾವ್ಯದಲ್ಲಿ ಬಣ್ಣಿಸುವ ರೀತಿ ಹೀಗಿದೆ.[೪]

**ತತ ಧಿಧಿಕಿಟ ಧಿಧಿ ತತ ಕಿಟ**
**ತತ ಧಿಧಿಕಿ ತತಕಧಿತತ್ತಾಧಿಕಿ ದಿಧಿ ತತಕಿಟ**
**ತತಕಿಟ ಧಿತ ದಿಕ್ಕಟ ತೋ**
**ತತಕಿಟ ದೊಮ್ಮೆಂದು ಶವಣೆಗಂ ಬಾಜಿಸಿದಂ ॥**

(ಪದ್ಯ ೮೧)

ಕಂದ ಪದ್ಯದಲ್ಲಿ ಅಡಕಗೊಂಡಿರುವ ಈಜಲೆ ಚತುರಪ್ರಗತಿ (೪ ಮಾತ್ರೆ)ಯಲ್ಲಿದ್ದು, ಚೇತೋಹಾರಿಯಾದ ಲಯ ಹೊಂದಿದೆ. ಅವುಗಳಲ್ಲಿಯ ಬಗೆಗಳನ್ನು ಕವಿ ನಿರೂಪಿಸಿದ್ದಾನೆ. ಅಡ್ಡಾವುಜಿ, ಕಂದಾವುಜಿ (ಸ್ಕಂಧಾವುಜಿ), ಪಟ್ಟಾವುಜ ಹಾಗೂ ಕುಡುಪಾವುಜಗಳ ಗವರಸಣಿಗೆಯನ್ನು ಎಚ್ಚರಿಕೆಯಿಂದ ತೆಗೆದು, ಅವುಗಳ ಗುಂಟಿಕೆಗಳಿಂದ ಶ್ರುತಿ ನೇರಮಾಡಿ, ಗಂಟುಗಳಲ್ಲಿ ಸಿಕ್ಕಿಸಿದ ಕುಡುಪನ್ನು ತೆಗೆದು ಆಯತ ಮಂಡಲದಲ್ಲಿ ನಿಂತು, ಆವುಜಗಳನ್ನು ನುಡಿಸುತ್ತಿದ್ದ ರೀತಿಯೂ ಇದೆ. ಈ ಕಾವ್ಯದಲ್ಲಿ 'ಆವುಜಗಳನ್ನು ಮೃದಂಗ ಹೋಲುವ ಅವನದ್ಧ (ಚರ್ಮ) ವಾದ್ಯವೆಂದೂ, ದೇಶಭಾಷೆಯಲ್ಲಿ ಅವುಗಳಿಗೆ 'ಆವುಜ'ಗಳೆಂದು ಕರೆಯುತ್ತಾರೆಂದೂ ಶಾರ್ಙ್ಗದೇವ (ಕ್ರಿ.ಶ. ೧೩ ಶತಮಾನ) ಹಾಗೂ 'ಸುಧಾಕಲಶ' ಎಂಬ ಇಬ್ಬರು ಸಂಗೀತಜ್ಞರೂ ಹೇಳುತ್ತಾರೆ. ಇವುಗಳನ್ನು ಅಡ್ಡಾವುಜ, ಸ್ಕಂದಾವುಜ, ಷಟ್ಟಾವುಜವೆಂದು ಅನ್ವರ್ಥವಾಗಿ ಗುರುತಿಸಬೇಕೆಂದು 'ಶಾರ್ಙ್ಗಧರ'ನು ಹೇಳುತ್ತಾನೆ. ಮೃದಂಗ ಹೋಲಿಕೆ ಇರುವುದು, ಅಡ್ಡಾವುಜ, ಹೆಗಲಿನಿಂದ ಇಳಿಬಿದ್ದು ಕೈಗಳಲ್ಲಿ ಅಥವಾ ಕುಡುಪಗಳ ಮೂಲಕ ನುಡಿಸುವುದು, ಸ್ಕಂಧಾವುಜ, ಬೆರಳುಗಳಿಂದ ನುಡಿಸುವುದು, 'ಪಟ್ಟಾವುಜ' (ಪಖಾವುಜ) ಎಂದು ಶಾಸತ್ರಕಾರರು ಭಾವಿಸಿದಂತೆ ತೋರತ್ತದೆ. 'ಸಂಗೀತ ರತ್ನಾಕರ'ವು ೧೩ನೇ ಶತಮಾನದ್ದಾಗಿದ್ದು ದಾವಣಗೆರೆ ೩೫ರ ಶಾಸನವು (ಕ್ರಿ.ಶ. ಸು. ೧೧೬೦) ಇದಕ್ಕಿಂತ ಪ್ರಾಚೀನ ಎನ್ನುವುದು ಓದುಗರು ಗಮನಿಸಬೇಕಾದ ಅಂಶವಾಗಿದೆ.

ಮೇಲೆ ವಿವರಿಸಿದಂತೆ ಆವುಜಕಾರನು ಕೇವಲ ವಾದ್ಯ ನುಡಿಸುವುದಷ್ಟೇ ಅಲ್ಲ, ಗಾಯನ, ನರ್ತನಗಳನ್ನು ಜೊತೆಗೇ ಮಾಡುತ್ತಾ, ವಿವಿಧ ರೀತಿಯ ಸಂಗೀತದಲ್ಲಿಯ ತ್ರಿಮಾರ್ಗ (ವಸ್ತುಗೀತ, ರೂಪಗೀತ ಮತ್ತು ಪ್ರಬಂಧಗೀತ) ಕ್ರಿಯೆಯನ್ನು ತಾನೇ ಮಾಡುತ್ತಾ ನಡೆದನೆಂದು ರವಿ ಆವುಜಕಾರನ ವಿಶೇಷತೆಯನ್ನು ವಿವರವಾಗಿ ಹೇಳಿದ್ದಾನೆ. ಈ ರೀತಿಯ ವರ್ಣನೆಗಳನ್ನು ಹಾವಭಾವದೊಂದಿಗೆ ಶಿಲ್ಪಿಯು ಕಂಡರಿಸಿರುವುದನ್ನು ಮುಂದಿನ ಅನೇಕ ಭಿತ್ತಿ ಶಿಲ್ಪಗಳಲ್ಲಿಯೂ ನೋಡಬಹುದಾಗಿದೆ.

ಮದ್ದಳೆಯ ಎರಡನೆ ಭಂಗಿ. ಪಾದ ತ್ರಿಭಂಗಿ ರೂಪದಲ್ಲಿದೆ. ಅಂದರೆ ಬಲದ ಪಾದ ಭೂಮಿಗೆ ಒತ್ತಿ ಎಡಪಾದವನ್ನು ಎಡಕ್ಕೆ ತಿರುಗಿಸಿದ್ದಾನೆ. ಬಲಗೈ ಆಲ ಪದ್ಮರೀತಿಯಲ್ಲಿ ಮೇಲೆತ್ತಿ ಎಡಗೈಯನ್ನು ಮೃದಂಗದ ಮೇಲೆ ಟಪ್ಪ ರೀತಿಯಲ್ಲಿ ಹಿಡಿದಿರುವದು ಹಾಗೂ ನೋಟವು ನೃತ್ಯ ಈಗಾಗಲೇ ಪ್ರಾರಂಭವಾಗಿರುವುದನ್ನು ಸೂಚಿಸುತ್ತದೆ.

ವಸ್ತ್ರವಿನ್ಯಾಸ ಚಲ್ಲಣವಾಗಿದ್ದು, ಕಾಲಿನಲ್ಲಿ ಕಡಗ ಎದೆಯಲ್ಲಿ ಸರ ಧರಿಸಿದ್ದಾರೆ.

ನಾಟ್ಯಭಂಗಿ, ಬಲಮಂಡಿಯನ್ನು ನೆಲಕ್ಕೆ ಕುಟ್ಟುತ್ತಾ ಎಡಪಾದವನ್ನು ಮೊಳಕಾಲಿಗೆ ಸೇರಿಸಿದೆ. ಎಡಗೈಯು ಅಲಪದ್ಮ ರೀತಿಯಲ್ಲಿದ್ದರೆ, ಬಲಗೈ ಡೊಲಲ ಹಸ್ತದಂತೆ ತೋರಿಸಲಾಗಿದೆ. ಬಲಕಾಲಿನ ಮೇಲೆ ದೇಹಭಾರ ಬಿಟ್ಟಿದ್ದು, ಎಡಗಾಲು ಸ್ವಸ್ತಿಕ ಬಂಧದಿಂದ ಕೂಡಿದೆ.

ಚಿತ್ರ ೩ರ 'ನೈಜ' ನಾಟ್ಯ ಭಂಗಿ.

ತಾಳಸಹಿತವಿರುವ ನಟ್ಟುವಾಂಗದ ನೃತ್ಯ ಭಂಗಿ. ತಾಳಕ್ಕೆ ಕಟ್ಟಿರುವ ಗುಚ್ಛಗಳನ್ನು ಗಮನಿಸಿ. ಇದೊಂದು ಸಮಭಂಗಿ ದೃಶ್ಯ. ನೃತ್ಯ ಮಾಡುವಾಗ ನರ್ತಕಿಯ ಹೆಜ್ಜೆಗಳನ್ನು ನಿರ್ದೇಶಿಸಲು ತಾಳ ಬಳಸಿರುವುದು ಇಲ್ಲಿಯ ವಿಶೇಷ.

ತಾಳ : ಸಿಂಗಿರಾಜಕವಿಯು ತಾಳಧಾರಿಗಳ ಸಂದರ್ಭದಲ್ಲಿ ಸ್ತ್ರೀತಾಳದಾರರನ್ನು ಹೇಳಿದ್ದಾನೆ. ಸಾಮಾನ್ಯವಾಗಿ ಶಾಸ್ತ್ರ ಹಾಗೂ ಕಾವ್ಯಗಳಲ್ಲಿ ಪುರುಷಧಾರಿಗಳ ಪ್ರಸ್ತಾಪವಿರುತ್ತದೆ.

**ಚತುರಶ್ರಮಿಶ್ರಖಂಡಂತ್ಯಶ್ರನಾಲ್ಕರೊಳು**
**ದ್ರುತ ಲಘು ಗುರು ಪ್ಲುತ ಚತುಷ್ಟಯಾದಿಕ್ರಮೋ**
**ನ್ನತ ಕಾಲಮಾರ್ಗಕ್ರಿಯಾಂಗ ಕಳೆ ಮೊದಲಾದ ದಶವಿಧ ಪ್ರಾಣಂಗಳ**
**ಮತದೊಳು ಪ್ರಸ್ತಾರಜಾತಿಯುಪಜಾತಿಗಳ**
**ನತಿವಿವೇಕದೊಳರಿದು ನೂಱೊಂದು ತಾಳಮಂ**
**ಶತಸಹಸ್ರ ಮುಖದಿಂದಲೊತ್ತುತಿಹ ತಾಳಧರಾಂಗನೆ ಯರೊಪ್ಪಿದರು**

**(ಅಮಲ ಬಸವರಾಜ ಚಾರಿತ್ರ ಅಥವಾ ಸಿಂಗಿರಾಜ ಪುರಾಣ ಸಂಧಿ-೩೮, ಪದ್ಯ-೮)**

ತಾಳ ಧರಾಂಗನೆಯರು ನೂರೊಂದು ತಾಳಗಳನ್ನು ಚತುರಸ್ರ (೪ ಮಾತ್ರೆ ಕಾಲ), ಮಿಶ್ರ (೭ ಮಾತ್ರೆ), ಖಂಡ (೫ ಮಾತ್ರೆ), ತ್ರಿಶ್ಯ (೩ ಮಾತ್ರೆ) ಜಾತಿಯ ತಾಳಗಳನ್ನು ಜಾಣ್ಮೆಯಿಂದ ನುಡಿಸುವ ಬಗ್ಗೆ ಈ ಪದ್ಯದಲ್ಲಿ ಕವಿ ನಿರೂಪಿಸಿದ್ದಾನೆ. ತಾಳಧಾರಿಯು ರಂಗದ ಮೇಲೆ ನಡೆಯುವ ನೃತ್ಯಕ್ಕೆ ಹಿಮ್ಮೇಳವಾಗಿ ಒದಗುತ್ತಿರುವ ಗಾಯನ ಹಾಗೂ ಪಕ್ಕವಾದ್ಯಗಳಿಗೆ ಅನುಗತವಾಗಿ ತಾಳ ನುಡಿಸಬೇಕಾಗುತ್ತದೆ. ಹೀಗಾಗಿ 'ನಟ್ಟುವಾಂಗ'ವು ನೃತ್ಯದಲ್ಲಿ ಒಂದು ಅತ್ಯಂತ ಪ್ರಮುಖ ಭಾಗವಾಗಿರುತ್ತದೆ.

ಹುಡುಕ್ಕಾ ಚರ್ಮವಾದ್ಯ, ಬೇಲೂರಿನ ಚೆನ್ನಕೇಶವ ದೇವಸ್ಥಾನದಲ್ಲಿ ಈ ವಾದ್ಯವನ್ನು ಮೂಲಸ್ವರೂಪದಲ್ಲಿ ನೋಡಬಹುದಾಗಿದೆ. ಹೊಯ್ಸಳ ಶೈಲಿಯ ನೃತ್ಯ ಶಿಲ್ಪಗಳಲ್ಲಿ ಇದನ್ನು ಸಾಮಾನ್ಯವಾಗಿ ಬಿಡಿಸಿರುವುದು ಕಂಡುಬರುತ್ತದೆ. ಚರ್ಮದಿಂದ ಮಾಡಿರುವ ತಾಳವಾದ್ಯವಿದು. ಎರಡು ಮುಖದ, ಒಂದು ಹಸ್ತ ಉದ್ದದ, ಇಪ್ಪತ್ತೆಂಟು ಅಂಗುಲ ವ್ಯಾಸದ ಈ ವಾದ್ಯಕ್ಕೆ ಆರು ರಂಧ್ರಗಳಿದ್ದು ಅವುಗಳನ್ನು ಹಗ್ಗಗಳಿಂದ ಬಿಗಿದಿರುತ್ತಾರೆ. ಹೆಗಲಿನಿಂದ ಇಳಿಬಿಟ್ಟುಕೊಂಡು ಬಲಗೈಯಿಂದ ಈ ವಾದ್ಯ ನುಡಿಸುವರು. ಎಲ್ಲಾ ವರ್ಗದ ಅಕ್ಷರಗಳೂ ಕೇಳುವಂತೆ ಈ ವಾದ್ಯದಲ್ಲಿ ನುಡಿಸಲು ಬರುತ್ತದೆ. ಈ ವಾದ್ಯವನ್ನು "ಆವುಜ" ಎಂದೂ ಕರೆಯುತ್ತಾರೆ.

ಒಂದೇ ಕೈಯಲ್ಲಿ ನುಡಿಸಬಹುದಾದ ಚಿಟಿಕೆ ವಾದ್ಯ, ಇದರ ವಿವರಗಳು ಸದ್ಯಕ್ಕೆ ತಿಳಿದುಬರುವುದಿಲ್ಲ. ವಿಶೇಷವಾದ ಕೇಶಾಲಂಕಾರ, ಕಂಕಣ, ಮೊಣಕೈ ಕಟ್ಟಿನ ಆಭರಣ, ಭುಜಾಭರಣ, ಕಿವಿಯ ವೃತ್ತಕಾರದ ಆಭರಣಗಳನ್ನು ಮಾದರಿಯಾಗಿ ಇಟ್ಟುಕೊಂಡು ಇಂದಿಗೆ ತಕ್ಕಂತೆ ಬಳಸಿ ಅಲಂಕರಿಸಿಕೊಳ್ಳಬಹುದು. ವಸ್ತ್ರ ವಿನ್ಯಾಸ ನೋಡುವುದಕ್ಕೆ ಸರಳವಾಗಿ ಕಂಡರೂ ನೃತ್ಯ ಪ್ರಭೇದಗಳನ್ನು ಮಾಡುವಾಗ ಕಲಾವಿದರಿಗೆ ಸೂಕ್ತವಾಗಿಯೂ, ವಿಶೇಷ ಮೆರುಗನ್ನು ತಂದುಕೊಡುತ್ತದೆ.

ತಂತಿವಾದ್ಯ ವಾದಕ, ಬಲಗೈಯಲ್ಲಿ ಹಿಡಿದಿರುವುದು ಒಂದು ತಂತಿ ವಾದ್ಯವೆಂದು ಊಹಿಸಬಹುದಾಗಿದೆ. ಆದರೆ ಇದರ ಮೇಲಿನ ಭಾಗವು ಒಡೆದುಹೋಗಿದ್ದು ಕೆಳ ಕೆಳಗಡೆ ಭಾಗದಲ್ಲಿ ತಂತಿಯ ಗುರುತುಗಳಿವೆ. ಎಡಗೈಯನ್ನು ಕಿವಿಯ ಹತ್ತಿರ ಹಿಡಿದುಕೊಂಡಿದ್ದು ಪ್ರಾಯಶಃ ವಾಯ ಒಂದನ್ನು ಶ್ರುತಿ ಮಾಡುತ್ತಿರುವಂತೆ ಕೆತ್ತಲಾಗಿದೆ. ಮುಖವು ಒಡೆದುಹೋಗಿದ್ದರೂ ನೋಟದ ತನ್ಮಯತೆ ಗಮನಾರ್ಹವೆನಿಸುತ್ತದೆ. ಬೈತಲೆತಿದ್ದಿ, ಕೂದಲು ಕಟ್ಟಿರುವ ರೀತಿ ಇತರ ಶಿಲ್ಪಗಳಿಗಿಂತ ಭಿನ್ನವಾಗಿದೆ. ಲಾಸ್ಯ ಭಂಗಿಯಲ್ಲಿ ನಿಂತಿರುವ ಶಿಲ್ಪದ ಕೆಳಗಡೆಯ ಪೀಠ ಭಾಗದಲ್ಲಿ ಅಕ್ಷರಗಳಿದ್ದು ಸ್ಪಷ್ಟವಾಗಿ ಕಾಣಬಹುದಿರುವುದರಿಂದ ಓದಲು ಆಗಿಲ್ಲ.

**ಮಜ್ಜನ ಭಂಗಿ :** ಆ ಕಾಲದಲ್ಲಿ ಸ್ನಾನ ಮಾಡಿಸುವ ಶಿಲ್ಪವಾಗಿದೆ. ಬಾಲಕ (ಕಿ) ಮಂಡಿಯೂರಿ ಬೆತ್ತಲೆಯಾಗಿ ಕೈಗಳನ್ನು ಗೆದ್ದದ ಕೆಳಗೆ, ತೊಡೆಯ ಮೇಲೆ ಇಟ್ಟುಕೊಂಡಿರುವುದು ಸ್ಪಷ್ಟವಾಗಿದೆ. ಬಹುಶಃ ತಾಯಿ (ಮಹಿಳೆ) ಯೊಬ್ಬಳು ತನ್ನ ಎರಡೂ ಕೈಗಳಿಂದ ಬಾಲಿಕನ ತಲೆ ಕೂದಲನ್ನು ಉಜ್ಜುತ್ತಿರುವ ನಿಲುವಿನಲ್ಲಿ ಈ ಶಿಲ್ಪವನ್ನು ತೋರಿಸಲಾಗಿದೆ. ಮಹಿಳೆಯು ನಿಂತಿರುವ ರೀತಿಯನ್ನು ನೋಡಿದರೆ, ಹುಡುಗನ ತಲೆಯ ಮೇಲೆಯೇ ಹೆಚ್ಚು ಭಾರ ಬಿಟ್ಟಂತೆ ಭಾಸವಾಗುತ್ತದೆ. ಬಾಲಕನನ್ನು ಬೇರೆಯೇ, ಒಂದು ಸಣ್ಣ ಕಲ್ಲಿನ ಮೇಲೆ ಕೂಡಿಸಿರುವುದು ಸ್ಪಷ್ಟವಾಗಿದ್ದರೂ, ಮಹಿಳೆ ಮತ್ತು ಬಾಲಕ ಇಬ್ಬರ ನೋಟವೂ ಈಗಿನ ಫೋಟೋ ತೆಗೆಯುವ ಭಂಗಿಯನ್ನು ತೋರಿಸುವಂತೆ ಶಿಲ್ಪಿಯು ಚಿತ್ರಿಸಿರುವುದು ಅವನ ಜಾಣ್ಮೆಗೆ ಸಾಕ್ಷಿಯಾಗಿದೆ. ೮೦೦ ನೂರು

ರ್ಷಗಳಿಗಿಂತಲೂ ಹಳೆಯದಾಗಿದ್ದು, ವಿಕೃತಗೊಂಡಿದ್ದರೂ ಹಾ ಈ ಶಿಲ್ಪ ಅಂದಿನ ಸಮಾಜ ಚಿತ್ರಣವನ್ನು ಕಟ್ಟಿ ೊಡುತ್ತದೆ.

**ಸಾರಾಂಶ :** ಶ್ರೀ ಹರಿಹರೇಶ್ವರ ದೇವಸ್ಥಾನದ ೊರಭಾಗದಲ್ಲಿ ಒಂದು ಅಡಿ ಉದ್ದ, ಒಂದು ಅಡಿ ಅಗಲ ಳದಲ್ಲಿ, ಪ್ರತಿ ಶಿಲ್ಪಕ್ಕೂ ಬೇರೆ ಬೇರೆ ಮಂಟಪ ಹಾಗೂ ೇದಿಕೆಗಳನ್ನು ನಿರ್ಮಿಸಿರುವುದು ನೋಡುಗರನ್ನು ತನ್ನೆಡೆಗೆ ೊಜಿಗಲ್ಲಿನ ರೀತಿಯಲ್ಲಿ ಆಕರ್ಷಿಸುವ ಈ ಶಿಲ್ಪಗಳು, ವರ್ಣನೀಯ ಆನಂದವನ್ನುಂಟು ಮಾಡುತ್ತವೆ. ಅಷ್ಟೇ ಲ್ಲದೆ ಇಲ್ಲಿರುವ ೪೧ ಶಾಸನಗಳನ್ನು ಕೂಲಂಕಷವಾಗಿ ಧ್ಯಯನ ಮಾಡುತ್ತಲೇ ಈ ಶಿಲ್ಪಗಳನ್ನು ಅಭ್ಯಾಸ ಮಾಡಿದರೆ ನೇಕ ವೈವಿಧ್ಯಮಯ, ಆಶ್ಚರ್ಯ ಸಂಗತಿಗಳನ್ನು ಬೆಳಕಿಗೆ ರಬಹುದಾಗಿದೆ. ದೇವಸ್ಥಾನದ ಎಡ ಮತ್ತು ಬಲಪಾರ್ಶ್ವದಲ್ಲಿ ಂತಹ ೫೦೦ ಭಿತ್ತಿಚಿತ್ರಗಳನ್ನು ಈ ಲೇಖಕನು ಗುರುತಿಸಿದ್ದು ವುಗಳಲ್ಲಿ ಕೇವಲ ೯ನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗಿದೆ. ದೃಷ್ಟವೆಂದರೆ ಇನ್ನೂ ೩೦೦ ಶಿಲ್ಪಗಳು ಸುಸ್ಥಿತಿಯಲ್ಲಿವೆ. ವುಗಳನ್ನು ಅಂದಗೆಡಿಸದಂತೆ ಸಂರಕ್ಷಿಸಿ ಮುಂದಿನ ಪೀಳಿಗೆಗೆ, ಮ್ಮ ಸಂಸ್ಕೃತಿಯನ್ನು ಸಂವಹಿಸಬೇಕಾದ ಜವಾಬ್ದಾರಿ ಕೆಲವು ೇಂದ್ರ/ರಾಜ್ಯ ಪುರಾತತ್ತ್ವ ಇಲಾಗಳಿಗೆ ಸೀಮಿತವಾಗದೇ ಬ ಹರಿಹರದ ನಾಗರಿಕರ ಮೇಲೂ ಇದೆ.

ಕ್ರಿ.ಶ. ೧೯೨೩ರಷ್ಟು ಹಿಂದೆಯೇ ಮೈಸೂರು ಆರ್ಕಿಯ ಾಜಿಕಲ್ ರಿಪೋರ್ಟ್‌ನಲ್ಲಿ ಶ್ರೀಯುತ ಆರ್. ನರಸಿಂಹಾ ಾರ್ಯರು ದೇವಾಲಯದ ಆವರಣದಲ್ಲಿರುವ ಮನೆಗಳನ್ನು, ತರ ಕಟ್ಟಡಗಳನ್ನು ತೆಗೆದುಹಾಕಬೇಕೆಂದೂ, ಆ ಮೂಲಕ ದೇವಾಲಯದ ಒಟ್ಟಂದವನ್ನು ಮರು ಸೃಷ್ಟಿಸಬೇಕೆಂಬುದನ್ನು ಒತ್ತಿ ಹೇಳಿದ್ದಾರೆ.

ಬ್ರಿಟಿಷ್ ಸರ್ಕಾರವು ಕರ್ನಾಟಕದ ದೇವಾಲಯಗಳ ಛಾಯಾಚಿತ್ರಗಳನ್ನ ತೆಗೆದು ಲಂಡನ್ನಿಗೆ ಕಳಿಸಬೇಕೆಂಬ ಉದ್ದೇಶಿಂದ ನೇಮಿಸಿಸಲಾಗಿದ್ದ ಮೊದಲ ಛಾಯಾಚಿತ್ರಕಾರ (ಆಗಷ್ಟೇ ಭಾರತದಲ್ಲಿ ಕಪ್ಪು ಬಿಳುಪಿನ ಛಾಯಾಚಿತ್ರ ಗ್ರಹಣ ಪ್ರಾರಂಭವಾಗಿದ್ದಿತು) ಕರ್ನಲ್ ಡಿಕ್ಸನ್ ತನ್ನ ಕೆಲಸವನ್ನು ಹರಿಹರೇಶ್ವರ ದೇವಾಲಯದಿಂದಲೇ ಪ್ರಾರಂಭಿಸಬೇಕೆಂದು ಒತ್ತಾಯಪಡಿಸಿದ್ದುದು ಈ ದೇವಾಲಯದ ಮಹತ್ವವನ್ನು ತನ್ನ ಹೇಳುತ್ತದೆ.

ಮೇಲ್ಕಂಡ ಮಾಹಿತಿಗಳಿಗೆ ಪೂರಕವಗಿ ೨೦೧೧ನೇ ಇಸ್ವಿಯಲ್ಲಿ ದೇವಸ್ಥಾಕ್ಕೆ ಹೋಗುವ ಹೆದ್ದಾರಿಯನ್ನು ಅಗಲೀಕರಿಸಲಾಗಿದ್ದು, ಸರ್ಕಾರ ಮತ್ತು ಸಾರ್ವಜನಿಕ ಸಹಕಾರದಿಂದ ಇನ್ನಷ್ಟು ಇಂತಹ ಇತಿಹಾಸ ಪರಂಪರೆಯನ್ನು ಉಳಿಸುವ ಕಾರ್ಯಗಳು ಶೀಘ್ರವಾಗಿ ನಡೆಯುವ ಮುನ್ಸೂಚನೆಯಿದೆ.

[ಕೃತಜ್ಞತೆಗಳು : ವಿದುಷಿ ಪದ್ಮಶೇಷಗಿರಿರಾವ್, ಹರಿಹರ. ನೃತ್ಯ ವಿಶ್ಲೇಷಣೆಗೆ ಸಹಕಾರ ನೀಡಿದ ವಿದೂಷಿ ಹರಿಹರದ ಶ್ರೀಮತಿ ಮಮತಾ ನಾಡಿಗೇರ್, ರಾಣಿಬೆನ್ನೂರು. ಇಲ್ಲಿಯ ಲಿಪಿ, ಹರಿಹರದ ಇತಿಹಾಸವನ್ನು ಸಂಶೋಧನೆಗೆಂದು ಬರುವವರಿಗೆ ಭಕ್ತರಿಗೆ ಆಸಕ್ತಿವಹಿಸಿ ತಿಳಿಸುತ್ತಿರುವ ಅರ್ಚಕ ಶ್ರೀ ಗುರುನಾಥ. ಛಾಯಾಚಿತ್ರಗಳನ್ನು ಅಂದವಾಗಿಸುವಲ್ಲಿ ನೆರವು ನೀಡಿ ಸಹಕರಿಸಿದ ಶ್ರೀಮತಿ ಎಸ್. ಮಾಲತಿ, ಬೆಂಗಳೂರು.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


. **ಎಪಿಗ್ರಾಫಿಯ ಕರ್ನಾಟಿಕಾ,** ಸಂ. XI, (ರೈಸ್ ಆವೃತ್ತಿ).

. ಅಡ್ಡಾವುಜ = ಮೃದಂಗದ ಪರ್ಯಾಯಪದ, **ಸಂಗೀತ ರತ್ನಾಕರ,** ೬–೮೨೪, ಉದ್ಧೃತಿ: ಪದಗತಿ ಪಾದಗತಿ, ಡಾ. ತುಳಸಿರಾಮಚಂದ್ರ, ಹಂಪಿ ಕನ್ನಡ ವಿಶ್ವವಿದ್ಯಾಲಯ, ೨೦೦೧. ಪುಟ ೩೩೬.

. **ಪದಗತಿ ಪಾದಗತಿ,** ಪುಟ ೨೨–೩೮.

. **ಪದಗತಿ ಪಾದಗತಿ,** ಪುಟ ೪೬.

. ಮದ್ದಳೆಯ ಉದ್ದ ಹೆಚ್ಚಾಗಿರುವುದರಿಂದ ಇದನ್ನು ಪಟ್ಟಾವುಜ (ಪಖಾವುಜ) ಎನ್ನುವ ಚರ್ಮ ವಾದ್ಯಗಳ ಗುಂಪಿಗೆ ಸೇರಿಸಬಹುದು. ಮೊದಲನೆ ನೋಟಕ್ಕೆ ಚಿತ್ರ ೧ ಹಾಗೂ ೨ರಲ್ಲಿಯ ಮದ್ದಳೆ, ಮೃದಂಗದಂತೆ ಭಾಸವಾದರೂ, ಸೂಕ್ಷ್ಮವಾಗಿ ಗಮನಿಸಿದಾಗ ಎರಡೂ ಬೇರೆ ಬೇರೆ ವಿಧಗಳಾಗಿದ್ದು ಚಿತ್ರ ೨ರಲ್ಲಿ ಇರುವುದು ಸ್ವಲ್ಪ ಉದ್ದವಾಗಿಯೂ ಚರ್ಮ ದಾರಗಳಲ್ಲಿ ಭಿನ್ನತೆಯೂ ಇರುವುದಲ್ಲದೆ ಇದನ್ನು ಸೊಂಟಕ್ಕೆ ಕಟ್ಟಿಕೊಂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

. ಡಾ. ಆರ್. ರಂಗಸ್ವಾಮಿ, ೨೦೦೮, **ಕೃಷ್ಣರಾಜಪೇಟೆ ಪ್ರದೇಶದ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ,** (ಅಪ್ರಕಟಿತ ಪಿಎಚ್.ಡಿ, ಮಹಾಪ್ರಬಂಧ), ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.




# ಮೂಡಬಿದ್ರಿಯ ಜೈನ ಬಸದಿಯಲ್ಲಿನ ಆಕರ್ಷಕ ಶಿಲ್ಪಗಳು

ಜಯಲಕ್ಷ್ಮಿ. ಜಿ.*

ದಕ್ಷಿಣಕನ್ನಡ ಜಿಲ್ಲೆಯ ಮೂಡಬಿದ್ರೆ ದಕ್ಷಿಣಭಾರತದ ಜೈನ ಕಾಶಿ ಎಂದೇ ಹೆಸರಾಗಿರುವ ಈ ಸ್ಥಾನವು ಹೊಯ್ಸಳ ಪೂರ್ವ ಕಾಲದಿಂದಲೂ ಜೈನ ಧಾರ್ಮಿಕ ಕೇಂದ್ರವಾಗಿ ಚಟುವಟಿಕೆಗಳ ಕೇಂದ್ರವಾಗಿತ್ತು. ಇಲ್ಲಿನ ಆಕರ್ಷಕ ಜೈನ ಬಸದಿಗಳು ಬಹುಕಾಲದಿಂದಲೂ ವಾಸ್ತುಕಲೆಗೆ ಹೆಸರು ವಾಸಿಯಾಗಿವೆ. ಜೈನ ಧಾರ್ಮಿಕ ಕೃತಿಗಳಾದ ಜಯ ಧವಳ, ಮಹಾಧವಳ ಕೃತಿಗಳು ಹೊಯ್ಸಳರ ಕಾಲದಲ್ಲಿ ರಚನೆ ಗೊಂಡಿದ್ದು ಇಲ್ಲಿನ ಜೈನಮಠದಲ್ಲಿಯೇ ಸಂರಕ್ಷಿಸಲ್ಪಡುತ್ತಿವೆ.

ತ್ರಿಭುವನ ತಿಲಕ ಚೂಡಾಮಣಿ ಬಸದಿಯನ್ನು ಕ್ರಿ.ಶ. ೧೪೩೦ರಲ್ಲಿ ನಿರ್ಮಿಸಲಾಯಿತೆಂದು ದಾಖಲೆಗಳು ನಿರೂಪಿಸುತ್ತವೆ. ಈ ಬಸದಿಯನ್ನು ಸ್ಥಳೀಯ ವ್ಯಾಪಾರಿಗಳು, ಜೈನ ಗುರುಗಳು ಮತ್ತು ರಾಜ ಮನೆತನದವರ ಸಹಾಯದಿಂದ ನಿರ್ಮಿಸಲಾಯಿತು. ಅಂದರೆ, ವಿಜಯನಗರ ಸಾಮ್ರಾಜ್ಯದ ಆಡಳಿತಾವಧಿಯಲ್ಲಿ ಪ್ರಸ್ತುತ ಬಸದಿಯನ್ನು ನಿರ್ಮಿಸಲಾಯಿತು. ಬಸದಿಯು ಸಾಕಷ್ಟು ವಿಶಾಲವಾದ ವಿಸ್ತೀರ್ಣವನ್ನು ಹೊಂದಿದೆ. ಬಸದಿಯನ್ನು ಕೆಲವು ಹಂತದಲ್ಲಿ ಅಭಿವೃದ್ಧಿ ಪಡಿಸಲಾಯಿತು. ಚೆನ್ನಾದೇವಿ ಮತ್ತು ಭೈರಾದೇವಿಯರು ಕ್ರಮವಾಗಿ ಮುಂಭಾಗದ ಎರಡು ವಿಶಾಲವಾದ ಮಂಟಪ ಗಳನ್ನು ನಿರ್ಮಿಸಲು ಕಾರಣರಾದರು. ಗರ್ಭಗೃಹದಲ್ಲಿ ಸುಮಾರು ೨.೫ ಮೀಟರ ಎತ್ತರದ ಚಂದ್ರನಾಥ ತೀರ್ಥಂಕರನ ಕಂಚಿನ ಪ್ರತಿಮೆಯನ್ನು ಸ್ಥಾಪಿಸಲಾಗಿದೆ. ಬಸದಿಯ ನವರಂಗ, ಸಭಾಮಂಟಪ ಮತ್ತು ಇತರೆ ಆಲಯಗಳಲ್ಲಿರುವ ಕಂಬಗಳು ಶಿಲ್ಪಕಲೆಯ ದೃಷ್ಟಿಯಿಂದ ಗಮನ ಸೆಳೆಯುತ್ತವೆ. ಅಲ್ಲದೆ ಬಸದಿಯ ಅಧಿಷ್ಠಾನದಲ್ಲಿ ಹಲವು ಸುಂದರವಾದ ಉಬ್ಬುಶಿಲ್ಪಗಳು ಇರುತ್ತವೆ. ಇವುಗಳಲ್ಲಿ ಬೇಟೆ ದೃಶ್ಯಗಳು, ಮಲ್ಲಯುದ್ಧದ ದೃಶ್ಯಗಳು, ವಿವಿಧ ಮಿಥಿಕ ಪ್ರಾಣಿಗಳು-ವಿಶೇಷವಾಗಿ ಜಿರಾಫೆಯಂತಹ ಪ್ರಾಣಿಗಳೂ ಕೂಡಾ ಇಲ್ಲಿ ಕಂಡು ಬರುತ್ತವೆ. ದೇವಾಲಯದ ಇಳಿಜಾರು ಮಾಳಿಗೆಯಲ್ಲಿ ಕೆಲವು ಕಾಷ್ಟಶಿಲ್ಪಗಳು ಕಂಡುಬರುತ್ತವೆ. ಇವುಗಳನ್ನು ಮದನಿಕಾ ಶಿಲ್ಪಗಳೆಂಬುದನ್ನು ಗುರುತಿಸಬಹುದು.

ಜೈನ ಶಿಲ್ಪಗಳೊಂದಿಗೆ ಇಲ್ಲಿ ಜೈನೇತರ ಶಿಲ್ಪಗಳು ರಚನೆಗೊಂಡಿರುವುದು ಗಮನಾರ್ಹವಾಗಿದೆ. ಇಲ್ಲಿನ ಶಿಲ್ಪಗಳಲ್ಲಿ ಕೃಷ್ಣ, ಸರಸ್ವತಿ, ಹನುಮಂತ, ಗರುಡ, ರಾಮ ಮತ್ತು ವಾನರ ಶಿಲ್ಪಗಳು ಗಮನಸೆಳೆಯುತ್ತವೆ.

ಶಿಲ್ಪಗಳನ್ನು ನೋಡಿದಾಗ ಮತ್ತು ಅವುಗಳನ್ನು ರಚಿಸಿರುವ ಸ್ಥಳಾವಕಾಶವನ್ನು ಗಮನಿಸಿದಾಗ, ಶಿಲ್ಪ ಕೆತ್ತನೆಗಳು ಸಭಾ ಮಂಟಪಗಳ ಕಂಬಗಳ ಮೇಲೆಯೇ ಕೇಂದ್ರಿಕೃತವಾಗಿರುವುದು ಕಂಡುಬರುತ್ತವೆ. ಬಸದಿಯಲ್ಲಿ ಹಲವು ವಿಶೇಷ ಸ್ಥಳಗಳಿದ್ದು, ಗರ್ಭ ಗೃಹದ ಮುಂಭಾಗದಿಂದ, ಅಂದರೆ ಸುಕನಾಸಿಯ ನಂತರದಲ್ಲಿ ಲಕ್ಷ್ಮೀ ಮಂಟಪ, ತೀರ್ಥಂಕರ ಮಂಟಪ, ನಮಸ್ಕಾರ ಮಂಟಪಗಳಿವೆ. ಇವುಗಳ ನಂತರದಲ್ಲಿ ಕಾಲಾನಂತರದಲ್ಲಿ ಜೋಡಣೆಯಾದ ಚಿತ್ರಾದೇವಿ ಮಂಟಪ, ಭೈರಾದೇವಿ ಮಂಟಪಗಳಿವೆ.

ಚಿತ್ರಾದೇವಿ ಮತ್ತು ಭೈರಾದೇವಿ ಮಂಟಪಗಳಲ್ಲಿನ ಕಂಬಗಳ ಮೇಲೆ ಹಲವಾರು ಜೈನೇತರ ಶಿಲ್ಪಗಳು ರಚನೆಯಾಗಿವೆ. ಇಲ್ಲಿ ಮುಖ್ಯವಾಗಿ ಹನುಮಂತ, ಗರುಡರ ಶಿಲ್ಪಗಳು ಇರುತ್ತವೆ. ಕೃಷ್ಣ ಬಾಲಲೀಲೆಯ ಘಟನಾವಳಿಗಳಾದ ಕಾಳಿಂಗಮರ್ದನ ಕೃಷ್ಣ, ಯಮಳಾರ್ಜುನ ವಿಜಯದ ಶಿಲ್ಪಗಳು ಇಲ್ಲಿ ಕಂಡುಬರುತ್ತವೆ. ಇವುಗಳಲ್ಲದೆ ರಾಮಾಯಣದ ದೃಶ್ಯವಾದ ಸುಗ್ರೀವ - ಹನುಮಂತರು ರಾಮ ಲಕ್ಷ್ಮಣರನ್ನು ಭೇಟಿಮಾಡುವ ಸನ್ನಿವೇಶವನ್ನು ಕಂಬದ ಮೇಲೆ ರಚಿಸಲಾಗಿದೆ. ಇವುಗಳಲ್ಲದೆ, ದರ್ಪಣ ಸುಂದರಿ, ಬೇಟೆಗಾರ್ತಿ, ಚೌರಿ ಹಿಡಿದು ನಿಂತಿರುವ ದೇವಾಂಗನೆಯ ಶಿಲ್ಪ, ಮೊದಲಾದವುಗಳು ಕಂಡುಬರುತ್ತವೆ.

ಜೈನೇತರ ಶಿಲ್ಪಗಳಲ್ಲಿ ಹೆಚ್ಚಿನವು ವೈಷ್ಣವ ಪಂಥದ ಶಿಲ್ಪಗಳಾಗಿವೆ. ಇಂತಹ ಉದಾಹರಣೆಗಳು ವಿಜಯನಗರ ಕಾಲದ ಹಂಪಿ ಮತ್ತು ಇನ್ನಿತರ ಸ್ಥಳಗಳಲ್ಲಿಯ ವಿಜಯನಗರ ಕಾಲದ ದೇವಾಲಯಗಳಲ್ಲಿ ಗಣನೀಯವಾಗಿ ಕಂಡುಬರುತ್ತವೆ. ಆದರೆ, ಇಲ್ಲಿ ಪ್ರಶ್ನೆ ಉದ್ಭವಿಸುವುದು ಈ ಶಿಲ್ಪಗಳು, ಜೈನ ದೇವಾಲಯದಲ್ಲಿ ರಚನೆಗೊಂಡ ಹಿನ್ನೆಲೆ ಮತ್ತು ಪ್ರಸ್ತುತತೆಯನ್ನು ಕುರಿತದ್ದಾಗಿದೆ. ಕರಾವಳಿ ಪ್ರದೇಶದ ವಾಸ್ತು ಶಿಲ್ಪದಲ್ಲಿ, ತ್ರಿಭುವನ ತಿಲಕ ಚೂಡಾಮಣಿ ಬಸದಿ ಒಂದು ಚೂಡಾಮಣಿ ಎಂಬುದರಲ್ಲಿ ಯಾವುದೇ ಉತ್ಪ್ರೇಕ್ಷೆ ಇಲ್ಲ. ಈ ಬಸದಿಯ

* ಉಪನ್ಯಾಸಕಿ, ವಿಜಯ ಕಾಲೇಜು, ಮುಲ್ಕಿ, ದಕ್ಷಿಣ ಕನ್ನಡ-೫೭೪೧೫೪.

ವ್ಯತೆ, ವಿಶಾಲವಾದ ವಿಸ್ತೀರ್ಣ ಮತ್ತು ಇಲ್ಲಿನ ಅಲಂಕಾರಿಕ ಬಗಳು ಸ್ಪಷ್ಟವಾಗಿ ವಾಸ್ತು ವಿಶೇಷತೆಯನ್ನು ಬಿಂಬಿಸುತ್ತವೆ. ತ್ರಾದೇವಿ ಮಂಟಪದಲ್ಲಿನ ಹನುಮಂತ, ಕಾಳಿಂಗ ದಮನ ಷ್ಣರ ಶಿಲ್ಪಗಳನ್ನು ತಗೆದುಕೊಂಡರೆ, ಅವುಗಳ ರಚನಾ ಲಿಯು ಸಮಕಾಲೀನ ವಿಜಯನಗರ ಶಿಲ್ಪಗಳನ್ನು ನುಕರಿಸುತ್ತವೆ. ವಿಶೇಷವಾಗಿ ಕೃಷ್ಣನು ಸರ್ಪವನ್ನು ಕೈಯುಲ್ಲಿ ಡಿದು ಕೊಂಡಿರುವ ರೀತಿ ಮತ್ತು ಸರ್ಪದ ಬೆನ್ನ ಮೇಲೆ ಂತಿರುವ ವಿಧವು ಸ್ಪಷ್ಟವಾಗಿ ಹಂಪಿಯ ಹಜಾರ ರಾಮ ವಾಲಯದ ಭಿತ್ತಿಯಲ್ಲಿರುವ ಶಿಲ್ಪವನ್ನು ಜ್ಞಾಪಕಕ್ಕೆ ತರುತ್ತದೆ. ಸ್ತುತ ಎರಡೂ ಸ್ಮಾರಕಗಳ ಕಾಲ ಘಟ್ಟವು ಬಹುತೇಕವಾಗಿ ಂದೇ ಕಾಲಾವಧಿಗೆ ಸೇರುತ್ತದೆಂಬ ಅಂಶವನ್ನು ಇಲ್ಲಿ ೂಕ್ಷ್ಮವಾಗಿ ಗಮನಿಸಬಹುದು. ಹನುಮಂತನ ಕೆತ್ತನಾ ಲಿಯು ವಿಜಯನಗರ ಕಾಲದ ಶಿಲ್ಪ ಶೈಲಿಯನ್ನೇ ೋಲುತ್ತದೆ. ಹನುಮಂತನನ್ನು ತೋರಿಸಿರುವ ರೀತಿ, ನಿಂತ ಂಗಿ, ದೇಹದ ಮೈಮಾಟಗಳು ಬಹು ಆಕರ್ಷಕವಾಗಿ ಣುತ್ತವೆ. ಮುಂದೆ ಹೋಗುತ್ತಿರುವಂತೆ ಭಾಸವಾಗುವ ಂಗಿಯು ವೀರಾಂಜನೆಯ ಲಕ್ಷಣವನ್ನು ಬಿಂಬಿಸುತ್ತದೆ. ಡಗೈಯ್ಯಲ್ಲಿ ಮಾವಿನ ಗೊಂಚಲು, ಬಲಗೈಯನ್ನು ೇಲಕ್ಕೆತ್ತಿ ಸಾಂಕೇತಿಕವಾಗಿ ಪರ್ವತವನ್ನು ಎತ್ತಿದಂತೆ ೋರುತ್ತದೆ. ಬಾಲವನ್ನು ಬಲಗೈನ ಮೇಲೆ ಬಳಸಿ ನುಮಂತನ ಮುಂಭಾಗದಲ್ಲಿ ಬರುವಂತೆ ಕೆತ್ತಲಾಗಿದೆ. ನುಮಂತನ ಮುಖ ಭಾಗದ ಹಿಂದೆ ಮತ್ತು ಮುಂದೆ ಮವಾಗಿ ಶಂಖ ಮತ್ತು ಚಕ್ರಗಳನ್ನು ಕೆತ್ತಲಾಗಿದೆ. ಇವುಗಳು ೂಡಾ ವೈಷ್ಣವ ಸಂಕೇತಗಳಾಗಿವೆ. ಒಟ್ಟಾರೆಯಾಗಿ ನುಮಂತನ ಆಕೃತಿಯು ಬಹು ಸುಂದರವಾಗಿ ರಚನೆ ಯಾಗಿದೆ. ಗರುಡನ ಶಿಲ್ಪವು ಭಕ್ತ ವಿಗ್ರಹದಂತೆ ರಚನೆಯಾಗಿದೆ. ಂಡಿಯೂರಿ ಕೈಮುಗಿದು ಕುಳಿತ ಭಂಗಿಯಲ್ಲಿರುವ ಶಿಲ್ಪವು ಕಷ್ಟು ಆಕರ್ಷಕವಾಗಿ ರಚನೆಗೊಂಡಿದೆ. ಅಲಂಕೃತ ಭರಣಗಳು, ಭುಜದ ಎರಡೂ ಕಡೆಗಳಲ್ಲಿ ಹರಡಿರುವ ಕ್ಕೆಗಳು ಗರುಡನ ಆಕೃತಿಯನ್ನು ಮತ್ತಷ್ಟು ಸೊಗಸಾಗಿ ಣುವಂತೆ ಮಾಡುತ್ತವೆ. ಕೃಷ್ಣ ಲೀಲೆಯ ಕಥನವಾದ ಮಮಳಾರ್ಜುನ ವಿಜಯದ ಶಿಲ್ಪವನ್ನು ಕಂಬದ ಮೇಲೆ ಚಿಸಲಾಗಿದೆ. ಇಲ್ಲಿ ಬಾಲಕೃಷ್ಣನು ಅಂಬೆಗಾಲನ್ನು ಇಟ್ಟು ೊಂಡು ಮುನ್ನುಗ್ಗುತ್ತಿರುವ ದೃಶ್ಯವಿದ್ದು, ಅವನ ಸೊಂಟಕ್ಕೆ ರಳು ಕಲ್ಲನ್ನು ಕಟ್ಟಿದ್ದು ಅದನ್ನು ಎಳೆದುಕೊಂಡು ಮುನ್ನಡೆ ರುವ ಕೃಷ್ಣನು, ಒರಳು ಯಮಳಾರ್ಜುನ ವೃಕ್ಷಕ್ಕೆ ಸಿಕ್ಕಿ ಾಕಿಕೊಂಡಿರುವ ರಚನೆಯನ್ನು ಕಾಣಬಹುದು. ಯಮಳಾ ರ್ಜುನ ವೃಕ್ಷದಲ್ಲಿಯೇ ಸಹೋದರರಾದ ನಳ–ಕೂಬ ಎಂಬ ಕ್ಷಸರು ವಾಸಿಸುತ್ತಿದ್ದರು. ಅವರನ್ನು ದಮನ ಮಾಡುವುದೇ ಈ ಲೀಲೆಯ ಉದ್ದೇಶವಾಗಿದೆ. ಕೃಷ್ಣ ಲೀಲಾ ಕಥನಗಳಲ್ಲಿ ಈ ಸನ್ನಿವೇಷವು ಬಹುತೇಕವಾಗಿ ಎಲ್ಲ ವೈಷ್ಣವ ಪಂಥೀಯ ದೇವಾಲಯಗಳಲ್ಲಿ ಕಂಡುಬರುತ್ತವೆ. ಪ್ರಸ್ತುತ ಶಿಲ್ಪದಲ್ಲಿ ಕೃಷ್ಣನು ಬೆಣ್ಣೆಯನ್ನು ಮೆಲ್ಲುತ್ತ ಮುನ್ನುಗ್ಗುತ್ತಿರುವಂತೆ ಕೆತ್ತಲಾಗಿದೆ. ಅಂಬೆಗಾಲು–ನವನೀತ ಬಾಲ ಕೃಷ್ಣನ ಶಿಲ್ಪಗಳು ವಿಜಯನಗರ ಕಾಲದಲ್ಲಿ ಬಹು ಜನಪ್ರಿಯವಾಗಿ ರಚನೆಗೊಂಡವು. ಆದರೆ ಇಲ್ಲಿ ಯಮಳಾರ್ಜುನ ವಿಜಯ ಮತ್ತು ನವನೀತ ಚೋರನ ಚಿತ್ರಣವನ್ನು ಜೊತೆಯಾಗಿ ಬಿಂಬಿಸಲಾಗಿದೆ.

ಹನುಮಂತನ ಮತ್ತೊಂದು ಉಬ್ಬು ಶಿಲ್ಪವು ಭಕ್ತ ವಿಗ್ರಹದಂತೆ ರಚನೆಯಾಗಿದೆ. ಮಂಡಿಯೂರಿ ಕೈಮುಗಿದು ಕುಳಿತಿರುವ ಶಿಲ್ಪವು ಈ ಮೇಲೆ ಚರ್ಚಿಸಿದ ಗರುಡನ ಶಿಲ್ಪಕ್ಕೆ ಅನುರೂಪವಾದ ಉದಾಹರಣೆಯಾಗಿದೆ. ಗರುಡನ ಶಿಲ್ಪದ ಶೈಲಿಯಂತೆ ಈ ಶಿಲ್ಪವು ರಚನೆಯಾಗಿದೆ.

ಭೈರಾದೇವಿ ಮಂಟಪದಲ್ಲಿನ ಒಂದು ಕಂಬದ ಮೇಲೆ ರಚನೆಯಾಗಿರುವ ರಾಮಾಯಣದ ಶಿಲ್ಪವು ಇಲ್ಲಿ ಗಮನ ಸೆಳೆಯುತ್ತದೆ. ಪ್ರಸ್ತುತ ಶಿಲ್ಪಗಳನ್ನು ಕಥಾ ನಿರೂಪಣಾ ಶಿಲ್ಪದಂತೆ ರಚಿಸಲಾಗಿದೆ. ಶಿಲ್ಪಗಳಲ್ಲಿ ರಾಮ–ಲಕ್ಷ್ಮಣರನ್ನು ಬಿಲ್ಲು, ಬಾಣಗಳನ್ನು ಹಿಡಿದುಕೊಂಡು ನಿಂತಿರುವಂತೆ ಬಿಂಬಿಸಿದ್ದು, ಅವರನ್ನು ಕಾಡಿನಲ್ಲಿ ಭೇಟಿ ಮಾಡಿದ ಸುಗ್ರೀವ–ಹನುಮಂತರನ್ನು ಮತ್ತು ಇತರೆ ವಾನರರನ್ನು ಸಾಲಾಗಿ ರಾಮ–ಲಕ್ಷ್ಮಣರ ಮುಂದೆ ನಿಂತಂತೆ ಬಿಂಬಿಸಲಾಗಿದೆ. ಈ ದೃಶ್ಯ ನಿರೂಪಣೆಯು ರಾಮಾಯಣದ ರಚನೆಯನ್ನು ಪ್ರಚುರ ಪಡಿಸುತ್ತದೆ. ವಾನರ ಆಕೃತಿಗಳನ್ನು ಒಬ್ಬರ ಹಿಂದೆ ಒಬ್ಬರಂತೆ ನಿಂತುಕೊಂಡು ರಾಮನ ಭೇಟಿಯನ್ನು ಮಾಡು ತ್ತಿರುವಂತೆ ರಚಿಸಲಾಗಿದೆ. ಈ ಸನ್ನಿವೇಶವೇ ನಂತರದ ವಾಲಿ ವಧೆ ಘಟನೆಗೆ ಕಾರಣವಾಗುತ್ತದೆ. ಇಡೀ ಬಸದಿಯಲ್ಲಿ ಇದೊಂದೆ ರಾಮಾಯಣ ದೃಶ್ಯ ನಿರೂಪಣೆ ರಚನೆ ಯಾಗಿರುವುದು.

ಪ್ರಸ್ತುತ ಬಸದಿಯಲ್ಲಿ ಕಂಡುಬರುವ ಜೈನೇತರ ಶಿಲ್ಪಗಳು ರಚನೆಗೊಂಡ ಹಿನ್ನೆಲೆಯನ್ನು ಗಮನಿಸುವುದು ಅವಶ್ಯಕ ವಾಗಿದೆ. ಏಕೆಂದರೆ ಪ್ರಸ್ತುತ ಬಸದಿ ಧಾರ್ಮಿಕವಾಗಿ ಜೈನ ಧರ್ಮದ ಬಹು ಮುಖ್ಯವಾದ ವಾಸ್ತು ಶೈಲಿಯಾಗಿದೆ. ಇದರ ನಿರ್ಮಾಣದಲ್ಲಿ ನಿಯೋಜನೆಗೊಂಡಿದ್ದ ಕಲಾವಿದ ರೇನಾದರು ತಾವೇ ತಾವಾಗಿ ಈ ಶಿಲ್ಪಗಳನ್ನು ಅಲಂಕಾರಕ್ಕಾಗಿ ರಚಿಸಿದರೇ, ಅಥವಾ ಉದ್ದೇಶ ಪೂರ್ವಕವಾಗಿ ರಚಿಸ ಲಾಯಿತೆಂಬ ಕುತೂಹಲಕ್ಕೆ ಉತ್ತರ ಸಿಕ್ಕುವುದು ಕಷ್ಟ ಸಾಧ್ಯ. ಒಟ್ಟಿನಲ್ಲಿ ಇವುಗಳು ಒಂದು ರೀತಿಯಲ್ಲಿ ಧಾರ್ಮಿಕ ಸಾಮರಸ್ಯದ ದಾಖಲೆಗಳಾಗಿ ರಚನೆಗೊಂಡಿವೆ ಎಂದು ಹೇಳಬಹುದು.





# ಮೈಸೂರು ಜಿಲ್ಲೆಯ ಅಪರೂಪದ ವೀರಗಲ್ಲುಗಳು

ಡಾ|| ಎಸ್.ಜಿ. ರಾಮದಾಸರೆಡ್ಡಿ*

**ವೇ**ದಗಳಲ್ಲಿ ಹೇಳಿರುವ 'ಪಿತೃಮೇಧ' ಎಂಬ ವಿಧಿಯಲ್ಲಿ ಸತ್ತವನನ್ನು ಸಂಸ್ಕರಿಸಿದ ಸ್ಥಳದಲ್ಲಿ ಸ್ಮಾರಕವನ್ನು ನಿರ್ಮಿಸುವ ಬಗ್ಗೆ ಮಾಹಿತಿ ದೊರೆಯುತ್ತದೆ.[೧] ಸ್ಮಾರಕಗಳನ್ನು ಹಾಕುವ, ಶವಸಂಸ್ಕಾರದ ರೀತಿಗಳು ಪ್ರಾಗೈತಿಹಾಸಿಕ ಕಾಲದ ಬೃಹತ್ ಶಿಲಾಯುಗದ ಸಂಸ್ಕೃತಿಯ ಮಾನವನ ಕಲ್ಲಿನ ಮನೆಗಳು ಆ ಜನರ ನಂಬಿಕೆ, ಸನ್ನಿವೇಶಗಳೊಂದಿಗೆ ಬೆಳೆದು ಬಂದವು.

ವೀರರಿಗೆ ವೀರಗಲ್ಲುಗಳನ್ನು ಕಳ್ಳನೊಡನೆ ಹೋರಾಡಿ ಮಡಿದ, ಪೆಣ್ಬುಯಲಿನಲ್ಲಿ ಮಡಿದ, ಬೇಟೆಯಲ್ಲಿ ಸತ್ತ, ಯುದ್ಧದಲ್ಲಿ ಸತ್ತ, ಗಡಿಕಾಳಗದಲ್ಲಿ ಮಡಿದ, ನೀರಲ್ಲಿ ಮಡಿದ, ತುರುಕಾಳಗ, ಇತರೆ ವಿವಿಧ ಸಂದರ್ಭಗಳಲ್ಲಿ ನೆಡುತ್ತಿದ್ದರು. ಈ ವೀರಗಲ್ಲುಗಳನ್ನು ಸತ್ತ ವ್ಯಕ್ತಿಯ ಸಂಬಂಧಿಗಳು ಹಾಗೂ ಸಾರ್ವಜನಿಕರು ವೀರನ ಬಗ್ಗೆ ಇರುವ ವಿಶ್ವಾಸ, ಕೃತಜ್ಞತೆಗಾಗಿ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು.

ಇಂಥ ವಿವಿಧ ನಮೂನೆಯ ವೀರಗಲ್ಲುಗಳಲ್ಲಿ ಕೆಲವು ವೀರಗಲ್ಲುಗಳನ್ನು ಮೈಸೂರು ಜಿಲ್ಲೆಯ ಕೆಲವು ಗ್ರಾಮಗಳಲ್ಲಿ ಕ್ಷೇತ್ರಕಾರ್ಯ ಮಾಡುವಾಗ ಸಂಶೋಧಿಸಿದ್ದೇನೆ. ಅವುಗಳೆಂದರೆ:

೧. ದೋಣಿಯಿರುವ ವೀರನ ವೀರಗಲ್ಲು
೨. ತೆಂಗಿನಮರದ ಕೆಳಗೆ ನಿಂತ ವೀರನ ವೀರಗಲ್ಲು
೩. ಗುರಾಣಿಗಳ ಮೇಲೆ ಅಪರೂಪ ಶಿಲ್ಪಗಳಿರುವ ವೀರಗಲ್ಲುಗಳು

## ದೋಣಿಯಿರುವ ವೀರನ ವೀರಗಲ್ಲು

ನೌಕಾ (ಹಡಗು) ಪಡೆಯು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದುದು ಪುರಾತತ್ವ ಹಾಗೂ ಸಾಹಿತ್ಯ ಆಕರಗಳಿಂದ ವ್ಯಕ್ತವಾಗುತ್ತದೆ.[೨] ಜಲಸಾರಿಗೆಗಾಗಿ ಹಡಗು, ದೋಣಿಗಳನ್ನು ಬಳಸುತ್ತಿದ್ದರು. ದೋಣಿಗಳಲ್ಲಿ ಪ್ರಮುಖವಾಗಿ ಎರಡು ವಿಧ. ಪ್ರಾಣಿಯ ತೊಗಲುಗಳನ್ನು ತೆಗೆದು ಅವುಗಳನ್ನು ಹೊಲಿದು ಅವುಗಳ ಒಳಗೆ ತೇಲುವ ಸಾಧನಗಳನ್ನು ಅಥವಾ ಗಾಳಿ ತುಂಬಿ ಅವುಗಳನ್ನು ಅಟ್ಟಣಿಗೆಯ ಅಡಿಯಲ್ಲಿ ಅಥವಾ ತೆಪ್ಪದ ಕೆಳಗೆ ಕಟ್ಟಿ ಒಳನಾಡಿನ ಸಾಗಣೆಯಲ್ಲಿ ಬಳಸುತ್ತಾರೆ. ಮತ್ತೊಂದು ಬಗೆಯದೆಂದರೆ ಅಗಲವಾದ ಬಟ್ಟಲಿನಾಕಾರದ ಬಿದಿರು ಅಥವಾ ಬೆತ್ತದ ಬುಟ್ಟಿಯನ್ನು ಹೆಣೆದು ಅದರ ಹೊರಮೈಗೆ ಚರ್ಮವನ್ನು ಹೊಲಿದು ತಯಾರಿಸಿದ ಹುರಿಗೋಲುಗಳು ಇದನ್ನು ಕೆರೆ, ನದಿ ಸರೋವರಗಳನ್ನು ದಾಟಲು ಸರಕು ಸಾಕಾಣಿಕೆಗೆ ಒಳನಾಡಿನ ಜಲಮಾರ್ಗಗಳಲ್ಲಿ ಬಳಸುತ್ತಾರೆ.[೩] ಈ ತರಹದ ಅಗಲವಾದ ಬಟ್ಟಲಿನಾಕಾರದ ಹುರಿಗೋಲಿನ ವೀರಗಲ್ಲು ನನ್ನ ಕ್ಷೇತ್ರ ಕಾರ್ಯದಲ್ಲಿ ಬೆಳಕಿಗೆ ಬಂದಿತು.

ಈ ವೀರಗಲ್ಲು ಮೈಸೂರು ಜಿಲ್ಲೆ, ತಾಲ್ಲೂಕು, ಜಯಪುರ ಹೋಬಳಿ ಕೇಂದ್ರದ ಗುಜ್ಜಮ್ಮನ ದೇವಾಲಯದ ಆವರಣದಲ್ಲಿ ೫೫ ವೀರಮಾಸ್ತಿ ಇತರೆ ಶಿಲ್ಪಗಳಿದ್ದು ಅವುಗಳಲ್ಲಿ ದೋಣಿಯ ವೀರಗಲ್ಲು ಇದೆ. ಗ್ರಾಮವು ಲಕ್ಷ್ಮಣತೀರ್ಥ ನದಿ ದಡದ ಮೇಲೆ ಇದೆ.

ವೀರಗಲ್ಲು ಎತ್ತರ ೬೦ ಸೆಂ.ಮೀ. ಅಗಲ ೩೦ ಸೆಂ.ಮೀ, ದಪ್ಪ ೧೫ ಸೆಂ.ಮೀ. ಇದೆ. ಕಲ್ಲು ಗ್ರಾನೈಟ್ ಕಲ್ಲಿನಲ್ಲಿದೆ. ಶಿಲ್ಪ ೨ ಹಂತಗಳಲ್ಲಿದ್ದು, ಕೆಳಹಂತದಲ್ಲಿ ನದಿಯನ್ನು ತೋರಿಸಿ, ಮೇಲೆ ದುಂಡಾದ ದೋಣಿಯನ್ನು ಕೆತ್ತಿದ್ದಾನೆ. ಒಳಭಾಗದಲ್ಲಿ ಒಬ್ಬ ವ್ಯಕ್ತಿ (ವೀರಗಾರ) ಕೈಯಲ್ಲಿ ಹುಟ್ಟು ಹಿಡಿದು ದೋಣಿಯನ್ನು ಮುನ್ನಡೆಸಲು ಪ್ರಯತ್ನಿಸುತ್ತಿದ್ದಾನೆ. ದೋಣಿ ಹೊರಮೈ ಆಯತಾಕಾರದ ಗೆರೆಗಳಿಂದ ಅಲಂಕಾರಗೊಂಡಿದ್ದು ಬಿದಿರಿನ ಅಥವಾ ಬೆತ್ತದ ಬುಟ್ಟಿಯಿಂದ ಹೆಣೆದಿರುವುದು ಎಂದು ತಿಳಿಯಲು ಸಹಾಯಕವಾಗಿದೆ. ನದಿದಡದಲ್ಲಿ ನಿಂತ ವೀರ ಅಲಂಕಾರ ಭೂಷಣನಾಗಿ ಕಾಲ್ಕಡಗ, ವೀರಗಜ್ಜೆ, ಕಂಠಹಾರ, ಕಿವಿಗಳಿಗೆ ಓಲೆ, ಉದ್ದನೆಯ ಜಡೆ, ದುಂಡಾದ ಮುಖ, ಬಲಗೈಯಲ್ಲಿ ದೋಣಿಯಲ್ಲಿರುವ ವ್ಯಕ್ತಿ ಕಾಲನ್ನು ಹಿಡಿದಿದ್ದರೆ, ಎಡಕೈಯಲ್ಲಿ ಕೋಲನ್ನು ನದಿಯಲ್ಲಿ ಹಾಕಿ ಹಿಡಿದಿರುವುದು ಎದೆಯಿಂದ ಎಡಕ್ಕೆ ಖಡ್ಗವನ್ನು ನೇತುಹಾಕಿಕೊಂಡಿರುವುದು ಕಂಡುಬರುತ್ತದೆ. ದೋಣಿಯನ್ನು ಸ್ಪಷ್ಟವಾಗಿ ಖಂಡರಿಸಲಾಗಿದೆ. ೨ನೇ ಹಂತದಲ್ಲಿ ಶಿಲ್ಪ ಅಸ್ಪಷ್ಟವಾಗಿದ್ದು ಶ್ರೀಕೃಷ್ಣನ ಹಾಗೆ ವೀರ ನಿಂತಿದ್ದಾನೆ.

* ಎಂ-೧೧೧೨, ೭ನೇ ಕ್ರಾಸ್, ಪ್ರಗತಿ ಕಾನ್ವೆಂಟ್ ಹತ್ತಿರ, ೨ನೇ ಹಂತ (ದಕ್ಷಿಣ), ಬೋಗಾದಿ, ಮೈಸೂರು-೫೭೦೦೨೩.

ಎಡಬಲಭಾಗದಲ್ಲಿ ತುರುಗಳಿವೆ. ವೈಷ್ಣವ ಧರ್ಮದ ಮೇಲೆ ಬೆಳಕು ಚೆಲ್ಲುವ ವೀರಗಲ್ಲಾಗಿದೆ.

ನೀರಿನಲ್ಲಿ ಮಡಿದಿರಬಹುದಾದ ವೀರರ ಎರಡು ವೀರಗಲ್ಲುಗಳು ಹಂಪಿಯ ತುಂಗಭದ್ರಾನದಿಯನ್ನು ದಾಟಿ ಆನೆಗೊಂದಿಗೆ ಹೋಗುವ ದಾರಿಯಲ್ಲಿದ್ದು ಈ ವೀರಗಲ್ಲುಗಳಲ್ಲಿ ಇಬ್ಬರು ವೀರರು ತಮ್ಮ ಹುಟ್ಟುಗಳನ್ನು ಕೈಯಲ್ಲಿ ಹಿಡಿದಿರುವಂತೆ ಶಿಲ್ಪದ ವಿವರಗಳನ್ನು ಬಿಡಿಸಲಾಗಿದೆ. ಆದರೆ ದೋಣಿಯ ಶಿಲ್ಪಗಳಿಲ್ಲ ಹಾಗೂ ನೌಕಾಯುದ್ಧದಲ್ಲಿ ಮಡಿದ ವೀರರ ವೀರಗಲ್ಲು ಗೋವೆಯಲ್ಲಿದೆ.[೮] ಈ ತರಹದ ಶಿಲ್ಪಗಳು ಅಪರೂಪವೆಂದೆ ಹೇಳಬೇಕು. ವಿಜಯನಗರಕ್ಕೆ ಆಗಮಿಸಿದ ಡೋಮಿಂಗೊಪಯಾಸ್.[೯] ಬಾರ್ಬೋಸ್[೧೦] ಬುಟ್ಟಿಯಾಕಾರಾದ ದೋಣಿಗಳ ಬಗ್ಗೆ ಉಲ್ಲೇಖಿಸಿದ್ದಾನೆ.

ಒಟ್ಟಾರೆ ಜಯಪುರದ ಗ್ರಾಮದಲ್ಲಿ ದೊರಕಿರುವ ದೋಣಿಯಿರುವ ವೀರಗಲ್ಲು ಅಪರೂಪದ ವೀರಗಲ್ಲು ಎಂದೇ ಹೇಳಬಹುದು. ಈ ವೀರಗಲ್ಲಿನಿಂದ ಪಕ್ಕದಲ್ಲಿ ನದಿ ಹರಿಯುತ್ತಿರುವ ಬಗ್ಗೆ, ನದಿಯ ಮೂಲಕ ಅಂದಿನ ಕಾಲದಲ್ಲೇ ಸಾಗಾಣಿಕೆ ಈ ಭೂಭಾಗದಲ್ಲಿ ಸಾಗುತ್ತಿತ್ತೆಂದು ದೋಣಿ ನದಿ ದಾಟಲು ಗ್ರಾಮದ ಜನತೆಗೆ ಅನಿವಾರ್ಯವಾಗಿತ್ತೆಂದು ತಿಳಿಯಲು ಸಹಕಾರಿಯಾದ ವೀರಗಲ್ಲಾಗಿದೆ.

**ತೆಂಗಿನಮರದ ಕೆಳಗೆ ನಿಂತ ವೀರನ ವೀರಗಲ್ಲು**

ಈ ವೀರಗಲ್ಲು ಸಹ ಜಯಪುರ ಗ್ರಾಮದ ದೇವಾಲಯದ ಹತ್ತಿರವಿರುವ ಶಿಲ್ಪವಾಗಿದೆ. ಶಿಲ್ಪವು ೨ ೧/೨ ಅಡಿ ಎತ್ತರ, ೧ ಅಡಿ ಅಗಲ, ೧ ಇಂಚು ದಪ್ಪವಿರುವ ಶಿಲ್ಪವಾಗಿದೆ. ಶಿಲ್ಪ ಗ್ರಾನೈಟ್ ಕಲ್ಲಿನಲ್ಲಿದೆ. ಈ ಶಿಲ್ಪವು ವಿಶೇಷವಾದ ವೀರಗಲ್ಲಾಗಿದೆ. ಎರಡು ಹಂತಗಳ ಶಿಲ್ಪವಾಗಿದೆ.

ಮೊದಲ ಹಂತದಲ್ಲಿ ತೆಂಗಿನಮರ, ಮರದಲ್ಲಿ ತೆಂಗಿನ ಗರಿಗಳ ಕೆಳಗೆ ತೆಂಗಿನಕಾಯಿಗಳಿವೆ. ವೀರ ತೆಂಗಿನ ಮರದ ಕೆಳಗೆ ನಿಂತು ಎಡಕೈಯಿಂದ ಮರವನ್ನು ಹಿಡಿದಿದ್ದಾನೆ. ವೀರನ ಶಿಲ್ಪ ಅಲಂಕಾರಭೂಷಣವಾಗಿದೆ. ಆದರೆ ಶಿಲ್ಪ ಅಸ್ಪಷ್ಟವಾಗಿದೆ. ವೀರ ಕಿರೀಟಧಾರಿಯಾಗಿ, ವೀರಗಜ್ಜೆ ಹಾಕಿದಂತೆ ಇದೆ. ತೆಂಗಿನಮರದ ಬುಡದಲ್ಲಿ ಬೇರುಗಳು ಹೊರಗಡೆ ಬಂದಿರುವುದನ್ನು ಸಹ ಶಿಲ್ಪಿ ಬಿಡಿಸಿದ್ದಾನೆ.

ಎರಡನೇ ಹಂತದಲ್ಲಿ ಶಿಲ್ಪಗಳು ಸ್ಪಷ್ಟವಾಗಿಲ್ಲ. ಸೂರ್ಯಚಂದ್ರರ ಶಿಲ್ಪಗಳಿವೆ. ಕೆಳಗೆ ಲಿಂಗ ಮುಂದೆ ಮಲಗಿರುವ ಬಸವ ಲಿಂಗದ ಪಕ್ಕದಲ್ಲಿ ವೀರ ನಿಂತು ಪೂಜೆ ಮಾಡುವ ರೀತಿಯ ದೃಶ್ಯವಿದೆ.

ಈ ವೀರಗಲ್ಲು ಶಾಸನರಹಿತವಾದ ವೀರಗಲ್ಲಾಗಿದ್ದು, ತೆಂಗಿನಮರದ ಕೆಳಗೆ ವೀರ ಏಕೆ ನಿಂತಿದ್ದಾನೆ ಎನ್ನುವುದು ಅಸ್ಪಷ್ಟ

೧. ವೀರ ತೆಂಗಿನಮರದ ಕೆಳಗೆ ನಿಂತಿದ್ದು ತೆಂಗಿನಕಾಯಿ ಬಿದ್ದು ಸತ್ತಿರಬಹುದು.

೨. ತೆಂಗಿನಕಾಯಿ ಕೀಳುವ ಪ್ರವೀಣ ವೀರ ತೆಂಗಿನಕಾಯಿ ಕೀಳಲು ಮರಹತ್ತಿ ಮರದಿಂದ ಬಿದ್ದು ಸತ್ತಿರಬಹುದು.

೩. ವೀರ ತೆಂಗಿನ ಗಿಡಗಳನ್ನು ನೆಟ್ಟು ತೆಂಗಿನ ತೋಟವನ್ನು ಬೆಳೆಸಿದ ಜ್ಞಾಪಕಾರ್ಥವಾಗಿ ಅವನು ಸತ್ತಾಗ ಈ ವೀರಗಲ್ಲು ನೆಟ್ಟಿರಬಹುದೇ?

ಒಟ್ಟಾರೆ ಯಾವ ಕಾರಣಕ್ಕಾಗಿ ಮರಣ ಹೊಂದಿದ ನಂತರ ವೀರಗಲ್ಲನ್ನು ನೆಟ್ಟರು ಎಂದು ಹೇಳುವುದು ಕಷ್ಟಸಾಧ್ಯ.

ಈ ವೀರಗಲ್ಲಿನಿಂದ ಈ ಭೂಭಾಗದಲ್ಲಿ ತೆಂಗಿನ ತೋಟಗಳಿದ್ದವೆಂದು, ತೆಂಗಿನಬೇಸಾಯವನ್ನು ವ್ಯವಸ್ಥಿತವಾಗಿ ಈ ಭೂಭಾಗದ ಜನರು ಮಾಡುತ್ತಿದ್ದರೆಂದು ತಿಳಿಯಲು ಸಹಕಾರಿಯಾಗಿದೆ. ಈ ವೀರಗಲ್ಲು ಅಪರೂಪದ ವೀರಗಲ್ಲುಗಳಲ್ಲಿ ಒಂದಾಗಿದೆ.

**ತೆಂಗಿನಮರಗಳ ಕೆಳಗೆ ನಿಂತ ವೀರನ ವೀರಗಲ್ಲು:**

ಈ ವೀರಗಲ್ಲು ಸಹ ಜಯಪುರದ ಗುಜ್ಜಮ್ಮನ ದೇವಾಲಯದ ಆವರಣದಲ್ಲಿದೆ. ಗ್ರಾನೈಟ್ ಕಲ್ಲಿನಲ್ಲಿದ್ದು ವಿಶೇಷವಾದ, ಅಪರೂಪವಾದ ವೀರಗಲ್ಲಾಗಿದೆ. ಈ ಶಿಲ್ಪವು ಮೂರು ಹಂತಗಳಲ್ಲಿದೆ. ಮೊದಲನೆಯ ಹಂತದಲ್ಲಿ ಶಿಲ್ಪದ ಬಲಭಾಗದಲ್ಲಿ ಒಂದು ತೆಂಗಿನಮರ ಮಧ್ಯದಲ್ಲಿ ವೀರ ಎಡಭಾಗದಲ್ಲಿ ಎತ್ತರವಾದ ತೆಂಗಿನಮರ ಒಂದೇ ಹಂತದಿಂದ ಎರಡನೇ ಹಂತದವರೆಗೆ ಇದೆ. ಮೊದಲನೇ ಹಂತದಲ್ಲಿ ವೀರ ಅಲಂಕಾರಭೂಷಣನಾಗಿ ತೆಂಗಿನಮರವನ್ನು ಹಿಡಿದು ನಿಂತಿದ್ದಾನೆ.

ವೀರ ವೀರಗೆಜ್ಜೆ ಹಾಕಿದ್ದರೆ ಕಿವಿಗಳಿಗೆ ಆಭರಣಗಳನ್ನು ಧರಿಸಿದ್ದಾನೆ. ತುರುಬನ್ನು ಎಡಕ್ಕೆ ಕಟ್ಟಿದ್ದಾನೆ. ಸೊಂಟಕ್ಕೆ ಪಟ್ಟಿಯಾಕಾರ ಕಟ್ಟಿದಂತೆಯಿದೆ. ಬಲಕೈಯನ್ನು ಪಟ್ಟಿಯ ಪಕ್ಕದಲ್ಲಿ ಹಿಡಿದಿದ್ದಾನೆ. ಈ ಪಟ್ಟಿಯನ್ನು ನೋಡಿದರೆ ತೆಂಗಿನಕಾಯಿ ಕೀಳುವ ಪ್ರವೀಣರು ಸೊಂಟಕ್ಕೆ ಮತ್ತು ಕಾಲಿಗೆ ಹಗ್ಗವನ್ನು ಹಾಕಿಕೊಂಡು ಮರಹತ್ತುವ ಸಂದರ್ಭದಲ್ಲಿ ಬಳಸುವ ಹಗ್ಗದ ಪಟ್ಟಿಯಾಗಿರಬೇಕು. ಈ ಲಕ್ಷಣಗಳನ್ನು ಗಮನಿಸಿದರೆ ತೆಂಗಿನಮರ ಹತ್ತುವಾಗ ಮರದಿಂದ ಆಯಾ ತಪ್ಪಿ ಬಿದ್ದಿರಬೇಕು. ನಂತರ ಮರಣ ಹೊಂದಿರಬೇಕು. ಅವನ ನೆನಪಿಗಾಗಿ ಈ ವೀರಗಲ್ಲನ್ನು ನೆಟ್ಟಿರಬೇಕು ಎಂದು ಹೇಳಬಹುದು.

ಎರಡನೇ ಹಂತದಲ್ಲಿ ವೀರನನ್ನು ದೇವಕನ್ಯೆಯರು ಅಲಂಕಾರ ಭೂಷಣರಾಗಿ ಚಾಮರವನ್ನು ಹೆಗಲ ಮೇಲೆ

ಹಾಕಿಕೊಂಡು ಎಡಬಲಗೈಗಳಲ್ಲಿ ವೀರನನ್ನು ಹಿಡಿದಿದ್ದಾರೆ. ವೀರ ಎರಡು ಕೈಗಳಲ್ಲಿ ಎರಡು ಆಯುಧಗಳನ್ನು ಹಿಡಿದಿದ್ದಾನೆ. ಕಾಲಿಗೆ ಕಾಲ್ಕಡಗ, ವೀರಗಚ್ಚೆ, ಸೊಂಟಕ್ಕೆ ಪಟ್ಟಿ, ಕೈಕಡಗ, ಕಠಹಾರ, ಬಲಗಡೆ ತುರುಬು, ಓಲೆಗಳಿಂದ ಕಿವಿಗಳನ್ನು ಅಲಂಕಾರಗೊಳಿಸಿಕೊಂಡಿದ್ದಾನೆ. ದೇವಕನ್ಯೆಯರು ಮತ್ತು ವೀರ ಹಾರುವ ರೀತಿ ಶಿಲ್ಪಿ ಕೆತ್ತಿದ್ದಾನೆ.

ಮೂರನೇ ಹಂತದಲ್ಲಿ ಲಿಂಗ ಮುಂದೆ ಪೂಜೆ ಮಾಡುತ್ತಿರುವ ಯತಿ ಹಿಂದೆ ಮಲಗಿರುವ ಬಸವನ ಶಿಲ್ಪವಿದೆ.

ಎರಡನೇ ಹಂತದಲ್ಲಿ ದೇವಕನ್ಯೆಯರು ವೀರನನ್ನು ಕೊಂಡೊಯ್ಯುವ ಸಂದರ್ಭದಲ್ಲಿ ವೀರ ಎರಡು ಕೈಗಳಲ್ಲಿ ಎರಡು ಆಯುಧಗಳನ್ನು ಹಿಡಿದಿದ್ದಾನೆ. ಆ ಆಯುಧವನ್ನು ನೋಡಿದಾಗ 'ತೆಂಗಿನಕಾಯಿಗಳ ಮೇಲಿನ ಸಿಪ್ಪೆಯನ್ನು ತೆಗೆಯುವ ಆಯುಧಗಳ ಹಾಗೆಯಿವೆ'. ಈ ಆಯುಧಗಳು ತೆಂಗಿನಕಾಯಿ ಸಿಪ್ಪೆ ತೆಗೆಯುವ ಆಯುಧಗಳೇ ಆಗಿದ್ದರೆ ವೀರ ತೆಂಗಿನಕಾಯಿಗಳ ಮೇಲಿನ ಸಿಪ್ಪೆಯನ್ನು ತೆಗೆಯುವುದರಲ್ಲಿ ಅಪ್ರತಿಮ ಸಾಧನೆ ಮಾಡಿದ್ದವನಾಗಿದ್ದು ಇವನು ಸಿಪ್ಪೆ ತೆಗೆಯುವಾಗ, ಅಕಾಲ ಮರಣ ಹೊಂದಿರಬೇಕು. ಅವನ ಜ್ಞಾಪಕಾರ್ಥವಾಗಿ ಈ ವೀರಗಲ್ಲನ್ನು ನಿರ್ಮಿಸಿರಬೇಕು ಎಂದು ಹೇಳಬಹುದು. ಈ ತೆಂಗಿನಮರಗಳ ಮಧ್ಯೆ ನಿಂತಿರುವ ವೀರರ ಎರಡು ವೀರಗಲ್ಲು ಶಿಲ್ಪಗಳು "ಅಪರೂಪವಾದ ವೀರಗಲ್ಲು ಶಿಲ್ಪಗಳಾಗಿವೆ" ಎಂದು ಹೇಳಬಹುದು. ಹಾಗೂ ಈ ಶಿಲ್ಪಗಳು ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಶಿಲ್ಪಗಳಾಗಿವೆ.

**ವೀರಗಲ್ಲಿನ ಮೇಲಿನ ಗುರಾಣಿಗಳ ಮೇಲೆಯಿರುವ ಅಪರೂಪ ಶಿಲ್ಪಗಳು:**

ಈ ವೀರಗಲ್ಲು ಸಹ ಮೈಸೂರು ಜಿಲ್ಲೆ, ಜಯಪುರ ಹೋಬಳಿಯ ಗುಜ್ಜಮ್ಮನ ದೇವಾಲಯದ ಆವರಣದಲ್ಲಿದೆ. ಈ ಶಿಲ್ಪವು ಸಹ ವಿಶೇಷ ವೀರಗಲ್ಲಾಗಿದ್ದು, ಮೂರು ಹಂತಗಳಲ್ಲಿದೆ.

ಮೊದಲನೆ ಹಂತದಲ್ಲಿ ವೀರರಿಬ್ಬರು ಅಲಂಕಾರ ಭೂಷಣರಾಗಿ ಕತ್ತಿ ಗುರಾಣಿಗಳನ್ನು ಹಿಡಿದು ಹೋರಾಡುತ್ತಿದ್ದಾರೆ. ಶಿಲ್ಪದ ಬಲಭಾಗದ ವೀರ ಬಲಗೈನಲ್ಲಿ ಕತ್ತಿಯನ್ನು ಎಡಗೈನಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಗುರಾಣಿಯ ಒಳಭಾಗದಲ್ಲಿ ಶಾರ್ದೂಲ ಶಿಲ್ಪ ವಿಶೇಷವಾಗಿದೆ. ಶಾರ್ದೂಲದ ಕೆಳ ಮತ್ತು ಮೇಲ್ಭಾಗದಲ್ಲಿ ಕತ್ತಿಗಳನ್ನು ಹಿಡಿದು ಹೋರಾಡುವ ದೃಶ್ಯ ಹಾಗೂ ಸತ್ತುಬಿದ್ದಿರುವ ಸೈನಿಕರ ಮೇಲೆ ಶಾರ್ದೂಲ ನಿಂತಿದೆ. ವಿಶೇಷ ಶಿಲ್ಪವಾಗಿದೆ. ಎದುರಾಳಿ ಗುರಾಣಿ ಹಿಡಿದಿದ್ದು ಮೇಲೆ '□' ಆಕಾರವಿದೆ. ಈ ಎರಡು ಗುರಾಣಿಗಳನ್ನು ನೋಡಿದರೆ. ಸ್ಪಷ್ಟವಾಗಿ ಎದುರಾಳಿಗಳು ಎಂದು ಗೊತ್ತಾಗುತ್ತದೆ.

ಎರಡನೇ ಹಂತದಲ್ಲಿ ವೀರನನ್ನು ದೇವಕನ್ಯೆಯರು ಪುಷ್ಪಕವಿಮಾನದಲ್ಲಿ ಕೊಂಡೊಯ್ಯುತ್ತಿದ್ದಾರೆ. ದೇವಕನ್ಯೆಯ ಪಕ್ಕದಲ್ಲಿ ಸತಿ ಎರಡು ಕೈಗಳನ್ನು ಮೇಲೆತ್ತಿ ನಿಂತಿದ್ದಾಳೆ. ಸತಿಪತಿಯೊಂದಿಗೆ ಸಹಗಮನ ಮಾಡಿ ಸತಿಯೊಂದಿಗೆ ಸತಿಸಹಗಮನ ಆಚರಿಸಿರುವ ಬಗ್ಗೆ ಸ್ಪಷ್ಟ ಮಾಹಿತಿ ತಿಳಿಸುವ ಶಿಲ್ಪವಾಗಿದೆ.

ಮೂರನೇ ಹಂತದಲ್ಲಿ ಅಲಂಕಾರಗೊಂಡ ಶಿವಲಿಂಗ, ಯತಿಪೂಜೆ ಮಾಡುತ್ತಿರುವುದು ಹಾಗೂ ಹಿಂದೆ ಬಸವ ಮಲಗಿದೆ. ಲಿಂಗದ ಎಡಭಾಗದಲ್ಲಿ ವೀರ ಧ್ಯಾನ ಮಗ್ನನಾಗಿ ಕುಳಿತಿದ್ದರೆ, ಸತಿ ಲಿಂಗದ ಕಡೆ ಮುಖ ಮಾಡಿ ಕೈಮುಗಿದು ಕುಳಿತಿದ್ದಾಳೆ. ಈ ವೀರಗಲ್ಲು ವಿಶೇಷ ಗುರಾಣಿ ಶಿಲ್ಪವಿರುವ ವೀರಗಲ್ಲಾಗಿದೆ.

ಈ ಶಿಲ್ಪಗಳು ಇತಿಹಾಸದ ಮೇಲೆ ಹೊಸಬೆಳಕು ಚೆಲ್ಲುವ ಶಿಲ್ಪಗಳಾಗಿವೆ. ಇಂಥ ಅಪರೂಪದ ಶಿಲ್ಪಗಳು ಕಾಲಗರ್ಭದಲ್ಲಿ ಸಿಲುಕಿ ಅವನತಿ ಅಂಚಿನಲ್ಲಿವೆ. ಸಂಬಂಧಪಟ್ಟ ಇಲಾಖೆಯವರು ಇಂಥ ಅಪರೂಪದ ಶಿಲ್ಪಗಳನ್ನು ಉಳಿಸಿ ಸಂರಕ್ಷಿಸುವ ಅಗತ್ಯವಿದೆ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ॥ ಆರ್. ಶೇಷಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು,** ಪುಟ ೧೧, ೧೯೮೨, ಕ.ಸಾ.ಪ.
೨. ಡಾ॥ ಎಸ್.ಆರ್. ರಾವ್, **ಲೋಥಾಲ್ ಮತ್ತು ಸಿಂಧೂ ನಾಗರಿಕತೆ,** ಶ್ರೀಹರಿ ಪ್ರಕಾಶನ, ಧಾರವಾಡ.
೩. ಡಾ॥ ಆರ್. ಗೋಪಾಲ್ ಮತ್ತು ಇತರರು (ಅನು) ಎಸ್. ಗುರುರಾಜರಾವ್, **ವಿಜಯನಗರ ಅಧ್ಯಯನ,** ಸಂ.೧೨, ೨೦೦೭, ಪುಟ ೨೫೨
೪. ಡಾ॥ ಆರ್. ಶೇಷಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು,** ೧೯೮೨, ಪುಟ ೧೨೭.
೫. ಸದಾನಂದ ಕನವಳ್ಳಿ (ಅನು) ರಾಬರ್ಟ್‌ಸಿವೆಲ್ (ಮೂಲ) **ಮರೆತು ಹೋದ ಮಹಾಸಾಮ್ರಾಜ್ಯ,** ಕನ್ನಡ ವಿ.ವಿ. ಹಂಪಿ, ಪುಟ ೨೭೭.
೬ ಸೋಮಶೇಖರ, ಎಸ್.ವೈ. **ಹಂಪೆಯ ಬಜಾರುಗಳು,** ಕನ್ನಡ ವಿ.ವಿ. ಹಂಪಿ, ೧೯೯೭. ಪುಟ ೧೩.

## ೪೦

# ಹಿರಿಯೂರು ತಾಲ್ಲೂಕಿನ ಸ್ಮಾರಕ ಶಿಲ್ಪಗಳು

**ಡಾ. ಬಿ. ಸುರೇಶ್***

**ಚಿ**ತ್ರದುರ್ಗ ಜಿಲ್ಲೆಯಾದ್ಯಾಂತ ಕಾಣಸಿಗುವ ಅನೇಕ ರೂಪದ ಐತಿಹಾಸಿಕ ಕುರುಹುಗಳಲ್ಲಿ ಸ್ಮಾರಕಶಿಲ್ಪಗಳು ಪ್ರಮುಖವು. ಪ್ರಾದೇಶಿಕ ಇತಿಹಾಸವನ್ನು ತಿಳಿಯುವಲ್ಲಿ ಇವುಗಳ ಪಾತ್ರ ತುಂಬಾ ಮುಖ್ಯವಾದುದು. ಸ್ಥಳೀಯ ಜನರ ದೈಹಿಕ ಲಕ್ಷಣಗಳು, ವೇಷ ಭೂಷಣಗಳು, ಸಮಾಜ-ಸಂಸ್ಕೃತಿಯನ್ನು ತಿಳಿಯಲು ಇವುಗಳು ಸಹಕಾರಿಯಾಗುತ್ತವೆ. ಇಂದು ರಸ್ತೆಬದಿಗಳಲ್ಲಿ, ಕೆರೆ ಏರಿಗಳ ಮೇಲೆ, ಗ್ರಾಮದ ಹೊರವಲಯಗಳಲ್ಲಿ, ಬಸ್ ನಿಲ್ದಾಣಗಳಲ್ಲಿ ಹೀಗೆ ಇನ್ನಿತರ ಅನೇಕ ಕಡೆಗಳಲ್ಲಿ ಸರ್ವೇ ಸಾಮಾನ್ಯವಗಿ ಇವುಗಳು ಕಂಡುಬರುತ್ತವೆ. ಶಾಲಾ ಆವರಣ, ಗ್ರಾಮದ ಅರಳಿಕಟ್ಟೆ, ದೇವಾಲಯಗಳ ಆವರಣಗಳಲ್ಲಿರುವಂತವುಗಳನ್ನು ಹೊರತುಪಡಿಸಿದರೆ ಬಹುತೇಕವು ಅನಾಥವಾಗಿ ಬಿದ್ದಿರುವಂತೆಯೂ, ನಿರ್ಲಕ್ಷಕ್ಕೆ ಒಳಗಾಗಿರುವಂತೆಯೂ ಭಾಸವಾಗುತ್ತದೆ. ಸ್ಥಳೀಯರಲ್ಲಿ ಅವುಗಳ ಬಗ್ಗೆಯಿರುವ ತಪ್ಪು ಕಲ್ಪನೆಯೇ ಇದಕ್ಕೆ ಕಾರಣ. ಇವುಗಳನ್ನು ಮುಟ್ಟಿದರೆ, ಅಥವಾ ಸ್ಥಳಾಂತರಿಸಿದರೆ ತಮಗೂ ಹಾಗೂ ತಮ್ಮ ಗ್ರಾಮಕ್ಕೂ ಕೇಡುಂಟಾಗುತ್ತದೆ ಎನ್ನುವ ಅಭಿಪ್ರಾಯ ಈಗಲೂ ಗ್ರಾಮೀಣ ಭಾಗದ ಜನರದ್ದಾಗಿದೆ. ಆದರೆ ಇದಕ್ಕೆ ಅಪವಾದವೆನ್ನುವಂತೆ, ಇವುಗಳನ್ನು ಪೂಜಿಸಿದರೆ ಮಕ್ಕಳಾಗುತ್ತವೆ ಎನ್ನುವ ಭಾವನೆಯಿಂದ ಇವುಗಳಿಗೆ ಗುಡಿಗಳನ್ನು ಕಟ್ಟಿ ಪೂಜಿಸುತ್ತಿರುವುದು ಅಪರೂಪಕ್ಕೆ ಕಂಡುಬರುತ್ತದೆ.

ಆರಂಭದಲ್ಲಿ ಕೃತಜ್ಞತಾಪೂರ್ವಕವಾಗಿ ಹುಟ್ಟಿಕೊಂಡ ಈ ಸ್ಮಾರಕಶಿಲ್ಪಗಳು ಕ್ರಮೇಣ ಅದರ ವ್ಯಾಪ್ತಿ ವಿಸ್ತಾರಗೊಂಡು ಮುಂದೆ ನಾನಾ ಕಾರಣಗಳಿಗಾಗಿ ನಿರ್ಮಾಣಗೊಂಡಿರುವುದನ್ನು ಕಾಣುತ್ತೇವೆ. ದೇವಾಲಯಗಳ ಸಮೀಕ್ಷೆಗೆಂದು ನಾನು ಕ್ಷೇತ್ರಕಾರ್ಯ ಕೈಗೊಂಡ ಸಂದರ್ಭದಲ್ಲಿ ಜಿಲ್ಲೆಯಾದ್ಯಂತ ಅನೇಕ ಸ್ಮಾರಕ ಶಿಲ್ಪಗಳು ಗೋಚರಿಸಿದವು. ಅವುಗಳಲ್ಲಿ ಹಿರಿಯೂರು ತಾಲ್ಲೂಕಿನಲ್ಲಿ ಕಂಡುಬಂದ ಕೆಲ ವಿಶಿಷ್ಟ ಅಂಶಗಳಿಂದ ಕೂಡಿದ ಸ್ಮಾರಕ ಶಿಲ್ಪಗಳನ್ನು ಪ್ರಸ್ತುತ ಲೇಖನದಲ್ಲಿ ಚರ್ಚಿಸಲು ಪ್ರಯತ್ನಿಸಿರುತ್ತೇನೆ.

ಚಿತ್ರದುರ್ಗ ತಾಲ್ಲೂಕಿನ ಐಮಂಗಲ ಹೋಬಳಿ ಕೇಂದ್ರದಿಂದ ಯರಬಳ್ಳಿಗೆ ಹೋಗುವ ಮಾರ್ಗದಲ್ಲಿ ತಾಳವಟ್ಟಿ ಎನ್ನುವ ಗ್ರಾಮವಿದೆ. ಗ್ರಾಮದ ವಾಯವ್ಯ ದಿಕ್ಕಿನ ರಸ್ತೆಯ ಎಡಬದಿಯಲ್ಲೇ ಕಂಡುಬರುವ ಕರಿಯಮ್ಮ ಗುಡಿಯು ಮುಂಭಾಗದಲ್ಲಿ ಸ್ಮಾರಕ ಶಿಲ್ಪವೊಂದಿದೆ. ಇದು ತನ್ನ ವಿಶಿಷ್ಟ ಅಂಶಗಳಿಂದ ಗಮನ ಸೆಳೆಯುತ್ತದೆ.



ಶಿಲ್ಪವು ಮೂರು ಹಂತಗಳಲ್ಲಿ ನಿರೂಪಿತಗೊಂಡಿದೆ. ಕೆಳಗಿನ ಹಂತದ ಶಿಲ್ಪ ಎಡಬದಿಯಲ್ಲಿ ಧಗಧಗನೆ ಉರಿಯುತ್ತಿರುವ ಬೆಂಕಿಯ ಕೆನ್ನಾಲಿಗೆಯಲ್ಲಿ ಸತಿ-ಪತಿಯರಿಬ್ಬರು ಮಲಗಿರುವಂತೆ ತೋರಿಸಲಾಗಿದೆ. ಹೀಗೆ ಉರಿಯುತ್ತಿರುವ ಬೆಂಕಿ ಹಾಗು ಬೆಂಕಿಯಲ್ಲಿ ಬಿದ್ದಿರುವ ದಂಪತಿಯರಿಗೆ ಸ್ತ್ರೀಯೊರ್ವಳು ಕೈಮುಗಿಯುತ್ತಿರುವಳು. ಸ್ತ್ರೀಯ ಹಿಂಭಾಗದಲ್ಲಿ ಮತ್ತೊಬ್ಬ ಸ್ತ್ರೀಯನ್ನು ತೋರಿಸಲಾದ್ದು, ಸತಿ-ಪತಿಯರು ಬೆಂಕಿಗೆ ಆಹುತಿಯಾಗುತ್ತಿರುವುದನ್ನು ಸ್ತ್ರೀಯರು ಭಕ್ತಿಪೂರ್ವಕವಾಗಿ ವೀಕ್ಷಿಸುತ್ತಿರುವಂತಿದೆ. ಪುರುಷನು ಯಾವುದೋ ಕಾರಣಗಳಿಂದ ತೀರಿಕೊಂಡಿದ್ದು ಆತನನ್ನು ದಹಿಸುತ್ತಿರುವ ಸಂದರ್ಭದಲ್ಲಿ ಮಹಿಳೆಯು ತನ್ನ ವೇದನೆಯನ್ನು ತಾಳಲಾಗದೆ, ಅಥವಾ ತನ್ನ ಪತಿಯಿಲ್ಲದ ಮುಂದಿನ ಜೀವನವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾಗದೆ ಚಿತೆಗೆ ಹಾರುತ್ತಿರುವಂತೆ ನಿರೂಪಿತಗೊಂಡಿದೆ.

* ಸಹಾಯಕ ಪ್ರಾಧ್ಯಾಪಕರು, ಸ್ನಾತಕೋತ್ತರ ಇತಿಹಾಸ ವಿಭಾಗ, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ-೫೭೭೫೦೧.





ಕೂದಲಿಗೆ ಬಟ್ಟೆಯನ್ನು ಕಟ್ಟಿರುವನು. ಕೂದಲಿನಲ್ಲಿ ಆಧುನಿಕವಾಗಿ ಎಣೆದ ರೀತಿಯ ಉದ್ದನೆಯ ಜಡೆಯನ್ನು ತೋರಿಸಲಾಗಿದ್ದು ಜಡೆಯ ತುದಿಯಲ್ಲಿ ಗಂಟನ್ನು (ಆಧುನಿಕ ರಿಬ್ಬನ್?) ಹಾಕಿದಂತಿದೆ. ಈ ರೀತಿ ಜಡೆಯನ್ನು ಹಾಕಿರುವ ವೀರನನ್ನು ತೋರಿಸಿರುವುದೂ ಸಹ ಅಪರೂಪವೇ ಸರಿ. ಆದರೆ ಹಿರಿಯೂರು ತಾಲ್ಲೂಕಿನಲ್ಲಿ ಈ ರೀತಿಯ ಇನ್ನೂ ಹತ್ತಾರು ವೀರಗಲ್ಲುಗಳು ಕಂಡುಬರುತ್ತವೆ. ವೀರನು ತನ್ನ ಸೊಂಟಕ್ಕೆ ವಸ್ತ್ರವನ್ನು ಕಟ್ಟಿರುವನು, ಕಿವಿಯಲ್ಲಿ ಆಭರಣ ಧರಿಸಿರುವನು. ಕೊರಳಲ್ಲಿ ಎರಡು ಹಾರಗಳಿವೆ, ಕೈ ಕಾಲುಗಳಿಗೂ ಆಭರಣ ಧರಿಸಿರುವನು, ಈತನ ವೇಷ-ಭೂಷಣಗಳನ್ನು ಗಮನಿಸಿದರೆ, ಈತನೊಬ್ಬ ಬುಡಕಟ್ಟು ಸಂಪ್ರದಾಯದ ವೀರನಂತಿದೆ. ಪ್ರಸ್ತುತ ಈ ಪರಿಸರದಲ್ಲಿ ಬುಡಕಟ್ಟು ಜನಾಂಗದವರೇ ಹೆಚ್ಚಿಗಿರುವುದೂ ಇದಕ್ಕೆ ಪುಷ್ಠಿ ನೀಡುತ್ತದೆ. ಶಿಲ್ಪದ ಕಾಲಮಾನ ಸುಮಾರು ಕ್ರಿ.ಶ. ೧೫-೧೬ನೇ ಶತಮಾನ.

ಎರಡನೆ ದೃಶ್ಯದಲ್ಲಿ ಸತಿಯನ್ನು ಇಬ್ಬರು ಹಾಗು ಪತಿಯನ್ನು ಇಬ್ಬರು ಅಪ್ಸರೆಯರು ತಮ್ಮ ಭುಜದ ಮೇಲೆ ಹಾಕಿಕೊಂಡು ಸ್ವರ್ಗಕ್ಕೆ ಕರೆದೊಯ್ಯುತ್ತಿರುವರು. ಮೂರನೇ ದೃಶ್ಯದಲ್ಲಿ ಸತಿಪತಿಯರು ಸ್ವರ್ಗದಲ್ಲಿ ಅರ್ಧಪದ್ಮಾಸನದಲ್ಲಿ ಕುಳಿತಿರುವರು. ಬದಿಗಳಲ್ಲಿ ಚಾಮರಧಾರಿಯರಿರುವರು. ಶಿಲ್ಪದ ಮೇಲ್ಭಾಗದಲ್ಲಿ ಶಿವಲಿಂಗ, ನಂದಿಯ ಉಬ್ಬು ಶಿಲ್ಪಗಳಿವೆ.

ಪ್ರಸ್ತುತ ಶಿಲ್ಪದಲ್ಲಿ ಪುರುಷನು ಯಾವ ಕಾರಣಕ್ಕಾಗಿ ತೀರಿಕೊಂಡಿದ್ದಾನೆ. ಎನ್ನುವುದು ತಿಳಿಯುತ್ತಿಲ್ಲ. ಇಲ್ಲಿ ಸತಿಯು ತನ್ನ ಪತಿಯೊಂದಿಗೇ ಚಿತೆಗೆ ಹಾರಿರುವ ದೃಶ್ಯವನ್ನು ತೋರಿಸಿರುವುದು ತುಂಬಾ ಅಪರೂಪವೆನಿಸುತ್ತದೆ. ದಂಪತಿಯರ ಹಾಗು ಅಪ್ಸರೆಯರ ವೇಷ-ಭೂಷಣವೂ ಸಹ ಗಮನಸೆಳೆಯುತ್ತದೆ.

ಬಿದರಕೆರೆ ಗ್ರಾಮದ ಸಿದ್ದೇಶ್ವರ ದೇವಾಲಯದ ಆವರಣದಲ್ಲಿ ಒಟ್ಟು ನಾಲ್ಕು ವೀರಗಲ್ಲುಗಳಿವೆ. ಅವುಗಳಲ್ಲಿ ಒಂದು ಶಿಲ್ಪವು ತುಂಬಾ ಆಕರ್ಷಣೀಯವಾಗಿದೆ ಪ್ರಸ್ತುತ ಶಿಲ್ಪದಲ್ಲಿ ವೀರನೊಬ್ಬನನ್ನೇ ತೋರಿಸಲಾಗಿದೆ. ಈತನು ತನ್ನ ಬಲಗೈಯಲ್ಲಿ ಉದ್ದನೆಯ ಕತ್ತಿ ಹಿಡಿದಿರುವನು. ಎಡಗೈಯಲ್ಲಿ ಒಂದು ರೀತಿಯ ಬಳ್ಳಿಯನ್ನು ಹಿಡಿದಿರುವನು. ತಲೆಯ



ಇದೇ ಗ್ರಾಮದಲ್ಲಿರುವ ಮತ್ತೊಂದು ಶಿಲ್ಪವು ತನ್ನ ವಿಶಿಷ್ಟ ಅಂಶಗಳಿಂದ ಗಮನ ಸೆಳೆಯುತ್ತದೆ. ಪ್ರಸ್ತುತ ಶಿಲ್ಪದಲ್ಲಿ ವೀರ ಹಾಗು ಸತಿಯನ್ನ ತೋರಿಸಲಾಗಿದೆ. ಶಿಲ್ಪದ ವಿಶೇಷತೆಯೆಂದರೆ ವೀರನನ್ನು ಟಗರಿನ? ಮೇಲೆ ಕುಳಿತಿರುವಂತೆ ತೋರಿಸಿರುವುದು. ಸಾಮಾನ್ಯವಾಗಿ ವೀರನನ್ನು ಶಿಲ್ಪಗಳಲ್ಲಿ ಕುದುರೆ/ಆನೆಗಳ ಮೇಲೆ ತೋರಿಸಲಾಗಿರುತ್ತದೆ. ಆದರೆ ಇಲ್ಲಿ ಟಗರಿನ ಮೇಲೆ ವೀರನನ್ನು ತೋರಿಸಲಾಗಿದೆ. ವೀರನು ತನ್ನ ಎಡಗೈಯಲ್ಲಿ ಟಗರಿನ ಹಗ್ಗವನ್ನು, ಬಲಗೈಯಲ್ಲಿ ಕತ್ತಿಯನ್ನು ಹಿಡಿದಿರುವನು. ವಸ್ತ್ರಾಭರಣ ಭೂಷಿತನಾದ ಈತನು ತನ್ನ ತಲೆಯ ಕೂದಲನ್ನು ತುರುಬಿನಂತೆ ಕಟ್ಟಿ ಅಲಂಕರಿಸಿಕೊಂಡಿರುವನು. ತುರುಬಿನಿಂದ ಕೆಳಗೆ ಜಡೆಯನ್ನು ಹೆಣೆಯಲಾಗಿದ್ದು ತುದಿಯಲ್ಲಿ ರಿಬ್ಬನ್ ಹಾಕಲಾಗಿದೆ. ಟಗರನ್ನು ಅಲಂಕೃತಗೊಳಿಸಲಾಗಿದ್ದು, ಉದ್ದನೆಯ ಎರಡು ಕೊಂಬುಗಳನ್ನು ಇಳಿಬಿದ್ದಿರುವಂತೆ ತೋರಿಸಲಾಗಿದೆ. ಬಾಲವು ಚಿಕ್ಕದಾಗಿದೆ. ವೀರನ ಹಿಂಬದಿಯಲ್ಲಿ ನಿಂತಿರುವ ಸತಿಯು ಬಲಗೈಯಲ್ಲಿ ನಿಂಬೆ ಹಣ್ಣನ್ನು ಮೇಲಕ್ಕೆ ಎತ್ತಿ ನಿಂತಿರುವಳು. ತನ್ನ ಎಡಗೈಯಲ್ಲಿ ದರ್ಪಣವನ್ನಿಡಿದು ಕೆಳಗೆ ಇಳಿಬಿಟ್ಟಿರುವಳು. ಸತಿಯು ಸಹ ವಸ್ತ್ರಾಭರಣ ಭೂಷಿತೆಯಾಗಿರುವಳು. ಕೂದಲನ್ನು ತುರುಬಿನ ರೀತಿಯಲ್ಲಿ ಕಟ್ಟಿಕೊಂಡಿದ್ದು ಕೇದಗೆ ಹೂವಿನಿಂದ ಸಿಂಗರಿಸಿಕೊಂಡಿರುವಳು.

ಕಂದಿಕೆರೆಯಲ್ಲಿ ಒಟ್ಟು ನಾಲ್ಕು ವೀರಗಲ್ಲುಗಳಿದ್ದು ಅವುಗಳಲ್ಲಿ ಶಾಸನೋಕ್ತ ವೀರಗಲ್ಲೊಂದು ಗಮನಸೆಳೆಯುತ್ತದೆ. ಗ್ರಾಮದ ದಕ್ಷಿಣಕ್ಕಿರುವ ವೀರಚನ್ನಪ್ಪ ಗುಡಿಯಲ್ಲಿ ಪ್ರಸ್ತುತ ವೀರಗಲ್ಲಿದೆ. ಈ ಶಿಲ್ಪದ ಪೀಠದಲ್ಲಿ ಹಂಸ ಮತ್ತು ವರಾಹದ ಉಬ್ಬುಶಿಲ್ಪಗಳಿರುವುದು ಆಶ್ಚರ್ಯದ ಸಂಗತಿ. ಹಲವಾರು ಹಂತಗಳಲ್ಲಿ ನಿರೂಪಿತಗೊಂಡಿರುವ ಸ್ಮಾರಕ ಶಿಲ್ಪಗಳಿಗೆ ಸಾಮಾನ್ಯವಾಗಿ ಪೀಠಗಳಿರುವುದಿಲ್ಲ. ಮೂಲ ಪೀಠದ ಮೇಲೆ ಬೇರಿನ್ನಾವುದೋ ಶಿಲ್ಪವಿದ್ದಿರಬೇಕೆನಿಸುತ್ತದೆ. ಆದರೆ ನಂತರದ ದಿನಗಳಲ್ಲಿ ಅದೇ ಪೀಠದ ಮೇಲೆ ಎರಡು ಹಂತಗಳಲ್ಲಿರುವ ಪ್ರಸ್ತುತ ವೀರಗಲ್ಲು ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ.

ವೀರನು ಕುದುರೆಯ ಮೇಲೆ ಯುದ್ಧ/ಕಾಳಗಕ್ಕೆ ಹೊರಟಂತೆ ತುಂಬ ಅಮೋಘವಾಗಿ ಚಿತ್ರಿಸಲಾಗಿದೆ. ವೀರನು ತನ್ನ ಎಡಕೈಯಲ್ಲಿ ಕುದುರೆಯ ಜೀನನ್ನು, ಬಲಗೈಯಲ್ಲಿ ಉದ್ದನೆಯ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿರುವನು. ವೀರನು ಕಂಠಹಾರ, ಕೇಯೂರ, ಕಿಂಕಣಿ, ತೋಳ್ಬಂದಿ, ಕರ್ಣಕುಂಡಲ ಇತ್ಯಾದಿ ಆಭರಣಗಳಿಂದ ಅಲಂಕೃತಗೊಂಡಿದ್ದು ತಲೆಗೆ ಪೇಟವನ್ನು ಹಾಗು ತನ್ನ ಉದ್ದನೆಯ ಕೂದಲನ್ನು ತುರುಬಿನೋಪಾದಿಯಲ್ಲಿ ಕಟ್ಟಿಕೊಂಡಿರುವನು. ಮೇಲಿನ ದೃಶ್ಯದಲ್ಲಿ ಲಿಂಗ ಹಾಗೂ ಅಭಿಮುಖವಾಗಿ ಕುಳಿತಿರುವ ನಂದಿಯ ಉಬ್ಬುಶಿಲ್ಪಗಳು ಹಾಗೂ ಅವುಗಳ ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಶಿಲ್ಪಗಳನ್ನು ಕಂಡರಿಸಲಾಗಿದೆ.

ಶಿಲ್ಪದ ಮೇಲೆ ಎತೇಚ್ಛವಾಗಿ ಎಣ್ಣೆ ಹಾಕಿರುವುದರಿಂದ ಪ್ರಭಾವಳಿರೂಪದ ಪಟ್ಟಿಕೆ ಹಾಗೂ ಮಧ್ಯ ಪಟ್ಟಿಕೆಯಲ್ಲಿರುವ ಶಾಸನ ಸೂಕ್ಷ್ಮವಾಗಿ ಗಮನಿಸದ ಹೊರತು ತಕ್ಷಣವೇ ಕಂಡುಬರುವುದಿಲ್ಲ. ಪ್ರಭಾವಳಿಯ ಪಟ್ಟಿಕೆಯಲ್ಲಿ, ಶುಭಮಸ್ತು ನಮಸ್ತುಂಗ ಎನ್ನುವ ಶೈವ ಶ್ಲೋಕದಿಂದ ಶಾಸನವು ಆರಂಭಗೊಂಡು ಎರಡು ಸಾಲುಗಳಲ್ಲಿ ಕೊರೆಯಲ್ಪಟ್ಟಿದೆ. ನಂತರ ಮಧ್ಯದ ಪಟ್ಟಿಕೆಯಲ್ಲಿ ಮುಂದುವರೆದು ಮೂರು ಸಾಲುಗಳಲ್ಲಿ ಕೊರೆಯಲ್ಪಟ್ಟಿದೆ. ಒಟ್ಟು ಐದು ಸಾಲುಗಳಲ್ಲಿರುವ ಈ ಶಾಸನದ ಕಾಲಮಾನ ಕ್ರಿ.ಶ. ೧೫೪೮. ಸ್ಥಳೀಯರು ಈ ಶಿಲ್ಪವನ್ನು ವೀರ ಚೆನ್ನಪ್ಪನೆಂದೇ ಪೂಜಿಸುತ್ತಿರುವರು.

ಶಾಸನದಲ್ಲಿ ಉಲ್ಲೇಖಗೊಂಡಿರುವ ಕಂದಿಕೆರೆ ಗ್ರಾಮವು ಹರತಿನಾಯಕರ ಆಡಳಿತದ ವ್ಯಾಪ್ತಿಯಲ್ಲಿದ್ದ ಪ್ರದೇಶವಾಗಿದ್ದಿತು. ಗ್ರಾಮದ ತಳವಾರಿಕೆ ವೃತ್ತಿಯನ್ನು ಮಾಡುತ್ತಿದ್ದ ಚನ್ನಿನಾಯಕನು ತುರಗ ಕಾಳಗದಲ್ಲಿ ಮಡಿದಿದ್ದುರ ಪರಿಣಾಮವಾಗಿ ಆತನ ಜ್ಞಾಪಕಾರ್ಥವಾಗಿ ಪ್ರಸ್ತುತ ಸ್ಮಾರಕವನ್ನು ಪ್ರತಿಷ್ಠಾಪಿಸಲಾಗಿದೆ. ಶಾಸನದಲ್ಲಿ ಉಲ್ಲೇಖಿಸಿರುವಂತೆ ತಳವಾರಿಕೆ ವೃತ್ತಿಯನ್ನು ನಾಯಕ ಜಾತಿಯವರು ಮಾಡುತ್ತಿದ್ದರು. ಈ ರೀತಿಯ ವಿವರಗಳು ಇದೇ ಪರಿಸರದ ಇನ್ನೂ ಹಲವಾರು ಶಾಸನಗಳಿಂದ ತಿಳಿದುಬರುತ್ತದೆ. ಹಾಗೆಯೇ ತಳವಾರಿಕೆ ವೃತ್ತಿಯು ವಂಶಪಾರಂಪರ್ಯವಾಗಿದ್ದುದೂ ಸಹ ಪ್ರಸ್ತುತ ಶಾಸನದಿಂದ ತಿಳಿದುಬರುತ್ತದೆ. ಇದಕ್ಕೆ ಪೂರಕವಾಗಿ ಇಂದಿಗೂ ಈ ಭಾಗದಲ್ಲಿ ನಾಯಕ ಜಾತಿಯವರು ತಳವಾರಿಕೆ ವೃತ್ತಿಯನ್ನು ಮಾಡುತ್ತಿರುವುದು ಕಂಡುಬರುತ್ತದೆ.

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕು ಪ್ರದೇಶವು ಐತಿಹಾಸಿಕವಾಗಿ ಶ್ರೀಮಂತವಾಗಿದೆ ಮೇಲೆ ಚರ್ಚಿಸಿದ ಅಪರೂಪದ ಸ್ಮಾರಕಶಿಲ್ಪಗಳ ಜೊತೆಗೆ ಇನ್ನು ಸಾಕಷ್ಟು ಸಂಖ್ಯೆಯ ಶಿಲ್ಪಗಳನ್ನು ಇಲ್ಲಿ ನೋಡಬಹುದು. ತಾಲ್ಲೂಕಿನ ಸಿಡ್ಲಯ್ಯನಕೋಟೆ, ಚಿಲ್ಲಹಳ್ಳಿ, ಧರ್ಮಪುರ, ಹರತಿಕೋಟೆ, ಬಬ್ಬೂರು, ದೇವಿಗೆರೆ, ಜವನಗೊಂಡನಹಳ್ಳಿ, ತವಂದಿ, ಉಡುವಳ್ಳಿ, ಹಿರಿಯೂರು, ಐಮಂಗಲ, ಗುಯಿಲಾಳು, ಮೇಟಿಕುರ್ಕೆ, ವದ್ದೀಕೆರೆ ಇತ್ಯಾದಿ ಗ್ರಾಮಗಳಲ್ಲಿ ಸ್ಮಾರಕ ಶಿಲ್ಪಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವೇ ಕೆಲವು ರಕ್ಷಿತ ಶಿಲ್ಪಗಳನ್ನು ಹೊರತುಪಡಿಸಿದರೆ, ಉಳಿದವುಗಳಿಗೆ ಸಂರಕ್ಷಣೆಯ ಅವಶ್ಯಕತೆಯಿದೆ. ಸ್ಥಳೀಯ ಜನರಿಗೆ ಅವುಗಳ ಮಹತ್ವ ತಿಳಿಯದಿರುವದೇ ಅವುಗಳ ಈ ಸ್ಥಿತಿಗೆ ಕಾರಣ. ಅವುಗಳು ಕೇವಲ ನಿರ್ಜೀವ ವಸ್ತುಗಳಾಗಿರದೆ, ಅವುಗಳಿಗೂ ಜೀವವಿದೆ ಎನ್ನುವುದನ್ನು ತಿಳಿಯಹೇಳಬೇಕಿದೆ. ಅವುಗಳು ಸಮಕಾಲೀನ ಸಮಾಜ, ಸಂಸ್ಕೃತಿ ಮತ್ತು ಜನಾಂಗೀಯ ವಿವರಗಳನ್ನು ನೀಡುವ ಪ್ರಮುಖ ಆಕರಗಳಾಗಿದ್ದು ಅವುಗಳಿರುವುದರಿಂದಲೇ ಈ ಪ್ರದೇಶಕ್ಕೆ ಐತಿಹಾಸಿಕ ಮಹತ್ವವಿದೆ ಎನ್ನುವ ಅರಿವನ್ನು ಮೂಡಿಸುವ ಅಗತ್ಯವಿದೆ.

[ಕ್ಷೇತ್ರಕಾರ್ಯ ಸಂದರ್ಭದಲ್ಲಿ ನನ್ನೊಂದಿಗಿದ್ದು ಸಹಕರಿಸಿದ ಸಹೋದರಿ ಡಾ. ಬಿ. ಜಯಮ್ಮ ಹಾಗು ವಿದ್ಯಾರ್ಥಿ ಮಿತ್ರ ಮಹೇಶ ಎಂ ಅವರಿಗೆ ಕೃತಜ್ಞತೆಗಳು].

## ಆಧಾರಸೂಚಿ

೧. ಡಾ. ಆರ್. ಶೇಷಶಾಸ್ತ್ರಿ., **ಕರ್ನಾಟಕದ ವೀರಗಲ್ಲುಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೪.

೨. ಡಾ. ಬಿ. ಸುರೇಶ., **ಚಿತ್ರದುರ್ಗ-ದಾವಣಗೆರೆ ಜಿಲ್ಲೆಗಳ ದೇವಾಲಯಗಳು**, ಸಂಶೋಧನಾ ಪ್ರಕಾಶನ, ಬಾಲೇನಹಳ್ಳಿ, ಚಿತ್ರದುರ್ಗ ಜಿಲ್ಲೆ, ೨೦೦೮.

೩. ಎಸ್.ಕೆ. ರಾಮಚಂದ್ರರಾವ್., **ಮೂರ್ತಿ ಶಿಲ್ಪ ನೆಲೆ-ಹಿನ್ನೆಲೆ**, ಬೆಂಗಳೂರು, ವಿ.ವಿ. ಬೆಂಗಳೂರು, ೧೯೭೪.

೪. ಟಿ.ಎ. ಗೋಪಿನಾಥರಾವ್., **ದ ಎಲಿಮೆಂಟ್ಸ್ ಆಫ್ ಹಿಂದೂ ಐಕನೋಗ್ರಫಿ**, ಸಂ. ೧, ಭಾಗ-೨, ೧೯೯೭.



# ಕಾಲಗರ್ಭದಲ್ಲಿ ಲೀನವಾದ ರಾಯಚೂರು ಹನುಮಾನ ಮಂದಿರದ ಭಿತ್ತಿ ಚಿತ್ರಗಳು

ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ*

ರಾಯಚೂರು; ಹೈದರಾಬಾದ ನಿಜಾಮ್ ರಾಜ್ಯದ ಆಡಳಿತಕ್ಕೂ ಒಳಪಟ್ಟ ಈ ನಗರದಲ್ಲಿ ಅದೆಷ್ಟೋ ಸ್ಮಾರಕಗಳು (ಮಠ-ಮಂದಿರ ಹಾಗೂ ಶ್ರೀಮಂತರ ಮನೆಗಳು) ನಿರ್ಮಿಸಲ್ಪಟ್ಟವು. ಕೆಲವೊಂದು ಸ್ಮಾರಕಗಳಲ್ಲಿ ಚಿತ್ರರಚನೆ ಮಾಡಲಾಗಿದ್ದ ರಿಂದ ಇವು ಕರ್ನಾಟಕದ ಪ್ರಾಚೀನ ಭಿತ್ತಿ ಚಿತ್ರಗಳುಳ್ಳ ನೆಲೆಗಳೆಂದೂ ಗುರುತಿಸಿಕೊಂಡಿವೆ. ಕಿಲ್ಲೆ ಬೃಹನ್ಮಠ,[೧] ಮಡ್ಡಿಪೇಟೆಯ ಶ್ರೀ ಹನುಮಾನ ಮಂದಿರ ಹಾಗೂ ಶ್ರೀ ಖಾಜನಗೌಡರ ಮನೆಗಳನ್ನು ಇಲ್ಲಿ ಪ್ರಮುಖವಾಗಿ ಹೆಸರಿಸಬಹುದು.

ರಾಯಚೂರು ನಗರದ ಹೃದಯಭಾಗವಾದ ಸೋಮವಾರಪೇಟೆಯ (ಈ ಸ್ಥಳವನ್ನು ಮಡ್ಡಿಪೇಟೆ ಎಂತಲೂ ಕರೆಯಲಾಗುತ್ತದೆ) ಖಾಜನಗೌಡರ ಮನೆಯ ಹತ್ತಿರದಲ್ಲೇ ಹನುಮಾನ ಮಂದಿರವಿರುವುದು. ಖಾಜನ ಗೌಡರ ಮನೆ ನಿರ್ಮಾಣದ ನಂತರದಲ್ಲಿ ಕಟ್ಟಲ್ಪಟ್ಟದ್ದೆಂದು ಹೇಳಲಾಗುವ ಈ ದೇವಾಲಯದ ಒಳಮಾಳಿಗೆ, ಭುವನೇಶ್ವರಿ ಹಾಗೂ ಕಲ್ಲಿನ ತೊಲೆಗಳ ಮೇಲೆ ರಾಮಾಯಣ, ಮಹಾಭಾರತ ಸನ್ನಿವೇಶದ ಚಿತ್ರಗಳೊಂದಿಗೆ ಪ್ರಾಣಿ-ಪಕ್ಷಿಗಳು, ಅಲಂಕಾರಿಕ ವಿನ್ಯಾಸಗಳು ಚಿತ್ರಣಗೊಂಡಿವೆ. ಒಂದೊಮ್ಮೆ ದೇವಾಲಯದ ಗೋಡೆಗಳ ಮೇಲೂ ಚಿತ್ರಗಳಿದ್ದವೆಂದು ಪ್ರತ್ಯಕ್ಷದರ್ಶಿಗಳು ಹೇಳುತ್ತಾರೆ.

ಎತ್ತರವಾದ ಕಟ್ಟೆಯ ಮೇಲೆ ಕಟ್ಟಲ್ಪಟ್ಟ ಈ ದೇವಾಲಯ ದಕ್ಷಿಣಾಭಿಮುಖವಾಗಿದ್ದು, ಮುಖಮಂಟಪ ಹಾಗೂ ಗರ್ಭಗೃಹ ಹೊಂದಿದೆ. ಮುಖಮಂಟಪದ ನಡುವೆ ನಾಲ್ಕು ಕಂಬಗಳುಳ್ಳ ಅಂಕಣವಿದೆ. ಈ ಅಂಕಣದಲ್ಲಿನ ನಾಲ್ಕು ಕಂಬಗಳು ಹಾಗೂ ಗೋಡೆಗಳಲ್ಲಿನ ಕಂಬಗಳು ಸೇರಿದಂತೆ ಒಟ್ಟು ಹದಿನಾರು ಕಂಬಗಳನ್ನು ಈ ಮುಖಮಂಟಪ ಹೊಂದಿದೆ. ಈ ಕಂಬಗಳಲ್ಲಿ ಯಾವುದೇ ರೀತಿಯ ಕುಸುರಿ ಕೆತ್ತನೆಯು ಕಂಡುಬರುವುದಿಲ್ಲ. ಒಂದು ಕಂಬದಿಂದ ಇನ್ನೊಂದು ಕಂಬಕ್ಕೆ ಆಸರೆಯಾಗಿ ಒಟ್ಟು ಇಪ್ಪತ್ನಾಲ್ಕು ತೊಲೆಗಳನ್ನು ಜೋಡಿಸಿದೆ. ಹಾಗಾಗಿ ಈ ತೊಲೆಗಳು ಮುಖಮಂಟಪವನ್ನು ಒಟ್ಟು ಒಂಭತ್ತು ಅಂಕಣಗಳಂತೆ ವಿಭಾಗಿಸುತ್ತದೆ.

ಪ್ರತಿಯೊಂದು ಅಂಕಣದಲ್ಲಿ ಹಾಗೂ ತೊಲೆಗಳ ಮೂರೂ ಬದಿಯಲ್ಲಿ ವರ್ಣಚಿತ್ರಗಳಿವೆ. ಮಧ್ಯದ ಅಂಕಣ ಹಾಗೂ ನಾಲ್ಕೂ ಮೂಲೆಗಳಲ್ಲಿನ ಅಂಕಣಗಳ ಮಧ್ಯೆ ಸುಂದರವಾದ ಭುವನೇಶ್ವರಿಯ ಕೆತ್ತನೆಯಿದ್ದು, ಈ ಕೆತ್ತನೆಯ ಮೇಲೆ ಹಳದಿ ವರ್ಣದ ಹಿನ್ನೆಲೆಯಲ್ಲಿ ಹಸಿರು, ಕೆಂಪು ಹಾಗೂ ನೀಲಿ ವರ್ಣಗಳಿಂದ ನವಿಲು, ಗಿಳಿ-ಗೊರವಂಕ ಇತ್ಯಾದಿ ಪಕ್ಷಿಗಳ ಚಿತ್ರಗಳೊಂದಿಗೆ ಸುಂದರವಾದ ನಕ್ಷಾಚಿತ್ರಗಳನ್ನು ಬಿಡಿಸಿದೆ. ಇನ್ನುಳಿದ ಅಂಕಣಗಳಲ್ಲಿ ಭುವನೇಶ್ವರಿಯ ಕೆತ್ತನೆ ಕಂಡುಬರುವುದಿಲ್ಲವಾದರೂ, ನೀಲಿ, ಹಳದಿ ಹಾಗೂ ಕೆಂಪು ವರ್ಣಗಳ ನಕ್ಷಾವಿನ್ಯಾಸದ (ಸುರಪುರ ಚಿತ್ರಕಲೆಯ ಭಾವಚಿತ್ರ ರಚನೆಯಲ್ಲಿ ಕಂಡುಬರುವ ನೆಲಹಾಸು ವಿನ್ಯಾಸವನ್ನು ಹೋಲುತ್ತದೆ) ಚಿತ್ರಣವಿದೆ. ಹಾಗೆಯೇ ಕಲ್ಲಿನ ತೊಲೆಗಳ ಮೂರೂ ಬದಿಯಲ್ಲಿ ಸಮುದ್ರ ಮಂಥನ, ಅಶ್ವಮೇಧಯಾಗ ಕುದುರೆಯನ್ನು ಕಟ್ಟಿ ಹಾಕುವುದು, ಸೀತಾ ಸ್ವಯಂವರ, ಲವ-ಕುಶ, ಯುದ್ಧದ ಸನ್ನಿವೇಶ ಮೊದಲಾದ ಚಿತ್ರಗಳಿವೆ. ಪ್ರತಿಯೊಂದು ವಿಷಯದ ಚಿತ್ರಗಳಲ್ಲಿ ದೇವತಾ ಪುರುಷರನ್ನು ತೆಲುಗು ಅಕ್ಷರಗಳಲ್ಲಿ ಬರೆಯಲಾಗಿದ್ದು ವಿಶೇಷ.

ಈ ದೇವಾಲಯದ ಗರ್ಭಗೃಹದಲ್ಲಿನ ಆಂಜನೇಯ ಸ್ವಾಮಿ ವಿಗ್ರಹವು (ಶಿಲಾ ಮಾಧ್ಯಮದ) ಐದು ಅಡಿ ಎತ್ತರದಲ್ಲಿದ್ದು, ಸುಂದರವಾಗಿದೆ. ಗರ್ಭಗೃಹ ದ್ವಾರದ ಮೇಲಿನ ಶಿಲಾಪಟ್ಟಿಕೆಯಲ್ಲಿ ಏಳು ಹೆಡೆಗಳುಳ್ಳ ಆದಿಶೇಷನ ಮೇಲೆ ವಿಷ್ಣು ಪವಡಿಸಿದ್ದಾನೆ. ಶ್ರೀದೇವಿ ಹಾಗೂ ಭೂದೇವಿಯರು ವಿಷ್ಣುವಿನ ಪಾದಸೇವೆಯಲ್ಲಿ ನಿರತರಾಗಿದ್ದಾರೆ. ವಿಷ್ಣುವಿನ ನಾಭಿಯಿಂದ ಜನಿಸಿದ ಬ್ರಹ್ಮನು ಕಮಲದಲ್ಲಿ ವಿರಾಜಮಾನ ನಾಗಿದ್ದಾನೆ. ಶೇಷಶಾಯಿ ವಿಷ್ಣುವಿನ ಎರಡೂ ಕಡೆ ಗರುಡ ಹಾಗೂ ಆಂಜನೇಯರು ಕೈಮುಗಿಯುತ್ತ ನಿಂತಿರುವರು.

* ಅಧ್ಯಾಪಕರು, ದೃಶ್ಯಕಲಾ ಅಧ್ಯಯನ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ-೫೮೫೧೦೬.

ಇದೊಂದು ಉಬ್ಬುಮಾದರಿಯ ಕೆತ್ತನೆಯಾಗಿದ್ದು, ಈ ಕೆತ್ತನೆಯ ಮೇಲೆ ವರ್ಣಲೇಪನ ಮಾಡಲಾಗಿದೆ. ಹಾಗೆಯೇ ಈ ಶಿಲಾಪಟ್ಟಿಕೆಯ ಮೇಲ್ಭಾಗದಲ್ಲಿ ಸೂರ್ಯ ಹಾಗೂ ಚಂದ್ರರನ್ನು ವರ್ಣದಿಂದ ಚಿತ್ರಿಸಿದೆ. ಇದಿಷ್ಟು ದೇವಾಲಯದೊಳಗಿನ ವಿನ್ಯಾಸದ ಚಿತ್ರಣ. ಈ ದೇವಾಲಯ ಮುಖಮಂಟಪದ ಹೊರಭಾಗದ ಮೇಲ್ಬದಿಯಲ್ಲಿ, ಎದುರಿಗೆ ಸುಂದರವಾದ ಕಮಾನಿನ ವಿನ್ಯಾಸವಿದ್ದು, ಈ ಕಮಾನಿನೊಳಗೆ ರಾಮ-ಸೀತೆ, ಲಕ್ಷ್ಮಣ ಹಾಗೂ ಆಂಜನೇಯನ ಗಾರೆಶಿಲ್ಪಗಳಿವೆ. ಈ ಶಿಲ್ಪಗಳ ಮೇಲೂ ವರ್ಣಲೇಪನ[೨] ಮಾಡಲಾಗಿದೆ.

ಶ್ರೀ ಹನುಮಾನ ಮಂದಿರದ ಕಟ್ಟಡ ನಿರ್ಮಾಣ ಹಾಗೂ ಅಲ್ಲಿನ ಚಿತ್ರಗಳ ರಚನೆ ಕುರಿತಂತೆ ಐತಿಹಾಸಿಕ ಹಿನ್ನೆಲೆ ಮತ್ತು ಸ್ಥಳೀಯರ ಅಭಿಪ್ರಾಯಗಳಿವೆ. ಕ್ರಿ.ಶ. ೧೮೫೭-೫೮ರ ಸ್ವಾತಂತ್ರ್ಯ ಸಂಗ್ರಾಮದ ಬಳಿಕ ನಾಡಿನ ವಿವಿಧ ಸಂಸ್ಥಾನಿಕರ ಆಶ್ರಯದಲ್ಲಿದ್ದ ಕಲಾವಿದ ಕುಟುಂಬಗಳು ನಿರಾಶ್ರಿತರಾದವು. ಈ ವೇಳೆ ಕೆಲವೊಂದು ಕುಟುಂಬಗಳು ಶ್ರೀಮಂತ ವ್ಯಕ್ತಿಗಳು ಇಲ್ಲವೆ ಮಠಾಧೀಶರ ಆಶ್ರಯ ಪಡೆಯು ವುದರ ಮೂಲಕ ತಮ್ಮ ನೆಲೆಯನ್ನು ಕಂಡು ಕೊಳ್ಳುತ್ತವೆ. ಈ ಹಂತದಲ್ಲೇ ಪ್ರಸ್ತುತ ಹನುಮಾನ ಮಂದಿರದಲ್ಲಿ ಚಿತ್ರಗಳನ್ನು ಬರೆಯಿಸಲಾಗಿದೆ ಎಂದು ಹೇಳಲಾಗುತ್ತದೆ. ಶಿಷ್ಟ ಸಂಪ್ರದಾಯದ ಈ ಚಿತ್ರಗಳನ್ನು ಖಾಜನಗೌಡರೇ ಬರೆಯಿಸಿದ್ದಾರೆಂದು ಇಲ್ಲಿನ ಜನರ ಅಂಬೋಣ. ಅಷ್ಟು ಮಾತ್ರವಲ್ಲ ಹನುಮಾನ ಮಂದಿರ ನಿರ್ಮಾಣಗೊಳ್ಳಲೂ ಖಾಜನಗೌಡರೇ ಕಾರಣ ಎಂದು ಹೇಳಲಾಗುತ್ತದೆ. ಬಹುಶಃ ಖಾಜನಗೌಡರ ಮನೆಯಲ್ಲೂ ಸಾಕಷ್ಟು ಭಿತ್ತಿ ಚಿತ್ರಗಳಿರುವ ಕಾರಣ ಈ ಮೇಲಿನ ಅಭಿಪ್ರಾಯ ಮೂಡಿರಲು ಸಾಧ್ಯ ಎಂದು ತರ್ಕಿಸಲು ಇಲ್ಲಿ ಅವಕಾಶವಿದೆ. ಖಾಜನಗೌಡರ ಮನೆಯಲ್ಲಿನ ಕರ್ಣಾರ್ಜುನರ ಕಾಳಗ, ರಾಮ-ಸೀತೆಯರ ದರ್ಶನ ಹಾಗೂ ಚಿತ್ರಿತ ಪಟ್ಟಿಕೆಗಳ ಸುತ್ತಲೂ ಬರೆಯಲಾದ ವಿನ್ಯಾಸಗಳ ಹೋಲಿಕೆ ಹನುಮಾನ ಮಂದಿರದಲ್ಲಿನ ಚಿತ್ರಗಳಲ್ಲಿ ಕಾಣಸಿಗುವುದು ಈ ಮೇಲಿನ ಮಾತಿಗೆ ಅನುಮಾನ ಹುಟ್ಟಿಸುತ್ತದೆ. ಖಾಜನಗೌಡರ ಮನೆಯಲ್ಲಿನ ಭಿತ್ತಿ ಚಿತ್ರಗಳು ಬೇರೆ ಬೇರೆ ಕಲಾವಿದರಿಂದ ರಚನೆಗೊಂಡಿರುವುದು ಮಾತ್ರವಲ್ಲ ಸುರಪುರ ಆಸ್ಥಾನ ಕಲಾವಿದರಾದ ಗರುಡಾದ್ರಿಯವರ ಪಾಲೂ ಇಲ್ಲಿನ ಚಿತ್ರಗಳ ಲ್ಲಿದೆ ಎಂದು ಬೇರೆ ಬೇರೆ ಸಂದರ್ಭ ಗಳಲ್ಲಿ ಚರ್ಚಿಸಿಯಾಗಿದೆ.

ಕ್ರಿ.ಶ. ೧೮೫೭-೫೮ರ ಸಂದರ್ಭದಲ್ಲೇ ಸುರಪುರ ಸಂಸ್ಥಾನ ಪತನವಾದ ವಿಷಯ ಎಲ್ಲರಿಗೂ ತಿಳಿದೇ ಇದೆ. ಈ ವೇಳೆ ಅಲ್ಲಿನ ಆಸ್ಥಾನ ಕಲಾವಿದ ವಂಶಸ್ಥರು ರಾಯಚೂರಿಗೆ ಬಂದು ನೆಲೆನಿಂತರೆಂದು ಹೇಳಲಾಗುತ್ತದೆ. ಇವರು ಚಿತ್ರರಚನೆ ಮಾಡುವುದಲ್ಲದೇ, ಅವುಗಳನ್ನು ಮಾರಿತಂದ ಹಣದಲ್ಲಿ ಜೀವನ ನಡೆಸಿದ ಮಾಹಿತಿಯೂ ಗರುಡಾದ್ರಿ ವಂಶಸ್ಥರಿಂದ ತಿಳಿದುಬಂದಿದೆ. ರಾಯಚೂರಿನ ಹಳೆಯ ತಲೆಮಾರಿನ ಮನೆಗಳಲ್ಲದೇ ಕಿಲ್ಲೇ ಮಠದಲ್ಲಿ ಗರುಡಾದ್ರಿಯವರು ಚಿತ್ರಿಸಿದ ವರ್ಣಚಿತ್ರಗಳಿವೆ. ಒಂದೊಮ್ಮೆ ರಾಯಚೂರಿನ ಖಾಜನಗೌಡರ ಆಸರೆಯನ್ನೂ ಈ ಕಲಾವಿದ ವಂಶಸ್ಥರು ಪಡೆದದ್ದಿದೆ. ಈ ಮೇಲಿನ ಎಲ್ಲ ಸಂದರ್ಭಗಳನ್ನು ಅವಲೋಕಿಸಿದರೆ ಬಹುಶಃ ಹನುಮಾನ ಮಂದಿರದಲ್ಲಿನ ಭಿತ್ತಿ ಚಿತ್ರಗಳಲ್ಲಿ ಗರುಡಾದ್ರಿಯವರ ಪಾತ್ರವಿರುವುದು ಸ್ಪಷ್ಟವಾಗುತ್ತದೆ. ಇದಿಷ್ಟು ದೇವಾಲಯ ನಿರ್ಮಾಣ ಹಾಗೂ ಅಲ್ಲಿನ ಚಿತ್ರರಚನೆ ಕುರಿತಾದ ಹಿನ್ನೆಲೆ.

ಕಳೆದೊಂದು ದಶಕದ ಹಿಂದೆ ಮಡ್ಡಿಪೇಟೆಯ ಆಸಕ್ತರೆಲ್ಲರೂ ಸೇರಿ ಆಂಜನೇಯಸ್ವಾಮಿ ದೇವಾಲಯ ಸಮಿತಿಯನ್ನು ಮಾಡಿಕೊಂಡಿದ್ದು, ಪ್ರತಿವರ್ಷ ಹನುಮಾನ ಜಯಂತಿ ಮತ್ತಿತರ ಕಾರ್ಯಕ್ರಮಗಳನ್ನು ವ್ಯವಸ್ಥಿತವಾಗಿ ಮಾಡಿಕೊಂಡು ಬರಲಾಗುತ್ತಿದೆ. ಹಾಗೆ ನೋಡಿದರೆ ಬಹಳ ಹಿಂದಿನಿಂದಲೇ ಇಲ್ಲಿ ಪ್ರತಿನಿತ್ಯ ಶ್ರೀ ಆಂಜನೇಯಸ್ವಾಮಿಯ ಪೂಜಾ ಕಾರ್ಯಗಳನ್ನು ವಿಧಿವತ್ತಾಗಿ ನಡೆಸಿಕೊಂಡು ಬರಲಾಗುತ್ತಿದೆ. ಈ ಪೂಜಾ ಕಾರ್ಯಗಳಿಗೆಂದೇ ಅರ್ಚಕರನ್ನು ನೇಮಿಸಿದ್ದು, ಇವರಿಗೆ ಒಂದಿಷ್ಟು ಭೂಮಿಯನ್ನೂ ನೀಡಿದ ಮಾಹಿತಿ ದಾಖಲೆಗಳಲ್ಲಿ ಸಿಗುತ್ತದೆ. ಮಾತ್ರವಲ್ಲ ಆಂಜನೇಯಸ್ವಾಮಿ ದೇವಾಲಯಕ್ಕೆ ಹೊಂದಿಕೊಂಡೇ ಅರ್ಚಕರಿಗೆಂದು ಚಿಕ್ಕದಾದ, ಪ್ರತ್ಯೇಕ ಮನೆಯೊಂದರ ವ್ಯವಸ್ಥೆ ಮಾಡಲಾಗಿದೆ.

ಚಿತ್ರಗಳನ್ನು ಪ್ರಾಚೀನ ಚಿತ್ರರಚನಾ ಪದ್ಧತಿಯಲ್ಲೇ ಚಿತ್ರಿಸಿರುವ ಕಾರಣ, ಚಿತ್ರಿತ ಪ್ರತಿಯೊಂದು ಪಟ್ಟಿಕೆಗಳಲ್ಲಿನ ಆಕೃತಿಗಳು ಮತ್ತು ವರ್ಣಗಳ ಛಾಯೆ ಎಣ್ಣೆ ಕಲೆಗಳಂತೆ ಸುಣ್ಣದ ಪದರಿನ ಮೇಲೂ ಕಾಣಿಸುತ್ತಿದ್ದವು. ಇದರೊಂದಿಗೆ ನೂರಾರು ವರ್ಷ ಇತಿಹಾಸವಿರುವ ಭಿತ್ತಿಚಿತ್ರಗಳ ನೆಲೆಯೊಂದು ನಮ್ಮ ಕಣ್ಮುಂದೇ ವಿನಾಶವಾಗುತ್ತಿದೆ.

ಈ ಚಿತ್ರಿತ ನೆಲೆಗಳು ಒಂದು ನಾಡಿನ ಪರಂಪರೆಯನ್ನು ಪ್ರತಿನಿಧಿಸುತ್ತವೆ ಮಾತ್ರವಲ್ಲ ಸಾಂಸ್ಕೃತಿಕ ಕೊಂಡಿಗಳಾಗಿಯೂ ಚರಿತ್ರೆಯಲ್ಲಿ ಗುರುತಿಸಿಕೊಳ್ಳುತ್ತವೆ. ಕಾಲನ ತುಳಿತಕ್ಕೆ ಸಿಕ್ಕು ಇಲ್ಲವೆ ಮಾನವನ ಅಜ್ಞಾನದಿಂದಾಗಿ ವಿನಾಶ ಹೊಂದುವ ಮುಂಚೆಯೇ ಈ ಚಿತ್ರಿತ ನೆಲೆಗಳ ಕುರಿತಾದ ಅಧ್ಯಯನಗಳು ಆದಷ್ಟು ತೀವ್ರಗತಿಯಲ್ಲಿ ಆಗಬೇಕಾದ ಅವಶ್ಯಕತೆಯೂ ಇದೆ.

ರಾಯಚೂರು ಮಡ್ಡಿಪೇಟೆಯ ಹನುಮಾನ ಮಂದಿರ ಮತ್ತು ಆ ಮಂದಿರ ಒಳ ಮಾಳಿಗೆಯ ಭುವನೇಶ್ವರಿಯ ಮೇಲಿನ ವರ್ಣಚಿತ್ರ



ರಾಯಚೂರು ಮಡ್ಡಿಪೇಟೆಯ ಹನುಮಾನ ಮಂದಿರ



ಹನುಮಾನ ಮಂದಿರದ ಒಳಮಾಳಿಗೆಯ ಭುವನೇಶ್ವರಿಯ ಮೇಲಿನ ವರ್ಣಚಿತ್ರ

ಹನುಮಾನ ಮಂದಿರದಲ್ಲಿನ ರಾಮಾಯಣ ವಿಷಯಾಧಾರಿತ ಭಿತ್ತಿಚಿತ್ರ



ರಾಯಚೂರು ಹನುಮಾನ ಮಂದಿರದಲ್ಲಿನ ರಾಮಾಯಣ ವಿಷಯಾಧಾರಿತ ಭಿತ್ತಿಚಿತ್ರ

ಹನುಮಾನ ಮಂದಿರದಲ್ಲಿನ ರಾಮಾಯಣ ವಿಷಯಾಧಾರಿತ ಭಿತ್ತಿಚಿತ್ರ



ರಾಯಚೂರು ಹನುಮಾನ ಮಂದಿರದಲ್ಲಿನ ರಾಮಾಯಣ ವಿಷಯಾಧಾರಿತ ಭಿತ್ತಿಚಿತ್ರ

ಸಮುದ್ರ ಮಂಥನ ವಿಷಯಾಧಾರಿತ ಭಿತ್ತಿಚಿತ್ರ



ರಾಯಚೂರು ಹನುಮಾನ ಮಂದಿರದಲ್ಲಿನ ಸಮುದ್ರ ಮಂಥನ ವಿಷಯಾಧಾರಿತ ಭಿತ್ತಿಚಿತ್ರ



## ಟಿಪ್ಪಣಿಗಳು

೧. ರಾಯಚೂರು ನಗರದ ಹೃದಯಭಾಗದಲ್ಲಿರುವ ಕಿಲ್ಲೇ ಬೃಹನ್ಮಠವು ಕರ್ನಾಟಕದ ಅತ್ಯಂತ ಪ್ರಾಚೀನ ಮಠಗಳಲ್ಲೊಂದು. ಮಾತ್ರವಲ್ಲ ರಂಭಾಪುರಿಯ ಶಾಖಾ ಮಠವೂ ಹೌದು. ಕ್ರಿ.ಶ. ೧೮೫೭–೫೮ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಬಳಿಕ ರಾಜಾಶ್ರಯ ಕಳೆದುಕೊಂಡ ಕೆಲ ಕಲಾವಿದ ಕುಟುಂಬಗಳಿಗೆ ಆಶ್ರಯವನ್ನೂ ನೀಡಿತ್ತು. ಇದರಿಂದಾಗಿ ಈ ಮಠದ ಪೂಜ್ಯರ ಸಾಕಷ್ಟು ಭಾವಚಿತ್ರಗಳೂ ಚಿತ್ರಿಸಲ್ಪಟ್ಟವು. ಇಂದಿಗೂ ಈ ಮಠದಲ್ಲಿ ನಾವು ಆ ಕಾಲದ ಚಿತ್ರಗಳನ್ನು ನೋಡಬಹುದು.

೨. ಗರ್ಭಗೃಹ ದ್ವಾರದ ಮೇಲಿನ ಶಿಲಾಪಟ್ಟಿಕೆಯಲ್ಲಿನ ಕೆತ್ತನೆ ಹಾಗೂ ಹೊರಬದಿಯ ಮೇಲ್ಭಾಗದ ಕಮಾನಿನೊಳಗಿನ ಗಾರೆ ಶಿಲ್ಪಗಳ ಮೇಲೆ ಬಹಳ ಹಿಂದೆಯೇ ನೈಸರ್ಗಿಕ ಮೂಲದ ವರ್ಣಲೇಪನವನ್ನು ಮಾಡಲಾಗಿತ್ತು. ಇದೀಗ ಮಂದಿರದ ನವೀಕರಣ ಸಂದರ್ಭದಲ್ಲಿ ಈ ಶಿಲ್ಪಕೆತ್ತನೆಗಳ ಮೇಲೆ ರಾಸಾಯನಿಕ (ಆಧುನಿಕ) ವರ್ಣಲೇಪನ ಮಾಡಲಾಗಿದೆ.



# ಬೆಳಗಾವಿಯಲ್ಲಿ ವಸಾಹತು ವಾಸ್ತುಶಿಲ್ಪ ಒಂದು ವಿಶ್ಲೇಷಣೆ

**ಡಾ. ಸ್ಮಿತಾ ಸುರೇಬಾನಕರ***

ಕರ್ನಾಟಕಾಂತರ್ಗತ ಬೆಳಗಾವಿ ಸಾಂಸ್ಕೃತಿಕ ಮತ್ತು ಐತಿಹಾಸಿಕ ನಗರ. ಈ ಪ್ರದೇಶದ ಪುರಾತತ್ವ ಸಂಶೋಧನೆ ಬೆಳಗಾವಿಯ ಇತಿಹಾಶ ಮತ್ತು ಸಂಸ್ಕೃತಿಯ ಪುನಾರಚನೆಗೆ ವೈಜ್ಞಾನಿಕ ನೆಲೆಗಟ್ಟನ್ನು ನೀಡಿದೆ. ಪ್ರಾಚೀನ ಮತ್ತು ಮಧ್ಯಯುಗೀನ ಅರಸು ಮನೆತನಗಳ ಆಳ್ವಿಕೆಯಲ್ಲಿ ಮತ್ತು ತದನಂತರ ಮರಾಠರು, ಪೇಶ್ವೆ, ಸಂಸ್ಥಾನಿಕರು ಮತ್ತು ಬ್ರಿಟಿಷರ ಆಳ್ವಿಕೆ – ಹೀಗೆ ಬಹು ದೀರ್ಘ ಕಾಲಾವಧಿಯ ಇತಿಹಾಸ ಮತ್ತು ಸಂಸ್ಕೃತಿಗಳು ಇಲ್ಲಿ ಹಾಸುಹೊಕ್ಕಾಗಿವೆ.

ಪೇಶ್ವೆಗಳನ್ನು ಹಿಮ್ಮೆಟ್ಟಿಸಿ ಬ್ರಿಟಿಷರು ೧೮೮೧೮ರಲ್ಲಿ ಬೆಳಗಾವಿಯನ್ನು ವಶಪಡಿಸಿಕೊಂಡು ತಮ್ಮ ಸೈನಿಕ ಪಡೆಗಳ ಬೀಡಾಗಿ ಪರಿವರ್ತಿಸಿದರು. ಬೆಳಗಾವಿಯು ಉತ್ತಮ ಹವಾಗುಣ, ಸಮುದ್ರತೀರದ ಸಾಮೀಪ್ಯ ಮತ್ತು ರಕ್ಷಣೆಯ ದೃಷ್ಟಿಯಿಂದ ಪೋರ್ಚುಗೀಸರ ಗೋವಾದ ಸಮೀಪದಲ್ಲಿದ್ದ ಆಯಕಟ್ಟಿನ ಪ್ರದೇಶವಾದ್ದರಿಂದ ದಂಡುಮಂಡಲ ಮತ್ತು ಸೈನಿಕ ತರಬೇತಿ ಕೇಂದ್ರಗಳು ಬೆಳಗಾವಿಯಲ್ಲಿ ಬ್ರಿಟಿಷರಿಂದ ಸ್ಥಾಪಿಸಲ್ಪಟ್ಟವು. ಈ ಸೈನಿಕ ಪರಂಪರೆ ಇಂದಿಗೂ ಮುಂದುವರೆದಿದ್ದು ಬೆಳಗಾವಿಯು ಭಾರತೀಯ ಸೈನ್ಯ ಮತ್ತು ವಾಯುಪಡೆಯ ಮಹತ್ವದ ಕೇಂದ್ರವಾಗಿದೆ. 'ಸೈನ್ಯಪಡೆಯ ತೊಟ್ಟಿಲು' ಎಂದು ಖ್ಯಾತಿ ಪಡೆದ ಬೆಳಗಾವಿಯಲ್ಲಿ ಮರಾಠ ಲೈಟ್ ಇನಫೆಂಟ್ರಿ ಮತ್ತು ಕಮಾಂಡೋ ತರಬೇತಿ ಕೇಂದ್ರಗಳಿವೆ. ಬಂದೂಕುಗಳು, ಬರಾಕು, ತೋಪುಖಾನೆ ಬೆಳಗಾವಿಯ ದಂಡು ಪ್ರದೇಶದಲ್ಲಿ ಅಲ್ಲಲ್ಲಿ ಕಂಡುಬರುತ್ತಿದ್ದು ಸೈನ್ಯದ ಇರವನ್ನು ಸಾರಿ ಹೇಳುತ್ತವೆ.

ಸಾಂಸ್ಕೃತಿಕ ಹೆಗ್ಗುರುತುಗಳಾಗಿ, ಗೋಚರ ಪರಂಪರೆಯ ಬಹುಮುಖ್ಯ ಅಂಗವಾಗಿ ಸ್ಮಾರಕಗಳು ವಾಸ್ತುಶಿಲ್ಪ ಪರಂಪರೆಯನ್ನು ಅರಿಯುವಲ್ಲಿ ಸಹಾಯಗೈಯ್ಯುತ್ತವೆ. ಈ ಸ್ಮಾರಕಗಳು ಬ್ರಿಟಿಷರ ವಸಹಾತುಶಾಹಿ ಆಳ್ವಿಕೆಯಿಂದಾದ ಸಾಂಸ್ಕೃತಿಕ ಪ್ರಭಾವವನ್ನು ಸಾರಿಹೇಳುತ್ತವೆ. ಪ್ರಸ್ತುತ ಪ್ರಬಂಧದಲ್ಲಿ ವಸಾಹತು ಶೈಲಿಯ ಸಾರ್ವಜನಿಕ ಕಟ್ಟಡಗಳು ಮತ್ತು ಖಾಸಗಿ ಸೌಧಗಳನ್ನು ಕ್ಷೇತ್ರಕಾರ್ಯ ಕೈಗೊಂಡು ಸಂಬಂಧಪಟ್ಟವರನ್ನು ಸಂಪರ್ಕಿಸಿ, ಛಾಯಾಚಿತ್ರಗಳ ಸಹಾಯದಿಂದ ಲಭ್ಯವಿದ್ದ, ಅಲಭ್ಯ ಮಾಹಿತಿಯನ್ನು ಹೆಕ್ಕಿ ತೆಗೆಯಲಾಗಿದೆ. ಬೆಳಗಾವಿಯಲ್ಲಿರುವ ಬ್ರಿಟಿಷ್ ವಸಾಹತು ಶೈಲಿಯ ವಾಸ್ತುಶಿಲ್ಪದ ಹೊಸ ಅಧ್ಯಾಯ ಪ್ರಾರಂಭವಾಯಿತು. ಯುರೋಪಿಯನ್ ರೀತ್ಯಾ ವಾಸ್ತುಶಿಲ್ಪ ಸೌಧಗಳ ನಿರ್ಮಾಣ ಬ್ರಿಟಿಷರಿಗೆ ಸಾಮ್ರಾಜ್ಯಶಾಹಿ ಧೋರಣೆಯನ್ನು ವ್ಯಕ್ತಪಡಿಸುವ ಸಾಧನಗಳಲ್ಲಿ ಒಂದಾಯಿತು. ಭಾರತದಲ್ಲಿರುವ ವಸಾಹತು ವಾಸ್ತುಶಿಲ್ಪ ಹಿಂದೂ, ಇಸ್ಲಾಂ ಮತ್ತು ಪಾಶ್ಚಿಮಾತ್ಯ ವಾಸ್ತುಶಿಲ್ಪದ ಸಮ್ಮಿಶ್ರಣ ಶೈಲಿಯಾಯಿತು. ಸಾಂಸ್ಥಿಕ, ನಾಗರಿಕ, ಸೈನಿಕ, ಶೈಕ್ಷಣಿಕ ಮತ್ತು ಕಾರ್ಯವಾಹಿ ಸೌಧಗಳ ಮೂಲಕ ವಸಾಹತು ವಾಸ್ತುಶಿಲ್ಪ ಹೊರಹೊಮ್ಮಿತು. ವಿಶ್ರಾಂತಿಗೃಹಗಳು, ರೈಲು ನಿಲ್ದಾಣ, ಅಂಚೆಕಚೇರಿ, ಸರಕಾರಿ ಕಾರ್ಯಸೌಧಗಳು ನಿರ್ಮಾಣಗೊಂಡವು.

೧೯ನೆಯ ಶತಮಾನದ ಮಧ್ಯಭಾಗದಿಂದ ಆಂಗ್ಲೋ ಇಂಡಿಯನ್ ಚರ್ಚ್ ನಿರ್ಮಾಪಕರುಗಳು ಇಂಗ್ಲೆಂಡಿನಲ್ಲಿ ಆಗ ಪ್ರಚಲಿತವಿದ್ದ ಗಾಥಿಕಶೈಲಿಯನ್ನು ಅನುಸರಿಸಿದರು. ಎಷ್ಟೋ ಸಲ ಪ್ರಾಯೋಗಿಕತೆಗಿಂತ ಸಾಮ್ರಾಜ್ಯಶಾಹಿ ಧೋರಣೆಯನ್ನು ವ್ಯಕ್ತಪಡಿಸುವ ಉದ್ದೇಶದಿಂದ ಸೌಧಗಳು ರಚನೆಯಾದವು. ಇದಕ್ಕೆ ಉತ್ತಮ ಉದಾಹರಣೆ ಎಂದರೆ ದಂಡು ಮಂಡಲದಲ್ಲಿರುವ ಸೆಂಟ್ ಮೇರಿ ಚರ್ಚ್ ಭಾರತೀಯ ಪರಿಸ್ಥಿಗನುಗುಣವಾಗಿ ಇಟಾಲಿಯನ್ ಗಾಥಿಕ ಶೈಲಿಯನ್ನು ಅಳವಡಿಸಿಕೊಳ್ಳಲಾಯಿತು. ಮುಂಬಯಿ ವಿಶ್ವವಿದ್ಯಾಲಯದ ಪ್ರಮುಖ ವಾಸ್ತುಶಾಸ್ತ್ರಜ್ಞ ಸರ್ ಗಿಲ್ಬರ್ಟ್ ಸ್ಕಾಟ್ ಪ್ರಚುರ ಪಡಿಸಿದ ಶೈಲಿಯು ವಸಾಹತು ವಾಸ್ತುಶಿಲ್ಪ ಭಾರತೀಯ ಪದ್ಧತಿಗನುಗುಣವಾಗಿ ಬದಲಾವಣೆಗೊಳ್ಳುವುದಾಗಿ ಮೈಲಿಗಲ್ಲು ಎನಿಸಿ ಹೈಬ್ರಿಡ್ ಶೈಲಿಯ ಉದಯ ವಾಯಿತು.

ಬ್ರಿಟಿಷರು ವಿವಿಧ ವಾಸ್ತುಶಿಲ್ಪ ಶೈಲಿಗಳಾದ ಗಾಥಿಕ್, ಸಾಮ್ರಾಜ್ಯಶಾಹಿ, ಕ್ರಿಶ್ಚಿಯನ್, ಇಂಗ್ಲಿಷ್, ವಿಕ್ಟೋರಿಯನ್ ಮತ್ತು ಪುನರುತ್ಥಾನ ಶೈಲಿಗಳ ಸಮ್ಮಿಶ್ರಣಶೈಲಿಯನ್ನು ಅನುಸರಿಸಿದರು. ಬೆಳಗಾವಿ ಜಿಲ್ಲಾ ಕಲೆಕ್ಟರ್ ಕಚೇರಿ, ಮರಾಠ ಲೈಟ್ ಇನ್‌ಫೆಂಟ್ರಿ ಕಟ್ಟಡ ಈ ಸಮ್ಮಿಶ್ರಣ ಶೈಲಿಯಲ್ಲಿ ಹೊರಹೊಮ್ಮಿವೆ.

ಇದಲ್ಲದೆ ಶಾಲಾ–ಕಾಲೇಜು ಕಟ್ಟಡಗಳು, ಅಂಚೆಕಚೇರಿ, ನ್ಯಾಯಾಲಯ ಕಟ್ಟಡ ಇವು ಸಮ್ಮಿಶ್ರಣ ಶೈಲಿಯಲ್ಲಿದ್ದರೂ ಇವುಗಳಲ್ಲಿ ವಿಕ್ಟೋರಿಯನ್–ಗಾಥಿಕ ಲಕ್ಷಣಗಳಾದ ಹೊಳಪಿನ

* ಮುಖ್ಯಸ್ಥರು, ಇತಿಹಾಸ ವಿಭಾಗ, ರಾಣಿ ಪಾರ್ವತಿ ದೇವಿ ಮಹಾವಿದ್ಯಾಲಯ, ಬೆಳಗಾವಿ–೫೯೦೦೦೬.

ಚಂದ್ರಶಿಲೆ, ಅಲಂಕೃತ ನೆಲಹಾಸು, ರಂಗು–ರಂಗಿನ ಗಾಜು, ಕಲ್ಲಿನ ಜೊತೆಗೆ ಇಟ್ಟಿಗೆ ಗಚ್ಚು–ಗಾರೆಗಳ ಬಳಕೆ ಅಳವಡಿಸಲಾಯಿತು.

ಈ ಕಾಲದ ಇನ್ನೊಂದು ವೈಶಿಷ್ಟ್ಯವೆಂದರೆ ಗಾಥಿಕ್–ವಿಕ್ಟೋರಿಯನ್ ಶೈಲಿಯೊಂದಿಗೆ ಇಂಡೊ–ಸಾರ್ಸನಿಕ್ ಶೈಲಿಯು ಹೆಣೆದುಕೊಂಡು ಇಸ್ಲಾಮಿಕ್ ಗುಮ್ಮಟಗಳು, ಮಿನಾರಗಳು ಗಚ್ಚುಗಾರೆ ಅದ್ಭುತ ನಿರ್ಮಾಣಗಳಾಗಿ ಅಭಿವ್ಯಕ್ತಿಗೊಂಡವು. ಆದರೆ ಬೆಳಗಾವಿಯಲ್ಲಿ ಅನೇಕ ವಸಾಹತು ಶೈಲಿಯ ಕಟ್ಟಡಗಳ ನಿರ್ಮಾಣವಾದರೂ ಬ್ರಿಟಿಷ್ ಆಡಳಿತದ ನಗರಗಳಾದ ಮುಂಬಯಿ, ಮದ್ರಾಸ್, ಕೊಲ್ಕೊತ್ತಾದ ಸೌಧಗಳ ಭವ್ಯತೆ ಇಲ್ಲಿ ಕಾಣಸಿಗುವುದಿಲ್ಲ.

೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಬೆಳೆಯುತ್ತಿದ್ದ ಬೆಳೆದಿದ್ದ ರಾಷ್ಟ್ರೀಯತೆಯ ಪರಿಣಾಮ ವಾಸ್ತುಶಿಲ್ಪ ಶೈಲಿಗೂ ತಟ್ಟಿ, ವಿಕ್ಟೋರಿಯನ್ ಇಂಡೊ ಸಾರ್ಸನಿಕ್ ಶೈಲಿ ಭಾರತೀಯ ಶೈಲಿಯಲ್ಲಿ ಸಮ್ಮಿಶ್ರಣಗೊಂಡಿತು. ಈ ಶೈಲಿ ಬಾಹ್ಯನೋಟಕ್ಕೆ ಭಾರತೀಯ ಎನಿಸಿದರೂ ಆಂತರಿಕವಾಗಿ ಬ್ರಿಟಿಷ್ ಶೈಲಿಯಲ್ಲಿದ್ದವು. ಅಗಲವಾದ ತೆರೆದ ಪ್ರಾಂಗಣಗಳು, ವಿಶಲ ಅಂಗಳ, ವರಾಂಡಾ ಮತ್ತು ಒಟ್ಟಾರೆ ಆಂತರಿಕವಾಗಿ ಬ್ರಿಟಿಷ್ ಶೈಲಿಯಲ್ಲಿದ್ದವು. ಅಗಲವಾದ ತೆರೆದ ಪ್ರಾಂಗಣಗಳು, ವಿಶಾಲ ಅಂಗಳ, ವರಾಂಡಾ ಮತ್ತು ಒಟ್ಟಾರೆ ಭವ್ಯತೆ ಭಾರತೀಯ ಶೈಲಿಯಲ್ಲಿದ್ದರೆ ಒಳಗಡೆಯ ಜೋಡಣೆ, ಅಲಂಕರಣ, ಛತ್ತು, ಛಜ್ಜಾ, ಕಾನೊಪಿ ಇರುವ ಬಾಲ್ಕನಿ, ಅಗಲವಾದ ಪೋರ್ಚ್, ಬಲ್ಬ್ ಆಕಾರದ ಗುಮ್ಮಟಗಳಿರುವ ಮಿನಾರಗಳನ್ನು ಒಳಗೊಂಡವು.

ಬೆಳಗಾವಿಯ ದಂಡುಮಂಡಲ ಕ್ರಮಬದ್ಧ ನಿಯೋಜನೆಯಿಂದ ಕೂಡಿದ್ದು ಅನಾಮಧೇಯ ಬ್ರಿಟಿಷ್ ವಾಸ್ತುತಜ್ಞರಿಂದ ರಚಿತವಾಗಿವೆ. ೨೦ನೆಯ ಶತಮಾನದಲ್ಲಿ ಕೆಲ ಮಾರ್ಪಾಡುಗಳೊಂದಿಗೆ ಈ ವಾಸ್ತುಶಿಲ್ಪ ಬೆಳೆಯಿತು. ಸರಳೀಕರಣ (Simplicity) ಮುಖ್ಯ ಮಂತ್ರವಾಯಿತು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ೧೯೪೮ರಲ್ಲಿ ನಿರ್ಮಾಣವಾದ ಅಂಚೆಕಚೇರಿ ಕಟ್ಟಡ. ಬೂದುಬಣ್ಣದ ಕಗ್ಗಲ್ಲಿನಿಂದ ರಚಿತವಾದ ವಿಶ್ರಾಂತಿಗೃಹ, ಗಚ್ಚುಗಾರೆ ಕೆಲಸದ MLIRC ಕಟ್ಟಡ, ಸರಳಶೈಲಿಯ ಬರಾಕುಗಳು, ತೋಪುಖಾನೆ ಭಾರತೀಯ ವಾಸ್ತುಶಿಲ್ಪಶೈಲಿ ಬ್ರಿಟಿಷ್‌ಗೆ ಬದಲಾವಣೆ ಹೊಂದಿದ್ದನ್ನು ನಿರೂಪಿಸುತ್ತವೆ. ಇವು ನೋಟಕ್ಕೆ ಭಾರತೀಯ ಎನಿಸಿದರೂ ಕಾರ್ಯದಲ್ಲಿ ಬ್ರಿಟಿಷ್ ಶೈಲಿಯಾಯಿತು. ಬ್ರಿಟಿಷ್ ತಜ್ಞರಿಂದ ಯೋಜಿತವಾಗಿದ್ದ ಈ ಕಟ್ಟಡಗಳು ಭಾರತೀಯ ಕುಶಲಕರ್ಮಿಗಳಿಂದ ವಿನ್ಯಾಸಗೊಂಡಿದ್ದರಿಂದ ಈ ಕಟ್ಟಡಗಳಲ್ಲಿ ಭಾರತೀಯತ್ವ ತನಗೆ ತಾನೆ ಹೊರಹೊಮ್ಮಿ ಜೀವಂತ ಕಲಾಕೃತಿ ಎನಿಸಿದವು.

ಬೆಳಗಾವಿಯಲ್ಲಿರುವ ವಸಾಹತು ಶೈಲಿಯ ಕಟ್ಟಡಗಳು ಶುಭ್ರ ಬೆಳಕು–ಗಾಳಿಯುಳ್ಳ ವಿಶಾಲ ಕೋಣೆಗಳು, ಅಗಲ ಮೆಟ್ಟಿಲುಗಳು, ಉದ್ದನೆಯ ಹಾಲುಗಳು, ಕಟ್ಟಿಗೆಯ ಮೇಲ್ಛಾವಣಿ ಹೊಂದಿದ್ದವು. ಬ್ರಿಟಿಷರು ಸೌಧನಿರ್ಮಾಣ ಕಲೆ ಮತ್ತು ವೈಜ್ಞಾನಿಕ ತಾಂತ್ರಿಕತೆಯಲ್ಲಿ ಪರಿಣತಿ ಹೊಂದಿದ್ದರು. ಹೀಗೆ ಬ್ರಿಟಿಷ್ ಕಟ್ಟಡಗಳು ಕೂಡ ಅವರ ಆಳ್ವಿಕೆಯನ್ನು ಸಾರಿಹೇಳುತ್ತವೆ. ಬೆಳಗಾವಿಯ ವಸಾಹತುಶಾಹಿ ನಿರ್ಮಾಣಗಳ ಮೇರುಕೃತಿಗಳು ಹೈಬ್ರಿಡ್ ಶೈಲಿಯಲ್ಲಿವೆ.

ಸೌಂದರ್ಯ ಸಮಾಜಶಾಸ್ತ್ರೀಯ ವಿಶ್ಲೇಷಣೆ ಮತ್ತು ಭಾರತೀಯ ರಾಷ್ಟ್ರೀಯತೆಯ ಭಾವನೆಗಳ ಬಗ್ಗೆ ಅನುಕಂಪ, ಭಾರತೀಯ ವಾಸ್ತುಶಿಲ್ಪದ ಒಳ್ಳೆಯ ಅಂಶಗಳ ಶ್ಲಾಘನೆ ವಸಾಹತು ವಾಸ್ತುಶಿಲ್ಪದ ಮೇಲೆ ಪರಿಣಾಮ ಬೀರಿದವು. ವಾಸ್ತುಶಿಲ್ಪದ ಮೇಲೆ ಸಂಸ್ಕೃತಿ ಪ್ರಭಾವ ಬೀರಿ ಬ್ರಿಟಿಷರು ತಮ್ಮ ಶೈಲಿಯಲ್ಲಿ ಬದಲಾವಣೆ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಬೆಳಗಾವಿಯ ಈ ಕಾಲದ ಸೌಧಗಳಲ್ಲಿ ಬ್ರಿಟಿಷ್ ವಸಾಹತುಶೈಲಿಯ ವಿಕಸನದ ಅಭಿವ್ಯಕ್ತಿಯಿದೆ. ಗೋಪುರಾಕಾರದ ಕೆಂಪು ಹೆಂಚಿನ ಹೊದಿಕೆಯುಳ್ಳ ಚೂಪಾದ ಮೊನೆಹೊಂದಿದ ಕಿಟಕಿಯ ಮೇಲಿರುವ ಗೋಪುರಗಳು ಗಾಥಿಕ ಶೈಲಿಯನ್ನು ಬಿಂಬಿಸುತ್ತವೆ. ಬೆಳಗಾವಿಯ ಜಡಿಮಳೆಯ ಹವಾಗುಣಕ್ಕೆ ಇದು ಸೂಕ್ತವೆನಿಸಿತು. ಸೂರ್ಯನ ತಾಪ ಮತ್ತು ಮಳೆನೀರು ಸೋರುವಿಕೆಯನ್ನು ತಪ್ಪಿಸುವಲ್ಲಿ ಇದು ಅನುಕೂಲಕರ ವಾಯಿತು.

ಬ್ರಿಟಿಷರು ತಮ್ಮ ವಾಸ್ತುಶಿಲ್ಪದಲ್ಲಿ ಗುಮ್ಮಟಗಳು, ಕಮಾನಗಳಿಗೆ ಆದ್ಯತೆ ಕೊಟ್ಟಿದ್ದು ಬರೀ ಕಟ್ಟಡಗಳ ಸ್ಥಿರತೆಗೆ ಮಾತ್ರವಾಗಿರದೇ ಮೊಗಲ್ ಸಾಮ್ರಾಜ್ಯದ ಪ್ರಾಬಲ್ಯದ ಸಂಕೇತಗಳಾಗಿದ್ದ ಈ ಲಕ್ಷಣಗಳನ್ನು ಅಳವಡಿಸಿಕೊಂಡರು.

ಭಾರತದ ಉಳಿದೆಡೆ ಇದ್ದ ಹಾಗೆ ಬೆಳಗಾವಿಯಲ್ಲಿಯೂ ಬ್ರಿಟಿಷ್ ಕಟ್ಟಡಗಳು ಭಾರತೀಯರು ಮತ್ತು ಬ್ರಿಟಿಷರ ನಡುವಿನ ಸಾಮಾಜಿಕ ಮತ್ತು ಮಾನಸಿಕ ಅಂತರವನ್ನು ನಿರ್ಮಿಸುವ ಗಡಿಯಾದವು. ಎತ್ತರ ಮತ್ತು ಭವ್ಯವಾದ ಪ್ರದೇಶದ್ವಾರಗಳು, ವಿಸ್ತಾರವಾದ ಅತಿಥಿಕೋಣೆ, ಅಲಂಕರಣಕ್ಕೆ ಕೊಟ್ಟ ಪ್ರಾಧಾನ್ಯತೆ, ತೆರೆದ ಮೊಗಸಾಲೆ ಮುಂತಾದ ಪಾಶ್ಚಿಮಾತ್ಯ ಲಕ್ಷಣಗಳೊಂದೆಡೆಯಾದರೆ ದಪ್ಪ ಸುರಕ್ಷಿತ ಗೋಡೆಗಳು, ಎತ್ತರವಾದ ಮೇಲ್ಛಾವಣಿ ಸ್ಥಳೀಯ ಹವಾಗುಣಕ್ಕೆ ಅನುಗುಣವಾಗಿತ್ತಲ್ಲದೇ ಸ್ಥಳೀಯರನ್ನು ಬೇರ್ಪಡಿಸುವ ಗಡಿರೇಖೆಯಾಗಿ ಪರಿಣಮಿಸಿತು. ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಶ್ರೇಷ್ಠತೆಯನ್ನು ಪ್ರದರ್ಶಿಸುವ ಅಭಿವ್ಯಕ್ತಿಯಾಯಿತು. ಸಾಮರ್ಥ್ಯ, ನಿಯಂತ್ರಣ ಮತ್ತು ತಾರತಮ್ಯತೆಯ ತತ್ವವನ್ನು ರೂಪಿಸುವ ಸಾಧನಗಳಾದವು.

ಇಟಾಲಿಯನ್ ಶೈಲಿಯ ಸ್ತಂಭಗಳು, ಅಲಂಕರಣವುಳ್ಳ ಮುಂಚಾಚು, ಕಬ್ಬಿಣದ ಅಲಂಕಾರ, ಕಲ್ಲಿನ ಕೆತ್ತನೆಯ ಪ್ರಾಣಿ

ಪಕ್ಷಿಗಳ ಶಿಲ್ಪಗಳು, ಹೂವಿನ ಸುಂದರ ವಿನ್ಯಾಸಗಳು – ಈ ಶೈಲಿಯ ಸಾಂಕೇತಿಕ ಲಕ್ಷಣಗಳಾದವು. ರಂಗುರಂಗಿನ ಬೆಲ್ಜಿಯಂ ಗಾಜುಗಳು, ಕಬ್ಬಿಣದಹಳಿ, ಸರಪಳಿಯ ಡಿಸೈನುಗಳು ವಿನ್ಯಾಸಿತ ಕಟಾಂಜನಗಳನ್ನು ಒಳಗೊಂಡವು.

ಈ ರೀತಿ ಈ ವಾಸ್ತುಶಿಲ್ಪ ಸ್ಮಾರಕಗಳು ಬ್ರಿಟಿಷ್ ಆಳ್ವಿಕೆಯನ್ನು ಪ್ರತಿಬಿಂಬಿಸುವ ಬೆಳಗಾವಿಯ ಅವಿಚ್ಛಿನ್ನ ಭಾಗವಾಗಿವೆ. ಈ ಸ್ಮಾರಕಗಳು ಬೆಳಗಾವಿಯ ವಾಸ್ತುಶಿಲ್ಪ ಪರಂಪರೆಯ ಅವಿಭಾಜ್ಯ ಅಂಗಗಳಾಗಿ ಬ್ರಿಟಿಷ್ ಇರುವಿಕೆಯನ್ನು ನೆನಪಿಸುತ್ತದೆ.

**ವಸಾಹತುಶೈಲಿ ವಾಸ್ತುಶಿಲ್ಪದ ಕಟ್ಟಡಗಳು :** ಬೆಳಗಾವಿಯ ದಂಡುಪ್ರದೇಶದ ನಗರದ ದಕ್ಷಿಣ–ಪಶ್ಚಿಮ ಭಾಗಕ್ಕಿವೆ. ಇಲ್ಲಿ ಅನೇಕ ಸೈನಿಕ ಕಟ್ಟಡಗಳಿದ್ದು ಸೈನ್ಯದ ಇರವನ್ನು ಸಾರಿಹೇಳುತ್ತದೆ. ಹಚ್ಚಹಸುರಿನ ವೃಕ್ಷದ ಸಾಲುಗಳು ಇಲ್ಲಿಯ ರಸ್ತೆಯ ಇಕ್ಕೆಡೆಯಲ್ಲಿದ್ದು ತೋಪು ಖಾನೆ, ಚಾಪೆಲ್‌ರಸ್ತೆ, ಕಮಿಷನರೇಟ್ ರಸ್ತೆ, ವಿಕ್ಟೋರಿಯಾ ರಸ್ತೆ ಮತ್ತು ಎಲ್ಫಿನ್‌ಸ್ಟನ್ ರಸ್ತೆಗಳು ಗತಕಾಲದ ಬ್ರಿಟಿಷರ ಆಳ್ವಿಕೆಯನ್ನು ನೆನಪಿಸುತ್ತದೆ. ಪವಿತ್ರಭಾವನೆಯನ್ನು ಪ್ರತಿಬಿಂಬಿಸುವ ಇಗರ್ಜಿಗಳು ಮತ್ತು ಜ್ಞಾನದೇಗುಲಗಳಾದ ಶೈಕ್ಷಣಿಕ ಸಂಸ್ಥೆಗಳ ಸಮೂಹ ಇನ್ನೊಂದೆಡೆ.

**ಸೆಂಟ್‌ಮೇರಿ ಚರ್ಚು (೧೮೬೪–೬೯)**

ಲಂಬಾರ್ಡೊ–ಗಾಥಿಕಶೈಲಿಯ, ಪಶ್ಚಿಮ ಮತ್ತು ದಕ್ಷಿಣಕ್ಕೆ ಕಮಾನುಯುಕ್ತ ಪ್ರವೇಶದ್ವಾರವಿರುವ ಅಮೋಘ ಕಲಾಕೃತಿ ಎನಿಸಿದ ಸುಂದರ ಸೌಧ ಇದಾಗಿದೆ. ಸಮ್ಮಿಶ್ರ ಬಣ್ಣದ ಕೆಂಪು–ಕಪ್ಪುಮಿಶ್ರಿತ ಶಿಲೆಗಳು, ರಂಗು–ರಂಗಿನ ಸುಂದರ ಗಾಜು ಮತ್ತು ಭವ್ಯಗಾತ್ರ ಇದರ ಸೌಂದರ್ಯವರ್ಧಕಗಳಾಗಿವೆ. ನಾಜೂಕುಗಾಜಿನ ಕಿಟಕಿಗಳು, ಶುಭ್ರ ಬೆಳಕನ್ನು ಒಳ ತೋರಿಸುವ ಬೆಳಕಿಂಡಿ, ವಿಸ್ತಾರವಾದ ಮೊಗಸಾಲೆ, ಕಮಾನು, ವರಾಂಡಾ ಈ ಇಗರ್ಜಿಯನ್ನು ಜೀವಂತ ಕಲಾಕೃತಿಯನ್ನಾಗಿಸಿದೆ. ಕೊಲ್ಲಾಪುರ ಚಂದ್ರಶಿಲೆಯಿಂದ ನಿರ್ಮಿತವಾದ ಆರು ಮೆಟ್ಟಿಲುಗಳು ಒಳಗೆ ಕೊಂಡೊಯ್ಯುತ್ತವೆ. ಬೈಬಲ್ಲಿನಿಂದಾಯ್ದ ಚಿತ್ರಗಳು ಮೊಗಸಾಲೆಯನ್ನು ಅಲಂಕರಿಸಿವೆ. ಈ ಭವ್ಯಸೌಧ ನಿರ್ಮಾಣಕ್ಕೆ ಐದು ವರ್ಷಗಳು ತಗುಲಿದ್ದು ೧೮೬೪ರಲ್ಲಿ ಪ್ರಾರಂಭಗೊಂಡು ೧೮೬೯ರಲ್ಲಿ ಪೂರ್ಣಗೊಂಡು ಪಾದ್ರಿ ಡಗ್ಲಾಸನಿಂದ ಉದ್ಘಾಟನೆಗೊಂಡಿತು. ಈ ಭವ್ಯಸೌಧಕ್ಕೆ ತಗುಲಿದ ನಿರ್ಮಾಣವೆಚ್ಚ ೧೧೫೮೦ ಪೌಂಡುಗಳು ಅಥವಾ ೧,೧೫,೮೦೦ ರೂಪಾಯಿಗಳು. ೭೦೦ ಜನರು ಒಟ್ಟಿಗೆ ಕುಳಿತು ಪ್ರಾರ್ಥನೆ ಮಾಡುವಷ್ಟು ದೊಡ್ಡದಾಗಿದ್ದು ೧೮೭೫ರಲ್ಲಿ ಕಾಂಪೌಂಡ್, ಬೇಲಿ ಮತ್ತು ಉದ್ಯಾನಗಳನ್ನು ನಿರ್ಮಿಸಲಾಯಿತು. ೧೮೫೭ರ ಮಹಾದಂಗೆಯಲ್ಲಿ ಪ್ರಾಣತೆತ್ತ ೬೪ನೆಯ ರೆಜಿಮೆಂಟಿನ ಸೈನಿಕರ ಸ್ಮರಣಾರ್ಥ ದೊಡ್ಡಶಿಲುಬೆ ನಿಲ್ಲಿಸಲಾಗಿದೆ. ಈ ಇಗರ್ಜಿಯ ಪ್ರಗಲ್ಭ ಸೌಂದರ್ಯ ಮತ್ತು ಭವ್ಯತೆ ವರ್ಣನಾತೀತ.

ಬೆಳಗಾವಿಯ ದಂಡುಪ್ರದೇಶದಲ್ಲಿ ಕಮಾಂಡೋ ತರಬೇತಿ ಕೇಂದ್ರ, ಮರಾಠಾಲೈಟ್ ಇನ್‌ಫೆಂಟ್ರಿ ಕೇಂದ್ರ ಕಚೇರಿ, ಮಿಲಿಟರಿ ಹಾಸ್ಪಿಟಲ್, ಬೆಳಗಾವಿ ಮಿಲಿಟರಿ ಸ್ಕೂಲ್, ಕೇಂದ್ರಿಯ ವಿದ್ಯಾಲಯ, ಆಫೀಸರ್ಸ್ ಮೆಸ್ ಇವೇ ಮುಂತಾದವುಗಳು ಇಲ್ಲಿರುವ ಬ್ರಿಟಿಷ್ ನಿರ್ಮಿತಿಗಳು. ಇಲ್ಲಿರುವ ಅನೇಕಾನೇಕ ವೃಕ್ಷ ಪಂಕ್ತಿಗಳುಳ್ಳ ಬೀದಿಗಳು, ಕ್ಲಬ್‌ಗಳು ಮತ್ತು ರೇಸ್ ಮತ್ತು ಗಾಲ್ಫ್ ಕೋರ್ಸುಗಳು ಉಲ್ಲೇಖನೀಯ.

**ಪ್ರಾದೇಶಿಕ ಆಯುಕ್ತರ ಕಚೇರಿ (೧೯೧೦):** ಮುಂಬಯಿ ಪ್ರೆಸಿಡೆನ್ಸಿಯ ದಕ್ಷಿಣ ವಿಭಾಗದ ಆಯುಕ್ತರ ಕಛೇರಿಯಾಗಿ ೧೯೧೦ರಲ್ಲಿ ನಿರ್ಮಾಣಗೊಂಡ ಈ ಉನ್ನತಸೌಧ ಈಗ ಪ್ರಾದೇಶಿಕ ಆಯುಕ್ತರ ಕಚೇರಿಯಾಗಿದೆ. ಎರಡಂತಸ್ತಿನ ಈ ಭವ್ಯಸೌಧ ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯ ಇರವನ್ನು ಸಾರಿಹೇಳುತ್ತದೆ. ಗಾಳಿ–ಬೆಳಕುಳ್ಳ ವಾತಾಯನಗಳು, ಪ್ರಮಾಣಬದ್ಧ ಕಮಾನುಗಳು, ಹರವಾದ ಮೊಗಸಾಲೆ, ಬೆಳಕು ಬೀರುವ ಬೆಳಕಿನ ಕಿಂಡಿಗಳು, ಈ ಸ್ಥಳದ ಸದ್ಬಳಕೆ–ಬ್ರಿಟಿಷ್ ಸಾಮ್ರಾಜ್ಯಶಾಹಿ ಆಳ್ವಿಕೆಗೆ ಮತ್ತು ಆಡಳಿತಕ್ಕೆ ಅವಶ್ಯಕ ಮತ್ತು ಅನುಕೂಲಕರ ವಾತಾವರಣ ಕಲ್ಪಿಸಿಕೊಟ್ಟಿರಬಹುದು. ಕೆಂಪು ಹೆಂಚಿನ ಹೊದಿಕೆಯುಳ್ಳ ಎತ್ತರವಾದ ಗೋಪುರಗಳು ಈ ಕಟ್ಟಡದ ಮೌಲ್ಯವನ್ನು ಹೆಚ್ಚಿಸಿವೆ. ನಾಲ್ಕು ಬೃಹತ್ ಸಭಾಂಗಣಗಳು, ದಾಖಲೆಗಳ ಕೊಠಡಿ, ಕಿರುಕೋಣೆಗಳು ಇದ್ದು ಮಧ್ಯದಲ್ಲಿ ಹವಾನಿಯಂತ್ರಣಕ್ಕಾಗಿ ಚಚ್ಚೌಕ ತೆರೆದ ಅಂಗಳವಿದೆ. ಇದು ದುರಸ್ತಿ ಮತ್ತು ಆಧುನೀಕರಣಗೊಂಡಿದ್ದರೂ ಪ್ರಾಚೀನ ವೈಭವ ಉಳಿಸಿಕೊಂಡಿದೆ. ಇದನ್ನು ವಿನ್ಯಾಸಗೈದ ವಾಸ್ತುಶಿಲ್ಪತಜ್ಞರ ಬಗ್ಗೆ ಮಾಹಿತಿ ಲಭ್ಯವಿಲ್ಲ. ಈ ಸೌಧದ ಸರಳತೆಯಿಂದ ಇದರ ಸೌಂದರ್ಯ ವೃದ್ಧಿಸಿದೆ.

**ಕೋರ್ಟ್ ಹೌಸ್ (೧೮೮೬) :** ೧೮೮೬ರಲ್ಲಿ ನಿರ್ಮಿತವಾದ ಪಿರಮಿಡ್ ಆಕಾರದ ಕೆಂಪುಕಲ್ಲಿನ ಕೋರ್ಟ್ ಹೌಸ್ ಕೆಂಪುಹೆಂಚಿನ ಇಳಿಜಾರಾದ ಮೇಲ್ಛಾವಣಿ ಹೊಂದಿದೆ. ಎರಡಂತಸ್ತಿನ ಈ ಕಟ್ಟಡ ವಿಶಾಲವಾದ ಕೋರ್ಟ್‌ಹಾಲ್, ಸಭಾಂಗಣ, ಸಿಬ್ಬಂದಿಕೋಣೆ, ರೆಕಾರ್ಡ್ ರೂಮ್, ನ್ಯಾಯಾಧೀಶರ ಕೊಠಡಿ, ಕಟಕಟೆ, ಕಂಬಗಳಿರುವ ಇಡೀ ಕಟ್ಟಡವನ್ನು ಸುತ್ತುವರೆದ ಬಾಲ್ಕನಿ ಬ್ರಿಟಿಷ್ ನ್ಯಾಯಾಂಗ ವ್ಯವಸ್ಥೆಯ ಮೇಲೆ ಬೆಳಕು ಚೆಲ್ಲುತ್ತದೆ.

**ಶೈಕ್ಷಣಿಕ ಸೌಧಗಳು :** ಬೆಳಗಾವಿಯಲ್ಲಿರುವ ಪುರಾತನ ಶೈಕ್ಷಣಿಕ ಸೌಧಗಳಲ್ಲಿ ಎರಡು ಬಗೆ. ಬ್ರಿಟಿಷರಿಂದ ಅವರ ಆಳ್ವಿಕೆಯ ಅವಧಿಯಲ್ಲಿ ನಿರ್ಮಾಣಗೊಂಡ ಸೌಧಗಳೊಂದೆಡೆಯಾದರೆ ಇನ್ನೊಂದೆಡೆ ದೇಶೀಯರಿಂದ ನಿರ್ಮಾಣವಾದ ಸಮಕಾಲೀನ ಕಟ್ಟಡಗಳು. ಜೆಸ್ಯೂಟ್ ನಿಯಂತ್ರಣದಲ್ಲಿರುವ ಸೆಂಟಪಾಲ್ಸ್ ಹೈಸ್ಕೂಲ್ ಬೆಳಗಾವಿಯ ಪುರಾತನಶಾಲೆ. ಬೂದುಬಣ್ಣ ಕಲ್ಲಿನಿಂದ ನಿರ್ಮಾಣವಾದ ಬೃಹದಾಕಾರದ ಮೂರು ಅಂತಸ್ತಿನ ಕಟ್ಟಡಗಳನ್ನು ಈ ಶಾಲೆಯ ಸಮೀಪವಿರುವ ಜೆಸ್ಯೂಟ್ ಹೌಸ್ ಸುಸ್ಥಿತಿಯಲ್ಲಿರುವ ಕಲ್ಲಿನ ಕಟ್ಟಡ. ದೊಡ್ಡಗಾತ್ರದ ಪೋರ್ಚ್ ಮೊಗಸಾಲೆ, ಕಮಾನುಗಳನ್ನು ಹೊಂದಿದ ಈ ಕಟ್ಟಡ ಮಾಜಿ, ಹಾಲಿ ಮತ್ತು ಭಾವಿ ಪಾದ್ರಿಗಳ ವ್ಯಕ್ತಿತ್ವ ನಿರ್ಮಾಣದಲ್ಲಿ ಪ್ರಮುಖ ಪಾತ್ರವಹಿಸಿದೆ. ಎಲ್ ಆಕಾರದ ಪಿರಮಿಡ್‌ನ ಕೆಂಪು ಹೊದಿಕೆಯ ಗೋಪುರವಿರುವ ಸರದಾರ ಹೈಸ್ಕೂಲ್ ಕಟ್ಟಡ ಇನ್ನೊಂದು ಸೌಧ.

೧೭೫ ವರ್ಷಗಳಷ್ಟು ಪುರಾತನವಾದ ೧೮೭೨ರಲ್ಲಿ ನಿರ್ಮಾಣಗೊಂಡ ರೆವರೆಂಡ್ ಟೇಲರ್, ರೆವರೆಂಡ್ ಬೆನನ್ ಮತ್ತು ರೆವರೆಂಡ್ ಸ್ಥಿಥರಿಂದ ಸೈನಿಕರ ಮಕ್ಕಳಿಗಾಗಿ ಸ್ಥಾಪಿಸಲ್ಪಟ್ಟ ಲಂಡನ್ ಮಿಷನ್ ಮಾದರಿ ಶಿಕ್ಷಣ ಕೊಡುತ್ತಿದ್ದ ಪುರಾತನ ಶಾಲೆ. ಕೋಟೆಯಂತಹ ಮುಜಬೂತಾದ ಕಲ್ಲಿನ ಎರಡು ಅಂತಸ್ತಿನ ಭವ್ಯ ಕಟ್ಟಡ. ಇದು ಈಗ ಶಿಥಿಲಾಸ್ಥೆಯಲ್ಲಿದೆ. ಸಾಲುಗಂಬಗಳು, ಚೌಕಾಕಾರದ ಪೋರ್ಟಿ ಹಚ್ಚ ಹಸುರಿನ ವತಾವರಣ ಅಮೋಘವಾಗಿದೆ.

೧೯೩೦ರ ದಶಕದಲ್ಲಿ ದೇಶೀಯರಿಂದ ನಿರ್ಮಾಣಗೊಂಡ ಲಿಂಗರಾಜ ಕಾಲೇಜಿನ ಕಟ್ಟಡ ವಸಾಹತುಶೈಲಿ ವಾಸ್ತುಶಿಲ್ಪದಿಂದ ಪ್ರಭಾವಿತವಾಗಿದೆ. ಇದು ಇಂಡೋ-ರೋಮನ್-ಗಾಥಿಕ ಶೈಲಿಯಲ್ಲಿದ್ದು ವಿದ್ಯಾರ್ಜನೆಗೆ ಅನುಕೂಲಕರ ವಾತಾವರಣ ನಿರ್ಮಿಸಿವೆ. ಅಪ್ಪಟದೇಶಿಯ ದಾರ್ಶನಿಕರಿಂದ ಸ್ಥಾಪಿಸಲ್ಪಟ್ಟ ಈ ಸೌಧ ಬ್ರಿಟಿಷ್ ವಸಾಹತು ಶಾಹಿ ವಾಸ್ತುಶಿಲ್ಪದ ಶೈಲಿಯಿಂದ ಪ್ರಭಾವಿತವಾಗಿದೆ. ರಾಜರ ಅರಮನೆಯಾಗಿ ನಿರ್ಮಾಣಗೊಂಡ ಇದಕ್ಕೆ ಮರದ ಸೂಕ್ಷ್ಮ ಕೆತ್ತನೆಯ ಪುಷ್ಪಗಳ ವಿನ್ಯಾಸ, ಸೂರ್ಯನ ಕೆತ್ತನೆ, ಕಬ್ಬಿಣದ ಕಟಾಂಜನ, ತೆರೆದ ಬಾಲ್ಕನಿ ಮೆರಗನ್ನು ಕೊಟ್ಟಿವೆ.

ಹಳದಿ-ಕಪ್ಪು ಬಣ್ಣದ ಇಟಾಲಿಯನ್ ನೆಲದ ಹಾಸನ್ನು ಹೊದಿರುವ ಇಬ್ಬದಿಯಲ್ಲಿ ಮಂಕಿಕ್ಯಾಪ್ ಆಕಾರದ ಗೋಪುರವಿರುವ ಸಾರ್ವಜನಿಕ ವಾಚನಾಲಯ ೨೫ ಅಡಿ ಎತ್ತರದ ಗಡಿಯಾರದ ಗೋಪುರ ಹೊಂದಿದೆ. ಇದರಲ್ಲಿ ಲಂಡನ್ ನಿರ್ಮಿತಿಯ ಗಡಿಯಾರ ಅಳವಡಿಸಲಾಗಿದೆ.

೧೯೪೫ರಲ್ಲಿ ೧,೪೫೦೦೦ ರೂಪಾಯಿ ವೆಚ್ಚದಲ್ಲಿ ನಿರ್ಮಾಣಗೊಂಡ ಬೆಳಗಾವಿ ಅಂಚೆಕಚೇರಿ, ವ್ಯಾಕ್ಸಿನ್ ಡಿಪೊ ಬೆಳಗಾವಿ ಕಲೆಕ್ಟರ್ ಕಚೇರಿ ಇವು ಉನ್ನತ ಬ್ರಿಟಿಷ್ ಸೌಧಗಳು.

ಇದಲ್ಲದೆ ಖಾಸಗಿ ಮಾಲಿಕತ್ವದ ನೂರಾರು ಸಾಧಗಳು ಬೆಳಗಾವಿಯ ಉದ್ದಗಲಕ್ಕೂ ದೊರೆಯುತ್ತಿದ್ದು ವಸಾಹತು ಮತ್ತು ದೇಶೀ ವಾಸ್ತುಶಿಲ್ಪದ ಸಮ್ಮಿಶ್ರಣವೆನಿಸಿವೆ. ಹೆರೆಕರ್ ಸರಾಫ, ಕುಲಕರ್ಣಿ, ಘೋಳ್ಬಾ, ಗಿಂಡೆ, ದೇಸಾಯಿ ಪಟವರ್ಧನ, ದಳವಿ, ತಲ್ಲೂರ ದೇಸಾಯರ ವಾಡೆಗಳು ಇದಕ್ಕೆ ಉತ್ತಮ ಉದಾಹರಣೆಗಳು, ಸ್ಥಳೀಯ ಶ್ರೀಮಂತರಿಂದ ನಿರ್ಮಾಣಗೊಂಡ ಈ ಇಮಾರತುಗಳು ಪ್ರಾದೇಶಿಕ ಪರಂಪರಾಶೈಲಿಯೊಂದಿಗೆ ಪಾಶ್ಚಿಮಾತ್ಯಶೈಲಿಯನ್ನು ಅಳವಡಿಸಿ ಕೊಂಡಿವೆ.

ಬೆಳಗಾವಿಯಲ್ಲಿರುವ ಬ್ರಿಟಿಷ್ ವಸಾಹತುಶೈಲಿಯ ವಾಸ್ತುಶಿಲ್ಪ ಮತ್ತು ಇದರಿಂದ ಪ್ರಭಾವಗೊಂಡ ಸಮಕಾಲೀನ ದೇಶೀಯ ವಾಸ್ತುಶಿಲ್ಪದ ಪಕ್ಷಿನೋಟ ದೊರೆಯುತ್ತದೆ. ನಮ್ಮ ಸಂಸ್ಕೃತಿಯ ಹೆಗ್ಗುರುತುಗಳಾದ ಈ ಸೌಧಗಳು ಬೆಳಗಾವಿಯ ಹೆಮ್ಮೆಯ ಪ್ರತೀಕಗಳೆನಿಸಿವೆ. ಬ್ರಿಟಿಷ್ ವಸಾಹತು ವಾಸ್ತುಶಿಲ್ಪ ಭಾರತೀಯ ವಾಸ್ತುಶಿಲ್ಪಶೈಲಿಯಲ್ಲಿ ಹಾಸುಹೊಕ್ಕಾಯಿತು. ಛಜ್ಜಾ, ಮಾಳಿಗೆ, ಛತ್ತು, ಜಾಲ ಮುಂತಾದ ಭಾರತೀಯ ಲಕ್ಷಣಗಳು ಯುರೋಪಿಯನ್ ಶೈಲಿಯಲ್ಲಿ ಮಿಶ್ರಣಗೊಂಡವು. ಬೆಳಗಾವಿಯಲ್ಲಿ ಆಳಿದ ವಸಾಹತು ವಾಸ್ತುಶಿಲ್ಪ ಹೇರಳವಾಗಿ ನಿರ್ಮಾಣಗೊಂಡರೂ ಉಳಿದಿರುವುದು ಅತ್ಯಲ್ಪ. ಈ ನಿಟ್ಟಿನಲ್ಲಿ ಇಡೀ ಬೆಳಗಾವಿ ಜಿಲ್ಲೆಯಲ್ಲಿರುವ ವಸಾಹತು ವಾಸ್ತುಶಿಲ್ಪ ಸ್ಮಾರಕಗಳ ಅಧ್ಯಯನ ಮತ್ತು ಸ್ಥಳೀಯ ವಾಸ್ತುಶಿಲ್ಪದ ಮೇಲೆ ಅವುಗಳ ಪ್ರಭಾವ-ಇವುಗಳ ಸಮಗ್ರ ಅಧ್ಯಯನ ಅವಶ್ಯಕವೆನಿಸಿದೆ.

[ವಿಶ್ವವಿದ್ಯಾಲಯ ಅನುದಾನ ಆಯೋಗದ ಮೈನರ್ ರಿಸರ್ಚ್ ಪ್ರಾಜೆಕ್ಟ್ "Architectural Heritage of Belgaum Region An Analytical Study" ಅಂಗವಾಗಿ ಕೈಗೊಂಡ ಅಧ್ಯಯನ ಮತ್ತು ಕ್ಷೇತ್ರಕಾರ್ಯ.]



## ಆಧಾರಸೂಚಿ

೧. Davies Philip, *Splendours of the Raj: British Architecture in India* 1985.
೨. J. Metcalf, *Architecture and Empire* (1982).
೩. T.P. Issar: *The city Beautiful*, 2002.
೪. Cambell James: *Gazetteer of Bombay Presidency, Belgaum*, 1884.
೫. ಸ್ಮಿತಾ ಸುರೇಬಾನಕರ., *'ಬೆಳಗಾವಿಯ ಪಾರಂಪರಿಕ ಕಟ್ಟಡಗಳು'*, **ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**, ೨೦೧೦.



# ನರಬಲಿ(ದಾನ)-ಹೊಯ್ಸಳ ಶಿಲ್ಪಗಳಲ್ಲಿ ಕೆಲವು ಅಪರೂಪದ ನಿರೂಪಣೆಗಳು

**ಡಾ. ಆರ್.ಎಚ್. ಕುಲಕರ್ಣಿ***

**ಹೊ**ಯ್ಸಳರ ಕಾಲದ ಹಳೆಬೀಡಿನ (ಬೇಲೂರು, ತಾ. ಹಾಸನ ಜಿಲ್ಲೆ) ಹೊಯ್ಸಳೇಶ್ವರ ದೇವಾಲಯ ಮತ್ತು ಜಾವಗಲ್ಲು ಹೋಬಳಿಯ ಅರಕೆರೆ ಗ್ರಾಮದ ಕೇಶವ ದೇವಾಲಯಗಳಲ್ಲಿ ಕೆಲವು ನರಬಲಿ ದೃಶ್ಯ ನಿರೂಪಣೆಗಳು ಕಂಡುಬರುತ್ತವೆ. ಇವುಗಳು ಅಂದಿನ ಸಮಕಾಲೀನ ನಂಬಿಕೆಗಳನ್ನು ಪ್ರಚೂರಪಡಿಸುತ್ತವೆಯೋ ಹೇಗೆ ಎಂಬುದರ ಕುರಿತು ವಿವೇಚಿಸುವುದು ಈ ಪ್ರಭಂದದ ಉದ್ದೇಶವಾಗಿದೆ.

ಬಲಿ-ಅಥವಾ ಬಲಿದಾನ ಈ ಪರಿಕಲ್ಪನೆ ಬಹು ಪ್ರಾಚೀನವಾದದು. ವೇದಗಳ ಕಾಲದಲ್ಲಿ ಯಜ್ಞಗಳಲ್ಲಿ ಪೂರ್ಣಾಹುತಿಯಾಗಿ ಕುದುರೆ ಮೊದಲಾದ ಪ್ರಾಣಿಗಳನ್ನು ಬಲಿ ನೀಡಲಾಗುತ್ತಿತ್ತು ಋಗ್ವೇದದ ಯಜ್ಞೇನ ಯಜ್ಞಮಯಜಂತು ದೇವಾಃ ... (ಯಜ್ಞಮಹಾಪುರುಷನೇ.. ಯಜ್ಞದಿಂದ ಉದ್ಭವಿ ಸುವ ಮಹಾನುಭಾವ) ಎಂಬ ಸಾಲುಗಳು ಯಜ್ಞಪುರುಷನ ಪರಿಕಲ್ಪನೆಯನ್ನು ಕೊಡುತ್ತವೆ[೧]. ಶಿಷ್ಟಸಂಪ್ರದಾಯದ ಮೊಟ್ಟ ಮೊದಲ “ಬಲಿ” ದಾಖಲೆ ಇದಾಗಿದೆ. ನಂತರದ ಕಾಲದಲ್ಲಿ ಬಲಿ ಕಲ್ಪನೆಯು ವಿಭಿನ್ನ ನೆಲಗಟ್ಟಿನಿಂದ ಮುಂದುವರೆಯಿತು.

ವಿಶೇಷವಾಗಿ ದೇವಿ ಆರಾಧನೆಗಳು - ರಾಕ್ಷಸ ಸಂಹಾರ, ಇತ್ಯಾದಿಗಳು ಪ್ರಾಯಶಃ ಬಲಿ ಅರ್ಥ ವ್ಯಾಪ್ತಿಯನ್ನು ವಿಸ್ತಾರ ಗೊಳಿಸುತ್ತವೆ. ದೇವಿ ಮಹಾತ್ಮೆಯಲ್ಲಿ ನರಬಲಿಯ ಚಿತ್ರಣವು ದೊರೆಯುತ್ತದೆ[೨]. ಮಹಿಷಾಸುರನನ್ನು ಸಂಹರಿಸುವುದು ಮೂಲತಃ ರಾಕ್ಷಸ ಸಂಹಾರವಾದರೂ ನಂತರದ ಕಾಲಘಟ್ಟ ಗಳಲ್ಲಿ ಅದು ಒಂದು ಸಂಪ್ರದಾಯವಾಗಿ ಬೆಳೆಯಿತು. ಆ ಸಂಪ್ರದಾಯವೇ ನಂತರದಲ್ಲಿ ಗ್ರಾಮದೇವತೆಯರಿಗೆ ಕೋಣವನ್ನು ಅಂದರೆ, ಮಹಿಷನನ್ನು ಬಲಿಕೊಡುವ ಸಂಪ್ರದಾಯವು ಪ್ರಾರಂಭವಾಯಿತು ಮತ್ತು ಹೊಸ ಅರ್ಥ ವ್ಯಾಪ್ತಿಗೆ ಕಾರಣವೂ ಆಯಿತು[೩].

ನರಬಲಿಯು ಬಹುತೇಕ ಎಲ್ಲ ದೇಶಗಳಲ್ಲಿ ವ್ಯಾಪಕ ವಾಗಿ ಹರಡಿತ್ತೆಂದು ತೋರುತ್ತದೆ[೪]. ಶಿಲ್ಪಗಳಲ್ಲಿಯೂ ಕೂಡಾ ಹಲವಾರು ದೃಶ್ಯ ದಾಖಲೆಗಳನ್ನು ನೋಡಬಹುದಾಗಿದೆ. ಆದರೆ, ಭಾರತದ ಮಟ್ಟಿಗೆ ಈ ಪದ್ಧತಿಯು ಯಾವಾಗ ಒಂದು ಸಂಪ್ರದಾಯ ವಾಯಿತೆಂಬುವದಕ್ಕೆ ಸ್ಪಷ್ಟ ದಾಖಲೆಗಳಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಸ್ಥಳೀಯವಾದ ಜಾನಪದೀಯ ಕಥನಗಳು ಹುಟ್ಟಿಕೊಂಡವು. ಅಲ್ಲಲ್ಲಿ



ಪುರಾಣಗಳ ಹಿನ್ನೆಲೆಯಲ್ಲಿ ನೋಡಿದಾಗ ಬಲಿಯು ತನ್ನ ಅರ್ಥ ವ್ಯಾಪ್ತಿಯನ್ನು ವೃದ್ಧಿಸಿಕೊಂಡಂತೆ ತೋರುತ್ತದೆ.

ದುರ್ಗೆಗೆ ಅಥವಾ ಶಕ್ತಿ ದೇವತೆಗಳಿಗೆ ನರಬಲಿ ನೀಡುತ್ತಿದ್ದ ದಾಖಲೆಗಳು ಇಂದಿಗೂ ಕಥನದ ರೂಪದಲ್ಲಿ ಪ್ರಚಲಿತದಲ್ಲಿವೆ[೫].

* ಪ್ರವಾಚಕ, ಕಲಾ ಇತಿಹಾಸ ವಿಭಾಗ, ಚಿತ್ರಕಲಾ ಮಹಾವಿದ್ಯಾಲಯ, ಚಿತ್ರಕಲಾ ಪರಿಷತ್ತು, ಕುಮಾರಕೃಪಾ ರಸ್ತೆ, ಬೆಂಗಳೂರು-೦೧.





ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕ್ಕನೂರ ಗ್ರಾಮದ ಅಧಿ ದೇವತೆಯಾದ ಮಹಾಮಾಯಾ ದೇವಿಗೆ ನರಬಲಿ ನೀಡುತ್ತಿದ್ದ ಬಗ್ಗೆ ಈಗಲೂ ಅಲ್ಲಿನ ಜನ ಹೇಳುತ್ತಾರೆ. ಅದೇ ರೀತಿ ಕುಷ್ಟಗಿ ತಾಲೂಕಿನ ಕುಂಬಳಾವತಿ ಎಂಬ ಗ್ರಾಮದ, ಗ್ರಾಮ ದೇವತೆ ಮಕಾಳೆವ್ವ ನಿಗೆ (ಮಹಾಂಕಾಳಿ) ನರಬಲಿ ಆಗುತ್ತಿದ್ದ ಕುರಿತಾಗಿ ಸ್ಥಳೀಯ ವಾದ ಕಥಾ ರೂಪದ ದಾಖಲೆಗಳಿವೆ. ತುಮಕುರು ಹತ್ತಿರದ ಹೊನ್ನುಡಕಿಯಂಬ ಗ್ರಾಮದಲ್ಲಿ ಕೂಡಾ ನರ ಬಲಿ ನೀಡುತ್ತಿದ್ದ ಬಗ್ಗೆ ದಾಖಲೆಯಾಗಿ ಬಲಿ ಶಿಲ್ಪಗಳಿರುವ ಬಲಿ ಪೀಠವಿದೆ[೬]. ಹೀಗೆ ದಾಖಲೆಗಳನ್ನು ಗಮನಿಸಿದಾಗ ವಿಭಿನ್ನ ವಿಷಯಗಳು ಬೆಳಕಿಗೆ ಬರುತ್ತವೆ.

ದೃಶ್ಯ ಮಾಧ್ಯಮದಲ್ಲಿ ನರಬಲಿಯ ದೃಶ್ಯಗಳನ್ನು ಶಿಲ್ಪ ಗಳ ಮತ್ತು ಚಿತ್ರಗಳ ಮಾಧ್ಯಮಗಳಲ್ಲಿ ನಿರೂಪಿಸಿರುವುದನ್ನು ಗಮನಿಸಬಹುದಾಗಿದೆ. ಸಾಮಾನ್ಯವಾಗಿ ದೇವಿಯು ನರ ರೂಪಿ ರಾಕ್ಷಸನನ್ನು ಸಂಹರಿಸುತ್ತಿರುವ ದೃಶ್ಯಗಳನ್ನು ನೋಡಿ ದ್ದೇವೆ ಆದರೆ, ದೇವಿಗೆ ನರ ಬಲಿ ಅರ್ಪಿಸುತ್ತಿರುವ ಶಿಲ್ಪ ನಿರೂಪಣೆಗಳು ಸಾಕಷ್ಟು ಕುತೂಹಲವನ್ನು ಕೆರಳಿಸುತ್ತವೆ. ಹೊಯ್ಸಳ ಶಿಲ್ಪಿಗಳು ನರ ಬಲಿಯನ್ನು ಬಹು ಮಾರ್ಮಿಕವಾಗಿ ದೇವಿಯ ಸನ್ನಿಧಿಯಲ್ಲಿ ಅರ್ಪಣೆ ಎಂಬ ತೆರದಲ್ಲಿ ಬಿಂಬಿಸಿದ್ದಾರೆ.

ಹಳೆಬೀಡಿನ ಹೊಯ್ಸಳೇಶ್ವರ ದೇವಾಲಯದ ದಕ್ಷಿಣ ಭಾಗದ ಕಥಾ ನಿರೂಪಣಾ ಪಟ್ಟಿಕೆಯ ಮೇಲೆ ದೇವಿಗೆ ಬಾಲಕನನ್ನು ಬಲಿಯಾಗಿ ಅರ್ಪಿಸುತ್ತಿರುವ ದೃಶ್ಯ ನಿರೂಪಣೆ ಯನ್ನು ನೋಡಬಹುದು[೭]. ಶಿಲ್ಪಗಳನ್ನು ಪಟ್ಟಿಕೆಯಲ್ಲಿ ಸಾಲಾಗಿ ರಚಿಸಲಾಗಿದೆ. ಎಡಗಡೆಯಿಂದ ಕ್ರಮವಾಗಿ ಸ್ತ್ರೀಯೋರ್ವಳು ಮಗುವನ್ನು ಸೊಂಟದ ಮೇಲೆ ಕುಳ್ಳಿರಿಸಿಕೊಂಡು ನಿಂತಿದ್ದಾಳೆ. ಅವಳ ಪಕ್ಕದಲ್ಲಿ ಖಡ್ಗವನ್ನು ಕೆಳಮುಖವಾಗಿ ಹಿಡಿದು ನಿಂತಿರುವ ಪುರುಷಾಕೃತಿಯಿದೆ. ನಂತರದಲ್ಲಿ ಕೃಷ ಶರೀರೆ ಯಾದ ಆಕೃತಿಯೊಂದು ಕುಳಿತಿದ್ದು ಅವಳ ಪಕ್ಕದಲ್ಲಿ ಗೊರವನಂತೆ ಪೋಷಾಕು ಧರಿಸಿರುವ (ಎಂ.ಎ.ಆರ್ ಗಳಲ್ಲಿ ಈ ರೀತಿಯ ಆಕೃತಿಗಳನ್ನು ದಕ್ಷಿಣಾಮೂರ್ತಿಯಂದು ಗುರುತಿಸಲಾಗಿದೆ)[೮] ವ್ಯಕ್ತಿಯು ಕೈಯ್ಯಲ್ಲಿ ಮಂತ್ರ ದಂಡವನ್ನು ಹಿಡಿದಿದ್ದು, ಮಾಂತ್ರಿಕನನ್ನು ಸೂಚಿಸುತ್ತದೆ. ಇವನ ಪಕ್ಕದಲ್ಲಿಯೇ ಚಿಕ್ಕ ಮಗುವನ್ನು (ಬಾಲಕನನ್ನು) ತನ್ನ ಎರಡೂ ಕೈಗಳಲ್ಲಿ ಅಡ್ಡಲಾಗಿ ಹಿಡಿದು ದೇವಿಗೆ ಸಮರ್ಪಿಸುವ ತೆರದಲ್ಲಿ ರಚಿಸಲಾಗಿದೆ. ತಲೆಗೆ ಮುಂಡಾಸು ಸುತ್ತಿ ಬಾಗಿದಂತೆ ಕಾಣುವ ವ್ಯಕ್ತಿಯು ದೇವಿಗೆ ಮಗುವನ್ನು ಬಲಿ ಕೊಡಲು ಸನ್ನದ್ಧನಾಗಿರು ವಂತೆ ಅಥವಾ ಅರ್ಪಿಸುವಂತೆ ಕಂಡುಬರುತ್ತದೆ. ಇಲ್ಲಿ ದೇವಿಯ ಶಿಲ್ಪವನ್ನು ವಿಶೇಷವಾಗಿ ಗಮನಿಸಬೇಕು. ದೇವಿಯು ಚತುರ್ಭುಜ ಹಸ್ತಳಾಗಿದ್ದು, ಪೀಠದ ಮೇಲೆ ಆಸೀನಳಾಗಿದ್ದಾಳೆ. ಮುಂದಿನ ಬಲಗೈಯ್ಯಲ್ಲಿ ಖಡ್ಗವನ್ನು, ಹಿಂದಿನ ಬಲಗೈಯ್ಯಲ್ಲಿ ತ್ರಿಶೂಲವನ್ನು ಹಿಡಿದಿದ್ದಾಳೆ. ಇನ್ನು, ಮುಂದಿನ ಎಡಗೈಯ್ಯಲ್ಲಿ ಪಾನ ಬಟ್ಟಲು ಮತ್ತು ಹಿಂದಿನ ಎಡಗೈಯ್ಯಲ್ಲಿ ಉದ್ದನೆಯ ಹಿಡಿಕೆ ಇರುವ ಡಮರುಗವನ್ನು ಹಿಡಿದಿದ್ದಾಳೆ. ದೇವಿಯ ಎಡಗಾಲ ಪಾದದ ಬಳಿ ರುಂಡವನ್ನು ಕೆತ್ತಲಾಗಿದೆ. ದೇವಿಯು ಅರ್ಧ ಲೀಲಾಸನದಲ್ಲಿ ಎತ್ತರದ ಪೀಠದ ಮೇಲೆ ಕುಳಿತಿದ್ದು , ಬಲಗಾಲನ್ನು ಪೀಠದ ಮೇಲೆ ಅಡ್ಡಲಾಗಿ ಮಡಿಚಿ, ಎಡಗಾಲನ್ನು ಇಳಿ ಬಿಟ್ಟು, ತಲೆಯ ರುಂಡದ ಮೇಲೆ ಕಾಲನ್ನು ಇಟ್ಟುಕೊಂಡು ಆಸೀನಳಾಗಿದ್ದಾಳೆ. ಮಗುವನ್ನು ಬಲಿ ಪಡೆಯಲು ಭಕ್ತನತ್ತ ನೋಡುತ್ತ ಕುಳಿತಂತೆ ಭಾಸವಾಗುತ್ತದೆ ಅವಳ ಭಾವ ಭಂಗಿ. ದೇವಿಯನ್ನು ಬಿಂಬಿಸಿರುವ ವಿಧವನ್ನು ಗಮನಿಸಿದರೆ ಸ್ಪಷ್ಟವಾಗಿ ಉದ್ದೇಶಿತವಾದ ನಿರ್ಧಿಷ್ಟವಾದ ಆಚರಣೆಯನ್ನು ಬಿಂಬಿಸುವ ತೆರದಲ್ಲಿದೆ ಈ ಶಿಲ್ಪ. ಮಗುವನ್ನು ಬಲಿ ಕೊಡುವ ಸಂಪ್ರದಾಯವು ವಾಮಾಚಾರದ ಪದ್ಧತಿಗಳಲ್ಲಿದ್ದು ಅಂದಿನಿಂದಲೇ ಇದು ಬೆಳೆದುಬಂದಿದೆ ಎಂದು ಹೇಳಬಹುದು.

ಈ ಮೇಲಿನ ಬಾಲ ಬಲಿ ಕಥಾ ನಿರೂಪಣಾ ಶಿಲ್ಪಗಳನ್ನು ಕುರಿತು ವಿಶ್ಲೇಷಣೆಯನ್ನು ಮಾಡಿದಾಗ ಹಲವಾರು

ಅಂಶಗಳು ಗಮನ ಸೆಳೆಯುತ್ತವೆ. ಮೊದಲನೆಯದಾಗಿ ಈ ಶಿಲ್ಪದಲ್ಲಿ ಬಲಿ ನೀಡುತ್ತಿರುವುದು ಬಾಲಕನನ್ನು. ಬಲಿ ನೀಡಲು ನಿಂತಿರುವ ವ್ಯಕ್ತಿ ಪೂಜಾರಿಯೇ ಎಂಬ ಸಂಶಯ ಬರುತ್ತದೆ. ಬಲಿ ನೀಡುವ ವ್ಯಕ್ತಿಯ ಹಿಂದೆ ನಿಂತಿರುವ ಗೌನಿನಂತಹ ಪೋಷಾಕು ಧರಿಸಿದ ವ್ಯಕ್ತಿ ಮಾಂತ್ರಿಕನೇ ಆಗಿದ್ದಾನೆ. ಇಂತಹ ಹಲವಾರು ಶಿಲ್ಪಗಳನ್ನು ಹೊಯ್ಸಳ ದೇವಾಲಯಗಳ ಭಿತ್ತಿ ಶಿಲ್ಪಗಳಲ್ಲಿ ಕಾಣಬಹುದು. ಪ್ರಸ್ತುತ ಶಿಲ್ಪಗಳ ನಿರೂಪಣೆಯಿಂದ ಗೌನು ಧರಿಸಿರುವ ಶಿಲ್ಪಗಳ ಇನ್ನಿತರ ನಿರೂಪಣೆಗಳನ್ನು ಸ್ಪಷ್ಟವಾಗಿ ಗುರುತಿಸಲು ಸಾಧ್ಯವಾಗುತ್ತದೆ. ಎಂ.ಎ.ಆರ್ ಗಳಲ್ಲಿ ಆ ವ್ಯಕ್ತಿಯನ್ನು ಶಿವನ ರೂಪವಾದ ದಕ್ಷಿಣಾ ಮೂರ್ತಿಯೆಂದು ಗುರುತಿಸಲಾಗಿದೆ. ದಕ್ಷಿಣಾ ಮೂರ್ತಿ ಶಿಲ್ಪದ ಯಾವುದೇ ಲಕ್ಷಣಗಳು ಇಲ್ಲದೇ ಇರುವುದನ್ನು ಗಮನಿಸಿ ಮತ್ತು ಪ್ರಸ್ತುತ ಬಲಿ ಶಿಲ್ಪದ ಜೊತೆಯಲ್ಲಿ ನಿರೂಪಣೆಗೊಂಡಿರುವುದನ್ನು ಗಮನಿಸಿ ಮಾಂತ್ರಿಕನ ಶಿಲ್ಪವಿರಬಹುದೆಂದು ಸ್ಪಷ್ಟಪಡಿಸ ಬಹುದು[೯]. ಈ ಶಿಲ್ಪ ನಿರೂಪಣೆಯಲ್ಲಿರುವ ಎಲ್ಲ ಆಕೃತಿಗಳನ್ನು ಒಂದಕ್ಕೊಂದು ಸಮೀಕರಿಸಿ ನೋಡಿದರೆ ಇದೊಂದು ತಾಂತ್ರಿಕ ಆಚರಣೆಯಾಗಿರಬಹುದೆಂದು ನಿಸ್ಸಂದೇಹವಾಗಿ ಹೇಳಬಹುದು. ಮಧ್ಯಕಾಲೀನ ಕರ್ನಾಟಕದಲ್ಲಿ ಕಾಳಮುಖ ಶೈವ ಸಿದ್ಧಾಂತದ ಆಚರಣೆಗಳು ಪ್ರಚಲಿತದಲ್ಲಿದ್ದವು[೧೦]. ಕಾಳಾಮುಖರಲ್ಲಿ ತಾಂತ್ರಿಕ ಆಚರಣೆಗಳೂ ಕೂಡಾ ಪ್ರಚಲಿತದಲ್ಲಿದ್ದವು. ಇದರ ಪ್ರಭಾವವಾಗಿ ತಾಂತ್ರಿಕರು ದೇವಿಯನ್ನು ತೃಪ್ತಿಪಡಿಸಲು ಮತ್ತು ಓಲೈಸಿಕೊಳ್ಳಲು ನಡೆಸುತ್ತಿದ್ದ ಆಚರಣೆಗಳಲ್ಲಿ ಹಲವಾರು ವಿಧಗಳಿದ್ದವು. ಅವುಗಳಲ್ಲಿ ಬಾಲ ಬಲಿಯನ್ನು ನೀಡುವ ಆಚರಣೆಗಳನ್ನು ಮಾಡುತ್ತಿದ್ದರು. ಪ್ರಾಯಶಃ ಅಂತಹ ಆಚರಣೆಯನ್ನು ಬಿಂಬಿಸುವಂತಹ ನಿರೂಪಣೆ ಇದಾಗಿದೆ.

ಸಾಮಾನ್ಯವಾಗಿ ಮಧ್ಯಕಾಲೀನ ಕಾಲದಲ್ಲಿ ಸಿಡಿ ತಲೆ[೧೧] –ಅಂದರೆ ತಮ್ಮ ತಲೆಯನ್ನು ತಾವೇ ಕತ್ತರಿಸಿಕೊಳ್ಳುವ ಸಂಪ್ರದಾಯವು ಪ್ರಚಲಿತದಲ್ಲಿತ್ತು. ಇದಕ್ಕೆ ಸಾಕ್ಷಿಯಾಗಿ ಹಲವಾರು ಶಿಲ್ಪಗಳು ಕಂಡುಬರುತ್ತವೆ. ಅಲ್ಲದೇ, ಹೊಯ್ಸಳರ ಕಾಲದಲ್ಲಿ ಗರುಡರಾಗುವ ಸಂಪ್ರದಾಯವಿತ್ತು. ಅಂದರೆ, ರಾಜನ ಖಾಸಾ ಅಂಗರಕ್ಷರು ರಾಜನ ಮರಣವಾದಾಗ ತಮ್ಮನ್ನು ತಾವೆ ಕತ್ತಿಯಿಂದ ಚುಚ್ಚಿ ಕೊಂದುಕೊಳ್ಳುತ್ತಿದ್ದರು. ಇದಕ್ಕೆ ದಾಖಲೆಯಾಗಿ ಹಳೆಬೀಡಿನ ಹೊಯ್ಸಳೇಶ್ವರ ದೇವಾಲಯದ ದಕ್ಷಿಣಾ ದ್ವಾರದ ಹತ್ತಿರ ಇರುವ ಕುವರ ಲಕ್ಷ್ಮನ ಸ್ಮಾರಕವನ್ನು ಗಮನಿಸಬಹುದು. ಇಮ್ಮಡಿ ಬಲ್ಲಾಳನು ನಿಧನನಾದ ಮೇಲೆ ಕುವರ ಲೆಂಕನು (ಲಕ್ಷ್ಮ) ತನ್ನ ಹಲವಾರು ಸಹಚರರೊಂದಿಗೆ ಆತ್ಮಾಹುತಿಮಾಡಿಕೊಂಡನೆಂದು ಅಲ್ಲಿನ ಶಾಸನವೇ ಹೇಳುತ್ತದೆ[೧೨]. ಇವುಗಳ ಹೊರತಾಗಿಯೂ ಪ್ರಸ್ತುತ ಶಿಲ್ಪಗಳಲ್ಲಿ ಗಮನಿಸಲಾಗಿರುವ ಆಚರಣೆಗಳನ್ನು ನೋಡಿದರೆ, ಪ್ರಾಯಶಃ ಅಂದು ಗುಪ್ತವಾಗಿ ಇಂತಹ ಪದ್ಧತಿಗಳು ನಡೆದು ಕೊಂಡು ಬಂದಿದ್ದವು ಎಂದು ಹೇಳಬಹುದು. ಆದರೆ, ಹೊಯ್ಸಳೇಶ್ವರ ದೇವಾಲಯದ ಈ ಶಿಲ್ಪ ನಿರೂಪಣೆಯು ಮಹಾಭಾರತ ಮತ್ತು ರಾಮಾಯಣದ ಕಥಾನಿರೂಪಣೆಗಳಲ್ಲಿ ಅವುಗಳ ಭಾಗವೆಂಬಂತೆ ಕಂಡುಬರುತ್ತದೆ. ಆದರೆ, ಅವುಗಳೊಂದಿಗೆ ಇವಕ್ಕೆ ಯಾವುದೇ ಸಂಬಂಧವಿಲ್ಲ. ವಿಶೇಷವಾಗಿ ತಾಂತ್ರಿಕರು ದೇವಿಯನ್ನು ಓಲೈಸಿಕೊಳ್ಳಲು ನರಬಲಿಯನ್ನು ನೀಡುತ್ತಿದ್ದರೆಂದು ಸಾಮಾನ್ಯವಾದ ನಂಬಿಕೆಯಾಗಿದೆ.

ಹೊಯ್ಸಳರ ಕಾಲದ ಅರಸಿಕೇರೆ ತಾಲ್ಲೂಕಿನ ಜಾವಗಲ್ಲಿನ ಹತ್ತಿರ ಇರುವ ಅರಕೆರೆ ಗ್ರಾಮದ ಕೇಶವ ದೇವಾಲಯದ ಹೊರಭಿತ್ತಿಯ ಮೇಲೆ ಇರುವ ನರಬಲಿಯನ್ನೇ ಸೂಚಿಸುವ ಶಿಲ್ಪದ ಚಿತ್ರಣವೊಂದು ಹೊಯ್ಸಳೇಶ್ವರ ದೇವಾಲಯಕ್ಕಿಂತ ತುಸು ಭಿನ್ನವಾಗಿ ರಚನೆಯಾಗಿದೆ. ಈ ದೇವಾಲಯವು ಸುಮಾರು ಕ್ರಿ.ಶ. ೧೩ನೆಯ ಶತಮಾನದ ಮಧ್ಯದಲ್ಲಿ ರಚನೆ ಯಾಗಿದೆ[೧೩]. ಶಿಲ್ಪದಲ್ಲಿ ಗೋಡೆಯ ಮೇಲೆ ದೇವಿಯು ತನ್ನ ಎರಡೂ ಕಾಲುಗಳನ್ನು ಸಮನಾಗಿ ಮಡಚಿಕೊಂಡು ಯೋನಿ ಭಾಗವನ್ನು ಸಾಕಷ್ಟು ಕಾಣಿಸುವ ಹಾಗೆ ಕಾಲುಗಳನ್ನು ಅಗಲಿಸಿ ಕೊಂಡು ಕುಳಿತಿದ್ದಾಳೆ. ಈ ಶಿಲ್ಪವು ನೋಡಲು ಲಜ್ಜಾಗೌರಿಯ ಹಾಗೆ ಕಾಣುತ್ತದೆ.

ಲಜ್ಜಾಗೌರಿಯ ಕಲ್ಪನೆಯು ಚಾಲುಕ್ಯ ಪೂರ್ವ ಕಾಲದಲ್ಲಿಯೇ ಇದ್ದಿತ್ತು[೧೪]. ಅಲ್ಲದೇ ಚಾಲುಕ್ಯರ ಕಾಲದಲ್ಲಿ ಲಜ್ಜಾಗೌರಿಯು ಒಂದು ಸಾಮಾಜಿಕ ಮತ್ತು ಧಾರ್ಮಿಕ ಆಚರಣೆಯ ಭಾಗವಗಿ ಬೆಳವಣಿಗೆ ಹೊಂದಿದ್ದು ಹಲವಾರು ಲಜ್ಜಾಗೌರಿಯ ಶಿಲ್ಪಗಳು ಮಹಾಕೂಟ, ನಾಗನಾಥ ಕೊಳ್ಳ, ಸಿದ್ಧನಕೊಳ್ಳ ಮತ್ತು ಹುಲಿಗೆಮ್ಮನಕೊಳ್ಳ ಹೀಗೆ ಶಿಲ್ಪಗಳನ್ನು ನೋಡಬಹುದು. ಆನಂತರದಲ್ಲಿಯೂ ಕೂಡಾ ಈ ಸಂಪ್ರದಾಯವು ನಿರಂತರವಾಗಿ ಪ್ರಚೂರಗೊಂಡಿದೆ. ಹೊಯ್ಸಳ ಕಾಲದ ಕಥಾನಕ ಶಿಲ್ಪಗಳಲ್ಲಿ ನೈಜತೆಗೆ ಕೈಗನ್ನಡಿ ಯೆಂಬತೆ, ದೇವಿಗೆ ಬಲಿಕೊಡುವ ಶಿಲ್ಪಗಳ ರಚನೆಯನ್ನು ಕಾಣಬಹುದು.

ಹೊಯ್ಸಳೇಶ್ವರ ದೇವಾಲಯದ ಕಥಾನಕ ಶಿಲ್ಪಗಳ ಭಾಗವಾಗಿರುವ ದೇವಿಗೆ ಬಲಿ ನೀಡುತ್ತಿರುವ ಶಿಲ್ಪವು ಬಹುತೇಕವಾಗಿ ನಂತರದ ಕಾಲಘಟ್ಟಗಳಲ್ಲಿ ಕಂಡುಬರುವ ದೇವಿಯ ವೈವಿಧ್ಯಮಯವಾದ ಶಿಲ್ಪಗಳಿಗೆ ಮುನ್ನುಡಿಯಂತಿದೆ. ವಿಶೇಷವಾಗಿ ದೊಡ್ಡಗದ್ದವಳ್ಳಿಯ ಮಹಾಲಕ್ಷ್ಮೀ ದೇವಾಲಯದ ಉದಾಹರಣೆಯನ್ನು ಇಲ್ಲಿ ನೋಡಬಹುದು[೧೫]. ದೊಡ್ಡ ಗದ್ದವಳ್ಳಿಯ ದೇವಾಲಯವು ಶಾಸನೋಕ್ತವಾಗಿ ಮೂಲತಃ

ಮಹಾಲಕ್ಷ್ಮಿಗೆ ನಿರ್ಮಾಣವಾಗಿದ್ದರೂ ವಾಸ್ತವವಾಗಿ ಇಲ್ಲಿ ಮುಖ್ಯವಾದ ಆಚರಣೆ ನಡೆಯುತ್ತಿರುವುದು ಮಹಾಕಾಳಿಯದೇ ಆಗಿದೆ. ಮಹಾಕಾಳಿಯ ಗರ್ಭಗೃಹದ ಹೊರಭಾಗದಲ್ಲಿ ಭೂತಗಳ ಶಿಲ್ಪಗಳು ಸ್ಪಷ್ಟವಾಗಿ ಬಲಿಗೆ ಸಂಬಂಧಿಸಿದ ಶಿಲ್ಪಗಳೆಂಬುದನ್ನು ಇಲ್ಲಿ ಗಮನಿಸಬಹುದು. ಅದೇ ರೀತಿ ಇದಕ್ಕೂ ಹಿಂದೆ ಹೋಗಿ ನೋಡಿದಾಗ ಬಾದಾಮಿಯ ಚಾಲುಕ್ಯರ ಮಹಾಕೂಟದ ಪಾತ್ರೋಳಿಯ ಪಾರ್ಶ್ವಗಳಲ್ಲಿಯ ಭೂತ ಶಿಲ್ಪಗಳನ್ನು ಕೂಡಾ ಸ್ಮರಿಸಬಹುದು. ಅಲ್ಲಿಯೂ ಕೂಡಾ ಭೂತ ಶಿಲ್ಪಗಳನ್ನು ರಚಿಸಲಾಗಿದ್ದು ತಾಂತ್ರಿಕ ಆಚರಣೆಯ ಭಾಗವಾಗಿ ಮತ್ತು ಪ್ರತೀಕವಾಗಿ ಅವುಗಳನ್ನು ರಚಿಸಲಾಗಿದೆ. ಇವುಗಳು ಚಾಲುಕ್ಯೋತ್ತರಕಾಲದ ಶಿಲ್ಪಗಳಾದರೂ ಅಲ್ಲಿ ನಿರಂತರವಾಗಿ ತಾಂತ್ರಿಕ ಆಚರಣೆಗೆ ಪೂರಕವಾದ ಎಲ್ಲರೀತಿಯ ಶಿಲ್ಪಗಳನ್ನು ಲಜ್ಜಗೌರಿಯ ಶಿಲ್ಪದ ರೂಪದಲ್ಲಿ ನೋಡಬಹುದು. ಆದುದರಿಂದ ಹೊಯ್ಸಳೇಶ್ವರ ದೇವಾಲಯದ ಪ್ರಕೃತ ದೇವಿಶಿಲ್ಪವು ಬಲ್ಲಿಯನ್ನು ಸ್ವೀಕರಿಸಲು ಸನ್ನದ್ಧಳಾಗಿ ಕುಳಿತಂತೆ ಕಾಣುವಂತೆ ಶಿಲ್ಪಕಲಾವೈದನು ಕೆತ್ತಿದ ವಿಧವು ಪ್ರಾಯಃ ನಂತರದ ದೇವಿಯ ಶಿಲ್ಪಗಳ ಗಾಢವಾದ ಸಂಪ್ರದಾಯಕ್ಕೆ ನಾಂದಿಯಾಗುತ್ತದೆ.

ಒಟ್ಟಾರೆಯಾಗಿ ಹೊಯ್ಸಳ ಕಾಲದ ಬಲಿ ಶಿಲ್ಪಗಳು ಅಂದಿನ ಸಾಮಾಜಿಕ ಮತ್ತು ಧಾರ್ಮಿಕವಾದ ಆಚರಣೆಗಳನ್ನು ಬಿಂಬಿಸುತ್ತವೆ. ಈ ಶಿಲ್ಪಗಳ ಅಧ್ಯಯನದಿಂದ ಮುಖ್ಯವಾಗಿ ದಕ್ಷಿಣಾಮೂರ್ತಿ ಮತ್ತು ಮೋಹಿನಿ ಎಂದು ಭಾವಿಸಲಾಗುತ್ತಿದ್ದ ಶಿಲ್ಪಗಳನ್ನು ಮಾಂತ್ರಿಕ ಮತ್ತು ಯೋಗಿನಿ ಎಂದು ಗುರುತಿಸ ಬಹುದಾಗಿದೆ. ಹೊಯ್ಸಳೋತ್ತರ ಕಾಲದಲ್ಲಿ ದೇವಿಯ ಪ್ರತ್ಯೇಕವಾದ ದೇವಾಲಯಗಳು ಅಧಿಕವಾಗಿ ರಚನೆಗೊಳ್ಳಲು ಪ್ರಾರಂಭಗೊಂಡವು ಮತ್ತು ಬಲಿ ಆಚರಣೆಗಳು ಹೊಸ ಅರ್ಥ ಮತ್ತು ಮುಖಗಳನ್ನು ಪಡೆದುಕೊಂಡು ಬೆಳವಣಿಗೆ ಹೊಂದಿದವು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಋಗ್ವೇದದ ಮಂತ್ರವಾಗಿರುವ ಇದು ಸ್ಪಷ್ಟವಾಗಿ ಯಜ್ಞಪುರುಷ ಮತ್ತು ಅವನ ಬಲಿಯನ್ನು ಕುರಿತು ಮಾತನಾಡುತ್ತದೆ.

೨. ದೇವಿ ಮಹಾತ್ಮ್ಯ–ಅಧ್ಯಾಯ.

೩. ಅತ್ಯಂತ ಪ್ರಾಚೀನ ಶಿಲ್ಪಗಳು ಕ್ರಿ.ಶ. ಆರಂಭದಿಂದಲೇ ಕಂಡುಬರುತ್ತವೆ. ಕರ್ನಾಟಕದ ಮಟ್ಟಿಗೆ ಸನ್ನತಿಯಲ್ಲಿ ದೊರೆತ ಟೆರ್ರಾಕೊಟ್ಟಾ ದಲ್ಲಿ ರಚಿಸಿರುವ ಚಿಕಣಿ ಅಳತೆಯ ಮಹಿಷಮರ್ದಿನಿಯ ಆಕೃತಿಯು ಮೊದಲನೆಯದಾಗಿದೆ. ಚಿತ್ರಗಳಿಗೆ ನೋಡಿ. ಡಾ. ಆರ್.ಎಚ್. ಕುಲಕರ್ಣಿ. ೨೦೧೦. ಪ್ರಿ ಅಂಡ ಅರ್ಲಿ ಚಾಲುಕ್ಯ ಸ್ಕಲ್ಪಚರ್. ಹರ್ಮನ್ ಪಬ್ಲಿಷಿಂಗ ಹೌಸ್. ನ್ಯೂದಿಲ್ಲಿ. ಚಿತ್ರಸಂಖ್ಯೆ ೫೦, ಪುಟ ೧೧೪.

೪. ಬಹುಶಃ ಮೌರ್ಯೋತ್ತರ ಕಾಲದಲ್ಲಿ ಆಚರಣೆಗಳು ಬಹುವಾಗಿ ಗಟ್ಟಿಯಾಗಿದ್ದವು.

೫. ಕರ್ನಾಟಕದಲ್ಲಿ ಹಲವಾರು ದೇವಿ ಕೇಂದ್ರಗಳಿವೆ. ತಾಂತ್ರಿಕ ಆಚರಣೆಗೆ ಹೇಳಿಮಾಡಿಸಿದಂತಹ ನೈಸರ್ಗಿಕವಾದ ಕೊಳ್ಳ ,ಕಣಿವೆ ಪ್ರದೇಶಗಳಲ್ಲಿ ಶಿವ–ದೇವಿ ದೇವಾಲಯಗಳ ರಚನೆಗೊಂಡಿವೆ. ಹುಲಿಗೆಮ್ಮನಕೊಳ್ಳ, ಸಿದ್ಧನಕೊಳ್ಳ , ನಾಗನಾಥ ಕೊಳ್ಳ ಇವು ಕೆಲವು ಉದಾಹರಣೆಗಳು.

೬ ಈ ವಿವರವನ್ನು ನೀಡಿದ ಅಕಾಡೆಮಿಯ ಸ್ನೇಹಿತರಾದ ಡಾ. ನಂಜುಂಡ ಸ್ವಾಮಿಯವರಿಗೆ ನೆನಕೆಗಳು.

೭. ಎಂ.ಎ.ಆರ್.ನಲ್ಲಿ ಮೊಟ್ಟಮೊದಲಿಗೆ ಈ ಚಿತ್ರವೂ ಪ್ರಕಟಗೊಂಡರೂ ಇದರಬಗ್ಗೆ ಯಾವುದೇ ಮಾಹಿತಿಯು ಇಲ್ಲ. ಇದುವರೆಗೂ ಹೊಯ್ಸಳೇಶ್ವರದೇವಾಲಯದ ಕುರಿತು ಆದಂತಹ ಯಾವ ಅಧ್ಯನಗಳೂ ಈ ಶಿಲ್ಪದ ಬಗ್ಗೆ ಏನನ್ನೂ ಹೇಳುವುದಿಲ್ಲ. ಪ್ರಸ್ತುತ ಲೇಖನವೇ ಈ ದಿಸೆಯಲ್ಲಿ ಮೊಟ್ಟಮೊದಲಿನದು.

೮. ಎಂ.ಎ.ಆರ್. ೧೯೨೮–೪೨ ಗಳಲ್ಲಿ ಹೊಯ್ಸಳ ದೇವಾಲಯಗಳನ್ನು ಚರ್ಚಿಸುವಾಗ ಎಲ್ಲಕಡೆಗಳಲ್ಲಿ ಹಾಗೆಯೇ ಗುರುತಿಸಲಾಗಿದೆ. ಆದರೆ ಅದು ಸರಿಯಾದುದಲ್ಲವೆಂದು ಈಗ ಸ್ಪಷ್ಟಪಡಿಸಬಹುದು.

೯. ಅದೇ

೧೦. ಕಾಳಮುಖ ಅಂಡ್ ಕಾಪಾಲಿಕ ಟು ಲಾಸ್ಟ ಶೈವೇಟ್ ಸೆಕ್ಟ್ಸ್. ಡೇವಿಡ್. ಲಾರೆಂಜನ್ ಮೋತಿಲಾಲ್ ಬನಾರಸೀದಾಸ, ದಿಲ್ಲಿ. ೧೯೭೨(೧೯೯೧)

೧೧. ಸಿಡಿತಲೆಯಕುರಿತಾಗಿ ಹಲವಾರು ಶಿಲ್ಪಗಳು ದೊರೆಯುತ್ತವೆ. ಹೆಚ್ಚಿನ ಚರ್ಚೆಗೆ ನೋಡಿ. ಕಲಬುರ್ಗಿ. ಎಂ.ಎಂ. ೧೯೮೦, ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು. ಐ.ಬಿ.ಹೆಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು

೧೨. ಹೊಯ್ಸಳೇಶ್ವರ ದೇವಾಲಯದ ದಕ್ಷಿಣ ಭಾಗದಲ್ಲಿರುವ ಕುವರಲೆಂಕನ ಸ್ಮಾರಕ ಸ್ಥಂಭ ಶಾಸನ.

೧೩. ಎಂ.ಎ.ಆರ್. ಅರಕೆರೆಯ ಕೇಶವ ದೇವಾಲಯದ ಬಗ್ಗೆ ಕಿರಿದಾದ ಮಾಹಿತಿ ಇದೆ. ಆದರೆ ಪ್ರಸ್ತುತ ಶಿಲ್ಪಗಳ ಬಗ್ಗೆ ಯಾವುದೇ ರೀತಿಯ ದಾಖಲೆಗಳಿಲ್ಲ.

೧೪. ಕ್ಯಾರೋಲ್ ಬೋಲನ್.೧೯೯೨. ಫಾರ್ಮ್ಸ್ ಆಫ್ ಗಾಡೆಸ್ ಲಜಾಗೌರಿ ಇನ್ ಇಂಡಿಯನ್ ಆರ್ಟ್. ಪೆನ್ಸೆಲ್ವಿಯಾ. ಇದರಲ್ಲಿ ಸವಿವರವಾಗಿ ಲಜಾಗೌರಿಯ ಉಗಮ ವಿಕಾಸದ ಬಗ್ಗೆ ಚರ್ಚೆಇರುತ್ತದೆ.

೧೫. ಆರ್. ನರಸಿಂಹಾಚಾರ್, ೧೯೧೯, ಮಹಾಲಕ್ಷ್ಮೀ ಟೆಂಪಲ್ ಅಟ್ ದೊಡ್ಡಗದ್ದವಳ್ಳಿ, ಬೆಂಗಳೂರು.



# ದೇವಾಲಯ ನಿರ್ಮಾಣ ಶಾಸ್ತ್ರ ಒಂದು ಶಾಸ್ತ್ರೀಯ ಅಧ್ಯಯನ

ವಿ. ಅನುರಾಧ*

**ದೇ**ವಾಲಯ ನಿರ್ಮಾಣವನ್ನು ಕುರಿತು ಹಲವು ವಾಸ್ತು ಗ್ರಂಥಗಳಲ್ಲಿ ವಿಸ್ತಾರವಾದ ವರ್ಣನೆ ಇದೆ. ಮಯಮತ, ಮಾನಸಾರ, ಕಾಮಿಕಾಗಮ ಇನ್ನೂ ಹಲವು ಆಗಮಗಳು ಈ ಬಗ್ಗೆ ಬೇರೆ, ಬೇರೆ ರೀತಿ ವಿಧಾನಗಳನ್ನು ಪಾಲಿಸಬೇಕಾದ ವಿಧಿಗಳನ್ನು ಸವಿವರವಾಗಿ ತಿಳಿಸಿವೆ. ಅಂಶುಮದ್ ಭೇದಾಗಮವು ಹಲವು ಪ್ರಮುಖ ವಿವರಗಳನ್ನು ನೀಡಿದೆ. ಈ ವಿವರಗಳು ಹೆಚ್ಚು ವೈಜ್ಞಾನಿಕವು, ನಿಖರವೂ ಆಗಿರುವುದರಿಂದ, ಈ ವಿಧಾನಗಳನ್ನು ದೇವಾಲಯ ನಿರ್ಮಾಣ ಕಾಲದಲ್ಲಿ ಬಳಸಿರಬಹುದು ಎಂದು ತಿಳಿಯ ಬೇಕಾಗಿದೆ. ದೇವಾಲಯ ನಿರ್ಮಾಣಕ್ಕೆ ಮುನ್ನ ಭೂಮಿಯನ್ನು ಪರೀಕ್ಷಿಸ ಬೇಕಾಗಿದೆ. ದೇವಾಲಯ ನಿರ್ಮಾಣದ ಸ್ಥಳವನ್ನು ಗ್ರಂಥಗಳು– ಪ್ರಾಸಾದ, ಮಂಟಪ, ಶಾಲಾ, ಪ್ರಾಕರ, ಗೋಪುರ, ಸದನ, ಕ್ಷೇತ್ರ, ತೀರ್ಥ ಎಂದು ತಿಳಿಸಿವೆ. ಶಾಸ್ತ್ರಗಳು ಎರಡು ರೀತಿಯ ಭೂ–ರಚನೆಗಳನ್ನು ವಿವರಿಸುತ್ತಾ ೧. ಸ್ನಿಗ್ಧ ಮತ್ತು ೨. ಅಸ್ನಿಗ್ಧ ಎಂದು ಕರೆಯುತ್ತವೆ. ಕೆಲವು ರೀತಿಯ ಭೂಮಿಯಲ್ಲಿ ಪುರುಷನ ನಾಭಿಯಷ್ಟು ಆಳಕ್ಕೆ ಅಗೆದು ಅದರಲ್ಲಿ ನೀರನ್ನು ತುಂಬಿಸಿದ ನಂತರವು ಸುಲಭವಾಗಿ ಅಗೆಯಲು ಸಾಧ್ಯವಿರುವುದಿಲ್ಲ. ಇನ್ನು ಕೆಲವು ರೀತಿಯ ಭೂಮಿಯಲ್ಲಿ ಮರಳಿನ ಅಂಶ ಹೆಚ್ಚಾಗಿರುತ್ತದೆ. ಹಾಗಾಗಿ ಆಭೂಮಿಯನ್ನು ಸುಲಭವಾಗಿ ಅಗೆಯಬಹುದು ಮಣ್ಣಿನಲ್ಲಿ ತೇವದ ಅಂಶವು ಹೆಚ್ಚಾಗಿರುತ್ತದೆ. ಅಗೆಯಲು ಪ್ರಾರಂಭಿಸಿ ದಾಗಲೇ ನೀರು ಜಿನುಗುತ್ತದೆ. ಆದ್ದರಿಂದ ತಳದಿಂದ ನೀರು ಜಿನುಗುವುದು ನಿಲ್ಲುವವರಗೆ ಭೂಮಿಯನ್ನು ಅಗೆದು ತೆಗೆಯಬೇಕು. ನಿರ್ಮಿಸಲಿರುವ ಪ್ರಾಸದದ ಆಳತೆಗಿಂತಲೂ ಎರಡು ಹಸ್ತಗಳನ್ನು ಉದ್ದ ಮತ್ತು ಅಗಲಗಳಿಗೆ ಹೆಚ್ಚಾಗಿ ಸೇರಿಸಿ ಭೂಮಿಯನ್ನು ಬಂದು ಹಸ್ತ ಆಳವಾಗಿ ಅಗೆಯಬೇಕು. ಬೆಂಕಿಯಿಂದ ಬೆಂದಿರುವ–ಅಗ್ನಿಸ್ಪರ್ಶವಾಗಿರುವ ಭೂಮಿ ಯನ್ನು ಯಾವುದೇ ಕಾರಣಕ್ಕೂ ಅಗೆಯಬಾರದು ಭೂಮಿಯಲ್ಲಿ ನೀರು ಕಾಣಿಸಿಕೊಳ್ಳುವಷ್ಟು ಆಳಕ್ಕೆ ಅಗೆಯ ಬೇಕು. ನಂತರ ಅದರಲ್ಲಿ ದಪ್ಪ ಮರಳನ್ನು ತುಂಬಿ ಹಸ್ತಿಪಾದದ ಒನಕೆಗಳಿಂದ ಬಲವಾಗಿ ಕುಟ್ಟಿ ಆಸ್ಥಳವನ್ನು ಭದ್ರಗೊಳಿಸಬೇಕು. ಶಾಸ್ತಗಳು ಈ ವಿವರಣೆಯನ್ನು ಸ್ಪಷ್ಟವಾಗಿ ನೀಡಿವೆ. ಭೂಮಿ ಸಿದ್ದವಾದ ಬಳಿಕ. ಅದರ ಮುಖ್ಯ ಭಾಗದಿಂದ ಆರು ಸೂತ್ರಗಳನ್ನು ರಚಿಸಬೇಕು[೧].

೧. ಮಾನಸೂತ್ರ, ೨. ವಿನ್ಯಾಸ ಸೂತ್ರ, ೩. ಅಧಿಷ್ಠಾನ ಸೂತ್ರ, ೪. ಉಪಪೀಠ ಸೂತ್ರ, ೫. ಹೋಮ ಸೂತ್ರ, ೬. ಪ್ರತಿ ಸೂತ್ರ

ಈ ಆರೂ ಸೂತ್ರಗಳನ್ನು ಸೂತ್ರಷಟ್ಕ ಎಂದು ಕಾಶ್ಯಪ ಶಿಲ್ಪವು ವಿವರಿಸುತ್ತದೆ. ಭೂಮಿಯನ್ನು ಸೂತ್ರಗಳನ್ನಾಗಿ ರೂಪಿಸಿದ ನಂತರ ಭೂ ಶುದ್ದಿ ಕಾರ್ಯ ನೆರವೇರಿಸಬೇಕು. ಗೃಹ ರತ್ನ ಭೂಷಣಂ[೨] ಎಂಬ ಗ್ರಂಥ ಶಲ್ಯಗಳು ಇರುವ ಭೂಮಿಯಲ್ಲಿ ಆಲಯವನ್ನು ನಿರ್ಮಾಣ ಮಾಡಬಾರದೆಂದು ಆದೇಶಿಸುತ್ತದೆ. ಕಬ್ಬಿಣ, ಮರ, ಇದ್ದಿಲು, ಬೂದಿ, ಇಟ್ಟಿಗೆ ಕೇಶ, ಮೂಳೆ ಮುಂತಾದವನ್ನು ಶಲ್ಯ ಎಂದು ತಿಳಿಸಿಲಾಗಿದೆ.[೩] ಪುರುಷನ ಪ್ರಮಾಣದಷ್ಟು ಆಳದ ಭೂಮಿಯನ್ನು ಅಗೆದು ನಂತರ ಆಲಯ ನಿರ್ಮಾಣ ಕಾರ್ಯವನ್ನು ಆರಂಭಿಸಬಹುದು– ಇದು ೯೦ ಇಂಚುಗಳಿಗೆ ಸಮನಾಗಿರುತ್ತದೆ– ಅಥವಾ ೭೪ ಅಡಿಗಳಿಗೆ ಸಮ[೪] ಭದ್ರವಾದ ಬುನಾದಿಗಾಗಿ ಭೂಮಿಯ್ನನು ಅಗೆದು ತೆಗೆಯುತ್ತಿದ್ದರು. ದೇವಾಲಯದ ಕಲವಿನ್ಯಾಸವನ್ನು ಅನುಸರಿಸಿ ಬುನಾದಿಯ ಸುತ್ತಲೂ ಗೋಡೆಯನ್ನು ನಿರ್ಮಿಸಲಾಗುತ್ತದೆ. ಇದನ್ನು ಭಿತ್ತಿಪೀಠ ಎನ್ನುತ್ತಾರೆ. ಈ ಗೋಡೆಯು ಬುನಾದಿಗೆ ಬಲವನ್ನು ನೀಡುತ್ತಾ ಭೂಮಿಯಲ್ಲಿ ಅಡಗಿರುತ್ತದೆ. ಇದು ಸೌಮ್ಯಭದ್ರ ಪೀಠವನ್ನು ಹೊಂದಿರುತ್ತದೆ.[೫] ಹಲವು ಬಗೆಯ ಮಣ್ಣು, ಧಾನ್ಯ, ನವರತ್ನಗಳು, ಹೂಗಳು ಮುಂತಾದವನ್ನು ತುಂಬಿ ಅದರ ಮೇಲೆ ನೀರು

* ಸಹ ಪ್ರಾಧ್ಯಾಪಕಿ, ಮಹಾರಾಣಿ ಮಹಿಳಾ ಕಲಾ ಕಾಲೇಜು, ಬೆಂಗಳೂರು.

ಸುರಿದು ಗರ್ಭನ್ಯಾಸ ಮಂಜೂಷವನ್ನು ಇರಿಸಿ ಸುತ್ತಲೂ ಪ್ರಥಮೇಷ್ಟಕಗಳನ್ನು ಜೋಡಿಸಬೇಕು. ಗರ್ಭನ್ಯಾಸ ಮತ್ತು ಪ್ರಥಮೇಷ್ಟಕಾ ನ್ಯಾಸಗಳು ನೀರಿನಲ್ಲೇ ನಡೆಸುವುದು ರೂಢಿ. ಈಗಾಗಲೇ ಅಗೆದಿರುವ ಆಳವು ಬುನಾದಿಗೆ ಸಾಕಾಗುವಂತಿದ್ದರೆ, ಗರ್ಭನ್ಯಾಸದ ಸ್ಥಾನಗಳನ್ನು ಗುರುತಿಸುತ್ತಾರೆ.[೬] ಪ್ರಥಮೇಷ್ಟಕಗಳನ್ನು ತೊಳೆದು, ಶುದ್ಧಿ ಗೊಳಿಸಿ, ಪೂಜಿಸಿ, ಪಂಚಬ್ರಹ್ಮ ಮಂತ್ರವನ್ನು ಪಠಿಸುತ್ತಾ ನಂದ್ಯಾವರ್ತಕ್ರಮದಲ್ಲಿ ಪ್ರತಿಷ್ಠಾಪಿಸಬೇಕೆಂದು ಎಲ್ಲಾ ಶಾಸ್ತ್ರಗಳೂ ಹೇಳಿವೆ. ಪ್ರಥಮೇಷ್ಟಕಗಳು ಎಂದರೆ ದೇವಾಲಯ ನಿರ್ಮಾಣಕ್ಕೆ ಬುನಾದಿಯಲ್ಲಿ ಇಡುವ ಇಟ್ಟಿಗೆ ಕೇವಲ ನಾಲ್ಕು ಮಾತ್ರ ಪ್ರಥಮೇಷ್ಟಕಗಳಾಗಿರುತ್ತವೆ. ಇವು ಸಾಧಾರಣವಾಗಿ ಕಟ್ಟಡದಲ್ಲಿ ಬಳಸುವ ಇಟ್ಟಿಗೆಗಳಿಗಿಂತಲೂ ದೊಡ್ಡದಾಗಿರುತ್ತವೆ.[೭]

ದೇವಾಲಯವನ್ನು ನೆಲದ ಮಟ್ಟದಿಂದ ಸ್ವಲ್ಪ ಎತ್ತರಕ್ಕೆ ಕಟ್ಟುತ್ತಾರೆ. ದೇವಾಲಯದ ಮೊದಲ ಭಾಗವೇ ಉಪಪೀಠ ಮತ್ತು ಅಧಿಷ್ಠಾನ. ಈ ವಿಭಜನೆಯು ಶಿಲ್ಪಶಾಸ್ತ್ರದ ದೃಷ್ಟಿಯಿಂದ ಮಾಡಲಾಗಿದೆ. ಸಾಧಾರಣವಾದ ಕಟ್ಟಡದಲ್ಲಿ ಅಧಿಷ್ಠಾನ ಮತ್ತು ಉಪಪೀಠವು ಒಂದೇ ಆಗಿರುತ್ತದೆ. ಕಟ್ಟಡದ ಎತ್ತರ ಹೆಚ್ಚಿಸಲು, ಉಪಪೀಠ ಹಾಗೂ ಅಧಿಷ್ಠಾನ ಎರಡನ್ನೂ ರೂಪಿಸ ಲಾಗುತ್ತದೆ[೮] ಉಪಪೀಠವನ್ನು ಗರ್ಭನ್ಯಾಸ ಮತ್ತು ಪ್ರಥಮೇಷ್ಟಕಾ ನ್ಯಾಸದ ನಂತರ ಸ್ಥಳವನ್ನು ದೃಢಗೊಳಿಸಿದ ನಂತರ ರೂಪಿಸಿ ಸ್ಥಾಪಿಸಲಾಗುತ್ತದೆ. ಇದು ಸಾಧಾರಣವಾಗಿ ಅಧಿಷ್ಠಾನದ ಕೆಳಗಿರುತ್ತದೆ.[೯] ಕೆಲವೊಮ್ಮೆ ಉಪಪೀಠ ಮತ್ತು ಅಧಿಷ್ಠಾನದ ಒಂದೊಂದು ದಿಂಡು ಬೇರೆ ಬೇರೆ ಕಲ್ಲಿನಿಂದ ಮಾಡಲ್ಪಟ್ಟಿ ರುತ್ತದೆ. ಉದಾ: ಉಪಾನ, ಜಗತಿ, ಕಂಪಗಳ ಕುಮುದ, ಪಟ್ಟಿಕಾ ಎಲ್ಲವೂ ಬೇರೆ ಬೇರೆ ಬಿಡಿ-ಬಿಡಿ ಕಲ್ಲಿನ ದಿಂಡುಗಳಿಂದ ರಚಿಸಿ- ಸೇರಿಸಿ ಕೂಡಿಸಲಾಗಿರುವುದು[೧೦]. ಇನ್ನು ಕೆಲವು ಕಡೆ, ೨ ಅಥವಾ ೩ ಭಾಗಗಳನ್ನು ಒಂದೇ ಕಲ್ಲಿನಲ್ಲಿ ಕೆತ್ತಿರುವ ಉದಾಹರಣೆಗಳೂ ಇವೆ.[೧೧] ಸಾಮಾನ್ಯವಾಗಿ ಗೋಪುರ ಗಳಿಗೆ- ಎತ್ತರದ ದೇವಾಲಯಗಳಿಗೆ- ಹೆಚ್ಚು ದಿಂಡುಗಳಿರುವ ಉಪ-ಪೀಠ ಮತ್ತು ಅಧಿಷ್ಠಾನ ವಿಧಾನಗಳು ಬಳಸಲ್ಪಡುತ್ತವೆ.[೧೨] ಮನ್ನೆಯಲ್ಲಿ ಮಣ್ಣಿನ ಇಟ್ಟಿಗೆಗಳಿಂದ ರಚಿತವಾದ ಅಧಿಷ್ಠಾನವಿದೆ. ಅದರ ಮೇಲೆ ಕಲ್ಲಿನಿಂದ ಕಟ್ಟಿರುವ ದೇವಾಲಯವಿದೆ. ಆವನಿಯಲ್ಲಿ ಕಲ್ಲಿನಲ್ಲಿ ನಿರ್ಮಿಸಿರುವ ಅಧಿಷ್ಠಾನದ ಮೇಲೆ ಇಟ್ಟಿಗೆಗಳಿಂದ ನಿರ್ಮಿಸಿರುವ ದೇವಾಲಯವಿದೆ.[೧೩].

ದೇವಾಲಯದ ಅಧಿಷ್ಠಾನದ ಮೇಲ್ಭಾಗವೇ ಭಿತ್ತಿ ಭಿತ್ತಿಯಲ್ಲಿ ಮೂರು ವಿಧಗಳನ್ನು ಕರ್ನಾಟಕದ ದೇವಾಲಯ ಗಳಲ್ಲಿ ಕಾಣಬಹುದು. ಇಟ್ಟಿಗೆಯಿಂದ ಗೋಡೆಗಳನ್ನು ಕಟ್ಟಿರುವುದು. ಎರಡು ಕಲ್ಲುಗಳನ್ನು ಇಟ್ಟಿಗೆಯ ಗೋಡೆಗೆ ಜೋಡಣೆ ಮಾಡುವಂತೆ ಮಾಡಿ ಮಧ್ಯೆ ಜಲ್ಲಿ, ಗಾರೆ, ಗಚ್ಚುಗಳನ್ನು ತುಂಬಿ ಕಟ್ಟಿರುವುದು ಮತ್ತು ಒಂದು ಕಲ್ಲಿನ ಮೇಲೆ ಇನ್ನೊಂದು ಕಲ್ಲು ಜೋಡಿಸಿ ಕಟ್ಟಿರುವುದು. ಸಾಮಾನ್ಯವಾಗಿ ಹೆಚ್ಚಿನ ದೇವಾಲಯಗಳಲ್ಲಿ ಕಲ್ಲನ್ನು ಇಟ್ಟಿಗೆಗಳಂತೆ ಒಳ-ಭಾಗ ಮತ್ತು ಹೊರಭಾಗದ ಗೋಡೆ ಅಚ್ಚುಕಟ್ಟಾಗಿ ರೂಪುಗೊಳ್ಳುವಂತೆ ನಿರ್ಮಿಸುವುದು ವಾಡಿಕೆ. ಹಾಗಾಗಿ ಗೋಡೆಯ ಒಳಪದರ- (ದೇವಾಲಯದ ಒಳಗೆ) ಗೋಡೆಯ ಹೊರ ಪದರ (ದೇವಾಲಯದ ಹೊರಗೆ) ಈ ಭಾಗದ ಕಲ್ಲುಗಳನ್ನು ಚೆನ್ನಾಗಿ ಉಜ್ಜಿ- ನಯವಾಗಿ ಕಾಣುವಂತೆ ಮಾಡಿರುತ್ತಾರೆ. ಮಧ್ಯದ ಭಾಗದಲ್ಲಿನ ಕಲ್ಲನ್ನು ಮುಂದೆ ಚಾಚದಂತೆ ಸರಿಪಡಿಸಿರುತ್ತಾರೆಯೇ ಹೊರತು ಅದನ್ನು ನಯಗೊಳಿಸಿರುವುದಿಲ್ಲ. ಭಿತ್ತಿಯನ್ನು ನಿರ್ಮಿಸುವಾಗ ಕುಂಭಪಂಜರ, ಕೋಷ್ಟ, ಭಿತ್ತಿಪಾದಗಳನ್ನು ರಚಿಸಿ ನಿರ್ಮಾಣ ಮಾಡುತ್ತಾರೆ. ಈ ಭಾಗಗಳನ್ನು ರಚಿಸುವಾಗ ದಪ್ಪಗಿರುವ ಕಲ್ಲನ್ನು ಬಳಸಿ, ಬೇಕಾಗಿರುವ ಆಕೃತಿಯ ರೇಖಾಚಿತ್ರಗಳನ್ನು ಬಿಡಿಸಿ ಉಳಿದ ಭಾಗವನ್ನು ಭಿತ್ತಿಯ ಭಾಗಕ್ಕೆ ಉಬ್ಬಿರುವ ಭಾಗದಲ್ಲಿ ಕುಂಭ ಪಂಜರ, ಕೋಷ್ಟ, ಉಬ್ಬು ಶಿಲ್ಪಗಳು, ರಚನೆಯಾಗುತ್ತವೆ. ಭಿತ್ತಿಯಲ್ಲಿ ಜಾಲ ವಾತಾಯನಗಳನ್ನು ರಚಿಸುವಾಗ ಬೇರೆ ರೀತಿಯ ಕಲ್ಲನ್ನು ಬಳಸುವ ಪರಿಪಾಠವು ನೊಳಂಬರಲ್ಲಿ ಹೆಚ್ಚು ಸ್ಪಷ್ಟವಾಗಿ ಕಂಡುಬರುತ್ತವೆ. ಆ ಕಾಲದ ದೇವಾಲಯಗಳಲ್ಲಿ ಜಾಲ ವಾತಾಯನ, ಬಾಗಿಲುವಾಡ, ಭುವನೇಶ್ವರಿಯಲ್ಲಿನ ಶಿಲ್ಪಗಳ ರಚನೆಗೆ ಬೇರೆ ಕಲ್ಲನ್ನು ಬಳಸುತ್ತಿದ್ದರು. ಜಾಲವಾತಾಯನವನ್ನು ಭಿತ್ತಿಯ ಎಲ್ಲಾ ಭಾಗಗಳಲ್ಲೂ ನಿರ್ಮಿಸುವ ಪರಿಪಾಠ ಕಲ್ಯಾಣದ ಚಾಲುಕ್ಯರ ಕೆಲವು ದೇವಾಲಯಗಳಲ್ಲಿ ಕಾಣಬಹುದು. ಅವರು ಭಿತ್ತಿಯ ಕಲ್ಲಗಳನ್ನು ಜೋಡಿಸುವ ಮೊದಲೇ ಜಾಲವಾತಾಯನವನ್ನು ಪೂರ್ಣವಾಗಿ ಶಾಸ್ತ್ರಗಳ ವಿಧಿ ವಿಧಾನಗಳನ್ನು ಅನುಸರಿಸ ತಯಾರಿಸಿರುತ್ತಾರೆ. ಜಾಲವಾತಾಯನಗಳು ಶಾಸ್ತ್ರೀಯವಾಗಿ ರಚಿಸಿಲ್ಪಟ್ಟಿರುವುದು ಎಲ್ಲೆಡೆ ಗೋಚರವಾಗುತ್ತದೆ. ಈಡೀ ಜಾಲವಾತಾಯನವನ್ನು ಒಂದೇ ಕಲ್ಲಿನಂದ ರಚಿಸಿರುತ್ತಾರೆ. ಎಲ್ಲಿಯೂ ಜಾಲವಾತಾಯನಗಳಿಗೆ, ಎರಡೂ ಮತ್ತು ಮೂರು ಕಲ್ಲುಗಳನ್ನು ಬಳಸಿರುವುದಿಲ್ಲ.[೧೪] ಗೋಡೆಗಳಲ್ಲಿ ಬಾಗಿಲು, ಜಾಲಗಳನ್ನು ರಚಿಸುವಾಗ ಒಳಪದರಗಳು ಪೂರ್ಣವಾಗಿ ಮುಚ್ಚಲ್ಪಡಲು ಅನುಕೂಲವಾಗುವಂತೆ- ಬೀಗದ - ಕಲ್ಲು (Locking – Stone) ಬಳಸುತ್ತಿದ್ದರು. ಈ ರೀತಿಯ ಬೀಗದ ಕಲ್ಲಿನಿಂದ ಒಳಗಿರುವ ಭಾಗ ಹೊರಚಾಚದಂತೆ ಅಚ್ಚುಕಟ್ಟಾಗಿ ಮುಚ್ಚಲ್ಪಡುತ್ತಿತ್ತು.[೧೫] ದೇವಾಲಯದ ಸ್ಥಂಭಗಳನ್ನು ನಿಲ್ಲಿಸುವ



ನಿಖಾರ ಸ್ಥಂಭ–ಮನ್ನೆ



ಇಟ್ಟಿಗೆಯ ಅಧಿಷ್ಠಾನ– ಮನ್ನೆ



ಬಂಡೆಯ ಮೇಲೆ ನಿರ್ಮಿಸುವಾಗ, ಅಧಿಷ್ಠಾನವನ್ನು ಬಂಡೆಗೆ ಅನುಗುಣವಾಗಿ ರೂಪಿಸಿಕೊಳ್ಳುತ್ತಿದ್ದರು–ಕುರುಡುಮಲೆ



ಬೀಗದಂತೆ ಅಳವಡಿಸಲ್ಪಟ್ಟಿರುವ ಕಲ್ಲುಕುರುಡು ಮಲೆ.





ಬಿಡಿ ಬಂಡೆಯ ಭಾಗಗಳನ್ನು ಒಂದೊಂದೇ ದಿಂಡುಗಳಾಗಿ ಕೊರೆದು ಜೋಡಿಸುವುದು– ದೊಡ್ಡಹುಲ್ಲೂರು– ಕೋಲಾರ





ಜಾಲವಾತಯನಗಳನ್ನು ಬೇರೆಯ ಕಲ್ಲಿನಲ್ಲಿ ರಚಿಸಿರುವುದು ಆವನಿ–ನಂದಿ.

ಮೊದಲೇ ಸ್ಥಂಭಗಳನ್ನು ಇರಿಸುವ ಸ್ಥಳಗಳನ್ನು ಗುರುತಿಸಿ, ಸ್ಥಂಭಗಳ ಕೆಳಭಾಗದಲ್ಲಿ ನಿಖಾತ ಸ್ಥಂಭಗಳನ್ನು ಜೋಡಿಸುತ್ತಿದ್ದರು. ಈ ರೀತಿಯ ನಿಖಾತಸ್ಥಂಭಗಳನ್ನು ಅಧಿಷ್ಠಾನ ಭಾಗದಲ್ಲಿ ಹುದುಗಿಸಲ್ಪಟ್ಟಿದ್ದು, ದೇವಾಲಯದ ಕಂಬಗಳಿಗೆ ಆಧಾರವಾಗಿ ಇರುತ್ತಿದ್ದವು ಇವು ಗರ್ಭನ್ಯಾಸದ ನಂತರ ಸೂಕ್ತ ಸ್ಥಳಗಳಲ್ಲಿ ಇರಿಸಲಾಗಿರುತ್ತಿದ್ದವು. ಇಂತಹ ನಖಾತ ಸ್ಥಂಭಗಳು ಮನ್ನೆಯಲ್ಲಿ ದೊರೆತಿವೆ. ಶಾಸ್ತ್ರಗಳು ಕಂಬಗಳನ್ನು ಒಂದೇ ಕಲ್ಲಿನಲ್ಲಿ ರಚಿಸಬೇಕೆಂದು ಹೇಳಿವೆ, ಆದರೆ ಕಂಬಗಳ ಕಾಂಡ, ಪೋತಿಕಾ, ಪಲಕ ಭಾಗಗಳು ಬೇರೆ- ಬೇರೆ ಕಲ್ಲುಗಳಲ್ಲಿ ರಚಿಸಿರುವುದು ಕಂಡು ಬಂದಿದೆ. ಹೆಚ್ಚಿನ ದೇವಾಲಯಗಳು ಶಾಸ್ತ್ರೀಯವಾಗಿಯೇ ನಿರ್ಮಾಣವಾಗಿದ್ದು. ಅವು ಹೆಚ್ಚುಕಾಲ ಭದ್ರವಾಗಿ ಉಳಿಯುತ್ತವೆ- ಸ್ಥಂಭಗಳನು ಎರಡು, ಮೂರು ಕಲ್ಲುಗಳನ್ನು ಬಳಸಿ ರಚಿಸಿದಾಗ ಅವು ಬಿಡಿ ಭಾಗಗಳು ಬೇರೆಯಾಗಿ ಹಾಳಾಗುವ ಸಂಭವ ಹೆಚ್ಚಾಗಿರುತ್ತದೆ. ಯಾಳಿ ಕಂಬಗಳನ್ನು ರಚಿಸುವಾಗ, ನಾಲ್ಕು ಕಡೆ ಕುದುರೆಗಳು ಬರುವಂತೆ ಮೊದಲೇ ಭಾರಿ ಗಾತ್ರದ ಕಲ್ಲಿನ ನಾಲ್ಕು ಕಡೆಗಳಲ್ಲಿ ರೇಖಾಚಿತ್ರವನ್ನು ಬಿಡಿಸಿ, ಒಂದೇ ಕಲ್ಲಿನಲ್ಲಿಯೇ ರಚಿಸಬೇಕಾಗುವುದು ಈ ರೀತಿಯ ನಾಲ್ಕೂ ಕಡೆ, ಎರಡು ಕಡೆ ಕುದುರೆಗಳು ಜಿಗಿಯುತ್ತಿರುವ ಯಾಳಿ ಸ್ಥಂಭಗಳು ವಿಜಯನಗರ ಕಾಲದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತವೆ.[೧೬] ಸಂಯುಕ್ತ ಸ್ಥಂಭಗಳನ್ನು ರಚಿಸುವಾಗ ಎತ್ತರದ ದಪ್ಪಗಾತ್ರದ ಕಲ್ಲನ್ನು ಆರಿಸಿ, ಅದರ ಮೇಲೆ ರೇಖಾಚಿತ್ರವನ್ನು ಬಿಡಿಸಿ, ಮಧ್ಯಭಾಗದಲ್ಲಿ ಮೂಲ ಸ್ಥಂಭದ ಕಾಂಡವನ್ನು ಉಳಿಸಿಕೊಂಡು ನಂತರ ಸುತ್ತಿಲಿನ ಉಪಸ್ಥಂಭಗಳನ್ನು ಬಿಡಿಸುತ್ತಿದ್ದರು. ಈ ರೀತಿಯ ಉಪಸ್ಥಂಭಗಳನ್ನು ಉಳ್ಳಂತಹ ಸಂಯುಕ್ತ ಸ್ಥಂಭಗಳು ಹೆಚ್ಚಿನ ಸಂಖ್ಯೆಯಲ್ಲಿ ವಿಜಯನಗರ ಕಾಲದಲ್ಲಿ ದೊರೆಯಿವೆ ೧೭ ಭಿತ್ತಿಯಲ್ಲಿರುವ ಭಿತ್ತಿ ಪಾದಗಳನ್ನು ದೇವಾಲಯದ ಒಳ ಆವರಣದ ಕಂಬಗಳಲ್ಲಿರುವ ಎಲ್ಲಾ ಭಾಗಗಳೊಂದಿಗೆ ಬಿಡಿಸಿರುತ್ತಾರೆ ಭಿತ್ತಿಯಲ್ಲಿ ಕಲ್ಲುಗಳನ್ನು ಸಾಮಾನ್ಯವಾಗಿ ಅಡ್ಡಲಾಗಿ ಜೋಡಿಸುವುದು ವಾಡಿಕೆ. ಆದರೆ, ರಂಗಸ್ಥಳದ ರಂಗನಾಥಸ್ವಾಮಿ ದೇವಾಲಯದಲ್ಲಿ ಮಾತ್ರ ಭಿತ್ತಿಯ ಕಲ್ಲುಗಳನ್ನು ಉದ್ದವಾಗಿ ಜೋಡಿಸಿರುವುದು ಒಂದು ಅದ್ಭುತ. ಈ ದೇವಾಲಯ ಆಯತವೃತ್ತಾಕಾರವಾಗಿ ರಚಿಸಿಲ್ಪಟ್ಟಿದ್ದು, ಗೋಡೆಯ ಕಂಬಗಳು ಉದ್ದನಾಗಿ, ಒಂದರ ಪಕ್ಕ ಒಂದರಂತೆ ಜೋಡಿಸಲ್ಲಟ್ಟಿವೆ. ಮಂಟಪ್ಪಗಳ ರಚನೆಯಲ್ಲಿ ಕಂಬಗಳ ಪಾತ್ರ ಪ್ರಮುಖವಾದದ್ದು. ಇಲ್ಲಿ ಕಂಬದ ಮೇಲೆ ಪ್ರಸ್ತರದ ಭಾಗವಿದ್ದು ಅದರ ಮೇಲೆ ಕಂಬದ ಲಂಬ ರೇಖೆಯಲ್ಲಿ ಮತ್ತೊಂದು ಕಂಬವನ್ನು ರಚಿಸಿರುತ್ತಾರೆ. ಈ ರೀತಿಯ ಮಂಟಪಗಳು ಹಂಪಿಯಲ್ಲಿ ಬಹಳವಾಗಿ ದೊರೆತಿವೆ. ಈ ಕಂಬಗಳು ಗುರತ್ವಕರ್ಷಣೆಯನ್ನು ಗಮನಿಸಿ ನಿರ್ಮಿಸಲ್ಪಟ್ಟಿವೆ.[೧೮] ಸ್ಥಂಭಗಳ ಮೇಲ್ಭಾಗವನ್ನು ಅತ್ಯಂತ ಆಕರ್ಷಣೀಯವಾಗಿ ರಚಿಸುತ್ತಿದ್ದರು. ಈ ರೀತಿಯ ಮಂಟಪಗಳು ಸಾಮಾನ್ಯವಾಗಿ ಭೂಮಿ ನಡುಗಿದಾಗ ಮಾತ್ರ ಬಿದ್ದು ಶಿಥಿಲವಾಗಿ, ನಾಶವಾಗಿರುವ ಉದಾಹರಣೆಗಳೇ ಹೆಚ್ಚು. ಸ್ಥಂಭಗಳ ಮೇಲ್ಬಾಗವು ಅತ್ಯಂತ ಸುಂದರವಾದ ಕೆತ್ತನೆಯನ್ನು ಒಳಗೊಂಡಿರುತ್ತದೆ. ಸೂರಿನ ಈ ಭಾಗ ಗಂಗ ಮತ್ತು ನೊಳಂಬರ ದೇವಾಲಯಗಳಲ್ಲಿ ೯ ಭಾಗಗಳಲ್ಲಿ ವಿಂಗಡಿಸಲ್ಪಟ್ಟಿದ್ದು ಅಲ್ಲಿ ದಿಕ್ಪಾಲಕರ ಉಬ್ಬು ಶಿಲ್ಪಗಳನ್ನು ಸಾಮಾನ್ಯವಾಗಿ ರಚಿಸಿರುತ್ತಾರೆ[೧೯].

ಹೊಯ್ಸಳರ ಕಾಲದಲ್ಲಿ ಈ ಭಾಗ ಇನ್ನೂ ಹೆಚ್ಚು ಅಲಂಕರಣಗಳನ್ನು ಒಳಗೊಂಡಿದ್ದು ಸುಂದರ ಭುವನೇಶ್ವರಿಗಳನ್ನು ಪಡೆದಿದೆ. ಭುವನೇಶ್ವರಿಗಳು ಚೌಕಾಕಾರವಾಗಿ ನಾಲ್ಕು ದಿಂಡುಗಳ ಮೇಲೆ, ಅಷ್ಟಾಕಾರವಾಗಿ ಕಲ್ಲುಗಳನ್ನು ಜೋಡಿಸಿ ನಂತರ ವೃತ್ತಾಕಾರದ ಕಲ್ಲಿನಲ್ಲಿ ಬಾಳೆಯ ಮೊಗ್ಗಿನ ಹಾಗೆ ಶಿಲ್ಪಿಯು ಕಲ್ಲನ್ನು ಖಂಡಿರಿಸಿ, ಸೂಕ್ಷ್ಮ ಕೆತ್ತನೆಗಳನ್ನು ಪೂರೈಸಿ ಮೇಲಿನ ಭಾಗದಲ್ಲಿ ಜೋಡಿಸುತ್ತಾರೆ. ಈ ರೀತಿಯ ಹೆಚ್ಚಿನ ಅಲಂಕರಣಗಳನ್ನು ಉಳ್ಳ ಭುವನೇಶ್ವರಿಗಳು ಹೊಯ್ಸಳ ದೇವಾಲಯಗಳಲ್ಲಿ ಹೇರಳವಾಗಿ ದೊರೆತಿವೆ. [೨೦] ಈ ಪದ್ಧತಿ ಹಂಪಿಯಲ್ಲಿನ ಕೆಲವು ದೇವಾಲಯಗಳಲ್ಲೂ ಗಮನಿಸಬಹುದು. ವಿಜಯನಗರ ಕಾಲದಲ್ಲಿ ದೇವಾಲಯದ ಪ್ರಸ್ತರ ಭಾಗದಲ್ಲಿ ಕಪೋತದ ಮೂಲೆಗಳಲ್ಲಿ ಕಲ್ಲಿನ ಬಳೆಗಳನ್ನು ಕಾಣುತ್ತೇವೆ.[೨೧] ಈ ರೀತಿಯ ಬಳೆಗಳು ಉದ್ದನಾದ ಕಲ್ಲಿನ ಬಂಡೆಯನ್ನು ಕೊರೆದು ರಚಿಸಿರುವ ಬಳೆಗಳಾಗಿವೆ. ವಿಜಯನಗರದ ರಾಯ ಗೋಪುರಗಳನ್ನು ಸಾಮಾನ್ಯವಾಗಿ ಗಾಳಿ ಗೋಪುರಗಳೆಂದು ಕರೆಯುವುದು. ವಾಡಿಕೆ ಈ ಗೋಪುರಗಳ ಒಳಭಾಗಿ ಖಾಲಿ ಇರುವುದರಿಂದ ಇವನ್ನು ಗಾಳಿಗೋಪುರಗಳೆಂದು ಕರೆಯುತ್ತಾರೆ. ಇವು ಐದು, ಏಳು, ಒಂಭತ್ತು ತಲಗಳನ್ನು ಹೊಂದಿರುತ್ತವೆ. ಹಂಪಿಯ ಆದಿಶಯನ ಗುಡಿಯ ಶಿಖರವೂ ಇದೇ ರೀತಿ ಒಳಭಾಗ ಖಾಲಿ ಇರುವಂತೆ ರಚಿಸಲಾಗಿದೆ. ಹಂಪಿಯ ಗೋಪುರಗಳು ಮರದ ದಿಂಡು ಮತ್ತು ಗಾರೆ- ಇಟ್ಟಿಗೆಯಿಂದ ರಚಿಸಲ್ಪಟ್ಟಿವೆ.[೨೨] ದೇವಾಲಯದ ಪ್ರಣಾಳಗಳನನು ಒಂದೇ ಕಲ್ಲಿನಿಂದ ರಚಿಸಿದ್ದು ಅದರ ಮಧ್ಯಭಾಗ ರಂಧ್ರವನ್ನು ಹೊಂದಿರುತ್ತದೆ. ಕೆಲವೊಮ್ಮೆ ರಂಧ್ರವು ಮೇಲೆ ಕಾಣುವಂತೆ ಉದ್ದವಾಗಿ ರಚಿರುವ ಉದಾಹರಣೆಗಳೂ ಇವೆ.[೨೩]

ಸಾಮಾನ್ಯವಾಗಿ ಶಿಖರವನ್ನು ರಚಿಸುವಾಗ ನಾಲ್ಕು ಕಲ್ಲುಗಳನ್ನು ಅಥವಾ ಹೆಚ್ಚು ಕಲ್ಲುಗಳನ್ನು ಜೋಡಿಸಿ ರಚಿಸುವ ವಿಧಾನ ಅನುಸರಿಸುತ್ತಿದ್ದರು. ಬೃಹದೇಶ್ವರ ದೇವಾಲಯದ





ದ್ವಾರ ಮತ್ತು ಜಾಲವಾತಾಯನವನ್ನು ವಿಶೇಷಕಲ್ಲಿನಿಂದ ರಚಿಸಿರುವುದು–ಆವನಿ.

ಶಿಖರದಲ್ಲೂ ಕಲ್ಲುಗಳನ್ನು ಜೋಡಿಸಿ ಸೇರಿಸಿ, ಅದರ ಮೇಲೆ ಸ್ತೂಪಿಯನ್ನು ಇರಿಸಲಾಗಿದೆ. ಬೆಂಗಳೂರಿನ ಬೇಗೂರಿ ನಲ್ಲಿರುವ ಕಾಳೀಕಾಮಾತೇಶ್ವರ ದೇವಾಲಯದಲ್ಲಿ ಏಕ ಶಿಲೆಯ ಶಿಖರವಿದೆ. ವಿಜಯನಗರ ಕಾಲದಲ್ಲಿ ದೇವಾಲಯದಲ್ಲಿ ಕಮಾನುಗಳನ್ನು ಬಳಸುವ ಪರಿಪಾಠ ಆರಂಭವಾಯಿತು. ಕಮಲ ಭವನದಲ್ಲಿ ವಿವಿಧ ಆಕೃತಿ, ಅಲಂಕರಣಗಳನ್ನು ಹೊಂದಿರುವ ಕಮಾನುಗಳಿವೆ ಇದೇ. ರೀತಿಯ ಕಮಾನುಗಳು ನಂತರದ ಕಾಲದಲ್ಲಿ ಹಲವು ದೇವಾಲಯಗಳಲ್ಲೂ ರಚಿಸಲ್ಪಟ್ಟವು ಈ ಕಮಾನುಗಳು ಗಾರೆ–





ಭಿತ್ತಿಯ ರಚನೆ– ಬಿನ್ನ ಮಂಗಳ– ರಂಗಸ್ಥಳ





ಸ್ಥಂಭಗಳ ಪೋತಿಕೆಗಳನ್ನು ಬಿಡಿಯಾಗಿ ರಚಿಸಿರುವುದು.





ಒಂದೇ ಕಲ್ಲಿನಲ್ಲಿ ಕೆತ್ತಿರುವ ಕಂಬಗಳು



ಒಂದೇ ಕಲ್ಲಿನಲ್ಲಿ ಕೆತ್ತಿರುವ ಪ್ರಣಾಳಗಳು– ನಂದಿ.

ಗಚ್ಚು ಬಳಸಿ ಕಟ್ಟು ತ್ತಿದ್ದರು. ಹೆಚ್ಚಾಗಿ ದೇವಾಲಯಗಳನ್ನು ಕಟ್ಟುವಾಗ ಸ್ಥಪತಿಗಳ ಆದೇಶದಂತೆ ಶಾಸ್ತ್ರೀಯವಾಗಿಯೇ ನಿರ್ಮಿಸುತ್ತಿದ್ದರು– ಕೆಲವೊಮ್ಮೆ ಅಶಾಸ್ತ್ರೀಯ ನಿರ್ಮಾಣಗಳು ಆಗುತ್ತಿದ್ದವು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಮಾನಸೂತ್ರಾದಿ ಸೂತ್ರಂ ತು ಪಾತಯೇ ತ್ತತ್ರ ದೇಶಿಕಃ ॥ ೮ ॥
ಪ್ರಥಮಂ ಮಾನಸೂತ್ರಂತು ವಿನ್ಯಸೇತ್ತು ದ್ವಿತೀಯ ಕಂ।
ತೃತೀಯ ಮಧಿಷ್ಠಾನಂ ಸ್ಯಾದುಪಪೀಠಂ ಚತುರ್ಥಕಂ ॥ ೯ ॥
ಪಂಚಮಂ ಹೋಮ ಸೂತ್ರಂ ತು ಷಷ್ಠತು ಪ್ರತಿಸೂತ್ರಕಂ ।
ಏವಂ ಕ್ರಮೇನ ಕರ್ತವ್ಯಂ ಸೂತ್ರಷಟ್ಕಂ ದ್ವಿ ಜೋತ್ರಮಾಃ । ೧೦ ।

೨. ಪ್ರಸಾದಾರಂಭಕಾಲೇ ತು ಗೃಹಾದೌ ಚ ವಿಶೇಷತಃ ।
ಶಿಲ್ಯೋದ್ಧಾರಸ್ತು ಕರ್ತವ್ಯೋ ಯದಿಚ್ಛೇಚ್ಛುಭ ಮಾತ್ಮನ ಃ ॥ ಗೃಹರತ್ನ ಭೂಷಣಂ

೩. ಶಲ್ಯಾ ಅನೇಕ ವಿಧಾಃ ಪೋಕ್ತಾ ಧಾತು ಕಾಷ್ಠಸ್ಥಿ ಸಂಭಾವ – ವಿಶ್ವಕರ್ಮ ಪ್ರಕಾರ

೪. ಪುರುಷಾಧಃ ಸ್ಥಿತಂ ಶಲ್ವಂ ನಗೃಹ ದೋಷದಂ ಭವೇತ್ – ಅಗ್ನಿ ಪುರಾಣಂ

೫. ಭಿತ್ತಿ ಪೂರಕರೂಪೇಣ ಸೌಮ್ಯಾಸ್ತರಣಶೈಲತಃ ।
ಭಿತ್ತಿ ಪೀಠಮಿದಂ ಖ್ಯಾತಂ ಸೌಮ್ಯ ಭದ್ರಾಕೃತಂ ಚರೇತ್॥ ಶಿಲ್ಪ ರತ್ನ ಕೋಶಃ

೬ ಗರ್ಭಶ್ವಭ್ರಸ್ಯ ಗಾಂಭೀರ್ಯಂ ಸ್ವಾಧಿಷ್ಠಾನೋನ್ನತೇ ಸಮಮ್ ।
ಚತುರಶ್ರಸಮಂ ಕುರ್ಯಾತ್ ಗರ್ತ ಮಿಷ್ಟಕ ಯಾಶ್ಮನಾ ।
ಅಪೂರ್ಯ ಸಲಿಲಂ ತಸ್ಯಮೂಲೇ ಸರ್ವ ಮೃದಂ ಕ್ಷಿಪೇತ್ ॥
ನಿಮ್ನಗಾಹ್ರದ ಸಸ್ಯಾದ್ರಿ ವಲೀಕ ಕುಲಿರಾವಟೆ ।
ಹಲಸ್ಫಲಾಬ್ಧಿಗೋಶೃಲ ಹಸ್ತಿದಂತೇಷು ಮೃಕ್ತಿಕ್ತಾ ॥ ಮಯಮತಂ

೭. ಈ ರೀತಿಯ ಪ್ರಥಮೇಷ್ಟಕಗಳನ್ನು ಮಣ್ಣಿಯ ಶಿಥಿಲ ಜಿನಾಲಯದಲ್ಲಿ ಈಗಲೂ ಕಾಣ ಬಹುದು.

೮. ಅತ್ಯಂತ ಪ್ರಾಚೀನ ಕಾಲದಿಂದಲೂ, ಹರಪ್ಪ ನಾಗರೀಕತೆಯ ಕಾಲದಲ್ಲೂ ಮನೆಗಳನ್ನು ಎತ್ತರದ ಜಗಲಿಯ ಮೇಲೆ ನಿರ್ಮಿಸಿರುವುದು ಉತ್ಖನನಗಳಿಂದ ಸ್ಪಷ್ಟವಾಗುತ್ತದೆ. ನದಿ ನೀರಿನ ಪ್ರವಾಹದಿಂದ ತೊಂದರೆಯಾಗದಿರಲು ಈ ರೀತಿ ನಿರ್ಮಿಸುತ್ತಿದ್ದರು.

೯. ಸ್ಥಳೇ ಧೃಢತರಂ ಚಿತೇ ಗರ್ಭನ್ಯಾಸಂ ಚ ಕೃತ್ವಾದಾವುಪಪೀಠಂ
ತು ಯೋಜಯೇತ್। ಈಶಾನ ಶಿವಗುರು ದೇವ ಪದ್ಧತಿ– ಕ್ರಿಯಾ– ೨೦

೧೦. ಹೊಸ ಕೋಟೆಯ ಮಡಿವಾಳದಲ್ಲಿ ಹುಲ್ಲ ಗೊಂಡನಹಳ್ಳಿ ಹಾಗೂ ಹಲವಾರು ದೇವಾಲಯಗಳಲ್ಲಿ ಈ ರೀತಿಯ ನಿರ್ಮಾಣ ಗಮನಿಸಬಹುದು.

೧೧. ದೊಡ್ಡಗುಬ್ಬಿಯ ಸೋಮೇಶ್ವರ ದೇವಾಲಯದಲ್ಲಿ ಈ ರೀತಿಯ ನಿರ್ಮಾಣವಿದೆ.

೧೨. ಅಲಸೂರಿನ ಸೋಮೇಶ್ವರ ಗುಡಿಯ ಗೋಪುರದ ಉಪಪೀಠ ಮತ್ತು ಅಧಿಷ್ಠಾನ, ಕೋಲಾರ ಸೋಮೇಶ್ವರ ಗುಡಿಯ ಗೋಪುರ ಮತ್ತು ಅಧಿಷ್ಠಾನ.

೧೩. ಆವನಿ, ಮುಳುಬಾಗಿಲು ತಾಲ್ಲೂಕು, ಭರತೇಶ್ವರ ದೇವಾಲಯ.

೧೪. ಮಣ್ಣಿಯ ದೇವಾಲಯದ ಜಾಲವಾತಾಯನಗಳು ಉತ್ತಮ ಶಿಲ್ಪ ಚಾತುರ್ಯವನ್ನು ಬಿಂಬಿಸುತ್ತವೆ. ಇವು ವಾತ್ಸಾಯನನ ಕಾಮಸೂತ್ರದ ಪ್ರೇಮದಲ್ಲಿ ಆರು ಹಂತಗಳನ್ನು ಬಿಂಬಿಸಿವೆ. ಇಲ್ಲಿಯ ಜಾಲೇಂದ್ರ ಒಂದೇ ಕಲ್ಲಿನಲ್ಲಿ ರಚಿಸಲ್ಪಟ್ಟಿದೆ. ನಂದಿಯ ಜಾಲವಾತಾಯನಗಳು ಉತ್ಕೃಷ್ಟ ಕಲಾಕೃತಿಗಳಾಗಿದ್ದು ಕಲ್ಲಿನ ಹೊಳಪು ಇಂದಿಗೂ ಅಧ್ಭುತವಾಗಿ ಗೋಚರಿಸುತ್ತದೆ.

೧೫. ಕುರುಡು ಮಲೆಯಲ್ಲಿ ದೊರೆತಿರುವ ಎರಡು ಶಿಥಿಲ ದೇವಾಲಯಗಳನ್ನು ಗಮನಿಸಿದಾಗ, ಭಿತ್ತಿಯಲ್ಲಿನ (Locking stone) ನ ಜೋಡಣೆ ಸ್ಪಷ್ಟವಾಗಿ ತಿಳಿದುಬರುತ್ತದೆ.

೧೬. ಈ ರೀತಿ ಎತ್ತರದ, ದಪ್ಪಗಾತ್ರದ ಸ್ಥಂಭಗಳು, ಕೋಲಾರಿನ ಸೋಮೇಶ್ವರ ದೇವಾಲಯ, ರಂಗಸ್ಥಳದ ರಂಗನಾಥ ಸ್ವಾಮಿ ದೇವಾಲಯದಲ್ಲಿ ಕಂಡು ಬರುತ್ತವೆ. ಬೆಂಗಳೂರಿನ ಕೋಟೆ ವೆಂಕಟರಮಣ ದೇವಾಲಯದಲ್ಲಿ ಕಂಬಗಳಲ್ಲಿ ನಾಲ್ಕು ದಿಕ್ಕಿಗೂ ಕುದುರೆಗಳಿರುವಂತೆ ರಚಿಸಿದ್ದಾರೆ.

೧೭. ಸಂಯುಕ್ತ ಸ್ಥಂಭಗಳು ಅಲಸೂರಿನ ಸೋಮೇಶ್ವರ ದೇವಾಲಯ, ಕೋಲಾರಿನ ಸೋಮೇಶ್ವರ ದೇವಾಲಯದಲ್ಲಿ ಕಂಡು ಬರುತ್ತವೆ. ಹಂಪಿಯ ವಿಠಲ ದೇವಾಲಯದಲ್ಲಿ ಅತ್ಯಂತ ಸುಂದರವಾದ ಸಂಗೀತ ಸ್ವರಗಳನ್ನು ಹೊರಹೊಮ್ಮಿಸುವ ಸಂಯುಕ್ತ ಸ್ಥಂಭಗಳಿವೆ.

೧೮. ಚಿತ್ರದುರ್ಗದಲ್ಲಿ ಮೂರು ತಲಗಳ ಮಂಟಪವಿದೆ. ಹಾಗೆಯೇ, ಹಂಪಿಯಲ್ಲಿ ೨ ಮತ್ತು ಮೂರು ತಲಗಳ ಮಂಟಪಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಕಿವೆ.

೧೯. ಅತ್ಯಂತ ಸುಂದರವಾದ ದಿಕ್ಪಾಲಕರ ಉಬ್ಬು ಶಿಲ್ಪಗಳು ನಂದಿ, ಆವನಿ ದೇವಾಲಯಗಳಲ್ಲಿ ಕಂಡುಬರುತ್ತದೆ.

೨೦. ಹೊಯ್ಸಳರ ಚೆನ್ನಕೇಶವ ದೇವಾಲಯ ಬೇಲೂರು, ಹೊಯ್ಸಳೇಶ್ವರ ದೇವಾಲಯ ಹಳೇಬೀಡು, ಅಮೃತೇಶ್ವರ ದೇವಾಲಯ, ಅಮೃತಾಪುರದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭುವನೇಶ್ವರಿಗಳನ್ನು ನೋಡಬಹುದು

೨೧. ಯಳಂದೂರಿನ ಬಳೇ ಮಂಟಪ, ಹಂಪಿಯ ಅಚ್ಯುತರಾಯ ದೇವಾಲಯದ ಕಪೋತದಲ್ಲಿ ಬಳೆಗಳನ್ನು ಕಾಣಬಹುದು.

೨೨. ತಂಜಾವೂರಿನ ಬೃಹದೇಶ್ವರ ದೇವಾಲಯದ ಶಿಖರವು ಕಲ್ಲಿನ ಶಿಖರವಾಗಿದ್ದು, ಈ ಶಿಖರವು ಒಳಭಾಗ ಖಾಲಿಯಾಗಲಿದೆ.




# ಕೊಡಗಿನ ಜಿನಾಲಯಗಳು ಮತ್ತು ಅನ್ವಯಿಕ ವಿಷಯಗಳು

ಡಾ. ಎಂ.ಜಿ. ನಾಗರಾಜ್*

ಸಂಗಂ ಸಾಹಿತ್ಯದಲ್ಲಿ 'ಕುಡುಕಂ ಕನ್ನಡಂ' ಎಂದು ಉಕ್ತವಾಗಿದೆ. ಇದು ಕರ್ಣಾಟಕದ ಕೊಡಗಿನ ಪ್ರಾಚೀನತೆಗೆ ಸಾಕ್ಷಿಯಾಗಿ ಕ್ರಿ.ಪೂ. ಸುಮಾರು ೧ನೇ ಶತಮಾನದಲ್ಲಿ 'ಪೆರುವೇಳಿರ್' ನಾಯಕರ ಪೈಕಿಯ 'ಐರುಮ್ಮೈ' ವೇಳಿರ ವರ್ಗಕ್ಕೆ ಸೇರಿದ 'ನಣ್ಣಣ್' ಆಳಿದ, ಇವನು ಶೈವಧರ್ಮಿಯಾಗಿದ್ದ.[1] ಹೀಗೆ ಶೈವಧರ್ಮದ ನೆಲೆಯಾಗಿದ್ದ ಕೊಡಗು ಗಂಗರ ಕಾಲದಲ್ಲಿ ಜೈನಧರ್ಮಕ್ಕೆ ಪ್ರೋತ್ಸಾಹ ಸಿಕ್ಕಿತು. ಕೊಡಗು ತೆರಕಣಾಂಬಿಯವರೆಗೂ ಚಾಚಿದ್ದು, ಜೈನಧರ್ಮದ ಪ್ರಭಾವಕ್ಕೆ ಕ್ರಿ.ಶ. ೫ನೇ ಶತಮಾನದಲ್ಲಿಯೇ ಒಳಗಾಗಿತ್ತೆನ್ನಬಹುದು. ಇದಕ್ಕೆ ಪೋಷಕವಾಗಿ ಮಡಿಕೇರಿಯ ತಾಮ್ರ ಶಾಸನವು ಕ್ರಿ.ಶ. ೪೬೬ರದಾಗಿ ತಳವನ ನಗರದ ಶ್ರೀ ವಿಜಯ ಜಿನಾಲಯಕ್ಕೆ ಪೂನಾಡು ಭಾಸಹಸ್ತಿ, ಎಡೆನಾಡು, ಸಪ್ತದಿ ಮಧ್ಯೆ ಬದಣಗುಪ್ಪೆ ಹಾಗೂ ಇತರೆ ಗ್ರಾಮಗಳನ್ನು ದಾನ ಕೊಟ್ಟ ವಿಷಯ ತಿಳಿಸುತ್ತದೆ. ಈ ಶಾಸನ ಸಿಕ್ಕಿದ ಸ್ಥಳವೂ ಅಂದಿನ 'ಕೊಡಗೂರ್ವಿಷಯ'ದ ಸ್ಥಳವೊಂದರಲ್ಲಿ ಕಾರಣ, ಕೊಡಗಿನ ಜಿನಾಲಯದ ಪ್ರಸ್ತಾಪಗಳಿಗೇ ಅನ್ವಯಿಸಿಕೊಳ್ಳಬಹುದು. ಕೊಡಗು ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಸಂಖ್ಯೆಯ ಜೈನ ಬಸದಿಗಳಿವೆ ಎಂಬುದು ಇಂದಿನ ಚಿತ್ರ, ಪ್ರಾಚೀನದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬಸದಿಗಳಿದ್ದವು. ಕ್ರಿ.ಶ. ೧೦೦೪ರಿಂದ ಕ್ರಿ.ಶ. ೧೧೭೬ರವರೆಗೆ ಕೊಡಗನ್ನು ಆಳಿದ ಕೊಂಗಾಳ್ವರ ಕಾಲದಲ್ಲಿ ಮುಳ್ಳೂರಿನ ಪಾರ್ಶ್ವನಾಥ, ಚಂದ್ರನಾಥ, ಶಾಂತಿನಾಥ ಬಸದಿಗಳು ನಿರ್ಮಿತಗೊಂಡವು. ದ್ರಾವಿಡ ಸಂಘ ನಂದಿಗಣ ಇರುಂಗಲಾನ್ವಯದ ಪುಷ್ಪಸೇನ ಸಿದ್ಧಾಂತ ದೇವರ ಶಿಷ್ಯ ಶ್ರೀ ಗುಣಸೇನಪಂಡಿತ ಮುಳ್ಳೂರು ಬಸದಿಗಳ ನಿರ್ಮಾಣ ಪ್ರೇರಕ ಶಕ್ತಿ ಹಾಗು ಪ್ರಭಾವಶಾಲಿ ಆಗಿದ್ದರು. ಇವರು ಹೊಯ್ಸಳ ದೊರೆ ವಿನಯಾದಿತ್ಯನಿಗೆ ಗುರುವಾಗಿದ್ದು ಕ್ರಿ.ಶ. ೧೦೬೪ರಲ್ಲಿ ಸುರೇಂದ್ರಲೋಕ ಸೇರಿದರು ಎಂಬ ಮಾಹಿತಿಯೂ ಇದೆ.[2]

ಕೊಂಗಾಳ್ವರು ಗಂಗರ ಪ್ರಭಾವಕ್ಕೆ ಒಳಗಾಗಿ ಜೈನಧರ್ಮವನ್ನು ಅನುಸರಿಸಿದರು. ಆದರೆ ಅವರು ಕೊಡಗಿಗೆ ಯಾವಾಗ ಬಂದರು ! ಅವರ ಮೂಲಧರ್ಮ ಅದೇ ಆಗಿತ್ತೇ ! ಅವರು ಗಂಗರಿಗೂ ಮೊದಲೇ ಬಂದಿದ್ದರೆ ಅನುಸರಿಸಿದ ಧರ್ಮದ ಮಂದಿರದ ರಚನೆಗೂ ಕಾರಣವಾಗುತ್ತಾರೆ.

ಸಂಗಂ ಚೋಳರು ಕಾವೇರಿ ಪೂಂಪಟ್ಟಿನವ್ ರಾಜಧಾನಿಯನ್ನು ಕ್ರಿ.ಶ. ೨-೩ನೇ ಶತಮಾನದಲ್ಲಿ ಆಳುತ್ತಿದ್ದರು. ಸಮುದ್ರ ಕೊರೆತದಿಂದ ಆ ರಾಜಧಾನಿ ನಾಶವಾಯಿತು. ಆಗ ಚೋಳರು, ಕೊಂಗಾಳ್ವರು ಆಳುತ್ತಿದ್ದ ಒಜೆಯೂರನ್ನು ಆಕ್ರಮಿಸಿ ರಾಜಧಾನಿ ಮಾಡಿಕೊಂಡರು.[3] ಸುಳುಗೋಡು ಸೋಮವಾರ ಗ್ರಾಮದ (ಅ.ಗೂ.ತಾ.) ಕ್ರಿ.ಶ. ೧೦೭೯-೮೦ರ ಶಾಸನದಲ್ಲಿ[4] ಕೊಡಗಿನ ಕೊಂಗಾಳ್ವರ ನಾಲ್ಕನೆಯ ದೊರೆ(!)ರಾಜೇನ್ದ್ರ ಪ್ರಿಥುವೀ ಕೊಂಗಾಳ್ವನನ್ನು ವರ್ಣಿಸುವಲ್ಲಿ ಮಹಾಮಂಡಲೇಶ್ವರಂ 'ಒಜೆಯೂರ್ಪು‌ರಾಧೀಶ್ವರಂ ಜಟಾಚೋಳ ಕುಳೋದಯಾ....ಶ್ರೀಮದ್ರಾಜೇನ್ದ್ರ ಪ್ರಿಥುವಿ ಕೊಂಗಾಳ್ವಂ' ಬಸದಿ ಕಟ್ಟಿಸಿದ ವಿಷಯ ಹೇಳಿದೆ.[5] ಇಲ್ಲಿರುವ ಕೊಂಗಾಳ್ವರನ ಬಿರುದಿನಿಂದಾಗಿ, ತಿರುಚನಾಪಳ್ಳಿಯ ಸನಿಹದ ಒರೆಯೂರಿನ ಆಳ್ವಿಕೆಗಿದ್ದವರು; ಅದು ಆಕ್ರಮಿತವಾದ ಮೇಲೆ ಕೊಡಗಿನತ್ತ ಬಂದಿರುವಂತಿದೆ ಎಂಬ ಸೂಚನೆ ಕಾಣುತ್ತದೆ. ಅಂದರೆ ಕ್ರಿ.ಶ. ೨-೩ನೇ ಶತಮಾನದಲ್ಲಿ ಕೊಡಗಿಗೆ ಬಂದು ಮುಂದೆ ಗಂಗರ ಸಾಮಂತರಾಗಿರಬೇಕು. ಚೋಳ ನಾಡಿನಲ್ಲಿದ್ದಾಗ ಬಹುಶಃ ಶಿವಧರ್ಮವನ್ನು ಪಾಲಿಸಿದವರು ಕೊಂಗಾಳ್ವರು. ಕೊಡಗಿಗೆ ಬಂದ ಮೇಲೆ ಜಿನಧರ್ಮಾನುಯಾಯಿಗಳಾಗಿರಬೇಕು. ಮುಂದೆ ಅವರು ಕಟ್ಟಿಸಿದ ಬಸದಿಗಳೇ ಇದಕ್ಕೆ ಶಾಸನೋಕ್ತ ಸಾಕ್ಷಿ ಹಾಕುತ್ತದೆ. ಅದಾಗಿ ಕ್ರಿ.ಶ. ಪ್ರಥಮಾರ್ಧ ಕಾಲದಲ್ಲಿ ಅವರು ಜೈನಧರ್ಮವನ್ನು ಅನುಸರಿಸತೊಡಗಿದ್ದರೆಂದರೆ ಬಸದಿಗಳನ್ನು ಅಥವಾ ಜಿನ ಶಿಲ್ಪಗಳನ್ನೂ ಆರಾಧಿಸತೊಡಗಿರಬೇಕು. ಇವರು ಕೊಡಿಗನ ಮೊದಲು ಕೊಂಗಾಳ್ವರೆನ್ನಬೇಕು. ಅದು ಮೊದಲಿಗೆ ದಕ್ಷಿಣ ಕೊಡಗಿನ ಭಾಗವಾಗಿದ್ದಿರಬೇಕು.

ಕೇರಳದ ಗಡಿಗೆ ಹೊಂದಿಕೊಂಡ ಗಿರಿ ಶ್ರೇಣಿಯ ಬದಿಗೆ ಮಂಚಳ್ಳಿ ಗ್ರಾಮವಿದ್ದು ಕೊಡಗು-ಕೇರಳಗಳಿಗೆ ಸುಲಭವಾಗಿ ದಾಟಿ ಬರುವ ಗ್ರಾಮವಾಗಿದೆ. ಕೇರಳದಲ್ಲಿ

* 'ಅನರ್ಘ್ಯ', ಶ್ರೀ ಜ.ಚ.ನಿ. ಕೃಪ, # ೨೨೧, ೬೮ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦೦೧೦.


ಪಾರ್ಶ್ವನಾಥಸ್ವಾಮಿ ಪದ್ಮಾಸನ ಶಿಲ್ಪ
ಕಲ್ಕಂದೂರು


ಕ್ಷೇತ್ರಪಾಲ ಕಲ್ಕಂದೂರು ಬಸದಿ


ಮಾಲಂಬಿ-ಆಲೂರು ಜಿನಶಿಲ್ಪಗಳು


ಬ್ರಹ್ಮದೇವರ ಜೋಡಿ ಜಮೀನು
ಬ್ರಹ್ಮದೇವರ ಕಾಡಿನಲ್ಲಿ ಅಶ್ವಾರೋಹಿ ಬ್ರಹ್ಮದೇವರು


ಅಂಜನಗೇರಿ ಬೆಟಗೇರಿ ಬಸದಿ ಕಟ್ಟಡದ ಅವಶೇಷ


ಮಡಿಕೇರಿ ಮ್ಯೂಸಿಯಂನಲ್ಲಿರುವ
ಅಂಜನಗೇರಿ-ಬೆಟಗೇರಿ
ಶಾಂತಿನಾಥಸ್ವಾಮಿ ಶಿಲ್ಪ


ಮಡಿಕೇರಿ ಮ್ಯೂಸಿಯಂನಲ್ಲಿರುವ ಅಂಜನಗೇರಿ-ಬೆಟಗೇರಿ
ಬಸದಿಯ ಖಡ್ಗಾಸನ ಜಿನಶಿಲ್ಪಗಳು

ಜೈನ ಹಾಗು ಬೌದ್ಧಧರ್ಮ ಪ್ರಸಾರವಿದ್ದುವು. ಅವುಗಳಲ್ಲಿಯ ಆರಾಧನಾ ಕೇಂದ್ರಗಳಿಗೆ 'ಪಳ್ಳಿ' ಎಂಬ ಹೆಸರುಗಳಿದ್ದವು.[೬] ಇಂದಿಗೂ ಕೊಡಗಿನಲ್ಲಿ 'ಪಳ್ಳಿ' ಎಂಬ ಹೆಸರು ಅನೇಕ ಆರಾಧನಾ ಕೇಂದ್ರಗಳು ಹೆಸರಾಗಿದೆ. 'ಮಸೀದೆ'ಗಳಿಗೆ ಕೆಲವೆಡೆ ಪಳ್ಳಿ ಮಸೀದೆ ಎನ್ನುವುದುಂಟು. ದಲಿತ ವರ್ಗದ ಕೆಂಬಟ್ಟಿಗಳು ಆರಾಧನಾ ನೆಲೆಗೆ 'ಪಳ್ಳಿಬಾಗಿಲು' ಎಂದು ಬಿದಿರುಕಡ್ಡಿಗಳ ಚೌಕಟ್ಟು ರಚಿಸಿ ಹೇಳುವುದುಂಟು. ಇದು ನಾಪೋಕ್ಲು ಬಳಿ ಬೇತುಗ್ರಾಮದ ಮಕ್ಕಿ ಶಾಸ್ತಾವಿನ ಬಳಿಯ ಕೆಂಬಟ್ಟಿಗಳ ಬಳಿ ಕಂಡುಬರುತ್ತದೆ. ಈ ಮಕ್ಕಿ ಶಾಸ್ತವು ಜೈನಮೂಲದವರಾಗಿ ಕೊಡವಾಚರಣೆಗಳನ್ನು ಆಚರಿಸಿ 'ಕೊಂಡೀರ್' ಎಂಬ 'ಮನೆತನ'ದ ಹೆಸರುಗೊಂಡವರು ಬೇತು ಬಳಿ ಇದ್ದು, ಮನೆತನದ ಪರಂಪರೆಯ ಹಿನ್ನೆಲೆಯನ್ನು ಹೇಳುತ್ತಾರೆ. ಮಕ್ಕಿ ಶಾಸ್ತಾವಿನೊಡನೆ ಕೇರಳದ ಕಡೆಯಿಂದ ಬರುವಲ್ಲಿ ಜೊತೆಯಾಗಿ ಇವರೂ ಬಂದವರಂತೆ ಈ ಮಕ್ಕಿ ಶಾಸ್ತ್ರವು ನೆಲೆ ವೃತ್ತಾಕಾರ ಅಧಿಷ್ಠಾನದ ರಚನೆಯನ್ನು ಹೊಂದಿದ್ದು ಪ್ರಾಚೀನ ಜೈನ ವಾಸ್ತುವಿನ ಸೂಚನೆಯನ್ನು ನೀಡುವಂತಿದೆ.

ಮಂಚಳ್ಳಿ ಗ್ರಾಮದ ನೆರೆಗಿರುವ ಕುರ್ಚಿ ಗ್ರಾಮದಲ್ಲಿದ್ದ 'ಗಂಧರ್ವ ಭೈರವ' ಮೂರ್ತಿ ಶಿಲ್ಪ, 'ಯಕ್ಷ' (ಜೈನ) ನೊಬ್ಬನ ರೂಪವೆನ್ನುವಂತಿದೆ. ಸನಿಹದ ಯವಕಪಾಡಿಯ ಪರದಂಡ ಮನೆತನದ 'ಧರ್ಮದೇವತೆ'ಯೂ ಯಕ್ಷಿಯನ್ನು ಪ್ರತಿನಿಧಿಸು ವಂತಿದೆ. ಅಂದರೆ ಜೈನಧರ್ಮ ಪ್ರಭಾವವು ಹೀಗೆ. ಶಿಲ್ಪ, ಬಸದಿಯ ವಿವಿಧ ರೂಪಗಳಲ್ಲಿ ಪ್ರಾಚೀನದಿಂದಲೂ ಕಾಣಿಸಿಕೊಂಡಿರುವ ಸೂಚನೆಗಳು ಕಾಣಬರುತ್ತವೆ. ಹೀಗಾಗಿ ಕೊಡಗಿನ ಜಿನಾಲಯಗಳ ಸಾಕಷ್ಟು ಪ್ರಾಚೀನವಾದಂಥವು ಎಂಬುದು ಅರಿವಿಗೆ ಬರುತ್ತದೆ. ಗುಡ್ನಾಪುರದ ಕ್ರಿ.ಶ. ಸುಮಾರು ೫ನೇ ಶತಮಾನದ ಕದಂಬ ರವಿವರ್ಮನ ಶಾಸನದಲ್ಲಿ :

'ಗಂಜ್ಗ ಪುನ್ನಾಟ ಕೊಜ್ಞಾಳ ಪಾಣ್ಡ್ಯಾಉಪಾದಯಃ'

ಎಂದಿರುವಲ್ಲಿ ಕದಂಬರು ಕೊಂಗಾಳ್ವರನ್ನು ಗೆದ್ದಿದ್ದ ಬಗ್ಗೆ ಕ್ರಿ.ಶ. ೫ನೆಯ ಶತಮಾನದ ಕೊಂಗಾಳ್ವರ ಕೊಡುಗಿ ನಲ್ಲಿಯ ಅಸ್ತಿತ್ವದ ಬಗ್ಗೆ ಶಾಸನೋಕ್ತವಗಿ ಗಮನಿಸಬಹು ದಾಗಿದೆ. ಅದಾಗಿ ೫ನೇ ಶತಮಾನದಲ್ಲಿ ಕೊಡಗು ಮುಖ್ಯ ಬೀಡಿನಲ್ಲಿಯೆ ಕೊಂಗಾಳ್ವರು ರೂಪಿಸಿದ್ದ ಜಿನಾಲಯ ಗಳಿದ್ದಿರಲು ಸಾಕು. 'ಗಜ್ಞ' 'ಕೊಜ್ಞಾಳ' ಎಂದು ಪ್ರತ್ಯೇಕವಾಗಿ ಗಂಗರನ್ನು ಮತ್ತು ಕೊಂಗಾಳ್ವರನ್ನು ಸೂಚಿಸಿರುವಲ್ಲಿ ಇಬ್ಬರ ಆಳ್ವಿಕೆಯನ್ನು ಸೂಚಿಸಿರುವಂತಿದೆ. ಆ ಹೊತ್ತಿಗೆ ಗಂಗರ ಸಾಮಂತರಾಗಿಯೋ ಅಥವಾ ಪ್ರತ್ಯೇಕವಾಗಿ ಆಳುತ್ತಿದ್ದ ಕೊಂಗಾಳ್ವರು ಕದಂಬರ ಸಾಮಂತರೆನಿಸಿರಬೇಕು. ತದನಂತರ ಶ್ರೀ ಪುರುಷನ ಕಾಲದ ಹೊತ್ತಿಗೆ ಗಂಗರ ಸಾಮಂತರೆನಿಸಿಯೋ ಅಥವಾ ಕೊಡಗಿನ ಭಾಗಗಳನ್ನು ಸ್ವತಂತ್ರವಾಗಿ ಆಳಿಕೊಂಡಿರ ಬೇಕು. ಇವರನ್ನು ಮಧ್ಯಂತರ ಕೊಂಗಾಳ್ವ 'ರೆಂದು ಕರೆಯ'ಬೇಕು. ಇವರ ನಂತರ ಚೋಳರಿಂದ ಪ್ರತಿಷ್ಠಾಪಿತನಾದ ಕೊಂಗಾಳ್ವರ ಮನಿಜ ಗಂಗರ ವಿರುದ್ಧ ಚೋಳರೊಡನೆ ಯುದ್ಧದಲ್ಲಿ ಪಾಲ್ಗೊಂಡು ಜಯ ತಂದು ಕ್ರಿ.ಶ. ೧೧೦೦ಳರಲ್ಲಿ ರಾಜೇಂದ್ರ ಚೋಳ ಪಂಚವನ್ ಮಹಾರಾಯನಿಂದ 'ಕ್ಷತ್ರಿಯ ಶಿಖಾಮಣಿ' ಎಂದು ಮಾಲವ್ವಿಯಲ್ಲಿ ಪಟ್ಟಾಭಿಶಿಕ್ತನಾದ 'ಮನಿಜ'ನು ಕೊಂಗಾಳ್ವರ ಪೈಕಿಯವನೆನಿಸುತ್ತಾನೆ.

ಕೊನೆಯ ಕೊಂಗಾಳ್ವರ ಪೈಕಿ 'ಮನಿಜ' ಪಟ್ಟಗೊಂಡ ಮೇಲೆ ಜನಸಮಯಕ್ಕೆ ತುಸು ಬೆಂಬಲ ಒದಗಿದಂತಾಗುತ್ತದೆ. ಕ್ರಿ.ಶ. ೪೬೬ರ ಮಡಿಕೇರಿಯ ತಾಮ್ರಪಟದಲ್ಲಿ[೭] 'ಗಂಜನಾಡ ನಿರ್ಗುಂದ'ದ ನಾಯಕನು ಗಂಗರ ಸಾಮಂತನಾಗಿದ್ದ ವಿಷಯವಿದೆ. ಬಹುಶಃ ಸಾಮಂತನ ವಂಶಿಕ ದೊರೆಯು ಶ್ರೀಪುರುಷನ ಕಾಲದಲ್ಲಿ ತನ್ನ ರಾಣಿಯ ಸಲುವಾಗಿ ಶ್ರೀ ಪುರುಷನಲ್ಲಿ ಭಿನ್ನವಿಸಿದಾಗ ಜಿನಾಲಯಕ್ಕೆ ದತ್ತಿ ನೀಡಿದನಂತೆ.[೮] ಕ್ರಿ.ಶ. ೯೭೭ರ ಪೆಗ್ಗೂರು ಶಾಸನದಲ್ಲಿ ಶ್ರೀಪುರುಷ ಮಹಾರಾಜರ ದತ್ತಿ ಎಂದು ಉಕ್ತವಾಗಿದೆ.[೯] ಬಹುಶಃ ನಿರ್ಗುನ್ದ ರಾಜನ ರಾಣಿ ಕಾಂದಚ್ಚಿಯ ಆಳಯಕ್ಕನುಗುಣವಾಗಿ ಈ ದತ್ತಿ ದಾನವನ್ನು ಪೆಗ್ಗದೂರು (ಪೆಗ್ಗೂರು) ಬಸದಿಗೆ ನೀಡಿರಬೇಕು. ಅಂದರೆ ಪೆಗ್ಗೂರಿನಲ್ಲಿ ೮ನೆಯ ಶತಮಾನದಲ್ಲಿಯೇ ಬಸದಿ ಇದ್ದ ಸೂಚನೆಯನ್ನು ಅದು ನೀಡುತ್ತದೆ. ಇದಲ್ಲದೆ ದಕ್ಷಿಣ ಕೊಡಗಿನ ಹುಡಿಕೇರಿಯ ಬಳಿ ಹೈಸೊಡ್ಲೂರಿನ ದೇವರಕೆರೆಯ ಬಳಿ ಅಪ್ರಕಟಿತ ಕ್ರಿ.ಶ. ೭-೮ನೇ ಶತಮಾನದ ಲಿಪಿಯ ಅಪೂರ್ಣ ತುಂಡು ಶಾಸನ ಲಭ್ಯವಾಗಿದೆ. ಶಾಸನದಲ್ಲಿ 'ಧರ್ಮ' ವನ್ನು 'ಅಟಿತ್ತಡೆ' ಎಂಬ ಶಬ್ದಗಳಿವೆ. ಇದು ಈ ಗ್ರಾಮದ ನೆರೆಯಲ್ಲಿದ್ದ ಜೈನ ಪ್ರಭಾವ, ಜೈನಗುರುಗಳು, ಜಿನಾಲಯವಿದ್ದಿರುವಂಥ ಸಂದರ್ಭವನ್ನು ತೋರುವಂತಿದೆ. ಆ ಕಾಲದಲ್ಲಿಯ ಕೊಡಗಿನ ಶಾಸನಗಳು ಸಾಮಾನ್ಯವಗಿ ಜೈನ ಸಮಯವನ್ನು ತೋರುವಂಥವಾಗಿವೆ. ಈ ಶಾಸನ ಕೊಡಗಿನ ಮೊದಲ ಕನ್ನಡ ಶಾಸನವೂ ಹೌದು.[೧೦]

ಗಂಗ ಶ್ರೀಪುರುಷನ ಕಾಲ ಕ್ರಿ.ಶ. (೭೫೫-೭೮೮), 'ಶ್ರೀ ಪುರುಷ ಮಹಾರಾಜರ ದತ್ತಿ' ಬಹುಶಃ ಈ ಕಾಲದಲ್ಲಿ ಆಗಿದ್ದುದನ್ನು ಕ್ರಿ.ಶ. ೯೭೮ರ ಪೆಗ್ಗೂರು ಬಸದಿ ಶಾಸನದಲ್ಲಿ ಸಾಂಕೇತಿಕವಾಗಿ ಸೂಚಿಸಿದಂತಿದೆ. ಹೈಸೊಡ್ಲೂರಿನ ಶಾಸನದ ಶಬ್ದಗಳ ಸೂಚ್ಯಾರ್ಥವನ್ನು ಅನ್ವಯಿಸಿಕೊಳ್ಳುವುದಾದರೆ ಶ್ರೀ ಪುರುಷನ ಕಾಲಕ್ಕೂ ಮುಂಚಿನಿಂದಲೋ ಅಥವಾ ಅವನ ಕಾಲದಲ್ಲಿಯೇ ಈ ಬಸದಿ ನಿರ್ಮಾಣವಾಗಿರುವಂತಿದೆ. ಈ ಬಸದಿ/ಜಿನಾಲಯಗಳಿಂದಾಗಿ ೭-೮ನೇ ಶತಮಾನದಲ್ಲಿಯೂ ಜೈನಸಮಯ ಪ್ರಭಾವಶಾಲಿಯಾಗಿದ್ದ ಕುರುಹುಗಳು ಎದ್ದು ಕಾಣುತ್ತವೆ.



ಅಂಜನಗೇರಿ–ಬೆಟಗೇರಿ ಬಸದಿಯ ಕುಬೇರ ಶಿಲ್ಪ



ಅಂಜನಗೇರಿ–ಬೆಟಗೇರಿಯ
ಲಭ್ಯ ಜಿನೆಯ ಅನಂತನಾಥ
ಸ್ವಾಮಿ ವಿಗ್ರಹದ
ಜೀರ್ಣೋದ್ಧಾರದ
ನಂತರದ ಸ್ವರೂಪ
(ಸಾಲಿಗ್ರಾಮದಲ್ಲಿ ಪ್ರತಿಷ್ಠಿತ)



ಮುಳ್ಳೂರಿನ ಪಾರ್ಶ್ವನಾಥ, ಶಾಂತಿನಾಥ ಹಾಗೂ
ಚಂದ್ರನಾಥ ಬಸದಿಗಳು



ಮುಳ್ಳೂರು ಬಸದಿಯ
ಪಾರ್ಶ್ವನಾಥನ ಪಾದದ ಬಳಿ
ಚತುರ್ವಿಂಶತಿ ತೀರ್ಥಂಕರರ
ಶ್ಲಾಘನೆ



ಅರಮೇರಿ ಭಗವತಿ ದೇಗುಲದ ಚತುರ್ವಿಂಶತಿ ತೀರ್ಥಂಕರ ಶಿಲ್ಪ



ಮುಳ್ಳೂರು ಬಸದಿ ಪಾರ್ಶ್ವನಾಥನ ಎಡಮುಂಬದಿಯ
ಚತುರ್ವಿಂಶತಿ ತೀರ್ಥಂಕರ ಶಿಲ್ಪ

ದಕ್ಷಿಣ ಕೊಡಗಿನ ಈ ಪರಿಸರದಲ್ಲಿ ತೆರಾಲು (<ಥೇರಾಲು<ಥೇರಾಳು=ಥೇರ ಹಾಳು!) ಎಂಬ ಬೌದ್ಧ ಪ್ರಭಾವಿತ ಸ್ಥಳನಾಮವೂ ಕಂಡುಬರುತ್ತದೆ. ಜೊತೆಗೆ ಇದೇ ಗ್ರಾಮದಲ್ಲಿ **'ಕರ್ಣದೇವತೆ'** ಎಂಬ ಕಮಲದ ಮೊಗ್ಗು ಹಿಡಿದಿರುವ ಸ್ಥಾನಕ ಸ್ತ್ರೀ ದೇವತೆಯೂ ಆರಾಧನೆಗೊಳ್ಳುತ್ತಿದೆ. 'ಕರ್ಣ<ಕರಣ' ಎಂಬುದು ಜೈನಧರ್ಮದಲ್ಲಿ ಯೋಗಕ್ಕೆ ಪರಿಭಾಷೆಯಾಗಿ ಬರುತ್ತದೆ (ಕರಣ ಗ್ರಂಥ, ಕರಣಯೋಗ ಇತ್ಯಾದಿ) ಅಲ್ಲದೆ 'ಥೇರ' ಎಂಬ ಶಬ್ದವು ಬೌದ್ಧದಲ್ಲಿಯಂತೆ ಜೈನಧರ್ಮದಲ್ಲಿಯೂ ಮುನಿ-ಯತಿ ವರ್ಗಕ್ಕೆ ಅನ್ವಯ ಶಬ್ದವಾಗಿದೆ. ಹೀಗಾಗಿ ತೆರಾಲು<ಥೇರಹಾಳು ಪಾಳುಬಿದ್ದ ಬೌದ್ಧ ಯಾ ಜೈನ ವಸತಿಯ ಗ್ರಾಮವಾಗಿದ್ದಿರಬಹುದು. ಅಲ್ಲಿ **'ಬೊಮ್ಮಂಜ'** ಎಂಬ ಹೆಸರಿನ ತೆಳುಹೊಳೆಯು ಕರ್ಣದೇವತಾ ದೇಗುಲದ ಬದಿಗೆ ಹರಿಯುತ್ತದೆ. ಹೊಳೆಗೆ ಆ ಹೆಸರು ನೀಡಿರುವುದನ್ನು ನೋಡಿದರೆ ಬ್ರಹ್ಮದೇವರ ಸಂಬಂಧಿಯಾಗಿ ಕಾಣುತ್ತದೆ. ಅಂದರೆ ದೇವತೆಯ ನೆಲೆಯು ಜೈನ ಪರಂಪರೆಯ ಪ್ರಭಾವದ್ದಾಗಿದ್ದಂತೆ ಕಾಣುತ್ತದೆ. ಬಹುಶಃ 'ತೆರಾಲು (ಥೇರಹಾಳು !)' ಮೊದಲಿಗೆ ಬೌದ್ಧನೆಲೆಯಾಗಿದ್ದು ನಂತರ ಜೈನಸಮಯಕ್ಕೆ ತೆರೆದುಕೊಂಡಂತಿದೆ. ಈ ಹಿನ್ನೆಲೆಯಲ್ಲಿ 'ತೆರಾಲು'ವಿನಲ್ಲಿ ಪ್ರಾಚೀನ ಬಸದಿಯೊಂದು ಇದ್ದಿರುವ ದಟ್ಟ ಸಾಧ್ಯತೆಯನ್ನು ತೆಗೆದು ಹಾಕುವಂತಿಲ್ಲ. ಕೊಡಗಿನ ಅತ್ಯಂತ ಪ್ರಾಚೀನ ಬಸದಿಯಾಗಿದ್ದರಲೂ ಸಾಕು. ದಕ್ಷಿಣ ಕೊಡಗಿನ ಈ ಪರಿಸರದ ಸುತ್ತ ನಮಗೆ ಬಿಳಿಯೂರು, ಪೆಗ್ಗೂರುಗಳ ೮-೯ನೇ ಶತಮಾನದ ಶಾಸನೋಕ್ತ ಬಸದಿ ಹಾಗೂ ಜೈನಯತಿಗಳ ಹೆಸರುಗಳು ಕಂಡುಬರುವಲ್ಲಿ ಮೇಲಿನ ಸಾಧ್ಯತೆಗೆ ಇಂಬು ದೊರೆಯುತ್ತದೆ. ಈ ಸಂಬಂಧದ ಜಿನಕಾಡುಗಳೂ (ದೇವರ ಕಾಡುಗಳಂತೆ) ಕಂಡುಬರುವುದು ವಿಶಿಷ್ಟ

ಕ್ರಿ.ಶ. ೮೮೮ರ **ಬಳಿಯೂರು** ಶಾಸನವು[೧೧] ಅಲ್ಲಿದ್ದ (ಇಮ್ಮಡಿ ರಾಚಮಲ್ಲ-ಗಂಗ ದೊರೆ ಕಾಲದ ಪೆಣ್ಣಿಗಡಙ್ಗದ **ಸತ್ಯವಾಕ್ಯ ಜಿನಾಲಯದ** ಪ್ರಸ್ತಾಪ ಮಾಡುತ್ತ ಅದಕ್ಕೆ ಒದಗಿದ ಗ್ರಾಮದಾನ, ಪರಿಸರ, ಯತಿ, ಭತ್ತದ ನೀಡಿಕೆಯ ಪರಿಮಾಣ ರಕ್ಷಣೆಯ ಹೊಣೆ ಇತ್ಯಾದಿಗಳ ಕುರಿತು ಹೇಳಿದೆ. ಶಿವಣನ್ದಿ ಸಿದ್ಧಾನ್ತರ ಭಟರ ಶಿಷ್ಯ ಸರ್ವ್ವಣನ್ದಿ ದೇವರಿಗೆ, ಬಿಳಿಯೂರು, ಪನ್ನಿರ್ಪಳ್ಳಿ ಬಳಿಯೂರು ಸಹಿತವಾಗಿ ಹನ್ನೆರಡು ಹಳ್ಳಿಗಳನ್ನು (ಪನಿ ನೀರ್‌ಪಳ್ಳಿ-ಇರ್ಪು ಲಕ್ಷಣತೀರ್ಥ!) ಸರ್ವಬಾಧಾ ಪರಿಹಾರವಾಗಿ ದಾನ ಕೊಟ್ಟಿರುವಲ್ಲಿ ಅಲ್ಲಿದ್ದ ಜಿನಾಲಯ-ಬಸದಿಯ ಅಸ್ತಿತ್ವವನ್ನು ತೋರಿಸುವಂತಿದೆ. ಈ ದಾನವನ್ನು ತೊಂಬತ್ತಾರು ಸಾಸಿರ್ವರು, ಮಯ್ಯಾಮಂತರು ಬೆದ್ದೊರೆಗರೆ ಎಟ್ಟಿದಿಮ್ಮರು, ಸಾಕ್ಷಿಗಳು ಇದನ್ನು ಕಾಪು (ರಕ್ಷಿಸು) ಮಾಡುವವರು ಶಾಸನ ಮಲೆಸಾಸಿರ್ವ್ವರು ಮಯ್ಯುರ್ವ್ವರುಂ, ಮಯ್ದಾಮರಿಗರುಂ' ಎಂದಿದೆ. ಕನ್ನಡ ಕನ್ನಡ ನಿಘಂಟು 'ದಾಮರಿಗ' ಎಂದರೆ ಯೋಧ, ಭಟ ಎಂದಿದೆ. 'ಮಯ್ದಾಮರಿಗರಂ' ಎಂದರೆ ಐದು ಜನ ಭಟರು ಎಂದಿದ್ದರೂ ಇಲ್ಲಿ ಮೂರೂ ಶಬ್ದಗಳನ್ನು ಪ್ರತ್ಯೇಕ ಶಬ್ದಗಳಾಗಿ ಹೇಳಲಾಗಿದೆ. ಅಂತಾಗಿ ಮಯ್+ದಾಮರಿಗರುಂ ಎಂದೂ ಬಿಡಿಸಿಕೊಳ್ಳುವ ಸಾಧ್ಯತೆ ಇದೆ. 'ಮಯ್ಯುರ್ವ್ವರುಂ' ಎಂದಿರುವಲ್ಲಿ ಅನುಸ್ವಾರ 'ಂ' ಬಂದಿರುವ ಕಾರಣ, ಪ್ರತ್ಯೇಕ ಶಬ್ದವಾಗಿ 'ಮಯ್ದಾಮರಿಗರುಂ' ಕಾಣಬರುವಲ್ಲಿ ಐದು ದಾಮರಿಗರು, ಎನ್ನುವುದಕ್ಕಿಂತ ಜಿನಾಲಯದ ರಕ್ಷಣೆಗಿದ್ದ ವೇಳೆವಾಳಿ ಬಗೆಯ ಜಿನವೇಳವಾಳಿಗಳಾಗಿದ್ದಿರಬಹುದು; ಹಾಗೂ 'ಪೆಣ್ಣಿಗಡಙ್ಗ' ಅಂದರೆ ಕಡಂಗದಿಂದ (ಗುಡ್ಡೋಣಿ) ರಕ್ಷಿತವಾದ ವಿಶಲವಾದ ಪನ್ಯಜಮೀನು (ಕೊಡಗಿನಲ್ಲಿ ಪನ್ಯಜಮೀನುಗಳು ಬಹಳ ಫಲವತ್ತಾದ ವಿಶಾಲವಾದ ಕೃಷಿ ಜಮೀನುಗಳಾಗಿವೆ. ಹಾಲೇರಿ ಅರಸರ ಕಾಲದಲ್ಲಿ ಅವೆಲ್ಲ ರಾಜರ ಖಾಸಗಿ ಕೃಷಿ ಜಮೀನುಗಳಾಗಿ ದಲಿತ ವರ್ಗದ ಕೆಂಬಟ್ಟಿಗಳು ಆ ಜಮೀನುಗಳ ಕೃಷಿ ಕಾರ್ಯಕ್ಕೆ ನಿಯುಕ್ತ ರಾಗಿರುತ್ತಿದ್ದರು; ಕಲ್ಯದಲ್ಲಿ ಕೆಂಪೇಗೌಡನಿಗೆ ಪನ್ಯಜಮೀನಿತ್ತು; ಪಾವಗಡದಲ್ಲಿಯೂ ಪನ್ಯ ಜಮೀನು ಪದ್ದತಿ ಇತ್ತು. ಈ ಹಿನ್ನೆಲೆಯಿಂದಲೂ ಗಮನಿಸಿದರೆ ಪೆಗ್ಗೂರು ಬಸದಿಗೆ ಕೊಟ್ಟಿದ್ದ ಜಮೀನು ಬಹಳ ಫಲವತ್ತಾಗಿದ್ದು, ಹಾಗೂ ನೆರೆಯ ಗ್ರಾಮಗಳಲ್ಲಿಯೂ ಅಂಥ ಜಮೀನುಗಳಿದ್ದು ಅವುಗಳ ರಕ್ಷಣೆಗೆ 'ಮಯ್ದಾಮರಿಗರು' ಇದ್ದರೆನ್ನಬಹುದಾಗಿದೆ. ಈ ದೃಷ್ಟಿಯಿಂದ 'ಪೆಣ್ಣಿಕಡಂಗ'ದ ಜಮೀನು, ಕೊಡಗಿನ ಮೊದಲ 'ಪನ್ಯ ಜಮೀನು'ವಿನ ಉಲ್ಲೇಖ ೯ನೇ ಶತಮಾನದ್ದು ಎಂದು ಉಲ್ಲೇಖಿಸಬೇಕಾಗುತ್ತದೆ. ಹಾಲೇರಿ ಅರಸರ ಕಾಲದಲ್ಲಿ ಬಿಳಿಯೂರು ಪನ್ನಿರ್ಪ್ಪಳ್ಳಿ ಪರಿಸರಕ್ಕೆ ಸಮೀಪದ ಕುಟ್ಟಗ್ರಾಮದ ಪನ್ಯಜಮೀನನ್ನು 'ಶುರುಪನ್ಯ' ಎನ್ನುತ್ತಿದ್ದರು; ಕಕ್ಕಟಿ (ಮಧ್ಯಕೊಡಗು) ಬಳಿ 'ನಡುಪನ್ಯ', ಅಪ್ಪಂಗಳ (ಉತ್ತರ ಕೊಡಗು)ದ ಪನ್ಯಜಮೀನನ್ನು 'ಕೊನೆಪನ್ಯ' ಎನ್ನುತ್ತಿದ್ದರು. ಇವಕ್ಕೆಲ್ಲ ಬಹುಶಃ ಪೂರ್ವ ಮಾದರಿಯಾಗಿ ಬಿಳಿಯೂರು ಜಿನಾಲಯದ 'ಪೆಣ್ಣಿ ಕಡಂಗ'ದ ಜಮೀನು 'ಪನ್ಯ'ದ ಪರಿಕಲ್ಪನೆಗೆ ಮಾತೃಕೆಯಾಗಿರುವಂತಿದೆ. ಕನ್ನಡ ನಿಘಂಟಿನಲ್ಲಿ ಪಣ್ಣೆ=ಪಣ್ಣೆಯ=ಸಾಗುವಳಿ ಭೂಮಿ ಎಂದು ಅರ್ಥವಿದೆ. ತಮಿಳಿನಲ್ಲಿ ಜ್ಞಾತಿ ಪದಗಳಾಗಿ ಪಣ್ಣೈ, ಪಣ್ಣೈ ಎಂಬ ಶಬ್ದಗಳಿವೆ. ಕೊಡಗಿನ ಮೌಕ್ತಿಕ ಕವಿಯ ಚಂದ್ರನಾಥಾಷ್ಟಕದಲ್ಲಿ 'ಪೆಣ್ಣಿಗಂಡಲು' (ಕೆರೆಯ ನೆರೆಗಿದ್ದ ವಿಶಾಲವಾಗಿದ್ದ ಜಮೀನಿನ ಕಾರಣ !) ಎಂಬ ಶಬ್ದ ಪ್ರಯೋಗವೂ ಇದೆ.[೧೨] ಈ ವಿಷಯಗಳೆಲ್ಲದರ ಕ್ರೋಢೀಕರಣದಲ್ಲಿ ಬಿಳಿಯೂರಿನ

ಪೆಣ್ಣೆಗಡಜ್ಜದ ಸತ್ಯವಾಕ್ಯ ಜಿನಾಲಯ ಬಹಳ ಪ್ರಸಿದ್ಧ ಹಾಗೂ ರಾಜಮಾನಿತವಾದ ಜಿನಾಲಯವಾಗಿ ಸಂರಕ್ಷಿತವಾಗಿತ್ತು. ಜಿನಯತಿ ಸರ್ವಣನ್ದಿ ದೇವರೂ ಪ್ರಭಾವಶಾಲಿಯಾಗಿದ್ದ ಎಂದೂ ಭಾವಿಸಬಹುದಾಗಿದೆ. ಈ ಬಸದಿಗೆ 'ಎಣ್ಬನೂರು ಒತ್ತೆಮುಂ' (ಕೊಡಗಿನಲ್ಲಿ ಇದು ಭಟ್ಟಿಭೂಮಿ ಪರಿಮಾಣದಂತೆ, ಸೂಚಕವಾದ ಶಬ್ದ. ಒಂದು ಭಟ್ಟಿ ಭೂಮಿಗೆ ಮೂರೂವರೆ ಎಕರೆ ಸುಮಾರು ಪ್ರಮಾಣ ಅಂತಾರ್ಗಿನ ಶತಮಾನದ ಈ ಶಬ್ದ ಭೂಪರಿಮಾಣವಾಚಿಯಾಗಿದೆ) ಅನ್ನದಾನ ನೀಡಿದ ವಿಷಯ ತಿಳಿಯುತ್ತದೆ.

ಕ್ರಿ.ಶ. ೯೭೮ರ ಪೆಗ್ಗೂರು ಶಿಲಾಶಾಸನದಲ್ಲಿ[೧೩] ರಕ್ಕಸಗಂಗನು ಬೆದ್ದೊಱಗರೆ (ಲಕ್ಷ್ಮಣತೀರ್ಥ ನದಿ ಪರಿಸರ)ಯನ್ನು ಆಳುತ್ತಿದ್ದಾಗ ಗುಣಸೇನಪಣ್ಡಿತ ಭಟ್ಟಾರಕನ ಶಿಷ್ಯ ಅನಂತವೀರ್ಯಯ್ಯಗಳಿಗೆ ಪೊಸವಾಡಗ ಮತ್ತು ಪೆಗ್ಗದೂರು ಗ್ರಾಮಗಳನ್ನು, ಪೆಗ್ಗದೂರಿನ ಬಸದಿಯ ನಿರ್ವಹಣೆಗಾಗಿ ನೀಡಿದ ವಿಷಯವಿದೆ. ಈ ದಾನಕ್ಕೆ ತೊಂಬತ್ತಾರು ಸಾಸಿರದವರು, ಸಾಮಂತರು, ಬೆದ್ದೊಱಗರೆ ಯೆಲ್ವದಿಂಬರು, ಎಣ್ಬೊಕ್ಕಲು ಸಾಕ್ಷಿಗಳಾಗಿದ್ದರು. ಈ ದಾನದ ರಕ್ಷಕರು ನಾಲ್ವರ್ಮಲೆಪರು, ಮಯ್ಯೂರ್ಬ್ಬರು, ಮಯ್ಯಾಮರಿ ಗಳು ಆಗಿದ್ದರು, ಎಂದೆಲ್ಲ ಹೇಳಲಾಗಿದೆ. ಪೆಗ್ಗದೂರು ಈ ಶಿಲಾಶಾಸನವು ಇಂದಿಗೂ ಪಾಳು ಬಿದ್ದ ಬಸದಿಯ ವೇದಿಕೆಯ ಮುಂಭಾಗದಲ್ಲಿ ನಿಂತಿದೆ. ಪೆಗ್ಗೂರಿನ ಈ ಬಸದಿಗೆ 'ಶ್ರೀ ಪುರುಷ ಮಹಾರಾಜ ದತ್ತಿ' ಕೊಡಲಾಗಿತ್ತು. ಅಂದರೆ ೧೦ನೇ ಶತಮಾನದ ಮಧ್ಯಂತರದಲ್ಲಿ ಈ ದಾನ ನೀಡಿರುವುದಾಗಿದೆ. ಶ್ರೀಪುರುಷನ ಕಾಲದಲ್ಲಿಯೇ ದತ್ತಿಯನ್ನು ಈ ಬಸದಿಗೆ ಕೊಡುವುದೆಂದರೆ ಅದು ರಾಜಮಾನಿತ ಗೌರವವೆಂದೇ ಹೇಳಬೇಕು.

ಬಿಳಿಯೂರು ಶಾಸನದ ಮೇಲ್ಭಾಗದ ಶಿಲ್ಪವಾಗಿ, ಮುಕ್ಕೊಡೆ, ದೀಪಸ್ತಂಭ, ಕುಂಬಕಳ್ಳ, ಅವು ಅಷ್ಟೇನೂ ಕಲಾತ್ಮಕ ಬಿಡಾವಣೆ ಎನಿಸುವುದಿಲ್ಲ. ಅದೇ ಪೆಗ್ಗೂರು ಬಸದಿ ಶಾಸನದ ಮೇಲ್ಭಾಗದಲ್ಲಿ ಶಂಖ, ಮುಕ್ಕೊಡೆ, ನಿಂತ ನೀಳದೀಪಸ್ತಂಭ (ಕುತ್ತುಂಬೊಳಿಚ), ಶಿರದಲ್ಲಿ ಅರಳ ಎಲೆ ಇರುವ ಸ್ತಂಭ, ಅಗಲ ಉದರ ಭಾಗವಿರುವ ಕುಂಭಕಳ್ಳ, ಪಾರ್ಶ್ವಕ್ಕೆ ಇಳಿಬಿದ್ದ ಬಾಲವಿಟ್ಟುಕೊಂಡು ಚಾಚಿದ ದಂತಗಳೆದ್ದು ಕಾಣುತ್ತವೆ. ಆದರೆ ಬಾಗಿದ ಸೊಂಡಿಲ ವಿಸೀತಗಜ, ಸ್ಥಿರಚಕ್ರದ ಬುಡದ ಮೇಲಿನ ಸ್ತಂಭಶಿರದ ಅರಳಿಪತ್ರ ಇತ್ಯಾದಿಗಳು ಜೈನ ಧಾರ್ಮಿಕ-ಸಾಂಸ್ಕೃತಿಕ ಹಿನ್ನೆಲೆಗನುಗುಣವಾದ ಶಿಲ್ಪಗೆತ್ತನೆಯ ಮಾದರಿಯನ್ನು ತೋರುತ್ತವೆ.

**ಗುಡಗೂರಿನ** (ಸೋಮವಾರಪೇಟೆ ತಾ. ಬೇಳೂರು ಹಾದಿ) ಹುಚ್ಚಬಸವೇಶ್ವರ ಗುಡಿಯ ಎದುರು ಹಾದಿಯಲ್ಲಿ ಅಪ್ರಕಟಿತ **ನಿಸಿದಿ ಶಾಸನ**ವೊಂದಿದ್ದು, ಗಂಗರಸ ರಾಚಮಲ್ಲನನ್ನು ಉಕ್ತಮಾಡಿದ, ಹತ್ತನೆಯ ಶತಮಾನದಷ್ಟು ತನ್ನ ಪ್ರಾಚೀನತೆಯನ್ನು ತೋರಿಕೊಂಡಿದೆ. ಇದಲ್ಲದೆ ಇದರ ಸನಿಹದಲ್ಲಿಯೇ ದೊರೆತ ಇನ್ನೊಂದು ಅಪ್ರಕಟಿತ ಕೊಡಗಿನ ಪ್ರಥಮ ಅಗ್ನಿಪ್ರವೇಶದ ವೇಳೇವಾಳಿ ವೀರಶಾಸನದಲ್ಲಿ ಮೇಲಿನ ಹಂತವು ಸುರಲೋಕದ ಹಂತವಾಗಿದೆ. ಕ್ರಿ.ಶ. ೯೧೧ರ ಗಂಗರ ಎರೆಯಮ್ಮನ ಕಾಲದ ಶಾಸನ ಶಿಲ್ಪವಾಗಿದೆ.[೧೪] ಈ ಅಂಶಗಳು, ಈ ಪ್ರದೇಶದಲ್ಲಿದ್ದ ಜೈನಸಮಯದ ಬಗೆ ಹಾಗೂ ಬಸದಿಯೊಂದರ ಅಸ್ತಿತ್ತ್ವವನ್ನು ಸೂಚಿಸುವಂತಿವೆ. ಅಲ್ಲದೆ ಗಂಗರ ಆಳ್ವಿಕೆ ದಕ್ಷಿಣ ಕೊಡಗಿನಿಂದ ಉತ್ತರ ಕೊಡಗಿನವರೆಗೂ ಚಾಚಿಕೊಂಡಿದ್ದ ಸೂಚನೆಯನ್ನು ನೀಡುತ್ತ, ಜೈನಸಮಯಕ್ಕೆ ನೀಡಿದ್ದ ಆಶ್ರಯ ಸೂಚಿಯಾಗಿಯೂ ಕಾಣುತ್ತದೆ. ಇದಕ್ಕೆ ಪೋಷಕವಾಗಿ ಇಲ್ಲಿಂದ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಯಡೂರು ಹಾಗೂ ಕಲಕಂದೂರುಗಳಲ್ಲಿ ಬಸದಿಗಳಿದ್ದುದಕ್ಕೆ ಹಿನ್ನೆಲೆಯನ್ನು ಕಾಣುವಂತಾಗುತ್ತದೆ.

ಚೋಳರು ಕ್ರಿ.ಶ. ಸುಮಾರು ೧೦೦೪ರಲ್ಲಿ ಪನಸೋಗೆಯಲ್ಲಿ ಗಂಗರನ್ನು ಸೋಲಿಸಿದರಷ್ಟೆ. ಆಗ ಚೋಳರಿಗೆ ನೆರವಾದ ಕೊಂಗಾಳ್ವರ ವಂಶದ 'ಮನಿಜ'ನಿಗೆ ರಾಜರಾಜ ಚೋಳನ ಆದೇಶದ ಮೇರೆಗೆ ಅವನ ಮಗ ರಾಜೇಂದ್ರ ಚೋಳ ಪಂಚವ್ ಮಹಾರಾಯನು ಮಾಲವ್ವಿಯಲ್ಲಿ ಪಟ್ಟ ಕಟ್ಟಿದ್ದು,[೧೫] ಮಾಲಂಬಿ ಶಾಸನೋಕ್ತ ವಾಗಿದೆ. ಕ್ಷತ್ರಿಯ ಶಿಖಾಮಣಿ ಕೊಂಗಾಳ್ವನೆಂದು ಮನಿಜನಿಗೆ ಪಟ್ಟ ಕಟ್ಟಿ, ಮಧ್ಯಂತಂ ಕೊಂಗಾಳ್ವದ ಮೂಲಪುರುಷ ನಾಗುವಂತೆ ರಾಜಮಾನ್ಯತೆ ನೀಡಿದ. ಈ ಮನಿಜನಿಗೆ ಪಟ್ಟ ಕಟ್ಟಿದ ನೆಲೆ, ಮಾಲಂಬಿ ಬಳಿಯ ಆಲೂರಿಗೆ ಸೇರಿದ ಕಡಿದಾದ ಬಂಡೆಯ ಗುಡ್ಡ (ಮುದುಕಿಗುಡ್ಡ)ದ ನೆತ್ತಿಯ ಚೋಳ ಶೈಲಿಯ ಏಕ ಗರ್ಭಗೃಹ ಪಟ್ಟಾಭಿಷೇಕ ಮಂಟಪ ವಾಗಿ ಅವಶೇಷ ಕಾಣಬರುತ್ತದೆ.[೧೬] ಕೊಂಗಾಳ್ವರು ಜಿನಸಮಯಿಗಳಾಗಿಯೆ ಉಳಿದಿದ್ದರು. ಅಂತಾಗಿ ಮಾಲಂಬಿ-ಆಲೂರಿನಲ್ಲಿ ಮುಕ್ಕೊಡೆಯ ಆಸೀನ ಜನರ ಉಬ್ಬುಶಿಲ್ಪಗಳು ಚೌಕಟ್ಟಿನಲ್ಲಿ ಒಂದರ ಮೇಲೊಂದು ಚೌಕಾಕಾರದ ಶಿಲಾಮುಖದಲ್ಲಿದೆ. ಇದು ಆಲೂರಿನಲ್ಲಿದ್ದ ಜಿನಾಲಯ ವೊಂದರ ಅವಶೇಷವಾಗಿ ಇದು ಕಾಣಬರುವಂತಿದೆ.

ಮಾಲವ್ವಿ- ಹಿರಿಯ ಅವ್ವೆ, ಮಲೆಯ ಅವ್ವಿಯ ನೆಲೆಯಾಗಿ, ಜನಪದರಲ್ಲಿ ಮುದುಕಿಗುಡ್ಡವೆನಿಸಿರುವುದು ಕುತೂಹಲಕಾರಿ. ಬಹುಶಃ ಪದ್ಮಾವತಿ ಯಕ್ಷಿಯನ್ನು ಈ ಹೆಸರಿನಿಂದ ಜನಪರ ಕರೆದಿರಬಹುದೇ ಎನಿಸುತ್ತದೆ. ಈ ಮಾಲವ್ವಿ 'ಮುದುಕಿಗುಡ್ಡೆ' ಯಿಂದ ಉತ್ತರಕ್ಕೆ ಅರ್ಧ ಕಿ.ಮೀ. ದೂರದ ಕೊಡಗಿನಗಡಿಯಲ್ಲಿ ಸುಳುಗೋಡು ಸೋಮವಾರ

ಗ್ರಾಮವಿದೆ (ಕೊಡಗಿಗೆ ಮೊದಲು ಸೇರಿದ್ದ ಈ ಗ್ರಾಮ ಸದ್ಯ ಅರಕಲಗೂಡು ತಾಲ್ಲೂಕಿಗೆ ಸೇರಿದೆ). ಇಲ್ಲಿಯ ಬಸವೇಶ್ವರ ದೇಗುಲದ ಸನಿಹದ ಹಳೆ ಬಸ್ತಿಯಲ್ಲಿ ಕ್ರಿ.ಶ. ೧೦೭೯–೮೦ರ ರಾಜೇಂದ್ರ ಪೃಥ್ವಿ ಕೊಂಗಾಳ್ವನ ಶಾಸನವು ಹಳೆಯ ಬಸ್ತಿ ಬಳಿ ನೆಟ್ಟಕಲ್ಲ ಮೇಲೆ ಇತ್ತು. ಅದರಲ್ಲಿ ಮೂಲಸಂಘ ಕಾಣೂರ್ಗಣ, ತಗರಿಗಚ್ಛದ ಗಣ್ಡವಿಮುಕ್ತ ಸಿದ್ಧಾಂತದೇವರಿಗೆ ಬಸದಿ ನಿರ್ಮಿಸಿ ಭೂದಾನ ನೀಡಿದ ವಿಷಯವನ್ನು ಹೇಳಿದೆ; ಜೈನಯತಿಯ ಪ್ರಶಸ್ತಿಯನ್ನು ಹೇಳಲಾಗಿದೆ.[೧೭] ಬಸವಣ್ಣನ ದೇವಸ್ಥಾನದ ನವರಂಗದ ತೊಲೆಯ ಮೇಲೆ ಸಮಾಧಿ ಮರಣದಿಂದ ಮುಡುಪಿದ ಮಾಕವ್ವೆಗಂತಿಯ ವಿಷಯ ತಿಳಿಸುವ ಕ್ರಿ.ಶ. ೧೦೯೫ರ ಶಾಸನವಿದೆ. ಈಕೆ ಸೂರಸ್ತಗಣದ ರಾಮಚಂದ್ರದೇವರ ಹಾಗೂ ಅರಸವ್ವೆ ಗನ್ತಿಯರ ಶಿಷ್ಯೆಯಾಗಿದ್ದ ವಿಷಯವನ್ನು ತಿಳಿಸಿದೆ.[೧೮] ಇವರಿಗೂ 'ಮಲೆಯ ಅವ್ವಿ–ಮುದುಕಿಗುಡ್ಡೆ'ಗೂ ಸಂಬಂಧ ವಿರಬಹುದೇ, ಯಕ್ಷಿಯ ನೆಲೆಯೆಂದು, ಜನಸಮಯ ಅದನ್ನು ಪರಿಗಣಿಸಿತ್ತೆ ಎಂಬುದನ್ನು ಪರಿಶೀಲಿಸಬೇಕಿದೆ.

ಬಸವೇಶ್ವರ ದೇಗುಲಾವರಣದಲ್ಲಿ ಬಿಲ್ಪತ್ರೆ ಮರದ ಕೆಳಗೆ ಸುಮಾರು ಎರಡುವರೆ ಅಡಿ ಎತ್ತರ, ಒಂದೂ ಮುಕ್ಕಾಲು ಅಡಿ ಅಗಲ, ಒಂದೂ ಕಾಲಡಿ ದಪ್ಪದ ಆಸೀನಧ್ಯಾನ ಜಿನನ ಸುಂದರ ಗುಂಗುರಕೇಶಿ ವಿಗ್ರಹವಿದೆ. ಇದೇ ಆವರಣದಲ್ಲಿ ತೀರ ಸವೆದ ಪ್ರಾಚೀನ ಯಕ್ಷ ದಂಪತಿಗಳ ಭಗ್ನ ವಿಗ್ರಹಗಳ ಅವಶೇಷವಿದೆ. ದೇಗುಲದ ಒಳಭಾಗದಲ್ಲಿ ನಾಲ್ಕು ರುದ್ರಕಾಂತ ಮಾದರಿ ದುಂಡಾಕರದ ಸ್ತಂಭಗಳಿವೆ. ಬಹುಶಃ ಮೊದಲಿಗೆ ಇಲ್ಲಿ ಜೈನ ಬಸದಿಯೊಂದು ಕೊಡಗಿನ ಕೊಂಗಾಳ್ವರ ಕಾಲದಲ್ಲಿದ್ದು, ಅದು ಪಾಳುಬಿದ್ದು ಶಿಥಿಲವಾಗಿ ನೆಲ ಕಚ್ಚಿದ ಮೇಲೆ ಕಾಲಾಂತರದಲ್ಲಿ ಶಿವಾರಾಧಕರು ಪುನರ್ ನಿರ್ಮಿಸುವಲ್ಲಿ ಶಿವಾಲಯವಾಗಿ ರೂಪಿಸಿರಬಹುದೆನಿಸುತ್ತದೆ; ಹಳೆ ಬಸ್ತಿಯಲ್ಲಿದ್ದ ಅವಶೇಷಗಳನ್ನು ಬಸವೇಶ್ವರ ಗುಡಿಯನ್ನು ನಿರ್ಮಿಸುವ ಸಂದರ್ಭದಲ್ಲಿ ತಂದಿಟ್ಟ ಸಂದರ್ಭವೂ ಆಗಿರಬಹುದು. ಈ ದೇಗುಲದ ಮುಂಭಾಗದಲ್ಲಿ ನಾಲ್ದಿಸೆ ತ್ರಿಶೂಲ ಸಂಕೇತದ ಚಾಚುಗಳನ್ನು ಹೊಂದಿದ ಸೂರ್ಯಮಂಡಲ ದಂಥ ನಾಲ್ಕು ವೃತ್ತಗಳೂ ಕಾಣಬರುತ್ತವೆ. ಇವು ಸೂರಸ್ತಗಣದ ಸಂಕೇತವಾಗಿರಲೂಬಹದು. ಈ ಅಂಶಗಳಿಂದ 'ಮಾಲವ್ವಿ' ರಾಜಧಾನಿ ಪರಿಸರವು ಜೈನಧರ್ಮದ ನೆಲೆಯಾಗಿದ್ದು, ಚೋಳರ ಕಾಲಕ್ಕೆ ಜೈನ ಮತ್ತು ಶೈವದ ಸಮನ್ವಯ ಕೇಂದ್ರವಾಯಿತೆಂದು ತೋರುತ್ತದೆ. ಕೊಂಗಾಳ್ವರೂ ಈ ಪ್ರಭಾವಕ್ಕೆ ಒಳಗಾದರೆಂದು ತೋರುತ್ತದೆ. ಇದಕ್ಕೆ ಪೋಷಕ ಪುರಾವೆ ಎಂಬಂತೆ ಶಾಸನವು ಹೊಸಹಳ್ಳಿ (ಸೋಮವಾರ ಪೇಟೆ ತಾಲ್ಲೂಕು)ಯ ಕ್ರಿ.ಶ. ೧೦೭೦ರ ಶಾಸನವು ಮೇಲ್ಸೂಚಿತ ಸುಳುಗೋಡು ಸೋಮವಾರದ ಶಾಸನೋಕ್ತ ರಾಜೇಂದ್ರ ಪೃಥ್ವಿ ಕೊಂಗಾಳ್ವನು 'ಹೊಷವಳ್ಳಿ ವೀರ ಸಿದ್ದೇಶ್ವರ ಮಹಾ ದೇವರ್ಗ್ಗೆ ಹತ್ತು ಖಣ್ಡುಗ ಭೂಮಿ (ಆಡವಲಂಗಿಯನ್ನು ಕ್ರಯಕ್ಕೆ ಕೊಂಡು, ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೧೯] ಇದೊಂದು ರೀತಿ ಯಕ್ಕೋಟಿ ಜಿನಾಲಯಗಳಂತೆ ಶೈವ ವಸ್ತುಗಳೊಡನೆ ಸಮನ್ವಯ ತೋರಿದ ಸಂಕೇತವಿಲ್ಲಿರುವಂತಿದೆ. ಹಾಗಿದ್ದರೆ, ಆಲೂರು, ಸುಳುಗೋಡು ಸೋಮವಾರದಲ್ಲಿ ಯಕ್ಕೋಟಿ ಜಿನಾಲಯುಗಳನ್ನು ರೂಪಸಿದವರಲ್ಲಿ ಕೊಂಗಾಳ್ವರು ಮೊದಲಿಗರೆನ್ನಬಹುದು ! ಆಲೂರಿನಲ್ಲಿ ಮುಕ್ಕೊಡೆ ಜಿನಶಿಲ್ಪಗಳ ಬಳಿಯೆ ವೇದಿಕಾ ಶಿವಲಿಂಗವೂ ತಲೆಮಾರುಗಳಾಚೆಯಿಂದಲೂ ಇರುವ ಬಗ್ಗೆ ಸ್ಥಳೀಯರು ಹೇಳುವಲ್ಲಿ 'ಯಕ್ಕೋಟಿ' ಸಂಕೇತಗಳು ಕಾಣುವಂತಿವೆ.

ಕ್ರಿ.ಶ. ೧೧೭೬ರ ಜಿನಬಿಂಬ ಪೀಠದ ಶಾಸನದಲ್ಲಿ[೨೦] ಮೂಲಸಂಘ ದೇಸಿಯಗಣ ಪುಸ್ತಕಗಚ್ಛ ಕೊಂಡಕುಂದಾ ನ್ವಯದ ತಾತಂಗಿಯ ಶ್ರೀ ಮಾಘಣಂದಿ ಭಟ್ಟಾರಕರು, ಪ್ರತಿಷ್ಠೆ ಮಾಡಿದ ಶಾಂತಿನಾಥ ದೇವರ ವಿಗ್ರಹವಾಗಿದೆ. ಅದು **ಅಂಜನಗೇರಿ ಬೆಟಗೇರಿ ಬಸದಿ**ಯಲ್ಲಿತ್ತು. ಈಗ ಮಡಿಕೇರಿ ಮ್ಯೂಸಿಯಂನಲ್ಲಿದೆ. ಹೀಗೆಯೇ ಅಲ್ಲಿಯ ಇನ್ನೊಂದು ಜಿನಬಿಂಬದ ಪೀಠದ ಶಾಸನವು[೨೧] ಶ್ರೀ ಮೂಲಸಂಘ ದೇಸಿಯಗಣ ಪೊಸ್ತಕ ಗಚ್ಛ ಕೊಂಡಕುಂದಾನ್ವಯದ ಹೊರಗಿನ ಹರಿಶ್ಚಂದ್ರ ದೇವರ ಶಿಷ್ಯರಾದ ತಾತಂಗಿಯ ಪಟ್ಟಣದ ನಖರರು ಶಾಂತಿನಾತನ ಇನ್ನೊಂದು ವಿಗ್ರಹವನ್ನು ಮಾಡಿಸಿಕೊಟ್ಟ ವಿಷಯ ಅಂಜನಗೇರಿ ಬೆಟ್ಟಗೇರಿಯ ಬಸದಿಯ ಸಂಬಂಧಕ್ಕೆ ಆಗಿದೆ. ೧೨ನೆಯ ಶತಮಾನದ ಇದೇ ಬಸದಿಯ (ಅನಂತನಾಥ ಜಿನ) ಇನ್ನೊಂದು ಜಿನ ವಿಗ್ರಹವನ್ನು ನಯಕೀರ್ತಿ ಸಿದ್ಧಾಂತ ಚಕ್ರವರ್ತಿಗಳ ಶಿಷ್ಯ ಅಶ್ವಾಧ್ಯಕ್ಷ ಹರಿಯಣ್ಣ ಹೆಗ್ಗಡೆ ಮಾಡಿಕೊಟ್ಟ ಬಗ್ಗೆ ಶಾಸನೋಕ್ತ ವಾಗಿದೆ.[೨೨] ಅಂಜನಗೇರಿ ಬೆಟ್ಟಗೇರಿ ಬಸದಿಯ ಶಿಲಾಸಾನವು[೨೩] ಕ್ರಿ.ಶ. ೧೫೪೪ರದಾಗಿದ್ದು, ಈ ಮೇಲ್ಸೂಚಿತ ಶಾಂತಿನಾಥ ಹಾಗೂ ಅನಂತನಾಥ ಜಿನರ ವಿಗ್ರಹಗಳನ್ನು ಸುವರ್ಣಾವತಿ ನದಿಗೆ ೧೨ನೆಯ ಶತಮಾನದ ನಂತರ ಯಾವುದೋ ಕಾಲದಲ್ಲಿ ಸುವರ್ಣಾವತಿ ನದಿಗೆ ಹಾಕಿದ್ದುದನ್ನು ತಂದು ಪುನರ್ ಪ್ರತಿಷ್ಠಾಪನೆಯನ್ನು ಕ್ರಿ.ಶ. ೧೫೪೪ರಲ್ಲಿ ಮಾಡಿದ ಬಗ್ಗೆ ಹೇಳಿದೆ.

**ಮುಳ್ಳೂರು ಜಿನ** ಬಸದಿಗಳಂತೆ ಅಂಜನಗೇರಿ ಜಿನಾಲಯವೂ ಪ್ರಸಿದ್ಧಿಯಾಗಿತ್ತು; ಪ್ರಮುಖ ಜೈನಕೇಂದ್ರ ವಾಗಿತ್ತು. ನಂಜರಾಯ ಪಟ್ಟಣಕ್ಕೆ ಸಲ್ಲುವ ಬೆಮ್ಮತ್ತಿ ಬೂತನಹಳ್ಳಿ, ಮಲಗನಕೆರೆಯ ಸಮಸ್ತ ಹಲರು, ಹನಸೋಗೆಯ ಆದಿ ಶ್ರೀ ಅವ್ವಗಳು ಉಭಯ ಜನರ ಗರ್ಭಗೃಹದ ಕಲುಗೆಲಸಕ್ಕೆ

ತಮ್ಮ ಗುರು ಚಾರುಕೀರ್ತಿ ಪಂಡಿತದೇವನಿಗೆ ಹೊಂನ್ನು ೩೦ ಗದ್ಯಾಣ ದಾನ ನೀಡಿದ ಸಂಗತಿ ಇದೆ. ಅಂಜನಗಿರಿ ಶಾಂತೇಶ್ವರ ಬಸದಿಗೆ ಬಿದಿರೆಯ ಸಿತಾಳ ಮಳಿಗೆಯ ಸಮಸ್ತ ಹಲರು, ಕಂನ್‌ಡಿಗ ಹಲರು, ನಾನಾದೇಸೀಯರು ಮಾಡಿದ ಧರ್ಮದಿಂದಾಗಿ ಈ ಜಿನದೇಗುಲ ಪ್ರಸಿದ್ಧಿ ಪಡೆದಿತ್ತು. ಶಾಂತಿನಾಥ ಬಸದಿಯ ನೆಲೆ ಎಂದು ಪ್ರಸಿದ್ಧಿಗೊಂಡಿತ್ತು.

ಅಂಜನಗೇರಿಯ ಕಾಫಿ ಪ್ಲಾಂಟರ್‌ರೊಬ್ಬರು ಮನೆ ಪಾಯ ತೆಗೆಯುವ ಸಂದರ್ಭದಲ್ಲಿ ಅನಂತನಾಥಸ್ವಾಮಿಯ ಪ್ರಾಚೀನ ವಿಗ್ರಹವೊಂದು ದೊರೆಯಿತು. ಅದನ್ನು ಜಿನಧರ್ಮಾನುಯಾಯಿ ಕುಬೇರಶೆಟ್ಟರು ಅಂಜನಗೇರಿಯಿಂದ ತಂದು ಸಾಲಿಗ್ರಾಮದಲ್ಲಿ ಭಿನ್ನವಾಗಿದ್ದ ವಿಗ್ರಹವನ್ನು ತಂದಿಟ್ಟಿದ್ದರಂತೆ. ಬೇರೆ ವಿಗ್ರಹವನ್ನು ಮಾಡಿಸಲೆತ್ನಿಸಿದಾಗ ಅದು ಆಗಿ ಬರದೆ ಕುಬೇರಶೆಟ್ಟರ ಮೊಮ್ಮಕ್ಕಳಾದ ಎಸ್.ಕೆ. ದೇವೇಂದ್ರನ್ ಅವರು ೧೯೭೭ರಲ್ಲಿ ಹಳೆ ವಿಗ್ರಹ ಪ್ರತಿಷ್ಠಾಪಿಸಿ ದರಂತೆ[೨೪] ಈ ವಿಗ್ರಹವು ಖಡ್ಗಾಸನ ಭಂಗಿಯಲ್ಲಿದ್ದು ಸುಂದರ ಗುಂಗುರು ಕೇಶಿಯಾಗಿದ್ದು, ಮುಕ್ಕೊಡೆಯ ಮೇಲು ಅಲಂಕರಣಗೊಂಡಿದೆ. ಪಾದಗಳ ಬಳಿ ಹದಿನಾಲ್ಕನೆಯ ತೀರ್ಥಂಕರಾದ ಈ ಅನಂತನಾಥರಿಗೆ ಪಾತಾಳಯಕ್ಷ, ಅನಂತಮತಿ/ಅಂಕುಶಾಯಕ್ಷಿಯರಿದ್ದಾರೆ.

**ಕಲಕಂದೂರು ಜೈನಬಸದಿ** ಸೋಮವಾರಪೇಟೆ ತಾಲ್ಲೂಕು ಹಾನುಗಲ್ಲು ಅಂಚೆಗೆ ಸೇರಿದುದಾಗಿದೆ. ಈ ಬಸದಿ ಕ್ರಿ.ಶ. ೧೩೮೦ರಲ್ಲಿ ನಿರ್ಮಿತವೆನ್ನಲಾಗಿದೆ. ೧೯೭೫ರಲ್ಲಿ ಜೀರ್ಣೋದ್ಧಾರಗೊಂಡ ಈ ಬಸದಿ ದಿಗಂಬರ ಸಂಪ್ರದಾಯದ್ದು ಎಂದು ಅರ್ಚಕ ಶ್ರೀ ಸುರೇಂದ್ರಕುಮಾರ್ ತಿಳಿಸಿದ್ದಾರೆ. ಇಲ್ಲಿ ಪದ್ಮಾಸೀನ ಪಾರ್ಶ್ವನಾಥಸ್ವಾಮಿಯ ಜಿನಶಿಲ್ಪವಿದೆ. ಏಳ ಹೆಡೆಯ ನಾಗಾತ ಪತ್ರವಿದೆ. ಬಸದಿಯ ಬಲಹಿಂಬದಿ ಮೂಲೆಯಲ್ಲಿ ಕ್ಷೇತ್ರಪಾಲನ ದ್ವಿಭಂಗಿ ಸ್ಥಾನಕ ವಿಗ್ರಹವಿದೆ. ಬಸದಿಯ ಬಲಬದಿಯ ವಿಶಾಲ ಬ್ರಹ್ಮದೇವರ ಜೋಡಿ ಜಮೀನಿನ ಬ್ರಹ್ಮದೇವರ ಕಾಡಿನಲ್ಲಿ ಬ್ರಹ್ಮದೇವರ ಸಣ್ಣಗುಡಿ ವೇದಿಕೆಯ ಮೇಲಿದೆ ಅಶ್ವಾರೋಹಿ ಬ್ರಹ್ಮದೇವರ ಲೋಹ ವಿಗ್ರಹವು, ಕಳಶ ಪ್ರಭಾವಳಿ ಸಹಿತವಾಗಿ ಸಿಂಹಗಳ ಉಬ್ಬು ಮುಖ ಶಿಲ್ಪಗಳ ಪೀಠದ ಮೇಲಿದೆ.

ವಾರ್ಷಿಕ ಹಬ್ಬವಾಗಿ ಶಿವರಾತ್ರಿ, ಸಂಕ್ರಾಂತಿ, ಕಾರ್ತೀಕದಲ್ಲಿ ಪಾರ್ಶ್ವನಾಥನ ಪೂಜೆಗೆ ಎಲ್ಲ ಜನಾಂಗದ ಜನರೂ ಬರುತ್ತಾರೆ. ದಿನವೂ ಪಾರ್ಶ್ವನಾಥ, ಕ್ಷೇತ್ರಪಾಲ, ಬ್ರಹ್ಮದೇವರಿಗೆ ದೈನಂದಿನ ಪೂಜೆ ನೆರವೇರುತ್ತದೆ.

ಈ ಜೈನಬಸದಿಯಲ್ಲಿ ಪಾರ್ಶ್ವನಾಥ ತೀರ್ಥಂಕರರ ೧೦೦೮ನೇ ವಿಶೇಷ ಪೂಜೆಯು ೧೨.೬.೨೦೦೧ರಲ್ಲಿ ನಡೆಯಿತು.[೨೫]

ನೆರೆಯ **ಯಡೂರು** ಗ್ರಾಮದಲ್ಲಿಯೂ ಜಿನ ಬಸದಿಯಿತ್ತು. ಅದು ಬಹುಶಃ ಶ್ವೇತಾಂಬರ ಸಂಪ್ರದಾಯದ್ದು. ಅಲ್ಲಿದ್ದ ಜೈನ ಪ್ರಭಾವದ ಸಂಕೇತವಾಗಿ ಸುಗ್ಗಿಕಟ್ಟೆ ಹಬ್ಬದ ಸಮಯದಲ್ಲಿ ಸಬತಾಯಿಗೆ ಎಡೆಕೊಡುವಲ್ಲಿ, ಎಡೆ, ದೀಪ ಹೊತ್ತು ತರುವಲ್ಲಿ ಬಾಯಿಗೆ ಬಟ್ಟೆ ಕಟ್ಟಿಕೊಂಡು ವಡೆಕಾರರು ಬರುತ್ತಾರೆ. ಇಂದು ಅವರೆಲ್ಲ ಗೌಡ ಜನಾಂಗದವರಾಗಿದ್ದಾರೆ.

ಈ ಯಡೂರಿನಲ್ಲಿದ್ದ ಆದಿನಾಥ ಮತ್ತು ಪಾರ್ಶ್ವನಾಥ ವಿಗ್ರಹಗಳನ್ನು ಅಲ್ಲಿ ಜೈನ ಪ್ರಭಾವ ಕಡಿಮೆಯಾದ ಕಾಲದಲ್ಲಿ ಕಲಕೆಂದೂರಿಗೆ ಸಾಗಿಸಲಾಗಿದೆ. ಆ ಪ್ರಾಚೀನ ವಿಗ್ರಹಗಳು ಹಾಗೆಯೇ ಉಳಿದುಕೊಂಡು ಪುನರ್ ಪ್ರತಿಷ್ಠೆಯಾಗಿಲ್ಲ. ಕಲಕಂದೂರಿನ ತೀರ್ಥಂಕರ ಚೈತ್ಯಾಲಯ ಈ ಎಲ್ಲ ಜಿನ ವಿಗ್ರಹಗಳನ್ನು ತನ್ನ ಮಡಿಲಲ್ಲಿಟ್ಟುಕೊಂಡಿದೆ. ಇಲ್ಲಿಯ ಈ ಜೈನ ಬಸದಿಯ ಬ್ರಹ್ಮದೇವರ ಪೀಠದ ಮೇಲೆ ಕ್ರಿ.ಶ. ೧೩೯೦ರ ಶಾಸನವಿದ್ದು,[೨೬] ಬಹುಶಃ ಮಾಣಿಕದೇವರು ಈ ಬ್ರಹ್ಮದೇವರ ವಿಗ್ರಹವನ್ನು ಪ್ರತಿಷ್ಠಾಪಿಸಿದ ವಿಷಯವನ್ನು ಹೇಳುವಂತಿದೆ. ದಾನಿಗಳು (ಚಂಡಂಣ) ಶಾಸನೋಕ್ತವಾಗಿ ೧೯ನೇ ಶತಮಾನದಲ್ಲಿ ಜಾಗಟೆಯನ್ನು ಅರ್ಪಿಸಿದ ವಿಷಯವಿದೆ.

ಕೊಡಗಿನ **ಅರಮೇರಿ ಗ್ರಾಮ**ದ ಭಗವತಿ ದೇಗುಲದಲ್ಲಿ ಚತುರ್ವಿಂಶತಿ ತೀರ್ಥಂಕರರ ಕಿರುಶಿಲಾಫಲಕ ಲಭ್ಯವಾಗಿದೆ. ಇಲ್ಲಿ ಮಹಾವೀರ ಆಸೀನನಾಗಿದ್ದು ಮುಕ್ಕೊಡೆಯ ಮೇಲೆ ಶಿಲ್ಪವಿರಾಜಿತನಾಗಿದ್ದಾನೆ. ಪಾರ್ಶ್ವ ಸುಪಾರ್ಶ್ವರು ಖಡ್ಗಾಸನ ಭಂಗಿಯಲ್ಲಿದ್ದು ನಾಗಾತ ಪತ್ರ ಹೊಂದಿದ್ದಾರೆ. ಇಬ್ಬದಿಯಲ್ಲಿ ಧರಣೇಂದ್ರ ಯಕ್ಷ ಹಾಗೂ ಪದ್ಮಾವತಿ ಯಕ್ಷಿಯು ಇದ್ದು ಎಂದಿನ ಲಕ್ಷಣಸಹಿತವಾಗಿದ್ದಾರೆ. ಮೇಲೆ ೨೧ ತೀರ್ಥಂಕರರು ಪದ್ಮಾಸೀನರಾಗಿದ್ದಾರೆ. ಇದೊಂದು ದಿಗಂಬರ ಸಂಪ್ರದಾಯದ ಶಿಲ್ಪ. ಈ ಭಗವತಿ ದೇಗುದಲ ಬಾಗಿಲುವಾಡದ ಬಲ ಮೇಲ್ಬದಿಯಲ್ಲಿ ಪದ್ಮಾಸೀನ ದಿಗಂಬರ ಧ್ಯಾನಿ ಮುನಿ ಶಿಲ್ಪವಿದೆ. ಶಿಲಾಭಿತ್ತಿಯಲ್ಲಿ ಯಕ್ಷಿಯ ಶಿಲ್ಪವಿದೆ. ಅರಮೇರಿ ಎಂಬ ಸ್ಥಳನಾಮದಲ್ಲಿಯೇ ಅರನಾಥ ತೀರ್ಥಂಕರ ನಾಮಸೂಚಕವಿದೆ. ಬಹುಶಃ ಈ ಭಗವತಿ ದೇಗುಲವು ಮೊದಲಿಗೆ ಅರನಾಥ ತೀರ್ಥಂಕರ ಬಸದಿ ಯಾಗಿದ್ದು, ಹರಕೆಯ ಶಿಲ್ಪವಾಗಿ ಚತುರ್ವಿಂಶತಿ ತೀರ್ಥಂಕರ ಶಿಲ್ಪ ಫಲಕವನ್ನು ಹೊಂದಿದ್ದು, ಅದು ಭಗವತಿ ದೇಗುಲದಲ್ಲಿ ಲಭ್ಯವಾದದ್ದು ವಿಶೇಷ. ಕೊಡಗಿನ ನಂಜರಾಯಪಟ್ಟಣದಲ್ಲಿ ಕೊಂಗಾಳ್ವರ ಕಾಲಕ್ಕೆ ಮಹಾವೀರ ಬಸದಿಯೊಂದಿತ್ತು. ಆ ಜಿನಶಿಲ್ಪದ ಶಿರ ಭಿನ್ನವಾಗಿ ಇಂದು ಹಳ್ಳದಲ್ಲಿ ಮುಚ್ಚಿಹೋಗಿದೆ. ಕೊಂಗಾಳ್ವರ ಕಾಲದಲ್ಲಿಯೇ ಅರಮೇರಿಯಲ್ಲಿ ಬಸದಿ ನಿರ್ಮಿತಗೊಂಡಿದ್ದಂತೆ ತೋರುತ್ತದೆ.

ಇನ್ನು ಮುಳ್ಳೂರು ಬಸದಿಗಳು ಸೋಮವಾರಪೇಟೆ ತಾಲ್ಲೂಕಿನ ವಿಶಿಷ್ಟ ಬಸದಿಗಳೆನಿಸಿ ಎಎಸ್‌ಐ ರಕ್ಷಣೆಯಲ್ಲಿವೆ. ಪಾರ್ಶ್ವನಾಥ, ಶಾಂತಿನಾಥ ಹಾಗೂ ಚಂದ್ರನಾಥ ಬಸದಿಗಳಲ್ಲಿವೆ. ೧೧ನೆಯ ಶತಮಾನದ ಕೊಂಗಾಳ್ವರ ಕಾಲದ ಹತ್ತು ಜಿನಸಂಬಂಧಿ ಶಾಸನಗಳಲ್ಲಿವೆ. ಪ್ರಸಿದ್ಧ ಜೈನಯತಿ ವಿದ್ವಾಂಸ ಗುಣಸೇನಪಂಡಿತನ ನೆಲೆಯೂ ಆಗಿದ್ದ ಕೊಂಗಾಳ್ವ ರಾಜ ರಾಣಿಯರಿಂದ ದಾನಾದಿಗಳನ್ನು ಪಡೆದ ಜಿನಮುನಿಯಾಗಿದ್ದು, ಜಿನಪ್ರತಿಷ್ಠೆಗಳಿಗೂ ಕಾರಣನಾಗಿದ್ದ. ಹೊಯ್ಸಳ, ವಿಜಯನಗರ ಕಾಲದಲ್ಲಿಯೂ ಈ ಬಸದಿಗಳ ಸ್ಥಾನಾಚಾರ್ಯರಿಗೆ ದಾನಾದಿಗಳು ಒದಗಿದುವು.[೨೭]

ಇಲ್ಲಿನ ಪಾರ್ಶ್ವನಾಥ ಬಸದಿಯಲ್ಲಿ ವಿಶಿಷ್ಟವಾದ ನಾಲ್ಮೊಗದ ಘನಾಕಾರದ ತಲಾ ೫ ಸಾಲುಗಳ ಚತುರ್ವಿಂಶತಿ ತೀರ್ಥಂಕರರ ಶಿಲ್ಪವಿದ್ದು ಮೇಲೆ ಕಳಶವನ್ನು ಹೊಂದಿರುವ ಹೊಸದಾಗಿ ಕಂಡುಬಂದ ಅಪೂರ್ವ ಶಿಲ್ಪವಾಗಿದೆ.[೨೮] ಪದ್ಮಾಸೀನ ೨೧ ತೀರ್ಥಂಕರರ ಶಿಲ್ಪಗಳು ಸಾಮಾನ್ಯವಗಿ ಮೇಲ್ಭಾಗದಲ್ಲಿದ್ದು, ಕೆಳ ಕೊನೆ ಹಂತದಲ್ಲಿ ಮೂರು ತೀರ್ಥಂಕರರಾದ ಪಾರ್ಶ್ವ ಮಹಾವೀರ ಸುಪಾರ್ಶ್ವನಾಥರು ಇರುತ್ತಾರೆ ; ಹಾಗೂ ಧರಣೇಂದ್ರ ಯಕ್ಷ ಪದ್ಮಾವತಿ ಯಕ್ಷಿಯರೊಡನೆ ಕೂಡಿ ಒಟ್ಟು ೨೪ ತೀರ್ಥಂಕರರ ಶಿಲ್ಪಗಳು ಫಲಕದ ಮೇಲೆ ಉಬ್ಬು ಶಿಲ್ಪವಾಗಿ ಕೆತ್ತಲಾಗಿರುತ್ತದೆ. ಆದರೆ ಸದ್ಯದ ಘನಾಕೃತಿಯು ನಾಲ್ಕೂ ಮುಖಗಳಲ್ಲಿ (೨೫+೩=೨೮) ಒಟ್ಟು ೨೮ ಸಂಖ್ಯೆಯಲ್ಲಿ ತೀರ್ಥಂಕರರ ಶಿಲ್ಪವನ್ನು ಬಿಡಿಸಲಾಗಿದೆ. ೨೪ ತೀರ್ಥಂಕರರ ಹೆಸರು ಮಾತ್ರ ತಿಳಿದುಬರುವಲ್ಲಿ ಇಲ್ಲಿ ಕಾಣಬರುವ ಸಂಖ್ಯಾವ್ಯತ್ಯಾಸಕ್ಕೆ ತಾರ್ಕಣೆಯನ್ನು ಹೀಗೆ ನೀಡಬಹುದು. ಬಹುಶಃ ೫ ಸಾಲುಗಳಲ್ಲಿ ೨೦ನೇ ತೀರ್ಥಂಕರರನ್ನು ತಲಾ ನಾಲ್ಕರಂತೆ ಕೆತ್ತಿ 'ಸರ್ವತೋಭದ್ರ' ಶಿಲ್ಪ ಪದ್ಧತಿಯಂತೆ ಪ್ರತಿ ಸಾಲಿನಲ್ಲಿ ಒಬ್ಬನೇ ಜಿನನನ್ನು ಪುನರಾವರ್ತಿಸಿ ೨೧ನೇ ತೀರ್ಥಂಕರರೆಂದು ಕೆತ್ತಿರಬೇಕು. ಕೊನೆಯ ಹಂತವಾದ ೬ನೇ ಸಾಲಿನಲ್ಲಿ ೩ ಶಿಲ್ಪಗಳನ್ನು (ಪಾರ್ಶ್ವ–ಮಹಾವೀರ–ಸುಪಾರ್ಶ್ವನಾಥ) ಕೆತ್ತಿ ಚತುರ್ವಿಂಶತಿ ಸಂಖ್ಯೆ ಸರಿಹೊಂದಿಸಲಾಗಿದೆ. ಬಹುಶಃ ಈ ಶಿಲ್ಪ ಕರ್ನಾಟಕದಲ್ಲಿಯೇ ಅಪೂರ್ವ ಶಿಲ್ಪವಾಗಿ ಕಾಣಬರುವಂತಿದೆ.

ಇತ್ತೀಚೆಗೆ ಸೋಮವಾರಪೇಟೆ ತಾಲ್ಲೂಕು ಕಲ್ಲಪ್ಪನಹಳ್ಳಿ ಹಾಗೂ ಚಿಕ್ಕತೋಳೂರು ಗ್ರಾಮದಲ್ಲಿ ಸುಂದರವಾದ ಜಿನಬಸದಿಗಳು ಪತ್ತೆ ಆಗಿವೆ. ಶನಿವಾರ ಸಂತೆ ಬಳಿಯ ಹೊಸೂರು ಗ್ರಾಮದ ಬೆಟ್ಟದ ಬಸವೇಶ್ವರ ಗುಡಿ ಬಳಿ ಪಾಳು ಬಿದ್ದ ಜೈನ ಬಸದಿಯೊಂದು ಪತ್ತೆ ಆಗಿದೆ.[೨೯]

ಕೊಡಗಿನಲ್ಲಿ ಜಿನಸಮಯದ ಪ್ರಭಾವ ಗಂಗರಿಂದ ಹಿಡಿದು, ಕೊಂಗಾಳ್ವರಲ್ಲಿ ಪುಟಗೊಂಡು ವಿಜಯನಗರ ಕಾಲದವರೆಗೂ ಹರಿದುಬಂದಿದೆ. ಹಾಲೇರಿ ಅರಸರೂ ಬಸದಿಗಳಿಗೆ ದಾನಾದಿಗಳನ್ನು ಕೊಟ್ಟ ಬಗ್ಗೆ ನಿರೂಪಗಳೂ ಇವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. i. ಷ. ಷೆಟ್ಟರ್., ೨೦೦೮, **ಶಂಗಂ ತಮಿಳಗಂ ಮತ್ತು ಕನ್ನಡನಾಡು–ನುಡಿ,** ಬೆಂಗಳೂರು, ಪುಟ ೧೩೮.

ii. ಡಾ. ಎಂ.ಜಿ. ನಾಗರಾಜ್., ೨೦೧೧, **ಸಂಶೋಧನ ತೆನೆಗಳು,** ಶ್ರೀ ಸಿದ್ದಲಿಂಗೇಶ್ವರ ಬುಕ್ ಡಿಪೋ, ಗುಲ್ಬರ್ಗ, ಪುಟ ೩೬೨–೬೩.

೨. ಎ.ಕ.ಸಂ. ೧(ಹೊ)., ೧೯೭೨, ಕೊಡಗು ಜಿಲ್ಲೆ, (ಮಡಿಕೇರಿ, ೪೬೬ AD!) ಇದನ್ನು ಕೂಟ ಶಾಸನವೆಂದಿದ್ದರೂ, ಅದರಲ್ಲಿಯ ಸ್ಥಳನಿರ್ದೇಶನ, ಜಿನಾಲಯವಿದ್ದ ಸಂಗತಿ ಸುಳ್ಳು ಎನಿಸುವುದಿಲ್ಲ. ೯ನೇ ಶತಮಾನದಲ್ಲಿ ಕ್ರಿ.ಶ. ೪೬೬ರ ಈ ಶಾಸನವನ್ನು ನಕಲು ಮಾಡಿದ್ದೆನ್ನಲಾಗಿದೆ. ಹಾಗೆ ನಕಲು ಮಾಡಿದವನ ಅವಜ್ಞೆಯಿಂದಾಗಿ ಕೆಲವು ತಪ್ಪುಗಳು ನುಸುಳಿರಬಹುದು.

೩. ನೋಡಿ, **ಕರ್ನಾಟಕ ದಿಗಂಬರ ಜಿನಮಂದಿರಗಳು,** ೧೯೯೪, (ಸಂ) ಎಸ್.ಬಿ. ವಸಂತರಾಜಯ್ಯ, ಬೆಂಗಳೂರು.

೪. Kuppuram., *Imperial Cholas in Karnataka,* pp. 11-12.

೫. ಎ.ಕ.ಸಂ. ೮ (ಹೊಸತು)., ೧೯೮೪, ಹಾಸನ ಜಿಲ್ಲೆ, ಅರಕಲಗೂಡು ೧೩೩, (ಸುಳುಗೋಡು ಸೋಮವಾರ, ಕ್ರಿ.ಶ. ೧೦೭೯–೮೦).

೬. K. Mammes., 1942, *Kerala Culture,* p. 154.

೭. ಎ.ಕ.ಸಂ. ೧ (ಹೊ)., ಕೊಡಗು ಜಿಲ್ಲೆ ೧, ಅದೇ.

೮. i. B. Sheik Ali., 1976, *History of Western Gangas,* University of Mysore, p. 88;

ii. EC. IV. irg. 85, p. 135;

iii. Rice., *Mysore-Coorg Inscriptions*, p. 39.

೯. ಎ.ಕ.ಸಂ. ೧ (ಹೊ)., ಅದೇ, ಕೊಡಗು ೯೮ (ಪೆಗ್ಗೂರು ; ಕ್ರಿ.ಶ. ೯೭೮).

೧೦. ಎಂ.ಜಿ. ನಾಗರಾಜ್, ಎಚ್.ಎಂ. ಸಿದ್ದನಗೌಡ., 'ಬೆಂಗಳೂರು ಮತ್ತು ಕೊಡಗು ಜಿಲ್ಲೆಗಳ ಕೆಲವು ಅಪ್ರಕಟಿತ ಶಾಸನಗಳು', **ಇತಿಹಾಸ ದರ್ಶನ,** (ಸಂ) ಎಂ.ಜಿ. ನಾಗರಾಜ್, ಪಿ.ವಿ. ಕೃಷ್ಣಮೂರ್ತಿ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ಸಂ. ೧೪/೧೯೯೯, ಪುಟ ೩೮-೩೯.

೧೧. ಎ.ಕ.ಸಂ. ೧(ಹೊ)., ಅದೇ, ಕೊಡಗು ೯೬ (ಬಿಳಿಯೂರು; ಕ್ರಿ.ಶ. ೮೮೮).

೧೨. ಎಂ.ಜಿ. ನಾಗರಾಜ್., 'ಕೊಡಗಿನ ಪನ್ಯ (ಜಮೀನು)ಗಳು', **ಇತಿಹಾಸ ದರ್ಶನ,** (ಸಂ) ಡಾ. ಸೂರ್ಯನಾಥ ಕಾಮತ್, ದೇವರಕೊಂಡಾರೆಡ್ಡಿ, ಕ.ಇ.ಅ. ಸಂ. ೯/೧೯೯೪, ಪುಟ ೨೨೩.

೧೩. ಎ.ಕ.ಸಂ. ೧ (ಹೊ)., ಅದೇ, ಕೊಡಗು ೯೮ (ಪೆಗ್ಗೂರು) ಕ್ರಿ.ಶ. ೯೭೮).

೧೪. i. ಎಂ.ಜಿ. ನಾಗರಾಜ್., 'ಕೊಡಿಗನ ಶಾಸನ ಸಂಪತ್ತು., **ಕನಕಸಿರಿ,** (೧೯೯೯), ಅಖಿಲ ಭಾರತ ೬೭ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಪುಟ, (ಸಂ) ಡಾ. ಎಚ್.ಎಸ್. ಗೋಪಾಲರಾವ್, ಪ್ರೊ. ಜಿ. ಅಬ್ದುಲ್ ಬಷೀರ್, ಕನ್ನಡ ಸಾಹಿತ್ಯ ಪರಿಷತ್ತು, ಪುಟ ೫೩೩.

ii. ಎಂ.ಜಿ. ನಾಗರಾಜ್., ೧೯೯೦, **ಶಾಸನ ಶಿಲ್ಪಗಳು,** ಶ್ರೀ ಗೌರೀ ಗಂಗಾ ಪ್ರಕಾಶನ, ಪುಟ ೧೭.

೧೫. ಎ.ಕ.ಸಂ. ೧(ಹೊ)., ಅದೇ, ಕೊಡಗು ೬೫ (ಸೋಮವಾರಪೇಟೆ ತಾಲ್ಲೂಕು, ಮಾಲಂಬಿ, ಕ್ರಿ.ಶ. ಸುಮಾರು ೧೦೦೪!)

೧೬. ಎಂ.ಜಿ. ನಾಗರಾಜ್., 'ಕೊಡಗಿನ ಕೊಂಗಾಳ್ವ ರಾಜಧಾನಿ ಮಾಲಂಬಿ ಮತ್ತು ಮಾದ್ರೆಯ ಹೊಸ ವೀರಶಾಸನಗಳು, **ಇತಿಹಾಸ ದರ್ಶನ,** (ಸಂ) ಡಾ. ಎಂ.ಜಿ. ನಾಗರಾಜ್, ಡಾ. ಪಿ.ವಿ. ಕೃಷ್ಣಮೂರ್ತಿ, ಕರ್ನಾಟಕ ಇತಿಹಾಸ ಅಕಾಡೆಮಿ, ಸಂ. ೨೬/೨೦೧೧, ಪುಟ ೧೬೮-೬೯.

೧೭. ಎ.ಕ.ಸಂ. ೮ (ಹೊ)., ೧೯೮೪, ಹಾಸನ ಜಿಲ್ಲೆ, ಅರಕಲಗೂಡು ೧೩೩, (ಸುಳುಗೋಡು ಸೋಮವಾರ; ಕ್ರಿ.ಶ. ೧೦೭೯-೮೦).

೧೮. ಎ.ಕ.ಸಂ. ೮ (ಹೊ)., ಅದೇ, ಅ.ಗೂ. ೧೩೬ (ಸುಳುಗೋಡು ಸೋಮವಾರ; ಕ್ರಿ.ಶ. ೧೯೯೫).

೧೯. ಎ.ಕ. ಸಂ. ೧ (ಹೊ), ಅದೇ, ಕೊಡಗು ೪೯ (ಹೊಸಹಳ್ಳಿ) ಕ್ರಿ.ಶ. ೧೦೭೦).

೨೦. ಅದೇ., ಕೊಡಗು ೪ (ಮಡಿಕೇರಿ; ಕ್ರಿ.ಶ. ೧೧೭೬-ಅಂಜನಗೇರಿ ಬೆಟಗೇರಿ ಜೈನ ಬಸದಿಯ ಶಾಸನೋಕ್ತ ವಿಗ್ರಹಗಳು ಮಡಿಕೇರಿ ಮ್ಯೂಸಿಯಂನಲ್ಲಿವೆ).

೨೧. ಅದೇ, ಕೊಡಗು ೬ (ಮಡಿಕೇರಿ; ೧೨ನೆಯ ಶತಮಾನ, ಅಂಜನಗೇರಿ-ಬೆಟ್ಟಗೇರಿ ಬಸದಿಯಲ್ಲಿದ್ದ ವಿಗ್ರಹ).

೨೨. ಅದೇ, ಕೊಡಗು ೭ (ಮಡಿಕೇರಿ; ೧೨ನೆಯ ಶತಮಾನ).

೨೩. ಅದೇ, ಕೊಡಗು ೧೯ (ಅಂಜನಗೇರಿ, ಬೆಟಗೇರಿ; ಕ್ರಿ.ಶ. ೧೫೪೪).

೨೪. ಸಾಲಿಗ್ರಾಮದ ಶ್ರೀ ಕುಬೇರ ಶೆಟ್ಟರ ಮೊಮ್ಮಗ ಬೆಂಗಳೂರು ನಿವಾಸಿ ಶ್ರೀ ಎಸ್.ಕೆ. ದೇವೇಂದ್ರನ್ ಅವರು ೧೨.೧.೨೧೦೧೨ರಲ್ಲಿ ಈ ಮಾಹಿತಿಯನ್ನು ನೀಡಿದ್ದಾರೆ.

೨೫. 'ಶಕ್ತಿ' ದಿನಪತ್ರಿಕೆ, ಮಡಿಕೇರಿ, ೧೩.೬.೨೦೧೧.

೨೬. ಎ.ಕ. ಸಂ. ೧ (ಹೊ), ಅದೇ, ಕೊಡಗು ೫೮ (ಕಲಕಂದೂರು ; ಕ್ರಿ.ಶ. ೯.೫.೧೩೮೦).

೨೭. ಅದೇ, ಕೊಡಗು (೬೮-೭೪, ೭೮-೭೯; ೧೧ನೇ ಶತಮಾನ); ಕೊಡಗು (೫, ೭೬, ೭೭ : ೧೨ನೇ ಶತಮಾನ).

೨೮. ಈ ಶಿಲ್ಪವನ್ನು ೨೦೧೧ರಲ್ಲಿ ನೋಡಲು ಅವಕಾಶ ಮಾಡಿದ ಎ.ಎಸ್.ಐ. (ದಕ್ಷಿಣ ವಲಯ)ನ ನಿರ್ದೇಶಕರಾಗಿದ್ದ ಡಾ. ಎಸ್.ವಿ. ವೆಂಕಟೇಶಯ್ಯ ಅವರಿಗೆ ಹಾಗೂ ನೆರವಾದ ಶನಿವಾರ ಸಂತೆ ಕಾಲೇಜು ಪ್ರಾಚಾರ್ಯ ಶ್ರೀ ಸಿ.ಎಂ. ಪುಟ್ಟಸ್ವಾಮಿ ಅವರಿಗೆ ಕೃತಜ್ಞತೆಗಳು.

೨೯. ಎಂ.ಜಿ. ಚಂದ್ರಕಾಂತ್, ಎಂ.ಜಿ. ನಾಗರಾಜ್, 'ಕೊಡಗಿನ ಕೊಂಗಾಳ್ವರು ಮತ್ತು ಜೈನಧರ್ಮ' **ಇತಿಹಾಸ ದರ್ಶನ,** ಸಂ. ೧೮/೨೦೦೩, ಪುಟ ೧೭-೭೮; **ಕನ್ನಡ ಪ್ರಭ** ದಿನಪತ್ರಿಕೆ, ಮಡಿಕೇರಿ, ಪುಟ ೨೦.೩.೨೦೦೩.



# ನಗರ್ಲೆಯ ಶಾಸನಗಳು ಮತ್ತು ದೇಗುಲಗಳು ಒಂದು ಅಧ್ಯಯನ

ಡಾ. ಹೆಚ್. ಚಂದ್ರಶೇಖರ*

**ಪೀಠಿಕೆ**

ನಗರ್ಲೆಯು, ನಂಜನಗೂಡು (ಮೈಸೂರು ಜಿಲ್ಲೆ) ತಾಲ್ಲೂಕಿನಲ್ಲಿರುವ ಒಂದು ಹಳ್ಳಿ. ಇದು ನಂಜನಗೂಡು–ತಿ. ನರಸೀಪುರ ರಸ್ತೆಯ ಬಳಿ ೧೦ ಕಿ.ಮೀ. ದೂರದಲ್ಲಿದೆ. ಈ ಹಳ್ಳಿಯ ಜನಸಂಖ್ಯೆ ಸುಮಾರು ೩೫೦೦ ಎಂದು ಅಂದಾಜಿಸಲಾಗಿದೆ. ಈ ಹಳ್ಳಿ ಕ್ರಿ.ಶ. ೧೦ನೆಯ ಶತಮಾನದಲ್ಲಿ ಒಂದು ಸುಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತೆಂದು ಶಾಸನಗಳಿಂದ ವ್ಯಕ್ತವಾಗುತ್ತದೆ. ಬಹುಶಃ ಆಗ ಈ ಹಳ್ಳಿ ಒಂದು ದೊಡ್ಡ ಹಳ್ಳಿಯಾಗಿರಬಹುದು. ಹಯವದನರಾಯರ ಗೆಜೆಟಿಯರ್[1] ಮತ್ತು ಸೂರ್ಯನಾಥಕಾಮತರು[2] ಸಂಪಾದಿಸಿರುವ ಮೈಸೂರು ಜಿಲ್ಲೆಯ ಗೆಜೆಟಿಯರ್‌ನಲ್ಲಿ ಕೊಂಚ ವಿವರಣೆಗಳಿವೆ. ಈ ಹಳ್ಳಿಗೆ ಸಂಬಂಧಿಸಿದ ನಾಲ್ಕು ಶಾಸನಗಳು ಎಪಿಗ್ರಾಫಿಯ ಕರ್ನಾಟಿಕ (ಇ.ಸಿ.) (ಸಂ. ೩)[3] ದಲ್ಲಿ ಪ್ರಕಟವಾಗಿವೆ. ಈ ಅಧ್ಯಯನ ಮತ್ತು ಸಂಶೋಧನೆಗಾಗಿ ಈ ಆಕರಗಳನ್ನು ಬಳಸಿಕೊಂಡು ಮೂರು ಸಲ ಕ್ಷೇತ್ರಕಾರ್ಯಗಳನ್ನು ಕೈಗೊಂಡಿದ್ದೇನೆ. ೨೦೦೭ರ ಸೆಪ್ಟೆಂಬರ್ ೧೦ರಂದು ಪ್ರಾಥಮಿಕ ಅಧ್ಯಯನವನ್ನು ಇತಿಹಾಸ ಅಕಾಡೆಮಿಯ ಕೆಲ ಸದಸ್ಯರೊಂದಿಗೆ ಅಧ್ಯಯನ ಮಾಡಿದ್ದೇನೆ. ನಂತರ ೨೫–೩–೨೦೧೧ ಹಾಗೂ ೪–೪–೨೦೧೨ರಂದು ಸ್ವತಂತ್ರವಾಗಿ ಕ್ಷೇತ್ರಕಾರ್ಯ ಮಾಡಿದ್ದೇನೆ. ಮೂರು ಸಲವೂ ಹಲವಾರು ಚಿತ್ರಗಳನ್ನು ತೆಗೆದಿದ್ದೇನೆ. ಅವುಗಳಲ್ಲಿ ಆಯ್ದ ಸೂಕ್ತವಾದ ಫೋಟೋಗಳನ್ನು ಈ ಲೇಖನದಲ್ಲಿ ಅಳವಡಿಸಿದ್ದೇನೆ.

**ಶಾಸನಗಳ ಅಧ್ಯಯನ ಮತ್ತು ಫಲಿತಾಂಶ**

ಆಗಲೇ ಹೇಳಿದಂತೆ ಈ ಊರಿನಲ್ಲಿರುವ ಮಾಳಿಗೇಶ್ವರಿ ಗುಡಿ, ಸೋಮೇಶ್ವರಗುಡಿ (ಇದನ್ನು ಈಗ ನಾಶ ಮಾಡಲಾಗಿದೆ) ಮತ್ತು ಇತ್ತೀಚೆಗೆ ಕಿತ್ತು ಹೊರಗೆಡೆ ಹಾಕಲಾಗಿರುವ ದೀಪಸ್ತಂಭದ ಅಡಿಯಲ್ಲಿ ಸಿಕ್ಕಿರುವ ಒಟ್ಟು ನಾಲ್ಕು ಶಾಸನಗಳು ಮೇಲ್ಕಾಣಿಸಿದ ಇ.ಸಿ. ಸಂಪುಟದಲ್ಲಿ ಪ್ರಕಟವಾಗಿವೆ. ಅವುಗಳ ಸಾರಾಂಶವನ್ನು ಕೆಳಗಿನಂತೆ ಚರ್ಚಿಸಲಾಗಿದೆ.

**ಶಾಸನ ಸಂಖ್ಯೆ ೨೪೯ :** ಈಗ ನೆಲಸಮವಾಗಿರುವ ಸೋಮೇಶ್ವರ ದೇವಸ್ಥಾನದ (ನನ್ನಯನ ದೇಗುಲ) ಬಾಗಿಲಿನ ದಕ್ಷಿಣ ಪಾರ್ಶ್ವದಲ್ಲಿತ್ತು ಈ ಶಾಸನ . ಈ ಶಾಸನದ ಪ್ರಕಾರ ವಿದ್ಯಾಧರನು ಗಂಗರಸ ಪೆರ್ಮಾಡಿಯ ಆಜ್ಞಾನುಸಾರ ಅಲ್ಲಿ ನೆಲೆಸಿದ್ದ ವಿದ್ಯಾರ್ಥಿಗಳಿಗೂ ಸಂನ್ಯಾಸಿಗಳಿಗೂ ಅನ್ನಸಂತರ್ಪಣೆಯ ವ್ಯವಸ್ಥೆಗಾಗಿ ಭೂದಾನ ದತ್ತಿಗಳನ್ನು ನೀಡಿದ್ದ. (ವಿದ್ಯಾಧರನು ಪೆರ್ಮಾಡಿಯ ಒಬ್ಬ ಅಧಿಕಾರಿಯಾಗಿದ್ದನು) ಕ್ರಿ.ಶ. ೧೦ನೆಯ ಶತಮಾನದಲ್ಲಿ ಈ ಗ್ರಾಮ ಒಂದು ವಿದ್ಯಾಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ.

**ಶಾಸನಸಂಖ್ಯೆ ೨೫೦ :** ಈ ಶಾಸನವು ತ್ರುಟಿತಗೊಂಡಿದೆ. ಈ ಶಾಸನದಲ್ಲಿ ವಿದ್ಯಾಧರ ಮತ್ತು ಹನ್ನೆರಡು ಗೌಂಡರುಗಳ ಉಲ್ಲೇಖವಿದೆ. ಗೌಂಡರುಗಳ ಹೆಸರುಗಳನ್ನು ನಮೂದಿಸಿಲ್ಲ. ಅಂದರೆ ಗಂಗರಸನ ಅಧಿಕಾರಿ ವಿದ್ಯಾಧರನು ಈ ಸ್ಥಳದೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದನೆಂಬುದು ಸ್ಪಷ್ಟವಾಗುತ್ತದೆ.

**ಶಾಸನಸಂಖ್ಯೆ ೨೫೧ :** ಮಾರೀಚಾವಡಿಯ ಪಶ್ಚಿಮ ಗೋಡೆಗೆ ಕಟ್ಟಿರುವ ಕಲ್ಲಿನಲ್ಲಿ, ಕ್ರಿ.ಶ. ೧೦೨೭–೨೮ರಲ್ಲಿ ಮಾಳಿಗೇಶ್ವರಿ ಗುಡಿಮಲ್ಲಿ (?) ಪೂಜೆ ಮಾಡುವರಿಗಾಗಿ (ಆಗ ಬಹುಶಃ ಬ್ರಾಹ್ಮಣರು) ಮತ್ತು ಸಿಂಘ ಪರಿಷೆಯ ಮಠಕ್ಕಾಗಿ ಪ್ರತಿ ವರ್ಷ ೧೦ (ಹತ್ತು) ಕೊಳಗ ಭತ್ತವನ್ನು ದಾನವಾಗಿ ನೀಡಲಾಗಿತ್ತು. ಈಗ ಈ ಗುಡಿಯ ಅರ್ಚಕರು ಲಿಂಗಾಯತ ಧರ್ಮಕ್ಕೆ ಸೇರಿದ ಶ್ರೀ ರಾಜಪ್ಪ ತಮ್ಮಡಿ ಶಾಸನದಲ್ಲಿ ಉಲ್ಲೇಖಿಸ ಲಾಗಿರುವ ಸಿಂಘ ಪರಿಷೆ ಮಠ ಈಗ ಇಲ್ಲ; ಬೇರೆ ಯಾವ ಮಠವೂ ಇಲ್ಲ.

**ಶಾಸನ ಸಂಖ್ಯೆ ೨೫೨ :** ನನ್ನಯ್ಯಸ್ವಾಮಿ (ನಾರಾಯಣ ಸ್ವಾಮಿ ದೇವಸ್ಥಾನ)ಯ ಎದುರಿಗಿರುವ ೩.೧ ಮೀ.

* 'ಸಂಗಮ', ಎಮ್.ಐ.ಜಿ.–೭೭, ೩ನೇ ಕ್ರಾಸ್, ೩ನೆಯ ಮೈನ್, ಕೆಹೆಚ್‌ಬಿ ಕಾಲೋನಿ, ೨ನೇ ಹಂತ, ಬಸವೇಶ್ವರನಗರ, ಬೆಂಗಳೂರು–೭೯.



ಪಾರ್ಶ್ವನಾಥ ಶಿಲ್ಪ



ಸೋಮೇಶ್ವರ ಗುಡಿ



ಸೋಮೇಶ್ವರ ಗುಡಿಯ ಕಂಬ



ಮಾರಮ್ಮನ ಗುಡಿಯಲ್ಲಿರುವ ಲಿಂಗಗಳು



ದೇವಸ್ಥಾನದ ಆವರಣದಲ್ಲಿರುವ ಪಾಣಿಪೀಠ



ಗಂಗರ ಶೈಲಿಯ (ಕ್ರಿ.ಶ. ೧೦ ಇರಬಹುದು) ಶೈವಧರ್ಮದ ವೀರರ ವೀರಗಲ್ಲುಗಳು



ಈರಣ್ಣನ ಗುಡಿಯೊಳಗಿರುವ ಒಬ್ಬ ವೀರನ ಶಿಲ್ಪ



ಪಾರ್ಶ್ವನಾಥ ಬಸ್ತಿಯಲ್ಲಿದ್ದ ಲಿಂಗ



ಶಾಸನೋಕ್ತ ರಾಚಮ್ಮನು ನಿಲ್ಲಿಸಿದ ದೀಪಸ್ತಂಭ

ಎತ್ತರವಿರುವ ದೀಪಸ್ತಂಭದ ಅಡಿಯಲ್ಲಿ ಈ ಶಾಸನವನ್ನು ಕೆತ್ತಲಾಗಿದೆ. ಈ ಶಾಸನದ ಪ್ರಕಾರ, ಪೆರ್ಮಾಡಿ ಮನೆವಗತಿ ನೀಲಬ್ಬೆಯ ಮಗನಾದ ರಾಚಮ್ಮನು ಧರ್ಮಕ್ಕಾಗಿ ಈ ಕಂಬವನ್ನು ಕ್ರಿ.ಶ. ೯೭೦-೭೧ರಲ್ಲಿ ನಿಲ್ಲಿಸಿದನೆಂದು ತಿಳಿದುಬರುತ್ತದೆ.

**ಫಲಿತಾಂಶ :** ಈ ನಾಲ್ಕು ಶಾಸನಗಳನ್ನು ಒಟ್ಟಾಗಿ ಗ್ರಹಿಸಿದರೆ, ನಗರ್ಲೆಯು (ಕ್ರಿಶ. ೧೦ರ ಶಾಸನದಲ್ಲಿ ನಗರ್ಲಾ) ಒಂದು ಸುಪ್ರಸಿದ್ಧ ವಿದ್ಯಾಕೇಂದ್ರವಾಗಿತ್ತು. ಸಿಂಘಿ ಪರಿಷೆ ಮಠ ಮತ್ತು ಪೂಜಾ ಕಾರ್ಯಗಳಿಗಾಗಿ ಪೆರ್ಮಾಡಿ ಅರಸರು ದವಸ ಧಾನ್ಯಗಳನ್ನು ದತ್ತಿಯಾಗಿ ನೀಡುತ್ತಿದ್ದರು. ಗಂಗರ ಕಾಲದಲ್ಲಿ ವೈದಿಕ ಧರ್ಮದ ಕೇಂದ್ರವೂ ಆಗಿತ್ತು. ಬಹುಶಃ ಕ್ರಿಶ. ೧೨-೧೩ರಲ್ಲಿ ಲಿಂಗಾಯತ ಧರ್ಮದ ಪ್ರಭಾವ ಬೆಳೆದು ಲಿಂಗಾಯತ ಧರ್ಮದ ತಮ್ಮಡಿ ಶಿವಾರ್ಚಕರಾದರು. ಅವರ ಜೊತೆಯಲ್ಲಿ ಇತರರು (ಶೂದ್ರರು) ಲಿಂಗಾಯತ ಧರ್ಮವನ್ನು ಸ್ವೀಕರಿಸಿದರು. ಈಗ ಈ ಹಳ್ಳಿಯಲ್ಲಿ ಲಿಂಗಾಯತರು, ಬೇಡನಾಯಕರು ಮತ್ತೆ ಕೆಲ ಮುಸ್ಲಿಂ ಕುಟುಂಬಗಳು ವಾಸಿಸುತ್ತವೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಎಲ್ಲರೂ ಸಾಮರಸ್ಯವಾಗಿ ಜೀವನ ಸಾಗಿಸುತ್ತಾರೆಂದು ತಿಳಿದುಬಂತು. ಇದು ಸಂತಸದ ಸಂಗತಿ.

## ದೇಗುಲಗಳು ಮತ್ತು ಪುರಾತತ್ತ್ವ ಅವಶೇಷಗಳು

ಈ ಹಳ್ಳಿಯಲ್ಲಿ ಶಾಸನಗಳ ಪ್ರಕಾರ ನನ್ನಯ್ಯನ ಗುಡಿ ಮತ್ತು ಮಾಳಿಗೇಶ್ವರಿ ಗುಡಿಗಳು ಇರಬೇಕು. ಆದರೆ ಇವುಗಳಲ್ಲದೆ, ಅರ್ಧ ಹಾಳಾಗಿರುವ ಪಾರ್ಶ್ವನಾಥ ಬಸ್ತಿ, ಊರು ಮಾರೆಮ್ಮನಗುಡಿ, ವಿಗ್ರಹ ಇರದ ಸೋಮೇಶ್ವರ ಗುಡಿ, ಇಲ್ಲಿವೇ ಒಂದು ಲಿಂಗ ಇತ್ತು, (ಇದೇ ನನ್ನಯನಗುಡಿ, ಈಗ ಇದು ನೆಲಸಮವಾಗಿದೆ), ರಾಚಮ್ಮನ ಸ್ಥಳಾಂತರ ಗೊಂಡ ದೀಪಸ್ತಂಭ, ಒಟ್ಟು ಎಂಟು ವೀರಗಲ್ಲುಗಳು (೬+೨), ದಡಲಿಂಗಪ್ಪನ ಗುಡಿ, ಈರಣ್ಣನಗುಡಿ, ವಧಾಸ್ತಂಭ (ಕಲ್ಲು), ಬಸವಣ್ಣನಗುಡಿ (ಅದರೊಳಗೆ ಸ್ಥಳಾಂತರ ಗೊಂಡಿರುವ ಲಿಂಗಗಳನ್ನು, ನಾರಾಯಣಶಿಲ್ಪವನ್ನು ಸ್ಥಾಪಿಸಲಾಗಿದೆ) ಇವೆ. ಇವುಗಳನ್ನು ಒಂದೊಂದಾಗಿ ವಿವರಿಸುತ್ತೇನೆ.

**ಪಾರ್ಶ್ವನಾಥ ಬಸದಿ :** ಈ ಹಳ್ಳಿಯನ್ನು, ರಸ್ತೆಯಿಂದ ಬಲಕ್ಕೆ ಇಳಿದರೆ, ಪ್ರವೇಶದಲ್ಲಿ ಕೇವಲ ಗರ್ಭಗುಡಿ ಮಾತ್ರ ಉಳಿದಿರುವ ಪಾರ್ಶ್ವನಾಥ ಬಸ್ತಿ ಅಲ್ಲಿದೆ. ಸುಂದರ, ಹೊಯ್ಸಳ ಶೈಲಿಯ ಬಳಪದ ಕಲ್ಲಿನಲ್ಲಿ ಕಡೆಯಲಾದ ಪಾರ್ಶ್ವನಾಥ ಶಿಲ್ಪ ಅನಾಥವಾಗಿ ನಿಂತಿದೆ. ಪೂಜೆ ಇಲ್ಲ. ನಾನು ೨೦೦೭ರಲ್ಲಿ ಕ್ಷೇತ್ರ ಕಾರ್ಯಕ್ಕಾಗಿ ಬಂದಾಗ ಪಾರ್ಶ್ವನಾಥ ಶಿಲ್ಪದ ಬದಿಯಲ್ಲಿಯೇ ಸ್ಥಳಾಂತರಗೊಂಡ ಲಿಂಗವನ್ನು ನಿಲ್ಲಿಸ ಲಾಗಿತ್ತು. ಈಗ ಉಳಿದಿರುವ ಪಾರ್ಶ್ವನಾಥಬಸ್ತಿಯ ಛತ್ತಿನ ಮೇಲೆ ಹುಲ್ಲನ್ನು ಸಂಗ್ರಹಿಸಿಡಲಾಗುತ್ತದೆ ಬಸ್ತಿಯ ಉಳಿದ ಭಾಗ ನಾಮಾವಶೇಷವಾಗಿದೆ.

**ಊರು ಮಾರೆಮ್ಮನ ಗುಡಿ :** ಪಾರ್ಶ್ವನಾಥ ಬಸ್ತಿಯನ್ನು ದಾಟಿ ಮುಂದಕ್ಕೆ ಹೋದರೆ, ಕೊಂಚ ದೂರದಲ್ಲಿ ಬಲಗಡೆ ಊರ ಮಾರೆಮ್ಮನ ಗುಡಿ ಇದೆ. ಇದು ತೀರ ಇತ್ತೀಚಿನ ರಚನೆ; ಬಹುಶಃ ೫೦-೬೦ ವರ್ಷಗಳ ಹಿಂದೆ ಕಟ್ಟಿರಬಹುದು. ಸುಸ್ಥಿತಿಯಲ್ಲಿದೆ. ಚೌಕಾಕಾರದ ರಚನೆ. ಮರದ ಕಂಬಗಳಿವೆ. ಚಾವಣಿಯನ್ನು ಮಂಗಳೂರು ಹೆಂಚಿನಿಂದ ರಚಿಸಲಾಗಿದೆ. ಗರ್ಭಗುಡಿಯಲ್ಲಿ, ಅಚ್ಚರಿಯ ಸಂಗತಿ ಎಂದರೆ ಮಾರೆಮ್ಮನ ವಿಗ್ರಹವಿಲ್ಲ. ಬದಲಾಗಿ ಪೀಠಗಳಿಲ್ಲದ ಎರಡು ಲಿಂಗಗಳಿವೆ. ಒಂದು ಲಿಂಗದ ಎತ್ತರ ೨೨ ಸೆ.ಮೀ. ತಳದ ವ್ಯಾಸ ೮ ಸೆ.ಮೀ. ಇನ್ನೊಂದು ಲಿಂಗದ ಎತ್ತರ ೩೦ ಸೆಂ.ಮೀ. ತಳದ ವ್ಯಾಸ ೧೦ ಸೆ.ಮೀ. ಎಣ್ಣೆ ಬಳಿಯಲಾಗಿದೆ. ಆದ್ದರಿಂದ ಕಪ್ಪಗಿವೆ. ಕುಸುರಿ ಕೆಲಸವಿಲ್ಲದ ತೀರ ಸಾಧಾರಣ ಕಂಬದಂಥ ರಚನೆಗಳಿವು.

**ಮಾಳಿಗೇಶ್ವರಿ ಗುಡಿ :** ಈ ಹಳ್ಳಿಯ ಭಕ್ತಿಯ ಕೇಂದ್ರ ಈ ಗುಡಿ. ನಾನು ಮೂರನೇ ಸಲ ಹೋದಾಗ ಮೈಸೂರು ಮತ್ತು ಬೆಂಗಳೂರಿನಿಂದ ೫-೬ ಜನ ಭಕ್ತರು ಬಂದಿದ್ದರು. ಕೆಲವು ವರ್ಷಗಳ ಹಿಂದೆ ಇಲ್ಲಿಂದ ವಲಸೆ ಹೋದ ಈ ಜನರು ಆಗಾಗ ಈ ದೇವರ ಪೂಜೆಗಾಗಿ ಬರುತ್ತಾರೆಂದು ತಿಳಿದುಬಂತು. ಇದು ಪೂರ್ವಾಭಿಮುಖಿಯಾಗಿರುವ ಗುಡಿ. ಚೌಕಾಕಾರದ ರಚನೆ. ಪಶ್ಚಿಮ-ಪೂರ್ವ ದಿಕ್ಕಿನಲ್ಲಿ ೧೩ ಮೀ. ಉದ್ದ ಹಾಗೂ ದಕ್ಷಿಣೋತ್ತರವಾಗಿ ೯ ಮೀ. ಅಗಲವಾಗಿದೆ. ಒಟ್ಟು ೨೦ ಕಲ್ಲಿನ ಕಂಬಗಳಿವೆ. ಕಂಬಗಳು ಗಂಗರ ಶೈಲಿಯಲ್ಲಿವೆ. ಯಾವ ಬಗೆಯ ಕುಸುರಿ ಕೆಲಸವಿಲ್ಲ. ಮುಖಮಂಟಪದ ಹೊರ ಕಂಬಗಳಿಗೆ ಮಾತ್ರ ಸುಣ್ಣ ಬಳಿಯಲಾಗಿದೆ. ಒಳಗಿರುವ ಎಲ್ಲಾ ಕಂಬಗಳಿಗೆ ವಾರ್ನಿಷ್ ಕೆಂಪು ಬಣ್ಣ ಬಳಿಯಲಾಗಿದೆ.

ಮುಖಮಂಟಪದ ಮೇಲೆ ಚಿಕ್ಕ ಮೂರು ಗೋಪುರ ಗಳನ್ನು ಕಟ್ಟಿ ಒಳಗೆ ಸಿಮೆಂಟಿನ ಸ್ತ್ರೀಶಕ್ತಿ ದೇವತೆಗಳ ಸ್ಟುಕೊ ಶಿಲ್ಪಗಳನ್ನು ನೆಡಲಾಗಿದೆ. ಈ ಗೋಪುರಗಳು ಮತ್ತು ಶಕ್ತಿ ಶಿಲ್ಪಗಳು ತೀರ ಇತ್ತೀಚಿನ ರಚನೆಗಳೆಂಬುದು ನೋಡಿದ ತಕ್ಷಣ ಹೊಳೆಯುತ್ತದೆ.

ಗರ್ಭಗುಡಿಯಲ್ಲಿ ಮಧ್ಯದಲ್ಲಿ ನಗರ್ಲೆಯ ಮಾಳಿಗೇಶ್ವರಿ ಸ್ಟುಕೋ ಶಿಲ್ಪ ಇದೆ (ಎತ್ತರ ೧.೬ ಮೀ.), ಉಳಿದ ಆರು ಮಾತೃಕೆಯರ ಶಿಲ್ಪಗಳ ಹೆಸರುಗಳು : ಮೂಗೂರು ತಿಬ್ಬಾದೇವಿ, ಸೋಸಲೆಯ ಹೊನ್ನಾದೇವಿ, ಹದ್ನಾರು



ಈರಣ್ಣನ ಗುಡಿಯೊಳಗಿರುವ ಇನ್ನೊಬ್ಬ ವೀರನ ಶಿಲ್ಪ



ನಾರಾಯಣಸ್ವಾಮಿ ದೇವಸ್ಥಾನದಲ್ಲಿದ್ದ ನಾರಾಯಣ ಶಿಲ್ಪವನ್ನು ಯಾವ ಕಾಲದಲ್ಲಿಯೋ ತಂದು ಬಸವೇಶ್ವರಗುಡಿಯಲ್ಲಿ ತಂದಿಡಲಾಗಿದೆ

ಚೌಡೇಶ್ವರಿ, ಕಳಲೆಯ ಕಲ್ಲಾದೇವಿ, ಅಂಚೆಯ ನಂಚಿಕಾದೇವಿ ಮತ್ತು ಅರಕೋಟೆಯ ಕೋಟಾದೇವಿ. ಆದರೆ ಈ ಸ್ಟುಕೋ ಶಿಲ್ಪಗಳನ್ನು ನೋಡಿದರೆ ಹಳೆಯ ಕಾಲದವುಗಳು ಎನಿಸುವುದಿಲ್ಲ. ಬಹುಶಃ ಕಾಲಕಾಲಕ್ಕೆ ಹೊಸ ಹೊಸ ಮಾತೃಕೆಯರ ಶಿಲ್ಪಗಳನ್ನು ನಿಲ್ಲಿಸಿ ಹಳ್ಳಿಗರು ತಮಗೆ ತೋಚಿದ ಹೆಸರುಗಳಿಂದ ಕರೆದಿದ್ದಾರೆ. ಹೆಸರುಗಳು ಪ್ರಾಸಬದ್ಧವಾಗಿದೆ. ಸಪ್ತಮಾತೃಕೆಯರ ಹೆಸರುಗಳು ಮತ್ತು ಮಾಳಿಗೇಶ್ವರಿ ಗುಡಿಯು ಶಾಸನಗಳಲ್ಲಿ ಉಲ್ಲೇಖಗೊಂಡಿಲ್ಲ ಎಂಬುದನ್ನು ಗಮನಿಸಬೇಕು.

**ಸೋಮೇಶ್ವರ ಗುಡಿ :** ಈ ಹಳ್ಳಿಯ ಜನರು ಮಾಳಿಗೇಶ್ವರಿ ಗುಡಿಯ ಬಲಗಡೆ ಇರುವ ಹಾಳು ಬಿದ್ದಿರುವ ಹಾಗೂ ವಿಗ್ರಹವಿಲ್ಲದ ಈ ರಚನೆಯನ್ನು ಈಶ್ವರಗುಡಿ ಅಥವಾ ಸೋಮೇಶ್ವರ ಗುಡಿ ಎಂದು ಕರೆಯುತ್ತಾರೆ. ಇದನ್ನು ಶಾಸನೋಕ್ತ ನನ್ನಯ ಎಂಬ ವ್ಯಕ್ತಿಯು (ಶಾಸನ ಸಂ. ೨೩೯) ಬಹುಶಃ ೯–೧೦ನೇ ಶತಮಾನದಲ್ಲಿ ಕಟ್ಟಿಸಿದನೆಂದು ಈ ಶಾಸನದ ಆಧಾರದಿಂದ ತರ್ಕಿಸಬಹು ದಾಗಿದೆ. ಈ ದೇವರಿಲ್ಲದ ಗುಡಿಯನ್ನು ಕ್ರಿ.ಶ. ೨೦೦೭ರಲ್ಲಿ ಮತ್ತು ೨೦೧೧ರಲ್ಲಿ ನೋಡಿದಂತೆ ಬಣ್ಣಿಸುತ್ತೇನೆ. ಇಟ್ಟಿಗೆಯ ಗೋಡೆಗಳನ್ನು ಗಚ್ಚಿನ ಗಿಲಾವು ಮಾಡಿ ಕಟ್ಟಲಾಗಿದೆ. ಮುಖಮಂಟಪ ಮತ್ತು ರಂಗಮಂಟಪದ ಗೋಡೆಯ ಕೋನಗಳಲ್ಲಿ ನಂದಿ ಶಿಲ್ಪಗಳನ್ನು ಕೂಡಿಸಲಾಗಿದೆ. ಆದ್ದರಿಂದ ನಿಶ್ಚಿತವಾಗಿಯೂ ಈಶ್ವರಗುಡಿ. ಆದರೆ ಕಾಮತರು (೧೯೮) ಊಹಿಸುವ ಹಾಗೆ ಇದು ನಾರಾಯಣಸ್ವಾಮಿ ಗುಡಿ ಅಲ್ಲ. ಅದು ಈಶ್ವರ ದೇವಸ್ಥಾನವಾಗಿ ಮಾರ್ಪಾಟು ಆಗಿಲ್ಲ. ಗ್ರ್ಯಾನೈಟ್ ಶಿಲೆಯಲ್ಲಿ ಕಡೆಯಲಾದ ೨೦ ಕಂಬಗಳಿವೆ ಹಾಗೂ ಸೂಕ್ತ ಬೋದಿಗೆಗಳಿವೆ. ಬಾಗಿಲು ಚೌಕಟ್ಟು ಕೂಡ ಗ್ರ್ಯಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಆದರೆ, ೨೦೦೨ರಲ್ಲಿ ನಾನು ನೋಡಿದ ದೃಶ್ಯ (ಆಘಾತಕಾರಿಯಾಗಿತ್ತು. ಮಾಳಿಗೇಶ್ವರಿ ಗುಡಿಯ ಬಲಗಡೆ ಇರುವ ದೇವರಿಲ್ಲದ ಸೋಮೇಶ್ವರ ಗುಡಿಯನ್ನು (ನಿಜವಾಗಿಯೂ ನನ್ನಯ್ಯನ ಗುಡಿ) ಈ ಹಳ್ಳಿಯ ಜನರು ನೆಲಸಮಗೊಳಿಸಿದ್ದಾರೆ. ಎಲ್ಲಾ ತೊಲೆಗಳನ್ನು ಕಂಬಗಳನ್ನು ಇಟ್ಟಿಗೆಯ ಚೂರುಗಳನ್ನು ಸುಮಾರು ೨–೩ ಕಿ.ಮೀ. ದೂರದಲ್ಲಿರುವ ಕಪಿಲಾನದಿಯ ದಡದಲ್ಲಿ ಹಾಕಿದ್ದಾರೆ. ಕಾರಣ ಕೇಳಿದರೆ ಇದು ದೇವರಿಲ್ಲದ ಗುಡಿ ಆದ್ದರಿಂದ ನೆಲಸಮ ಮಾಡಿರುವುದಾಗಿ ಸ್ಥಳೀಯ ಜನರು ಹೇಳಿದರು. ಇದೊಂದು ಬೇಜವಾಬ್ದಾರಿಯ ಕೆಲಸ.

**ಊರ್ಧ್ವಲಿಂಗ :** ೨೦೦೭ರಲ್ಲಿ ಈ ಸ್ಥಳಕ್ಕೆ ಭೇಟಿ ಕೊಟ್ಟಾಗ ಪಾರ್ಶ್ವನಾಥ ಶಿಲ್ಪದ ಬದಿಯಲ್ಲಿದ್ದ ಶಾಸ್ತ್ರೋಕ್ತವಾಗಿ ಕಡೆಯಲಾದ ೩೬ ಇಂಚು ಎತ್ತರದ, ಅಡಿಯಲ್ಲಿ ೩೫" ಸುತ್ತಳತೆಯ ಬಳಪದ ಕಲ್ಲಿನ ಊರ್ಧ್ವಲಿಂಗ ಶಿಲ್ಪ ಇತ್ತು. ಇದು ಪುರುಷಲಿಂಗಕ್ಕೆ ತೀರ ಸಮೀಪದ ಹೋಲಿಕೆ ಇತ್ತು. ಈ ಲಿಂಗವನ್ನು ನೋಡಿದಾಗ ಸುಪ್ರಸಿದ್ಧ ಗುಡಿಮಲ್ಲಂ ಲಿಂಗ ನೆನಪಾಯಿತು. ೨೦೧೧ರಲ್ಲಿ ಈ ಲಿಂಗವನ್ನು ಸುರಕ್ಷಿತವಾಗಿ ಸೋಮೇಶ್ವರಗುಡಿಯ ಮುಖಮಂಟಪದಲ್ಲಿ ಯಾರೋ ತಂದಿಟ್ಟಿದ್ದರು. ಬಹುಶಃ ಇದನ್ನು ಇಲ್ಲಿ ಪ್ರತಿಷ್ಠಾಪಿಸುವ ಉದ್ದೇಶವಿತ್ತೆಂಬುದಕ್ಕೆ ಹೊರಗೆ ಬಿದ್ದಿರುವ ಪೀಠವೇ ಸಾಕ್ಷಿ.

**ದೀಪಸ್ತಂಭ :** ಶಾಸನ ೨೪೨ರಲ್ಲಿ ಹೇಳಿದಂತೆ ರಾಚಮ್ಮನ ಕಂಬ ನನ್ನಯ್ಯನ ಗುಡಿಯ ಮುಂದೆ ನಿಲ್ಲಿಸಲಾಗಿತ್ತು. ನಾನು ಮೊದಲೆರಡು ಸಲ ಭೇಟಿ ಕೊಟ್ಟಾಗ ಈ ಸ್ತಂಭ ಸುರಕ್ಷಿತವಾಗಿತ್ತು. ಈ ಸ್ತಂಭವನ್ನು ಡಾಲೋರೈಟ್ ಶಿಲೆಯಲ್ಲಿ ಕಟೆಯಲಾಗಿದೆ. ಈ ಶಿಲೆಯನ್ನು ಬಹುಶಃ ನಂಜನಗೂಡಿನ ಆಸುಪಾಸಿನ ಪ್ರದೇಶದಿಂದ ತಂದು ಇಲ್ಲಿ ಕಡೆಯಲಾಗಿದೆ. ಈ ಸ್ತಂಭದ ಎತ್ತರ ೩.೧ ಮೀ. ಆಮ್ಲಕದ ಎತ್ತರ ಸುಮಾರು ೦.೫೦ ಮೂ. ೨೦೧೨ರಲ್ಲಿ ಕ್ಷೇತ್ರ ಕಾರ್ಯಕ್ಕೆ ಹೋದಾಗ ಈ ಸ್ತಂಭವನ್ನು ಕಿತ್ತು ಸೋಮೇಶ್ವರ ಗುಡಿಯ ಕಂಪೌಂಡಿನಿಂದ ಒಂದು ಮರದಲ್ಲಿ ಹಾಕಲಾಗಿದೆ.

## ದಡದ ಲಿಂಗಪ್ಪ ಮತ್ತು ಈರಣ್ಣನ ಗುಡಿಗಳು

ಈ ಎರಡು ಗುಡಿಗಳು ಮಾಳಿಗೇಶ್ವರಿ ಗುಡಿಯಿಂದ ಪಶ್ಚಿಮಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿವೆ. ಸ್ಥಳೀಯರ ನಂಬಿಕೆಯ ಪ್ರಕಾರ ಈರಣ್ಣ ಮತ್ತು ದಡದ ಲಿಂಗಪ್ಪ ಮಾಳಿಗೇಶ್ವರಿಯ ತಮ್ಮಂದಿರು. ಈ ಗುಡಿಗಳು ತೀರ ಇತ್ತೀಚಿನ ರಚನೆಗಳು ಬಣ್ಣ ಬಳಿಯಲಾಗಿದೆ. ದಡದ ಲಿಂಗಪ್ಪನ ಗುಡಿಯನ್ನು ಮುಚ್ಚಲಾಗಿತ್ತು. ಈರಣ್ಣನ ಗುಡಿಯ ಬಾಗಿಲು ತೆರೆದಿತು. ಈರಣ್ಣನಗುಡಿಯು ವಾಸ್ತವವಾಗಿ ವೀರಭದ್ರನ ಗುಡಿ ಅಲ್ಲ. ಗುಡಿಯೊಳಗೆ ೬೦ ಸೆ.ಮೀ. ಮತ್ತು ೬೫ ಸೆ.ಮೀ. ಎತ್ತರವಿರುವ ವೀರಗಲ್ಲುಗಳಿವೆ. ಎರಡರ ಶೈಲಿ ಒಂದೇ ಇದೆ. ಬಹುಶಃ ಹೊಯ್ಸಳರ ಕಾಲದ ವೀರಗಲ್ಲುಗಳು. ಪೀಠದಲ್ಲಿ ಮಾತ್ರ ವ್ಯತ್ಯಾಸವಿದೆ. ಈರಣ್ಣನ ಗುಡಿಯ ಮುಂದೆ ಸುಮಾರು ೧ ಮೀ. ಎತ್ತರ ಮತ್ತು ಅದೇ ಅಗಲದ ಗ್ರ್ಯಾನೈಟ್ ಶಿಲೆಯ ಚೂಪಾದ ತುಂಡನ್ನು ನೆಡಲಾಗಿದೆ. ಈ ಶಿಲೆಯ ಮೇಲೆ ಕೋಳಿಗಳ ಮತ್ತು ಕುರಿಗಳ ಕೊರಳುಗಳನಿಟ್ಟು ಈರಣ್ಣನಿಗೆ ದಸರೆಯ ಹಬ್ಬದ ಸುಮಾರಿನಲ್ಲಿ ಬಲಿ ಕೊಡಲಾಗುತ್ತದೆ. ಈ ಬಲಿ ಪೀಠವನ್ನು ದಿನಾಲೂ ಕುಂಕುಮ ಹಚ್ಚಿ ಪೂಜಿಸಲಾಗುತ್ತದೆ.

**ಬಸವೇಶ್ವರ ಗುಡಿ :** ಈರಣ್ಣನ ಗುಡಿಯಿಂದ ಸುಮಾರು ೫೦೦ ಮೀ. ಮುಂದಕ್ಕೆ ಹೋದರೆ ಸ್ಥಳೀಯರು ಕರೆಯುವ ಬಸವೇಶ್ವರ (ಬಸವಣ್ಣನ ಗುಡಿ) ದೇವಾಲಯವಿದೆ. ಕಾಮತರು ಈ ಗುಡಿಯ ಹೆಸರನ್ನು ಮಾತ್ರ ಉಲ್ಲೇಖಿಸಿದ್ದಾರೆ. ಇದರೊಳಗಿರುವ ಶಿಲ್ಪಗಳು ಕುತೂಹಲಕಾರಿಯಾಗಿವೆ. ಈ ಗುಡಿಯು ಇಲ್ಲಿಯ ಖಾಸಗಿ ವ್ಯಕ್ತಿಯೊಬ್ಬರ ತೋಟದಲ್ಲಿದೆ. ಸುಮಾರು ೧೦ ಮೀ. ಉದ್ದ ಹಾಗೂ ೨.೫ ಮೀ. ಅಗಲವಾಗಿರುವ ಸಾಧಾರಣ ಚೌಕಾಕಾರದ ರಚನೆ. ಒಳ ಹೊರಗಿನ ವಾತಾವರಣ ಸ್ವಚ್ಛವಾಗಿದೆ. ಗರ್ಭಗುಡಿಯಲ್ಲಿ ನಂದಿ ಶಿಲ್ಪ ಇದೆ. ಎಣ್ಣೆ ಮೆತ್ತಿಕೊಂಡಿದೆ. ಗರ್ಭಗುಡಿಯ ಹೊರಗಿನ ಚೌಕದಲ್ಲಿ ಬಲಕ್ಕೆ ಒಂದು ಚಿಕ್ಕ ಲಿಂಗ (ಇದು ಚಿತ್ರದಲ್ಲಿ ಮರೆಯಾಗಿದೆ), ಒಂದು ದೊಡ್ಡ ಲಿಂಗ ಮತ್ತು ನಾರಾಯಣ ಶಿಲ್ಪಗಳಿವೆ. ಎಡಗಡೆಯ ಸಾಲಿನಲ್ಲಿ ಒಂದು ಚಿಕ್ಕ ನಂದಿ ಮತ್ತು ಒಂದು ಆಂಜನೇಯ ಶಿಲ್ಪ ಇದೆ (೧೯). ಮೊದಲೆರಡು ಸಲ ಕಾಡಿದ ಪ್ರಶ್ನೆ ನಾರಾಯಣಗುಡಿ ಮತ್ತು ನಾರಾಯಣ ಶಿಲ್ಪ ಎಲ್ಲಿವೆ ಎಂಬುದಾಗಿತ್ತು. ೨೦೧೨ ಕ್ಷೇತ್ರ ಕಾರ್ಯವು ಈ ಪ್ರಶ್ನೆಗೆ ಉತ್ತರ ನೀಡಿತು. ಬಸವೇಶ್ವರ ಗುಡಿಯಲ್ಲಿ, ಸ್ಥಳಾಂತರಗೊಂಡು ಸ್ಥಾಪಿಸಲ್ಪಟ್ಟಿರುವ ನಾರಾಯಣ ಮೂರ್ತಿ ಇಲ್ಲಿದೆ. ಇದೊಂದು ಹೊಯ್ಸಳ ಶಿಲ್ಪ. ಬಳಪದ ಕಲ್ಲಿನಲ್ಲಿ ಕಡೆಯಲಾಗಿದೆ. ಈ ಶಿಲ್ಪವನ್ನು ಎಲ್ಲಿಂದ ತಂದು ಸ್ಥಾಪಿಸಿದರೋ ತಿಳಿಯದು. ಯಾರು ಇಲ್ಲಿ ಯಾವಾಗ ತಂದಿಟ್ಟರೆಂಬುದು ತಿಳಿಯದು. ಕಾಮತರು (೧೯೮೮) ನಾರಾಯಣಸ್ವಾಮಿ ಗುಡಿ ಇಲ್ಲಿತ್ತು ಎಂಬರ್ಥದ ಮಾತುಗಳನ್ನು ಹೇಳುತ್ತಾರೆ. ಆದರೆ ಅವರು ಹೇಳುವ ಗುಡಿ ಮೂಲದಲ್ಲಿಯೂ ಈಶ್ವರನ ಗುಡಿಯೇ ಆಗಿದೆ. ಈ ಶಿಲ್ಪದ ಮೂಲವನ್ನು ಮುಂದೆ ಯಾರಾದರೂ ಶೋಧಿಸಬೇಕಾಗಿದೆ. ಈ ಶಿಲ್ಪ ಸದ್ಯ ಬಸವೇಶ್ವರ ಗುಡಿಯಲ್ಲಿ ಸ್ಥಾಪಿಸಲ್ಪಟ್ಟಿದೆ.

**ವೀರಗಲ್ಲುಗಳು :** ಈ ಹಳ್ಳಿಯ ಸೋಮೇಶ್ವರ ಗುಡಿ (ನನ್ನಯ್ಯನ ಗುಡಿ)ಯ ಮುಂದೆ ಒಟ್ಟು ಆರು ವೀರಗಲ್ಲುಗಳಿವೆ. ಈ ಎಲ್ಲಾ ವೀರಗಲ್ಲುಗಳನ್ನು ಕಟೆಯಲು ಗ್ರ್ಯಾನೈಟ್ ಚಪ್ಪಡಿಗಳನ್ನು ಬಳಸಲಾಗಿದೆ. ಎಲ್ಲವೂ ಗಂಗರ ಕಾಲದ ಶೈಲಿಯವು ಎಂದು ಭಾವಿಸಿದ್ದೇನೆ. ಯಾವುದರ ಮೇಲೂ ಶಾಸನ ಇಲ್ಲ. ಎಲ್ಲ ವೀರಗಲ್ಲುಗಳು ಶೈವಧರ್ಮಕ್ಕೆ ಸೇರಿದ ವೀರನು ಹೋರಾಡಿ ಸತ್ತಾಗ ಕೈಲಾಸಕ್ಕೆ ಹೋಗುವ

ಚಿತ್ರಗಳನ್ನು ಚಿತ್ರಿಸುತ್ತವೆ. ಇವುಗಳಲ್ಲದೆ ಈರಣ್ಣನ ಗುಡಿಯ ಬಳಿ ಎರಡು ನಗ್ನೀಕರಣಗೊಂಡ ವೀರಗಲ್ಲುಗಳಿವೆ.

### ಅಧ್ಯಯನದಿಂದ ಹೊಮ್ಮುವ ತೀರ್ಮಾನಗಳು

ಮೇಲೆ ವಿವರಿಸಲಾದ ಶಾಸನಗಳ ಅಧ್ಯಯನ ಮತ್ತು ಪುರಾತತ್ತ್ವ ಅವಶೇಷಗಳ ವಿವರಣೆಗಳನ್ನು ಪರಸ್ಪರ ತಾಳೆ ಹಾಕಿ ಯೋಚಿಸಿದಾಗ ಈ ಕೆಳಗಿನ ತೀರ್ಮಾನಗಳಿಗೆ ತಲುಪಬಹುದಾಗಿದೆ.

೧. ಶಾಸನದಲ್ಲಿ ನಗರ್ಲಾ ಎಂದು ಹೆಸರಿಸಲಾಗಿರುವ ಈ ನಗರ್ಲೆಯು ಕ್ರಿ.ಶ. ೧೦ನೇ ಶತಮಾನದಲ್ಲಿ ಗಂಗರ ಅಧೀನದಲ್ಲಿತ್ತು. ಅವರ ಅಧಿಕಾರಿ ವಿದ್ಯಾಧರನು ಈ ಹಳ್ಳಿಯ ಗುಡಿಗಳಿಗೂ, ಮಠಗಳಿಗೂ ದಾನ ದತ್ತಿಗಳನ್ನು ನೀಡುತ್ತಿದ್ದನು.

೨. ಇಲ್ಲಿ ಒಂದು ವಿದ್ಯಾಕೇಂದ್ರವಿತ್ತು. ಇಲ್ಲಿಯ ವಿದ್ಯಾರ್ಥಿಗಳ ಮತ್ತು ಸಂನ್ಯಾಸಿಗಳ ಅವಶ್ಯಕತೆಗಳನ್ನು ವಿದ್ಯಾಧರನು ಪೆರ್ಮಾಡಿಯ ಆಜ್ಞಾನುಸಾರವಾಗಿ ಪೂರೈಸುತ್ತಿದ್ದನು.

೩. ಇಲ್ಲಿ ನನ್ನಯ್ಯನು ಕಟ್ಟಿಸಿದ ಗುಡಿ ಇತ್ತು. ಇದು ಸೋಮೇಶ್ವರ ದೇವಸ್ಥಾನವಾಗಿ ಹೆಸರು ಪಡೆಯಿತು. ತೀರ ಇತ್ತೀಚೆಗೆ ನೆಲಸಮವಾಗಿ ಹೋಗಿದೆ. ಈ ನಿವೇಶನದಲ್ಲಿ ಸುಂದರ ಹೂದೋಟ ಬೆಳೆಸುವುದು ಸೂಕ್ತ.

೪. ಊರ್ಧ್ವಲಿಂಗ ಇಲ್ಲಿಗೆ ಎಲ್ಲಿಂದ ಬಂತು ? ಇದಕ್ಕೆ ಸೂಕ್ತವೆನಿಸುವಂತ ದೇವಾಲಯ ಇಲ್ಲಿ ಹಿಂದೆ ಇದ್ದಿರಬಹುದು. ಈಗ ಗುಡಿ ನಾಶವಾಗಿ ಹೋಗಿ ಲಿಂಗ ಮಾತ್ರ ಉಳಿದಿದೆ. ಅದೂ ಕೂಡಾ ಕಪಿಲಾ ನದಿಯ ದಡದ ಮೇಲೆ ಇದೆ ಎಂದು ತಿಳಿದುಬಂತು.

೫. ಮಾರಮ್ಮನ ಗುಡಿಯು ಮಾರೆಮ್ಮನ ಗುಡಿ ಅಲ್ಲ. ವಾಸ್ತವವಾಗಿ ಇದು ಈಶ್ವರ ದೇವರ ಗುಡಿ. ಇಲ್ಲಿಯೇ ಊರ್ಧ್ವಲಿಂಗದ ಗುಡಿ ಹಿಂದೆ ಇತ್ತೆ ? ಸದ್ಯಕ್ಕೆ ಈ ಊಹೆಗೆ ಉತ್ತರವಿಲ್ಲ.

೬. ಹಯವದನರಾವ್ ಅವರು (೧೯೩೦) ಉಲ್ಲೇಖಿಸುವ ದುರ್ಗಾ ಪರಮೇಶ್ವರಿ ಗುಡಿ ಈಗ ಇಲ್ಲ.

೭. ಇಲ್ಲಿ ಶಕ್ತಿದೇವತೆಯ ಗುಡಿಗಳನ್ನು ಗಮನಿಸಿದರೆ ಶಕ್ತಿ ಆರಾಧನೆ ಕ್ರಿ.ಶ. ೧೦ನೇ ಶತಮಾನದಿಂದಲೂ ಇದೆ. ಇಂದಿಗೂ ನಡೆದುಕೊಂಡು ಬಂದಿದೆ. ಆದರೆ ಶಕ್ತಿದೇವತೆಯ ಬಲಿಗಳನ್ನು ಕೊಂಚ ದೂರದಲ್ಲಿರುವ ಈರಣ್ಣ ದೇವರ ಗುಡಿಯ ಮುಂದೆ ಕಡಿಯಲಾಗುತ್ತದೆ. ಬಹುಶಃ ಮಾಳಿಗೇಶ್ವರಿ ಪೂಜಾರಿಗಳು ಶಿವಾರ್ಚಕರ ತಮ್ಮಡಿಗಳಾದ ನಂತರ ಇಲ್ಲಿ ಬಲಿ ಕಡಿಯುವುದನ್ನು ಕೆಲ ಶತಮಾನಗಳ ಹಿಂದೆ ನಿಲ್ಲಿಸಿರಬಹುದು. ಲಿಂಗಾಯತ ಧರ್ಮ ಬಲಿಯನ್ನು ವಿರೋಧಿಸುತ್ತದೆ. ಆದ್ದರಿಂದ ಈ ಬದಲಾವಣೆಯನ್ನು ತಂದಿರಬಹುದು.

೮. ಹೊಯ್ಸಳರ ಕಾಲದಲ್ಲಿ ಇಲ್ಲಿ ಜೈನಧರ್ಮ ಕಾಲಿಟ್ಟಿರಬಹುದು. ಆದರೆ ಬಹಳ ವರ್ಷಗಳ ಕಾಲ ಬಾಳದೆ ದುರ್ಬಲವಾಗಿ ಈ ಊರಿನಿಂದಾಚೆಗೆ ಹೋಯಿತೆಂದು ಊಹಿಸಬಹುದು. ಈ ಊಹೆಗೆ ಪಾಳಾಗಿರುವ ಪಾರ್ಶ್ವನಾಥ ಬಸ್ತಿಯೇ ಸಾಕ್ಷಿ.

೯. ಈಗ ಕಿತ್ತು ಬಿಸಾಡಿರುವ ಧ್ವಜಸ್ತಂಭವನ್ನು ಸೋಮೇಶ್ವರಗುಡಿಯ (ನನ್ನಯ್ಯಗುಡಿ) ಕಂಬ ಮತ್ತು ತೊಲೆಗಳನ್ನು ಹಾಗೂ ಊರ್ಧ್ವಲಿಂಗವನ್ನು ಸಮೀಪದ ಸುತ್ತೂರಿನಲ್ಲಿರುವ ವಸ್ತುಸಂಗ್ರಹಾಲಯಕ್ಕೆ ಸಾಗಿಸಿ, ಪ್ರದರ್ಶಿಸಬಹುದು.

೧೦. ಹಾಗೆಯೇ ಎಂಟು ವೀರಗಲ್ಲುಗಳನ್ನು ಸುತ್ತೂರಿಗೆ ಸಾಗಿಸಿ, ಸ್ವಚ್ಛಗೊಳಿಸಿ ಅಧ್ಯಯನಕ್ಕೊಳ ಪಡಿಸಬಹುದು.

[ಕೃತಜ್ಞತೆಗಳು : ನಾನು ಕ್ಷೇತ್ರ ಕಾರ್ಯ ಕೈಗೊಂಡಾಗ ನನಗೆ ಸುತ್ತೂರಿನಲ್ಲಿ ವಸತಿ ಸೌಕರ್ಯವನ್ನು ಒದಗಿಸಿದ ಸುತ್ತೂರು ಸಂಸ್ಥಾನಕ್ಕೂ, ಆಡಳಿತಾಧಿಕಾರಿಗಳಾದ ಶ್ರೀ ಶೇಖರಗೌಡ ಪಾಟೀಲ, ನಗರ್ಲೆಯ ಡಾ. ಕೆ.ಸಿ. ಮಹಾದೇಶ ಅವರಿಗೂ, ಶ್ರೀ ನಾಗೇಂದ್ರಸ್ವಾಮಿ ಅವರಿಗೂ ನಾನು ಕೃತಜ್ಞನಾಗಿದ್ದೇನೆ. ಊರ್ಧ್ವಲಿಂಗದ ಪರಿಕಲ್ಪನೆಯನ್ನು ನನಗೆ ವಿವರಿಸಿದ ಡಾ. ಎಂ.ಜಿ. ನಾಗರಾಜರಿಗೆ ನಾನು ಕೃತಜ್ಞ.]



### ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಹಯವದನರಾವ್ (೧೯೩೦), **ಮೈಸೂರು ಗ್ಯಾಸೆಟಿಯರ್**, VI Part 1, (ಪುನರ್ ಮುದ್ರಣ ೨೦೧೧, ಪುಟ ೭೮೯).

೨. ಸೂರ್ಯನಾಥಕಾಮತ್ (೧೯೮೮), **ಮೈಸೂರು ಜಿಲ್ಲೆಯ ಗ್ಯಾಸೆಟಿಯರ್**, ಪುಟ ೯೦೦.

೩. **ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ ೩, (ಪರಿಷ್ಕೃತ), ಮೈಸೂರು ವಿಶ್ವವಿದ್ಯಾನಿಲಯ, ಪುಟ ೩೭೭-೩೭೮, ೧೯೭೪.



# ನಿಟ್ಟೂರಿನ ಶಾಂತಿನಾಥ ಜಿನಾಲಯ

ಶ್ರೀನಿವಾಸ ಎ.ಜಿ.*

**ತು**ಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಹೋಬಳಿ ಕೇಂದ್ರ ನಿಟ್ಟೂರು. ಇದು ಸಾಂಸ್ಕೃತಿಕ ಮತ್ತು ಐತಿಹಾಸಿಕ ಸ್ಥಳವಾಗಿದ್ದು ಸಂಸ್ಕೃತಿಯ ದೃಷ್ಟಿಕೋನದಲ್ಲಿ ತನ್ನದೇ ಆದಂತಹ ವಿಶಿಷ್ಟ ಸ್ಥಾನಮಾನವನ್ನು ಮೈಗೂಡಿಸಿಕೊಂಡಿದೆ.

ನಿಟ್ಟೂರು ಜಿಲ್ಲಾ ಕೇಂದ್ರದಿಂದ ೨೮ ಕಿ.ಮೀ. ತಾಲ್ಲೂಕು ಕೇಂದ್ರದಿಂದ ೮ ಕಿ.ಮೀ. ದೂರದಲ್ಲಿದೆ. ಕ್ರಿಸ್ತಶಕ ೧೨೨೬ರ ಪುರ ಗ್ರಾಮದ ಶಿಲಾಶಾಸನದಲ್ಲಿ ನಿಟ್ಟೂರನ್ನು 'ತೆಂಕಣಯ್ಯಾವಳೆ' ಎನಿಸಿದ ಮಹಾಪಟ್ಟಣವಾಗಿತ್ತು ಎಂದು ಉಲ್ಲೇಖಿಸಿದೆ. ಹಾಗಾಗಿ ನಿಟ್ಟೂರು ಒಂದು ಪ್ರಾಚೀನ ಪ್ರಸಿದ್ಧ ವ್ಯಾಪಾರ ಕೇಂದ್ರವಾಗಿದ್ದು ಇಲ್ಲಿನ ವ್ಯಾಪಾರ ವಹಿವಾಟು ಭಾರತದ ಉದ್ದಗಲಕ್ಕೂ ಹರಡಿತ್ತು.

ಈ ಪ್ರದೇಶವು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತು. ಇಂತಹ ರಾಜಮನೆತನಗಳಲ್ಲಿ ಒಂದಾದ ಹೊಯ್ಸಳರ ಕಾಲದಲ್ಲಿ ಶೈವ ಮತ್ತು ವೈಷ್ಣವ ಧರ್ಮದ ಜೊತೆಗೆ ಜೈನಧರ್ಮ ಈ ಪ್ರದೇಶದಲ್ಲಿ ಹೆಚ್ಚು ಪ್ರಭಾವ ಬೀರಿತ್ತು ಎಂಬುದಕ್ಕೆ ನಿಟ್ಟೂರಿನಲ್ಲಿ ನಿರ್ಮಾಣಗೊಂಡಿರುವ ಶಾಂತಿನಾಥ ಜಿನಾಲಯವೇ ಪ್ರಮುಖ ಸಾಕ್ಷಿ ಆಗಿದೆ.

ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡಿರುವ ಶಾಂತಿನಾಥ ಜಿನಾಲಯವು ಪ್ರಸಿದ್ಧವಿದ್ದು, ನಿಟ್ಟೂರಿನ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ಎತ್ತರವಾದ ವೇದಿಕೆಯ ಮೇಲೆ ಹೊಯ್ಸಳರ ವಾಸ್ತು ಮತ್ತು ಶಿಲ್ಪಕಲಾ ಲಕ್ಷಣಗಳನ್ನು ಮೈಗೂಡಿಸಿಕೊಂಡು ನಿರ್ಮಾಣಗೊಂಡಿದೆ. ವಾಸ್ತು ವಿನ್ಯಾಸದಂತೆ ಗರ್ಭಗುಡಿ, ಸುಖನಾಸಿ, ನವರಂಗ ಮತ್ತು ಮುಖಮಂಟಪಗಳನ್ನು ಒಳಗೊಂಡಿದೆ.

ಈ ಜಿನಾಲಯದ ಗರ್ಭಗುಡಿಯಲ್ಲಿ ಜೈನಧರ್ಮದ ಪ್ರಥಮ ತೀರ್ಥಂಕರನಾದ ಆದಿನಾಥನನ್ನು ನಿರಾಭರಣವಾಗಿ ಕುಳಿತ ಭಂಗಿಯಲ್ಲಿ ಪ್ರತಿಷ್ಠಾಪಿಸಲಾಗಿತ್ತು. ಆದರೆ ಈ ಮೂಲ ವಿಗ್ರಹ ಭಗ್ನಗೊಂಡಿರುವುದರಿಂದ ಜಿನಾಲಯದ ಮುಂಭಾಗದಲ್ಲಿ ಇಡಲಾಗಿದೆ. ಪ್ರಸ್ತುತ ಗರ್ಭಗೃಹದಲ್ಲಿ ಜೈನರ ೧೬ನೇ ತೀರ್ಥಂಕರನಾದ ಶಾಂತಿನಾಥನ ಮೈ ಮಣಿಸದೆ ನಿಂತ ಕಾಯೋತ್ಸರ್ಗ ಭಂಗಿಯ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಶಾಂತಿನಾಥನ ವಿಗ್ರಹದ ಹಿಂದೆ ಹಿತ್ತಾಳೆಯಿಂದ ಮಾಡಿರುವ ಪ್ರಭಾವಳಿಯನ್ನು ಇಡಲಾಗಿದೆ.

ಗರ್ಭಗುಡಿಗೆ ಸಮಾನಾಂತರವಾಗಿ ಸುಖನಾಸಿ ಕಂಡು ಬರುತ್ತದೆ. ಸುಖನಾಸಿಯನ್ನು ದಾಟಿ ಮುಂದೆ ಬಂದರೆ ಕಂಡು ಬರುವುದೇ ನವರಂಗ, ನವರಂಗ ಇಡೀ ಜಿನಾಲಯದಲ್ಲೇ ಹೆಚ್ಚು ಮಹತ್ವವನ್ನು ಪಡೆದುಕೊಂಡಿದೆ. ಇದರ ಮೇಲ್ಛಾವಣಿಯ ಒಳಭಾಗದಲ್ಲಿ ಒಂಬತ್ತು ಅಂಕಣಗಳಿವೆ ಪ್ರತಿ ಅಂಕಣದಲ್ಲಿಯೂ ಒಂದೊಂದು ಆಕರ್ಷಕ ಸೂಕ್ಷ್ಮ ಕೆತ್ತನೆಯಿಂದ ಕೂಡಿರುವ ಭುವನೇಶ್ವರಿಗಳಿವೆ. ಕಪ್ಪು ಬಳಪದ ಕಲ್ಲಿನಿಂದ ಮಾಡಿರುವ ನಾಲ್ಕು ಕಂಬಗಳಿದ್ದು, ಇಡೀ ನವರಂಗದ ಮೇಲ್ಛಾವಣಿಯನ್ನು ಒತ್ತು ನಿಂತಿವೆ. ಇವು ಸ್ಥೂಲವಾದ ನೋಟಕ್ಕೆ ಒಂದರಂತೆ ಇನ್ನೊಂದು ಕಂಡರೂ ಅವುಗಳ ಕೆತ್ತನೆ ಕೆಲಸಗಳಲ್ಲಿ ವೈವಿಧ್ಯ ಇದೆ.

ಕಂಬಗಳ ಕೆಳಭಾಗ ಚಚ್ಚೌಕವಾಗಿದ್ದು ಕಾಂಡ ಭಾಗ ತಲೆಕೆಳಗಾದ ಗಂಟೆಯಾಕಾರದಲ್ಲಿದ್ದು ಅದರ ಮೇಲೆ ವೃತ್ತಾಕಾರವನ್ನೊಳಗೊಂಡ ಭಾಗಗಳು ಅದರ ಮೇಲೆ ಚಚ್ಚೌಕಾರದ ಚಾಚುಪೀಠಗಳು, ಅದರ ಮೇಲೆ ಬೋಧಿಗೆಗಳನ್ನು ಒಳಗೊಂಡಿದೆ. ಈ ನಾಲ್ಕು ಕಂಬಗಳ ಮಧ್ಯದ ಮೇಲ್ಛಾವಣಿಯಲ್ಲಿರುವ ಭುವನೇಶ್ವರಿ ಅತ್ಯಂತ ಸುಂದರವಾಗಿದ್ದು ಸೂಕ್ಷ್ಮ ಕೆತ್ತನೆಯಿಂದ ಕೂಡಿದೆ. ಇದು ೭ ಅಡಿ ಉದ್ದ ೭ ಅಡಿ ಅಗಲವಾಗಿದ್ದು ೪ ಅಡಿ ಆಳವಾಗಿದೆ ಈ ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕ ಮೂರ್ತಿಗಳು ಕಂಡುಬರುತ್ತವೆ. ಪೂರ್ವದಲ್ಲಿ ಇಂದ್ರ, ಆಗ್ನೇಯ ಅಗ್ನಿ, ದಕ್ಷಿಣ ಯಮ, ನೈರುತ್ಯ ನಿರುತಿ, ಪಶ್ಚಿಮ ವರುಣ, ವಾಯವ್ಯ ವಾಯು, ಉತ್ತರ ಕುಬೇರ, ಈಶಾನ್ಯ ಈಶ್ವರ ಮತ್ತು ಪರಿವಾರದವರು ಕಂಡುಬರುತ್ತಾರೆ. ಇದೇ ಭುವನೇಶ್ವರಿಯಲ್ಲಿ ಯಕ್ಷಿಯರಾದ ಕುಷ್ಮಾಂಡಿನಿ, ಪದ್ಮಾವತಿ, ಸರಸ್ವತಿ, ಜ್ವಾಲಾಮಾಲಿನಿಯರು ಇದ್ದಾರೆ. ಜ್ವಾಲಾಮುಖಿ ಉತ್ತರ

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩೨೭೬.







ಭಾಗದಲ್ಲಿ, ದಕ್ಷಿಣಾಭಿಮುಖವಾಗಿದ್ದು ಇಂದಿಗೂ ಕೂಡ ದಿನನಿತ್ಯವೂ ಪೂಜೆ ಪುನಸ್ಕಾರಗಳು ನಡೆಯುತ್ತವೆ.

ನವರಂಗದ ಒಂಬತ್ತು ಭುವನೇಶ್ವರಿಗಳಲ್ಲಿ ೭೭ ಜನ ಭೂತ, ಭವಿಷ್ಯತ್, ವರ್ತಮಾನ ಕಾಲದ ತೀರ್ಥಂಕರರ ಮೂರ್ತಿಗಳಿವೆ. ವರ್ತಮಾನಕಾಲದ ತೀರ್ಥಂಕರರುಗಳನ್ನು ಗುರುತಿಸಲು ಅವರ ಲಾಂಛನಗಳು ಮೂರನೇ ಅಂಕಣದಲ್ಲಿ ಕಂಡುಬರುತ್ತದೆ. ಮಧ್ಯ ಅಂಕಣದ ಬಲಭಾಗದ ಭುವನೇಶ್ವರಿಯಲ್ಲಿ ಜೈನಮುನಿಗಳಿಗೆ ಆಹಾರ ಧಾನ್ಯಗಳನ್ನು ದಾನ ಮಾಡುತ್ತಿರುವ ಅಪೂರ್ವವಾದ ಕೆತ್ತನೆ ಇದೆ. ಇದರ ಮುಂದಿನ ಅಂಕಣದ ಭುವನೇಶ್ವರಿಯಲ್ಲಿ ವೇಣು, ವೀಣೆ, ಮೃದಂಗ ಮದ್ದಳೆಯಂತಹ ವಾದ್ಯಗಳನ್ನು ನುಡಿಸುತ್ತಿರುವ ವಾದ್ಯಗಾರರ ಮತ್ತು ನೃತ್ಯಗಳ ಶಿಲ್ಪಗಳಿವೆ. ಹೂ ಬಳ್ಳಿಗಳನ್ನು ಶಿಲ್ಪಿಯು ಸುಂದರವಾಗಿ ಕಂಡರಿಸಿದ್ದಾನೆ ನವರಂಗದ ಬಾಗಿಲಿನ ಎಡ ಮತ್ತು ಬಲಭಾಗದಲ್ಲಿ ಚಂಡ, ಮಹಾಚಂಡ, ದ್ವಾರಪಾಲಕ ವಿಗ್ರಹಗಳಿದ್ದು ಬಾಗಿಲಿನ ಮೇಲ್ಭಾಗದಲ್ಲಿ ೨೦೦೮ರಲ್ಲಿ ಶಾಂತಿನಾಥನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ.

ನವರಂಗದ ಮುಂದಿನ ಭಾಗವಾದ ಮಂಟಪದ ಬಲಭಾಗದಲ್ಲಿ ಬ್ರಹ್ಮಯಕ್ಷ ಮತ್ತು ಎಡಭಾಗದಲ್ಲಿ ಕಮಲಾಕಾರ







ೀಠಸ್ಥಳಾಗಿರುವ ಪದ್ಮಾವತಿಯ ಗುಡಿಗಳು ಕಂಡುಬರುತ್ತವೆ. ಮುಂಟಪ ಸಾಧಾರಣವಾಗಿದ್ದು ಮೇಲ್ಛಾವಣಿಯನ್ನು ಒತ್ತು ಂತಿರುವ ಒಂಬತ್ತು ಕಂಬಗಳಿದ್ದು ಆರುಕೋನ, ಅಷ್ಠಕೋನ, ಹದಿನಾರುಕೋನ, ಮೂವತ್ತೆರಡು ಕೋನ, ನಕ್ಷತ್ರ ಕಮಲ ಗಳಂತೆ ಒಂದೊಂದು ಕಂಬವು ವಿಭಿನ್ನ ರೀತಿಯಲ್ಲಿ ಅಲಂಕಾರ ದಿಂದ ಕೂಡಿದ್ದು ಮನಮೋಹಕವಾಗಿವೆ ಕಂಬಗಳ ಪೀಠದ ಚಚ್ಚೌಕಾರದಲ್ಲಿ. ಧರ್ಮ ಸಂಕೇತಗಳಾದ ಸ್ವಸ್ತಿಕ್, ಅಭಯಹಸ್ತ ಮುಂತಾದ ಸಂಕೇತಗಳನ್ನು ಚಿತ್ರಿಸಿದ್ದಾರೆ. ಈ ಕಂಬಗಳ ಕೆತ್ತನೆಯಲ್ಲಿ ಶಿಲ್ಪಿಯ ಕೈ ಚಳಕ ಎದ್ದು ಕಾಣುತ್ತದೆ.

ಜಿನಾಲಯದಿಂದ ಹೊರಬಂದ ತಕ್ಷಣ ಎದುರಿಗೆ ಗೋಚರಿಸುವುದೇ ಮಾನಸ್ತಂಭ. ಇದು ಸುಮಾರು ಎರಡು ಅಡಿ ಎತ್ತರದ ಪೀಠದ ಮೇಲಿದ್ದು ಸುಮಾರು ೪೦ ಅಡಿ ಎತ್ತರವಾಗಿದೆ. ಸ್ತಂಭದ ಮೇಲ್ತುದಿಯಲ್ಲಿ ಒಂದು ಮಂಟಪ ಇದೆ. ಅದರ ಒಳಗೆ ನಾಲ್ಕು ಕಡೆಗೂ ಅಭಿಮುಖವಾಗಿರುವ ಜಿನಮೂರ್ತಿಗಳಿವೆ. ಸ್ತಂಭದ ಕೆಳಭಾಗದಲ್ಲಿ ಬ್ರಹ್ಮದೇವನ ಮೂರ್ತಿ ಇದೆ.

ಜಿನಾಲಯದ ಹೊರಭಿತ್ತಿಯನ್ನು ಅವಲೋಕಿಸಿದಾಗ ಚಿಕ್ಕದಾದ ಪಂಜರ ಕೋಷ್ಟಗಳು ಇದ್ದು ಅವುಗಳಲ್ಲಿ ಜೈನ ತೀರ್ಥಂಕರರ ನಿಂತ ಭಂಗಿಯ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದಾರೆ.

ಜಿನಾಲಯದ ಎಡಭಾಗ ಮತ್ತು ಬಲಭಾಗದ ಹೊರಭಿತ್ತಿಯಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಾರೆ. ಕೋಷ್ಟಗಳ ಮೇಲೆ ಸುಂದರವಾದ ಕಿರುಗೋಪುರಗಳು ಕಂಡುಬರುತ್ತವೆ. ಇತರ ಕೋಷ್ಟಗಳಲ್ಲಿನ ಕೆಲವು ಜಿನಮೂರ್ತಿ ಗಳು ಭಗ್ನಗೊಂಡಿವೆ. ಜಿನಾಲಯವು ವಿನಾಶದ ಅಂಚಿನಲ್ಲಿ ರುವುದರಿಂದ ಜಿನಾಲಯದ ಹಿಂಭಾಗದ ಗೋಡೆಗೆ ಕಲ್ಲಿನಿಂದ ಎದ್ದು ಗೋಡೆಗಳನ್ನು ಕಟ್ಟಲಾಗಿದೆ. ಈ ಜಿನಾಲಯ ಶಾಸನಾಧಾರಿತವಾಗಿದ್ದು ಮೂಲಸಂಘದ ಬಸದಿಯಾಗಿದೆ. ಅದೇ ಜಿನಾಲಯದಲ್ಲಿರುವ ಶಾಸನ ತಿಳಿಸುವಂತೆ ಮೂಲಸಂಘದ ಶಾಖೆಯಾದ ದೇಶೀಗಣ, ಗಣದ ಶಾಖೆ ಯಾದ ಪುಸ್ತಕಗಚ್ಛ ಇದರ ಶಾಖೆಯಾದ ಕೊಂಡ ಕುಂದಾನ್ವಯದ ಪ್ರಕಾರ ದೇವರಗುಡ್ಡಿ, ಮಾಳವಸೆಟ್ಟಿಕಬ್ಬೆಯರ ಮಗನಾದ ಮಲ್ಲಿಸೆಟ್ಟಿ ಕ್ರಿ.ಶ. ೧೨೧೯ರಲ್ಲಿ ಈ ಜಿನಾಲಯದ (ಚೈತ್ಯಾಲಯದ) ಹೊರಗೋಡೆಯ ಸುತ್ತಾ ಪ್ರತಿಮೆಗಳನ್ನು ಪ್ರಮಾದಿ ಸಂವತ್ಸರದ ಜೇಷ್ಠ ಶುದ್ಧ ಪಂಚಮಿಯಂದು ಪ್ರತಿಷ್ಠಾಪನೆ ಮಾಡಿಸಿರುವುದನ್ನು ಉಲ್ಲೇಖಿಸುತ್ತದೆ. ಈ ಪ್ರತಿಮೆಗಳು ಜಿನಾಲಯದ ಹೊರಭಿತ್ತಿಯ ಸೌಂದರ್ಯವನ್ನು ಹೆಚ್ಚಿಸಿವೆ.

ಜಿನಾಲಯದ ಉತ್ತರ ಕಡೆಯಲ್ಲಿ ಸಲ್ಲೇಖನ ವ್ರತ ಕೈಗೊಂಡು. ಪ್ರಾಣ ತ್ಯಜಿಸಿರುವುದರ ನೆನಪಿಗಾಗಿ ನಿಷದಿಕಲ್ಲುಗಳಿವೆ. ಇಂತಹ ನಿಷದಿಗಳನ್ನು ನಿಸಿದಿಗೆ, ನಿಶೀದಿಗೆ, ನಿಸಿದಿ, ನಿಶೀದಿಕಾ, ನಿಶಿದಿಗೆ, ನಿಷಿದ್ಯಾಲಯ ಎಂದು ಕರೆಯುತ್ತಾರೆ. ಒಂದೇ ಕಲ್ಲಿನಲ್ಲಿ ಮೂರು ನಿಷದಿಗಳಿವೆ. ಅತ್ತೆ ಮಾಳವ್ವೆ ಮತ್ತು ಸೊಸೆ ಚೌಡಿಯಕ್ಕರ ನಿಷದಿ ಅದೇ ಕಲ್ಲಿನ ಎಡಭಾಗದಲ್ಲಿ ಭೂಚವ್ವೆಯ ನಿಷದಿ, ಅದೇ ಕಲ್ಲಿನ ಬಲಭಾಗದಲ್ಲಿ ಮಲ್ಲಿಸೆಟ್ಟಿ ಮತ್ತು ಆತನ ಪ್ರೀತಿಯ ಮಗನಾದ ಮಾಳಯ್ಯ ಎಂಬ ಇಬ್ಬರ ನಿಷದಿ ವಿಚಾರಗಳನ್ನು ತಿಳಿಸುತ್ತದೆ. ಈ ನಿಷದಿಗಳು ಜೈನರ ಪಾವಿತ್ರ್ಯತೆಯನ್ನು ತೋರಿಸುತ್ತದೆ. ಜೈನ ಮುನಿಗಳ ವ್ರತಾಚರಣೆಯು ಮರಣದ ಸಂಕೇತವಾಗಿ ಗೋಚರಿಸುತ್ತವೆ.

ಜಿನಾಲಯದ ಹೊರಭಾಗದಲ್ಲಿ ನಿಂತು ತಲೆ ಎತ್ತಿ ನೋಡಿದರೆ ಜಿನಾಲಯದ ಗರ್ಭಗೃಹದ ಮೇಲೆ ಶಿಖರವಿದೆ. ಮುಖಮಂಟಪದ ಮೇಲ್ಛಾವಣಿಯ ಮೇಲಿನ ಕೋಷ್ಠದಲ್ಲಿ ನಿಂತ ಭಂಗಿಯ ಶಾಂತಿನಾಥನ ಮೂರ್ತಿಯನ್ನು ಪ್ರತಿಷ್ಠಾಪಿಸ ಲಾಗಿದೆ. ಜಿನಾಲಯದ ಸುತ್ತಲು ಪ್ರಕಾರಗೋಡೆ ಇದೆ.

ಈ ಜಿನಾಲಯದಲ್ಲಿ ಬರಹವುಳ್ಳ ತಾಳೆಗರಿಯ ಒಂದು ಕಟ್ಟು ಇದ್ದು ಅನಂತನೋಂಪಿ ವ್ರತದ (ಮಂತ್ರ) ಶ್ಲೋಕವನ್ನು ಒಳಗೊಂಡಿದೆ. ಈ ಪ್ರದೇಶವನ್ನೊಳಗೊಂಡಂತೆ ಇತರ ಭಾಗದಲ್ಲಿ ಜೈನಧರ್ಮ ಪ್ರಬಲವಾಗಿತ್ತು ಎಂಬುದಕ್ಕೆ ಈ ಜಿನಾಲಯವೇ ಪ್ರಮುಖ ಆಧಾರ ಸ್ತಂಭವಾಗಿದೆ.

## ಆಧಾರಸೂಚಿ


೧. ಬಿ.ಎಲ್. ರೈಸ್., **ಎಪಿಗ್ರಾಫಿಯಾ ಕರ್ನಾಟಿಕಾ,** ಸಂ. ೧೨.

೨. ಡಾ. ಎಂ. ಚಿದಾನಂದಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೪.

೩. ಕವಿತಾಕೃಷ್ಣ (ಸಂ)., **ಜಯಮಂಗಲಿ,** ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨.

೪. ಡಾ. ಕೆ.ಎಲ್.ಎನ್. ಮೂರ್ತಿ., **ಕರ್ನಾಟಕದ ಕಲೆ ಮತ್ತು ವಾಸ್ತುಶಿಲ್ಪ,** ರಂಜಿತಾ ಪ್ರಕಾಶನ, ತುಮಕೂರು, ೧೯೯೮.

೫. ಡಾ. ಸೂರ್ಯನಾಥಕಾಮತ್., ಡಾ. ದೇವರಕೊಂಡಾರೆಡ್ಡಿ (ಸಂ)., **ಇತಿಹಾಸದರ್ಶನ,** ಸಂಪುಟ-೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೪.

೬. ಕೆ. ಶಾರದ., **ಕರ್ನಾಟಕದಲ್ಲಿ ಜೈನಧರ್ಮ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೭. **ಪ್ರಜಾವಾಣಿ** ದಿನಪತ್ರಿಕೆ, ೨-೯-೨೦೧೦.




# ಹಗರಟಗಿ ದೇವಾಲಯಗಳು

ರಮೇಶನಾಯಕ*

**ಯಾ**ದಗಿರಿ ಜಿಲ್ಲೆಯ ಸುರಪುರ ತಾಲೂಕಿನ ನೈಋತ್ಯ ಭಾಗದಲ್ಲಿರುವ ಹಳ್ಳಿಗಳು, ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಆಗ್ನೇಯ ಮತ್ತು ಮುದ್ದೇಬಿಹಾಳ ತಾಲ್ಲೂಕಿನ ಈಶಾನ್ಯ ಭಾಗದಲ್ಲಿರುವ ಕೆಲವು ಹಳ್ಳಿಗಳು ಅಂದು ಪ್ರಾಚೀನ ಆಡಳಿತ ವಿಭಾಗವಾಗಿದ್ದ ಹಗರಟಗಿ-೩೦೦ರಲ್ಲಿದ್ದವು. ಈ ವಿಭಾಗಕ್ಕೆ ಹಗರಟಗಿಯೇ ಕೇಂದ್ರಸ್ಥಾನವಾಗಿತ್ತು.

ಕಲ್ಯಾಣದ ಚಾಲುಕ್ಯರ ಪ್ರಖ್ಯಾತ ಅರಸ ಆರನೆಯ ವಿಕ್ರಮಾದಿತ್ಯನ ಕಾಲದ ಕ್ರಿ.ಶ. ೧೧೦೨ರ ಶಾಸನವೇ ಹಗರಟಗಿ ಅಗ್ರಹಾರಕ್ಕೆ ಸಂಬಂಧಿಸಿದ ವಿವರ ನೀಡುವ ಅತೀ ಪ್ರಾಚೀನ ಶಾಸನವಾಗಿದೆ. ಈತನ ಮಹಾಪ್ರಧಾನ ದಂಡನಾಯಕ, ಅಹಮಲ್ಲರಸನು ಹಗರಟ್ಟಿಗೆಯಲ್ಲಿರುವ ದೇವಾಲಯಕ್ಕೆ ದಾನ ನೀಡಿರುವ ಸಂಗತಿಯನ್ನು ಉಲ್ಲೇಖಿಸುತ್ತದೆ. ಈ ಶಾಸನವು ಗ್ರಾಮದ ಉತ್ತರಕ್ಕಿರುವ ಹೊಲದಲ್ಲಿರುವ ಬಸಪ್ಪ (ಬಸವಣ್ಣ)ನ ಗುಡಿಯಲ್ಲಿ ಇದೆ. (ಸುರಪುರ ತಾಲೂಕಿನ ಶಾಸನಗಳು, ಪುಟ ೧೭೮) ಈ ಶಾಸನದಿಂದ ನಮಗೆ ತಿಳಿಯಬಹುದಾದ ಬಹುಮುಖ್ಯ ಸಂಗತಿ ಎಂದರೆ ಕಿ.ಶ. ೧೧೦೨ರಲ್ಲಿಯೇ ಸಂಪೂರ್ಣ ಪ್ರಮಾಣದಲ್ಲಿ ನಿರ್ಮಾಣವಾಗಿ ಆ ಪ್ರದೇಶದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದ ಹಗರಟಗಿಯಲ್ಲಿನ ನಖರೇಶ್ವರ ದೇವಾಲಯಕ್ಕೆ ಮುನ್ನೂರು ಮತ್ತರ ಭೂಮಿಯನ್ನು ದಾನವಾಗಿ ಕೊಟ್ಟಿದ್ದು. ಅಂದರೆ ೧೧ನೇ ಶತಮಾನಕ್ಕಿಂತ ಪೂರ್ವದಲ್ಲಿಯೇ ಹಗರಟಗಿಯ ಅಗ್ರಹಾರದಲ್ಲಿ ದೇವಾಲಯ ನಿರ್ಮಾಣ ಸಂಬಂಧಿ ಚಟುವಟಿಕೆಗಳು ಭರದಿಂದ ಪ್ರಾರಂಭವಾಗಿರುವ ಸಾಧ್ಯತೆಗಳು ನಿಚ್ಚಳವಾಗಿವೆ. ಇಂಥ ಉಲ್ಲೇಖಕ್ಕೆ ಆಧಾರ ವೆಂಬಂತೆ ಹಗರಟಗಿ-೩೦೦ರ ಆಡಳಿತ ವಿಭಾಗಕ್ಕೆ ಹೊಂದಿ ಕೊಂಡಂತೆ ವಿಸ್ತಾರವಾಗಿ ಹರಡಿಕೊಂಡಿದ್ದ ತರ್ದವಾಡಿ-೧೦೦೦ ಆಡಳಿತ ವಿಭಾಗದಲ್ಲಿ ಈ ಸಂಬಂಧದ ಚಟುವಟಿಕೆ ಗಳು (ದೇವಾಲಯ ನಿರ್ಮಾಣ) ಕಾರ್ಯಗತಗೊಂಡಿರುವ ಸ್ಪಷ್ಟವಾದ ಉಲ್ಲೇಖವನ್ನು ನೋಡಬಹುದಾಗಿದೆ.

ಪ್ರಾಚೀನ ಹಗರಟಗಿ ಅಗ್ರಹಾರವು ಕೋಟೆಯಿಂದ ಆವೃತವಾಗಿತ್ತು. ಇದಕ್ಕೆ ಆಧಾರಗಳಾಗಿ ಗ್ರಾಮದ ನಾಲ್ಕು ದಿಕ್ಕಿನಲ್ಲಿ ಕೋಟೆಯ (ಅಗಸಿ) ಬಾಗಿಲುಗಳ ಕುರುಹುಗಳನ್ನು ಈವರೆಗೂ ಕಾಣುತ್ತೇವೆ. ವಿಶಾಲವಾಗಿ ವಿಸ್ತರಿಸಿಕೊಂಡಿದ್ದ ಪ್ರಾಚೀನ ಅಗ್ರಹಾರದ ಭೌಗೋಳಿಕ ಗಡಿಯ ಆಚೆಗೂ ಈ ಪ್ರಾಚೀನ ದೇವಾಲಯಗಳನ್ನು ನಿರ್ಮಿಸಲಾಗಿದೆ. ಸದ್ಯ ಗ್ರಾಮದಿಂದ ದೂರದಲ್ಲಿರುವ ರಾಮಲಿಂಗೇಶ್ವರ ಮಠದ ಹತ್ತಿರ ಇರುವ ಹಾಗೂ ಸ್ಥಳೀಯವಾಗಿ 'ಋಷಿಗುಡಿ' ಎಂದು ಕರೆಯುತ್ತಿರುವ ಈ ಗುಡಿಯು ಗ್ರಾಮದಿಂದ ಸುಮಾರು ಮೂರು ಕಿಲೋಮೀಟರ್ ದೂರದಲ್ಲಿ ನಿರ್ಮಾಣವಾಗಿದೆ.

ದೇವಾಲಯಗಳು ಇಲ್ಲಿ ಸಿಕ್ಕಿರುವ ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಅವುಗಳಲ್ಲಿ ಮುಖ್ಯವಾಗಿ ಸ್ವಯಂಭು ಭೀಮೇಶ್ವರ, ಲಕ್ಕಣೇಶ್ವರ, ಮಲ್ಲಿಕಾರ್ಜುನ, ತ್ರಿಪುರಾಂತಕ, ತ್ರಿಕೂಟೇಶ್ವರ, ಸಿಡಿಲಭಾವಿ ರಾಮನಾಥನಿದ್ದ ಪಂಚಸ್ಥಾನ, ನಖರೇಶ್ವರ, ಗವರೇಶ್ವರ ಹಾಗೂ ಭೈರವನ ದೇವಾಲಯ ಗಳಿದ್ದವೆಂದು ಉಲ್ಲೇಖಿಸಲಾಗಿದೆ. ಆದರೆ ಸದ್ಯ ಮೇಲೆ ಉಲ್ಲೇಖಿಸಿದ ಹೆಸರುಗಳಿಂದ ಪ್ರಸ್ತುತ ದೇವಾಲಯಗಳನ್ನು ಹೆಸರಿಸಿರುವುದಿಲ್ಲ. ಭೀಮೇಶ್ವರ (ಭೀಮನಗುಡಿ) ದೇವಾಲಯದ ಹೆಸರನ್ನು ಹೊರತುಪಡಿಸಿ ಪ್ರಾಚೀನ ಕಾಲದಲ್ಲಿ ನಿರ್ಮಾಣವಾದ ಎಲ್ಲ ದೇವಾಲಯಗಳ ಹೆಸರನ್ನು ಸ್ಥಳೀಯವಾಗಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗು ತ್ತದೆ. ಬಸವಣ್ಣ, ಗಂಗಾಧರೇಶ್ವರ, ಕರೆಮ್ಮ, ಅಣ್ಣ-ತಂಗಿಯರ ಗುಡಿ, ರಾಮಲಿಂಗೇಶ್ವರ ಮಠದ ಹತ್ತಿರ ಇರುವ ಋಷಿಗುಡಿ ಹಾಗೂ ಧರ್ಮರಾಜನ ಗುಡಿಯ ಪಕ್ಕದಲ್ಲಿರುವ ಹನುಮಂತನ ಗುಡಿ ಅಲ್ಲದೇ ಇದೇ ಗ್ರಾಮದಲ್ಲಿರುವ ವೆಂಕಟರಾಮನ ಗುಡಿಗಳು ಪ್ರಾಚೀನ ಕಾಲದಲ್ಲಿ ನಿರ್ಮಾಣವಾಗಿವೆ.

ಶಾಸನಗಳ ಹಿನ್ನೆಲೆಯಲ್ಲಿ ವಿವರಿಸುವುದಾದರೆ ಹಗರಟಗಿ-೩೦೦ರ ಆಡಳಿತ ವಿಭಾಗವು ಕಲ್ಯಾಣದ ಚಾಲುಕ್ಯ ಅರಸರ ಕಾಲಾವಧಿಯಲ್ಲಿ ಸ್ಪಷ್ಟತೆಯನ್ನು ಪಡೆದಿರಬಹುದು.

---

* ಸಹ ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬.

೧೧ನೇ ಶತಮಾನದ ಪಾರಂಭ ಕಾಲದಿಂದ ಹಗರಟಗಿಯು ಒಂದು ಅಗ್ರಹಾರವಾಗಿಯೂ ಹಾಗೂ ಪಸಿದ್ಧ ವ್ಯಾಪಾರಿ ಪಟ್ಟಣವಾಗಿ ರೂಪ ಗೊಂಡಿರುವ ಸಾಧ್ಯತೆಗಳಿವೆ. ೧೧-೧೩ನೇ ಶತಮಾನದ ಕಾಲಾವಧಿಯಲ್ಲಿ ಇಲ್ಲಿರುವ ಶಾಸನಗಳಲ್ಲಿ ಹಾಗೂ ಈ ಪರಿಸರದ ಸುತ್ತಲಿನ ಗಾಮಗಳಲ್ಲಿ ನಿರ್ಮಾಣ ಗೊಂಡ ಹೆಚ್ಚಿನ ಶಾಸನಗಳಲ್ಲಿ ಹಗರಟಗಿಯ ಪ್ರಸ್ತಾವವು ಮೇಲಿಂದ ಮೇಲೆ ಬರುತ್ತದೆ. ಶಾಸನಗಳಲ್ಲಿ ಇದನ್ನು ಹಗರಟಗಿ ಪಗರಟಿಗೆ, ಹಗರಟ್ಟಿಗಿ ಅಲ್ಲದೇ ಪಗಲಟೆ-೩೦೦ ಹಾಗೂ ಪಗರಿಟೆ ನಾಡು ಎಂದು ಹೆಸರಿಸಲಾಗಿದೆ. ವ್ಯಾಪಾರಿ ಪಟ್ಟಣವಾಗಿದ್ದ ಹಗರಟಗಿ ಸರ್ವನಮಸ್ಯದ ಉತ್ತಮ ಅಗಹಾರವಾಗಿತ್ತೆಂದು ಶಾಸನಗಳಲ್ಲಿ ಉಲ್ಲೇಖವಾಗಿದೆ. ಕಿ.ಶ. ೧೦೯೨ರ ಶಾಸನವೇ ಈ ಗಾಮಕ್ಕೆ ಸಂಬಂಧಿಸಿದ ಪಾಚೀನ ಶಾಸನವಾಗಿದೆ. ಕಲ್ಯಾಣದ ಚಾಲುಕ್ಯರ ಆರನೆಯ ವಿಕಮಾದಿತ್ಯನ ಮಹಾಪಧಾನ ದಂಡನಾಯಕ ನಾಗಿದ್ದ ಆಹವಮಲ್ಲರಸ ಸರ್ವನಮ ಸ್ಯದಗಹಾರ ಹಗರಿಟ್ಟಿಗೆಯ ನಖರೇಶ್ವರ ದೇವರಿಗೆ ನಿತ್ಯನಿರ್ವಹಣೆಗಾಗಿ ಭೂಮಿಯನ್ನು ದತ್ತಿಯಾಗಿ ಬಿಟ್ಟ ಉಲ್ಲೇಖವನ್ನು ಈ ಶಾಸನವು ವಿವರಿಸುತ್ತವೆ. ಅದೇ ಅರಸನ ಇನ್ನೊಂದು ಶಾಸನವು ಕಿ.ಶ. ೧೧೨೩ರ ಕಾಲಕ್ಕೆ ಸಂಬಂಧಿಸಿದ್ದು ಇದು ಹಗರಟಗಿ ಮತ್ತು ಬೂದಿಹಾಳ ರಸ್ತೆಯ ಬಲಭಾಗದಲ್ಲಿ ನೀಲಕಂಠಗೌಡರ ಜಮೀನಿನಲ್ಲಿ ಇರುವ ಕರ್ಣನ ಗುಡಿಯ ಮುಂಭಾಗದಲ್ಲಿ ಈ ಶಾಸನ ಹಗರಟಗಿ ಅಗಹಾರದಲ್ಲಿರುವ ನಖರೇಶ್ವರ ದೇವರಿಗೆ ಭೂಮಿ, ನಿವೇಶನ ಹಾಗೂ ಸುಂಕ-ದತ್ತಿಗಳನ್ನು ನಿರ್ವಹಣೆಗಾಗಿ ಬಿಟ್ಟಿರುವ ಸಂಗತಿಗಳನ್ನು ವಿವರಿಸುತ್ತದೆ. ಇಲ್ಲಿಯ ಮಹಾಜನಗಳು ನಖರೇಶ್ವರ ದೇವಾಲಯಕ್ಕೆ ತಲಗೆ-೧೦ ಅಡಕೆದಾನ, ನಿವೇಶನ, ಗೊರವಿಯ ಮತ್ತರ ಭೂಮಿಯನ್ನು ನೀಡಿರುವ ಅಪೂರ್ಣ ವಿವರಗಳು ಈ ಶಾಸನದಲ್ಲಿ ದಾಖಲಾಗಿದೆ. ಭಟ್ಟನಾಯಕ ನೆಂಬುವನು ತನ್ನ ಭೂಮಿಯನ್ನು ಧರ್ಮಕಾರ್ಯಗಳ ಪಯುಕ್ತ ನೀಡಿದನೆಂದು ಇದೇ ಶಾಸನ ವಿವರಿಸುತ್ತದೆ. ಕಳ್ಳರ ಗುಡಿಯ ಬಳಿಯ ಶಾಸನದಲ್ಲಿ ಚಂದಿಮರಸನೆಂಬುವನು ಹಗರಟ ಗೆಯ ಮಲ್ಲಿಕಾರ್ಜುನ ದೇವರಿಗೆ ದತ್ತಿಯನ್ನು ಹಾಗೂ ಸುಂಕದತ್ತಿಯನ್ನು ಬಿಟ್ಟ ಮಾಹಿತಿಗಳು ದಾಖಲಾಗಿವೆ. ಲಕ್ಕನೇಶ್ವರ ದೇವಾಲಯದ ಬಳಿಯಿರುವ ತೋಟ ಮತ್ತು ಒಂದು ಮತ್ತರ ಭೂಮಿಯನ್ನು ಈ ದೇವಾಲಯದ ನಿರ್ವಹಣೆಗಾಗಿ ಬಿಟ್ಟಿರುವ ಉಲ್ಲೇಖವಿದೆ. ಅಲ್ಲದೇ ಇದೇ ಶಾಸನದಲ್ಲಿ ಚಂದಿಗೌಡ, ಲೆಂಚಗೌಡ ಮತ್ತು ಬಂಮಗೌಡ ಎಂಬ ವ್ಯಕ್ತಿಗಳ ಹೆಸರುಗಳಿವೆ. ಹಗರಟಗಿಯ ಪಟ್ಟಣದಲ್ಲಿ ಇಷ್ಟೊಂದು ದೇವಾಲಯಗಳು ನಿರ್ಮಾಣವಾಗಿರುವ ಚಟುವಟಿಕೆಗಳ ಹಿಂದೆ ಇಲ್ಲಿರುವ ಬಹುಶಃ ಈ ಪಟ್ಟಣದಲ್ಲಿ ವಾಸವಾಗಿದ್ದ ಕುಶಲಕರ್ಮಿಗಳಾದ ವಿಶ್ವಕರ್ಮರು ಹೆಚ್ಚಿನ ಶಮಪಟ್ಟಿರ ಬಹುದು. ಅವರನ್ನು ಕಾಷ್ಟಕರ್ಮ, ಚಿತಕರ್ಮ, ಮಕುಟ, ಕಂದಳ, ಮಖರಿಕಾ ಪಾತ ಎಂದು ವರ್ಣಿಸಲಾಗಿದೆ. ಲಾಕುಳಾಗಮ ಎಂಬ ಉಲ್ಲೆಖವು ಸಹ ಈ ಶಾಸನದಲ್ಲಿ ವ್ಯಕ್ತವಾಗಿದೆ. ಬಹುಶಃ ಕುಶಲಕರ್ಮಿಗಳು ಈ ಹೆಸರಿನ ಆಗಮನದ ಹಿನ್ನಲೆಯಲ್ಲಿ ತಮ್ಮ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದಿರಬಹುದೆಂಬ ಉಹಾತ್ಮಕ ಅಭಿಪಾಯಗಳಿಗೆ ಹೆಚ್ಚಿನ ಪುಷ್ಠಿವಿ ಸಿಗುತ್ತದೆ. ಭೋಗಾರ ನಖರರ ಬಗೆಗೂ ಉಲ್ಲೇಖಗಳಿವೆ. ಬಹುಶಃ ಇವರು ಬಳೆ ವ್ಯಾಪಾರಿಗಳಾಗಿರ ಬಹುದು. ಇವರು ಹಗರಟಗಿಯಲ್ಲಿರುವ ಶಿವಾಲಯವನ್ನು ಕಟ್ಟಿಸಲು ದತ್ತಿಗಳನ್ನು ನೀಡಿರುವ ಉಲ್ಲೇಖಗಳಿವೆ. ನೂರಿಪ್ಪತ್ತು ಒಕ್ಕಲುದವರು ಸೇರಿ ಶಿವಾಲಯಕ್ಕೆ ದಾನ ನೀಡಿರುವ ಸಂಗತಿಗಳು ಶಾಸನದಲ್ಲಿವೆ. ಅಂದಿನ ಸಮಾಜದಲ್ಲಿ ಎಲ್ಲ ಬಗೆಯ ವೃತ್ತಿಗಾರ ಸಮುದಾಯಗಳು ಹಾಗೂ ಒಕ್ಕಲದವರು ಈ ಪಟ್ಟಣದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಿದ್ದಿರಬಹುದಾದ ಸಂಗತಿಗಳನ್ನು ಇಲ್ಲಿ ಸಿಕ್ಕ ಶಾಸನಗಳ ವಿವರಗಳ ಹಿನ್ನಲೆಯಲ್ಲಿ ಅರ್ಥೈಸಬೇಕಾಗುತ್ತದೆ. ವಿಶ್ವಕರ್ಮರು ಕಟ್ಟಿದ ಈ ದೇವಾಲಯಕ್ಕೆ ಭೋಗಾರ ನಖರರು ಹಾಗೂ ನೂರಿಪ್ಪತ್ತು ಒಕ್ಕಲುದವರು ಸೇರಿ ದಾನ-ದತ್ತಿಗಳನ್ನು ನೀಡುತ್ತಾರೆ. ಅಲ್ಲದೆ ಅಗಹಾರ ಪಟ್ಟಣದಲ್ಲಿದ್ದ ಶಿವದೇವಾಲಯವನ್ನು ನಿರ್ಮಿಸಲು ಕಾರಣರಾಗಿ ರತ್ನಶಿವನೆಂಬ ಪಂಡಿತನ ಕಾಲ್ತೊಳೆದು ಸುಂಕದಾನಗಳನ್ನು ಇಲ್ಲಿನ ಭೋಗಾರ ನಖರರು ಬಿಡುತ್ತಾರೆ. ಈ ಸುಂಕದಾನ ಬಿಡುವಲ್ಲಿ ಸೂಳೆ ಸಜ್ಜನ ಎಂಬ ಪದದ ಉಲ್ಲೇಖವಿದೆ. ಬಹುಶಃ ಅಗಹಾರ ಪಟ್ಟಣದಲ್ಲಿದ್ದ ಸೂಳೆಗೇರಿ ಯಲ್ಲಿದ್ದ ಸ್ತ್ರೀಯೊಬ್ಬಳು ಸಹ ದೇವಾಲಯಕ್ಕೆ ಸುಂಕದಾನ ನೀಡಿರಬಹುದಾಗಿದೆ. ಅಥವಾ ಕಟ್ಟಿದ ದೇವಾಲಯದ ಸೇವೆಗಾಗಿ ಈ ಸೂಳೆ ಸಜ್ಜನ ಎಂಬ ವ್ಯಕ್ತಿಯೋರ್ವಳು ನೇಮಕವಾಗಿರಬಹುದೇ? ಮಧ್ಯ ಕಾಲದಲ್ಲಿನ ಸಾಮಾಜಿಕ ವ್ಯವಸ್ಥೆಯಲ್ಲಿ ಸೂಳೆ ಅಥವ ದೇವಾಲಯದ ಹೆಣ್ಣುಗಳು ಎಂಬ ಉಲ್ಲೇಖಗಳು ಎಲ್ಲ ಪ್ರದೇಶದ ಶಾಸನಗಳಲ್ಲಿ ಬರುತ್ತವೆ. ಅಲ್ಲದೇ ದೇವಾಲಯದ ಪರಿಚಾರಕ ವರ್ಗವಾಗಿದ್ದ ಸೂಳೆಯರು ಸಾಮಾಜಿಕವಾಗಿ ಉತ್ತಮ ಸ್ಥಾನಮಾನ ಹೊಂದಿದ್ದರು. ಹಾಗೂ ಅವರು ಆರ್ಥಿಕವಾಗಿ ಸಧೃಡ ವಾಗಿದ್ದರಿಂದ ದೇವಾಲಯಗಳಿಗೆ ಹಾಗೂ ಸಾಮಾಜಿಕ ಕಾರ್ಯಚಟುವಟಿಕೆಗಳಿಗೆ ವಿಶೇಷ ದಾನ ದತ್ತಿಗಳನ್ನು ನೀಡಲು ಸಶಕ್ತರಾಗಿದ್ದರು. ಈ ಹಿನ್ನಲೆಯಲ್ಲಿ ಹಗರಟಗಿ ಅಗಹಾರ ದಲ್ಲಿದ್ದ ದೇವಾಲಯದ ಹೆಣ್ಣುಗಳು ಇಂಥ ದಾನ ನೀಡಿದ್ದರಲ್ಲಿ ಯಾವ ಆಶ್ಚರ್ಯವಿಲ್ಲ. ಈ ಶಾಸನವು ಅಗ್ರಹಾರದ ಆರ್ಥಿಕ

ವ್ಯವಸ್ಥೆಯನ್ನು ತಿಳಿಹೇಳುವಲ್ಲಿ ಸಹಾಯಕವಾಗಿದೆ. ಅಂದು ಚಲಾವಣೆಗೊಳ್ಳುತ್ತಿದ್ದ ಪ್ರಮುಖ ನಾಣ್ಯಗಳ ಕುರಿತು ಈ ಶಾಸನ ಉಲ್ಲೇಖಿಸಿದೆ. ಹೊನ್, ಹಾಗ, ವೀಸ, ಅರವೀಸ, ಅರೆಕಾಣಿ, ಮರೆಯಕಾಣಿ ಎಂಬ ಮುಂತಾದ ನಾಣ್ಯಗಳ ಹೆಸರುಗಳು ಈ ಶಾಸನದಲ್ಲಿ ವ್ಯಕ್ತವಾಗಿವೆ.

ಗ್ರಾಮದಲ್ಲಿರುವ ಹನುಮಂತನ ಗುಡಿಯಲ್ಲಿರುವ ಕ್ರಿ.ಶ. ೧೨೨೯ರ ಶಾಸನವು ಸೇವುಣ ಇಮ್ಮಡಿ ಸಿಂಘಣನ ಕಾಲಕ್ಕೆ ಸಂಬಂಧಿಸಿದ್ದು. ಹಗರಟಗಿಯು ಕೇತಗಾವುಂಡನ ಇಬ್ಬರು ಮಕ್ಕಳಾದ ರಾವುಣಗಾವುಂಡ ಹಾಗೂ ಸಿಂಗಗಾವುಂಡರು ತಾವು ಪ್ರತಿಷ್ಠಾಪಿಸಿದ ಸಿಡಿಲ ಬಾವಿ ರಾಮನಾಥ ಆಯಿನೂರೇಶ್ವರ, ಬಾಚೇಶ್ವರ, ಕೋಟೇಶ್ವರ ಹಾಗೂ ಚೌಡೇಶ್ವರಿ ದೇವರುಗಳಿಗಿದ್ದ ಪಂಚಸ್ಥಾನದ ಎಲ್ಲಾ ದೇವರುಗಳಿಗೆ ಭೂದಾನ ಮಾಡಿದ ಸಂದರ್ಭದಲ್ಲಿ ಅಲ್ಲಿಯ ೯೨ ಜೇಡ ಹಟ (ಪಟ್ಟೆ)ಗಾರರು ಈ ದೇವರುಗಳಿಗೆ ದಾನ ನೀಡಿದ ಬಗೆಗೆ ಉಲ್ಲೇಖ ನೀಡುತ್ತದೆ. ಈ ಸಮುದಾಯದ ವೃತ್ತಿಗಾರರು ದೇವಾಲಯಗಳಿಗೆ ದಾನ-ದತ್ತಿಗಳು ನೀಡಿರುವ ಹಲವು ಉಲ್ಲೇಖಗಳು ಶಾಸನಗಳಲ್ಲಿ ಸಿಗುತ್ತವೆ.

ಕ್ರಿ.ಶ. ೧೧೪೪ರ ಕಲ್ಯಾಣ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲನ ಕಾಲಕ್ಕೆ ಸಂಬಂಧಿಸಿದ ಶಾಸನವು ಇಲ್ಲಿನ ದೇವಾಲಯಗಳಿಗೆ ದಾನಕೊಟ್ಟ ಉಲ್ಲೇಖವನ್ನು ನೀಡುತ್ತದೆ. ಅಲ್ಲದೇ ಆ ಸಂದರ್ಭದ ಧಾರ್ಮಿಕ ಹಾಗೂ ಆರ್ಥಿಕ ವ್ಯವಸ್ಥೆಯನ್ನು ವಿವರಿಸುವ ಮಹತ್ವದ ಶಾಸನ ಇದಾಗಿದೆ. ಜಾಕಲದೇವಿ, ಕೊಗಳದ ಮಲ್ಲಿದೇವರಸ ಮತ್ತು ಆದಿತ್ಯ ದೇವರಸರಿಂದ ಭೂಮಿಯನ್ನು ಕೊಂಡು ಗಂಗರ ಮಲ್ಲಿಸೆಟ್ಟಿಯು ಸೂರ್ಯರಾಶಿ ಪಂಡಿತರ ಕಾಲ್ತೊಳೆದು ಗವರೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಿರುವ ಉಲ್ಲೇಖವಿದೆ. ಅಲ್ಲದೇ ಈ ಶಾಸನದಲ್ಲಿ ಹಗರಟಗಿಯ-೫೦೦ ಮಹಾಜನರನ್ನು ಹಾಗೂ ಐಹೊಳೆ-೫೦೦ ವರ್ತಕರನ್ನು ವಿಶೇಷವಾಗಿ ವರ್ಣಿಸಲಾಗಿದೆ. ಬಹುಶಃ ಐಹೊಳೆ-೫೦೦ ವರ್ತಕ ಸಂಘದ ಪ್ರಭಾವವು ಈ ಪಟ್ಟಣದ ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಚಟುವಟಿಕೆಗಳ ಮೇಲೆ ಗಾಢವಾದ ಪ್ರಭಾವವನ್ನು ಬೀರುತ್ತಾ ಬಂದಿರಬಹುದು. ಅಥವಾ ಇತಿಹಾಸ ಪ್ರಸಿದ್ಧವಾದ ಈ ವರ್ತಕ ಸಂಘವು ಹಗರಟಗಿಯ ಮಹಾಜನರಿಗೆ ಆದರ್ಶವಾಗಿ ಕಂಡಿರಬಹುದು. ಒಟ್ಟಾರೆ ದೇಶಪ್ರಸಿದ್ಧಿ ಪಡೆದಿದ್ದ ಐಹೊಳೆ -೫೦೦ ವರ್ತಕರ ಸಂಘದ ಜೊತೆಗಿನ ಈ ಪಟ್ಟಣದ ಸಂಬಂಧ ಹಗರಟಗಿಯ ಆಡಳಿತ ವಿಭಾಗದ ಮಹತ್ವವನ್ನು ಹೆಚ್ಚಿಸಿದ್ದರಲ್ಲಿ ಅನುಮಾನವಿಲ್ಲ. ಈ ಸಂದರ್ಭದಲ್ಲಿ ಸಿಂಹಪರ್ಷೆಯ ಮಲೆಯಾಳ ಪಂಡಿತನ ಶಿಷ್ಯ ಸೂರ್ಯರಾಶಿ ಪಂಡಿತನು ಸ್ಥಾನಿಕವಾಗಿದ್ದ ಗವರೇಶ್ವರ ದೇವಾಲಯದ ಸ್ಥಾನದಾಚಾರ್ಯರಾಗಿರುತ್ತಾರೆ. ಅವರ ಕಾಲು ತೊಳೆದು ಕೊಳಗದ ಮಲ್ಲಯ್ಯನು ಮಲ್ಲಿಕಾರ್ಜುನ ದೇವಾಲಯಕ್ಕೆ ದಾನ-ದತ್ತಿ ನೀಡುತ್ತಾನೆ. ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ಸಿಂಹಪರ್ಷೆಯ ಮಲೆಯಾಳ ಪಂಡಿತನ ಶಿಷ್ಯ ಸೂರ್ಯರಾಶಿ ಪಂಡಿತನ ವಿಚಾರ ಮುಖ್ಯವಾದುದು.

### ಕರ್ಣನ ಗುಡಿ

ಈ ದೇವಾಲಯವು ಬೂದಿಹಾಳ-ಹಗರಟಗಿ ರಸ್ತೆಯಲ್ಲಿದೆ. ನೀಲಕಂಠಪ್ಪ ಗೌಡರ ಹೊಲದಲ್ಲಿರುವ ಈ ಗುಡಿಯು ಗ್ರಾಮ ಪ್ರವೇಶಿಸುವ ಮೊದಲೇ ಬಲಭಾಗದಲ್ಲಿ ಕಾಣುತ್ತದೆ. ಯಾವುದೇ ತರಹದ ಸಂರಕ್ಷಣೆ ಇಲ್ಲದೇ ಅನಾದರಕ್ಕೆ ಒಳಗಾಗಿರುವ ಈ ಸ್ಮಾರಕವನ್ನು ಸ್ಥಳೀಯರು ಕರ್ಣನ ಗುಡಿ ಎಂಬ ಹೆಸರಿನಿಂದ ಕರೆಯುತ್ತಾರೆ. ಆದರೆ ಇದರ ಪ್ರಾಚೀನ ಹೆಸರು ಬೇರೆಯದೇ ಆಗಿದ್ದು, ಆ ಬಗೆಗೆ ಹಲವು ಕುತೂಹಲಗಳು ಇಲ್ಲಿರುವ ಶಾಸನಗಳನ್ನು ಗಮನಿಸಿ ದಾಗ ತಿಳಿದುಬರುತ್ತದೆ. ಈ ಗುಡಿಯ ಮುಂಭಾಗದಲ್ಲಿರುವ ಕ್ರಿ.ಶ. ೧೧೨೩ರ ಕಾಲದ ಶಾಸನದಲ್ಲಿ ನಖರೇಶ್ವರ ದೇವರ ಬಗೆಗೆ ಉಲ್ಲೇಖವಿದೆ. ಅಲ್ಲದೇ ಈ ಗ್ರಾಮದ ಹನ್ನೆರಡು ಶಾಸನಗಳಲ್ಲಿ ಅತ್ಯಂತ ಪ್ರಾಚೀನ ಕಾಲಮಾನ ಉಲ್ಲೇಖವುಳ್ಳ ಕ್ರಿ.ಶ. ೧೦೯೨ರ ಶಾಸನದಲ್ಲಿಯೂ ಸಹ ನಖರೇಶ್ವರ ದೇವರ ಬಗೆಗೆ ವಿವರಣೆಗಳಿವೆ. ಹೀಗಾಗಿ ಬಹುಶಃ ಈ ದೇವಾಲಯವೇ (ನಖರೇಶ್ವರ) ಈ ಗ್ರಾಮ ಪರಿಸರದಲ್ಲಿ ಸದ್ಯ ಅಸ್ತಿತ್ವದಲ್ಲಿರುವ ದೇವಾಲಯಗಳಲ್ಲಿಯೇ ಅತೀ ಪ್ರಾಚೀನ ದೇವಾಲಯವಾಗಿರಬಹುದು ಎಂದು ಅಭಿಪ್ರಾಯಿಸಬಹು ದಾಗಿದೆ. ಕಾರಣ ಮಹಾಭಾರತದಲ್ಲಿ ಉಲ್ಲೇಖಿತ ಕರ್ಣನನ್ನು ಸಹ ಪಾಂಡವರ ಹಾಗೂ ಕೌರವರಲ್ಲಿಯೇ ಎಲ್ಲರಿಗಿಂತ ಹಿರಿಯ ವಯಸ್ಸಿನವ ನಾಗಿದ್ದ ಎಂಬುದು ಎಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ. ಆದ್ದರಿಂದ ಸ್ಥಳೀಯರು ತಮ್ಮ ನೆನಪಿನಾಳದಲ್ಲಿ ಪೌರಾಣಿಕ ಆಧಾರಗಳನ್ನು ಇತಿಹಾಸ ಸಂಗತಿಗಳಿಗೆ ಸಮೀಕರಿಸುತ್ತ ಈ ಗುಡಿಯ ಹಿರಿತನವನ್ನು ಪರೋಕ್ಷವಾಗಿ ನೆನಪಿಟ್ಟುಕೊಂಡು ಪ್ರತಿಪಾದಿಸುತ್ತಿದ್ದಾರೆ. ಕಾಲಮಾನದ ಹಿನ್ನಲೆಯಲ್ಲಿ ಇಲ್ಲಿ ನಿರ್ಮಾಣವಾದ ಎಲ್ಲ ದೇವಾಲಯಗಳಲ್ಲಿ ಇದು ಪ್ರಾರಂಭದ ರಚನೆಯಾಗಿದೆ.

ಪೂರ್ವಾಭಿಮುಖವಾಗಿರುವ ಈ ಗುಡಿಯು ಗರ್ಭಗೃಹ, ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ನವರಂಗದ ಹೊರ ಗೋಡೆಯ ಭಾಗಗಳು ಅಲ್ಲಲ್ಲಿ ಬಿದ್ದುಹೋಗಿದ್ದು ಗೋಡೆಯ ಭಾಗಗಳಲ್ಲಿ ಹುಲ್ಲು ಗಿಡಘಂಟಿಗಳು ಬೆಳೆದು ಗುಡಿಯನ್ನು ಇನ್ನು ದುಸ್ಥಿತಿಗೆ ಎಂದು ತಲುಪಿಸಿದಂತಾಗಿದೆ. ಗರ್ಭಗೃಹವು ಬರಿದಾಗಿದ್ದು ಅಲ್ಲಿದ್ದ ಲಿಂಗವು ನಾಶವಾಗಿದೆ. ಗರ್ಭಗೃಹದ ಬಾಗಿಲವಾಡವು ತ್ರಿಶಾಖೆಗಳಿಂದ ಕೂಡಿದ್ದು ಇದೊಂದು ಅತ್ಯಂತ ಸರಳ ರಚನೆ. ಲಲಾಟದಲ್ಲಿ ಗಜಲಕ್ಷ್ಮಿಯ ಉಬ್ಬುಶಿಲ್ಪವಿದೆ. ಇದರ ಅಂತರಾಳವು ಬರಿದಾಗಿದೆ.

ನವರಂಗವು ತಕ್ಕಮಟ್ಟಿಗೆ ವಿಸ್ತಾರವನ್ನು ಪಡೆದಿದ್ದು ಅದರಲ್ಲಿ ಗಿಡ್ಡನೆಯ ಕಂಬಗಳನ್ನು ಕಾಣುತ್ತೇವೆ. ಇಲ್ಲಿರುವ ನಾಲ್ಕು ಕಂಬಗಳ ರಚನಾ ವಿನ್ಯಾಸವನ್ನು ಗಮನಿಸಿದಾಗ ಈ ದೇವಾಲಯವು ಬಹುಶಃ ಹತ್ತನೆಯ ಶತಮಾನದ ಮಧ್ಯಭಾಗದ ನಂತರಾವಧಿಯಲ್ಲಿ ನಿರ್ಮಾಣವಾಗಿದ್ದಿರ ಬಹುದೆಂದು ತಿಳಿಯಬಹುದಾಗಿದೆ. ಸ್ಥಳೀಯವಾಗಿ ಹೇರಳ ಪ್ರಮಾಣದಲ್ಲಿ ಸಿಗುವ ಉಸುಕು ಕಲ್ಲಿನಲ್ಲಿ ನಿರ್ಮಾಣವಾಗಿದ್ದು ಹೀಗಾಗಿ ಈ ದೇವಾಲಯದಲ್ಲಿ ಹೆಚ್ಚಿನ ಅಲಂಕರಣೆಗಳು ಮೂಡಿ ಬಂದಿರುವುದಿಲ್ಲ. ಇದರಲ್ಲಿರುವ ಕಂಬಗಳು ಬುಡ ಭಾಗದಲ್ಲಿ ಚೌಕಾಕಾರವಾಗಿದ್ದು ಮಧ್ಯಭಾಗದಲ್ಲಿ (ದಂಡಾಗ್ರ) ವೃತ್ತ ಪಟ್ಟಿಕೆಗಳನ್ನು ಹೊಂದಿವೆ. ದಂಡಾಗದ ಮೇಲ್ಭಾಗವು ಚೌಕಾಕಾರ ವಾಗಿದ್ದು ಅದರ ಮೇಲ್ಭಾಗದಲ್ಲಿ ಬೋಧಿಗೆಯನ್ನು ಅಳವಡಿಸಲಾಗಿದೆ. ಇದು ಚೌಕೋನದ ಬೋಧಿಗೆ ಯಾಗಿದೆ. ನವರಂಗದಲ್ಲಿ ಎರಡು ಕೋಷ್ಟಕ (ಗೂಡು) ಗಳನ್ನು ರಚಿಸಲಾಗಿದ್ದು ಅವು ಬರಿದಾಗಿವೆ.

ಹೊರಗೋಡೆಯ ಭಾಗವು ಅತ್ಯಂತ ಸರಳವಾಗಿದ್ದು ಹಾಗೂ ಗೋಡೆಯ ಎತ್ತರವು ಕಡಿಮೆ ಇದೆ. ಈ ಗುಡಿಯ ಆಕಾರ ಹಾಗೂ ಗೋಡೆಯನ್ನು ಗಮನಿಸುತ್ತಿದ್ದ ಹಾಗೇ ಇದು ಈ ಪರಿಸರದಲ್ಲಿ (ಹಗರಟಗಿ) ನಿರ್ಮಾಣವಾದ ಪ್ರಾರಂಭದ ಮೊದಲ ದೇವಾಲಯವೆಂಬಂತೆ ಕಂಡುಬರುತ್ತದೆ. ಉಸುಕು ಮಿಶ್ರಿತ ಗ್ರಾನೈಟ್‌ನಲ್ಲಿ ರಚನೆಯಾಗಿರುವ ಈ ದೇವಾಲಯದ ಶಿಖರವು ಫಂಸಾನ ಅಥವಾ ಕದಂಬ– ನಾಗರ ಲಕ್ಷಣವುಳ್ಳದ್ದು. ಗೋಡೆಯ ಮೇಲ್ಭಾಗದ ಮೊದಲ ಸ್ತರದಲ್ಲಿರುವ (ಪ್ರಸ್ತರ ಭಾಗ) ಪಟ್ಟಿ ಶಿಖರದ ಸುತ್ತಲೂ ಮುಂದುವರೆದಿದೆ. ಶಿಖರವು ಮೇಲೆ ಹೋದಂತೆಯು ಅದರ ಅಗಲವು ಕಡಿಮೆಯಾಗುತ್ತಾ ಹೋಗುತ್ತದೆ. ಶಿಖರಕ್ಕೆ ಕಲಶ ಮತ್ತು ಸ್ಥೂಪಿ ಭಾಗಗಳು ಇರುವುದಿಲ್ಲ. ಬಹುಶಃ ಅನೇಕ ಕಾರಣಗಳಿಗಾಗಿ ಈ ಭಾಗಗಳು ಕಳಚಿಕೊಂಡು ನಾಶವಾಗಿರ ಬಹುದು. ಈ ಶಿಖರದಲ್ಲಿ ಸುಖನಾಸದ ರಚನೆ ಇದ್ದಿರ ಬಹುದು. ಆದರೆ ಆ ಭಾಗವು ಸಹ ಕ್ಷೀಣವಾಗಿದ್ದು ಅದರ ಮೇಲೆ ಹುಲ್ಲು ಬೆಳೆದಿದ್ದರಿಂದ ಅದನ್ನು ಸ್ಪಷ್ಟವಾಗಿ ಗುರುತಿಸು ವುದು ಕಷ್ಟವಾಗಿದೆ. ದೇವಾಲಯದ ಅಧಿಷ್ಠಾನದ ಭಾಗವು ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತಿದೆ.

ಈ ದೇವಾಲಯದ ಗರ್ಭಗೃಹದಲ್ಲಿ ಎರಡು ವೀರಗಲ್ಲು ಶಿಲ್ಪಗಳನ್ನಿಡಲಾಗಿದೆ. ಮೂರು ಹಂತದಲ್ಲಿ ಈ ಕಲ್ಲಿನಲ್ಲಿ ಚಿತ್ರರಚನೆಗಳಿವೆ.

## ಮೂರು ಕಳಸದ ಗುಡಿ

ಮೂಲತಃ ಇದೊಂದು ತ್ರಿಕೂಟವಾಗಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯವು ಉತ್ತರ– ದಕ್ಷಿಣಾಭಿಮುಖವಾಗಿರುವ ಇನ್ನೆರಡು ಗರ್ಭಗೃಹಗಳನ್ನು ಸಹ ಹೊಂದಿದೆ. ಇದರ ಮೂರು ಗರ್ಭಗೃಹಗಳು ಶಿಖರ ಗಳನ್ನು ಹೊಂದಿದ್ದರಿಂದ ಇದನ್ನು ಸ್ಥಳೀಯವಾಗಿ ಮೂರು ಕಳಸದ ಗುಡಿ ಎಂದು ರೂಢಿಗತವಾಗಿ ಕರೆಯಲಾಗಿದೆ.

ಮುಖ್ಯಗರ್ಭಗೃಹವು ಪೂರ್ವಾಭಿಮುಖವಾಗಿದ್ದು ಅದರಲ್ಲಿದ್ದ ಪ್ರಾಚೀನ ಲಿಂಗದ ರುದ್ರಭಾಗವನ್ನು ಇದೇ ಗರ್ಭಗೃಹದ ಮೂಲೆಯಲ್ಲಿ ಇಡಲಾಗಿದೆ. ಮೂರು ಗರ್ಭಗೃಹಗಳಲ್ಲಿರುವ ಲಿಂಗಗಳ ಸ್ಥಿತಿ ಶೋಚನೀಯವಾಗಿದೆ. ಬಿದ್ದಿರುವ ಅವಶೇಷಗಳನ್ನು ಪರಿಶೀಲಿಸಿದಾಗ ಇದೊಂದು ಕಲ್ಯಾಣ ಚಾಲುಕ್ಯ ನಿರ್ಮಿತಿ ಎಂಬುದು ತಿಳಿದುಬರುತ್ತದೆ. ಮೂರು ಗರ್ಭಗೃಹಗಳಲ್ಲಿ ಎರಡು ಗರ್ಭಗೃಹಗಳು ಮಾತ್ರ ಉಳಿದುಕೊಂಡಿದ್ದು ಅವುಗಳ ಬಾಗಿಲವಾಡಗಳು ಅತ್ಯಂತ ಸರಳ ರಚನೆಯಿಂದ ಕೂಡಿವೆ. ತ್ರಿಶಾಖೆಯ ಕೆತ್ತನೆಯಿಂದ ಕೂಡಿದ ಈ ಬಾಗಿಲವಾಡಗಳ ಕೆಳಭಾಗದ ಇಕ್ಕೆಲುಗಳಲ್ಲಿಯೂ ಪೂರ್ಣಕುಂಭಗಳನ್ನು ಸುಂದರವಾಗಿ ಕೆತ್ತಲಾಗಿದೆ. ಸಗರ ನಾಡಿನ ಭಾಗದಲ್ಲಿ ರಚನೆಯಾದ ದೇವಾಲಯಗಳಲ್ಲಿ ಇದು ಮೂರು ಕಳಸದ ದೇವಾಲಯದ ಗರ್ಭಗೃಹದ ಬಾಗಿಲವಾಡದಲ್ಲಿನ ಉತ್ತರಾಂಗದ ಭಾಗವು ಸರಳವಾಗಿದ್ದರು ಅದರ ಭಾಗವು ಮುಂಚಾಚಿದಂತೆ ನಿರ್ಮಿಸಲಾಗಿದೆ. ಈ ದೇವಾಲಯದ ಲಲಾಟಗಳು ಸಾಪಾಟವಾಗಿದ್ದು ಯಾವುದೇ ಕೆತ್ತನೆಯನ್ನು ಹೊಂದಿರುವುದಿಲ್ಲ.

ಅಂತರಾಳಗಳು ಸಹ ಬರಿದಾಗಿದೆ. ಇವುಗಳ ಬಾಗಿಲ ವಾಡಗಳು ಗರ್ಭಗೃಹದ ಬಾಗಿಲವಾಡಗಳಂತೆ ಸಾದಾ ರಚನೆಯನ್ನು ಹೊಂದಿವೆ. ಅಂತರಾಳಗಳ ಬಾಗಿಲವಾಡಗಳ ಇಕ್ಕೆಲಗಳಲ್ಲಿನ ಗೋಡೆಯಲ್ಲಿ ಅರ್ಧಕಂಬಗಳ (ಗೋಡೆ ಗಂಬಗಳ) ಮೇಲೆ ಕೆತ್ತನೆ ಮಾಡಲಾಗಿದೆ. ಇವುಗಳ ಮೇಲೆ ಪಿಂಗಾಣಿ ಬಟ್ಟಲಾಕಾರದ ಹಾಗೂ ಕೆಳಭಾಗದಲ್ಲಿ ಅವು ಸ್ವಲ್ಪ ಚೂಪಾದಂತೆ ಕಾಣುವ ಚಿತ್ರಗಳನ್ನು ಗೋಡೆಗಂಬಗಳ

ಮೇಲೆ ಚಿತ್ರಿಸಲಾಗಿದೆ. ಇನ್ನೊಂದು ಅರ್ಧಗಂಬದ ಮೇಲೂ ಇಂಥ ಕೆತ್ತನೆಯನ್ನು ಮಾಡಲಾಗಿದೆ. ಈ ಅರ್ಧಕಂಬಗಳ ಪಕ್ಕದಲ್ಲಿರುವ ಇನ್ನೆರಡು ಅರ್ಧಕಂಬಗಳು ಬುಡದಲ್ಲಿ ಚೌಕಾಕಾರವಾಗಿದ್ದು ಅವುಗಳ ದಂಡ (ಮಧ್ಯ) ಭಾಗದಲ್ಲಿ ಕಂಬಗಳನ್ನು ರಚಿಸಲಾಗಿದೆ. ಅದರ ಮೇಲಿನ ಭಾಗದಲ್ಲಿ ತ್ರಿಕೋನ ಪಟ್ಟಿಕೆಯ ಅಲಂಕರಣೆಗಳನ್ನು ಬಿಡಿಸಲಾಗಿದೆ. ಈ ಕಂಬಗಳಿಗೆ ಅಳವಡಿಸಿರುವ ತಟ್ಟೆ ಆಕಾರದ ಫಲಕಗಳು ಉಲ್ಟಾ ಜೋಡಿಸಿ ಇಟ್ಟಾಗ ಹೇಗೆ ಕಾಣುತ್ತೇವೆಯೋ ಹಾಗೇ ಅವುಗಳನ್ನು ಚಿತ್ರಿಸಲಾಗಿದೆ. ಈ ಕಂಬಗಳಿಗೆ ಅಳವಡಿಸಿರುವ ಬೋಧಿಗೆಗಳು ಮಾತ್ರ ಚೌಕಾಕಾರವಾಗಿವೆ.

ಮೂರು ಗರ್ಭಗೃಹಗಳನ್ನೊಳಗೊಂಡ ನವರಂಗದ ಹೊರಗೋಡೆಯ ಭಾಗಗಳು ಭಾಗಶಃ ಬಿದ್ದಿವೆ. ಹೀಗಾಗಿ ಇದೊಂದು ಬಯಲು ಮಂಟಪದಂತೆ ಕಾಣುತ್ತದೆ. ಇದರಲ್ಲಿರುವ ಕಂಬಗಳು ೧೨ನೇ ಶತಮಾನದ ಪ್ರಾರಂಭ ಕಾಲದಲ್ಲಿ ನಿರ್ಮಾಣವಾಗಿವೆ ಎಂಬುದನ್ನು ಕಂಬಗಳಲ್ಲಿರುವ ಕೆತ್ತನೆಗಳನ್ನು ಗಮನಿಸಿದರೆ ತಿಳಿಯಬಹುದು. ಈ ಕಂಬಗಳ ಬುಡ ಭಾಗವು ಆಯಾತಾಕಾರದ ರಚನೆ ಹೊಂದಿದ್ದು ಅದರ ಮೇಲೆ ತ್ರಿಕೋನ ಆಕಾರದ ಪಟ್ಟಿಕೆಗಳನ್ನು ಕೆತ್ತಲಾಗಿದೆ. ಆಯಾತಾಕಾರದ ಭಾಗದ ಮೇಲ್ಭಾಗದಲ್ಲಿ ಚೌಕಾಕಾರದ ರಚನೆ ಇದೆ. ಚೌಕಾಕಾರ ಭಾಗದ ಮೇಲಿನ ಭಾಗದಲ್ಲಿ ಪಟ್ಟಿಕೆಗಳನ್ನು ಕೆತ್ತಲಾಗಿದ್ದು ಅಲ್ಲದೇ ಅದರಲ್ಲಿರುವ ವೃತ್ತಪಟ್ಟಿಕೆಗಳನ್ನು ಸುತ್ತಿಕಟ್ಟಿದಂತೆ ಅಡ್ಡಲಾಗಿ ಇನ್ನೊಂದು ಪಟ್ಟಿಕೆಯನ್ನು ರಚಿಸಲಾಗಿದೆ. ಇಂಥ ಸಾದಾ ಅಲಂಕರಣೆಗಳನ್ನು ಬಿಟ್ಟು ಉಳಿದಂತೆ ಇಲ್ಲಿರುವ ಕಂಬಗಳು ಅತ್ಯಂತ ಸರಳ ಮಾದರಿಯವುಗಳು ಎಂದು ತಿಳಿಯಬಹುದು. ವೃತ್ತಫಲಕ, ತಟ್ಟೆ ಆಕಾರದ ಫಲಕ ಹಾಗೂ ಚೌಕಾಕಾರದ ಬೋಧಿಗೆಗಳನ್ನು ಕಂಬಗಳಲ್ಲಿ ಅಳವಡಿಸಲಾಗಿದೆ. ಈ ನಾಲ್ಕು ಕಂಬಗಳನ್ನೊಳಗೊಂಡು ಛತ್ತಿನಲ್ಲಿ ಕಮಲ ಪುಷ್ಪ ಕೆತ್ತನೆಯ ಭುವನೇಶ್ವರ ರಚನೆ ಇದೆ. ನವರಂಗದಲ್ಲಿ ಸುಮಾರು ಎಂಟು ಕೋಷ್ಠಕಗಳಿದ್ದಿರಬಹುದು. ಆದರೆ ನವರಂಗದ ಹೊರಗೋಡೆಯ ಭಾಗಗಳು ಬಿದ್ದು ಹೋಗಿದ್ದರಿಂದ ಅವು ಸಹ ಕಾಣುವುದಿಲ್ಲ. ಉಳಿದೆರಡು ಕೋಷ್ಠಕಗಳು ಬರಿದಾಗಿವೆ. ಹೊರ ಗೋಡೆಯು ಸಾದಾ ರಚನೆಯಿಂದ ಕೂಡಿದೆ.

ಈ ದೇವಾಲಯದ ಮೂರು ಗರ್ಭಗೃಹಗಳಿಗೆ ಶಿಖರಗಳಿದ್ದವು. ಅವು ಕದಂಬ-ನಾಗರ ಮಾದರಿಯವುಗಳು. ಆದರೆ ಅವುಗಳಲ್ಲಿ ಒಂದು ಗರ್ಭಗೃಹದ ಶಿಖರ ಸಂಪೂರ್ಣವಾಗಿ ಬಿದ್ದುಹೋಗಿದೆ.

ಉಳಿದೆರಡು ಶಿಖರಗಳು ಸಹ ಕ್ಷೀಣಗೊಂಡಿವೆ. ಪ್ರಸ್ತರ ಭಾಗವು ಸಾದಾ ರಚನೆಯಿಂದ ಕೂಡಿದ್ದು ಗ್ರೀವ ಭಾಗದವರೆಗಿನ ಶಿಖರವು ಸ್ಪಷ್ಟವಾಗಿ ಕಾಣುತ್ತದೆ. ಉಳಿದಂತೆ ಸ್ತೂಪಿ ಮತ್ತು ಕಲಶ ಭಾಗಗಳು ಬಿದ್ದುಹೋಗಿವೆ. ದೇವಾಲಯದ ಶಿಖರವನ್ನು ಗಮನಿಸಿದಾಗ ತಿಳಿದುಬರುವ ಮುಖ್ಯ ಅಂಶವೆಂದರೆ ಇದು ಸಹ ಹಗರಟಗಿಯಲ್ಲಿ ನಿರ್ಮಾಣವಾದ ಪ್ರಾರಂಭದ ದೇವಾಲಯಗಳ ಸಾಲಿಗೆ ಸೇರಬಹುದಾದ ನಿರ್ಮಾಣವೆಂದು ಅಭಿಪ್ರಾಯಿಸಬಹುದು.

## ಭೀಮನ ಗುಡಿ

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಪ್ರಸ್ತುತ, ಗ್ರಾಮದಲ್ಲಿ ಅಳಿದುಳಿದ ಎಲ್ಲ ದೇವಾಲಯಗಳಿಗಿಂತ ವಿಸ್ತಾರದಲ್ಲಿ ದೊಡ್ಡದಾಗಿದೆ. ಬಹುಶಃ ಇದಕ್ಕಿಂತಲೂ ಗ್ರಾಮದಲ್ಲಿರುವ ಧರ್ಮರಾಜನ ಗುಡಿಯು ದೊಡ್ಡದ್ದಾಗಿರಬಹುದು. ಭೀಮನೆಂಬ ಹೆಸರಿನ ದೇವಾಲಯವೇ ವಿಸ್ತಾರದಲ್ಲಿ ಅತೀ ದೊಡ್ಡ ದೇವಾಲಯವಾಗಿದೆ. ಇದು ಗರ್ಭಗೃಹ, ತೆರೆದ ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಪೂರ್ವಾಭಿಮುಖವಾದ ಮುಖಮಂಟಪಕ್ಕೆ ಮೂರು ಕಡೆಗೂ ಪ್ರವೇಶವನ್ನು ನಿರ್ಮಿಸಲಾಗಿದೆ. ಅಲ್ಲದೇ ನವರಂಗಕ್ಕೂ ಸಹ ಉತ್ತರಾಭಿಮುಖ ಇನ್ನೊಂದು ಪ್ರವೇಶ ಹಾಗೂ ಅದಕ್ಕೊಂದು ಚಿಕ್ಕ ಮುಖಮಂಟಪವನ್ನು ರಚಿಸಲಾಗಿದೆ. ಹೀಗಾಗಿ ನವರಂಗದ ಉತ್ತರಾಭಿಮುಖ ಪ್ರವೇಶದ ಮೂಲಕವು ಈ ಗುಡಿಯನ್ನು ಪ್ರವೇಶಿಬಹುದಾಗಿದೆ.

ದೇವಾಲಯದ ಗರ್ಭಗೃಹದಲ್ಲಿ ವೃತ್ತಾಕಾರದ ಲಿಂಗ ಪೀಠವಿದ್ದು ಅದರ ದಂಡ (ರುದ)ಭಾಗವು ಎತ್ತರವಾಗಿದೆ. ತೆರೆದ ಅಂತರಾಳದ ಭಾಗದಲ್ಲಿ ಯಾವುದೇ ಶಿಲ್ಪಾವಶೇಷಗಳಿರುವುದಿಲ್ಲ. ಅಂತರಾಳದ ಇಕ್ಕೆಲಗಳಲ್ಲಿರುವ ಅರ್ಧ ಕಂಬ (ಗೋಡೆಕಂಬ)ಗಳು ವಿಶೇಷ ಅಲಂಕರಣೆಯನ್ನು ಹೊಂದಿವೆ. ಕಂಬಗಳ ಮೇಲೆ ಎಲೆ ಬಳ್ಳಿಗಳ ಹಾಗೂ ಕಂಬಗಳ ಕೆತ್ತನೆಯನ್ನು ಮಾಡಲಾಗಿದೆ. ವಿಶಾಲವಾದ ನವರಂಗವು ಉತ್ತರಾಭಿಮುಖವಾದ ಪ್ರವೇಶವನ್ನು ಸಹ ಹೊಂದಿದೆ. ಇದರಲ್ಲಿರುವ ಕಂಬಗಳು ಚೌಕಾಕಾರವಾಗಿದ್ದು ಅವು ಕೆಳಭಾಗದಲ್ಲಿ ಉಪಾನ, ಉಪಾನದ ನಾಲ್ಕು ಭಾಗದ ಮೇಲೆ ತ್ರಿಕೋನ ಪಟ್ಟಿಕೆಯ ರಚನೆಯನ್ನು ಮಾಡಲಾಗಿದೆ. ಈ ತ್ರಿಕೋನ ಆಕೃತಿಗಳಲ್ಲಿ ಚಿಕ್ಕದಾಗಿರುವ ಬದಾಮ್ ರಚನೆಯನ್ನು ಸಹ ರಚಿಸಲಾಗಿದೆ. ಕಂಬದಲ್ಲಿರುವ ಉಪಾನದ ಮೇಲಿನ ಭಾಗವು ಚೌಕಾಕಾರದ್ದಾಗಿದ್ದು, ಅದರ ಮೇಲಿನ ಭಾಗವು ಸಹ ಚೌಕಾಕಾರವಾಗಿದೆ. ಈ ಚೌಕಾಕಾರದ ಭಾಗದಲ್ಲಿ ಚಿಕ್ಕ ಚಿಕ್ಕ ಅಲಂಕರಣೆಗಳನ್ನು ಸುಂದರವಾಗಿ ಕೆತ್ತಲಾಗಿದೆ. ಅಲ್ಲದೇ ನವರಂಗದಲ್ಲಿರುವ ಮಧ್ಯದ ನಾಲ್ಕು ಅಲಂಕರಣೆಗಳನ್ನು ಕಂಬಗಳಲ್ಲಿ ಕೆತ್ತಲಾಗಿದೆ. ಇಲ್ಲಿರುವ ಕಂಬಗಳು

ಕಲ್ಯಾಣ ಚಾಲುಕ್ಯರ ಕಾಲದ ನಿರ್ಮಿತಿಗಳು ಎಂಬುದನ್ನು ವಿನ್ಯಾಸದ ಮೇಲೆ ತಿಳಿಯಬಹುದಾಗಿದೆ. ನವರಂಗದಲ್ಲಿರುವ ಗೋಡೆಗಂಬಗಳ ಮೇಲೆಯೂ ಸಹ ಚಿಕ್ಕ ಪುಟ್ಟ ಅಲಂಕರಣೆಗಳನ್ನು ಮಾಡಲಾಗಿದೆ.

ಚೌಕಾಕಾರದ ಕಂಬಗಳು ನವರಂಗದಲ್ಲಿದ್ದರೆ, ತಿರುಗಣೆಯ ಯಂತದಿಂದ ನಿರ್ಮಿಸಲ್ಪಟ್ಟ ವೃತ್ತಾಕಾರದ ಕಂಬಗಳು ಮುಖಮಂಟಪದಲ್ಲಿವೆ. ಇವು ನವರಂಗದಲ್ಲಿರುವ ಕಂಬಗಳಿಗಿಂತ ಸುಂದರವಾಗಿ ಕಾಣುತ್ತವೆ. ಶಹಾಬಾದ್‌ಕಲ್ಲಿನಲ್ಲಿ ನಿರ್ಮಾಣವಾಗಿದ್ದರು ಇವುಗಳು ಮಾಸಿ ಕಪ್ಪುಬಣ್ಣಕ್ಕೆ ತಿರುಗಿವೆ. ಮುಖಮಂಟಪದಲ್ಲಿರುವ ಕಂಬಗಳು ಬುಡಭಾಗದಲ್ಲಿ ಚೌಕಾಕಾರದ ಎತ್ತರ ಭಾಗವನ್ನು (ಉಪಾನ) ಹೊಂದಿದ್ದು ಅದರ ಮೇಲಿನ ಭಾಗವು ಚೌಕಾಕಾರವಾಗಿದೆ. ಕಂಬದ ನಂಡಾಗ್ರ (ಮಧ್ಯ) ಭಾಗವು ವೃತ್ತಾಕಾರದ ಬಳೆಗಳನ್ನು ಒಂದರ ಮೇಲೆ ಒಂದು ಜೋಡಿಸಿಟ್ಟಂತೆ ಕಂಡುಬರುತ್ತದೆ. ಇವುಗಳಲ್ಲದೆ ಗಂಟೆ ಆಕಾರವನ್ನು ಪ್ರತಿನಿಧಿಸುವ ಹಾಗೂ ನಂಡಾಗ್ರ ಭಾಗದಲ್ಲಿ ಹದಿನಾರು ವೃತ್ತಪಟ್ಟಿಕೆಗಳ ರಚನೆ ಹೊಂದಿರುವ ಕಂಬಗಳು ಸಹ ಮುಖಮಂಟಪದಲ್ಲಿವೆ. ನಂಡಾಗ್ರ ಭಾಗದಲ್ಲಿ ಸರಪಳಿ ಹಾಗೂ ಹೂಮಾಲೆಯ ಕೆತ್ತನೆಯ ಅಲಂಕರಣೆಗಳು ಇವೆ. ಈ ಕಂಬಗಳಲ್ಲಿ ವೃತ್ತಾಕಾರದ ಹಾಗೂ ತಟ್ಟೆ ಆಕಾರದ ಫಲಕ ಹಾಗೂ ಬೋಧಿಗೆಗಳನ್ನು ಅಳವಡಿಸಲಾಗಿದೆ.

ಮುಖಮಂಟಪವು ಕಕ್ಷಾಸನವನ್ನು ಹೊಂದಿದ್ದು ಅದರಲ್ಲಿರುವ ಗಿಡ್ಡನೆಯ ಕಂಬಗಳು ವೃತ್ತಾಕಾರದವುಗಳಾಗಿವೆ. ಚೌಕಾಕರದ ಉಪಾನ ಭಾಗದ ಮೂಲೆಗಳನ್ನು ಬದಾಮ ಆಕೃತಿಯ ರಚನೆಯಂತೆ ಕಾಣುವ ಹಾಗೆ ಮಾಡಲಾಗಿದೆ. ಆದರೆ ವೃತ್ತ, ತಟ್ಟೆ ಆಕಾರದ ಫಲಕ ಹಾಗೂ ಬೋಧಿಗೆಗಳನ್ನು ಅಳವಡಿಸಲಾಗಿದೆ.

ನವರಂಗದ ಉತ್ತರಾಭಿಮುಖ ಪ್ರವೇಶದ ಬಾಗಿಲವಾಡವು ಅತ್ಯಂತ ಮನಮೋಹಕವಾಗಿ ಕೆತ್ತಲ್ಪಟ್ಟಿದೆ. ಇದು ಪಂಚಪಟ್ಟಿಕೆಗಳಿಂದ ಕೂಡಿದ್ದು ಪ್ರತಿ ಪಟ್ಟಿಕೆಯು ವಿಶೇಷ ಅಲಂಕರಣೆಗಳನ್ನು ಹೊಂದಿದೆ. ಮುಖ್ಯವಾಗಿ ಇದರಲ್ಲಿ ವಜ್ರಾಕೃತಿ, ವೃತ್ತಬಳ್ಳಿ, ನಂತರ ಅರ್ಧಕಂಬ ಪಟ್ಟಿಕೆ ಹಾಗೂ ಅವುಗಳ ಮೇಲೆ ವೃತ್ತಾಕಾರದ ಬಳೆಯ ಅಲಂಕರಣೆಗಳನ್ನು ಪೋಣಿಸಿದಂತೆ ಅಲಂಕರಣೆಗೊಳಿಸಲಾಗಿದೆ. ಇಂಥ ಸುಂದರವಾದ ಪಟ್ಟಿಕೆ ಬಾಗಿಲವಾಡದಲ್ಲಿ ಸುತ್ತಲೂ ರಚನೆಯಾಗಿದೆ. ಸಿಂಹ ಅಥವಾ ಯಾಳಿ ಆಕಾರದಂತೆ ಕಾಣುವ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಒಂದರ ಮೇಲೆ ಒಂದು ಜೋಡಿಸಿಟ್ಟಂತೆ ಕಾಣುವ ಇನ್ನೊಂದು ಪಟ್ಟಿಕೆಯನ್ನು ಸಹ ಬಾಗಿಲವಾಡದಲ್ಲಿ ಸುತ್ತಲೂ ರಚಿಸಲಾಗಿದೆ. ಬಾಗಿಲವಾಡದ ಕೆಳಭಾಗದಲ್ಲಿ ಉಬ್ಬು ದ್ವಾರಶಿಲ್ಪಗಳಿದ್ದು ಅವು ಕೈಯಲ್ಲಿ ಚಕ್ರ, ಶಂಖ, ಗದೆ ಮತ್ತು ತ್ರಿಶೂಲಗಳನ್ನು ಧರಿಸಿವೆ. ಇದೇ ಶಿಲ್ಪದಲ್ಲಿ ಛತಚಾಮರಧಾರಿಣಿಯರ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಸಹ ಕೆತ್ತಲಾಗಿದೆ. ಈ ದ್ವಾರ ಶಿಲ್ಪದ ಸುತ್ತಲೂ ಹೂಬಳ್ಳಿಗಳಿಂದ ಅಲಂಕರಣೆ ಮಾಡಲಾಗಿದೆ.

ಬಾಗಿಲವಾಡದ ಉತ್ತರಾಂಗದ ಭಾಗವು ಮುಂಚಾಚಿದೆ. ಮುಂಚಾಚಿದ ಭಾಗದ ಮೇಲಿನ ಭಾಗದಲ್ಲಿ ನಾಗರ ಮಾದರಿಯ ಮೂರು ಶಿಖರಗಳನ್ನು ಕೆತ್ತಲಾಗಿದೆ. ಚಿಕ್ಕದಾಗಿರುವ ಶಿಖರಗಳು ಸ್ತೂಪಿ ಮತ್ತು ಕಲಶಗಳ ಅಲಂಕರಣೆಗಳನ್ನು ಹೊಂದಿವೆ. ಈ ದೇವಾಲಯದ ನವರಂಗಕ್ಕಿರುವ ಉತ್ತರಾಭಿಮುಖ ಅಲಂಕೃತ ದ್ವಾರ ಶಾಖೆಯಂತೆ ಉಳಿದೆಲ್ಲ ಬಾಗಿಲವಾಡಗಳು ಇದೇ ಅಲಂಕರಣೆಗಳನ್ನು ಹೊಂದಿವೆ. ಗರ್ಭಗೃಹದ ಬಾಗಿಲವಾಡವು ನವರಂಗದ ಬಾಗಿಲವಾಡದಂತೆ ಸುಂದರವಾಗಿದೆ. ಆದರೆ ಉತ್ತರಾಂಗದಲ್ಲಿ ಶಿಖರಪಟ್ಟಿಕೆಯ ಬದಲಾಗಿ ಕೈಪಿಡಿಗಳನ್ನು ರಚಿಸಲಾಗಿದೆ ಹಾಗೂ ಅವುಗಳಲ್ಲಿ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಉಳಿದಂತೆ ನವರಂಗದ ಉತ್ತರಾಭಿಮುಖ ಬಾಗಿಲವಾಡದ ಎಲ್ಲ ರಚನಾ ವಿನ್ಯಾಸಗಳು ಈ ಬಾಗಿಲವಾಡದಲ್ಲಿಯು ಇವೆ. ನವರಂಗದ ಪೂರ್ವಾಭಿಮುಖ ಪ್ರವೇಶ ದ್ವಾರವು ಸಹ ಉಳಿದೆಲ್ಲ ಬಾಗಿಲವಾಡಗಳಂತೆ ಹೆಚ್ಚಿನ ಅಲಂಕರಣೆ ಹೊಂದಿದೆ. ಇದಕ್ಕೆ ಉಳಿದೆಲ್ಲ ಬಾಗಿಲವಾಡಗಳಿರುವ ಹೊಸ್ತಿಲುಗಳಿಗಿಂತ ಭಿನ್ನವಾಗಿರುವ ಅಂದರೆ ಜಿಗ್‌ಜಾಗ್ ಮಾದರಿಯ ಹೊಸ್ತಿಲನ್ನು ಜೋಡಿಸಲಾಗಿದೆ. ಇಂಥ ಅಲಂಕರಣೆಯು ಈ ಹೊಸ್ತಿಲಿನ ಸೌಂದರ್ಯವನ್ನು ಇನ್ನಷ್ಟು ಹೆಚ್ಚಿಸಿದೆ.

ನವರಂಗ ಹಾಗೂ ಮುಖಮಂಟಪದಲ್ಲಿ ಭವನೇಶ್ವರಿಯ ಕೆತ್ತನೆಗಳನ್ನು ಮಾಡಲಾಗಿದೆ. ನವರಂಗದಲ್ಲಿರುವ ಭುವನೇಶ್ವರಿಯಂತೂ ತುಂಬಾ ಸುಂದರವಾಗಿದೆ. ಮಧ್ಯಭಾಗದಲ್ಲಿ ನಟರಾಜ (ಶಿವ ತಾಂಡವ) ನೃತ್ಯಮಾಡುತ್ತಿರುವ ಉಬ್ಬುಶಿಲ್ಪ ಹಾಗೂ ಅದರ ಸುತ್ತಲೂ ಎಂಟು ದಿಕ್ಕುಗಳಲ್ಲಿ ದಿಕ್ಪಾಲಕರ ಉಬ್ಬುಶಿಲ್ಪಗಳನ್ನು ನಯವಾಗಿ ಕಾಣುವಂತೆ ಕೆತ್ತಲಾಗಿದೆ. ಮುಖಮಂಟಪದಲ್ಲಿರುವ ಭುವನೇಶ್ವರಿಯು ಕಮಲಪುಷ್ಪ ಕೆತ್ತನೆಯ ರಚನೆಯಾಗಿದೆ.

ಮುಖಮಂಟಪಕ್ಕೆ ಕಕ್ಷಾಸನದ ವ್ಯವಸ್ಥೆ ಇದೆ. ಅದರ ಹೊರ ಭಾಗದಲ್ಲಿ ಸುತ್ತಲೂ ಪುಷ್ಪ ಪಟ್ಟಿಕೆಯ ಸಾಲನ್ನು ಕೆತ್ತಲಾಗಿದೆ. ಅಲ್ಲದೇ ಒರಗಿಕೊಳ್ಳಲು ಜೋಡಿಸಿರುವ ಶಿಲಾಫಲಕದ ಹಿಂಭಾಗದಲ್ಲಿ ವಿವಿಧ ಮಾದರಿಯ ಶಿಖರ ಪಟ್ಟಿಕೆಗಳನ್ನು ಕಂಡರಿಸಲಾಗಿದೆ. ಮುಖಮಂಟಪಕ್ಕೆ ಮುಂಚಾಚಿದ ಮುಂಚೂರಿನ ಭಾಗವನ್ನು ಸಹ ನಿರ್ಮಿಸ

ಲಾಗಿದೆ. ಅಲ್ಲದೇ ಕಕ್ಷಾಸನದಲ್ಲಿರುವ ಅರ್ಧ ಕಂಬಗಳು ವೃತ್ತಾಕಾರವಾಗಿದ್ದು ಅವು ಸರಳ ರಚನೆಯಿಂದ ಕೂಡಿವೆ.

ದೇವಾಲಯದ ಅಧಿಷ್ಠಾನವು ಉಪಾನ ಮತ್ತು ಜಗತಿ ಭಾಗಗಳನ್ನು ಮಾತ್ರ ಹೊಂದಿದ್ದು ಉಳಿದಂತೆ ಕಪೋತ ಮತ್ತು ಗಳದಂತ ಸಾಮಾನ್ಯ ರಚನೆಯ ಭಾಗಗಳು ಸಹ ಈ ಅಧಿಷ್ಠಾನದಲ್ಲಿರದೇ ಅತ್ಯಂತ ಸರಳ ರಚನೆಯಂತೆ ಕಾಣುತ್ತದೆ. ಹೊರಗೋಡೆಯು ಹೆಚ್ಚಿನ ಅಲಂಕರಣೆ ಹೊಂದಿರುವುದಿಲ್ಲ. ಆದರೆ ಹೊರಗೋಡೆಯ ಮಧ್ಯಭಾಗದಲ್ಲಿ ಅಲಂಕರಣೆಯ ಪಟ್ಟಿಕೆಯೊಂದು ಸುತ್ತಲೂ ಮುಂದುವರಿದಿದೆ.

ಪ್ರಸ್ತರ ಭಾಗವು ಗಳ, ವೃತ್ತ ಹಾಗೂ ಇನ್ನೊಂದು ಪಟ್ಟಿ ಆಕಾರದ ಕೆತ್ತನೆಯನ್ನು ಹೊಂದಿದೆ. ಇವು ದೇವಾಲಯದ ಪ್ರಸ್ತರ ಭಾಗದಲ್ಲಿ ಸುತ್ತಲೂ ಮುಂದುವರಿದಿವೆ. ಶಿಖರಭಾಗವು ಸಂಪೂರ್ಣವಾಗಿ ಬಿದ್ದುಹೋಗಿದ್ದು ಬಹುಶಃ ಈ ದೇವಾಲಯವು ಸಹ ಫಂಸಾನ (ಕದಂಬ–ನಾಗರ) ಮಾದರಿಯ ಶಿಖರವನ್ನು ಹೊಂದಿದ್ದಿರಬಹುದು ಎಂದು ಊಹಿಸಬಹುದಾಗಿದೆ.

ಹಗರಟಗಿ ಗ್ರಾಮದಿಂದ ವರದಿ ಯಾಗಿರುವ ಒಂದು ಶಾಸನದಲ್ಲಿ ಸ್ವಯಂಭು ಭೀಮೇಶ್ವರ ನೆಂದು ಉಲ್ಲೇಖಿಸಲಾಗಿದೆ. ಆದ್ದರಿಂದ ಶಾಸನ ಉಲ್ಲೇಖಿತ ಭೀಮೇಶ್ವರ ದೇವಾಲಯ ಇದೆ ಆಗಿದೆ.

**ಅರ್ಜುನ ಗುಡಿ**

ಇದು ಭೀಮನ ಗುಡಿಯಿಂದ ಸ್ವಲ್ಪದೂರದಲ್ಲಿದೆ. ಸುತ್ತಲೂ ಮುಳ್ಳು ಜಾಲಿ ಬೆಳೆದು ಆವರಿಸಿರುವುದರಿಂದ ಗುಡಿಯು ತಕ್ಷಣ ಗೋಚರಿಸುವುದಿಲ್ಲ. ಗುಡಿಯ ಹಿಂಭಾಗದ ಭಾಗಗಳಂತೂ ಈ ಮುಳ್ಳುಕಂಟಿಗಳಿಂದಾಗಿ ಕಾಣುವುದೇ ಇಲ್ಲ.

ಗರ್ಭಗೃಹ, ತೆರೆದ ಅಂತರಾಳ, ನವರಂಗ ಹಾಗೂ ತೆರೆದ ಮುಖಮಂಟಪವನ್ನು ಹೊಂದಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದೆ. ಅತ್ಯಂತ ದುಸ್ಥಿತಿಯಲ್ಲಿರುವ ಗರ್ಭಗೃಹದಲ್ಲಿ ನೆಲಹಾಸನ್ನು ಅಗೆದು ತೆಗೆದಿದ್ದರಿಂದ ಅಲ್ಲಿರುವ ಪ್ರಾಚೀನ ಲಿಂಗವು ಅನಾಥವಾಗಿ ಬಿದ್ದಿದೆ. ಇದರ ಪೀಠಭಾಗವನ್ನು ನಾಶಮಾಡಲಾಗಿದೆ. ಒಂದು ಎಲೆಯನ್ನು ಸೀಳಿದಾಗ ಕಾಣುವ ಅಲಂಕರಣೆಯಂತೆ ಮೂರೂ ಗೆರೆಗಳನ್ನು ಲಿಂಗದ ಮೇಲೆ ಚಿತ್ರಿಸಲಾಗಿದೆ.

ಪೂರ್ವಾಭಿಮುಖವಾಗಿರುವ ಗರ್ಭಗೃಹದ ಬಾಗಿಲ ವಾಡವು ಸಹ ಚಿತ್ತಾಕರ್ಷಕವಾಗಿದೆ. ಪಂಚ ಪಟ್ಟಿಕೆಗಳ ಅಲಂಕರಣೆ ಹೊಂದಿರುವ ದ್ವಾರಬಂಧದಲ್ಲಿ ಪುಷ್ಪಪಟ್ಟಿಕೆ, ಬಳ್ಳಿಪಟ್ಟಿಕೆ ಅರ್ಧಕಂಬ ರಚನೆಗಳನ್ನು ಮಾಡಲಾಗಿದೆ. ಇನ್ನುಳಿದ ಅಲಂಕರಣೆಯ ಪಟ್ಟಿಕೆಗಳು ಮಾಸಿಹೋಗಿದ್ದರಿಂದ ಸ್ಪಷ್ಟವಾಗಿ ಗುರುತಿಸಲು ಆಗುವುದಿಲ್ಲ. ದ್ವಾರಬಂಧದಲ್ಲಿ ಈ ಅಲಂಕರಣೆಯ ಪಟ್ಟಿಕೆಗಳು ಸುತ್ತಲೂ ಮುಂದುವರಿದಿವೆ. ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಇದು ಸಹ ಮಾಸಿದೆ. ಉತ್ತರಾಂಗದ ಭಾಗವು ಸಾಪಾಟಾಗಿದ್ದು (ಅದರಲ್ಲಿ ಗಾಳಿಯಲ್ಲಿ ತೇಲುತ್ತಿರುವ ಚಿಕ್ಕದಾಗಿರುವ ಉಬ್ಬುಶಿಲ್ಪಗಳನ್ನು ಚಿತ್ರಿಸಲಾಗಿದೆ)ದ್ವಾರಬಂಧದ ಮೇಲ್ಭಾಗದ ಪಟ್ಟಿ ಮಾತ್ರ ಮುಂಚಾಚಿದೆ. ಬಾಗಿಲವಾಡದ ಪೇದ್ಯ (ಕೆಳ) ಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳಿದ್ದು ಅವು ಸಹ ಸವೆದುದರಿಂದ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಇದರ ಹೊಸ್ತಿಲ ಭಾಗವು ಚಿತ್ತಾಕರ್ಷಕವಾಗಿದ್ದು ಸ್ವಲ್ಪಮಟ್ಟಿಗೆ ಎತ್ತರವಾಗಿದೆ. ಗರ್ಭಗೃಹದ ಛತ್ತಿನ ಭಾಗದಲ್ಲಿ ಕಮಲ ಪುಷ್ಪ ಕೆತ್ತನೆಯ ಭುವನೇಶ್ವರಿಯನ್ನು ಬಿಡಿಸಲಾಗಿದೆ.

ಅಂತರಾಳವು ಬರಿದಾಗಿದೆ. ಇದಕ್ಕೆ ಬಹುಶಃ ತೋರಣ ಕಂಬಗಳಿದ್ದಿರಬಹುದು. ಆದರೆ ಇಂದು ಕಂಬಗಳು ಮುರಿದು ಬಿದ್ದಿವೆ. ಕಂಬಗಳಿಗಿದ್ದ ತೋರಣ ಪಟ್ಟಿಯನ್ನು ಮಾತ್ರ ಈವರೆಗೂ ನೋಡಬಹುದು.

ದೇವಾಲಯದ ನವರಂಗವು ಕುಸಿದಿದೆ. ಇದರ ಮೇಲ್ಛಾವಣಿ ಅಲ್ಲಲ್ಲಿ ಬಿದ್ದುಹೋಗಿದೆ. ಹಾಗೂ ಗೋಡೆಯ ಭಾಗಗಳು ಕ್ಷೀಣಗೊಂಡು ದುಃಸ್ಥಿತಿಗೆ ಬಂದು ತಲುಪಿವೆ. ನವರಂಗದಲ್ಲಿ ನಾಲ್ಕು ಕಂಬಗಳಿವೆ. ಅವು ಬುಡದಲ್ಲಿ ಚೌಕಾಕಾರ ಮಧ್ಯ (ದಂಡಾಗ್ರ)ದಲ್ಲಿ ವೃತ್ತಾಕಾರದ ಬಳೆಗಳನ್ನು ಹೋಲುವ ಅಲಂಕರಣೆಗಳನ್ನು ಮಾಡಲಾಗಿದೆ. ದಂಡಾಗದ ಮೇಲಿನ ಭಾಗದಲ್ಲಿ ಮತ್ತೆ ಚೌಕಾಕಾರದ ಭಾಗವಿದ್ದು ಅದರ ಮೇಲಿನ ಭಾಗವನ್ನು ತಟ್ಟೆಯನ್ನು ಉಲ್ಟಾ ಇಟ್ಟಾಗ ಕಾಣುವ ಹಾಗೆ ಇರುವ ಫಲಕವನ್ನು ಅಳವಡಿಸಲಾಗಿದೆ. ಚೌಕಾಕಾರದ ಬೋಧಿಗೆಗಳು ಗುಡಿಯಲ್ಲಿರುವ ಕಂಬಗಳಲ್ಲಿವೆ. ಛತ್ತು ಬಿದ್ದಿರುವುದರಿಂದ ಭುವನೇಶ್ವರಿಯ ಭಾಗವು ಕಾಣುವುದಿಲ್ಲ. ನವರಂಗದಲ್ಲಿ ತ್ರುಟಿತಗೊಂಡ ನಂದಿಯ ಶಿಲ್ಪವೊಂದನ್ನು ಇಡಲಾಗಿದೆ.

ತೆರೆದ ಮುಖಮಂಟಪವು ಈ ದೇವಾಲಯಕ್ಕಿದೆ. ಇದರಲ್ಲಿರುವ ಕಂಬಗಳು ಈ ಮೊದಲು ವಿವರಿಸಿದ ಕಂಬಗಳ ಲಕ್ಷಣಗಳನ್ನು ಹೊಂದಿವೆ.

**ಕುಂತಿ ಗುಡಿ**

ಅರ್ಜುನ ಎಂಬ ಹೆಸರಿನ ಗುಡಿಯಿಂದ ಸ್ವಲ್ಪ ದೂರದಲ್ಲಿ ಕುಂತಿ ಗುಡಿ ಇದೆ. ವಾಸ್ತುಶೈಲಿಯ ದೃಷ್ಟಿಯಿಂದ ಅಂಥ ಮಹತ್ವದ ಲಕ್ಷಣಗಳನ್ನು ಹೊಂದಿರುವುದಿಲ್ಲ. ಪೂರ್ವಾಭಿಮುಖವಾದ ಈ ದೇವಾಲಯ ಬಸವಪ್ರಭು

(ದೊಡ್ಡ ಬಾಬುಗೌಡ) ಪಾಟೀಲ ಅವರ ಜಮೀನಿನಲ್ಲಿದೆ. ಇದು ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗವನ್ನು ಹೊಂದಿರುವುದು. ಗರ್ಭಗೃಹದಲ್ಲಿ ಲಿಂಗದ ಪೀಠಭಾಗವು ಮಣ್ಣಿನಲ್ಲಿ ಹೂತುಹೋಗಿದ್ದು ಅದರ ಮಧ್ಯದಲ್ಲಿರುವ ರುದಭಾಗವು ಮಾತ್ರ ಕಾಣುತ್ತದೆ. ಇದಕ್ಕಿರುವ ಬಾಗಿಲವಾಡ ಅಥವ ದ್ವಾರಬಂಧವು ಪಂಚಪಟ್ಟಿಕೆಗಳನ್ನು ಹೊಂದಿರುವುದು. ಅದರಲ್ಲಿ ಮುಖ್ಯವಾಗಿ ಬಳ್ಳಿಯ ಪಟ್ಟಿಕೆ, ಅರ್ಧಕಂಬಗಳ ರಚನೆ ಹಾಗೂ ವಜ್ರಾಕೃತಿಯ ಪಟ್ಟಿಕೆಯನ್ನು ದ್ವಾರಬಂಧದಲ್ಲಿ ಸುತ್ತಲೂ ಕೆತ್ತಲಾಗಿದೆ. ಪೇದ್ಯ ಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳಿದ್ದು ಅವು ಕೈಯಲ್ಲಿ ಚಕ್ರ, ಶಂಖ ತ್ರಿಶೂಲ ಹಾಗೂ ಗದೆಯನ್ನು ಧರಿಸಿವೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದ್ದು ದ್ವಾರಬಂಧದ ಉತ್ತರಾಂಗದ ಭಾಗದಲ್ಲಿ ಗಾಳಿಯಲ್ಲಿ ತೇಲಿದಂತೆ ತೋರುವ ಚಿಕ್ಕದಾದ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಅಲ್ಲದೇ ಉತ್ತರಾಂಗ ಭಾಗದಲ್ಲಿರುವ ಹೊಸ್ತಿಲು ಸ್ವಲ್ಪ ಮುಂಚಾಚಿದೆ. ಕುಂತಿ ಗುಡಿಯ ಬಾಗಿಲ ವಾಡವನ್ನು ಗಮನಿಸಿದಾಗ ಕಂಡುಬರುವ ಸಂಗತಿಗಳೆಂದರೆ, ಇದು ಅರ್ಜುನಗುಡಿಯ ಬಾಗಿಲವಾಡದಂತೆ ರಚನಾ ವಿನ್ಯಾಸವನ್ನು ಹೊಂದಿದೆ. ತೆರದ ಅಂತರಾಳವು ಬರಿದಾಗಿದೆ.

ನವರಂಗವು ತಕ್ಕಮಟ್ಟಿಗೆ ವಿಶಾಲವಾಗಿದ್ದು ಅದರಲ್ಲಿ ಕಲ್ಯಾಣ ಚಾಲುಕ್ಯ ನಿರ್ಮಿತಿಯ ನಾಲ್ಕು ಕಂಬಗಳು ಇವೆ. ಇದರಲ್ಲಿರುವ ಕಂಬಗಳು ಮಾತ್ರ ಗಾತ್ರದಲ್ಲಿ ಮತ್ತು ಎತ್ತರದಲ್ಲಿ ಸದ್ಯ ಅಸ್ತಿತ್ವದಲ್ಲಿರುವ (ಧರ್ಮರಾಜ ದೇವಾಲಯದ ನವರಂಗ ದಲ್ಲಿರುವ ಕಂಬಗಳನ್ನು ಹೊರತುಪಡಿಸಿ) ದೇವಾಲಯ ಗಳಲ್ಲಿರುವ ಕಂಬಗಳಿಗಿಂತ ದೊಡ್ಡವುಗಳಾಗಿವೆ ಎಂಬುದನ್ನು ಗಮನಿಸಬಹುದು. ಇವುಗಳ ಬುಡಭಾಗವು ಚೌಕಾಕಾರ ವಾಗಿದ್ದು ದಂಡಾಗ್ರ (ಮಧ್ಯ) ಭಾಗವು ವೃತ್ತಾಕಾರದ ಪಟ್ಟಿಗಳ ರಚನೆಯನ್ನು ಹೊಂದಿವೆ. ದಂಡಾಗ್ರದ ಮೇಲಿನ ಭಾಗದಲ್ಲಿ ಮತ್ತೆ ಚೌಕಾಕಾರದ ಭಾಗ ಹಾಗೂ ಅದರ ಮೇಲಿನ ಭಾಗದಲ್ಲಿ ತಟ್ಟೆಯನ್ನು ಉಲ್ಟಾ ಇಟ್ಟಂತೆ ಕಾಣುವ ಶಿಲಾಫಲಕವಿದೆ. ಚೌಕಾಕಾರದ ಬೋಧಿಗೆಯನ್ನು ಕಂಬಗಳಲ್ಲಿ ಅಳವಡಿಸ ಲಾಗಿದೆ. ಈ ನಾಲ್ಕು ಕಂಬಗಳನ್ನು ಒಳಗೊಂಡ ಭಿತ್ತಿನಲ್ಲಿ ಭುವನೇಶ್ವರಿಯನ್ನು ಕೆತ್ತಲಾಗಿದೆ. ನವರಂಗದ ಬಾಗಿಲವಾಡವು ಅತ್ಯಂತ ಸರಳ ರಚನೆಯಾಗಿದ್ದು ಅದರ ಲಲಾಟವು ಖಾಲಿ ಇದೆ.

ಕುಂತಿಯ ಗುಡಿಯ ಪಕ್ಕದಲ್ಲಿಯೇ ಇನ್ನೊಂದು ಚಿಕ್ಕದಾದ ಗರ್ಭಗೃಹವಿದೆ. ಆದರೆ ಅದಕ್ಕೆ ಅದರ ಉಳಿದ ಭಾಗಗಳು ಉಳಿದುಬಂದಿಲ್ಲ. ಗರ್ಭಗೃಹದ ಬಾಗಿಲವಾಡವು ಸಹ ಸಡಿಲಗೊಂಡಿದ್ದು ಗರ್ಭಗೃಹದ ಪವೇಶದ್ವಾರದಲ್ಲಿಯೇ ಮುಳ್ಳಕಂಟಿಗಳು ಬೆಳೆದು ಅದರ ಪ್ರವೇಶಕ್ಕೂ ತೀವ್ರ ಅಡೆತಡೆ ನಿರ್ಮಾಣವಾಗಿದೆ. ಈ ಎರಡು ದೇವಾಲಯಗಳನ್ನು ಹಿಂಭಾಗದಿಂದ ನೋಡಿದಾಗ ಇದೊಂದು ಸಾಲಾಗಿ ಗರ್ಭಗೃಹ ಹೊಂದಿರುವ ದ್ವಿಕೂಟದಂತೆ ಭಾಸವಾಗುತ್ತದೆ. ಆದರೆ ಇವೆರಡು ಪ್ರತ್ಯೇಕ ಗರ್ಭಗಳೇ ಆಗಿವೆ.

ಕುಂತಿ ಗುಡಿಯ ಅಧಿಷ್ಠಾನವು ಸರಳ ರಚನೆ ಹೊಂದಿವೆ. ಅದರಲ್ಲಿರುವ ಭಾಗಗಳು ಮುಂಚಾಚಿದಂತೆ ಒಂದರ ಮೇಲೆ ಒಂದು ಕಲ್ಲನ್ನಿಟ್ಟು ಜೋಡಿಸಿದ ಹಾಗೆ ಕಾಣುತ್ತದೆ. ಹೊರ ಗೋಡೆಯ ಭಾಗವು ನಿರಾಡಂಬರ ವಾಗಿರುವುದು. ಮಧ್ಯಭಾಗದಲ್ಲಿ ಉಬ್ಬಿದ ಪಟ್ಟಿಯೊಂದು ಹೊರಗೋಡೆಯ ಸುತ್ತಲೂ ಮುಂದುವರೆದಿದೆ. ಕುಂತಿ ಗುಡಿಯು ಫಂಸಾನ (ಕದಂಬ–ನಾಗರ) ಶಿಖರವನ್ನು ಹೊಂದಿದೆ.

## ಗಂಗಾಧರೇಶ್ವರ ಗುಡಿ

ಈ ದೇವಾಲಯ ಮೊದಲು ಪೂರ್ವಾಭಿಮುಖ ವಾಗಿತ್ತು. ಸದ್ಯ ಉತ್ತರಾಭಿಮುಖವಾದ ಪ್ರವೇಶವನ್ನು ನಿರ್ಮಿಸಲಾಗಿದೆ. ಇದು ಗರ್ಭಗೃಹ ತೆರೆದ ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಗರ್ಭಗೃಹದ ಬಾಗಿಲ ವಾಡವು ನಾಲ್ಕು ಪಟ್ಟಿಕೆಗಳ ರಚನೆಯದ್ದು. ದ್ವಾರಬಂಧದ ಪೇದ್ಯ ಭಾಗದಲ್ಲಿ ಕಂಬಗಳನ್ನು ಚಿತ್ರಿಸಲಾಗಿದೆ. ಈ ಕಂಬಗಳನ್ನು ವಿಶೇಷ ಅಲಂಕರಣೆಗೊಳಿಸಲಾಗಿದೆ. ಲಲಾಟವು ಸಾಪಾಟಗಿದ್ದು ಅದರಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ.

ನವರಂಗದಲ್ಲಿರುವ ಕಂಬಗಳು ಸಾದಾ ರಚನೆಯವು ಗಳು. ಇವು ಬುಡದಲ್ಲಿ ಚೌಕಾಕಾರ ಹಾಗೂ ಮಧ್ಯಭಾಗದಲ್ಲಿ ದುಂಡಾಗಿದ್ದು ಈ ಕಂಬಗಳಿಗೆ ಬೋಧಿಗೆ ಹಾಗೂ ಫಲಕ ಗಳನ್ನು ಅಳವಡಿಸಲಾಗಿದೆ. ಇವು ಗಾತ್ರದಲ್ಲಿ ಚಿಕ್ಕಕಂಬಗಳು. ದೇವಾಲಯದ ಹೊರಗೋಡೆ ಹಾಗೂ ಅಧಿಷ್ಠಾನದ ಭಾಗವು ಅತ್ಯಂತ ಸರಳ ರಚನೆಯಿಂದ ಕೂಡಿವೆ. ಅಧಿಷ್ಠಾನದ ಹೆಚ್ಚಿನ ಭಾಗವು ಮಣ್ಣಿನಿಂದ ಆವೃತವಾಗಿದ್ದು ಅದರಲ್ಲಿರುವ ಭಾಗಗಳು ಸ್ಪಷ್ಟವಾಗಿ ಕಾಣುವುದಿಲ್ಲ. ಈ ದೇವಾಲಯಕ್ಕೆ ಫಂಸಾನ ಮಾದರಿಯ ಶಿಖರವಿದ್ದು ಕಲಶ ಭಾಗವು ಬಿದ್ದಿದೆ. ಅದರ ಸ್ತೂಪಿ (ಗ್ರೀವದ ಮೇಲಿನ ಭಾಗ) ಇದ್ದು ಇದು ಚೌಕಾಕಾರವಾಗಿದೆ. ಈ ಗುಡಿಯ ಪಕ್ಕದಲ್ಲಿಯೇ ಅಗಲ ಮತ್ತು ಆಳವಾದ ಬಾವಿಯೊಂದಿದ್ದು ಅದು ಬಹುಶಃ ಪ್ರಾಚೀನ ದೇವಾಲಯಕ್ಕೆ ಸಂಬಂಧಿಸಿದ್ದಾಗಿರಬಹುದು.

## ಕರೆಮ್ಮನ ಗುಡಿ

ಇದನ್ನು ಕಳ್ಳರ ಗುಡಿ ಮತ್ತು ಬಸವಣ್ಣನ ಗುಡಿ ಯೆಂತಲೂ ಕರೆಯಲಾಗುತ್ತದೆ. ಗುಲಬರ್ಗಾ ಗ್ಯಾಜಿಟಿಯರ್ (ಪುಟ ೭೯೩) ನಲ್ಲಿ ನಾರಾಯಣನ ಗುಡಿಯೆಂದು ಸಹ

ಹೆಸರಿಸಲಾಗಿದೆ. ಇದು ಗರ್ಭಗೃಹ, ತೆರೆದ ಅಂತರಾಳ, ನವರಂಗವನ್ನು ಹೊಂದಿದೆ. ದೇವಾಲಯದ ಹೊರ ಗೋಡೆಯ ಭಾಗಗಳು ಕ್ಷೀಣಗೊಂಡಿವೆ. ಗುಡಿಯು ಅಷ್ಟೇನೂ ವಿಶಾಲವಾಗಿರದಿದ್ದರೂ ವಾಸ್ತುಶೈಲಿಯ ದೃಷ್ಟಿಯಿಂದ ತುಂಬಾ ಮಹತ್ವದ ರಚನೆಯಾಗಿದೆ.

ಗರ್ಭಗೃಹದ ಬಾಗಿಲವಾಡವು ಪಂಚಪಟ್ಟಿಕೆಗಳಿಂದ ಕೂಡಿದೆ. ಅದರಲ್ಲಿ ಬಳ್ಳಿ, ಪುಷ್ಪ ಪಟ್ಟಿಕೆ ಹಾಗೂ ಅರ್ಧ ಕಂಬಗಳ ರಚನೆಯನ್ನು ಮಾಡಲಾಗಿದೆ. ಲಲಾಟದಲ್ಲಿ ಸುಂದರ ವಾದ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ಉತ್ತರಾಂಗದ ಭಾಗವು ಸಾಪಾಟಾಗಿದೆ. ಆದರೆ ಅದರಲ್ಲಿರುವ ಹೊಸ್ತಿಲವು ಸ್ವಲ್ಪ ಮುಂಚಾಚಿದೆ. ದ್ವಾರಬಂಧದ ಪೇದ್ಯ ಭಾಗದಲ್ಲಿ ವೃತ್ತ ಕುಂಬಗಳನ್ನು ಕೆತ್ತಲಾಗಿದ್ದು ಅವು ತುಂಬಾ ಸುಂದರವಾದ ಕೆತ್ತನೆಗಳಾಗಿವೆ. ಈ ಕುಂಬದಿಂದ ಉತ್ಪತ್ತಿಗೊಂಡು ಹೊರ ಭಾಗದಲ್ಲಿ ಚಾಚಿಕೊಂಡಿರುವ ಎಲೆ-ಬಳ್ಳಿಯನ್ನು ಮನಮೋಹಕವಾಗಿ ಕೆತ್ತಲಾಗಿದೆ.

ದೇವಾಲಯಕ್ಕೆ ತೆರೆದ ಅಂತರಾಳವಿದ್ದು ಅದು ಬರಿದಾಗಿದೆ. ನವರಂಗವು ನಾಲ್ಕು ಕಂಬಗಳನ್ನು ಹಾಗೂ ಛತ್ತಿನಲ್ಲಿ ಕಮಲಪುಷ್ಪ ಕೆತ್ತನೆಯ ಭುವನೇಶ್ವರಿಯನ್ನು ಒಳಗೊಂಡಿದೆ. ಈ ಸ್ಥಂಭಗಳು ಆಕಾರದಲ್ಲಿ ಗಿಡ್ಡವಾಗಿದ್ದರು ರಚನೆಯಲ್ಲಿ ಸುಂದರವಾದವುಗಳಾಗಿವೆ. ಬುಡಭಾಗ (ಉಪಾನ)ವು ಚೌಕಾಕಾರವಾಗಿದ್ದು ಅದರ ಮೇಲೆ ತ್ರಿಕೋನ ಪಟ್ಟಿಕೆಗಳನ್ನು ನಾಲ್ಕೂ ಕಡೆಗೂ ಕೆತ್ತಲಾಗಿದೆ. ಈ ಉಪಾನದ ಮೇಲಿನ ಭಾಗವು ಚೌಕಾಕಾರವಾಗಿದೆ ಹಾಗೂ ಅದರ ಮೇಲೆ ಯಾವುದೆ ಕೆತ್ತನೆಗಳಿಲ್ಲ. ಈ ಚೌಕಾದ ಭಾಗದ ಮೇಲಿನ ಭಾಗವು ವೃತ್ತಗಳನ್ನು ಹೊಂದಿದೆ. ಇವು ಎಂಟು ಕೋನದ ವೃತ್ತಪಟ್ಟಿಕೆಗಳು ಹಾಗೂ ಈ ಪಟ್ಟಿಕೆಯ ಮೇಲೆ ಸೂಕ್ಷವಾದ ಕೆಲವು ಅಲಂಕರಣೆಯನ್ನು ಸಹ ಮಾಡಲಾಗಿದೆ. ಅದರ ಮೇಲ್ಭಾಗ (ಕಲಶ)ದ ಮೇಲೆ ತ್ರಿಕೋನಪಟ್ಟಿಕೆಗಳನ್ನು ಕೆತ್ತಲಾಗಿದೆ. ಉಳಿದಂತೆ ಈ ಕಂಬಗಳಲ್ಲಿ ವೃತ್ತ, ತಟ್ಟೆ ಆಕಾರದ ಫಲಕ ಹಾಗೂ ಬೋಧಿಗೆಗಳನ್ನು ಅಳವಡಿಸಲಾಗಿದೆ. ನವರಂಗ ಗೋಡೆಗಳು ಬಿದ್ದಿರುವುದರಿಂದ ಕೇವಲ ಎರಡು ಕೋಷ್ಟಕಗಳು ಮಾತ್ರ ಸದ್ಯ ಕಂಡುಬರುತ್ತವೆ.

ಈ ಗುಡಿಗೆ ಫಂಸಾನ ಮಾದರಿಯ ಶಿಖರವಿದ್ದು ಅದರ ಕಲಶ ಮತ್ತು ಸ್ತೂಪಿ ಭಾಗಗಳು ಬಿದ್ದಿವೆ. ಹೊರಗೋಡೆ ಸರಳ ರಚನೆಯಿಂದ ಕೂಡಿದ್ದು ಅದರ ಮೇಲೆ ಯಾವ ಅಲಂಕರಣೆಗಳಿರುವುದಿಲ್ಲ.

### ಧರ್ಮರಾಜನ ಗುಡಿ

ಈ ದೇವಾಲಯುವು ತುಂಬಾ ವಿಶಾಲವಾದ ದೇವಾಲಯವಾಗಿತ್ತು. ಆದರೆ ಕಾರಣಾಂತರಗಳಿಂದ ಹಲವು ಮಾರ್ಪಡುಗಳಿಗೆ ಒಳಗಾಗಿ ತನ್ನ ಮೂಲ ರೂಪದಲ್ಲಿ ಹಲವು ಬದಲಾವಣೆ ಕಾಣುವಂತಾಗಿದೆ. ಸದ್ಯ ಈ ದೇವಾಲಯವು ದಕ್ಷಿಣಾಭಿಮುಖ ಪ್ರವೇಶವನ್ನು ಹೊಂದಿದ್ದು ಪ್ರವೇಶದ ಮೊದಲು ಎತ್ತರವಾದ ಕಟ್ಟೆಯನ್ನು ಕಟ್ಟಲಾಗಿದೆ. ಈ ಕಟ್ಟೆಗೆ ಜೋಡಿಸಿರುವ ಮೆಟ್ಟಲುಗಳಿಗೆ ಪ್ರಾಚೀನ ಹಸ್ತಿಫಲಕ ಗಳನ್ನು ಅಳವಡಿಸಲಾಗಿದೆ. ಇದೊಂದು ತ್ರಿಕೂಟ ದೇವಾಲಯ ವಾಗಿದ್ದು ಸದ್ಯ ಪೂರ್ವ ಮತ್ತು ಪಶ್ಚಿಮಾಭಿಮುಖ ಗರ್ಭಗೃಹ ಗಳ ಭಾಗಗಳು ಮಾತ್ರ ಉಳಿದುಕೊಂಡಿವೆ. ಅದರಲ್ಲೂ ಪೂರ್ವಾಭಿಮುಖ ಗರ್ಭಗೃಹದ ಬಾಗಿಲವಾಡವು ಸಹ ಹಾಳಾಗಿರಬಹುದು. ಆದ್ದರಿಂದ ಅಂತರಾಳದ ತೋರಣ ಕಂಬಗಳನ್ನು ಇದಕ್ಕೆ ಜೋಡಿಸಲಾಗಿದೆ. ಹೀಗಾಗಿ ಇದು ಪಶ್ಚಿಮಾಭಿಮುಖವಾದ ಗರ್ಭಗೃಹಕ್ಕೆ ಎದುರಾಗಿರುವ ನಂದಿಮಂಟಪದಂತೆ ಭಾಸವಾಗುತ್ತದೆ.

ಪೂರ್ವಾಭಿಮುಖವಾಗಿರುವ ಅಂತರಾಳಕ್ಕೆ ಅಳವಡಿಸಿರುವ ಈ ತೋರಣ ಕಂಬವು ತುಂಬಾ ಆಕರ್ಷಕವಾಗಿದ್ದು ಸುಮಾರು ಹದಿನೈದು ಅಡಿಗಳಿಗಿಂತ ಹೆಚ್ಚಿನ ಎತ್ತರವನ್ನು ಹೊಂದಿರುವುದು. ತೋರಣ ಕಂಬಗಳು ಬುಡದಲ್ಲಿ ಚೌಕಾಕಾರವಾಗಿದ್ದು ಅದರ ಮೇಲ್ಭಾಗದ ಅಂದರೆ ದಂಡಾಗ್ರ ಭಾಗವು ವೃತ್ತಾಕಾರವಾಗಿದೆ. ಇದರಲ್ಲಿ ವೃತ್ತಾಕಾರದ ಬಳೆಗಳನ್ನು ಒಂದರಮೇಲೆ ಒಂದು ಇಟ್ಟು ಜೋಡಿಸಿದಂತೆ ಕಾಣುತ್ತದೆ. ಅಲ್ಲದೇ ಇದೇ ತೋರಣ ಕಂಬಗಳಲ್ಲಿ ಪಿಂಗಾಣಿ ಬಟ್ಟಲನ್ನು ಉಲ್ಟಾ ಇಟ್ಟಾಗ ಕಾಣುವ ಚಿತ್ರದಂತೆ ಇರುವ ರಚನಾ ವಿನ್ಯಾಸಗಳು ಇದರಲ್ಲಿವೆ.

ಪಶ್ಚಿಮಾಭಿಮುಖ ಗರ್ಭಗೃಹ ವಿಶಾಲವಾಗಿದ್ದು ಇದರಲ್ಲಿ ಎತ್ತರವಾದ ಲಿಂಗಪೀಠ ಹಾಗೂ ಎತ್ತರದ ದಂಡ (ರುದ) ಭಾಗಗಳಿವೆ. ಇವುಗಳಿಗೆ ಕಪ್ಪು ಬಣ್ಣಬಳಿಯಲಾಗಿದೆ. ಬಲಕ್ಕೆ ಪ್ರಣಾಳಿಯನ್ನು ನಿರ್ಮಿಸಲಾಗಿದೆ. ಈ ಗರ್ಭಗೃಹದ ಬಾಗಿಲವಾಡವು ಚಿತ್ತಾಕರ್ಷಕವಾಗಿದ್ದು ಸಪ್ತಶಾಖೆಗಳನ್ನು ಹೊಂದಿರುವುದು. ಇದರಲ್ಲಿ ಬಳ್ಳಿ, ಎಲೆಯ, ಚಿಕ್ಕಮಣಿಸರಗಳ, ಹೊಸೆದ ಹಗ್ಗದ ರಚನೆಗಳನ್ನು ಬಿಡಿಸಲಾಗಿದೆ. ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪ ಹಾಗೂ ಉತ್ತರಾಂಗದ ಭಾಗದಲ್ಲಿ ಬ್ರಹ್ಮವಿಷ್ಣು ಮತ್ತು ಮಹೇಶ್ವರನ ಚಿಕ್ಕದಾಗಿರುವ ಉಬ್ಬುಶಿಲ್ಪ ಗಳನ್ನು ಕೆತ್ತಲಾಗಿದೆ. ಪೇದ್ಯ (ಕೆಳ) ಭಾಗದಲ್ಲಿ ದ್ವಾರಪಾಲಕ ಉಬ್ಬುಶಿಲ್ಪಗಳನ್ನು ರಚಿಸಲಾಗಿದೆ. ಇಡೀ ಬಾಗಿಲವಾಡಕ್ಕೆ ಕಪ್ಪು ಬಣ್ಣ ಬಳೆಯಲಾಗಿದ್ದರಿಂದ ಅದರ ಮೂಲ ಸೌಂದರ್ಯ ಮಾಸಿದಂತಾಗಿದೆ.

ಪಶ್ಚಿಮಾಭಿಮುಖ ಗರ್ಭಗೃಹಕ್ಕೆ ಅಂತರಾಳವಿದ್ದು ಅದನ್ನು ತೋರಣದಿಂದ ಅಲಂಕರಣೆಗೊಳಿಸಲಾಗಿದೆ. ಇದು ಸಹ ಸುಮಾರು ಹನ್ನೆರಡು ಅಡಿ ಎತ್ತರವಾಗಿದ್ದು

ಯಾಳಿಯಿಂದ ಸುಂದರಗೊಳಿಸಲಾಗಿದೆ. ಈ ತೋರಣದ ಮಧ್ಯಭಾಗದಲ್ಲಿ ತ್ರಿಮೂರ್ತಿಗಳ ಉಬ್ಬುಶಿಲ್ಪಗಳನ್ನು ಕಂಡರಿಸಲಾಗಿದೆ. ಅಂತರಾಳಕ್ಕೆ ತೋರಣವಲ್ಲದೇ ಇದಕ್ಕೊಂದು ಬಾಗಿಲವಾಡವು ಇದೆ. ಇದು ತ್ರಿಪಟ್ಟಿಕೆಯ ರಚನೆಯಿಂದ ಕೂಡಿದೆ. ಇದರಲ್ಲಿ ಅರ್ಧಕಂಬ, ಪುಷ್ಪಪಟ್ಟಿಕೆ ಹಾಗೂ ಹೊಸೆದ ಹಗ್ಗದಂತೆ ಕಾಣುವ ರಚನೆಗಳು ಅಂತರಾಳದ ಬಾಗಿಲವಾಡದಲ್ಲಿವೆ. ಅಂತರಾಳದ ದ್ವಾರಬಂಧಕ್ಕೆ ಹೊಂದಿಕೊಂಡಂತೆ ಇಕ್ಕೆಲುಗಳಲ್ಲಿ ಗೋಡೆಗಂಬಗಳಿದ್ದು ಅವುಗಳ ಮೇಲೆ ಚಾಮರಧಾರಿಣಿಯರ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ.

ಅಂತರಾಳದ ತೋರಣದ ಮೇಲ್ಭಾಗದಲ್ಲಿ ನಟರಾಜನ ಶಿಲ್ಪವನ್ನು ಗೋಡೆಯ ಭಾಗದಲ್ಲಿ ಅಳವಡಿಸಲಾಗಿದೆ. ಸುಮಾರು ಮೂರು ಅಡಿ ಎತ್ತರ ಹಾಗೂ ಎಂಟು ಅಡಿ ಅಗಲವಾಗಿರುವ ಫಲಕದಲ್ಲಿ ನಟರಾಜನ ಉಬ್ಬುಶಿಲ್ಪ ಕೆತ್ತಲಾಗಿದೆ. ಅಲ್ಲದೇ ಈ ಫಲಕವನ್ನು ಮಂಟಪದಂತೆ ಕಂಡರಿಸಲಾಗಿದೆ. ಇದಕ್ಕೆ ಫಂಸಾನ ಮಾದರಿಯ ಶಿಖರವನ್ನು ಕೆತ್ತಲಾಗಿದೆ. ಇದೇ ಫಲಕದಲ್ಲಿ ಗಜಶಿಲ್ಪಗಳಿಂದ ಕೂಡಿದ ಅಲಂಕರಣೆಯನ್ನು ಸಹ ಮಾಡಲಾಗಿದೆ.

ನವರಂಗವು ವಿಶಾಲವಾಗಿದ್ದು ಇದಕ್ಕೆ ಪೂರ್ವ-ಪಶ್ಚಿಮ ಪ್ರವೇಶವನ್ನು ನಿರ್ಮಿಸಲಾಗಿದೆ. ಇದಕ್ಕೆ ಕಕ್ಷಾಸನ ವ್ಯವಸ್ಥೆಯನ್ನು ಮಾಡಲಾಗಿದೆ. ನವರಂಗದ ಎರಡು ಪ್ರವೇಶಗಳಿಗೆ ಜಾಲಂಧರಗಳನ್ನು ಅಳವಡಿಸಲಾಗಿದೆ. ಅದು ವಜ್ರಾಕೃತಿಯ ಪಟ್ಟಿಕೆ ಹಾಗೂ ಬಾದಾಮ ಆಕೃತಿಯ ಪಟ್ಟಿಕೆಗಳನ್ನು ಹೊಂದಿದೆ. ಗರ್ಭಗೃಹಗಳು, ಅಂತರಾಳಗಳು ಹಾಗೂ ನವರಂಗವನ್ನು ಒಳಗೊಂಡಂತೆ ದಕ್ಷಿಣಾಭಿಮುಖವಾಗಿ ಇಡೀ ದೇವಾಲಯಕ್ಕೆ ಪ್ರವೇಶ ದ್ವಾರವನ್ನು ನಿರ್ಮಿಸಲಾಗಿದೆ.

ದೇವಾಲಯದ ಅಧಿಷ್ಠಾನವು ಉಪಾನ, ಜಗತಿ, ತ್ರಿಪಟ್ಟ ಕುಮುದ, ಗಳ ಹಾಗೂ ಕಪೋತ ಭಾಗಗಳನ್ನು ಹೊಂದಿದೆ. ಹೊರಗೋಡೆಯ ಭಾಗವು ಸರಳ ರಚನೆಯಿಂದ ಕೂಡಿದ್ದು ಪ್ರಸ್ತರ ಭಾಗದಲ್ಲಿ ಅಧಿಷ್ಠಾನದಲ್ಲಿರುವ ಭಾಗಗಳನ್ನೆ ಪುನರಾವರ್ತಿಸಲಾಗಿದೆ. ಈ ದೇವಾಲಯುಕ್ಕಿರುವ ಅಧಿಷಾವಿನದ ಭಾಗಗಳು ಅತ್ಯಂತ ಸ್ಪಷ್ಟವಾಗಿ ಕಾಣುತ್ತವೆ. ಆದರೆ ಇದನ್ನು ಹೊರತುಪಡಿಸಿ ಉಳಿದ ಯಾವ ದೇವಾಲಯಗಳಲ್ಲಿಯೂ ಇಷ್ಟು ಸ್ಪಷ್ಟವಾಗಿ ಅಧಿಷಾವಿನದ ಭಾಗಗಳು ಕಂಡುಬರುವುದಿಲ್ಲ.

ಈ ಗುಡಿಯಲ್ಲಿ ಮುಖ್ಯವಾಗಿ ಸೂರ್ಯ, ಭೈರವ, ಉಮಾಮಹೇಶ್ವರ ಹಾಗೂ ನಾಗಶಿಲ್ಪಗಳನ್ನು ಇಡಲಾಗಿದೆ. ಪ್ರಾಚೀನ ದೇವಾಲಯದ ಹಸ್ತಿಫಲಕ, ತ್ರುಟಿತ ಯಾಳಿ ಫಲಕಗಳು ಸಹ ಇದೇ ಆವರಣದಲ್ಲಿ ಬಿದ್ದಿವೆ. ಪ್ರಾಚೀನ ತ್ರಿಕೂಟವಾಗಿದ್ದ ಈ ದೇವಾಲಯವನ್ನು ಶಾಸನಗಳಲ್ಲಿ ಉಲ್ಲೇಖವಾದ ತ್ರಿಪುರಾಂತಕ ದೇವಾಲಯಕ್ಕೆ ಸಮೀಕರಿಸಿ ಅಭಿಪ್ರಾಯಿಸಲಾಗಿದೆ. (ಗುಲಬರ್ಗಾ ಗ್ಯಾಜಿಟಿಯರ್, ಪುಟ ೭೯೩).

## ಬಸವಣ್ಣನ ಗುಡಿ

ಈ ದೇವಾಲಯ ಗರ್ಭಗೃಹ, ತೆರೆದ ಅಂತರಾಳ ಹಾಗೂ ನವರಂಗವನ್ನು ಹೊಂದಿದೆ. ಗರ್ಭಗೃಹದ ಬಾಗಿಲವಾಡವು ತ್ರಿಪಟ್ಟಿಕೆಯ ರಚನೆಯನ್ನು ಒಳಗೊಂಡಿದೆ. ಪೇದ್ಯ ಭಾಗದಲ್ಲಿ ಕುಂಬಗಳನ್ನು ರಚಿಸಲಾಗಿದೆ. ಬಾಗಿಲವಾಡದ ಲಲಾಟದಲ್ಲಿ ಗಜಲಕ್ಷ್ಮೀ ಉಬ್ಬುಶಿಲ್ಪವಿದೆ. ತೆರದ ಅಂತರಾಳ ಬರಿದಾಗಿದೆ.

ನವರಂಗದಲ್ಲಿರುವ ಗಿಡ್ಡನೆಯ ಕಂಬಗಳು ಸಾದಾ ರಚನೆಯವುಗಳು. ಇವುಗಳನ್ನು ಗಮನಿಸಿದರೆ ಈ ಗ್ರಾಮದಲ್ಲಿ ಅಸ್ತಿತ್ವದಲ್ಲಿರುವ ದೇವಾಲಯಗಳಲ್ಲಿರುವ ಎಲ್ಲ ಕಂಬಗಳ ರಚನಾ ವಿಧಾನಕ್ಕಿಂತ ಭಿನ್ನವಾಗಿರುವವು. ಬಹುಶಃ ಈ ಕಂಬಗಳು ನಂತರ ಕಾಲದಲ್ಲಿ ಜೋಡಿಸಿದವುಗಳೇ ಎಂಬುದನ್ನು ಅಭಿಪ್ರಾಯಿಸಬಹುದು. ಉಸುಕು ಕಲ್ಲಿನಲ್ಲಿ ನಿರ್ಮಾಣವಾಗಿರುವ ಇವು ಚೌಕಾಕಾರದ ವಿನ್ಯಾಸವನ್ನು ಹೊಂದಿವೆ. ನವರಂಗವನ್ನು ದುರಸ್ತಿಗೊಳಿಸಿದ್ದರಿಂದಾಗಿ ಹೊರಗೋಡೆಯ ಭಾಗವು ಸಿಮೆಂಟಿನಿಂದ ಬಳಿಯಲಾಗಿದೆ. ಅಲ್ಲದೇ ನವರಂಗದ ಬಾಗಿಲವಾಡವು ಬದಲಾವಣೆಗೆ ಒಳಗಾಗಿ ಕಲ್ಲಿನಲ್ಲಿ ನಿರ್ಮಿಸಿದ ಸಾದಾ ಚೌಕಟ್ಟುಗಳನ್ನು ಮಾತ್ರ ಹೊಂದಿದೆ. ಈ ಗುಡಿಯಲ್ಲಿ ಮುಖ್ಯವಾಗಿ ಎರಡು ಸುಂದರವಾದ ಶಿಲಾಶಾಸನಗಳನ್ನು ಇಡಲಾಗಿದೆ. ಅವು ಪ್ರಕಟಗೊಂಡಿವೆ. ಬಸವಣ್ಣನ ಗುಡಿಯೇ ಶಾಸನೋಕ್ತ ಗವರೇಶ್ವರ ದೇವಾಲಯವಾಗಿದೆಯೆಂದು ಅಭಿಪ್ರಾಯಿಸಲಾಗಿದೆ (ಗುಲಬರ್ಗಾ ಗ್ಯಾಜಿಟಿಯರ್, ಪುಟ ೭೯೪). ನಾಗಶಿಲ್ಪವು ಸಹ ಇದೇ ನವರಂಗದಲ್ಲಿಡಲಾಗಿದೆ.

## ನಾರಾಯಣ ಗುಡಿ ಅಥವ ಅಣ್ಣತಂಗಿ ಗುಡಿ

ಈ ದೇವಾಲಯವನ್ನು ಎತ್ತರ ಗುಡ್ಡದಲ್ಲಿ ಕಟ್ಟಲಾಗಿದೆ. ಇದು ಸಹ ದ್ವಿಕೂಟ ರಚನೆಯನ್ನು ಹೊಂದಿದೆ. ಆದರೆ ಇಂದು ಅದರ ಮೇಲ್ಛಾವಣಿಯ ಭಾಗಗಳು ಬಿದ್ದುಹೋಗಿದ್ದು ಹಾಗೂ ದ್ವಿಕೂಟದಲ್ಲಿದ್ದ ಒಂದು ಗರ್ಭಗೃಹ ಸಂಪೂರ್ಣವಾಗಿ ನಾಶವಾಗಿದೆ. ನವರಂಗವು ಸಂಪೂರ್ಣವಾಗಿ ನೆಲಕಚ್ಚಿದೆ. ಅಳಿದುಳಿದ ಗರ್ಭಗೃಹದಲ್ಲಿ ಅನಂತಶಯನ ಸುಂದರವಾದ ಶಿಲ್ಪವೊಂದಿದೆ. ಸುಮಾರು ನಾಲ್ಕು ಅಡಿ ಅಗಲವಾಗಿದ್ದು ಎರಡು ಅಡಿ ಎತ್ತರವಾಗಿದೆ. ನಾರಾಯಣನು ಆದಿಶೇಷನ ಮೇಲೆ ಶಯನ (ಮಲಗಿದ್ದು)ನಾಗಿದ್ದು ಕಾಲುಗಳ ಪಕ್ಕದಲ್ಲಿ ಪತ್ನಿ ಲಕ್ಷ್ಮೀಯು ಕುಳಿತಿದ್ದಾಳೆ. ಕಪ್ಪ್ ಕಲ್ಲಿನಲ್ಲಿ ರಚನೆಯಾದ

ಸುಂದರವಾದ ಶಿಲ್ಪ ಇದಾಗಿದೆ. ಪೂರ್ವಾಭಿಮುಖವಾಗಿರುವ ಗರ್ಭಗೃಹದ ಬಾಗಿಲವಾಡವು ಅತ್ಯಂತ ಸರಳ ರಚನೆಯಿಂದ ಕೂಡಿದೆ.

## ರಾಮಲಿಂಗೇಶ್ವರ ಗುಡಿ

ಇದನ್ನು ಋಷಿ ಗುಡಿಯೆಂತಲೂ ಕರೆಯುತ್ತಾರೆ. ಈ ಗುಡಿಯು ತಗ್ಗಿನಲ್ಲಿ ನಿರ್ಮಾಣವಾಗಿದ್ದರಿಂದ ಹಾಗೂ ಪಕ್ಕದಲ್ಲಿಯೇ ನೀರಿನ ಜರಿಗಳಿರುವುದರಿಂದ ಸಹಜವಾಗಿ ಗುಡಿಯ ಸುತ್ತಲೂ ನೀರು ನಿಂತಿದೆ. ಅಲ್ಲದೇ ಗುಡಿಯನ್ನು ಪ್ರವೇಶಿಸಲು ಅಸಾಧ್ಯವೆನ್ನುವಷ್ಟು ಕಾಡು ಜಾಲಿ ಬೆಳೆದು ಇಡೀ ಸ್ಮಾರಕವೇ ಮುಚ್ಚಿಹೋಗಿದೆ. ಇದೊಂದು ದ್ವಿಕೂಟ ರಚನೆ. ಎರಡು ಗರ್ಭಗೃಹಗಳು ಹಾಗು ಎರಡು ತೆರೆದ ಅಂತರಾಳಗಳನ್ನು ಒಳಗೊಂಡಂತೆ ಒಂದು ನವರಂಗವಿದೆ. ಈ ಭಾಗಗಳನ್ನು ಗುಡಿಯ ಮೇಲ್ಭಾಗದಲ್ಲಿ ಹತ್ತಿ ಇಣಿಕಿ ನೋಡಿದರೆ ಮಾತ್ರ ಕಾಣುತ್ತದೆ. ಪ್ರವೇಶವು ದುರ್ಗಮವಾಗಿರುವುದರಿಂದ ಒಳಭಾಗದ ರಚನಾ ವಿನ್ಯಾಸಗಳು ತಿಳಿಯುವುದೇ ಇಲ್ಲ.

ಈ ಗುಡಿಯ ಹತ್ತಿರದಲ್ಲಿಯೇ ರಾಮಲಿಂಗೇಶ್ವರ ಮಠವನ್ನು ಸ್ಥಾಪಿಸಲಾಗಿದೆ. ಈ ಮಠದ ಗೋಡೆಯ ಭಾಗದಲ್ಲಿ ಸುಂದರವಾದ ಸಪ್ತಮಾತೃಕೆಯ ಶಿಲ್ಪವನ್ನು ಹೂಳಿಡಲಾಗಿದೆ. ಬಹುಶಃ ಇದು ರಾಮಲಿಂಗೇಶ್ವರ ಗುಡಿಗೆ ಸಂಬಂಧಿಸಿದ ಶಿಲ್ಪಾವಶೇಷ ಇದಾಗಿರಬಹುದೇ? ಕ್ರಿ.ಶ. ೧೨೨೯ ಶಾಸನದಲ್ಲಿ ಉಲ್ಲೇಖಿತಗೊಂಡಿರುವ ಸಿಡಿಲು ಬಾವಿ ರಾಮನಾಥನ ಗುಡಿ ಇದಾಗಿರಬಹುದೆಂದು ಅಭಿಪ್ರಾಯಿಸಲಾಗಿದೆ (ಗುಲಬರ್ಗಾ ಗ್ಯಾಜಿಟಿಯರ್-೭೯೨).

ಇಲ್ಲಿರುವ ದೇವಾಲಯಗಳ ಕುರಿತಂತೆ ಇನ್ನೊಂದು ಜಿಜ್ಞಾಸೆಯ ಸಂಗತಿ ಎಂದರೆ ಪಾಂಡವರಿಗೆ ಸಂಬಂಧಿಸಿದ ಹೆಸರುಗಳು. ಈ ಗ್ರಾಮ ಪರಿಸರದಲ್ಲಿ ನಿರ್ಮಾಣವಾದ ಪ್ರಾಚೀನ ಕಾಲದ ಗುಡಿಗಳು ಸ್ಪಷ್ಟವಾದ ಹೆಸರುಗಳನ್ನು ಹೊಂದಿದ್ದರು ಅವು ತಮ್ಮ ಮೂಲ ಹೆಸರನ್ನು ಉಳಿಸಿಕೊಳ್ಳಲಾಗಲಿಲ್ಲ. ಈ ದೇವಾಲಯಗಳು ಹೆಚ್ಚಿನ ಅಲಕ್ಷ್ಕೆ ಒಳಗಾಗಿದ್ದರಿಂದ ಕಾಲಾನಂತರ ಅವು ಪ್ರಾಚೀನ ಹೆಸರು ಹಾಗೂ ಮಹತ್ವವನ್ನು ಕಳೆದುಕೊಂಡವು.

ಸಗರನಾಡಿನಲ್ಲಿ ಪ್ರಮುಖ ಸ್ಥಳವಾಗಿದ್ದ ಹಗರಟಗಿ ಗ್ರಾಮವು ಕರ್ನಾಟಕದ ಪ್ರಾಚೀನ ಕಾಲದ ಇತಿಹಾಸ ಮತ್ತು ಸಂಸ್ಕೃತಿಯಲ್ಲಿ ಅತ್ಯಂತ ಮಹತ್ವದ ಪಾತ್ರವಹಿಸಿದೆ. ಆ ಸಂದರ್ಭದಲ್ಲಿ ನಿರ್ಮಾಣವಾದ ದೇವಾಲಯಗಳು ಈ ಪ್ರದೇಶದ ಪ್ರಾಚೀನ ಮತ್ತು ಮಧ್ಯಕಾಲೀನ ಸಾಂಸ್ಕೃತಿಕ ಇತಿಹಾಸ ಕಟ್ಟಿಕೊಡುವಲ್ಲಿ ಮುಖ್ಯ ಸಾಕ್ಷಿಗಳಾಗಿ ನಿಂತಿವೆ.



### ಆಧಾರಸೂಚಿ


೧. ಅಪರ್ಣ ಕೂ.ಸ., **ದೇವಾಲಯ ವಾಸ್ತುಶಿಲ್ಪ ಪರಿಚಯ,** ಕವಿವಿ, ಹಂಪಿ, ೧೯೯೯.
೨. ಕಲಬುರ್ಗಿ ಎಂ.ಎಂ., **ಮಾರ್ಗ** ಸಂಪುಟಗಳು ೧, ೨ ಮತ್ತು ೩, ಸಪ್ನಾ ಬುಕ್ ಹೌಸ್, ಬೆಂಗಳೂರು, ೨೦೧೦.
೩. ಕಪಟರಾಳ ಕೃಷ್ಣರಾವ್: **ಸುರಪುರ ಸಂಸ್ಥಾನದ ಇತಿಹಾಸ,** ಬೆಂಗಳೂರು, ೧೯೭೭.
೪. ಕುಲಕರ್ಣಿ ವಿರೂಪಾಕ್ಷ (ಅನು)., **ಕಾಪಾಲಿಕರು ಮತ್ತು ಕಾಳಾಮುಖರು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೨೦೦೩.
೫. ಕೊಪ್ಪ ಎಸ್.ಕೆ., **ತರ್ದವಾಡಿ ನಾಡು-ಒಂದು ಅಧ್ಯಯನ,** ಪ್ರತಿಭಾ ಪ್ರಕಾಶನ, ಇಂಡಿ-೧೯೯೦.
೬. ಕೃಷ್ಣ ಎ., **ಸಗರನಾಡ ದರ್ಶನ,** ಸುರಪುರ-೧೯೮೫.
೭. ಹನುಮಾಕ್ಷಿ ಗೋಗಿ, **ಸುರಪುರ ತಾಲೂಕಿನ ಶಾಸನಗಳು,** ಹುಬ್ಬಳ್ಳಿ, ೧೯೯೫.
೮. ಗೋಪಾಲ್ ಆರ್ (ಸಂ)., **ಗುಲ್ಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ,** ಪ್ರಾಚ್ಯವಸ್ತು, ಸಂಗ್ರಹಾಲಯಗಳ ಇಲಾಖೆ, ಮೈಸೂರು-೨೦೦೭.
೯. ನಾಗಯ್ಯ ಜೆ.ಎಂ., **ಆರನೆಯ ವಿಕ್ರಮಾದಿತ್ಯನ ಶಾಸನಗಳು ಒಂದು ಅಧ್ಯಯನ,** ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ ೧೯೯೭.
೧೦. ಪದ್ದಯ್ಯ ಕೆ., **ರಿಸೆಂಟ್ ಸ್ಟಡೀಸ್ ಇನ್ ಇಂಡಿಯನ್ ಆರ್ಕಿಯಾಲಜಿ,** ಮುನಶಿರಾಮ್ ಮನೋಹರಲಾಲ್ ಪಬ್ಲಿಷರ್ಸ್, ನವದೆಹಲಿ, ೨೦೦೨.
೧೧. ಪಡಸಲ್ಗಿ ಎಂ.ಎಂ., **ತಿಂಥಣಿ ಮೋನಪ್ಪಯ್ಯ-ಒಂದು ಅಧ್ಯಯನ,** ವೀರಶೈವ ಸಂಸ್ಥೆ ತೋಂಟದಾರ್ಯ ಮಠ, ಗದಗ, ೧೯೯೨.
೧೨. ಪ್ರಭಾಕರ ಎಂ.ಎನ್., **ದೇವಾಲಯ ವಾಸ್ತು,** ಕವಿವಿ, ಹಂಪಿ, ೨೦೧೧.
೧೩. ಪಾಟೀಲ ಎಂ.ಬಿ (ಮು.ಸಂ.), **ಗುಲಬರ್ಗಾ ಜಿಲ್ಲೆಯ ಗ್ಯಾಸೆಟಿಯರ್; ಬಿಜಾಪುರ ಜಿಲ್ಲೆಯ ಗ್ಯಾಸೆಟಿಯರ್,** ಬೆಂಗಳೂರು, ೧೯೯೭, ೧೯೯೮.
೧೪. ಶಿವತಾರಕ ಕೆ.ಬಿ., **ಕರ್ನಾಟಕದ ಪುರಾತತ್ತ್ವ ನೆಲೆಗಳು,** ಕವಿವಿ, ಹಂಪಿ, ೨೦೦೧.
೧೫. ಶಿವಾನಂದ ವಿ., **ಹೈದರಾಬಾದು ಕರ್ನಾಟಕ ಭಾಗದ ಕನ್ನಡ ಶಿಲಾ ಶಾಸನಗಳು,** ಬನಾರಸ್ ವಿಶ್ವವಿದ್ಯಾಲಯ, ಬನಾರಸ್, ೧೯೯೨.
೧೬. ಸುಂದರ ಎ., **ದಿ ಅರ್ಲಿ ಚೇಂಬರ್ ಟೂಂಬ್ಸ್ ಆಫ್ ಸೌತ್ ಇಂಡಿಯಾ,** ಯೂನಿವರ್ಸಲ್ ಪಬ್ಲಿಕೇಷನ್ಸ್, ದೆಹಲಿ, ೧೯೭೫.
೧೭. ಸುಂದರ ಅ (ಸಂ.) **ಕರ್ನಾಟಕದ ಚರಿತ್ರೆ ಸಂಪುಟ-೧,** ಕವಿವಿ, ಹಂಪಿ, ೧೯೯೭.
೧೮. ಸೊಪ್ಪಿಮಠ ಬಸವಲಿಂಗ, **ಕೊಡೇಕಲ್ಲ ಬಸವಣ್ಣ-ಒಂದು ಅಧ್ಯಯನ,** ಶ್ರೀ ಕೊಡೇಕಲ್ಲ ಬಸವೇಶ್ವರ ಅಧ್ಯಯನ ಪೀಠ ಕೊಡೆಕಲ್ಲು, ೧೯೯೭.




# ಮಂಡ್ಯ ಜಿಲ್ಲೆಯ ಬಸರಾಳು ಮಲ್ಲಿಕಾರ್ಜುನ ದೇವಾಲಯ ಒಂದು ವಿಸ್ತೃತ ಅಧ್ಯಯನ

ಎಂ.ಎನ್. ಪ್ರಭಾಕರ್*

**ತೆ**ನೆದಂಕಕುಲದ ಚಿಕ್ಕ ಹಡೆವಳ, ಹೊಯ್ಸಳ ವಿಷ್ಣುವರ್ಧನನಿಂದ ಪುರಸ್ಕೃತನಾದವನು. ಇವನ ಹೆಂಡತಿ ನಾಗಲೆ. ಇವರಿರ್ವರ ಮಗ ಮಲ್ಲೆಯನಾಯಕ. ಮಲ್ಲೆಯನಾಯಕ ಮತ್ತು ಗುಜ್ಜಲೆಗೆ ಮೂರು ಮಕ್ಕಳು. ಈ ಮಕ್ಕಳೇ ಮಲ್ಲಿಕಾರ್ಜುನ ದೇವಾಲಯ ನಿರ್ಮಾಣಕ್ಕೆ ಕಾರಣರು. ಇಮ್ಮಡಿ ವೀರನರಸಿಂಹನ ಪ್ರಮುಖ ದಂಡನಾಯಕರಲ್ಲಿ ಒಬ್ಬನಾದ ಹರಿಹರ ದಂಡನಾಯಕ ತಮ್ಮ ಸಹೋದರರಾದ ಸಿಂಗೆಯನಾಯಕ ಮತ್ತು ಮಾದೆಯನಾಯಕರೊಡಗೂಡಿ ತಮ್ಮ 'ಜನನಿಯ ಹೆಸರಿಂದ ಕೆಱೆ'ಯನ್ನೂ 'ಜನಕನ ಹೆಸರಿಂದ ದೇವತಾಗೃಹ'ವನ್ನೂ ಕ್ರಿ.ಶ. ೧೨೩೪ರಲ್ಲಿ ನಿರ್ಮಿಸಿದ. ಹರಿಹರ ದಂಡನಾಯಕ ಸೇವುಣರೊಂದಿಗೆ ಸೆಣೆಸಿದ ಕದನದಲ್ಲಿ ಭಾಗವಹಿಸಿ ವೀರನರಸಿಂಹನಿಗೆ ಪ್ರಿಯನೆನಿಸಿದ್ದ. ದೇವಾಲಯದ ಶ್ರೀಕಾರ್ಯಕ್ಕೆ ವೀರನರಸಿಂಹನ ಮೂಲಕ ದಾನದತ್ತಿಗಳನ್ನು ಕೊಡಿಸಿದ. ಕ್ರಿ.ಶ. ೧೨೩೩ರಲ್ಲಿ ಹರಿಹರ ದಂಡನಾಯಕ, ಹೊಯ್ಸಳ ಸೋಮೇಶ್ವರನ ಆಳ್ವಿಕೆಯಲ್ಲಿ ಮಲ್ಲಿಕಾರ್ಜುನ ದೇವರಿಗೆ ಅಂಗರಂಗ ಭೋಗಗಳಿಗೆ ಪುನಃ ದಾನಗಳನ್ನು ನೀಡಿದ. ಕ್ರಿ.ಶ. ೧೨೬೭ರಲ್ಲಿ ವೀರನರಸಿಂಹನ ಕಾಲದಲ್ಲಿ ದೇವಾಲಯದ ಶ್ರೀಕಾರ್ಯಕ್ಕೆ ಮತ್ತೊಮ್ಮೆ ದಾನದತ್ತಿಗಳನ್ನು ನೀಡಲಾಗಿದೆ.



ಕ್ರಿ.ಶ. ೧೫೦೭ರಲ್ಲಿ ಮತ್ತೊಮ್ಮೆ ವಿಜಯನಗರ ಅರಸರ ಕಾಲದಲ್ಲಿ ಮಲ್ಲಿಕಾರ್ಜುನ ದೇವರಿಗೆ ನೀಡಿದ ದಾನಗಳನ್ನು ದೇವಾಲಯದಲ್ಲಿರುವ ಶಾಸನವು ದಾಖಲಿಸಿದೆ.

**ಕಾಲಮಾನ :** ದೇವಾಲಯದ ಪ್ರತಿಷ್ಠಾಪನೆ ಕ್ರಿ.ಶ. ೧೨೩೪ ಶಕವರುಷ ೧೧೫೬ನೆಯ ಜಯನಾಮ ಸಂವತ್ಸರದ ವೈಶಾಖ ಶುದ್ಧಪಂಚಮಿ ಸೋಮವಾರ.

**ಸಂಪ್ರದಾಯ ಮತ್ತು ಶೈಲಿ :** ಔತ್ತರೇಯ ಸಂಪ್ರದಾಯ. ಔತ್ತರೇಯ ದ್ರಾವಿಡಶೈಲಿ.

**ವಿಶೇಷ ಮಾಹಿತಿ :** ಈ ದೇವಾಲಯ ಜಿಲ್ಲೆಯ ಪ್ರಮುಖ ಪ್ರಾಚೀನ ದೇವಾಲಯಗಳಲ್ಲೊಂದು. ಆಕಾರದಲ್ಲಿ ಪುಟ್ಟದಾದರೂ ವಾಸ್ತುಶಿಲ್ಪದ ದೃಷ್ಟಿಯಿಂದ ಶ್ರೀಮಂತವಾದುದು. ಕಾಲಮಾನದ ದೃಷ್ಟಿಯಿಂದ ಹೊಸಹೊಳಲುವಿನ ಲಕ್ಷ್ಮೀನಾರಾಯಣ ದೇವಾಲಯದ ಸಮಕಾಲೀನ ರಚನೆ. ಇದು ಗಾತ್ರದಲ್ಲಿ ದೊಡ್ಡದು. ಹೊಯ್ಸಳರ ಕಾಲದ ದೇವಾಲಯಗಳು ಸಂಪೂರ್ಣವಾಗಿ ಅಭಿವೃದ್ಧಿ ಹೊಂದಿ, ಈ ಶೈಲಿಯ ಪರಾಕಾಷ್ಠೆಯನ್ನು ಮುಟ್ಟಿದ್ದು ಕ್ರಿ.ಶ. ೧೩ನೆಯ ಶತಮಾನದಲ್ಲಿ. ಈ ದೇವಾಲಯಗಳು ಜಗತಿಯ ಮೇಲೆ ನಿಂತು, ಚಂದದ ಪಟ್ಟಿಕೆಗಳನ್ನೂ, ಅಂದದ ಮೂರ್ತಿಗಳನ್ನೂ ಸಾಲುಗಳಲ್ಲಿ ಪ್ರದರ್ಶಿಸುತ್ತಾ ನಿಂತಿವೆ.

**ವಿಸ್ತೃತ ವಿವರಣೆ :** ಈ ದೇವಾಲಯದ ತಲಚ್ಛಂದವು ಚತುರಶ್ರಾಕಾರ ಎನಿಸಿದ್ದು, ತ್ರಿಭೂಮಿ ರಚನೆಗಳ ಶಿಖರವಿದೆ. ಊರ್ಧ್ವಕ್ರಮದಲ್ಲಿ ಜಗತಿ, ಪೀಠ, ಜಂಘಾ, ಛಾದ್ಯ, ತ್ರಿಭೂಮಿ ರಚನೆ, ವೇದಿ, ಘಂಟಾ, ಕಳಶಗಳನ್ನು ಗುರುತಿಸಲಾಗಿದೆ. ತಿರ್ಯಕ್ರಮದಲ್ಲಿ ಗರ್ಭಗೃಹ, ಅಂತರಾಳ, ನವರಂಗ ಅಥವಾ ಗೂಢಮಂಟಪ, ತ್ರಿಕ, ನಂದಿಮಂಟಪಗಳಿವೆ.

**ಜಗತಿ :** ಜಗತಿಯ ಆಕಾರವು ದೇವಾಲಯದ ತಲಚ್ಛಂದವನ್ನು ಅನುಸರಿಸಿ ವಿಸ್ತರಿಸಲ್ಪಟ್ಟಿದೆ. ಜಗತಿಯು ಸುಮಾರು ಎರಡು–ಎರಡೂವರೆ ಅಡಿ ಎತ್ತರವುಳ್ಳದ್ದು. ಈ

* 'ಪದ್ಮಪ್ರಭಾ', # ೪೨, ೧೭ನೇ ಬ್ಲಾಕ್, ಬ್ಯಾಂಕ್ ಕಾಲೋನಿ, ಶ್ರೀರಾಂಪುರ ೭ನೆಯ ಹಂತ, ಮೈಸೂರು–೫೭೦೦೨೩.

ರಚನೆ ದೇವಾಲಯದ ಸುತ್ತ ಪ್ರದಕ್ಷಿಣೆ ಹಾಕುವಂತಿದ್ದು ಜಂಘಾಭಾಗದ ದೇವ ದೇವತೆಗಳ ವೀಕ್ಷಣೆಗೆ ಸಾಧ್ಯವಾಗಿದೆ. ಜಗತಿಯು ಕೆಲವೆಡೆ ಹಾಸುಗಲ್ಲಿನ ಮೇಲೆ ರಚನೆಯಾಗಿರುವುದನ್ನು ಕಾಣಹುದು. ಜಗತಿಯ ಮೊದಲ ಸ್ತರವಾಗಿ ಭಿಟ್, ನಂತರ ಬುರಕ, ಪದ್ಮಪತ್ರಭೇದ, ಅಂತರಪತ್ರ, ಪಟ್ಟಿಕೆ, ಅಂತರಪತ್ರ, ಪದ್ಮ, ಪಟ್ಟಿಕಾ ಸ್ತರಗಳಿವೆ. ಗರ್ಭಗೃಹದ ಎಡಭಾಗದಲ್ಲಿ ಜಗತಿಗೆ ಹೊಂದಿಕೊಂಡಂತೆ ಅಭಿಷೇಕ ಜಲದ ನಿರ್ಗಮನಕ್ಕಾಗಿ ಪ್ರನಾಳದ ಮುಂಚಾಚನ್ನು ಕಾಣಬಹುದು.

ಪೀಠ : ದೇವಾಲಯದ ಪೀಠ ರಚನೆಯ ವಿವಿಧ ಸ್ತರಗಳಿಗೆ ಬದಲಾಗಿ ಪಟ್ಟಿಕೆಗಳೇ ದೇವಾಲಯವನ್ನು ಸಂಪೂರ್ಣವಾಗಿ ಆವರಿಸಿವುದನ್ನು ಕಾಣಬಹುದು. ಪೀಠ ರಚನೆಯು ಸಾಮಾನ್ಯವಾಗಿ ಐದು ಸ್ತರಗಳು. ಭಿಟ್ ರಚನೆಯೂ ಸೇರಿದ ಆರು ಪಟ್ಟಿಕೆಗಳು ದೇವಾಲಯವನ್ನು ಸುತ್ತುವರೆದಿವೆ. ಭಿಟ್ ಸ್ತರವೇ ಆನೆಗಳ ಸಾಲು, ಎರಡನೆಯ ಸಾಲು ಕುದುರೆಗಳೊಂದಿಗೆ ಇರುವ ಸವಾರರು. ಮೂರನೆಯ ಸಾಲು ಸಿಂಹಗಳು. ನಾಲ್ಕನೆಯ ಸಾಲು ಪೌರಾಣಿಕ ದೃಶ್ಯಕಥಾವಳಿಗಳು. ಐದನೆಯ ಸಾಲು ಯಾಳಿ ಅಥವಾ ಇಹಾಮೃಗ ರಚನೆ, ಆರನೆಯ ಸಾಲು ಹಂಸಗಳ ರಚನೆ. ಈ ರೀತಿಯ ಪಟ್ಟಿಕೆಗಳು ಹಲವು ಸಮಕಾಲೀನ ದೇವಾಲಯಗಳಲ್ಲಿ ಲಭ್ಯವಿದೆ. ಪೌರಾಣಿಕ ಪಟ್ಟಿಕೆಗಳಲ್ಲಿ ರಾಮಾಯಣ, ಮಹಾಭಾರತ ಕೃಷ್ಣಚರಿತೆಯ ಹಲವು ದೃಶ್ಯಾವಳಿಗಳಿವೆ. ಶಿಲ್ಪಿಗಳಿಗೆ ಪ್ರಿಯವಾದ ಕಥಾನಕಗಳು ಕೆಲವು ದೇವಾಲಯಗಳಲ್ಲಿ ಪುನರಾವರ್ತನೆಯಾಗುವುದುಂಟು. ರಾಮಾಯಣದ ಕಥಾನಕದಲ್ಲಿ ಶ್ರೀರಾಮ ತನ್ನ ಪರಾಕ್ರಮವನ್ನು ಪ್ರದರ್ಶಿಸಿದ ಸಪ್ತಕಾಲ ಭೇದನವನ್ನು ಈ ದೇವಾಲಯದಲ್ಲಿ ಎರಡು ಬಾರಿ ಕಂಡರಿಸಲಾಗಿದೆ. ಮಹಾಭಾರತ ಯುದ್ಧದಲ್ಲಿ ಅಭಿಮನ್ಯುವನ್ನು ಎದುರಿಸಲು ರಚಿಸಿದ ಚಕ್ರವ್ಯೂಹದ ಚಿತ್ರಣವಿದೆ. ಕೃಷ್ಣಚರಿತೆಯ ಶಕಟಾಸುರ ಸಂಹಾರ, ಪೂತನಿಯ ವಧೆ ಮೊದಲಾದ ಜನಪ್ರಿಯ ದೃಶ್ಯಗಳಿವೆ. ಗರ್ಭಗೃಹದ ಹೊರಗೆ ಎಡಭಾಗದಲ್ಲಿ ಎರಡು-ಮೂರನೇ ಸ್ತರಗಳಲ್ಲಿ ಆವರಿಸಿದಂತೆ ಮುಂಚಾಚಿದ ಜಲಪ್ರನಾಳವಿದೆ.

**ಜಂಘಾ** : ಪೀಠಾನಂತರ, ಜಂಘಾ ಅಥವಾ ಭಿತ್ತಿ ಭಾಗವನ್ನು ಮೂರು ಭಾಗಗಳಾಗಿ ವಿಂಗಡಿಸಿದ್ದು ಮೊದಲಿಗೆ ದೇವ ದೇವತೆಗಳ ಲೀಲಾಮೂರ್ತಿಗಳ ಕಂಡರಣೆ ಇದೆ. ಇವುಗಳಿಗೆ ರಕ್ಷಣೆಯಾಗಿ ರಚನೆಗೊಂಡ ಭಾಗವೇ ಕೂಟ ಛಾದ್ಯ. ನಂತರ ಒಂದು ಅಥವಾ ಎರಡು ಕಿರುಸ್ತಂಭಗಳ ಮೇಲೆ ಶಿಖರಾಕೃತಿಗಳನ್ನು ಕಡೆಯಲಾಗಿದೆ. ಇದು ಪುನರ್ ಜಂಘಾಭಾಗ. ದೇವದೇವತೆಗಳ ಮೂರ್ತಿಗಳುಳ್ಳ ಜಂಘಾಭಾಗವು ಸುಮಾರು ಎರಡು ಅಡಿ ಎತ್ತರವುಳ್ಳದ್ದು. ಇವು ಶೈವ, ವೈಷ್ಣವ ಭೇದವೆನಿಸದೆ ಒಂದರ ಪಕ್ಕ ಮತ್ತೊಂದು ಜೊತೆಗೂಡಿ, ದೇವಾಲಯದ ಗರ್ಭಗೃಹ, ಅಂತರಾಳ, ಗೂಢಮಂಟಪಗಳನ್ನು ಸುತ್ತುವರೆದಿವೆ. ಬಳಪದ ಕಲ್ಲಿನ ಬಳಕೆಯಿಂದಾಗಿ ಈ ಮೂರ್ತಿಗಳಲ್ಲಿ ಸಂದರ್ಭಕ್ಕೆ ತಕ್ಕಂತೆ ಸೌಕುಮಾರ್ಯತೆ, ಲಾಲಿತ್ಯ ಥಳುಕು-ಬಳುಕುವಿಕೆಯನ್ನು ಕಾಣಬಹುದು. ಈ ವಿಗ್ರಹಗಳು ದೇವಾಲಯಕ್ಕೆ ಶೋಭೆಯನ್ನು ತಂದಿದೆ. ಬಳಪಕಲ್ಲಿನ ಬಳಕೆಯಿಂದಾಗಿ ಕಾಲನ ಹೊಡೆತಕ್ಕೆ ಸಿಕ್ಕು ಕೆಲವು ಮೂರ್ತಿಗಳು ಸವೆದಿವೆ. ಆಗ್ನೇಯ ಮೂಲೆಯಿಂದ ಕೆಲವು ಪ್ರಮುಖ ಮೂರ್ತಿಗಳಾದ ಯೋಗಾನರಸಿಂಹ, ಶಿವ, ಅರ್ಜುನ (ಚಿತ್ರಸೇನನೊಡನೆ ಯುದ್ಧ ?), ವರಾಹ, ಕಾಮ, ಬ್ರಹ್ಮ, ಶಿವಪಾರ್ವತಿ, ಗಣಪತಿ, ಗರುಡವಾಹನರಾದ ವಿಷ್ಣುಲಕ್ಷ್ಮೀ, ಸುಖಾಸೀನ ನರಸಿಂಹ, ಕಾಳಿಂಗ ಮರ್ದನ, ಭೈರವ, ಪಾರ್ವತಿ (೨೨ ಕೈಗಳು), ನಾಟ್ಯಶಿವ, ಗೋವರ್ಧನಗಿರಿಧಾರಿ, ಗರುಡ, ರಾವಣ (ಕೈಲಾಸ ಪರ್ವತ), ನಾಟ್ಯ ಸರಸ್ವತಿ, ಬ್ರಹ್ಮ, ಚಂದ್ರಶೇಖರ, ಸರಸ್ವತಿ, ಕಂಕಾಳಮೂರ್ತಿ, ವೃಷಭವಾಹನ ಶಿವ, ನಾಟ್ಯಶಿವ, ನಾಟ್ಯಸರಸ್ವತಿ, ಬ್ರಹ್ಮ ಮತ್ತು ಸರಸ್ವತಿ, ಭೈರವ (?) ವಿಷಕನ್ಯೆ, ದುರ್ಗೆ (೧೬ ಕೈಗಳು), ವೇಣುಗೋಪಾಲ, ಅರ್ಜುನ (ಮತ್ಸ್ಯಯಂತ್ರ), ದುರ್ಗಾ (?), ನಾಟ್ಯಶಿವ, ಬಲಿ-ವಾಮನ, ತ್ರಿವಿಕ್ರಮ, ನಾರಾಯಣ, ವಿಷ್ಣು (?), ಗಜಾರಿ, ನಾಟ್ಯಸರಸ್ವತಿ, ಸೂರ್ಯನಾರಾಯಣ, ವಿಠಲ, ಉಗ್ರನರಸಿಂಹ, ಪಾರ್ವತಿ ಪರಮೇಶ್ವರ (ವೃಷಭವಾಹನ), ವಿಷ್ಣು ಕಾಳಿಂಗಮರ್ದನ, ಷಣ್ಮುಖ (ಮಯೂರವಾಹನ).

ಈ ವಿಗ್ರಹಗಳೊಂದಿಗೆ ಅಕ್ಕಪಕ್ಕದಲ್ಲಿ ವಿವಿಧ ಭಂಗಿಗಳಲ್ಲಿ ನಿಂತಿರುವ ನರ್ತಕಿಯರಿದ್ದಾರೆ. ವಾದ್ಯಗಳನ್ನು ಹಿಡಿದು ನುಡಿಸುತ್ತಿರುವ ಕನ್ನಿಕೆಯರಿದ್ದಾರೆ. ಈ ವಿಗ್ರಹಗಳಲ್ಲಿ ಹಲವು ಮುಕ್ಕಾಗಿವೆ. ಈ ಮೂರ್ತಿಗಳ ಮೇಲೆ ತೋರಣಗಳಂತೆ ಲತಾಮಂಡಲ ರಚನೆಗಳಿವೆ. ಇದು ಕೂಟಛಾದ್ಯದ ಭಾಗ; ನಂತರ ವಿವಿಧ ಶಿಖರ ಮಾದರಿಗಳನ್ನು ಹೊತ್ತ ಕಿರುಸ್ತಂಭಗಳು ನಂತರ ಛಾದ್ಯದ ಮುಂಭಾಗು.

**ತ್ರಿಭೂಮಿ ರಚನೆ** : ಛಾದ್ಯದ ನಂತರ ತ್ರಿಭೂಮಿ ಅಥವಾ ತ್ರಿತಲ ರಚನೆ ಇದೆ. ಪ್ರತಿತಲದ ಮಧ್ಯದಲ್ಲಿ ಭದ್ರಭಾಗದಲ್ಲಿ ಶಾಲಾ; ಶಾಲಾ ಮುಖದಲ್ಲಿ ಪುನಃ ದೇವತಾ ಮೂರ್ತಿಗಳಿವೆ. ಈ ದೇವತಾಮೂರ್ತಿಗಳು ಶಾಲಾ ರಚನೆಗೆ ತಕ್ಕಂತೆ ಗಾತ್ರದಲ್ಲಿ ಚಿಕ್ಕವು. ಶಾಲಾರಚನೆಯ ಪಕ್ಕದಲ್ಲಿ ಎರಡೂ ಕಡೆ ಹಾರಭಾಗದಲ್ಲಿ ನಾಸಿಕೆಗಳು. ನಾಸಿಕೆಗಳ ಗುಹಾಭಾಗದಲ್ಲಿ ಯಕ್ಷರ ಶಿಲ್ಪಗಳು. ನಂತರ ಮೂಲೆಗಳಲ್ಲಿ ಕರ್ಣಕೂಟ ರಚನೆ. ದಕ್ಷಿಣ ದಿಕ್ಕಿನ ಮೊದಲ ತಲದ ಶಾಲಾಮುಖದಲ್ಲಿ ಉಮಾಮಹೇಶ್ವರ, ಎರಡನೆಯ ತಲದಲ್ಲಿ ಪರವಾಸುದೇವ,

ಮೂರನೆಯ ತಲದಲ್ಲಿ ಪದ್ಮಾಸನದಲ್ಲಿ ವಿಷ್ಣುಮೂರ್ತಿಗಳಿವೆ. ಪಶ್ಚಿಮದ ಮೊದಲ ತಲದಲ್ಲಿ ಲಕ್ಷ್ಮೀನರಸಿಂಹ, ಎರಡನೆಯ ತಲದಲ್ಲಿ ಲಕ್ಷ್ಮೀನಾರಾಯಣ, ಮೂರನೆಯ ತಲದಲ್ಲಿ ನಾಟ್ಯಶಿವನಿದ್ದಾನೆ. ಉತ್ತರದ ಮೊದಲ ತಲದಲ್ಲಿ ನಾಟ್ಯಶಿವ, ಎರಡನೆಯ ತಲದಲ್ಲಿ ಉಮಾಮಹೇಶ್ವರ ಮೂರನೆಯ ತಲದಲ್ಲಿ ಯೋಗಾನರಸಿಂಹ ವಿಗ್ರಹಗಳಿವೆ.

**ವೇದಿಕೆ, ಘಂಟಾ, ಕಲಶ :** ಭೂಮಿ ರಚನೆಯ ನಂತರ ವೇದಿಕೆ; ಚತುರಶ್ರಾಕಾರ ಘಂಟಾರಚನೆ ಇದೆ. ಇದರ ನಾಲ್ಕು ದಿಕ್ಕಿನಲ್ಲಿಯೂ ಭದ್ರಭಾಗದಲ್ಲಿ ನಾಸಿಕಾ ರಚನೆ ಇದೆ. ಘಂಟಾ ರಚನೆಯ ಮೇಲ್ಭಾಗದಲ್ಲಿ ಎದ್ದುಕಾಣುವಂಥ ಶಿಲಾಕಲಶವಿದೆ. ಈ ಶೈಲಿಯ ದೇವಾಲಯಗಳಲ್ಲಿ ಕಡೆದ ಕಲಶಗಳು ತುಸು ದೊಡ್ಡ ಆಕೃತಿಯುಳ್ಳದ್ದು ಹಾಗೂ ಹೆಚ್ಚು ಅಲಂಕಾರವುಳ್ಳದ್ದು.

ಶಿಖರದ ಮುಂಭಾಗದಲ್ಲಿ ಪೂರ್ವ ದಿಕ್ಕಿನಲ್ಲಿ ಶುಕನಾಸ ರಚನೆ ಇದೆ. ಶುಕನಾಸದ ಮೇಲ್ಭಾಗದಲ್ಲಿ ಚಂದ್ರಶಾಲಾಪಟ್ಟಿಕೆ ಈ ಪಟ್ಟಿಕೆಯ ಮೇಲೆ ಹೊಯ್ಸಳ ಲಾಂಛನವಿದೆ. ಶುಕನಾಸದ ಮುಂಭಾಗದಲ್ಲಿ ಶಿವತಾಂಡವ ಶಿಲ್ಪವಿದೆ.

ಅಂತರಾಳ, ಗೂಢಮಂಟಪ (ನವರಂಗ) ಹಾಗೂ ನಂದಿಮಂಟಪದ ಮೇಲ್ಭಾಗದ ಕೈಪಿಡಿಯ ಭಾಗದಲ್ಲಿ ಮೊದಲ ಭೂಮಿಗೆ ಸಮನಾಗಿ ಶಾಲಾ, ನಾಸಿಕಾ, ಕೂಟಗಳಿದ್ದು, ಶಾಲಾಮುಖ ಹಾಗೂ ನಾಸಿಕೆಗಳ ಗುಹಾಭಾಗದಲ್ಲಿಯೂ ಮೂರ್ತಿಗಳಿವೆ.

**ತಿರ್ಯಕ್ರಮ :** ತಿರ್ಯಕ್ರಮದಲ್ಲಿ ಗರ್ಭಗೃಹ, ಅಂತರಾಳ, ಗೂಢಮಂಟಪ ಅಥವಾ ನವರಂಗ, ಪ್ರಿಕ, ನಂದಿ ಮಂಟಪಗಳಿವೆ. ಗರ್ಭಗೃಹದ ಹಾಗೂ ಅಂತರಾಳಗಳ ಬಾಗಿಲುವಾಡಗಳಿಗೆ ಹೊಂದಿಕೊಂಡಂತೆ ಕಿರಿದಾದ ಜಾಲಂದ್ರಗಳು, ರೂಪಸ್ತಂಭಗಳು, ಕೆಳಗೆ ದ್ವಾರಪಾಲಕರ ವಿಗ್ರಹಗಳಿವೆ. ಗರ್ಭಗೃಹದಲ್ಲಿ ಪ್ರಾಚೀನಲಿಂಗವಿದೆ. ಗೂಢಮಂಟಪಕ್ಕೆ ಹೊಂದಿಕೊಂಡಂತೆ ಉತ್ತರ ದಕ್ಷಿಣ ಭಾಗದಲ್ಲಿ ಗರ್ಭಗೃಹಗಳಿವೆ. ದಕ್ಷಿಣದ ಗರ್ಭಗೃಹದಲ್ಲಿ ಸೂರ್ಯನ ವಿಗ್ರಹವನ್ನು ನಿಲ್ಲಿಸಿದ್ದಾರೆ. ದೇವಾಲಯ ರಚನೆಯ ಕಾಲದಲ್ಲಿದ್ದ ಪೀಠ, ವಿಗ್ರಹ ಕಾಣೆಯಾಗಿದೆ. ಉತ್ತರದ ಗರ್ಭಗೃಹದಲ್ಲಿರುವ ಪೀಠದಲ್ಲಿ ಗರುಡನಿದ್ದಾನೆ. ಇಲ್ಲಿ ವಿಷ್ಣುವಿನ ವಿಗ್ರಹವಿರಲು ಸಾಧ್ಯ. ಲಕ್ಷ್ಮೀನರಸಿಂಹ ಅಥವಾ ಯೋಗ ನರಸಿಂಹನಿರಲೂ ಸಾಧ್ಯ. ಆದರೆ ಈಗ ನಾಗನಾಗಿಣಿಯರ ವಿಗ್ರಹವಿದೆ. ನವರಂಗದ ಮುಂಭಾಗವು ಕಕ್ಷಾಸನ, ಜಾಲಂದ್ರಗಳನ್ನೊಳಗೊಂಡಿದೆ. ನವರಂಗದಲ್ಲಿ ಪೂರ್ವಾಭಿಮುಖವಾಗಿ ನೈರುತ್ಯ ಹಾಗೂ ವಾಯುವ್ಯ ಭಾಗಗಳಲ್ಲಿ ಗಣೇಶ, ಮಹಿಷಮರ್ದಿನಿಯರಿದ್ದಾರೆ. ಅವುಗಳ ಪಕ್ಕದಲ್ಲಿ ಉತ್ತರ–ದಕ್ಷಿಣಾಮುಖವಾಗಿ ಸರಸ್ವತೀ ವಿಗ್ರಹಗಳಿವೆ. ನವರಂಗದ ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರ. ಪ್ರವೇಶದ್ವಾರದ ಲಲಾಟಭಾಗದಲ್ಲಿ ಶಿವತಾಂಡವ ಮೂರ್ತಿ ಇದೆ. ಕೆಳಗೆ ಇಕ್ಕೆಲಗಳಲ್ಲಿ ದ್ವಾರಪಾಲಕರು. ನವರಂಗ ಹಾಗೂ ನಂದಿಮಂಟಪದ ನಡುವೆ ಕಿರಿದಾದ ಭಾಗವಿದ್ದು ಇದನ್ನು ತ್ರಿಕಾ ಎಂದು ಗುರುತಿಸಲಾಗುತ್ತದೆ. ತ್ರಿಕದ ಉತ್ತರ ದಕ್ಷಿಣಕ್ಕೆ ಪ್ರವೇಶಾವಕಾಶವಿದೆ. ಈ ರಚನೆ ಅರಸೀಕೆರೆಯ ಶಿವಾಲಯ, ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯಗಳನ್ನು ನೆನಪಿಸುತ್ತದೆ. ಇದು ಗಾತ್ರದಲ್ಲಿ ಚಿಕ್ಕದು. ಈ ದೇವಾಲಯದಲ್ಲಿ ಉತ್ತರ ದಕ್ಷಿಣದಲ್ಲಿ ಬಾಗಿಲುಗಳನ್ನು ಜೋಡಿಸಲಾಗಿದೆ. ಬಾಗಿಲು ವಾಡದ ಇಕ್ಕೆಲಗಳಲ್ಲಿ ಆನೆಗಳಿವೆ. ದಕ್ಷಿಣದ ಬಾಗಿಲುವಾಡದ ಬಲಭಾಗದಲ್ಲಿ ದ್ವಾರಪಾಲಕನಿದ್ದಾನೆ. ಎಡಭಾಗದ ದ್ವಾರಪಾಲಕ ಕಾಣೆಯಾಗಿದ್ದಾನೆ. ಜಗತಿಯಿಂದ ಪ್ರವೇಶಿಸಲು ಮೆಟ್ಟಿಲುಗಳಿವೆ.

ನಂದಿಮಂಟಪವು ಕಕ್ಷಾಸನ, ಜಾಲಂದ್ರವುಳ್ಳದ್ದು. ಹೊರಗಿನ ಕಕ್ಷಾಸನದ ಮೇಲ್ಭಾಗ ಹಾಳಾಗಿದೆ. ಮಂಟಪದಲ್ಲಿ ಎತ್ತರವಾದ ನಂದಿ ಇದೆ.

ಜಗತಿಯ ಭಾಗದಲ್ಲಿ ಮೇಲೇರಲು ಉತ್ತರ ದಕ್ಷಿಣ ದ್ವಾರಗಳ ಮುಂದೆ ಸೋಪಾನಗಳಿದ್ದು, ಸೋಪಾನದ ಎರಡೂ ಕಡೆ ವಿಮಾನಾಕೃತಿಗಳನ್ನು ಕಡೆದು ಜೋಡಿಸಿದ್ದಾರೆ. ದೇವಾಲಯವನ್ನು ಸುತ್ತುವರೆದಂತೆ ಒಂದು ಕಾಲಕ್ಕೆ ಪ್ರಾಕಾರ ಭಿತ್ತಿ ಇತ್ತು. ಈಗ ಈ ಪೌಳಿ ಭಾಗವು ಕಿಂಚಿತ್ತೂ ಉಳಿದಿಲ್ಲ. ಪ್ರಾಕಾರಕ್ಕೆ ಅಂಟಿಕೊಂಡಂತೆ ದಕ್ಷಿಣದಿಕ್ಕಿನಲ್ಲಿ ಮೇಲ್ಕಟ್ಟಡವಿಲ್ಲದ ಗೋಪುರವಿದೆ. ಗೋಪುರದ ಮಧ್ಯಭಾಗದಲ್ಲಿ ಛತ್ತಿನ ಅಂಕಣದಲ್ಲಿ ನಾಟ್ಯ ಶಿವನೂ ಅವನನ್ನು ಸುತ್ತುವರೆದ ಅಷ್ಟದಿಕ್ಪಾಲಕರೂ ಇದ್ದಾರೆ. ಹೊಯ್ಸಳರ ಕಾಲದ ಔತ್ತರೇಯ ದ್ರಾವಿಡಶೈಲಿಯ ಮಾದರಿಯಾಗಿ, ಪೂರ್ಣ ವಿಕಸನಗೊಂಡ ಮಾದರೀ ಶಿಲ್ಪ ಶೈಲಿಯಾಗಿ, ಈ ಪುಟ್ಟ ದೇವಾಲಯ ಬಸರಾಳುವಿನಲ್ಲಿ ಅರಳಿ ನಿಂತಿದೆ. ಗರ್ಭಗೃಹದ ಪಶ್ಚಿಮದಲ್ಲಿ ಜಗತಿಯ ಮಧ್ಯಭಾಗ ಕುಸಿಯುತ್ತಿದೆ. ಈಗಲೇ ಸರಿಪಡಿಸ ಬೇಕು; ಇಲ್ಲದಿದ್ದರೆ ದೇವಾಲಯದ ಗರ್ಭಗೃಹದ ಭಾಗಕ್ಕೆ ಅಪಾಯ ತಪ್ಪಿದ್ದಲ್ಲ.



೫೦

# ಸಾಂಸ್ಕೃತಿಕ ಕೇಂದ್ರವಾಗಿ ನಾಗಾವಿಯ ಕೋಡಿ ಬಸವಣ್ಣ ದೇವಾಲಯ

ಡಾ. ಎಂ.ಎಸ್. ನರೇಗಲ್ಲ*

ಗದಗದಿಂದ ದಕ್ಷಿಣ ಪೂರ್ವ ಭಾಗ ಅಂದರೆ ಆಗ್ನೇಯ ದಿಕ್ಕಿನ ದಾರಿಯಲ್ಲಿ ಮೊದಲಿಗೆ ಬರುವ ಗ್ರಾಮವೆ ಕಳಸಾಪೂರ. ಅಲ್ಲಿಂದ ಮುಂದೆ ತಿರುವು ಮುರುವುಗಳಿಂದ ಸಾಗಿದರೆ ನಮಗೆ ಕಾಣುವುದು ನಾಗಾವಿ ಗ್ರಾಮ ಈ ದಾರಿಯ ತಿರುವಿನಲ್ಲಿ ಎಡಗಡೆ ಗುಡ್ಡದ ಅಡಿಯಲ್ಲಿ ಕಾಣುವುದೆ ಬಸವಣ್ಣನ ದೇವಾಲಯ. ಇದಕ್ಕೆ ಸ್ಥಳೀಯರು ಕೋಡಿ



ಬಸವಣ್ಣನ ದೇವಾಲಯವೆಂದು ಕರೆಯುತ್ತಾರೆ. ಕೋಡಿ ಎಂದರೆ ಒಂದು ವಿಶಾಲವಾದ ಕೆರೆಯಲ್ಲಿ ಪೂರ್ಣ ಪ್ರಮಾಣದ ನೀರು ತುಂಬಿದ ನಂತರ ಅದರ ರಕ್ಷಣಾತ್ಮಕವಾಗಿ ಕೋಡಿಮೂಲಕ ನೀರು ಹೊರಹಾಕಲಾಗುತ್ತದೆ. ಇದೊಂದು ಕೆರೆಗಳಿಗೆ ಸೇಫ್ಟಿವಾಲ್ ಇದ್ದಂತೆ. ಈ ಸ್ಥಳದ ಪಕ್ಕಕ್ಕೆ ನಿರ್ಮಿಸಿದ ದೇವಾಲಯವೇ ಕೋಡಿ ಬಸವೇಶ್ವರ ದೇವಾಲಯ. ಆದರೆ ಈ ದೇವಾಲಯದಲ್ಲಿನ ಯಾವುದೇ ಶಾಸನದಲ್ಲಿ ಈ ಹೆಸರು ಉಲ್ಲೇಖವಿಲ್ಲ. ಅದರ ಬದಲಾಗಿ ಕೋಡಿ ಮಹಾಬಳೇಶ್ವರ ದೇವಾಲಯ ಎಂದು ಉಲ್ಲೇಖವಿದೆ. ಈ ದೇವಾಲಯವು ಕಲ್ಯಾಣ ಚಾಲುಕ್ಯರ ಪತನದ ನಂತರ ಅಧಿಕಾರಕ್ಕೆ ಬಂದ ಯಾದವ ದೊರೆಗಳ ಕಾಲದಲ್ಲಿ ನಿರ್ಮಾಣವಾಗಿದೆ.

ಕಲ್ಯಾಣ ಚಾಲುಕ್ಯ ಮತ್ತು ಕಳಚೂರಿ ವಂಶಗಳ ಅವಸಾನವು ಕರ್ನಾಟಕದಲ್ಲಿ ಅನೇಕ ಸಣ್ಣಪುಟ್ಟ ರಾಜವಂಶಗಳ ಉಗಮಕ್ಕೆ ದಾರಿಯಾಯಿತು. ಇವರಲ್ಲಿ ಸೇವುಣರು ಪ್ರಮುಖರು. ಇವರನ್ನು ದೇವಗಿರಿ ಯಾದವರೆಂದೂ ಕರೆಯು ಲಾಗುತ್ತದೆ. ಇವರು ನೆಲೆಸಿದ ನಾಡಿಗೆ ಸೇವುಣ ದೇಶವೆಂದು ಕರೆಯುಲಾಯಿತು. ಇಂತಹ ಸೇವುಣರು ೧೨ನೇ ಶತಮಾನದ ಕೊನೆಯಿಂದ ೧೩ನೇ ಶತಮಾನದ ಕೊನೆಯುವರೆಗೆ ಆಡಳಿತ ನಡೆಸಿದರು. ೧೩ನೇ ಶತಮಾನದ ವೇಳೆಗೆ ಯಾದವರ (ಸೇವುಣರು) ಹೊಯ್ಸಳರ ಹಾಗೂ ಮುಸ್ಲಿಂ ಅರಸರ ಮಧ್ಯ ಘರ್ಷಣೆಗಳು ಆರಂಭವಾಗಿ ದಕ್ಷಿಣ ಭಾರತ ಅರಸೊತ್ತಿಗೆ ದುರ್ಬಲವಾಯಿತು. ಉತ್ತರ ಭಾರತದ ಮುಸ್ಲಿಂ ದಾಳಿಕೋರರು ದಕ್ಷಿಣಕ್ಕೆ ತಮ್ಮ ಗಮನ ಹರಿಸಿದರು. ಇದರ ಪ್ರತಿಫಲವಾಗಿ ಕ್ರಿ.ಶ. ೧೨೯೬ ರಲ್ಲಿ ಅಲ್ಲಾವುದ್ದೀನ ಖಿಲ್ಜಿ ದೇವಗಿರಿಯನ್ನು ಲೂಟಿ ಮಾಡಿದನು. ಕ್ರಿ.ಶ. ೧೩೦೭ರಲ್ಲಿ ಮಲ್ಲಿಕಾಪೂರ ದೇವಗಿರಿ ಸಂಪತ್ತನ್ನು ದೋಚಿ ಅಲ್ಲಿನ ದೊರೆ ರಾಮಚಂದ್ರದೇವನನ್ನು ದೆಹಲಿಗೆ ಒಯ್ದನು. ಮುಂದೆ ಮಲ್ಲಿಕಾಪೂರ ಕ್ರಿ.ಶ. ೧೩೧೩ರಲ್ಲಿ ರಾಮಚಂದ್ರದೇವನ ಮಗ ಶಂಕರದೇವನನ್ನು

* ಮುಖ್ಯಸ್ಥರು ಇತಿಹಾಸ ವಿಭಾಗ ಕೆ.ಎಸ್.ಎಸ್. ಮಹಾವಿದ್ಯಾಲಯ, ಗದಗ-೫೮೨೧೦೧.

ಕೊಂದನು. ಹೀಗೆ ದಕ್ಷಿಣದ ದೇವಗಿರಿ ಮುಸ್ಲಿಂ ರಾಜ್ಯವಾಯಿತು.

ಗದಗ ಪ್ರದೇಶವನ್ನು ಯಾದವರು ಆಳಿದ ಬಗ್ಗೆ ಹಲವಾರು ಶಾಸನಗಳು ಹಾಗೂ ಅರಸರು ಕಟ್ಟಿಸಿದ ದೇವಾಲಯಗಳು ಇಂದಿಗೂ ಈ ಭಾಗದಲ್ಲಿ ಕಂಡುಬರುತ್ತವೆ. ಅಂತಹ ದೇವಾಲಯಗಳಲ್ಲಿ ವಿನಾಶದ ಅಂಚಿನಲ್ಲಿರುವ ನಾಗಾವಿಯ ಕೋಡಿ ಬಸವೇಶ್ವರ ದೇವಾಲಯ.

ಈ ದೇವಾಲಯದ ಮುಂಭಾಗದ ಮುಖಮಂಟಪದ ನಾಲ್ಕು ಕಂಬಗಳ ಅಡಿಯಲ್ಲಿ ನಾಲ್ಕು ಯಾದವ ದೊರೆಗಳ ಶಾಸನಗಳಿವೆ. ಇವು ಈಗಾಗಲೇ ಪ್ರಕಟಗೊಂಡ ಶಾಸನಗಳಾಗಿವೆ. ಈ ನಾಲ್ಕೂ ಶಾಸನಗಳು ಯಾದವ ದೊರೆ ಸಿಂಘಣದೇವನ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ಕ್ರಿ.ಶ. ೧೨೦೦ ರಿಂದ ೧೨೪೬ರ ಅವಧಿಯಲ್ಲಿ ಗದಗ ಪ್ರದೇಶವು ಸಿಂಘಣನ ಆಳ್ವಿಕೆಗೆ ಒಳಪಟ್ಟಿತ್ತು.

ಮೊದಲನೇ ಶಾಸನವು ೮ ಸಾಲುಗಳಿಂದ ಕೂಡಿದ್ದು ಇದರಲ್ಲಿ ಯಾದವ ದೊರೆ ಸಿಂಘಣದೇವನ ಆಳ್ವಿಕೆಯ ೫ನೇ ವರ್ಷದಲ್ಲಿ ಅಂದರೆ ಕ್ರಿ.ಶ. ೧೨೧೫ರ ಯುವಸಂವತ್ಸರ ಚೈತ್ರ ಅಷ್ಟಮಿ ಸೋಮವಾರದಂದು ನಾಗಾವಿಯ ಮಹಾಬಳೇಶ್ವರ ದೇವರಿಗೆ (ಈಗಿನ ಕೋಡಿ ಬಸವೇಶ್ವರ ದೇವಾಲಯ) ನಾಗಾವಿ ಗ್ರಾಮದ ಕಮ್ಮಾರ ವೃತ್ತಿ ಮಾಡುವ ಬಮ್ಮೋಜ ಎಂಬುವನು ತಾನು ತಯಾರಿಸಿದ ಕಬ್ಬಿಣ ಸಲಕರಣೆಗಳ ಮೇಲಿನ ಸುಂಕವನ್ನು ದೇವಾಲಯದ ಅರ್ಚಕ ಸೋಮೇಶ್ವರದೇವರ ಪಾದ ತೊಳೆದು ದಾನ ನೀಡಿದನೆಂದು ತಿಳಿದುಬರುತ್ತದೆ.

೨ನೇ ಶಾಸನವು ಕ್ರಿ.ಶ. ೧೨೪೪ರಲ್ಲಿ ಕೆತ್ತಲಾಗಿದ್ದು ಇದು ೨೩ ಸಾಲುಗಳಿಂದ ಕೂಡಿದೆ. ಈ ಶಾಸನವೊಂದರಲ್ಲಿ ಮಾತ್ರ ಈ ದೇವಾಲಯವನ್ನು ಕೊಡಿ ಮಹಾಬಳ ದೇವರ್ಗೆ ಎಂದು ಕರೆಯಲಾಗಿದೆ. ಇದೇ ಹೆಸರು ಮುಂದೆ ಸ್ಥಳೀಯರಲ್ಲಿ ಕೋಡಿ ಬಸವಣ್ಣ ಎಂದು ರೂಢಿಯಲ್ಲಿದೆ. ಆದರೆ ಬಸವಣ್ಣ ದೇವರು ಎಂದು ಯಾವುದೇ ಶಾಸನದಲ್ಲಿ ಉಲ್ಲೇಖವಿಲ್ಲ. ಶಾಸನದಲ್ಲಿ ನಾಗಾವಿಯ ೧೦೪ ಮಹಾಜನರು ಈ ದೇವಾಲಯಕ್ಕೆ ಭೂಮಿ ದಾನ ನೀಡಿದ ಉಲ್ಲೇಖವಿದೆ.

೩ನೇ ಶಾಸನವು ಕ್ರಿ.ಶ. ೧೨೪೬-೪೭ ರಲ್ಲಿ ರಚನೆಯಾಗಿದೆ. ಇದು ೧೪ ಸಾಲುಗಳಿಂದ ಕೂಡಿದೆ. ನಾಗಾವಿಯ ತೆರಿಗೆ ಅಧಿಕಾರಿಯೊಬ್ಬನು ದೇವಾಲಯಕ್ಕೆ ತೆರಿಗೆಯಿಂದ ಬಂದ ಹಣವನ್ನು ದಾನ ನೀಡಿದ ಉಲ್ಲೇಖವಿದೆ.

೪ನೇ ಕಂಬದ ಕೊನೆಯ ಶಾಸನ ೧೯ ಸಾಲುಗಳಿಂದ ಕೂಡಿದ್ದು ಸಿಂಘಣನ ನಂತರ ಅಧಿಕಾರಕ್ಕೆ ಬಂದ ಕೃಷ್ಣನ ಕಾಲದಲ್ಲಿ ಅಂದರೆ ೧೨೫೫ ರಲ್ಲಿ ಇದನ್ನು ರಚಿಸಲಾಗಿದೆ. ಇದರಲ್ಲಿ ಶ್ರೀ ಕೋಡಿ ಮಹಾಬಳೇಶ್ವರ ದೇವರಿಗೆ ಲಾಳಗೌಸಟ ನಾಯಕನು ಭೂಮಿಯನ್ನು ದಾನ ನೀಡಿದನೆಂದು ತಿಳಿದು ಬರುತ್ತದೆ. ಇವನು ದಾನ ನೀಡಿದ ಭೂಮಿಯನ್ನು ಕಾಲಡಿ ಎಂಬ ಗ್ರಾಮದಿಂದ ಖರೀದಿಸಿದ್ದನೆಂದು ತಿಳಿದು ಬರುತ್ತದೆ. ಕಾಲಡಿ ಎಂಬುದು ಇಂದಿನ ಕದಡಿ ಗ್ರಾಮವಿರಬಹುದು.

ಹೀಗೆ ನಾಲ್ಕು ಶಾಸನಗಳ ಈ ದೇವಾಲಯ ನಮ್ಮ ಪರಂಪರೆಯನ್ನು ಬಿಂಬಿಸುತ್ತದೆ. ಈ ದೇವಾಲಯದ ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಅದರ ಬಲಭಾಗದಲ್ಲಿ ಗೋಡೆಗೆ ಹೊಂದಿಕೊಂಡು ದೊಡ್ಡದಾದ ತಗ್ಗು ಕಂಡುಬಂದಿದೆ. ಬಹುಶಃ ವಿಗ್ರಹ ಚೋರರು ವಿಗ್ರಹದ ಪಕ್ಕದಲ್ಲಿ ಸಂಪತ್ತು ಇರಬಹುದೆಂದು ಈ ಕೆಲಸವನ್ನು ಮಾಡಿರಬಹುದು. ಈ ಗರ್ಭಗ್ರಹ ಇಂದು ಅವಸಾನದ ಅಂಚಿನಲ್ಲಿದೆ. ಇದರ ಬಾಗಿಲು ತೋರಣದ ಭಾಗದಲ್ಲಿ ಸುಂದರವಾದ ಕೆತ್ತನೆ ಇದೆ. ದೇವಾಲಯದ ಕಂಬಗಳು ಕಲ್ಯಾಣ ಚಾಲುಕ್ಯರ ವಾಸ್ತು ಶಿಲ್ಪದ ಅಂಶಗಳನ್ನು ಬಿಂಬಿಸುತ್ತವೆ.

ದೇವಾಲಯದ ಪೂರ್ವ ಮತ್ತು ಪಶ್ಚಿಮದ ಗೋಡೆಗಳು ಪೂರ್ಣ ಶಿಥಿಲಾವಸ್ಥೆಯಲ್ಲಿದ್ದು ಬೀಳುವ ಹಂತದಲ್ಲಿವೆ. ಗೋಡೆಯ ರಕ್ಷಣೆಗೆ ತಾತ್ಕಾಲಿಕವಾಗಿ ಕಲ್ಲಿನ ತಡೆಗೋಡೆಗಳನ್ನು ಸ್ಥಳೀಯರು ನಿರ್ಮಿಸಿದ್ದಾರೆ. ದೇವಾಲಯದ ಶಿಖರವು ದ್ರಾವಿಡ ಶೈಲಿಯಲ್ಲಿ ಉತ್ಕೃಷ್ಟ ಕುಸುರಿನ ಕೆಲಸದೊಂದಿಗೆ ನಿರ್ಮಿಸಲಾಗಿದೆ. ಇದೂ ಕೂಡ ಶಿಥಿಲಾವಸ್ಥೆಯಲ್ಲಿದೆ. ಸುಂದರವಾದ ಕೆತ್ತನೆಯಿಂದ ಕೂಡಿದ ಶಿಖರದ ಮೇಲೆ ಗಿಡ-ಗಂಟೆಗಳು ಬೆಳೆದು ಬೀಳುವ ಸ್ಥಿತಿಯಲ್ಲಿದೆ. ಶಿಖರದ ತುದಿಯ ಕಲ್ಲು (ಆಮಲಕ) ಕೆಳಗೆ ಬಿದ್ದು ಒಡೆದು ಹೋಗಿದೆ. ಈ ದೇವಾಲಯದಲ್ಲಿ ವರ್ಷಕ್ಕೊಮ್ಮೆ ಸಾಂಪ್ರಾದಾಯಕವಾಗಿ ಜಾತ್ರೆ ನಡೆಯುತ್ತದೆ. ಎನ್ನುವುದು ಸ್ಥಳೀಯರ ಅಭಿಪ್ರಾಯ ಆದರೆ ಜಾತ್ರೆ ಎಂದರೆ ಕೇವಲ ದೇವರ ಪೂಜೆ ಮಾಡಿ ಕಲ್ಲಿನ ದೇವರಿಗೆ ನೈವಿಧ್ಯ ಮಾಡುವುದಲ್ಲ. ಆ ದೇವಾಲಯದ ಸ್ಥಿತಿ-ಗತಿಯನ್ನು ಗಮನಿಸಿ ಅದರ ರಕ್ಷಣೆಗೆ ನಮ್ಮ ಅಳಿಲು ಸೇವೆಯನ್ನು ಸಲ್ಲಿಸುವುದೇ ನಿಜವಾದ ಜಾತ್ರೆ.

ಒಟ್ಟಿನಲ್ಲಿ ಈ ಕೋಡಿ ಬಸವಣ್ಣ ದೇವಾಲಯವು ನಾಗಾವಿ ಗ್ರಾಮದ ಧಾರ್ಮಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಕೇಂದ್ರವಾಗಿ ಇಂದಿಗೂ ಸ್ಥಳೀಯ ಜನರು ಈ ದೇವಾಲಯದ ಜೊತೆ ಅವಿನಾಭಾವ ಸಂಬಂಧವನ್ನು ಹೊಂದಿದ್ದು, ಊರಿನ ಆರಾಧ್ಯ ದೇವರೆಂದು ಪೂಜಿಸುತ್ತಿದ್ದರು.





# ಯಾದಗಿರಿ ಜಿಲ್ಲೆಯ ಮಣ್ಣಿನ ಕೋಟೆಗಳು

ಡಾ. ಶಂಭುಲಿಂಗ ಎಸ್. ವಾಣಿ*

**ಪ್ರಾ**ಚೀನ ಕಾಲದಿಂದ ಆಧುನಿಕ ಕಾಲದವರೆಗೆ ಭಾರತದಲ್ಲಿ ಆಳ್ವಿಕೆ ಮಾಡಿರುವ ಪ್ರತಿಯೊಂದು ರಾಜ ಮನೆತನಗಳು ತಮ್ಮ ರಾಜ್ಯದ ರಾಜಧಾನಿಯ ರಕ್ಷಣೆಗಾಗಿ ಕೋಟೆಗಳನ್ನು ನಿರ್ಮಿಸಿಕೊಂಡಿವೆ. ಕೋಟೆಯ ಮಹತ್ವವನ್ನು ಕುರಿತು ಐತಿಹಾಸಿಕ ಕೃತಿಗಳಲ್ಲಿ ಹೇಳಲಾಗಿದೆ. ಅಪಾರ ಸಂಖ್ಯೆಯ ಸೈನ್ಯ ಮಾಡುವ ಕಾರ್ಯಕ್ಕಿಂತ ಹೆಚ್ಚಿನ ಕಾರ್ಯವನ್ನು ಒಂದು ಕೋಟೆ ಮಾಡುತ್ತದೆ.

ಕ್ರಿ.ಶ. ೨೦೧೦ರಲ್ಲಿ ಗುಲಬರ್ಗಾ ಜಿಲ್ಲೆಯಿಂದ ಪ್ರತ್ಯೇಕಗೊಂಡು ಸ್ವತಂತ್ರ ಜಿಲ್ಲೆಯಾಗಿರುವ ಯಾದಗಿರಿ ಜಿಲ್ಲೆಯು ಪ್ರಮುಖವಾಗಿ ಶಹಾಪುರ ಹಾಗೂ ಸುರಪೂರ ತಾಲ್ಲೂಕುಗಳನ್ನು ಒಳಗೊಂಡಿದೆ. ಈ ಜಿಲ್ಲೆಯು ತನ್ನದೆ ಆದ ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಈ ಭಾಗದಲ್ಲಿ ನಿರ್ಮಾಣಗೊಂಡ ಕೋಟೆಗಳನ್ನು ಕುರಿತು ಅವಲೋಕಿಸುವಾಗ ಕಲ್ಲಿನಲ್ಲಿ, ಕಾಡಿನ ಮಧ್ಯದಲ್ಲಿ, ಬೆಟ್ಟದ ಮೇಲೆ ಹಾಗೂ ಮಣ್ಣಿನಲ್ಲಿ ನಿರ್ಮಿಸಿರುವ ಕೋಟೆಗಳು ಕಂಡುಬರುತ್ತವೆ. ಪ್ರಸ್ತುತ ಲೇಖನದಲ್ಲಿ ಇದುವರೆಗೆ ಬೆಳಕಿಗೆ ಬಾರದೆ ಇರುವ ಮಣ್ಣಿನ ಕೋಟೆಗಳ ರಚನೆ, ವಿನ್ಯಾಸ, ಮಹತ್ವ, ಅವಶ್ಯಕತೆ ಮತ್ತು ತಂತ್ರಜ್ಞಾನವನ್ನು ಕುರಿತು ಹೇಳಲಾಗಿದೆ.

ಯಾದಗಿರಿ ಜಿಲ್ಲೆಯ ಈಶಾನ್ಯ ಭಾಗಕ್ಕೆ ೪೦ ಕಿ.ಮೀ. ಅಂತರದಲ್ಲಿ ಬರುವ ಗುರಮಿಠಕಲ್ ಸುತ್ತಮುತ್ತಲಿನಲ್ಲಿ ಬರುವ ಚಂಡ್ರಕಿ, ಕಾಕಲ್‌ವಾರ, ಪುಟಪಕ್, ಇಟಕಲ್, ಗಾಜರಕೋಟ್, ಶಿಲಾರಕೋಟ್ ಕೋಟಗಿರಿ ಹಾಗೂ ಸೇಡಂ ತಾಲೂಕಿನಲ್ಲಿ ಬರುವ ಮುಧೋಳಗಳಲ್ಲಿ ೧೮ನೆಯ ಶತಮಾನದಲ್ಲಿ ನಿರ್ಮಾಣಗೊಂಡ ಮಣ್ಣಿನ ಕೋಟೆಗಳು ಇವೆ. ಇಂತಹ ಕೋಟೆಗಳು ಹೆಚ್ಚಿನ ಅವಧಿಯವರೆಗೆ ಬಾಳುವುದಿಲ್ಲ. ಈ ಕೋಟೆಗಳ ಕುರಿತು ಮಾಹಿತಿಯು ಕೇವಲ ಪುಸ್ತಕಗಳಲ್ಲಿ ಮಾತ್ರ ಲಭ್ಯವಾಗುತ್ತದೆ. ಮೇಲೆ ಹೇಳಿರುವ ಹಲವು ಭಾಗದಲ್ಲಿಯ ಕೋಟೆಗಳು ಸಂಪೂರ್ಣವಾಗಿ ನಾಶಹೊಂದಿವೆ. ಅದರಲ್ಲಿ ಚಂಡ್ರಕಿ, ಕಾಕಲ್‌ವಾರ, ಮುಧೋಳದ ಕೋಟೆಗಳು ಮಾತ್ರ ಉಳಿದುಕೊಂಡಿವೆ. ಮುಂದಿನ ಕೆಲವು ದಶಕಗಳಲ್ಲಿ ಇವುಗಳು ಸಹ ನಾಶ ಹೊಂದಬಹುದು.

ಕಾಕಲ್‌ವಾರದಲ್ಲಿ ಎರಡು ಹಂತದ ಕೋಟೆಯಿದೆ. ಗ್ರಾಮದ ಸುತ್ತಲು ಇರುವ ಕೋಟೆ ಹಾಗೂ ದೇಸಾಯಿಗಳ ಅರಮನೆಯ ರಕ್ಷಣೆಗಾಗಿ ನಿರ್ಮಿಸಿರುವ ಮತ್ತೊಂದು ಭದ್ರವಾದ ಕೋಟೆ. ಗ್ರಾಮದ ಸುತ್ತಲೂ ಇರುವ ಕೋಟೆಯು ನಾಶ ಹೊಂದಿದ್ದು ಅದರ ಕೆಲವು ಭಾಗಗಳು ಮಾತ್ರ ಅಲ್ಲಲ್ಲಿ ಕಂಡುಬರುತ್ತವೆ. ಇದು ಮಣ್ಣಿನಲ್ಲಿ ನಿರ್ಮಾಣಗೊಂಡಿರುವ ಕೋಟೆಯಾಗಿರುವುದರಿಂದ ಗ್ರಾಮಸ್ಥರು ಅದೇ ಮಣ್ಣನ್ನು ಬಳಸಿಕೊಂಡು ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ನೈಋತ್ಯ ದಿಕ್ಕಿನಲ್ಲಿರುವ ಇದರ ಪ್ರವೇಶದ್ವಾರದ ಎರಡೂ ಬದಿಯಲ್ಲಿರುವ ಕೊತ್ತಾಳಗಳಲ್ಲಿ ಒಂದು ಮಾತ್ರ ಉಳಿದುಕೊಂಡಿದೆ. ಅದರ ಕೆಳಹಂತದ ರಚನೆಗೆ ಸ್ಥಳೀಯವಾಗಿ ಲಭ್ಯವಾಗುವ ಕಲ್ಲುಗಳನ್ನು ಬಳಸಲಾಗಿದೆ. ಅದರ ಮೇಲ್ಭಾಗದ ರಚನೆಗೆ ಹಾಳು ಮಣ್ಣನ್ನು ಬಳಸಲಾಗಿದೆ. ಬಿಳಿ ವರ್ಣದ ಈ ಮಣ್ಣಿನಲ್ಲಿ ೨ x ೩ ಅಡಿ ಉದ್ದ ಅಗಲದಲ್ಲಿ ಚೌಕಾಕೃತಿ ಅಥವಾ ಆಯತಾಕಾರವನ್ನು ಮೊದಲು ರಚಿಸಿಕೊಂಡು ನಂತರ ಇವುಗಳನ್ನು ಒಂದರ ಮೇಲೊಂದರಂತೆ ಐದು ಹಂತಗಳಲ್ಲಿ ಜೋಡಿಸಿ ಅದರ ಮೇಲೆ ಅರ್ಧವೃತ್ತಾಕಾರದ ಕೋಟೆ ತೆನೆಯನ್ನು ನಿರ್ಮಿಸಲಾಗಿದೆ. ಈ ಮಣ್ಣಿನ ಗೋಡೆಯ ಮಧ್ಯದಲ್ಲಿ ಹಲವು ರಂಧ್ರಗಳನ್ನು ಮಾಡಲಾಗಿದೆ. ಇವುಗಳಲ್ಲಿ ಕೆಲವು ವೀಕ್ಷಣಾ ರಂಧ್ರಗಳಾಗಿವೆ ಮತ್ತೆ ಕೆಲವು ಮಳೆಯ ನೀರು ಹೊರಗೆ ಬರಲು ಬಿಡಲಾಗಿದೆ. ಈ ರೀತಿಯ ಮತ್ತೊಂದು ಕೊತ್ತಳವು ಗ್ರಾಮದ ಪೂರ್ವ ಭಾಗದಲ್ಲಿದ್ದು ಇದು ಸಹ ಅವನತಿ ಹೊಂದಿದೆ. ಇನ್ನು ಉಳಿದ ಕಡೆ ಮಣ್ಣಿನ ಗೋಡೆ ಸಂಪೂರ್ಣವಾಗಿ ಅವನತಿ ಹೊಂದಿದ್ದು ತಳಭಾಗದಲ್ಲಿರುವ ಕಲ್ಲಿನ ರಚನೆ ಮಾತ್ರ ಉಳಿದುಕೊಂಡಿದೆ. ದೇಸಾಯಿಗಳ ಸಂಸ್ಥಾನದ ಅರಮನೆಯ ಸುತ್ತಲೂ ಕಲ್ಲಿನ ರಕ್ಷಣಾ ಗೋಡೆ ಮತ್ತು ಕಟ್ಟಿಗೆಯಲ್ಲಿ ನಿರ್ಮಿಸಿರುವ ಅರಮನೆಯು ಇನ್ನೂ ಸುಸ್ಥಿತಿಯಲ್ಲಿದೆ.

* ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸ್ನಾತಕೋತ್ತರ ಕೇಂದ್ರ, ಸರಕಾರಿ ಕಾಲೇಜು, ಗುಲಬರ್ಗಾ–೫೮೫೧೦೫.

ಗುರಮಿಠಕಲ್ ನಗರದ ಕೇಂದ್ರ ಭಾಗದಲ್ಲಿ ಸುಮಾರು ೨ ಕಿ.ಮೀ. ಮಣ್ಣಿನ ಕೋಟೆಯಿದೆ. ಇದರ ಸುತ್ತಲಿನ ರಚನೆಗೆ ತಳಭಾಗದಲ್ಲಿ ೫ ರಿಂದ ೧೦ ಅಡಿ ಎತ್ತರದವರೆಗೆ ಸ್ಥಳೀಯವಾಗಿ ಲಭ್ಯವಾಗುವ ಕಲ್ಲುಗಳನ್ನು ಬಳಸಲಾಗಿದ್ದು ಅದರ ಮೇಲ್ಭಾಗದಲ್ಲಿ ೧೦ ರಿಂದ ೧೫ ಅಡಿ ಎತ್ತರದ ಮಣ್ಣಿನ ಗೋಡೆ ಇದೆ. ತಳಭಾಗವು ೮ ರಿಂ ೧೦ ಅಡಿ ಅಗಲವಾಗಿದ್ದು ಮೇಲೆ ಹೋದಂತೆ ಕಿರಿದಾಗುತ್ತದೆ. ಇನ್ನೂ ಕೆಲವೊಂದು ಭಾಗದ ಮಣ್ಣಿನ ಗೋಡೆಯು ೧೫ ರಿಂದ ೨೦ ಅಡಿ ಎತ್ತರವಾಗಿದೆ. ಈ ಕೋಟೆಯ ವಿಶೇಷತೆ ಎಂದರೆ ಕ್ರೆನೆಗಳ ಹಿಂದೆ ಸೈನಿಕರಿಗೆ ಕಾವಲು ಮಾಡಲು ಯಾವುದೇ ಸ್ಥಳಾವಕಾಶವಿರುವುದಿಲ್ಲ. ಈ ರೀತಿಯ ರಚನೆಯು ಪ್ರಬಲವಾದ ಕೋಟೆಗಳಲ್ಲಿ ಇರುವುದಿಲ್ಲ. ಆದ್ದರಿಂದ ರಕ್ಷಣೆಯ ದೃಷ್ಟಿಯಿಂದ ಇದೊಂದು ಸಾಮಾನ್ಯ ಕೋಟೆಯಂತೆ ಕಂಡುಬರುತ್ತದೆ. ಕೋಟೆಯು ಆದಿಲ್ ಶಾಹಿಗಳ ಕೊನೆ ಕಾಲದಲ್ಲಿ ರಚನೆಗೊಂಡಿದ್ದು ನಂತರ ಬಂದ ದೇಸಾಯಿಗಳು ಇದನ್ನು ಬಲಪಡಿಸಿ ಸುತ್ತಲು ಮಣ್ಣಿನ ಕೋಟೆಯನ್ನು ನಿರ್ಮಿಸಿದರು. ಪ್ರಸ್ತುತ ಕೋಟೆಯ ದಕ್ಷಿಣ ಭಾಗವು ಅವನತಿಯ ಹಂತದಲ್ಲಿದೆ. ಅಲ್ಲದೆ ಕೇಂದ್ರಭಾಗದಲ್ಲಿರುವ ೩೦ ಅಡಿ ಎತ್ತರದ ಕಾವಲು ಗೋಪುರವನ್ನು ಸಹ ಮಣ್ಣಿನಲ್ಲಿ ನಿರ್ಮಿಸಲಾಗಿದೆ. ಈ ಮಣ್ಣಿನ ರಾಶಿಯನ್ನು ಸ್ಥಳೀಯ ಜನರು ತಮ್ಮ ತಮ್ಮ ಹೊಲಗಳಿಗೆ ಸಾಗಿಸುತ್ತಿದ್ದಾರೆ.

ಗುರುಮಿಠಕಲ್‌ನ ಪೂರ್ವದಿಕ್ಕಿಗೆ ೬ ಕಿ.ಮೀ. ದೂರದಲ್ಲಿರುವ ಚಂಡ್ರಕಿ ಗ್ರಾಮದಲ್ಲಿ ಆಕರ್ಷಕವಾದ ಮಣ್ಣಿನ ಕೋಟೆಯಿದೆ. ಗ್ರಾಮ ಪೂರ್ವಕ್ಕೆ ಅರ್ಧ ಕಿ.ಮೀ. ದೂರದಲ್ಲಿರುವ ಈ ಕೋಟೆಯು ಸುಮಾರು ೨ ಕಿ.ಮೀ. ಸುತ್ತಳತೆಯಲ್ಲಿ ವೃತ್ತಾಕಾರದಲ್ಲಿದೆ. ೧೭ನೆಯ ಶತಮಾನದ ಕೊನೆಯ ಭಾಗದಲ್ಲಿ ಹಾಗೂ ೧೮ನೆಯ ಶತಮಾನದ ಆರಂಭದಲ್ಲಿ ನಿರ್ಮಾಣಗೊಂಡಿರುವ ಈ ಕೋಟೆಯು ಹೈದ್ರಾಬಾದ ನಿಜಾಮನ ಆಳ್ವಿಕೆಗೆ ಒಳಪಟ್ಟಿತು. ನಿಜಾಮನ ಜಾಗೀರದಾರನಿಂದ ಸ್ಥಳೀಯರಾದ ಶ್ರೀ ವಿಠಲರಾವ ಭೀಮಶೇನರಾವ ಕುಲಕರ್ಣಿಯವರು ಖರೀದಿಸಿದರು. ಸುಮಾರು ೨೦೦ ವರ್ಷಗಳಿಂದ ಕೋಟೆಯ ಒಳಗಡೆ ಇರುವ ಭೂಮಿಯನ್ನು (೨೨ ಎಕರೆ ೧೧ ಗುಂಟೆ ) ಇದೇ ಮನೆತನದವರು ಸಾಗುವಳಿ ಮಾಡುತ್ತಿದ್ದಾರೆ. ಕಾಕಲವಾರದ ಲಕ್ಷ್ಮಣಪ್ಪ ದೊರೆಗಳ ಅಧೀನದಲ್ಲಿ ಈ ಕೋಟೆಯನ್ನು ಕುಲಕರ್ಣಿಯವರು ಖರೀದಿಸಿದ್ದಾರೆಂದು ಅದೇ ಮನೆತನದ ರಘುನಾಥರಾವ ಕುಲಕರ್ಣಿಯವರು ಹೇಳುತ್ತಾರೆ. ೧೯೪೭ರ ಪೂರ್ವದಲ್ಲಿ ಈ ಪ್ರದೇಶ ಸಂಪೂರ್ಣವಾಗಿ ಗಿಡ ಮರಗಳಿಂದ ಆವರಿಸಿಕೊಂಡಿದ್ದು ನಂತರದಲ್ಲಿ ಇದನ್ನು ಸ್ವಚ್ಛಗೊಳಿಸಿ ಸಾಗುವಳಿ ಮಾಡಲಾಯಿತು.

ಪ್ರಸ್ತುತ ಈ ಕೋಟೆಯು ಕೇಂದ್ರ ಅಥವಾ ರಾಜ್ಯ ಸರಕಾರದ ಅಧೀನದಲ್ಲಿ ಇರದೆ ಆ ಜಮೀನಿನ ಒಡೆಯರಾದ ಕಿಶನ್‌ರಾವ ಕುಲಕರ್ಣಿಯವರ ಸ್ವತ್ತಾಗಿದೆ. ಇದನ್ನು ಕೋಟೆಯೆಂದು ಪರಿಗಣಿಸದೆ ತಮ್ಮ ಹೊಲಕ್ಕೆ ಇರುವ ಬೇಲಿ ಎಂದು ಪರಿಗಣಿಸಿದ್ದಾರೆ. ಇಂತಹ ಅಪರೂಪದ ಆಕರ್ಷಕ ಕೋಟೆಯು ನಮಗೆ ಈ ಭಾಗದಲ್ಲಿ ಎಲ್ಲಿಯು ಕಂಡುಬರುವುದಿಲ್ಲ.

ಪೂರ್ವ ದಿಕ್ಕಿನಲ್ಲಿ ಇದರ ಪ್ರಮುಖ ಪ್ರವೇಶದ್ವಾರವಿದೆ. ಅದರ ಮುಂಭಾಗದಲ್ಲಿ ಸು. ೬೦% ಪ್ರತಿಶತ ದ್ವಾರವನ್ನು ಕಾಣದಂತೆ ವೃತ್ತಾಕಾರದ ಮಣ್ಣಿನ ತಡೆ ಗೋಡೆಯನ್ನು ರಚಿಸಲಾಗಿದೆ. ಈ ಗೋಡೆಯ ಎರಡೂ ಬದಿಯಲ್ಲಿ ಕಂದಕವನ್ನು ರಚಿಸಿಕೊಂಡಿರುವುದರಿಂದ ಅದು ಸಂಪೂರ್ಣವಾಗಿ ನೀರಿನಲ್ಲಿ ನಿಂತಂತೆ ಕಂಡುಬರುತ್ತದೆ. ದ್ವಾರದ ಮುಂಭಾಗದಲ್ಲಿ ಈ ವಿಶಾಲವಾದ ಸ್ಥಳದಲ್ಲಿ ಕಾವಲುಗಾರರಿಗೆ ರಕ್ಷಣಾತ್ಮಕವಾದ ಸ್ಥಳವಿದೆ. ಕೋಟೆಯ ಒಳಭಾಗದಲ್ಲಿನ ಮಣ್ಣಿನಿಂದ ನಿರ್ಮಿಸಿರುವ ಎಲ್ಲಾ ಕಟ್ಟಡಗಳು ಅವನತಿ ಹೊಂದಿದ್ದರೂ ಕಲ್ಲಿನಲ್ಲಿ ನಿರ್ಮಿಸಿರುವ ಮಲ್ಲಿಕಾರ್ಜುನ ದೇವಾಲಯ ಅತ್ಯಂತ ಸುಭದ್ರ ಸ್ಥಿತಿಯಲ್ಲಿದೆ. ಇದರ ಸುತ್ತಲು ೧೫ ರಿಂದ ೨೦ ಅಡಿ ಎತ್ತರದ ಮಣ್ಣಿನ ರಕ್ಷಣಾಗೋಡೆಯನ್ನು ನಿರ್ಮಿಸಲಾಗಿದೆ. ಕಲಾತ್ಮಕವಾಗಿ ನಿರ್ಮಿಸಿರುವ ಈ ಕೋಟೆಯ ಸುತ್ತಲೂ ೬ ಕಾವಲು ಗೋಪುರಗಳಿವೆ. ಇವುಗಳು ೩೦ ಅಡಿ ಎತ್ತರವಾಗಿದ್ದು, ಅದರಲ್ಲಿ ಅರ್ಧಭಾಗ ಸ್ಥಳೀಯವಾಗಿ ಲಭ್ಯವಾಗುವ ಬೆಣಚು ಕಲ್ಲುಗಳನ್ನು ಮತ್ತು ಕಪ್ಪನೆಯ ಕಲ್ಲುಗಳನ್ನು ಬಳಸಿ ನಿರ್ಮಿಸಲಾಗಿದ್ದು ಮೇಲ್ಭಾಗವನ್ನು ಮಣ್ಣಿನಿಂದ ನಿರ್ಮಿಸಲಾಗಿದೆ. ಮಣ್ಣಿನ ಗೋಡೆಯ ನಿರ್ಮಾಣದಲ್ಲಿ ಒಂದು ವಿಶೇಷ ಕೌಶಲ್ಯ ಕಂಡುಬರುತ್ತದೆ. ಮೊದಲು ಮಣ್ಣನ್ನು ಹದಮಾಡಿ ಅವಶ್ಯವಿರುವ ಆಕಾರದಲ್ಲಿ ಅದನ್ನು ಸಿದ್ಧಪಡಿಸಿ ನಂತರದಲ್ಲಿ ಕೆಲವು ದಿನಗಳವರೆಗೆ ಅದನ್ನು ಒಣಗಿಸಿ ಆ ಮೇಲೆ ಅವುಗಳನ್ನು ಹಂತಹಂತವಾಗಿ ಒಂದರ ಮೇಲೆ ಒಂದನ್ನು ಜೋಡಿಸಲಾಗುತ್ತಿತ್ತು. ಎರಡು ಮಣ್ಣಿನ ಮುದ್ದೆಗಳ ಮಧ್ಯದಲ್ಲಿ ಸ್ವಲ್ಪ ಹಸಿ ಮಣ್ಣನ್ನು ಬಳಸಿರುವಂತೆ ಕಂಡುಬರುತ್ತದೆ.

ಅಲ್ಲದೆ ಗೋಡೆಯ ಮಧ್ಯದಲ್ಲಿ ಅವಶ್ಯವಿರುವೆಡೆ ರಂಧ್ರಗಳನ್ನು ಮುಂಚಿತವಾಗಿಯೇ ಕೊರೆಯುತ್ತಿದ್ದರು. ಇನ್ನೂ ಕೆಲವು ಕಡೆಯಲ್ಲಿ ಮಣ್ಣಿನ ಕೊಳವೆಗಳನ್ನು ಜೋಡಿಸಲಾಗುತ್ತಿತ್ತು. ಅವುಗಳು ಇಂದಿಗೂ ಯಥಾಸ್ಥಿತಿಯಲ್ಲಿ ಈ

ವೀಕ್ಷಣಾ ರಂಧ್ರಗಳಿಂದ ಸುಮಾರು ೧ ಕಿ.ಮೀ. ದೂರದ ವರೆಗೆ ವೀಕ್ಷಿಸಬಹುದು. ಪ್ರತಿಯೊಂದು ಕೊತ್ತಳದ ಸುತ್ತಲು ಕೋಟೆಯ ತೆನೆಗಳಿವೆ ಅಲ್ಲದೆ ಇಡಿಯ ಕೋಟೆ ಗೋಡೆಯ ಮೇಲ್ಭಾಗದಲ್ಲಿ ವಿಶಾಲವಾದ ತೆನೆಗಳು ಅವುಗಳ ಹಿಂಭಾಗದಲ್ಲಿ ಕಾವಲುಗಾರ ರಕ್ಷಣೆಯ ಸ್ಥಳವಿದೆ.

ಈ ಮಣ್ಣಿನ ಕೋಟೆಯ ಉತ್ತರ, ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ಸುಮಾರು ೧೦ ಅಡಿ ದಪ್ಪವಾಗಿದ್ದು, ೧೫ ಅಡಿ ಎತ್ತರವಿದೆ. ನಂತರ ಮುಂದೆ ಐದು ಅಡಿಯಲ್ಲಿ ಗೋಡೆಯನ್ನು ನಿರ್ಮಿಸಿ ಉಳಿದ ಸ್ಥಳವನ್ನು ಕಾವಲುಗಾರರು ಕೋಟೆಯ ಸುತ್ತಲೂ ಮೇಲ್ಭಾಗದಲ್ಲಿ ಸುತ್ತಾಡಲು ಅವಕಾಶ ಮಾಡಲಾಗಿದೆ. ಅಲ್ಲದೆ ಸುಮಾರು ೪ ಅಡಿ ದಪ್ಪ ೬ ಅಡಿ ಎತ್ತರದ ವಿಶಾಲವಾದ ತೆನೆಗಳನ್ನು ನಿರ್ಮಿಸಲಾಗಿದೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಬಲಾಢ್ಯ ಕೋಟೆಯಂತೆ ಇದು ಕಂಡುಬರುತ್ತದೆ. ಇದರ ಮತ್ತೊಂದು ವಿಶೇಷತೆ ಎಂದರೆ ಸಮತಟ್ಟಾದ ಸ್ಥಳದಲ್ಲಿ ನಿರ್ಮಿಸಿರುವ ಮಣ್ಣಿನ ಕೋಟೆಗೆ ಕಂದಕವಿರುವುದಿಲ್ಲ. ಆದರೆ ಚಂದ್ರಕಿ ಕೋಟೆಯ ಮೂರು ಭಾಗಗಳಲ್ಲಿ ಕಂದಕವಿದೆ. ಜೊತೆಗೆ ಕೋಟೆಯಿಂದ ಹೊರಭಾಗಕ್ಕೆ ಸಂಪರ್ಕ ಕಲ್ಪಿಸಲು ಎರಡು ಗುಪ್ತದ್ವಾರಗಳು ಹಾಗೂ ಒಂದು ದಿಡ್ಡಿಬಾಗಿಲು ಇದೆ. ಕೋಟೆಯ ಪಶ್ಚಿಮ ಭಾಗದ ಗೋಡೆಗೆ ಅಂಟಿಕೊಂಡಿರುವ ಒಂದು ಕಾವಲು ಗೋಪುರದ ಮೇಲೆ ೧೨ ಅಡಿ ಉದ್ದನೆಯ ತೋಪು ಇದೆ. ಈ ಎಲ್ಲಾ ಅಂಶಗಳಿಂದ ಇದೊಂದು ಬಲಾಢ್ಯ ಮಣ್ಣಿನ ಕೋಟೆ ಎಂದು ಹೇಳಲಾಗಿದೆ.

ಆದರೆ ಪ್ರಸ್ತುತ ಇದರ ಸ್ಥಿತಿ ಶೋಚನೀಯವಾಗಿದೆ. ಕೋಟೆಯ ಪಶ್ಚಿಮ ಭಾಗದ ಗೋಡೆ ಬಹುಮಟ್ಟಿಗೆ ಬಿದ್ದುಹೋಗಿವೆ. ಅಲ್ಲಿಂದ ದನಕರುಗಳು ಒಳಗಡೆ ಬಾರದಂತೆ ಮುಳ್ಳಿನ ಬೇಲಿಯನ್ನು ಹಾಕಲಾಗಿದೆ. ರೈತರು ಉತ್ತರ ಭಾಗದ ಒಳಗೋಡೆಯನ್ನು ಕೆಡವಿ ಅಲ್ಲಿ ಸಾಗುವಳಿ ಮಾಡುತ್ತಿದ್ದಾರೆ. ಈ ಭಾಗದಲ್ಲಿಯ ತೆನೆಗಳು ನೆಲಕ್ಕೆ ಉರುಳಿ ಬೀಳುತ್ತಿವೆ. ಕೋಟೆಗೋಡೆಯ ಮಣ್ಣನ್ನು ತಂದು ಒಳ ಭಾಗದಲ್ಲಿರುವ ಬಾವಿಗಳನ್ನು ಮುಚ್ಚುತ್ತಿದ್ದಾರೆ. ಗೋಡೆಯ ನಿರ್ಮಾಣಕ್ಕೆ ಬಳಸಿದ ಮಣ್ಣು ಫಲವತ್ತಾಗಿರುವುದರಿಂದ ಅದರ ಮೇಲೆ ಗಿಡ ಮರಗಳು ಬೆಳೆದು ಅವುಗಳಿಂದ ಕೋಟೆಯು ಅವನತಿ ಹೊಂದುತ್ತಲಿದೆ. ಈ ರೀತಿಯ ಚಟುವಟಿಕೆಗಳಿಗೆ ಕೋಟೆಯು ಒಳಗಾಗಿರುವುದರಿಂದ ಇದರ ರಕ್ಷಣೆ ಅಸಾಧ್ಯವಾಗಿದೆ.

ಗುರಮಿಠಕಲ್ ಸಮೀಪದಲ್ಲಿರುವ ಇಟಕಲ್ ಕೋಟೆಯು ಗ್ರಾಮರಕ್ಷಣಾಕೋಟೆಯಾಗಿದ್ದು ಇದರ ರಚನೆ ಭಿನ್ನವಾಗಿದೆ. ತಳಪಾಯದಲ್ಲಿ ಕೇವಲ ಎರಡು ಅಡಿಯ ಕಲ್ಲಿನ ಗೋಡೆ ಇದ್ದು ಅದರ ಮೇಲೆ ಒಂದು ಶಹಾಬಾದ ಪರ್ಶಿಯಂತಹ ಕಲ್ಲನ್ನು ಹಾಕಿ ಅದರ ಮೇಲೆ ೨೦ರಿಂದ ೨೫ ಅಡಿ ಎತ್ತರದ ಮಣ್ಣಿನ ಗೋಡೆಯನ್ನು ನಿರ್ಮಿಸಲಾಗಿದೆ. ಇದರಲ್ಲಿ ಹಲವು ಬಗೆಯ ರಂಧ್ರಗಳನ್ನು ಕೊರೆಯಲಾಗಿದೆ ಇಡೀ ಗ್ರಾಮದ ಸುತ್ತಲು ಇರುವ ಈ ಕೋಟೆಯು ಕೆಲವು ಭಾಗಗಳಲ್ಲಿ ಮಾತ್ರ ಉಳಿದುಕೊಂಡಿದೆ ಇದರ ಕೆಲವು ಭಾಗಗಳನ್ನು ಕಲ್ಲಿನಿಂದ ಪುನರ್‌ನಿರ್ಮಿಸಲಾಗಿದೆ. ಆದರೆ ಗ್ರಾಮದ ಚರಂಡಿಯ ನೀರು ಕೋಟೆ ಗೋಡೆಯ ತಳಭಾಗದಿಂದ ಹರಿದು ಹೊರಗಡೆ ಬರುತ್ತದೆ.

ಒಟ್ಟಾರೆ ಯಾದಗಿರಿ ಜಿಲ್ಲೆಯಲ್ಲಿ ಬರುವ ಈ ಮಣ್ಣಿನ ಕೋಟೆಗಳು ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ. ಇವುಗಳ ಅಧ್ಯಯನಕ್ಕೆ ಇನ್ನೂ ಹೆಚ್ಚಿನ ಆಧಾರಗಳ ಅವಶ್ಯಕತೆ ಇದೆ. ಸ್ಥಳೀಯವಾಗಿ ಲಭ್ಯವಾಗುವ ಮಾಹಿತಿ ಹಾಗೂ ಕೋಟೆಯ ಕುರಿತು ರಚನೆಗೊಂಡ ಕೃತಿಗಳಿಂದ ನಮಗೆ ಸಾಮಾನ್ಯ ಮಾಹಿತಿ ಲಭ್ಯವಾಗುತ್ತದೆ. ಅದರಲ್ಲಿ ಗ್ರಾಮರಕ್ಷಣಾಕೋಟೆಯ ಬಗ್ಗೆ ಯಾವುದೇ ಸ್ಪಷ್ಟವಾದ ದಾಖಲೆಗಳು ಲಭ್ಯವಾಗುವುದಿಲ್ಲ. ಇವುಗಳನ್ನು ಕುರಿತು ಅಧ್ಯಯನ ಕಷ್ಟಕರವಾದುದು. ಆದರೂ ಕ್ಷೇತ್ರ ಅಧ್ಯಯನದಿಂದ ಇವುಗಳ ಮಾಹಿತಿಯನ್ನು ಇಲ್ಲಿ ಸಂಗ್ರಹಿಸ ಲಾಗಿದೆ.

## ಆಧಾರಸೂಚಿ


೧. Joshi S.K., *Defence Architecture in Early Karnataka.*
೨. ಪಾಟೀಲ ಚನ್ನಬಸಪ್ಪ ಎಸ್., **ಕರ್ನಾಟಕದ ಕೋಟೆಗಳು,** ಕನ್ನಡ ವಿ.ವಿ. ಹಂಪಿ, ೧೯೯೯.
೩. J.N. Kamalpurkar, *The Deccan Forts.*
೪. Aruni S.K., *Surapura Samsthana Historical and Archaeological Study poligar state in south India,* Bharatiya Kala Prakashana, Delhi-2004.
೫. ಮುಡಬಿ ಗುಂಡೆರಾವ, **ಸೇಡಂ ತಾಲ್ಲೂಕಿನ ಐತಿಹಾಸಿಕ ಸ್ಮಾರಕಗಳು.**
೬. ಎಂ.ಬಿ. ಪಾಟೀಲ, **ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್.**
೭. ಡಾ. ಸಿ. ಮಹದೇವ, **ವಿಜಯನಗರೋತ್ತರ ಕಾಲದ ಬಳ್ಳಾರಿ ಪ್ರದೇಶದ ಗ್ರಾಮ ರಕ್ಷಣಾ ವಾಸ್ತು ಮತ್ತು ರಾಜಕೀಯ ಸ್ಥಿತಿಗತಿ.**
೮. ಡಾ. ಶಂಭುಲಿಂಗ ವಾಣಿ, **ರಕ್ಷಣಾ ವಾಸ್ತುಶಿಲ್ಪ, ಗುಲಬರ್ಗಾ ಜಿಲ್ಲೆ,** (ಅಪ್ರಕಟಿತ ಪಿಎಚ್‌ಡಿ ಪ್ರಬಂಧ); *Gulbarga city and its Monuments* (Unpublished M. Phil Thieses).
೯. ಶ್ರೀಶೈಲ ಬಿರಾದಾರ, **ಸೇಡಂ ಒಂದು ಸಾಂಸ್ಕೃತಿಕ ಅವಲೋಕನ,** ಸಂಸ್ಕೃತಿ ಪ್ರಕಾಶನ, ಬಸವನಗರ, ಸೇಡಂ, ಗುಲ್ಬರ್ಗಾ–೨೦೦೫.



# ‘ಚಟ್ಟೇಶ್ವರ ದೇವಾಲಯ’ ಒಂದು ಅಧ್ಯಯನ

ಡಾ. ಕೆ.ಎನ್. ಮೋಹನ್*

**ಚಟ್ಟೇಶ್ವರ** ದೇವಾಲಯವು ಹಳೇಬೀಡಿನಿಂದ ಸುಮಾರು ಕಿ.ಮೀ ದೂರದಲ್ಲಿರುವ ಚಟ್ಟಹಳ್ಳಿ ಎಂಬ ಗ್ರಾಮದಲ್ಲಿದೆ. ದೇವಾಲಯವು ತ್ರಿಕೂಟಚಲ ಮಾದರಿಯಲ್ಲಿದ್ದು ಶಿವನಿಗೆ ಟ್ಟೇಶ್ವರ ಎಂಬ ಹೆಸರಿನಿಂದ ಕರೆಯಲಾಗಿದೆ. ದೇವಾಲಯ ರಾಡಂಬರವಾಗಿದ್ದು ೩ ಗರ್ಭಗುಡಿಗಳನ್ನು ಹೊಂದಿದೆ, ವೆಲ್ಲವೂ ಚತುರಸ್ರವಾಗಿವೆ. ಚಟ್ಟೇಶ್ವರ ಎಂದು ರೆಯಲ್ಪಡುವ ಗರ್ಭಗೃಹವು ನವರಂಗದ ಎಡಭಾಗದಲ್ಲಿದ್ದು ಲಯದ ಪೂರ್ವಕ್ಕೆ ತೆರೆದುಕೊಂಡಿದೆ. ವಿಷ್ಣುವಿನ ರ್ಭಗುಡಿಯು ದಕ್ಷಿಣಾಭಿಮುಖವಾಗಿದೆ. ಮೂರನೆಯ ಾಗಿ ಪಶ್ಚಿಮಾಭಿ ಮುಖವಾಗಿ ಸೂರ್ಯದೇವರ ಗರ್ಭಗುಡಿ ದೆ.

ಈ ದೇವಾಲಯವು ಚಟ್ಟದಣ್ಣಾಯಕ ಎಂಬ ಹೊಯ್ಸಳರ ಅಧಿಕಾರಿಯಿಂದ ನಿರ್ಮಾಣವಾಗಿದ್ದು. ಈತ ೩ನೇ ಬಲ್ಲಾಳನ ಕಾಲದಲ್ಲಿ ಅಂದರೆ ಕ್ರಿ.ಶ. ೧೨೦೦ರಲ್ಲಿ ಈ ಭಾಗದ ಅಧಿಕಾರಿಯಾಗಿದ್ದಕ್ಕೆ ಈ ದೇವಾಲಯದಲ್ಲಿ ಉಲ್ಲೇಖಿತ ೨ ಶಾಸನಗಳು ಕಂಡುಬರುತ್ತವೆ. ಶಾಸನೊಕ್ತವಾಗಿ ತಿಳಿದುಬರುವುದೆನೆಂದರೆ, ಈ ಭಾಗದಲ್ಲಿ ಚಟ್ಟದಣ್ಣಾಯಕ ಆಡಳಿತ ನಡೆಸುತ್ತಿದ್ದರಿಂದ ಆತನ ಹೆಸರಿನಿಂದಲೇ ಈ ಗ್ರಾಮಕ್ಕೆ ಈ ಹೆಸರು ಬರಲು ಕಾರಣವಾಯಿತು ಎಂದು ತಿಳಿದುಬರುತ್ತದೆ.

ಈ ದೇವಾಲಯವು ಹೊಯ್ಸಳ ಶೈಲಿಯಂತೆ ಎತ್ತರ ವಾದ ಜಗತಿಯ ಮೇಲಿರದೆ ಅಧಿಷ್ಠಾನದ ಮೇಲೆ ಬಿತ್ತಿಯ ರಚನೆಯನ್ನ ಕಾಣಬಹುದು. ಅಧಿಷ್ಠಾನದಲ್ಲಿ ೫ ಪಟ್ಟಕಾ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ, ಶ್ರೀ ದೇವರಾಜ ಅರಸು ಸರಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು, ಮೈಸೂರು–೫೭೧೧೦೫.

ಸಾಲುಗಳಿದ್ದು ಅವುಗಳು ಕೆತ್ತನೆ ಕೆಲಸವನ್ನು ಹೊಂದಿಲ್ಲ, ತಳದಿಂದ ೩ ಮತ್ತು ೪ನೇ ಪಟ್ಟಿಕೆಗಳಲ್ಲಿ ಮಾತ್ರ (ಮಕರ) ವ್ಯಾಳ ಚಿತ್ರ ಮತ್ತು ಹೂಬಳ್ಳಿ ಮತ್ತು ಕೀರ್ತಿಮುಖ ಚಿತ್ರಗಳನ್ನು ಕಂಡರಿಸಲಾಗಿದೆ.

**ನವರಂಗ**

ನವರಂಗದ ದ್ವಾರ ಬಂಧವು ಸಾಧಾರಣವಾಗಿದ್ದು ದ್ವಾರಬಂಧದಲ್ಲಿ ಗಜಲಕ್ಷ್ಮಿ ಚಿತ್ರ ಕಂಡರಿಸಿದ್ದು ದ್ವಾರದ ಎಡ ಮತ್ತು ಬಲಭಾಗದಲ್ಲಿ ಶೈವ ದ್ವಾರಪಾಲಕರನ್ನು ಕಾಣಬಹುದಾಗಿದೆ. ೯ನೆಯ ಅಂಕಣದ ನವರಂಗದ ಎಲ್ಲ ಭುವನೇಶ್ವರಿಗಳು ಸಾಧಾರಣ ಸ್ವರೂಪದಲ್ಲಿದ್ದು, ಮಧ್ಯದ ಭುವನೇಶ್ವರಿಯು ಅಷ್ಟಕೋನದ ನಕ್ಷತ್ರಾಕಾರದ ಕೆತ್ತನೆಯನ್ನು ಹೊಂದಿದ್ದು ಮಧ್ಯದಲ್ಲಿ ಶ್ರೀಚಕ್ರ ಮತ್ತು ಪದ್ಮಗಳನ್ನು ಸುಂದರವಾಗಿ ಕಂಡರಿಸಲಾಗಿದೆ.

**ಭಿತ್ತಿಭಾಗ**

ಭಿತ್ತಿಯ ಭಾಗವು ವಿಗ್ರಹಗಳನ್ನು ಅಷ್ಟಾಗಿ ಹೊಂದಿಲ್ಲ, ಅಲ್ಲಲ್ಲಿ ಚತುರಶ್ರಾಕಾರವಾದ ಖಾಲಿ ಗೂಡುಗಳಿದ್ದು ಅವುಗಳಲ್ಲಿ ಯಾವ ಕೆತ್ತನೆಯು ಕಂಡುಬರುವುದಿಲ್ಲ. ಅರೆಕಂಬಗಳನ್ನು ಸುಂದರವಾಗಿ ಕೆತ್ತಿ ಮೇಲ್ಛಾವಣಿಗೆ ಜೋಡಿಸಲಾಗಿದೆ.

**ಶಿಖರಗಳು**

ಮೂರು ಗರ್ಭಗೃಹಗಳು ಶಿಖರಗಳನ್ನು ಹೊಂದಿದ್ದು ಉತ್ತರದ ಶಿಖರವು ಸಂಪೂರ್ಣ ಹಾಳಾಗಿದ್ದು ಉಳಿದ ೨ ಶಿಖರಗಳು ಕಂಡುಬರುತ್ತವೆ. ಇದು ತ್ರಿಕೂಟಾಚಲಕ್ಕೆ ಅಪವಾದದಂತಿವೆ. ಶಿಖರ ಭಾಗದಲ್ಲಿ ಯಾವು ಶಿಲ್ಪಗಳಾಗಲಿ ಕೆತ್ತನೆಗಳಾಗಲಿ ಕಂಡುಬರುವುದಿಲ್ಲ. ಕಳಶವು ಶಿಖರ ಭಾಗದಿಂದ ಹಾಳಾಗಿದೆ. ಪಶ್ಚಿಮದ ಶಿಖರದಲ್ಲಿ ಕೆಲವು ಶಿಲ್ಪಗಳು ಕಂಡುಬರುತ್ತವೆ. ಯಕ್ಷ, ತಾಂಡವೇಶ್ವರ ಶಿಲ್ಪಗಳು ಮುಖ್ಯ ಶಿಖರದ ಮುಂಭಾಗದ ಸುಖನಾಸಿಯಲ್ಲಿದ್ದು, ಸಳನ ಚಿತ್ರವು ಪ್ರಸ್ತುತ ಕಂಡು ಬರುವುದಿಲ್ಲ. ಮುಖಮಂಟಪದ ಮೆಟ್ಟಿಲುಗಳ ಪಕ್ಕಗಳಲ್ಲಿ ಹಿಂದೆ ಗೋಪುರಗಳಿದ್ದಂತೆ ಕಂಡುಬರುತ್ತದೆ. ಬದಿಯಲ್ಲಿ ಕಲ್ಲಿನ ಜಗತಿ ಇದೆ. ಮುಖ ಮಂಟಪದ ಸಹಾಯಕ್ಕೆ ೨ ಗಂಟೆಯಾಕಾರದ ಸ್ತಂಭಗಳು ಕಂಡುಬರುತ್ತವೆ. ಮೇಲ್ಛಾವಣಿಯಲ್ಲಿ ಅಷ್ಟಕೋನಾಕೃತಿಯ ಕೆತ್ತನೆ ಕಂಡುಬರುತ್ತದೆ.

**ಸ್ತಂಭಗಳು**

**ಮಧ್ಯದ ೪ ಸ್ತಂಭಗಳು ಗಂಟೆಯಾಕಾರದ ಆಡಂಬರದ ಕೆತ್ತನೆಯಿಲ್ಲದ ಸ್ತಂಭಗಳಾಗಿದ್ದು–**

೧. ವೃತ್ತಾಕಾರದ ಪೀಠ ಮತ್ತು ಬೋದಿಗೆ ಹೊಂದಿರುವ ಚತುರಶ್ರಾಕಾರದ ಸ್ತಂಭ

೨. ದುಂಡಾದ ತಳ ಮತ್ತು ಬೋದಿಗೆ ಹೊಂದಿರುವ ಚಕ್ರದ ಮಾದರಿಯ ಸ್ತಂಭ.

೩. ಅಷ್ಟಕೋನಾಕೃತಿಯ ಸ್ತಂಭ

೪. ಚತುರಶ್ರಾಕಾರದ ಸ್ತಂಭ

೫. ವೃತ್ತಾಕಾರದ (ದುಂಡಾಕೃತಿ) ಸ್ತಂಭ

೬. ೭ ಕೋನದ ನಕ್ಷತ್ರಾಕಾರದ ಸ್ತಂಭ

೭. ದುಂಡಾದ ಸ್ತಂಭ

೮. ಅಷ್ಟಕೋನಾಕೃತಿಯ ನಕ್ಷತ್ರಾಕಾರದ ಸ್ತಂಭ

೯. ದುಂಡಾಗಿ ೧೧ ಕೋನಾಕೃತಿಯ ನಕ್ಷತ್ರಾಕೃತಿಯನ್ನು ಸ್ತಂಬಗಳು ಹೊಂದಿವೆ.

ನವರಂಗದ ಒಳಭಾಗದಲ್ಲಿ ಪಶ್ಚಿಮದ ಗೋಡೆಗೆ ಹೊಂದಿಕೊಂಡಂತೆ ಕೆಲವು ಖಾಲಿ ಪೀಠಗಳಿದ್ದು ಅವುಗಳಲ್ಲಿ ಒಂದರ ಪೀಠಭಾಗದಲ್ಲಿ ಮೂಷಿಕದ ಚಿತ್ರವನ್ನು ಮತ್ತೊಂದರ ಪೀಠಭಾಗದಲ್ಲಿ ಸಿಂಹದ ಚಿತ್ರವನ್ನು ಕಂಡರಿಸಿರುವುದರಿಂದ ಪೀಠದ ಮೇಲಿದ್ದ ಗಣೇಶ ಮತ್ತು ಮಹಿಷಮರ್ದಿನಿ ವಿಗ್ರಹಗಳು ನಂತರ ದಿನದಲ್ಲಿ ಕಳ್ಳತನವಾಗಿರುವಂತೆ ಕಾಣುತ್ತದೆ. ಪ್ರಸ್ತುತ ಬೇರೆಲ್ಲಿಂದಲೊ ವಿಗ್ರಹಗಳನ್ನು ತಂದು ಆ ಜಾಗದಲ್ಲಿ ವೀರಭದ್ರ ಮತ್ತು ಭೈರವ ಶಿಲ್ಪಗಳನ್ನು ಜೋಡಿಸಲಾಗಿದೆ. ನವರಂಗದಲ್ಲಿ ಇತ್ತೀಚಿನ ನಂದಿ ವಿಗ್ರಹವು ಸಹ ಇದೆ.

**ಗರ್ಭಗೃಹಗಳು**

ಮುಖ್ಯ ಗರ್ಭಗುಡಿಯು ಸುಖನಾಸಿಯನ್ನು ಹೊಂದಿದ್ದು ಇತ್ತೀಚೆಗೆ ದ್ವಾರಪಾಲಕರನ್ನು ತಂದು ಜೋಡಿಸಿದ್ದು ಸುಖನಾಸಿಯ ದ್ವಾರ ಬಂದವು ಸಮಯವಾಗಿದ್ದು ಯಾವ ಶಿಲ್ಪಗಳು ಕಂಡುಬರುವುದಿಲ್ಲ ಒಳಭಾಗದಲ್ಲಿ ಸಾಮಾನ್ಯವಾಗಿರುವ ಶಿವಲಿಂಗವನ್ನು ಕಾಣಬಹುದು.

ಉತ್ತರದ ಗರ್ಭಗುಡಿಯು ಸುಖನಾಸಿಯನ್ನು ಹೊಂದಿದ್ದು ಅದು ತೆರೆದ ಸ್ಥಿತಿಯಲ್ಲಿದ್ದು, ಮೇಲ್ಛಾವಣಿಯಲ್ಲಿ ವೃತ್ತಾಕಾರದ ಚಿತ್ರಣ ಹೊಂದಿದ್ದು ೨ ಭಾಗವಾಗಿ ಮೇಲ್ಛಾವಣಿ ಕಂಡು ಬರುತ್ತದೆ. ಗರ್ಭಗುಡಿಯ ದ್ವಾರಪೀಠ ಸಾಮಾನ್ಯವಾಗಿದ್ದು ಒಳಗಿನ ಗರುಡಪೀಠದಲ್ಲಿ ಭಗ್ನ (ಕೇಶವ) ವಿಗ್ರಹವನ್ನು ಪ್ರತಿಷ್ಠಾಪಿಸಿದ್ದು ಇದರ ಪಕ್ಕದಲ್ಲಿ ದೇವಿಯರು ಮತ್ತು ಚಾಮರಧಾರಿಣಿಯರನ್ನು ಪ್ರತಿಷ್ಠಾಪಿಸಿದ್ದು ತೋರಣದಲ್ಲಿ ದಶಾವತಾರದ ಚಿತ್ರಗಳನ್ನು ಕಂಡರಿಸಲಾಗಿದೆ.

ಪೂರ್ವದ ಗರ್ಭಗುಡಿ ಮತ್ತು ನವರಂಗದಲ್ಲಿ ತೆರೆದ ಸುಕನಾಸಿ ಇದ್ದು ಅದರ ಮೇಲ್ಛಾವಣಿ ಯಾವುದೇ ಕೆತ್ತನೆಯನ್ನು ಹೊಂದದೆ ಸಮತಟ್ಟಾಗಿದೆ. ಗರ್ಭಗುಡಿಯ ಒಳಭಾಗದಲ್ಲಿ ಸಪ್ತಾಶ್ವಗಳ ಪೀಠದ ಮೇಲೆ ಸೂರ್ಯನ

ಗ್ರಹವಿದ್ದು ಪಕ್ಕದಲ್ಲಿ ಛಾಯಾದೇವಿ ವಿಗ್ರಹಗಳನ್ನು ಂಡರಿಸಲಾಗಿದೆ. ವಿಗ್ರಹದ ಪ್ರಭಾವಳಿಯಲ್ಲಿ ದಶಾವತಾರ ಳನ್ನು ಸಹ ಕಂಡರಿಸಲಾಗಿದೆ. ಮೂರು ವಿಗ್ರಹಗಳಲ್ಲಿ ತೀ ಸುಂದರವೆಂದರೆ ಸೂರ್ಯನ ವಿಗ್ರಹ ಪ್ರಮುಖವಾದದ್ದು ುತ್ತು ಸುಂದರವಾದದ್ದು.

ಈ ದೇವಾಲಯದ ನೈರುತ್ಯದಲ್ಲಿ ವಿಷ್ಣುದೇವಾಲಯದ ುಖಮಂಟಪ, ನವರಂಗದ ದ್ವಾರದ ಗೋಡೆಗಳು ಮಾತ್ರ ುಳಿದಿರುವ ಆಲಯದ ಮುಂದಿನ ತೊಲೆಯ ಮೇಲೆ ೨೦೦ರ ಶಾಸನ ಸಹ ಇದೆ. ಗೋಡೆಗಳಲ್ಲಿ ವಿಷ್ಣು, ಕೇಶವ, ಷ್ಣನ ನಿಂತ ಭಂಗಿಯ ಶಿಲ್ಪಗಳು ಸಹ ಇದ್ದು, ಈ ಎಲ್ಲಾ ಕ್ಷಣಗಳನ್ನು ಕಂಡರೆ ಈ ಜಾಗದಲ್ಲಿ ಸುಂದರ ದೇವಾಲಯ ತ್ತೆಂಬ ಲಕ್ಷಣ ಗೋಚರಿಸುತ್ತದೆ. ಈ ಆಲಯವು ಕಪ್ಪು ಳಪದ ಕಲ್ಲಿನಿಂದ ಮಾಡಿದ್ದಾಗಿದ್ದು. ಇದರ ಶಿಲ್ಪಗಳು ಗರೇಶ್ವರ ದೇವಾಲಯದ ಶಿಲ್ಪಗಳನ್ನು ಹೋಲುತ್ತವೆ. ಳೇಬೀಡಿನ ವಸ್ತು ಸಂಗ್ರಹಾಲಯದ ಕೆಲವು ಶಿಲ್ಪಗಳು ಲ್ಲಿಂದ ಕೊಂಡೊಯ್ದು ಜೋಡಿಸಲ್ಪಟ್ಟಿವೆ. ಶಿಲ್ಪಗಳ ದೃಷ್ಟಿ ುಲ್ಲಿ ಪ್ರಸ್ತುತ ದೇವಾಲಯದ ೫೦ ಅಡಿ ದೂರದಲ್ಲಿ ಸುಂದರ ದೇವಾಲಯವೊಂದಿದ್ದು ಕಾಲನ ಹಾವಳಿಗೆ ತುತ್ತಾಗಿರುವುದು ಕಂಡುಬರುತ್ತದೆ.

ಈ ದೇವಾಲಯವು ವಾಸ್ತುವಿನ ದೃಷ್ಟಿಯಿಂದ ಅತಿ ಪ್ರಾಮುಖ್ಯತೆ ಪಡೆಯದಿರುವುದರಿಂದ ಹಳೇಬೀಡಿನಿಂದ ಅನತಿದೂರದಲ್ಲಿದ್ದರು ಸಹ ಈ ದೇವಾಲಯ ಹೊಯ್ಸಳ ಸ್ಮಾರಕಗಳಲ್ಲಿ ಪ್ರಾಮುಖ್ಯಕ್ಕೆ ಬಂದಿಲ್ಲ. ಆದರೆ ಕಾಲಘಟ್ಟದ ದೃಷ್ಟಿಯಿಂದ ಈ ಆಲಯವು ಪ್ರಸಿದ್ಧ ಕಾಲವಾಗಿದ್ದಾಗ್ಯೂ ಯಾಕೆ ನಿರಾಡಂಬರವಾಯ್ತು ಎನ್ನುವುದರ ಜೊತೆ ಸೂಕ್ಷ್ಮವಾಗಿ ಗಮನಿಸಿದಾಗ ಈ ಆಲಯ ಪೂರ್ಣಗೊಳ್ಳದಿರುವುದು ಗಮನಕ್ಕೆ ಬರುತ್ತದೆ ಆದ್ದರಿಂದ ರಾಜಕೀಯ ವೈಪರೀತ್ಯದಿಂದಾಗಿ ಇದು ಕುಂಠಿತವಾಯಿತು ಎನ್ನುವುದು ಪ್ರಶ್ನೆಯಾದರೂ ಸಮೀಪದಲ್ಲಿ ಅತೀ ಸುಂದರ ಮೂರ್ತಿಗಳ (ವಿಷ್ಣು ದೇವಾಲಯ) ಆಲಯವನ್ನು ಗಮನಿಸಿದರೆ ಅದರ ನಾಶಕ್ಕೆ/ಪತನಕ್ಕೆ ಕಾರಣಗಳೇನು ಎಂಬುದ ತಿಳಿಯದು. ಪ್ರಸ್ತುತ ಈ ದೇವಾಲಯ ರಕ್ಷಣೆ ಇಲ್ಲದೆ ಜೀರ್ಣಾವಸ್ಥೆಯನ್ನು ತಲುಪುತ್ತಿದೆ.



## ಆಧಾರಸೂಚಿ


. ಅಯ್ಯರ್ ಕೆ.ವಿ., **ಶಾಂತಲಾ**, ಬೆಂಗಳೂರು, ೧೯೮೨, (ಕಾದಂಬರಿ).
. ಕೃಷ್ಣ ಎಂ.ಎಚ್., **ಕನ್ನಡ ನಾಡಿನ ಚರಿತ್ರೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೬.
. ಚಿದಾನಂದಮೂರ್ತಿ. ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಮೈಸೂರು ವಿ.ವಿ., ೧೯೬೬.
. ಗೋಪಾಲ್, ಬಾ.ರಾ., **ಕರ್ನಾಟಕದ ಕಲೆ ಮತ್ತು ವಾಸ್ತು**, ಬೆಂಗಳೂರು, ೧೯೯೩.
. ತಿಪ್ಪೇರುದ್ರಸ್ವಾಮಿ. ಎಚ್., **ಕರ್ಣಾಟಕ ಸಂಸ್ಕೃತಿ ಸಮೀಕ್ಷೆ**, ಮೈಸೂರು, ೧೯೮೫.
. ರಘುನಾಥ ಭಟ್ ಎಚ್.ಆರ್., **ಹೊಯ್ಸಳ ವಾಸ್ತುಶಿಲ್ಪ ಪರಿಚಯ**, ಬೆಂಗಳೂರು, ೧೯೭೯.
. ವೆಂಕೋಬರಾವ್ ಬಿ., **ಮೈಸೂರು ದೇಶದ ವಾಸ್ತುಶಿಲ್ಪ**, ಬೆಂಗಳೂರು, ೧೯೨೮.
. ಶ್ರೀಕಂಠಶಾಸ್ತ್ರಿ, ಎಸ್., **ಹೊಯ್ಸಳ ವಾಸ್ತುಶಿಲ್ಪ**, ಮೈಸೂರು ವಿ.ವಿ., ೧೯೬೫.
. **ಎಪಿಗ್ರಾಫಿಯ ಕರ್ನಾಟಕ ಸಂಪುಟಗಳು**, ೧ ರಿಂದ ೧೩. (ಪರಿಷ್ಕೃತ)
೦. ಡಾ. ಕೆ.ಎನ್. ಮೋಹನ್., **ಹೊಸಹೊಳಲು ಮತ್ತು ನುಗ್ಗೆಹಳ್ಳಿ ಹೊಯ್ಸಳ ದೇವಾಲಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನ**, (ಅಪ್ರಕಟಿತ)
೧. Cousens Henry, *The Ancient of Aihole*, ASI, 1907, 08.
೨. Coelho William, *The Hoysala Vamsa*, Bombay, 1950.
೩. Gerard Roukema, *Hoysala Architecture Medieval Temples of south on Karnataka*, Vol. I&II, 1994.
೪. Derett, J.D.M, *The Hoysalas A Medieval Indian Royal Family*, Oxford,1957.
೫. Setter, S., *Hoysala Sculpture in National Museum*, Copenhagen, 1975.
೬. Sheik Ali, B.,*The Hoysala Dynasty*, Mysore University, 1972.
೭. Dayananada Patel T., *Keshava Temple Somanathapura -A cultural Study*, Delhi, 1990.




# ಗ್ರಂಥೋಕ್ತ ಗ್ರಾಮವೈವಿಧ್ಯ

**ಡಾ. ಕೂ.ಸ. ಅಪರ್ಣ***

**ಗ್ರಾ**ಮ, ನಗರ, ಖೇಡ, ಖರ್ವಟ ಇತ್ಯಾದಿಗಳನ್ನು ನಾವು ಶಾಸನ ಮತ್ತು ಸಾಹಿತ್ಯಗಳಲ್ಲಿ ಕಾಣುತ್ತೇವೆ. ಜೈನ ಸನ್ಯಾಸಿಗಳು ವಿವಿಧೆಡೆ ಸಂಚಾರ ಮಾಡುವ ಸಂದರ್ಭವನ್ನು ಹೇಳುವಾಗ, 'ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಂ ಎಂಬೀ ನ್ಯಾಯದಿಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂ'ಗಳಲ್ಲಿ ಎಂಬ ಒಕ್ಕಣೆಯು ದೊರೆಯುತ್ತದೆ.[೧] ಅಂತೇ, ಶಾಸನದಲ್ಲೂ ಇದೇ ರೀತಿಯಾಗಿ 'ಗ್ರಾಮಪುರ ಖೇಡ ಖರ್ವಡ ದ್ರೋಣಾಮುಖ'ಗಳ ಉಲ್ಲೇಖವಿದೆ.[೨] ಮೇಲುನೋಟಕ್ಕೆ ಇವು ಸಾಮಾನ್ಯವಾಗಿ ಬಳಸುವ ಪದಗಳೇ ಎನಿಸುವುವಾದರೂ, ಇವುಗಳು ಪಾರಿಭಾಷಿಕ ಪದಗಳಾಗಿದ್ದು, ಗ್ರಂಥಗಳು ಈ ಬಗ್ಗೆ ಅನೇಕ ವಿವರಗಳನ್ನು ನೀಡಿವೆ.

'ಗ್ರಾಮ'ವೆಂಬುದು ಸಾಮಾನ್ಯ ಶಬ್ದ ಮಾತ್ರವಲ್ಲದೆ, ಪಾರಿಭಾಷಿಕ ಶಬ್ದವೂ ಆಗಿದೆ. ಈ ಗ್ರಾಮಗಳ ಬಗ್ಗೆ ಹೇಳುವ ಗ್ರಂಥಗಳು, ಅವುಗಳ ವಿಸ್ತಾರ, ಅಲ್ಲಿರುವ ಜನತೆ, ಬೀದಿಗಳು, ವಾಸ್ತುಮಂಡಲ, ಆಕಾರ ಇವುಗಳನ್ನು ಮಾತ್ರವಲ್ಲದೆ, ಗ್ರಾಮಗಳಲ್ಲಿರಬೇಕಾದ ಮುಖ್ಯದ್ವಾರಗಳು, ವಸತಿ ವ್ಯವಸ್ಥೆ, ದೇವಾಲಯಗಳ ಸ್ಥಾನ – ಇತ್ಯಾದಿಗಳನ್ನೂ ತಿಳಿಸಿವೆ. ಈ ಬಗ್ಗೆ ಮಯಮತ, ಮಾನಸಾರ ಮುಂತಾದ ಗ್ರಂಥಗಳಲ್ಲಿ ದೊರೆತಿರುವ ವಿವರಗಳನ್ನು ಕೆಲಮಟ್ಟಿಗೆ ನೀಡುವುದೇ ಈ ಲೇಖನದ ಉದ್ದೇಶ.

**ಆಕಾರ** : ಗ್ರಾಮದ ಭೂಮಿಯು ಚತುರಶ್ರ, ಆಯತ, ತ್ರಿಕೋಣ, ವರ್ತುಲಾಕಾರ ಅಥವಾ ಮರ್ದಲಾಕಾರವಾಗಿದ್ದರೆ ಪ್ರಶಸ್ತವಾದುದೆಂದು ವಿಶ್ವಕರ್ಮ ವಾಸ್ತುಶಾಸ್ತ್ರವು ಹೇಳಿದೆ.[೩] ಹಾಗಿಲ್ಲದೆ, ಮೇಲೆ ಕೆಳಗೆ ಇರುವ (ಅಂದರೆ ಸಮ ತಟ್ಟಾಗಿರದ) ಭೂಮಿ, ಶಿಖರ ಹೀನ / ಶಿರೋಹೀನ ಭೂಮಿ ಹಾಗೂ ವಕ್ರಾಕೃತಿಯಲ್ಲಿರುವ ಭೂಮಿಯು ವರ್ಜ್ಯವಾದುದು ಎಂದು ಅದೇ ಗ್ರಂಥವು ಹೇಳಿದೆ.[೪]

**ನಕ್ಷೆ** : ಗ್ರಾಮನಕ್ಷೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಬೆಸಸಂಖ್ಯೆಯ ಅಥವಾ ಸಮಸಂಖ್ಯೆ ವಾಸ್ತು ಮಂಡಲವನ್ನು ಇದಕ್ಕೆ ಬಳಸಬಹುದಾಗಿದೆ.[೫] ಇದಕ್ಕಾಗಿ ಸಕಲ, ಆಸನ ಯಾವುದೇ ನಕ್ಷೆಯೂ ಸೂಕ್ತವೆನಿಸಿದ್ದು, ಇವು ಕ್ರಮವಾಗಿ ಒಂದು ಮತ್ತು ನೂರು ಪದಸಂಖ್ಯೆಯ ನಕ್ಷೆಗಳಾಗಿವೆ.[೬] ಕೆಲವೆಡೆ, ಆಯಾ ಗ್ರಾಮದ ಆಕಾರ / ಪ್ರಕಾರಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ವಿಧದ ವಸ್ತು ನಕ್ಷೆಯನ್ನು ಹೇಳಲಾಗಿದೆ. ಇದರಂತೆ ಚಂಡಿತ / ಮಂಡೂಕ ಅಥವಾ ಸ್ಥಂಡಿಲ, ಪರಮಶಾಯಿಕಾ, ಪೇಚಕ / ಪೀಠ ಮುಂತಾದ ನಕ್ಷೆ / ವಾಸ್ತುಮಂಡಲವನ್ನು ಗ್ರಂಥಗಳು ಉಲ್ಲೇಖಿಸಿವೆ[೭]. ಈ ನಕ್ಷೆಗಳ ಮಧ್ಯದ ಸ್ಥಾನವು ಬ್ರಹ್ಮನ ಸ್ಥಾನವಾಗಿದ್ದರೆ, ಇದರ ನಂತರ, ಸುತ್ತ ಒಂದಾದಮೇಲೊಂದರಂತೆ ಕ್ರಮವಾಗಿ ದೈವಕ, ಮಾನುಷ ಮತ್ತು ಪೈಶಾಚ ಸ್ಥಾನಗಳು ಇರುತ್ತವೆ[೮].

**ಅಳತೆ** : ಗ್ರಾಮ, ನಗರ, ಖೇಟ, ಖರ್ವಟ ಇತ್ಯಾದಿಗಳನ್ನು 'ದಂಡ'ದಿಂದ (Poles) ಅಳೆಯಬೇಕೆಂದೂ, ಅದನ್ನು 'ಧನುಗ್ರ್ಯಹ' ಎಂದು 'ದಂಡ'ದಿಂದ (ಅಳೆಯಬೇಕೆಂದು) ಗ್ರಂಥಗಳೂ ಹೇಳಿವೆ. ಒಂದು ಹಸ್ತವು ಕಿಷ್ಕು (Cubit) ಎನಿಸಿದ್ದು, ೪ ಹಸ್ತವು ಒಂದು 'ದಂಡ' ಎನಿಸುತ್ತದೆ[೯]. ಅಂಗುಲವೆಂದರೆ ಒಂದು ಕಿಷ್ಕು (ಹಸ್ತ) ಎಂದೂ, 'ಚತುರ್ಗುಣ' ವೆಂದಾಗ, ಒಂದು ದಂಡವೆಂದೂ ವಿಮಾನಾರ್ಚನ ಕಲ್ಪದಲ್ಲಿದೆ.[೧೦] ಆದರೆ, ಇದರಲ್ಲಿ 'ಗುಣ;ದ ಅಳತೆಯ ಬಗ್ಗೆ ಹೇಳಿಲ್ಲ. ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ ೮ ಕಂಸ/ಕಿಷ್ಕು ಅಥವಾ ೮ ಪ್ರಾಜಾಪತ್ಯಹಸ್ತವು (=೬೪ ಅಂಗುಲದ ಹಸ್ತ) ಒಂದು ದಂಡಕ್ಕೆ ಸಮ ಎಂದಿದೆ. (ಇದನ್ನು ಬ್ರಾಹ್ಮಣರಿಗೆ ಬಿಡುವ ಭೂಮಿಯ ಅಳತೆಗೆ ಬಳಸಿ ಎಂದಿದೆ)[೧೧]. ಇದೇ ಕೃತಿಯ ಅಡಿಟಿಪ್ಪಣಿಯಲ್ಲಿ ಒಂದೆಡೆ, ೪೨ ಅಂಗುಲವೆಂದರೆ ಒಂದು ಹಸ್ತ ಮತ್ತು ೪ ಹಸ್ತವೆಂದರೆ ಒಂದು ದಂಡ (=೧೬೮ ಅಂಗುಲ) ಎಂದೂ ಸ್ಪಷ್ಟ ಪಡಿಸಿದೆ[೧೨]. ಇದರಲ್ಲಿ ಒಂದು 'ಧನುರ್ಗ್ರಹ' ಅಥವಾ ೨೮ ಅಂಗುಲದ ಹಸ್ತವು, ದನ ಮೇಯಲು ಬಿಡುವ ಭೂಮಿಯ ಅಳತೆಗೆ ಬಳಸಬೇಕು[೧೩]. ಎಂದಿದೆಯೇ ಹೊರತು ಗ್ರಾಮದ ಅಳತೆಗೆ ಹೇಳಿಲ್ಲ. ಧನುರ್ಗ್ರಹ ದಂಡದಲ್ಲಿ ೨೭ ಅಂಗುಲಗಳಿರುವುದಾಗಿ ಒಂದೆಡೆ ಹೇಳಿದೆ[೧೪]. ಹೀಗಿದ್ದರೂ,

---

* ೧೬೭೬, ೫ನೇ 'ಎ' ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ, ಬನಶಂಕರಿ ಮೊದಲನೇ ಹಂತ, ಬೆಂಗಳೂರು-೫೬೦೦೫೦.

ವಿವರಣೆ ನೀಡುವಾಗ ಗ್ರಂಥಗಳು 'ದಂಡ'ದಿಂದ ಅಳೆಯಬೇಕೆಂದಷ್ಟೇ ಹೇಳಿದ್ದು, ಕೆಲವೆಡೆ 'ಧನುರ್ಗ್ರಹ ದಂಡ'ದಿಂದ ಗ್ರಾಮವನ್ನು ಅಳೆಯಬೇಕೆಂದು ಸ್ಪಷ್ಟವಾಗಿದೆ[೧೫].

**ವಿಸ್ತಾರ :** ಮಯಮತದಂತೆ, ದೊಡ್ಡ ಗ್ರಾವೆಂದರೆ, ಒಂದು ಲಕ್ಷದಂಡದಷ್ಟು ವಿಸ್ತಾರವಾಗಿರುವುದು.[೧೬] ಇದರ ಆರಂಭದ ಚಿಕ್ಕ ಅಳತೆಯು ೨೦೦೦ದಂಡ ಆಗಿದ್ದು, ೨೦೦೦೦ ದಂಡ ಅಳತೆಯನ್ನು ೫ ಬಾರಿ ಹೆಚ್ಚಿಸಿಕೊಂಡು ಹೋಗುವುದರಿಂದ ೫ ರೀತಿಯ ವಿಸ್ತಾರವು ಬರುತ್ತದೆ. ಗ್ರಾಮದ ಚಿಕ್ಕ ಅಳತೆಯೆಂದರೆ, ೫೦೦ ದಂಡ ವಿಸ್ತಾರವಾಗಿರುವುದು, ಈ ಆರಂಭದ ಅಳತೆಯಿಂದ ೫೦೦ದಂಡ ಹೆಚ್ಚಿಸಿಕೊಂಡು ಹೋಗುವುದರಿಂದ ೨೦೦೦೦ ದಂಡದವರೆಗೆ ೪೦ ರೀತಿಯ ವಿಸ್ತಾರವು ಬರುತ್ತದೆ[೧೭]. ಇದೇ ಗ್ರಂಥದಲ್ಲಿ ಇನ್ನೊಂದೆಡೆ, ಇನ್ನೂ ಚಿಕ್ಕದಾದ ೨೦೦೦ ದಂಡದಿಂದ ೩೦೦ ದಂಡ ವಿಸ್ತಾರವುಳ್ಳ ಗ್ರಾಮದ ಬಗ್ಗೆ ಹೇಳಿದೆ[೧೮]. 'ಕುಟುಂಬಾವನಿ'ಯ ಭಾಗವು ಗ್ರಾಮದ ೧/೨೦ ನೇ ಭಾಗವಾಗಿರುತ್ತದೆ, ಅಂದರೆ, ೨೫೬೦ ದಂಡ ವಿಸ್ತಾರದ್ದಾಗಿದ್ದು, ಇದು ಗ್ರಾಮದಲ್ಲಿನ ಕುಟುಂಬ ನಿವೇಶನಕ್ಕೆ ಸೂಕ್ತವಾಗಿರುತ್ತದೆ[೧೯]. ಇವುಗಳಲ್ಲಿ ನಿಯಮದಂತೆ ದಂಡವನ್ನು ಹೆಚ್ಚಿಸಕೊಂಡು ಹೋಗುವುದರಿಂದ ವಿವಿಧ ವಿಸ್ತಾರದ ಗ್ರಾಮವನ್ನು ನಿರ್ಮಿಸಬಹುದು[೨೦]. ಅಂತೇ ನಗರದ ದೊಡ್ಡ ವಿಸತಾರವೆಂದರೆ, ಎಂಟು ಸಾವಿರ ದಂಡ[೨೧], ಚಿಕ್ಕದೆಂದರೆ ಎರಡುಸಾವಿರ ಇದರಲ್ಲಿ ೨೦೦೦ ದಂಡವನ್ನು ಇಳಿಸುತ್ತಾ ಹೋದಲ್ಲಿ, ನಗರದ ೪ ರೀತಿಯ ವಿಸ್ತಾರವನ್ನು ಪಡೆಯಬಹುದು[೨೨].

### ವಿಸ್ತಾರ ಮತ್ತು ವಿವಿಧ ಪ್ರಕಾರಗಳು

ಮಯಮತದಲ್ಲಿ, ಗ್ರಾಮ, ಖೇಟ, ಖರ್ವಡ, ದುರ್ಗ ನಗರಗಳನ್ನು ವಿಸ್ತಾರದ ಆಧಾರದಿಂದ ಬೇರೆ ಬೇರೆ ರೀತಿಯಾಗಿ ಹೇಳಿದೆ[೨೩]. ಇವುಗಳಲ್ಲಿ ಒಂದೊಂದರಲ್ಲೂ ಕ್ಷುದ್ರ, ಮಧ್ಯಮ, ಉತ್ತಮ ಎಂದು ಮರು ವಿಂಗಡಣೆ ಇದೆ. ಅದರಂತೆ 'ಗ್ರಾಮ'ಗಳಲ್ಲಿ 'ಕ್ಷುದ್ರಗ್ರಾಮ'ದ ವಿಸ್ತಾರವು ೬೪ದಂಡ ಮತ್ತು ಮಧ್ಯಮ ಗ್ರಾಮದ ವಿಸ್ತಾರವು ೧೨೮ ದಂಡ ಇರುತ್ತದೆ. ಮತ್ತು ಉತ್ತಮ ಗ್ರಾಮದ ವಿಸ್ತಾರವು ೧೯೨ ದಂಡ ಇರುವುದು. ಅಂದರೆ, ಕ್ಷುದ್ರ ಗ್ರಾಮದ ಎರಡರಷ್ಟು ಮತ್ತು ಮೂರರಷ್ಟು ವಿಸ್ತಾರವಾಗಿರುವುದು. 'ಖೇಟ' ರೀತಿಯ ಗ್ರಾಮದ ವಿಸ್ತಾರವು ಕ್ರಮವಾಗಿ ೨೫೬,[೨೪] ೩೨೦ ಮತ್ತು ೩೮೪ ದಂಡ ಇದ್ದು, ಅವು ಇವೇ 'ದಂಡ'ಗಳ ಆಧಾರದಿಂದ ಕ್ಷುದ್ರ, ಮಧ್ಯಮ, ಹಾಗೂ ಉತ್ತಮ ರೀತಿಗೆ ಕ್ರಮವಾಗಿ ಸೇರುತ್ತವೆ. 'ಖರ್ವಡ'ದಲ್ಲಿ ಚಿಕ್ಕದು ೪೪೮ 'ದಂಡದಷ್ಟೂ ಮಧ್ಯಮದ್ದು ೫೧೨ ದಂಡದಷ್ಟು ಹಾಗೂ ವಿಸ್ತಾರವಾಗಿರುತ್ತದೆ. 'ದುರ್ಗ' ರೀತಿಯ ಗ್ರಾಮದಲ್ಲಿ ವಿಸ್ತಾರವು ೬೪೦,೭೦೪,೭೬೮ ದಂಡಗಳು ಕ್ರಮವಾಗಿ ಇರುತ್ತವೆ. ಅಂತೇ, ನಗರ ರೀತಿಯ ಗ್ರಾಮದ ವಿಸ್ತಾರವು ಕ್ಷುದ್ರಗ್ರಾಮವಾದಲ್ಲಿ ೮೩೨ ದಂಡಗಳೂ, 'ಮಧ್ಯಮ'ದಲ್ಲಿ ೮೯೬ ದಂಡಗಳೂ, ಉತ್ತಮ ಗ್ರಾಮ'ದಲ್ಲಿ ೯೬೦ ದಂಡಗಳೂ ಇರುತ್ತವೆ[೨೫]. ಈ ಎಲ್ಲ ರೀತಿಗಳಲ್ಲಿ ಒಂದೊಂದರ ನಡುವೆಯೂ ೬೪ ದಂಡಗಳ ವ್ಯತ್ಯಾಸವಿರುವುದನ್ನಿಲ್ಲಿ ಗಮನಿಸಬಹುದು. ಇದರಲ್ಲೇ ೬೪ರ ಬದಲು ೧೬ ದಂಡ ಹೆಚ್ಚಿಸುತ್ತಾ ಹೋದರೆ, ಪ್ರತಿಯೊಂದಕ್ಕೂ ಇನ್ನೂ ೯ ರೀತಿಯ ಅಳತೆಯು ದೊರೆಯವುದೆಂದೂ ಇದರಲ್ಲಿದೆ[೨೬]. ಇವುಗಳ ಉದ್ದವು ವಿಸ್ತಾರದ ಎರಡರಷ್ಟು, ಮುಕ್ಕಾಲೂ ಅರ್ಧ ಅಥವಾ ಕಾಲುಭಾಗದಷ್ಟು ಹೆಚ್ಚಾಗಿರಬೇಕು ಅಥವಾ ೬/೮ನೇ ಅಷ್ಟು ಹೆಚ್ಚಾಗಿರಬಹುದು ಅಥವಾ ಅದು ಚೌಕಾಕಾರವಾಗಿದ್ದು, ಉದ್ದವು ಅಗಲಕ್ಕೆ ಸಮನಾಗಿರಬಹುದು. ಇವುಗಳಲ್ಲಿ, ಉದ್ದ ಮತ್ತು ಅಗಲದ ಅಳತೆಯನ್ನು ಬೆಸಸಂಖ್ಯೆಯ ದಂಡಗಳಿಂದ ಗುರುತಿಸಲಾಗುತ್ತದೆ, ನಂತರ ಉಳಿದದ್ದು ನಿರ್ಮಾಣ ರಹಿತವಾಗಿರಬೇಕು. ಈ ಕ್ರಮವು ಗ್ರಾಮ ಇತ್ಯಾದಿ ಎಲ್ಲಾ ನಿವೇಶನಗಳಿಗೂ ಅನ್ವಯಿಸುವುದು. ಗ್ರಾಮವಾಗಲೀ, ಗೃಹವಾಗಲೀ 'ದಂಡ'ದ ಪೂರ್ಣ ಸಂಖ್ಯೆಯನ್ನು ಉಪಯೋಗಿಸಬೇಕು (೧೬,೬೪, ೭೦೪ಇ.); ಭೇದಿಸಬಾರದು ಎಂದೂ ಮಯಮತದಲ್ಲಿದೆ[೨೭].

### ಬ್ರಾಹ್ಮಣರ ಸಂಖ್ಯೆ ಮತ್ತು ವಿವಿಧ ಪ್ರಕಾರಗಳು

ಗ್ರಾಮದಲ್ಲಿರುವ ಬ್ರಾಹ್ಮಣರ ಸಂಖ್ಯೆಯ ಆಧಾರದಿಂದ ವಿವಿಧ ಪ್ರಕಾರದ ಗ್ರಾಮಗಳನ್ನು ಗುರುತಿಸಲಾಗಿದೆ. ಇವುಗಳಲ್ಲಿ ಉತ್ತಮ, ಮಧ್ಯಮ ಮತ್ತು ಅಧಮ ಎಂದು ೩ ಪ್ರಕಾರಗಳಿದ್ದು, ಅವುಗಳೊಂದೊಂದರಲ್ಲೂ ಉಪ ಪ್ರಾಕರಗಳಿವೆ. ಮಯಮತದಂತೆ, 'ಉತ್ತಮೋತ್ತಮ' ಗ್ರಾಮದಲ್ಲಿ ೧೨೦೦೦ ಬ್ರಾಹ್ಮಣರೂ, ಅದೇ 'ಮಧ್ಯಮ' ಗ್ರಾಮಲ್ಲಿ ೧೦೦೦೦ ಬ್ರಾಹ್ಮಣರೂ, 'ಅಧಮ' ಗ್ರಾಮದಲ್ಲಿ ೮೦೦೦ ಬ್ರಾಹ್ಮಣರೂ ಇರುತ್ತಾರೆ. ಅಂತೇ, ೭೦೦೦ ಬ್ರಾಹ್ಮಣರಿರುವ ಗ್ರಾಮವನ್ನು 'ಮಧ್ಯಮೋತ್ತಮ' ವೆಂದೂ, ಅದೇ ೬೦೦೦ ಬ್ರಾಹ್ಮಣರಿರುವ ಗ್ರಾಮವನ್ನು 'ಮಧ್ಯಮ'ವೆಂದೂ, ೫೦೦೦ ಬ್ರಾಹ್ಮಣರಿರುವ ಗ್ರಾಮವನ್ನು 'ಅಧಮ'ವೆಂದೂ ಕರೆದಿದೆ. ಇದೇ ರೀತಿ ೪೦೦೦ ಬ್ರಾಹ್ಮಣರಿರುವ ಗ್ರಾಮವನ್ನು 'ಅಧಮೋತ್ತಮ' ಎಂದೂ ೩೦೦೦ ಬ್ರಾಹ್ಮಣರಿದ್ದರೆ 'ಅಧಮ ಸಮ' ಗ್ರಾಮವೆಂದೂ ೨೦೦೦ ಬ್ರಾಹ್ಮಣರಿದ್ದರೆ ಅದಕ್ಕೆ 'ಅಧಮಾಧಮ' ಗ್ರಾಮ ಎಂದೂ ಹೆಸರಿಸಿದೆ. ಇದರೊಂದಿಗೆ, ೧೦೦೦ ಬ್ರಾಹ್ಮಣರಿರುವ ಗ್ರಾಮವು 'ನೀಚೋತ್ತಮ'; ೭೦೦ ಬ್ರಾಹ್ಮಣರಿರುವ ಗ್ರಾಮವು 'ಅಧಮ ಮಧ್ಯಮ' ಹಾಗೂ ೫೦೦ ಬ್ರಾಹ್ಮಣರಿರುವ ಗ್ರಾಮವು 'ನೀಚಾಲ್ಪ'ಗ್ರಾಮ

ಎನಿಸುತ್ತದೆ[೨೮]. ಇಲ್ಲಿ 'ಉತ್ತಮ' ಪ್ರಕಾರದಲ್ಲಿನ ಮೂರು ಉಪಪ್ರಕಾರಗಳ ನಡುವೆ ೨೦೦೦ ಬ್ರಾಹ್ಮಣ ಸಂಖ್ಯೆಯ ವ್ಯತ್ಯಾಸವಿದೆ, 'ಮಧ್ಯಮ' ಮತ್ತು 'ಅಧಮ' ರೀತಿಗಳ ಮೂರು ಉಪಪ್ರಕಾರಗಳ, ನಡುವೆ ೧೦೦೦ ಬ್ರಾಹ್ಮಣ ಸಂಖ್ಯೆಯ ವ್ಯತ್ಯಾಸವಿದೆ; ಅಂತೇ, 'ನೀಚ' ರೀತಿಯ ಉಪಪ್ರಕಾರಗಳ ನಡುವೆ ಕ್ರಮವಾಗಿ ೩೦೦ ಮತ್ತು ೨೦೦ ಸಂಖ್ಯೆಯ ವ್ಯತ್ಯಸವಿದೆ.

ಇನ್ನೂ ಹತ್ತು ರೀತಿಯ ಸಣ್ಣ ಗ್ರಾಮಗಳನ್ನು ಮಯಮತವು ಗುರುತಿಸಿದೆ. ಇಂತಹ ಗ್ರಾಮಗಳಲ್ಲಿ ಬ್ರಾಹ್ಮಣರ ಮನೆಗಳು ಕ್ರಮವಾಗಿ ೩೨೪, ೨೧೬, ೧೦೮, ೮೪, ೬೪, ೫೦, ೩೨, ೨೪, ೧೬ ಹಾಗೂ ೧೨ ಕ್ರಮವಾಗಿ ಇರುವುವು[೨೯]. ಯಾವ ಗ್ರಾಮದಲ್ಲಿ ಒಂದೇ ಒಂದು ಬ್ರಾಹ್ಮಣರ ಮನೆ ಇರುವುದೋ ಅದಕ್ಕೇ **'ಕುಟಿಕ'** ಅಥವಾ **'ಏಕಭೋಗ'** ಎಂದು ಹೆಸರು[೩೦] ಬೇರೆ ಏನೂ ಸಾಧ್ಯವಿಲ್ಲವಾದರೆ, ೧ರಿಂದ ೧೦ ಬ್ರಾಹ್ಮಣರಿಗೆ ಭೂದಾನ ಮಾಡಬಹುದು[೩೧].

ಕಾಮಿಕಾಗಮದಲ್ಲೂ ಈ ಬಗ್ಗೆ ವಿವರವಿದೆ. ಇದರಂತೆ ಗ್ರಾಮಗಳಲ್ಲಿ, ಜ್ಯೇಷ್ಠ, ಮಧ್ಯ, ಕನಿಷ್ಠ ಮತ್ತು ಕ್ಷುದ್ರ ಎಂದು ನಾಲ್ಕು ವಿಧಗಳಿವೆ. ಈ ಒಂದೊಂದರಲ್ಲೂ ಬ್ರಾಹ್ಮಣ ವರ್ಗದ ಪ್ರಮಾಣ ಅನುಸರಿಸಿ ೯ರೀತಿಗಳಿವೆ;

ಬ್ರಾಹ್ಮಣರ ಸಂಖ್ಯೆ ೧೪೦೦೦ದಿಂದ ೬೦೦೦ ದವರೆಗಿರುತ್ತದೆ. 'ಜ್ಯೇಷ್ಠ' ರೀತಿಯಲ್ಲಿ ಬ್ರಾಹ್ಮಣರ ಸಂಖ್ಯೆ ೫೦೦೦ ದಿಂದ ೧೦೦೦ ದವರೆಗಿರುತ್ತದೆ. ಕೊನೆಯದು ಸಹಸ್ರಹೀನವಾಗಿರುತ್ತದೆ. 'ಮಧ್ಯಮ' ದಲ್ಲಿ ೯೦೦ರಿಂದ ೫೦ರವರೆಗೆ ಬ್ರಾಹ್ಮಣರಿರುತ್ತಾರೆ. ಕೊನೆಯದಾದ ೯ನೇ ವಿಧದ ಗ್ರಾಮದಲ್ಲಿ ೫೦ ಬ್ರಾಹ್ಮಣರಿರುತ್ತಾರೆ. ೫೦ಕ್ಕಿಂತ ಕಡಿಮೆ ಸಂಖ್ಯೆಯ ಬ್ರಾಹ್ಮಣರಿದ್ದಲ್ಲಿ ಆ ಗ್ರಾಮವು 'ಕನಿಷ್ಠ' ಮತ್ತು 'ಕ್ಷುದ್ರ' ಪ್ರಕಾರಕ್ಕೆ ಸೇರುತ್ತದೆ. ೧೦೮ರಿಂದ ಆರಂಭಿಸಿ ೧೦ರಂತೆ ಹೆಚ್ಚಿಸುತ್ತಿರಬಹುದು(?)[೩೨] ೫ರಂತೆ ಹೆಚ್ಚಿಸುತ್ತಿರ ಬಹುದು, ಆದರೆ ಅದು ೧೦ರಲ್ಲಿ ಕೊನೆಯಾಗಬೇಕು. ೩೨, ೨೪, ೧೬, ೧೨, ಅಥವಾ ೪, ೫, ೧೦– ಹೀಗೂ ಇರಬಹುದು[೩೩].

**ಗ್ರಾಮಗಳ ವಿಶೇಷ ವರ್ಗೀಕರಣ :** (ಗ್ರಾಮಭೇದಾ) ಇನ್ನೊಂದು ರೀತಿಯ ವರ್ಗೀಕರಣದಂತೆ, ಗ್ರಾಮದಲ್ಲಿ ಬ್ರಾಹ್ಮಣರ ಮನೆಗಳು ಮಾತ್ರವೇ ಇದ್ದರೆ, (ದ್ವಿಜಕುಲ ಪರಿಪೂರ್ಣ) ಅದಕ್ಕೆ 'ಮಂಗಲ' ಎಂದು ಹೆಸರು, ರಾಜ ಮತ್ತು ವ್ಯಾಪಾರಿಗಳು ಅಲ್ಲಿದ್ದರೆ – ಅದಕ್ಕೆ 'ಪುರ' ಎಂದು ಹೆಸರು, ಬೇರೆ ಬೇರೆ ಜನಗಳಿಂದ ಕೂಡಿದ್ದರೆ ಅದಕ್ಕೆ **'ಗ್ರಾಮ'** ಎಂದು ಹೆಸರು; ಸನ್ಯಾಸಿಗಳಿರುವುದು. **'ಮಠ'**[೩೪] ಇಲ್ಲಿ 'ಮಠ' ಎಂದಾಗ, ಪೂರ್ತಿ ಊರನ್ನೇ ಹೇಳಿದಂತಾಗಿದೆ.

ಕಾಮಿಕಾಗದಲ್ಲಿ ಉದ್ದೇಶಪೂರಿತವಾಗಿ ಕರೆತಂದ ವೇದವಿದರಾದ ಬ್ರಾಹ್ಮಣರು ಅನುಭವಿಸುವ ಗ್ರಾಮವೇ 'ಮಂಗಲ' ಅಥವಾ 'ಅಗ್ರಹಾರ' ಎಂದಿದೆ, ಅಲ್ಲಿ ವಿಪ್ರರು ಮತ್ತು ಬೇರೆ ವರ್ಣದವರೂ ಇದ್ದರೆ, ಅದು 'ಗ್ರಾಮ' ಒಂದು ಬ್ರಾಹ್ಮಣರ ಮನೆ ಮಾತ್ರವಿದ್ದು, ಪರಿಚಾರಕರೂ ಇದ್ದರೆ, ಅದು **'ಕುಟಿಕ'** ಅಥವಾ **'ಏಕಭೋಗ'** ಜನಗಳಿಂದ ತುಂಬಿದ್ದು, ಕ್ರಯ–ವಿಕ್ರಯಗಳಿಂದ ಕೂಡಿದ್ದು, ಕರ್ಮಚಾರಿಗಳಿದ್ದು, ಸರ್ವದೇವತೆಗಳಿಂದ ಕೂಡಿದ್ದರೆ, ಅದು – ನಗರ, ಅರಣ್ಯ ಸರೋವರದ ಹತ್ತಿರವಿದ್ದು, ವ್ಯಾಪಾರ ನಡೆಯುತ್ತಿದ್ದು, ಹೊರ ದೇಶದಿಂದ ಜನ/ವಸ್ತು ಬರುತ್ತಿದ್ದರೆ, ಅದು **'ಪಟ್ಟಣ'** ಎಂದೂ ಅದು ಹೇಳಿದೆ.[೩೫] ಬ್ರಾಹ್ಮಣರಿಗೆಯುಕ್ತವಾದ 'ದಂಡಕ' ಪ್ರಕಾರದ ಗ್ರಾಮದ ಬಗ್ಗೆ ಹೇಳುವಾಗ ಮಾನಸಾರದಲ್ಲಿ ೨೪ಯತಿಗಳಿಂದ ಕೂಡಿದ್ದರೆ, ಅದು **'ಗ್ರಾಮ'** ನದೀ ದಂಡೆಯ ಮೇಲಿದ್ದರೆ –ಅದು **'ಪುರ'**; ೫೦ ದೀಕ್ಷಿತರಿದ್ದರೆ ಅದು **'ನಗರ'** ೫೮ ಬ್ರಾಹ್ಮಣರ ಮನೆಗಳಿದ್ದರೆ ಅದು **'ಮಂಗಲ'** ಹಾಗೂ ನೂರು ಬ್ರಾಹ್ಮಣರ ಮನೆಗಳಿದ್ದರೆ ಅದು **'ಕೋಷ್ಠ'**; ಬೇರೆ ಬ್ರಾಹ್ಮಣರ ಸಮೂಹವಿದ್ದರೆ, ಅವರಿಗೆ ಬೇಕಾದಂತೆ ಹೆಸರಿಡಬಹುದು ಎಂದು ಹೇಳಿದ್ದು, ಇಲ್ಲಿ ಹೇಳದೇ ಇರುವುದನ್ನು ಶಾಸ್ತ್ರದ ನಿಯಮದಂತೆ (ಸ್ಥಳೀಯ ಪದ್ಧತಿಯಂತೆ) ಮಾಡಬೇಕೆಂದೂ ಹೇಳಲಾಗಿದೆ[೩೬]. ಅಂತೇ, (ನಂದ್ಯಾವರ್ತ ಪ್ರಕಾರದ ಗ್ರಾಮದಲ್ಲಿ) ಬ್ರಾಹ್ಮಣರೋ ಇದ್ದರೆ ಆದು **'ಮಂಗಲ'** ಕ್ಷತ್ರಿಯ, ವೈಶ್ಯ, ಶೂದ್ರರಿದ್ದರೆ **'ಪುರ'** ವೈಶ್ಯ, ಶೂದ್ರರಿದ್ದರೆ (ಬ್ರಾಹ್ಮಣ ರೊಂದಿಗೆ?) 'ಅಗ್ರಹಾರ' ಎನಿಸುವುದು.[೩೭]

**ವಿಮಾನಾರ್ಚನ ಕಲ್ಪದ ವಿವರಣೆಗಳು ಇಂತಿವೆ**

ಬ್ರಾಹ್ಮಣರು, ಸೇವಕರುಗಳಿದ್ದರೆ **'ಗ್ರಾಮ'**; ಬ್ರಾಹ್ಮಣರು ಹೆಚ್ಚಾಗಿ ಮುಖ್ಯವಾಗಿ ಇದ್ದರೆ 'ಅಗ್ರಹಾರ'ಅನೇಕ ಜನ... ಇದ್ದು ಅನೇಕ ಶಿಲ್ಪಿಗಳೂ ಇದ್ದು, ಕ್ರಮವಿಕ್ರಯಗಳು ನಡೆಯುತ್ತಿದ್ದು, ಎಲ್ಲಾ ದೇವತೆಗಳಿಂದ ಕೂಡಿದ್ದರೆ, ಅದು **'ನಗರ'**; ಬೇರೆ ಬೇರೆ ದ್ವೀಪಗಳಿಂದ, ಬಂದ ವಸ್ತುಗಳನ್ನು ಕೊಳ್ಳುವುದು ಮಾರುವುದು ಇದ್ದಲ್ಲಿ ಅದು **'ಪಟ್ಟಣ'**; ಬ್ರಾಹ್ಮಣರ ಒಂದು ಪರಿವಾರ ಮಾತ್ರವೇ ಇದ್ದರೆ, ಅದು **'ಕುಟಕ'**[೩೮].

ಇವಿಷ್ಟೇ ಅಲ್ಲದೆ, ಗ್ರಾಮದಲ್ಲಿನ ವಿವಿಧ ಮಾರ್ಗಗಳ ಸಂಖ್ಯೆ ಮತ್ತು ದಿಕ್ಕು, ಗ್ರಾಮದ ವಸತಿ ವ್ಯವಸ್ಥೆ, ವೃತ್ತಿಪರರ ಸ್ಥಳ, ದೇವಾಲಯಗಳ ಸ್ಥಾನ ಇತ್ಯಾದಿಗಳ ಪೂರ್ಣ ವಿವಿರಗಳನ್ನೊಳಗೊಂಡ, ಗ್ರಾಮಗಳ ಪ್ರಧಾನ ಪ್ರಕಾರಗಳನ್ನೂ ಗ್ರಂಥಗಳು, ವಿಶೇಷವಾಗಿ ಮಾನಸಾರವು, ಗುರುತಿಸಿ, ವಿವರ ನೀಡಿದೆ, ಬಹುಶಃ ಈ ಕಾರಣವಾಗಿಯೇ ಮಾನಸಾರದಲ್ಲಿ ಗ್ರಾಮಗಳ ಕೆಲವು ಸಾಮಾನ್ಯ ವಿಷಯಗಳು, ಇತರ ಗ್ರಂಥಗಳಂತೆ ಪ್ರತ್ಯೇಕ್ಷವಾಗಿ ದೊರೆಯುವುದಿಲ್ಲ. ಉದಾ: ಗೆ,

ಮೇಲೆ ಹೇಳಿದಂತೆ ದಂಡಕ ನಂದ್ಯಾವರ್ತ ಪ್ರಕಾರದ ಗ್ರಾಮದ ಗ್ಗೆ ಹೇಳುವಾಗ, ಗ್ರಾಮಗಳ ವಿಶೇಷ ವರ್ಗೀಕರಣ ಗ್ರಾಮಭೇದಾಃ)ವನ್ನು ಹೇಳೀದೆ; ಗ್ರಾಮಗಳಲ್ಲಿನ ಬ್ರಾಹ್ಮಣರ ಂಖ್ಯೆಯ ಬಗ್ಗೆಯೂ ಅವೇ ಸಂದರ್ಭಗಳಲ್ಲಿ ಹೇಳಿದೆ.[೨೬]

ಶಾಸನಗಳಲ್ಲಿರುವ ವಿವಿಧ ರೀತಿಯ ಉಲ್ಲೇಖಗಳನ್ನು ಮನಿಸಿದರೆ, ಗ್ರಂಥಗಳಿಂದ ಇನ್ನೂ ಹೆಚ್ಚಿನ ವಿವರಗಳ ಅವಶ್ಯಕತೆ ಇದೆ ಎನಿಸುತ್ತದೆ. ಶಾಸನಗಳಲ್ಲಿ ದೊರೆಯುವ ಮಂಗಲ, ಅಗ್ರಹಾರ, ಪುರ ಇತ್ಯಾದಿಗಳ ಬಗ್ಗೆ ಗ್ರಂಥಗಳ ಹಿನ್ನೆಲೆಯಲ್ಲಿ ಇನ್ನೂ ಅಧ್ಯಯನ ನಡೆಯಬೇಕಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ವಡ್ಡಾರಾಧನೆ** (ಉದ್ಧೃತ) ಎಂ. ಚಿದಾನಂದಮೂರ್ತಿ, **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪುಟ ೧೪೪.
೨. ಎ.ಕ., IX, ಬೆಂಗಳೂರು-೯೫ (ರೈಸ್ ಆವೃತ್ತಿ), ಸುಮಾರು ಕ್ರಿ.ಶ. ೯೫೦.
೩. ೭.೩, ಪಿ.ಕೆ. ಆಚಾರ್ಯ, **ಮಾನಸಾರ** (ಮಾನ) ಸಂ. ೩, ೯, ೩-೪.
೪. ಅದೇ ೭.೪.
೫. ಮಯ - ೯.೩೨ - ೩೫.
೬. ಅದೇ ೯-೫೪b - ೫೫ ವಿವರಗಳಿಗೆ ನೋಡಿ ಕೂ.ಸ. ಅಪರ್ಣ 'ಪದನಿರ್ಣಯ' ಅಥವಾ ವಾಸ್ತು ಮಂಡಲ, **ಇತಿಹಾಸ ದರ್ಶನ,** ಸಂ. ೨೨. ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ೨೦೦೭, ಪು ೩೨-೪೦.
೭. ಮಾನ ೯-೧೬೧.
೮. ಮಯ ೯- ೬೧b.
೯. ಮಯ ೫.೮b.
೧೦. ಅ. ೩. ಪುಟ ೧೫.
೧೧. ಕೆ. ಕೃಷ್ಣಭಟ್ಟ, (ಅನು), **ಕೌಟಿಲ್ಯನ ಅರ್ಥಶಾಸ್ತ್ರ,** III. 20 (ಕ), ಪುಟ ೧೫೫.
೧೨. ಅದೇ II. 3 (ಕ), ಪುಟ ೯೪.
೧೩. ಅದೇ II. 20 (ಕ), ಪುಟ ೧೫೪.
೧೪. ಮಾನ 9.5.
೧೫. ಮಯ 5.7 ಮಯಮತದಲ್ಲಿ ಈ ಸಂದರ್ಭದಲ್ಲಿ, ವಿವಿಧ ಅಳತೆಗಳ ಬಗ್ಗೆ ವಿವರವಿದೆ. (9. 1b-4a).
೧೬. ಮಯ 9.4b - 7a.
೧೭. ಮಯ 9.7b - 8a.
೧೮. 'ಗ್ರಾಮಕುಟುಂಬಾವನಿ'ಯ ವ್ಯವಸಾಯದ ಭೂಮಿಯೇ ಹೊರತು ತಮ್ಮವರು ವಾಸವಾಗಿರುವ ವಸತಿಯ ಭಾಗವಲ್ಲ ಎಂದು ತಿಳಿದುಬರುತ್ತದೆ. (ಉದ್ಧೃತ - ಮಯ Fq 4, P.59).
೧೯. ಮಯ 9.4b - 7a.
೨೦. ಮಯ 9. 8b, 9a.
೨೧. ಅದೇ.
೨೨. ಇದನ್ನೇ ಇನ್ನೊಂದೆಡೆ, 'ನಗರ'ದ ಬಗ್ಗೆ ಹೇಳುವಾಗ ಬೇರೆ ರೀತಿಯಾಗಿ ಹೇಳಿದೆ.
೨೩. ಶ್ಲೋಕದ ಅನುವಾದದಲ್ಲಿ ಹೇಳಿರುವಂತೆ ಇದು ೨೬೬ ಅಲ್ಲ, ೨೫೬.
೨೪. ಮಯ 9.10-15.
೨೫. ಮಯ 9.16 a.
೨೬. ಮಯ 9 .17b, 18.a ಮತ್ತು ಈಶಾನಶಿವಗುರು ದೇವಪದ್ಧತಿ, ಕ್ರಿಯಾ 25.28 b -29a (ಉದ್ಧೃತ ಮಯ Fq.10,P61).

೨೭. ಮಯ 9.55.

೨೮. ಮಯ 9.25-28.

೨೯. ಮಯ 9.29-30.

೩೦. ಮಯ 9.31; **ಕಾಮಿಕಾಗಮ** (ಪೂರ್ವಭಾಗ) – I. 20. 4; ಈಶಾನಶಿವಗುರು ದೇವಪದ್ಧತಿ, ಕ್ರಿಯಾ. 25.46 ಇಲ್ಲಿ 'ಸುಖಾಲಯ' ರೀತಿಯ ಮನೆ ಕಟ್ಟಬೇಕೆಂದು ಮಯಮತವು ಹೇಳಿದೆ.

೩೧. ಮಯ – 9.29-30.

೩೨. ಇದರ ಅರ್ಥ ಅಸ್ಪಷ್ಟವಾಗಿದೆ. ಬಹುಶಃ ಬ್ರಾಹ್ಮಣರ ಸಂಖ್ಯೆ ೧೦ರಂತೆ ಜಾಸ್ತಿಯಾಗುತ್ತಾ ಇದ್ದರೆ, ಆ ಗ್ರಾಮವು ಬೇರೆ ಬೇರೆ ವಿಧಕ್ಕೆ ಸೇರಬೇಕೆಂದು ಇದರ ಅರ್ಥವಿರಬಹುದು.

೩೩. ಕಾಮಿಕಾ _ I. 27.1-8.

೩೪. ಮಯ 9.40.

೩೫. ಕಾಮಿಕಾ I. 20. 3-10; ಖೇಟ, ಖರ್ವಡ ಇತ್ಯಾದಿ ವಿವರಗಳೂ ಇವೆ.

೩೬. ಮಾನ 9.60-63.

೩೭. ಮಾನ 9.107-108.

೩೮. **ವಿಮಾನಾರ್ಚನಕಲ್ಪ**, ಅ, 3, ಪುಟ 15-16 ಇದರಲ್ಲೂ ಖರ್ವಡ, ಸೇನಾಮುಖ ಇತ್ಯಾದಿ ವಿವರಗಳಿವೆ.

೩೯. ಅದರಂತೆ, 'ನಂದ್ಯಾವರ್ತ' ಗ್ರಾಮದಲ್ಲಿನ ಬ್ರಾಹ್ಮಣರ ಸಂಖ್ಯೆಯು -58, 180, 300, 1008, 3000 ಅಥವಾ 4000, ಅದೇ 'ದಂಡಕ' ಗ್ರಾಮ ಪ್ರಕಾರದಲ್ಲಿ ಮನೆಗಳೂ ಅಥವಾ ಯತಿಗಳ 12 ಮನೆಗಳೂ ಇರುತ್ತದೆ. (ಮಾನ – 9.105-109).

## ಗ್ರಂಥಋಣ


Bruno bagels (Ed & Tr.) *Mayamatam; An Indian Treatise on Housing Architecture & Iconography,* Indira Gandhi National center for the arts, New Delhi, 1985.

Acharya, P.K (Ed & Tr) *Manasara* series Vol. III & iv, Munshiram Manoharlal Publishers, Pvt. Ltd., New Delhi, 1995 & 1994.

ರಘುನಾಥ ಚಕ್ರವರ್ತಿ ಭಟ್ಟಾಚಾರ್ಯ (ಸಂ) **ವಿಮಾನಾರ್ಚನಕಲ್ಪ**, ಮದ್ರಾಸು, ೧೯೨೬.

ಸ್ವಾಮಿ ಶಿವಾಚಾರ್ಯಜಿ (ಸಂ) **ಕಾಮಿಕಾಗಮ** (ಪೂರ್ವಭಾಗ) ಮದ್ರಾಸು ೧೯೭೫.

ಕೆ.ಕೃಷ್ಣಭಟ್ಟ (ಅನು) **ಕೌಟಿಲ್ಯನ ಅರ್ಥಶಾಸ್ತ್ರ** – ಸಮಾಜ ಪುಸ್ತಕಾಲಯ, ಧಾರವಾಡ, ೨೦೦೦.

P.V. Kane , *History of Dharmashastra,* Vol III, Bhandarkar Oriental research Institute, Poona, 1993,

D.C. Sircar, *Indian Epigraphy,* Motilal Banarasidas Publishers, Pvt. Ltd., Delhi, 1996.



# ನರಸಪ್ಪನ ಬೆಟ್ಟ ಒಂದು ಐತಿಹಾಸಿಕ ಪರಿಶೀಲನೆ

**ಪ್ರೊ. ಜೆ.ಕೆ. ಮಲ್ಲಿಕಾರ್ಜುನಪ್ಪ***

ಹರಪನಹಳ್ಳಿ ತಾಲ್ಲೂಕಿನ ಹೋಬಳಿ ಕೇಂದ್ರ ಅರಸೀಕೆರೆ, ಇದೊಂದು ಐತಿಹಾಸಿಕ ಕೇಂದ್ರವಾಗಿದ್ದು ಪ್ರಾಚೀನ ಕಾಲದಲ್ಲಿ ನೊಳಂಬರ ಆಳ್ವಿಕೆಗೆ ಒಳಪಟ್ಟಿರುವ ನೊಳಂಬ ಅರಸೀಕೆರೆ ಎಂಬ ಹೆಸರು ಇತ್ತು. ಹಾಗೂ ಹೊನ್ನರಸೀಕೆರೆ ಎಂದು ಸಹ ಕರೆಯಲಾಗುತ್ತದೆ. ಪ್ರಾಚೀನ ಕಾಲದಲ್ಲಿ ನೊಳಂಬ ಪಲ್ಲವರು, ಉಚ್ಚಂಗಿಯ ಪಾಂಡ್ಯರು ಮುಂತಾದವರ ಆಳ್ವಿಕೆಗೆ ಒಳಪಟ್ಟಿತ್ತು. ವಿಜಯನಗರ ಕಾಲದಲ್ಲಿ ಅವರ ಆಳ್ವಿಕೆಗೆ ಒಳಪಟ್ಟಿದ್ದ ಅರಸೀಕೆರೆ ಆ ನಂತರ ಹರಪನಹಳ್ಳಿ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತು.

ಹರಪನಹಳ್ಳಿ ತಾಲ್ಲೂಕು ಕೇಂದ್ರದಿಂದ ಸುಮರು ೧೬ ಕಿ.ಮೀ. ದೂರದಲ್ಲಿ ಇರುವ ಈ ಊರಿನಲ್ಲಿ ಹರಪನಹಳ್ಳಿ ಪಾಳೆಯಗಾರರ ಕಾಲದ ಶಾಸನವೊಂದು ದೊರೆತಿದೆ. ಇತಿಹಾಸ ಪ್ರಸಿದ್ಧ ಪಂಚಗಣಾಧೀಶ್ವರರಲ್ಲಿ ಒಬ್ಬರಾಗಿದ್ದ ಶ್ರೀ ಕೋಲಶಾಂತೇಶ್ವರರ ಕೇಂದ್ರ ಸ್ಥಾನವೂ ಇದಾಗಿತ್ತು. ಹರಪನಹಳ್ಳಿ ಪಾಳೆಯಗಾರರ ಕಾಲದ ಅನೇಕ ಕಟ್ಟಡಗಳು ಇಲ್ಲಿ ಕಂಡುಬರುತ್ತವೆ. ಹರಪನಹಳ್ಳಿ ಪಾಳೆಯಗಾರರಲ್ಲಿ ಅತ್ಯಂತ ಪ್ರಸಿದ್ಧವಾದ ಒಂದನೇ ಸೋಮಶೇಖರ ನಾಯಕನ ಮಗನ ಸಮಾಧಿಯೂ ಇಲ್ಲಿಯ ಕೆರೆದಂಡೆಯ ಮೇಲೆ ಕಂಡುಬರುತ್ತದೆ.

ಅರಸೀಕೆರೆಯಿಂದ ಕಂಚೀಕೆರೆಗೆ ಹೋಗುವ ಮಾರ್ಗದಲ್ಲಿ ಸುಮಾರು ೨ ಕಿ.ಮೀ. ಸಾಗಿ ಬಲಗಡೆ ತಿರುವು ಪಡೆದುಕೊಂಡು ಸಾಗಿದರೆ 'ಯರಬಳ್ಳಿ' ಎಂಬ ಗ್ರಾಮ ಸಿಗುತ್ತದೆ. ಈ ಗ್ರಾಮದಲ್ಲಿ ಅತಿ ಪ್ರಾಚೀನವಾದ ಶಿವ ದೇವಾಲಯವಿದೆ. ಈ ಗ್ರಾಮಕ್ಕೆ ಹೊಂದಿಕೊಂಡಂತೆ ಭೂಮಟ್ಟದಿಂದ ಸುಮಾರು ೮೦೦-೧೦೦೦ ಅಡಿಗೂ ಹೆಚ್ಚು ಎತ್ತರವಾದ ಹಾಗೂ ಸುಮಾರು ೭೦೦ ಎಕರೆ ಭೂಪ್ರದೇಶವನ್ನು ಆವರಿಸಿಕೊಂಡ ಒಂದು ಬೆಟ್ಟ ಪ್ರದೇಶವಿದೆ. ಈ ಬೆಟ್ಟವನ್ನು ಯರಬಳ್ಳಿ ಬೆಟ್ಟ, ನರಸಪ್ಪನ ಬೆಟ್ಟ, ನರಸದೇವರ ಬೆಟ್ಟ, ನರಸಿಂಹದೇವರ ಬೆಟ್ಟ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಭೌಗೋಳಿಕವಾಗಿ ಬಹು ಆಯಕಟ್ಟಿನ ಸ್ಥಳದಲ್ಲಿ ಇರುವ ಈ ಬೆಟ್ಟದ ಸುತ್ತಲೂ ಅರಣ್ಯ ಆವರಿಸಿತ್ತು. ಆದರೆ ಇಂದು ಈ ಅರಣ್ಯ ಪ್ರದೇಶ ಮಾಯವಾಗಿದ್ದು ಭೂಮಿ ಸಾಗುವಳಿಗೆ ಒಳಪಟ್ಟಿದೆ. ಈ ಪ್ರದೇಶದ ಸುತ್ತಮುತ್ತ ಅಡವಿಹಳ್ಳಿ, ಅಡವಿ ಮಲ್ಲನಕೇರೆ, ಅಡವಿಆನಂದಹಳ್ಳಿ, ಅಡವಿಮಲ್ಲಾಪುರ ಮುಂತಾದ ಹೆಸರಿನ ಗ್ರಾಮಗಳು ಕಂಡುಬರುತ್ತವೆ.

ಬೆಟ್ಟಶ್ರೇಣಿಗೆ ಹೊಂದಿಕೊಂಡಂತೆ ಪ್ರಾಚೀನ ಕಾಲದಲ್ಲಿ ಅರಸನಹಳ್ಳಿ ಅರಸಾಪುರ ಎಂಬ ಹೆಸರಿನ ಗ್ರಾಮವೊಂದು ಇತ್ತಂತೆ. ಆ ಗ್ರಾಮದ ಅವಶೇಷಗಳು ಕಂಡುಬರುತ್ತವೆ. ಮುಖ್ಯವಾಗಿ ರೈತರ ಹಗೇವುಗಳು ಕಂಡುಬರುತ್ತವೆ. ಈ ಬೆಟ್ಟದಲ್ಲಿ ನರಸಿಂಹದೇವರ ದೇವಾಲಯ ಇದ್ದುದರಿಂದಾಗಿ ಈ 'ಬೇಚಿರಾಕ್' ಗ್ರಾಮಕ್ಕೆ ನರಸಾಪುರ ಎಂದು ಸಹ ಕರೆಯಲಾಗುತ್ತಿತ್ತು. ಒಟ್ಟಾರೆ ಈ ಬೆಟ್ಟ ಶ್ರೇಣಿಯನ್ನು ನರಸಿಂಹ ಬೆಟ್ಟ, ನರಸಪ್ಪನ ಬೆಟ್ಟ, ನರಸಿಂಹ ದೇವರ ಬೆಟ್ಟ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಅರಸೀಕೆರೆಯಿಂದ ಪಶ್ಚಿಮ ದಿಕ್ಕಿನಲ್ಲಿ ಸುಮಾರು ೪ ಕಿ.ಮೀ. ದೂರದಲ್ಲಿ ಇರುವ ಈ ನರಸಪ್ಪನ ಬೆಟ್ಟ ಒಂದು ಐತಿಹಾಸಿಕ ಕೇಂದ್ರವಾಗಿದ್ದು ತನ್ನದೇ ಆದ ಐತಿಹಾಸಿಕ ಮಹತ್ವವನ್ನು ಹೊಂದಿದೆ. ಸುಮಾರು ೨೫-೩೦ ಕಿ.ಮೀ.ಗಳ ವ್ಯಾಪ್ತಿಯಲ್ಲಿ ಕಂಡುಬರುವ ಬೆಟ್ಟಗುಡ್ಡಗಳಲ್ಲಿ ಅತ್ಯಂತ ಎತ್ತರವಾದ ಬೆಟ್ಟ ಶ್ರೇಣಿ ಇದಾಗಿದೆ.

ನರಸಪ್ಪನ ಬೆಟ್ಟದ ಮಧ್ಯಭಾಗದಲ್ಲಿ ಬೃಹತ್ ಗುಹೆಯೊಂದು ಕಂಡುಬರುತ್ತದೆ. ಇಲ್ಲಿಯ ಲಕ್ಷಣಗಳನ್ನು ಅವಲೋಕಿಸಿದರೆ ಇದು ಮಾನವ ನಿರ್ಮಿತ ಗುಹೆಯಾಗಿರಲಿಕ್ಕೆ ಸಾಧ್ಯ. ಇದನ್ನು ಪರಿಗಣಿಸಿದರೆ ಇಲ್ಲಿ ಬೃಹತ್ ಶಿಲಾಯುಗದ ಮಾನವ ನೆಲೆಸಿದ್ದಿರಬಹುದೆಂದು ಹೇಳಬಹುದು. ಇದಕ್ಕೆ ಪೂರಕವಾಗಿ ಹೇಳುವಂತೆ ನೀರಿನ ಆಸರೆಗಳು ಬೆಟ್ಟದ ಕೆಳಭಾಗದಲ್ಲಿ ಕಂಡುಬರುತ್ತವೆ.

ಐತಿಹಾಸಿಕ ಕಾಲಕ್ಕೆ ಬಂದರೆ ಈ ಬೆಟ್ಟ ಪರಿಸರದಲ್ಲಿ ಅನೇಕ ಕುರುಹುಗಳು ಕಂಡುಬರುತ್ತವೆ. ಈ ಬೆಟ್ಟಕ್ಕೆ

* ಮುಖ್ಯಸ್ಥರು, ಇತಿಹಾಸ ವಿಭಾಗ, ಎ.ಆರ್.ಜಿ. ಕಲಾ ಮತ್ತು ವಾಣಿಜ್ಯ ಕಾಲೇಜು, ದಾವಣಗೆರೆ-೫೭೭೦೦೪.



ಬೆಟ್ಟದ ಮಧ್ಯಭಾಗದಲ್ಲಿರುವ ಗುಹೆ

ಹೊಂದಿಕೊಂಡಿರುವ ಯರಬಳ್ಳಿ ಗ್ರಾಮದಲ್ಲಿ ಅತಿಪ್ರಾಚೀನ ಈಶ್ವರ ದೇವಾಲಯ ಕಂಡುಬರುತ್ತದೆ. ಈ ಬೆಟ್ಟದ ಪರಿಸರದಲ್ಲಿ ಎರಡು ಶಾಸನಗಳು ಕಂಡುಬರುತ್ತವೆ. ಗುಹೆಗೆ ಅಂಟಿಕೊಂಡಿರುವ ಬೃಹತ್ ಶಿಲಾ ಬಂಡೆಯಲ್ಲಿ ಒಂದು ಶಾಸನ ಕಂಡುಬರುತ್ತಿದ್ದು ಓದುವ ಸ್ಥಿತಿಯಲ್ಲಿ ಇರದೆ ಹಾಳಾಗಿದೆ. ಈ ಶಾಸನ ಬಾದಾಮಿ ಚಲುಕ್ಯ ಚಕ್ರವರ್ತಿ ೨ನೇ ಪುಲಕೇಶಿಯ ಕಾಲಕ್ಕೆ ಸಂಬಂಧಿಸಿದ್ದು ಜೈನ ಮುನಿಗಳು ಈ ಬೆಟ್ಟಶ್ರೇಣಿಯಲ್ಲಿ ತಪಸ್ಸು, ಸಲ್ಲೇಖವ್ರತವನ್ನು ಆಚರಿಸುತ್ತಿದ್ದರೆಂದು ಹೇಳಲಾಗಿದೆ. ಆದರೆ ಈ ಪರಿಸರದಲ್ಲಿ ಯಾವುದೇ ಜೈನ ಅವಶೇಷಗಳು ಇಂದು ಕಂಡುಬರುವುದಿಲ್ಲ. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗೆ ಇದ್ದ ಇಲ್ಲಿನ ನರಸಿಂಹನ ಪೂಜಾರಿ ಮನೆತನದ ಅಡ್ಡಿ ನಾಗಪ್ಪ ಅವರು ಇಂದಿಗೂ ಸಹ ಅನೇಕ ಜೈನರು ಈ ಸ್ಥಳಕ್ಕೆ ಬಂದು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ ಎಂದು ಹೇಳುತ್ತಾರೆ. ಇದನ್ನು ಪರಿಗಣಿಸಿದಲ್ಲಿ ಬಾದಾಮಿ ಚಲುಕ್ಯರ ಕಾಲದಲ್ಲಿ ಈ ಬೆಟ್ಟ ಜೈನರ, ಜೈನಮುನಿಗಳ ಕೇಂದ್ರವಾಗಿತ್ತು ಎಂದು ಅಭಿಪ್ರಾಯಪಡಬಹುದಾಗಿದೆ.

ನರಸಪ್ಪನ ಬೆಟ್ಟದ ಮಧ್ಯಭಾಗದಲ್ಲಿ ಇರುವ ಗುಹೆಯ ಪ್ರವೇಶದಲ್ಲಿ ಶಿವಲಿಂಗದ ಬೃಹತ್ ಶಿಲ್ಪವಿದೆ. ಇದು ಸುಮಾರು ೪-೫ ಅಡಿ ಎತ್ತರದ ಬೃಹತ್ ಶಿವಲಿಂಗವಾಗಿದ್ದು ಈ ಪರಿಸರ ಶೈವಕೇಂದ್ರವಾಗಿತ್ತು ಎಂಬುದನ್ನು ದೃಢಪಡಿಸುತ್ತದೆ. ಇದಕ್ಕೆ ಹೊಂದಿಕೊಂಡಂತೆ ೫ ಅಡಿ ಎತ್ತರದ ಭೈರವನ ಶಿಲ್ಪ ಮತ್ತು ೨ ಅಡಿ ಎತ್ತರದ ದುರ್ಗಾಮಾತೆಯ ಶಿಲ್ಪ ಕಂಡುಬರುತ್ತವೆ. ಇದನ್ನು ಪರಿಗಣಿಸಿ ಇಲ್ಲಿ ಭೈರವ ಆರಾಧನೆ ಕಾಳಾಮುಖ ಶೈವ ಆರಾಧನೆ ಇತ್ತು ಎನ್ನಬಹುದು. ಭೈರವನ ಶಿಲ್ಪ ವಿಶಿಷ್ಟವಾಗಿದ್ದು ೬ ಕೈಗಳು, ತ್ರಿಶೂಲ, ರುಂಡ, ಖಡ್ಗಳಿದ್ದು ಬಿಲ್ಲು ಹಿಡಿದಂತೆ ಕಂಡುಬರುತ್ತದೆ. ಕೊರಳಿಗೆ ರುಂಡ ಮಾಲೆಯನ್ನು ಧರಿಸಿದ್ದಾನೆ. ಪಾದತಳದ ಎಡಭಾಗದಲ್ಲಿ ನಾಯಿ ಬಲಭಾಗದಲ್ಲಿ ಒಬ್ಬ ಮಹಿಳೆ ಕೈ ಮುಗಿದು ಕುಳಿತಂತೆ ಇದೆ.

ದುರ್ಗಾಮಾತೆಯ ಶಿಲ್ಪ ನಾಟ್ಯಭಂಗಿಯಲ್ಲಿ ಇದ್ದು ೮ ಕೈಗಳೊಂದಿಗೆ ನರ್ತಿಸುವಂತೆ ಇದೆ. ಇವುಗಳನ್ನು ನಾವು ಪರಿಗಣಿಸಿದಾಗ ಇಲ್ಲಿ ಶೈವ ಕಾಳಾಮುಖ ಶೈವ ಆಚರಣೆ ಪ್ರಚಲಿತ ಇದ್ದವು ಎನ್ನಬಹುದು.

ಇದೇ ಗುಹೆಯಿಂದ ಹರಪನಹಳ್ಳಿ ಪಾಳೆಯಗಾರರ ಬಹುಮುಖ್ಯ ಕೇಂದ್ರವಾದ ಕೂಲಹಳ್ಳಿಯವರೆಗೆ ಸುರಂಗ ಮಾರ್ಗವಿದೆ ಎಂದು ಸ್ಥಳೀಯರು ಹೇಳುತ್ತಾರೆ. ಈ ಹೇಳಿಕೆಯನ್ನು ಪರಿಗಣಿಸಿದ್ದಲ್ಲಿ; ಈ ನರಸಪ್ಪನ ಬೆಟ್ಟ ಹರಪನಹಳ್ಳಿ ಪಾಳೆಯಗಾರರ ಕಾಲದ ಒಂದು ಮುಖ್ಯ ಕೇಂದ್ರವಾಗಿತ್ತು ಎಂದು ಹೇಳಬಹುದು. ಇದನ್ನು ಸಮರ್ಥಿಸಲು ಕೂಲಹಳ್ಳಿಯಲ್ಲಿಯೂ ಸಹ ಒಂದು ಸುರಂಗ ಮಾರ್ಗ ಕಂಡುಬರುತ್ತದೆ. ಗುಹೆಯನ್ನು ದಾಟಿ ಮುಂದೆ ಸಾಗಿದಲ್ಲಿ ನಮಗೆ ಕ್ರಿ.ಶ. ೧೫೧೦ ದಿನಾಂಕವನ್ನೊಳಗೊಂಡ ಶಾಸನವೊಂದು ಕಂಡುಬರುತ್ತದೆ. ಇದು ಸುಸ್ಥಿತಿಯಲ್ಲಿ ಇದ್ದು ದೇವರಸ ಮತ್ತು ಗಂಗೆಯ ಮಗನಾದ ಗಿರಿದೇವನು ಇಲ್ಲಿಯ ಯೋಗಾನರಸಿಂಹ ದೇವಾಲಯಕ್ಕೆ ಶಿಖರವನ್ನು ನಿರ್ಮಿಸಿದನು ಎಂಬ ಮಾಹಿತಿ ನೀಡುತ್ತದೆ. ಪ್ರಸ್ತುತ ಈ ಬೆಟ್ಟದ ಮಧ್ಯಭಾಗದಲ್ಲಿ ಇರುವ ಈ ಯೋಗಾನರಸಿಂಹ ದೇವಾಲಯವನ್ನು ಅವಲೋಕಿಸಿ ದರೆ ಇದಕ್ಕೆ ಯಾವ ಶಿಖರವು ಕಂಡುಬರುವುದಿಲ್ಲ. ಹೆಬ್ಬಂಡೆಯನ್ನು ಮೇಲ್ಛಾವಣಿಯಾಗಿ ಬಳಸಿ ಕೇವಲ ಸಣ್ಣ ಎರಡು ಗೋಡೆಗಳನ್ನೊಳಗೊಂಡು ಈ ದೇವಾಲಯ ನಿರ್ಮಾಣಗೊಂಡಿದೆ. ಈ ದೇವಾಲಯದ ಎದುರುಗಡೆ ದೀಪಸ್ತಂಭ ಕಂಡುಬರುತ್ತದೆ. ಇಲ್ಲಿಯ ಪೂಜಾರಿ ಮನೆತನದ ಅರಸೀಕೆರೆಯ ಅಡ್ಡಿ ನಾಗಪ್ಪ ಹೇಳುವಂತೆ; ಇಲ್ಲಿಯ ಯೋಗಾ ನರಸಿಂಹನ ಪೂಜೆಯನ್ನು



ಬೆಟ್ಟದ ತುದಿ-ಕೋಟೆ ಗೋಡೆ-ಭತೇರಿ

ಚಿತ್ರಗಳು : ಲೇಖನ ೧ : ಅಣ್ಣಿಗೇರಿಯಲ್ಲಿ ಪುರಾತತ್ತ್ವ ಉತ್ಖನನ









ಚಿತ್ರಗಳು : ಲೇಖನ ೭ : ಘಾಟಿ ಪರಿಸರದ ಪ್ರಾಗೈತಿಹಾಸಿಕ ನೆಲೆಗಳು ಒಂದು ಶೋಧ



ನೈಸರ್ಗಿಕ ಕಲ್ಲಾಸರೆ ಇರುವ ಪೂರ್ವದ ಬೆಟ್ಟ



ಬೆಟ್ಟದ ಬುಡದಲ್ಲಿರುವ ಕಲ್ಲಾಸರೆ



ಶಿಲಾಯುಧ



ಕಲ್ಲಿನಿಂದ ಕುಟ್ಟಿ ರಚಿಸಿದ ಚಿತ್ರ



ಗುಹೆ





ಬಂಡೆಯ ಕೆಳಗಿನ ವಿಶಾಲವಾದ ಸ್ಥಳ

ಕಲ್ಲಾಸರೆಗೆ ಹೋಗುವ ಸ್ಥಳ

Plate II



ನಿಲುವುಗಲ್ಲು



ಗುಹೆಯೊಳಗಿರುವ ಸುರಂಗ ಮಾರ್ಗ

ಚಿತ್ರಗಳು : ಲೇಖನ ೧೦ : ಕಮ್ಮಾರಗಟ್ಟೆಯ ಪರಿಸರದ ಪ್ರಾಚ್ಯಾವಶೇಷಗಳು



ಮಹಾಸತಿ ಶಿಲ್ಪ



ಜಡೆಮುನಿ ಶಿಲ್ಪ

ತಂಬೂರಿನ ವೀರಗಲ್ಲು



ತಂಬೂರಿನ ದೇವಾಲಯ



ಕಾಮಧೇನು ದೇವಾಲಯ.



ಭೈರವ, ಕಲಘಟಗಿ

Plate IV

ಚಿತ್ರಗಳು : ಲೇಖನ ೧೮ : ಬಸ್ತಿಹೊಸಕೋಟೆಯ ಜೈನ ಅವಶೇಷಗಳು

















ಚಿತ್ರಗಳು : ಲೇಖನ ೨೦ : ಕೊರಟಗೆರೆ ತಾಲ್ಲೂಕಿನ ಕ್ಯಾಸವಾರ ಗ್ರಾಮದ ಶಾಸನ ಮತ್ತು ವಿಷ್ಣುಶಿಲ್ಪ





Plate VI

ಚಿತ್ರಗಳು : ಲೇಖನ ೩೦ : ಕಸಾಪುರ, ಮಿಡಿಗೇಶಿ, ಮಡಕಶಿರಾ ಪ್ರದೇಶದ ಶಾಸನಗಳು



ಕಸಾಪುರ ಬಸಣ್ಣನ ಹತ್ತಿರವಿರುವ ಹರೆಯ ಶಾಸನ



ಮಿಡಿಗೇಶಿಯ ಹರೆಯ ಶಾಸನ



ಹೇಮಾವತಿಯ ಸಿದ್ಧೇಶ್ವರ ದೇವಸ್ಥಾನದಲ್ಲಿರುವ ಅಪ್ರಕಟಿತ ಶಾಸನ



ಪೇಲುಬಂಡೆಯ ರಂಗನಾಥಸ್ವಾಮಿಯ ಯಾಗಶಾಲೆಯಲ್ಲಿರುವ ಶಾಸನ

ಚಿತ್ರಗಳು : ಲೇಖನ ೩೧ : ಗುಬ್ಬಿ ತಾಲ್ಲೂಕು ಬಿಕ್ಕೆಗುಡ್ಡದ ಅಪ್ರಕಟಿತ ಕ್ರಯಪತ್ರ ಶಾಸನ

Plate VIII



ಮದ್ದಳೆ, ಅಡ್ಡಾವುಜ ಅಥವಾ ಮೃದಂಗ



ಪಟ್ಟಾವುಜ (ಪಖಾವುಜ) ಮದ್ದಳೆ



ನಟ್ಟುವಾಂಗ ತಾಳಸಹಿತ



ನೃತ್ಯಭಂಗಿ



ನೃತ್ಯಭಂಗಿ





ಹುಡುಕ್ಕಾ ಚರ್ಮವಾದ್ಯ



ಚಿಟಿಕೆ ವಾದ್ಯ ಒಂದೇ ಕೈಯಿಂದ ನುಡಿಸುತ್ತಿರುವುದು



ತಂತಿ ವಾದ್ಯವಿರಬಹುದಾದ ವಾದಕನ ಚಿತ್ರ

ಚಿತ್ರಗಳು : ಲೇಖನ ೪೯ : ಬಸರಾಳು ಮಲ್ಲಿಕಾರ್ಜುನ ದೇವಾಲಯ



ನಂದಿ ಮಂಟಪ



ಉತ್ತರದ ಪ್ರವೇಶ



ಸುಗ್ರೀವ ರಾಮ ಶಕ್ತಿ ಪರೀಕ್ಷೆ



ಶಿಖರ ದಕ್ಷಿಣ ಮುಖ



ಗರ್ಭಗೃಹದ ಹೊರಭಾಗ



ನಾರಾಯಣ, ತ್ರಿವಿಕ್ರಮ, ವಾಮನ



ಪುರುಷೋತ್ತಮ



ಶಂಕರನಾರಾಯಣ



ಕಾಳಿಂಗಮರ್ದನ



ಗಜಾಸುರಮರ್ದನ



೨೨ ಕೈಗಳುಳ್ಳ ದುರ್ಗಾದೇವಿ



ಬ್ರಹ್ಮ-ಸರಸ್ವತಿ

Plate XII

ತನ ಪೂರ್ವಿಕರು ಮುತ್ತಜ್ಜನ ಕಾಲದಿಂದಲೂ ನಿರ್ವಹಣೆ ಾಡಿಕೊಂಡು ಬರುತ್ತಿರು ವರಂತೆ. ಇದಕ್ಕೆ ಸಂಬಂಧಿಸಿದಂತೆ ಾವುದೇ ದಾಖಲೆಗಳು ಕಂಡುಬರುವುದಿಲ್ಲ. ಇಲ್ಲಿಯ ೂಜೆಗೆ ಜೈನ ಧರ್ಮದವರು ಸಹ ಬರುತ್ತಾರಂತೆ. ಈ ಂಶಗಳನ್ನು ಪರಿಗಣಿಸಿದಲ್ಲಿ ವಿಜಯನಗರ ಕಾಲದಲ್ಲಿ ತರೆಡೆ ಕಂಡುಬಂದಂತೆ ಇಲ್ಲಿಯೂ ಸಹ ವೈಷ್ಣವ ಆರಾಧನೆ ಲಗೊಂಡಂತೆ ಕಾಣುತ್ತದೆ. ಹೀಗಾಗಿ ಇಲ್ಲಿ ಯೋಗಾ ರಸಿಂಹನ ದೇವಾಲಯ ಸ್ಥಾಪನೆಯಾಗಿರಬಹುದು. ವಾಲಯದ ಒಳಗೆ ಉಗ್ರನರಸಿಂಹನ ರೂಪದಂತೆ ಣುವ ಯೋಗಾನರಸಿಂಹನ ಶಿಲ್ಪ ಕಂಡುಬರುತ್ತದೆ. ಈ ್ಟದ ಎದುರಿಗೆ ಬಸವನ ನೂತನ ವಿಗ್ರಹವನ್ನು ಮಾಡಿಸಿ ಶ. ೨೦೦೩ರಲ್ಲಿ ಸ್ಥಾಪಿಸಿದರಂತೆ. ಭಗ್ನಗೊಂಡ ಹಳೆಯ ್ರವನ್ನು ಮರುಜೋಡಿಸಿ ಇನ್ನೊಂದು ಭಾಗದಲ್ಲಿ ಇಟ್ಟಿದ್ದಾರೆ. ಂ.ಬಾ. ಸದಾಶಿವಪ್ಪನವರು ಕ್ರಿ.ಶ. ೧೭೦೦ ರಲ್ಲಿ ರಸೀಕೆರೆಯ ಕೋಲುಶಾಂತೇಶ್ವರರು ಜೈನರನ್ನು ಮತಾಂತರ ಳಿಸಿ ಅವರನ್ನು ಲಿಂಗವಂತರನ್ನಾಗಿ ಮಾಡಿದರು ಎಂದು ನ್ಮ ಹರಪನಹಳ್ಳಿ ತಾಲ್ಲೂಕು ಪರಿಚಯ ಎಂಬ ಕೃತಿಯಲ್ಲಿ ಖಲಿಸಿದ್ದಾರೆ. ಈ ಅಂಶಗಳನ್ನು ಪರಿಗಣಿಸಿದಲ್ಲಿ ಈ ರಸಪ್ಪನ ಬೆಟ್ಟ ಶೈವ, ವೈಷ್ಣವ, ಜೈನರ ಕೇಂದ್ರವಾಗಿತ್ತು. ಈ ರಸಪ್ಪನ ಬೆಟ್ಟ ಪ್ರಸ್ತುತ ಯೋಗಾನರಸಿಂಹಸ್ವಾಮಿಯ ರಾಧನೆಯ ಕೇಂದ್ರವಾಗಿದ್ದು ಬರಗಾಲ ಬಂದಾಗ ರೈತರು ಲ್ಲಿಗೆ ಬಂದು ಮಳೆಕೀಲು ಪರ್ವ ನಡೆಸುತ್ತಾರೆ.

ನರಸಪ್ಪನ ಬೆಟ್ಟದ ವಿಶೇಷ ಐತಿಹಾಸಿಕ ಮಹತ್ವ ಮತ್ತು ಪ್ರಮುಖ್ಯತೆಯೊಂದಿಗೆ ಇಲ್ಲಿಯ ಆಕರ್ಷಣೆ ಏನೆಂದರೆ, ಟ್ಟದ ತುದಿಯಲ್ಲಿ ಕಂಡುಬರುವ ಕೋಟೆ ಮತ್ತು ವೀಕ್ಷಣಾ ತೇರಿಗಳು. ಬೆಟ್ಟದ ತುದಿಗೆ ಬುರುಜು ಏರಿಕೊಂಡು ೋಗಲು ಹಿಂದೆ ಸುಸಜ್ಜಿತವಾದ ಮಾರ್ಗ ಇದ್ದಿರಬಹುದು ಂದು ಅದರ ಕುರುಹುಗಳು ಕಾಣಿಸುತ್ತವೆ. ಈಗಲೂ ಸಹ ಚ್ಚಿನ ಪ್ರಯಾಸವಿಲ್ಲದೆ ಸುಲಭವಾಗಿ ಬೆಟ್ಟವನ್ನು ಏರಿ ದಿಯನ್ನು ತಲುಪಬಹುದು. ಆ ತುದಿಯನ್ನು ತಲುಪಿ ೕಕ್ಷಣೆ ಮಾಡಿದಾಗ ಸುಮಾರು ೫೦-೬೦ ಕಿ.ಮೀ. ೂರದವರೆಗೆ ಬರಿಗಣ್ಣಿನಿಂದ ನೋಡಬಹುದಾದ ಬಯಲು ದೇಶ ಕಂಡುಬರುತ್ತದೆ. ಈ ಬೆಟ್ಟದ ತುದಿಯ ಭೂ ಪ್ರದೇಶ ಮಿತವಾಗಿದ್ದು ಸುಮಾರು ೧೦-೧೫ ಸಾವಿರ ಚದರಡಿ ಸ್ತೀರ್ಣವನ್ನು ಹೊಂದಿದೆ. ಈ ತುದಿಯ ಸುತ್ತಲೂ ರಕ್ಷಣಾ ೋಡೆ ಇದ್ದು ಎಂಟು ದಿಕ್ಕಿನಲ್ಲಿ ವೀಕ್ಷಣಾ ಬತೇರಿಗಳಿವೆ. ವುಗಳಲ್ಲಿ ೪ ಸುಸ್ಥಿತಿಯಲ್ಲಿದ್ದು ಉಳಿದ ನಾಲ್ಕು ಹಾಳಾಗಿವೆ. ೋಟೆಯ ಎಲ್ಲಾ ಲಕ್ಷಣಗಳನ್ನು ಗುರುತಿಸಬಹುದು. ಪ್ರವೇಶದ್ವಾರವನ್ನು ಕೇವಲ ಕುರುಹುಗಳಿಂದ ಗುರುತಿಸ ಬಹುದಾಗಿದೆ. ಈ ಬೆಟ್ಟದ ಮೇಲುತುದಿಯಲ್ಲಿ ಎರಡು ಹಂತಗಳ ರಕ್ಷಣಾ ವ್ಯವಸ್ಥೆ ಇದ್ದಂತೆ ಕಂಡುಬರುವುದು. ಈ ಎರಡೂ ಹಂತಗಳನ್ನು ಪ್ರತ್ಯೇಕ ಗೋಡೆ ಬೇರ್ಪಡಿಸುತ್ತದೆ. ಈ ಗೋಡೆಯ ಸುತ್ತಲೂ ವೀಕ್ಷಣೆ ಮಾಡಲು ಬಂದೂಕಿನ ನಳಿಕೆಗಳ ಕಿಂಡಿಗಳಿವೆ. ಬತೇರಿಗಳ ಮೇಲಿಂದ ನೋಡಿದಾಗ ಉಚ್ಚಂಗಿದುರ್ಗದ ಕೋಟೆ ಸ್ಪಷ್ಟವಾಗಿ ಕಾಣಿಸುತ್ತದೆ. ಈ ಕೋಟೆಯ ಒಳಗಡೆ ಗಾರೆಯಿಂದ ನಿರ್ಮಿಸಿದ ಕೆಲವು ಚಿಕ್ಕ ಚಿಕ್ಕ ಕಟ್ಟಡ ಅವಶೇಷಗಳಿವೆ. ಕೋಟೆಯ ಕಟ್ಟಡಗಳಲ್ಲಿ ವಿಜಯನಗರದ ಅಂತಿಮಕಾಲದ ಹಾಗೂ ಹರಪನಹಳ್ಳಿ ಪಾಳೆಯಗಾರರ ಕಾಲದ ಕಟ್ಟಡ ಲಕ್ಷಣಗಳನ್ನು ಗುರುತಿಸ ಬಹುದು, ಹೆಚ್ಚಿನ ಜನವಸತಿಯ ಲಕ್ಷಣಗಳು ಕಂಡುಬರುವುದಿಲ್ಲ. ಗಾರೆ, ಇಟ್ಟಿಗೆ, ಮಡಿಕೆ ಕುಡಿಕೆಯ ಅವಶೇಷಗಳು ಕಂಡುಬರುತ್ತವೆ. ಇಲ್ಲಿಯ ಮಣ್ಣನ್ನು ಪರೀಕ್ಷಿಸಿದಾಗ ಬೃಹತ್ ಪ್ರಮಾಣದಲ್ಲಿ ಬೂದಿಯ ಮಿಶ್ರಣ ಕಂಡುಬರುತ್ತದೆ. ಈ ಕೋಟೆ ಹರಪನಹಳ್ಳಿ ಮತ್ತು ಉಚ್ಚಂಗಿದುರ್ಗಕ್ಕೆ ಮಧ್ಯಭಾಗ ದಲ್ಲಿದೆ. ಕೋಟೆಯ ಒಳಗಡೆ ವಾಸಿಸುವವರಿಗಾಗಿ ನೀರಿನ ಸೌಕರ್ಯಕ್ಕಾಗಿ ಮಳೆಗಾಲದಲ್ಲಿ ಬೀಳುವ ನೀರನ್ನು ಸಂಗ್ರಹಿಸಲು ಬೃಹತ್ ಹೊಂಡವನ್ನು ನಿರ್ಮಿಸಿಕೊಂಡಿದ್ದರು. ಇಲ್ಲಿ ನಿಧಿ ಚೋರರು ಆಗಾಗ ದಾಳಿಯಿಟ್ಟು ಭೂಮಿಯನ್ನು ಅಗೆದಿರುವ ಗುರುತುಗಳು ಕಂಡುಬರುತ್ತವೆ. ಈ ಎಲ್ಲ ಅಂಶಗಳನ್ನು ಅವಲೋಕಿಸಿದಾಗ ಕಂಡುಬರುವುದೇನೆಂದರೆ; ವಿಜಯನಗರ ಕಾಲದಲ್ಲಿ ಈ ಕೋಟೆ ಈ ಪ್ರದೇಶದ ಆಯಕಟ್ಟಿನ ಸ್ಥಳವಾಗಿತ್ತು ಹಾಗೂ ನಾಣ್ಯ ಟಂಕಿಸುವ ಕೇಂದ್ರವಾಗಿತ್ತು ಎಂದು ಅಭಿಪ್ರಾಯ ಪಡಬಹುದಾಗಿದೆ. ಇದನ್ನು ಸಮರ್ಥಿಸುವ ಅನೇಕ ಅಂಶಗಳು ಪರಿವೀಕ್ಷಣೆಯ ಸಂದರ್ಭದಲ್ಲಿ ಕಂಡುಬರುತ್ತದೆ.

ಸ್ಥಳೀಯರು ಅಭಿಪ್ರಾಯಪಡುವಂತೆ ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಇದೊಂದು ರಕ್ಷಣಾ ಕೇಂದ್ರ ಹಾಗೂ ಸೈನಿಕ ವೀಕ್ಷಣೆ ಕೇಂದ್ರವಾಗಿತ್ತು ಎಂದು ಹೇಳುತ್ತಾರೆ. ಉಚ್ಚಂಗಿದುರ್ಗದ ಕೋಟೆಯ ಕಾವಲುಗಾರರಿಗೆ ಇಲ್ಲಿಯ ರಕ್ಷಣಾಪಡೆಯ ಕಾವಲುಗಾರರು ಮುನ್ನೆಚ್ಚರಿಕೆಗಳನ್ನು ಪಂಜುಗಳನ್ನು ಉರಿಸುವ ಮೂಲಕ ನೀಡುತ್ತಿದ್ದರಂತೆ. ಈ ಎಲ್ಲಾ ಅಂಶಗಳನ್ನು ಗಮನಿಸಿ ಈ ನರಸಪ್ಪನ ಬೆಟ್ಟ ವಿಜಯನಗರ ಹಾಗೂ ಹರಪನಹಳ್ಳಿ ಪಾಳೆಯಗಾರರ ಕಾಲದ ನಾಣ್ಯ ಟಂಕಸಾಲೆ ಆಗಿದ್ದಿರಬಹುದು ಮತ್ತು ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ಒಂದು ರಕ್ಷಣಾ ಆಯಕಟ್ಟಿನ ಕೇಂದ್ರ ಅಥವಾ ರಕ್ಷಣಾ ವೀಕ್ಷಣಾಲಯ ಆಗಿದ್ದಿರಬಹುದೆಂದು ಅಭಿಪ್ರಾಯ ಪಡಬಹುದಾಗಿದೆ.

ಈ ಬೆಟ್ಟದ ಮೇಲೆ ಪದೇಪದೇ ನಡೆಯುವ ನಿಧಿ ಚೋರರ ಆಕ್ರಮಣಗಳು ಹಾಗೂ ಈ ಭಾಗದ ಸ್ಥಳೀಯರು ಹೇಳುವಂತೆ; ಒಮ್ಮೆ ಇಲ್ಲಿ ಹೊನ್ನಿನ ಮಳೆಯಾಗಿತ್ತಂತೆ, ಮಳೆಯ ನೀರಿನ ಜೊತೆಗೆ ಬೃಹತ್ ಸಂಖ್ಯೆಯಲ್ಲಿ ನಾಣ್ಯಗಳು ಹರಿದು ಬಂದಿದ್ದವಂತೆ. ಇದರಿಂದಾಗಿ ಅರಸೀಕೆರೆಗೆ ಹೊನ್ನರಸೀಕೆರೆ ಎಂದು ಸಹ ಕರೆಯುತ್ತಾರಂತೆ. ಅನೇಕರಿಗೆ ನಾಣ್ಯಗಳು ದೊರೆತ್ತಿದ್ದವಂತೆ, ಈ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡಲ್ಲಿ ಬಹುತೇಕ ಈ ನರಸಪ್ಪನ ಬೆಟ್ಟದ ತುದಿಯಲ್ಲಿ ಇರುವ ಕೋಟೆ ವಿಜಯನಗರ ಕಾಲ ಅಥವಾ ಹರಪನಹಳ್ಳಿ ಪಾಳೆಯಗಾರರ ಕಾಲದ ನಾಣ್ಯ ಟಂಕಿಸುವ ಒಂದು ಕೇಂದ್ರವಾಗಿತ್ತು ಎಂದು ಹೇಳಬಹುದು ಇದನ್ನು ಸಮರ್ಥಿಸಲು ಲಿಖಿತ ದಾಖಲೆಗಳು ಬೇಕಾಗಿವೆ.

ಈ ನರಸಪ್ಪನ ಬೆಟ್ಟ ಇಲ್ಲಿರುವ ಕೋಟೆ ಪರಿಸರದ ಅವಶೇಷಗಳು ಹರಪನಹಳ್ಳಿ ಪಾಳೆಯಗಾರರ ಕಾಲಕ್ಕೆ ಅತಿ ಸಮೀಪದ ಹೋಲಿಕೆ ಇರುವುದರಿಂದಾಗಿ ಹಾಗೂ ಪಾಳೆಯಗಾರರ ಕೇಂದ್ರ ಸ್ಥಾನ ಹರಪನಹಳ್ಳಿ ಮತ್ತು ಉಚ್ಚಂಗಿದುರ್ಗಕ್ಕೆ ಮಧ್ಯವರ್ತಿ ಸ್ಥಾನದಲ್ಲಿರುವುದರಿಂದಾಗಿ ಈ ನರಸಪ್ಪನ ಬೆಟ್ಟ ಹರಪನಹಳ್ಳಿ ಪಾಳೆಯಗಾರರ ಒಂದು ಸೈನಿಕ ವೀಕ್ಷಣೆ ಕೇಂದ್ರವಾಗಿತ್ತು ಎಂದು ಅಭಿಪ್ರಾಯ ಪಡಬಹುದಾಗಿದೆ.

[ಪ್ರಬಂಧವನ್ನು ಸಿದ್ಧಪಡಿಸಲು ಪ್ರೇರಣೆ ನೀಡಿದ ನನ್ನ ಸಂಶೋಧನಾ ಮಾರ್ಗದರ್ಶಕರಾದ ಡಾ. ಎಂ. ಕೊಟ್ರೇಶ್ ಅವರಿಗೂ ಹಾಗೂ ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗೆ ಇದ್ದು ಸಹಕರಿಸಿದ ಗೆಳೆಯ ಅಜ್ಜಪ್ಪ ಹಾಗೂ ಸ್ಥಳೀಯ ಮಾಹಿತಿ ನೀಡಿದ ಪೂಜಾರಿ ಅಡ್ಡಿ ನಾಗಪ್ಪ ಹಾಗೂ ರೈತರಾದ ಹನುಮಂತಪ್ಪ ಇವರಿಗೂ ಮತ್ತು ನನ್ನ ಜೊತೆಗೆ ಇದ್ದು ಈ ಕಾರ್ಯಕ್ಕೆ ನೆರವಾದ ಉಪನ್ಯಾಸಕ ಮಿತ್ರರಾದ ಶಂಕರಯ್ಯ, ಜೆ.ವಿ. ಮಲ್ಲಿಕಾರ್ಜುನ ಹಾಗೂ ನನ್ನ ಪುತ್ರ ಅಶ್ವಿನ್‌ಕುಮಾರ್ ಜವಳಿ ಇವರಿಗೆ ಧನ್ಯವಾದಗಳು.]



## ಆಧಾರಸೂಚಿ


೧. ದೇವರಕೊಂಡಾರೆಡ್ಡಿ ಇತರರು (ಸಂ). **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧, ಬಳ್ಳಾರಿ ಜಿಲ್ಲೆ**, ಕ.ವಿ.ವಿ., ಹಂಪಿ, ೧೯೯೮.

೨. ಡಾ. ಎಂ. ಕೊಟ್ರೇಶ್, **ಹರಪನಹಳ್ಳಿ ತಾಲ್ಲೂಕಿನ ರಕ್ಷಣಾ ಸ್ಮಾರಕಗಳು**, ಕ.ವಿ.ವಿ., ಹಂಪಿ–೨೦೧೦.

೩. ಬಸವರಾಜ ಡಿ., **ದಂಡಿ ದುರುಗಮ್ಮನ ಸಾಂಸ್ಕೃತಿಕ ಅಧ್ಯಯನ**, (ಎಂ.ಫಿಲ್, ಅಪ್ರಕಟಿತ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೪. ಗಿರಿಜ ಟಿ., **ದಾವಣಗೆರೆ ಇದು ನಮ್ಮ ಜಿಲ್ಲೆ**, ನಿಹಾರಿಕಾ ಪ್ರಕಾಶನ, ದಾವಣಗೆರೆ, ೨೦೦೧.

೫. ಕುಂ.ಬಾ. ಸದಾಶಿವಪ್ಪ, **ಹರಪನಹಳ್ಳಿ ತಾಲ್ಲೂಕು ಪರಿಚಯ**, ಮಾಲತೇಶ ಪ್ರಕಾಶನ, ಹರಪನಹಳ್ಳಿ, ೨೦೦೮.

೬. ಕುಂ.ಬಾ. ಸದಾಶಿವಪ್ಪ, **ಹರಪನಹಳ್ಳಿ ಪಾಳೆಗಾರರು**, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೬.

೭. ಡಾ. ಜೆ.ಎಂ. ನಾಗಯ್ಯ, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ**, ಲೋಹಿಯಾ ಪ್ರಕಾಶನ, ಬಳ್ಳಾರಿ.



# ಕೋಶಿಗರ್ ಎಟ್ಟಿತ್ತರ್ – ಪ್ರಾಚೀನ ವೀರ ಪಡೆ

ಡಾ. ಎನ್.ಆರ್. ಲಲಿತಾಂಬ*

ಕ್ರಿ.ಶ. ೮ನೆಯ ಶತಮಾನಕ್ಕೆ ಸೇರಿದ ತಲಕಾಡು ಗಂಗರ ೊದಲನೆಯ ಶಿವಮಾರ (ಕ್ರಿ.ಶ. ೬೭೯–೭೨೫) ಹಾಗೂ ಗ ಶ್ರೀಪುರುಷನ (ಕ್ರಿ.ಶ. ೭೨೬–೭೮೮) ಕಾಲದ ತಗರೆನಾಡ ಳ್ಳ ಗ್ರಾಮಕ್ಕೆ ಸೇರಿದ ಶಾಸನಗಳಲ್ಲಿ[೧] ಕೋಶಿಗರ್ ಎಟ್ಟಿತ್ತರ್ ಬ ವೀರರ ಉಲ್ಲೇಖ ಕಂಡು ಬಂದಿದೆ. ಇವರು ತೊಳ್ಳದ ತ್ಯಾಲಯಕ್ಕೆ ಬಿಟ್ಟ ದಾನದ ಜವಾಬ್ದಾರರೆಂದೂ ಕ್ಷಿಗಳೆಂದೂ ಹೇಳಿವೆ. ಈ ಮೂರೂ ಶಾಸನಗಳಲ್ಲಿ ಈ ರರನ್ನು ತೊಳ್ಳರ್, ತೊಳಲ ಕಾಶಿಕರ್, ತೊಳರೊಡೆಒರ್, ಳ್ಳರಾ ಕೋಶಿಕರ್ ಎಂದು ಕರೆಯಲಾಗಿದೆ. ಇವರನ್ನು ಖಾಡ್ಯರೆಂದೂ, ಎಟ್ಟಿತ್ತರು ಪ್ರಧಾನರೆಂದೂ ಕರೆದಿರುವು ಲ್ಲದೆ ಇವರನ್ನು 'ನರಶಾಸನ'ರೆಂದು ಪ್ರಸಿದ್ಧರಾದವರೆಂದು ಳಿರುವುದು ಕುತೂಹಲಕರವಾಗಿದೆ.

ಈ ಕೋಶಿಗರು ಯಾರು? ಎಟ್ಟಿತ್ತರ್ ಎಂಬುದು ನನ್ನು ಸೂಚಿಸುತ್ತದೆ? ನರಶಾಸನರೆಂದು ಪ್ರಸಿದ್ಧರಾಗಲು ರಣವೇನು? ತೊಳ್ಳ, ತೊಟಿಲ ಎಂಬ ಉಪನಾಮ ಇವರ ಸರಿನೊಂದಿಗೆ ಸೇರಲು ಕಾರಣವೇನು? ಎಂಬ ಪ್ರಶ್ನೆಗಳು ೊದಲ ಹಂತದಲ್ಲಿ ಏಳುತ್ತವೆ.

ಎರಡನೆಯ ಹಂತದಲ್ಲಿ ತಮಿಳು ಸಂಘಂ ಸಾಹಿತ್ಯದಲ್ಲಿ ತ್ತೆ ಮತ್ತೆ ಉಲ್ಲೇಖಗೊಂಡಿರುವ ಸತ್ಯಸಂಧರೂ ವೀರರೂ ಂದು ಪ್ರಸಿದ್ಧರಾಗಿದ್ದ ತುಳುನಾಡ ಕೋಶರರಿಗೂ ಈ ೋಶಿಗರಿಗೂ ಸಂಬಂಧವಿದೆಯೇ ಎಂಬ ಅನುಮಾನ ಳುತ್ತದೆ. ಅಲ್ಲದೆ, ಮುಂದೆ ಕರ್ನಾಟಕದ ಕ್ಷಾತ್ರಯುಗದಲ್ಲಿ ಳಿಲಸಂದಕುಲದವರೆಂದು ಪ್ರಸಿದ್ಧರಾದ ವೀರರೂ ತೊಟಿಳ ೋಶಿಗರ್ ಒಂದೇ ಮೂಲದವರೇ ಎಂಬ ಅನುಮಾನಗಳು ಳುತ್ತವೆ.

ಈ ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ಕಂಡುಕೊಳ್ಳುವ ಯತ್ನಮಾಡುತ್ತ ಈ ಕೋಶಿಗರ್ ಎಟ್ಟಿತ್ತರ್ ಅಂತ್ಯಂತ ್ರಾಚೀನ ವೀರಪಡೆಯಾಗಿದ್ದು, ಕರ್ನಾಟಕದ ವೀರ ಪರಂಪರೆಗೆ ುತ್ತೊಂದು ಹೆಮ್ಮೆಯ ಗರಿ ಎಂಬುದನ್ನು ತಿಳಿಸಲು ಸಂತೋಷ ಾಗುತ್ತದೆ.

**ಕೋಶಿಗರು–ಕೋಚಾರ : ಒಂದು ಜನಾಂಗ**

ಈ ಕೋಶಿಗರು ಯಾರು? ಎಂಬ ಪ್ರಶ್ನೆಯನ್ನು ಮೊದಲು ಪರಿಶೀಲಿಸಬಹುದು. ಸಂಗಂ ಸಾಹಿತ್ಯದ ಕಾಲದಲ್ಲಿ ಉಲ್ಲೇಖ ಗೊಂಡಿರುವ ಅನೇಕ ಜನಾಂಗಗಳಲ್ಲಿ ಕೋಶರರೆಂಬ ಜನಾಂಗವೂ ಒಂದು.[೨] ಕ್ರಿ.ಶ. ೯೫೫, ಆಗಸ್ಟ್ ೧೨ ಸೋಮವಾರಕ್ಕೆ ಸರಿಹೊಂದುವ ರಾಷ್ಟ್ರಕೂಟರ ೩ನೆಯ ಕೃಷ್ಣನ ಆಳ್ವಿಕೆಯ ನರೇಗಲ್ಲ ಶಾಸನವೊಂದರಲ್ಲಿ ತೋಯಿಮ್ಮ ನೆಂಬ ವೀರನ ತಂದೆಯ ಹೆಸರು ಕೋಚಾರರ ಕೋಟೆ ಯಮ್ಮ ಎಂದು ಉಲ್ಲೇಖಗೊಂಡಿದೆ.[೩] ಈ ಉಲ್ಲೇಖಗಳಲ್ಲಿಯ ಕೋಚರ್, ಕೋಚಾರ ಎಂಬುದು ಜನಾಂಗವಾಚಿಯಾಗಿದ್ದು, 'ಕೋಶರ್' ಎಂಬುದರ ಬದಲಾದ ರೂಪ ಎನ್ನಲು ಅಡ್ಡಿಯಿಲ್ಲ. (ವೆಂಕಟಶಾಮಿ>ಯಂಕಟಚಾಮಿ, ಶ್ಯಾಮಯ್ಯ>ಚಾಮಯ್ಯ, ಯೋಚನೆ>ಯೋಶ್ನೆ ಇಂತಹ ಶ>ಚ ಆಗಿರುವ ಉದಾಹರಣೆ ಗಳನ್ನು ಗಮನಿಸಬಹುದು). ದೇವಪಾಲನ ತಾಮ್ರ ಶಾಸನವು[೪] ಕಾಶ, ಹೂಣ, ಕುಲಿಕ, ಕರ್ನಾಟ ಇತ್ಯಾದಿ ಜನಾಂಗಗಳನ್ನು ಉಲ್ಲೇಖಿಸಿದೆ. ತಮಿಳುನಾಡಿನ ಸಂಘಂ ಸಾಹಿತ್ಯದ ಕೆಲವು ಪದ್ಯಗಳು ಕೋಶರರ ಬಗೆಗೆ, ಅವರ ಗುಣಲಕ್ಷಣಗಳು, ಬಹುಭಾಷಾಜ್ಞಾನ, ಆಯುಧ ಸಂಬಂಧಿ ವೃತ್ತಿಯನ್ನು, ಶೌರ್ಯ, ಪರಾಕ್ರಮಕ್ಕೆ, ಸತ್ಯಸಂಧತೆಗೆ ಹೆಸರಾಗಿದ್ದರೆಂಬುದನ್ನು ಸೂಚಿಸುತ್ತವೆ.

ಈ ಕೋಶರರನ್ನು ಕುರಿತು ತುಳುನಾಡಿಗೂ ಅವರಿಗೂ ಇರುವ ಸಂಬಂಧವನ್ನು ಕುರಿತು ಅನೇಕ ವಿದ್ವಾಂಸರು ಚರ್ಚಿಸಿ ದ್ದಾರೆ. ಶಿರೂರು ಶಿವರಾಮಶೆಟ್ಟಿಯವರು ಬಂಟರು ಕೋಶರರ ಮೂಲದವರೆಂಬುದನ್ನು ಹೇಳುತ್ತಾರೆ.[೫] ಕೆ.ವಿ. ರಮೇಶ್ ಅವರು 'A warrior groups which assisted many Southern Rulers in battles as mercenary troop[೬] ಎಂದು ಹೇಳುತ್ತಾ ತುಳುನಾಡಿನೊಂದಿಗೆ ಇವರ ಸಂಬಂಧ ವನ್ನು ಒಪ್ಪಿದ್ದಾರೆ. ಷ. ಶೆಟ್ಟರ್ ಅವರು ಕರ್ನಾಟಕದ ಕಾಸರ ಗೋಡಿಗೂ ಕೋಶರರಿಗೂ ಸಂಬಂಧವಿರಬಹುದೇ ಎಂಬ ಅನುಮಾನ ವ್ಯಕ್ತಪಡಿಸುತ್ತಾರೆ. ಅಲ್ಲದೆ, ತುಳಿಲಾಳ್ಗಳ ಯುದ್ಧ

* ನಂ. ೩೩೫, ವಸಿಷ್ಠ, ಸರಸ್ವತಿ ನಗರ, ವಿಜಯನಗರ, ಬೆಂಗಳೂರು – ೫೬೦೦೪೦.

ಕ್ರಮಕ್ಕೂ ಕೋಶರರು ಹಾಕಿಕೊಟ್ಟ ಕದನ ಕ್ರಮಕ್ಕೂ ಹೋಲಿಕೆಯನ್ನು ಗುರುತಿಸುತ್ತಾರೆ.[೬]

ಈ ವಿದ್ವಾಂಸರ ವಿಚಾರಗಳು ಸಂಘಂ ಸಾಹಿತ್ಯದ ಕವಿತೆಗಳಲ್ಲಿನ ಉಲ್ಲೇಖಗಳನ್ನು ಆಧರಿಸಿ ಬಂದವು. ಆದರೆ ಇದುವರೆಗೂ ಕರ್ನಾಟಕದ ಯಾವುದೇ ಶಾಸನದಲ್ಲಾಗಲೀ, ಕಾವ್ಯಗಳಲ್ಲಾಗಲೀ ಕೋಶರರ ಉಲ್ಲೇಖಗಳು ದೊರಕಿರಲಿಲ್ಲ. ಈ ಸಂಬಂಧದಲ್ಲಿ ತುಳುನಾಡಿನ, ಕೊಡಗಿನ, ಮಲೆನಾಡಿನ ಪ್ರಾಚೀನ ಶಾಸನಗಳಲ್ಲಿ ಕೋಶರರ ಉಲ್ಲೇಖಕ್ಕಾಗಿ ಹುಡುಕಾಡುತ್ತಿದ್ದಾಗ ಕಣ್ಣಿಗೆ ಬಿದ್ದ ಈ ತೊಳ್ಳ ಗ್ರಾಮದ ಜೈನಬಸದಿಯ ಶಾಸನಗಳು[೮] ಅತ್ಯಂತ ಮಹತ್ತ್ವಪೂರ್ಣವಾದವು. ಯಾಕೆಂದರೆ, ಈ ಶಾಸನಗಳು ಪ್ರಾಚೀನ ಪ್ರಸಿದ್ಧ ವೀರ ಕೋಶರರ ಬಗೆಗಿನ ಎಲ್ಲ ವಿದ್ವಾಂಸರ ಊಹೆ, ಪ್ರಶ್ನೆಗಳಿಗೆ ಆಧಾರ ಒದಗಿಸುವ ಅತ್ಯಮೂಲ್ಯವಾದ, ಕರ್ನಾಟಕದಲ್ಲಿ ದೊರೆತಿರುವ ಮೊತ್ತ ಮೊದಲ ಪ್ರಾಚೀನ ಉಲ್ಲೇಖಗಳು ಇವಾಗಿವೆ. ಈ ಶಾಸನಗಳಲ್ಲಿ ನರಸಿಂಹರಾಜಪುರ ತಾಲ್ಲೂಕಿನ ೫೧ನೆಯ ಸಂಖ್ಯೆಯ ಶಾಸನದ ಸಂಸ್ಕೃತ ಭಾಗದಲ್ಲಿ ಗಂಗ ಶ್ರೀಪುರುಷ ಮಹಾರಾಜ ಅನುಕೂಲವರ್ತಿಗಳಲ್ಲಿ ಅಗ್ರಗಣ್ಯನಾದ ಗಂಗರಾಜನೆಂದು ಅಭಿಷಿಕ್ತನಾದ ಪಸಿಂಡಿಗಜ್ಞಾನ್ವಯದ ನಾಗವರ್ಮನೆಂಬುವವನು, ಕದಂಬ ಕುಲ ಭಾಸ್ಕರನಾದ ಶ್ರೀ ತುಳುಅಡಿ ನಾಮಧೇಯವುಳ್ಳ ತನ್ನ ಮೈದುನನೊಂದಿಗೆ ತೊಳ್ಳಗ್ರಾಮದ ಚೈತ್ಯಾಲಯಕ್ಕೆ ಮೂಳವಳ್ಳಿ ಹೆಸರಿನ ಗ್ರಾಮವನ್ನು ದಾನ ಮಾಡಿದುದನ್ನು ಹೇಳಿದೆ.[೯]

**ತೊಳಲಕೋಶಿಗರು, ತುಳಿಲಸಂದಕುಲದವರು, ಕೋಶರರು ಒಂದೇ ಮೂಲದವರು**

ಈ ತುಳು ಅಡಿ ಮತ್ತು ಆತನ ಭಾವ ಪಸಿಂನ್ಡಿಗಂಗ ನಾಗವರ್ಮನೊಂದಿಗೆ ಸೇರಿ, ಬಿಟ್ಟ ಈ ಜೈನ ದಾನಕ್ಕೆ ಈ ಕೋಶಿಗರ್ ಎಟ್ಟಿತ್ತರ್, ಸಾಕ್ಷಿ ಮತ್ತು ರಕ್ಷಕರೆಂದಿದೆ, ಶಾಸನದಲ್ಲಿ. "ಅದರ್ಕೆ ತೊಳ್ಳರಾ ಕೋಸಿಗರ್ ಎಟ್ಟಿತ್ತರ್ ಸಾನ್ದಾರುಂ ಸಾಕ್ಷಿಯುಂ ನರಸಾಸನಮಾಗೆ"[೧೦] "ಅದರಕೆ ಸಾಕ್ಷಿ ತೊಳಲ ಕಾಸಿಕರ್ಟ್ಟಿತರ್"[೧೧] ಎಂದು ಹೇಳಿವೆ ಅಲ್ಲದೆ ಇವರನ್ನು 'ತೊಳ್ಳರೊಡೆವೊರ್', 'ಸುಖಾಡ್ಯರ್', 'ಎಟ್ಟಿತ್ತರ್‌ಪ್ರಧಾನರ್', 'ನರಶಾಸನಂಗಳ್' ಎಂದು ಪ್ರಸಿದ್ಧರಾದವರೆಂದು ಹೊಗಳಿವೆ.[೧೨] ಈ ವಿವರಗಳನ್ನು ಗಮನಿಸಿದಾಗ ಇವರು ನೈತಿಕಮೌಲ್ಯಗಳನ್ನು, ಸಾಮಾಜಿಕ ನೀತಿ-ನಿಯಮ ನಡಾವಳಿಗಳನ್ನು ನಿಯಂತ್ರಿಸಬಲ್ಲವರಾಗಿದ್ದು, ಆ ಮೌಲ್ಯಗಳನ್ನು ರಕ್ತಗತಮಾಡಿಕೊಂಡಿದ್ದ ಗ್ರಾಮ ಪ್ರಧಾನರಾಗಿದ್ದರೆಂದು ತೋರುತ್ತದೆ. ತೊಳ್ಳ, ತೊಳಲು ಎಂಬ ಗ್ರಾಮ ನಾಮವು ಈ ಕೋಶಿಗರ ಉಪನಾಮದ ಕಾರಣದಿಂದಲೇ ಬಂದಿದೆ. 'ತೂಳು' ಎಂಬ ಪದಕ್ಕೆ ದಾಳಿ ಮಾಡು, ಹೋರಾಡು, ಆಕ್ರಮಿಸು ಏರಿಹೋಗು ಎಂಬ ಅರ್ಥಗಳಿದ್ದು, ಇದು ಕೋಶಿಗರ ಹೋರಾಟದ ಬದುಕನ್ನೇ ಸೂಚಿಸುತ್ತದೆ. ತುಳುಪದದ ಮೂಲಹುಡುಕುತ್ತ ಬಿ.ಎ. ಸಾಲತೊರೆಯವರು 'ತೂಲು" ಪದ ಸೂಚಿಸಿದ್ದಾರೆ. ಹೋರಾಟಗಳಿಗೆ ಪೌರುಷಕ್ಕೆ ಪ್ರಸಿದ್ಧರಾಗಿದ್ದ ಈ ಕೋಶಿಗರು ನೆಲೆಸಿದ್ದ ಕಾರಣದಿಂದಲೇ ಆ ಗ್ರಾಮಕ್ಕೆ ಆ ಹೆಸರು ಬಂದಿದೆ ಎಂದು ಹೇಳಬಹುದು.

ಆನಂತರದ ಕರ್ನಾಟಕದ ಕ್ಷಾತ್ರಯುಗದಲ್ಲಿ ಮಲೆನಾಡಿನ ಈ ಪ್ರದೇಶದ ಶಾಸನಗಳಲ್ಲಿ ಕಾಣಿಸಿಕೊಂಡಿರುವ ತುಳಿಲಸಂದಕುಲದವರೆಂದು ಪ್ರಸಿದ್ಧರಾದ ವೀರರು ಈ ತೊಳಲಗ್ರಾಮದ ಈ ಕೋಶಿಗರು ಒಂದೇ ಮೂಲದವರೆಂದು ಹೇಳಬಹುದು. (ತೊಳ್ಳರ ಕೋಸಿಗರ್ ಸಾನ್ದಾರುಂ, ತೊಳಲ ಸಂದಕುಲ, ತುಳಿಲಾಳ್ಗಲ್ ಎಂಬುದನ್ನು ಹೋಲಿಸಿ) ತೊಟಿಲ್ ತಮಿಳು ಮಲೆಯಾಳದಲ್ಲಿ ಇಂದಿಗೂ ಬಳಕೆಯಾಗುತ್ತಿದೆ. ತುಳಿಲಾಳ್ಗಳು ಕಲಿತನದ, ಅಭಿಮಾನದ ಧರ್ಮ, ತ್ಯಾಗ, ಸತ್ಯ, ಶೌಚ ಎಂಬ ಆರು ಗುಣಗಳನ್ನು ರಕ್ತಗತ ಮಾಡಿಕೊಂಡು ವೀರ ಸಿದ್ಧಾಂತಿಗಳೆಂದು ಪ್ರಸಿದ್ಧರಾಗಿದ್ದರು. ಅಂತಹ ವೀರಗುಣಗಳೇ ಮೈವೆತ್ತಂತಿದ್ದ ಭೀಷ್ಮನು 'ವೀರಸಿದ್ಧಾಂತದ ಶಾಸನಂ ಬರೆದ ಪೊತ್ತಿಗೆಯಂತೆ ಶರಶಯ್ಯೆಯ ಮೇಲೆ ಕಾಣುತ್ತಿದ್ದ'ನೆಂದು ಪಂಪ ಹೇಳಿದ್ದಾನೆ. ಇಂತಹ ವೀರರ ಬದುಕೇ ಸಮಾಜಕ್ಕೆ ಆದರ್ಶದ ತೋರುಗಂಬಗಳಾಗಿ ಕಂಡಿದ್ದು ಅವರನ್ನು 'ನರಶಾಸನ' 'ವೀರಸಿದ್ಧಾಂತದ ಶಾಸನ' ಗಳೆಂದು ಕರೆಯಲು ಕಾರಣ. ಯಾವುದೇ ವಿಚಾರವನ್ನು ಅದು ಸತ್ಯವೆಂದು ತಿಳಿಸುವಾಗ "ಕೋಶರರಮಾತಿನಂತೆ ಅದು ಸತ್ಯ" "ಒಂದೇ ಮಾತಿನ ಕೋಶರ್ (ಒನ್ರು ಮೋಟಿ ಕೋಶರ್) ಎಂದು ಜನ ಹೇಳುತ್ತಿದ್ದರು. ಅದಕ್ಕೆ ಉದಾಹರಣೆಯಾಗಿ ಕವಯಿತ್ರಿ ಅವ್ವೆಯಾರ್ ಮಗಳ ಪ್ರೇಮ ಕಟು ಸತ್ಯವೆಂದು ಗೆಳತಿಗೆ ಹೇಳುವಾಗ "ಶಂಖವನೂದುತ ಮದ್ದಳೆ ಬಾರಿಸುತ ಹಳೆಯ ಆಲದ ಮರದಡಿ ನೆರೆದ ನಾಲ್ಕು ನೆಲೆಗಳ ಕೋಶರರ ನಲ್ನುಡಿಗಳಂತೆ ಅದು ಕಟು ಸತ್ಯ"ವೆಂದು ಹೇಳಿದ್ದಾಳೆ. ಕೋಶರರು ಈ ಸತ್ಯಸಂಧತೆಗಾಗಿ ಪ್ರಸಿದ್ಧರಾಗಿದ್ದರು. ಪ್ರಸ್ತುತ ಶಾಸನದ ಕೋಶಿಗರನ್ನು ಈ ಕಾರಣಕ್ಕಾಗಿಯೇ 'ನರಶಾಸನ'ರೆಂದು ಪ್ರಸಿದ್ಧರಾದವರು ಎಂದಿರುವುದು. ಅವರ ನಲ್ನುಡಿ, ಅಂದರೆ ಸತ್ಯವಾದ ಮಾತೆ ಶಾಸನ, ಅವರ ಬದುಕೇ ಶಾಸನ, ಬೇರೆ ಶಾಸನ ಬರೆಸಿ ನಿಯಮರೂಪಿಸುವ ಅಗತ್ಯವಿರಲಿಲ್ಲ. ಸತ್ಯವನ್ನು ಪರಿಪಾಲಿಸಿ ದೂರದೂರ ದೇಶದಲ್ಲಿ ಖ್ಯಾತಿ ಪಡೆದಂತಹವರು (ವಾಯ್ ಮೊಟಿ ನಿಲೆಯಿಯ ಶೇನ್ ಇಳಗುನಲ್ ಇಸೈವಳಂ ಕೆಟುಕೋಶರ್) ಹಾಗಾಗಿ ಅವರಿಗೆ ಈ ಬಿರುದು ಬಂದಿದೆ.

ಈ 'ಕೋಶಿಗರ್ ಎಟ್ಟಿತ್ತರ್ ಪ್ರಧಾನರು' ಕೇವಲ ಸತ್ಯಸಂಧ ರಶಾಸನ'ಗಳಷ್ಟೇ ಅಲ್ಲ ಹುಟ್ಟಾ ಹೋರಾಟಗಾರರು, ಟ್ಟಿತ್ತರ್ (೭೦) ಎಂಬುದು ಅವರ ಸಮುದಾಯವನ್ನು, ೀರಪಡೆಯ ವೀರರ ಸಂಖ್ಯೆಯನ್ನು ಸೂಚಿಸುವಂತಿದೆ ಈ ರೀತಿ ವೀರಪಡೆಗಳ ಹೆಸರಿನೊಂದಿಗೆ ಅವರ ಸಂಖ್ಯೆ ಯನ್ನು ಹೇಳುವುದು ಸಾಮಾನ್ಯ[೧೩]

ಸಂಘಂ ಸಾಹಿತ್ಯದ ಕವಿ ಕಲ್ಲಣಾರ್ (ಪುಱನಾನೂಱು. ೮೩) ಒಂದು ಪದ್ಯದಲ್ಲಿ 'ಜಯರಾಗಿ ಜಗಜಗಿಸಿ ಸಂದಣಿಸಿದ ೋಶರರಪಂಗಡ ರಣರಂಗವನ್ನು ಸೂರೆಗೊಳ್ಳುವರು'ಎಂದು ಉಲ್ಲೇಖಿಸಿದ್ದಾನೆ. ಇಲ್ಲಿ ಕವಿ ಕೋಶರರನ್ನು ಒಂದು ೋರಾಟದ ಪಂಗಡವಾಗಿ ಗುರುತಿಸಿದ್ದಾನೆ. ಹಲವು ಬಗೆಯ ಲದಳಗಳ ಕೋಶರರನ್ನು (ಅಹನಾನೂಱು ೧೧೩–) ಉಲ್ಲೇಖಿಸುತ್ತದೆ. ಮತ್ತೊಬ್ಬ ಕವಿ ಕಾವಿರಪ್ಪಟ್ಟಣತ್ತರ್ ಪುಱನಾನೂಱು, ೧೬೯) ಶೂಲವೀರ ಯುವಕೋಶರು ಶತ್ರು ಸಂಹರಿಸಲು ತೂರಿಯೆಸೆಯುವರು, ಆ ಅಸ್ತ್ರಗಳಾಘಾತ ಯಿಸುವ 'ಮುರುಕ್ಕು' (ಹಲಸಿನ) ಮರದ ಮಲ್ಲಕಂಬದಂತೆ ಹುಕಾಲ ಬಾಳಲಿ ನಿನ್ನ ಕೀರ್ತಿ ಪ್ರತಾಪ ವೈರಿಗಳ ಮುಂದೆಂದೂ ಕುಂದದಂತೆ....." ಎಂಬ ಪದ್ಯಭಾಗದಲ್ಲಿ ೋಶರ ಯುವಕರು ಮುರುಕ್ಕು ಮರದಿಂದ ತಯಾರಾದ ಟ್ಟಿಯಾದ ಮಲ್ಲಗಂಬಗಳನ್ನು ಬಳಸಿ, ಅದಕ್ಕೆ ಗುರಿಯಿಟ್ಟು ಲಗಳನ್ನೆಸೆದು ಅಭ್ಯಾಸ ಮಾಡುತ್ತಿದ್ದರು ಎಂಬುದು ತಿಳಿದು ರುತ್ತದೆ.

ಕವಿ ಒಡಮೋತಂಕಿಟಾರ್ (ಪುಱನಾನೂಱು, ೨೬೦) ರುಕಾಳಗದಲ್ಲಿ ಮಡಿದ ವೀರನೊಬ್ಬನ ಸಾವಿನ ಚಿತ್ರ ೀಡುತ್ತ, ಶತ್ರುಗಳು ಸುರಿಸಿದ ಸರಲುಮಳೆಯನು ದಾಟಿ ೋರಾಡಿ ಗೋವುಗಳನ್ನು ಮರಳಿಸಿ ಕಡೆಗೆ "ಛಲದಿಂದ ಂತ ಗಿರಿಗಂಬವೊಂದು ತೊಯ್ದಾಡಿ ಹೊಯ್ದಾಡಿ ನೆಲ ಚ್ಚಿದಂತೆ ಬಿದ್ದಿದೆ ಹೆಣ ಸರಲುಸೆರೆಯಲಿ" ಎನ್ನುತ್ತಾನೆ. ಸರಲುಸೆರೆ' ಎಂಬ ಸುಂದರ ರೂಪಕ ವೀರರ ಚಿತ್ರವನ್ನು ಣ್ಣಿಗೆ ಕಟ್ಟಿಸುವಂತಿದೆ. ಇಲ್ಲಿ ಹಲವಾರು ಸರಳುಗಳು ಚುಚ್ಚಿಕೊಂಡಿರುವ ಗುರಿಗಂಬದ ಚಿತ್ರಣ ಶೂಲವೀರ ೋಶಿಗರ ಯುವಕರು ಅಭ್ಯಾಸಕ್ಕೆ ಬಳಸುತ್ತಿದ್ದ ಮುರುಕ್ಕು ಮರದ ಮಲ್ಲಕಂಬವನ್ನು, ಸರಲಮಂಚದಲ್ಲಿ ನೆಲಮುಟ್ಟದೆ ಮಲಗಿದ್ದ ಭೀಷ್ಮನನ್ನು ನೆನಪಿಸುತ್ತದೆ.

ಕಪ್ಪು ಕಣ್ಣಿನ ಕೋಶರರ್ ಮುಖದಲ್ಲಿ ಕಬ್ಬಿಣದ ಆಯುಧ ಮುಷ್ಠಿ' ಏಟಿನ ಮುದ್ರೆ ಎದ್ದುಕಾಣುತ್ತಿತ್ತು. ಎಂಬ ವರ್ಣನೆ ಇದೆ. (ಇಫಿರುಂಬಿಬಿಡಂ ಪಡುತ್ ವಡುಉಡ್ಯೆ ಮುಹತ್ತರ್ ರುಂಗನ್ ಕೋಶರ"– ಅಹನಾನೂಱು–೯೦) ಮಲ್ಲಗಂಬ ಮತ್ತು ಲೋಹದ ವಜ್ರ ಮುಷ್ಠಿಗಳನ್ನು ಜಟ್ಟಿಗಳು ವಿಶೇಷವಾಗಿ ಬಳಸುವುದು ನಮಗೆ ತಿಳಿದುಬರುತ್ತದೆ. ಅಂದರೆ ಈ ಕೋಶರರು ಜಟ್ಟಿಕಾಳಗದಲ್ಲೂ ಪ್ರಸಿದ್ಧರಾಗಿದ್ದರೆನ್ನಬಹುದು.

ಪ್ರಸ್ತುತ ತೊಳ್ಳಗ್ರಾಮದ ಶಾಸನಗಳು ಕೋಶರರಿಗೆ 'ತೊಳ್ಳರೊಡೆವರ್', 'ಸುಖಾಡ್ಯರ್', 'ಪ್ರಧಾನರ್' ಎಂಬ ವಿಶೇಷಣಗಳನ್ನು ಹೇಳಿದೆ. ಇವರು ಊರೊಡೆಯರಷ್ಟೇ ಅಲ್ಲ ಸುಖಾಡ್ಯರ್ ಅಂದರೆ ಸುಖಪುರುಷರು ಸಿರಿವಂತರು ಎಂಬುದು ಅವರ ಆರ್ಥಿಕ ಸ್ಥಿತಿಗತಿಯಮೇಲೆ ಬೆಳಕು ಚೆಲ್ಲುತ್ತದೆ. ಪ್ರಾಚೀನ ತುಳುನಾಡ ಕೋಶರರು ಸಿರಿವಂತರು ಸುಖಪುರುಷರು, ಅಲಂಕಾರ ಪ್ರಿಯರೂ, ರಸಿಕರೂ ಆಗಿದ್ದ ರೆಂಬುದು ಅವರ ಉಲ್ಲೇಖಗಳಿಂದ ತಿಳಿದು ಬರುತ್ತದೆ. (ಪುಱನಾನೂಱು ಕೃತಿಯ ೩೯೬, ೭ನೇ ಸಾಲು, ಅಗನಾನೂಱಿನ ೨೧೬–೧೧;೧೫–೨ ಪದ್ಯಗಳಲ್ಲಿ ಕೋಶರರು ಪುಷ್ಪರಸ (ಜೇನು) ದಿಂದ ಮಾಡಿದ ಕಳ್ಳನ್ನು ಕುಡಿದು ಆನಂದಿಸುತ್ತಿದ್ದರು. ಮುಳ್ಳೆ(ಮೊಲ್ಲೆ) ಹೂಮಾಲೆ ಯನ್ನು ಮುಡಿದು ಕ್ರೀಡಿಸುತ್ತಿದ್ದರು, ಪೆರುಂಪೊನ್ ಅಂದರೆ ದೊಡ್ಡ ದೊಡ್ಡ ಸುವರ್ಣಾಭರಣಗಳಿಂದ ಅಲಂಕರಿಸಿ ಕೊಳ್ಳುವ ಕೋಶರರೆಂದು ಅವರನ್ನು ಗುರುತಿಸಿವೆ. (ಪೆರುಂಪೊಣ್ ಚೆಮ್ಮಕೋರ್ಶರ್...... ತುಳುನಾಡು – ಮಾಮೂಲಣಾರ್) ಇವರನ್ನು ನಾಲ್ಮೊಳಿಕೋಶರರೆಂದು ಅಂದರೆ ನಾಲ್ಕು ನುಡಿ (ಭಾಷೆ)ಗಳನ್ನು ಬಲ್ಲವರು ಆಗಿದ್ದರೆಂದು ಮಧುರೈಕ್ಕಾಂಚಿ ಕೃತಿಯಲ್ಲಿ ಹೇಳಿದೆ.[೧೪]

ಒಟ್ಟಿನಲ್ಲಿ ಇದುವರೆಗೆ ಪ್ರಾಚೀನ ತುಳುನಾಡ ಕೋಶರ ವೀರ ಜನಾಂಗದ ಬಗೆಗೆ ಚರ್ಚಿಸಿರುವ ವಿದ್ವಾಂಸರು ಸಂಘಂ ಸಾಹಿತ್ಯದ ಉಲ್ಲೇಖಗಳನ್ನೇ ಆಧರಿಸಿದ್ದರು. ಆದರೆ ಕರ್ನಾಟಕದ ಕಾವ್ಯಗಳಲ್ಲಾಗಲೀ ಶಾಸನಗಳಲ್ಲಾಗಲೀ ಉಲ್ಲೇಖ ಗಳು ದೊರೆಯದೆ ಕರ್ನಾಟಕದೊಂದಿಗಿನ ಕೋಶರರ ಕೊಂಡಿ ಅಸ್ಪಷ್ಟವಾಗಿತ್ತು. ಈ ತೊಳ್ಳಗ್ರಾಮದ ಶಾಸನಗಳ ಉಲ್ಲೇಖಗಳು ಕೋಶರರಿಗೂ ತುಳುನಾಡಿನ ಅರಸರಾಳುತ್ತಿದ್ದ ತಗರೆನಾಡಿನ ಪ್ರದೇಶ (ಈಗಿನ ಬೇಲೂರು, ಚಿಕ್ಕಮಗಳೂರು, ಕೊಪ್ಪ) ಕ್ಕೂ ಇಲ್ಲಿನ ಅರಸರೊಂದಿಗಿನ ಅವರ ಒಡನಾಟ, ಅವರ ತೊಳ್ಳ ಅಥವಾ ತೊಟಲು ಗ್ರಾಮದಲ್ಲಿನ ಅವರ ನೆಲೆಯನ್ನು ಕುರಿತು ತಿಳಿಸಿಕೊಡುತ್ತದೆ. ಜೈನ ಧರ್ಮದ ದಾನ ರಕ್ಷಣೆ ಮಾಡುತ್ತಿದ್ದ ವಿಚಾರ, ಅವರ ವೀರ ಸಿದ್ಧಾಂತವನ್ನಾಧರಿಸಿದ ಜೀವನಕ್ರಮ, ವೈಭವಗಳ ವಿಚಾರಗಳನ್ನು, ಅತ್ಯಂತ ಸಂಕ್ಷಿಪ್ತ ವಾಗಿದ್ದರೂ ಸ್ಫುಟವಾಗಿ ಒಂದೊಂದೇ ವಿಶೇಷಣಗಳಿಂದ ಈ ಶಾಸನಗಳು ಬಿಚ್ಚಿಟ್ಟಿವೆ.

ತುಳಲಕೋಶಿಗರಿಗೂ ತುಟಿಲಸಂದಕುಲದವರಿಗೂ ಇರುವ ಜೀವನ ಕ್ರಮದ ಸಾಮ್ಯತೆ ಹೋರಾಟದ ಬದುಕು ಒಂದೇ ಎಂಬುದು ತಿಳಿದು ಬಂದಿದೆ.

ಈ ಎಲ್ಲಾ ಕಾರಣಗಳಿಂದ ನರಸಿಂಹರಾಜಪುರ ಸಿಂಹಣ ಗದ್ದೆಯ ಜೈನ ಮಠದಲ್ಲಿ ದೊರೆತಿರುವ ತೊಳಲಗ್ರಾಮದ ಜೈನ ದಾನ ತಾಮ್ರಪಟಗಳು ಹಾಗೂ ನರೇಗಲ್ಲಿನ ಕೋಚಾರರ ಕೋಟೆಯಮ್ಮನ ಮಗ ತೋಯಿಮ್ಮನ ಕ್ರಿ.ಶ. ೮ ಮತ್ತು ೯ ನೆಯ ಶತಮಾನದ ಶಾಸನಗಳು ಕರ್ನಾಟಕದಲ್ಲಿ ದೊರಕಿರುವ ಕೋಶರರ ಮೊಟ್ಟ ಮೊದಲ ದಾಖಲೆಗಳಾಗಿವೆ. ಹುಡುಕಿದರೆ ಮತ್ತಷ್ಟು ಶಾಸನಗಳಲ್ಲಿ ಇವರ ಉಲ್ಲೇಖ ದೊರಕುವ ಸಾಧ್ಯತೆಯಿದೆ.[೧೫]

[ಈ ಲೇಖನದಲ್ಲಿನ ಕೆಲವು ವಿವರಗಳನ್ನು ಸಂಶೋಧಕರಾದ ಎಸ್. ಕಾರ್ತಿಕ್ ಅವರು ಪರಿಷ್ಕರಿಸಿಕೊಟ್ಟಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು.]

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಎಪಿಗ್ರಾಫಿಯ ಕರ್ನಾಟಕ** (ಪರಿಷ್ಕೃತ, ಚಿಕ್ಕಮಗಳೂರು ಜಿಲ್ಲೆ), ಸಂಪುಟ ೧೨. ನರಸಿಂಹರಾಜಪುರ ಶಾಸನ ಸಂಖ್ಯೆ –೫,೬,೭. ಕ್ರಿ.ಶ. ೮ನೆಯ ಶತಮಾನ.

೨. **ತಮಿಳ್ ಕಲ್ವೆಟ್ಟು ಚೊಲ್ಲಗರಾದಿಯಲ್ಲಿ** (ಪುಟ ೨೧೮) "ಕೋಚರ್; ಒರು ಇಣಂ ಕ್ರಿ.ಶ. ೭೦೦. ಕೋಸರು, ಮುಳವರುಂ, ಒಡಮರು ತಂಡತ್ತೋರು" ಎಂಬ ಉಲ್ಲೇಖವಿದೆ.

೩. *ಹಾನಗಲ್ ತಾಲೂಕಿನ ಕೆಲವು ರಾಷ್ಟ್ರಕೂಟ ಶಾಸನಗಳು*, ಹನುಮಾಕ್ಷಿ ಗೋಗಿ, **ಇತಿಹಾಸ ದರ್ಶನ**, ಸಂಪುಟ–೧೪, ೧೯೯೯, ಪುಟ ೪೫–೪೬. [ಇದರಲ್ಲಿ ಪ್ರಕಟವಾಗಿರುವ ಹಾವೇರಿ ಜಿಲ್ಲೆ, ಹಾನಗಲ್ ತಾಲ್ಲೂಕಿನ ನರೇಗಲ್ಲು ಶಾಸನ] ಪ್ರಕೃತ ವಿವೇಚನೆಗೆ ಅಗತ್ಯವಾದ ಶಾಸನ ಪಾಠವಿಂತಿದೆ.

**ಎರಡನೆಯ ಸ್ತರ :**

೬ [ಸಂವ*]ತ್ಸರ ಶತಂಗಳೆಣ್ಬ ನೂ(ಱ*)ಟ್ವತ್ತ ಏಟಿ

೭ ರಾಕ್ಷಸ ಸಂವತ್ಸರದ ಶ್ರಾವಣದ ಪುಣ್ಣಮೆಯು ಆದಿತ್ಯವಾರ

೮ ನರೆಯಂಗಲ್ಲ ಕೋಚಾರರ ಕೋಟೆಯಮ್ಮನ ಮಗ ತೋಯಿಮ್ಮನಲ್ಲಿ

೯ ತು[ಋ*]ಪರಿಯೆ ಕಾದು ಸತ್ತು ಸ್ವರ್ಗ್ಗಲೋಕಪ್ರಾ*]ಪ್ತನಾದಂ

೪. Munagir Plates of Devapaladeva-(Ed) L.D.Barnett, *Epigraphia Indica*, Volume-18, ಪುಟ ೩೦೪.

೫. **ಬಂಟರ ಮೂಲ ಒಂದು ಅಧ್ಯಯನ,** ಪ್ರಕಟನೆ : ಬಂಟರ ಯಾನೆ ನಾಡವರ ಸಂಘ, ಮಂಗಳೂರು–೧೯೯೫.

೬. **ಎ ಹಿಸ್ಟರಿ ಆಫ್ ಸೌತ್ ಕೆನರಾ,** ಕೆ.ವಿ .ರಮೇಶ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೧೯೭೦, ಪುಟ ೮–೩೪.

೭. **ಶಂಗಂ ತಮಿಳಗಂ ಮತ್ತು ಕನ್ನಡ ನಾಡು ನುಡಿ,** ಅಭಿನವ ಪ್ರಕಾಶನ, ಬೆಂಗಳೂರು–೨೦೧೦. ಪುಟ ೧೭೭.

೮. **ಎಪಿಗ್ರಾಫಿಯ ಕರ್ನಾಟಕ** (ಪರಿಷ್ಕೃತ, ಚಿಕ್ಕಮಗಳೂರು ಜಿಲ್ಲೆ), ಸಂಪುಟ–೧೨. ನರಸಿಂಹರಾಜಪುರ, ಶಾ.ಸಂ. ೫.೬.೭ ಕ್ರಿ.ಶ. ಸು. ೮ ನೆಯ ಶತಮಾನ.

೯. ಇಲ್ಲಿ ಪಸಿಂಡಿ ಗಂಗ ಕುಲಯಾವುದು ಎಂಬ ಕುತೂಹಲ ಕೆರಳಿಸುತ್ತದೆ. ಈ ಗಂಗ ಕುಲಕ್ಕೂ ಕದಂಬ ಕುಲಕ್ಕೂ ಇದ್ದ ವೈವಾಹಿಕ ಸಂಬಂಧವನ್ನು ಸೂಚಿಸುತ್ತಿದೆ. 'ತುಳುಅಡಿ' ಎಂಬ ಹೆಸರೂ ವಿಶೇಷವಾಗಿದೆ. ಹಲ್ಮಿಡಿ ಶಾಸನದ ಮೂಳವಳ್ಳಿಯನ್ನು ವಿಜಅರಸನಿಗೆ ನೀಡಿದ್ದು ತಿಳಿದ ವಿಷಯವೇ. ಪ್ರಸ್ತುತ ಶಾಸನದಲ್ಲೂ ಮಳವಳ್ಳಿಯನ್ನು ದಾನ ನೀಡಲಾಗಿದೆ. ಈ ಗ್ರಾಮ ಅಳಕದಂಬರು ಆಳುತ್ತಿದ್ದ ಪ್ರದೇಶವಾಗಿದ್ದು, ಕ್ರಿ. ಶ. ೪೨೫ರ ಹೊತ್ತಿಗಾಗಲೇ ಅವರ ಅಧೀನದಲ್ಲಿತ್ತು. ತುಳು ಅಡಿಯನ್ನು ಕದಂಬ ಕುಲ ಭಾಸ್ಕರನೆಂದಿರುವುದರಿಂದ ಅವನು ತುಳು (ಆಳುಪ) ಕದಂಬವಂಶಗಳ ವೈವಾಹಿಕ ಸಂಬಂಧದ ಸಂತಾನ ಎಂಬ ಊಹೆಗೆ ಅವಕಾಶವಿದೆ.

೧೦. **ಎಪಿಗ್ರಾಫಿಯ ಕರ್ನಾಟಕ** (ಪರಿಷ್ಕೃತ, ಚಿಕ್ಕಮಗಳೂರು ಜಿಲ್ಲೆ), ಸಂಪುಟ–೧೨. ನರಸಿಂಹರಾಜಪುರ ಶಾ.ಸಂಖ್ಯೆ. ೬.

೧೧. ಎ.ಕ. ಅದೇ, ಶಾಸನ ಸಂಖ್ಯೆ ೭.

೧೨. ಎ.ಕ. ಅದೇ, ಶಾಸನ. ಸಂಖ್ಯೆ ೫.

೧೩. ಎಕ್ಕಟಗವೀರ ಪಡೆ, ಎನ್.ಆರ್. ಲಲಿತಾಂಬ, **ಇತಿಹಾಸ ದರ್ಶನ**, ೨೫, ೨೦೧೦, ಪುಟ ೨೬೩–೨೬೭.

೧೪. *History Of The Tamils From The Earliest Times To 600 A.D*- P. T Srinivas Iyengar, Asian Educational Services-1929, ಪುಟ ೫೨೬.

೧೫. ಈ ಪ್ರಾಚೀನ ಕೋಶರ ವೀರಪಡೆ ಹಾಗೂ ಹೊಯ್ಸಳರ ಕಾಲದ ಭೇರುಂಡದ ಮೊತ್ತದ ಕೂಸರ ವೀರಪಡೆಯ ನಡುವೆ ಅನೇಕ ಸಾಮ್ಯತೆಗಳು ಕಂಡುಬರುತ್ತಿದ್ದು ಕೋಶಿಗರೇ ಕೂಸರಾಗಿರಬಹುದೆಂಬ ನನ್ನ ಊಹೆಗೆ ಇತ್ತೀಚೆಗೆ ಪ್ರಕಟವಾಗಿರುವ ಮಂಡ್ಯ ಜಿಲ್ಲೆ, ಕೃಷ್ಣರಾಜಪೇಟೆ ತಾಲ್ಲೂಕು ಸೀಳನೆರೆ ಗ್ರಾಮದ ಕ್ರಿ.ಶ. ೧೨೧೫, ಅಕ್ಟೋಬರ್–೫, ಸೋಮವಾರದ ತೇದಿಯುಳ್ಳ ಶಾಸನದಲ್ಲಿ {ಶಿವಶೋಧ–ಎಚ್.ಎಂ. ನಾಗರಾಜರಾವ್, ರಚನಾ ಪ್ರಕಾಶನ, ಮೈಸೂರು–೨೦೦೮, ಪುಟ ೩೫೪–೩೫೫} ತುರುಗಾಳಗದಲ್ಲಿ ಮಡಿದ ಕೊಸಿಗ ಎಂಬ ಪೂರ್ವ ನಾಮವುಳ್ಳ ವೀರನೊಬ್ಬನ ಉಲ್ಲೇಖವು ಪುಷ್ಟಿ ನೀಡುತ್ತದೆ.




# ಪಂಚಿಕೇಶ್ವರ ಒಂದು ಅರ್ಥಗ್ರಹಿಕೆ : ಮರು ಚಿಂತನೆ

**ಆರ್. ವೆಂಕಟೇಶಮೂರ್ತಿ***

**ಮಂ**ಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಶಾಸನಗಳನ್ನು ಪುನರ್ ಪರಿಶೀಲನೆಗೆ ಒಳಪಡಿಸಿದ ಸಂದರ್ಭದಲ್ಲಿ ಇದೇ ತಾಲ್ಲೂಕಿಗೆ ಸೇರಿದ ಬೆಳ್ಳೂರಿನ ಕ್ರಿ.ಶ. ೧೨೭೧ರ ಶಾಸನದಲ್ಲಿ 'ಪಂಚಿಕೇಶ್ವರ' ಎಂಬ ಶಬ್ದ ಗಮನ ಸೆಳೆದು ಇನ್ನಿತರ ಶಾಸನಗಳನ್ನು ಪರಿಶೀಲಿಸಿದಾಗ ಈ ಪಂಚಿಕೇಶ್ವವು ವಿವಿಧ ಅರ್ಥಗಳಲ್ಲಿ ಪ್ರಯೋಗವಾಗಿರುವಂತೆ ಕಂಡು ಆಲೋಚನೆ ಮಾಡುವಂತಾಯಿತು.

ಶಿಕಾರಿಪುರ ತಾಲ್ಲೂಕಿನ ಸಾಲೂರು ಗ್ರಾಮದ ಶಾಸನವು ಈಗಾಗಲೇ ನೀಡಿರುವ ಕೊಡುಗೆಯ ಜೊತೆಗೆ ಒಂದು ಮತ್ತರಿನ ೧/೮ ಭಾಗವನ್ನು ನೀಡಿ 'ಮತ್ತಂ ಅಲ್ಲಿ ಪಡಿಯ ಪೊನ್ನಂ ನೆರಪಿ ತಮ್ಮ ಮನೆಯಿಂ ಪಂಚಾಕೇಶ್ವರಮಂ ಪೊರಮಡಿಸಿ, ಓದಿಸಿ, ಆ ಅರ್ಥಮಂ ಪೂಜಿಸುವರು ಎಂದು ದಾಖಲಿಸಿದೆ.

ಬೇಲೂರು ಶಾಸನವು 'ಹೊಯ್ಸಣೇಶ್ವರ ದೇವರ' ಪಂಚಕೇಶ್ವರದ ಮೋದಿದ ಬ್ರಾಹ್ಮಣರ ಪೂಜೆಗೋಸುಗ' ಆ ಮಹಾಜಂಗಳ ಕೈಯಲು ಧರ್ಮವಡಿಯಲು ಬೀಜವೊನ್ನಾಗಿ ಕೊಟ್ಟ ಗದ್ಯಾಣ ಮೂವತ್ತು ಎಂದು ದಾಖಲಿಸಿದೆ. ಮತ್ತೊಂದು ಶಾಸನವು ಹೇಮಳಂಬಿ ಸಂವತ್ಸರದ ಭಾದ್ರಪದ ಸು. ೧೪ ಆ। ಶಾಂತಿಗ್ರಾಮದ ಸಿಂಗಮಾರವನು 'ಪಂಚಿಕೇಶ್ವರ ದೇವರ' ಧರ್ಮಕ್ಕೆ ಕೊಟ್ಟ ಬೀಜವೊಂನ್ನುಗ, ಎಂದು ತಿಳಿಸುತ್ತದೆ.

'ಪಂಚಿಕೇಶ್ವರ ದೇವರ' ಧರ್ಮಖಧವಿಸೆಯ ಪೂಜೆಗೆ ಹೊಂಗೆ ವರಿಷಕ್ಕೆ ಹಣವೆರಡು ಮತ್ತು 'ಶ್ರೀ ಪಂಚಿಕೇಶ್ವರ ದೇವರದ'ದವಿಸೆಯ ಪೂಜೆಗೆ ಹೊಂಗೆ ವರಿಷಕ್ಕೆ ಹಣವೆರಡರ ಬಡ್ಡಿಯಲು ಬಿಟ್ಟ ಗದ್ಯಾಣ ಹತ್ತು ಎಂದೂ ದಾಖಲಿಸಿದೆ.

ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಶಾಸನವು ಮೂರನೇ ಹೊಯ್ಸಳ ನರಸಿಂಹನ ಕಾಲದಲ್ಲಿ ಮಹಾಪ್ರಧಾನಿಯಾಗಿದ್ದ ಪೆರುಮಾಳೆದೇವ ದಣ್ನಾಯಕನು ಶ್ರೀ ಮತ್ಸರ್ವ್ವನ ಮಸ್ಯದಗ್ರಹಾರ ಸ್ವಯಂಕೃತವಹ ವುದ್ಭವ ನರಸಿಂಹಪುರವಾದ ಬೆಳ್ಳೂರ ಶ್ರೀಮದಗ್ರಹಾರದಲಿ ತಾವು ಮಾಡಿಸುವ 'ಶ್ರೀ ಪಂಚಿಕೇಶ್ವರದಲಿ' ಯಿಂದ್ರ ಪರ್ವದ ಧರ್ಮಕೆಯುಂ, ಆರಣ ಪೂಜೆಗೆಯುಂ' ಗದ್ದೆ ಸಲಗೆ ಮೂವತ್ತಾಱನೂದಾನ ನೀಡಿದ್ದಾನೆ.

ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನವು 'ಆ ಗದ್ದೆ ಸ ೫ ಯೂ ಕ್ಷೇತ್ರವನು ಆ ಬಾಳುಗಚ್ಚಿನ ಆಯಿಂದ್ರ ಪರ್ವದ ಪಂಚಿಕೇಶ್ವರ ದೇವರ ಧರ್ಮಕ್ಕೆವೂ' ಎಂದು ದಾಖಲಿಸಿದೆ.

ಮೊದಲ ಹಂತದಲ್ಲಿ ಹೊಯ್ಸಣೇಶ್ವರ ದೇವರ ಪಂಚಿಕೇಶ್ವರದ ವೋದಿದ ಬ್ರಾಹ್ಮಣರ ಪೂಜೆಗೋಸುಗ; ಮತ್ತಂ ಅಲ್ಲಿ ಪಡಿಯ ಪೊನ್ನಂ ನೆರಪಿ ತಮ್ಮ ಮನೆಯಿಂ ಪಂಚಾಕೇಶ್ವರ ಮುವ್ ಪೊರಮಡಿಸಿ, ವೋದಿಸಿ ಆ ಅರ್ಥಮಂ ಪೂಜಿಸುವರು; ಮತ್ತು ದೇವರ ವೇದ ಪಾರಾಯಣ । ಪಂಚಕೇಶ್ವರ । ಶ್ರೀ ಪಂಚರಾತ್ರ । ಶಾಸ್ತ್ರ, ಮಂತ್ರ ಸಿದ್ಧಾಂತ ಮಾರ್ಗ ಸಕಲ ಭೋಗ ನಿತ್ಯಾರ್ಚನ ಎಂಬ ದಾಖಲೆಗಳಲ್ಲಿ 'ಮೋದಿದ, ಓದಿಸಿ ಎಂಬ ಪದಗಳೊಂದಿಗೆ ವೋದಿದ ಬ್ರಾಹ್ಮಣರ ಪೂಜೆಗೋಸುಗ ; ವೇದ, ಆಗಮಶಾಸ್ತ್ರ ಮಂತ್ರಗಳ ಸಾಲಿನಲ್ಲಿ ದಾಖಲಾಗಿರುವ ಪಂಚಕೇಶ್ವರ ; ಮತ್ತು ಅರ್ಥಮಂ ಪೂಜಿಸುವರ; ಎಂಬುದನ್ನು ಗಮನಿಸಿದಾಗ "ಪಂಚಕೇಶ್ವರ ಎಂಬುದು ಪೂಜಾ ವಿಧಿ, ವಿಧಾನಗಳ ವಿವರಣೆಯನ್ನೋ ಅಥವಾ ಮಂತ್ರಗಳನ್ನೋ ಒಳಗೊಂಡ ಗ್ರಂಥ ಅಥವಾ ತಾಡವೋಲೆ ಆಗಿರಬೇಕೆಂದು, ಮಂತ್ರಗಳನ್ನು ಹೇಳಿದ ಅಥವಾ ಗ್ರಂಥವನ್ನು ವೋದಿದ ಬ್ರಾಹ್ಮಣರಿಗೆ ದಾನ ನೀಡುವ ಧಾರ್ಮಿಕ ಸಂಪ್ರದಾಯದ ಆಚರಣೆಯಾಗಿತ್ತೆಂದು ಊಹಿಸಲಾಗಿತ್ತು.

ಎರಡನೇ ಹಂತದಲ್ಲಿ, ಡಬ್ಲ್ಯೂ. ರೀವ್ ಅವರ ಕನ್ನಡ–ಇಂಗ್ಲಿಷ್ ನಿಘಂಟುವಿನಲ್ಲಿ 'ಪಂಚ' ಎಂದರೆ 'ರೈತ' ಎಂಬ ಅರ್ಥವಿದ್ದು, ಶಾಸನಗಳಲ್ಲಿ ದಾಖಲಾಗಿರುವ (೧) ಶ್ರೀ ಪಂಚಿಕೇಶ್ವರ ಧರ್ಮಕೆ ಕೊಟ್ಟ ಬೀಜವೊಂನ್ನು, (೨) ಪಂಚಕೇಶ್ವರ ಧರ್ಮಖ ದವಿಸೆಯ ಪೂಜೆಗೆ ಬಿಟ್ಟ ಗದ್ಯಾಣ ನಾಲ್ಕು; ಮತ್ತು (೩) ಪಂಚಕೇಶ್ವರ ದೇವರದ ಧವಿಸೆಯ ಪೂಜೆಗೆ ಹೊಂಗೆ ವರಿಷಕ್ಕೆ ಹಣವೆರಡರ ಬಡ್ಡಿಯಲು;

* # ೨೭೧, 'ನವಸುಮ', ೨೩ನೇ ಮುಖ್ಯರಸ್ತೆ, ಮುನೇಶ್ವರ ಬ್ಲಾಕ್, ಗಿರಿನಗರ, 'ಟಿ' ಬ್ಲಾಕ್, ಬೆಂಗಳೂರು–೫೬೦೦೮೫.

ಎಂಬುದನ್ನು ಗಮನಿಸಿದಾಗ, ಬೀಜವೊಂನು ಮತ್ತು ಧವಿಸೆಯ ಪೂಜೆಗೆ ಎಂಬ ಪದಗಳು 'ಪಂಚಕೇಶ್ವರ'ಕ್ಕೆ ಹೊಂದಿಕೊಂಡಂತೆ ಬಳಕೆಯಾಗಿರುವುದರಿಂದ ಈ ಪಂಚಿಕೇಶ್ವರ ಪೂಜೆಯು ವ್ಯವಸಾಯಕ್ಕೆ ಸಂಬಂಧಿಸಿರಬಹುದೆ ? ಎಂಬ ಅನುಮಾನವನ್ನೂ ವ್ಯಕ್ತಪಡಿಸಲಾಗಿತ್ತು.

**ಪ್ರಸ್ತುತ ದೊರಕಿರುವ ಮಾಹಿತಿಗಳೆಂದರೆ :**

೧) ಶ್ರಿಯುತ ಷ. ಶೆಟ್ಟರ್‌ರವರು ತಮ್ಮ 'ಸೋಮನಾಥಪುರ' ಕೃತಿಯಲ್ಲಿ ಪಂಚಿಕೇಶ್ವರ ದೇವಾಲಯವನ್ನು ಗುರುತಿಸಿ, ಇದು ಸೋಮನಾಥಪುರದ ಕೇಶವ ದೇವಾಲಯದ ಈಶಾನ್ಯ ದಿಕ್ಕಿನಲ್ಲಿತ್ತು ಎಂದು ಗುರುತಿಸಿದ್ದಾರೆ.

೨) ಸೋಮನಾಥಪುರ ಶಾಸನಗಳಲ್ಲಿ ಪಂಚಲಿಂಗದೇವರು ಎಂದು ಕರೆದಿರುವುದನ್ನು ಗಮನಿಸಿದರೆ, ಬಹುಶಃ ಕಾಲ ಕಳೆದಂತೆ ಪಂಚಿಕೇಶ್ವರವು ಪಂಚಲಿಂಗದೇವರು ಎಂದು ಕರೆದಿರಬಹುದಾಗಿದೆ.

೩) ಈಶಾನ್ಯದಲ್ಲಿರುವ ಪಂಚಲಿಂಗ ದೇವಾಲಯಕ್ಕೆ ಆಗ್ನೇಯದಲ್ಲಿ ಇರುವ ಶಾಸನದಂತೆ ಇಲ್ಲಿ ಬಿಜ್ಜಳೇಶ್ವರ ದೇವರು, ಹೆಮ್ಮೇಶ್ವರದೇವರು, ರೇವಲೇಶ್ವರ ದೇವರು, ಸೋಮನಾಥದೇವರು, ಭೈರವೇಶ್ವರದೇವರು ಇದ್ದು ಪೂಜೆಗೊಳ್ಳುತ್ತಿತ್ತು ಎಂದು ಗುರುತಿಸಬಹುದಾಗಿದೆ.

೪) ಈ ದೇವಾಲಯದ ಅಂಗರಕ್ಷಕ ವಾರ್ಷಿಕ ೧೦ ಗದ್ಯಾಣವನ್ನು, ಸೇನಬೋವ ಭಂಡಾರಿಗ ಮತ್ತು ಮುದ್ರಾಕಾರ ಕೂಡ ೧೨ ಗದ್ಯಾಣವನ್ನು ಪಡೆಯುತ್ತಿದ್ದರು.

೫) ಮೂರು ರಂಗವಾಲೆಗಳು, ಆರು ಪರಿಚಾರಕರು, ಒಂಬತ್ತು ಆಳುಗಳು, ಹನ್ನೆರಡು ದವಸಿಗರು ಈ ಸಮುಚ್ಛಯದಲ್ಲಿದ್ದರು.

೬) ಆರು ಜನ ಸಿಂಗಾರದವರು ತಲಾ ೬ ಗದ್ಯಾಣಗಳನ್ನು ವಾರ್ಷಿಕವಾಗಿ ಪಡೆದುಕೊಳ್ಳುತ್ತಿದ್ದರು.

೭) ದೀಪಾವಳಿ ಉತ್ಸವದಲ್ಲಿ ೨ ಸಲಗೆ ಎಣ್ಣೆಯನ್ನು ಈ ದೇವಾಲಯದಲ್ಲಿ ಬಳಸಲಾಗತ್ತಿತ್ತು.

೮) ತಾಂಬೂಲ ಸೇವೆಗೆ ಪ್ರತಿನಿತ್ಯ ೨೦೦ ಅಡಿಕೆ ಮತ್ತು ೬೦೦ ವಿಳ್ಯೆದೆಲೆ ಬೇಕಾಗುತ್ತಿತ್ತು.

೯) ಶಿವಲಿಂಗಗಳಿಗೆ 'ಶೃಂಗಾರದ ವಸ್ತ್ರ' ಎಂಬ ನೂಲಿನ ಬಟ್ಟೆ ಮತ್ತು 'ಪುಲೆಯಪಟ್ಟೆ' ಎಂಬ ರೇಶ್ಮೆ ಶಲ್ಯಗಳನ್ನು ವರ್ಷಕ್ಕೆ ನಾಲ್ಕು ಬಾರಿ ಅಥವಾ ಮೂರು ತಿಂಗಳಿಗೊಮ್ಮೆ ಬದಲಿಸಲಾಗುತ್ತಿತ್ತು. ಇದಕ್ಕಾಗಿ ಈ ದೇವಲಯಕ್ಕೆ ೨೮ ಶೃಂಗಾರದ ವಸ್ತ್ರಗಳನ್ನು ೧೪ ಪುಲಿಯ ಪಟ್ಟೆಗಳನ್ನು ಒದಗಿಸಲಾಗುತ್ತಿತ್ತು.

ಈ ಎಲ್ಲಾ ಮಾಹಿತಿಗಳ ಹಿನ್ನೆಲೆಯಲ್ಲಿ ಪಂಚಕೇಶ್ವರ, ಪಂಚಿಕೇಶ್ವರ, ಪಂಚಾಕೇಶ್ವರ ಎಂಬುದು ಆರಂಭ ಕಾಲದಲ್ಲಿ ಧಾರ್ಮಿಕ ಆಚರಣೆಗೆ ಸಂಬಂಧಿಸಿದ ಪೂಜಾ ವಿಧಿ ವಿಧಾನಗಳ ವಿವರಣೆಯನ್ನೋ ಅಥವಾ ಮಂತ್ರಗಳನ್ನೋ ಒಳಗೊಂಡ ಗ್ರಂಥ ಅಥವಾ ತಾಡವೋಲೆ ಆಗಿರಬಹುದಾಗಿದೆ. ಆದರೆ ನಾಗಮಂಗಲ ತಾಲ್ಲೂಕಿನ ಬೆಳ್ಳೂರು ಶಾಸನಗಳಲ್ಲಿ ದಾಖಲಾಗಿರುವ 'ಬೆಳ್ಳೂರ ಶ್ರೀಮದಗ್ರಹಾರದಲಿ ತಾವು ಮಾಡಿಸುವ ಶ್ರೀ ಪಂಚಿಕೇಶ್ವರದಲಿ ಯಿಂದ್ರಪರ್ವದ ಧರ್ಮ್ಮಕೆಯುಂ ಆರಣ ಪೂಜೆಗೆಯುಂ' ಹಾಗೂ ದಾನ ನೀಡಿದ ಮೇರೆಗಳನ್ನು ಗುರುತಿಸುವಲ್ಲಿ 'ಅಲ್ಲಾಳ ಸಮುದ್ರದ ಕೆಳಗೆ 'ಪಂಚೀಕೇಶ್ವದಿಂ ಪಡುವಲು' ಎಂಬುದನ್ನು ಗಮನಿಸಿದರೆ, ಬೆಳ್ಳೂರಿನಲ್ಲಿ ಐದು ಲಿಂಗಗಳನ್ನು ಪ್ರತಿಷ್ಠಾಪಿಸಿ ಪೂಜೆ ಪುನಸ್ಕಾರಗಳನ್ನು ನಡೆಸುವಂತೆ ಮಾಡಲಾಗಿತ್ತು ಎಂಬುದಾಗಿ ಹೇಳಬಹುದಾಗಿದೆ.

## ಆಧಾರಸೂಚಿ


೧. *ಪಂಚಿಕೇಶ್ವರ ಒಂದು ಅರ್ಥ ಗ್ರಹಿಕೆ*, **ಇತಿಹಾಸ ದರ್ಶನ**, ಸಂ. ೧೨, ೧೯೯೭, ಪುಟ ೧೫೦–೧೫೩.
೨. ಎ.ಕ. V, (ಪರಿಷ್ಕೃತ ಆವೃತ್ತಿ), ತಿ. ನರಸೀಪುರ ತಾಲ್ಲೂಕು, ಸೋಮನಾಥಪುರದ ಶಾಸನಗಳು.
೩. ಷ. ಶೆಟ್ಟರ್, **ಸೋಮನಾಥಪುರ**, ಅಭಿನವ ಪ್ರಕಾಶನ, ಬೆಂಗಳೂರು, ೨೦೦೮.
೪. ಎ.ಕ. VII, (ಪರಿಷ್ಕೃತ ಆವೃತ್ತಿ), ನಾಗಮಂಗಲ ತಾಲ್ಲೂಕು, ಬೆಳ್ಳೂರು ಶಾಸನಗಳು.




# ಹರಿಶ್ಚಂದ್ರದತ್ತಿ ಅಗ್ರಹಾರ ಒಂದು ಅಧ್ಯಯನ

**ಡಾ. ಹೆಚ್.ಎಸ್. ಉಷಾರಾಣಿ***

**ಬಳ್ಳಾರಿ** ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಶಾಸನಗಳು ಹರಿಶ್ಚಂದ್ರದತ್ತಿ ಅಗ್ರಹಾರ-ಬಾಗಳಿ ಬಗ್ಗೆ ಮಾಹಿತಿ ನೀಡುತ್ತವೆ. ಲಭ್ಯವಿರುವ ಶಾಸನಗಳನ್ನಾಧರಿಸಿ ಈ ಅಗ್ರಹಾರದ ಚಟುವಟಿಕೆಗಳ ಬಗ್ಗೆ ಚಿತ್ರಿಸುವುದೇ ಪ್ರಸ್ತುತ ಪ್ರಬಂಧದ ಉದ್ದೇಶ.

ಸುಮಾರು ೩೦೦ ವರ್ಷಗಳ ಕಾಲ ಶಾಸನಗಳಲ್ಲಿ ಹರಿಶ್ಚಂದ್ರದತ್ತಿ ಅಗ್ರಹಾರ ಪ್ರಸ್ತಾಪಿಸಲ್ಪಟ್ಟಿದೆ. ಅದರಂತೆ ಈ ಅಗ್ರಹಾರ ಶ್ರೀಮದನಾದಿ ಅಗ್ರಹಾರವೆಂದೂ, ಮಹಾಅಗ್ರಹಾರ ವೆಂದೂ, ಚಾಲುಕ್ಯ ಚಕ್ರೇಶ್ವರ ದತ್ತಿಯೆಂದೂ ಉಕ್ತವಾಗಿದೆ. ಇಲ್ಲಿಯ ಮಹಾಜನರನ್ನು ವರ್ಣಿಸಿರುವ ಪರಿ ಹೀಗಿದೆ : "ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಪಾರಾಯಣ ಜಪಸಮಾಧಿಶೀಲ ಗುಣಸಂಪನ್ನರುಂ ಯಜನಯಾಜ ನಾಧ್ಯಯನಾಧ್ಯಪನ ದಾನ ಪ್ರತಿಗ್ರಹಯುಕ್ತರುಂ ಅಗ್ನಿಷ್ಟೋಮಾದಿ ಸಪ್ತ....ಸ್ಥಾವಭೃತಾವಗಾಹನ ಪವತ್ರೀಕೃತ ಶರೀರರುಂ ಶ್ರೀ ಸ್ವಯಂಭು ಕಲಿದೇವ ಪಾದಾರಾಧಕರುಂ ಶ್ರೀ ಮಹಾಲಕ್ಷ್ಮಿ ವರಪ್ರಸಾದರುಮಪ್ಪ ಶ್ರೀಮದ್ ಹರಿಶ್ಚಂದ್ರ ದತ್ತಿಯ ಮಹಾಗ್ರಹಾರಂ ಬಾಳ್ಗುಳಿಯೂರೊಡೆಯ, ಪ್ರಮುಖವಶೇಷ ಮಹಾಜನ ಹಯ್ವದಿಂಬರು"[೧] ಎಂದು. ಇದರಿಂದ ಇವರು ಕಲಿದೇವರ ಆರಾಧಕರಾಗಿದ್ದುದಂತುಸ್ಪಷ್ಟವಾಗಿದೆ.

ಸಾಮಾನ್ಯವಾಗಿ ಆಗ್ರಹಾರಗಳು ತೆರಿಗೆಗಳಿಂದ ಮುಕ್ತವಾಗಿರುತ್ತಿದ್ದವು. ಭೂದಾನ ನಗದು ದಾನ ಪಡೆಯುತ್ತಿದ್ದವು. ಅದರಂತೆ ರಾಷ್ಟ್ರಕೂಟರ ಕಾಲದಿಂದ ಪ್ರಸ್ತಾಪಿಸಲ್ಪಟ್ಟಿರುವ ಈ ಅಗ್ರಹಾರ ಹೊಯ್ಸಳವರೆಗೂ ತನ್ನ ಸಾಂಸ್ಕೃತಿಕ, ಧಾರ್ಮಿಕ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿದ್ದುದನ್ನು ಕಾಣಬಹುದು. ಮೊದಲಿಗೆ ಕ್ರಿ.ಶ. ೯೫೬ ಶಾಸನದನ್ವಯ[೨] ರಾಷ್ಟ್ರಕೂಟ ದೊರೆ ಅರೇಳು ವರ್ಷ ಕನ್ನರದೇವನ ಆಳ್ವಿಕೆಯಲ್ಲಿ ಮಹಾಸಾಮಂತ ರೊಟ್ಟಯ್ಯ ಬಾಬನ್ದಿಯ ಎಲ್ಲಾ ತೆರಿಗೆಗಳನ್ನು ದಾನ ನೀಡಿದ್ದನೆಂದು ಗೊತ್ತಾಗುತ್ತದೆ. ಅಂದು ಪಶುಪತಿಭಟ್ಟನೆಂಬಾತ ಬಾಳ್ಗುಳಿಯ ಊರೊಡೆಯನಾಗಿದ್ದ. ಕ್ರಿ.ಶ. ೯೮೭ರ ಶಾಸನ[೩] ಅಹವಮಲ್ಲ ದೇವನ ಆಳ್ವಿಕೆಯಲ್ಲಿ ಆತನ ಮಹಾಸಾಮಂತ ಆಯ್ತುವರ್ಮ ಕಿಸುಕಾಡು ೫೦೦ನ್ನು ಆಳುತ್ತಿದ್ದಾಗ ಬಾಗಳಿಯ ಐವತ್ತು ಮಹಾಜನರು ದುಗ್ಗಿಮಯ್ಯ ಪ್ರತಿಷ್ಠಾಪಿಸಿದ ಆದಿತ್ಯ ದೇವರಿಗೆ ತೋಟ ಬಿಟ್ಟುಕೊಟ್ಟರೆಂದು ತಿಳಿಸುತ್ತದೆ. ಮತ್ತೊಂದು ರಾಷ್ಟ್ರಕೂಟರ ಶಾಸನ[೪] ದೊರೆ ಇಂದ್ರವಲ್ಲಭನ ಸಾಮಂತ ರೊಟ್ಟ ಎಂಬ ಬಿರುದುಳ್ಳಾತ ಕೋಗಳಿ ೫೦೦ ಹಾಗೂ ಮಾಸಿಯವಾಡಿ ೧೪೦ನ್ನ ಆಳುತ್ತಿದ್ದಾಗ ಬಾಳ್ಗುಳಿಯ ಐವತ್ತು ಮಹಾಜನರ ಸಮ್ಮತಿಯಿಂದ ಬಳಿಯರ ಬಾದಮ್ಮ ಎಂಬಾತನಿಗೆ ಬೂದುಗಳನ್ನಿತ್ತರು ಎಂದಿದೆ.

ರಾಷ್ಟ್ರಕೂಟರಿಂದ ಪೋಷಿಸಲ್ಪಟ್ಟ ಈ ಅಗ್ರಹಾರ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂದು ಶಾಸನಗಳ ಅಧ್ಯಯನದಿಂದ ಧೃಡಪಡುತ್ತದೆ. ಉದಾಹರಣೆಗೆ: ಈ ಅಗ್ರಹಾರದ ವಿವಿಧ ವರ್ಗಗಳ ಮನವಿಗೆ ಚಾಲುಕ್ಯ ದೊರೆ ಸ್ಪಂದಿಸಿದ್ದನೆಂಬುದಕ್ಕೆ ಕ್ರಿ.ಶ. ೯೯೧ರ ಶಾಸನ[೫] ನಿದರ್ಶನ. ಈ ಶಾಸನ ಪ್ರಕಾರ, ಬಾಳ್ಗುಳಿಯ ಐವತ್ತು ಮಹಾಜನರು, ಸಿದ್ದಿಸೆಟ್ಟಿ, ಸೋಭನಯ್ಯ ಮಲ್ಲಯ್ಯಸೆಟ್ಟಿ ಅಣ್ಣಮ್ಮ ಹಾಗೂ ತಂಬುಲಿಗರು ಸಾಸಿರ್ವರು ಐನೂರ್ವರು ಹೋಗಿ ತೆರಿಗೆ ಬಾರದ ಹೊರೆಯಿಂದ ಕೋರಿಕೆ ಸಲ್ಲಿಸಲಾಗಿ ಚಾಲುಕ್ಯ ಅಹವಮಲ್ಲದೇವನು ರಾಷ್ಟ್ರಕೂಟ ಕನ್ನರದೇವ ಗೊತ್ತುಪಡಿಸಿದ್ದ ಸುಂಕದ ಮರ್ಯಾದೆಯನ್ನೇ ನಿರ್ಧರಿಸು ತ್ತಾನೆ.

ಇನ್ನು ಕಲಿದೇವಸ್ವಾಮಿಯ ನೈವೇದ್ಯ, ನಂದಾದೀವಿಗೆ, ಅಂಗರಂಗ ಭೋಗ, ತಪೋಧನರ ಸತ್ರ, ಬ್ರಾಹ್ಮಣರ ಗ್ರಾಸನಕ್ಕೆ, ದೇಸಿಗ ಭಾತ್ರಕ್ಕೆ, ಪುರಾಣ, ಖಂಡಿಕ, ಶಾಸ್ತ್ರವ್ಯಾಖ್ಯಾನ ಮಾಡುವ ಉಪಾಧ್ಯಾಯರಿಗೆ, ಕೆರೆ ನಿರ್ವಹಣೆಗೆಂದು ಕಾಲಕಾಲಕ್ಕೆ ಭೂದಾನ, ನಗದು ದಾನ ನೀಡುವುದರ ಮೂಲಕ ತಮ್ಮ ಕರ್ತವ್ಯ ಹಾಗೂ ಜವಾಬ್ದಾರಿಗಳ ಬಗ್ಗೆ ಜಾಗೃತರಾಗಿದ್ದುದನ್ನು ಶಾಸನಗಳು ದಾಖಲಿಸಿದೆ. ಅದರ ಪ್ರಕಾರ ದಂಡನಾಯಕರು, ಮಹಿಳೆಯರು, ವ್ಯಾಪಾರಿಗಳು, ಅಧಿಕಾರಿಗಳು ಈ ಅಗ್ರಹಾರದ ಚಟುವಟಿಕೆಗಳಿಗೆ ಆದ್ಯ ಗಮನ ನೀಡಿದ್ದರು.

* # ೪೩೩, 'ಇ' ಬ್ಲಾಕ್, ಜೆ.ಪಿ. ನಗರ, ಮೈಸೂರು-೫೭೦೦೦೮.

ಕ್ರಿ.ಶ. ೧೦೧೮ರ ಶಾಸನ[6] ಚಾಲುಕ್ಯ ಜಗದೇಕಮಲ್ಲ ಜಯಸಿಂಹನ ಕಾಲದಲ್ಲಿ ಆತನ ಸಾಮಂತ ಜಗದೇಕಮಲ್ಲ ನೊಳಂಬಪಲ್ಲವ ಪೆರ್ಮಾಡಿ ಉದಯಾದಿತ್ಯದೇವ ಕಂಪುಲಿಯ ಬೀಡಿನಿಂದ ಆಳುತ್ತಿದ್ದಾಗ ಉದಯಾದಿತ್ಯನು ಪಂಪಾಪುರ ತೀರ್ಥಕ್ಕೆ ಬಂದ ಸಂದರ್ಭದಲ್ಲಿ ಅವನ ಆದೇಶದಂತೆ ನರಸಿಂಘಯ್ಯ ಬಾಳ್ಗುಳಿಗೆ ಬಂದು ಸೋಮಸಿಂಘಭಟಾರರ ಪಾದ ತೊಳೆದು ಬಾಳ್ಗುಳಿಯ ಮಹಾಜನ ಬಿಕ್ಕಿಗ ೭೦ರ ಮನ್ನೆಯ ಬೀರಭಟ್ಟನ ಸಮಕ್ಷಮದಲ್ಲಿ ಕಲಿದೇವಸ್ವಾಮಿಯ "ನಿವೇದ್ಯ ನಂದಾದೀವಿಗೆಗಂ ತಪೋಧನರ ಸತ್ರಕ್ಕಂ ಪಂನ್ನಿರ್ವಸೂಳೆಯರ್ಗ್ಗಂ, ಸೂಳೆವಳಗಂ, ವಂಚಿಗಂಗ, ಪರೆಕಾರರ್ಗಂ ಪಾತ್ರಕ್ಕಂ ದೇಸಿಗಭಾತ್ರ ಭೋಜನಕ್ಕಂ" ಭೂಮಿ ದಾನ ಮಾಡಿದ್ದನ್ನು ದಾಖಲಿಸಿದೆ. ಕಲಿದೇವರ ಸೇನೆಗೈಯಲು ನೃತ್ಯಗಾತಿಯರು, ದೇವಾಲಯ ಶುಚಿಗೊಳಿಸಿ ಅಲಂಕರಿಸಲು ಸೂಳೆಯರು ಹಾಗೂ ಅವರ ಮೇಲ್ವಿಚಾರಣೆಗೆಂದು ನೇಮಕಗೊಂಡಿದ್ದ ಸೂಳೆವಳ ಎಂಬ ಮೇಲಾಧಿಕಾರಿ ದೇವಾಲಯಕ್ಕೆ ಹೊಂದಿಕೊಂಡಂತಿದ್ದ ಮಠ ತಪೋಧನರ ಸತ್ರ, ದೇಸಿಗ ಭಾತ್ರರ ಭೋಜನಕ್ಕೆಂದು ನಿರ್ಮಿಸಿದ್ದ ಪ್ರತ್ಯೇಕ ಸತ್ರಗಳು ವಿವಿಧ ವರ್ಗಗಳ ಅಸ್ತಿತ್ವ ಹಾಗೂ ಕಲ್ಪಿಸಿದ್ದ ಸೌಲಭ್ಯಗಳನ್ನು ಮನದಟ್ಟು ಮಾಡಿಸುತ್ತದೆ.

ಕ್ರಿ.ಶ. ೧೦೩೫ರ ಶಾಸನ[7] ಇಮ್ಮಡಿ ಜಯಸಿಂಹನ ಆಳ್ವಿಕೆಯಲ್ಲಿ ಕಲಿದೇವರ ನಂದಾದೀವಿಗೆಗೆ ಹಾಡುವ ಕಾಮವ್ವ ನಾಗವ್ವೆ ಮಗಳಾದ ಪಾತ್ರದ ಸಿರಿಯವ್ವೆ ವರ್ಷಕ್ಕೆ ಎರಡು ಪಣ ದಾನ ನೀಡಿದ್ದಾಳೆ. ಅದೇ ದಿನ ಮಹಾಜನರು ಹಾಗೂ ಇತರರು ಕಲಿದೇವರ ದೇವಾಲಯದಲ್ಲಿ ಸಮಾವೇಶಗೊಂಡು ಅಚ್ಚಿವಳ್ಳಿಯದ ಗಣಮಯ್ಯನ ತಮ್ಮ ನಾಯ್ಚಮ್ಯನ ಕೈಯಿಂದ ಅಕಸಾಲಿ ಆಯವಾಗಿ ಬಂದಿದ್ದ ಧಾನ್ಯ ಮತ್ತು ಉಪ್ಪನ್ನು ಪೊನ್ನಿಗೆ ಎರಡು ಬಳ್ಳದಂತೆ ಕೊಳ್ಳಲು ೧೦೩ ಗದ್ಯಾಣ ನೀಡಿ ಅದರ ಹುಟ್ಟುವಳಿಯಲ್ಲಿ ನಿತ್ಯ ನಾಲ್ಕು ಜನರಿಗೆ ಸತ್ರ ನಡೆಸಲು ದಾನ ನೀಡಿದರು. ಇದು ಕಲಿದೇವರ ದೇವಾಲಯ ದಲ್ಲಿ ದಿನನಿತ್ಯ ನಡೆಯುತ್ತಿದ್ದ ಅನ್ನಸಂತರ್ಪಣೆ, ನಿತ್ಯಸೇವೆಗೆ ನೀಡುತ್ತಿದ್ದ ನಗದು ದಾನದ ಕುರಿತು ತಿಳಿಸುತ್ತದೆ. ಅಲ್ಲದೆ ಹಾಡುವ ವೃತ್ತಿಯವರ ಮಕ್ಕಳು ನೃತ್ಯ ಮಾಡಬಹುದಿತ್ತು ಎಂಬುದು ಅಭಿವ್ಯಕ್ತಿ ಸ್ವಾತಂತ್ರ್ಯದ ಬಗ್ಗೆ ಮನವರಿಕೆ ಮಾಡಿಸುತ್ತದೆ.

ಕ್ರಿ.ಶ. ೧೦೬೮ರ ಶಾಸನ[8] ಕೃಷಿಗೆ ಸಂಬಂಧಿಸಿದು ದಾಗಿದೆ. ಅದರಂತೆ ಮಾಂಡಳಿಕ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮಾಡಿ ಜಯಸಿಂಗನ ಆಳ್ವಿಕೆಯಲ್ಲಿ ಒಮ್ಮೆ ಮಹಾಜನರು ಸಭೆ ಸೇರಿ ತೊಣಕಲಿಯ ಮಹಾದೇವಯ್ಯ ಬ್ರಾಹ್ಮಣರ ಭೂಮಿಯನ್ನು ಶೂದ್ರರು ಕೃಷಿ ಮಾಡುತ್ತಿದ್ದು ವರ್ಷಕ್ಕೆ ೫೨ ಗದ್ಯಾಣ ನೀಡುತ್ತಿದ್ದಾಗ್ಯೂ ಇತರರು ದುರುಪಯೋಗ ಮಾಡಿಕೊಳ್ಳಲಾಗಿ ಅದನ್ನು ತಾನೇ ಪಡೆದುಕೊಂಡು ಊರಿನ ಹಿರಿಯ ಕೆರೆಗೆ ದಾನ ನೀಡುತ್ತಾನೆ.

ಕ್ರಿ.ಶ. ೧೦೭೯ ಶಾಸನ[9] ಸಾಮಂತ ಪಾಂಡ್ಯದೇವಿ ನೊಳಂಬವಾಡಿ ೩೨,೦೦೦ನ್ನು ಆಳುತ್ತಿದ್ದಾಗ ಬಾಗಳಿಯ ೫೦ ಮಹಾಜನರ ಸನ್ನಿಧಿಯಲ್ಲಿ ಬ್ರಾಹ್ಮಣರ ಗ್ರಾಸನಕ್ಕೆ ಪುರಾಣಕ್ಕೆಂದು ಅರಸಿಕೆರೆಯ ಕಲಿಯಗೌಡನ ಮಗಳು ಪಿರಿಯಾಂಡ ಪೆರ್ಗಡೆಯ ಪತ್ನಿ ಬಾಚಲದೇವಿ ಶಿವಶಕ್ತಿ ಪಂಡಿತರ ಕಾಲನು ತೊಳೆದು ಭೂಮಿ ದಾನ ಮಾಡಿದಳು. ಇಲ್ಲಿ ಸ್ಥಳೀಯ ಅಧಿಕಾರಿ ವರ್ಗದ ಕಾಳಜಿಯನ್ನು ಗಮನಿಸಬಹುದು. ಉಲ್ಲೇಖಿತ ಶಿವಶಕ್ತಿ ಪಂಡಿತರು 'ಯಮ ನಿಯಮಾಸನಾನುಷ್ಠಾಣ ಪಾರಾಯಣ ಜಪಸಮಾಧಿ ಸಕಳಾಗಮಶಾಸ್ತ್ರ ಪರಮತತ್ವಜ್ಞಾನ ಸಕಳಗುಣ ಸಂಪನ್ನ"ರೆಂದು ಪ್ರಶಂಶಿಸಲ್ಪಟ್ಟಿದ್ದಾರೆ.

ಕ್ರಿ.ಶ. ೧೧೦೩ರ[10] ಶಾಸನ ತ್ರಿಭುವನಮಲ್ಲನ ದಂಡನಾಯಕ ಮುದ್ದರಸ ಬಾಳ್ಗುಳಿಯ ಶಿವಶಕ್ತಿ ಪಂಡಿತರ ಪಾದ ತೊಳೆದು ಊರಿನ ಐವತ್ತು ಮಹಾಜನರ ಸನ್ನಿಧಿಯಲ್ಲಿ ಕಲಿದೇವರ ನೈವೇದ್ಯಕ್ಕೆ ಹಾಗೂ ನಂದಾದೀವಿಗೆ ತಿಂಗಳಿಗೆ ಎರಡು ಎಲೆ ಹೇರಿನ ಸುಂಕ ೧೨ ಪಣ ನೀಡಿದ್ದನೆಂದೂ, ಇದರಲ್ಲಿ ಪೂಜಾರಿಗೆ ಎರಡು ಪಣ, ಪುರಾಣ ಓದಿದವವನಿಗೆ ಒಂದು ಹಾಗೂ ಪೂವಿನ ತೋಟಕ್ಕೆ ಪಣ ಎರಡರಂತೆ ವ್ಯಯಿಸಬೇಕೆಂದು ಸ್ಪಷ್ಟಪಡಿಸಲಾಗಿದೆ. ಮತ್ತೊಬ್ಬ ದಂಡನಾಯಕ ಬರ್ಮೆರಸನೆಂಬಾತ ಕ್ರಿ.ಶ. ೧೧೦೨ರಲ್ಲಿ ಹಿರಿಯ ಕೆರೆಯ ಕೆಲಸಕ್ಕೆ ಪನ್ನಾಯದ ಸುಂಕದಲ್ಲಿ ತಿಂಗಳಿಗೆ ಒಂದು ಗದ್ಯಾಣ ಹೊನ್ನನು ಮಹಾಜನರ ಕಾಲನ್ನು ತೊಳೆದು ಸ್ವಯಂಭು ಕಲಿದೇವರ ಸನ್ನಿಧಾನದಲ್ಲಿ ದಾನ ನೀಡಿದ್ದನ್ನು ಶಾಸನದಲ್ಲಿ[11] ದಾಖಲಿಸಲಾಗಿದೆ.

ಕ್ರಿ.ಶ. ೧೧೧೮ರ ಶಾಸನ[12] ಮಲೆಯಾಳಿಗಳು ನೆಲೆಸುವಿಕೆ ಹಾಗೂ ವಡ್ಡವ್ಯವಹಾರಿ ಕೊಮರ ಮೂಕ್ಕಂ ಎಂಬಾತ ಕಲಿದೇವರ ನಂದಾದೀವಿಗೆಗೆ ೫ ಗದ್ಯಾಣ ನೀಡಿ ಅದರ ಬಡ್ಡಿಯಲ್ಲಿ ನಂದಾದೀಪ ಸೇವೆ ಮಾಡಬೇಕೆಂದು ತಿಳಿಸಿದ್ದನ್ನು ಕಾಣುತ್ತೇವೆ. ಅದೇ ವರ್ಷ[13] ಪಸಾಯಿತ ವಿಜಯ ಹೆಮ್ಮಾಡಿ ಎಂಬ ದಂಡನಾಯಕನು ರಾಜನ ಕರ್ತವ್ಯಗಳನ್ನು ಪಾಲಿಸುತ್ತಿದ್ದಾಗ ಮಹಾವಡ್ಡ ವ್ಯವಹಾರಿ ಚೆನ್ನಗೆಯಿ ಕಪ್ಪಿಸೆಟ್ಟಿ ಹೊನ್ನಬಾಚಯ್ಯ, ಪದ್ಮಣ್ಣ, ಶರ್ವದೇವನಾಯಕ ಮಾಹಣ ಸೇನಭೋವ ಸಂಕಣ್ಣ ಮೊದಲಾದವರು ನಾಗರಾಸಿ ಪಂಡಿತರ ಕಾಲನ್ನ ತೊಳೆದು ನೀಲೇಶ್ವರ ದೇವರಿಗೆ ಭೂದಾನ ನೀಡಿದರು. ಇದರಿಂದ ಶಿವಶಕ್ತಿ ಪಂಡಿತರೊಂದಿಗೆ ನಾಗರಾಸಿ ಪಂಡಿತರು ಜನತೆಯ ಗಮನ ಸೆಳೆದಿದ್ದರೆಂಬುದು

ಗಮನಾರ್ಹ. ಸೇನಬೋವ ಸಂಕಣ್ಣ ಪ್ರತ್ಯೇಕವಾಗಿ ನೀಲೇಶ್ವರ ದೇವರ ಪೂಜೆ ಹಾಗೂ ನಂದಾದೀಪಕ್ಕೆ ತೋಟ ಬಿಟ್ಟಿದ್ದನ್ನು ಶಾಸನ[೧೪] ದಾಖಲಿಸಿದೆ. ನಿಡುಂಗಲ್ನಾಡ ಮಹಾವಡ್ಡ ವ್ಯವಹಾರಿ ಪೂಮೂರ್ಖ ಸೆಟ್ಟಿಯರು ಐವತ್ತು ಮಹಾಜನರ ಸನ್ನಿಧಿಯಲ್ಲಿ ಶಿವಶಕ್ತಿ ಪಂಡಿತರ ಕಾಲನ್ನು ತೊಳೆದು ನಂದಾದೀವಿಗೆಗೆ ೧೪ ಗದ್ಯಾಣ ನೀಡಿದ್ದನ್ನು ಮತ್ತೊಂದು ಶಾಸನದಲ್ಲಿ[೧೫] ಉಲ್ಲೇಖಿಸಲಾಗಿದೆ. ಅದೇ ಪುಣ್ಯ ಕಾರ್ಯದಲ್ಲಿ ಸ್ಥಳೀಯರು ಭಾಗಿಗಳಾಗಿದ್ದರೆಂಬುದಕ್ಕೆ ಮತ್ತಷ್ಟು ದಾಖಲೆಗಳಿವೆ.

ಕ್ರಿ.ಶ. ೧೧೧೫ರ ಶಾಸನ[೧೬] ಯೆಲೆಕಲ ಬೊಜಂಗರ ಈಶ್ವರಯ್ಯನ ಮಾಚಕ್ಕ ಬಾಳ್ಗುಳಿಯ ಮಹಾಜನರ ಸನ್ನಿಧಿಯಲ್ಲಿ ಶಿವಶಕ್ತಿ ಪಂಡಿತರ ಕಾಲನ್ನು ತೊಳೆದು ಕಲಿದೇವರ ನೈವೇದ್ಯಕ್ಕೆ ೨೦ ಗದ್ಯಾಣ ನೀಡಿದ್ದನ್ನು ಉಲ್ಲೇಖಿಸುತ್ತದೆ. ಅದೇ ವರ್ಷದಲ್ಲಿ ಮತ್ತೊಂದು ಶಾಸನ[೧೭] ನೀರಾವರಿ ಕೆಲಸಕ್ಕೆ ಆದ್ಯತೆ ನೀಡಿದ್ದನ್ನು ಸೂಚಿಸಿದಂತಿದೆ. ಅದರಂತೆ ದಂಡನಾಯಕ ತಿಕ್ಕಭಟ್ಟನು ಬಾಗಳಿಯ ಮತ್ತು ಮಹಾಜನರು ಮತ್ತು ಶಿವಶಕ್ತಿ ಪಂಡಿತರ ಸಮಕ್ಷಮದ್ದು ದೇವರ ಗ್ರಾಸನಲಯ್ವರು ಉಣಲು ಹಾಗೂ ಮಿಕ್ಕಿದ ಹಣ ಹಿರಿಯಕೆರೆಯ ಕೆಲಸಕ್ಕೆಂದೂ, ಬ್ರಹ್ಮ ಜಿನಾಲಯದ ನಿವೇದ್ಯಕ್ಕೆಂದು ತಿಂಗಳಿಗೆ ಎರಡು ಪಣ ವಿನಿಯೋಗಿಸಲು ಶಿವಮಯ್ಯ ಎಂಬಾತನಿಗೆ ತಿಳಿಸಿದಂತಿದೆ.

ಹಬ್ಬದ ಆಡಂಗೆ ಅದರಲ್ಲೂ ದೀಪಾವಳಿ ಕಾಣಿಕೆಯಲ್ಲಿ ದೇವರ ಭೋಗಕ್ಕೆ ನಗದು ದಾನ ಬಿಟ್ಟದ್ದನ್ನು ಶಾಸನದಲ್ಲಿ ದಾಖಲಿಸಲಾಗಿದೆ. ಕ್ರಿ.ಶ. ೧೧೧೯ರ ಶಾಸನದ[೧೮] ಪ್ರಕಾರ ಸಾಮಂತ ಪಾಂಡ್ಯದೇವನು ನೊಳಂಬವಾಡಿ ೩೨,೦೦೦ನ್ನು ಆಳುತ್ತಿದ್ದಾಗ ದಂಡನಾಯಕನಾದ ರಿಮೆಯಣ್ಣಭಟ್ಟನು ನೀಲೇಶ್ವರ ಪಂಡಿತನ ಕಾಲು ತೊಳೆದು ತಿಂಗಳಿಗೆ ಒಂದು ಎಲೆಯ ಹೇರಿನ ಸುಂಕ ನೀಡಿದ. ಅಲ್ಲದೆ ಆಲೂರಿನ ಐವತ್ತು ಮಹಾಜನರು ಸಭೆ ಸೇರಿ ಕೆರೆ ಸುಂಕದಲ್ಲಿ ನಂದಾದೀವಿಗೆಗೆ ತಿಂಗಳಿಗೆ ಒಂದು ಪಣ ಹಾಗೂ ಪೆರ್ಗಡೆ ಕಾವರಾಜ ಎಂಬಾತ ದೀಪಾವಳಿಯಂದು ಮಹಾಜನರು ಕೊಡುವ ಎರಡು ಗದ್ಯಾಣದಲ್ಲಿ ಒಂದು ಗದ್ಯಾಣವನ್ನು ದೇವರಭೋಗಕ್ಕೆ ಬಿಟ್ಟನೆಂದು ತಿಳಿಸುತ್ತದೆ.

ಮೊದಲ ಪ್ರಸಾದ ವಿನಿಯೋಗಕ್ಕೆ ನಗದು ದಾನ ಹಾಗೂ ಪುರಾಣ ಓದುವವರಿಗೆ ಭೂದಾನ ನೀಡಿದ್ದನ್ನು ಶಾಸನಗಳು ತಿಳಿಸುತ್ತವೆ. ಅದರಂತೆ ಕ್ರಿ.ಶ. ೧೧೨೨ರ ಶಾಸನಗಳು[೧೯] ಮಹಾಪ್ರಧಾನ ದಂಡನಾಯಕ ಸೋವರಸರು ನೊಳಂಬವಾಡಿ ೩೨,೦೦೦ದ ವಡ್ಡರಾವುಳದ ಸುಂಕವನ್ನಾಳುತ್ತಿದ್ದಾಗ ವಡ್ಡರಾವುಳದ ಸುಂಕ ಲಕ್ಷಕ್ಕೆ ಆರು ಪಣ ಮುಪ್ಪಾಗದೊಳಗೆ ಕಲಿದೇವಸ್ವಾಮಿಯ ದೇವರನಾಸಮದ ಸತ್ರಕ್ಕೆ ಒಂದು ಪಾಗ ಬಿಟ್ಟದ್ದನ್ನು ತಿಳಿಸುತ್ತದೆ. ಅದೇ ರೀತಿ ಮತ್ತೊಂದು ಶಾಸನ[೨೦] ಮಾರ್ತಾಂಡಯ್ಯನ ಮಗ ದಾಸಯ್ಯ ನಾಯಕನು ಮಹಾಜನರ ಅಪ್ಪಣೆ ಪಡೆದು ಖಂಡಿಕಕ್ಕೆ ೩ ಮತ್ತರು ಮತ್ತು ೩೦೦ ಕಮ್ಮ ಭೂಮಿ ಬಿಟ್ಟದ್ದನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೨೬ರ ಶಾಸನ[೨೧] ಸಾಮಂತ ತ್ರಿಭುವನ ಮಲ್ಲಪಾಂಡ್ಯನ ಕಾಲದಲ್ಲಿ ಗುಜ್ಜರ ಶಾಂತಿಕಬ್ಬೆ ಕಲಿದೇವರ ನೈವೇದ್ಯಕ್ಕೆ ಪುರಾಣ ಓದುವ ಉಪಾಧ್ಯಾಯರಿಗೆ ೩೦೦ ಕಮ್ಮ ತೋಟ ಬಿಟ್ಟದ್ದನ್ನು ದಾಖಲಿಸಿದೆ. ಈ ಶಾಸನದಲ್ಲೂ ಶಿವಶಕ್ತಿ ಪಂಡಿತರನ್ನು ಪ್ರಸ್ತಾಪಿಸಲಾಗಿದೆ.

ಕಲಿದೇವರಿಗೆ ಸಲ್ಲುತ್ತಿದ್ದ ನಾನಾ ರೀತಿಯ ಸೇವೆಗಾಗಿ ಜನ ಕಾಳಜಿ ವಹಿಸಿ ಭೂದಾನ ನೀಡುತ್ತಿದ್ದದು ಗೋಚರಿಸುತ್ತದೆ. ಅದರಂತೆ ಕ್ರಿ.ಶ. ೧೧೪೮ರ ಶಾಸನ[೨೨] ಮಹಾಮಂಡಳೇಶ್ವರ ಜಗದೇಕಮಲ್ಲ ವೀರಪಾಂಡ್ಯನು ನೊಳಂಬವಾಡಿ ೩೨,೦೦೦ನು ಆಳುತ್ತಿದ್ದಾಗ ಭಟ್ಟರ ಮಾದಿಯಣ್ಣನು ಬಾಳ್ಗುಳಿಯ (ಐವತ್ತು ಮಹಾಜನರ) ಐಯ್ಯದಿಂಬರು ಮಹಾಜನರ ಸನ್ನಿಧಿಯಲ್ಲಿ ಕಲಿದೇವರ ನಾನಾ ಸೇವೆಗಾಗಿ ಏಳು ಜನ ಬ್ರಾಹ್ಮಣರಿಗೆ ೪೫ ಕಮ್ಮ ತೋಟ ಬಿಟ್ಟದನ್ನು ಹೇಳುತ್ತದೆ. ಶಾಸನವು ನಾಲ್ವರು ಪುಟ್ಟಿಮನಿಕ್ಕುವ, ಗಡುಂಗೆಯಂಕುಡುವ ಜಪಂ ಮಾರ್ತ ಮೂವರು ಅನವಳು. ಮಾನಸಬ್ರಾಹ್ಮರ್ಗ್ಗಂ ಪ್ರತ್ಯೇಕ ತಿಂಗಳುದಿಂಗಳಿಂಗ ಏಳು ಪಣವಡ್ಡ ದಕ್ಷಿಣೆಗೆವವರ...ಭೋಜನಕ್ಕಂ ದೇವರ ರಂಗಭೋಗ ನಿವೇದ್ಯ ಸುಗದ್ದ ದ್ರವ್ಯಕ್ಕೆ ಎಂದು ವಿವಿಧ ಸೇವೆಗಳನ್ನು ಸ್ಪಷ್ಟಪಡಿಸುತ್ತದೆ. ಇದರಿಂದ ದೇವಾಲಯದಲ್ಲಿ ನಡೆಯುತ್ತಿದ್ದ ಸೇವೆಗಳ ಬಗ್ಗೆಯೂ ಮಾಹಿತಿ ದೊರೆತಂತಾಗಿದೆ.

ದಾನಧರ್ಮದ ಫಲ ಇಂಥವರಿಗೆ ಸಲ್ಪ ಬೇಕೆಂಬ ಆಕಾಂಕ್ಷೆ, ಕಳಕಳಿ ಜನರಲ್ಲಿತ್ತು ಉದಾಹರಣೆಗೆ ಕ್ರಿ.ಶ. ೧೧೫೩ರ ಶಾಸನ[೨೩] ಸಾಮಂತ ಜಗದೇಕಮಲ್ಲನ ಮಾವ ವಿಕ್ರಮಾದಿತ್ಯರಸ ಬಾಳ್ಗುಳಿಯ ಐವತ್ತು ಮಹಾಜನರಿಗೆ ೧೭೩ ಗದ್ಯಾಣ ನೀಡಿ ಅದರ ಬಡ್ಡಿಯಲ್ಲಿ ೧೩ ಬ್ರಾಹ್ಮಣರಿಗೆ ಪಡಿಯ ರೂಪದಲ್ಲಿ ನೀಡಬೇಕೆಂದೂ ಹಾಗೂ ಕಲಿದೇವರ ನಂದಾದೀಪ ಮತ್ತು ನರಸಿಂಹದೇವರ ನಂದಾದೀಪ ನಡೆಸಬೇಕೆಂದೂ ಸೂಚಿಸಲಾಗಿದೆ. ಈ ಧರ್ಮದ ಫಲ ಸ್ವಾರಸ್ಯಕರವಾಗಿದೆ. ಅಂದರೆ ಈ ಧರ್ಮದ ಫಲ ಅತ್ತೆ ಕೇತಬ್ಬರಸಿ ಮತ್ತು ಪತ್ನಿ ನಾಗಿಯಾಂಡರಸಿಗೆ ಸಮಭಾಗ ಸಲ್ಲಬೇಕೆಂದು ತಿಳಿಸಲಾಗಿದೆ.

ಇಲ್ಲಿದ್ದ ಲಕ್ಷ್ಮೀನಾರಯಣ ದೇವರ ಗುಡಿಯು ಕ್ರಿಯಾಶೀಲವಾಗಿತ್ತೆಂದು ಶಾಸನ ತಿಳಿಸುತ್ತದೆ. ಕ್ರಿ.ಶ. ೧೬೦೦ ಶಾಸನ[೨೪] ಪ್ರಕಾರ, ಚಾಲುಕ್ಯ ಜಗದೇವಕಮಲ್ಲನ ಸಾಮಂತ

ವೀರಪಾಂಡ್ಯನು ಕದಂಬಳಿಗೆ ೧೦೦೦೦, ಬಲ್ಲಕುಂದೆ ೩೦೦, ಕೋಗಳಿ ೫೦೦ನ್ನು ಆಳುತ್ತಿದ್ದಾಗ ಬಾಳ್ಗುಳಿಯ ಮಹಾಜನರ ಸಮ್ಮುಖದಲ್ಲಿ ಮಾಳಪ್ಪಮ್ಯನ ಮಗ ಚಿದ್ದಣ್ಣನ ಪತ್ನಿ ಧರ್ಮವ್ವೆ ಸ್ಥಾಪಿಸಿದ ಲಕ್ಷ್ಮಿನಾರಾಯಣದೇವರ ಪೂಜಾರ್ಥವಾಗಿ ಭೂದಾನ ನೀಡಿದ್ದು, ಅದರ ಉತ್ಪತ್ತಿಯಲ್ಲಿ ಪುರಾಣ ಹೇಳುವವನಿಗೆ ಶಾಸ್ತ್ರವ್ಯಾಖ್ಯಾನ ಮಾಡುವವನಿಗೆ ಮತ್ತು ಅಗ್ರಾಸನದ ಬ್ರಾಹ್ಮಣ ಭೋಜನಕ್ಕೆ ವ್ಯಯಿಸಬೇಕೆಂದು ಹೇಳಲಾಗಿದೆ.

ಕ್ರಿ.ಶ. ೧೧೭೧ರ ಮಾಡಲಗೇರಿ ಶಾಸನ[೨೫] ಬಾಗಳಿ ಐವತ್ತು ಮಹಾಜನರ ಸನ್ನಿಧಿಯಲ್ಲಿ ಕಂನಗೌಡನು ಮಿಂಡಹಳ್ಳಿಯನ್ನು ಕ್ರಯವಾಗಿ ಕೊಂಡು ಮಿಂಡೇಶ್ವರ ದೇವರಿಗೆ ದಾನ ನೀಡಿದ್ದನ್ನು ದಾಖಲಿಸಿದೆ.

ಕ್ರಿ.ಶ. ೧೧೮೮ರ ಶಾಸನ[೨೬] ಪ್ರಕಾರ ಬಾಳ್ಗುಳಿಯ ಮಹಾಜನರು ದಾಸೆಯನಾಯಕನ ಕೆರೆಯ ಧರ್ಮಕ್ಕ ಒಂದು ಮತ್ತರು ಭೂಮಿ ಬಿಟ್ಟರೆಂಬುದು ನೀರಾವರಿಗೆ ನೀಡಿದ್ದ ಮಹತ್ವವನ್ನು ಅರಿಯಲು ನೆರವಾಗುತ್ತದೆ.

ಕಾಳಿಮಯ್ಯನೆಂಬಾತ ಬಾಗಳಿಯ ಬ್ರಾಹ್ಮಣರ ಭೋಜನಕ್ಕೆ, ಬಾವಿಗೆ ಮತ್ತು ಸತ್ರಕ್ಕೆ ಭೂದಾನ ನೀಡಿದ ಉಲ್ಲೇಖವನ್ನು ದೇವಾಲಯದ ತೃಣಿತ ಶಾಸನದಲ್ಲಿ ಕಾಣಬಹುದು.[೨೭] ಹಾಗೆಯೇ ಕಾಲದ ಉಲ್ಲೇಖವಿಲ್ಲದ ಶಾಸನವೊಂದು[೨೮] ವೀರಕೇಶವ ದೇವಾಲಯ ಮಂಟಪದಲ್ಲಿದ್ದು, ವೀರಕೇಶವ ದೇವರ ಪುರಾಣವೃತ್ತಿಗೆ ಆರು, ಅಯಿಂದ್ರಕ್ಕೆ (ಇಂದ್ರನ ಪೂಜೆ) ನಾಲ್ಕು ಹೊನ್ನನ್ನು ನೀಡುವಂತೆ ವ್ಯವಸ್ಥೆ ಮಾಡಲಾಗಿತ್ತೆಂದು ಉಲ್ಲೇಖಿಸುತ್ತದೆ.

ಈ ಅಗ್ರಹಾರದ ಜೀರ್ಣೋದ್ಧಾರಕ್ಕೆ ಗಮನಹರಿಸಿದ್ದನ್ನು ಹೊಯ್ಸಳ ವೀರಬಲ್ಲಾಳ ಶಾಸನದಲ್ಲಿ ದಾಖಲಿಸಿದೆ. ಅದರಂತೆ ಕ್ರಿ.ಶ. ೧೧೯೩ರ ವೀರಬಲ್ಲಾಳನ ಶಾಸನ[೨೯] ಆತನು ಬಾಳ್ಗುಳಿಯ ನೆಲೆವೀಡಿನಲ್ಲಿದ್ದಾಗ ಅಲ್ಲಿಯ ಕಲಿದೇವಸ್ವಾಮಿ ಅಂಗಭೋಗ ರಂಗಭೋಗ ಖಂಡಸ್ಫುಟಿತ ಜೀರ್ಣೋದ್ಧಾರಕ್ಕೆ ಬ್ರಾಹ್ಮಣರ ಅಗ್ರಾಸನಕ್ಕೆಂದು ಅಲ್ಲಿಯ ಐವತ್ತು ಮಹಾಜನರ ಕಾಲನ್ನು ತೊಳೆದು ನಂದಿಬೇಹೂರ ಸೀಮೆಯ ಸಮಸ್ತ ಭೂಮಿಯನ್ನು ನೀಡಿದನೆಂದು ತಿಳಿಸುತ್ತದೆ.

ಕ್ರಿ.ಶ. ೧೨೦೯ರ ಶಾಸನ[೩೦] ಮಹಾಗ್ರಹಾರ ಬಾಳ್ಗುಳಿಯ ಬೆಣ್ಣಯ ನಾರಾಯಣ ಪಣಂಗಿಯರ ಪುತ್ರ ಸುಪರ್ಣ ವೇಗಾಮೃತ ಪಟವರ್ಧನ ದೀಕ್ಷಿತ ಸೋಮಯಾಜ್ಯರು ತಾವು ಪ್ರತಿಷ್ಟೆ ಮಾಡಿದ ಸುಪರ್ಣವೇಗಾಮೃತೇಶ್ವರ ದೇವರ ಅಂಗಭೋಗ ರಂಗಭೋಗಕ್ಕೆ ಕಲಿದೇವರ ಸನ್ನಿಧಿಯಲ್ಲಿ ಭೂದಾನ ನೀಡಿದ್ದನು ಜೊತೆಗೆ ಬೆಣ್ಣಯ ಹಯಣ್ಣಗಳ ಪುತ್ರ ಚಾಮಣ್ಣ ತಾನು ಪ್ರತಿಷ್ಟೆ ಮಾಡಿದ ಶ್ರೀ ಮಲ್ಲಿಕಾರ್ಜುನ ದೇವರಂಗ ಭೋಗಕ್ಕೆಂದು ತೋಟದ ಭಾಗ ದಾನ ನೀಡಿದ್ದನ್ನು ದಾಖಲಿಸಿದೆ.

ಕ್ರಿ.ಶ. ೧೨೧೨ರ ಶಾಸನ[೩೧] ಮಹಾಮಂಡಳೇಶ್ವರ ಕೊಟ್ಟೂರ ನಾಚಿದೇವನ ಮೊಮ್ಮಗ ಹರಿದೇವನ ಪುತ್ರನಾದ ಶ್ರೀ ಮನ್ಮಾಹಮಂಡಳೇಶ್ವರ ವೀರಜಗದಾಳ ಬಂಮ್ಮಿದೇವರನು ತವಮ್ಮಾರಾಧ್ಯರರಸಿಯ ಬೀಡಿನ ಸೋಮಯಾಜ್ಯ ಹಿರಿಯಂಣ್ಣಂಗಳ ಸನ್ನಿಧಿಯಲ್ಲಿ ಕಲಿದೇವರ ಅಂಗರಂಗ ಭೋಗಕ್ಕೆಂದು ನಂದಿಬೇಹೂರ ಸಮಸ್ತ ಭೂಮಿಯನ್ನು ಸರ್ವಾಬಾಧೆ ಪರಿಹಾರವಾಗಿ ನೀಡಲಾಗಿತ್ತೆಂದು ಉಲ್ಲೇಖಿಸಿದೆ. ಕ್ರಿ.ಶ. ೧೨೨೮ರ ಶಾಸನವು ಇಮ್ಮಡಿ ನರಸಿಂಹನ ದಂಡನಾಯಕ ಬಮ್ಮಯ್ಯ ದಂಡನಾಯಕನು ಬಾಗಳಿಯ ಕಲಿದೇವರಿಗೆ ದಾನ ನೀಡಿದ್ದನು.

ಹೀಗಿರಲು ಕ್ರಿ.ಶ. ೧೨೩೧ರ[೩೨] ಶಾಸನ ಪ್ರಕಾರ ಮಹಾಜನರು ಬಾಗಳಿಯ ಬ್ರಾಹ್ಮಣರಿಗೆ ಗ್ರಾಮ ಸ್ವಾಮ್ಯದಿಂದ ವಿನಾಯಿತಿ ನೀಡುತ್ತಾರೆ. ಇದು ಶಾಸನದಲ್ಲಿ ಉಕ್ತವಾಗಿರುವುದು ಹೀಗಿದೆ : 'ಗ್ರಾಮ ಸಮಯ ಯೀ ದಿನಂ ಮೊದಲಾಗಿ ಬ್ರಾಹ್ಮಣರಿಗೆ ಸಾಮ್ಯ ವಡಿಕೆಯಿಲ್ಲ ವ್ರಿತ್ತಿ ವ್ಯವಹಾರವಿಲ್ಲ ಇದನ್ನು ಮೀರಿದವ ಗ್ರಾಮ ದ್ರೋಹಿ' ಎಂದು ಕ್ರಿ.ಶ. ೧೨೩೨ರ[೩೩] ಶಾಸನ ಬಗಳಿಯ ಐವತ್ತು ಮಹಾಜನರು ಬ್ರಹ್ಮಾನಂದ ದೇವನ ಶಿಷ್ಯನಾದ ಮನೋಹರದೇವರಿಗೆ ಮನೆ ಹಾಗೂ ಭೂಮಿದಾನ ನೀಡಿದರೆಂದು ಹೇಳುತ್ತದೆ. ಅಲ್ಲದೆ ವೀರನರಸಿಂಹ ಬಾಳ್ಗುಳಿಯ ಕಲಿದೇವರಿಗೆ ೪೪೨ ತಮ್ಮ ಗದ್ದೆ ಬಿಟ್ಟದ್ದನ್ನು ತಿಳಿಸುತ್ತದೆ. ಅದೇ ಶಾಸನದಲ್ಲಿ ಅಂಗಡಿ ಕಾಳಯ್ಯ ಎಂಬಾತ ತನ್ನ ಮಗಳು ಜಾತಿ ಸಂಕರ ಮಾಡಿದಾಗ ಬಾಳ್ಗುಳಿಯ ಐವತ್ತು ಮಹಾಜನರು ಮತ್ತು ಹೆಗ್ಗಡೆ ಮಲ್ಲಯ್ಯ ಗೋಪಯ್ಯನ ಸಮ್ಮುಖದಲ್ಲಿ ಕಲಿದೇವರಿಗೆ ದಂಡವಾಗಿ ಭೂದಾನ ನೀಡಿದ್ದನ್ನು ದಾಖಲಿಸಲಾಗಿದೆ. ಈ ಶಾಸನದಿಂದ ಜಾತಿ ಕಟ್ಟಳೆ ಹಾಗೂ ಮೀರಿದವರು ತೆರಬೇಕಾದ ದಂಡದ ಬಗ್ಗೆ ಮಾಹಿತಿ ದೊರೆತಿದೆ. ಮಿಗಿಲಾಗಿ ಅಗ್ರಹಾರದ ಆಡಳಿತ ನಿರ್ವಹಿಸುವಲ್ಲಿ ತೋರಿದ ಬೇಜವಾಬ್ದಾರಿಯಿಂದಾಗಿ ಬ್ರಾಹ್ಮಣರಿಗೆ ನೀಡಿದ ಅಧಿಕಾರವನ್ನು ಹಿಂತೆಗೆದುಕೊಂಡದ್ದು ಸ್ಪಷ್ಟವಾಗಿದೆ.

ಇಷ್ಟಾದರೂ ಕ್ರಿ.ಶ. ೧೨೪೬ರ ಶಾಸನ[೩೪] ಸದಾಶಿವ ದೇವರ ಅಂಗರಂಗಭೋಗಕ್ಕೆ ಬಾಗಳಿಯ ಮಹಾಜನರು ಗೋಪಣನ ಮಗ ಸದಾಶಿವ, ವಿಠಣ್ಣ, ನಾಚಣ್ಣ ಕೊಳಗದ ಚವುಡಯ್ಯ ಸೇರಿ ಭೂದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ.

ಕೊನೆಯದಾಗಿ ಈ ಅಗ್ರಹಾರ ನಶಿಸಿದ ಬಗ್ಗೆಯೂ ಸ್ಥೂಲವಾಗಿ ಮಾಹಿತಿ ಇದೆ. ಕ್ರಿ.ಶ. ೧೨೮೭ ಶಾಸನ[೩೫]

ಪ್ರಕಾರ, ಬಾಗಳಿಯ ಮಹಾಜನರು ಬಿದಿರಹಳ್ಳಿಯ ಸ್ವಾಮಿದೇವರಿಗೆ ತೋಟ ಗದ್ದೆ ನೀಡಿದರು.

ಕ್ರಿ.ಶ. ೧೨೯೧೧ರ[೫೬] ಶಾಸನದಲ್ಲಿ ಉಕ್ತವಾಗಿರುವಂತೆ ಬಾಗಳಿಯ ಮಹಾಜನರು ವಿಷ್ಣುಗೈಸರಿಗೆ ತೋಟ ದಾನ ಮಾಡಿದರು. ಕ್ರಿ.ಶ. ೧೩೩೬ ಶಾಸನದಂತೆ ಮಹಾಜನರು ಭೂಮಿ ಮತ್ತು ಮನೆಯನ್ನು ಆತ್ಮಾರಾಮ ಸ್ವಾಮಿಗೆ ನೀಡಿದರು. ಜೊತೆಗೆ ವೀರನರಸಿಂಹನ ದಂಡನಾಯಕ ಚಾರ್ವಾಡಯ್ಯನು ಕಲಿದೇವರಿಗೆ ಭೂದಾನ ಮಾಡಿದ. ಅಲ್ಲದೆ ಐವತ್ತು ಮಹಾಜನರು ಮತ್ತು ಕುಮಾರ ಪಂಡಿತಯ್ಯ ಜೊತೆಗೂಡಿ ಅಪ್ಪರಸ, ಹಿರಿಯಣ್ಣ ಮತ್ತು ಜ್ಞಾನಿನಿಧಿಮಯ್ಯನಿಗೆ ಭೂದಾನ ನೀಡಿದರು.

ಒಟ್ಟಿನಲ್ಲಿ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು ಹೊಯ್ಸಳರ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಹರಿಶ್ಚಂದ್ರ ದತ್ತಿ ಅಗ್ರಹಾರ–ಬಾಗಳಿ ಚಕ್ರವರ್ತಿಯ ಕೃಪೆಗೆ ಪಾತ್ರವಾಗಿತ್ತು. ಅಂದರೆ ಆತನ ಸಾಮಂತರು, ದಂಡನಾಯಕರು, ಅಧಿಕಾರಿಗಳು ಸರ್ವರೀತಿಯಲ್ಲೂ ಈ ಅಗ್ರಹಾರದ ಸರ್ವತೋಮುಖ ಬೆಳವಣಿಗೆಗೆ ಪೂರಕವಾದ ಚಟುವಟಿಕೆಗಳಿಗೆ ಉತ್ತೇಜನ ನೀಡಿದ್ದರು. ವಿದ್ಯಾರ್ಥಿಗಳು, ಬ್ರಾಹ್ಮಣರು ಜ್ಞಾನಾರ್ಜನ ಮತ್ತು ದೇವತಾಕಾರ್ಯದಲ್ಲಿ ತೊಡಗಿದ್ದರು. ವಿವಿಧ ವರ್ಗದ ಜನ ಕಲಿದೇವರಿಗೆ ನಿಷ್ಠೆಯಿಂದಿದ್ದರು. ಆದರೆ ಸಮಾಜದ ಕಟ್ಟಳೆ ಮೀರಿ ನಡೆದಲ್ಲಿ ಅವರನ್ನು ಸಮಾಜದಿಂದ ಬಹಿಷ್ಕರಿಸುವ ನಿಯಮ ಇತ್ತೆಂದು ಗೊತ್ತಾಗುತ್ತದೆ. ವಿಜಯನಗರ ಸಾಮ್ರಾಜ್ಯ ಉದಯಿಸುವ ವೇಳೆಗೆ ಬಾಗಳಿ ಅಗ್ರಹಾರದ ಅಸ್ತಿತ್ವ ಉಡುಗಿದ್ದರೂ ಕಲಿದೇವರ ಆರಾಧನೆ ಯಾವುದೇ ಅಡತಡೆಗಳಿಲ್ಲದೆ ಮುಂದುವರಿದಿತ್ತೆಂಬುದು ಮನವರಿಕೆಯಾಗುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ–೧,** ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ೯೨.
೨. ಅದೇ., ಹರಪನಹಳ್ಳಿ ೯೪.
೩. ಅದೇ., ಹರಪನಹಳ್ಳಿ ೧೩೦.
೪. ಅದೇ., ಹರಪನಹಳ್ಳಿ ೧೨೬.
೫. ಅದೇ., ಹರಪನಹಳ್ಳಿ ೯೬.
೬ ಅದೇ., ಹರಪನಹಳ್ಳಿ ೧೩೬.
೭. ಅದೇ., ಹರಪನಹಳ್ಳಿ ೯೯.
೮. ಅದೇ., ಹರಪನಹಳ್ಳಿ ೧೩೨.
೯. ಅದೇ., ಹರಪನಹಳ್ಳಿ ೧೦೦.
೧೦. ಅದೇ., ಹರಪನಹಳ್ಳಿ ೧೦೨.
೧೧. ಅದೇ., ಹರಪನಹಳ್ಳಿ ೧೦೩.
೧೨. ಅದೇ., ಹರಪನಹಳ್ಳಿ ೧೦೫.
೧೩. ಅದೇ., ಹರಪನಹಳ್ಳಿ ೧೮೦.
೧೪. ಅದೇ., ಹರಪನಹಳ್ಳಿ ೧೮೧.
೧೫. ಅದೇ., ಹರಪನಹಳ್ಳಿ ೧೨೭.
೧೬. ಅದೇ., ಹರಪನಹಳ್ಳಿ ೧೦೬.
೧೭. ಅದೇ., ಹರಪನಹಳ್ಳಿ ೧೦೭.
೧೮. ಅದೇ., ಹರಪನಹಳ್ಳಿ ೧೨೯.
೧೯. ಅದೇ., ಹರಪನಹಳ್ಳಿ ೧೦೮.
೨೦. ಅದೇ., ಹರಪನಹಳ್ಳಿ ೧೧೦.
೨೧. ಅದೇ., ಹರಪನಹಳ್ಳಿ ೧೧೨.
೨೨. ಅದೇ., ಹರಪನಹಳ್ಳಿ ೧೧೪.
೨೩. ಅದೇ., ಹರಪನಹಳ್ಳಿ ೧೧೫.
೨೪. ಅದೇ., ಹರಪನಹಳ್ಳಿ ೧೮೪.
೨೫. ಅದೇ., ಹರಪನಹಳ್ಳಿ ೯೨.
೨೬ ಅದೇ., ಹರಪನಹಳ್ಳಿ ೧೧೯.
೨೭. ಅದೇ., ಹರಪನಹಳ್ಳಿ೧೨೮.
೨೮. ಅದೇ., ಹರಪನಹಳ್ಳಿ ೧೮೩.
೨೯. ಅದೇ., ಹರಪನಹಳ್ಳಿ ೧೧೬.
೩೦. ಅದೇ., ಹರಪನಹಳ್ಳಿ ೧೨೯.
೩೧. ಅದೇ., ಹರಪನಹಳ್ಳಿ ೧೧೭.
೩೨. ಅದೇ., ಹರಪನಹಳ್ಳಿ ೧೩೫.
೩೩. ಅದೇ., ಹರಪನಹಳಿ ೧೩೫.
೩೪. ಅದೇ., ಹರಪನಹಳ್ಳಿ ೧೩೮.
೩೫. ಅದೇ., ಹರಪನಹಳ್ಳಿ ೧೩೩.
೩೬ ಅದೇ., ಹರಪನಹಳ್ಳಿ ೧೩೩.



# ಕಾಳಾಮುಖ ಪರಂಪರೆಯ ಸೂಡಿಯ ಕಳಕೇಶ್ವರ ಯತಿಗಳು

ಡಾ. ಮಲ್ಲಿಕಾರ್ಜುನ ಕುಂಬಾರ*

ಶೈವ ಯತಿಗಳ ಕಾಳಾಮುಖ ಸಂಪ್ರದಾಯವು ೧೧, ೧೨ ಹಾಗೂ ೧೩ನೆಯ ಶತಮಾನದ ಪೂರ್ವಾರ್ಧದವರೆಗೆ ಕನ್ನಡ ನಾಡಿನಲ್ಲಿ ನೆಲೆಸಿತ್ತು. ಅವರು ನಾಡಿನ ತುಂಬೆಲ್ಲಾ ಪ್ರಭಾವಶಾಲಿಗಳಾಗಿದ್ದರು. ದುರ್ದೈವದ ಸಂಗತಿ ಎಂದರೆ ಅವರ ನಂಬಿಕೆ ಹಾಗೂ ಮತಾಚಾರಗಳನ್ನು ಕುರಿತು ಶಾಸನಗಳಿಂದ ಹೆಚ್ಚಿನ ಹೆಚ್ಚಿನದೇನೂ ತಿಳಿದುಬರುವುದಿಲ್ಲ. ಕಾಳಾಮುಖ ಸಂಪ್ರದಾಯದಲ್ಲಿ ಶಕ್ತಿಪರಿಷೆ ಹಾಗೂ ಸಿಂಹಪರಿಷೆಗಳು ಎಂಬ ಎರಡು ಮುಖ್ಯ ಶಾಖೆಗಳಿದ್ದವು. ಇದರಲ್ಲಿ ಸಿಂಹಪರಿಷೆ ಶಾಖೆಯು ಆಂಧ್ರ-ಕರ್ನಾಟಕ ಪ್ರಾಂತಗಳ ವಿಸ್ತೃತ ಭೂಭಾಗದಲ್ಲಿ ಕಂಡುಬಂದರೆ, ಶಕ್ತಿ ಪರಿಷೆಯು ಹೆಚ್ಚಾಗಿ ಧಾರವಾಡ, ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸೀಮಿತಗೊಂಡಿದ್ದಿತು.[೧]

**ಕಾಳಾಮುಖರೆಂದರೆ ಯಾರು?** ಶಾಸನಗಳು ಇವರನ್ನು ಪರಮಾಪ್ತಗಮ, ಅಸಿತವಕ್ತ್ರ, ಮಹಾಕಾಲ ಎಂದು ಕರೆದಿವೆ. ಶಿವನ ೫ ಮುಖಗಳು ಕಲೆಗೆ ಸಂಬಂಧಿಸಿವೆಯೇ ಅವು ಕಲಾಮುಖ, ಈ ಕಲಾಮುಖಗಳನ್ನು ಅನುಷ್ಠಾನ ಮಾಡುವವರು ಕಾಳಾಮುಖರು ಎಂದು ಹೆಸರು. ಅವುಗಳೆಂದರೆ ಪರಾಶಕ್ತಿ, ಆದಿಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ ಮತ್ತು ಕ್ರಿಯಾಶಕ್ತಿಗಳು. ಈ ತತ್ವಗಳನ್ನೆ ಎತ್ತಿಹಿಡಿದು ಲಿಂಗಪೂಜೆಯನ್ನು ಮುಂದೆ ತಂದ ಖ್ಯಾತಿ ಕಾಳಾಮುಖ ಮತ್ತು ಪಾಶುಪತರಿಗೆ ಸಲ್ಲುತ್ತದೆ. ಇವರಿಂದಲೇ ಲಿಂಗವೆಂಬುದು ಶಿವನ ರೂಪ, ಜ್ಯೋತಿ ಸ್ತಂಭ ಎಂಬ ಅಭಿಪ್ರಾಯ ಎತ್ತಿಹಿಡಿಯಲ್ಪಟ್ಟಿತು. ಅವರ ಪ್ರತಿಯೊಂದು ಶಾಸನಗಳು "ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈಲೋಕ್ಯ ನಗರಾರಂಭ ಮೂಲ ಸ್ತಂಭಾಯ ಶಂಭುವೇ ॥" ಎಂದು ಆರಂಭವಾಗುತ್ತದೆ. ಈ ಮತವು ಹೇಗೆ ಭೂಮಿಗಿಳಿದು ಬಂದಿತು ಎಂಬುದರ ಬಗ್ಗೆ 'ಪಂಪಾಮಹಾತ್ಮೆ' ಎಂಬ ಗ್ರಂಥದಲ್ಲಿ ಬಹಳಷ್ಟು ವಿವರಗಳಿವೆ.[೨]

"ಕಾಪಾಲಿಕರು ಸಂಪೂರ್ಣವಾಗಿ ವಾಮಾಚಾರಿಗಳ ಪಂಥವಾದರೆ, ಕಾಳಾಮುಖರದ್ದು ಶುದ್ಧಸಾತ್ವಿಕಾಚರಣೆ ಪಂಥ' ಎಂದು ಸಂಶೋಧಕರಾದ ಡಾ. ಎಂ. ಚಿದಾನಂದಮೂರ್ತಿ ಅಭಿಪ್ರಾಯಪಡುತ್ತಾರೆ. ಶಿವ ಹಾಗೂ ಶಕ್ತಿಯ, ಭೈರವ ಮತ್ತು ಮಹಾಕಾಳಿಯ ಅವತಾರಗಳ ನಿಷ್ಠಾವಂತ ಆರಾಧಕರು. ಹಾಗೂ ಉದ್ದಾಮ ಪಂಡಿತರು ಇವರ ಪೂಜಾವಿಧಾನ ಮತ್ತು ಧಾರ್ಮಿಕ ಜೀವನವು ಬಹಳಷ್ಟು ಕಠೋರವಾದದ್ದರಿಂದ ಸಾಮಾನ್ಯ ಜನರಿಗೆ ಅವು ಹಿಡಿಸುವುದಿಲ್ಲ. ಇಂದ್ರಿಯ ನಿಗ್ರಹವನ್ನು ಸಾಧಿಸಿದವನಿಗೆ ಮಾತ್ರ ಇವರ ಮಾರ್ಗ ಹಿಡಿಸುತ್ತದೆ. ಪಾಶುಪಾತರು ಹಣೆಗೆ ಬಿಳಿಗೆರೆಯ ಭಸ್ಮವನ್ನು ಧರಿಸಿದರೆ, ಅದಕ್ಕೆ ವಿರುದ್ಧವಾಗಿ ಕಾಳಾಮುಖರು ಭೈರವನ ಸಂಕೇತವಾದ ಕಪ್ಪು ಗೆರೆಗಳನ್ನು ಹಣೆಗೆ ಬಳಿದುಕೊಳ್ಳುತ್ತಿದ್ದರು.[೩] ಶಾಸನಗಳು ಇವರನ್ನು 'ತಪೋಧನ' ಎಂದು ಕರೆದಿವೆ.

ಗದಗ ಜಿಲ್ಲೆಯ ಕಾಳಾಮುಖರ ಪ್ರಮುಖ ಸ್ಥಾನ ವಾಗಿದ್ದ ರೋಣ ತಾಲ್ಲೂಕಿನ ಪರ್ವತಾವಳಿಯಲ್ಲಿ ಬರುವ 'ಸೂಡಿ' ಎಂಬ ಊರಿನ ಶಾಸನಗಳಲ್ಲಿ ಕಳಕೇಶ್ವರ ಯತಿಯ ಹೆಸರು ಬರುತ್ತದೆ. ಕಳೇಶ್ವರ ದೇವ, ಕಳೇಶ್ವರ ಬ್ರತಿಪತಿ, ಕಳೇಶ್ವರ ಬ್ರತಿರಾಜ, ಕಳೇಶ್ವರ ಬ್ರತೀಂದ್ರ, ಕಳೇಶ್ವರ ರಾರ್ಯ್ಯ, ಕಳೇಶ್ವರಾಚಾರ್ಯ ಹಾಗೂ ಕಳೇಶ್ವರ ಸೈದ್ಧಾಂತಿ,[೪] ಎಂಬ ಹಲವಾರು ಹೆಸರುಗಳಿಂದ ಆ ಶಾಸನಗಳು ಇವರನ್ನು ಮನದುಂಬಿ ವರ್ಣಿಸುತ್ತವೆ.

೧೨ನೆಯ ಶತಮಾನ ಸಿಂದಅರಸರ ರಾಜಧಾನಿ ಯರಂಬರವಿಗೆ (ಯಲಬುರ್ಗಿ) ಮೂಲಸ್ಥಾನ ಶಿಂಗೇಶ್ವರ, ರಾಜೇಶ್ವರ, ಚೌಡೇಶ್ವರ, ವಿಕ್ರಮೇಶ್ವರ ದೇಗುಲಗಳ ಮಠದ ಆಚಾರ್ಯತ್ವವನ್ನು ಈ ಯತಿಗಳು ಹೊಂದಿದ್ದರು. ಇವರು ಮಹಾಮಂಡಳೇಶ್ವರ ಚಾವುಂಡರಾಯನಿಗೆ ರಾಜಗುರು ಗಳಾಗಿದ್ದರು. ಸೂಂಡಿಯ ವ್ಯಾಪಾರಸ್ಥರ ದೈವವಾದ ನಗರೇಶ್ವರ ದೇವಾಲಯದ ಕಾಳಾಮುಖರಲ್ಲಿ ಆಚಾರ್ಯರಾಗಿ

* 'ವಚನ', ರೋಣ ತಾಲ್ಲೂಕು, ಗದಗ ಜಿಲ್ಲೆ, ರಾಜೂರ-೫೮೨೨೩೦.

ಪ್ರಖ್ಯಾತರಾಗಿದ್ದರು.[೫] ಸಿಂದಾನ್ವಯ ಕಾಳಾಮುಖರಲ್ಲಿನ ಸಿಂಹ ಪರಿಷೆಯ ಕರ್ನಾಟಕ ಶಾಖೆಯ ಶಾಸನಗಳು ಇವರ ಯತಿ ಪರಂಪರೆಯನ್ನು ಮಳಿಯಾಳಪಂಡಿತ> ಜ್ಞಾನೇಶ್ವರ> ಸೋಮೇಶ್ವರ>ಶಾಂತರಾಶಿ>ಕಳೇಶ್ವರ,[೬] ಎಂದು ಹೇಳುತ್ತದೆ. ಸಿಂದ ಅರಸರ ಗುರುವಾದ ಇವರು ಶಾಂತಿಯನ್ನು ಹೊಂದಿ ಶೈವ ಸಿದ್ಧಾಂತವನ್ನು ಸ್ವೀಕರಿಸಿ, ಪಾಂಡಿತ್ಯ, ಸದ್ಗುಣಗಳಿಗೆ ಹೆಸರಾದ ಲೋಕ ಗುರುವಾಗಿದ್ದರು. ತಮ್ಮ ಪಾಂಡಿತ್ಯ ಹಿರಿಮೆಯಿಂದಾಗಿ ಇವರು 'ಸಿದ್ಧಾಂತಿ' ಎಂದು ಕರೆಯಲ್ಪಡು ತ್ತಿದ್ದರು.

ಕುಕನೂರಿನ ಮಹಾಮಾಯೆ ದೇವಾಲಯದ ಶಾಸನ ದಲ್ಲಿ 'ಶ್ರೀಮನ್ಮಹಾಮಂಡಳೇಶ್ವರ ಚಾವುಂಡ ನಗರೇಶ್ವರರಿಗೆ ಗುರುಗಳು ವಿಖ್ಯಾತಿಯಂ ತಾಳಿದ್ದರ್ ॥ ಸ್ಥಿರಮತಿ ಸೂಂಡಿಯ ನಗರೇಶ್ವರ ಕಾಳಾಮುಖನ್ವಯ ಮಾನ್ಯಾವಳಿಯೊಳು ದೊರೆ ವೆತ್ತ ಮುನಿಶ್ವರರೊಳ್ದೆರೆವೆತ್ತಂ ಶ್ರೀಕಳೇಶ್ವರ ಬ್ರಿತಿರಾಜಂ ॥"[೭] ಎಂದು ಹೊಗಳಲಾಗಿದೆ. ಇವರು ಅರಿಯದ ವಿದ್ಯೆಯೇ ಇರಲಿಲ್ಲ "ಅಜ್ಞಾಧರನೆನೆ ಧರೆ ಮಂತ್ರಜ್ಞಂ ತ್ರೈಕಾಲದರ್ಶಿಯೆನೆ ಧಾರಣೆ ದೈವಜ್ಞಂ ಶೈವಾಗಮ ಸರ್ಬ್ಬಜ್ಞಂ ಶ್ರೀರಾಜ ಗುರು ಕಳೇಶ್ವರ ದೇವಂ ॥ ತಜ್ಞರ್ಪ್ಪರೀಕ್ಷಿಸಲು ಶಬ್ದಜ್ಞಂ ಶಾಸ್ತ್ರಜ್ಞಂ ನಖಿಳತರ್ಕಜ್ಞಂ ಕಾವ್ಯಜ್ಞಂ ದೈವಜ್ಞಂ ಸಬ್ಬಜ್ಞಂ ಶ್ರೀ ರಾಜಗುರು ಕಳೇಶ್ವರ ದೇವಂ"೮ ಎಂದು ಹೊಗಳಲಾಗಿದೆ. ಇದರಲ್ಲಿ ಬಹಳಷ್ಟು ಸಲ ಶೈವಾಗಮ ಸರ್ವಜ್ಞ ಶ್ರೀ ರಾಜಗುರು ಕಳೇಶ್ವರ ದೇವಂ, ಎಂದು ಬಣ್ಣಿಸಲಾಗಿದೆ.

ಕರ್ನಾಟಕ ತಾಂತ್ರಿಕ ಪಂಥದ ಶೋಧನೆಗೆ ಕುಕ್ಕನೂರು ಒಂದು ಕೇಂದ್ರ ಸ್ಥಾನ. ಇಲ್ಲಿರುವ ಜೇಷ್ಠಾದೇವಿಗೆ ಅಗ್ರಹಾರದ ಬ್ರಾಹ್ಮಣರು ಭಯದಿಂದ ಗಡಗಡ ನಡುಗುತ್ತಿದ್ದರು. ಈಕೆ ಮಹಾ ಪ್ರಳಯಾಂಬೆ, "ಆಕೆಯ ಗಸಣೆಯೇ ಬೇಡವೆಂದು ದ್ವಿಜರು ಅಳ್ಕುತಿರ್ಪರು" ಎಂದು ಶಾಸನಗಳು ಹೇಳುತ್ತವೆ. ಕ್ರಿ.ಶ. ೧೫೬೧ರ ಶಾಸನವು ಜೇಷ್ಠಾದೇವಿಯ ಮಹಾಲಕ್ಷ್ಮಿ ಯಾಗಿ ನಂತರ ಮಹಾಮಾಯೆಯಾದಳೆಂದು ಹೇಳುತ್ತದೆ.

ಇಂತಹ ಉಗ್ರದೇವತೆಗೆ ಸೂಡಿಯ ಕಾಳಾಮುಖ ಕಳಕೇಶ್ವರ ಯತಿಗಳು ಉಪಾಸಕರಾಗಿದ್ದರು. ಕುಕನೂರಿನ ಶಾಸನವು ಮುಂದುವರೆದು ಕಳಚೂರಿ ಅರಸ ಸಂಕಮದೇವನು ಮೊದೆಗನೂರು ನೆಲೆವೀಡಿನಲ್ಲಿದ್ದನು. ಆಗ ಇವನ ದಂಡನಾಯಕನಾದ 'ದನ್ನುಗಿ' ಕುಕನೂರ ಅಗ್ರಹಾರದ ದೊರೆ, ಈತನ ಸಂಕಲ್ಪದಂತೆ ಎಲ್ಲವೂ ಈಡೇರಿದಾಗ ರಾಜಗುರು ಕಳಕೇಶ್ವರರ ಪಾದ ತೊಳೆದು ಈ ಜೇಷ್ಠಾದೇವಿಗೆ ದಾನ ಕೊಡುತ್ತಾನೆ. ಅಲ್ಲಿನ ತಪೋಧನರ ಆಹಾರಕ್ಕೂ ಈ ದಾನ ಸಲ್ಲುತ್ತದೆ. ಹೀಗೆ ಅದ್ಭುತವಾದ ಮಾಹಿತಿಯನ್ನು ಒದಗಿಸುವ ತಾಂತ್ರಿಕ ಪಂಥದ ಜೊತೆಗೆ ಕಾಳಾಮುಖಕ್ಕಿದ್ದ ಸಂಬಂಧವನ್ನು ತಿಳಿಸುವ ಈ ಕುಕನೂರ ಶಾಸನವು (ಕ್ರಿ.ಶ. ೧೧೭೮)ವು ಅಧ್ಯಯನಕ್ಕೆ ಅಮೂಲ್ಯವಾದ ಆಕರವಾಗಿದೆ.[೯] ಕಳಕೇಶ್ವರ ಯತಿಗಳು ಈ ಭಾಗದಲ್ಲಿ ಸಂಚರಿಸಿರಬಹುದು. ಕಾಳಾಮುಖರ ತಾಣವಾದ ಸೂಡಿ ಪಕ್ಕದಲ್ಲಿ ಈ ಪರಂಪರೆಯ ಒಂದು ಭಾಗವಾದ ಇಟ್ಟಗಿ ಸಂತತಿಯಿಂದಲೇ 'ಇಟಗಿ' ಎಂಬ ಊರಿನ ಹೆಸರು ಬಂದಿರಬಹುದಾಗಿದೆ.

ಈವರೆಗೆ ಸೂಡಿಯಲ್ಲಿ ದೊರೆತ ೯ ಶಾಸನಗಳಲ್ಲಿ ಕಳಕೇಶ್ವರ ಯತಿಗಳಂತೆ ಸೋಮೇಶ್ವರ ಪಂಡಿತರು, ಕಲ್ಯಾಣಶಕ್ತಿ, ಶಿವಮೂರ್ತಿ ಶಿವಾಚಾರ್ಯರಂತಹ ಪಂಡಿತರಿದ್ದರೆಂದು ಉಲ್ಲೇಖಿತರಾಗಿದ್ದಾರೆ. ಕಳಕೇಶ್ವರರಂತೆ ಸೂಡಿ ಸೋಮೇಶ್ವರರು ಕೂಡಾ ಸೂಡಿಯ ನಾಗೇಶ್ವರ, ಅಚಲೇಶ್ವರ, ಪಂಚಲಿಂಗೇಶ್ವರ ದೇವಸ್ಥಾನಗಳ ಸ್ಥಾನಾಚಾರ್ಯರಾಗಿದ್ದರು. ಇವರು ಕಳಕೇಶ್ವರ ಪ್ರಕಾಂಡ ಪಂಡಿತರಾಗಿದ್ದರು. ಇವರು ಕಳಕೇಶ್ವರ ಯತಿಗಳಂತೆ ಪ್ರಕಾಂಡ ಪಂಡಿತರಾಗಿದ್ದರು. ಇವರನ್ನು ಎರಡನೆ ಶಿವನೆಂದು ಶಾಸನಗಳಲ್ಲಿ ವರ್ಣಿಸಲಾಗಿದೆ. ಅದೇ ರೀತಿ ಕಲ್ಯಾಣಶಕ್ತಿಯನ್ನು ಕೂಡಾ ಹೊಗಳಲಾಗಿದೆ. ಇದೆಲ್ಲವನ್ನು ಗಮನಿಸಿದಾಗ ಅಂದಿನ ಸೂಡಿ ಪಂಡಿತರ ವಾಸ ಸ್ಥಾನವಾಗಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕಾಪಾಲಿಕರು ಮತ್ತು ಕಾಳಾಮುಖರು – ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು,** ಮೂಲ : ಡಿ.ಎನ್. ಲಾರೆಂಜೆನ್, ಅನು: ವಿರೂಪಾಕ್ಷ ಕುಲಕರ್ಣಿ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೫, ಪುಟ ೧೫೧.

೨. **ಕರ್ನಾಟಕದಲ್ಲಿ ಲಾಕುಳ ಶೈವ ಜಕ್ಕಣಾಚಾರ್ಯರು,** ಡಾ. ವಸುಂಧರಾ ಫಿಲಿಯೋಜಾ, ಪುಟ ೧೭, ೧೯, ೨೩.

೩. **ಕಾಳಾಮುಖ ದರ್ಶನ,** ಎಸ್.ಎಸ್. ಹಿರೇಮಠ, ಸಮತಾ ಪ್ರಕಾಶನ ಹರಪನಹಳ್ಳಿ, ೨೦೦೪, ಪುಟ ೩೩.

೪. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨,** ಕೊಪ್ಪಳ ಜಿಲ್ಲೆ, ೧೯೯೯, ಪುಟ ೪೦೫.

೫. **ಕಾಳಾಮುಖ ದರ್ಶನ,** ಎಸ್.ಎಸ್. ಹಿರೇಮಠ, ಸಮತಾ ಪ್ರಕಾಶನ, ಹರಪನಹಳ್ಳಿ, ಪುಟ ೭೨.

೬. **ಕಾಪಾಲಿಕರು ಮತ್ತು ಕಾಳಾಮುಖರು, ಕಣ್ಮರೆಯಾದ ಎರಡು ಶೈವ ಸಂಪ್ರದಾಯಗಳು,** ಮೂಲ: ಡಿ.ಎನ್. ಲಾರೆಂಜೆನ್, ಅನು: ವಿರೂಪಾಕ್ಷ ಕುಲಕರ್ಣಿ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೫, ಪುಟ ೧೯೩.

೭. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨,** ಕೊಪ್ಪಳ ಜಿಲ್ಲೆ, ೧೯೯೯, ಯಲಬುರ್ಗಿ ತಾಲ್ಲೂಕು, ಕುಕನೂರು ಶಾಸನ, ೫೨.

೮. ಅದೇ ಶಾಸನ. ೯.**ಕಾಳಾಮುಖ ದರ್ಶನ,** ಎಸ್.ಎಸ್. ಹಿರೇಮಠ ಪುಟ ೭೨–೭೩.



# ಚಾಮರಾಜನಗರ ಜಿಲ್ಲೆಯ ಜೈನಧರ್ಮ

ಡಾ. ಬಿ.ಸಿ. ಸುರೇಶ*

ಕರ್ನಾಟಕಕ್ಕೆ ಜೈನಧರ್ಮವು ಕ್ರಿ.ಪೂ.ದಲ್ಲಿಯೇ ಬಂದಿತ್ತೆಂದು ಹಲವು ಆಧಾರಗಳಿಂದ ತಿಳಿದುಬರುತ್ತದೆ. ಜೈನಧರ್ಮದ ಇತಿಹಾಸವನ್ನು ಹೊಂದಿರುವ ಕರ್ನಾಟಕದ ದಕ್ಷಿಣ ಭಾಗಗಳಲ್ಲಿ ಚಾಮರಾಜನಗರ ಜಿಲ್ಲೆಯು ಒಂದು. ಈ ಜಿಲ್ಲೆಯು ನೈಸರ್ಗಿಕವಾಗಿ ಪ್ರಕೃತಿದತ್ತವಾದಂತಹ ಭಾಗಗಳಿಂದ ಕೂಡಿದೆ. ಕರ್ನಾಟಕ, ಕೇರಳ, ತಮಿಳುನಾಡು ಗಡಿಪ್ರಾಂತ್ಯದ ಆಯಾಕಟ್ಟಿನ ಸ್ಥಳಗಳನ್ನು ಹೊಂದಿದೆ. ಈ ಪ್ರದೇಶವನ್ನು ಗಂಗರು, ಚೋಳರು, ರಾಷ್ಟ್ರಕೂಟರು, ಹೊಯ್ಸಳರು, ವಿಜಯನಗರದ ದೊರೆಗಳು, ಉಮ್ಮತ್ತೂರು ಪಾಳೆಯಗಾರರು, ತೆರಕಣಾಂಬಿ ಪಾಳೆಯಗಾರರು, ಮೈಸೂರು ಅರಸರು ಪ್ರಮುಖವಾಗಿ ಆಳಿದವರಾಗಿದ್ದಾರೆ ಇಂತಹ ರಾಜರ, ಪ್ರಧಾನರ, ಸಾಮಂತರ, ದಂಡನಾಯಕರ ಪೋಷಣೆಯಲ್ಲಿ ಜೈನಾಚಾರ್ಯರ ಮಾರ್ಗದರ್ಶನದಲ್ಲಿ ಜೈನಧರ್ಮವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಇವುಗಳ ಕುರುಹಾಗಿ ಹಲವು ಶಾಸನಗಳು ದೊರೆತಿವೆ. ಈ ಜಿಲ್ಲೆಯ ಹಲವು ಗ್ರಾಮಗಳಲ್ಲಿ ಜೈನಬಸದಿಗಳು ನಿರ್ಮಾಣವಾಗಿವೆ. ಅನೇಕ ಜೈನ ಕವಿಗಳು ಸಾಹಿತ್ಯ ರಚನೆ ಮಾಡಿರುವುದು ಕಂಡು ಬರುತ್ತದೆ. ಈ ನಿಟ್ಟಿನಲ್ಲಿ ಚಾಮರಾಜನಗರ ಜಿಲ್ಲೆಯಲ್ಲಿ ಜೈನ ಧರ್ಮದ ಪ್ರಭಾವದ ಹಂತಗಳನ್ನು ಗುರುತಿಸಬಹುದು. ಜಿಲ್ಲೆಯಲ್ಲಿ ಹಲವು ಜೈನ ಶಾಸನಗಳಿವೆ. ಈ ಲೇಖನದ ಪ್ರಮುಖ ಉದ್ದೇಶವೆಂದರೆ ಈ ಜಿಲ್ಲೆಯಲ್ಲಿ ದೊರೆಯುವ ಜೈನ ಶಾಸನಗಳು ಹಾಗೂ ಬಸದಿಗಳ ಆಧಾರದ ಮೇಲೆ ಜಿಲ್ಲೆಯಲ್ಲಿದ್ದ ಜೈನಧರ್ಮ ಬಗ್ಗೆ ತಿಳಿಸುವುದೇ ಆಗಿದೆ.

ಗುಂಡ್ಲುಪೇಟೆಯ ಕ್ರಿ.ಶ. ೧೧೯೬ರ ಶಾಸನವೊಂದರಲ್ಲಿ ಹೊಯ್ಸಳ ವೀರಬಲ್ಲಾಳನನ್ನು ಸಮ್ಯಕ್ತ್ವ ಚೂಡಾಮಣಿ ಎಂದು ಕರೆಯಲಾಗಿದೆ. ಕುಡುಗನಾಡ ಸಮಸ್ತ ಪ್ರಭುಗಾವುಂಡಗಳು ತುಪ್ಪೂರ ಬಿಟ್ಟಿ ಜಿನಾಲಯಕ್ಕೆ ಮಡಹಳ್ಳಿಯನ್ನು ದತ್ತಿ ಬಿಟ್ಟಿದ್ದಾರೆ. ವಜ್ರನಂದಿ ಸಿದ್ಧಾಂತ ದೇವರ ಶಿಷ್ಯ, ನಾಗಪಂಡಿತರ ಮಗ ಕನಕನಂದಿಪಂಡಿತರ ಕಾಲು ತೊಳೆದು ಸಮಸ್ತಗಾವುಂಡರು ಜಿನಾಲಯದ ಜೀರ್ಣೋದ್ಧಾರ, ದೇವರ ಅಷ್ಟವಿಧಾರ್ಚನೆ ಮತ್ತು ಮುನಿಗಳ ಆಹಾರ ದಾನಕ್ಕೆ ದತ್ತಿ ಕೊಟ್ಟಿರುವುದನ್ನು ತಿಳಿಸುತ್ತದೆ. ಇದರ ಪಕ್ಕದಲ್ಲಿರುವ ಮತ್ತೊಂದು ಶಾಸನವು ಸಹ ವಿಜಯಪುರದ ಅನಂತದೇವರಿಗೆ ಕೆಲವು ಗೌಡಪ್ರಜೆಗಳು ದತ್ತಿಯನ್ನು ನೀಡಿರುವುದನ್ನು ತಿಳಿಸುತ್ತದೆ. ಶಾಸನ ದೊರೆತಿರುವ ತುಪ್ಪೂರು ಗ್ರಾಮದಲ್ಲಿ ಯಾವುದೇ ಬಸದಿ ಕಂಡುಬರುವುದಿಲ್ಲ. ಬಹುಶಃ ಬಸದಿ ಸಂಪೂರ್ಣವಾಗಿ ನಾಶವಾಗಿರಬಹುದು.

ಗುಂಡ್ಲುಪೇಟೆ ತಾಲ್ಲೂಕಿನ ರಾಘವಪುರದ ಕ್ರಿ.ಶ. ೧೩೨೦ರ ಶಾಸನವು ಜೈನಶಾಸನವಲ್ಲದಿದ್ದರೂ ಸಹ ಜೈನಧರ್ಮದ ಸ್ಥಿತಿಗತಿಯ ಪರಿಶೀಲನೆಗೆ ನೆರವಾಗಿದೆ. ಈ ಶಾಸನ ಹೊಯ್ಸಳ ಮುಮ್ಮಡಿ ವೀರಬಲ್ಲಾಳನ ಕಾಲಕ್ಕೆ ಸೇರಿದುದಾಗಿದೆ. ಇದರಲ್ಲಿ ಕೇತಯ ದಂಡನಾಯಕನು ದೊರೆಯಿಂದ ಗುಮ್ಮಟಹಳ್ಳಿ ಮತ್ತು ಮಾಡ್ರಹಳ್ಳಿಗಳನ್ನು ಪಡೆದುಕೊಂಡು ತನ್ನ ಬಳಿ ಶ್ರೀಕರಣನಾಗಿದ್ದ ನಾರಣ ದೇವಣ್ಣನಿಗೆ ದತ್ತಿಕೊಟ್ಟನು. ಇವೆರಡು ಹಳ್ಳಿಗಳು ಅಗ್ರಹಾರ ವಾಗಿ ಪರಿವರ್ತಿತವಾದವು. ಗೊಮ್ಮಟಹಳ್ಳಿಗೆ ನಾರಣದೇವಣ್ಣನ ತಂದೆ ರಾಘವಾದೇವನ ಹೆಸರಿನಲ್ಲಿ ರಾಘವಪುರ ಎಂದು ಹೆಸರಾಯಿತು.ಕೆಲಸೂರಿನಲ್ಲಿ ಪಾರ್ಶ್ವನಾಥ ಬಸದಿಯೊಂದಿದೆ. ಇಲ್ಲಿ ನಾಲ್ಕು ಶಾಸನಗಳಿವೆ. ಬಸದಿಯ ಉತ್ತರ ಭಾಗದಲ್ಲಿರುವ ಶಾಸನದಲ್ಲಿ ಆ ಬಸದಿಯನ್ನು ಸರ್ವಲೋಕಾಶ್ರಯ ಎಂದು ಕರೆದಿದೆ. ತಮಿಳಿನ ಶಾಸನದಲ್ಲಿ ಆ ನಾಡಿನ ಗಾವುಂಡನಾದ ವಿಕ್ರಮಚೋಳ ಪೆರ್ಮಾಡಿಯು ಕೆಲವು ದತ್ತಿ ಬಿಟ್ಟಿರುವುದನ್ನು ತಿಳಿಸುತ್ತದೆ. ಪಶ್ಚಿಮ ದಿಕ್ಕಿನ ಶಾಸನ ಕೆಲವು ಭಕ್ತರು ಬಸದಿಗೆ ಬಿಟ್ಟ ದತ್ತಿಯನ್ನು ತಿಳಿಸುತ್ತದೆ. ಬಸದಿಯ ಗೋಡೆಯ ಮೇಲಿರುವ ೧೮೫೯ರ ಶಾಸನದಲ್ಲಿ ಶಾಂತಪಂಡಿತನ ಮಗನ ವಿಜ್ಞಾಪನೆಯ ಮೇರೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಕೆಲಸೂರಿನ ಚೈತ್ಯಾಲಯಕ್ಕೆ ಚಂದ್ರಪ್ರಭ ಮತ್ತು ವಿಜಯ ಪಾರ್ಶ್ವನಾಥ ತೀರ್ಥಂಕರರ ಮತ್ತು ಜ್ವಾಲಿನಿದೇವಿಯ ಶಿಲ್ಪಗಳನ್ನು ಪ್ರತಿಷ್ಠಾಪಿಸಿ ಬಸದಿಯನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಬಸದಿಯು ಗರ್ಭಗೃಹ, ಅರ್ಧಮಂಟಪ,

* ಸಹಾಯಕ ಪ್ರಾಧ್ಯಾಪಕ, ಶ್ರೀ ಮದ್ದಾನೇಶ್ವರ ಸರ್ಕಾರಿ ಪ್ರ.ದ. ಕಾಲೇಜು, ಕಬ್ಬಹಳ್ಳಿ, ಗುಂಡ್ಲುಪೇಟೆ ತಾ. ಚಾಮರಾಜನಗರ–೫೭೧೩೬೯.

ನವರಂಗವನ್ನು ಹೊಂದಿದೆ. ಈ ಬಸದಿಯು ಸಂಪೂರ್ಣವಾಗಿ ಜೀರ್ಣೋದ್ಧಾರವಾಗಿದೆ. ಇಲ್ಲಿ ನಿಷಧಿ ಕಲ್ಲುಗಳಿವೆ. ಬಸದಿಯು ಚೆನ್ನಾಗಿದೆ.

ತೆರಕಣಾಂಬಿಯ ಪ್ರವಾಸಿ ಮಂದಿರದ ಬಳಿ ಬಿದ್ದಿದ್ದ ಪಾರ್ಶ್ವನಾಥ ವಿಗ್ರಹದ ಪೀಠದ ಮೇಲೆ ರಾಜಗುರು ಮಂಡಲಾಚಾರ್ಯರಾದ ಸಮಯಾಭರಣ ಲಲಿತಕೀರ್ತಿ ಭಟಾರರು ಮಾಡಿಸಿದ ಪ್ರತಿಮೆ ಎಂಬ ಬರಹವಿದೆ ಇದು ಕ್ರಿ.ಶ.೧೪ನೆಯ ಶತಮಾನದ ಬರಹವಾಗಿದೆ. ಪ್ರಸ್ತುತ ತೆರಕಣಾಂಬಿಯಲ್ಲಿ ಪಾರ್ಶ್ವನಾಥ ಬಸದಿಯಿಲ್ಲ ಆದರೆ ಪಾರ್ಶ್ವನಾಥನ ವಿಗ್ರಹ ಸಂತೇಮಾಳದಲ್ಲಿ ಅನಾಥವಾಗಿ ನಿಂತಿದೆ. ಇದೇ ಬಸದಿಯಲ್ಲಿದ್ದ ಪದ್ಮಾವತಿ ಯಕ್ಷಿಯ ವಿಗ್ರಹವನ್ನು ಚಾಮರಾಜನಗರದ ಬಸದಿಗೆ ಸಾಗಿಸಿರುವುದಾಗಿ ತಿಳಿದುಬರುತ್ತದೆ.

ಹಂಗಳ ಗ್ರಾಮದ ಭೂಮಿಯೊಳಗೆ ಹಲವಾರು ಲೋಹದ ವಸ್ತುಗಳು ದೊರೆತಿವೆ. ದೊರೆತ ಅನೇಕ ಪೂಜಾ ವಸ್ತುಗಳಲ್ಲಿ ೧೮ ವಸ್ತುಗಳ ಕೆಳಭಾಗದಲ್ಲಿ ಬರಹವಿದೆ. ಇವುಗಳು ಕ್ರಿ.ಶ. ೧೧ನೆಯ ಶತಮಾನದ ಲಿಪಿ ಲಕ್ಷಣಗಳನ್ನು ಹೊಂದಿದೆ. ಚವ್ವೀಸ ತೀರ್ಥಂಕರರ ಬಿಂಬದ ಹಿಂಬದಿಯ ಪಾದಪೀಠದಲ್ಲಿರುವ ಬರವಣಿಗೆಯಿಂದ ಚಿಕ್ಕಜೋಗಬ್ಬೆಯ ತಾಯಿ ಮಾಚಿಕಬ್ಬೆಯು ದಾಮನಂದಿ ಭಟ್ಟಾರಕರ ಶಿಷ್ಯೆ ಎಂದು ತಿಳಿಯುತ್ತದೆ. ಮಿಕ್ಕ ವಸ್ತುಗಳ ಮೇಲೆ ಸರ್ವಲೋಕಾಶ್ರಯನ ಪ್ರಿಯ ಭಾರ್ಯೆ ಚಿಕ್ಕಜೋಗಬ್ಬೆಯ ಹೆಸರುಗಳಿವೆ. ಚಿಕ್ಕಜೋಗಬ್ಬೆ ಒಬ್ಬ ಜೈನ ಮಹಿಳೆಯಾಗಿದ್ದಳು. ಅವಳು ಮಾಡಿಸಿದ ಲೋಹದ ಪೂಜಾಸಾಮಗ್ರಿಗಳು ಮೈಸೂರು ಶಾಸನ ಇಲಾಖೆಯ ಪ್ರಾಚ್ಯವಸ್ತು ವಿಭಾಗದಲ್ಲಿವೆ.

ಚಾಮರಾಜನಗರ ತಾಲ್ಲೂಕಿನ ಮಲೆಯೂರು (ಕನಕಗಿರಿ) ಎಂಬಲ್ಲಿ ಪಾರ್ಶ್ವನಾಥ ಬಸದಿಯಿದೆ. ಬೆಟ್ಟದ ಮೇಲಿರುವ ಈ ಬಸದಿ ಪೂರ್ವಾಭಿಮುಖವಾಗಿದೆ. ಗಂಗ ಮತ್ತು ಚೋಳರ ಕಾಲದ ದ್ರಾವಿಡ ಶೈಲಿಯಲ್ಲಿರುವ ಈ ಬಸದಿಯು ದ್ರಾವಿಡ ವಿಮಾನವನ್ನು ಹೊಂದಿದ್ದು, ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮಹಾಮಂಟಪವನ್ನು ಹೊಂದಿದೆ. ನವರಂಗದ ಮುಂದೆ ಮತ್ತೆರಡು ಮಂಟಪಗಳಿವೆ. ಗರ್ಭಗೃಹ, ಸುಖನಾಸಿ ಮತ್ತು ನವರಂಗ ಮಾತ್ರ ಪ್ರಾಚೀನ ಕಾಲದ್ದವಾಗಿವೆ. ಮಂಟಪಗಳೆರಡು ವಿಜಯನಗರ ಮತ್ತು ಅನಂತರದ ಕಾಲದ್ದಾಗಿವೆ. ಗರ್ಭಗೃಹದಲ್ಲಿ ಏಳು ಹೆಡೆಯ ಸರ್ಪದ ಕೆಳಗಡೆ ಧ್ಯಾನಮುದ್ರೆಯಲ್ಲಿ ಕುಳಿತಿರುವ ಸುಮಾರು ಐದು ಅಡಿ ಎತ್ತರದ ಪಾರ್ಶ್ವನಾಥನ ಶಿಲ್ಪವಿದೆ. ಪ್ರಭಾವಳಿಯಲ್ಲಿ ಪದ್ಮಾವತಿ ಮತ್ತು ಧರಣೇಂದ್ರ ಯಕ್ಷನನ್ನು ಚಿತ್ರಿಸಲಾಗಿದೆ. ನವರಂಗದಲ್ಲಿ ಯಕ್ಷ ಮತ್ತು ಯಕ್ಷಿಯ ಬಿಡಿಶಿಲ್ಪಗಳಿವೆ. ಈ ಬಸದಿ ಮೂಲಸಂಘ, ದೇಸಿಯಗಣ ಮತ್ತು ಪುಸ್ತಕಗಚ್ಛ ಸಂಪ್ರದಾಯಕ್ಕೆ ಸೇರಿದ್ದಾಗಿದೆ ಇಲ್ಲಿ ಕ್ರಿ.ಶ. ೧೧೮೧ರ ದಾನ ಶಾಸನವಿದೆ. ಅಚ್ಚುತ ವೀರೇಂದ್ರ ಎಂಬ ರಾಜ ಪ್ರಮುಖರು ಇಲ್ಲಿನ ವಿದ್ಯಾನಂದಸ್ವಾಮಿಯ ಮೂಲಕ ಬಸದಿಯನ್ನು ಆಚಾರ್ಯರಿಗೆ ದಾನ ನೀಡಿದ ವಿವರವಿದೆ. ವಿಜಯನಗರದ ದೊರೆ ಹರಿಹರನ ಶಾಸನದಲ್ಲಿ ಕನಕಗಿರಿಯ ವಿಜಯ ಪಾರ್ಶ್ವನಾಥನ ಪೂಜೆಗಾಗಿ ನೀಡಿದ ದಾನ ಧರ್ಮಗಳನ್ನು ಉಲ್ಲೇಖಿಸುತ್ತದೆ.

ಚಾಮರಾಜನಗರ ತಾಲ್ಲೂಕಿನಲ್ಲಿ ಕುದೇರು ಎಂಬ ಚಿಕ್ಕ ಗ್ರಾಮವಿದ್ದು ಇಲ್ಲಿ ಆದಿನಾಥ ಬಸದಿಯಿದೆ. ಇಲ್ಲಿನ ಕ್ರಿ.ಶ. ೧೨೪೮–೪೯ರ ಹೊಯ್ಸಳ ಶಾಸನವು ವೀರಸೋಮೇಶ್ವರನ ಕಾಲದ್ದು. ಬಸದಿಯು ಗರ್ಭಗೃಹ, ಸುಖನಾಸಿ, ಅರ್ಧಮಂಟಪ ಮತ್ತು ನವರಂಗವನ್ನು ಹೊಂದಿದೆ. ದ್ರಾವಿಡ ಶೈಲಿಯಲ್ಲಿರುವ ಈ ಬಸದಿಯು ಏಕಕೂಟವಾಗಿದೆ. ಗರ್ಭಗೃಹದಲ್ಲಿ ಆದಿನಾಥನ ಶಿಲ್ಪವಿದೆ. ಪ್ರಭಾವಳಿಯ ಇಕ್ಕೆಲಗಳಲ್ಲಿ ಚತುರ್ಬಾಹು ಯಕ್ಷಿಣಿಯರ ಶಿಲ್ಪಗಳಿವೆ. ಲಲಾಟಬಿಂಬದಲ್ಲಿ ತೀರ್ಥಂಕರರ ಬಿಂಬವಿದೆ. ನವರಂಗದಲ್ಲಿ ಜೈನ ಸಂಪ್ರದಾಯಕ್ಕೆ ಸಂಬಂಧಿಸಿದಂತೆ ಕುದುರೆ ಮೇಲೆ ಕುಳಿತ ಬ್ರಹ್ಮ, ಜ್ವಾಲಾಮಾಲಿನಿ, ಯಕ್ಷಿ, ಸರಸ್ವತಿ ಮತ್ತು ತೀರ್ಥಂಕರರ ಶಿಲ್ಪ ಮತ್ತು ಇನ್ನಿತರ ಕಂಚಿನ ಶಿಲ್ಪಗಳಿವೆ. ಈಗೀಗ ಬಸದಿ ಶಿಥಿಲವಾಗುತ್ತಿದೆ. ಇದೆ ತಾಲ್ಲೂಕಿನ ಉಮ್ಮತ್ತೂರಿನಲ್ಲಿ ಬಸದಿಯೊಂದಿದೆ.[೨] ಇಲ್ಲಿನ ಕ್ರಿ.ಶ. ೧೮ನೆಯ ಶತಮಾನದ ಶಾಸನದಲ್ಲಿ ಪಾಯಣಪಂಡಿತರು ವರ್ಧಮಾನಸ್ವಾಮಿಯ ಸೇವೆ ಎಂದಿದೆ. ಕುಲಗಾಣದಲ್ಲಿರುವ ಕ್ರಿ.ಶ. ೧೨೪೧ರ ಶಾಸನದಲ್ಲಿ ಎಡೆನಾಡ ಕುಲಗಾಣದ ಬಸದಿಗೆ ಮಹಾಪ್ರಧಾನ, ಸೇನಾಧಿಪತಿ, ಸರ್ವಾಧಿಕಾರಿಯಾದ ಕೇತಯ್ಯ ದಂಡನಾಯಕನು ತೆರಿಗೆಗಳಿಂದ ಬಂದ ಹಣವನ್ನು ದಾನವನ್ನಾಗಿ ನೀಡಿರುವ ಉಲ್ಲೇಖವಿದೆ ಆದರೆ ಪ್ರಸ್ತುತವಾಗಿ ಈ ಗ್ರಾಮದಲ್ಲಿ ಯಾವುದೇ ಬಸದಿ ಇರುವುದಿಲ್ಲ. ಇದೇ ಗ್ರಾಮದ ಕ್ರಿ.ಶ. ೭–೮ನೆಯ ಶತಮಾನದ ಗಂಗರ ಕಾಲದ ತಾಮ್ರ ಶಾಸನದಲ್ಲಿಯೂ ಚೈತ್ಯಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ. ಇದೇ ತಾಲ್ಲೂಕಿನ ಹರವೆ ಗ್ರಾಮದಲ್ಲಿ ಆದೀಶ್ವರ ಬಸದಿಯೊಂದಿದೆ. ಇಲ್ಲಿನ ಕ್ರಿ.ಶ. ೧೪೮೨ರ ಶಾಸನದಲ್ಲಿ ವೀರಸೋಮೇಶ್ವರರಾಯ ಒಡೆಯರ ಕರಣಿಕನಾದ ದೇವರಸನು ಹರವೆಯಲ್ಲಿ ಚೈತ್ಯಾಲಯ ಮತ್ತು ಪಾಕಶಾಲೆ ಯನ್ನು ಮಾಡಿಸಿ ಆದಿ ಪರಮೇಶ್ವರನನ್ನು ಪ್ರತಿಷ್ಠಾಪಿಸಿದರು. ಕ್ರಿ.ಶ. ೧೪೮೬ರ ನಿಷದಿ ಕಲ್ಲೊಂದಿದೆ. ಇದು ಶಾಸನೋಕ್ತ ವಾಗಿದ್ದು ಇದರಲ್ಲಿ ದೇವರಸರ ಹಿರಿಯ ಹೆಂಡತಿ ಸೋಮಾಯಿಯು ನಿಷದಿಯಾದ ಬಗ್ಗೆ ಉಲೇಖವಿದೆ. ಪ್ರಸ್ತುತ

ಈ ಗ್ರಾಮದಲ್ಲಿ ಯಾವುದೇ ಬಸದಿ ಇರುವುದಿಲ್ಲ. ಯಳಂದೂರಿನ ಯರಗಂಬಳ್ಳಿಯ ಹೊರವಲಯದ ಜಮೀನಿನಲ್ಲಿ ಜಿನ ಶಿಲ್ಪಗಳಿವೆ. ಇವುಗಳು ಅಲ್ಪಪ್ರಮಾಣದಲ್ಲಿ ಭಗ್ನವಾಗಿವೆ. ಬಹುಶಃ ಇಲ್ಲಿ ಹಿಂದೆ ಬಸದಿಯಿದ್ದಿರಬಹುದೆಂದು ಹೇಳಬಹುದು.

ಚಾಮರಾಜನಗರ ಪಟ್ಟಣದ ಮಧ್ಯಭಾಗದಲ್ಲಿರುವ ಚಾಮರಾಜೇಶ್ವರ ದೇವಾಲಯದ ಆಗ್ನೇಯ ಭಾಗದಲ್ಲಿ ಪಾರ್ಶ್ವನಾಥ ಬಸದಿಯಿದೆ. ಕ್ರಿ.ಶ. ೧೧೧೬ರ ಶಾಸನದಲ್ಲಿ ಎಣ್ಣೆನಾಡಿನ ಪ್ರಾಂತ್ಯದ ಅರಕೊತಾರದಲ್ಲಿ ತ್ರಿಕೂಟ ಬಸದಿಯನ್ನು ಪುಣಿಸರಾಜ ದಂಡಾದೀಪ ಎಂಬುವವನು ಪುಣಿಸಜಿನಾಲಯವನ್ನು ಕಟ್ಟಿಸಿದನು. ಪ್ರಸ್ತುತವಾಗಿ ಈ ಬಸದಿಯು ಜೀರ್ಣೋದ್ಧಾರವಾಗಿದ್ದು ಪೂಜಾ ಕಾರ್ಯಗಳು ನಡೆಯುತ್ತಿವೆ. ಇಲ್ಲಿನ ಕ್ರಿ.ಶ. ೧೫೧೪ರ ಮತ್ತೊಂದು ಶಾಸನದಲ್ಲಿ ಚಾಮರಾಜನಗರವನ್ನು ಅರಿಕೊತಾರ ಎಂದು ಕರೆಯಲಾಗಿದೆ. ಇಲ್ಲಿಯ ಮಹಾಪ್ರಭು ಕಾಮಯ್ಯನಾಯಕರ ಮಗ ವೀರಯ್ಯನಾಯಕನು ವಿಜಯನಾಥ ದೇವರಿಗೆ ಮುಣಚಣಹಳ್ಳಿಯನ್ನು ದಾನವಾಗಿ ನೀಡಿರುವ ಉಲ್ಲೇಖವಿದೆ. ಇಲ್ಲಿನ ಕ್ರಿ.ಶ. ೧೨೦೩ರ ಶಾಸನದಲ್ಲಿ ಉತ್ತರಾಯಣ ಸಂಕ್ರಮಣದ ದಿನ ಅರಿಕುತಾರದ ಬಸದಿಗೆ ಕೇತಗಾವುಂಡನ ಮಗ ಬಿಟ್ಟಿಗಾವುಂಡ, ಅಲ್ಲಾಳಗಾವುಂಡನ ಮಗ ದಾಸೆಗಾವುಂಡರು, ನೀರಿನ ಕರ, ಮನೆಕರ ಮುಂತಾದವುಗಳಿಂದ ಬಂದ ಹಣವನ್ನು ಬಸದಿಗೆ ನೀಡಿರುವ ಉಲ್ಲೇಖವಿದೆ.

ಕೊಳ್ಳೇಗಾಲದಿಂದ ಸುಮಾರು ೫ ಕಿ.ಮೀ. ದೂರದಲ್ಲಿ ಧನಗೆರೆ ಎಂಬ ಹಳ್ಳಿಯಿದೆ ಈ ಗ್ರಾಮದ ಪೂರ್ವ ಭಾಗದಲ್ಲಿರುವ ಒಂದು ಜಮೀನಿನಲ್ಲಿ ಜೈನ ಅವಶೇಷಗಳು ದೊರೆತಿವೆ. ಇಲ್ಲಿಯ ಒಂದು ಶಿಲ್ಪವನ್ನು ಪ್ರಾಚ್ಯವಸ್ತು ಸಂಗ್ರಹಾಲಯ ಶ್ರೀರಂಗಪಟ್ಟಣ ಇಲ್ಲಿ ಇಡಲಾಗಿದೆ. ಕೊಳ್ಳೇಗಾಲದ ಪಕ್ಕದಲ್ಲಿರುವ ಬಸ್ತಿಪುರ (ಬಸದಿಪುರ) ಎಂಬುದು ಸಹ ಒಂದು ಜೈನ ಕೇಂದ್ರವಾಗಿತ್ತು. ಇಲ್ಲಿ ಪೂಜ್ಯಪಾದನು ಹಲವು ಕಾಲದವರೆಗೆ ಜೀವಿಸಿದ್ದನು. ದೇವನಂದಿ ಎಂಬ ಹೆಸರಿನ ಈ ಆಚಾರ್ಯನಿಗೆ ಪೂಜ್ಯಪಾದನೆಂದು ಸಹ ಕರೆಯುತ್ತಿದ್ದರು. ಕೊಳ್ಳೇಗಾಲದ ಮನುಗನಹಳ್ಳಿ ಎಂಬ ಗ್ರಾಮದ ಹೊರವಲಯದಲ್ಲಿರುವ ಒಂದು ಜಮೀನಿನಲ್ಲಿ ಜಿನಶಿಲ್ಪಗಳು ಕಂಡುಬಂದಿವೆ. ಇಲ್ಲಿ ನಿಷದಿ ಕಲ್ಲುಗಳು ಸಹ ಇವೆ. ಕೊಳ್ಳೇಗಾಲ ರಾಘವೇಂದ್ರಸ್ವಾಮಿ ದೇವಾಲಯದ ಎದುರುಗಡೆ ಪಾಳುಬಿದ್ದಿರುವ ಮಂಟಪದಲ್ಲಿ ಪಾರ್ಶ್ವನಾಥನ ಶಿಲ್ಪವಿದೆ ಮತ್ತು ಪಟ್ಟಣದ ಕೊಳದ ಪಕ್ಕದಲ್ಲಿ ನಿಷದಿ ಶಿಲ್ಪವಿದೆ. ಮೇಲಿನ ಅಂಶಗಳನ್ನು ಗಮನಿಸಿದರೆ ಚಾಮರಾಜನಗರ ಜಿಲ್ಲೆಯಾದ್ಯಂತ ಕ್ರಿ.ಶ. ಸುಮಾರು ೬-೭ನೆಯ ಶತಮಾನಗಳಿಂದಲೂ ಸಹ ಜೈನಧರ್ಮವಿತ್ತೆಂದು ಹೇಳಬಹುದು.



## ಆಧಾರಸೂಚಿ


೧. **ಮೈಸೂರು ಜಿಲ್ಲೆಯ ಗ್ಯಾಸೆಟಿಯರ್**, ಕರ್ನಾಟಕ ಸರ್ಕಾರ, ಬೆಂಗಳೂರು.

೨. **ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ಸ್**, ಮೈಸೂರು ಸರ್ಕಾರ, ಬೆಂಗಳೂರು.

೩. **ಸೋಮಸಿರಿ**, ಮಲೆಯೂರು ಗುರುಸ್ವಾಮಿ, ಗುಂಡ್ಲುಪೇಟೆ, ೨೦೦೦.

೪. **ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ ೩, (ಪರಿಷ್ಕೃತ), ಗುಂಡ್ಲುಪೇಟೆ ಶಾಸನ ಸಂಖ್ಯೆ ೩, ೪೦, ೧೦೦, ೧೦೧, ೧೦೨, ೧೦೩, ೨೦೩ ಮತ್ತು ೨೧೪.

೫. **ಎಪಿಗ್ರಾಫಿಯ ಕರ್ನಾಟಿಕ**, ಸಂಪುಟ ೪, (ಪರಿಷ್ಕೃತ), ಶಾಸನ ಸಂಖ್ಯೆ ೨, ೩, ೬೦, ೬೧, ೯೧, ೨೧೫, ೩೪೪, ೩೪೭, ೩೫೪-೩೭೫, ೩೮೯, ೩೯೦.

೬ ದೇವರಕೊಂಡಾರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ**, ಬೆಂಗಳೂರು, ಕನ್ನಡ ಸಾಹಿತ್ಯ ಪರಿಷತ್ತು, ೧೯೯೪.




# ಬಾದಾಮಿ ಚಲುಕ್ಯರ ಕಾಲದ ನೀರಾವರಿ ಚೌಕಟ್ಟು

**ಡಾ. ಟಿ.ವಿ. ನಾಗರಾಜ***

**ದ**ಖನ್ನಿನ ಇತಿಹಾಸದಲ್ಲಿ ಬಾದಾಮಿ ಚಲುಕ್ಯರ ಸಾಮ್ರಾಜ್ಯದ ನಿರ್ಮಾಣ ಹೊಸ ಶಕೆಗೆ ನಾಂದಿಯಾಯಿತು. ರಾಜಕೀಯ ಐಕ್ಯತೆ ಸ್ಥಾಪಿಸುವುದರೊಂದಿಗೆ ಆಡಳಿತ, ಕೃಷಿ, ಆರ್ಥಿಕತೆ, ಧರ್ಮ, ಸಾಹಿತ್ಯ ಹಾಗೂ ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ತನ್ನ ಛಾಪನ್ನು ಮೂಡಿಸಿತು. ಕ್ರಿ.ಶ. ೬ನೇ ಶತಮಾನದಿಂದ ೮ನೇ ಶತಮಾನದವರೆಗೆ ರಾಜ್ಯಭಾರ ಮಾಡಿದ ಬಾದಾಮಿ ಚಲುಕ್ಯರು, ಉತ್ತರದಲ್ಲಿ ನರ್ಮದೆ, ದಕ್ಷಿಣದಲ್ಲಿ ಕಾವೇರಿಯವರೆಗೆ, ಪೂರ್ವದಲ್ಲಿ ವೆಂಗಿಯಿಂದ ಪಶ್ಚಿಮದಲ್ಲಿ ಕರಾವಳಿಯವರಗೆ ವಿಶಾಲ ಸಾಮ್ರಾಜ್ಯ ನಿರ್ಮಿಸಿ, ದಖನ್ನಿನಲ್ಲಿ 'ಸಾಮ್ರಾಜ್ಯಗಳ ಯುಗ' ಆರಂಭಿಸಿದರು. ಸುಮಾರು ಎರಡು ಶತಮಾನಗಳಿಗೂ ಮೀರಿ ರಾಜ್ಯಭಾರ ಮಾಡಿದ ಬಾದಾಮಿ ಚಲುಕ್ಯರು 'ಸಮೃದ್ಧಿಯ ಶಕೆ' ಕಂಡುಬಂದಿತಲ್ಲದೆ, ಕೃಷಿ, ವಾಣಿಜ್ಯಗಳಿಗೆ ಭದ್ರಬುನಾದಿಯನ್ನು ಹೊಂದಿ, ಅದರ ಫಲ ಸಾಹಿತ್ಯ, ಧರ್ಮ ಮತ್ತು ಕಲೆ ಹಾಗೂ ವಾಸ್ತುಶಿಲ್ಪದ ಕ್ಷೇತ್ರಗಳಲ್ಲಿ ಕಾಣಿಸಕೊಂಡಿತು. ಹೀಗಾಗಿ ಕೃಷಿ, ಆರ್ಥಿಕತೆ ಈ ನಿಟ್ಟಿನಲ್ಲಿ ಪ್ರಧಾನ ಪಾತ್ರವಹಿಸಿರುವುದನ್ನು ಕಡೆಗಣಿಸುವಂತಿಲ್ಲ. ಬಾದಾಮಿ ಚಲುಕ್ಯರನ್ನು ಕುರಿತಂತೆ ವ್ಯಾಪಕ ಅಧ್ಯಯನಗಳು ನಡೆದಿವೆಯಾದರೂ ನೀರಾವರಿ ಕ್ಷೇತ್ರದಲ್ಲಿ ಅವರ ಕೊಡುಗೆಯನ್ನು ಗ್ರಹಿಸುವ/ರಚಿಸುವ ಪ್ರಯತ್ನಗಳು ಕಂಡುಬಂದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಲೇಖನದಲ್ಲಿ ಬಾದಾಮಿ ಚಲುಕ್ಯರ ಕಾಲದ ನೀರಾವರಿ ಚೌಕಟ್ಟನ್ನು, ಶಾಸನಗಳ ಆಧಾರಗಳನ್ನಾಧರಿಸಿ ಪರಿಶೀಲಿಸಲು ಪ್ರಯತ್ನಮಾಡಲಾಗಿದೆ. ಬಾದಾಮಿ ಚಲುಕ್ಯರ ಸರಿ ಸುಮಾರು ೪೫೦ಕ್ಕೂ ಹೆಚ್ಚು ಶಾಸನಗಳಿವೆ. (ತಾಮ್ರಪಟಗಳೂ ಸೇರಿದಂತೆ) ನೀರಾವರಿ, ಕೃಷಿ ಚೌಕಟ್ಟನ್ನು ಕುರಿತಂತೆ ಪ್ರಸ್ತಾಪಿಸುವ ಶಾಸನಗಳು ತೀರ ವಿರಳ (ಸುಮಾರು ೨೮ ಮಾತ್ರ) ಇದೊಂದು ಮಿತಿ ಎಂದೇ ಭಾವಿಸಿ, ಸಮಕಾಲೀನ ಕೃಷಿ ಚೌಕಟ್ಟಿನ ಹಿನ್ನೆಲೆಯಲ್ಲಿ ಪರಿಭಾವಿಸುವ ಪ್ರಯತ್ನ ಮಾಡಲಾಗಿದೆ.

ಪ್ರಾಗೈತಿಹಾಸಿಕ ಮಾನವ ತನ್ನ ವಾಸಕ್ಕಾಗಿ ಗುರುತಿಸಿಕೊಂಡ ನೆಲೆಗಳು ಸಾಮಾನ್ಯವಾಗಿ ನೀರು ಸಿಗುವಂತಹ ನೈಸರ್ಗಿಕ ತಾಣಗಳೇ ಆಗಿದ್ದವು. ಕೃಷಿಯನ್ನು ತನ್ನ ಮುಖ್ಯ ಜೀವನಾಧಾರವಾಗಿ ರೂಪಿಸಿಕೊಂಡ ದಿನದಿಂದಲೇ ಮಳೆಯ ಮತ್ತು ಹರಿಯುವ ನೀರನ್ನು ಸಾಕಷ್ಟು ಕಾಲ ಹಿಡಿದಿಟ್ಟುಕೊಳ್ಳುವ ಅವಶ್ಯಕತೆ ಕಂಡುಬಂದಿತು. ಈ ಪ್ರಕ್ರಿಯೆಯಲ್ಲಿ ಕೃತಕವಾಗಿ ನೀರನ್ನು ಸಂಗ್ರಹಿಸಿಟ್ಟುಕೊಳ್ಳುವ ತನ್ನ ಅಗತ್ಯಕ್ಕೆ ತಕ್ಕ ಹಾಗೆ ಬಳಸಿಕೊಳ್ಳಲು ನಡೆದ ಪ್ರಯತ್ನಗಳ ಫಲವೇ ಕೆರೆ, ಕುಂಟೆ, ಕಟ್ಟೆಗಳಾಗಿ ರೂಪಪಡೆದವು. ಪ್ರಾಚೀನ ಕಾಲದಿಂದಲೂ ನೀರಾವರಿ ಕಾಮಗಾರಿಗಳ ನಿರ್ಮಾಣ, ಅವು ಕೃಷಿ–ಆರ್ಥಿಕಾಭಿವೃದ್ಧಿಗೆ ಪೂರಕವಾಗಿದ್ದರೂ, ಧಾರ್ಮಿಕ ಮಹೋನ್ನತಿಯ ಉದ್ದೇಶಗಳು ಪ್ರಧಾನವಾಗಿದ್ದವು. ನೀರಾವರಿ ಕಾಮಗಾರಿಗಳ ನಿರ್ಮಾಣ, ದುರಸ್ತಿ, ನಿರ್ವಹಣೆಯಂತಹ ಕಾರ್ಯಗಳನ್ನು ಕೈಗೊಂಡ ವ್ಯಕ್ತಿ, ಕುಟುಂಬ ಹಾಗು ಸಮುದಾಯಗಳು ಪುಣ್ಯಕ್ಕೆ ಅರ್ಹ ಎಂಬ ಭಾವನೆ ಪ್ರಧಾನವಾಗಿದ್ದಿತು.

ಕೌಟಿಲ್ಯನ ಅರ್ಥಶಾಸ್ತ್ರವು 'ರಾಜನು ಜನಪದಗಳಲ್ಲಿ ಅಣೆಕಟ್ಟುಗಳನ್ನು ಕಟ್ಟಿಸಬೇಕು. ಕಟ್ಟಿಸುವವರಿಗೆ ಹಣ, ಉಪಕರಣಗಳನ್ನು ನೀಡಿ ಸಹಕರಿಸಬೇಕು' ಎಂದು ಉಲ್ಲೇಖಿಸುತ್ತದೆ[೧]. ರಾಜನು ತನ್ನ ರಾಜ್ಯವು ಕೇವಲ ದೇವಮಾತೃಕೆಯರಂತೆ ನೋಡಿಕೊಳ್ಳಬೇಕು ಅದಕ್ಕಾಗಿ ತಟಾಕಗಳನ್ನು ನಿರ್ಮಿಸಿ ನದಿ ಮಾತೃಕೆಯನ್ನಾಗಿ ಮಾಡಬೇಕು ಎಂಬ ನಿದರ್ಶನಗಳೂ ಇವೆ. ಹೀಗಾಗಿ ನೀರಾವರಿಯನ್ನು ಪ್ರೋತ್ಸಾಹಿಸುತ್ತಾ ಬಂದಿರುವುದು ಒಂದು ಪರಂಪರೆಯಾಗಿ ಮೂಡಿಬಂದಿದೆ.

ಸಾಮ್ರಾಜ್ಯದ ನಿರ್ಮಾಣ ಕಾಲಘಟ್ಟದಲ್ಲಿ (ಆರಂಭಿಕ ಹಂತ) ಕೇಂದ್ರಾಡಳಿತ ಪ್ರದೇಶ ಸ್ವಾಭಾವಿಕ ಆದ್ಯತೆ ಪಡೆದಿದೆ. ಮೊದಲನೇ ಪುಲಿಕೇಶಿ ಕೋಟೆಯನ್ನು ಕಟ್ಟಿಸುವುದರ ಜೊತೆಗೆ ಬಾದಾಮಿಯಲ್ಲಿ ಕೆರೆ ಕಟ್ಟಿಸಿರಬೇಕು. ಮಹಾಕೂಟದ ಮುಕುಟೇಶ್ವರ ದೇವಾಲಯದ ಪುಷ್ಕರಣಿಗೆ, ಅದರೊಳಗಿನ 'ದೇವದ್ರೋಣಿ' ಮಂಟಪವನ್ನು ಮೊದಲನೇ ಪುಲಿಕೇಶಿ ನಿರ್ಮಿಸಿದನು. ಮಹಾಕೂಟ ಸ್ತಂಭಶಾಸನದಲ್ಲಿ ಸೂಚಿತವಾಗಿರುವುದನ್ನು ಕೆ.ವಿ. ರಮೇಶ್ ಸ್ಪಷ್ಟಪಡಿಸಿದ್ದಾರೆ.[೨]

* ಇತಿಹಾಸ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬಾಗೇಪಲ್ಲಿ–೫೬೧೨೦೭.

ಮಹಾಕೂಟದ ಈ ವಿಷ್ಣು ಪುಷ್ಕರಿಣಿಯು ಸುಮಾರು ೯ ಮೀ. x ೧೩.೫ ಅಳತೆಯ ಆಯತಾಕಾರದ ರಚನೆಯಾಗಿದ್ದು, ಅದರ ಉತ್ತರ ದಕ್ಷಿಣ ಬದಿಗಳಿಂದ ಪುಷ್ಕರಣಿಯಲ್ಲಿ ಇಳಿಯಲು ಪಾವಟಿಗೆಗಳನ್ನು ಮಾಡಲಾಗಿದೆ.

ಪೂರ್ವದ ಬದಿಯಲ್ಲಿ 'ತೂಬು' ಇದೆ. ಇಲ್ಲಿನ ನೀರಿನ ಬುಗ್ಗೆ ಈಗಲೂ ಜೀವಂತವಾಗಿದೆ. ಇಂತಹ ಪ್ರಬಲ ಜೀವಸೆಲೆಯ ಶೋಧನೆ ಚಲುಕ್ಯ ನೃಪತಿಗಳು ಅಂತರ್ಜಲ ಶೋಧಕರಾಗಿದ್ದರೆಂಬುದಕ್ಕೆ ಸಾಕ್ಷಿಯಾಗಿದೆ. ಬಾದಾಮಿಯ ಅಗಸ್ತ್ಯತೀರ್ಥವು ೨೨.೨೧ ಎಕರೆ ವಿಸ್ತೀರ್ಣವಿದೆ. ಈ ಅಗಸ್ತ್ಯತೀರ್ಥ (ಬೂತನಾಥ) ಕೆರೆ ಪ್ರಾಯಶಃ ಮೊದಲನೆಯ ಪುಲಿಕೇಶಿಯ ವಾಸ್ತವ ಕೊಡುಗೆಯಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದೇವಾಲಯಗಳ ಮುಂದೆ ಜಲಾಶಯದ ಅಗತ್ಯತೆಯನ್ನು ಮನಗೊಂಡು ನೃಪತಿಗಳು ಗುಹಾದೇವಾಲಯಗಳನ್ನು, ಕೊರೆಯುವ ಕಾಲಕ್ಕೆ ಅಗಸ್ತ್ಯತೀರ್ಥ ನಿರ್ಮಾಣ ಆಗಿರಬೇಕು. ಗುಹೆಗಳನ್ನು ಕೊರೆಯುವಾಗ ಹೊರತೆಗೆಯಲಾದ ಕಲ್ಲುಗಳನ್ನು ಕೆರೆಯ ಕಟ್ಟೆಯನ್ನು ಕಟ್ಟಲು ಬಳಸಿರಬೇಕು. ಕುದುರೆಯ ನಾಳಾಕಾರದಲ್ಲಿ ಚಾಚಿಕೊಂಡ ಕಟ್ಟಡ ಶ್ರೇಣಿಯ ಅಡಿಯಲ್ಲಿ ಅಗಸ್ತ್ಯ ತೀರ್ಥವಿದೆ. ಮಳೆಗಾಲದಲ್ಲಿ ಜಲಪಾತ ಕೆಳಗೆ ಧುಮುಕುತ್ತದೆ. ಮುಂದೆ ಈ ನೀರಿಗೆ ತೊರೆಯಾಗಿ ಹರಿದು ಸರಸ್ವತಿ ಹಳ್ಳವನ್ನು ಸೇರುತ್ತದೆ. ಚಲುಕ್ಯ ನೃಪತಿಗಳು ಈ ಭೌಗೋಳಿಕ ವಿದ್ಯಮಾನ ಮನಗೊಂಡು ಉತ್ತರ ಹಾಗೂ ದಕ್ಷಿಣ ಬೆಟ್ಟಗಳ ನಡುವೆ ದೀರ್ಘವಾದ ಕಟ್ಟೆಯನ್ನು ಕಟ್ಟಿ ಜಲಪಾತದ ನೀರು ಸಂಗ್ರಹವಾಗುವಂತೆ ಮಾಡಿದ್ದಾರೆ.[೩]

ಹಾವೇರಿ ಜಿಲ್ಲೆಯ ಹಾನಗಲ್ ತಾಲ್ಲೂಕು ಗುಡಗುಡಿಯ ಕ್ರಿ.ಶ. ೮ನೇ ಶತಮಾನದ ಶಾಸನವೊಂದರಲ್ಲಿ ಪಾಬುಂಡೆ ಎಂಬುವನು ನಾಡಗಾವುಂಡನಾಗಿ ಆಡಳಿತ ನಿರ್ವಹಿಸುತ್ತಿದ್ದಾಗ ಕಣ್ಣೆಟ್ಟಿನ ಗ್ರಾಮಸ್ಥರು ಉಚಿತ ಶ್ರಮವಹಿಸಿ ಕೆರೆ ತೋಡಿದ್ದನ್ನು ದಾಖಲಿಸಿದೆ.[೪] ೮ನೇ ಶತಮಾನದ ವಿಜಯಾದಿತ್ಯನ ಆಲಂಪುರ ಶಾಸನವು ರಾಜನ ಸಾಧನೆಗಳನ್ನು ವಿವರಿಸುವ ಶಾಸನವಾಗಿದ್ದು, ವಿವಿಧ ಪ್ರದೇಶಗಳಲ್ಲಿ ಹಲವಾರು ತಟಾಕಗಳನ್ನು ನಿರ್ಮಿಸಿದನೆಂದು ಸಾರಾಸಗಟಾಗಿ ಪ್ರಸ್ತಾವಿಸುತ್ತದೆ.[೫] ಇಮ್ಮಡಿ ಪುಲಿಕೇಶಿಯ ಆಲಂಪುರ ಶಾಸನದಲ್ಲಿ ನಾಲ್ಕಾರು ತಟಾಕಗಳ ಉಲ್ಲೇಖವಿದೆ. ಮತ್ತೊಬ್ಬ ವಿದ್ವಾಂಸರು Redcliff ಅವರು ಪ್ರಾಯಶಃ ಎರಡನೇ ಪುಲಿಕೇಶಿ ಅಗಸ್ತ್ಯತೀರ್ಥ ನಿರ್ಮಿಸಿರಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ.[೬] ಇಮ್ಮಡಿ ಪುಲಿಕೇಶಿಯ ಮೋಡಲಿಂಬ ಶಾಸನವು ಕೆರೆಯ ನಿರ್ಮಾಣಕ್ಕೆಂದು ದೇವಗಣ ಸ್ವಾಮಿಗೆ ಗ್ರಾಮವನ್ನು ದಾನವಾಗಿ ನೀಡಿರುವುದು ಉಲ್ಲೇಖಿತಗೊಂಡಿದೆ.[೭]

ಆಲಂಪುರದ ಬಾಲಬ್ರಹ್ಮ ದೇವಸ್ಥಾನದ ವಿಜಯಾದಿತ್ಯನ ಪ್ರಶಸ್ತಿಯು ಆತನನ್ನು ಸಾಮ್ರಾಜ್ಯದ ಎಲ್ಲೆಡೆಗಳಲ್ಲಿ ಕೆರೆಗಳನ್ನು ನಿರ್ಮಿಸಿದುದನ್ನು ವರ್ಣಿಸುತ್ತದೆ.[೮]

ವಿಜಯಾದಿತ್ಯನ ಶಿಗ್ಗಾವಿ ತಾಮ್ರಶಾಸನದಲ್ಲಿ ಭೂದಾನದ ಗಡಿಗಳನ್ನು ಪ್ರಸ್ತಾಪಿಸುತ್ತಾ ವೆಣ್ಣೆತಟಾಕ, ಮತ್ತಿಣ ತಟಾಕ, ಅರನಿ ತಟಾಕ, ಕುವೇರ ತಟಾಕ, ಕೋಡಿ ತಟಾಕ, ತಪಸ್ವಿ ತಟಾಕ, ಪುಲಿವಾರ ತಟಾಕ ಎಂಬ ಕೆರೆಗಳು ಉಲ್ಲೇಖಿತ ಗೊಂಡಿವೆ. ಹೀಗಾಗಿ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಬಹುಸಂಖ್ಯೆಯ ಕೆರೆಗಳು ನಿರ್ಮಾಣಗೊಂಡಿರುವುದು ಆ ಭೌಗೋಳಿಕ ವಿದ್ಯಮಾನದ ಅನುಕೂಲತೆಗಳನ್ನು ಪೂರ್ಣವಾಗಿ ಬಳಸಿಕೊಂಡಿರುವ ತಾಂತ್ರಿಕ ಕೌಶಲ್ಯ ಗಮನಸೆಳೆದರೆ, ಕೆರೆಗಳ ಸಾಂದ್ರತೆ/ಪ್ರಮಾಣವೂ ವೇದ್ಯವಾಗುತ್ತದೆ. ಜೊತೆಗೆ ಪುಲಿವಾರ ಪಟಾಕ, 'ನಿರಾಯ' ಎಂಬ ಹಳ್ಳ ಕೂಡುವ ಸ್ಥಳ ಎಂದು ಉಲ್ಲೇಖಿತಗೊಂಡಿದೆ.[೯]

ವಿಜಯಾದಿತ್ಯನ ಚಿಪ್ಪಗಿರಿ ಶಾಸನವು ಭೂಮಿಯ ಜೊತೆಗೆ ಕೆರೆ-ಬಾವಿಯನ್ನು ದತ್ತಿಯಾಗಿ ದೇವಾಲಯಕ್ಕೆ ನೀಡಿರುವುದು ದಾಖಲಾಗಿದೆ. ಈ ಕಾರ್ಯವು ಮಹಾಜನರ ಹಾಗೂ ಅಲ್ಲಿನ ಜನರ ಒಪ್ಪಿಗೆ ಮೇರೆಗೆ ೫೦ ಮತ್ತರ್ ಭೂಮಿ ರಾಜಮಾನೆ ಅಳತೆಯ ನೀಡಿ ಅದಕ್ಕೆ ಹೆಚ್ಚುವರಿಯಾಗಿ ೧೨ ಕೊಳಗದ ಭೂಮಿ ೬ ಮತ್ತರ ಹೂತೋಟ, ಜೊತೆಗೆ ಕೆರೆ-ಬಾವಿ ನೀಡಲಾಗಿದೆ.[೧೦] ಇದೇ ಅರಸನ ಲಕ್ಷ್ಮೇಶ್ವರ ಶಾಸನದಲ್ಲಿ ರಾಜನು ನೀಡಿದ ಭೂದಾನ ಸಂಬಂಧಿತ ಭೂಮಿಯ ಗಡಿಗಳನ್ನು ಗುರುತಿಸುವಾಗ ಪಾಶಾಣ ತಟಾಕ, ಸಬನೀಯ ತಟಾಕ, ಮಡುರು ತಟಾಕ ಮತ್ತು ಜಂಬೂರಹಳ್ಳ ಉಲ್ಲೇಖಿತಗೊಂಡಿವೆ.[೧೧]

ಹಲವು ಶಾಸನಗಳು ಕೃಷಿ-ನೀರಾವರಿ ಚೌಕಟ್ಟನ್ನು ಪ್ರಾತಿನಿಧಿಕವಾಗಿ ಬಿಂಬಿಸುವಂತಹ ಮಾಹಿತಿ ಗ್ರಹಿಸಬಹುದಾಗಿದೆ. ದಾವಣಗೆರೆ ತಾಲ್ಲೂಕಿನ ಹೊನ್ನೂರು ತಾಮ್ರಪಟಗಳಲ್ಲಿ (ಕ್ರಿ.ಶ. ೬೭೦ರ) ನೆಲ್ಲುಕುಂಡಿ ಮತ್ತು ೫೦೦ ನಿವರ್ತನ ಭತ್ತದ ಗದ್ದೆಯನ್ನು ನೆವಲೆಸಾಗರವೆಂಬ ಗ್ರಾಮ ಕೆರೆ ಕೆಳಗಿನ ಭೂಮಿಯನ್ನು ೨೧ ಜನ ಬ್ರಾಹ್ಮಣರಿಗೆ ದಾನ ನೀಡಿರುವುದು ದಾಖಲಾಗಿದೆ.[೧೨]

ಬಾದಾಮಿ ಚಲುಕ್ಯರ ಹಲವು ಶಾಸನಗಳಲ್ಲಿ ನದಿ, ಕೊಳ್ಳಗಳು ಉಲ್ಲೇಖಗೊಳ್ಳುವ ಮೂಲಕ ನೀರಾವರಿ ಚೌಕಟ್ಟಿನ ಗ್ರಹಿಕೆಗೆ ಪೂರಕವಾಗಿ ಬೆಳಕು ಚೆಲ್ಲುತ್ತವೆ. ಮೊದಲನೆಯ ವಿಕ್ರಮಾದಿತ್ಯನ ಕರ್ನೂಲು ತಾಮ್ರಪಟಗಳಲ್ಲಿ (೬೬೪ ಕ್ರಿ.ಶ.) ದಾನವಾಗಿ ನೀಡಿರುವ ಭೂಮಿ ೫೦೦ ನಿವರ್ತನದ ಭೂಮಿ ಹಾಗೂ ೧೦ ನಿವರ್ತನ ತೋಟದ ಭೂಮಿಯನ್ನು ಆಂಧ್ರಿಕ ನದಿಯ ಪಶ್ಚಿಮ ದಂಡೆಯಲ್ಲಿನ

ರಟ್ಟಗಿರಿ ಗ್ರಾಮದ ಪೂರ್ವಕ್ಕೆ ಇರುವ ಭೂಮಿಯನ್ನು ಉಲ್ಲೇಖಿಸುತ್ತದೆ.[೧೩] ಪುಲಿಕೇಶಿಯ ಕೊಪ್ಪರಂ ತಾಮ್ರಪಟಗಳಲ್ಲಿ ಅಲ್ಲಿನ ಬ್ರಾಹ್ಮಣರಿಗೆ ೮೦೦ ನಿವರ್ತನ ಭೂಮಿಯನ್ನು ದಾನವಾಗಿ ನೀಡಿದ್ದು, ಇದು ಅಲ್ಲಿನ 'ಹೊಂಡ' ಪೂರ್ವಕ್ಕೆ ಮತ್ತು 'ಕಠಮನಕರ' ತಟಾಕದ ಪಶ್ಚಿಮಕ್ಕೆ ಇದೆ ಎಂದು ಪ್ರಸ್ತಾಪಿಸಿದೆ.[೧೪] ಕೀರ್ತಿವರ್ಮನ ಐನೂಲಿ ತಾಮ್ರಪಟಗಳಲ್ಲಿ 'ಭೀಮರಥಿ' ನದಿಯ ದಂಡೆ ಮೇಲೆ ದಿಗ್ವಿಜಯದ ಬೀಡು ಬಿಟ್ಟಿರುವಾಗ ನಾಗಿಶೆಟ್ಟಿ ಎಂಬುವನ ಕೋರಿಕೆಯ ಮೇರೆಗೆ ತುಂಬುರವರಲೆ ದಂಡೆಯ ನಡುವಿನ ಗ್ರಾಮವನ್ನು ಅಲ್ಲಿನ ಬ್ರಾಹ್ಮಣರಿಗೆ ದಾನ ನೀಡಲಾಗಿದೆ.[೧೫] ವಿಜಯಾದಿತ್ಯನ ಬೇಟಪಲ್ಲಿ ಶಾಸನದಲ್ಲಿ ಅಲ್ಲಿನ ಒಂದು ಭೂದಾನದ ನಿರೂಪದಂತೆ ೨೫ ಮತ್ತರ್ ಎರೆಕಾಡು (ಕಪ್ಪು ಮಣ್ಣು), ೫೦ ಮತ್ತರ್ ಕಿಸುಕ್ಕಾಡು (ಕೆಂಪು ಮಣ್ಣು), ೩ ಮತ್ತರ್ ಕಿಲ್‌ಕೆರೆಯ (ಕೆಳಗಿನ ಕೆರೆಯ)ಗೆ ಸೇರಿದ್ದ ಭೂಮಿ ಹಾಗೂ ೧ ಮತ್ತರ ಭೂಮಿ ಮತ್ತು ೨ ಮತ್ತರ್ ತೋಟ ಯಂಕಾರ ಕೆರೆ ಕೆಳಗಿನ ಭೂಮಿ ಎಂದು ಉಲ್ಲೇಖಿಸುತ್ತದೆ.[೧೬] ಹೀಗಾಗಿ ಮೇಲಿನ ಹಲವು ಶಾಸನಗಳ ಹಿನ್ನೆಲೆಯಲ್ಲಿ ಕೃಷಿ ಚೌಕಟ್ಟಿಗೆ ಪೂರಕವಾಗಿ ಬೆಳೆದು ಬಂದಿದ್ದಂಥ ನೀರಾವರಿ ಚೌಕಟ್ಟನ್ನು ಗ್ರಹಿಸಬಹುದಾಗಿದೆ.

ಎರಡನೇ ವಿಕ್ರಮಾದಿತ್ಯನ ಕಾಲದ ಲಕ್ಷ್ಮೇಶ್ವರದ ಶಾಸನದಲ್ಲಿ ಜಿನಾಲಯಕ್ಕೆ ದತ್ತಿ ಬಿಟ್ಟಿರುವ ಭೂಮಿ ಪ್ರಸ್ತಾಪ ಇದ್ದು, ಅದರ ಗಡಿಯನ್ನು ಗುರುತಿಸುವಾಗ, ಪುರಿಕರ ನಗರದ ಉತ್ತರಕ್ಕೆ ಮತ್ತು ಕರುಪತಿ ತಟಾಕದ ದಕ್ಷಿಣಕ್ಕೆ ಇರುವ ಭೂಮಿ ಎಂದು ಉಲ್ಲೇಖಿಸಿದೆ.[೧೭]

ಕೀರ್ತಿವರ್ಮನ ವಕ್ಕಲೇರಿ ತಾಮ್ರಪಟಗಳಲ್ಲಿ (ಕ್ರಿ.ಶ. ೭೫೭) ಭೀಮರಥಿಯ ಉತ್ತರ ದಂಡೆಯ ಮೇಲೆ ಬೀಡು ಬಿಟ್ಟಿರುವಾಗ ನಾಡುವಿನ ಮುಖ್ಯಸ್ಥನ ಕೋರಿಕೆಯಂತೆ 'ಆವರದೊರೆ' ನದಿಯ ದಕ್ಷಿಣ ದಂಡೆಯ ಮೂರು ಗ್ರಾಮಗಳನ್ನು ದತ್ತಿ ಬಿಟ್ಟಿರುವುದು ದಾಖಲಿಸಿದೆ.[೧೮] ಇಲ್ಲಿ ದಾನ ನೀಡಲ್ಪಟ್ಟ ಗ್ರಾಮಗಳು ನದಿ ದಂಡೆಯಲ್ಲಿ ಇದ್ದು ನೀರಾವರಿ ಸೌಲಭ್ಯ ಹೊಂದಿರುವ ಹಿನ್ನೆಲೆಯಲ್ಲಿ ದಾನಕ್ಕೆ ಮಹತ್ತ್ವ ಹೊಂದಿರುವುದು ಗಮನಿಸಬೇಕಾದ ಅಂಶ. ಕೀರ್ತಿವರ್ಮನ ಆದೂರು ಶಾಸನದಲ್ಲಿ 'ಧರ್ಮಶಾಲೆ'ಗೆ ನೀಡಿರುವ ದಾನಗಳನ್ನು ಉಲ್ಲೇಖಿಸುತ್ತಾ ಹಲವು ಗಾವುಂಡರು ಕೆರೆ ಕೆಗಳಿನ ೮ ಮತ್ತರ್ ತರಿ ಭೂಮಿಯನ್ನು (ರಾಜಮಾನೆ ಅಳತೆಯ) ಜಿನೇಂದ್ರ ದೇವಾಲಯಕ್ಕೆ ಹವಿಸ್ಸು, ಗಂಧ, ಅಕ್ಷತೆ, ಹೂ ಸೇವೆಗಳಿಗಾಗಿ ನೀಡಿರುವುದು ದಾಖಲಾಗಿದೆ.[೧೯]

ವಿನಯಾದಿತ್ಯನ ೭ನೇ ಶತಮಾನದ ಜಂಬಾಣಿ ಶಾಸನದಲ್ಲಿ ಪಾಂಡಿ ವೀರರಸ 'ಪುಟ್ಟಿಲಗೆರೆ' ಎಂಬ ಕೆರೆಯ ಕೆಳಗಿನ ಭೂಮಿಯನ್ನು ದಾನ ನೀಡಿದ ಹಾಗೂ ಕೆರೆಯ ಹೆಚ್ಚುವರಿ ನೀರಿನಿಂದ ಸಾಗುವಳಿಯಾದ ಬಯಲು ಸೇರಿವೆ.[೨೦]

ಬಾದಾಮಿ ಚಲುಕ್ಯರ ಕಾಲಘಟ್ಟದಲ್ಲಿ ಕೃಷಿ ವಿಸ್ತರಣೆ ಕುರಿತಂತೆ ಬೆಳಕು ಚೆಲ್ಲುವ ಎರಡನೇ ಕೀರ್ತಿವರ್ಮನ (೮ನೇ ಶತಮಾನ) ನೀಲೂರು ಶಾಸನದಲ್ಲಿ ಇಬ್ಬರು ಗಾವುಂಡರು, ಅದರಲ್ಲಿ ಒಬ್ಬನಾದ ಭೀರಗಾವುಂಡ ಕಾಡು ಭೂಮಿಯನ್ನು ಸಾಗುವಳಿ ಮಾಡಲು ಅನುಮತಿ ಪಡೆದು ಮೊದಲ ವರ್ಷ ಯಾವುದೇ ತೆರದ ತೆರಿಗೆ ಇಲ್ಲದ (ತೆರಿಗೆ ಮುಕ್ತ) ಹಾಗು ಉತ್ಪನ್ನದ ೧/೧೦ ಭಾಗ ಐದನೇ ವರ್ಷದವರೆಗೆ ರಿಯಾಯಿತಿ ನೀಡಿದ್ದಲ್ಲದೆ ನೇಗಿಲು ಮತ್ತು ಇತರ ಉಪಕರಣಗಳನ್ನು ನೀಡಿದ್ದನ್ನು ಉಲ್ಲೇಖಿಸುತ್ತದೆ.[೨೧]

ಬಾದಾಮಿ ಚಲುಕ್ಯರ ಕಾಲದ ವೇಳೆಗೆ ಕೆರೆ, ನೀರಾವರಿ ಚೌಕಟ್ಟು ಒಂದು ನಿರ್ದಿಷ್ಟ ರೂಪ ಪಡೆದಿರುವುದು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಶಾಸನೋಕ್ತ ಕೆರೆ/ನೀರಾವರಿ ಪದ್ಧತಿ ಕುರಿತಂತೆ ಗಣನೀಯ ಪ್ರಮಾಣದಲ್ಲಿ ಕಂಡು ಬರುವುದಿಲ್ಲವಾದರೂ, ಹಲವೇ ಶಾಸನಗಳಾದರೂ ನೀರಾವರಿ ಚೌಕಟ್ಟನ್ನು ಪ್ರಾತಿನಿಧಿಕವಾಗಿ ಬಿಂಬಿಸುತ್ತವೆ.

ರಾಜ್ಯದಾದ್ಯಂತ ವಿವಿಧ ಭಾಗಗಳಲ್ಲಿ ಮಲೆನಾಡನ್ನು ಹೊರತುಪಡಿಸಿ ಭೌಗೋಳಿಕ ಲಕ್ಷಣಗಳಿಗೆ ಪೂರಕವಾಗಿ ದೊಡ್ಡ ಪ್ರಮಾಣದಲ್ಲಿ ನೀರಾವರಿ ಚಟುವಟಿಕೆಗಳು ಕಂಡುಬರುತ್ತವೆ. ಈ ಎಲ್ಲ ಕಾಮಗಾರಿಗಳಿಗೆ ಶಾಸನೋಕ್ತ ಅಥವಾ ಇನ್ನಿತರ ದಾಖಲೆಗಳು ೧೯ನೇ ಶತಮಾನದವರೆಗೆ ಅಲಭ್ಯ. ಶಾಸನೋಕ್ತ ದಾಖಲೆಗಳಿರುವುದಾದರೂ ದಾನ, ದತ್ತಿ, ಕೊಡುಗೈ ಮುಂತಾದ ಪ್ರಕ್ರಿಯೆಗಳಿದ್ದಾಗ ಮಾತ್ರ. ಹೀಗಾಗಿ ಕೆರೆ/ನೀರಾವರಿ ಚೌಕಟ್ಟನ್ನು ಆ ಮಿತಿಯಲ್ಲಿ ನೋಡಬೇಕಾದ ಅನಿವಾರ್ಯತೆ ಬೇಕಿಲ್ಲ.

ಬಾದಾಮಿ ಚಲುಕ್ಯರ ಆಳ್ವಿಕೆಯ ಆರಂಭಿಕ ಹಂತ ಮತ್ತು ಪುನಃ ಪ್ರತಿಷ್ಠಾಪನೆ ನಂತರದ ಹಂತಗಳಲ್ಲಿ ಕಾಮಗಾರಿಗಳು ಅನುಷ್ಠಾನಗೊಂಡಿರುವುದು ಕಂಡುಬರುತ್ತದೆ.

ಪ್ರಾಯಶಃ ೬–೭ನೇ ಶತಮಾನದ ಕರ್ನಾಟಕದ ರಾಜಕೀಯ ರಂಗದಲ್ಲಿ ಧ್ರುವೀಕರಣ, ಸ್ಥಿತ್ಯಂತರ, ಸಾಮ್ರಾಜ್ಯದ ವಿಸ್ತಾರಣೆಯ ಹಿಗ್ಗುವಿಕೆ ಮತ್ತು ಕುಗ್ಗುವಿಕೆ ಪ್ರಕ್ರಿಯೆಯಿಂದಾಗಿ ಶಾಸನೋಕ್ತ ಆಧಾರಗಳಿಗೆ ಲಭ್ಯತೆ ಕ್ಷೀಣಿಸಿರಬೇಕು.

ಪ್ರಾಚೀನ/ಮಧ್ಯಕಾಲೀನ ವ್ಯವಸ್ಥೆಯಲ್ಲಿ ನೀರಾವರಿ ಕಾಮಗಾರಿಗಳ ಪ್ರಾಯೋಜಕತ್ವ, ನಿರ್ಮಾಣ, ದುರಸ್ತಿ ಮತ್ತು ನಿರ್ವಹಣೆಯಂತಹ ಕಾರ್ಯಗಳು ಪುಣ್ಯಪ್ರಾಪ್ತಿಯ ಮಹೋನ್ನತ ಉದ್ದೇಶಗಳನ್ನು ಪ್ರಧಾನವಾಗಿ ಹೊಂದಿದ್ದವು.

ರಾಜರೇ ನೇರವಾಗಿ ಕೆರೆ ಕಾಮಗಾರಿಗಳನ್ನು ಅನುಷ್ಠಾನಗೊಳಿಸಿರುವುದು ಕಂಡುಬರುತ್ತವೆಯಾದರೂ, ಶಾಸನೋಕ್ತ ಆಧಾರದಲ್ಲಿ ಅಧಿಕಾರಿಗಳು, ಸಾಮಂತರು, ಪ್ರಾದೇಶಿಕ ಆಡಳಿತಗಾರರು, ವ್ಯಕ್ತಿಗಳು ಸಕ್ರಿಯವಾಗಿ ಪಾಲ್ಗೊಂಡಿರುವುದು ಕಂಡುಬರುತ್ತಿಲ್ಲ. ಪ್ರಾಯಶಃ ರಾಜಕೀಯ ಏಳು-ಬೀಳುಗಳು, ಅಸ್ಥಿರತೆ ಕಾರಣವಾಗಿರಬೇಕು.

೭ನೇ ಶತಮಾನದ ವೇಳೆಗೆ ಬಾದಾಮಿ ಚಲುಕ್ಯರ ಆಡಳಿತಾವಧಿಯಲ್ಲಿ 'ತೂಬು' ಪ್ರಸ್ತಾಪ, ಕೆರೆಯ ಹೆಚ್ಚುವರಿ ನೀರಿನ ಸಾಗುವಳಿ ಕುರಿತಂತೆ ಉಲ್ಲೇಖಗಳು ಇರುವುದೂ ತಾಂತ್ರಿಕ ಕೌಶಲ್ಯದ ಪ್ರತೀಕವಾಗಿ ಕಂಡುಬರುತ್ತದೆ.

ಪರಂಪರೆಯಂತೆ ದೇವಾಲಯ ದತ್ತಿ ಸ್ವರೂಪದ ನೀರಾವರಿ ಕಾಮಗಾರಿಗಳು ಪ್ರಧಾನವಾಗಿ ಕಂಡುಬರುತ್ತವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಅರ್ಥಶಾಸ್ತ್ರ,** ೨-೨೨-೧೯ದ ಜನಪರ ವಿಶೇಷ.
೨. ರಮೇಶ್. ಕೆ.ವಿ. *Chalukyas of Vatapi,* 1984.
೩. ಶೀಲಾಕಾಂತ್ ಪತ್ತಾರ್, **ಬಾದಾಮಿ ಸಾಂಸ್ಕೃತಿಕ ಅಧ್ಯಯನ,** ಪುಟ ೨೭೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪. ಪಾಡಿಗಾರ್. ಎಸ್.ವಿ. ಸಂ. *Inscriptions of Chalukyas of Badami,* ICHR, Bangalore-2010, ೧೩೬.
೫. ಅದೇ ಸಂಖ್ಯೆ ೧೧೨.
೬. *Indian Antiquary,* viii, I. 209.
೭. ಪಾಡಿಗಾರ್. ಎಸ್.ವಿ.
೮. ಅದೇ, ೧೧೨.
೯. ಅದೇ, ೧೦೦.
೧೦. ಅದೇ, ೧೧೮.
೧೧. ಅದೇ, ೧೧೯.
೧೨. ಅದೇ, ೫೦.
೧೩. *JBBRAS,* Vol. xvi, pp. 227-229.
೧೪. *EI,* Vol. xviii, pp. 57-61.
೧೫. *MAR,* 1909, pp. 118-119, 121-122.
೧೬. *SII,* Vol, ix, P-I, pp. 47.
೧೭. *SII,* Vol. xx No. 07.
೧೮. *I.A.* Vol. viii, pp. 23-24.
೧೯. *SII,* Vol. xx, No. 9.
೨೦. *JESI,* Vol. V, pp, 85-87, No. 441.
೨೧. *SII,* Vol. ix, p-I, No. 50.



# ಮಂಡ್ಯ ಜಿಲ್ಲೆಯ ಚೋಳ ಶಾಸನಗಳು ಒಂದು ವಿವೇಚನೆ

ಡಾ. ಎಸ್. ಶಿವರಾಮು*

ಕರ್ನಾಟಕವನ್ನಾಳಿದ ಹಲವು ರಾಜ ಮನೆತನಗಳಲ್ಲಿ ಚೋಳರದೂ ಒಂದು. ಮೂಲತಃ ತಮಿಳುನಾಡಿನವರಾದ ಇವರು ರಾಜ್ಯ ವಿಸ್ತರಣಾಕಾಂಕ್ಷಿಗಳಾಗಿ ದಕ್ಷಿಣ ಕರ್ನಾಟಕದ ಹಲವು ಭಾಗಗಳನ್ನು ಆಕ್ರಮಿಸಿಕೊಂಡರು. ಚೋಳ ವಂಶದ ಆಳ್ವಿಕೆಯು ಮಂಡ್ಯ ಜಿಲ್ಲಾ ಪ್ರದೇಶದಲ್ಲಿ ಮೊದಲನೇ ರಾಜರಾಜನಿಂದ ಆರಂಭಗೊಂಡು ಮೊದಲನೇ ಕುಲೋತ್ತುಂಗನವರೆಗೂ ಸುಮಾರು ಒಂದು ಶತಮಾನಗಳ ಕಾಲ ಮುಂದುವರಿಯಿತು. ಮೈಸೂರು ಜಿಲ್ಲೆಯ ತಲಕಾಡು ಚೋಳರ ಎಲ್ಲಾ ಚಟುವಟಿಕೆಗಳಿಗೂ ಕೇಂದ್ರವಾಗಿತ್ತು. ಗಂಗರ ಆಳ್ವಿಕೆಯನ್ನು ಕೊನೆಗಾಣಿಸಿ ಚೋಳರು ತಲಕಾಡನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದರು. ತಲಕಾಡನ್ನು ಅವರು ಒಂದನೇ ರಾಜರಾಜನ ನೆನಪಿಗಾಗಿ ರಾಜರಾಜಪುರವೆಂದು ಪುನರ್ ನಾಮಕರಣ ಮಾಡಿದ್ದರು.

ಕ್ರಿ.ಶ. ೧೦ನೇ ಶತಮಾನದ ಕೊನೆಯ ಭಾಗದಲ್ಲಿ ಕರ್ನಾಟಕ ಆಗ್ನೇಯ ಭಾಗವನ್ನು ಅಂದರೆ ಇಂದಿನ ತಮಿಳುನಾಡಿಗೆ ಹೊಂದಿಕೊಂಡಂತೆ ಇರುವ ಮೈಸೂರು, ಮಂಡ್ಯ, ಚಾಮರಾಜನಗರ ಜಿಲ್ಲೆಗಳ ಬಹಳಷ್ಟು ಭಾಗಗಳನ್ನು ಚೋಳ ಚಕ್ರವರ್ತಿ ರಾಜರಾಜ ಚೋಳನು ಆಕ್ರಮಿಸಿಕೊಂಡನು. ಈ ಭಾಗಗಳು ಅಂದಿನ ಗಂಗವಾಡಿ ೯೬೦೦೦ ಪ್ರಾಂತ್ಯ ಮತ್ತು ನೊಳಂಬವಾಡಿ ೩೨೦೦೦ ಪ್ರಾಂತ್ಯಗಳ ಆಗ್ನೇಯ ಭಾಗ ಗಳಾಗಿದ್ದವು. ಗಂಗಾವಾಡಿಯನ್ನು ಗಂಗರು, ನೊಳಂಬ ವಾಡಿಯನ್ನು ನೊಳಂಬರು ಆಳುತ್ತಿದ್ದರು. ಚೋಳರು ಗಂಗರನ್ನು ಮತ್ತು ನೊಳಂಬರನ್ನು ಸೋಲಿಸಿ ಇಲ್ಲಿ ಸುಮಾರು ಕ್ರಿ.ಶ. ೯೮೫ ರಿಂದ ೧೧೮೦ ವರ್ಷಗಳ ಕಾಲ ಕರ್ನಾಟಕ ಆಗ್ನೇಯ ಭಾಗದ ಮೇಲೆ ಆಳ್ವಿಕೆ ನಡೆಸಿ ತಮ್ಮ ಸಂಸ್ಕೃತಿ ಈ ಭಾಗದಲ್ಲಿ ಬೇರೂರುವಂತೆ ಮಾಡಿದರು.

ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಪ್ರಕಟಗೊಂಡಿರುವ ಚೋಳರಿಗೆ ಸಂಬಂಧಿಸಿದ ಶಾಸನಗಳು ಕೇವಲ ಎಂಟು ಮಾತ್ರ ಗೋಚರಿಸುತ್ತವೆ. ಇವುಗಳ ಪೈಕಿ ಎರಡು ಒಂದನೇ ರಾಜರಾಜನಿಗೆ ಸೇರಿದವು. ಪಾಂಡವಪುರ ತಾಲ್ಲೂಕಿನ ಚಿನಕುರಳಿ ಗ್ರಾಮದ ಪ್ರವಾಸಿ ಮಂದಿರಕ್ಕೆ ಹೋಗುವ ದಾರಿಯಲ್ಲಿರುವ ವೀರಗಲ್ಲು ಶಾಸನವು ಕ್ರಿ.ಶ. ೧೦೧೧ರಲ್ಲಿ ಈ ಪ್ರದೇಶವನ್ನು ರಾಜರಾಜದೇವನು ಆಳುತ್ತಿದ್ದಾಗ ಚಿಕ್ಕಮಂಗಲ ಎಂಬ ಸ್ಥಳದಲ್ಲಿ (ಚಿನಕುರಳಿ) ಬಂಗಲಿ ಎರೆಯಮ್ಮನ ಮಗ ನಾಗಯ್ಯನೆಂಬ ವೀರನು ತುರುಗಳನ್ನು ಸಂರಕ್ಷಿಸುವ ಕಾರ್ಯದಲ್ಲಿ ಮರಣ ಹೊಂದಿದ ವಿಚಾರವನ್ನು ತಿಳಿಸುತ್ತದೆ. ಇದು ರಾಜರಾಜನಿಗೆ ನೇರವಾಗಿ ಸಂಬಂಧಿಸಿಲ್ಲವಾದರೂ ಆ ಕಾಲದಲ್ಲಿ ಆ ಪ್ರದೇಶದಲ್ಲಿ ಅವನ ಆಳ್ವಿಕೆಯಿದ್ದುದನ್ನಂತೂ ದೃಢಪಡಿಸುತ್ತದೆ[೧].

ಎರಡನೆಯದು ಶ್ರೀರಂಗಪಟ್ಟಣ ತಾಲ್ಲೂಕಿನ ಬಲಮುರಿ ಕ್ಷೇತ್ರದಲ್ಲಿರುವ ಶಾಸನವು ಕನ್ನಡ ಭಾಷೆಯಲ್ಲಿದ್ದು, ರಾಜರಾಜ ಚೋಳನ ಆಳ್ವಿಕೆಯ ಮೇಲೆ ಇದು ಹೆಚ್ಚಿನ ಬೆಳಕು ಚೆಲ್ಲುತ್ತದೆ. ರಾಜರಾಜನು ಈ ಭಾಗವನ್ನು ಆಳುತ್ತಿದ್ದಾಗ ಅವನ ಮಹಾದಂಡನಾಯಕನಾದ ಪಂಚವಮಹಾರಾಯನು ವೆಂಗಿಮಂಡಲ ಮತ್ತು ಗಂಗಮಂಡಲಗಳ ಆಡಳಿತ ಅಧಿಕಾರವನ್ನು ಹೊಂದಿದ್ದನೆಂದು ದಾಖಲಿಸಿದೆ. ಈತನು ತನ್ನ ಪರಾಕ್ರಮದಿಂದ ಗಂಗರಾಜ್ಯ, ರಟ್ಟವಾಡಿ, ಏಳುಮಲೆ ನಾಡುಗಳು, ನೊಳಂಬರಾಜ್ಯ, ಆಂಧ್ರರಾಜ್ಯ, ಕೊಂಗು, ಕಳಿಂಗ, ಪಾಂಡ್ಯ ನಾಡುಗಳ ದೊರೆಗಳನ್ನು ಸಂಹರಿಸಿ ಆ ಎಲ್ಲರ ಭೂಭಾಗಗಳನ್ನು ಒಟ್ಟಾಗಿ ಚೋಳನಾಡೆಂದು ಕರೆದು, ಅದನ್ನು ರಾಜರಾಜಚೋಳನು, ಆಳುತ್ತಿದ್ದನೆಂಬುದು ಇದರಿಂದ ತಿಳಿದುಬರುತ್ತದೆ. ಪಂಚಮಹಾರಾಜನು ಚಕ್ರವರ್ತಿಯ ನಿಷ್ಠಾವಂತ ಬಂಟನಾಗಿದ್ದು, ಬಳ್ಳೆಗೊಳದ ಬಲಮುರಿ ಕ್ಷೇತ್ರದ ದೇವರಿಗೆ ನಿರಂತರವಾಗಿ ದಿನಕ್ಕೆ ಎರಡು ಬಾರಿ ದೀಪವನ್ನು ಉರಿಸಲು ಉತ್ತರಾಯಣ ಸಂಕ್ರಾಂತಿ ಯಂದು ದಾನ ನೀಡಿದನೆಂದು ಇದೇ ಶಾಸನದಲ್ಲಿ ದಾಖಲಿಸಲಾಗಿದೆ[೨].

ಮದ್ದೂರು ತಾಲ್ಲೂಕಿನ ವೈದ್ಯನಾಥಪುರ ವೈದ್ಯನಾಥೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಸೂರ್ಯನಾರಾಯಣನ ಗುಡಿಯ ಗೋಡೆಯಲ್ಲಿರುವ ಶಾಸನವು ಸುಮಾರು ೧೧ನೇ ಶತಮಾನದ ಲಕ್ಷಣವನ್ನು ಹೊಂದಿದ್ದು, ಮೊದಲನೇ

* ಇತಿಹಾಸ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಿರಿಯಾಪಟ್ಟಣ–೫೭೧೧೦೭.

ರಾಜೇಂದ್ರ ಚೋಳನ ಕಾಲಕ್ಕೆ ಸೇರಿದೆ. ರಾಜೇಂದ್ರ ಚೋಳನು ಉತ್ತರಲಾಟ, ಗಂಗಾಪ್ರದೇಶ ಇವನ್ನೆಲ್ಲಾ ಜಯಿಸಿದ್ದು, ಕಡಾರಂನ ಸಂಗ್ರಾಮ ವಿಜಯೋತ್ತುಂಗ ವರ್ಮನನ್ನು ಗೆದ್ದದ್ದು ಮುಂತಾದ ವಿಚಾರಗಳ ಉಲ್ಲೇಖವಿದ್ದು, ಚೋಳರ ಚರಿತ್ರೆಯ ಅಧ್ಯಯನಕ್ಕೆ ಇದು ಆಧಾರವನ್ನು ಒದಗಿಸಿಕೊಡುತ್ತದೆ[೩].

ಶ್ರೀರಂಗಪಟ್ಟಣ ತಾಲ್ಲೂಕಿನ ಬೊಮ್ಮೂರು ಅಗ್ರಹಾರದ ಹೊಲದಲ್ಲಿರುವ ತಮಿಳು ಶಾಸನವು ಕ್ರಿ.ಶ. ೧೧೦೨-೧೧೦೩ರಲ್ಲಿ ಚೋಳರಾಜ ಕುಲೋತ್ತುಂಗನು ತನ್ನ ೩೩ನೇ ಆಳ್ವಿಕೆಯ ವರ್ಷದಲ್ಲಿ ತನ್ನ ಮಾಂಡಲಿಕನೂ ಆದ ಪೋಮನ್ ಇರಾಮನಾದ ವಾನವಾನ್ ಮಾದೇವಿ ಚತುರ್ವೇದ ಮಂಗಳದ ವ್ಯಾಪ್ತಿಯಲ್ಲಿದ್ದ ಕಲಸತ್ತಪಾಡಿ ಎಂಬ ಗ್ರಾಮದ ಕೆರೆಯ ಕಟ್ಟೆಯನ್ನು ಜೀರ್ಣೋದ್ಧಾರಗೊಳಿಸಿದ ಬಗ್ಗೆ ತಿಳಿಸುತ್ತದೆ[೪].

ಮಂಡ್ಯ ತಾಲ್ಲೂಕಿನ ಚನ್ನಪ್ಪನದೊಡ್ಡಿಯ ಒಂದು ಬಹುತ್ರುಟಿತ ಶಾಸನ ಇದರಲ್ಲಿ ಎರಡು ಪದಗಳು ಮಾತ್ರ ಕಾಣಿಸುತ್ತದೆ. ಅವುಗಳಲ್ಲಿ ಒಂದು "ಉತ್ತಮ ಚೋಳ" ಎಂಬುದು ಇದು ಯಾವ ದೊರೆಯನ್ನು ಸೂಚಿಸುತ್ತದೆ. ಯಾವ ಕಾಲಕ್ಕೆ ಸೇರುತ್ತದೆ ಎಂಬುದು ತಿಳಿಯದೇ ಇದ್ದರೂ ಆ ಪ್ರದೇಶದಲ್ಲಿ ಚೋಳರ ಆಡಳಿತವಿದ್ದುದಕ್ಕಂತೂ ಸಾಕ್ಷಿಯಾಗಿದೆ[೫].

ಮಂಡ್ಯ ತಾಲ್ಲೂಕಿನ ೧೧ನೇ ಶತಮಾನದ ಒಂದು ಶಾಸನದಲ್ಲಿ ಕುಂದುನಾಡಿನ ಒಡೆಯ ಕನ್ನಯ್ಯನ ಮಗ ರಾಜೇಂದ್ರ ಚೋಳನು ತುರುಗಾಳಗದಲ್ಲಿ ಮಡಿದ ವಿವರವಿದೆ[೬]. ಈ ವೀರಗಲ್ಲು ಶಾಸನವು ರಾಜೇಂದ್ರ ಚೋಳಗವುಡನ ಶೌರ್ಯಸಾಹಸಗಳನ್ನು ಸ್ತುತಿಸುತ್ತಾ ಅವನು ಪರಿಶುದ್ಧವಾದ ಗುಣವನ್ನು ಹೊಂದಿದ್ದ ಬ್ರಾಹ್ಮಣರ ಪೋಷಕನಾಗಿದ್ದ, ತನ್ನ ಸ್ವಂತ ಜನಗಳ ವಿಷಯದಲ್ಲಿ ಕೃಪಾಳುವಾಗಿದ್ದು, ಅಲ್ಲದೆ ರಾಜೇಂದ್ರ ಚೋಳಗವುಡನು ತನ್ನ ವಂಶೋದ್ಧಾರಕ ಎಂದು ಪ್ರಸ್ತಾಪಿಸುತ್ತದೆ.

ಮಂಡ್ಯ ತಾಲ್ಲೂಕಿನ ಹಳೇಬೂದನೂರಿನ ಸೋಮೇಶ್ವರ ದೇವಾಲಯದ ಮುಂದಿರುವ ಕನ್ನಡ ಲಿಪಿಯಲ್ಲಿರುವ ತಮಿಳು ಶಾಸನವು ಮೊದಲನೆಯ ರಾಜೇಂದ್ರ ಚೋಳನ ಆಳ್ವಿಕೆಯ ಕಾಲಕ್ಕೆ ಸೇರುತ್ತದೆ. ಇದರ ಕಾಲ ಕ್ರಿ.ಶ. ೧೦೨೪ ಶಾಸನದ ಹೆಚ್ಚಿನ ಭಾಗವು ತ್ರುಟಿತವಾಗಿರುವುದರಿಂದ ಇದರ ರಚನೆಯ ಉದ್ದೇಶವೇನೆಂಬುದು ತಿಳಿಯುವುದಿಲ್ಲ. ಆದರೆ ಚಕ್ರವರ್ತಿಗೆ ಸಂಬಂಧಿಸಿದ ಕೆಲವು ಪ್ರಮುಖ ವಿಚಾರಗಳಂತೂ ತಿಳಿದು ಬರುತ್ತದೆ. ರಾಜೇಂದ್ರ ಚೋಳನು ಎಡದೊರೆನಾಡು, ಬನವಾಸಿ, ಕೊಲ್ಲಪಾಕೆ, ಮನ್ನೆಕಡಕಂ (ಮಾನ್ಯಖೇಟ) ಸಮುದ್ರ ಮಧ್ಯದಲ್ಲಿದ್ದ ಈಳಂಮಂಡಲ ಇವನ್ನೆಲ್ಲ ಗೆದ್ದಿದ್ದ; ಪಾಂಡ್ಯ ದೊರೆ ಸುಂದರನನ್ನು ಜಯಿಸಿದ್ದ; ಚಾಲುಕ್ಯ ಜಯಸಿಂಹನನ್ನು ಮುಸಂಗಿಯಲ್ಲಿ ಸೋಲಿಸಿದ್ದ ; ಚೇರಳ (ಕೇರಳ), ಒಡ್ಡ ವಿಷಯ, ಉತ್ತರಲಾಟ, ದಕ್ಷಿಣ ಲಾಟಗಳನ್ನು ಜಯಿಸಿದ್ದ; ಗಂಗೆಯ ಬಯಲನ್ನು ಕೈವಶ ಮಾಡಿಕೊಂಡಿದ್ದ ಎಂಬಿವೇ ಮುಂತಾದ ವಿಚಾರಗಳು ಇದರಲ್ಲಿ ಕಾವ್ಯಮಯ ವಾಗಿ ವರ್ಣಿತವಾಗಿವೆ. ಇದರಿಂದ ಚೋಳ ರಾಜ್ಯದ ವಿಸ್ತಾರ ಹಾಗೂ ಕರ್ನಾಟಕದ ಮೇಲಿನ ಅದರ ಹಿಡಿತ ಇವು ಸ್ಪಷ್ಟವಾಗುತ್ತವೆ[೭].

ಕ್ರಿ.ಶ. ೧೦ನೇ ಶತಮಾನದ ನಂತರ ಚೋಳರು ದಕ್ಷಿಣ ಕರ್ನಾಟಕದ ಮೇಲೆ ರಾಜಕೀಯ ಪ್ರಭಾವ ಸಾಧಿಸಿ ಹೆಚ್ಚಿನ ವೈಷ್ಣವ ಬ್ರಾಹ್ಮಣರು ಇಲ್ಲಿಗೆ ವಲಸೆ ಬಂದಂತಹ ಹಲವು ಮಹತ್ವವಾದ ವಿವರಗಳನ್ನು ಶಾಸನಗಳು ತಿಳಿಸುತ್ತವೆ. ಚೋಳರ ಕಾಲದಲ್ಲಿ ವೈಷ್ಣವ ಬ್ರಾಹ್ಮಣರ ಎರಡು ಪಂಗಡಗಳು ದಕ್ಷಿಣ ಕರ್ನಾಟಕವನ್ನು ಪ್ರವೇಶಿಸಿದವು. ಒಂದು ಪಂಗಡ ಶ್ರೀರಂಗದಿಂದ ಹೊರಟು ಕಾವೇರಿ ನದಿಯ ಹಾದಿಯನ್ನೇ ಹಿಡಿದು ತಲಕಾಡಿಗೆ ಬಂದು ಅಲ್ಲಿಂದ ಮೈಸೂರು, ಮಂಡ್ಯ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಹರಡಿಕೊಂಡರು ಮತ್ತು ತಮಿಳು ಬ್ರಾಹ್ಮಣರ ಮತ್ತೊಂದು ಗುಂಪು ಕಂಚಿ ಮತ್ತು ಉತ್ತರ ಮೆರೂರಿನಿಂದ ಹೊರಟು ಪಾಲಾರ್ ನದಿಯನ್ನು ಅನುಸರಿಸಿ ಕೋಲಾರದ ಚಿನ್ನದ ಗಣಿ ಪ್ರದೇಶದಲ್ಲಿ ನೆಲೆಸಿತು. ಮೊದಲ ಗುಂಪಿನ ಬ್ರಾಹ್ಮಣರು ಕಾವೇರಿ ನದಿಯ ದಕ್ಷಿಣ ದಂಡೆ ಅಂದರೆ ಇಂದಿನ ಮಂಡ್ಯ ಜಿಲ್ಲೆಯ ಕೆಲವು ಭಾಗಗಳಲ್ಲಿ ನೆಲೆಸಿದರು ಎಂದು ಪ್ರೊ॥ ಎಸ್. ಶೆಟ್ಟರ್ ಅಭಿಪ್ರಾಯ ಪಟ್ಟಿದ್ದಾರೆ[೮].

ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕು ಶಾಸನಗಳಲ್ಲಿ ಕ್ರಿ.ಶ. ೧೧ನೇ ಶತಮಾನದಲ್ಲಿ ಮದ್ದೂರು ಒಂದು ಚೋಳ ವೈಷ್ಣವರ ನೆಲೆಯಾಗಿತ್ತು ಹಾಗೂ ಚತುರ್ವೇದಿ ಮಂಗಳ ಎಂದು ಕರೆಯಲ್ಪಡುತ್ತಿದ್ದರು[೯]. ನರಸಿಂಗ ಚತುರ್ವೇದಿ ಮಂಗಳಮ್ ಕಳಲೆನಾಡಿನ ಒಂದು ಭಾಗ ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಸಮಕಾಲೀನ ಶಾಸನಗಳ ಆಧಾರದ ಮೇಲೆ ಕ್ರಿ.ಶ. ೧೧ನೇ ಶತಮಾನದಲ್ಲಿ ಈ ಸ್ಥಳದಲ್ಲಿ ವಿಷ್ಣು ದೇವಾಲಯ ನರಸಿಂಹ ದೇವಾಲಯ ಅಲ್ಲಾಳಸಿಂಹ ಪೆರುಮಾಳ್ ದೇವಾಲಯಗಳು ಇದ್ದದ್ದು ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ತಮಿಳು ಬ್ರಾಹ್ಮಣರು ನೆಲೆಸಿದ್ದುದು ವ್ಯಕ್ತವಾಗು ತ್ತದೆ[೧೦].

ಕಾವೇರಿ ನದಿಗೆ ಉತ್ತರಕ್ಕಿರುವ ವೈಷ್ಣವ ಬ್ರಾಹ್ಮಣ ನೆಲೆಗಳಲ್ಲಿ ಮಳವಳ್ಳಿ ತಾಲ್ಲೂಕಿನ ಮರವಳ್ಳಿ ಮತ್ತು ಮದ್ದೂರು ತಾಲ್ಲೂಕಿನ ದೊಡ್ಡಅರಸಿನಕೆರೆ ಮುಖ್ಯವಾದವು[೧೧]. ಮದ್ದೂರಿನ ದಕ್ಷಿಣಕ್ಕಿರುವ ದೊಡ್ಡ ಅರಸಿನಕೆರೆ ಪ್ರದೇಶವು ಕ್ರಿ.ಶ. ೧೧ನೆಯ ಶತಮಾನದಲ್ಲಿ ಒಂದು ತಮಿಳು ಚತುರ್ವೇದಿ ಮಂಗಳ ಆದುದಕ್ಕೆ ಶಾಸನಗಳಲ್ಲಿ ಮಾಹಿತಿ ಇದೆ[೧೨].

ಶ್ರೀರಂಗಪಟ್ಟಣ ತಾಲ್ಲೂಕಿನ ಕಿರಂಗೂರಿನ ಒಂದು ಶಾಸನ. ಇದರಲ್ಲಿ ಬಹುಭಾಗ ಸವೆದು ಹೋಗಿದೆ. ಆದರೆ ಉಳಿದಿರುವ ಒಂದು ಒಂದುವರೆ ಸಾಲೇ ಒಂದು ಮುಖ್ಯ ಅಂಶವನ್ನು ತಿಳಿಸುತ್ತದೆ. ಅದರಲ್ಲಿ ಬರುವ ಪಂಚವ ನಾರಾಯನಾದ ರಾಜೇಂದ್ರ ಚೋಳನೆಂಬ ಮಾತು ಗಮನಾರ್ಹ. ಹಿಂದೆ ನೋಡಿದ ರಾಜರಾಜ ಚೋಳನ ಆಳ್ವಿಕೆಯ ಕಾಲದ ಎರಡನೆಯ ಶಾಸನದಲ್ಲಿ ಪಂಚವ ನಾರಾಯನ ವಿಚಾರವಿದೆ. ಅವನೇ ಈ ರಾಜೇಂದ್ರ ಚೋಳನೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಈ ಶಾಸನದ ಕಾಲ ಗೊತ್ತಿಲ್ಲ. ಇದರಲ್ಲಿ ರಾಜೇಂದ್ರ ಚೋಳನು ಪಟ್ಟಕ್ಕೆ ಬಂದಿದ್ದನೆಂಬ ಉಲ್ಲೇಖವೂ ಇಲ್ಲ. ಹಾಗಾಗಿ ಇದು ಬಹುಶಃ ರಾಜರಾಜ ಚೋಳನ ಆಳ್ವಿಕೆಯ ಕಾಲಕ್ಕೆ ಸೇರುತ್ತದೆಯೆಂದು ತೋರುತ್ತದೆ[೧೩].

ಪಾಂಡವಪುರ ತಾಲ್ಲೂಕಿನ ಕನ್ನಂಬಾಡಿಯ ಕಣ್ವೇಶ್ವರ ದೇವಾಲಯದ ಒಂದು ಶಾಸನ. ಇದರ ಕಾಲ ಕ್ರಿ.ಶ. ೧೧೧೪-೧೫ ಇದೊಂದು ಕನ್ನಡ ಶಾಸನ. ಕುಲೋತ್ತುಂಗ ಚೋಳನ ಆಳ್ವಿಕೆಯ ಕಾಲದಲ್ಲಿ ವಡುಗ ಮುತಹಡೆರಾಯನ ಮಕ್ಕಳಾದ ಮಾದಿಯಣ್ಣ ಮತ್ತು ಲಕ್ಕಣ್ಣ ಎಂಬ ಅಧಿಕಾರಿಗಳು ಎರಡು ದೇವಾಲಯಗಳನ್ನು ನಿರ್ಮಿಸಿದ ಬಗ್ಗೆ ವಿವರಣೆ ನೀಡುತ್ತದೆ. ಆ ದೇವಾಲಯುಗಳಿಗೆಂದು ಕೊವರ ಬಮ್ಮಗಾವುಂಡ ಹಾಗೂ ಅವನ ಹಾಗೂ ಮಾಚಗಾವುಂಡರು ಶಿವಕೆರೆಯಲ್ಲಿ ೧೨ ಖಂಡುಗ ನೀರಾವರಿ ಭೂಮಿಯನ್ನು ಎರಡು ಬಂಡುಗ ಪಿಗುಳ ಕಪ್ಪುಮಣ್ಣಿನ ಭೂಮಿಯನ್ನೂ ಹರಿಯ ಕೆರೆಯಲ್ಲಿ ಒಂದು ಖಂಡುಗ ಜೋಳದ ಭೂಮಿ ಯನ್ನೂ ದತ್ತಿಯಾಗಿ ಬಿಟ್ಟ ಕೊಂಗಜೀಯರಿಗೆ ಧಾರೆಯೆರೆದು ಕೊಟ್ಟ ಎಂಬುದು ಇದರಲ್ಲಿ ನಿರೂಪಿತವಾಗಿದೆ. ನೇರವಾಗಿ ಚೋಳ ದೊರೆಗಳಿಗೆ ಸಂಬಂಧಿಸಿರದಿದ್ದರೂ ಆ ಕಾಲದಲ್ಲಿ ಅಲ್ಲಿ ಅವರ ಆಳ್ವಿಕೆಯಿತ್ತೆಂಬುದಕ್ಕೆ ಇದೊಂದು ಒಳ್ಳೆಯ ಆಧಾರವಾಗಿದೆ[೧೪].

ಚೋಳರ ಆಳ್ವಿಕೆಯ ಅವಧಿಯ ನಾಡುಗಳ ಆಡಳಿತ ರಚನೆಯನ್ನು ಕುರಿತಂತೆ ಕೆಲವು ವಿಶೇಷ ಮಾಹಿತಿಗಳು ಶಾಸನಗಳಲ್ಲಿ ಲಭ್ಯವಾಗಿವೆ. ಚೋಳರ ಆಕ್ರಮಣಗಳ ಹಿನ್ನೆಲೆಯಲ್ಲಿ ದಕ್ಷಿಣ ಕರ್ನಾಟಕಕ್ಕೆ ವಲಸೆ ಬಂದ ತಮಿಳು ರೈತ ಗುಂಪುಗಳು, ತಮ್ಮ ಭಾಷೆ, ಸಂಸ್ಕೃತಿಗಳ ಕಾರಣಗಳಿಂದಾಗಿ ಐಕ್ಯತೆ ಸಾಧಿಸಿ, ದೇವಾಲಯಗಳಿಗೆ ದಾನಗಳನ್ನು ಕೊಡುವ ಮುಖಾಂತರ ಮತ್ತು ತಮ್ಮ ಜೊತೆ ಕರ್ನಾಟಕಕ್ಕೆ ವಲಸೆ ಬಂದ ರೈತ ಕುಟುಂಬಗಳಿಗೆ ಹಾಗೂ ವರ್ತಕರಿಗೆ ಹಲವು ರಿಯಾಯಿತಿಗಳನ್ನು ತೋರಿಸುವುದರ ಮೂಲಕ, ರಾಜಕೀಯ ಏಳಿಗೆಯನ್ನು ಸಾಧಿಸಿದರು.

ಕರ್ನಾಟಕದ ಆಗ್ನೇಯ ಭಾಗದಲ್ಲಿ ಚೋಳರಿಂದ ದ್ರಾವಿಡ ಶೈಲಿಯ ಅನೇಕಾನೇಕ ದೇವಾಲಯಗಳು ನಿರ್ಮಾಣವಾದವು. ಈ ದೇವಾಲಯಗಳಲ್ಲಿ ಮಂಡ್ಯ ಜಿಲ್ಲೆಯ ಮಳವಳ್ಳಿಗೆ ಸೇರಿದ ಮಾರೇಹಳ್ಳಿಯಲ್ಲಿ ಚೋಳರಕಾಲದ ವಾಸ್ತುಶಿಲ್ಪ ಶೈಲಿಯ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯ ಕ್ರಿ.ಶ. ೧೦ನೇ ಶತಮಾನದಲ್ಲಿ ರಾಜರಾಜನ ಕಾಲದಲ್ಲಿ ನಿರ್ಮಾಣವಾಗಿದೆ. ಗರ್ಭಗೃಹ, ಶುಕನಾಸಿ, ನವರಂಗ, ಮುಖಮಂಟಪ, ದ್ವಾರಮಂಟಪ, ಪ್ರಾಕಾರಗೋಡೆ, ಬಲಿಪೀಠ ಒಂದು ಎತ್ತರವಾದ ಗರುಡಕಂಭ ಮುಂತಾದವು ಗಳನ್ನು ಹೊಂದಿದೆ.

ಇವಿಷ್ಟೂ ಈ ಪ್ರದೇಶದಲ್ಲಿ ದೊರಕುವ ಚೋಳ ಶಾಸನ ಗಳು. ಹೆಚ್ಚಾಗಿ ತಮಿಳೇ ಪ್ರಾಧಾನ್ಯವಿರುವುದನ್ನು ಇವುಗಳಲ್ಲಿ ಕಾಣುತ್ತೇವೆ. ಜೊತೆಗೆ ಇವೆಲ್ಲಾ ಶ್ರೀರಂಗಪಟ್ಟಣ, ಪಾಂಡವಪುರ, ಮಂಡ್ಯ, ಮದ್ದೂರು, ಈ ನಾಲ್ಕು ತಾಲ್ಲೂಕುಗಳಿಗಷ್ಟೇ ಸೀಮಿತವಾಗಿದೆ. ಅಂತೆಯೇ ಮೊದಲನೆಯ ರಾಜಾಧಿರಾಜ ಮೊದಲನೆಯ ರಾಜೇಂದ್ರ ಮತ್ತು ಕುಲೋತ್ತುಂಗರ ನಡುವಿನ ಕಾಲದಲ್ಲಿಯಾಗಲೀ ಕುಲೋತ್ತುಂಗನ ನಂತರದಲ್ಲಾಗಲೀ ಆಳಿದ ದೊರೆಗಳ ಒಂದು ಶಾಸನವೂ ಸಿಕ್ಕಿಲ್ಲ. ಈ ಎಲ್ಲಾ ಶಾಸನಗಳಿಂದ ಮಂಡ್ಯ ಜಿಲ್ಲೆಯ ಆಡಳಿತದಲ್ಲಿ ಚೋಳರ ಪ್ರಭಾವ ಎಷ್ಟಿತ್ತೆಂದು ತಿಳಿದುಬರುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. E.C. Vol. VI, (ಪರಿಷ್ಕೃತ), ಪಿರಿಯಾಪಟ್ಟಣ 51, P.135.
೨. E.C. Vol. VI, (ಪರಿಷ್ಕೃತ), ಶ್ರೀರಂಗಪಟ್ಟಣ 78, P. 406-407.
೩. E.C. Vol, VII, (ಪರಿಷ್ಕೃತ), ಮದ್ದೂರು 72, P. 297.
೪. E.C. Vol. VI, (ಪರಿಷ್ಕೃತ), ಶ್ರೀರಂಗಪಟ್ಟಣ 67, P. 399.
೫. E.C. Vol. VII, (ಪರಿಷ್ಕೃತ), ಮಂಡ್ಯ 67, P. 399.
೬. E.C. Vol. VII, (ಪರಿಷ್ಕೃತ), ಮಂಡ್ಯ 51.
೭. E.C. Vol. VII, (ಪರಿಷ್ಕೃತ), ಮಂಡ್ಯ 53, P. 234.
೮. Settar .S., 'From Vaishnavism to Srivaishnavism; A study of Sri Vaishnava Settlement of Pre Ramanuja Era' - *Vaishnavism in Indian Art & Culture,* New Delhi, 1987.
೯. E.C. Vol, VII, (ಪರಿಷ್ಕೃತ), ಮದ್ದೂರು 1-14.
೧೦. E.C. Vol, VII, (ಪರಿಷ್ಕೃತ), ಮದ್ದೂರು 1-38.
೧೧. Settar. S. - Op. Cit, 1987.
೧೨. E.C. Vol, VII, (ಪರಿಷ್ಕೃತ), ಮದ್ದೂರು 123.128. 130.
೧೩. E.C. Vol. VI, (ಪರಿಷ್ಕೃತ), ಶ್ರೀರಂಗಪಟ್ಟಣ 87. P.411.
೧೪. E.C. Vol. VI, (ಪರಿಷ್ಕೃತ), ಪಿರಿಯಾಪಟ್ಟಣ 132-133.



# ಮಂಡ್ಯ ಜಿಲ್ಲೆಯಲ್ಲಿ ಗಂಗರ ಕಾಲದ ಶಾಸನೋಕ್ತ ಆಡಳಿತ

ಟಿ. ರಾಜು*

ಕರ್ನಾಟಕ ರಾಜ್ಯದ ದಕ್ಷಿಣ ಭಾಗದಲ್ಲಿರುವ ಮಂಡ್ಯ ಜಿಲ್ಲೆ ಇತರೆ ಜಿಲ್ಲೆಗಳಷ್ಟೆ ಪ್ರಾಚೀನವಾದ ಚಾರಿತ್ರಿಕ ಹಿನ್ನೆಲೆಯನ್ನು ಒಳಗೊಂಡಿದೆ. ಜುಲೈ ೧, ೧೯೩೯ರಂದು ಜಿಲ್ಲೆಯಾಗಿ ರೂಪುಗೊಂಡ ಮಂಡ್ಯ ಜಿಲ್ಲೆ ಭಾಷೆ, ಸಾಹಿತ್ಯ, ಸಂಸ್ಕೃತಿ, ಇತಿಹಾಸ ಅಧ್ಯಯನಕ್ಕೆ ಆಕರಗಳು, ಶಾಸನಗಳನ್ನೊಳಗೊಂಡಿದೆ. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಬಿ.ಎಲ್. ರೈಸ್‌ರವರು 'ಎಪಿಗ್ರಾಫಿಯಾ ಕರ್ನಾಟಿಕ' ಸರಣಿಯಲ್ಲಿ ಸಂಪಾದಿಸಿ ಪ್ರಕಟಿಸಿದ ಶಾಸನಗಳು ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಉಪಯುಕ್ತ ಮಾಹಿತಿಯನ್ನು ನೀಡುತ್ತವೆ. ಎಪಿಗ್ರಾಫಿಯ ಕರ್ನಾಟಕ ಸಂಪುಟ ೬ ಮತ್ತು ೭ರಲ್ಲಿ (ಪರಿಷ್ಕೃತ ಆವೃತ್ತಿಗಳು) ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಸುಮಾರು ೩೧೯ ಶಾಸನಗಳು ಲಭ್ಯವಾಗಿವೆ. ಮಂಡ್ಯ ಜಿಲ್ಲೆಯ ೭ ತಾಲ್ಲೂಕುಗಳಲ್ಲಿ ಉಪಲಬ್ಧವಾಗಿರುವ ಗಂಗರ ಶಾಸನಗಳನ್ನು ಗಮನದಲ್ಲಿಟ್ಟುಕೊಂಡು ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಗಂಗರ ಕಾಲಕ್ಕೆ ಸೇರಿದ ಸುಮಾರು ೨೪ ಶಾಸನಗಳು ಮಂಡ್ಯ ಜಿಲ್ಲೆಯ ವಿವಿಧ ಭಾಗಗಳಲ್ಲಿ ದೊರಕಿದ್ದು, ಗಂಗರ ಕಾಲದಲ್ಲಿ ಮಂಡ್ಯ ಜಿಲ್ಲೆ ಪ್ರಮುಖ ಆಡಳಿತ ಕೇಂದ್ರವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಇಲ್ಲಿ ದೊರೆತಿರುವ ಗಂಗರ ಶಾಸನಗಳು ಅತಿ ಕಡಿಮೆ. ಮೊದಲ ಶಾಸನ ಕ್ರಿ.ಶ. ೭೧೩ರ ಹಳ್ಳೇಗೆರೆ ಶಾಸನ. ಇದು ಮಂಡ್ಯ ಜಿಲ್ಲೆಯ ಅತಿ ಪ್ರಾಚೀನ ಶಾಸನವಾಗಿದೆ. ಇದು ಒಂದನೆಯ ಶಿವಮಾರನ ಆಳ್ವಿಕೆಯ ವರ್ಷವನ್ನು ಉಲ್ಲೇಖಿಸುತ್ತದೆ. ಕೊಂಗುಣಿವರ್ಮನಿಂದ ೧ನೆಯ ಶಿವಮಾರನವರೆಗಿನ ಸಾಂಪ್ರದಾಯಿಕ ಗಂಗ ವಂಶಾವಳಿಯನ್ನು ಇದರಲ್ಲಿ ಸೂಚಿಸಲಾಗಿದೆ. ಶಿವಮಾರನ ಮೂವತ್ತನಾಲ್ಕನೆಯ ಆಳ್ವಿಕೆಯ ವರ್ಷವನ್ನು ಉಲ್ಲೇಖಿಸಿರುವುದರಿಂದ ಅರಸ ಕ್ರಿ.ಶ. ೬೭೯ರಲ್ಲಿ ಅಧಿಕಾರಕ್ಕೆ ಬಂದನೆಂದು ಸೂಚಿತವಾಗುತ್ತದೆ. ಕ್ರಿ.ಶ. ೭೭೬ರ ಶ್ರೀಪುರುಷನಿಗೆ ಸಂಬಂಧಿಸಿದ ದೇವರಹಳ್ಳಿ ತಾಮ್ರಶಾಸನ, ಹುಳ್ಳೇನಹಳ್ಳಿ ಶಾಸನ, ಗಳಿಗೆಕೆರೆ ಶಾಸನಗಳು ಒಂದನೆಯ ಶಿವಮಾರನನ್ನು ಕೊಂಗಣಿ ಮಹಾರಾಜ ಭೂವಿಕ್ರಮನ ತಮ್ಮನೆಂದು ತಿಳಿಸಿವೆ. ಕುಂದಾಚ್ಚಿ ಎಂಬಾಕೆ ಕಟ್ಟಿಸಿದ ಶ್ರೀಪುರದ ಲೋಕತಿಲಕ ಬಸದಿಗೆ ಅರಸ ದಾನಕೊಟ್ಟ ಸಂಗತಿಯನ್ನು ದೇವರಹಳ್ಳಿ ಶಾಸನ ತಿಳಿಸುತ್ತದೆ. ಶ್ರೀರಂಗಪಟ್ಟಣದ ಗಂಜಾಂನಲ್ಲಿ ದೊರೆತ ತಾಮ್ರಶಾಸನವು ಸಾಂಪ್ರದಾಯಕವಲ್ಲದ ರೀತಿಯಲ್ಲಿ ಗಂಗವಂಶಾವಳಿಯನ್ನು ನೀಡುತ್ತದೆ. ಶ್ರೀವಿಕ್ರಮನ ತರುವಾಯ ಭೂವಿಕ್ರಮನ ಬದಲಾಗಿ ದುಗ್ಗಮಾರನನ್ನು ಹೆಸರಿಸುತ್ತದೆ. ನಾಗಮಂಗಲದ ದೇವರಹಳ್ಳಿ ಶಾಸನ (ಎ.ಕ. ಸಂಖ್ಯೆ ೭-೧೪೯) ಶ್ರೀಪುರುಷನಿಗೆ 'ಪೃಥ್ವಿಕೋಂಗಣಿ ಮಹಾರಾಜ' ಎಂಬ ಬಿರುದು ಇದ್ದಿತು ಎಂಬ ವಿಷಯ ತಿಳಿದುಬರುತ್ತದೆ. ಆತ ಗಂಗವಂಶದಲ್ಲಿ ಗಗನದಲ್ಲಿ ಸೂರ್ಯನಂತೆ ಪ್ರಕಾಶಿಸುತ್ತಿದ್ದ, ಸನ್ಮಾರ್ಗದಲ್ಲಿ ರಕ್ಷಿಸುತ್ತಿದ್ದ, ವೈರಿಗಳಿಗೆ ಭಯಂಕರವಾಗಿದ್ದ, ಕುಬೇರನ ಹಾಗೆ ಸಂಪದ್ಭರಿತವಾಗಿದ್ದ. ಪ್ರಜೆಗಳನ್ನು ತನ್ನ ಪ್ರಾಣವನ್ನು ಪ್ರೀತಿಸುವಂತೆ ಪ್ರೀತಿಸುತ್ತಿದ್ದ. ಪ್ರತಿದಿನ ದಾನಗಳನ್ನು ಕೊಡುವ ನೇಮವನ್ನು ಹೊಂದಿದ್ದ. ಅದಕ್ಕಾಗಿ ಆತನ ಅರಮನೆಯಲ್ಲಿ ಪ್ರಗ್ಯಾಹವಾಚನ ಪ್ರತಿದಿನ ನಡೆಯುತ್ತಿತ್ತು. ಮಹಾರಾಜಾಧಿರಾಜ, ಪರಮೇಶ್ವರ, ಶ್ರೀಜನಹಿತದೇವ ಎಂದು ಕರೆಯಲ್ಪಡುತ್ತಿದ್ದ ಎಂಬುದಾಗಿ ತಿಳಿದುಬರುತ್ತದೆ.

ಶ್ರೀ ಪುರುಷನ ಕಾಲದ ಮಳವಳ್ಳಿಯ ಪೂರಿಗಾಲ ಶಾಸನವು (EP Car-Vol. VIII Malavalli-122-P Li 19) ಸಿಂಗಡಿ ಅರಸನೆಂಬಾತ ಪ್ರವಗ್ರಾಮದ ಆಡಳಿತಾಧಿಕಾರಿಯಾಗಿದ್ದನೆಂದು ತಿಳಿಸುತ್ತದೆ ಮತ್ತು ಆಸ್ತಿ ಘನ ಸರ್ಕಾರದ್ದಾಗಿರುತ್ತದೆ. ಸರ್ಕಾರದವರು ಆ ಸಂಪತ್ತನ್ನು ಅಲ್ಲಿಯ ಪ್ರಜೆಗಳ ಹಿತಕ್ಕಾಗಿ ಬಳಸಿದರು. ಆ ಊರ 'ಪನ್ನಿರ್ವ್ವರು' ದೇವಸ್ಥಾನವನ್ನು ಕೊಲಗಣೆಕೆಯನ್ನು ಕಟ್ಟುವ ಭಾರವನ್ನು ಹೊತ್ತರು. ಪ್ರತಿಯೊಂದು ಊರಿನ ಕಂದಾಯದ ಆದಾಯದಲ್ಲಿ ಆ ಊರಿನ ಅಭಿವೃದ್ಧಿಗೆ ಮೀಸಲು ಎಂದು ತಿಳಿಸಲಾಗಿದೆ.

ಶ್ರೀಪುರುಷನ ಆಳ್ವಿಕೆಗೆ ಸಂಬಂಧಿಸಿದ ಮಂಡ್ಯ ಜಿಲ್ಲೆಯ ಹುಳ್ಳೇನಹಳ್ಳಿ ಶಾಸನ ಶ್ರೀಪುರುಷನ ಸಾಮಂತ ಬಾಣವಂಶದ

* ಸಹಾಯಕ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಸರ್ಕಾರಿ ಮಹಾವಿದ್ಯಾಲಯ, ಮಂಡ್ಯ-೫೭೧೪೦೧.

ದಿಣ್ಡಿಗರಾಜನು ಕೂವಳೆವಟ್ಟು ಗ್ರಾಮವನ್ನು ಬ್ರಹ್ಮದೇಯವಾಗಿ ಬಿಟ್ಟನು. ಆ ದತ್ತಿ ಗ್ರಾಮದ ಹೆಸರೆ ಶಾಸನಕ್ಕೆ ಅಂಟಿಕೊಂಡು ಬಂದಿದೆ. ದಿಣ್ಡಿರಾಜನು ಕಳ್ವಪ್ಪು ೧೦೦ ಎಂದರೆ ಈಗಿನ ಶ್ರವಣಬೆಳಗೊಳ ಪ್ರದೇಶವನ್ನು ಆಳುತ್ತಿದ್ದನು ಎಂಬ ವಿಷಯವನ್ನು ತಿಳಿಸುತ್ತದೆ.

ನಾಗಮಂಗಲದ ಕಾರಾಬಯಲು ಗ್ರಾಮದ ಶಾಸನ ಕಲ್ಲಿನಲ್ಲಿ ಎರಡು ಶಾಸನಗಳು ಒಂದೇ ವೀರಗಲ್ಲಿನಲ್ಲಿ ಲಿಖಿತಗೊಂಡಿರುವುದು ಒಂದು ಆಶ್ಚರ್ಯದ ಸಂಗತಿ. ಈ ಶಾಸನದ ಪ್ರಕಾರ ಆರಂಭಲ್ಲನು ಇದುಳೆಯನ್ನು ಬೀಳ ವೃತ್ತಿಯಿಂದ ಆಳುತ್ತಿದ್ದನು. ನೀತಿಮಾರ್ಗ ಪೆರ್ಮಾಡಿಯ ಅಧೀನರಾಜನಾಗಿದ್ದನು. ರಾಷ್ಟ್ರಕೂಟರ ದಂಡು ಕೆಂಬೊಳ್ಗೆ (ನಂಜನಗೂಡು) ಎಂಬಲ್ಲಿಗೆ ಬಂದಾಗ ಗಂಗ ದೊರೆಯ ಆಜ್ಞೆಯ ಮೇರೆಗೆ ವೀರನೊಬ್ಬ ರಣರಂಗದಲ್ಲಿ ಸತ್ತು ಹೋದನು. ಆಗ ವೀರನಿಗೆ ಗಂಗದೊರೆಯು 'ನಿಡವುಟೆ' ಗ್ರಾಮವನ್ನು ಆ ವೀರನ ವಂಶದವರಿಗೆ ದಾನ ನೀಡಿದ ವಿವರಣೆ ತಿಳಿದುಬರುತ್ತದೆ.

ಮಳವಳ್ಳಿ ತಾಲ್ಲೂಕಿನ ರಾಮಂದೂರು ೧೫ನೇ ಶಾಸನವು ನೀತಿಮಾರ್ಗ ಪೆರ್ಮಾಡಿ ಹಾಗೂ ರಾಚಮಲ್ಲ ಇಬ್ಬರ ಆಳ್ವಿಕೆಯ ಅಂಶವನ್ನು ತಿಳಿಸುತ್ತದೆ. ಇದು ಕ್ರಿ.ಶ. ೮೧೬-೯೧೯ ಮಧ್ಯದಲ್ಲಿ ಆಳಿದ ಇಬ್ಬರು ಗಂಗದೊರೆಗಳಿಗೆ ಸಂಬಂಧಿಸಿದೆ. ಈ ಶಾಸನದಲ್ಲಿ ಕೆರೆಯ ದುರಸ್ತಿಗಾಗಿ ಬೇಕಾಗುವ ಹಣ ಮತ್ತು ದತ್ತಿಯನ್ನು ದಾಖಲಿಸಿದೆ. ಕೆರೆಯನ್ನು ಯಾರೇ ಕಟ್ಟಿಸಲಿ ಅದರ ರಕ್ಷಣೆಯು ಅಷ್ಟೇ ಮಹತ್ವದ ಸಂಗತಿ. ಅಧಿಕಾರಿಗಳು, ಊರಿನ ಮಹಾಜನರು ಈ ಕೆಲಸವನ್ನು ಕೆರೆಯು ಅಮೂಲ್ಯ ರಕ್ಷಣೆಯ ವಸ್ತುವೆಂದು ತಿಳಿದು ರಕ್ಷಿಸುತ್ತಿದ್ದರು. ಅಸವಯ್ಯ, ದುಗ್ಗಯ್ಯ ಹಾಗೂ ನುಟ್ಟಮ್ಮ ಎಂಬ ಮೂವರು ಇದ್ದು ಇವರು ಕೆರೆಯ ರಕ್ಷಣೆಯನ್ನು ಮಾಡಿದ್ದರ ಬಗ್ಗೆ ತಿಳಿಸುತ್ತದೆ.

ಮದ್ದೂರು ತಾಲ್ಲೂಕಿನ ತೈಲೂರು ೫೭ನೇ ಶಾಸನವು ಕ್ರಿ.ಶ. ೮೧೭ರಲ್ಲಿ ಬರೆಯಲಾಗಿದ್ದು, ರಾಚಮಲ್ಲನಿಗೆ ಸಂಬಂಧಿಸಿದೆ. ತೈಲೂರಿನ ಗಾಮಣ್ಣಸ್ವಾಮಿಯ ಮಗ ನಾಗಮಯ್ಯನು ಕಲ್ಲದೇಗುಲವನ್ನು ಮಾಡಿಸಲು ದತ್ತಿಯಾಗಿ ಭೂಮಿಯನ್ನು ಬಿಟ್ಟನು. ಆಗ ಈ ವಿಭಾಗಕ್ಕೆ ನೊಳಂಬಾದಿ ರಾಜನು ಒಡೆಯನಾಗಿದ್ದನು. ಈ ಶಾಸನವನ್ನು ರಾಚಮಲ್ಲನ ೨೭ನೇ ವರ್ಷದಲ್ಲಿ ಬರೆಯಲಾಗಿದ್ದು, ಇದರಿಂದ ಅವನು ಪಟ್ಟಕ್ಕೆ ಬಂದ ವರ್ಷವನ್ನು ತಿಳಿಯಬಹುದಾಗಿದೆ.

ಮಳವಳ್ಳಿ ತಾಲ್ಲೂಕಿನ ಹೂಲಿಗೆರೆಯ ಶಾಸನದಲ್ಲಿ ನೀತಿಮಾರ್ಗ ಪೆರ್ಮಾಡಿಗಳು ರಾಜ್ಯವಾಳುತ್ತಿದ್ದಾಗ ಕ್ರಿ.ಶ. ೯೧೬ರಲ್ಲಿ ಮಣೆವೆಮರನು ಕನಕಗಿರಿ ತೀರ್ಥದ ಮೇಲೆ ಬಸದಿಯನ್ನು ಕಟ್ಟಿಸಿದ ದಾಖಲೆಯಿದೆ. ತಿಪ್ಪೆಯೂರುನಿಂದ ಬರುತ್ತಿದ್ದ 'ಅಟ್ಟದಣ್ಣೆ' (ಮಹಡಿ ಮನೆಯ ಮೇಲೆ ಹಾಕುತ್ತಿದ್ದ ತೆರಿಗೆ) (Tax on Upper Rooms) ಮತ್ತು ಕುರುದಣ್ಣೆ (ಕುರುಬರು ಕೊಡುವ ತೆರಿಗೆ) ಸಾಮಂತದಣ್ಣೆ (ಸಾಮಂತ ರಾಜರು ಕೊಡುತ್ತಿದ್ದ ತೆರಿಗೆ) ಗಳನ್ನು ಕನಕಗಿರಿ ಕ್ಷೇತ್ರಕ್ಕೆ ಅರ್ಪಿಸಿದ ವಿವರಣೆ ಇರುತ್ತದೆ. ಗಂಗರ ಕಾಲದ ತೆರಿಗೆಗಳನ್ನು ಸ್ಪಷ್ಟವಾಗಿ ಈ ಶಾಸನದಲ್ಲಿ ತಿಳಿಯಬಹುದು.

ಶ್ರೀರಂಗಪಟ್ಟಣ ತಾಲ್ಲೂಕಿನ ರಾಂಪುರ ೮೫ನೇ ಶಾಸನವು ಊರಲ್ಲಿ ಮತಿಸಾಗರ ಪಂಡಿತ ಯಾರು ತೀರ್ಥಕ್ಕೆ ಒಡೆಯರಾಗಿದ್ದರೋ ಅವರ ಆಜ್ಞೆಯ ಮೇರೆಗೆ ಅಣೆಕಟ್ಟನ್ನು ಕಟ್ಟಿ ಭೂಮಿಯನ್ನು ನೀರಾವರಿಯಾಗಿಸಿ ಅದಕ್ಕೆ ಕಂದಾಯ ನಿಗದಿಪಡಿಸಿದ್ದನ್ನು ತಿಳಿಸುತ್ತದೆ. ಆಸ್ತಿ ಕ್ರಮ ಬಹಳ ಮುಖ್ಯವಾಗಿದೆ.

೧. ಕಟ್ಟೆ ಕಟ್ಟಿಸಿದ ವರ್ಷ – ಒಂದರಣೆಯಗ

೨. ಕಟ್ಟೆ ಕಟ್ಟಿಸಿದ ಎರಡನೇ ವರ್ಷ – ಪತ್ತೊನ್ದಿ ಅಂದರೆ ೧/೧೦

೩. ಕಟ್ಟೆ ಕಟ್ಟಿಸಿದ ಮೂರನೇ ವರ್ಷ – ಎಬಳವಿ ಅಂದರೆ ೧/೯ ಭಾಗ

೪. ಆನಂತರ ಎಲ್ಲ ಕಾಲಕ್ಕೆ ಐದಳವಿ ಅಂದರೆ ೧/೫ ಭಾಗ

ಕಟ್ಟೆ ಕಟ್ಟಿದ ವ್ಯಕ್ತಿಗೆ ಇದ್ದ ಸೌಲಭ್ಯಗಳು ಗಮನಾರ್ಹವಾಗಿವೆ. ಪಾಂಡವಪುರ ತಾಲ್ಲೂಕಿನ ಕ್ಯಾತನಹಳ್ಳಿ ಶಾಸನವು ಇದೇ ಸತ್ಯವಾಕ್ಯ ಹಾಗೂ ಅವನ ಯುವರಾಜ ಎರೆಪ್ಪರಸನಿಗೆ ಸಂಬಂಧಿಸಿದ್ದು, ಅಲ್ಲಿನ ಕೆಲ್ಲಬಸದಿಯು ಉತ್ಸವಕ್ಕೆ ಸಂಬಂಧಿಸಿದೆ. ಬಿಳಿಯಕ್ಕಿ ಹಾಗೂ ತುಪ್ಪ ಇವುಗಳನ್ನು ದತ್ತಿ ಕೊಟ್ಟ ಪಾಂಡವಪುರ ತಾಲ್ಲೂಕಿನ ಮಲ್ಲಿಗೆರೆ ಶಾಸನವು ಇದೇ ರೀತಿಯ ದಾನದ ವಿವರವನ್ನು ತಿಳಿಸುತ್ತದೆ. ಮದ್ದೂರು ತಾಲ್ಲೂಕಿನ ಆತಕೂರು ಶಾಸನ ರಾಷ್ಟ್ರಕೂಟ ಚಕ್ರವರ್ತಿ ಮೂರನೇ ಕೃಷ್ಣ, ಗಂಗದೊರೆ ೨ನೇ ಬೂತುಗ ಹಾಗೂ ಅವನ ಸಾಮಂತ ಮಣಲೇರನಿಗೆ ಸಂಬಂಧಿಸಿದೆ. ಚೋಳದೊರೆ ರಾಜಾದಿತ್ಯನ ಮೇಲೆ ರಾಷ್ಟ್ರಕೂಟ ದೊರೆ ೩ನೇ ಕೃಷ್ಣ ಯುದ್ಧ ಮಾಡಿದಾಗ ಗಂಗದೊರೆ ೨ನೇ ಬೂತುಗ ಸಹಾಯ ಮಡುತ್ತಾನೆ. ಚೋಳದೊರೆ ಯುದ್ಧದಲ್ಲಿ ಬೂತುಗನಿಂದ ಮರಣ ಹೊಂದುತ್ತಾನೆ. ಚಕ್ರವರ್ತಿ ೩ನೇ ಕೃಷ್ಣ, ೨ನೇ ಬೂತುಗನಿಗೆ ಬನವಾಸಿ ೧೨೦೦೦ ಬೆಳ್ವೊಲ ೩೦೦, ಪುರಿಗೆರೆ ೩೦೦ ರಸುನಾಡು ೭೦, ಬಾಗೆನಾಡು ೭೦ ಪ್ರದೇಶಗಳನ್ನು ಮೆಚ್ಚುಕೊಟ್ಟನು. ಮಣಲೇರನ

ಬಯಕೆಯಂತೆ ಕಾಳಿ ಎಂಬ ಉತ್ತಮ ನಾಯಿಯನ್ನು ಕೊಟ್ಟನು. ಈ ನಾಯಿ ಹಂದಿಯೊಡನೆ ಹೋರಾಡುವಾಗ ಸತ್ತುಹೋಯಿತು. ಮಣಲೇರನು ಆತಕೂರಿನ ಚಲ್ಲೇಶ್ವರ ದೇವಾಲಯದ ಮುಂದೆ ನಾಯಿಯ ಹೆಸರಿನಲ್ಲಿ ಒಂದು ವೀರಗಲ್ಲನ್ನು ಹಾಕಿಸಿದನು. ಕ್ರಿ.ಶ. ೯೪೯-೫೦ರಲ್ಲಿ ಈ ಘಟನೆ ನಡೆದಿದೆ.*

ಗಂಗರ ಕಾಲದಲ್ಲಿ ತೆರಿಗೆಗಳನ್ನು ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. ಮಳವಳ್ಳಿ ತಾಲ್ಲೂಕಿನ ಕೂಲಿಗೆರೆ ಶಾಸನ, ವಿಜಯಪುರ, ಲಕ್ಷ್ಮೀಪುರ ಶಾಸನಗಳಲ್ಲಿ ಕಿರುದರೆ (ತೆರಿಗೆ) ಯಾವುದು ಎಂಬುದನ್ನು ಸ್ಪಷ್ಟಪಡಿಸಿದೆ. ಅವುಗಳ ವಿವರಣೆ ಇಂತಿದೆ.

೧. ಮನೆವಣಂ – ಮನೆಯ ಮೇಲಿನ ತೆರಿಗೆ.
೨. ಪಿರಿಯರವಣಂ – ದೊಡ್ಡ ದೊಡ್ಡ ಜೂಜುಗಳ ಮೇಲೆ ಕೊಡುತ್ತಿದ್ದ ತೆರಿಗೆ.
೩. ಧನಬಳ – ಬಡ್ಡಿ ವ್ಯವಹಾರದವರು ಕೊಡುತ್ತಿದ್ದ ತೆರಿಗೆ.
೪. ಕಾಲಗೊಲ್ಚು – ಕಾಳನ್ನು ಮಾರುವವರು ಅಳತೆ ಮೇಲೆ ಕೊಡುತ್ತಿದ್ದ ತೆರಿಗೆ.
೫. ಪಟ್ಟಣಗಳ ಮೇಲಿನ ತೆರಿಗೆ.
೬. ಅಣ್ಣ ತಮ್ಮಂದಿರು ಪಾಲಾದಾಗ ತಂದೆ ಆಸ್ತಿ ಪಾಳದಾಗ ಕೊಡುತ್ತಿದ್ದ ತೆರಿಗೆ.

ಮಂಡ್ಯ ತಾಲ್ಲೂಕಿನ ಕೊತ್ತತ್ತಿ ಶಾಸನವು ಗಂಗದೊರೆ ಸತ್ಯವಾಕ್ಯ ರಾಚಮಲ್ಲನಿಗೆ ಸಂಬಂಧಿಸಿದೆ. ಈಸರಗಣ್ಣ ಎಂಬ ವೀರನ ನೆನಪಲ್ಲಿ ನೆಟ್ಟ ವೀರಗಲ್ಲು ಇದು. ಗಂಗದೊರೆಯು ಮರಣೋತ್ತರವಾಗಿ ಕೊತ್ತತ್ತಿ ಗ್ರಾಮವನ್ನು ಈಸರಗಣ್ಣನ ಕುಟುಂಬದವರಿಗೆ ದಾನವಾಗಿ ಕೊಟ್ಟ ವಿವರಣೆ ಇದೆ. (ಪಲ್ಲವರನ್ನು ಗಂಗದೊರೆ ರಾಚಮಲ್ಲ ಯುದ್ಧದಲ್ಲಿ ಸೋಲಿಸಿದನು.) ಈ ಶಾಸನದಲ್ಲಿ ರಾಚಮಲ್ಲನಿಗಿದ್ದ ಬಿರುದುಗಳು ತಿಳಿದುಬರುತ್ತದೆ. ಸತ್ಯವಾಕ್ಯ ಕೊಂಗಣಿವರ್ಮ, ಧರ್ಮಮಹಾಧಿರಾಜ, ಕುವಳಾಳಪುರವರೇಶ್ವರ.

ಹೀಗೆ ಮಂಡ್ಯ ಜಿಲ್ಲೆಯು ಗಂಗವಾಡಿ ೯೬೦೦೦ದ ಆಡಳಿತದ ಒಂದು ಭಾಗವಾಗಿದ್ದು, ಚಾರಿತ್ರಿಕ ಮಹತ್ವವನ್ನು ಪಡೆದುಕೊಂಡಿತ್ತು. ಗಂಗರ ಆಡಳಿತದಲ್ಲಿ ಮಂಡ್ಯ ಜಿಲ್ಲೆ ಅವರ ರಾಜ್ಯದ ಒಂದು ಮುಖ್ಯವಾದ ಭಾಗವೇ ಆಗಿತ್ತು. ಮಂಡ್ಯ ಜಿಲ್ಲೆಯಲ್ಲಿ ದೊರೆಯುತ್ತಿರುವ ಶಾಸನಗಳ ಆಧಾರದ ಮೇಲೆ ಮಂಡ್ಯ ಜಿಲ್ಲೆಯಲ್ಲಿ ಗಂಗರ ಆಡಳಿತದ ಬಗ್ಗೆ ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಈ ಶಾಸನಗಳು ಮಂಡ್ಯ ಜಿಲ್ಲೆಯಲ್ಲಿ ಗಂಗರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳನ್ನು ಪರಿಚಯಿಸುತ್ತವೆ.

## ಆಧಾರಸೂಚಿ


೧. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ – ೬ ಮತ್ತು ೭ (ಪರಿಷ್ಕೃತ).
೨. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್,** ಮಂಡ್ಯ ಜಿಲ್ಲೆ (ಪರಿಷ್ಕೃತ ಆವೃತ್ತಿ), ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ೨೦೦೩.
೩. (ಸಂ) ಹ.ಕ. ರಾಜೇಗೌಡ, **ಸಿಂಗಾರ,** ಶ್ರೀ ಕೆ. ಸಿಂಗಾರಿಗೌಡರ ಅಭಿನಂದನ ಗ್ರಂಥ, ಮಂಡ್ಯ, ೧೯೮೮.
೪. ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, **ಕನ್ನಡ ವಿಷಯ ವಿಶ್ವಕೋಶ,** ಪರಿಷ್ಕೃತ ಸಂಪುಟ, ೨೦೦೯.
೫. (ಸಂ) ಡಾ. ದೇ. ಜವರೇಗೌಡ, **ಸುವರ್ಣ ಮಂಡ್ಯ,** ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ೧೯೯೪.
೬ ಕೆ. ಅನಂತರಾಮು, **ಸಕ್ಕರೆ ಸೀಮೆ,** (ಮಂಡ್ಯ ಜಿಲ್ಲೆಯ ಪ್ರವಾಸ ಕಥನ), ಅನಂತ ಪ್ರಕಾಶನ, ಮೈಸೂರು, ೧೯೮೨.


* ಗಂಗರ ಬೂತುಗನಿಗೆ ಬನವಾಸಿ, ಬೆಳ್ವೊಲ ಮುಂತಾದ ಪ್ರದೇಶ ಗಳನ್ನು ಕ್ರಿ.ಶ. ಸು. ೯೩೬-೩೭ರ ಸುಮಾರಿನಲ್ಲಿ ಕೊಡಲಾಗಿತ್ತು ಎಂಬುದಕ್ಕೆ ಆಧಾರಗಳಿವೆ (ಸಂ).



# ಕಲ್ಯಾಣದ ಚಾಲುಕ್ಯರ ಶಾಸನಗಳಲ್ಲಿ ಘಟಿಕಾ ಸ್ಥಾನಗಳು

ಡಾ. ಡಿ.ಎಂ. ನಾಗರಾಜು*

**ಘ**ಟಿಕಾ ಸ್ಥಾನಗಳು ವಿದ್ಯಾಕೇಂದ್ರಗಳಾಗಿದ್ದವು. ಹೆಸರೇ ಸೂಚಿಸುವಂತೆ 'ಘಟಿಕಾ' ಎಂದರೆ ಗಂಟೆ ಸಮಯ ಪರಿಪಾಲನೆ ಎನ್ನುವ ಪದ ವಿದ್ಯಾಕೇಂದ್ರವನ್ನು ಸೂಚಿಸುತ್ತದೆ. ವಿವಿಧ ವಿದ್ಯೆಗಳ ಶಿಕ್ಷಣಕ್ಕೆ ಪ್ರಾಚೀನ ಕಾಲದಲ್ಲಿ ದೇಶದ ಉದ್ದಗಲಕ್ಕೂ ಹಲವಾರು ಘಟಿಕಾ ಸ್ಥಾನಗಳಿದ್ದವು. ಅವುಗಳಲ್ಲಿ ಕೆಲವು ಘಟಿಕಾ ಸ್ಥಾನಗಳು ನಿರ್ದಿಷ್ಟ ವಿಷಯಗಳಲ್ಲಿ ವಿಶೇಷ ತರಬೇತಿಗಳನ್ನು ನೀಡುತ್ತಿದ್ದರು ಎಂದು ತೋರುತ್ತದೆ. ಕರ್ನಾಟಕದ ಮಟ್ಟಿಗೆ ಬನವಾಸಿಯ ಕದಂಬರ ಕಾಲದಲ್ಲಿ ತಾಳಗುಂದದಲ್ಲಿ ಘಟಿಕಾಲಯವನ್ನು ಸ್ಥಾಪಿಸಲಾಯಿತೆಂದು ಕದಂಬರ ಕಾಕುಸ್ಥವರ್ಮನ ಶಾಸನ ಹೇಳುತ್ತದೆ.

ಬಾದಾಮಿ ಚಲುಕ್ಯರು ಸಹ ವಿದ್ಯಾಭ್ಯಾಸಕ್ಕಾಗಿ ಘಟಿಕಾಲಯಗಳನ್ನು ಸ್ಥಾಪಿಸಿದುದರ ದಾಖಲೆಗಳಿವೆ. ಆದರೆ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅಗ್ರಹಾರಗಳಂತೆ, ಬ್ರಹ್ಮಪುರಗಳಂತೆ ಘಟಿಕಾಲಯವನ್ನು ಸ್ಥಾಪಿಸುವುದು ಮತ್ತು ಅವುಗಳ ನಿರಂತರ ಚಟುವಟಿಕೆಗಳಿಗೆ ದಾನದತ್ತಿಗಳನ್ನು ನೀಡುವುದು ಶಾಸನೋಕ್ತ ಉಲ್ಲೇಖಗಳಿಂದ ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರ ರಾಜ್ಯದುದ್ದಕ್ಕೂ ಹಲವಾರು ಘಟಿಕಾಲಯ ಗಳು ಇದ್ದವು. ಅವುಗಳಲ್ಲಿ ಶಿಕ್ಷಕರು, ವಿದ್ಯಾರ್ಥಿಗಳು ಇದ್ದು ಹಲವಾರು ವಿಷಯಗಳಿಗೆ ಪೂರಕವಾದಂತೆ ಅಧ್ಯಯನಗಳನ್ನು ನಡೆಸುತ್ತಿದ್ದರು.

ಘಟಿಕಾ ಸ್ಥಾನವನ್ನು ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಘಟಿಕಾ ಅನ್ನುವ ಪದಕ್ಕೆ ಸಾಮಾನ್ಯವಾಗಿ ಒಂದು ನಿರ್ದಿಷ್ಟ ಸಮಯದ ಭಾಗವೆಂದು ಹೇಳಲಾಗಿದೆ. ಅಂದರೆ ಇದನ್ನೇ ಘಳಿಗೆ ಎಂದು ಹೇಳಬಹುದಾಗಿದೆ. ಘಟಿಕಾ ಸ್ಥಾನವನು ಕೆ.ಬಿ. ಪಾಠಕ್‌ರವರು ಧಾರ್ಮಿಕ ಕೇಂದ್ರಗಳೆಂದು ಹೇಳಿದ್ದಾರೆ. ಎಸ್.ವಿ. ವೆಂಕಟೇಶ್ವರ ಅವರು ಘಟಿಕಾಸ್ಥಾನಗಳು ವಿದ್ಯಾಕೇಂದ್ರಗಳಾಗಿದ್ದು, ಶಿಕ್ಷಕರು, ವಿದ್ವಾಂಸರು ಮತ್ತು ವಿದ್ಯಾರ್ಥಿಗಳು ಧಾರ್ಮಿಕ ವಿಷಯಗಳ ಮೇಲೆ ಚರ್ಚೆ ನಡೆಸುವ ಮತ್ತು ಜ್ಞಾನ ಸಂಪಾದನೆ ಮಾಡುವ ಕೇಂದ್ರಗಳೆಂದು ಹೇಳಿದ್ದಾರೆ. ಡಿ.ಸಿ. ಸರ್ಕಾರ್ ಅವರು ಘಟಿಕಾಸ್ಥಾನಕ್ಕೆ ವಿದ್ಯಾರ್ಜನೆ ಕೇಂದ್ರವೆಂದು ವಿಶೇಷ ಅಧ್ಯಯನಗಳನ್ನು ಇಲ್ಲಿ ಕೈಗೊಳ್ಳಲಾಗುತ್ತಿತ್ತು ಎಂದು ಹಾಗೂ ಘಟಿಕಾಸ್ಥಾನವು ಒಂದು ತೆರನಾಗಿ ವಿಶ್ವವಿದ್ಯಾನಿಲಯದ ದಾರಿಯಲ್ಲಿ ಕಾರ್ಯ ನಿರ್ವಹಿಸುತ್ತಿತ್ತೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಅರ್ಥದಲ್ಲಿಯೇ ತಾಳಗುಂದವನ್ನು ಹಾಗೂ ಕಂಚಿಯನ್ನು ಬಹುಮುಖ್ಯ ಘಟಿಕಾಸ್ಥಾನಗಳೆಂದು ಹೇಳಲಾಗಿದೆ. ಚಲುಕ್ಯರಂತೆ ರಾಷ್ಟ್ರಕೂಟರೂ ಕೂಡ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದರು. ಸಾಲೋಟಗಿಯಲ್ಲಿ (ಶಾಲಾಪಾವಿಟ್ಟಗೆ) ರಾಷ್ಟ್ರಕೂಟರ ದೊರೆ ಮುಮ್ಮಡಿಕೃಷ್ಣನ ಕಾಲದಲ್ಲಿ ಘಟಿಕಾ ಸ್ಥಾನವಿದ್ದಿತ್ತೆಂದು ಹೇಳಲಾಗಿದೆ. ಹಾಗೂ ಇಲ್ಲಿ ತ್ರೈಪುರುಷ ದೇವಾಲಯವನ್ನು ನಿರ್ಮಿಸಿದನೆಂದು ಕೂಡ ಉಲ್ಲೇಖಿಸಿದೆ. ಸಾಲೋಟಗಿ ಘಟಿಕಾ ಸ್ಥಾನದಲ್ಲಿ ಬೇರೆ ಬೇರೆ ಭಾಗಗಳಿಂದ ಬಂದಿದ್ದಂತಹ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದರೆಂದು ಅವರಿಗೆ ೨೭ ಮನೆಗಳನ್ನು ವಾಸಿಸಲು ದಾನವಾಗಿಯೂ ೧೨ ನಿವರ್ತನ ಭೂಮಿಯನ್ನು ದೀಪದ ಖರ್ಚುಗಳಿಗಾಗಿಯೂ ಹಾಗೂ ೫೦ ನಿವರ್ತನ ಭೂಮಿಯನ್ನು ಮತ್ತು ಮನೆಗಳನ್ನು ಘಟಿಕಾಸ್ಥಾನದ ಪ್ರಮುಖರಿಗೆ ನೀಡಿದರೆಂದು ತಿಳಿಯುತ್ತದೆ. ಹಬ್ಬ ಹರಿದಿನಗಳಲ್ಲಿ ಜಾತ್ರೆಗಳಲ್ಲಿ, ಉತ್ಸವಗಳಲ್ಲಿ ಘಟಿಕಾಲಯದ ಶಿಕ್ಷಣ ಹಾಗೂ ವಿದ್ಯಾರ್ಥಿಗಳಿಗೆ ಭೋಜನವನ್ನು ಏರ್ಪಡಿಸಲಾಗುತ್ತಿತ್ತು.

ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಘಟಿಕಾಲಯಗಳೆಂದೇ ಕರೆಯಲಾಗುತ್ತಿರಲಿಲ್ಲ ಎಂದು ತೋರುತ್ತದೆ. ಏಕೆಂದರೆ ಘಟಿಕಾಲಯದ ಕಾರ್ಯಗಳನ್ನು ಮಠಗಳು ನಿರ್ವಹಿಸುತ್ತಿದ್ದವು. ಕ್ರಿ.ಶ. ೧೦೭೫-೭೬ರ ಹಂಪಿ ಶಾಸನದಲ್ಲಿ ಮಹಾಪ್ರಧಾನ ದಡನಾಯಕ ಸೋಮೇಶ್ವರ ಭಟ್ಟೋಪಾಧ್ಯಾಯನು ಇಲ್ಲಿ ಪುರಾಣಗಳಲ್ಲಿ ಪ್ರಸಿದ್ಧರಾಗಿದ್ದ ಶಿಕ್ಷಕರನ್ನೊಳಗೊಂಡ ಮಠವನ್ನು ಸ್ಥಾಪಿಸಿದನೆಂದು ಹೇಳಲಾಗಿದೆ. ಕ್ರಿ.ಶ. ೧೦೭೭ರ ವಡಗೇರಿ ಶಾಸನದಲ್ಲಿ ಮಠದ ಉಲ್ಲೇಖದೊಂದಿಗೆ ಮಠದಲ್ಲಿ ಓದುವ ಕೇಳುವ ತಪೋಧನರ ಮತ್ತು ಛಾತ್ರರ ಉಲ್ಲೇಖವಿದೆ. ಈ ಶಾಸನ ದಾನಶಾಸನವಾಗಿದ್ದು ಮಠದಲ್ಲಿ ಓದುವ

* ಉಪ ಅಧೀಕ್ಷಕ ಶಾಸನ ತಜ್ಞರು, ನಿರ್ದೇಶಕರ ಕಾರ್ಯಾಲಯ (ಶಾಸನ) ಭಾರತೀಯ ಪುರಾತತ್ತ್ವ ಸರ್ವೇಕ್ಷಣ
ಹೆಬ್ಬಾಳ ೨ನೇ ಹಂತ, ಸಂಕ್ರಾಂತಿ ವೃತ್ತ, ಮೈಸೂರು-೫೭೦೦೧೭.

ವಿದ್ಯಾರ್ಥಿಗಳಿಗೂ ಛಾತ್ರರ ಆಹಾರ ಮತ್ತು ವಸ್ತ್ರಗಳಿಗಾಗಿ ದಾನ ನೀಡಿದ ಉಲ್ಲೇಖವಿದೆ. ಗುಲ್ಬರ್ಗಾ ಜಿಲ್ಲೆಯ ಸುರಪುರ ತಾಲ್ಲೂಕಿನ ಏವೂರು ಹಾಗೂ ಗದಗ ಜಿಲ್ಲೆಯ ರೋಣ ತಾಲ್ಲೂಕಿನಲ್ಲಿ ಸೂಡಿ ಕೂಡ ಪಾಠಶಾಲೆಯನ್ನು ಹೊಂದಿತ್ತು. ಕ್ರಿ.ಶ. ೧೧೦೮ಳರಲ್ಲಿ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಯು ಅಚಲೇಶ್ವರ ದೇವರ ಸ್ಥಾನಪತಿ ಸೋಮೇಶ್ವರ ಪಂಡಿತನಿಗೆ ಮತ್ತು ತಪೋನೈಷ್ಠಿಕರಿಗೆ ಮತ್ತು ವಿದ್ಯಾರ್ಥಿಗಳಿಗೆ ದಾನ ನೀಡಿದಳೆಂದು ಹೇಳಿದೆ.

ಬಳ್ಳಿಗಾವೆಯ ಶಾಸನವನ್ನು ಗಮನಿಸಿದರೆ ಸ್ಪಷ್ಟವಾಗಿ ಈ ಸ್ಥಾನದ ಪ್ರಾಮುಖ್ಯತೆ ತಿಳಿದು ಬರುತ್ತದೆ. ಇಲ್ಲಿನ ಘಟಿಕಾ ಸ್ಥಾನದಲ್ಲಿ ಹಲವಾರು ಜನ ವಿದ್ಯಾರ್ಥಿಗಳು ಹಾಗೂ ಅತ್ಯುತ್ತಮ ಶಿಕ್ಷಣ ಪರಂಪರೆ ಇದ್ದಿತು ಎಂದು ಹೇಳಬಹುದು. ಕ್ರಿ.ಶ. ೧೧೯ಳರ ಶಾಸನದಲ್ಲಿ ಗುರು ಪರಂಪರೆ ಸಂಪೂರ್ಣ ವಾಗಿ ವಿದ್ಯಾ ಚಟುವಟಿಕೆಗಳಲ್ಲಿಯೇ ತೊಡಗಿಕೊಂಡಿತ್ತು. ಇಲ್ಲಿ ವಿದ್ಯಾರ್ಜನೆಗೈಯುವ ವಿದ್ಯಾರ್ಥಿ ಗಳು ವೇದಾಧ್ಯಯನ ಪ್ರವೀಣರಾಗಿದ್ದರು ಎಂದು ತಿಳಿಸುತ್ತದೆ. ಈ ಶಾಸನದಲ್ಲಿ ೬೪ ಯೋಗಪೀಠಗಳ ಹಾಗೂ ೬೪ ಘಟಿಕಾಸ್ಥಾನಗಳ ಪ್ರಾಮುಖ್ಯತೆಯನ್ನು ಹೇಳಲಾಗಿದೆ. ಹಾಗೂ ಇಲ್ಲಿನ ಶಿಕ್ಷಕರು ತತ್ವಶಾಸ್ತ್ರ, ನ್ಯಾಯ, ವ್ಯಾಕರಣ, ಕಾವ್ಯ, ಸಂಗೀತ, ನಾಟಕ ಇತ್ಯಾದಿ ವಿಷಯಗಳಲ್ಲಿ ಪ್ರವೀಣರೆಂದು ಹೇಳಿದೆ.

ಗುಲ್ಬರ್ಗಾ ಜಿಲ್ಲೆಯ ಕುಳಗೇರಿ ಶಾಸನವು ೬೪ ಘಟಿಕಾಸ್ಥಾನ ಮತ್ತು ಮಹಾಘಟಿಕಾಸ್ಥಾನ ಇದ್ದಿರುವ ಉಲ್ಲೇಖವನ್ನು ನೀಡುತ್ತದೆ. ಯೋಗಿನಿಯರ ೬೪ ಸ್ಥಳ ಗಳಿದ್ದಂತೆ ೬೪ ಘಟಿಕಾ ಸ್ಥಾನಗಳು ನೇರವಾಗಿ ಒಂದೇ ಗ್ರಾಮದಲ್ಲಿ ಇದ್ದುವಲ್ಲ. ಅವು ಭಾರತದ ಬೇರೆಬೇರೆ ಭಾಗದಲ್ಲಿದ್ದು ಪ್ರಸಿದ್ಧವಾಗಿದ್ದವು. ಇಲ್ಲಿ ಅಂದರೆ ಶಾಸನದ ಸ್ಥಳದಲ್ಲಿದ್ದ ಘಟಿಕಾಸ್ಥಾನವು ಆ ೬೪ ಘಟಿಕಾ ಸ್ಥಾನದಂತಹದು ಎಂದು ಹೇಳಬಹುದು. ಗದಗ್‌ನ ಕ್ರಿ.ಶ. ೧೧೯೮ರ ಶಾಸನದಲ್ಲಿ ವಿಕ್ರಮಾದಿತ್ಯನು ವಿದ್ಯಾರ್ಥಿಗಳಿಗಾಗಿ ಶಾಲೆಯೊಂದನ್ನು ಸ್ಥಾಪಿಸಿದನು. ವೇದಾಧ್ಯಯನಕ್ಕಾಗಿ ದಾನದತ್ತಿಗಳನ್ನು ನೀಡಿ ಪೂರ್ವಮೀಮಾಂಸಾ ಶಾಸ್ತ್ರಗಳ ಅಧ್ಯನಕ್ಕಾಗಿ ವಿದ್ಯಾರ್ಥಿಗಳಿಗೆ ಪ್ರಾಯಶಃ ಕೃತಿಯನ್ನು ಬೋಧಿಸುವ ಶಿಕ್ಷಕರಿಗಾಗಿ ಲೊಕ್ಕಿಯ ಪೊನ್ನಗದ್ಯಾಣವನ್ನು ನಿಗದಿಪಡಿಸಿದನೆಂದು ಹೇಳಿದೆ. ಕ್ರಿ.ಶ. ೧೧೯೯ರ ಹನುಮನಹಾಳ ಶಾಸನ ಇಲ್ಲಿನ ಬೀರವಣಿಗರನ್ನು ಗವರೆ, ಗಾತ್ರಿಗಳನ್ನು ಅಷ್ಟಾದಶಪಟ್ಟಣ ಮೂವತ್ತೆರಡು, ವೇಳಾಪುರ ೬೪ ಘಟಿಕಾಸ್ಥಾನ ಹಾಗೂ ೬೪ ಯೋಗಪೀಠ ದಲ್ಲಿ ಪ್ರಸಿದ್ಧರು ಎಂದು ಹೇಳಿದೆ. ಗದಗ್ ತಾಲ್ಲೂಕಿನ ಕೋಟವುಮಚಗಿ ಶಾಸನ ಶಾಲೆಗೆ ಮತ್ತು ಆಹಾರ ದಾನಕ್ಕೆ ನೀಡಿದ ದಾನಶಾಸನವಾಗಿದೆ. ಇಂದಿನ ಮಹಾರಾಷ್ಟ್ರ ರಾಜ್ಯದ ಉಸ್ಮಾನಾಬಾದ್ ತಾಲ್ಲೂಕಿನ ಗಣೇಶವಾಡಿಯ ಶಾಸನ ಸರಸ್ವತಿ ಮಂಟಪದ ಹಾಗೂ ವಿದ್ಯಾರ್ಥಿಗಳ ಉಲ್ಲೇಖವನ್ನು ನೀಡುತ್ತದೆ.

ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ನಾಗಾಯಿ ಗ್ರಾಮ ವಿಕ್ರಮಾದಿತ್ಯನ ಕಾಲದಲ್ಲಿ ಬಹುದೊಡ್ಡ ವಿದ್ಯಾಕೇಂದ್ರ ವಾಗಿತ್ತು. ವಿಕ್ರಮಾದಿತ್ಯನ ತಂದೆ ಸೋಮೇಶ್ವರನ ಕಾಲದಲ್ಲಿಯೇ ಇಲ್ಲಿ ಘಟಿಕಾಸ್ಥಾನ ಕಾರ್ಯನಿರ್ವಹಿಸುತ್ತಿತ್ತು. ಸೋಮೇಶ್ವರನ ಕಾಲದ ಒಂದು ಶಾಸನ ಇಲ್ಲಿ ತ್ರೈಪುರುಷ ದೇವರ ದೇವಾಲಯವನ್ನು ಮಾಡಿಸಿ ದೇವಾಲಯಕ್ಕೆ ಹೊಂದಿಕೊಂಡ ಪರಿಸರದಲ್ಲಿಯೇ ಘಟಿಕಾಸ್ಥಾನ ಎನ್ನುವ ಶಾಲೆಯನ್ನು ಮಾಡಿಸಿದ ಉಲ್ಲೇಖ ನೀಡುತ್ತದೆ. ಈ ಶಾಲೆಗೆ ಸೋಮೇಶ್ವರನ ಮಗ ಮತ್ತು ವಿಕ್ರಮಾದಿತ್ಯನ ಸಹೋದರ ಅಯ್ಯರಸನು ಭೂಮಿಯನ್ನು ಧಾರಾಪೂರ್ವಕವಾಗಿ ದಾನ ಮಾಡಿದ ವಿವರವಿದೆ. ನಾಗಾಯಿ ಘಟಿಕಾಸ್ಥಾನವು ೨೦೦ಕ್ಕೂ ಅಧಿಕ ವಿದ್ಯಾರ್ಥಿಗಳ ಒಂದು ದೊಡ್ಡ ವಿಶ್ವವಿದ್ಯಾಲಯವಾಗಿತ್ತು. ವಿದ್ಯಾರ್ಥಿಗಳಿಗೆ ವೇದಾಧ್ಯಯನ, ಶಾಸ್ತ್ರ ಅಧ್ಯಯನ, ಭಟ್ಟದರ್ಶನ, ನ್ಯಾಯ, ಪ್ರಭಾಕರ ವಾಕ್ಯಾರ್ಥಗಳಲ್ಲಿ ವಿಶೇಷ ಅಧ್ಯಯನವನ್ನು ಮಾಡಿಸಲಾಗುತ್ತಿತ್ತು. ಅಲ್ಲಿ ಉಪಾಧ್ಯಾಯರು ಗಳು ಈ ಎಲ್ಲಾ ವಿಷಯಗಳನ್ನು ಬೋಧಿಸುತ್ತಿದ್ದರು. ಅಲ್ಲದೆ ವಿದ್ಯಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ಅನುಕೂಲವಾಗಲೆಂದು ಸರಸ್ವತಿ ಭಂಡಾರವೆಂಬ ಗ್ರಂಥಾಲಯವು ಇದ್ದು ಅದನ್ನು ನೋಡಿಕೊಳ್ಳಲು ಸರಸ್ವತಿ ಭಂಡಾರದ ಭಂಡಾರಿ ಅಂದರೆ ಗ್ರಂಥಪಾಲಕ ಇದ್ದುದು ಕೂಡ ದಾಖಲೆಯಿಂದ ತಿಳಿದು ಬರುತ್ತದೆ. ಇವರುಗಳ ಜೊತೆಯಲ್ಲಿ ಘಟಿಕಾ ಪ್ರಹಾರ ಎಂಬ ಹುದ್ದೆಯನ್ನು ಕೂಡ ಶಾಸನ ಉಲ್ಲೇಖಿಸುತ್ತದೆ. ಈ ಶಾಸನದಲ್ಲಿ ಆಯಾ ಅಧ್ಯಯನ ಕೈಗೊಳ್ಳುವ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಭೂದಾನಗಳನ್ನು ನೀಡಿರುವುದು ಬಹಳ ವಿಶೇಷವಾಗಿದೆ. ಶಾಸನದಲ್ಲಿ ತ್ರೈಪುರುಷದೇವರ ಶಾಲೆಯ ಪರೀಕ್ಷಾ ಮಾಣಿಯರಿಗೆ ಸರ್ವನಮಸ್ಯವಾಗಿ ಮಾಣಿಕೇಶ್ವರ ಕೈಯಲ್ಲಿ ಅಳೆದು ೧೦೦೦ ಮತ್ತರು ಹೊಲವನ್ನು ನೀಡಿದುದಾಗಿ ಹೇಳಿದೆ. ಈ ದಾಖಲೆ ಸ್ಪಷ್ಟವಾಗಿ ಆ ಕಾಲದ ವಿದ್ಯಾಭ್ಯಾಸ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಪ್ರಾಯಶಃ ವಿದ್ಯಾರ್ಜನೆ ಮತ್ತು ವಿದ್ಯಾಪನೆ ಈ ಎರಡು ವೃತ್ತಿಗಳು ಆ ಕಾಲದ ವಿದ್ಯಾಚಟುವಟಿಕೆಗಳ ಉನ್ನತಿಯನ್ನು ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿಯೇ ನಾಗಾಯಿ ಘಟಿಕಾಲಯದ ದಾಖಲೆ ಈ ಕಾಲದ ಅತ್ಯುನ್ನತ ವಿದ್ಯಾಕೇಂದ್ರವಾಗಿ ಬೆಳೆಯಲು ಸಾಧ್ಯವಾಯಿತು ಎಂದು ಹೇಳಬಹುದು.

ನಾಗಾಯಿ, ಬಳ್ಳಿಗಾವೆ ಮತ್ತು ಕುಳಗೇರಿ ಬಹುಶಃ ಆ ಕಾಲದ ಪ್ರಮುಖ ಘಟಿಕಾ ಸ್ಥಾನಗಳಾಗಿದ್ದಂತೆ ತೋರುತ್ತದೆ.

ಕ್ರಿ.ಶ. ೧೧೦೬ರ ಶಾಸನದಲ್ಲಿ ವೇದಪಾಠ ಶಾಲೆಯೊಂದಿದ್ದು ಅಲ್ಲಿ ಶಾಸ್ತ್ರಧಾರಕರಿಗೆ, ಪುರಾಣ ಪ್ರವಚನಗಾರರಿಗೆ, ಋಗ್ವೇದ, ಯಜುರ್ವೇದ ಉಪಾಧ್ಯಾಯರುಗಳಿಗೆ ಹಾಗೂ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ವಿಕ್ರಮಾದಿತ್ಯನ ರಾಣಿ ಮಲಯಮತಿದೇವಿಯು ದಾನವನ್ನು ನೀಡಿದಳೆಂದು ಹೇಳಿದೆ. ಕ್ರಿ.ಶ. ೧೧೯೯ರ ನೊಲಗೇರಿ ಶಾಸನ ಇಲ್ಲಿನ ಉಪಾಧ್ಯಾಯರ ಅಧ್ಯಾಪನದ ವಿವರವನ್ನು ನೀಡುತ್ತದೆ. ವ್ಯಾಕರಣ, ಪುರಾಣ, ಕಾವ್ಯ, ನಾಟಕ, ನೃತ್ಯ, ಶೃಂಗಾರ ಮೊದಲಾಗಿ ವೇದ, ಉಪಾಂಗ, ಧರ್ಮಶಾಸ್ತ್ರಗಳಲ್ಲಿ ಹಾಗೂ ಯಜ್ಞಯಾಗಾದಿಗಳನ್ನು ತಿಳಿದಿದ್ದರು ಎಂದು ಹೇಳಲಾಗಿದೆ. ಇದರಿಂದ ನೊಲಗೇರಿಯಲ್ಲಿ ಕೂಡ ಪಾಠಶಾಲೆ ಇದ್ದುದು ಸ್ಪಷ್ಟವಾಗುತ್ತದೆ. ಕೆ.ಬಿ. ವಸ್ತುಸಂಗ್ರಹಾಲಯದ ಶಾಸನದಲ್ಲಿ ವಿದ್ಯಾದಾನವನ್ನು ಕುರಿತಂತೆ ಹಾಗೂ ವಿದ್ಯಾಶಾಲೆಯಲ್ಲಿ ಕಲಿಸುವ ವಿದ್ಯೆಯನ್ನು ಕುರಿತಂತೆ ಹೇಳಲಾಗಿದೆ. ಹಾನಗಲ್ ತಾಲ್ಲೂಕಿನ ತಿಳವಳ್ಳಿ ಶಾಸನದಲ್ಲಿ ಪಾಠಶಾಲೆ ಇದ್ದುದರ ದಾಖಲೆಯಿದೆ. ನವಲಗುಂದ ತಾಲ್ಲೂಕಿನ ನಾವಳ್ಳಿ ಶಾಸನದಲ್ಲಿ ಬಾಲಶಿಕ್ಷೆಯ ಅಭಿವೃದ್ಧಿಗೆ ದಾನ ನೀಡಿದನೆಂದು ಹೇಳಿದೆ. ಬಾಲಶಿಕ್ಷೆ ಪ್ರಾಥಮಿಕ ವಿದ್ಯಾಭ್ಯಾಸವನ್ನು ಸೂಚಿಸುತ್ತದೆ. ಕರ್ನೂಲು ಜಿಲ್ಲೆಯ ತ್ರಿಪುರಾಂತಕ ಶಾಸನದಲ್ಲಿ ವೇದಾಧ್ಯಯನ ವಿದ್ಯಾರ್ಥಿಗಳ ಆಹಾರ, ವಸ್ತ್ರಗಳ ಮತ್ತು ಉಪಾಧ್ಯಾಯರುಗಳ ಆಹಾರಕ್ಕಾಗಿ ಹಾಗೂ ವಸ್ತ್ರಕ್ಕಾಗಿ ದಾನದತ್ತಿಗಳನ್ನು ನೀಡಿದ ವಿವರವಿದೆ. ಇದರಿಂದ ತ್ರಿಪುರಾಂತಕ ಗ್ರಾಮವೂ ಕೂಡ ವೇದಪಾಠಶಾಲೆಯನ್ನು ಹೊಂದಿತ್ತು ಎನ್ನುವುದು ಸ್ಪಷ್ಟವಾಗುತ್ತದೆ.

ವಿದ್ಯಾ ಕೇಂದ್ರಗಳಲ್ಲಿ ವೇದಾಧ್ಯಯನ ಸಾಮಾನ್ಯವಾಗಿ ನಡೆಯುತ್ತಿತ್ತು. ಒಂದೊಂದು ವೇದಗಳಿಗೆ ಮೀಸಲಾದಂತಹ ಏಕೋಪಾಧ್ಯಾಯ ಶಾಲೆಗಳ ಮಾದರಿಯಲ್ಲಿ ಸಣ್ಣ ಸಣ್ಣ ಪಾಠಶಾಲೆಗಳಿದ್ದವು. ಮುಂಡರಗಿ ತಾಲ್ಲೂಕಿನ ಆಲೂರಿನ ಶಾಸನ ಋಗ್ವೇದ ಖಂಡಿಕೆಯನ್ನು ಹೆಸರಿಸುತ್ತದೆ. ಅಂದರೆ ಋಗ್ವೇದವನ್ನು ಕಲಿಸುವ ಪಾಠಶಾಲೆಯನ್ನು ಇದು ಸೂಚಿಸುತ್ತದೆ. ಭಾಲ್ಕಿ ತಾಲ್ಲೂಕಿನ ಗೊರ್ಟ ಶಾಸನದಲ್ಲಿ ಪಾಠಶಾಲೆಯ ವಿದ್ಯಾರ್ಥಿಗಳ ಮತ್ತು ಶಿಕ್ಷಕರ ಖರ್ಚುವೆಚ್ಚ ಗಳಿಗಾಗಿ ಹಾಗೂ ಕನ್ನಡವನ್ನು ಕಲಿಸುವ ಶಿಕ್ಷಕರಿಗಾಗಿ (ಕನ್ನಡ ಅಕ್ಷರದ ಖಂಡಿಕಾ) ದಾನದತ್ತಿಗಳನ್ನು ನೀಡಲಾಯಿತು ಎಂದು ಹೇಳಿದೆ. ಗುಲ್ಬರ್ಗಾ ತಾಲ್ಲೂಕಿನ ಸೈಯದ್ ಚಿಂಚೊಳ್ಳಿಯ ಶಾಸನ ಪ್ರತ್ಯೇಕವಾಗಿ ಪುರಾಣಗಳನ್ನು ಬೋಧಿಸುವ ಶಾಲೆಯೊಂದನ್ನು ಹೊಂದಿತ್ತು ಎಂದು (ಪುರಾಣ ಖಂಡಿಕಾ) ಹೇಳಿದೆ. ಉಸ್ಮಾನಾಬಾದ್ ತಾಲ್ಲೂಕಿನ ಕೌತದ ಶಾಸನದಲ್ಲಿ ಪಾಠಶಾಲೆಯ ಖರ್ಚುವೆಚ್ಚಗಳಿಗಾಗಿ ಹಾಗೂ ವಿದ್ಯಾರ್ಥಿಗಳ ವಿದ್ಯಾರ್ಜನೆಗಾಗಿ (ಬಹುಶಾಸ್ತ್ರ ಧ್ಯಾನ) ನೀಡಿದನೆಂದು ತಿಳಿಸುತ್ತದೆ. ಕ್ರಿ.ಶ. ೧೧೨೦ರ ಸಂಗಮ ಶಾಸನದಲ್ಲಿ ಮಲ್ಲಿಕಾರ್ಜುನ ಎಂಬುವವನು ಶಾಲೆಗೆ ಮತ್ತು ವಿದ್ಯಾರ್ಥಿಗಳಿಗೆ ದಾನ ನೀಡುವುದನ್ನು ದಾಖಲಿಸುತ್ತದೆ.

ಕಲ್ಯಾಣ ಚಾಲುಕ್ಯರ ವಿದ್ಯಾ ಚಟುವಟಿಕೆಗಳಿಗೆ ಪೂರಕವಾದಂತಹ ಘಟಿಕಾಲಯಗಳು ಬೆಳವಣಿಗೆ ಹೊಂದಿದ್ದವು. ಈ ಮೇಲೆ ಚರ್ಚಿಸಿದಂತೆ ಘಟಿಕಾಲಯಗಳು ಪ್ರಾಯಶಃ ವಿಶ್ವವಿದ್ಯಾನಿಲಯಗಳ ಮಾದರಿಯಲ್ಲಿ ರಚನೆಯಾಗಿವೆ. ಶಾಸನಗಳಲ್ಲಿ ಉಲ್ಲೇಖಿಸಿರುವ ತಪೋಧನರ ಮತ್ತು ವಿದ್ಯಾದಾನದ ನಿತ್ಯ ಆಹಾರಕ್ಕಾಗಿ ದಾನ ನೀಡಿದ ಎಂಬ ಉಲ್ಲೇಖ ಕೂಡ ಪಾಠಶಾಲೆಗಳ ಮತ್ತು ವಿದ್ಯಾರ್ಥಿಗಳ ಇರುವಿಕೆಯನ್ನು ಸ್ಪಷ್ಟಪಡಿಸುತ್ತದೆ.

ಬಳ್ಳಿಗಾವೆ, ನಾಗಾಯಿ, ಸಾಲೋಟಗಿ, ಇಟಗಿ, ಲಕ್ಕುಂಡಿ, ಕುಳಗೇರಿ, ಗದಗ, ದೋಣಿ, ಲಕ್ಷ್ಮೇಶ್ವರ ಮೊದಲಾದವುಗಳು ಪ್ರಮುಖ ವಿದ್ಯಾಕೇಂದ್ರಗಳಾಗಿದ್ದವು ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ. ನಾಗಾವಿಯ ಶಾಸನವನ್ನು ನೋಡಿದಾಗ ಅದರಲ್ಲಿ ಉಲ್ಲೇಖಿತ ವಿವಿಧ ಮತ್ತರುಗಳ ಭೂಮಿಯ ವಿಭಾಗದ ಮೊತ್ತಗಳ ಘಟಿಕಾಲಯದ, ವೇದ, ಶಾಸ್ತ್ರ, ವಾಕ್ಯಾರ್ಥ ಪ್ರಭಾಕರ ಮೊದಲಾದ ಕೃತಿಗಳ ಅಧ್ಯಯನದ ವಿದ್ಯಾರ್ಥಿಗಳಿಗೆ, ಉಪಾಧ್ಯಾಯರಿಗೆ ಸರಸ್ವತಿ ಭಂಡಾರದ ಭಂಡಾರಿಗಳಿಗೆ ನೀಡಿರುವಂತಹ ಮತ್ತರುಗಳ ವಿವರಗಳನ್ನು ಗಮನಿಸಿದರೆ ಆ ಕಾಲದ ವಿದ್ಯಾ ಪ್ರಾಮುಖ್ಯತೆಯ ಕುರಿತಾದ ಒಂದು ಉತ್ತಮ ಚಿತ್ರಣ ದೊರೆಯುತ್ತದೆ.



## ಆಧಾರಸೂಚಿ


೧. *Annual Report of Indian Epigraphy,* 1975-76, B. 95.

೨. ಅದೇ., ೧೯೬೦-೧೯೬೧, ಬಿ. ೬೭.

೩. *South Indian Inscriptions.*

೪. **ಎಪಿಗ್ರಾಫಿಯಾ ಕರ್ನಾಟಿಕಾ,** ಸಂ. ೭, ಭಾಗ-೧, ಶಿವಮೊಗ್ಗ ಜಿಲ್ಲೆ, (ರೈಸ್ ಆವೃತ್ತಿ) ಬೆಂಗಳೂರು, ೧೯೦೨.

೫. *Epigraphia Indica,* Vol. XV, ASI, New Delhi, 1982.

೬. Hyderabad Archaeological series No. 8, *The Inscriptions of Nagai,* Ed. C.R. Krishnamacharlu, Hydarabad, 1928.



# ಶಾಸನಗಳ ಹಿನ್ನೆಲೆಯಲ್ಲಿ ಆರಗ ರಾಜ್ಯದ ಭೌಗೋಳಿಕ ವ್ಯಾಪ್ತಿ

**ಸುಂಕಂ ಗೋವರ್ಧನ***

ವಿಜಯನಗರವು ಅರಸರು ಸಾಮ್ರಾಟರಾಗಿ ಆಡಳಿತವನ್ನು ಆರಂಭಿಸಿದ ನಂತರ ತಮ್ಮ ಒಟ್ಟು ಸಾಮ್ರಾಜ್ಯವನ್ನು ಹಲವಾರು ರಾಜ್ಯಗಳಾಗಿ ವಿಂಗಡಿಸಿ ಅಧಿಕಾರದ ವಿಕೇಂದ್ರೀಕರಣವನ್ನು ಮಾಡಿದರು. ವಿಜಯನಗರದ ಆರಂಭದ ಅರಸರಾದ ಸಂಗಮರೇ ಈ ರೀತಿಯ ಪ್ರಕ್ರಿಯೆಗೆ ನಾಂದಿ ಹಾಡಿದವರು. ಐದೂ ಜನ ಸಂಗಮ ಸೋದರರು ವಿವಿಧ ಭಾಗಗಳಲ್ಲಿ ನೆಲೆ ನಿಂತು ವಿಸ್ತಾರವಾದ ಸಾಮ್ರಾಜ್ಯದ ಅಧಿಕಾರವನ್ನು ನೋಡಿಕೊಳ್ಳುತ್ತಿದ್ದರು. ಆಯಾ ಪ್ರದೇಶಗಳ ಭೌಗೋಳಿಕ ಅಂಶಗಳನ್ನು ಸರಿಯಾಗಿ ಗುರುತಿಸಿ ಅದರಂತೆಯೇ ಆಡಳಿತ ಘಟಕಗಳನ್ನು ಏರ್ಪಡಿಸುತ್ತಾ ನಡೆದರು.

ಹೀಗೆ ರೂಪುಗೊಂಡ ರಾಜ್ಯಗಳಲ್ಲಿ ಮಲೆನಾಡಿನ ಭಾಗವನ್ನು ಮಲೆರಾಜ್ಯವೆಂದು ಕರೆದು ಸುತ್ತಮುತ್ತಲ ನಾಡುಗಳನ್ನು ಈ ರಾಜ್ಯದಲ್ಲಿ ಅಂತರ್ಗತಗೊಳಿಸಲಾಯಿತು. ಈ ಮಲೆರಾಜ್ಯವನ್ನು ಆರಗ ರಾಜ್ಯವೆಂದು ಕರೆಯುತ್ತಿದ್ದರು. ಕಾರಣ ಆರಗ ಇದರ ರಾಜಧಾನಿಯಾಗಿತ್ತು. ಸಂಗಮ ದೊರೆಗಳ ಸೋದರರಲ್ಲಿ ಒಬ್ಬನಾದ ಮಾರಪ್ಪ ಒಡೆಯನು ಈ ಆರಗ ರಾಜ್ಯದ ಚುಕ್ಕಾಣಿಯನ್ನು ಹಿಡಿದನು. ಆರಗದ ೧೮ ಕಂಪಣಗಳೂ ಹಾಗೂ ಗುತ್ತಿಯ ೧೮ ಕಂಪಣಗಳನ್ನು ಒಳಗೊಂಡ ಆರಗ-ಗುತ್ತಿ ೩೬ ಕಂಪಣಗಳಿಗೆ ಮಾದಪ್ಪನು ಒಡೆಯನಾಗಿದ್ದನು.

## ಆರಗ

ಇಂದಿನ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಹೋಬಳಿ ಕೇಂದ್ರವಾಗಿರುವ ಆರಗವು ಇತಿಹಾಸದಲ್ಲಿ ರಾಜಧಾನಿಯಾಗಿ ಮೆರೆದ ಊರಾಗಿದೆ. ಆರಗವು ಭೌಗೋಳಿಕವಾಗಿ ತುಂಗಾ ನದಿಯ ತೀರದಲ್ಲಿದೆ. ಸಣ್ಣ ತೊರೆಗಳಾದ ಕುಶಾವತಿ ಮತ್ತು ಗೋಪೀನಾಥಗಳು ಆರಗದ ಬಳಿಯೇ ಹರಿಯುತ್ತದೆ. ಪಶ್ಚಿಮ ಘಟ್ಟಗಳ ಸಾಲಿನಲ್ಲಿರುವ ಅತ್ಯಂತ ಸಂಪದ್ಭರಿತ ವನರಾಶಿಯಿಂದಲೂ, ಸಮೃದ್ಧವಾದ ನೀರಿನಿಂದಲೂ ತುಂಬಿರುವ ಆರಗವು ವಿಪುಲವಾದ ಕಾಡಿನಿಂದ ಆವರಿಸಲ್ಪಟ್ಟಿದೆ. ಹೀಗೆ ವಿಪುಲವಾದ ಪ್ರಾಕೃತಿಕ ಸಂಪತ್ತು ಇರುವುದರಿಂದಲೇ ಮಾರುಕಟ್ಟೆ ಬೆಳೆಯನ್ನು ಬೆಳೆಯುವ ಪ್ರದೇಶವಾಗಿದೆ. ಇಲ್ಲಿನ ಸಾಂಬಾರ ಪದಾರ್ಥಗಳಿಗೆ ದೇಶ-ವಿದೇಶಗಳ ಮಾರುಕಟ್ಟೆಗಳಲ್ಲಿ ಉತ್ತಮ ಬೆಲೆಯಿದೆ. ವ್ಯಾಪಾರಕ್ಕೆ ಪೂರಕವಾದ ವಾತಾವರಣವಿರುವುದ ರಿಂದಲೇ ಇಲ್ಲಿ ದೊಡ್ಡ ಗ್ರಾಮವೊಂದು ಮೂಡಿ ರಾಜಧಾನಿಯಾಗಿ ರೂಪುಗೊಂಡಿತು.

ಆರಗವು ಗಂಗರ ಕಾಲದಲ್ಲಿ ಮಂಡಳಿ ೧೦೦೦ ಎಂಬ ಆಡಳಿತ ವಿಭಾಗದಲ್ಲಿ ಅಂತರ್ಗತವಾಗಿದ್ದ ಒಂದು ಸಣ್ಣ ಗ್ರಾಮವಾಗಿತ್ತು. ಆಗ ಆರಗಕ್ಕೆ ಅಂತಹ ವಿಶೇಷವಾದ ಪ್ರಾಶಸ್ತ್ಯವೇನೂ ಇರಲಿಲ್ಲ. ನಂತರ ಹೊಯ್ಸಳರ ಕಾಲದಲ್ಲಿ ಸಾಂತಳಿಗೆ ನಾಡು ರೂಪುಗೊಂಡಾಗ ಆರಗವು ಈ ಸಾಂತಳಿಗೆ ನಾಡಿನಲ್ಲಿತ್ತು. ಮುಂದೆ ಹೊಂಬುಜವನ್ನು [ಇಂದಿನ ಹುಂಚ] ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಶಾಂತರರು ಇದೇ ಶಾಂತಳಿಗೆ ನಾಡನ್ನು ವಿಸ್ತರಿಸಿ ಸಾಂತಳಿಗೆ ಸಾವಿರ ಎಂಬ ಆಡಳಿತ ಘಟಕವನ್ನು ರೂಪಿಸಿದರು.

ಮುಂದೆ ವಿಜಯನಗರದ ಅರಸರ ಕಾಲದಲ್ಲಿ ತುಂಗಾ ನದಿಯ ತೀರದಲ್ಲಿರುವ ಆರಗಕ್ಕೆ ವಿಶೇಷವಾದ ಸ್ಥಾನಮಾನ ದೊರೆಯುವಂತಾಯಿತು. ಸಮುದ್ರಯಾನದಿಂದ ನಡೆಯುತ್ತಿದ್ದ ವ್ಯಾಪಾರಕ್ಕೆ ಆರಗವು ಮುಖ್ಯ ಹೆಬ್ಬಾಗಿಲಾಗಿತ್ತು. ಆರಗದ ಮೂಲಕ ಸಾಮಾನು-ಸರಂಜಾಮುಗಳು ಸಾಗಣೆಯಾಗುತ್ತಿತ್ತು. ಅದುದರಿಂದ ವಿಸ್ತಾರವಾದ ಮಲೆ ರಾಜ್ಯವನ್ನು ಕಟ್ಟಬೇಕಾದ ಸಂದರ್ಭದಲ್ಲಿ ಆರಗಕ್ಕೆ ಹೆಚ್ಚಿನ ಸ್ಥಾನಮಾನವನ್ನು ನೀಡಿ ಆರಗವನ್ನು ರಾಜ್ಯದ ರಾಜಧಾನಿಯನ್ನಾಗಿ ಮಾಡಲಾಯಿತು.

ಆರಗ ರಾಜ್ಯವನ್ನು ಉಲ್ಲೇಖಿಸುವ ಶಾಸನಗಳು ೧೩೬೭ ರಿಂದ ಆರಂಭವಾಗಿ ವಿಜಯನಗರದ ಕೊನೆಯ ಕಾಲಘಟ್ಟವಾದ ೧೬೬೫ರವರೆಗೆ ಇದೆ. ವಿಜಯನಗರದ ಆಡಳಿತದ ನಂತರವು ಬಹುತೇಕ ಆರಗ ರಾಜ್ಯವು ಕೆಳದಿಯ ಅರಸರ ಆಡಳಿತಕ್ಕೆ ಸಂದು ಕ್ರಿ.ಶ. ೧೮೯೫ರವರೆಗೆ ದಾಖಲಾಗಿದೆ. ಈ ಆರಗ ರಾಜ್ಯದಲ್ಲಿ ೧೮ ಕಂಪಣಗಳು ಹಾಗೂ ಮೂರು ಪಟ್ಟಣಗಳು ಇದ್ದವು ಎಂದು ಬಹುತೇಕ

* # ೪೩೧/೪, ೭ನೆಯ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು-೫೬೦೧೦೪.

ಶಾಸನಗಳು ತಿಳಿಸುತ್ತವೆ. ಒಳಗೋಡಿನ ಕ್ರಿ.ಶ. ೧೫೬೦ರ [ತೀರ್ಥಹಳ್ಳಿ ೧೮೦] ಶಾಸನವೊಂದು ಆರಗ ರಾಜ್ಯದಲ್ಲಿ ೫೦ ನಾಡುಗಳು ಅಂತರ್ಗತವಾಗಿದ್ದವು ಎಂದು ತಿಳಿಸುತ್ತದೆ. ಭಾರತೀಪುರ ಹಾಗೂ ಹುಂಚದ ಕಟ್ಟೆಯ ಶಾಸನಗಳು ಆರಗ ರಾಜ್ಯದಲ್ಲಿ ಪ್ರಮುಖವಾದ ೬೦ ಅಗ್ರಹಾರಗಳಿದ್ದವು ಎಂದು ತಿಳಿಸುತ್ತದೆ.

ಕಂಪಣವೆನ್ನುವುದು ಬಹುಶಃ ನಾಡಿನಂತೆಯೇ. ಶಬ್ದಕೋಶವು ಕಂಪಣವನ್ನು ನಾಡಿನ ಒಂದು ಭಾಗವೆಂದು ತಿಳಿಸುತ್ತದೆ. ಆದರೆ ಆರಗ ರಾಜ್ಯದಲ್ಲಿ ೫೦ ನಾಡುಗಳು ಇರುವ ಸೂಚನೆ ಶಾಸನದಲ್ಲಿಯೇ ಇರುವುದರಿಂದ ಕೆಲವು ನಾಡುಗಳ ಆಡಳಿತವು ಒಂದು ಕಂಪಣಕ್ಕೆ ಸಂದು ಇಂತಹ ೧೮ ಕಂಪಣಗಳು ಆರಗ ರಾಜ್ಯದಲ್ಲಿದ್ದವು. ಈ ಆರಗ ೧೮ ಕಂಪಣವನ್ನು ಇಚ್ಛೆ ೯ ಕಂಪಣ ಹಾಗೂ ಈಳೆ ೯ ಕಂಪಣ ಎಂದು ಎರಡು ರೀತಿಯಲ್ಲಿ ವಿಂಗಡಿಸಲಾಗಿತ್ತು.

ಆರಗ ರಾಜ್ಯದಲ್ಲಿ ೫೦ ನಾಡುಗಳಿದ್ದವು ಎನ್ನುವ ಉಲ್ಲೇಖವಿದ್ದರೂ ಅಷ್ಟು ನಾಡುಗಳ ಹೆಸರುಗಳು ನಮಗೆ ದೊರಕುವುದಿಲ್ಲ. ಶಾಸನಾಧಾರಗಳಿಂದ ತಿಳಿಯಬಹುದಾದಷ್ಟು ನಾಡುಗಳನ್ನು ಈ ಮುಂದೆ ವಿವರಿಸಲಾಗಿದೆ.

**ಮಧುವಂಕ ನಾಡು**

ಆರಗ ಅಥವಾ ತೀರ್ಥಹಳ್ಳಿಯನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ತನ್ನ ಸುತ್ತಮುತ್ತಲಿನ ಅನೇಕ ಗ್ರಾಮಗಳ ಆಡಳಿತ ಕೇಂದ್ರವಾಗಿ ಮಧುವಂಕನಾಡು ಖ್ಯಾತವಾಗಿತ್ತು. ಆರಗ ರಾಜ್ಯದ ಇತಿಹಾಸದಲ್ಲಿ ಮಧುವಂಕನಾಡಿಗೆ ವಿಶೇಷ ಮಹತ್ವವಿದೆ. ಅತ್ತಿಗಾರು, ಅಲುಗವಳ್ಳಿ, ಬಾಳಗೋಡು, ಮಳಲಿ, ಜಂಬೆ, ಬಸವನ ಕಲ್ಲು, ನೆರಟೂರು, ಹೊರಣಿ, ಶಿವರಾಜಪುರ, ಯಡೆಹಳ್ಳಿ, ಸಾಲೂರು, ಕೊಡಸಗೊಳಿ, ಬಳ್ಳೂರು, ಸೂರಳಿ, ಮರಗಳಲೆ, ಜೆಗಟಿಗಾರೆ, ಮಹಿಷಿ, ಕೂಳೂರು, ಬಿಕ್ಕನೂರು, ಬಸವಾನಿ, ಮತ್ತೂರು ಮುಂತಾದ ಊರುಗಳು ಈ ನಾಡಿನಲ್ಲಿ ಸೇರಿಕೊಂಡಿದ್ದವು.

ಈ ನಾಡಿನ ವಿಶೇಷವೆಂದರೆ ಕೆಲವು ಗ್ರಾಮಗಳ ಸಮುಚ್ಚಯವನ್ನು 'ಬಾಗೆ' ಎಂದು ಕರೆಯುತ್ತಿದ್ದರು. ಈ ಭಾಗೆಗಳೆಂದರೆ ಭಾಗಗಳು ಎಂದೇ ಅರ್ಥ. ಮೇಲುಬಾಗೆಯಲ್ಲಿ ಬೊಂದಿ, ಕಲ್ಲಿನಾಥಪುರ, ತೊರಗಲೆಗಳಿದ್ದವು. ಸಾಲೂರು ಬಾಗೆಯಲ್ಲಿ ಸಿಂಗಪೊಟ್ಟಣ, ಸಾಲೂರು, ಕೋಳೂರುಗಳಿದ್ದವು. ಬೆಳ್ಳುರು ಬಾಗೆಯಲ್ಲಿ ಭಾರತೀಪುರ ಹಾಗೂ ಭಾವರಸನ ಕೊಪ್ಪ ಗ್ರಾಮಗಳಿದ್ದವು.

ಮಧುವಂಕ ನಾಡಿನಲ್ಲಿ ಕೆಲವು ಪಟ್ಟಡಿಗಳಿದ್ದವು. ಈ ಪಟ್ಟಡಿಗಳು ಕಂದಾಯ ವ್ಯವಸ್ಥೆಯ ಕೇಂದ್ರಭಾಗವಾಗಿದ್ದವು. ಕೊಡಸಗೊಳಿ ಪಟ್ಟಡಿಯಲ್ಲಿ ಬೊಬ್ಬಳ್ಳಿ, ವಡದಕೆರೆ ಗ್ರಾಮ, ಹಿಂಡಚವಳ್ಳಿ, ಕುಕ್ಕರಿ ಗ್ರಾಮ, ಮಾವಕೋಡು ಗ್ರಾಮ ಹಾಗೂ ಕೇದಗೆ ಬಯಲು ಗ್ರಾಮಗಳಿದ್ದವು. ಜಂಬೇ ಪಟ್ಟಡಿಯಲ್ಲಿ ಮರಗಳಲೆ, ನಿರಜವಳ್ಳಿ ಹಾಗೂ ಬಸವನಕಲ್ಲು ಗ್ರಾಮಗಳಿದ್ದವು. ವಂಬೀ ಪಟ್ಟಡಿಯಲ್ಲಿ ಬಸವನಕಲ್ಲು ಗ್ರಾಮವಿತ್ತು. ನೆರಟೂರು ಪಟ್ಟಡಿಯಲ್ಲಿ ಸೂರಳಿ ಗ್ರಾಮವಿತ್ತು.

ಈ ನಾಡು ಇಂದಿನ ತೀರ್ಥಹಳ್ಳಿ ತಾಲ್ಲೂಕಿನ ಬಹುಭಾಗವನ್ನು ಆವರಿಸಿತ್ತು. ಈ ನಾಡಿನಲ್ಲಿ ಬೊಂಮಾಪುರ ಅಗ್ರಹಾರ, ಚೌಡೇಶ್ವರಿಪುರ, ಅಭಿನವ ಗೋಪೀನಾಥಪುರ, ತೀರ್ಥರಾಜಪುರ, ಮುಕ್ತ ಹರಿಹರಪುರ, ಲಕ್ಷ್ಮಿಗೋವಿಂದಪುರ, ಕಲ್ಲಿನಾಥಪುರ ಮುಂತಾದ ಪ್ರಮುಖ ಅಗ್ರಹಾರಗಳಿದ್ದವು.

**ಸಾತಳಿಗೆಯ ನಾಡು**

ಮೂಲತಃ ತೀರ್ಥಹಳ್ಳಿಗೆ ಸಮೀಪದ ಶಾಂತವೇರಿ ಎಂಬ ಊರನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಶಾಂತಳಿಗೆ ೧೦೦೦ ಎಂಬ ಭೂಪ್ರದೇಶವನ್ನು ಆಳುತ್ತಿದ್ದರು. ೯ನೇ ಶತಮಾನದಿಂದಲೇ ಆರಂಭವಾಗುವ ಈ ನಾಡು ಮೊದಲಿಗೆ ವಿಸ್ತಾರವಾದ ಭೂಭಾಗವಾಗಿತ್ತು. ವಿಜಯನಗರದ ಅರಸರು ಆರಗವನ್ನು ರಾಜ್ಯವನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ಆರಂಭಿಸಿದ ನಂತರ ಸಾತಳಿಗೆಯ ನಾಡು ಸಂಕಬೆಂತ ಗೊಂಡು ಸಾತಳಿಗೆ ೧೦೦೦ ಆಗಿದ್ದ ಭೂಪ್ರದೇಶವು ಸಾತಳಿಗೆ ನಾಡಾಗಿ ರೂಪುಗೊಂಡಿತು. ಈ ಸಾತಳಿಗೆಯ ನಾಡಿನಲ್ಲಿ ಅಭಿನವ ಗೊಂಡಿನಾಥಪುರದ ಆಲಗೇರಿ, ಕೊಳವಳಿಗೆ, ಹಿರಿಯ ಹೊಳಲೂರು ಮುಂತಾದ ಗ್ರಾಮಗಳು ಅಂತರ್ಗತವಾಗಿದ್ದವು.

**ರಾವುನಾಡು**

ಗಂಗರ ಕಾಲದಿಂದಲೂ ಅಸ್ತಿತ್ವದಲ್ಲಿರುವ ರಾಉನಾಡು ವಿಜಯನಗರ ಅರಸರ ಕಾಲದಲ್ಲಿ ಹೆಚ್ಚು ಅಭಿವೃದ್ಧಿಗೊಂಡಿತು. ಈ ನಾಡಿನಲ್ಲಿ ಯಾವ್ಯಾವ ಊರುಗಳು ಅಂತರ್ಗತವಾಗಿದ್ದವು ಎಂದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ದಾನಶಾಲೆ ಗ್ರಾಮದ ಶಾಸನದಂತೆ ಕ್ರಿ.ಶ. ೧೧೦೩ರಷ್ಟು ಹಿಂದೆಯೇ ಈ ನಾಡು ಅಸ್ತಿತ್ವದಲ್ಲಿತ್ತು [ತೀರ್ಥಹಳ್ಳಿ ೧೭೩] ನಂತರ ವಿಜಯನಗರ ಕಾಲದಲ್ಲಿ ೧೪೦೪ರ ಕೌದವಳ್ಳಿ ಶಾಸನದಲ್ಲಿಯೂ [ತೀರ್ಥಹಳ್ಳಿ ೧೩೮] ಈ ನಾಡಿನ ಉಲ್ಲೇಖವಿದ್ದರೂ ಈ ನಾಡಿಗೆ ಸಲ್ಲುವ ಯಾವ ಗ್ರಾಮದ ಹೆಸರೂ ಸಿಗುವುದಿಲ್ಲ. ಅಂದಿಗೆರೆಯ ೧೪೦೪ರ ಶಾಸನವು [ತೀರ್ಥಹಳ್ಳಿ ೧] ರಾಉನಾಡಿನಲ್ಲಿ ನಾಲ್ಕುಮಂದು ಅರವತ್ತು ಹಳ್ಳಿಗಳಿರುವುದನ್ನು ತಿಳಿಸುತ್ತದೆ ೧೫ನೆಯ ಶತಮಾನದ ಹೆಗ್ಗಾರಿನ ಶಾಸನವು [ತೀರ್ಥಹಳ್ಳಿ ೨೩೮] ಈ ನಾಡು ಸ್ಥಳವಾಗಿ ಪರಿವರ್ತನೆ ಯಾಗಿದ್ದೆಂದು ತಿಳಿಸುತ್ತದೆ.

## ಗಂಗಮಂಡಲಿ ನಾಡು

ಗಂಗ, ಹೊಯ್ಸಳರ ಕಾಲದಲ್ಲಿ ವಿಶಾಲವಾಗಿ ಮೆರೆದ ಗಂಗಮಂಡಲಿನಾಡು ವಿಜಯನಗರ ಕಾಲದಲ್ಲಿ ಗಾಜನೂರು ಸ್ಥಳವೆಂದು ಹೆಸರಿಸಲಾಯಿತು. ಆದರೂ ಗಂಗಮಂಡಲಿ ನಾಡು ಎಂಬ ಹೆಸರು ೧೬ ಹಾಗೂ ೧೭ನೆಯ ಶತಮಾನದವರೆಗೂ ಸಮಾನಾಂತರವಾಗಿ ಅಸ್ತಿತ್ವದಲ್ಲಿತ್ತು. ೧೫೨೩ರ ಮತ್ತೂರು ಅಗ್ರಹಾರದ ಶಾಸನವು [ಶಿವಮೊಗ್ಗ-೮೧] ಗಾಜನೂರು ಸ್ಥಳದಲ್ಲಿರುವ ಗಂಗಮಂಡಲಿ ನಾಡಿನಲ್ಲಿ ಊರು ಕಡವೂರು, ಡಣಾಯಕನಹಳ್ಳಿ, ಮತ್ತೂರುಗಳಿದ್ದವು ಎಂದು ತಿಳಿಸುತ್ತದೆ. ೧೬೨೧ರ ಯರಗನಹಾಳು ಅಗ್ರಹಾರದ ಶಾಸನವು [ಶಿವಮೊಗ್ಗ ೮೩] ಆರಗ ವೇಂಠೆಯ ಗಾಜನೂರು ಸೀಮೆಯ ಗಂಗೆ ಮಂಡಲಿನಾಡಿನ ತುಂಗಭದ್ರಾ ನದೀ ತೀರದ ಯರಗ್ಗಹಾಳಿ ಎಂಬ ಮಹಾಗ್ರಾಮ ಹಾಗೂ ಇದರ ಉಪಗ್ರಾಮವಾದ ಕಾಳಿಕೊಪ್ಪವನ್ನು ಹೆಸರಿಸುತ್ತಾರೆ.

## ಮದವಳಿಗೆಯ ನಾಡು

ಈ ಮದವಳಿಗೆಯ ನಾಡು ಸಾಂತಳಿಗೆ ನಾಡಿನಲ್ಲಿತ್ತು. ಇದನ್ನು ಸ್ಪಷ್ಟಪಡಿಸುವ ಎರಡು ಶಾಸನಗಳು ಮೇಗರವಳ್ಳಿಯಲ್ಲಿದೆ. ಮೇಗರವಳ್ಳಿಯ ಕ್ರಿಶ. ೮-೮-೧೪೧೭ರ ಶಾಸನವು [ತೀರ್ಥಹಳ್ಳಿ ೨೧೨] ಸ್ಪಷ್ಟವಾಗಿ 'ಆರಗದ ವೇಂಠೆಯದ ಸೀತಳಿಗೆಯ ನಾಡ ಒಳಗಣ ಮದವಳಿಗೆ ನಾಡ ಒಳಗಣ ಮೇಗರವಳ್ಳಿಯ ಗ್ರಾಮ' ಎಂದು ತಿಳಿಸುತ್ತದೆ ಹಾಗೂ ಈ ಶಾಸನ ಮುಂದುವರೆದು ಲೊಕುವಳ್ಳಿಯನ್ನು ಹಾಗೂ ಮುಂಟೆಳೆಯನ್ನು ಪ್ರಸ್ತಾಪಿಸುತ್ತದೆ. ಮೇಗರವಳ್ಳಿಯ ಇನ್ನೊಂದು ಶಾಸನವು [ತೀರ್ಥಹಳ್ಳಿ ೨೧೪] ಈ ಮದವಳಿಗೆಯ ನಾಡಿನಲ್ಲಿ ಮಡವಳ್ಳಿ, ಅಣಪವಳ್ಳಿಗಳು ಈ ನಾಡಿನಲ್ಲಿತ್ತು ಎಂದು ತಿಳಿಸುತ್ತದೆ. ಈ ಶಾಸನದ ಕಾಲ ೧೨-೪-೧೪೩೪. ಈ ನಾಡಿನ ಈ ಶಾಸನಗಳಲ್ಲಿ ಈ ನಾಡಿನ ಬೈಚಣ್ಣ ಹೆಗ್ಗಡೆ, ಕೋಟ್ಯಪ್ಪ ಹೆಗ್ಗಡೆ, ಅಳಿಯನ ಹೆಗ್ಗಡೆ, ನಾಗಪ್ಪ ಹೆಗ್ಗಡೆ, ಕಡ ಹೆಗ್ಗಡೆ, ನಾಗಮ್ಮ ಹೆಗ್ಗಡತಿ, ಪೆಲಪ್ಪ ಹೆಗ್ಗಡೆ, ಜಕ್ಕಣ್ಣ ಹೆಗ್ಗಡೆ ಮುಂತಾದವರ ಹೆಸರುಗಳಿವೆ.

## ನಿಡುವಲ ನಾಡು

೨೭-೨-೧೩೮೧ರ ಹುಣಸವಳ್ಳಿಯ ಶಾಸನವು ನಿಡುವಲ ನಾಡಿನಲ್ಲಿರುವ ಹುಣಸವಳಿಯ ಅಗ್ರಹಾರದ ಬಗೆಗೆ ತಿಳಿಸುತ್ತದೆ (ತೀರ್ಥಹಳ್ಳಿ ೨೩೨). ೧೬.೮.೧೩೯೪ರ ಕುರುವಳ್ಳಿಯ ಶಾಸನವು (ತೀರ್ಥಹಳ್ಳಿ ೧೨೦) ಕುರುವಳ್ಳಿಯು ಈ ನಾಡಿನಲ್ಲಿದ್ದುದನ್ನು ತಿಳಿಸುತ್ತದೆ. ೧೪೧೫ರ ಗಾಡಿಗ್ಗೆರೆ ಶಾಸನವು (ತೀರ್ಥಹಳ್ಳಿ ೧೩೯) ಕಾಡಿಗೆರೆ ಹಾಗೂ ಕೋಡೂರುಗಳನ್ನು ಈ ನಾಡಿನಲ್ಲಿತ್ತು ಎಂದು ತಿಳಿಸುತ್ತದೆ. ತೀರ್ಥಹಳ್ಳಿಯ ೧೪೨೨ರ ಶಾಸನವು (ತೀರ್ಥಹಳ್ಳಿ ೧೫೨) ನಿಡುವಲ ನಾಡಿನೊಳಗೆ ಬುಕ್ಕರಾಜಪುರ ಅಗ್ರಹಾರವಿರುವುದನ್ನು ತಿಳಿಸಿ ಈ ಅಗ್ರಹಾರದ ಆಡಳಿತಕ್ಕೆ ಹೆಂನಂಗಿಯು ಸೇರಿತ್ತು ಎಂದು ತಿಳಿಸುತ್ತದೆ. ೧೪೨೪ರ ಆರಗದ ಶಾಸನವು (ತೀರ್ಥಹಳ್ಳಿ ೨೧) ಈ ನಾಡಿನಲ್ಲಿದ್ದ ಕಲ್ಲಕೋಟೆ, ಕುರುವಳ್ಳಿಯ ಗ್ರಾಮವನ್ನು ತಿಳಿಸುತ್ತದೆ. ತೀರ್ಥಹಳ್ಳಿಯ ೧೪೬೩ರ ಶಾಸನವು [ತೀರ್ಥಹಳ್ಳಿ ೧೫೫] ನಿಡುವಲನಾಡು ಸಾಂತಳಿಗೆ ಮಾಗಣಿಗೆ ಸೇರಿತ್ತು ಎಂದು ತಿಳಿಸುತ್ತದೆ. ಈ ನಾಡಿನ ಸರಬಳಿಗೆ ಗ್ರಾಮವನ್ನು ಗಜಬೇಟೆ ದೇವರಾಯಪುರ ವೆಂಬ ಅಗ್ರಹಾರವನ್ನಾಗಿ ಇಮ್ಮಡಿ ದೇವರಾಯನ ಪರವಾಗಿ ಮಲ್ಲಿಕಾರ್ಜುನನು ಮಾಡುತ್ತಾನೆ. ೧೫೮೩ರ ಕುರುವಳ್ಳಿಯ ಶಾಸನವು (ತೀರ್ಥಹಳ್ಳಿ ೧೧೯) ಹೆಗ್ಗಡತಿ ಕೊಪ್ಪ ಎಂಬ ಗ್ರಾಮವು ಹರಳಿಯ ಪಾಲಿಗೆ ಸೇರಿತ್ತು. ಈ ಹರಳಿಯ ಪಾಲು ನಿಡುವಲನಾಡಿಗೆ ಸೇರಿತ್ತೆಂದು ತಿಳಿಸುತ್ತದೆ. ಮೇಳಿಗೆಯ ೧೬೧೦ರ ಶಾಸನವು [ತೀರ್ಥಹಳ್ಳಿ ೨೧೫] ನಿಡುವಲ ನಾಡಿನಲ್ಲಿ ಕೋದೂರು ಪಾಲು ಇದ್ದುದನ್ನು ಇದರಲ್ಲಿ ಮೇಳಿಗೆಯೆಂಬ ಗ್ರಾಮವಿತ್ತೆಂದು ತಿಳಿಸುತ್ತದೆ. ಈ ನಿಡುವಲ ನಾಡಿಗೆ ಪೂರ್ವದಲ್ಲಿ ಸಿಡಿಯಬೆಕ್ಕನೂರು ಸೀಮೆ, ದಕ್ಷಿಣದಲ್ಲಿ ಕೋಲಾರವರದ ಸೀಮೆ, ಪಶ್ಚಿಮಕ್ಕೆ ಬಡವಾನೆ ಸೀಮೆ ಹಾಗೂ ಉತ್ತರಕ್ಕೆ ಹಳಿವಾರ ಸೀಮೆಗಳು ಇದ್ದವು.

## ಹೊಂಬುಚ್ಚನಾಡು

ಇಂದಿನ ಹೊಸನಗರ ತಾಲ್ಲೂಕಿನ ಹೊಂಬುಜವನ್ನು ಕೇಂದ್ರವನ್ನಾಗಿ ಮಾಡಿಕೊಂಡು ಸುತ್ತಮುತ್ತಲ ಗ್ರಾಮಗಳನ್ನು ಹೊಂಬುಚ್ಚನಾಡು ಎಂದು ರೂಪಿಸಲಾಯಿತು. ಹಲವನಹಳ್ಳಿಯ ೧೩೬೭ರ ಶಾಸನವು [ತೀರ್ಥಹಳ್ಳಿ ೨೨೫] ಈ ಹಲವನಹಳ್ಳಿಯು ಈ ನಾಡಿನಲ್ಲಿತ್ತು ಎಂದು ತಿಳಿಸುತ್ತದೆ. ನಿಟ್ಟೂರಿನ ೧೩೭೯ರ ಶಾಸನವು [ತೀರ್ಥಹಳ್ಳಿ ೧೭೮] ನಿಟ್ಟೂರು ಈ ನಾಡಿನಲ್ಲಿತ್ತು ಎಂದು ತಿಳಿಸುತ್ತದೆ. ೧೪೦೪ರ ಹೊಸಕೊಪ್ಪದ ಶಾಸನವು [ತೀರ್ಥಹಳ್ಳಿ ೨೪೩] ಶಂಕರಹಳ್ಳಿಯು ಈ ನಾಡಿನಲ್ಲಿತ್ತು. ಕಾಳಮ್ಮನಗುಡಿ ಗ್ರಾಮದ ೧೪೨೪ರ ಶಾಸನವು [ತೀರ್ಥಹಳ್ಳಿ ೧೧೫] ಹಲವನಹಳ್ಳಿಯು ಈ ನಾಡಿನಲ್ಲಿದ್ದ ಸಂಗತಿಯನ್ನು ತಿಳಿಸುತ್ತದೆ.

ಹೊಂಬುಚ್ಚನಾಡಿನಲ್ಲಿ ಎರಡು ಮಂದು ನಾಡು ಹಾಗೂ ನಾಲ್ಕು ಮಂದು ನಾಡುಗಳು ಎಂದು ಎರಡು ವಿಭಾಗಗಳಿದ್ದವು.

## ಬೆಳುವೆಯ ನಾಡು

ಆರಗ ರಾಜ್ಯದ ಬೆಳುವೆಯ ನಾಡಿನ ಕೇಂದ್ರ ಸ್ಥಳ ಬೆಳುವೆ ಇದನ್ನು ಹರಿಹರಪುರವಾಗಿ ಬದಲಾಯಿಸಲಾಯಿತು. ಈ ನಾಡಿನಲ್ಲಿ ಕಾದುವಳಿ ಎಂಬ ಗ್ರಾಮವಿರುವುದನ್ನು

ಕಾದುವಳ್ಳಿಯ ಶಾಸನವು [ತೀರ್ಥಹಳ್ಳಿ ೧೩೭] ತಿಳಿಸುತ್ತದೆ. ಈ ಕೌದುವಳ್ಳಿಗೆ ವಿರೂಪಾಂಬಿಕಾಪುರ ಎಂಬ ಪ್ರತಿನಾಮ ಧೇಯವಿರುವುದು ೧೪೦೪ರ ಈ ಶಾಸನದಿಂದ ತಿಳಿಯ ಬಹುದಾಗಿದೆ.

**ಕೂಡಲಿ ನಾಡು**

ಶಿವಮೊಗ್ಗ ತಾಲ್ಲೂಕಿನ ಕೂಡ್ಲಿಯಲ್ಲಿರುವ ಅನೇಕ ಶಾಸನಗಳು ಕೊಡಲಿಯು ಕೂಡಲಿ ನಾಡಿನಲ್ಲಿತ್ತು ಎಂದು ತಿಳಿಸುತ್ತದೆ. ಈ ಕೂಡಲಿ ನಾಡು ಆರಗದ ರಾಜ್ಯದಲ್ಲಿತ್ತು ಎಂದು ೧೪೮೯ರ ಶಾಸನವು (ಶಿವಮೊಗ್ಗ ೮೨) ತಿಳಿಸುತ್ತದೆ.

**ಹನಗವಾಡಿಯ ನಾಡು**

ಆರಗ ರಾಜ್ಯದಲ್ಲಿದ್ದ ಆನೆವೇರಿಯ ನಾಡಿನಲ್ಲಿ ಈ ಹನಗವಾಡಿಯ ನಾಡು ಇತ್ತು. ಈ ಹನಗವಾಡಿಯ ಭಾಗದ ನಾಡನ್ನು ಹಾಗೂ ಹೊಳೆಯ ಹೊನ್ನೂರು ನಾಡನ್ನು ರಾಯಣ್ಣ ಒಡೆಯನು ಸುಸ್ಥಿತಿಯಲ್ಲಿ ಆಳುತ್ತಿದ್ದನು [ಶಿವಮೊಗ್ಗ ೩೩].

**ಹೊಳೆಯ ಹೊನ್ನೂರು ನಾಡು**

ಭದ್ರಾನದಿಯ ದಂಡೆಯಲ್ಲಿರುವ ಹೊಳೆಹೊನ್ನೂರನ್ನು ಕೇಂದ್ರವನ್ನಾಗಿ ಮಾಡಿಕೊಂಡು ಹೊಯ್ಸಳರ ಕಾಲದಲ್ಲಿ ರೂಪುಗೊಂಡ ಈ ನಾಡು ಕ್ರಮೇಣ ವಿಜಯನಗರದ ಅರಸರ ಕಾಲದಲ್ಲಿ ಪ್ರವರ್ಧಮಾನವಾಗಿ ಬೆಳೆಯಿತು. ಈ ಹೊಳೆಯ ಹೊನ್ನೂರು ನಾಡಿನಲ್ಲಿ ಆನೆವೇರಿನಾಡು, ಹನಗವಾಡಿಯ ನಾಡು, ಎಡತೊರೆನಾಡು, ಗುಡ್ಡಮಲೆನಾಡು, ಬೆಂಕಿಪುರದ ನಾಡುಗಳು ಸಮಾವೇಶಗೊಂಡಿದ್ದವು. ಇಲ್ಲಿನ ಕೋಟೆಯನ್ನು ಮೊದಲು ಹೊಯ್ಸಳರ ವಿನಯಾದಿತ್ಯ ಕಟ್ಟಿಸಿದನು. ವಿಜಯನಗರ, ಕೆಳದಿ ಅರಸರ ಕಾಲದಲ್ಲಿ ಈ ನಾಡು ಅಭಿವೃದ್ಧಿ ಹೊಂದಿತು.

**ಆನೆವೇರಿಯ ನಾಡು**

ಈ ಆನೆವೇರಿಯ ನಾಡು ಗಂಗರ ಕಾಲದಿಂದಲೂ ಪ್ರಸಿದ್ಧವಾಗಿದ್ದ ನಾಡು. ಗಂಗಮಂಡಲಿನಾಡಿನಲ್ಲಿ ಈ ನಾಡು ಸೇರಿತ್ತು. ಕ್ರಮೇಣ ವಿಜಯನಗರದ ಅರಸರ ಕಾಲಧಲ್ಲಿ ಈ ಅನೆವೇರಿಯ ನಾಡನ್ನು ಗಾಜನೂರು ಸ್ಥಳವನ್ನಾಗಿ ಮಾರ್ಪಡಿಸಲಾಯಿತು.

**ಸೀಮೆಗಳು**

ವಿಜಯನಗರದ ಆಡಳಿತ ಕಾಲದಲ್ಲಿ ನಾಡುಗಳಲ್ಲಿನ ಅಧಿಕಾರದಲ್ಲಿ ವಿಪರೀತ ಜವಾಬ್ದಾರಿಯಿದ್ದುದರಿಂದ ಸೀಮೆಗಳನ್ನು ರೂಪಿಸಲಾಯಿತು. ಈ ಸೀಮೆಯಲ್ಲಿ ಹಲವಾರು ಗ್ರಾಮಗಳು ಅಂತರ್ಗತವಾಗಿದ್ದವು. ಅಂತೆಯೇ ಸ್ಥಳಗಳು ಕೂಡ. ಕೆಲವೊಂದು ಶಾಸನಗಳಲ್ಲಿ ಸ್ಪಷ್ಟವಾಗಿರುವಂತೆ ಒಂದು ರಾಜ್ಯದಲ್ಲಿ ಒಂದು ನಾಡಿರುತ್ತದೆ. ಆ ನಾಡಿನಲ್ಲಿ ಸ್ಥಳವಿರುತ್ತದೆ. ಸ್ಥಳದಲ್ಲಿ ಸೀಮೆಗಳಿರುತ್ತವೆ. ಕೆಲವು ನಾಡುಗಳು ಕ್ರಮೇಣವಾಗಿ ಸೀಮೆಗಳಾಗಿವೆ. ಕೆಲವೊಮ್ಮೆ ನಾಡು ಹಾಗೂ ಸೀಮೆಯನ್ನು ಪರ್ಯಾಯವಾಗಿ ಉಪಯೋಗಿಸಲಾಗಿದೆ.

ಈ ಹಿಂದೆಯೇ ನಾಡುಗಳ ಕೇಂದ್ರವಾಗಿದ್ದ ಹೊಂಬುಜ, ಬೆಳುವೆಗಳು ಕ್ರಮೇಣ ಹೊಂಬುಜ ಸೀಮೆ ಹಾಗೂ ಬೆಳುವೆಯ ಸೀಮೆಗಳಾಗಿ ರೂಪಾಂತರಗೊಂಡಿದೆ. ನಾಶವೆಂದು ನಾಡು, ನಾಸುವಂದು ನಾಡ ಸೀಮೆಯಾಗಿದೆ. ಇನ್ನುಳಿದಂತೆ ಮೊಸರೂರು ಸೀಮೆ, ಮುತ್ತೂರು ಸೀಮೆ, ಮಾಳೂರು ಸೀಮೆ, ಸಿಡಿಯ ಚಿಕ್ಕನೂರು ಸೀಮೆ, ಕೋಲಾವರದ ಸೀಮೆ, ಬಸವಾನೆ ಸೀಮೆ, ಹಳಿವಾರ ಸೀಮೆ, ನೀರೀರಕಲ ಸೀಮೆ, ಹರಿಹರಪುರದ ಸೀಮೆಗಳು ಆರಗ ರಾಜ್ಯದಲ್ಲಿ ಅಂತರ್ಗತವಾಗಿದ್ದವು. ಇದರ ಜೊತೆಗೆ ಮಂಡಗದ್ದೆ ಸೀಮೆ, ಹಣಗೇರಿಸೀಮೆ ಹಾಗೂ ಹಲಸರ ಸೀಮೆಗಳು ಈ ರಾಜ್ಯದಲ್ಲಿ ಸೇರಿಹೋಗಿದ್ದವು.

**ಗಾಜನೂರು ಸೀಮೆ**

ಆರಗ ರಾಜ್ಯದ ಪ್ರಮುಖ ಆಯಕಟ್ಟಿನ ಪ್ರದೇಶವೆಂದರೆ ಗಾಜನೂರು. ಆನೆವೇರಿಯ ನಾಡು ಎಂದು ಪ್ರಸಿದ್ಧವಾಗಿ ಗಂಗಮಂಡಲಿ ನಾಡಿನಲ್ಲಿದ್ದ ಗಾಜನೂರು ವಿಜಯನಗರದ ಆಡಳಿತದಲ್ಲಿ ಗಾಜನೂರು ಸೀಮೆಯಾಗಿ ಪರಿವರ್ತಿತ ವಾಯಿತು. ಮತ್ತೂರು ಅಗ್ರಹಾರದ ಕ್ರಿ.ಶ. ೧೪೪೫ರ [ಶಿವಮೊಗ್ಗ ೮೧] ಶಾಸನದಲ್ಲಿ ಗಾಜನೂರು ಸ್ಥಳ ಎನ್ನುವ ಉಲ್ಲೇಖವಿರುವುದನ್ನು ಬಿಟ್ಟರೆ ಎಲ್ಲ ಕಡೆಯೂ ಗಾಜನೂರು ಸೀಮೆ ಎನ್ನುವ ಆಡಳಿತ ವಿಭಾಗದ ಉಲ್ಲೇಖವೇ ಇದೆ. ಇದಾದ ನಂತರ ೧೪೮೫ರ ಕುಸ್ಕೂರು ಅಗ್ರಹಾರದ ಶಾಸನವು [ಶಿವಮೊಗ್ಗ ೨೪] ಈ ಸೀಮೆಯ ಕಡುಕಲು ಗ್ರಾಮವನ್ನು ಉಲ್ಲೇಖಿಸುತ್ತದೆ. ಶಿವಮೊಗ್ಗದ ೧೬೪೧ರ ಶಾಸನವು [ಶಿವಮೊಗ್ಗ ೯೦] ಗಾಜನೂರು ಸೀಮೆಯಲ್ಲಿದ್ದ ನಂದಿಗೇರಿ, ಕೊಲತಡಿ, ಸಕ್ಕರೆಬಯಲು, ತಟ್ಟಿಕೆರೆ, ಹೆಬ್ಬಯಲು ಎಂಬ ಐದು ಗ್ರಾಮಗಳನ್ನು ಸೇರಿಸಿ ತ್ರಯಂಬಕಪುರವನ್ನಾಗಿ ಮಾಡಿದ ವಿಷಯವನ್ನು ತಿಳಿಸುತ್ತದೆ. ಕವಲೇದುರ್ಗದ ೧೬೪೨ರ ಶಾಸನದಲ್ಲಿ [ತೀರ್ಥಹಳ್ಳಿ ೫೨] ಈ ಸೀಮೆಯಲ್ಲಿ ಪುರದಹಾಳ, ಹೂಲಿಕಟ್ಟ ಗ್ರಾಮಗಳಲ್ಲಿದ್ದುನ್ನು ದಾಖಲಿಸುತ್ತದೆ. ೧೬೨೧ರ ಯರಗನಹಾಳು ಅಗ್ರಹಾರದಲ್ಲಿನ ಶಾಸನವು [ಶಿವಮೊಗ್ಗ ೮೩] ಗಾಜನೂರು ಸೀಮೆಯಲ್ಲಿ ಗಂಗಮಂಡಲಿ ನಾಡಿತ್ತು ಹಾಗೂ ಈ ನಾಡಿನಲ್ಲಿಯ ಯರಗನಹಾಳು ಹಾಗೂ ಕಾಳಿಕೊಪ್ಪ ಗ್ರಾಮಗಳಿದ್ದುದನ್ನು ತಿಳಿಸುತ್ತದೆ.

ಇದಲ್ಲದೆ ಗಾಜನೂರು ಸೀಮೆಯಲ್ಲಿ ಕೊರ್ಲಹಳ್ಳಿ [ಶಿವಮೊಗ್ಗ ೯೧] ಪುರದಹಾಳ, ಹೂಲಿಕಟ್ಟೆ ಗ್ರಾಮ [ತೀರ್ಥಹಳ್ಳಿ ೫೨], ಎಡೆಹಳ್ಳಿ, ಕುಯರಿ, ಚೋರನಹಾಳ [ತೀರ್ಥಹಳ್ಳಿ ೮೮] ಕಡುಕಲು [ಶಿವಮೊಗ್ಗ ೧೨], ಮೀರನಗಟ್ಟಿ, ಸೆಟ್ಟಿಹಳ್ಳಿ, ಕುಂವುರಿ, ಬಳ್ಳಾಪುರ [ತೀರ್ಥಹಳ್ಳಿ ೧೦೬], ಚೆನ್ನಗೊಂಡನಕೊಪ್ಪ, ಸಾವಗೊಂಡನಹಳ್ಳಿ [ಶಿವಮೊಗ್ಗ ೧೦೦], ತ್ರಯಂಬಕಪುರ [ಶಿವಮೊಗ್ಗ ೯೬] ಗ್ರಾಮಗಳ ಈ ಗಾಜನೂರು ಸೀಮೆಯಲ್ಲಿ ಅಂತರ್ಗತವಾಗಿದ್ದವು. ಕ್ರಿ.ಶ. ೧೭೧೪ರ ಕಾಶೀಪುರದ ಶಾಸನದಲ್ಲಿ ಗಾಜನೂರು ಸೀಮೆ ಸ್ಥಳ ಎಂದು ಉಲ್ಲೇಖಿತವಾಗಿದೆ.

**ಪೇಟೆಗಳು**

ಆರಗ ರಾಜ್ಯದಲ್ಲಿನ ಆರ್ಥಿಕ ಚಟುವಟಿಕೆಗಳ ಮೂಲ ಕೇಂದ್ರವಾಗಿದ್ದುದು ಪೇಟೆಗಳು. ಸಮುದ್ರದಿಂದ ಬರುತ್ತಿದ್ದ ಪದಾರ್ಥಗಳಿಗೆ ಆರಗವು ಮುಖ್ಯ ನೆಲೆಯಾಗಿತ್ತು. ಆಂತರಿಕ ವ್ಯಾಪಾರ ಹಾಗೂ ವಿದೇಶಿ ವ್ಯಾಪಾರಗಳಿಗೆ ಇದು ಕೇಂದ್ರವಾಗಿತ್ತು. ಯಥೇಚ್ಛವಾಗಿ ಬೆಳೆಯುತ್ತಿದ್ದ ಮಲೆನಾಡಿನ ಪದಾರ್ಥಗಳಿಗೆ ವಿದೇಶದ ಮಾರುಕಟ್ಟೆಗಳಲ್ಲಿಯೂ ವಿಶೇಷವಾದ ಬೆಲೆಯಿತ್ತು. ಆರಗ ರಾಜ್ಯದಲ್ಲಿ ಇಂತಹ ಎಂಟು ಪೇಟೆಗಳನ್ನು ಶಾಸನಗಳು ಹೆಸರಿಸುತ್ತದೆ. ಇನ್ನೂ ಇದ್ದಿರಬಹುದಾದರೂ ಉಲ್ಲೇಖಗಳಿಲ್ಲ.

ಆರಗದ ವೇಂಟೆಯಲ್ಲಿ ೮ ಪೇಟೆಗಳು ಇದ್ದವು ಕವಲೇದುರ್ಗದ ೧೬೭೪ರ ಶಾಸನವು ಹೀಗೆ ದಾಖಲಿಸುತ್ತದೆ. "ಆರಗದ ವೆಂಟೆಯಕೆ ಸಲುವ ಆರಗ ಕೊಡಲೂರು, ಯೆಡೆಹಳ್ಳಿ, ಅವಿನಹಳ್ಳಿ, ಕಾರುಊರು, ಬಿದರೂರು, ಮೊಸರೂರು ಮಾಳೇನಹಳ್ಳಿ ಸಹಾ ಯಂಟು ಪೇಟೆಗಳಲ್ಲಿ ಅರಮನೆಯ ಸುಂಕಕೆ..." ಈ ಎಂಟು ಪೇಟೆಗಳಲ್ಲಿ ನಾನಾ ರೀತಿಯ ತೆರಿಗೆಗಳನ್ನು ಅರಮನೆಯವರಿಗೆ ಕಟ್ಟಬೇಕಾಗಿತ್ತು.

"ಈ ಪೇಟೆಗಳಲ್ಲಿ ಅಡಕೆ, ಮೆಣಸು, ಝುಲಿಪಟಿ, ಖೊಬರಿ, ಕವಾಡ ಮುಂತಾದ ಗಡಿಸಿನ ಸರಕು ಹೊರತಾಗಿ ಅಕ್ಕಿ, ಭತ್ತ, ರಾಗಿ, ಯೆಂಣೆ, ತುಪ್ಪ ಕಾಯಿ, ಬೆಲ್ಲ, ವಿದುಳ ಮುಂತಾಗಿ" ವಸ್ತುಗಳು ವಿಕ್ರಯವಾಗುತ್ತಿತ್ತು. ಸುಂಕ ವ್ಯವಸ್ಥೆ ಚೆನ್ನಾಗಿತ್ತು. ಈ ಎಲ್ಲ ಗ್ರಾಮಗಳಲ್ಲಿಯೂ ಸುಂಕ ಕೇಂದ್ರಗಳಿದ್ದವು ನಿಯಮಿತವಾಗಿ ವ್ಯಾಪಾರಿಗಳಿಂದ ಹಣ ಸಂಗ್ರಹಿಸಲಾಗುತ್ತಿತ್ತು.

**ಪಟ್ಟಡಿಗಳು**

ಆರಗ ರಾಜ್ಯದಲ್ಲಿ ಕಂದಾಯ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡಲಾಗಿತ್ತು. ಈ ರೀತಿಯ ಕಂದಾಯ ಕೇಂದ್ರಗಳನ್ನು ಪಟ್ಟಡಿಗಳು ಎಂದು ಕರೆಯಲಾಗುತ್ತಿತ್ತು. ಪ್ರತಿಯೊಂದು ನಾಡಿನಲ್ಲಿಯೂ ಹಲವು ರೀತಿಯ ಪಟ್ಟಡಗಳನ್ನು ಸ್ಥಾಪಿಸಿ ಅಲ್ಲಿಂದ ಕಂದಾಯ ವ್ಯವಸ್ಥೆಯನ್ನು ಹದಗೊಳಿಸಲಾಗುತ್ತಿತ್ತು. ಉದಾಹರಣೆಗೆ ಹೇಳುವುದಾದರೆ ಆರಗ ರಾಜ್ಯದಲ್ಲಿ

ಕೊಡಸತೊಳಿ ಪಟ್ಟಡಿ : ಬೊಬ್ಬಳ್ಳಿ, ವಡೆದಕೆರೆ ಗ್ರಾಮ, ಹಿಂಚನಹಳ್ಳಿ, ಕುಕ್ಕರಿ ಗ್ರಾಮ, ಮಾವಕೋಡು ಗ್ರಾಮ, ಕೇದಗೆಬಯಲು ಗ್ರಾಮ.

ಜಂಬೆ ಪಟ್ಟಡಿ : ಮರಗಳಿಲೆ, ನಿರಚಿವಳ್ಳಿ, ಬಸವನಕಲ್ಲು

ವಂಬೀ ಪೆಟ್ಟಡಿ : ಬಸವನಕಲ್ಲು ಗ್ರಾಮ

ನೆರಟೂರು ಪಟ್ಟಡಿ : ಸೂರಳಿ ಗ್ರಾಮ

ಹೀಗೆ ಕಂದಾಯ ವ್ಯವಸ್ಥೆಯ ಕೇಂದ್ರವಾದ ಪಟ್ಟಡಿಗಳಲ್ಲಿ ಹಲವಾರು ಗ್ರಾಮಗಳು ಬರುತ್ತಿದ್ದವು. ಈ ಗ್ರಾಮಗಳ ಜನರು ಈ ಪಟ್ಟಡಿಗಳಲ್ಲಿ ಬಂದು ತಮ್ಮ ಕಂದಾಯವನ್ನು ಕಟ್ಟಬೇಕಿತ್ತು.

**ಬಾಗೆಗಳು**

ಆರಗ ರಾಜ್ಯದ ವಿಶೇಷತೆಯೆಂದರೆ ಕೆಲವು ಗ್ರಾಮಗಳನ್ನು ಒಳಗೊಂಡ ಬಾಗೆಗಳು ಎಂಬ ಭಾಗ. ಕೇವಲ ಇವು ಭಾಗಗಳೇ ಹೊರತು ಬೇರಲ್ಲ. ಉದಾಹರಣೆಗೆ ಮಧುವಂತನಾಡಿನ ಮೇಲುಬಾಗೆಯಲ್ಲಿ ಬೊಂದಿ, ಕಲ್ಲಿನಾಥಪುರ, ತೊರಗಲೆ ಗ್ರಾಮಗಳು, ಸಾಲೂರು ಬಾಗೆಯಲ್ಲಿ ಸಿಂಗಪೊಟ್ಟಣ, ಕೋಳೂರು, ಬಳ್ಳೂರು ಬಾಗೆಯಲ್ಲಿ ಭಾರತೀಪುರ, ಬಾವರಸನಕೊಪ್ಪ ಗ್ರಾಮಗಳು ಅಸ್ತಿತ್ವದಲ್ಲಿದ್ದವು.

ಈ ಎಲ್ಲ ನಾಡುಗಳು, ಸೀಮೆಗಳು, ಸ್ಥಳಗಳನ್ನು ಗಮನಿಸಿದಾಗ ಆರಗ ರಾಜ್ಯದ ಭೌಗೋಳಿಕ ವ್ಯಾಪ್ತಿಯು ಸ್ಥೂಲವಾಗಿ ಇಂದಿನ ಶಿವಮೊಗ್ಗ ಜಿಲ್ಲೆಯ ಹೊಸನಗರ, ಶಿವಮೊಗ್ಗ, ತೀರ್ಥಹಳ್ಳಿ ತಾಲ್ಲೂಕುಗಳು ಹಾಗೂ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿ, ಕೊಪ್ಪ, ನರಸಿಂಹ ರಾಜಪುರ ತಾಲ್ಲೂಕುಗಳ ಕೆಲಭಾಗವು ಆರಗ ರಾಜ್ಯದಲ್ಲಿ ಅಂತರ್ಗತವಾಗಿತ್ತು ಎಂದೆನಿಸುತ್ತದೆ.

[ಈ ಲೇಖನದಾದ್ಯಂತ ಚೌಕ ಕಂಸದಲ್ಲಿ ನೀಡಿರುವ ಶಾಸನ ಸಂಖ್ಯೆಗಳು ಎಪಿಗ್ರಾಫಿಯ ಕರ್ನಾಟಿಕದ ಹದಿಮೂರನೆಯ (ಪರಿಷ್ಕೃತ) ಸಂಪುಟದವು. ಹೆಚ್ಚಿನ ಮಾಹಿತಿಗಾಗಿ ಎಪಿಗ್ರಾಫಿಯ ಕರ್ನಾಟಿಕದ ಪರಿಷ್ಕೃತ ಸಂಪುಟಗಳಾದ ೧೧, ೧೨, ೧೩, ೧೫ ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಲೆಕರ್ನಾಟಕದ ಅರಸು ಮನೆತನಗಳು ಎಂಬ ಕೃತಿಗಳನ್ನು ನೋಡಬಹುದು.]






# ಆಳುಪ ಅರಸು ಮನೆತನದ ರಾಣಿಯರು ಮತ್ತು ರಾಜಕುವರಿಯರು

**ಡಾ. ಪಿ.ಎನ್. ನರಸಿಂಹಮೂರ್ತಿ***

ಕರ್ನಾಟಕದ ವಿಶಿಷ್ಟ ಭೌಗೋಳಿಕ ಸನ್ನಿವೇಶ ಹೊಂದಿರುವ ಪ್ರದೇಶ ಕರಾವಳಿ. ಭೋರ್ಗರೆವ ಪಶ್ಚಿಮ ಕಡಲು ಒಂದೆಡೆಯಾದರೆ ಮುಗಿಲೆತ್ತರಕ್ಕೆ ಏರಿರುವ ಸಹ್ಯಾದ್ರಿ ಬೆಟ್ಟ ಸಾಲುಗಳು; ಇದರ ಬಿಳಿಲುಗಳಂತೆ ಸಮುದ್ರದವರೆಗೂ ಚಾಚಿರುವ ಗುಡ್ಡ ಸಾಲುಗಳು; ಕಿರಿದಾದ ಕಣಿವೆಗಳು, ಇದ್ದೂ ಇಲ್ಲದಂತಿರುವ ಬಯಲು; ಮಳೆಗಾಲದಲ್ಲಿ ಭೋರ್ಗರೆದು ಆನಂತರ ಶಾಂತವಾಗಿ ಪಶ್ಚಿಮ ಕಡಲಿಗೆ ಹರಿದೋಡುವ ಅಸಂಖ್ಯ ತೊರೆ, ಹೊಳೆ, ನದಿಗಳು. ಕಣಿವೆ, ಬಯಲುಗಳಲ್ಲಿ ನೇಗಿಲ ಕಜ್ಜವಾದರೆ, ಗುಡ್ಡ ಬೆಟ್ಟಗಳಲ್ಲಿ ಪ್ರಕೃತಿಯ ಓಕುಳಿಯಾಟ; ಹಚ್ಚ ಹಸುರಿನ ಸೆರಗು ಹೊತ್ತ ವಯ್ಯಾರದ ನೋಟ. ಅನುಭವಿಸಿ, ಆಸ್ವಾದಿಸಿ ಆನಂದಿಸುವವರಿಗೆ ಇದು ಸುಂದರ ಲೋಕ. ಕ್ಷಾತ್ರ ತೇಜ, ಆಡಳಿತ, ಆರ್ಥಿಕ ಚಟುವಟಿಕೆ, ವ್ಯಾಪಾರ, ವಾಣಿಜ್ಯ, ಸಮಾಜ, ಸಂಸ್ಕೃತಿ, ಧರ್ಮ, ದೇವ–ದೇವಿಯರು, ದೈವಗಳು, ಭೂತಗಳು, ನಂಬಿಕೆ, ಆಚರಣೆ, ಪೂಜೆ, ಉತ್ಸವ, ತೀರ್ಥ ಕ್ಷೇತ್ರಗಳು ಇತ್ಯಾದಿಯಾಗಿ ಎಲ್ಲಕ್ಕೂ ಇಲ್ಲಿದೆ ವಿಷಯ ಪ್ರವಾಹ. ಪರಂಪರಾಗತ ನಂಬಿಕೆಗಳ ಆಗರವಾದರೂ ಇಲ್ಲಿದೆ. ಆಧುನಿಕತೆಯ ಸಿಂಗಾರ. ಅಪೂರ್ವ ಎನ್ನಲೇಬೇಕಾದ ಪ್ರದೇಶ; ಇದು ವಿವಿಧತೆಯಲ್ಲಿ ಏಕತೆಯನ್ನು ಸಾಧಿಸಿದೆ.

ಕ್ರಿಸ್ತ ವರ್ಷಾರಂಭಕ್ಕೆ ಇಲ್ಲಿ ಸ್ವತಂತ್ರ, ಬಲಿಷ್ಠ ಮತ್ತು ಗೌರವಯುತ ರಾಜಕೀಯ ವಾತಾವರಣ ಇತ್ತು. ತಮಿಳು ಸಂಗಂ ಸಾಹಿತ್ಯದ ಪ್ರಕಾರ ನನ್ನನ್ ಇದರ ಪ್ರಥಮ ಪ್ರಭಾವೀ ರಾಜ[೧] ತಮಿಳು ರಾಜರೊಂದಿಗೆ ನಡೆದ ಹಲವಾರು ಯುದ್ಧಗಳಲ್ಲಿ ಈತ ಜಯಶಾಲಿಯಾಗಿದ್ದ. ಕೊನೆಗೆ ಚೇರ ರಾಜ ಕಲಂಗಾಯಕ್ಕಣ್ಣಿ ನಾರ್ಮುಡಿಚ್ಚೇರಲ್‌ನೊಡನೆ ನಡೆದ ಯುದ್ಧದಲ್ಲಿ ಮರಣ ಹೊಂದಿದ[೨] ಆನಂತರ ಈ ಭಾಗವನ್ನು ಆಳಿದವರು ಆಳುಪರು. ಸಾವಿರಕ್ಕೂ ಹೆಚ್ಚು ವರ್ಷಗಳ ಕಾಲ ಈ ಭಾಗದಲ್ಲಿ ಅವಿಚ್ಛಿನ್ನವಾಗಿ ಆಳ್ವಿಕೆ ನಡೆಸಿದವರು ಇವರು[೩]. ಸಾಮಂತರಾದರೂ ಸಾಮ್ರಾಜ್ಞರಂತೆ ಮೆರೆದ ಅತ್ಯಂತ ನಂಬಿಕಾರ್ಹ ಭೃತ್ಯರು. ತಮ್ಮ ದೀರ್ಘವಾದ ಆಳ್ವಿಕೆ ಕಾಲದಲ್ಲಿ ಇಂದಿನ ತುಳುವ ಸಮಾಜ ಮತ್ತು ಸಂಸ್ಕೃತಿಗೆ ಭದ್ರ ಬುನಾದಿಯನ್ನು ಇವರು ಹಾಕಿದರು. ಈ ಪರಂಪರೆಯ ಬೆಳವಣಿಗೆಯ ಜ್ಞಾನ ಸರಿಯಾಗಿ ಇಲ್ಲದಿದ್ದರೆ ಇಲ್ಲಿಯ ಸಮಾಜ, ಆಚಾರ–ವಿಚಾರ, ನಡೆ–ನುಡಿ ಇತ್ಯಾದಿಗಳ ಸ್ಪಷ್ಟ ಪರಿಚಯ ಆಗುವುದು ಕಷ್ಟ.

ತುಳುನಾಡಿನ ವಿಶಿಷ್ಟ ಸಂಸ್ಕೃತಿಯ ಜೀವನಾಡಿ ಮಹಿಳೆ. ಇಲ್ಲಿಯ ಪ್ರತಿಯೊಂದು ರೀತಿಯ ಬೆಳವಣಿಗೆಯಲ್ಲೂ ಈಕೆಯ ಪಾತ್ರ ಮಹತ್ವ ಪೂರ್ಣವಾದುದು. ಇಲ್ಲಿರುವುದು ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ. ಸ್ಥಳೀಯವಾಗಿ ಇದನ್ನು "ಅಳಿಯ ಸಂತಾನ ಕಟ್ಟು" ಎಂದು ಕರೆಯಲಾಗಿದೆ[೪] ಬಹುಮಂದಿ ಇದರ ಅನುಸರಿಗಳಾಗಿದ್ದರೂ ಸಮಾಜದ ಎಲ್ಲ ವರ್ಗಗಳೂ ಈ 'ಕಟ್ಟಿ'ನ ಚೌಕಟ್ಟಿನೊಳಗಿವೆ ಎಂಬುದು ಇದರ ಅರ್ಥವಲ್ಲ. ಆದರೆ ಸ್ತ್ರೀ ಹಾಗು ಮಾತೆಯ ಗೌರವ ಮತ್ತು ಸ್ಥಾನಮಾನಗಳಿಗೆ ಸರ್ವತ್ರ ಎಂದೂ ಚ್ಯುತಿ ಇರಲಿಲ್ಲ. ಈ ಹಿನ್ನೆಲೆಯಲ್ಲಿ ಈ ಭಾಗದ ಮಹಿಳಾ ಕಾರ್ಯಗಳ ಅಧ್ಯಯನಕ್ಕೊಂದು ಮೆರುಗು ಇದೆ.

ದಿನನಿತ್ಯದ ಆಗುಹೋಗುಗಳಲ್ಲಿ ಸಾಮಾನ್ಯ ಮಹಿಳೆಯ ಪಾತ್ರ ಹಿರಿದಾಗಿದ್ದರೂ ಅದು ಬಹುತೇಕ ಗೋಚರಕ್ಕೆ ಬಾರದೇ ಹೋಗುತ್ತದೆ. ಇದಕ್ಕೆ ಅಪವಾದ ಗಳಿರಬಹುದು. ಆದರೆ ಅದರ ಸಂಖ್ಯೆ ಬೆರಳೆಣಿಕೆಯಷ್ಟು, ಅರಸುಮನೆತನಗಳ ಮತ್ತು ಹಿರಿಯ ಅಧಿಕಾರಿ ವಂಶಗಳ ಮಹಿಳೆಯರ ಕಾರ್ಯ ಚಟುವಟಿಕೆಗಳ ಒಂದಲ್ಲ ಒಂದು ರೀತಿಯಲ್ಲಿ ಇತಿಹಾಸದಲ್ಲಿ ದಾಖಲಾಗುವ ಸನ್ನಿವೇಶಗಳು ಹೆಚ್ಚು. ಇವರ ಕಾರ್ಯ ವೈಖರಿಗಳು ಸಾಮಾನ್ಯರ ಮೇಲೂ ಪ್ರಭಾವ ಬೀರಬಲ್ಲ ವಾಗಿರುವ ಕಾರಣ, ಇದು ಸ್ತ್ರೀ ಶಕ್ತಿಯನ್ನು ಅಳೆಯಲು ಪರೋಕ್ಷ ಸಹಕಾರಿ ಎಂದು ತಿಳಿಯಬಹುದು. ಈ ನಿಟ್ಟಿನಲ್ಲಿ ಆಳುಪ ಅರಸು ವಂಶದ ಕೆಲವು ಪ್ರಮುಖ ರಾಜಕುವರಿಯರ ಮತ್ತು ರಾಣಿಯರ ಸಾಧನೆಯ ಕಿರು ಸಮೀಕ್ಷೆಯನ್ನು ಇಲ್ಲಿ ಮಾಡಲಾಗಿದೆ.

ಆಳುಪರು ರಾಜಕೀಯವಾಗಿ ಬೆಳೆದುದು ಅವರು ತಮ್ಮ ಸಾಮ್ರಾಟರು ಮತ್ತು ಸಾಮಂತರೊಂದಿಗೆ

* 'ಗುರುಕೃಪ', ನಂ. ೨೦೩೧, ೧೦ನೇ ಕ್ರಾಸ್, ಕಲ್ಲಹಳ್ಳಿ, ವಿ.ವಿ. ನಗರ, ಮಂಡ್ಯ–೫೭೧೪೦೧.

ಬೆಳೆಸಿಕೊಂಡಿದ್ದ ಮಧುರ ಸಂಬಂಧದಿಂದ. ಇದಕ್ಕೆ ಸೇತುವಾಗಿದ್ದವರು ಅವರ ರಾಣಿಯರು ಮತ್ತು ರಾಜಕುವರಿಯರು. ಈ ಸಂಬಂಧಗಳನ್ನು ಮೂರು ಹಂತಗಳಲ್ಲಿ ಗುರುತಿಸಬಹುದು–೧) ಆಳುಪ–ಬನವಾಸಿ ಕದಂಬ, ೨) ಆಳುಪ–ಬಾದಾಮಿ ಚಲುಕ್ಯ ಮತ್ತು ೩) ಆಳುಪ–ಸಾಂತರ ಸಂಬಂಧಗಳು. ಇದು ಪರಸ್ಪರ ಕೊಡು–ಕೊಳ್ಳುವಿಕೆಯ ನೆಲೆಯಲ್ಲಿ ಭದ್ರವಾಗಿತ್ತು.

೧. ಆಳುಪ ಇತಿಹಾಸ ಪ್ರಾರಂಭವಾಗುವುದೇ ಕದಂಬ ಕಾಕುಸ್ಥವರ್ಮನ ಹಲ್ಮಿಡಿ ಶಾಸನ ಕಾಲದಿಂದ (ಸು. ಕ್ರಿ.ಶ. ೪೭೦)[೫] ಇಲ್ಲಿ ಆಳುಪಗಣ ಪಶುಪತಿಯ ಉಲ್ಲೇಖ ಇದೆ. ಈತ ಕದಂಬ ರಾಜಕುಮಾರಿ ಕಾಕುಸ್ಥವರ್ಮನ ಮಗಳಾದ ಲಕ್ಷ್ಮಿಯನ್ನು ಮದುವೆಯಾಗಿದ್ದ. ಈ ಸಂಬಂಧ ಎರಡೂ ವಂಶಗಳನ್ನು ಗಟ್ಟಿಯಾಗಿ ಬೆಸೆದಿತ್ತು. ಇವರ ಮಗ ಕಾಕುಸ್ಥ ಭಟರಿ. ಈತ ಹತ್ತು ಮಾಂಡಲಿಕರ ನಾಯಕನಾಗಿ ಮತ್ತು ಸುಂಕದ ಅಧಿಕಾರಿಯಾಗಿ ದಕ್ಷತೆ ಮೆರೆದು ಎಲ್ಲರ ಪ್ರೀತಿಪಾತ್ರನಾಗಿದ್ದ[೬] ಲಕ್ಷ್ಮಿ ನೇರವಾಗಿ ರಾಜಕೀಯದಲ್ಲಿ ಪ್ರವೇಶಿಸಿದ್ದು ಕಂಡುಬರದಿದ್ದರೂ ತನ್ನ ಮಗನ ಕಾರ್ಯ ಚಟುವಟಿಕೆಗಳ ಮೇಲೆ ನಿಗಾ ಇಟ್ಟು ಅಪಾರವಾದ ಪ್ರಭಾವ ಬೀರಿರಬೇಕು. ಈ ಸಂಬಂಧ ಯಾವ ರೀತಿಯಲ್ಲಿ ಮುಂದುವರೆದಿತ್ತು ಎಂಬುದಕ್ಕೆ ಆಧಾರಗಳ ಕೊರತೆ ಇದೆ.

೨. ಬನವಾಸಿ ಕದಂಬರ ಸೋಲು ಮತ್ತು ಅಂತ್ಯದಿಂದ ಪ್ರಾರಂಭವಾಗುತ್ತದೆ ಬಾದಾಮಿ ಚಲುಕ್ಯರ ಅಭ್ಯುದಯ. ಕದಂಬರಿಗೆ ಬಹಳ ನಿಷ್ಠರಾಗಿದ್ದ ಆಳುಪರನ್ನು ಬಾದಾಮಿ ಚಲುಕ್ಯರು ತಮ್ಮ ಮುತ್ಸದ್ದಿತನದಿಂದಲೇ ಸ್ನೇಹ ಸಂಬಂಧಕ್ಕೆ ಒಳಪಡಿಸಿದರೆಂದು ಕಾಣುತ್ತದೆ. ಇದಕ್ಕಿರುವ ಸ್ಪಷ್ಟ ನಿದರ್ಶನ ವೆಂದರೆ ಚಲುಕ್ಯ ಮೊದಲ ಕೀರ್ತಿವರ್ಮ ತನ್ನ ತಮ್ಮ ಮಂಗಳೇಶನ ವಿವಾಹವನ್ನು ಆಳುಕ (ಆಳುಪ) ಮಹಾರಾಜನ ಮಗಳಾದ ಕದಂಬಮಹಾದೇವಿಯೊಂದಿಗೆ ನೆರವೇರಿಸಿದ್ದ. ಈ ಸಂಬಂಧ ಆಳುಪ–ಚಲುಕ್ಯ ಮನೆತನಗಳ ಪ್ರಮುಖ ಸಂಪರ್ಕ ಸೇತುವಾಯಿತು. ಇದು ಎಷ್ಟು ಗಾಢವಾಗಿತ್ತು ಎಂಬುದನ್ನು ಕ್ರಿ.ಶ. ೫೯ಲಕ್ಕೆ ಸೇರುವ ಮಾರಟೂರು ಶಾಸನ[೭] ತಿಳಿಸುತ್ತದೆ. ಕ್ಷಾತ್ರ ಮತ್ತು ಧರ್ಮ ತೇಜಗಳನ್ನು ಮೈಗೂಡಿಸಿಕೊಂಡಿದ್ದ ಆಳುಪ ರಾಜಕುಮಾರಿ ಕದಂಬ ಮಹಾದೇವಿ ಸಾಮ್ರಾಟ ಮಂಗಳೇಶನಿಗೆ ತಕ್ಕ ರಾಣಿಯಾಗಿ, ಒಡತಿಯಾಗಿ ರಾಜಕಾರ್ಯದಲ್ಲಿ ಭಾಗಿಯಾಗಿದ್ದಳು. ಸದಾ ಸಾಮ್ರಾಜ್ಯದ ಹಿತ ಕಾಯುವುದರಲ್ಲೇ ನಿರತನಾಗಿದ್ದ ಆಳುಕ ಮಹಾರಾಜ ಸಾಮ್ರಾಟನ ಕರೆಗೆ ಓಗೊಟ್ಟು ತ್ನ ವಾರ್ಧಕ್ಯವನ್ನೂ ಮರೆತು ಮಂಗಳಾಪುರದಿಂದ (ಇಂದಿನ ಮಂಗಳೂರು) ದೂರದ ಮಾರಟೂರಿಗೆ (ಆಂಧ್ರ ಪ್ರದೇಶದ ಗುಂಟೂರು ಜಿಲ್ಲೆ) ಹೋಗಿ ಅಲ್ಲಿ ಚಕ್ರವರ್ತಿಗೆ ಯುದ್ಧದಲ್ಲಿ ಜಯ ದೊರಕಿಸಿಕೊಟ್ಟು ನಂತರ ಸೈನಿಕ ನೆಲೆಯಲ್ಲಿದ್ದಾಗ ಅಸುನೀಗಿದ[೮] ಕದಂಬ ಮಹಾದೇವಿಯು ತನ್ನ ತಂದೆಯ ಉತ್ತರಕ್ರಿಯಾದಿಗಳನ್ನು ಅಲ್ಲೇ ನೆರವೇರಿಸಿ ಅವನ ಪರೋಕ್ಷ–ವಿನಯಕ್ಕಾಗಿ ಹಲವು ಜನ ಬ್ರಾಹ್ಮಣರಿಗೆ ಮತ್ತು ಒಬ್ಬ ಯತಿಗೆ ಭೂ ದಾನಗಳನ್ನು ಮಾಡಿದಳು[೯]. ಚಕ್ರವರ್ತಿ ಇದನ್ನು ಶಾಸನಾಂಕಿತ ಮಾಡಿಸಿದ. ಇದರಲ್ಲಿ ಆಳುಕಮಹಾರಾಜನ ಗುಣಗಾನವಿದೆ. ಇದರಲ್ಲಿ ಹೆಸರಿಸಿರುವ ಆಳುಕಮಹಾರಾಜ ಇಷ್ಟರವರೆಗೆ ಬೆಳಕಿಗೆ ಬಾರದೆ ಇದ್ದ ಒಬ್ಬ ಪ್ರಖ್ಯಾತ ಆಳುಪ ರಾಜ. ಈತನ ಮಗಳು ಮೊದಲಬಾರಿಗೆ ಆಳುಪ–ಚಲುಕ್ಯ ಸಂಬಂಧಕ್ಕೆ ಸೇತುವಾದಳು, ೬ನೆಯ ಶತಮಾನದ ಉತ್ತರಾರ್ಧದ ಆಳುಪ ಇತಿಹಾಸ ನಮಗೆ ದೊರೆಯುವಂತೆ ಮಾಡಿದಳು.

ಇದಾದ ಬಹಳ ಸಮಯದ ನಂತರ ನಮಗೆ ದೊರೆಯುವ ಹೆಸರು ರಾಣಿ ಮಹಾದೇವಿ. ಈಕೆ ಆಳುಪ ಗುಣಸಾಗರ (ಒಂದನೆಯ ಆಳುವರಸ)ನ ಮಡದಿ ಎಂದು ಕಿಗ್ಗ ಶಾಸನ (ಕ್ರಿ.ಶ. ೬೭೫) ತಿಳಿಸುತ್ತದೆ[೧೦] ಈಕೆಯ ಬಗ್ಗೆ ಹೆಚ್ಚಿನ ಮಾಹಿತಿಯೇನೂ ಲಭ್ಯವಿಲ್ಲ. ಪ್ರಾಯಶಃ ಈಕೆ ಅಂದಿನ ಹೆಸರಾಂತ ಅರಸು ಮನೆತನದ ರಾಜಕುವರಿ ಇರಬೇಕು. ಇಲ್ಲಿ ಎರಡು ಸಾಧ್ಯತೆಗಳನ್ನು ಸೂಚಿಸಬಹುದು: ೧) ಸೇಂದ್ರಕ ರಾಜಕುಮಾರಿ ೨) ಚಲುಕ್ಯ ರಾಜಕುಮಾರಿ. ಸೇಂದ್ರಕರು ಶಿವಮೊಗ್ಗ ಮತ್ತು ಅದರ ಉತ್ತರ ಭಾಗದಲ್ಲಿ ಆಳುತ್ತಿದ್ದು, ರಾಜಕೀಯವಾಗಿ ಪ್ರಬಲರಾಗಿದ್ದರು. ಚಲುಕ್ಯರಿಗೆ ಆಪ್ತರಾಗಿದ್ದ ಒಂದು ಪ್ರಮುಖ ಸಾಮಂತ ಪ್ರಾಚೀನ ರಾಜ ವಂಶ. ಇವರ ನೈಋತ್ಯ ಭಾಗದ ಕರಾವಳಿ ಪ್ರದೇಶವನ್ನು ಆಳುತ್ತಿದ್ದವರು ಆಳುಪರು. ಇವರೂ ಸಹ ಬಾದಾಮಿ ಚಲುಕ್ಯರ ಪರಮಾಪ್ತ ಭೃತ್ಯರು. ಈ ನೆಲೆಯಲ್ಲಿ ಆಳುಪ–ಸೇಂದ್ರಕ ಸ್ನೇಹ ಸಂಬಂಧ ಬೆಸೆದು ಅದು ಆಳುವರಸ ಗುಣಸಾಗರ ಮತ್ತು ಮಹಾದೇವಿಯರ ವಿವಾಹದಿಂದ ಭದ್ರವಾಗಿರಬಹುದು. ಇನ್ನು ಎರಡನೆಯದಾಗಿ ಯೋಚಿಸುವುದಾದರೆ ಬಾದಾಮಿ ಚಲುಕ್ಯ ಸಂಬಂಧ. ಇದರಲ್ಲಿ ಅಚ್ಚರಿಯ ಸಂಗತಿ ಏನೂ ಕಾಣುವುದಿಲ್ಲ. ಕಾರಣ ಈಗಾಗಲೇ ಚಲುಕ್ಯ ಮಂಗಳೇಶ ಆಳುಪ ರಾಜಕುಮಾರಿಯಾದ ಕದಂಬಮಹಾದೇವಿಯನ್ನು ಮದುವೆ ಯಾಗಿದ್ದ ವಿಚಾರವನ್ನು ಮೇಲೆ ನೋಡಿದ್ದೇವೆ. ಈಕೆ ಆಳುಕ ಮಹಾರಾಜನ ಮಗಳು. ಆತ ಕೈಗೊಂಡ ದೂರದ ಪ್ರಯಾಣ ಮತ್ತು ಅದರಿಂದಾದ ಆಯಾಸ, ನಂತರ ಭಾಗವಹಿಸಿದ ಯುದ್ಧಗಳು ಆಗಲೇ ವಾರ್ಧಕ್ಯದ ಹಿರಿತನದಲ್ಲಿದ್ದ ದೇಹಕ್ಕೆ ಘಾಸಿ ಉಂಟು ಮಾಡಿದುದರಿಂದ ಆಗಿರಬೇಕು. ಪ್ರಾಯಶಃ ಆಳುವರಸ ಗುಣಸಾಗರ ಈತನ ಮೊಮ್ಮಗನಿರಬೇಕು. ಈ

ಗುಣಸಾಗರ ಮತ್ತು ಮಹಾದೇವಿಯರ ಮಗ ಚಿತ್ರವಾಹನ ಚಲುಕ್ಯ ರಾಜಕುಮಾರಿ ಕುಂಕುಮದೇವಿಯನ್ನು ವಿವಾಹ ವಾಗಿದ್ದ ವಿಚಾರ ಬಹಳ ಖ್ಯಾತಿಯನ್ನು ಗಳಿಸಿದೆ.

ಆಳುಪರು ತಮಗೆ ಅತ್ಯಂತ ಕಷ್ಟ ಕಾಲದಲ್ಲಿ ಮಾಡಿದ ಸೇವೆಗಾಗಿ ಚಲುಕ್ಯ ವಿನಯಾದಿತ್ಯನು ತನ್ನ ಮಗಳಾದ ಕುಂಕುಮದೇವಿಯನ್ನು ಆಳುಪ ಚಿತ್ರವಾಹನನಿಗೆ ವಿವಾಹ ಮಾಡಿಕೊಟ್ಟ. ಇದರ ಪ್ರಸ್ತಾಪ ಚಕ್ರವರ್ತಿಯ ಶಿಗ್ಗಾವ್ ತಾಮ್ರ ಶಾಸನದಲ್ಲಿದೆ[೧೧] ಈ ಶಾಸನ ಕ್ರಿ.ಶ. ೭೦೯ಕ್ಕೆ ಸೇರಿದ್ದು. ಈ ವಿವಾಹ ಆಳುಪರು ಅಲ್ಲಿಯವರೆಗೆ ಮಾಡಿದ್ದ ಶ್ರೇಷ್ಠ ಸೇವೆ ಮತ್ತು ಸಾಧನೆಗೆ ಹಾಗೂ ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಸಾಮಂತ ರಾಜಕುಮಾರನೊರ್ವ ಸಾಮ್ರಾಟ ರಾಜಕುವರಿಯ ಕೈ ಹಿಡಿಯುವುದೇನು ಸಾಮಾನ್ಯ ವಿಷಯವಲ್ಲ. ಈ ನಿಟ್ಟಿನಲ್ಲಿ ಕುಂಕುಮದೇವಿ ಬೆಸೆದ ಸಂಬಂಧ ಶ್ಲಾಘನೀಯ. ಈಕೆ ರಾಜಕೀಯ ಅಷ್ಟೇ ಅಲ್ಲದೆ ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಬಹಳ ಯಶಸ್ವಿಯಾಗಿ ಬೆಳೆಸಿದ್ದಳು. ಈಕೆಯ ಅಣ್ಣ ಚಕ್ರವರ್ತಿ ವಿಜಯಾದಿತ್ಯ ಪರಮ ಭಾಗವತ, ಪತಿ ಆಳುಪ ಚಿತ್ರವಾಹನ ಪರಮ ಶಿವಭಕ್ತ (ಪಾಶುಪತರ ದೊರೆ) ಆದರೆ ತಾನು ಪರಮ ಜಿನ ಭಕ್ತೆ. ಈ ಮೂವರೊಳಗಿನ ಸಂಬಂಧ ಹಾಲು-ಸಕ್ಕರೆಯಂತಿತ್ತು. ಸಾಮಾನ್ಯವಾಗಿ ಇಂತಹ ಸಂಬಂಧಗಳನ್ನು ಸಾಧಿಸಿ ಬಲಪಡಿಸುವ ಶಕ್ತಿ ಮತ್ತು ಮನೋಧರ್ಮ ಹೆಣ್ಣಿಗೆ ಹೆಚ್ಚು. ಅಸಾಧಾರಣ ಮಹಿಳೆಯಾದ ಕುಂಕುಮದೇವಿ ಇದನ್ನು ಬಹಳ ಯಶಸ್ವಿಯಾಗಿ ಪ್ರೀತಿ ಮತ್ತು ವಿಶ್ವಾಸದಿಂದ ಸಾಧಿಸಿದಳು.

ಕುಂಕುಮದೇವಿ ಪುರಿಗೆರೆ (ಇಂದಿನ ಲಕ್ಷ್ಮೇಶ್ವರ)ದಲ್ಲಿ ಆನೆಸಜ್ಜೆಯ ಬಸದಿಯನ್ನು ಪತಿಯ ಸಹಕಾರದಿಂದ ಕಟ್ಟಿಸಿದಳು. ಇದರ ಪೂಜಾಕಾರ್ಯಗಳಿಗಾಗಿ ಚಕ್ರವರ್ತಿ ವಿಜಯಾದಿತ್ಯನು ಗುಡಿಗೆರೆ ಗ್ರಾಮವನ್ನು ದಾನ ಮಾಡುವಂತೆ ಮಾಡಿದಳು. ಈ ಗ್ರಾಮ ದಾನಕ್ಕೆ ಹೆಂಡತಿಯ ಪರವಾಗಿ ಬೇಡಿಕೆ ಸಲ್ಲಿಸಿದವ ಆಳುಪ ರಾಜ[೧೨] ಇಲ್ಲಿ ಆಳುಪ ರಾಣಿಯ ಪಾತ್ರ ಹಿರಿದಾದುದೆಂದು ಹೇಳಬೇಕಾದುದಿಲ್ಲ. ಕುಂಕುಮದೇವಿ ತುಳುನಾಡಿನ ಸೊಸೆಯಾಗಿ ಬಂದ ಕಾರಣ ಈ ಭಾಗದಲ್ಲಿ ಜೈನ ಧರ್ಮದ ಕಾರ್ಯ ಚಟುವಟಿಕೆಗಳು ಗರಿಗೆದರಿ ಬಲಗೊಂಡವು.

ತುಳುನಾಡಿನಲ್ಲಿ ಈಕೆ ಏನು ಮಾಡಿದಳು ಎಂಬುದಕ್ಕೆ ನಮಗೆ ಇನ್ನೂ ಮಾಹಿತಿ ದೊರೆಯಬೇಕಿದೆ. ಆಳುಪ ರಾಜ್ಯ ಆಗ ಇಡೀ ಕದಂಬ ಮಂಡಲ ಸಹಿತವಾದ ವಿಶಾಲವಾದ ಮತ್ತು ಆಯ ಕಟ್ಟಿನ ರಾಜ್ಯವಾಗಿತ್ತು. ಇದರ ಆಡಳಿತ ಮತ್ತು ಶಾಂತಿ ಪಾಲನೆ ಕ್ಲಿಷ್ಟಕರವಾಗಿತ್ತು.[೧೩] ಇದರ ಸುಗಮ ಕಾರ್ಯಾಚರಣೆಗಾಗಿ ಕುಂಕುಮವೆಂಬ ತನ್ನ ಪತಿಯೊಡನೆ ಸಹಕರಿಸಿರಬೇಕು. ಈ ಕಾಲದ ಹೊಸ ಶಾಸನಗಳು ತೃಪ್ತಿಕರ ಸಂಖ್ಯೆಯಲ್ಲಿ ದೊರೆತಲ್ಲಿ ಇದರ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಾಗುವುದು.

೩. ಕೇವಲ ಸಾಮ್ರಾಟರೊಂದಿಗೆ ಕೊಡು-ಕೊಳ್ಳು ವಿಕೆಯ ಸಂಬಂಧವನ್ನು ರಾಜಕಾರಣದಲ್ಲಿ ಸ್ನೇಹ ಬಲವರ್ಧನೆಗಾಗಿ ಆಳುಪರು ಬೆಳೆಸಿದ್ದಲ್ಲ. ಇಂತಹುದೇ ಸಂಬಂಧವನ್ನು ತಮ್ಮ ಅಧಿಕಾರಿ ಸಾಮಂತರಾದ ಹೊಂಬುಚ್ಚ ಸಾಂತರರೊಂದಿಗೂ ಹೊಂದಿದ್ದರು. ಈ ಸಂಬಂಧಕ್ಕೆ ಸೇತುವಾದವರು ಎರಡೂ ಕಡೆಯ ರಾಜಕುಮಾರಿಯರು. ಇವರು ವಿವಾಹಾನಂತರ ರಾಣಿಯರಾದರು. ಇವರಲ್ಲಿ ಮೂರು ಜನ ಆಳುಪ ಹಾಗೂ ಒಬ್ಬಳು ಸಾಂತರ ರಾಜಕುಮಾರಿಯರ ಪಾತ್ರ ಹಿರಿದಾದುದು.

## ಏಂಜಲದೇವಿ

ಹತ್ತನೆಯ ಶತಮಾನದ ಪ್ರಾರಂಭದಲ್ಲಿ ಆಳುಪ ರಣಂಜಯನು ತನ್ನ ಮಗಳಾದ ಏಂಜಲ ದೇವಿಯನ್ನು ಸಾಂತರ ರಾಜ ಚಾಗಿ ಸಾಂತರನಿಗೆ ಮದುವೆ ಮಾಡಿಕೊಟಿದೆ[೧೪] ಇದಕ್ಕೆ ಹಿಂದಿನ ಸಂಬಂಧಗಳ ಮಾಹಿತಿ ಇಲ್ಲದ ಕಾರಣ ಸದ್ಯಕ್ಕೆ ಏಂಜಲದೇವಿ ಆಳುಪ-ಸಾಂತರ ಸಂಬಂಧದ ಪ್ರಥಮ ಸೇತು ಆದಳು. ವಿಕ್ರಮ ಸಾಂತರನ ಮಗ ಚಾಗಿ ಸಾಂತರ. ವಿಕ್ರಮ ಸಾನ್ತರನಿಗೆ ವಿಕ್ರಮಾದಿತ್ಯ ಸಾಂತರ ಎಂಬ ಹೆಸರೂ ಇತ್ತು.[೧೫] ಈತ ಸುಮಾರು ಕ್ರಿ.ಶ. ೮೯೦ ರಿಂದ ೯೩೫ರ ವರೆಗೆ ಆಳಿದ. "ಆಳುಪರ ಸಂಬಂಧವನ್ನು ಹೊಂದಿದ್ದ ವಿಕ್ರಮಾದಿತ್ಯ ವೀರಸಾನ್ತರನು ತನ್ನ ಮಗನಾದ ಚಾಗಿ ಸಾನ್ತರನಿಗೆ ಆಳುಪ ರಣಂಜಯನ ಮಗಳಾದ ಏಂಜಲದೇವಿಯನ್ನು ಲಗ್ನಮಾಡಿ ಈ ಎರಡು ಮನೆತನಗಳಿಗೆ ರಾಜಕೀಯ ಬೆಸುಗೆ ಹಾಕಿದನು" ಎಂದು ಹಂಪ ನಾಗರಾಜಯ್ಯ ಹೇಳುತ್ತಾರೆ[೧೬] ಆದರೆ ಮುಂದೆ ಸಾಂತರ ವಂಶಾವಳಿ ಕೊಡುವಾಗ ವೀರಸಾಂತರನ ಹೆಂಡತಿ ಏಂಜಲದೇವಿ, ಈಕೆ ಆಳುಪ ರಣಂಜಯನ ಮಗಳು ಎಂದು ಹೇಳಿದ್ದಾರೆ.[೧೭] ಇದು ತಪ್ಪು. ಆಳ್ವ ರಣಂಜಯ ಈತನ ಸಮಕಾಲೀನ[೧೮] ರಣಂಜಯ ಸುಮಾರು ಕ್ರಿ.ಶ. ೯೦೦ ರಿಂದ ೯೩೦ರ ವರೆಗೆ ಆಳಿದ ಎಂದು ಡಾ. ಕೆ.ವಿ. ರಮೇಶ ಅವರು ಅಭಿಪ್ರಾಯಪಡುತ್ತಾರೆ[೧೯].

ಇದಾದ ಬಹಳ ಕಾಲದ ನಂತರ ಸಾಂತರ ರಾಜ ಅಂಮಣದೇವ ತನ್ನ ಮಗಳಾದ ಬೀರಬ್ಬರಸಿ (ಬೀರಲದೇವಿ) ಯನ್ನು ಆಳುಪ ರಾಜ ಬಂಕಿದೇವನಿಗೆ ಮದುವೆ ಮಾಡಿಕೊಟ್ಟ ಮತ್ತು ತನ್ನ ಮಗ ಸಾಂತರ ತೈಲಪದೇವನಿಗೆ ಆಳುಪ ರಾಜಕುಮಾರಿ ಬಂಕಿದೇವನ ತಂಗಿಯಾದ ಮಂಕಬ್ಬರಸಿ

ಯನ್ನು ತಂದು ಮದುವೆ ಮಾಡಿದ. ಇದರಿಂದ ಆಳುಪ-ಸಾಂತರ ಸಂಬಂಧ ಮತ್ತೆ ಗಟ್ಟಿಯಾಯಿತು. ನಂಬಿಕೆ ಪ್ರೀತಿ ಮತ್ತು ವಿಶ್ವಾಸದಿಂದ ನೆರವೇರಿದ ಈ ಸಂಬಂಧಗಳಿಗೆ ಇರ್ವರು ರಾಜಕುವರಿಯರು ಸರಕುಗಳಾದರು ಎಂದು ಕಂಡು ಬಂದರೂ ಹಾಗೆನ್ನಲು ಸಾಧ್ಯವಿಲ್ಲ. ಕಾರಣ ಮುಂದೆ ಇರ್ವರೂ ತಾವು ಸೇರಿದ ವಂಶಗಳ ಬೆಳಕಾದರು. ಇವರ ಕುಡಿಗಳು ಆಯಾ ರಾಜ್ಯದ ಚುಕ್ಕಣಿ ಹಿಡಿದವು. ಇದೇನೂ ಸಾಮಾನ್ಯವಾದ ಸಾಧನೆಯಲ್ಲ. ಸಾಂತರ ಅಂಮಣ ಆಳುಪ ಬಂಕಿದೇವನ ಸಾಮಂತ. ಈತ ಕರಾವಳಿಯ ಮೇಲೆ ಧಾಳಿ ಮಾಡಿದ್ದ ಚೋಳರ ಸೈನ್ಯವನ್ನು ಧೂಳಿಪಟ ಮಾಡಿ ತನ್ನ ಸ್ವಾಮಿ ಬಂಕಿದೇವನಿಗೆ ಆತನ ರಾಜ್ಯ ಪುನಃ ದೊರೆಯುವಂತೆ ಮಾಡಿದ ಎಂದು ಬಾರಕೂರಿನ ಒಂದು ಶಾಸನ ತಿಳಿಸುತ್ತದೆ[೨೦] ಇದೇ ವಿಷಯ ಇಲ್ಲಿನ ಇನ್ನೊಂದು ಶಾಸನದಲ್ಲೂ ಪ್ರಸ್ತಾಪವಾಗಿದೆ. ಆದರೆ ಈ ಶಾಸನದ ಪೂರ್ಣ ಪಾಠ ಲಭ್ಯವಿಲ್ಲ[೨೧] ಬಂಕಿದೇವ ಸುಮಾರು ಕ್ರಿ.ಶ. ೧೦೨೦ ರಿಂದ ೧೦೫೦ ರ ವರೆಗೆ ಆಳಿದ ಎಂದು ರಮೇಶ್ ಅವರು ಅಭಿಪ್ರಾಯಪಡುತ್ತಾರೆ[೨೨] ಮುಂದೆ ಬಂಕಿದೇವನ ನಂತರ ಪಟ್ಟಣಕ್ಕೆ ಬಂದ ಆಳುಪ ಪಟ್ಟಿಯೊಡೆಯನು ತನ್ನ ಮಗಳಾದ ಅಚಲಾದೇವಿಯನ್ನು ಸಾಂತರ ತೈಲಪದೇವನ ಮಗನಾದ ವೀರ ಸಾಂತರನಿಗೆ ಮದುವೆ ಮಾಡಿಕೊಟ್ಟ. ವೀರ ಸಾಂತರನಿಗೆ ರಾಯ ಸಾಂತರ ಎಂಬ ಇನ್ನೊಂದು ಹೆಸರೂ ಇತ್ತು[೨೩] ಅಚಲಾದೇವಿ ತನ್ನ ಪತಿ ವೀರ ಸಾಂತರನಿಗೆ ಆತನ ರಾಜ ಕಾರ್ಯದಲ್ಲಿ ಸದಾ ನೆರವಾಗಿದ್ದಳು ಎಂಬ ವಿಚಾರ ಉದಿಯಾವರದ ಒಂದು ಶಾಸನದಿಂದ ತಿಳಿಯುತ್ತದೆ.[೨೪]

ಈ ರೀತಿಯ ಆಳುಪ-ಸಾಂತರ ಸಂಬಂಧಗಳು ನಿರಂತರವಾಗಿ ಮುಂದುವರೆದಿತ್ತು ಎಂಬುದಕ್ಕೆ ನಂತರದ ಕಾಲಗಳಲ್ಲೂ ಹಲವಾರು ನಿದರ್ಶನಗಳು ದೊರೆಯುತ್ತವೆ[೨೫] ಕಳಸ-ಕಾರ್ಕಳ ರಾಜ್ಯವನ್ನು ಮುಂದೆ ಆಳಿದ ರಾಜವಂಶ ಸಾಂತರ ಮೂಲದ್ದು.

ಮುಂದೆ ೧೨-೧೩ ನೆಯ ಶತಮಾನಗಳಲ್ಲಿ ಬಹಳ ಕ್ರಿಯಾಶೀಲವಾಗಿದ್ದು ಮತ್ತು ಶಾಸನೋಕ್ತವಾಗಿರುವ ಪ್ರಮುಖ ಆಳುಪ ಅರಸಿಯರೆಂದರೆ-ಪಾಂಡ್ಯಮಹಾದೇವಿ, ಜಾಕಳಮಹಾದೇವಿ, ಪಟ್ಟಮಹಾದೇವಿ ಮತ್ತು ಬಲ್ಲ ಮಹಾದೇವಿಯರು. ಕವಿಆಳುಪನ (ಕ್ರಿ.ಶ. ೧೧೧೦-೧೧೬೦) ರಾಣಿ ಪಾಂಡ್ಯಮಹಾದೇವಿ. ಈಕೆ ರಾಜ್ಯದ ಆಡಳಿತದಲ್ಲಿ ಸಕ್ರಿಯವಾಗಿ ಭಾಗವಹಿಸಿ, ಪನ್ನೀರ್ಪಳ್ಳಿ ಭಾಗದ ಅಧಿಕಾರಿಯಾಗಿಯೂ ಕರ್ತವ್ಯ ನಿರ್ವಹಿಸಿದ್ದಳು ಎಂದು ಶಾಸನಗಳಿಂದ ತಿಳಿದುಬರುತ್ತದೆ.[೨೬]

ರಾಜ ಒಂದನೆಯ ಕುಲಶೇಖರನ (ಕ್ರಿ.ಶ. ೧೧೬೦-೧೨೨೦) ಮಡದಿ ಜಾಕಲಮಹಾದೇವಿ. ಕುಂದಣನ ವರಾಂಗ ಶಾಸನವು (ಸು. ಕ್ರಿ.ಶ. ೧೨೨೦) ಆಳುಪರ ಸಾಧನೆಗಳೊಂದಿಗೆ ಜಾಕಳಮಹಾದೇವಿಯ ಸಾಧನೆಯನ್ನು ವಿವರಿಸುತ್ತದೆ[೨೭] ಈಕೆ ಪ್ರಖ್ಯಾತವೂ, ಪ್ರಾಚೀನವೂ ಆದ ಜೈನಕ್ಷೇತ್ರ (ಕಾರ್ಕಳ ತಾಲ್ಲೂಕು) ವರಾಂಗದ ನೇಮಿಶ್ವರ ಬಸದಿಯು ಜೀರ್ಣೋದ್ಧಾರ ಮಾಡಿ ಅಲ್ಲೊಂದು ಸುಂದರವಾದ ತಟಾಕವನ್ನು ನಿರ್ಮಿಸುತ್ತಾಳೆ. ಈಕೆಯ ಕಾರ್ಯ ಮೇಲೆ ವಿವರಿಸಿರುವ ಕುಂಕುಮದೇವಿಯ ಕಾರ್ಯಕ್ಕೆ ಸಮನಾದುದು.

## ಪಟ್ಟಮಹಾದೇವಿ

ಆಳುಪ ರಾಜ ವಲ್ಲಭದೇವನ (ಕ್ರಿ.ಶ. ೧೨೩೦-೧೨೫೦) ಮಡದಿ ಪಟ್ಟಮಹಾದೇವಿ. ಶಾಸನಗಳು ಈಕೆಯನ್ನು 'ಪಟ್ಟವ ಪಿರಿಯರಸಿ ಪಟ್ಟಮಹಾದೇವಿ' ಎಂದೇ ಉಲ್ಲೇಖಿಸಿವೆ.[೨೮] ಇದೇ ಈಕೆಗೆ ರಾಜ್ಯಾಡಳಿತದಲ್ಲಿದ್ದ ವರ್ಚಸ್ಸನ್ನು ಸೂಚಿಸುವಂತಿದೆ. ಗಂಡನ ಆಳ್ವಿಕೆ ಕಾಲದಲ್ಲಿ ಆದ ಎಲ್ಲ ಪ್ರಮುಖ ನಿರ್ಧಾರಗಳಿಗೆ ಮತ್ತು ದಾನಕಾರ್ಯಗಳಿಗೆ ಈಕೆ ಸಾಕ್ಷಿಯಾಗಿದ್ದಳು. ರಾಜಸಭೆಯಲ್ಲಿ ಈಕೆಯೂ ಸದಾ ಉಪಸ್ಥಿತಳಿದ್ದಳು. ಈಕೆ ಸಾಂತರ ವೀರ ಜಗದೇವರಸನ ಅಕ್ಕ. ಹಾಗಾಗಿ ಕೆಲವೊಮ್ಮೆ ವೀರ ಜಗದೇವರಸನೂ ಆಳುಪ ರಾಜಸಭೆಯಲ್ಲಿ ಉಪಸ್ಥಿತನಿರುತ್ತಿದ್ದ[೨೯]

ಪಟ್ಟಮಹಾದೇವಿಯು ತನ್ನ ಗಂಡ ವಲ್ಲಭದೇವನ ಮರಣಾನಂತರ ಮಗನಾದ ವೀರಪಾಂಡ್ಯನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ಸ್ವಲ್ಪ ಕಾಲ ತಾನೇ ರಾಜ್ಯ ಸೂತ್ರ ವಹಿಸಿಕೊಂಡಳು ಎಂದು ಕಾಣುತ್ತದೆ[೩೦] ರಾಜ್ಯದ ಹಿತರಕ್ಷಣೆ ರಕ್ಷಣೆಸಲುವಾಗಿ ಈ ಜವಾಬ್ದಾರಿ ಹೊತ್ತಿದ್ದೇ ಹೊರತು ಸರ್ವಾಧಿಕಾರಿ ಹಂಬಲದಿಂದಲ್ಲ. ಈಕೆ ತನ್ನ ಸೊಸೆ ಬಲ್ಲಮಹಾದೇವಿಯೂ ರಾಜ್ಯಾಡಳಿತದ ಜವಾಬ್ದಾರಿ ಹೊರುವಂತೆ ಮಾಡಿದಳು. ಇದೂ ಸಹ ರಾಜಮಾತೆ ಪಟ್ಟಮಹಾದೇವಿಯಲ್ಲಿ ಸರ್ವಾಧಿಕಾರಿ ಮನೋಭವ ಇರಲಿಲ್ಲ ಎಂಬುದನ್ನು ಸೂಚಿಸುತ್ತದೆ. ಕಿರಿಯರಿಗೆ ಆಡಳಿತದಲ್ಲಿ ಶಿಕ್ಷಣ ನೀಡುವ ಮನೋಭಾವ ಇವಳಲ್ಲಿತ್ತು. ತನ್ನ ಜೀವನದ ಇಳಿವಯಸ್ಸಿನಲ್ಲೂ ಈಕೆ ಈ ಜವಾಬ್ದಾರಿಗಳನ್ನೆಲ್ಲಾ ಹೊತ್ತಿದ್ದಳು ಎಂಬ ವಿಚಾರವನ್ನು ಸುಮಾರು ಕ್ರಿ.ಶ. ೧೨೭೪ಕ್ಕೆ ಸೇರುವ ಬಾರಕೂರು ಕೋಟೆಕೇರಿಯ ಒಂದು ಶಾಸನ ತಿಳಿಸುತ್ತದೆ[೩೧] ಪ್ರಾಯಶಃ ಈಕೆ ಇದೇ ವರ್ಷ ಮರಣ ಹೊಂದಿರಬೇಕು.

## ಬಲ್ಲಮಹಾದೇವಿ

ವೀರ ಪಾಂಡ್ಯದೇವನು ಮರಣ (ಕ್ರಿ.ಶ. ೧೨೭೫) ಹೊಂದಿದಾಗ ಆತನ ಮಗ ಇನ್ನೂ ಕಿರಿಯವನಾಗಿದ್ದ.

ಇದರಿಂದ ರಾಜಕುಮಾರ ಮತ್ತು ರಾಜ್ಯದ ಜವಾಬ್ದಾರಿ ಬಲ್ಲಮಹಾದೇವಿಯದಾಯಿತು. ಬಲ್ಲಮಹಾದೇವಿ ತನ್ನ ಅತ್ತೆ ಪಟ್ಟಮಹಾದೇವಿಯಿಂದಲೇ ಆಡಳಿತದ ಶಿಕ್ಷಣ ಪಡೆದಳು ಎಂದು ಮೇಲೆ ಹೇಳಿದೆ. ಇದರಿಂದಾಗಿ ಪತಿ ವೀರಪಾಂಡ್ಯ ದೇವನು ಮರಣ ಹೊಂದಿದಾಗ ಮಗ ನಾಗದೇವರಸನು ಅಪ್ರಾಪ್ತನಾಗಿದ್ದರೂ ಧೃತಿಗೆಡದೆ ರಾಜಕಾರ್ಯ ಸೂತ್ರ ಹಿಡಿಯಲು ಈಕೆ ಸಿದ್ಧವಾಗಿದ್ದಳು. ಕ್ರಿ.ಶ. ೧೨೭೫ ರಿಂದ ೧೨೯೦ ರವರೆಗೆ ತಾನೇ ರಾಜ್ಯಭಾರ ಮಾಡಿದಳು[೩೨] ಆನಂತರ ಮಗನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ೧೨೯೨ ರವರೆಗೆ ಜಂಟಿಯಾಗಿ ಆಳ್ವಿಕೆ ನಡೆಸಿದಳು. ನಂತರ ನಾಗದೇವರಸ ಸ್ವತಂತ್ರವಾಗಿ (ಕ್ರಿ.ಶ. ೧೩೦೦ರವರೆಗೆ) ರಾಜ್ಯವಾಳಿದ.[೩೩]

"ಶ್ರೀಮತು ಪಟ್ಟದ ಪಿರಿಯರಸಿ ಬಲ್ಲಮಹಾ ದೇವಿಯರು" ಎಂಬುದು ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಈಕೆ ಪ್ರಶಸ್ತಿ[೩೪] ಕೆಲವು ಶಾಸನಗಳಲ್ಲಿ 'ಪಾಂಡ್ಯ ಚಕ್ರವರ್ತಿ' ಎಂಬ ಉಲ್ಲೇಖವೂ ಇದೆ[೩೫] 'ಸ್ವಸ್ತಿ ಶ್ರೀಮತು ಶ್ರೀಮನ್ಮಾನಾಭರಣೇಶ್ವರ ದೇವರ ವಂಶಾನ್ವಯರುಂ ಪಶ್ಚಿಮ ಸಮುದ್ರಾಧಿಪತಿಯರುಂ ಶ್ರೀಮತು ಪಟ್ಟದ ಹಿರಿಯರಸಿ ಬಲ್ಲಮಹಾದೇವಿಯರು" ಎಂದು ಈಕೆಯ ಕೆಂಜೂರು ಶಾಸನ ತಿಳಿಸುತ್ತದೆ[೩೬] ಬಹಳ ತ್ರುಟಿತವಾಗಿರುವ ಪೆರ್ಣಂಕಿಲ ಶಾಸನದಲ್ಲಿ ಆಳುಪರಿಗಿದ್ದ ಎಲ್ಲ ಸಾರ್ವಭೌಮ ಸೂಚಕ ಪ್ರಶಸ್ತಿಗಳೂ ಈಕೆಗಿವೆ[೩೭].

ಮೂಡ ಅಲೆವೂರಿನ ಶಾಸನದಲ್ಲಿರುವ ಈಕೆಯ ಪ್ರಶಸ್ತಿ ಇಲ್ಲಿ ಉಲ್ಲೇಖಾರ್ಹ. "ಅನವರತ ಪರಮ ಕಲ್ಯಾಣಾಭ್ಯುದಯ ಸಹಸ್ರ (ಫಳ ಭೋಗ) ಭಾಗಿನಿ ದ್ವಿತೀಯ ಲಕ್ಷ್ಮೀ ಸಮಾನೆ....ಗಮನೆಯರುಂ.ಮದಗಜ(ಗಮ)ನೆಯರುಂ...ಪ್ರತ್ಯಕ್ಷ ಪಾರ್ವತಿಯರುಂ ಪತಿವ್ರತಾ ಅರುಂಧತಿಯರುಂ ಸೋಮ ಕುಲೋದ್ಭವರುಂ....ಕುಲ ಪ್ರಖ್ಯಾತೆಯರುಂ ಗೋತ್ರ ಪವಿತ್ರೆಯರುಂ ಬಂಧುಜನ ಚಿಂತಾಮಣಿಯರುಂ ಆಶ್ರಿತ ಜನ ಕಲ್ಪ ವೃಕ್ಷರುಂ ದಾನವಿನೋದಿಗಳುಂ ಸುವರ್ನ ದಾನ ಸೂಜೆಕಾಱರಯರುಂ ಮರೆಹೊಕ್ಕರ ಕಾವರುಂ ಶರಣಾಗತ ವಜ್ರ ಪಂಜರರುಮಪ್ಪ ಶ್ರೀ ಮಂಜುನಾಥ ದೇವರ ದಿವ್ಯ ಶ್ರೀ ಪಾದ ಪದ್ಮಾರಾಧಕೆಯರುಂ ಶ್ರೀ ಪರಬಳಸಾಧಕೆಯರುಮಪ್ಪ ಸ್ವಸ್ತಿ ಶ್ರೀಮತು ಪಟ್ಟದ ಪಿರಿಯರಸಿ ಬಲ್ಲಮಹಾದೇವಿಯರು"[೩೮] ಬಹಳ ಹಾಳಾಗಿರುವ ಕುದಿ ಗ್ರಾಮದ ಶಾಸನದಲ್ಲೂ ಸಹ ಈ ಪ್ರಶಸ್ತಿ ಪ್ರತಿಧ್ವನಿತವಾಗಿದೆ[೩೯] ಬೇರಾವುದೇ ಆಳುಪ ರಾಣಿಗೆ ಇಲ್ಲದ ಪ್ರಶಸ್ತಿ–ಪ್ರಶಂಸೆ ಇಲ್ಲಿದೆ. ಇಲ್ಲಿ ಹೊಗಳಿಕೆಯ ಅಂಶ ಸ್ವಲ್ಪ ಇರಬಹುದು. ಆದರೆ ಸಾಕಷ್ಟು ಸಾಧನೆಗೈದ ಅರ್ಹತೆ ಇಲ್ಲದಿದ್ದಲ್ಲಿ ಅಂದಿನ ಪುರುಷ ಸಮಾಜ ರಾಣಿಯಾದರೂ ಸ್ತ್ರೀಯೊರ್ವಳನ್ನು ಈ ರೀತಿಯ ಸಾಮಾಜಿಕ ಗೌರವಕ್ಕೆ ಪಾತ್ರಳೆಂದು ಗುರುತಿಸುತ್ತಿರಲಿಲ್ಲ. ಇದಕ್ಕೆ ಶಾಸನೋಕ್ತವಾಗಿಯೇ ಹಲವು ಉದಾಹರಣೆಗಳನ್ನು ಕೊಡಬಹುದು.

ಈಕೆ "ಮಾನಾಭರಣೇಶ್ವರ ದೇವರ ವಂಶಾನ್ವಯೆ" ಎಂಬ ಬಗ್ಗೆ ಸರಿಯಾದ ಅರ್ಥ ಮೂಡಿಲ್ಲ. ಈ ಬಗ್ಗೆ ಇರುವ ತರ್ಕಗಳನ್ನು[೪೦] ಒಂದೆಡೆಯಿಟ್ಟು ತುಳುನಾಡಿನ ಶಾಸನಗಳಲ್ಲಿ ದೊರೆಯುವ ಮಾಹಿತಿ ಆಧಾರದಲ್ಲಿ ಚಿಂತಿಸುವುದಾದರೆ ಈಕೆ ಬಲ್ಲವೆರ್ಗಡೆಯ ಮಗಳು ಇರಬಹುದು. ವೀರ ಪಾಂಡ್ಯದೇವನ (ಕ್ರಿ.ಶ. ೧೨೫೪ರ) ಶಾಸನವೊಂದರಲ್ಲಿ[೪೧] ಬಲ್ಲವೆರ್ಗಡೆಯ ಉಲ್ಲೇಖ ಇದೆ. ಆನಂತರ ಬಲ್ಲಮಹಾದೇವಿಯ ಶಾಸನಗಳಲ್ಲಿ ನರಸಿಂಗ ಹೆಗ್ಗಡೆಯ ಪ್ರಸ್ತಾಪ ವಿಶೇಷವಾಗಿದೆ.[೪೨] ಪ್ರಾಯಶಃ ಈ ನರಸಿಂಗ ಹೆಗ್ಗಡೆಯೇ ಬಲ್ಲವೆರ್ಗಡೆ. ಬಲ್ಲಮಹಾದೇವಿಯ ಹೆಸರಿನಲ್ಲಿರುವ ಪೂರ್ವ ಪದ 'ಬಲ್ಲ' ತುಳುನಾಡಿನ ಪೂರ್ವ ಭಾಗದಲ್ಲಿದ್ದ 'ಬಲ್ಲಹ' ಪಾಳೆಯಪಟ್ಟನ್ನು ಸೂಚಿಸುವುದಾಗಿರಬೇಕು. ೯ನೆಯ ಶತಮಾನದ ಬಂಟ್ರ ಶಾಸನದಲ್ಲಿ[೪೩] ಬಲ್ಲ ವೊಡೆಯರ ಉಲ್ಲೇಖ ಇದೆ. ಈ ಶಾಸನದಲ್ಲಿ ಮರ್ದಾಳದ (ಈಶ್ವರ) ದೇವರ ಮತ್ತು ಕುಕ್ಕೆ (ಸುಬ್ರಹ್ಮಣ್ಯ ಮತ್ತು ಕುಕ್ಕೆ ಲಿಂಗ) ಉಲ್ಲೇಖ ಇದೆ. ಪ್ರಾಯಶಃ ಇಲ್ಲಿಯ ಯಾವುದಾದರೂ ದೇವರಿಗೆ ಮಾನಾಭರಣೇಶ್ವರ ದೇವ ಎಂಬ ಹೆಸರಿತ್ತೇ ಎಂಬುದು ತಿಳಿಯುವುದಿಲ್ಲ. ಮುಂದಿನ ಶೋಧಗಳು ಈ ಬಗ್ಗೆ ಬೆಳಕು ಚೆಲ್ಲಬೇಕು.

ಈಕೆ ಪಶ್ಚಿಮ ಸಮುದ್ರಾಧಿಪತಿಯಾಗಿದ್ದಳು. ಅಂದರೆ ಆ ಕಾಲದಲ್ಲಿ ಸಮುದ್ರದ ಮೇಲೆ ನಡೆಯುತ್ತಿದ್ದ ಎಲ್ಲ ರೀತಿಯ ಕಾರ್ಯಚಟುವಟಿಕೆಗಳ ಮೇಲೂ ಈಕೆ ಹಿಡಿತ ಸಾಧಿಸಿದ್ದಳು. ಇದಕ್ಕೆ ಸಹಕಾರಿಯಾಗಿ ಇವಳಲ್ಲಿ ನೌಕಾ ಬಲ ಇತ್ತೇ ಎಂಬ ಪ್ರಶ್ನೆಗೆ ಉತ್ತರ ಸಾಧ್ಯವಿಲ್ಲ. ಒಂದು ರೀತಿಯ ಕಾವಲು ಪಡೆ ಇವಳಲ್ಲಿ ಇದ್ದಿರಬಹದು. ಯಾವುದೇ ರೀತಿಯ ಸಮಸ್ಯೆಯನ್ನೂ ಎದುರಿಸಬಲ್ಲ ಛಾತಿ ಇವಳಲ್ಲಿ ಇತ್ತು. ಆಳುಪರಿಗೆ ಸಮುದ್ರದ ಮೇಲಿನ ಹಿಡಿತ ಅನಾದಿ ಕಾಲದಿಂದಲೂ ಇತ್ತು. ಸಾಮ್ರಾಟರು ಯಾರೇ ಆಗಿರಲಿ ಆಳುಪರ ಈ ಶಕ್ತಿಗೆ ಕುತ್ತು ಬಂದಿರಲಿಲ್ಲ. ಹಾಗಾಗಿ ಅವರು ತಾವು ಸಮುದ್ರಾಧಿಪತಿ ಎಂದು ಕರೆದುಕೊಳ್ಳುವ ಅವಶ್ಯಕತೆ ಇರಲಿಲ್ಲ. ಆದರೆ ಬಲ್ಲ ಮಹಾದೇವಿಯ ಕಾಲಕ್ಕೆ ಪರಿಸ್ಥಿತಿ ಬದಲಾಗಿರಬೇಕು. ಇದು ತೀರ ಪ್ರದೇಶದಲ್ಲಿ ನಡೆಯುತ್ತಿದ್ದ ವ್ಯಾಪಾರ ಮತ್ತು ವಾಣಿಜ್ಯ ವ್ಯವಹಾರಗಳಿಗೆ ತೊಡಕನ್ನು ಉಂಟು ಮಾಡಿರಬೇಕು. ಇದರ ನಿವಾರಣೆಗಾಗಿ

ಬಲ್ಲಮಹಾದೇವಿ ಸಮುದ್ರದ ಮೇಲಿನ ಚಟುವಟಿಕೆಗಳ ಮೇಲೆ ನಿಗಾವಹಿಸಲು ತನಗಿದ್ದ ಅಧಿಕಾರವನ್ನು ಸ್ಪಷ್ಟಪಡಿಸಿದಳು ಎಂದು ಕಾಣುತ್ತದೆ.

## ಎದುರಾದ ಸಮಸ್ಯೆ

ತನ್ನ ಆಳ್ವಿಕೆಯ ಮಧ್ಯ ಕಾಲದಲ್ಲಿ ಬಲ್ಲಮಹಾದೇವಿ ಒಂದು ದೊಡ್ಡ ಸಮಸ್ಯೆಯನ್ನು ಎದುರಿಸಬೇಕಾಯಿತು. ತನ್ನ ಪತಿಯ ಸೋದರಿಯ ಮಗ ಬಂಕಿದೇವನು ಆವರೆವಿಗೂ ಒರ್ವ ಪ್ರಧಾನಿಯಾಗಿ ಕಾರ್ಯನಿರ್ವಹಿಸಿದ್ದವನು ತಾನೂ ರಾಜನಾಗಬೇಕೆಂಬ ಆಸೆಯಿಂದ ರಾಜ್ಯದ ಮೇಲೆ ತನ್ನ ಹಕ್ಕನ್ನು ಪ್ರತಿಪಾದಿಸಲು ಪ್ರಾರಂಭಿಸಿದನು[೪೪] ಅಷ್ಟರವರೆಗೂ ಮಕ್ಕಳ ಕಟ್ಟು ಅಂದರೆ ತಂದೆಯಿಂದ ಮಗನಿಗೆ ಅಧಿಕಾರ ಹಸ್ತಾಂತರ ನಿಯಮವನ್ನು ಪಾಲಿಸಿದ್ದ ಅಳುಪ ವಂಶಕ್ಕೆ ಬಂಕಿದೇವನ ಆಗ್ರಹ ಹೊಸ ತಲೆನೋವಾಯಿತು. ಸೋದರಿಯ ಮಗನಿಗೆ ಹಕ್ಕು ಇದೆ ಎಂಬುದು ಅನೂಚಾನವಾಗಿ ಆಳುಪ ವಂಶದಲ್ಲಿ ನಡೆದು ಬಂದ ಪದ್ಧತಿಯಲ್ಲಿ ಇಲ್ಲದಿದ್ದರೂ ಸಮಾಜದ ಹಲವು ವರ್ಗಗಳಲ್ಲಿ ಈ ಪದ್ಧತಿ ಇದ್ದುದು ಇಲ್ಲೂ ಪ್ರಭಾವ ಬೀರಿತ್ತು[೪೫] ಅನವಶ್ಯಕ ಬಲ ಪ್ರಯೋಗಕ್ಕೆ ಎಡೆಕೊಡದೆ ಅತ್ಯಂತ ಸಹನೆ ಮತ್ತು ಜಾಣ್ಮೆಯಿಂದ ಬಲ್ಲಮಹಾದೇವಿ ಈ ಸಮಸ್ಯೆಯನ್ನು ಬಗೆಹರಿಸಿದಳು. ರಾಜ್ಯವನ್ನು ಎರಡು ಭಾಗ ಮಾಡಿ ದಕ್ಷಿಣದ ಮಂಗಳೂರು ಭಾಗವನ್ನು ಬಂಕಿದೇವನಿಗೂ ಉತ್ತರದ ಬಾರಕೂರು ಭಾಗವನ್ನು ತನ್ನ ಮಗ ನಾಗದೇವನಿಗೂ ಹಂಚಿ ರಾಜ್ಯದ ಶಾಂತಿಯನ್ನು ಕಾಪಾಡಿದಳು[೪೬] ಹೀಗೆ ಸಕಾಲದಲ್ಲಿ ಕ್ಲಿಷ್ಟ ಮತ್ತು ಸೂಕ್ಷ್ಮವಾಗಿದ್ದ ಸಮಸ್ಯೆಯನ್ನು ಬಗೆಹರಿಸುವ ಮೂಲಕ ತಾನೊರ್ವ ಚತುರಮತಿ ಮುತ್ಸದ್ದಿ ಎಂಬುದನ್ನು ತೋರಿಸಿಕೊಟ್ಟಳು; ಅಷ್ಟೇ ಅಲ್ಲ ಅರಮನೆಯೊಳಗಿನ ಕಲಹ ಹೊರಗೆ ಹೋಗದಂತೆ ನೋಡಿಕೊಂಡಳು. ಇದು ಅವಳ ಧೀಮಂತ ವ್ಯಕ್ತಿತ್ವವನ್ನು ಸಾರುತ್ತದೆ.

ಸ್ಥಳೀಯ ಆಚಾರ, ವಿಚಾರ, ನಡಾವಳಿ, ಜವಾಬ್ದಾರಿ ಮತ್ತು ಹಕ್ಕುಗಳನ್ನು ಸರಿಯಾಗಿ ಅರ್ಥೈಸಿಕೊಂಡು ಅವಕ್ಕೆ ಸೂಕ್ತವಾಗಿ ಮತ್ತು ಸಮಯಕ್ಕೆ ತಕ್ಕಂತೆ ಸ್ಪಂದಿಸುವ ಕಲೆ ಸ್ಥಳೀಯರಿಗೆ ಹೆಚ್ಚು ಸಿದ್ಧಿಸಿರುತ್ತದೆಯೇ ಹೊರತು ಅನ್ಯರಿಗೆ ಅಲ್ಲ. ಬಲ್ಲಮಹಾದೇವಿ 'ಅಳಿಯ ಕಟ್ಟು' ಮತ್ತು 'ಮಕ್ಕಳ ಕಟ್ಟು' ಎರಡನ್ನೂ ರಾಜಕೀಯವಾಗಿ ತೂಗಿ ನೋಡಿ ದೀರ್ಘವಾಗಿ ಬೆಳೆದಿದ್ದ ಆಳುಪ ವಂಶದ ಘನತೆ ಗೌರಗಳಿಗೆ ಕುಂದು ಬಾರದ ರೀತಿಯಲ್ಲಿ, ಸಮಾಜದಲ್ಲಿ ಸಂಘರ್ಷ ಮನೋಭಾವ ಮೂಡದ ರೀತಿಯಲ್ಲಿ, ಶಾಂತಿ ಮತ್ತು ಸೌಹಾರ್ದತೆಯನ್ನು ಕಾಪಾಡುವ ಸಲುವಾಗಿ ದಿಟ್ಟ ನಿರ್ಧಾರ ಕೈಗೊಂಡಳು. ಇದು ಆಕೆಯಲ್ಲಿ ರಕ್ತಗತವಾಗಿದ್ದ ಗುಣದ ಸಂಕೇತ. ಈ ನಿಟ್ಟಿನಲ್ಲಿ ಯೋಚಿಸಿದರೆ ಬಲ್ಲಮಹಾದೇವಿ ತುಳುನಾಡಿನವಳೇ ಆಗಿರಬೇಕು ಎಂಬ ಅನುಮಾನ ಬಲವತ್ತರವಾಗುತ್ತದೆ.

'ಮಕ್ಕಳ ಕಟ್ಟು' ಮತ್ತು 'ಅಳಿಯ ಕಟ್ಟು' ಈ ಎರಡೂ ಪದ್ಧತಿಗಳು ಕರಾವಳಿಯಲ್ಲಿ ಪ್ರಾಯಶಃ ಕ್ರಿಸ್ತ ವರ್ಷದ ಆರಂಭದಿಂದಲೇ ಬೆಳೆದುಬಂದ ಪದ್ಧತಿಗಳು. 'ಮಕ್ಕಳ ಕಟ್ಟು' ಆಚರಣೆ ಇರುವ ವರ್ಗಗಳಲ್ಲಿ ಆಸ್ತಿ ಮತ್ತು ಅಧಿಕಾರದ ಹಕ್ಕುಗಳು ತಂದೆಯಿಂದ ಮಗನಿಗೆ ಅನೂಚಾನವಾಗಿ ಬರುತ್ತಿತ್ತು. ಅಳಿಯ ಕಟ್ಟಿನಲ್ಲಿ ಈ ಹಕ್ಕು ಸೋದರಳಿಯ ಅಂದರೆ ಮಗಳ ಮಗನಿಗೆ ಹೋಗುತ್ತಿತ್ತು. ತುಳುನಾಡಿನಲ್ಲಿ ಈಗಲೂ ಈ ಪದ್ಧತಿ ಕೆಲವು ವರ್ಗಗಳಲ್ಲಿ ರೂಢಿಯಲ್ಲಿದೆ. ಆದರೆ ಪ್ರಾಚೀನ ರಾಜ ಮನೆತನವಾದ ಆಳುಪರಲ್ಲಿ ಮಕ್ಕಳ ಕಟ್ಟು ರೂಢಿಯಲ್ಲಿತ್ತು. ಬಂಕಿದೇವನ ಬೇಡಿಕೆಯಿಂದಾಗಿ ಅಳಿಯ ಕಟ್ಟಿನ ಹಕ್ಕಿಗೂ ಒಮ್ಮೆ ಮನ್ನಣೆ ದೊರೆಯುವಂತಾಯಿತು. ಆದರೆ ಅಳಿಯ ಬಂಕಿದೇವನ ನಂತರ ಪಟ್ಟಕ್ಕೆ ಬಂದುದು ಆತನ ಮಗ ಸೋಯಿದೇವ[೪೭] ಈ ದೃಷ್ಟಿಯಲ್ಲಿ ಬಲ್ಲಮಹಾದೇವಿಯ ಕ್ರಮವನ್ನು ಅವಲೋಕಿಸಿದರೆ ಆಕೆ ಮಾಡಿದುದು ಕೇವಲ ಆಸ್ತಿ (ರಾಜ್ಯ) ವಿಭಜನೆ. ಇದರಿಂದ ರಾಜ್ಯದಲ್ಲಿ ಶಾಂತಿ ಮತ್ತು ಸೌಹಾರ್ದತೆಗಳನ್ನು ಕಾಪಾಡಿಕೊಂಡು ಬರಲು ಆಕೆಗೆ ಸಾಧ್ಯವಾಯಿತು. ಪ್ರಾಯಶಃ ಈಕೆ ಕ್ರಿ.ಶ. ೧೨೯೨ರಲ್ಲಿ ಸ್ವರ್ಗಸ್ಥಳಾದಳು. ಆಳುಪ ರಾಜ್ಯ ಕಮರುವುದಕ್ಕೆ ಮುನ್ನ ಬೆಳಗಿದ ತುಳುನಾಡ ಜ್ಯೋತಿ ಬಲ್ಲಮಹಾದೇವಿ.

## ವೀರ ಚಿಕ್ಕಾಯಿತಾಯಿ

ಶಾಸನಗಳು ಈಕೆಯನ್ನು ವೀರ ಚಿಕ್ಕಾಯಿತಾಯಿ ಮತ್ತು ವೀರ ಕಿಕ್ಕಾಯಿ ತಾಯಿ ಎಂದು ಹೆಸರಿಸಿವೆ[೪೮] ಈಕೆ ಆಳುಪ ರಾಜಕುಮಾರಿ ಮತ್ತು ಹೊಯ್ಸಳ ಚಕ್ರವರ್ತಿ ಮೂರನೆಯ ಬಲ್ಲಾಳನ ಪಟ್ಟದ ಪಿರಿಯರಸಿ[೪೯] ಹೊಯ್ಸಳ ಚಕ್ರವರ್ತಿಯು ಆಳುಪ ಸೋಯಿದೇವನನ್ನು ಒಮ್ಮೆ (ಕ್ರಿ.ಶ. ೧೩೧೮–೧೯ರಲ್ಲಿ) ಯುದ್ಧದಲ್ಲಿ ಸೋಲಿಸಿದ್ದ[೫೦] ಆನಂತರ ಕ್ರಿ.ಶ. ೧೩೩೩ರಲ್ಲಿ ತುಳುನಾಡಿನಮೇಲೆ ಧಾಳಿ ಮಾಡಿದ. ಪ್ರಾಯಶಃ ಈ ಸಂದರ್ಭದಲ್ಲಿ ಸೋಯಿದೇವ ಯುದ್ಧ ಮಾಡುವ ಬದಲು ಸ್ನೇಹ ಸಂಪಾದಿಸುವ ಸಲುವಾಗಿ ತನ್ನ ತಂಗಿಯಾದ ಚಿಕ್ಕಾಯಿ ತಾಯಿಯನ್ನು ವೀರ ಬಲ್ಲಾಳನಿಗೆ ಮದುವೆ ಮಾಡಿಕೊಟ್ಟ. ಇದು ಆಳುಪ–ಹೊಯ್ಸಳ ಮಧುರ ಸಂಬಂಧಕ್ಕೆ ದಾರಿ ಮಾಡಿಕೊಟ್ಟಿತು. ಆದರೆ ವೀರ ಬಲ್ಲಾಳ ಮಾತ್ರ ಈ ಕರಾವಳಿ ಪ್ರದೇಶವನ್ನು ತನ್ನ ವಶ ಇರಿಸಿಕೊಳ್ಳುವ ತೀರ್ಮಾನ ಮಾಡಿದ. ತನ್ನ ಪಟ್ಟದ ರಾಣಿ ಚಿಕ್ಕಾಯಿ ತಾಯಿಯನ್ನೇ ಈ ಭಾಗದ ಆಡಳಿತಾಧಿಕಾರಿಯಾಗಿ ನೇಮಿಸಿದ. ಬಾರಕೂರು ಹೊಯ್ಸಳರ

ಕರಾವಳಿ ಭಾಗದ ರಾಜಧಾನಿ ಆಯಿತು[೫೧] ಆಳುಪರು ಅಧಿಕಾರ ಕಳೆದುಕೊಳ್ಳದಿದ್ದರೂ ಅವಸಾನದ ಅಂಚಿಗೆ ದೂಡಲ್ಪಟ್ಟರು. ರಾಜಕೀಯವಾಗಿ ಸಂದಿಗ್ಧ ಮತ್ತು ಮಹತ್ತಾದ ಕಾಲವೊಂದರಲ್ಲಿ ಆಡಳಿತದ ಚುಕ್ಕಾಣಿ ಹಿಡಿಯುವ ಜವಾಬ್ದಾರಿ ಚಿಕ್ಕಾಯಿ ತಾಯಿಯದಾಯಿತು. ಪ್ರಸ್ತುತ ಲಭ್ಯವಿರುವ ಮಾಹಿತಿಯ ಪ್ರಕಾರ ಕ್ರಿ.ಶ. ೧೩೩೩ರಿಂದ ೧೩೪೮ರ ವರೆಗೆ ಈ ಕಾರ್ಯವನ್ನು ಈಕೆ ಯಶಸ್ವಿಯಾಗಿ ನಿಭಾಯಿಸಿದಳು.

## ಎದುರಾದ ಸಂದಿಗ್ಧತೆ

ಚಕ್ರವರ್ತಿಯ ಕೈ ಹಿಡಿದು ಆನಂತರ ತುಳು ರಾಜ್ಯಕ್ಕೆ ಅಧಿಪತಿಯಾಗಿ ಬಂದಾಗ ಚಿಕ್ಕಾಯಿ ತಾಯಿ ಹಲವು ಸಂದಿಗ್ಧತೆಗಳನ್ನು ಎದುರಿಸಬೇಕಾಯಿತು. ಆಳುಪ ರಾಜ್ಯ ತನ್ನ ತವರು; ಅದರ ಮೇಲೆ ಹೊಯ್ಸಳರ ಆಧಿಪತ್ಯವನ್ನು ಸ್ಥಾಪಿಸಿದ್ದು ತನ್ನ ಪತಿ ವೀರಬಲ್ಲಾಳ, ದೈವ ಲೀಲೆ ಅದರ ಆಡಳಿತದ ಜವಾಬ್ದಾರಿ ಚಿಕ್ಕಾಯಿತಾಯಿ ಹೆಗಲಿಗೆ ಬಂದುದು. ಈ ಜವಾಬ್ದಾರಿ ಈಕೆಗೆ ಮದುವೆ ಆದ ಕೂಡಲೇ ಬಂದುದರ ಸಾಧ್ಯತೆ ಬಹಳ ಕಡಿಮೆ. ಆದರೆ ಕೆ.ವಿ. ರಮೇಶ ಅವರ ಪ್ರಕಾರ[೫೨] ಮೇಲೆ ಹೇಳಿದಂತೆ ಆಳುಪ ಸೋಯಿದೇವ ಈ ವಿವಾಹವನ್ನು ೧೩೩೩ರ ಆಸುಪಾಸಿನಲ್ಲಿ ಜರುಗಿಸಿದ. ಈ ಬಗ್ಗೆ ಸ್ವಲ್ಪ ಚರ್ಚೆ ಅಗತ್ಯ ಎನಿಸುತ್ತದೆ.

ಹೊಯ್ಸಳ ಮೂರನೆಯ ಬಲ್ಲಾಳನು ಕ್ರಿ.ಶ. ೧೩೧೮–೧೯ರಲ್ಲಿ ಆಳುಪ ಸೋಯಿದೇವನ ರಾಜ್ಯದ ಮೇಲೆ ಧಾಳಿ ನಡೆಸಿ ಜಯಶೀಲನಾಗಿದ್ದ. ಇದರಿಂದ ತನ್ನ ರಾಜ್ಯವನ್ನೇನೂ ಕಳೆದುಕೊಳ್ಳದಿದ್ದರೂ ಪ್ರಬಲ ಶಕ್ತಿಯೊಂದರ ವಿರುದ್ಧ ಹಗೆತನ ಸಾಧಿಸುವ ಶಕ್ತಿ ಸೋಯಿದೇವನಿಗಿರಲಿಲ್ಲ ಎಂದು ಕಾಣುತ್ತದೆ. ಪರಿಸ್ಥಿತಿಯನ್ನು ನಿಭಾಯಿಸುವ ಸಲುವಾಗಿ ಈತ ಅನುಸರಿಸಿದ ಮಾರ್ಗ ವೈವಾಹಿಕ ಸಂಬಂಧ ಕಲ್ಪಿಸುವುದು. ಈ ರೀತಿಯ ವೈವಾಹಿಕ ಸಂಬಂಧಗಳನ್ನು ಆಳುಪರು ಚಕ್ರವರ್ತಿ ವಂಶಗಳೊಂದಿಗೆ ಹೊಂದಿದ್ದನ್ನು ಮೇಲೆ ನೋಡಿದ್ದೇವೆ. ಸೋಯಿದೇವ ಅನುಸರಿಸಿದ ನೀತಿ ಅದೇ ಆಗಿದೆ. ಪ್ರಾಯಶಃ ಈ ವಿವಾಹ ಸಂಬಂಧ ಕ್ರಿ.ಶ. ೧೩೧೯–೨೦ರ ಆಸುಪಾಸಿನಲ್ಲಿ ನೆರವೇರಿರಬೇಕು. ಇದರ ರಕ್ಷೆಯಲ್ಲಿ ಸ್ವಲ್ಪ ಕಾಲ ಸೋಯಿದೇವ ನಿಶ್ಚಿಂತನಾಗಿದ್ದ. ಆದರೆ ಕ್ರಿ.ಶ. ೧೩೩೦ರ ವೇಳೆಗೆ ಈ ಸಂಬಂಧದಲ್ಲಿ ಬಿರುಕು ಕಾಣಿಸಿಕೊಂಡಿದೆ. ಇದು ಕರಾವಳಿಯ ಮೇಲೆ ನೇರ ಆಳ್ವಿಕೆ ಸ್ಥಾಪಿಸುವಂತೆ ಹೊಯ್ಸಳ ವೀರಬಲ್ಲಾಳನನ್ನು ಪ್ರೇರೇಪಿಸಿದೆ. ಇದರ ಕುರುಹಾಗಿ ಕರಾವಳಿಯಲ್ಲಿ ಹೊಯ್ಸಳ ಶಾಸನಗಳು ಕ್ರಿ.ಶ. ೧೩೩೩ ರಿಂದ ಕಾಣಿಸಿಕೊಳ್ಳಲು ಪ್ರಾರಂಭಿಸಿವೆ. ಅಷ್ಟೇ ಅಲ್ಲ ಆಳುಪ ಪ್ರಶಸ್ತಿಗಳಾದ 'ಪಾಂಡ್ಯ ಚಕ್ರವರ್ತಿ', 'ಅರಿರಾಯ ಬಸವ ಶಂಕರ' ಮತ್ತು 'ರಾಯ ಗಜಾಂಕುಶ'–ಇವು ಅಂದಿನಿಂದ ಹೊಯ್ಸಳರಿಗೂ ಲಭ್ಯವಾದವು[೫೩] ಆ ವೇಳೆಗೆ ಸುಮಾರು ಒಂದು ದಶಕದ ಕಾಲ ವೈವಾಹಿಕ ಜೀವನ ನಡೆಸಿದ್ದ ಚಿಕ್ಕಾಯಿತಾಯಿ ಆಡಳಿತದ ಜವಾಬ್ದಾರಿ ಹೊರಲು ಸಿದ್ಧವಾಗಿದ್ದಳು. ಹೊಯ್ಸಳ ವೀರಬಲ್ಲಾಳನಿಗೂ ತನ್ನ ರಾಣಿಯ ಶಕ್ತಿ ಮತ್ತು ನಿಷ್ಠೆಯ ಬಗ್ಗೆ ಅಪಾರವಾದ ನಂಬಿಕೆ ಇದ್ದ ಕಾರಣ ಅವಳನ್ನ ಕರಾವಳಿಯಂತಹ ಸೂಕ್ಷ್ಮ ಪ್ರದೇಶಕ್ಕೆ ಅಧಿಪತಿ ಆಗಿ ನೇಮಿಸಿದ.

## ಡಿರೆಟ್ಟನ ಆಕ್ಷೇಪಣೆ

ಹೊಯ್ಸಳ ಇತಿಹಾಸವನ್ನು ರಚಿಸಿರುವ ಬ್ರಿಟಿಶ್ ಇತಿಹಾಸಕಾರರ ಡಂಕನ್ ಎಂ. ಡಿರೆಟ್ ಚಿಕ್ಕಾಯಿ ತಾಯಿಯ ಮೇಲೆ ಒಂದು ಆರೋಪ ಹೊರೆಸಿದ್ದಾನೆ. ಹೊಯ್ಸಳ ವೀರ ಬಲ್ಲಾಳ ಈಕೆಯ ಹಲವು ಪತಿಗಳಲ್ಲಿ ಒಬ್ಬನಿರಬಹುದು ಎಂಬುದು ಈತನ ಆರೋಪ[೫೪] ಇದನ್ನು ಅಳಿಯ ಸಂತಾನ ಕಟ್ಟಿನ ಆಧಾರದಲ್ಲಿ ಮಾಡಿದ್ದಾನೆ. ಈ ಆರೋಪದಲ್ಲಿ ಹುರುಳಿಲ್ಲ ಎಂಬುದನ್ನು ಕೆ.ವಿ. ರಮೇಶ ಸಿದ್ಧಪಡಿಸಿದ್ದಾರೆ[೫೫].

ಚಿಕ್ಕಾಯಿತಾಯಿ ಬಾರಕೂರಿಗೆ ಆಡಳಿತದ ಜವಾಬ್ದಾರಿ ಹೊತ್ತು ಬರುವ ವೇಳೆಗೆ ಮಗ ಕುಲಶೇಖರನಿಗೆ ಜನ್ಮ ನೀಡಿದ್ದಳು. ಈತ ತನ್ನ ಕೊನೆಗಾಲದವರೆಗೆ ತಾಯಿಯ ಜೊತೆಯಲ್ಲಿದ್ದ. ಚಿಕ್ಕಾಯಿತಾಯಿ ಇಲ್ಲಿಗೆ ಬಂದ ಕೆಲವೇ ವರ್ಷಗಳಲ್ಲಿ ಪ್ರಬಲವಾದೊಂದು ಹೊಸ ರಾಜ್ಯ ವೀರ ಬಲ್ಲಾಳನ ಆಶೀರ್ವಾದದೊಂದಿಗೆ ಹುಟ್ಟಿದ್ದನ್ನು (ಕ್ರಿ.ಶ. ೧೩೩೬ ರಲ್ಲಿ) ಕಂಡಳು. ಕೆಲವೇ ವರ್ಷಗಳಲ್ಲಿ ಇದರ ಅಧಿಕಾರ ಇಡೀ ಕರಾವಳಿಯನ್ನು ಆವರಿಸಿತು. ಮಂಗಳೂರು ಮತ್ತು ಬಾರಕೂರು ರಾಜ್ಯಗಳೆಂಬ ಎರಡು ಆಡಳಿತ ಭಾಗಗಳು ಇಲ್ಲಿ ಹುಟ್ಟಿಕೊಂಡವು. ಹೊಸ ರಾಜಕೀಯ ಪರಿಸ್ಥಿತಿಗೆ ಚಿಕ್ಕಾಯಿ ತಾಯಿ ಬಲು ಬೇಗ ಹೊಂದಿಕೊಂಡಳು. ಆದರೆ ದುರ್ವಿಧಿ ತನ್ನ ಗಂಡನನ್ನು ಕಳೆದುಕೊಳ್ಳುವಂತೆ ಮಾಡಿತು. ಹೊಯ್ಸಳ ವೀರಬಲ್ಲಾಳ ಕ್ರಿ.ಶ. ೧೩೪೨ರಲ್ಲಿ ನಡೆದ ಮಧುರೆಯ ಯುದ್ಧದಲ್ಲಿ ಮೋಸದಿಂದ ಕೊಲೆಯಾದ[೫೬] ಮಗನ ರಕ್ಷಣೆ ಮತ್ತು ನಷ್ಟವನ್ನು ಸಾವರಿಸಿಕೊಂಡು ಕ್ರಿ.ಶ. ೧೩೪೮ರ ವರೆಗೆ ರಾಜ್ಯವಾಳಿದಳು. ಕ್ರಿ.ಶ. ೧೩೪೪ ರಲ್ಲಿ ಮಗ ಕುಲಶೇಖರನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ ರಾಜ್ಯವನ್ನು ಜಂಟಿಯಾಗಿ ಆಳಿದಳು. ಕೆ.ವಿ. ರಮೇಶ ಅವರ ಪ್ರಾಕಾರ ಪ್ರಾಯಶಃ ಈಕೆ ಕ್ರಿ.ಶ. ೧೩೫೦ರಲ್ಲಿ ಮರಣ ಹೊಂದಿದಳು ಮತ್ತು ತನ್ನ ತಾಯಿ ಗತಿಸಿದ ನಂತರ ಕುಲಶೇಖರ ಹೆಚ್ಚು ಕಾಲ ರಾಜ್ಯವಾಳಲಿಲ್ಲ[೫೭] ಘಟ್ಟದ ಮೇಲಣ ಸ್ಥಳಗಳಲ್ಲಿ ಹೊಯ್ಸಳ ಇತಿಹಾಸ ವೀರಬಲ್ಲಾಳನ ಮರಣದೊಂದಿಗೆ

ಮುಕ್ತಾಯಗೊಂಡರೆ ಕರಾವಳಿಯಲ್ಲಿ ಅದು ಕುಂಟುತ್ತಾ ಸಾಗಿದ್ದು ಕ್ರಿ.ಶ. ೧೩೫೦ರ ವೇಳೆಗೆ ಕೊನೆಯುಸಿರೆಳೆಯಿತು.

## ವಿಚಕ್ಷಣ ಮನೋವೃತ್ತಿ

ಹಲವು ಸಾಧನೆಗಳ ಹಿನ್ನೆಲೆಯ ವಂಶದಿಂದ ಬಂದ ಚಿಕ್ಕಾಯಿ ತಾಯಿ ಚತುರಮತಿ ರಾಜಕುವರಿಯಾಗಿ, ಪ್ರೀತಿಯ ಪಟ್ಟದರಸಿಯಾಗಿ, ರಾಜನೀತಿಜ್ಞೆಯಾಗಿ ಮತ್ತು ರಾಜ ಮಾತೆಯಾಗಿ ಮೆರೆದಿದ್ದಾಳೆ. ಆಡಳಿತದ ಜವಾಬ್ದಾರಿ ಹೊತ್ತು ಕರಾವಳಿಗೆ ಬಂದಾಗ ಆಕೆಯ ಮಗ ಇನ್ನೂ ಬಾಲಕ. ಈತನ ಲಾಲನೆ, ಪಾಲನೆ ಮತ್ತು ವಿದ್ಯಾಭ್ಯಾಸ ಹೇಗಾಯಿತು ಎಂಬುದರ ಬಗ್ಗೆ ಮಾಹಿತಿ ಇಲ್ಲದಿದ್ದರೂ ರಾಣಿ ಈ ಬಗ್ಗೆ ಸೂಕ್ತವಾದ ಏರ್ಪಾಟು ಮಾಡಿದ್ದಿರಬೇಕು. ಬಾರಕೂರಿನಲ್ಲಿ ಹೊಯ್ಸಳ ಸೈನಿಕ ನೆಲೆಯನ್ನು ಸ್ಥಾಪಿಸಿ ಅದರ ಉಸ್ತುವಾರಿಯನ್ನು ವೀರಬಲ್ಲಾಳನೇ ನೋಡಿಕೊಂಡಿದ್ದುದು[೫೮] ಚಿಕ್ಕಾಯಿತಾಯಿಗೆ ಹೆಚ್ಚು ಶಕ್ತಿ ನೀಡಿತ್ತು. ಈಕೆ ಬಹಳ ಎಚ್ಚರಿಕೆಯಿಂದ ಹೊಯ್ಸಳ–ಆಳುಪ ಸಂಬಂಧವನ್ನು ಕಾಯ್ದುಕೊಂಡಳು. ಎರಡೂ ವಂಶಗಳು ಇಲ್ಲಿ ತಮ್ಮ ಗೌರವಯುತ ಸ್ವತಂತ್ರ ಸ್ಥಾನ–ಮಾನಗಳನ್ನು ರಕ್ಷಿಸಿಕೊಂಡು ಬಾಳುವಂತೆ ನೋಡಿಕೊಂಡಳು. ಇದು ಅವರ ಶಾಸನಗಳಿಂದ ವ್ಯಕ್ತವಾಗುತ್ತದೆ[೫೯] ಈ ನಿಟ್ಟಿನಲ್ಲಿ ಚಿಕ್ಕಾಯಿತಾಯಿ ಕೈಗೊಂಡ ಒಂದು ನಿರ್ಧಾರ ಬಹಳ ಮುಖ್ಯವಾದುದು. ಈ ವಿಷಯವನ್ನು ತಿಳಿಸುವ ಶಿಲಾ ಶಾಸನವೊಂದು ಕುಂದಾಪುರ ತಾಲ್ಲೂಕಿನ ಬಿಜೂರು ಗ್ರಾಮದಲ್ಲಿ ದೊರೆತಿದೆ.[೬೦]

ಇದೊಂದು ಹೊಸ ಶಾಸನ. ಇತ್ತೀಚೆಗೆ ನನ್ನ ಅನ್ವೇಷಣಾ ಕಾರ್ಯ ಸಮಯದಲ್ಲಿ ದೊರೆತುದು[೬೧]. ಇದರ ಕಾಲ ಕ್ರಿ.ಶ. ೧೩೩೫ ಡಿಸೆಂಬರ್ ೧೦ ಆದಿವಾರ. ಇದರ ಲಿಪಿ ಮತ್ತು ಭಾಷೆ ಕನ್ನಡ. ಈ ಶಾಸನ "ಶ್ರೀ ಮತ್ಪಾಂಡ್ಯ ಚಕ್ರವರ್ತಿ ಅರಿರಾಯ ಬಸವ ಸಂಕರ ರಾಯಗಜಾಂಕುಸ ಶ್ರೀಮತು ಪ್ರ(ತಾಪ ಚಕ್ರವರ್ತಿ) ಹೊಯಿಸಣ ಬೀರ ಬಲ್ಲಾಳ ದೇವರ್ಸ(ರ) ಪಟ್ಟದ ಪಿರಿಯರಸಿ ಚಿಕ್ಕಾಯಿ ತಾಯಿಗಳ ಶ್ರೀ ಪಾದ ಸಂನ್ನಿಧಿಯಲು[೬೨] ಎಂದು ನೇರವಾಗಿ ಚಿಕ್ಕಾಯಿ ತಾಯಿಯ ಆಳ್ವಿಕೆಯನ್ನು ಉಲ್ಲೇಖಿಸಿದೆ. ಈಕೆಯ ಆಸ್ಥಾನದಲ್ಲಿ ಮಹಾ ಪ್ರಧಾನ ವಯಿಜಪ್ಪ ದಂಣಾಯಕ, ಅಜ್ಜಂಣ ಸಹಾಣಿ, ಸಮಸ್ತ ಪ್ರಧಾನರು, ಎರಡು ಕೋಲ ಬಳಿಯವರು, ಬಹತ್ತರ ನಿಯೋಗಿಗಳು ಮುಂತಾಗಿ[೬೩] ನೆರೆದಿದ್ದ ಸಮಸ್ತರ ಸಮ್ಮುಖದಲ್ಲಿ "ವೀರ ಬಸವಿ ದೆವರ್ಸರ ರಾಣಿವಾಸ (ಹೆಸರು ನಷ್ಟವಾಗಿದೆ) ದೇವಿಯರ ಕುವಾರ ಬೆಮಕೋವ ದೇವರಸರಿಗೆ" ೧೨೦ ಮುಡಿ ಭೂಮಿಯನ್ನು ಧಾರೆ ಯೆರೆದು ಕೊಟ್ಟಳು[೬೪]. ಇದರ ಉತ್ಪತ್ತಿಯಲ್ಲಿ ವರ್ಷಂಪ್ರತಿ ಆರು (೬) ಗದ್ಯಾಣ ಹೊಂನನ್ನು ಕೋಟೀಸ್ವರ ದೇವರ ನಂದಾ ಬೆಳಕಿಗೆ ಕೊಡಬೇಕೆಂದು ಕಟ್ಟು ಮಾಡಲಾಯಿತು[೬೫]. ಈ ಭೂ ದಾನವನ್ನು 'ಸರ್ವಮಾಂನ್ಯ' (ಸಂಪೂರ್ಣ ತೆರಿಗೆ ರಹಿತ) ಎಂದು ಘೋಷಿಸಿದಳು[೬೬].

ಇಲ್ಲಿ ಗಮನಿಸಬೇಕಾದ ಒಂದು ಮುಖ್ಯ ಅಂಶವೆಂದರೆ– ವೀರ ಬಸವಿ ದೇವರಸ, ಆತನ ರಾಣಿ ಮತ್ತು ಮಗ ಬೆಂಕೋವ ದೇವರ್ಸನ ಪ್ರಸ್ತಾಪ ಮತ್ತು ಚಿಕ್ಕಾಯಿ ತಾಯಿ ಬೆಂಕೋವ ದೇವರಸನಿಗೆ ಮಾಡಿದ ಭೂದಾನ. ಕ್ರಿ.ಶ. ೧೩೧೮–೧೯ರಲ್ಲಿ ನಡೆದ ಹೊಯ್ಸಳ–ಆಳುಪ ಯುದ್ಧದಲ್ಲಿ ಆಳುಪ ಅಧಿಕಾರಿ ಚಂದಾವರದ ವೀರ ಬಸವಿ ದೇವರಸನು ಹೊಯ್ಸಳ ವೀರ ಬಲ್ಲಾಳನ ವಿರುದ್ಧ ಯುದ್ಧ ಮಾಡಿದ್ದನು[೬೭]. ಬಿಜೂರಿನ ಶಾಸನ ಕಾಲಕ್ಕೆ ಈತ ಮರಣ ಹೊಂದಿದ್ದ ಎಂದು ಕಾಣುತ್ತದೆ. ಅಲ್ಲದೆ ಈತನ ರಾಣಿ ಮತ್ತು ಮಗ ಚಂದಾವರದಲ್ಲಿ ತಮ್ಮ ಅಸ್ತಿತ್ವ ಕಳೆದುಕೊಂಡಿದ್ದರೆಂದೂ ತೋರುತ್ತದೆ. ಈ ಭಾಗದ ಅಧಿಕಾರ ಹೊಯ್ಸಳರ ಪಾಲಾದಾಗ ಬೆಂಕೋವ ದೇವ ಮತ್ತು ಆತನ ತಾಯಿ ಚಿಕ್ಕಾಯಿ ತಾಯಿಗೆ ಶರಣಾಗಿ ಆಶ್ರಯ ಬೇಡಿರಬೇಕು. ಹೊಯ್ಸಳ ರಾಣಿ ತನ್ನ ಪತಿಯ ಹಳೆಯ ಹೆಗಯನ್ನು ಮನ್ನಿಸಿ ಅವನ ಸಂಸಾರಕ್ಕೆ ಆಶ್ರಯ ಕೊಟ್ಟು ತನ್ನ ಉದಾತ್ತ ಗುಣವನ್ನು ಪ್ರಕಟಪಡಿಸಿದಳು.

ಚಿಕ್ಕಾಯಿತಾಯಿ ಔದಾರ್ಯದ ಗಣಿಯಾಗಿದ್ದಳು ಎಂಬುದು ಅವಳ ಶಾಸನಗಳಿಂದ ತಿಳಿದುಬರುತ್ತದೆ[೬೮]. ಇಲ್ಲಿಯವರೆಗೆ ದೊರೆತಿರುವ ಅವಳ ಎಲ್ಲ ಶಾಸನಗಳೂ ದಾನ ಶಾಸನಗಳೇ ಆಗಿವೆ. ಬದಲಾದ ಪರಿಸ್ಥಿತಿಗೆ ಹೊಂದಿಕೊಂಡು ಅವಳು ನಡೆಸುತ್ತಿದ್ದ ರಾಜ ಕಾರ್ಯಗಳು ಅತ್ಯಂತ ಸಮರ್ಥ, ಸಕಾಲಿಕ ಮತ್ತು ಶ್ಲಾಘನೀಯವಾದುವು. ಇದಕ್ಕೆ ಮೇಲಿನದಲ್ಲದೆ ಇನ್ನೂ ಒಂದು ಉದಾಹರಣೆಯನ್ನು ಕೊಡಬಹುದು.

ಹೊಯ್ಸಳ ವೀರ ಬಲ್ಲಾಳನ ಆಶೀರ್ವಾದದೊಂದಿಗೆ ಪ್ರಬಲವಾದೊಂದು ರಾಜ್ಯ ಕ್ರಿ.ಶ. ೧೩೩೬ರಲ್ಲಿ ಹುಟ್ಟಿ ಅದು ಶೀಘ್ರವಾಗಿ ಕರಾವಳಿಗೆ ಹರಡಿದ ವಿಚಾರ ಮೇಲೆ ಹೇಳಿದೆ. ಇದರಿಂದಾಗಿ ಬೇರಾವ ಪ್ರದೇಶದಲ್ಲೂ ಇಲ್ಲದಂತಹ ರಾಜಕೀಯ ಪರಿಸ್ಥಿತಿ ಕರಾವಳಿಯಲ್ಲಿ ಹುಟ್ಟಿಕೊಂಡಿತು. ಹೊಸದಾಗಿ ಬಂದ ವಿಜಯನಗರದ ಅಧಿಕಾರ ಆವೇಳೆಗಾಗಲೇ ಅಲ್ಲಿದ್ದ ಆಳುಪ ಮತ್ತು ಹೊಯ್ಸಳ ರಾಜ್ಯಗಳನ್ನು ತನ್ನ ತೆಕ್ಕೆಗೆ ಒಳಪಡಿಸಿಕೊಂಡಿತು. ಆದರೂ ಅವುಗಳ ಅಧಿಕಾರ ಮತ್ತು ಆಂತರಿಕ ಸ್ವಾತಂತ್ರ್ಯವನ್ನು ಮಾನ್ಯ ಮಾಡಿತು. ಅದುವರೆವಿಗೂ ತನಗಿದ್ದ ಸಾಮ್ರಾಟ ಸ್ಥಿತಿಗೆ ಇದರಿಂದ ಭಂಗ ಬಂದರೂ ಪರಿಸ್ಥಿತಿಯ ಅನಿವಾರ್ಯತೆಯನ್ನು ಅರ್ಥ ಮಾಡಿಕೊಂಡ ಚಿಕ್ಕಾಯಿ ತಾಯಿ ಅದಕ್ಕೆ ತಕ್ಕಂತೆ ನಡೆದುಕೊಂಡಳು. ವಿಜಯನಗರದೊಂದಿಗೆ ಸ್ನೇಹ ಮೆರೆದು ಮುಂದೆ

ತನ್ನ ಪತಿ ಯುದ್ಧದಲ್ಲಿ ಮರಣ ಹೊಂದಿದ ನಂತರ ಅದರ ಸಾರ್ವಭೌಮತೆಯನ್ನು ಗೌರವಿಸಿದಳು. ಕ್ರಿ.ಶ. ೧೩೪೬ರಲ್ಲಿ ಒಂದನೆಯ ಹರಿಹರನು ತನ್ನ ಪರಿವಾರ ಸಹಿತ ಶೃಂಗೇರಿಗೆ ಬಂದು ಅಲ್ಲಿನ ಮಠಕ್ಕೆ ದಾನ ಮಾಡಿದ ಸಂದರ್ಭದಲ್ಲಿ ಚಿಕ್ಕಾಯಿ ತಾಯಿಯು ಪುತ್ರ ಸಹಿತವಾಗಿ ಚಕ್ರವರ್ತಿಯನ್ನು ಭೇಟಿ ಮಾಡಿ ತಾನೂ ಶ್ರೀ ಮಠಕ್ಕೆ ಹಲವು ಗ್ರಾಮಗಳನ್ನು ದಾನ ಮಾಡಿದಳು[೨೯]. ಈಕೆ ದಾನ ಮಾಡಿದ ಗ್ರಾಮಗಳು ಸಾಂತಳಿಗೆ ನಾಡೊಳಗಿದ್ದುವು. ಈ ಭಾಗ ಚಿಕ್ಕಾಯಿತಾಯಿಯ ಆಳ್ವಿಕೆಗೆ ಒಳಪಟ್ಟಿತ್ತೆಂದು ಇದರಿಂದ ತಿಳಿಯುತ್ತದೆ.[೩೦] ಅಲ್ಲದೆ ತುಂಗೆಯ ತಟದಲ್ಲಿದ್ದ ಪಾವನ ಕ್ಷೇತ್ರ ಶೃಂಗೇರಿ ಸಹ ಈಕೆಯ ಆಳ್ವಿಕೆಯ ಪ್ರದೇಶದೊಳಗೇ ಇತ್ತೆಂದು ಕಾಣುತ್ತದೆ. ಅತ್ಯಂತ ಪ್ರಾಚೀನ ಆಳುಪರ ಶಾಸನವೊಂದು ಇದರ ಸಮೀಪ ಇರುವ ಕಿಗ್ಗದಲ್ಲಿ ದೊರೆತಿದೆ.[೩೧] ಅದು ಆಳುಪ ಗುಣಸಾಗರನು ಅಲ್ಲಿಯ ದೇವಾಲಯಕ್ಕೆ ಮಾಡಿದ ದಾನವನ್ನು ಉಲ್ಲೇಖಿಸುತ್ತದೆ. ಆಗ ಅವನೊಡನೆ ಅವನ ರಾಣಿ ಮಹಾದೇವಿ ಮತ್ತು ಮಗ ಚಿತ್ರವಾಹನರಿದ್ದರು. ಚಿಕ್ಕಾಯಿತಾಯಿ ಶೃಂಗೇರಿ ಮಠಕ್ಕೆ ಮಾಡಿದ ದಾನ ಹೊಯ್ಸಳ ನೆಲೆಯಲ್ಲಿ ಮಾಡಿದ್ದಾದರೂ ತನ್ನ ಮೂಲ ಆಳುಪ ನೆಲೆಯಲ್ಲಿ ಮಾಡಿದ ಕೊನೆಯ ದಾನ ಕಾರ್ಯವಾದುದು ವಿಚಿತ್ರವಾದುದು.

ಆಳುಪ ಅರಸು ಮನೆತನ ಒಂದು ಸಾವಿರ ವರ್ಷಕ್ಕೂ ಹೆಚ್ಚು ಕಾಲ ಕರಾವಳಿಯನ್ನಾಳಿದ ಒಂದು ಧೀಮಂತ ಮನೆತನ. ಇವರ ಎಲ್ಲ ಮಹಾನ್ ಸಾಧನೆಗಳ ಹಿಂದೆ ಇವರ ರಾಣಿಯರ ಮತ್ತು ರಾಜ ಕುವರಿಯರ ತ್ಯಾಗ ಮತ್ತು ಕರ್ತವ್ಯ ನಿಷ್ಠೆ ಇದ್ದು ಅದು ಈ ವಂಶವನ್ನು ಉತ್ತುಂಗಕ್ಕೇರಿಸಿದೆ.

[ಈ ಬಗ್ಗೆ ಕರಾವಳಿಯಲ್ಲಿ ನಾನು ಕೈಗೊಂಡ ಕ್ಷೇತ್ರ ಕಾರ್ಯದಲ್ಲಿ ನೆರವಾದ ಎಲ್ಲ ಮಹನೀಯರಿಗೆ ಕೃತಜ್ಞತೆಗಳನ್ನು ಸಮರ್ಪಿಸುತ್ತೇನೆ.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕೆ.ವಿ. ರಮೇಶ, **ಎ ಹಿಸ್ಟರಿ ಆಫ್ ಸೌತ್ ಕೆನರ,** (೧೯೭೦), ಪುಟ ೧೨-೨೬.
೨. ಅದೇ, ಪುಟ ೨೪-೨೫.
೩. ಅದೇ, ಪುಟ ೩೫-೧೫೦.
೪. ಪೊಳಲಿ ಶೀನಪ್ಪ ಹೆಗ್ಡೆ, **ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳಪಾಂಡ್ಯರಾಯನ ಅಳಿಯಕಟ್ಟು,** ಉಡುಪಿ, ೧೯೮೧ ದ್ವಿತೀಯ ಮುದ್ರಣ.
೫. ಕೆ.ವಿ. ರಮೇಶ, ೧೯೭೦, ಪುಟ ೨೬-೩೪.
೬. ಅದೇ, ಪುಟ ೩೧-೩೨ ಮತ್ತು ಎಂ.ಎ.ಆರ್. ೧೯೩೬, ಸಂಖ್ಯೆ ೧೬, ಪುಟ ೭೨.
೭. *Copper plate Inscriptions of Andra Pradesh, Government Museum,* Hyderabad (Vol-1) Ed-N. Rameshan A.P.G. A.S-6, Hyderabad, 1962, Page 11-39.
೮. ಅದೇ.
೯. ಅದೇ.
೧೦. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೬, (ರೈಸ್ ಆವೃತ್ತಿ), ಕೊಪ್ಪ, ೩೯.
೧೧. ಶಿಗ್ಗಾವ್ ತಾಮ್ರ ಶಾಸನ, (ಕ್ರಿ.ಶ. ೭೦೭), **ಎಪಿಗ್ರಾಫಿಯಾ ಇಂಡಿಕಾ,** ಸಂ. ೩೨, ಪುಟ ೩೧೭ ರಿಂದ ಮುಂದೆ ಮತ್ತು ಛಾಯಾಚಿತ್ರ.
೧೨. ಅದೇ ಮತ್ತು ಕೆ.ವಿ. ರಮೇಶ್, (೧೯೭೦) ಪುಟ ೫೯-೬೦.
೧೩. ಕೆ.ವಿ. ರಮೇಶ್, (೧೯೭೦), ಪುಟ ೫೦-೬೨.
೧೪. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೭, (ರೈಸ್ ಆವೃತ್ತಿ), ನಗರ ೩೫, ಕ್ರಿ.ಶ. ೧೦೭೭ರ ಹೊಂಬುಚ ಶಾಸನ.
೧೫. ಹಂಪ ನಾಗರಾಜಯ್ಯ, **ಸಾಂತರರು-ಒಂದು ಅಧ್ಯಯನ,** ೧೯೯೭, ಪುಟ ೪೬.
೧೬. ಅದೇ ಪುಟ ೪೬.
೧೭. ಅದೇ ಪುಟ ೩೦೨.
೧೮. ಕೆ.ವಿ. ರಮೇಶ್, ೧೯೭೦, ಪುಟ ೯೩.
೧೯. ಅದೇ, ಪುಟ ೯೩-೯೪.
೨೦. ದಕ್ಷಿಣ ಭಾರತದ ಶಾಸನಗಳು, ಎಸ್.ಐ.ಐ, ಸಂ. ೭. ಸಂ. ೩೨೭.
೨೧. ಅದೇ, ಸಂ. ೩೨೮, ಕೆ.ವಿ. ರಮೇಶ್, ೧೯೭೦, ಪುಟ ೧೦೨-೧೦೩.
೨೨. ಕೆ.ವಿ. ರಮೇಶ್, ಪುಟ ೧೦೪.
೨೩. ಹೊಂಬುಚ ಶಾಸನ, **ಸಾಂತರರು ಒಂದು ಅಧ್ಯಯನ,** ಹಂಪನಾ, ೧೯೯೭.
೨೪. ಎಸ್.ಐ.ಐ. ಸಂ. ೭, ಸಂ. ೨೭೮.

೨೫. ಪಿ.ಎನ್. ನರಸಿಂಹಮೂರ್ತಿ, **ಕುಂದನಾಡಿನ ಶಾಸನಗಳು,** ೨೦೦೭, ಪ್ರಸ್ತಾವನೆ ಪುಟ ೧೪-೧೬, ಕುಂದಣನ ವರಾಂಗ ಶಾಸನ, ಎಪಿಗ್ರಾಫಿಯಾ ಇಂಡಿಕಾ, ೩೭ ಪುಟ ೨೬೯-೨೭೬.
೨೬. ಎಸ್.ಐ.ಐ. ಸಂ. ೭, ನಂ. ೩೭೬.
೨೭. ಕೆ.ವಿ. ರಮೇಶ್ ಮತ್ತು ಎಮ್.ಜೆ. ಶರ್ಮ, **ತುಳುನಾಡಿನ ಶಾಸನಗಳು,** ೧೯೭೮, ಸಂ. ೩೯, ತು.ನಾ.ಶಾ.
೨೮. ಎಸ್.ಐ.ಐ. ಸಂ. ೯ ಭಾಗ ೧, ನಂ. ೩೯೫, ೩೯೬, ಸಂ. ೨೭, ನಂ. ೨೦೮ ಇತ್ಯಾದಿ.
೨೯. ಕೆ.ವಿ. ರಮೇಶ್, ೧೯೭೦, ಪುಟ ೧೨೧-೧೨೫.
೩೦. ಅದೇ ಕೆ.ವಿ. ರಮೇಶ್, ೧೯೭೦.
೩೧. **ಎಸ್**.ಐ.ಐ. ಸಂ. ೭, ಸಂ. ೩೮೦.
೩೨. ಕೆ.ವಿ. ರಮೇಶ್, (೧೯೭೦), ಪುಟ ೧೨೫-೧೨೭.
೩೩. ಅದೇ, ಪುಟ ೧೨೭-೧೨೯.
೩೪. **ಎಸ್.ಐ.ಐ.** ಸಂ. ೨೭, ಸಂ. ೨೧೪, ೨೧೫, ೨೧೮, ೨೧೯, ೧೨೧ ಮತ್ತು ೧೨೩.
೩೫. ಅದೇ, ಸಂ. ೨೧೭.
೩೬. ಅದೇ, ಸಂ. ೨೧೬.
೩೭. ಅದೇ, ಸಂ. ೨೨೩.
೩೮. ಅದೇ, ಸಂ. ೨೨೦.
೩೯. ಅದೇ, ಸಂ. ೨೨೨.
೪೦. ಕೆ.ವಿ. ರಮೇಶ್, (೧೯೭೦), ಪುಟ ೧೨೫-೧೨೭.
೪೧. **ಎಸ್**.ಐ.ಐ. ಸಂ. ೨೭, ಸಂ. ೨೦೫ ಮತ್ತು ೨೦೬.
೪೨. ಅದೇ, ಸಂ. ೨೦೭, ೨೦೮, ೨೦೯ ಮತ್ತು ೨೧೬.
೪೩. ತು.ನಾ.ಶಾ. ಸಂ. ೨೪, ಎಪಿಗ್ರಾಫಿಯಾ ಇಂಡಿಕಾ, ೩೭, ಪುಟ ೨೩-೨೬.
೪೪. ಕೆ.ವಿ. ರಮೇಶ್, (೧೯೭೦) ಪುಟ ೧೨೮.
೪೫. ಅದೇ, ಪುಟ ೧೨೮, ೧೩೯, ೧೭೪, ೧೮೫-೧೯೫, ಇತ್ಯಾದಿ.
೪೬. ಅದೇ, ಪುಟ ೧೨೫-೧೩೦.
೪೭. ಅದೇ, ಪುಟ ೧೩೦-೧೩೧.
೪೮. **ಎಸ್**.ಐ.ಐ. ಸಂ. ೨೭, ಸಂ. ೨೩೬, ೨೩೭, ೨೩೮, ೨೪೧ ಇತ್ಯಾದಿ.
೪೯. ಅದೇ ಶಾಸನಗಳು.
೫೦. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೭, (ರೈಸ್ ಆವೃತ್ತಿ) ಹೊನ್ನಾಳಿ ಸಂ. ೧೧೭.
೫೧. ಕೆ.ವಿ. ರಮೇಶ್, (೧೯೭೦), ಪುಟ ೧೩೮.
೫೨. ಅದೇ, ಪುಟ ೧೩೮-೧೩೯.
೫೩. ಅದೇ.
೫೪. ಡಂಕನ್ ಎಮ್. ಡಿರೆಟ್, **ದಿ ಹೊಯ್ಸಳಾಸ್,** ಪುಟ ೧೬೫-೧೬೬.
೫೫. ರಮೇಶ ಕೆ.ವಿ. ಪುಟ ೧೩೯.
೫೬. ಅದೇ, ಪುಟ ೧೪೨.
೫೭. ಅದೇ, ೧೪೪.
೫೮. **ಎಪಿಗ್ರಾಫಿಯ ಕರ್ನಾಟಿಕ-೫,** ಹಾಸನ ಜಿಲ್ಲೆ, ರೈಸ್ ಆವೃತ್ತಿ, ಅರಸೀಕೆರೆ ತಾಲ್ಲೂಕು, ಆಲದಹಳ್ಳಿ, ನಂ. ೧೮೩.
೫೯. ನೋಡಿ : ಈ ಕಾಲದ ಆಳುಪ ಮತ್ತು ಹೊಯ್ಸಳ ಶಾಸನಗಳು.
೬೦. ಪಿ.ಎನ್. ನರಸಿಂಹಮೂರ್ತಿ, **ಕುಂದನಾಡಿನ ಶಾಸನಗಳು,** ಸಂ. ೨೪.
೬೧. ಇದರ ಪತ್ತೆ ಕಾರ್ಯದಲ್ಲಿ ಭಾಗವಹಿಸಿ ಸಹಕರಿಸಿದ ಶ್ರೀ ಉಪ್ಪುಂದ ಚಂದ್ರಶೇಖರ ಹೊಳ್ಳ (ಮಾಜಿ ಉಡುಪಿ ಜಿಲ್ಲಾ ಸಾಹಿತ್ಯ ಪರಿಷತ್ ಅಧ್ಯಕ್ಷರು) ಅವರಿಗೆ ನನ್ನ ಕೃತಜ್ಞತೆಗಳು.
೬೨. ಶಾಸನ ಪಾಠ ಸಾಲುಗಳು ೨-೭.
೬೩. ಅದೇ, ಸಾಲುಗಳು, ೮-೧೦.
೬೪. ಅದೇ, ಸಾಲುಗಳು ೧೧-೧೭.
೬೫. ಅದೇ, ಸಾಲುಗಳು ೧೮-೧೯.
೬೬. ಅದೇ, ಸಾಲು ೧೮.
೬೭. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೭, ರೈಸ್ ಆವೃತ್ತಿ, ಹೊನ್ನಾಳಿ ೧೧೭, ಹನಗವಾಡಿ ಶಾಸನ.
೬೮. ನೋಡಿ, ಮೇಲೆ ಉದಾಹರಿಸಿರುವ ಈಕೆಯ ಶಾಸನಗಳು.
೬೯. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೬, ರೈಸ್ ಆವೃತ್ತಿ, ಶೃಂಗೇರಿ ನಂ. ೧.
೭೦. ಕೆ.ವಿ. ರಮೇಶ್, ಪುಟ ೧೪೪.
೭೧. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೬, ರೈಸ್ ಆವೃತ್ತಿ, ಕೊಪ್ಪ ೩೮, ಕಿಗ್ಗ ಶಾಸನ.



# ಹೊಯ್ಸಳ ಮಹಾಪ್ರಧಾನಿ ಮಾಧವದಂಡನಾಯಕ ಮತ್ತು ಅವನ ವಂಶೀಯರು

ಗಂಗಾಂಬಿಕೆ ಎಸ್.*

**ಮಾ**ಧವದಂಡನಾಯಕನು ಹೊಯ್ಸಳ ಮೂರನೆಯ ನರಸಿಂಹ ಮತ್ತು ಮೂರನೆಯ ಬಲ್ಲಾಳನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯದ ದಕ್ಷಿಣ ಭಾಗದ ರಕ್ಷಣೆಯಲ್ಲಿ ಮುಖ್ಯ ಪಾತ್ರವಹಿಸಿದ್ದನು. ಮಾಧವದಂಡನಾಯಕನ ವಂಶೀಯರು ಹೊಯ್ಸಳ ೩ನೆಯ ನರಸಿಂಹ ಕಾಲದಿಂದ (ಕ್ರಿ.ಶ. ೧೨೫೪–೯೧) ವಿಜಯನಗರದ ಸಂಗಮ ದೊರೆ ೧ನೆಯ ಹರಿಹರನ ಕಾಲದವರೆಗೂ (ಕ್ರಿ.ಶ. ೧೩೩೬–೫೬) ಸಾಮ್ರಾಜ್ಯದ ವಿವಿಧ ನೆಲೆಗಳಲ್ಲಿ ನಿರ್ವಹಿಸಿದ ಪಾತ್ರವನ್ನು ಗುರುತಿಸುವುದು ಈ ಬರಹದ ಉದ್ದೇಶವಾಗಿದೆ.

## ಮಾಧವದಂಡನಾಯಕ

ಮಾಧವದಂಡನಾಯಕನು ೩ನೆಯ ನರಸಿಂಹನಲ್ಲಿ ಮಹಾಪ್ರಧಾನನಾಗಿದ್ದ ಪೆರುಮಾಳೆದೇವದಂಡನಾಯಕನ ಮಗ, ಮಾಧವದಂಡನಾಯಕನ ಹೆಸರು ಶಾಸನಗಳಲ್ಲಿ ಮಾಧವದಣ್ಣಾಯಕ, ಮಾಧವದಣ್ಣಾಯ್ಕ, ಮಾಧವ ದಂಣ್ನಾಯಕ, ಮಾಧವದಂಡನಾಯಕ, ಮಾದಪ್ಪದಂಣಾಯಕ, ವೀರಮಾಧವದಂಣ್ನಾಯಕ, ಮಾದಪ್ಪದಂಣಾಯ್ಕ, ಮಾದಪ್ಪದೆಣ್ಣಾಯ್ಕರು ಎಂಬುದಾಗಿ ಪ್ರಯೋಗಗೊಂಡಿದೆ. ಇವನ ಜನ್ಮಸ್ಥಳ ಎಣ್ಣೆನಾಡಿಗೆ ಸೇರಿದ ಮಗ್ಗೆಯ ಎಂಬ ಗ್ರಾಮ. ಇದು ಈಗಿನ ಚಾಮರಾಜನಗರ ಜಿಲ್ಲೆಯ ಹರದನಹಳ್ಳಿಯೇ ಆಗಿದೆ.

## ರಾಜ್ಯಾಡಳಿತದಲ್ಲಿ ಮಾಧವದಂಡನಾಯಕನ ಸ್ಥಾನ

ನಮಗೆ ಮಾಧವದಂಡನಾಯಕನ ಪ್ರಥಮ ಉಲ್ಲೇಖವು ಕ್ರಿ.ಶ. ೧೨೮೨ರ ಅವಿನಾಸಿ ಗ್ರಾಮದ (ಕೊಯಮತ್ತೂರು ಜಿಲ್ಲೆ, ಅವಿನಾಸಿ ತಾಲ್ಲೂಕಿನ) ಶಾಸನದಲ್ಲಿ[೧] ಕಂಡುಬರುತ್ತದೆ. ಈ ಶಾಸನದಲ್ಲಿ, ಮಾಧವದಂಡನಾಯಕನು ಮೊಡೆಯಕುಲದ ಪೆರುಮಾಳ ದಂಡನಾಯಕನ ಮಗನೆಂತಲೂ ಮತ್ತು ಈತನು ಅವಿನಾಸಿಯಲುಡೈಯನಾಯನಾರ್ ದೇವರಿಗೆ ಸಿತಕರಗಂಡ ನಲ್ಲೂರೆನಿಸಿದ ತೆನ್ವಳ್ಳಿನಾಡಿನ ಹಳ್ಳಿಯನ್ನು ದಾನ ನೀಡಿದ ವಿಚಾರವಿದೆ. ಈ ಶಾಸನವು 'ಮೂರನೆಯ ಬಲ್ಲಾಳ ದೊರೆಯ ಕಾಲದಲ್ಲಿ' ಎಂಬುದನ್ನು ಪ್ರಸ್ತಾಪಿಸಿರುವುದು ಲಕ್ಷ್ಯಾರ್ಹ. ಬಹುಶಃ ಕ್ರಿ.ಶ. ೧೨೯೧ರವರೆಗೆ ಮೂರನೆಯ ಬಲ್ಲಾಳನು ಹೊಯ್ಸಳ ಸಾಮ್ರಾಟನಾಗುವ ಪೂರ್ವದಲ್ಲಿ ತನ್ನ ತಂದೆ ಮೂರನೆಯ ನರಸಿಂಹನ ಆಳ್ವಿಕೆಯ ಕಾಲಘಟ್ಟದಲ್ಲಿಯೇ ತಮಿಳುನಾಡಿನ ಕೆಲಪ್ರದೇಶಗಳಲ್ಲಿ ಯುವರಾಜನಾಗಿ ತನ್ನ ಪ್ರಭಾವಮುದ್ರೆಯನ್ನೊತ್ತಿದ್ದ ಆಡಳಿತ ಮತ್ತು ಯುದ್ಧಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಿದ್ದಾಗ ಮಾಧವದಂಡನಾಯಕನು ಅರಸನಿಗೆ ಪ್ರಧಾನಿಯಾಗಿ ಕಾರ್ಯನಿರ್ವಹಿಸುತ್ತಿದ್ದನು. ತಿರುಪತ್ತೂರಿನ ಬ್ರಹ್ಮೇಶ್ವರ ದೇಗುಲದ ಶಾಸನವು[೨] ಮಾಧವದಂಡನಾಯಕನ ತರುವಾಯ ತಿರುಪತ್ತೂರು ಮಾಧವಚತುರ್ವೇದಿಮಂಗಲಂ ಎಂದು ಹೆಸರುಪಡೆದಿದುದನ್ನು ತಿಳಿಸುತ್ತದೆ. ಇದಲ್ಲದೆ ಕೊಯಮತ್ತೂರಿನ ಉದಾಮಲ್‌ಪೇಟೆಯಲ್ಲಿನ ಶಾಸನವು[೩] ಅಗರಂಪುತ್ತೂರಿಗೆ ಈ ದಂಡನಾಯಕನ ಹೆಸರಿನಲ್ಲಿ ಮಾಧವಚತುರ್ವೇದಿಮಂಗಲಂ ಎಂದು ಹೆಸರಿದ್ದುದನ್ನು ತಿಳಿಸುತ್ತದೆ. ಈ ಶಾಸನಗಳ ಆಧಾರದ ಮೇಲೆ ಈ ಪ್ರದೇಶಗಳಲ್ಲಿ ಮಾಧವದಂಡನಾಯಕನ ಪ್ರಾಬಲ್ಯವನ್ನು ಅರಿಯಬಹುದು.

ಮಾಧವದಂಡನಾಯಕನ ಮುಂದಿನ ಉಲೇಖ ಕ್ರಿ.ಶ. ೧೩೦೩ರ ಕೊತ್ತಲವಾಡಿ ಶಾಸನದಲ್ಲಿ[೪] ದೊರೆಯುತ್ತದೆ. ಈ ಶಾಸನದನ್ವಯ, ಮಹಾಮಾಂಡಲಿಕ ಮಾಧವದಂಡನಾಯಕನು ತೆರಕಣಾಂಬಿಯನ್ನು ರಾಜಧಾನಿಯಾಗಿರಿಸಿ ಹದಿನಾಲ್ಕು ನಾಡನ್ನು ಆಳುತ್ತಿದ್ದನು. ಈತ ತೆರಕಣಾಂಬಿಯಲ್ಲಿ ವರದರಾಜ ಅಲ್ಲಾಳನಾಥನನ್ನು ಪ್ರತಿಷ್ಠಾಪಿಸಿ ಆ ದೇವರಿಗೆ ಕೆಲವು ದತ್ತಿಗಳನ್ನು ನೀಡಿದನು. ಈ ಶಾಸನದಲ್ಲಿ ದತ್ತಿಯ ಇವರಗಳು ಉಕ್ತವಾಗಿಲ್ಲ. ಈ ದತ್ತಿಯನ್ನು ನೀಡುವಾಗ ಮಾಧವದಂಡನಾಯಕನ ಮಗ ಕೇತೆಯದಂಡನಾಯಕನು ಜೊತೆಯಲ್ಲಿದ್ದನು. ಇಲ್ಲಿ ಒಂದು ವಿಚಾರವನ್ನು ಗಮನಿಸಬೇಕು.

* # ೪೬೧/೪, ೭ನೆಯ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು-೫೬೦೧೦೪.

ಈಗಾಗಲೇ ಹೇಳಿರುವ ಅವಿನಾಸಿ ಗ್ರಾಮದ ಶಾಸನದ ಪ್ರಕಾರ ಮಾಧವದಂಡನಾಯಕನು ಕೊಯಮತ್ತೂರು ಮತ್ತು ಸುತ್ತಣ ಪ್ರದೇಶಗಳಲ್ಲಿ ಪ್ರಬಲನಾಗಿದ್ದನು. ಈತನೇ ಕ್ರಿ.ಶ. ೧೩೦೩ರ ವೇಳೆಗೆ ಪದಿನಾಲ್ಕುನಾಡಿನ ಅಧಿಪತಿಯಾದುದನ್ನು ಮೇಲೆ ಹೇಳಿರುವ ಕೊತ್ತಲವಾಡಿ ಶಾಸನವು ದೃಢಪಡಿಸುತ್ತದೆ. ಮೂರನೆಯ ಬಲ್ಲಾಳನಿಗೆ ತಮಿಳುನಾಡಿನ ಪ್ರಕ್ಷುಬ್ಧ ರಾಜಕೀಯ ಸಮಸ್ಯೆಗಳ ಸಂದರ್ಭದಲ್ಲಿ ನೆರವಾಗಿ ನಿಂತ ಮಾಧವದಂಡನಾಯ್ಕನು ತನ್ನ ದಕ್ಷತೆ, ಸ್ವಾಮಿನಿಷ್ಠೆ, ಹೊಯ್ಸಳ ಪ್ರಾಬಲ್ಯದ ಪುನರುಜ್ಜೀವನಕ್ಕೆ ಶ್ರಮಿಸಿದುದರಿಂದ ಮೂರನೆಯ ಬಲ್ಲಾಳನು ಪಟ್ಟಕ್ಕೆ ಬಂದ ಮೇಲೆ ಪದಿನಾಲ್ಕನಾಡು ಎಂಬ ವಿಶಾಲವಾದ ಹೊಯ್ಸಳ ನಾಡಿನ ನಾಡಾಧಿಪತಿಯಾಗಿ ಪ್ರವರ್ಧಮಾನಕ್ಕೆ ಬಂದನು. 'ಪದಿನಾಲ್ಕುನಾಡು' ಎಂಬ ಹೆಸರಿನ ಉಲ್ಲೇಖ ಕ್ರಿ.ಶ. ೧೨೧೦ರ ನಂತರದ ಶಾಸನಗಳಲ್ಲಿ ಕಂಡುಬರುವುದನ್ನು ಗಮನಿಸಿದರೆ, ಪ್ರತ್ಯೇಕ ಪ್ರತ್ಯೇಕವಾಗಿದ್ದ ಕುಡುಗುನಾಡು, ಕಾರೆನಾಡು, ಹೊರನಾಡು, ಅಂಣಿನಾಡು, ಹಿರಿಯುನಾಡು, ಎಡತಲೆನಾಡು, ತೊರೆನಾಡು, ಹುಲ್ಲನಹಳ್ಳಿಯನಾಡು, ಹೊದೆನಾಡು, ಎಡೆಯಾಲನಾಡು, ಕಣ್ಣಾಲನಾಡು, ನುಗುನಾಡು, ನವಿಲೆನಾಡು, ಬಯಲ್ನಾಡು– ಈ ೧೪ ನಾಡುಗಳನ್ನು 'ಪದಿನಾಲ್ಕುನಾಡು' ಎಂದು ಕರೆಯಲಾಗಿತ್ತು. ಈ ಪದಿನಾಲ್ಕು ನಾಡನ್ನು 'ಸಮಸ್ತನಾಡು' ಎಂತಲೂ ಕರೆಯುಲಾಗುತ್ತಿತ್ತು. ೧೩೦೩ರವರೆಗೂ ಪ್ರತ್ಯೇಕವಾಗಿ ತಮ್ಮ ಅಸ್ಥಿತ್ವ ಉಳಿಸಿಕೊಂಡಿದ್ದ ನಾಡುಗಳನ್ನು ತನ್ನ ಧೀಶಕ್ತಿಯಿಂದ ಇಡಿಯಾಗಿ ಪದಿನಾಲ್ಕುನಾಡಾಗಿಸಿ, ತೆರಕಣಾಂಬಿಯನ್ನು ಅದರ ರಾಜಧಾನಿಯನ್ನಾಗಿಸಿಕೊಂಡು ಮಾಧವದಂಡ ನಾಯಕನು ತನ್ನ ಮುಖ್ಯ ಆಡಳಿತ ಛತ್ರದೆಡೆಗೆ ತಂದನೆಂದೇ ನನ್ನ ಅಭಿಪ್ರಾಯ. ಆದರೆ ಈ ಪ್ರಕ್ರಿಯೆಯು ಮಾಧವ ದಂಡನಾಯಕನ ತಂದೆ ಪೆರುಮಾಳೆದೇವ ದಂಡನಾಯಕನ ಕಾಲದಲ್ಲಿಯೇ ಪ್ರಾರಂಭವಾಗಿರುವ ಸಾಧ್ಯತೆಗಳೂ ಇವೆ. ಕ್ರಿ.ಶ. ೧೩೦೩ರ ಕೊತ್ತಲವಾಡಿಯ ಶಾಸನದ ನಂತರದ ಶಾಸನಗಳಲ್ಲಿ ಮಾದವದಂಡನಾಯಕನ ವಂಶೀಯರನ್ನು 'ಪದಿನಾಲ್ಕು ನಾಡರಸರು' ಎಂದು ಉಲ್ಲೇಖಿಸಿರುವುದು ಗಮನಿಸಬೇಕು.

**ಮಾಧವದಂಡನಾಯಕನ ಸಾಂಸ್ಕೃತಿಕ ಸಾಧನೆಗಳು**

೧೪-೦೯-೧೩೧೦ರ ತ್ರಿಯಂಬಕಪುರದ (ತ್ರುಟಿತ) ಶಾಸನದ[೫] ಪ್ರಕಾರ, ಮಾಧವದಂಡನಾಯಕನು ತೆರಕಣಾಂಬಿಯ ನೆಲೆವೀಡಿನಲ್ಲಿ ರಾಜ್ಯಭಾರ ಮಾಡುತ್ತ ಪದಿನಾಲ್ಕುನಾಡನ್ನು ಪಾಲಿಸುತ್ತಿದ್ದನೆಂದು ಹಾಗೂ ತನ್ನ ತಂದೆಯು ಹೆಸರಿನಲ್ಲಿ (ಬಹುಶಃ ಈ ವೇಳೆಗೆ ಮಾಧವದಂಡನಾಯಕನ ತಂದೆ ಪೆರುಮಾಳೆದೇವ ದಂಡನಾಯಕನು ಗತಿಸಿದ್ದಿರಬಹುದು.) 'ಪೆರುಮಾಳಪುರ'ವೆಂದು ತೆರಕಣಾಂಬಿಯ ಹಳ್ಳಿಯೊಂದಕ್ಕೆ ನಾಮಕರಣ ಮಾಡಿ ಅದನ್ನು ಕೆಲವು ಶ್ರೀವೈಷ್ಣವರಿಗೆ ದಾನ ಮಾಡಿದನು. ೧೩೧೨ರ ಮೇಲುಕೋಟೆಯ ತ್ರುಟಿತಗೊಂಡಿರುವ ಶಾಸನವು[೬] ಮಾಧವದಂಡನಾಯಕನು ನೀಡಿದ ದಾನವನ್ನು ಅಸ್ಪಷ್ಟವಾಗಿ ತಿಳಿಸುತ್ತದೆ. ೧೭-೦೩-೧೩೧೪ರ ನಂಜನಗೂಡಿನ ಶಾಸನವು[೭] ಮಾಧವದಂಡನಾಯಕನ ಅಪ್ಪಣೆಯಂತೆ ಶ್ರೀಮನ್ಮಹಾ ವ್ಯವಹಾರಿ ಸಿಂಕಸೆಟ್ಟಿಯ ಮಗ ಸಿಂದಿಸೆಟ್ಟಿಯು ಶ್ರೀವೈಷ್ಣವರಿಗೆ ನೀಡಿದ ದಾನದ ಸಂಗತಿಯನ್ನೊಳಗೊಂಡಿದೆ. ೦೪-೦೪-೧೩೧೫ರ ಕಣ್ಣಾಗಾಲದ ಶಾಸನವು[೮], ಶ್ರೀಮಾಧವದಂಡನಾಯಕನು ಗೋವರ್ಧನಗಿರಿ (ಹಿಮವದ್ ಗೋಪಾಲಸ್ವಾಮಿ ಬೆಟ್ಟ)ದಲ್ಲಿ ಶ್ರೀಗೋಪಿನಾಥ ದೇವರನ್ನು ಪ್ರತಿಷ್ಠಾಪಿಸಿದ್ದನು. ಶ್ರೀ ಗೋಪಿನಾಥನ ಅಂಗಭೋಗ, ರಂಗಭೋಗ, ಸಮಸ್ತ ಪಡಿ ತಿರುವಳಿಯಾಟಕ್ಕಾಗಿ ಮೂರನೆಯ ಬಲ್ಲಾಳನು ಮಾಧವದಂಡನಾಯಕನಿಗೆ ಕುಡುಗುನಾಡಿನೊಳಗಣ ಕಂಣ್ನವಗಾಲ (>ಕಣ್ಣಾಗಲ)ವನ್ನು ಧಾರಾಪೂರ್ವಕವಾಗಿ ನೀಡಿದ್ದನು ಎಂಬುದನ್ನು ತಿಳಿಸುತ್ತದೆ. ೦೩-೦೭-೧೩೧೬ರ ಬಸವಾಪುರದ ಶಾಸನದನ್ವಯ[೯] ಮಾಧವದಂಡನಾಯಕನು 'ವಿದ್ಯಾನಿಧಿ ಪ್ರಸನ್ನ ಕೇಶವಪುರ'ವೆಂಬ ಅಗ್ರಹಾರವನ್ನು ಸ್ಥಾಪಿಸಿದ್ದನು. ಇದಕ್ಕೆ ಆಲೂರಿನ ಮಹಾಜನರು ಅನೇಕ ದಾನದತ್ತಿಗಳನ್ನು ಒದಗಿಸಿದರು. ೨೩-೦೭-೧೩೧೬ ಹರದನಹಳ್ಳಿಯ ಶಾಸನದ[೧೦] ಪ್ರಕಾರ, ಮಾಧನದಂಡನಾಯಕನ ಅಧೀನ ಅಧಿಕಾರಿ ಪುರುಸಗೌಡನ ಮಗ ಮಾರಗೌಡನು ದಿವ್ಯಲಿಂಗೇಶ್ವರವೆಂಬ ಅಣಿಲೇಶ್ವರ ದೇವಾಲಯುವನ್ನು ಕಟ್ಟಿಸಿ, ಆ ದೇವರ ಪೂಜಾದಿ ಸೇವೆಗಳಿಗೆಂದು ಅನೇಕ ದತ್ತಿಗಳನ್ನು ಬಿಟ್ಟನು. ಕಿಲಗೆರೆಯ ಶಾಸನವು[೧೧] ಚಾಮವ್ವೆದಂಡನಾಯಕಿಯು ಗೋಪಿನಾಥ ದೇವರಿಗೆ ಕಿಲಗೆರೆ ಮತ್ತು ಅದರ ಉಪಗ್ರಾಮಗಳನ್ನು ಮಾಧವ ದಂಡನಾಯಕನಿಂದ ಕೊಂಡು ದತ್ತಿಬಿಟ್ಟಳೆಂಬುದನ್ನು ತಿಳಿಸುತ್ತದೆ. ೦೯-೦೬-೧೩೧೮ರ ಬೊಮ್ಮಾಪುರದ ಶಾಸನವು[೧೨] ಮಾಧವದಂಡನಾಯಕನಿಗೆ 'ಜಯಶ್ರೀ ಲಭಿಸಲಿ' ಎಂದು ಹಾರೈಸಿ ಕೆಂಪಣನು ತನ್ನ ಆರಾಧ್ಯದೈವ ಶ್ರೀರಾಮದೇವರಿಗೆ (ಈಗ ಇದು ರಾಮೇಶ್ವರ ದೇಗುಲ ಎಂದು ಪ್ರಚಲಿತದಲ್ಲಿದೆ.) ಕುಡುಗುನಾಡಿನ ಹಯಿಗೆಯಲ್ಲಿನ ಮಾಧವಸಮುದ್ರದ ಬಳಿಯ ಕೆಲವು ಪ್ರದೇಶಗಳನ್ನು ದತ್ತಿಯಾಗಿ ಬಿಟ್ಟನೆಂಬುದನ್ನು ತಿಳಿಸುತ್ತದೆ. ಕ್ರಿ.ಶ. ೧೩೧೯ರ ಶಾಸನವು[೧೩] ಮಾಧವದಂಡ ನಾಯಕನು ತಿಂಮಣ ಪೆರಮಾಳ್ ದೇವರಿಗೆ ಕೊಟ್ಟ ಭೂದಾನವನ್ನು ಉಲ್ಲೇಖಿಸುತ್ತದೆ. ೬-೫-೧೩೨೧ರ ಸತ್ಯಾಗಾಲದ ಶಾಸನದಿಂದ[೧೪] ಮಾದಜೀಯ

ಎಂಬಾತನು ಮಾಧವದಂಡನಾಯಕನಿಂದ ಕುರುನೂರು ಮತ್ತು ಅದರ ಉಪಗ್ರಾಮಗಳನ್ನು ಕೊಂಡುಕೊಂಡು ಅವುಗಳನ್ನು 'ಪ್ರಸನ್ನಮಾಧವಪುರ' ವೆನಿಸಿದ ಕುರುನೂರಿನ ಮಹಾಜನಗಳಿಗೆ ದಾನ ಮಾಡಿದುದು ತಿಳಿಯುತ್ತದೆ. ೧೦–೧೧–೧೩೪೦ರ ಹರದನಹಳ್ಳಿಯ ೪ ಶಾಸನಗಳು[೧೫] ಮಾಧವದಂಡನಾಯಕನ ಜನ್ಮಸ್ಥಳವಾದ ಮಗ್ಗೆಯಲ್ಲಿರುವ ಅಣಿಲೇಶ್ವರ ದೇವರ ಗುಡಿಯ ರಂಗಮಂಟಪದಲ್ಲಿ ಅದೇ ಊರಿನ ಮಂಚಿಗೌಡ, ಹಿರೆಯಗೌಡ, ಮಾದಿಗೌಡ, ಸೋಟಗೌಡ ಎಂಬುವವರು ತಲಾ ಒಂದೊಂದು ಕಂಬಗಳನ್ನು ಮಾಡಿಸಿದರೆಂಬುದನ್ನು ತಿಳಿಸುತ್ತವೆ.

೧೪ನೆಯ ಶತಮಾನಕ್ಕೆ ಸೇರುವ ಕದಲಗೆರೆಯ ಶಾಸನವು[೧೬] ಮಾಧವದಂಡನಾಯಕನು ಕದಲಗೆರೆಯ ಲಕ್ಷ್ಮೀನಾರಾಯಣದೇವರಿಗೆ ನೀಡಿದ ಭೂದಾನವನ್ನು ಉಲ್ಲೇಖಿಸುತ್ತದೆ. ೧೪ನೆಯ ಶತಮಾನದ ಮತ್ತೊಂದು ಶಾಸನವು[೧೭] ಮಾಧವದಂಡನಾಯಕ ಮತ್ತು ಅವನ ಮಗ ಕೇತೆಯದಂಡ ನಾಯಕನು ಲಕ್ಷ್ಮಣದಾಸ ಎಂಬಾತನಿಗೆ ನೀಡಿದ ಭೂದಾನವನ್ನು ತಿಳಿಸುತ್ತದೆ. ಪಾಂಡವಪುರದ ಶಾಸನವು[೧೮] (ತ್ರುಟಿತ) ಮಾಧವದಂಡನಾಯಕನನ್ನು ಉಲ್ಲೇಖಿಸುತ್ತದೆ ಯಾದರೂ ಅದರ ಮಾಹಿತಿಯು ಅಲಭ್ಯವಾಗಿದೆ. ಈ ಎಲ್ಲ ಶಾಸನಗಳನ್ನು ಅವಲೋಕಿಸಿದರೆ, ಮಾಧವ ದಂಡನಾಯಕನು ಪದಿನಾಲ್ಕುನಾಡಿನಲ್ಲಿ ನೆಲೆ ನಿಂತು ಅದರ ಎಲ್ಲೆಗೆ ಬರುವ ಸುತ್ತಣ ಪ್ರದೇಶಗಳಲ್ಲಿ ಅಗ್ರಹಾರಗಳನ್ನು ನಿರ್ಮಿಸುತ್ತಾ, ದೇವಾಲಯುಗಳನ್ನು ಸ್ಥಾಪಿಸುತ್ತ, ದಾನದತ್ತಿಗಳಂತಹ ಧಾರ್ಮಿಕ ಕ್ರಿಯೆಗಳಲ್ಲಿ ತೊಡಗಿ, ತನ್ನ ಅಧೀನದಲ್ಲಿ ಮಹಾವ್ಯವಹಾರಿಳೆನಿಸಿದ ವರ್ತಕರನ್ನು ಪ್ರಬಲಗೊಳಸಿದುದು ನಿಚ್ಚಳವಾಗಿ ಕಂಡುಬರುತ್ತದೆ. ಈ ಅಂಶಗಳನ್ನು ಮತ್ತೂ ಸೂಕ್ಷ್ಮವಾಗಿ ಲಕ್ಷಿಸಿದರೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಮುನ್ನವೇ ತೆರಕಣಾಂಬಿಯ ಸುತ್ತಣ ಪ್ರದೇಶವನ್ನು ವ್ಯಾಪಾರ, ಶೈಕ್ಷಣಿಕ, ಧಾರ್ಮಿಕ ಹೀಗೆ ವಿವಿಧ ಆಯಾಮುಗಳಲ್ಲಿ ಬಲಿಷ್ಠಗೊಳಿಸಿದ್ದನು. ಮುಂದೆ ವಿಜಯನಗರದರಸರು ಈ ತೆರಕಾಂಬಿ ಭಾಗವನ್ನು 'ತೆರಕಣಾಂಬಿ ರಾಜ್ಯ'ವನ್ನಾಗಿ ರೂಪಿಸುವ ಮುನ್ನ ಮಾಧವದಂಡನಾಯಕನು ಅದಕ್ಕೆ ಭದ್ರಬುನಾದಿಯನ್ನು ಹಾಕಿದ್ದನೆಂಬುದು ಇದರಿಂದ ಗ್ರಹಿಸಬಹುದು. ಪದಿನಾಲ್ಕುನಾಡುಗಳು ಕೇಂದ್ರಸ್ಥಳವಾದ ತೆರಕಣಾಂಬಿಯು ಮುಂದೊಮ್ಮೆ ವಿಶಾಲವಾದ ರಾಜ್ಯಾಡಳಿತದ ಘಟಕವಾಗಿ ರೂಪುಗೊಳ್ಳಬೇಕಾದರೆ ಅದರ ಬೆನ್ನಲ್ಲಿ ಮಾಧವ ದಂಡನಾಯಕನ ಪಾತ್ರವನ್ನು ಗುರುತಿಸಬಹುದು. ಕ್ರಿ.ಶ. ೧೨೮೭ರಿಂದ ೧೩೨೧ರವರೆಗೆ ಸುಮಾರು ೩೪ ವರ್ಷಗಳ ಅವಧಿಯಲ್ಲಿ ಮಾಧವ ದಂಡನಾಯಕನು ಎಲ್ಲಿಯೂ ಯಾರ ಮೇಲೆಯೂ ಯುದ್ಧಾದಿ ಚಟುವಟಿಕೆಗಳಲ್ಲಿ ಭಾಗಿಯಾಗದೆ (೩ನೆಯ ಬಲ್ಲಾಳನು ತಮಿಳುನಾಡಿನ ಯುದ್ಧಗಳಲ್ಲಿ ಸಕ್ರಿಯನಾಗಿದ್ದಾಗ) ದೊರೆಯ ಅನುಪಸ್ಥಿತಿಯಲ್ಲಿ ಹೊಯ್ಸಳ ಸಾಮ್ರಾಜ್ಯದ ದಕ್ಷಿಣದ ಒಂದು ಭಾಗವನ್ನು ಶಾಂತಿಯುತವಾಗಿ ಪರಿಪಾಲಿಸುತ್ತಿದ್ದುದು ವೇದ್ಯವಾಗುತ್ತದೆ.

### ಮಾಧವದಂಡನಾಯಕನ ಪೂರ್ವಿಕರು

ಕೊತ್ತಲವಾಡಿ, ಬೆಳ್ಳೂರು, ಬಾಳಗಂಚಿ, ಹೊಳೆನರಸೀಪುರ, ಹಾನುಗಲ್ಲು, ತಡಿಮಾಲಂಗಿ, ಆಲತ್ತೂರು, ಗೇರಹಳ್ಳಿ, ನರಸಮಂಗಲ, ಚಿತ್ರದುರ್ಗಗಳಲ್ಲಿ ದೊರೆತಿರುವ ಶಾಸನಗಳು ಮಾಧವದಂಡನಾಯಕನ ಪೂರ್ವಿಕರ ಬಗ್ಗೆ ಮಾಹಿತಿಯೊದಗಿಸುತ್ತವೆ. ಆ ಪ್ರಕಾರ, ಆತ್ರೇಯಗೋತ್ರದ ಮೊಡಕುಲದ ವಿಷ್ಣುದೇವ ಮತ್ತು ಮಂಚಾಂಬಿಕೆಯರ ಪುತ್ರ ಪೆರುಮಾಳೆದೇವದಂಡನಾಯಕ. ರಾಮಕೃಷ್ಣ ಎಂಬಾತ ಈತನ ಗುರು ಈ ಪೆರುಮಾಳೆದೇವದಂಡನಾಯಕನ ಮೊದಲ ಮಗನೇ ಮಾಧವದಂಡನಾಯಕ.

**ಪೆರುಮಾಳೆದೇವ ದಂಡನಾಯಕ:** ಪೆರುಮಾಳೆದೇವ ದಂಡನಾಯಕನ ಉಲ್ಲೇಖವು ಕೊಯಮತ್ತೂರು, ಬೇಲೂರು, ಹಾಸನ, ನಾಗಮಂಗಲ, ಚನ್ನರಾಯಪಟ್ಟಣ, ಮೈಸೂರು, ಹೊಳೆನರಸೀಪುರ, ಹಾನುಗಲ್ಲು, ನಂಜನಗೂಡು, ಟಿ. ನರಸೀಪುರ, ಗುಂಡ್ಲುಪೇಟೆ, ಚಾಮರಾಜನಗರ, ಚಿತ್ರದುರ್ಗಗಳಲ್ಲಿನ ಶಾಸನಗಳಲ್ಲಿ ಕಂಡುಬಂದಿದೆ. ಈ ಪ್ರದೇಶಗಳಲ್ಲಿನ ಶಾಸನಗಳಲ್ಲಿ ಪೆರುಮಾಳೆ ದೇವದಂಡನಾಯಕನ ಹೆಸರು ಪೆರುಮಾಳೆದಂಡನಾಯಕನ, ಪೆರುಮಾಳೆದೇವದಣ್ಣಾಯಕ, ಪೆರುಮಾಳೆದೇವಣ್ಣಾಯ್ಕ, ಪೆರುಮಾಳದಣ್ಣಾಯಕ, ಪೆರುಮಾಳದೇವರು, ಪೆರುಮಾಳು ದಂಡನಾಯಕ, ಪೆರುಮಾಳೆ ಮಂತ್ರಿ, ಪೆರುಮಾಳೆದೇವ ಸಚಿವ, ಪೆರುಮಾಳ್ದೇವದಣ್ಣಾಯಕ, ಪೆರುಮಾಳೆಚಮೂಪತಿ, ಪೆರುಮಾಳಾದೇವದಣ್ಣಾಯಕ ಎಂಬುದಾಗಿ ಉಲ್ಲೇಖಗೊಂಡಿದೆ.

ಪೆರುಮಾಳೆದೇವದಂಡನಾಯಕನ ಪ್ರಥಮ ಉಲ್ಲೇಖ ಕಂಡುಬರುವುದು ದಾವಣಗೆರೆ ತಾಲ್ಲೂಕಿನ ಹರಿಹರದ ಕಾಳಭೈರವ ದೇಗುಲದ ಮಂಟಪದಲ್ಲಿನ ಕ್ರಿ.ಶ. ೧೨೫೫ರ ಶಾಸನದಲ್ಲಿ.[೧೯] ಈ ಶಾಸನದ ಪ್ರಕಾರ, ಹರಿಹರದೇವರಿಗೆ ಪೆರುಮಾಳೆ ದೇವದಂಡನಾಯಕನ ಇಚ್ಛೆಯಂತೆ ಅಣ್ಣಮ ವೆಗ್ಗಡೆ (=ಅಣ್ಣಪ್ಪವೆಗ್ಗಡೆ)ಯ ಮಗಳು ಹೊನ್ನಿಯವ್ವೆಯು ಸೇವಾರ್ಥವಾಗಿ ೧ ಗದ್ಯಾಣವನ್ನು ವನಮಾಲೆಗೆಂದು, ೩ ಗದ್ಯಾಣಗಳನ್ನು ನಂದಾದೀವಿಗೆಗೆಂದು ಮಹಾಜನಗಳಿಗೆ ನೀಡಿದಳು.

**ಪೆರುಮಾಳೆದಂಡನಾಯಕನ ರಾಜಕೀಯ ಮತ್ತು ಸಾಂಸ್ಕೃತಿಕ ಸಾಧನೆಗಳು :** ವೀರಸೋಮೇಶ್ವರನು ತನ್ನ ಇಬ್ಬರು ಮಕ್ಕಳಾದ ಇನೆಯ ನರಸಿಂಹ ಮತ್ತು ರಾಮನಾಥರು ಸಿಂಹಾಸನಕ್ಕಾಗಿ ಕಾದಾಡುತ್ತಿದ್ದುದನ್ನು ಸಹಿಸದಾದನು. ಅದೇ ಸಂದರ್ಭದಲ್ಲಿ ತಮಿಳುನಾಡಿನ ರಾಜಕೀಯದಲ್ಲುಂಟಾದ ಪರಾಜಯ ಮತ್ತು ತನ್ನ ಅನಾರೋಗ್ಯದಿಂದ ಅವನು ಮತ್ತಷ್ಟು ಬಳಲು ವಂತಾಯಿತು. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಸಂದರ್ಭದ ಸೂಕ್ಷ್ಮತೆಯನ್ನರಿತು ಹೊಯ್ಸಳ ಸಾಮ್ರಾಜ್ಯವನ್ನು ಇನೆಯ ನರಸಿಂಹ ಮತ್ತು ರಾಮನಾಥರಲ್ಲಿ ಹಂಚಿ ಕ್ರಿ.ಶ. ೧೨೫೫ರಲ್ಲಿ ಮರಣ ಹೊಂದಿದನು. ಅವನ ಮರಣದ ತರುವಾಯ ದೋರಸಮುದ್ರದಲ್ಲಿ ಇನೆಯ ನರಸಿಂಹನು ಮತ್ತು ತಮಿಳುನಾಡಿನಲ್ಲಿ ರಾಮನಾಥನು ಅಧಿಕಾರ ರೂಢರಾದರು. ಸಾಮ್ರಾಜ್ಯ ವಿಭಜನೆಯಾದ ತರುವಾಯವೂ ಈ ಈರ್ವರಲ್ಲಿ ಕಲಹಗಳು ನಡೆಯುತ್ತಲೇ ಇದ್ದವು. ಇಂತಹ ಪರಿಸ್ಥಿತಿ ಯಲ್ಲಿಯೇ ಇನೆಯ ನರಸಿಂಹನ ಸಾಮ್ರಾಜ್ಯವನ್ನು ಆಕ್ರಮಿಸಲು ಸೂಕ್ತ ಸಮಯ ಸಾಧಿಸಿ ಅನ್ಯರು ಮೇಲೆರಗುತ್ತಿದ್ದರು. ಇಂತಹ ಒಂದು ಪ್ರಯತ್ನವೇ ಕ್ರಿ.ಶ. ೧೨೭೧ರ ಕದನ. ಕ್ರಿ.ಶ. ೧೨೭೧ರ ಕದನವನ್ನು ಚಿತ್ರದುರ್ಗ[೨೦] ಮತ್ತು ಚನ್ನರಾಯಪಟ್ಟಣ[೨೧]ದ ಶಾಸನಗಳು ಪೆರುಮಾಳೆದೇವ ದಂಡನಾಯಕನು ಇನೆಯ ನರಸಿಂಹನ ಪರವಾಗಿ ನಿಂತು ಹೋರಾಡಿ ಸೇವುಣರ ಮೇಲೆ ಸಾದಿಸಿದ ವಿಜಯವನ್ನು ಅದ್ಭುತವಾಗಿ ವರ್ಣಿಸಿದೆ. ಸೇವುಣ ಮಹಾದೇವನ ಪರವಾಗಿ ಬಂದ ರತ್ನಪಾಳನು ಚಿತ್ರದುರ್ಗದವರೆಗೂ ಮುನ್ನಡೆದಾಗ ಪೆರುಮಾಳೆದೇವದಂಡನಾಯಕನು ರತ್ನಪಾಳನನ್ನು ಸೋಲಿಸಿ ಹಿಮ್ಮೆಟ್ಟಿಸಿದುದನ್ನು ಈ ಎರಡೂ ಶಾಸನಗಳು ರಮ್ಯವಾಗಿ ಬಣ್ಣಿಸಿವೆ.

> **ಜವನಿಕೆಯೋಡಲಿರ್ವ್ವಲದ ವೀರಭಟಾವಳಿನೋಡೆ ಖಳ್ಗದಿಂ**
> **ದವೆಕಲಿ ರತ್ನಪಾಳನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತುತ**
> **ಜ್ಜವನಿಕೆಗೊಂಡ ಗಂಡಪೆರುಮಾಳೆ ಚಮೂಪತಿಗಿಂತು ಸಾರ್ದ್ದುದಾ**
> **ಜವನಿಕೆ ನಾರಣಾಂಕವಿದು ರಾಉತ ರಾಯನಂದಗ್ರದೋರ್ವ್ವಲಂ**
>
> (ಚಂಪಕಮಾಲಾವೃತ್ತ)

ಈ ಪ್ರಕಾರವಾಗಿ ಯುದ್ಧದಿಂದ ಸಂದ ವಿಜಯದಿಂದ ಸಂಪ್ರೀತನಾದ ಇನೆಯ ನರಸಿಂಹನು ಪೆರುಮಾಳೆದಂಡ ನಾಯಕನಿಗೆ 'ಜವನಿಕೆ ನಾರಾಯಣ', 'ರಾವುತರಾಯ' ಎಂಬ ಬಿರುದುಗಳನ್ನು ಹಾಗೂ ಭೂದಾನಗಳನ್ನು ನೀಡಿ ಗೌರವಿಸಿದನು. ಈ ಶಾಸನದಿಂದ ಹೊಯ್ಸಳರ ಬದ್ಧವೈರಿಗಳಾದ ಸೇವುಣರನ್ನು ಸದೆಬಡಿದು ರಾಜ್ಯರಕ್ಷಣೆಯ ಹೊಣೆಯನ್ನು, ಪ್ರಾಣದ ಹಂಗು ತೊರೆದು ಹೋರಾಡಿದ ಸ್ವಾಮಿನಿಷ್ಠೆಯನ್ನು ತಿಳಿಯಬಹುದು.

ಕ್ರಿ.ಶ. ೧೨೭೪ರ ದೇವಗಳ್ಳಿ ಶಾಸನವು[೨೨] (ತ್ರುಟಿತ) ಮಹಾಪ್ರಧಾನ ಪೆರುಮಾಳೆದೇವಡಂನಾಯಕನು ದೇವನಹಳ್ಳಿಯನ್ನು (ಈಗಿನ ಮೈಸೂರು ಸಮೀಪದ ಊರು) ಮುತ್ತಿದಾಗ ಯುದ್ಧದಲ್ಲಿ ಹೋರಾಡಿ ಮಡಿದ ಪೆರುಮಾಳೆದೇವ ದಂಡನಾಯಕನ ಪಡೆಯ ವೀರನ ವಿಚಾರವನ್ನು ತಿಳಿಸುತ್ತದೆ. ಆದರೆ ಈ ಯುದ್ಧದ ಕಾರ್ಯಕಾರಣ ಸಂಬಂಧವೇನೆಂಬುದು ಅಲಭ್ಯವಾಗಿದೆ. ಪೆರುಮಾಳೆದೇವದಂಡನಾಯಕನ ಸಾಹಸಗಾಥೆಯು ರಾಜಕೀಯ ನೆಲೆಯಲ್ಲಿ ಮಾತ್ರವೇ ಪ್ರಜ್ವಲಿಸದೆ ಸಾಮಾನ್ಯ ಜನರ ಹಿತಕಾಯುವಲ್ಲಿಯೂ ಮುಂದುವರಿಯುತ್ತದೆ. ಕ್ರಿ.ಶ. ೧೨೬೯ರ ಬೆಳ್ಳೂರಿನ ಶಾಸನದ[೨೩] ಪ್ರಕಾರ, ಪೆರುಮಾಳೆ ದೇವದಂಡನಾಯಕನು ಬೆಳ್ಳೂರನ್ನು ಅರಸನಿಂದ ಪಡೆದ ತರುವಾಯ ಅಲ್ಲಾಳ ಸಮುದ್ರ, ಅವ್ವೆಯರಕೆಱೆ, ತಗಚೆಗೆಱೆ ಗಳನ್ನು ತೋಡಿಸಿ ಅವುಗಳ ಕಾಲುವೆಯ ಕೆಳಗಿನ ಬರಡು ಭೂಮಿಯನ್ನು ಫಲವತ್ತಾದ ಗದ್ದೆಯನ್ನಾಗಿ ಪರಿವರ್ತಿಸಿದರು. ತಂಬಿಯಣ್ಣ ಮತ್ತು ತಿರುವರಂಗಪೆರುಮಾಳ್‌ನಂಬಿ ಈ ಇಬ್ಬರಿಗೂ ಮತ್ತು ಮಹಾಜನರಿಗೂ ತಿರುನಾರಾಯಣಪುರ, ತೊಂಡನೂರು, ನಾಗಮಂಗಲ, ದಡಿಗವೇ ಮೊದಲಾದ ೧೮ ನಾಡುಗಳ ಶ್ರೀವೈಷ್ಣವರ ಮುಂದೆ ಆದ ಒಪ್ಪಂದದ ವಿವರವನ್ನು ಈ ಶಾಸನ ತಿಳಿಸುತ್ತದೆ. ಈ ಒಪ್ಪಂದದ ಪ್ರಕಾರ, ತಂಬಿಯಣ್ಣ ಮತ್ತು ತಿರುವರಂಗ ಪೆರುಮಾಳ್‌ನಂಬಿ ಬಿತ್ತುವಟ್ಟಕ್ಕಾಗಿ ವರ್ಷನಿಬಂಧಿಯಾಗಿ ಖಂಡುಗಕ್ಕೆ ೪ ಪಣದಂತೆ ಕೊಡುವುದಲ್ಲದೆ ಅಧಿಕಾರಿಗಳಿಗೆ ಮತ್ತು ಗೌಡರಿಗೆ ನೀಡಬೇಕಾದ ನಗದನ್ನೂ ನಮೂದಿಸಿದೆ. ಊರಿನ ಇತರೆ ಅಭಿವೃದ್ಧಿ ಕಾರ್ಯಗಳಿಗಾಗಿ ಮಹಾಜನರೇ ವೆಚ್ಚ ಮಾಡಬೇಕೆಂತಲೂ ಸೂಚಿಸಿದೆ. ಈ ಅಂಶಗಳು ಈ ದಂಡನಾಯಕನ ಸಾರ್ವಜನಿಕ ಹಿತದ ದೃಷ್ಟಿಕೋನವನ್ನು ಅರಿವಿಗೆ ತರುತ್ತವೆ. ಕ್ರಿ.ಶ. ೧೨೬೯ರ ಬೆಳ್ಳೂರಿನ ಇನ್ನೊಂದು ಶಾಸನದನ್ವಯ[೨೪] ಬೆಳ್ಳೂರಿನ ಮಹಾಜನರು ಮತ್ತು ಶ್ರೀರಂಗಪುರದ ಮಹಾಜನರು ಒಂದು ಒಡಂಬಡಿಕೆ ಮಾಡಿಕೊಂಡರು. ಅದೇನೆಂದರೆ, ಅಲ್ಲಾಳಸಮುದ್ರ ಎಂಬ ಕೆರೆಯನ್ನು ಕಟ್ಟಿಸಿದ್ದರಿಂದ ಶ್ರೀರಂಗಪುರದ ಬೆದ್ದಲು ಭೂಮಿಯು ಮುಳುಗಡೆಯಾಗಿಹೋಯಿತು. ಇದಕ್ಕೆ ಪ್ರತಿಯಾಗಿ ಶ್ರೀರಂಗಪುರದವರು ಅಲ್ಲಾಳಸಮುದ್ರದ ಕೆಳಗೆ ೧೨ ಸಲಗೆ ಭೂಮಿಯನ್ನು ಪಡೆದು ಬೆಳ್ಳೂರು ಮಹಾಜನರಿಗೆ ಕಟ್ಟುಗುತ್ತಗೆ ಪಿಂಡಾದಾನವಾಗಿ ವರ್ಷಂಪ್ರತಿ ೧೨ ಗದ್ಯಾಣಗಳನ್ನು ಕೊಡಲೊಪ್ಪಿದರು. ಇಂತಹ ಶಾಂತಿಒಪ್ಪಂದಗಳು ಒಟ್ಟಾರೆ ಸಮಾಜದ ಸಹಬಾಳ್ವೆಯುತ ಬದುಕಿಗೆ ನೆರವಾಗಿದ್ದುದನ್ನು, ಇಂತಹವುಗಳಿಗೆ ದಂಡನಾಯಕನ ಮನ್ನಣೆ ಇದ್ದುದನ್ನು ಅರಿಯಬಹುದಾಗಿದೆ.

೨೫-೬-೧೨೮೪ರ ಬೆಳ್ಳೂರಿನ ಶಾಸನದ[೨೫] ಪ್ರಕಾರ, ಪೆರುಮಾಳೆದೇವ ದಂಡನಾಯಕನು ೩ನೆಯ ನರಸಿಂಹನಿಂದ ನೆಟ್ಟದಕೋಟೆ, ಬಿಲ್ಲಬೆಳಗುಂದ, ತಿಪ್ಪೂರು ಎಂಬ ೩ ಹಳ್ಳಿಗಳನ್ನು ದಾನವಾಗಿ ಪಡೆದನು. ಇದನ್ನು ಬೆಳ್ಳೂರಿನ ಮಹಾಜನರಿಗೆ ಪ್ರಸನ್ನಮಾಧವ, ರಾಮಕೃಷ್ಣ, ವರದಅಲ್ಲಾಳ ನಾಥದೇವರ ಅಂಗಭೋಗ, ರಂಗಭೋಗಾದಿ ಸೇವೆಗಳಿಗಾಗಿ ದಾನ ಮಾಡಿದನು. ನಂತರ ಈತನೇ ಆ ದತ್ತಿಯನ್ನು ೯೬ ಮಹಾಜನರಿಗೆ ಹಂಚಲು, ಅವರು ಆ ಹಳ್ಳಿಗಳ ಉತ್ಪನ್ನವನ್ನು ೭ ವ್ರಿತ್ತಿಗಳಾಗಿ ವಿಂಗಡಿಸಿ ಒಂದು ಭಾಗವನ್ನು ಪೆರುಮಾಳೆದೇವದಂಡನಾಯಕನಿಗೆ ಪ್ರೀತಿಗೊಡುಗೆಯಾಗಿ ನೀಡಿದರು. ಆ ಗ್ರಾಮಗಳಿಗೆ ವಿವಿಧ ಸುಂಕಗಳನ್ನು ಮಾನ್ಯ ಮಾಡಿದ್ದು, ಅವುಗಳಲ್ಲಿ ಆನೆಯಸೇಸೆ, ಕಟಕಸೇಸೆ ಮತ್ತು ದಂಡಿನಭಾಗ್ಯತೆ ಮುಂತಾದ ತೆರಿಗೆಗಳು ಗಮನಾರ್ಹವಾಗಿವೆ. "ದಂಡಿನ ಭಾಗ್ಯತೆ ಎಂಬುದು ಸಂಚರಿಸುತ್ತಿರುವ ಸೈನ್ಯಬಲ ಒಂದು ಕಡೆ ನೆಲೆ ನಿಂತಾಗ ಅದರ ಊಟೋಪಚಾರಗಳ ವೆಚ್ಚಕ್ಕಾಗಿ ಪ್ರಜೆಗಳಿಂದ ವಸೂಲು ಮಾಡಲಾಗುತ್ತಿದ್ದ ಕರ. ಹಾಗಾಗಿ ಬೆಳ್ಳೂರು ಸಹ ಒಂದು ಸೈನಿಕ ವಿಭಾಗವಾಗಿದ್ದು, ಅದರ ನಿರ್ವಹಣೆಗಾಗಿ ತೆರಿಗೆಗಳನ್ನು ವಿಧಿಸುತ್ತಿದ್ದರು."[೨೬] ಈ ವಿಚಾರವನ್ನು ಸೂಕ್ಷ್ಮವಾಗಿ ಲಕ್ಷಿಸಿ ಈ ದಂಡನಾಯಕನು ಶತ್ರುಬಲದಿಂದ ಸಾಮ್ರಾಜ್ಯ ಸಂರಕ್ಷಣೆ ಮಾಡಲು ಬೆಳ್ಳೂರಿನಂತೆಯೇ ತನ್ನ ವ್ಯಾಪ್ತಿಯ ಪ್ರದೇಶಗಳಲ್ಲಿ ಸೈನಿಕ ವಿಭಾಗಗಳನ್ನು ಅಣಿಗೊಳಿಸಿದ್ದಿರಬೇಕೆಂದು ಊಹಿಸಬಹುದಲ್ಲವೇ ? ಹೊಯ್ಸಳ ಸಾಮ್ರಾಜ್ಯವನ್ನು ದಕ್ಷಿಣ ಪ್ರಾಂತ್ಯ ಮಧ್ಯದಲ್ಲಿ ಆಂತರಿಕವಾಗಿ ಸುಭದ್ರಗೊಳಿಸುತ್ತಿದ್ದ ಪೆರುಮಾಳೆದೇವದಂಡನಾಯಕನ ದೂರದೃಷ್ಟಿತ್ವವನ್ನು ಇದರಿಂದ ತಿಳಿಯಬಹುದಲ್ಲವೇ ?

ಕೇವಲ ರಾಜಕೀಯ ಸಬಲತೆಗೆ ಮಾತ್ರ ಗಮನವೀಯದೆ ಸಾಮಾಜಿಕ ಜನಜೀವನದ ಸುಭಗತೆಗೂ ಪೆರುಮಾಳೆದೇವ ದಂಡನಾಯಕನು ಶ್ರಮಿಸಿದ್ದನು. ನಾಗರಿಕ ಸಮಾಜಕ್ಕೆ ಶೈಕ್ಷಣಿಕವಾದ ಭದ್ರ ನೆಲೆಗಟ್ಟಿರಬೇಕೆಂಬುದನ್ನು ಈ ಜಾಣದಂಡನಾಯಕ ಚೆನ್ನಾಗಿಯೇ ಅರಿತಿದ್ದ. ಇದನ್ನು ಅವನ ಶಾಸನಗಳೇ ಸ್ಪಷ್ಟಗೊಳಿಸುತ್ತವೆ. ೧೫-೩-೧೨೬೧ರ ಬೇಲೂರಿನ ಶಾಸನದನ್ವಯ[೨೭] ೩ನೆಯ ನರಸಿಂಹನು ಬಲಕಣಿನಾಡಿನ ಬೆಳ್ಳೂರು ಮತ್ತು ಅದರ ಉಪಗ್ರಾಮಗಳನ್ನು ಅವುಗಳ ಸರ್ವಾದಾಯ ಸಮೇತವಾಗಿ ಪೆರುಮಾಳೆದೇವ ದಂಡನಾಯಕನಿಗೆ ಅಗ್ರಹಾರವನ್ನು ನಿರ್ಮಿಸಲು ನೀಡಿದನು. ದೊರೆಯ ಅಭಿಲಾಷೆಯಂತೆ ಪೆರುಮಾಳೆದೇವದಂಡನಾಯಕನು ಅಗ್ರಹಾರವನ್ನು ನಿರ್ಮಿಸಿ ಅದಕ್ಕೆ ಉದ್ಭವ ನರಸಿಂಹಪುರ ಎಂದು ಹೆಸರಿಟ್ಟು ಅದನ್ನು ೮೬ ವ್ರಿತ್ತಿಗಳನ್ನಾಗಿ ವಿಭಾಗಿಸಿ ವಿದ್ಯಾವಿಶಾರದರಾದ ಬ್ರಾಹ್ಮಣೋತ್ತಮರಿಗೆ ದಾನ ನೀಡಿದನು. ೨೯-೩-೧೨೭೧ರ ಶಾಸನದ[೨೮] ಪ್ರಕಾರ, ಪೆರುಮಾಳೆದೇವದಂಡನಾಯಕನು ಬೆಳ್ಳೂರಿನ ಮಾಧವ ದೇವಾಲಯದಲ್ಲಿ ಪಂಚಿಕೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿ ಇಂದ್ರಪರ್ವ ಮತ್ತು ಆರಣಪೂಜೆಗಳಿಗಾಗಿ ದತ್ತಿ ನೀಡಿದನು. ಅಲ್ಲಿಯೇ ಋಗ್ ಮತ್ತು ಯಜುರ್‌ವೇದಗಳನ್ನು ಪಠಿಸುವುದಕ್ಕಾಗಿ ಮತ್ತು ಬಾಲಶಿಕ್ಷೆಗಾಗಿ ಆ ಭೂಮಿಯಲ್ಲಿಯೇ ಕೆಲವು ಭಾಗಗಳನ್ನು ದತ್ತಿಬಿಟ್ಟನು. ಕ್ರಿ.ಶ. ೧೨೮೫ರ ಚಿತ್ರದುರ್ಗದ ಶಾಸನವು[೨೯] ಈ ದಂಡನಾಯಕನು ಪೆರುಮಾಳೆಪುರವಾಗಿ ಮಾಡಿದ ಬ್ರಹ್ಮಪುರಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೨೯೦ರ ಟಿ. ನರಸೀಪುರದ[೩೦] ಶಾಸನವು ಪೆರುವಾಳೆದೇವ ದಂಡನಾಯಕನು ಖಂಡಿಕ ಬಾಲಶಿಕ್ಷೆಯನ್ನು ನಡೆಸುವುದಕ್ಕೆ ಬಾಲಕರಿಗೆ ನಾಗರ, ಕನ್ನಡ, ತಿಗುಳ ಆರ್ಯಗಳನ್ನು ಕಲಿಸುವ ಉಪಾಧ್ಯಾಯರಿಗೆ, ಋಗ್ವೇದವನ್ನು ಓದಿಸುವ ಉಪಾಧ್ಯಾಯರಿಗೆ ಮತ್ತು ಅವರ ಜೀವತಕ್ಕೆಂದು ಭೂಮಿಯನ್ನು ಕೊಂಡು ದತ್ತಿಬಿಟ್ಟಿರುವುದನ್ನು ತಿಳಿಸುತ್ತದೆ. ಇದರೊಂದಿಗೆ ೨ ಮನೆಗಳನ್ನು ಹಾಗೂ ೬ ಗದ್ಯಾಣಗಳನ್ನು ಉಪಾಧ್ಯಾಯರಿಗೆಂದು ನೀಡಲಾಗಿತ್ತು. ಕೊಟ್ಟ ಭೂಮಿಯಲ್ಲಿ ಸಾಗುವಳಿ ನಡೆಸಲು ಇಬ್ಬರು ಉಪಾಧ್ಯಾಯರಿಗೆ ೨ ದುಗದ ಗದ್ಯಾಣವನ್ನು ಕೊಡಲಾಗಿತ್ತು. ಇವುಗಳನ್ನು ಅವರು ಖಂಡಿಕೆಯನ್ನು ನಡೆಸಲು ಬಳಸುತ್ತಿದ್ದರು. ಈ ಕೈಂಕರ್ಯಕ್ಕೆ ತೆರಬೇಕಾದ ತೆರಿಗೆಗಳನ್ನು ಮಹಾಜನರು ತೆರಬೇಕೆಂದು ದಂಡನಾಯಕನು ಸೂಚಿಸಿರುವನು. ಈ ಎಲ್ಲ ಶಾಸನೋಕ್ತ ವಿವರಗಳಿಂದ ಪೆರುಮಾಳೆದೇವದಂಡನಾಯಕನು ಅಗ್ರಹಾರ ಮತ್ತು ಬ್ರಹ್ಮಪುರಿಗಳನ್ನು ನಿರ್ಮಿಸಿ ವೇದಾಧ್ಯಯನ, ಭಾಷಾಧ್ಯಯನಗಳ ಮೂಲಕ ವಿವಿಧ ಆಯಾಮಗಳಲ್ಲಿ ಶಿಕ್ಷಣವನ್ನು ಪ್ರೋತ್ಸಾಹಿಸಿ ವಿದ್ಯಾವಂತ ವರ್ಗದ ನಿರ್ಮಾಣಕ್ಕೆ ತನ್ನದೇ ಆದ ವಿಶಿಷ್ಟವಾದ ಕೊಡುಗೆಯನ್ನು ಕೊಟ್ಟಿರುವುದು ವೇದ್ಯವಾಗುತ್ತದೆ.

೮-೮-೧೨೮೦ರ ಹಾನುಗಲ್ಲು ಶಾಸನದ[೩೧] ಪ್ರಕಾರ, ಪೆರುಮಾಳೆದೇವದಂಡನಾಯಕನು ಬಿಜ್ಜಲಾಪುರವೆನಿಸಿದ ಹಾನುಗಲ್ಲಿನ ಮಹಾಜನರಿಂದ ಭೂಮಿಯನ್ನು ಕೊಂಡು ಆಕಣಪೂಜಯ್ಯನೆಂಬಾತನ ಮಕ್ಕಳಿಗೆ ದಾನವಾಗಿ ನೀಡಿದನು. ಜೊತೆಗೆ ಹಾನುಗಲ್ಲು ಗ್ರಾಮದ ಮುಂದೆ 'ಪೆರುಮಾಳೆ ಸಮುದ್ರ'ವೆಂಬ ಕೆರೆಯನ್ನು ಕಟ್ಟಿಸಿದನು. ಕಾಲದ ಉಲ್ಲೇಖವಿರದ ಆದರೆ ೧೩ನೆಯ ಶತಮಾನದ್ದೆಂದು ಹೇಳಲಾಗಿರುವ ಕುಂದೂರಿನ ಶಾಸನದನ್ವಯ[೩೨] ಪೆರುವಾಳೆದೇವ ದಂಡನಾಯಕನು ತಾನು ಕಟ್ಟಿಸಿದ (ಕುಂದೂರಿನಲ್ಲಿ) ಪೆರುಮಾಳೆಸಮುದ್ರವನ್ನು ಪಂಚಿಕೇಶ್ವರ ಧರ್ಮಕ್ಕೆಂದು

ನಿರ್ಮಿಸಿದನು. ಈ ಶಾಸನಾಧಾರ ಗಳು ಆರ್ಥಿಕ ಸುಭಿಕ್ಷತೆಗಾಗಿ ಹೊಯ್ಸಳ ಅರಸರು ಕೆರೆಕಟ್ಟೆ ನಿರ್ಮಾಣ ಮಾಡುವುದು ಮತ್ತು ಆ ಮೂಲಕ ನೀರಾವರಿಗೆ ಪ್ರೋತ್ಸಾಹ ನೀಡುವಂತೆ ಈ ದಂಡನಾಯಕನು ಸಹ ಪ್ರಜಾಹಿತದ ಬದ್ಧತೆಯನ್ನು ಹೊಂದಿದ್ದನೆಂಬುದು ದೃಢವಾಗುತ್ತದೆ.

ಕ್ರಿ.ಶ. ೧೨೬೬ರ ಕೆಲವತ್ತಿಯ ಶಾಸನವು[೩೩] ಪೆರುಮಾಳೆ ದೇವದಂಡನಾಯಕನು ಅಲ್ಲಾಳಪೆರುಮಾಳದೇವರನ್ನು ಪ್ರತಿಷ್ಠಾಪಿಸಿ ದೈವದ ಪೂಜಾದಿಸೇವೆಗಳಿಗೆಂದು ಭೂದಾನ ನೀಡಿದುದನ್ನು ತಿಳಿಸುತ್ತವೆ. ದಾವಣಗೆರೆಯ ಕ್ರಿ.ಶ. ೧೨೬೭ರ ಶಾಸನದ[೩೪] ಪ್ರಕಾರ ಪೆರುಮಾಳೆದೇವದಂಡನಾಯಕನ ಇಚ್ಛೆಯ ಮೇರೆಗೆ ಚೌಡವೆಗ್ಗಡೆಯು ಹರಿಹರದೇವರ ನಂದಾದೀವಿಗೆಗೆ ೩ ಗದ್ಯಾಣ, ವನಮಾಲೆಗೆ ೧ ಗದ್ಯಾಣವನ್ನು ಅಲ್ಲಿನ ಮಹಾಜನಗಳಿಗೆ ದಾನ ನೀಡಿದನು. ಕ್ರಿ.ಶ. ೧೨೭೨ ಮತ್ತು ೧೨೭೭ರ ೨ ಶಾಸನಗಳು[೩೫] ಈ ದಂಡನಾಯಕನ ಆಣತಿಯಂತೆ ಹರಿಹರದೇವರಿಗೆಂದು ೪ ಗದ್ಯಾಣಗಳನ್ನು ಮಹಾಜನರಿಗೆ ಬೀರಯ್ಯನು ನೀಡಿದುದನ್ನು ತಿಳಿಯ ಪಡಿಸುತ್ತದೆ.

೧೭-೧೧-೧೨೭೬ರ ಹೊಳೆನರಸೀಪುರದ ಶಾಸನವು[೩೬] (ತ್ರುಟಿತ) ಪೆರುಮಾಳೆದೇವದಂಡನಾಯಕನು ಪಂಚಿಕೇಶ್ವರ, ಆರಣಪೂಜೆ ಹಾಗೂ ಐಂದ್ರಪರ್ವ ಸೇವೆಗಳಿಗೆಂದು ಉದ್ಧೂರ ಮಹಾಜನಗಳಿಂದ ಭೂಮಿಯನ್ನು ಕೊಂಡು ದಾನ ನೀಡಿದ ಸಗಂತಿಯನ್ನು ಒಳಗೊಂಡಿದೆ. ೧೮-೮-೧೨೮೦ರ ಬೇಲೂರು ಶಾಸನದಲ್ಲಿ[೩೭] ಈ ದಂಡ ನಾಯಕ ತನ್ನ ತಾಯಿ ಮಂಚಿಯಕ್ಕ (<ಮಂಚಾಂಬಿಕೆ)ಯ ಸ್ಮರಣಾರ್ಥ ಆಕೆಯ ವೃಂದಾವನವನ್ನು ನರಸೀಪುರದಲ್ಲಿ ನಿರ್ಮಿಸಿ ಭೂದಾನ ನೀಡಿದುದು ಉಕ್ತವಾಗಿದೆ. ೧೧-೧೧-೧೨೮೫ರ ನಂಜನಗೂಡಿನ ಶಾಸನವು (ತ್ರುಟಿತ)[೩೮] ಪೆರುಮಾಳೆದೇವದಂಡನಾಯಕನು ನೀಡಿದ ದಾನವೆಂಬಂತೆ ತೋರುತ್ತದೆ. ಕ್ರಿ.ಶ. ೧೨೮೬ರ ಹುಲಿಗುಂದ ಗ್ರಾಮದ ಶಾಸನದ ಪ್ರಕಾರ[೩೯] ಈ ದಂಡನಾಯಕನು ಎಸಗೂರಿನ ಗೌಡಪ್ರಜೆಗಳಿಂದ ಕೊಂಡ ಪ್ರದೇಶಗಳನ್ನು ಪಂಚಿಕೇಶ್ವರ ದೇವರುಗಳಿಗೆಂದು ಭೂದಾನ ನೀಡಿದನು. ಇದೇ ಕಾಲದ ಇನ್ನೊಂದು ಶಾಸನದನ್ವಯು[೪೦] ಪೆರುವಾಳೆದೇವ ದಂಡನಾಯಕನು ಬೆನಕಗೌಡನಿಂದ ಕೊಂಡ ಬೆಮ್ಮತ್ತೂರಿನ ನಗರೇರಸೀಮೆಯೊಳಗಿನ ಕುರುಬರ ಕಾಳೆಯರ ಕೆರೆಯನ್ನು ಕೊಂಡು ಹೊಸದಾಗಿ ಕಟ್ಟಿಸಿ ಅದಕ್ಕೆ ಪೆರುಮಾಳೆಸಮುದ್ರ ವೆಂದು ನಾಮಕರಣ ಮಾಡಿ ಆ ಕೆರೆಯ ಕೆಳಗಿನ ಕೆಲ ಭೂಭಾಗಗಳನ್ನು ಪೆರುಮಾಳೆಪುರದ ಪಂಚಿಕೇಶ್ವರದೇವರ ಐಂದ್ರಪರ್ವಕ್ಕೆಂದು ದತ್ತಿಬಿಟ್ಟನು. ೫-೧೧-೧೯೯೦ರ ಟಿ. ನರಸೀಪುರದ ಶಾಸನದ[೪೧] ಪ್ರಕಾರ ಈ ದಂಡನಾಯಕನು ಆಲಂಗೋಡು (ಸರ್ವಜ್ಞ ಪ್ರಸನ್ನ ಕೇಶವಪುರದ) ಸ್ಥಳದ ಕೇಶವದೇವರು ಮತ್ತು ರಂಗನಾಥದೇವರಿಗಾಗಿ ರಂಗಮಂಟಪ ಗಳನ್ನು ಕಟ್ಟಿಸಿದನು. ೧೩ನೆಯ ಶತಮಾನದ್ದೆನ್ನಲಾದ ಚನ್ನರಾಯಪಟ್ಟಣದ ಶಾಸನವು[೪೨] ವಿಜಯಮಾಧವ ಪುರವಾದ ಕುಂದೂರಲಿ ಪಂಚಿಕೇಶ್ವರ ಧರ್ಮಕ್ಕೆಂದು ದಾನ ನೀಡಿದುದನ್ನು ಉಲ್ಲೇಖಿಸುತ್ತದೆ. ಇದೇ ಕಾಲಮಾನದ ಚಾಮರಾಜನಗರ ಶಾಸನವು[೪೩] ನರಸಿಂಗಮಂಗಲದಲ್ಲಿ ಜನಾರ್ಧನದೇವರಿಗೆ ರಾಮಸಮುದ್ರದ ಬಳಿಯ ಕೆಲವು ಪ್ರದೇಶಗಳನ್ನು ದತ್ತಿ ಬಿಟ್ಟನೆಂಬುದನ್ನು ತಿಳಿಸುತ್ತದೆ.

ಈ ಶಾಸನೀಯ ಅಂಶಗಳು ಪೆರುಮಾಳೆದೇವ ದಂಡನಾಯಕನ ಧಾರ್ಮಿಕನಿಷ್ಠೆಯನ್ನು ಮತ್ತು ಅದರ ಹಿಂದಿರುವ ಸಾಮಾಜಿಕ ಕಳಕಳಿಯನ್ನು ಬಿಂಬಿಸುತ್ತವೆ. ಹೀಗೆ ಪೆರುಮಾಳೆದೇವದಂಡನಾಯಕನು ತನ್ನ ಸುಪರ್ದಿಯಲ್ಲಿನ ಪ್ರದೇಶಗಳಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ನೆಲೆಗಟ್ಟಿನಲ್ಲಿ ಸರ್ವಾಂಗೀಣ ಏಳಿಗೆಗೆ ಶ್ರದ್ಧಾ-ಶ್ರಮಪೂರ್ವಕ ವಾಗಿ ಪ್ರಯತ್ನಿಸುತ್ತಿದುದು ಅರಿವಾಗುತ್ತದೆ.

ಆಲತ್ತೂರಿನ (೧೩ನೆಯ ಶತಮಾನ) ಶಾಸನವು[೪೪] ಪೆರುವಾಳೆದೇವ ದಂಡನಾಯಕನ ಅಧೀನದಲ್ಲಿದ್ದ ಕೆಂಪಗೌಡನ ವೋಲೆಯಕಾರನೋರ್ವನು ಹುಲಿಯೊಂದಿಗೆ ಹೋರಾಡಿ ಅದನ್ನು ಕೊಂದು ತಾನೂ ಮಡಿದ ವಿಚಾರವನ್ನು ಒಳಗೊಂಡಿದೆ. ಈ ದಂಡನಾಯಕನ ಪರಾಕ್ರಮದಂತೆ ಅವನ ಅನುವರ್ತಿಗಳು ಸಹ ಶೌರ್ಯಸಾಹಸಿಗರಾಗಿದ್ದರೆಂಬುದಕ್ಕೆ ಇದೊಂದು ನಿದರ್ಶನ.

**ಬಸವಿಯಕ್ಕ :** ೨೯-೩-೧೨೭೧ರ ಬೆಳ್ಳೂರಿನ ಶಾಸನವು[೪೫] ಪೆರುಮಾಳೆದೇವದಂಡನಾಯಕನಿಗೆ ಬಸವಿಯಕ್ಕ ಎಂಬ ತಂಗಿಯಿದ್ದುದನ್ನು ತಿಳಿಸುತ್ತದೆ. ಈಕೆ ಬೆಳ್ಳೂರಿನ ಪ್ರಸನ್ನವಾಧವದೇವರ ನೈವೇದ್ಯಕ್ಕೆಂದು ಕೆಲವು ಭೂದಾನಗಳನ್ನು ನೀಡಿದ್ದಳು.

**ಚಕ್ರವರ್ತಿದಂಡನಾಯಕ :** ಪೆರುವಾಳೆದೇವ ದಂಡನಾಯಕನಿಗೆ ಚಕ್ರವರ್ತಿ ದಂಡನಾಯಕ ಎಂಬ ಮಗನಿದ್ದನು. ಇವನ ಪ್ರಥಮ ಉಲ್ಲೇಖವು ಕ್ರಿ.ಶ. ೧೩೦೫ರ[೪೬] ಬೆಂಗಳೂರು ತಾಲ್ಲೂಕಿನ ಶಾಸನವೊಂದರಲ್ಲಿ ಕಂಡುಬರುತ್ತದೆ. ಈತನು 'ಗಂಗನಾರಾಯಣ ಚತುರ್ವೇದಿ ಮಂಗಲದ ಸಿಂಗಿನಾಯಕನ 'ಹಳ್ಳಿಯ ಸಮಸ್ತ ಕೆರೆಬಾವಿಗಳನ್ನು, ಭೂಪ್ರದೇಶಗಳನ್ನು ಸರ್ವಮಾನ್ಯವಗಿ ಯಲಹಂಕನಾಡಿನ ನಿವಾಸಿಗಳ ಸಮಕ್ಷಮದಲ್ಲಿ ಗಂಗನಾರಾಯಣಪೆರುಮಾಳ್ ದೇವರಿಗೆ ಧಾರಾಪೂರ್ವಕವಾಗಿ ನೀಡಿದನು.

೩೦-೧೧-೧೩೯೭ರ ಬೆಳ್ಳೂರಿನ ಶಾಸನದನ್ವಯ[೪೭] ಚಕ್ರವರ್ತಿದಂಡನಾಯಕನು ತನಗೆ ಅನುವಂಶಿಕವಾಗಿ ಬಂದ ವತ್ತಿಯ ಗ್ರಾಮಗಳಾದ ಕಾಳಿಗರಾಮನಹಳ್ಳಿ ಮತ್ತು ಸೆಟ್ಟಿಹಳ್ಳಿಗಳನ್ನು ತನಗೆ ಉಳಿಸಿಕೊಂಡು ಬೆಳ್ಳೂರಿನ ಮಹಾಜನರಿಗೆ ಉಳಿದ ಗ್ರಾಮಗಳನ್ನು ಕ್ರಯದಾನವಾಗಿ ನೀಡಿದ್ದಾನೆ.

**ಮಂಚೆಯದಂಡನಾಯಕ :** ಈತ ಪೆರುಮಾಳೆದೇವ ದಂಡನಾಯಕನ ಮತ್ತೋರ್ವ ಮಗ. ೩೦-೧೦-೧೩೧೮ರ ಬೇಲೂರಿನ ಶಾಸನದಲ್ಲಿ[೪೮] ಮಾತ್ರ ಇವನ ವಿಚಾರ ಉಲ್ಲೇಖ ಗೊಂಡಿದೆ. ಈ ಶಾಸನದ ಪ್ರಕಾರ, ಮಂಚೆಯದಂಡನಾಯಕನು ನರಸಿಂಹದೇವರ ತಿರುವಧ್ಯಯನ ಮತ್ತು ಆರಾಧನೆಗಾಗಿ ೩ ಗದ್ಯಾಣಗಳನ್ನು ದಾನ ನೀಡಿದ್ದನು.

**ಹೆಗ್ಗಡೆದೇವ :** ಈತ ಪೆರುಮಾಳೆದೇವದಂಡನಾಯಕನ ಇನ್ನೋರ್ವ ಮಗ. ಈತನ ಕಾರ್ಯಭಾರಗಳು ಮೈಸೂರಿನ ಹೆಗ್ಗಡದೇವನ ಕೋಟೆಯಲ್ಲಿದ್ದಂತೆ ಇದೆ. ಇವನಿಂದಲೇ ಈ ಪ್ರದೇಶಕ್ಕೆ ಹೆಗ್ಗಡದೇವನಕೋಟೆ ಎಂದು ಹೆಸರು ಬಂದಿರಬಹುದೇ?

೦೧-೪-೧೩೨೭ರ ಹೆಗ್ಗಡೆದೇವನಕೋಟೆಯ ಶಾಸನವು[೪೯] ಹೆಗ್ಗಡೆದೇವನು ಬಪ್ಪನಹಳ್ಳಿಯನ್ನು ಪೆರುಮಾಳು ಪುರವೆಂಬ ಅಗ್ರಹಾರವನ್ನಾಗಿಸಿ ಅದನ್ನು ಗ್ರಾಮದೈವವಾದ ಗೋಪಿನಾಥದೇವರಿಗೆ ದಾನ ನೀಡಿದನು.

**ರುದ್ರಂಣ :** ಈತ ಪೆರುಮಾಳೆದೇವದಂಡನಾಯಕನ ಅಳಿಯ. ಈತ ಈ ದಂಡನಾಯಕನ ತಂಗಿಯ ಮಗನಾಗಿರಬಹುದೆ ? ಬೇಲೂರಿನ ೨ ಶಾಸನಗಳಲ್ಲಿ[೫೦] ಈತ ಉಲ್ಲೇಖಗೊಂಡಿದ್ದಾನೆ. ಕ್ರಿ.ಶ. ೧೨೭೭ರ ಶಾಸನವು ರುದ್ರಣ್ಣನು ಕಮಳನಾಭತೀರ್ಥರಿಗೆ ೧೧ ಗದ್ಯಾಣಗಳನ್ನು ಯತಿಭಿಕ್ಷೆಗಾಗಿ ದಾನ ನೀಡಿದನು. ೧೨೯೭ರ ಶಾಸನದ ಪ್ರಕಾರ, ಬೇಲೂರಿನ ಇತರರೊಡ ಗೂಡಿ ರುದ್ರಣ್ಣನು ೧೫ ಗದ್ಯಾಣಗಳನ್ನು ಯತಿಭಿಕ್ಷೆಗೆಂದು ನೀಡಿದನು.

## ಮಾಧವದಂಡನಾಯಕನ ಮಕ್ಕಳು

ಮಾಧವದಂಡನಾಯಕ ಎಂಬ ಭರತಜೀಯ ದಂಡನಾಯಕ, ಕೇತೆಯದಂಡನಾಯಕ, ಸಿಂಗೆಯದಂಡ ನಾಯಕ ಎಂಬ ಮೂವರು ಮಕ್ಕಳಿದ್ದರೆಂಬುದು ಶಾಸನ ಗಳಿಂದ ತಿಳಿದುಬರುತ್ತದೆ.

**ಭರತಜೀಯ ದಂಡನಾಯಕ-ಕೇತೆ ದಂಡನಾಯಕ :** ಕ್ರಿ.ಶ. ೧೩೨೦ರ ರಾಘವಾಪುರದ ಶಾಸನದಲ್ಲಿ[೫೧] ಮಾಧವದಂಡನಾಯಕನ ಮಕ್ಕಳಾದ ಭರತಜೀಯ ದಂಡನಾಯಕ ಮತ್ತು ಕೇತೆಯದಂಡನಾಯಕನ ಆಳ್ವಿಕೆಯ ವಿಚಾರ ವ್ಯಕ್ತವಾಗಿದೆ. ಮಾಧವದಂಡನಾಯಕನಿಂದ ಹಿಂದೆ ಎಂದೋ ಪಡೆದಿದ್ದ ಭೂಮಿಯನ್ನು ಮಾದಜೀಯನೆಂಬಾತ ನೊರ್ವ ದಾನ ನೀಡಿದುದು ಈಗಾಗಲೇ ನಾನು ಉಲ್ಲೇಖಿಸಿರುವ ಕ್ರಿ.ಶ. ೧೩೨೧ರ ಶಾಸನದಲ್ಲಿ ಕಂಡು ಬಂದಿದೆ. ೧೩೨೦ರ ರಾಘವಪುರ ಶಾಸನದಲ್ಲಿ ಭರತಜೀಯ ದಂಡನಾಯಕನು ಪದಿನಾಲ್ಕುನಾಡನ್ನು ಪರಿಪಾಲಿಸುತ್ತಿದ್ದುದು ನಿಚ್ಚಳವಾಗಿರುವುದರಿಂದ ಮಾಧವದಂಡನಾಯಕನು (ಕ್ರಿ.ಶ. ೧೩೨೦ಕ್ಕೆ ಪೂರ್ವದಲ್ಲಿಯೇ ಗತಿಸಿರುವ ಸಾಧ್ಯತೆಗಳನು ಹೆಚ್ಚಿವೆ. ಈ ಶಾಸನದ ತರುವಾಯ ಶಾಸನಗಳಲ್ಲಿ ಅವನ ಮಕ್ಕಳ ಮತ್ತು ಕೆಲವು ಪದಿನಾಲ್ಕುನಾಡಿನ ದಾನಿಗಳು ನೀಡಿರುವ ದಾನಶಾಸನಗಳಲ್ಲಿ ಕೇವಲ ಅವನ ಹೆಸರು ಮಾತ್ರವೇ ಉಲ್ಲೇಖಗೊಂಡಿರುವುದು ಲಕ್ಷ್ಯಾರ್ಹ. ಹೀಗಾಗಿ ಮಾಧವದಂಡನಾಯಕನ ತರುವಾಯ ಭರತಜೀಯ ಪದಿನಾಲ್ಕುನಾಡಿನ ನಾಡಾಧಿಪತಿಯಾಗುತ್ತಾನೆ. ಇವನಿಗೆ ನೆರವಾಗಿ ಮಾಧವದಂಡನಾಯಕನ ಇನ್ನೋರ್ವ ಮಗ ಕೇತೆಯದಂಡನಾಯಕನು ಇರುತ್ತಾನೆ. ರಾಘವಪುರದ ಈ ಶಾಸನದ ಪ್ರಕಾರ, ಕೇತೆಯದಂಡನಾಯಕನು ಶ್ರೀಕರಣದ ರಾಘವದೇವರ ಮಕ್ಕಳಾದ ನಾರಣದೇವರಿಗೆ ಅವರ ತಂದೆ ರಾಘವದೇವರ ಹೆಸರಿನಲ್ಲಿ ರಾಘವಪುರವೆಂಬ ಅಗ್ರಹಾರವನ್ನು ನಿರ್ಮಿಸಲು ಕುಡುಗುನಾಡಿನೊಳಗಣ, ಗೊಮಂಟಹಳ್ಳಿಯನು ಮತ್ತು ಮಾದೆಯಹಳ್ಳಿಯನ್ನು ಸರ್ವಬಾಧಾ ಪರಿಹಾರಾರ್ಥ ವಾಗಿ ದಾನ ಮಾಡಿದನು.

೨-೪-೧೩೨೭ರ ಹೆಗ್ಗವಾಡಿಯ ಶಾಸನದಲ್ಲಿ[೫೨] ಶ್ರೀಮನ್ಮಹಾ ಪ್ರಧಾನ ಕೇತೆಯದಂಡನಾಯಕನು ಪದಿನಾಲ್ಕು ನಾಡಿನಲ್ಲಿ ಪೃಥ್ವಿರಾಜ್ಯಂಗೆಯುತ್ತಿರುವ ಉಲ್ಲೇಖವಿರುವುದನ್ನು ಗಮನಿಸಿದರೆ, ಈ ವೇಳೆಗೆ ಭರತಜೀಯನು ಆಗಿಹೋಗಿರ ಬಹುದು. ಮತ್ತೊಂದು ವಿಚಾರವೆಂದರೆ, ಮಾಧವದಂಡ ನಾಯಕ ಹಾಗೂ ಭರತಜೀಯರ ಚಟುವಟಿಕೆಗಳು ತಮಿಳುನಾಡಿನ ಕೊಯಮತ್ತೂರು, ಉತ್ತರ ಆರ್ಕಾಡು ಹಾಗೂ ಇನ್ನುಳಿದ ಭಾಗಗಳಲ್ಲಿ ಕಂಡುಬರದೇ ಇರುವುದರಿಂದ ಕೇತೆಯದಂಡನಾಯಕನ ಈ ಶಾಸನವು ಸ್ಪಷ್ಟವಾಗಿ ಅವನ ಪೂರ್ವಿಕರು ಗತಿಸಿರುವಿಕೆಯ ಸಾಧ್ಯತೆಯನ್ನು ಎತ್ತಿಹಿಡಿಯುತ್ತದೆ. ಈ ಶಾಸನವು ಕೇತೆಯ ದಂಡನಾಯಕನು ಹಗೆವಾಡಿಯ (<ಹೆಗ್ಗವಾಡಿ) ಶಿವದೇಗುಲಕ್ಕೆ ಬಿಟ್ಟ ದೇವದಾನವನ್ನು ತಿಳಿಸುತ್ತದೆ.

೨೭-೩-೧೩೩೨ರ ಹುಲ್ಲಹಳ್ಳಿಯ ಶಾಸನದ[೫೩] ಪ್ರಕಾರ, ಕೇತೆಯ ದಂಡನಾಯಕನು ಹದಿನಾಲ್ಕು ನಾಡನ್ನು ಪ್ರತಿಪಾಲಿಸುತ್ತಿರುವಾಗ ೩ನೆಯ ಬಲ್ಲಾಳನು ಹಾಜುಗುತ್ತಿಗೆಯ ಹುಲ್ಲನಹಳ್ಳಿಯನಾಡಿನ ಅಲ್ಲಾಳನಾಥದೇವರ ಅಂಗರಂಗ

ಭೋಗಗಳಿಗೆಂದು ಕೇತಮ್ಮನಹಳ್ಳಿಯನ್ನು ಸರ್ವಬಾಧಾ ಪರಿಹಾರಾರ್ಥವಾಗಿ ದಾನ ನೀಡಿದನು.

೬-೧೨-೧೩೩೪ರ ಕಂದಾಗಾಲದ ಶಾಸನದನ್ವಯ[೫೪] ಕೇತೆಯದಂಡನಾಯಕನು ರಾಜ್ಯಗೆಯ್ಯುತ್ತಿರಲು ಕಂದವೆಂಗಲ (<ಕಂದಾಗಾಲ)ದ ಬಮ್ಮಗೌಡನ ಮಕ್ಕಳು ತಮ್ಮ ತಂದೆಗೆ ಪುಣ್ಯವಾಗಲೆಂದು ಸೋಮನಾಥದೇವರ ನಂದಾದೀವಿಗೆ ಗೆಂದು ಎಣ್ಣೆಯನ್ನು ದಾನ ಮಾಡಿದರು. ಶಾಸನೋಕ್ತ ಸೋಮನಾಥದೇವರು ತೆರಕಣಾಂಬಿಯಲ್ಲಿರುವ ಸೋಮನಾಥದೈವವೇ ಆಗಿದ್ದು, ಕಂದಾಗಾಲ ಮತ್ತು ಅದರ ಸುತ್ತಮುತ್ತಲಿನ ಹಳ್ಳಿಗಳ ಶಾಸನಗಳು ಸಹ ಈ ಸೋಮನಾಥದೇವರಿಗೆ ಸಂದ ದಾನಗಳನ್ನು ಉಲ್ಲೇಖಿಸಿ ರುವುದರ ಆಧಾರದ ಮೇಲೆ ಹೀಗೆ ಸಮರ್ಥಿಸಿದ್ದೇನೆ.

೧೩ನೆಯ ಶತಮಾನದ ನರಸಮಂಗಲದ ಶಾಸನವು[೫೫] ಕೇತೆಯದಂಡನಾಯಕನು ನರಸಿಂಹಮಂಗಲ (<ನರಸಮಂಗಲ)ದ ರಾಮನಾಥ ದೇವರಿಗೆ ಬಿಟ್ಟ ಭೂದಾನವನ್ನು ತಿಳಿಸುತ್ತದೆ. ೨೯-೫-೧೩೩೮ರ ಗುಂಡ್ಲುಪೇಟೆಯ ತ್ರುಟಿತ ಶಾಸನವು[೫೬] ಕೇತೆಯ ದಂಡನಾಯಕನಿಗೆ ಮಗನಿದ್ದುದನ್ನೂ (ಹೆಸರು ತಿಳಿದು ಬಂದಿಲ್ಲ.) ಅವನ ನಾಮಕರಣವನ್ನು ನಡೆಸಿದ ಅರ್ಚಕ ನೊರ್ವನು ಈ ದಂಡನಾಯಕನಿಂದ ಪಡೆದ ಭೂದಾನವನ್ನು ತಿಳಿಸುತ್ತದೆ.

ಕ್ರಿ.ಶ. ೧೩೩೮ರ ನಂತರ ಕೇತೆಯದಂಡನಾಯಕನ ಶಾಸನಗಳು ತೆರಕಣಾಂಬಿಯಲ್ಲಿ ಕಂಡುಬರದೇ ಕೊಯಮತ್ತೂರಿನಲ್ಲಿ ಕಂಡುಬಂದಿರುವುದು ಗಮನಾರ್ಹ. ಕ್ರಿ.ಶ. ೧೩೩೮-೩೯ರ ೨ ತಮಿಳು ಶಾಸನಗಳು[೫೧] ಕೊಯಮತ್ತೂರಿನ ಉದಮಲ್‌ಪೇಟೆಯಲ್ಲಿನ ಸಂಗ್ರಾಮ ನಲ್ಲೂರು ಗ್ರಾಮದಲ್ಲಿ ದೊರೆತಿದ್ದು, ಈ ಶಾಸನಗಳು ಈ ಕೇತೆಯದಂಡನಾಯಕನೇ ಮಾಧವದಂಡನಾಯಕನ ಮಗನೆಂಬುದನ್ನು ಸ್ಪಷ್ಟಗೊಳಿಸುತ್ತವೆ. ಕೇತೆಯದಂಡನಾಯಕನು ತನ್ನ ತಂದೆಯ ಹೆಸರಿನಲ್ಲಿನ ಮಾಧವ ಚತುರ್ವೇದಿಮಂಗಲ ಹಾಗೂ ತೆನ್ನವದರಾಯ ಚತುರ್ವೇದಿಮಂಗಳಗಳೆಂಬ ೨ ಹಳ್ಳಿಗಳನ್ನು ತನ್ನ ಕಿರಿಯ ಸಹೋದರ ಸಿಂಗೆಯ ದಂಡನಯಕನ ವಿಜಯ ಮತ್ತು ಅಭ್ಯುದಯಕ್ಕಾಗಿ ದಾನ ನೀಡಿದುದುದನ್ನು ಈ ೨ ಶಾಸನಗಳು ತಿಳಿಸುತ್ತವೆ.

**ಸಿಂಗೆಯದಂಡನಾಯಕ** : ಮಾಧವದಂಡನಾಯಕನ ಮಕ್ಕಳಲ್ಲಿ ಅತ್ಯಂತ ಪ್ರಬಲನಾದವನು ಸಿಂಗೆಯದಂಡನಾಯಕ. ೨೫-೮-೧೩೩೮ರ ಹಳಗನಹಳ್ಳಿಯ ಶಾಸನವೊಂದು[೫೮] ಮಾತ್ರ ಕನ್ನಡನಾಡಿನ ಭಾಗದಲ್ಲಿ ದೊರೆತಿರುವ ಏಕೈಕ ಶಾಸನ ವಾಗಿದೆ. ಈ ಶಾಸನದ ಪ್ರಕಾರ, ಸಿಂಗೆಯದಂಡನಾಯಕನು ಹಳಗನಹಳ್ಳಿ ಮತ್ತು ಇತರೆ ಗ್ರಾಮಗಳನ್ನು ವೀರಭದ್ರದೇವರಿಗೆ ದಾನ ನೀಡಿದನು. ಈತ ತಮಿಳುನಾಡಿನ ರಾಜಕೀಯದಲ್ಲಿ ಹೊಯ್ಸಳರ ಪರವಾಗಿ ಪ್ರಬಲ ಸೇನಾನಿಯಾಗಿ ಕಾರ್ಯನಿರ್ವಹಿಸುತ್ತಿದ್ದನು. ಹೊಯ್ಸಳರು ತೊಂಡಮಂಡಲವನ್ನು ಗೆದ್ದಮೇಲೆ ಅಲ್ಲಿನ ಯಾದವರಾಯರೆಂಬ ವಂಶದ ದೊರೆ ತಿರುವೇಂಕಟನಾಥನು ಹೊಯ್ಸಳರಿಗೆ ಶರಣಾಗತನಾಗಿ ಅವರ ಸಾಮಂತನಾದನು. ಈ ತಿರುವೇಂಕಟನಾಥನಲ್ಲಿ ಪ್ರಧಾನಿ ಯಾಗಿದ್ದ ಪೆರುಮಾಳೆದೇವದಂಡನಾಯಕನ ಸಂಬಂಧಿಯೇ ಆಗಿದ್ದ ರೇಚಯ್ಯದಂಡನಾಯಕನು ತೀರಿಹೋದಮೇಲೆ ತಿರುವೇಂಕಟನಾಥನಿಗೆ ಮಾಧವದಂಡನಾಯಕನ ಕಿರಿಯ ಮಗ ಸಿಂಗೆಯದಂಡನಾಯಕನು ಅಲ್ಲಿಯ ಹೊಯ್ಸಳ ಬಲವನ್ನು ಕಾಯಲು ಪ್ರಧಾನಿಯಾಗುತ್ತಾನೆ. ಮುಂದೆ ವೀರಬಲ್ಲಾಳನು ೧೩೪೭ರಲ್ಲಿ ಮರಣ ಹೊಂದಲು ಸಿಂಗೆಯದಂಡನಾಯಕನು ಅಲ್ಲಿ ಪ್ರವರ್ಧಮಾನಕ್ಕೆ ಬರುತ್ತಾನೆ. ತಿರುಪತಿಯ ತಿಮ್ಮಪ್ಪನಿಗೂ ಸಿಂಗೆಯದಂಡನಾಯಕನ ಹಲವು ಸೇವೆಗಳು, ದಾನಧರ್ಮಗಳು ಸಂದಿರುವುದಕ್ಕೆ ಶಾಸನಾಧಾರ ಗಳಿವೆ. ಕೆಳತಿರುಪತಿಯಲ್ಲಿ 'ಸಿತಕರ ಗಂಡನ್ ಮಠ' ವೆಂಬ ಶ್ರೀವೈಷ್ಣವಮಠವು ಇವನ ಪ್ರಯತ್ನದ ಫಲವಾಗಿ ಸ್ಥಾಪನೆ ಯಾಯಿತು. ಸಿಂಗೆಯದಂಡನಾಯಕನ ರಾಜಕೀಯ ನಡೆಗಳು ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ವಿವರಿಸಲು ಈ ಲೇಖನದ ಮಿತಿ ಅಡ್ಡಬರುವುದರಿಂದ ಅವುಗಳನ್ನು ನನ್ನ ಇನ್ನೊಂದು ಲೇಖನದಲ್ಲಿ ಕಾಣಬಹುದು.

### ಕೆಲವು ಒಳನೋಟಗಳು

೧) ಸುಮಾರು ೧ ಶತಮಾನದ ತುಂಬ (ಕ್ರಿ.ಶ. ೧೨೫೫-೧೩೫೬) ಹೊಯ್ಸಳ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ದಂಡನಾಯಕರಾಗಿ, ಮಹಾಪ್ರಧಾನಿಗಳಾಗಿ, ನಾಡಾಧಿಪತಿಗಳಾಗಿ ಸೇವೆ ಸಲ್ಲಿಸಿದ ಮಾಧವದಂಡನಾಯಕನ ವಂಶೀಯರು ವೈರಿಬಲವನ್ನು ಮಟ್ಟಹಾಕಿ ಮೂರನೆಯ ಬಲ್ಲಾಳನ ಕಾಲದಲ್ಲಿ ಹೊಯ್ಸಳರ ಘನತೆ ಗೌರವ, ಸಾರ್ವಭೌಮತ್ವಗಳ ಪುನಃ ಸ್ಥಾಪನೆಯ ಪ್ರಯತ್ನದಲ್ಲಿ ನೆರವಾಗಿ ಮಹೋನ್ನತ ಸಾಧನೆ ಮಾಡಿದ್ದಾರೆ.

೨) ಮೂಲತಃ ಇವರು ಕೊಯಮತ್ತೂರಿನ ಸತ್ಯಮಂಗಲದ ಸಮೀಪದ ದಣ್ಣಾಯಕನಕೋಟೆಯ ಪಾಳೆಯಗಾರರ ವಂಶೀಯರು. ಪೆರುಮಾಳೆದೇವ ದಂಡನಾಯಕನೇ ದಣ್ಣಾಯಕನಕೋಟೆಯನ್ನು ಕಟ್ಟಿ ಈ ವಂಶದಲ್ಲಿ ಪ್ರಥಮ ಪ್ರಸಿದ್ಧ ದಂಡನಾಯಕನಾದವನು. ಈತನು ನಿರ್ಮಿಸಿದ ಕೋಟೆಗೆ ನಿಲುಗಿರಿಸಾಧಾರಂಕೊಟ್ಟೈ ಎಂಬ ಹೆಸರಿತ್ತು. ಇವನ ಬಿರುದು 'ನಿಲುಗಿರಿ ಸಾಧಾರ' ಎಂದಿರುವು ದನ್ನು ಗಮನಿಸಬೇಕು. ಬಹುಶಃ ಪುಣಿಸಮಯ್ಯ

ದಂಡನಾಯಕನ (ವಿಷ್ಣುವರ್ಧನನ ಮಂತ್ರಿ) ತರುವಾಯ ಪೆರುಮಾಳೆದೇವದಂಡ ನಾಯಕನು ನೀಲಗಿರಿಯನ್ನು ಗೆದ್ದುದರಿಂದ ಅವನಿಗೆ ಈ ಬಿರುದು ಸಂದಿದೆ.[೫೯] ಹಾಗಾಗಿ ಅವನು ಕಟ್ಟಿದ ಕೋಟೆಗೆ 'ನೀಲಗಿರಿಸಾಧಾರಂ ಕೋಟ್ಟೈ', 'ದಣ್ಣಾಯಕನ ಕೋಟೆ', ಎಂಬ ಹೆಸರು ಬಂದಿದೆ. ದಣ್ಣಾಯಕನ ಈ ಕೋಟೆಯೇ ನಮ್ಮ ನಮ್ಮ ನಾಡಿನ ಪ್ರಾಚೀನ ಆಡಳಿತದ ಘಟಕವಾಗಿತ್ತೆಂಬುದಕ್ಕೆ ಈ ವಂಶೀಯರ ಶಾಸನಗಳು ಆಧಾರವಾಗಿವೆ.

೩) ಮಾಧವದೇವದಂಡನಾಯಕನ ಶಾಸನಗಳಲ್ಲಿ ವಿಶೇಷವಾಗಿ 'ತಾವು ಸ್ವಸ್ತಿ ಪುರವರಾಧೀಶ್ವರರು' ಎಂದು ಕರೆದುಕೊಂಡಿರುವುದು ತಿಳಿದುಬರುತ್ತದೆ. ಮಾಧವದಂಡ ನಾಯಕನಾದರೋ ತೆರಕಣಾಂಬಿಯನ್ನು ರಾಜಧಾನಿಯ ನ್ನಾಗಿಸಿಕೊಂಡು ಆಳುತ್ತಿದ್ದುದರಿಂದ ತೆರಕಾಣಾಂಬಿಯೇ ಸ್ವಸ್ತಿಪುರವಾಗಿರಬಹುದೇ ?

೪) ಪರೆಮಾಳೆದೇವದಂಡನಾಕನು ಕ್ರಿ.ಶ. ೧೨೫೫ ರಿಂದ ೧೨೮೦ರವರೆಗೂ ಚಿತ್ರದುರ್ಗ, ಹಾಸನ, ಮಂಡ್ಯದ ಸುತ್ತಮುತ್ತಲ ಪ್ರದೇಶಗಳಲ್ಲಿ ಪ್ರಾಂತ್ಯಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುತ್ತಾನೆ. ೩ನೆಯ ನರಸಿಂಹ ಮತ್ತು ೩ನೆಯ ಬಲ್ಲಾಳನಲ್ಲಿ ಪ್ರಧಾನಿಯಾಗಿದ್ದ ಸೋಮೆಯ ದಂಡನಾಕನು ಚಿತ್ರದುರ್ಗ, ಹಾಸನದ ಪ್ರದೇಶಗಳಿಗೆ ಪ್ರಾಂತ್ಯಾಧಿಕಾರಿಯಾಗಿ ಬಂದ ಮೇಲೆ ಪೆರುಮಾಳೆಯು ಮೈಸೂರು, ಚಾಮರಾಜನಗರ ಪ್ರದೇಶಗಳ ಪ್ರಾಂತ್ಯಾಧಿಕಾರಿ ಯಾಗಿ ನಿಯೋಜನೆಗೊಳ್ಳುತ್ತಾನೆ. ಕ್ರಿ.ಶ. ೧೩೦೩ರ ವೇಳೆಗೆ ಚಾಮರಾಜನಗರ, ಮೈಸೂರು, ಗುಂಡ್ಲುಪೇಟೆ, ಕೊಳ್ಳೆಗಾಲ, ನಂಜನಗೂಡು ಪ್ರದೇಶಗಳನ್ನೊಳಗೊಂಡ ಹದಿನಾಲ್ಕು ನಾಡನ್ನು ಸುಭದ್ರವಾಗಿ ಕಟ್ಟಿ ತನ್ನ ಮಗ ಮಾಧವದಂಡ ನಾಯಕನನ್ನು ಈ ನಾಡಿನ ಅಧಿಪತಿಯನ್ನಾಗಿಸುವಲ್ಲಿ ಪೆರುಮಾಳೆದೇವದಂಡನಾಯಕನ ಇಚ್ಛಾಶಕ್ತಿ ಗೋಚರಿಸುತ್ತದೆ. ಪೆರುಮಾಳೆಯ ಪ್ರಯತ್ನದ ಫಲವಾಗಿ ತೆರಕಣಾಂಬಿಯು ರಾಜಧಾನಿಯಾಗಿ ಮುಂದೆ *ತೆರಕಣಾಂಬಿರಾಜ್ಯವಾಗಿ* ರೂಪುಗೊಳ್ಳಲು ಸಾಧ್ಯವಾಗುತ್ತದೆ.

ಸೋಮೆಯದಂಡನಾಯಕನು ಕ್ರಿ.ಶ. ೧೩೦೩ರಲ್ಲಿಯೇ ಸೇವುಣರೊಂದಿಗೆ ಹೋರಾಡುತ್ತ ಮರಣಹೊಂದಿದ ತರುವಾಯ ಅವನ ಮೊದಲ ಮಗ ಸಿಂಗೆಯದಂಡ ನಾಯಕನು ಹೊಸಕೋಟೆ, ಆನೇಕಲ್, ಕನಕಪುರ, ಬೆಂಗಳೂರು ಪ್ರದೇಶಗಳನ್ನು ಮಹಾಪ್ರಧಾನಿಯಾಗಿ ನೋಡಿಕೊಂಡರೆ, ಅತ್ತ ಮಾಧವದಂಡನಾಯಕನು ಹೊಯ್ಸಳ ಸಾಮ್ರಾಜ್ಯದ ದಕ್ಷಿಣಭಾಗದ ಹೊಣೆ ಹೊತ್ತಿರುತ್ತಾನೆ. ಮಾಧವದಂಡನಾಯಕನ ತರುವಾಯ ಕೇತೆಯದಂಡನಾಕನು ಪದಿನಾಲ್ಕುನಾಡನ್ನು ನೋಡಿಕೊಳ್ಳುತ್ತಿದ್ದರೆ ಇತ್ತ ಬೆಂಗಳೂರು, ಕೋಲಾರ, ಮಾಲೂರು, ಬಂಗಾರಪೇಟೆ ಪ್ರದೇಶಗಳು ಸೋಮೆಯದಂಡನಾಯಕನ ಕಿರಿಯ ಮಗ ಬಲ್ಲಪ್ಪದಂಡ ನಾಯಕನು ಪ್ರಧಾನಿಯಾಗಿ ಆಳುತ್ತಿರುತ್ತಾನೆ.

ಒಟ್ಟಿನಲ್ಲಿ ವೈರಿಬಲವು ವೃದ್ಧಿಸದಂತೆ ಮತ್ತು ಆಂತರಿಕವಾಗಿಯೂ ಶಾಂತಿ ಸುಭದ್ರತೆಗಳು ಹೊಯ್ಸಳ ಸಾಮ್ರಾಜ್ಯದಲ್ಲಿ ನೆಲೆಸುವಂತೆ ಮಾಡುವಲ್ಲಿ ಮಾಧವದಂಡ ನಾಯಕನ ವಂಶೀಯರು ಮುಖ್ಯಪಾತ್ರ ವಹಿಸುತ್ತಾರೆ.

೫) ಮಾಧವದಂಡನಾಯಕನ ವಂಶೀಯರಲ್ಲಿ ಹೇಗೆ ತಡಕಾಡಿದರೂ ೧೩೩೮ರ ನಂತರದ ಶಾಸನಗಳಲ್ಲಿ ಅವರ ಉಲ್ಲೇಖ ಕಂಡುಬರದೇ ಇರಲು ಕಾರಣವೇನು ? ಈ ವಂಶೀಯರು ತಮ್ಮ ಮೂಲನೆಲೆಯಾದ ಕೊಯಮತ್ತೂರು ಪ್ರಾಂತ್ಯದಲ್ಲಿ ವಿಜಯನಗರದ ಅರಸರಿಗೆ ನಿಷ್ಠರಾಗಿ ಅಧಿಕಾರರೂಢರಾದರು. ಈ ವೇಳೆಗೆ ಚಾಮರಾಜನಗರ, ಮೈಸೂರು, ಗುಂಡ್ಲುಪೇಟೆ, ನಂಜನಗೂಡು, ಕೊಳ್ಳೆಗಾಲ ಮತ್ತು ಈರೋಡ್, ಕೊಯಮತ್ತೂರಿನ ಕೆಲಭೂಭಾಗಗಳ ನ್ನೊಳಗೊಂಡಂತಹ ತೆರಕಣಾಂಬಿ ರಾಜ್ಯವು ರೂಪುಗೊಂಡುಬಿಟ್ಟಿತ್ತು.

೬) ದೇವಚಂದ್ರನ 'ರಾಜಾವಳಿಕಥಾಸಾರ'[೬೦] ಮತ್ತು ಬೆಟ್ಟದಕೋಟೆ ಕೈಫಿಯತ್ತು[೬೧]ಗಳಲ್ಲಿನ ಪಾಳೆಯಗಾರರ ಪ್ರಮುಖರಿಗೂ ಈ ಮಾಧವದಂಡನಾಯಕನ ವಂಶೀಯರು ಭಿನ್ನರು.

೭) ಪೆರುಮಾಳೆದೇವದಂಡನಾಕನಿಗಿದ್ದ ರಾವುತ ರಾಯ, ಸ್ವಾಮಿವಂಚಕರಗಂಡ, ಜವನಿಕೆನಾರಾಯಣ ಹಾಗೂ ಮಾಧವದಂಡನಾಯಕನಿಗಿದ್ದ ಸಿತಕರಗಂಡ, ಇಮ್ಮಡಿ ರಾಉತ್ತರಾಯ, ಕೊಂಗವಾರಿ, ಕೊಂಗದಿಶಾಪಟ್ಟ, ನೀಲಗಿರಿಸಾಧಕ, ಹೊಯಿಸಳರಾಜ್ಯಲಕ್ಷ್ಮೀರಕ್ಷಣಾಪ್ರೌಢ, ಪಾಂಡ್ಯಕುಲಕಮಳ ವನಕುಂಜರ, ಸಂಗ್ರಾಮರಾಮ ಮೊದಲಾದ ಬಿರುದುಗಳು ಅವರ ರಾಜಕೀಯ ಪ್ರಾಬಲ್ಯವನ್ನು ದೃಢಪಡಿಸುತ್ತವೆ. ಮಾಧವದಂಡನಾಯಕನ ಬಿರುದುಗಳು ಅವನ ಮಕ್ಕಳಿಗೂ ಮುಂದುವರಿದಿರುವುದನ್ನು ಗಮನಿಸಬಹುದು.

೮) ಶೆಟ್ಟರ್ ಅವರು ತಮ್ಮ 'The Hoysala Temples' ಕೃತಿಯಲ್ಲಿ ಪೆರಮಾಳೆದೇವದಂಡನಾಯಕನಿಗೆ, ಭೀಮೆಯ, ಮಾಧವ, ಚಕ್ರವರ್ತಿ, ಮಂಚೆಯ, ಹೆಗ್ಗಡೆದೇವ, ಲಕ್ಷ್ಮಿನಾರಾಯಣ ಎಂಬ ಆರು ಮಕ್ಕಳಿರುವುದಾಗಿ ತಿಳಿಸಿದ್ದಾರೆ. ರಾಧಾಪಟೇಲ್ ಅವರು ತಮ್ಮ Life & times of Hoysala Narasimha III ಕೃತಿಯಲ್ಲಿ ಭೀಮದೇವನ ಮಗ

ಪೆರುಮಾಳೆದೇವನಿಗೆ ಲಕ್ಷ್ಮೀನಾರಾಯಣ ದಂಣಾಯಕ ಎಂಬ ಮಗನಿದ್ದುದಾಗಿಯೂ ಅಭಿಪ್ರಾಯಪಟ್ಟಿದ್ದಾರೆ. ಆದರೆ ಈ ಈರ್ವರೂ ವಿದ್ವಾಂಸರು ಉಲ್ಲೇಖಿಸಿರುವ ಶಾಸನವು ಕ್ರಿ.ಶ. ೧೧೬೩ರದ್ದು. [ಎ.ಕ. ಸಂಪುಟ-೪, ಚಾಮರಾಜನ ೧೦೮] ಈ ಶಾಸನೋಕ್ತ ಲಕ್ಷ್ಮಿನಾರಾಯಣ ದಂಡನಾಯಕನು ಹೊಯ್ಸಳ ಮೊದಲನೆಯ ನರಸಿಂಹನ ಅಧಿಕಾರಿ ಪೆರುಮಾಳೆದಂಡನಾಯಕನ ಮಗನೇ ಹೊರತು ೩ನೆಯ ನರಸಿಂಹನ ಕಾಲದ ಪೆರುಮಾಳೆದೇವದಂಡನಾಕನ ಮಗನಲ್ಲ; ಅವನಿಗಿದ್ದವರೇ ೪ ಜನ ಮಕ್ಕಳು. ಇನ್ನು 'ಭೀಮ' ಎಂಬುದು ಪರಾಕ್ರಮಿ, ಭಯಂಕರ ಎಂಬರ್ಥದಲ್ಲಿ ಶಾಸನದ ಪದ್ಯದಲ್ಲಿ ಬಳಕೆಯಾಗಿದೆಯೆ ಹೊರತು ರಾಧಾಪಟೇಲ್ ಅವರು ಹೇಳಿರುವಂತೆ ಒಬ್ಬ ವ್ಯಕ್ತಿಯಲ್ಲ. ಶೆಟ್ಟರ್ ಅವರು ಹೇಳಿರುವ ಭೀಮೆಯ ಎಂಬಾತನು [ಎ.ಕ. ಸಂಪುಟ-೩, ನಂಜನಗೂಡು ೩೨೯] ಬೇರೆಯ ಕುಲ ಮತ್ತು ಬೇರೆ ವಂಶದ ವ್ಯಕ್ತಿಯೇ ವಿನಃ ಮೂರನೆಯ ನರಸಿಂಹನ ಪ್ರಧಾನಿ ಪೆರುಮಾಳೆ ದೇವದಂಡನಾಯಕನ ಮಗನಲ್ಲ.

೯) ೧೩ ಮತ್ತು ೧೪ನೆಯ ಶತಮಾನದ ಈ ವಂಶೀಯರ ಶಾಸನಗಳಲ್ಲಿ ಶಾರ್ದೂಲವಿಕ್ರೀಡಿತ, ಚಂಪಕ ಮಾಲೆ ಮತ್ತು ಇತರೆ ವರ್ಣವೃತ್ತಗಳು ರಚನೆಯಾಗಿರುವುದನ್ನು ಅವಲೋಕಿಸಿದರೆ ಚಂಪೂಯುಗದ ವೃತ್ತಛಂದಸ್ಸಿನ ಬಾಹುಳ್ಯವೂ ಮತ್ತು ಅದರ ಪ್ರಭಾವವು ಇರುವುದು ಸುಸ್ಪಷ್ಟವಾಗುತ್ತದೆ. ಸುಂದರ ಉಪಮೆಗಳು ಹಾಗೂ ಔಚಿತ್ಯಯುತ ಪದಗಳ ಬಳಕೆಯು ಶಾಸನಕವಿಯ ಪ್ರಯೋಗಸಿದ್ಧಿಗೆ ಹಿಡಿದ ಕನ್ನಡಿಯಾಗಿದೆ.

೧೦) ಮಾಧವದಂಡನಾಯಕನ ವಂಶೀಯರು ಬ್ರಾಹ್ಮಣರು. ಶಿವ ಮತ್ತು ವಿಷ್ಣುದೇವಾಲಯಗಳಿಗೆ ಅಪಾರ ದಾನದತ್ತಿಗಳನ್ನಿತ್ತಿರುವುದು ಅವರ ಮತಸಹಿಷ್ಣತಾ ಧೋರಣೆಯನ್ನು ಸುವ್ಯಕ್ತಗೊಳಿಸುತ್ತದೆ. ಮಾಧವನ ಕಿರಿಯ ಮಗ ಸಿಂಗೆಯದಂಡನಾಯಕನು ಕೆಳತಿರುಪತಿಯಲ್ಲಿ ಶ್ರೀ ವೈಷ್ಣವ ಮತವನ್ನು ಸ್ಥಾಪಿಸಿರುವುದು ಹಾಗೂ ಈ ವಂಶೀಯರು ಯತಿಭಿಕ್ಷೆಗೆಂದು ನೀಡಿರುವ ದಾನಗಳನ್ನು ಗಮನಿಸಿದರೆ ರಾಮಾನುಜಪಂಥದ ಪ್ರಚುರತೆಗೆ ಈ ವಂಶೀಯರ ಕೊಡುಗೆಯನ್ನು ಗುರುತಿಸಬಹುದು.

೧೧) ೩ನೆಯ ನರಸಿಂಹ ಮತ್ತು ೩ನೆಯ ಬಲ್ಲಾಳನ ಪ್ರಧಾನಿಯಾಗಿದ್ದ ಸೋಮಯದಂಡನಾಯಕನು ಕರ್ನಾಟಕದ ದಕ್ಷಿಣದಲ್ಲಿ ಸೋಮನಾಥದೇವರ ಆರಾಧನಾ ಪಂಥವನ್ನು ಪ್ರಚುರಗೊಳಿಸಿದರೆ, ಪೆರುಮಾಳೆದೇವದಂಡನಾಯಕ ಮತ್ತು ಅವನ ಮಕ್ಕಳು, ಮೊಮ್ಮಕ್ಕಳು ಅಲ್ಲಾಳನಾಥನನ್ನು ಪ್ರತಿಷ್ಠಾಪಿಸುತ್ತಾ, ಅನೇಕ ಕಡೆಗಳಲ್ಲಿ ಅಲ್ಲಾಳನಾಥಪುರಗಳನ್ನು ನಿರ್ಮಿಸುವುದರ ಮೂಲಕ ಕನ್ನಡದ ನೆಲದಲ್ಲಿ ಅಲ್ಲಾಳನಾಥನ ಆರಾಧನಾ ಪಂಥವನ್ನು ಪ್ರಸಾರ ಮಾಡುತ್ತಾರೆ.

ಒಟ್ಟಿನಲ್ಲಿ ಮಾಧವದಂಡನಾಯಕನ ವಂಶೀಯರ ೫೦ಕ್ಕೂ ಹೆಚ್ಚು ಶಾಸನಗಳಿದ್ದು, ಅವರು ಕನ್ನಡ ನೆಲದ ದಕ್ಷಿಣ ಭಾಗದ ಆಡಳಿತದಲ್ಲಿ ಮುಖ್ಯ ಪಾತ್ರವಹಿಸಿರುವುದರ ಜೊತೆಗೆ ಕನ್ನಡ ನಾಡಿನ ಸಾಂಸ್ಕೃತಿಕ ಚರಿತ್ರೆಗೂ ಮಿಗಿಲಾದ ಕೊಡುಗೆಗಳನ್ನು ನೀಡಿದ್ದಾರೆ.

* * *

ಯಾವುದೇ ಕಾಲಘಟ್ಟವನ್ನು ಗಮನಿಸಿದರೂ ಒಂದೇ ಹೆಸರಿನ ಹಲವು ದಂಡನಾಯಕರು ಕಂಡುಬರುವಂತೆ (ನಾನು ನನ್ನ ಹಿಂದಿನ ಲೇಖನವಾದ **ಇತಿಹಾಸ ದರ್ಶನ**-೧೧ರಲ್ಲಿನ 'ಹೊಯ್ಸಳ ಮಹಾಪ್ರಧಾನಿ ಬಲ್ಲಪ್ಪದಂಡನಾಯಕ ಮತ್ತು ಅವನ ವಂಶೀಯರ' ಲೇಖನದ ಅಡಿಟಿಪ್ಪಣಿಯಲ್ಲಿ ಹೇಳಿರುವಂತೆ) ಮಾಧವದಂಡನಾಯಕನ ವಂಶೀಯರ ಹೆಸರಿನವರೇ ಅನೇಕರು ಕನ್ನಡನಾಡಿನ ದಕ್ಷಿಣಭಾಗದಲ್ಲಿಯೇ ಕಂಡುಬಂದಿದ್ದಾರೆ. ಇವರು ಯಾವುದೋ ರೀತಿಯಲ್ಲಿ ಮಾಧವದಂಡನಾಯಕ ಮತ್ತು ಅವನ ವಂಶೀಯರಿಗೆ ಸಂಬಂಧಿಸಿರಬಹುದು ಅಥವಾ ಸಂಬಂಧ ಪಡದೆಯೇ ಇರಬಹುದು. ಏಕೆಂದರೆ ಅವರ ಸಂಬಂಧಗಳನ್ನು ಸ್ಪಷ್ಟಗೊಳಿಸಲು ಶಾಸನಗಳಲ್ಲಿಯೇ ಮಾಹಿತಿಯ ಕೊರತೆಯಿದೆ. ಆದರೂ ನನ್ನ ಅಧ್ಯಯನಕ್ಕೆ ಒಳಪಟ್ಟ ಮಾಧವದಂಡನಾಯಕ ಮತ್ತು ಅವನ ವಂಶೀಯರಿಗಿಂತ ಭಿನ್ನರು ಯಾರ‍್ಯಾರು ಎಂಬುದನ್ನು ಶಾಸನಾಧಾರಗಳಿಂದಲೇ ಸ್ಪಷ್ಟಗೊಳಿಸಲು ಪ್ರಯತ್ನಿಸಿದ್ದೇನೆ.

೧) ಎಪಿಗ್ರಾಫಿಯ ಕರ್ನಾಟಿಕ (ಮೈಸೂರು ವಿ.ವಿ) ಸಂಪುಟ ೩ರ ನಂಜನಗೂಡು, ೩೨೨, ೩೨೭, ೩೨೯, ೩೪೦, ೩೪೬ ಹಾಗೂ ಹೆಗ್ಗಡದೇವನಕೋಟೆ ೪೭, ಸಂಪುಟ ೪ರ ಚಾಮರಾಜನಗರ ೫೬ ; ಸಂಪುಟ ೫ರ ಮೈಸೂರು ೧೯೧ ; ಸಂಪುಟ ೭ರ ಮಳವಳ್ಳಿ ೧೩೩, ೧೦೨; ಸಂಪುಟ ೮ರ ಹಾಸನ ೩೮ ; ಸಂಪುಟ ೯ರ ಬೇಲೂರು ೨೪೨, ೨೪೧, ೨೫೬, ೨೮೮, ೪೭೭; ಸಂಪುಟ ೧೨ರ ಕಡೂರು ೧೫೫, ೧೧೯, ೮೯-ಈ ಶಾಸನಗಳಲ್ಲಿನ ಪೆರುಮಾಳೆದೇವ ಅಥವಾ ಪೆರುಮಾಳೆದಂಡನಾಯಕರು ಮಾಧವದಂಡನಯಕನ ತಂದೆ ಪೆರುಮಾಳೆದೇವದಂಡನಾಯಕರಿಗಿಂತ ಭಿನ್ನರು.

೨) ಎಪಿಗ್ರಾಫಿಯ ಕರ್ನಾಟಿಕ (ಮೈಸೂರು ವಿ.ವಿ) ಸಂಪುಟ ೩ರ ಹೆಗ್ಗಡೆದೇವನಕೋಟೆ ೮೧, ೮೩, ಸಂಪುಟ ೭ರ ನಾಗಮಂಗಲ ೧೧೮ ; ಸಂಪುಟ ೮ರ ಹಾಸನ ೭೦, ೧೭, ೧೬೪, ೧೪೫, ಹೊಳೆನರಸೀಪುರ ೮೮ ; ಸಂಪುಟ ೨೪ರ ಚಿಕ್ಕನಾಯಕನಹಳ್ಳಿ ೯೬-ಈ ಶಾಸನೋಕ್ತ

ಮಾಧವದಂಡನಾಯಕರು ಪದಿನಾಲ್ಕುನಾಡರಸನಾದ ಮಾದವದಂಡನಾಯಕನಿಗಿಂತ ಭಿನ್ನನು.

೩) ಎಪಿಗ್ರಾಫಿಯ ಕರ್ನಾಟಿಕ (ಮೈಸೂರು ವಿ.ವಿ) ಸಂಪುಟ ೩ರ ಕೊಳ್ಳೆಗಾಲ ೭೪ ; ಎಫಿಗ್ರಾಫಿಯಾ ಕರ್ಣಾಟಿಕಾ (ರೈಸ್ ಆವೃತ್ತಿ)ಯ xii, ತಿಪಟೂರು ೧೦೧, ೧೦೪ ; xi ಚಿತ್ರದುರ್ಗ ೧; viii, ಸಾಗರ ೨೯–ಈ ಶಾಸನಗಳಲ್ಲಿ ಉಲ್ಲೇಖನಾಗಿರುವ ಮಂಚೆಯ ಅಥವಾ ಮಾಚೆಯದಂಡ ನಾಯಕರು ಪೆರುಮಾಳೆದೇವದಂಡನಾಯಕನ ಮಗನಾದ ಮಂಚೆಯದಂಡನಾಯಕನಿಗಿಂತ ಭಿನ್ನನು.

೪) ಎಪಿಗ್ರಾಫಿಯ ಕರ್ನಾಟಿಕ (ಮೈಸೂರು ವಿ.ವಿ) ಸಂಪುಟ ೧೨ರ ತರೀಕೆರೆ ೯ ; ಸಂಪುಟ ೮ರ ಅರಕಲಗೂಡು ೧೫೭, ಹಾಸನ ೬೬ ; ಸಂಪುಟ ೧೦ರ ಚನ್ನರಾಯಪಟ್ಟಣದ ೭೬ರ ಶಾಸನೋಕ್ತ ಕೇತೆಯದಂಡನಾಯಕರು ಹಾಗೂ ಸೋಮೆಯದಂಡನಾಯಕನ ಅಳಿಯ ಚಿಕ್ಕಕೇತಯ ದಂಡನಾಯಕನಿಗಿಂತ ಮಾಧವದಂಡನಾಯಕನ ಮಗ ಕೇತಯದಂಡನಾಯಕ ಭಿನ್ನನು.

೫) ಎಪಿಗ್ರಾಫಿಯ ಕರ್ನಾಟಿಕ (ಮೈಸೂರು ವಿ.ವಿ) ಸಂಪುಟ–೪ ಯಳಂದೂರು ೧೬೯, ೬೭ರ ಶಾಸನೋಕ್ತ ಸಿಂಗೆಯುದಂಡನಾಯುಕರು ಮತ್ತು ಸೋಮೆಯ ದಂಡನಾಯಕನ ಹಿರಿಯ ಮಗ ಸಿಂಗಯದಂಡನಾಯಕನು ಮಾಧವದಂಡನಾಯಕನ ಕಿರಿಯ ಮಗ ಸಿಂಗೆಯ ದಂಡನಾಯಕನಿಗಿಂತ ಭಿನ್ನರು.

[ಕೃತಜ್ಞತೆಗಳು : ನನ್ನ ಈ ಲೇಖನಕ್ಕೆ ಮಾರ್ಗದರ್ಶನ ಮಾಡಿದ ನನ್ನ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿ ಯವರಿಗೂ ಹಾಗೂ ಸಲಹೆ ಸೂಚನೆಗಳನ್ನು ನೀಡಿದ ಗೆಳೆಯರಾದ ಶ್ರೀ ಸುಂಕಂ ಗೋವರ್ಧನ್‌ರವರಿಗೂ ನಾನು ಕೃತಜ್ಞಳು.]

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *Annual Reports on Indian Epigraphy*, 1909, No. 189, Archaeological Survey of India, Delhi.

೨. V. Rangacharya., *A Topographical list of the Inscriptions of Madras Presidency,* vol. 3, Madras, 1919. Page No. 1530.

೩. ARIE-1909, No. 169.

೪. **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೪ (ಮೈಸೂರು ವಿ.ವಿ), ಚಾಮರಾಜನಗರ ೩೦೯.

* ಸುಂಕಂ ಗೋವರ್ಧನ : 'ತೆರಕಣಾಂಬಿ ರಾಜ್ಯ', **ಇತಿಹಾಸ ದರ್ಶನ,** ಸಂ. ೨೪, ಕ.ಇ.ಅ., ಬೆಂಗಳೂರು ೨೦೦೮, ಪು. ೯೨.

೫. ಅದೇ, ಸಂಪುಟ ೩, ಗುಂಡ್ಲುಪೇಟೆ ೧೫೨.

೬ ಅದೇ, ಸಂಪುಟ ೬, ಪಾಂಡವಪುರ ೧೫೪.

೭. ಅದೇ, ಸಂಪುಟ ೩, ನಂಜನಗೂಡು ೩೪೭.

೮. ಅದೇ, ಗುಂಡ್ಲುಪೇಟೆ ೨೨೩.

೯. ಅದೇ, ಸಂಪುಟ ೪, ಚಾಮರಾಜನಗರ ೨೩೫.

೧೦. ಅದೇ, ೨೬೩.

೧೧. ಅದೇ, ೩೦೬.

೧೨. ಅದೇ, ಸಂಪುಟ ೩, ಗುಂಡ್ಲುಪೇಟೆ ೧೭೪.

೧೩. ಅದೇ, ಸಂಪುಟ ೬, ಪಾಂಡವಪುರ ೧೮೧.

೧೪. ಅದೇ, ಸಂಪುಟ ೪, ಕೊಳ್ಳೇಗಾಲ ೩೦.

೧೫. ಅದೇ, ಚಾಮರಾಜನಗರ ೨೭೫, ೨೭೬, ೨೭೭, ೨೭೮.

೧೬. ಅದೇ, ಸಂಪುಟ ೬, ಪಾಂಡವಪುರ ೨೨೨.

೧೭. ಅದೇ, ಪಾಂಡವಪುರ ೧೬೧.

೧೮. ಅದೇ, ಪಾಂಡಪುರ ೨೧೨.

೧೯. **ಎಫಿಗ್ರಾಫಿಯ ಕರ್ಣಾಟಿಕಾ** (ರೈಸ್ ಆವೃತ್ತಿ), xi, ದಾವಣಗೆರೆ ೫೭.

೨೦. ಅದೇ, ಚಿತ್ರದುರ್ಗ ೧೨.

೨೧. **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೧೦ (ಮೈಸೂರು ವಿ.ವಿ.), ಚನ್ನರಾಯಪಟ್ಟಣ ೧೩೪.

೨೨. ಅದೇ, ಸಂಪುಟ–೫, ಮೈಸೂರು ೨೦೪.

೨೩. ಅದೇ, ಸಂಪುಟ–೭, ನಾಗಮಂಗಲ ೮೩.

೨೪. ಅದೇ, ನಾಗಮಂಗಲ ೮೪.

೨೫. ಅದೇ, ನಾಗಮಂಗಲ ೭೬, ೭೩.

೨೬. ಅದೇ, ಪೀಠಿಕೆ, ಪುಟ ixiv.
೨೭. ಅದೇ, ಸಂಪುಟ–೯, ಬೇಲೂರು ೧೭೦.
೨೮. ಅದೇ, ಸಂಪುಟ–೭, ನಾಗಮಂಗಲ ೭೪.
೨೯. ಎ.ಕ. xi (ರೈಸ್ ಆವೃತ್ತಿ), ಚಿತ್ರದುರ್ಗ ೭.
೩೦. **ಎಪಿಗ್ರಾಫಿಯ ಕರ್ನಾಟಿಕ,** (ಮೈಸೂರು ವಿ.ವಿ) ಸಂಪುಟ ೫, ಟಿ. ನರಸೀಪುರ ೨೩೮.
೩೧. ಅದೇ, ಸಂಪುಟ ೮, ಅರಕಲಗೂಡು ೩೯.
೩೨. ಅದೇ, ಸಂಪುಟ ೧೦, ಚನ್ನರಾಯಪಟ್ಟಣ ೫೩.
೩೩. ಅದೇ, ಸಂಪುಟ–೮, ಹಾಸನ ೭೫.
೩೪. ಎ.ಕ. ಷಿ (ರೈಸ್ ಆವೃತ್ತಿ), ದಾವಣಗೆರೆ ೫೨.
೩೫. ಅದೇ, ದಾವಣಗೆರೆ ೫೩, ೫೪.
೩೬. **ಎಪಿಗ್ರಾಫಿಯ ಕರ್ನಾಟಿಕ,** (ಮೈಸೂರು ವಿ.ವಿ) ಸಂಪುಟ ೮, ಹೊಳೆನರಸೀಪುರ ೧.
೩೭. ಅದೇ, ಸಂಪುಟ ೯, ಬೇಲೂರು ೫೬೨.
೩೮. ಅದೇ, ಸಂಪುಟ ೩, ನಂಜನಗೂಡು ೨೦೭.
೩೯. ಎ.ಕ. xi (ರೈಸ್ ಆವೃತ್ತಿ), ಚಿತ್ರದುರ್ಗ ೩೨.
೪೦. ಅದೇ, ಚಿತ್ರದುರ್ಗ ೧೨.
೪೧. **ಎಪಿಗ್ರಾಫಿಯ ಕರ್ನಾಟಿಕ,** (ಮೈಸೂರು ವಿ.ವಿ) ಸಂಪುಟ ೫, ಟಿ. ನರಸೀಪುರ ೭.
೪೨. ಅದೇ, ಸಂಪುಟ ೧೦, ಚನ್ನರಾಯಪಟ್ಟಣ ೪೮.
೪೩. ಅದೇ, ಸಂಪುಟ ೪, ಚಾಮರಾಜನಗರ ೨೯೬.
೪೪. ಅದೇ, ಸಂಪುಟ ೩, ಗುಂಡ್ಲುಪೇಟೆ ೩೪.
೪೫. ಅದೇ, ಸಂಪುಟ ೭, ನಾಗಮಂಗಲ ೭೪.
೪೬ ಎ.ಕ. IX (ರೈಸ್ ಆವೃತ್ತಿ), ಬೆಂಗಳೂರು ೨೩.
೪೭. **ಎಪಿಗ್ರಾಫಿಯ ಕರ್ನಾಟಿಕ,** (ಮೈಸೂರು ವಿ.ವಿ), ಸಂಪುಟ ೭, ನಾಗಮಂಗಲ ೭೩.
೪೮. ಅದೇ, ಸಂಪುಟ ೯, ಬೇಲೂರು ೫೬೫.
೪೯. ಅದೇ, ಸಂಪುಟ ೩, ಹೆಗ್ಗಡೆದೇವನಕೋಟೆ ೪೭.
೫೦. ಅದೇ, ಸಂಪುಟ ೯, ಬೇಲೂರು ೮, ೫೩.
೫೧. ಅದೇ, ಸಂಪುಟ ೩, ಗುಂಡ್ಲುಪೇಟೆ ೪೦.
೫೨. ಅದೇ, ಸಂಪುಟ ೩, ಗುಂಡ್ಲುಪೇಟೆ ೧೭೯.
೫೩. ಅದೇ, ಗುಂಡ್ಲುಪೇಟೆ ೧೩೮.
೫೪. ಅದೇ, ಗುಂಡ್ಲುಪೇಟೆ ೧೫೫.
೫೫. ಅದೇ, ಸಂಪುಟ ೪, ಚಾಮರಾಜನಗರ ೨೯೯.
೫೬ ಅದೇ, ಸಂಪುಟ ೩, ಗುಂಡ್ಲುಪೇಟೆ ೭೪.
೫೭. *ARIE,* 1909, No. 158.
೫೮. **ಎಪಿಗ್ರಾಫಿಯ ಕರ್ನಾಟಿಕ,** (ಮೈಸೂರು ವಿ.ವಿ), ಸಂಪುಟ ೪, ಪಿರಿಯಾಪಟ್ಟಣ ೧೯.
೫೯. ARIE, 1907, Page-66-67.
೬೦. ದೇವಚಂದ್ರ **ರಾಜಾವಳಿ ಕಥಾಸಾರ** : ಸಂ. ಬಿ.ಎಸ್. ಸಣ್ಣಯ್ಯ, ಕ.ಅ.ಸಂ. ಮೈಸೂರು ವಿ.ವಿ. ೧೯೮೮, ಪು. ೧೮೩.
೬೧. **ಕರ್ನಾಟಕದ ಕೈಫಿಯತ್ತುಗಳು** : ಸಂ. ಡಾ. ಎಂ.ಎಂ. ಕಲಬುರ್ಗಿ, ಕನ್ನಡ ವಿ.ವಿ. ಹಂಪಿ, ೧೯೯೨, ಪು. ೮೭–೯೨.

## ಆಧಾರ ಗ್ರಂಥಗಳು


೧. ಡಾ. ಸೂರ್ಯನಾಥ ಕಾಮತ್; **ಕರ್ನಾಟಕದ ಸಂಕ್ಷಿಪ್ತ ಇತಿಹಾಸ,** ಜೂಪಿಟರ್ ಬುಕ್ಸ್, ಬೆಂಗಳೂರು ಮತ್ತು ಇತರೆಡೆಗಳು, ೧೯೯೯.
೨. S. Settor : *The Hoysala Temples,* Karnataka University, Dharawad & Kala Yatra Publications, 1992.
೩. J. Duncan M. Derrett : *The Hoysalas,* Oxford University Press, 1957.
೪. Dr. M. Radha Patel : *Life and Times of Hoysalas Narasimha III,* Prasaranga, Mysore, 2001.



# ಕೃಷ್ಣದೇವರಾಯನ ಸಚಿವ ಸಂಪುಟದ ಪ್ರಭಾವಿ ಸಾಳುವ ತಿಮ್ಮರಸು

ಡಾ. ಡಿ.ಎನ್. ಯೋಗೀಶ್ವರಪ್ಪ*

ಕೃಷ್ಣದೇವರಾಯ (ಕ್ರಿ.ಶ. ೧೫೦೯-೧೫೨೯) ತನ್ನ ಮನಸ್ಸನ್ನೇ ಕಾವ್ಯಪುಟಗಳಾಗಿ ಪರಿವರ್ತಿಸಿದ ಸ್ಮೃತಿ ಸಂಕಲನ ಎನ್ನುವ ಆಮುಕ್ತ ಮೌಲ್ಯದ ಕಾವ್ಯದಲ್ಲಿ "ರಾಜ್ಯಾಂಗದಲ್ಲಿ ಕೇವಲ ಧನರಾಶಿ ಸೈನ್ಯಗಳೇ ಅಲ್ಲದೆ ಜನರ ಸಹಾಯವೂ ಬೇಕಾಗುತ್ತದೆ. ಎಲ್ಲ ವಿಧದಲ್ಲೂ ಯಾವಾಗಲೂ ಬ್ರಾಹ್ಮಣರನ್ನೇ ದೊಡ್ಡ ದೊಡ್ಡ ಅಧಿಕಾರಗಳಲ್ಲಿರಿಸುವುದು ಒಳ್ಳೆಯದು ಹಾಗೆ ಮಾಡಿದಲ್ಲಿ ಆತ ಚತುರತೆಯಿಂದ ರಾಜ್ಯಾಂಗದ ವ್ಯವಹಾರಗಳನ್ನು ಸರಿಪಡಿಸುತ್ತಾನೆ."[೧] "ದುರ್ಗದ ಅಧಿಕಾರವನ್ನು ಬ್ರಾಹ್ಮಣೇತರರಿಗೆ ಕೊಟ್ಟರೆ ಅವರು ಸಮಯ ಬಂದಾಗ ರಾಜನ ಮೇಲೆ ತಿರುಗಿ ಬೀಳುವರು ಆದುದರಿಂದ ಬ್ರಾಹ್ಮಣರಿಗೇ ಕೊಡಬೇಕು"[೨] "ವಿದ್ಯೆ ಪಾಪ ಭೀತಿ ರಾಜನೀತಿ ಶಾಸ್ತ್ರಜ್ಞಾನವು ಪ್ರಕಾಶಿಸುವ ರೂಪವುಳ್ಳ ಬ್ರಾಹ್ಮಣನನ್ನು ೫೦ಕ್ಕೆ ಮೇಲ್ಪಟ್ಟು ೭೦ರ ಒಳಗಿರುವ ವಯಸ್ಸಿನವರನ್ನು ಪ್ರಾರ್ಥಿಸಿಕೊಂಡು ಮಂತ್ರಿ ಪದವಿ ಕೊಡಬೇಕು"[೩]

ಈ ವಾಕ್ಯಗಳನ್ನು ಗಮನಿಸಿದಾಗ ಕೃಷ್ಣದೇವರಾಯನ ಮನಸ್ಸಿನ ಭಾವನೆಗಳು ಅರ್ಥವಾಗುತ್ತವೆ. ಆದ್ದರಿಂದಲೇ ಅವನು ತನ್ನ ಆಡಳಿತದಲ್ಲಿ ಉನ್ನತ ಹುದ್ದೆಗಳನ್ನೆಲ್ಲಾ ಬ್ರಾಹ್ಮಣರಿಗೇ ಮೀಸಲಾಗಿಟ್ಟಿದ್ದುದು. ಅವನಿಗೆ ಬ್ರಾಹ್ಮಣರ ಮೇಲೆ ಇನ್ನಿತರೆ ಸಮುದಾಯಗಳಿಗಿಂತ ಹೆಚ್ಚು ಅಚಲ ವಿಶ್ವಾಸವಿತ್ತು. ಆದ್ದರಿಂದಲೇ ಅವನು ಬ್ರಾಹ್ಮಣೇತರರು ಸಮಯ ಬಂದಾಗ ರಾಜನ ಮೇಲೆ ತಿರುಗಿ ಬೀಳುವರು ಎಂದಿರುವುದು ಉದಾ: ಕೃಷ್ಣದೇವರಾಯ ತನ್ನ ಆಳ್ವಿಕೆಯ ೨೦ ವರ್ಷಗಳ ಅವಧಿಯಲ್ಲಿ ನಾಯಕತನಕ್ಕೆ ನೀಡಿದ ೫೫ ಸೀಮೆಗಳಲ್ಲಿ ೨೨ ಸೀಮೆಗಳ ಒಡೆತನ ಬ್ರಾಹ್ಮಣರದಾಗಿತ್ತು. ಇದು ಇನ್ನು ಹೆಚ್ಚಾಗಿರಬಹುದು ನಾಯಕತನ ಪಡೆದ ಬ್ರಾಹ್ಮಣರು ಮತ್ತು ಅವರ ಗೋತ್ರಗಳ ಪಟ್ಟಿಯನ್ನೇ ಡಿ.ಎನ್.ಯೋಗೀಶ್ವರಪ್ಪ ತಯಾರಿಸಿದ್ದಾರೆ.[೪] ಇದರಿಂದ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಆಡಳಿತದ ವಿವಿಧ ಕ್ಷೇತ್ರಗಳಲ್ಲಿ ಬ್ರಾಹ್ಮಣರೇ ಮೇಲುಗೈ ಸಾಧಿಸಿದ್ದರು. ಇವರಲ್ಲಿ ಕೆಲವರು ತಮ್ಮ ಪ್ರಭಾವದಿಂದ ಇಡೀ ಕುಟುಂಬಕ್ಕೇ ಅಧಿಕಾರ ದಕ್ಕಿಸಿಕೊಟ್ಟಿರುವುದೂ ಉಂಟು ಅವರಲ್ಲಿ ಸಾಳುವ ತಿಮ್ಮರಸನ ಕುಟುಂಬ ಅತ್ಯಂತ ಪ್ರಭಾವ ಶಾಲಿಯಾದುದು. ಇವನು ವಿಜಯನಗರದಲ್ಲಿ ಪ್ರಧಾನಿಯಾಗಿದ್ದವನು, ಇವನಂತೆ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಪ್ರಧಾನಿ ಮಲ್ಲರಸ, ಪ್ರಧಾನಿ ಬಸವಪ್ಪಯ್ಯ, ಪ್ರಧಾನಿ ಸರ್ವರಸಯ್ಯ, ಪ್ರಧಾನಿ ಇಮ್ಮಡಿಯಲ್ಲಪ್ಪ ಒಡೆಯ ಎಂಬುವರು ಇದ್ದರೂ ಇವರ್‍ಯಾರು ಸಾಳ್ವ ತಿಮ್ಮರಸನಂತೆ ತಮ್ಮ ಕುಟುಂಬದ ಸದಸ್ಯರಿಗೆ ಉನ್ನತ ಹುದ್ದೆಗಳನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಇಂಥಹವನ್ನು ಕುರಿತಂತೆ ತೆಲುಗು ಭಾಷೆಯಲ್ಲಿ ಚಲನಚಿತ್ರಗಳೂ ಹೊರಬಂದಿವೆ ಮತ್ತು ಸಾಹಿತ್ಯವೂ ರಚನೆಯಾಗಿದೆ. ಅದರಲ್ಲಿ ಚಿಲಕೂರಿ ವೀರಭದ್ರರಾವು ತೆಲುಗಿನಲ್ಲಿ ರಚಿಸಿರುವ ತಿಮ್ಮರಸು ಮಂತ್ರಿ ಎಂಬ ಸ್ವತಂತ್ರ ಕೃತಿಯೂ ಒಂದಾಗಿದೆ.[೫] ಆದರೆ ಕನ್ನಡ ಭಾಷೆಯಲ್ಲಿ ಇವನ ಮತ್ತು ಇವನ ಕುಟುಂಬ ಸದಸ್ಯರು ವಿವರಗಳನ್ನು ಸಾಂಧರ್ಭಿಕವಾಗಿ ಅಲ್ಲಲ್ಲಿ ಉಲ್ಲೇಖಿಸಿದ್ದರೂ ಸ್ವತಂತ್ರವಾದ ಶೋಧ ಪ್ರಬಂಧವಾಗಲೀ ಅಥವಾ ಕೃತಿಯಾಗಲೀ ನನ್ನಗಮನಕ್ಕೆ ಬಂದಂತೆ ರಚನೆಯಾಗಿಲ್ಲ. ಆದುದರಿಂದ ನಾನು ಇಂಥಹ ಕಾರ್ಯವೊಂದನ್ನು ಮಾಡುವ ಪ್ರಯತ್ನ ಮಾಡುತ್ತಿದ್ದೇನೆ. ಏಕೆಂದರೆ ಚಕ್ರವರ್ತಿ ಕೃಷ್ಣದೇವರಾಯನಿಂದ ಪ್ರೀತಿಯಿಂದ ಅಪ್ಪಾಜಿ ಎಂದು ಕರೆಸಿಕೊಳ್ಳುತ್ತಿದ್ದ ತಿಮ್ಮರಸು ಮತ್ತು ಅವನ ಕುಟುಂಬದ ಸದಸ್ಯರು ವಿಜಯನಗರದ ಅಭಿವೃದ್ಧಿಗೆ ಹೇಗೆ ಕಾರಣರಾದರು ಎಂಬುದುನ್ನು ದಾಖಲಿಸುವ ಉದ್ದೇಶ ಈ ಪ್ರಬಂಧದ್ದಾಗಿದೆ. ಇದಕ್ಕಾಗಿ ನಾನು ಪ್ರಮುಖವಾಗಿ I.C.H.R. ಪ್ರಕಟಿಸಿರುವ Inscriptions of the Vijayanagar rulers, vol IV, ಹಂಪೆಯ ಕನ್ನಡ ವಿ.ವಿ. ಪ್ರಕಟಿಸಿರುವ ಕೃಷ್ಣದೇವರಾಯನ ಶಾಸನಗಳು ಸಂಪುಟ-೧, ಕೃಷ್ಣದೇವರಾಯನೇ ರಚಿಸಿರುವ ಆಮುಕ್ತ ಮಾಲ್ಯದ ಎಂಬ ಕೃತಿಯನ್ನೂ ಪ್ರೊ. ಲಕ್ಷ್ಮಣ್

* ಸಹ ಪ್ರಾಧ್ಯಾಪಕ, ಇತಿಹಾಸ ವಿಭಾಗ ಮುಖ್ಯಸ್ಥರು, ಶ್ರೀ ಸಿದ್ಧಗಂಗಾ ಮಹಿಳಾ ಪದವಿ ಕಾಲೇಜು, ತುಮಕೂರು-೫೭೨೧೦೧.

ತೆಲಗಾವಿ ಸಂಪಾದಿಸಿರುವ ಜೀರ್ಣವಿಜಯನಗರಾದರ್ಶಂ ವಿದೇಶಿ ಯರಾದ ನ್ಯೂನಿಜ್. ಪಯಸ್‌ರ ಬರವಣಿಗೆಗಳು ರಾಬರ್ಟ್‌ಸಿವೆಲ್‌ರ Forgotten empire ಎಂಬ ಮೂಲ ಆಕರಗಳ ಜೊತೆಗೆ ಅನೇಕ ಮಾಧ್ಯಮಿಕ ಆಕರಗಳನ್ನು ಬಳಸಿಕೊಂಡಿದ್ದೇನೆ.

**ಸಾಳ್ವ ತಿಮ್ಮರಸು**

"ಸಾಳುವ ತಿಂಮರಸ ವೊಡೆಯರ ತಂಮಂದಿರಾದ ಸಾಳುವ ಗೋವಿಂದರಾಜ ವೊಡೆಯರು" ಮತ್ತು "ಸಾಳುವ ತಿಂಮರಸವರ್ಮನುಮತದಿಂತದನುಜ ಸಾಳುವ ಗೋವಿಂದ ರಾಜಗಳು"[೬] ಎಂಬ ಶಾಸನೋಕ್ತ ದಾಖಲೆಯಿಂದ ತಿಮ್ಮರಸನ ತಮ್ಮ ಸಾಳುವ ಗೋವಿಂದರಾಜನೆಂದು ತಿಳಿಯುತ್ತದೆ. ಸಾಳುವಗೋವಿಂದರಾಜನ ತಂದೆ ರಾಚಿರಾಜು[೭] ಎಂದು ಹಲವಾರು ಶಾಸನಗಳಲ್ಲಿ ಉಲ್ಲೇಖಿತವಾಗಿದೆ. ಆದುದರಿಂದ ಸಾಳುವ ತಿಮ್ಮರಸುವಿನ ತಂದೆ ರಾಚಿರಾಜನೆಂದು ಖಚಿತವಾಗುತ್ತದೆ. ಈ ರಾಚಿರಾಜನು ಮಹಾಮಂಡಲೇಶ್ವರ ನಾಗಿದ್ದ ಯರ್‍ರಗದ್ದಮಯ್ಯದೇವರ ಮಹಾರಾಜರ ಮಗನಾಗಿದ್ದನು. ಇನ್ನೊಂದು ಶಾಸನದಲ್ಲಿ ವೇಮಯ್ಯ ಅಮಾತ್ಯನ ಮಗ ರಾಚಿರಾಜ ಅಮಾತ್ಯ ಎಂದು ದಾಖಲಾಗಿದೆ[೭ಎ]. ಒಟ್ಟಾರೆ ಇವನು ಅಮಾತ್ಯ ಕುಟುಂಬಕ್ಕೆ ಸೇರಿದವನು. ಇವರು ಮೂಲತಃ ಬ್ರಾಹ್ಮಣರೆಂದು ಅವರ ಗೋತ್ರಸೂತ್ರಗಳಿಂದ ಹೇಳಬಹುದು. ರಾಚಿರಾಜ ಕೌಂಡಿಣ್ಯಗೋತ್ರದ ಆಪಸ್ತಂಭ ಸೂತ್ರದ ಯಜುಶ್ಯಾಖೆಗೆ ಸೇರಿದವರು[೮] ಆದುದರಿಂದ ಇವನ ಮಕ್ಕಳೂ ಇದೇ ಗೋತ್ರ ಸೂತ್ರಗಳನ್ನು ಹೊಂದಿದ್ದವರೆನ್ನಬಹುದು. ರಾಚಿರಾಜನು ಮಹಾಮಂಡಲೇಶ್ವರನಾಗಿದ್ದು ಕ್ರಿ.ಶ.೧೫೧೩ ರಲ್ಲಿ ಕೃಷ್ಣದೇವರಾಯನಿಂದ ಆಂಧ್ರದ ಕಡಪಜಿಲ್ಲೆಯಲ್ಲಿರುವ ಪೊಟ್ಲದುರ್ತಿ ಸೀಮೆಯನ್ನು ನಾಯಕತನಕ್ಕೆ ಪಡೆದು ಕೊಂಡಿರುವುದು ಶಾಸನದಲ್ಲಿ ದಾಖಲಾಗಿದೆ.[೯] ಇದರಿಂದ ಸಾಳುವ ತಿಮ್ಮರಸನು ಮಹಾಮಂಡಲೇಶ್ವರ ಯರ್‍ರಗದ್ದಮಯ್ಯ ದೇವ ಮಹಾರಾಜರ ಮೊಮ್ಮಗನಾಗಿದ್ದು ಚಿಕ್ಕವಯಸ್ಸಿ ನಿಂದಲೂ ಅವನಿಗೆ ರಾಜಕೀಯ ಸಂಪರ್ಕದ ಜೊತೆಗೆ ಉತ್ತಮ ಶಿಕ್ಷಣವೂ ಲಭಿಸಿತ್ತು ಎಂದು ಹೇಳಬಹುದು. ಆದ್ದರಿಂದಲೇ ಅವನು ತುಳುವ ಸಂತತಿಯ ಆರಂಭದ ಕಾಲದಲ್ಲೇ ವಿಜಯನಗರದಲ್ಲಿ ಮಹಾಪ್ರಧಾನಿಯ ಪಟ್ಟವನ್ನಂಕರಿಸಿದ್ದನು. ಆದರೂ ತಿಮ್ಮರಸನು ದಣ್ಣಾಯಕನಾಗಿ ಪ್ರಧಾನಿಯಾಗಿ ಆನಂತರ ಮಹಾಪ್ರಧಾನಿಯಾದನೆಂದು ಈ ಪದೋನ್ನತಿಯು ಎರಡು ವರ್ಷಗಳ ಅವಧಿಯಲ್ಲೇ ಜರುಗಿದೆ[೧೦] ಎಂದು ಡಿ.ವಿ.ಪರಮಶಿವ ಮೂರ್ತಿಯವರು ಹೇಳಿರುವುದನ್ನು ಒಪ್ಪಲು ಸಾಧ್ಯವಾಗದು. ಏಕೆಂದರೆ ಶಾಸನಗಳು ತತ್ಪಾದ ಪದ್ಮಾರಾಧಕುಂದ್ಯೆನ ಶ್ರೀಮನ್ ಮಹಾಪ್ರಧಾನ ಸಾಳುವ ತಿಮ್ಮಯ್ಯಗಾರು (ಕ್ರಿ.ಶ.೧೫೦೮ ಜನವರಿ ೧೭) ಎಂದು ದಾಖಲಿಸಿರುವುದರಿಂದ[೧೧] ಕ್ರಿ.ಶ. ೧೫೧೨ರ ಮಾರ್ಚಿಯಲ್ಲಿ ಹಾಕಿಸಲಾದ ಶಾಸನದಲ್ಲಿ ತಿಮ್ಮಪ್ಪಯ್ಯನ ಪ್ರಧಾನಿಕೆಯಲ್ಲಿ,[೧೨] ಅದೇ ವರ್ಷದ ಜೂನ್ ತಿಂಗಳಲ್ಲಿ ಹಾಕಿಸಲಾದ ಶಾಸನದಲ್ಲಿ ಸಾಳ್ವತಿಮ್ಮಯ್ಯ ದಂಣಾಯಕರು[೧೩] ಎಂದಿದ್ದರೂ ಮಹಾಪ್ರಧಾನಿಯಾದವನಿಗೆ ಆಡಳಿತದ ಎಲ್ಲಾ ಜವಬ್ದಾರಿಯೂ ಇರುತ್ತಿದ್ದುದರಿಂದ ಅಲ್ಲದೆ ಕೆಲವು ಬಾರಿ ಸೇನೆಯ ನಾಯಕತ್ವವನ್ನು ವಹಿಸುತ್ತಿದ್ದುದರಿಂದ ಈ ವಿಶೇಷಣಗಳು ಶಾಸನದಲ್ಲಿ ಸೇರ್ಪಡೆಗೊಂಡಿರ ಬಹುದು ಎಂದು ಹೇಳಬಹುದು ಒಟ್ಟಾರೆ ಹೇಳುವುದಾದರೆ ಇಲ್ಲಿಯವರೆಗೆ ದೊರಕಿರುವ ದಾಖಲೆಗಳ ಆಧಾರದ ಮೇಲೆ ಸಾಳ್ವ ತಿಮ್ಮರಸನು ಜನವರಿ ೧೫೦೮ರಲ್ಲೇ ತುಳುವ ಮನೆತನದ ವೀರನರಸಿಂಹರಾಯನ ಮಹಾಪ್ರಧಾನಿಯಾಗಿದ್ದನು ಎಂದು ಖಚಿತವಾಗಿ ಹೇಳಬಹುದು.

ಕೃಷ್ಣದೇವರಾಯನ ಸೋದರ ವೀರನರಸಿಂಹ ವಿಜಯನಗರದ ಚಕ್ರವರ್ತಿಯಾಗಿದ್ದಾಗ ಸಾಳುವ ತಿಮ್ಮರಸನು ಮಹಾಪ್ರಧಾನಿಯ ಹುದ್ದೆಯಲ್ಲಿದ್ದರೂ ಅವನಿಗೆ ಇಡೀ ಗುತ್ತಿ ರಾಜ್ಯದ ನಾಯಕತನವನ್ನು ಕ್ರಿ.ಶ.೧೫೦೮ರಲ್ಲಿ ನೀಡಿ ಗೌರವಿಸಿದ್ದನು.[೧೪] ಆ ಸಂದರ್ಭದಲಿ ಅವನು ಗುತ್ತಿರಾಜ್ಯ ಮತ್ತು ಪೆನ್ನಬಾಡಿ ಸೀಮೆಯಲ್ಲಿನ ವಿವಾಹ ಸುಂಕವನ್ನು ವೀರನರಸಿಂಹರಾಯರಿಗೆ ಪುಣ್ಯವಾಗಲಿ ಎಂದು ರದ್ದುಮಾಡಿದನು[೧೫] ಅಲ್ಲದೆ ಕ್ರಿ.ಶ. ೧೫೦೯ರ ಮೇನಲ್ಲಿ ನೆಲದಾಲಪಾಡು ಗ್ರಾಮವನ್ನು ತಾಡಪತ್ರಿಯ ರಾಮೇಶ್ವರದೇವರ ಪೂಜಾಕಾರ್ಯಗಳಿಗೆ, ಪ್ರಾಕಾರ, ಗೋಪುರ, ಭೋಗಮಂಟಪದ ನಿರ್ಮಾಣದ ಚಟುವಟಿಕೆಗೆ ವೀರನರಸಿಂಹನಿಗೆ ಪುಣ್ಯವಾಗಲಿ ಎಂದು ದಾನ ಬಿಟ್ಟಿದ್ದಾನೆ[೧೬] ಪ್ರಾಯಶಃ ಈ ಗುತ್ತಿ ರಾಜ್ಯವನ್ನು ಸಾಳುವ ತಿಮ್ಮರಸನ ತಮ್ಮ ಸಾಳುವ ಗೋವಿಂದನಿಗೆ ಕೃಷ್ಣದೇವರಾಯನು ನಾಯಕತನಕ್ಕೆ (ಕ್ರಿ.ಶ ೧೫೧೪) ನೀಡುವವರೆಗೆ ಅದು ತಿಮ್ಮರಸನ ಅಧೀನದಲ್ಲಿಯೇ ಇದ್ದಿರಬೇಕು. ಹೀಗೆ ಒಟ್ಟು ೬ ವರ್ಷಗಳ ಕಾಲ ಅಂದರೆ ಕ್ರಿಶ ೧೫೦೮ರಿಂದ ಕ್ರಿ.ಶ. ೧೫೧೪ರವರೆಗೆ ಗುತ್ತಿರಾಜ್ಯವನ್ನು ನಾಯಕತನದಿಂದ ಸಾಳ್ವತಿಮ್ಮರಸನು ಆಳುತ್ತಿದ್ದನು.

ವೀರನರಸಿಂಹನ ಕಾಲದಿಂದಲೂ ಅರಮನೆಯ ಎಲ್ಲಾ ವ್ಯವಹಾರಗಳನ್ನು ಅರಿತಿದ್ದ ಸಾಳುವ ತಿಮ್ಮರಸು, ವೀರ ನರಸಿಂಹರಾಯನ ಮರಣದ ಕಾಲಕ್ಕೆ ವಿಜಯನಗರ ರಾಜ್ಯದ ಸುತ್ತಲಿನ ರಾಜ್ಯಗಳಲ್ಲಿ ಅಶಾಂತಿ ಹೆಚ್ಚುತ್ತಿದ್ದುದನ್ನು ಮನಗಂಡಿದ್ದನು. ಆ ವೇಳೆಗಾಗಲೇ ಬಹಮನಿ ರಾಜ್ಯ ಒಡೆದು

೫ ಭಾಗವಾಗಿತ್ತು. ಒರಿಸ್ಸಾದ ಗಜಪತಿ ವಿಜಯನಗರಕ್ಕೆ ಸೇರಿದ್ದ ಕೆಲಪ್ರದೇಶಗಳನ್ನು ಆಕ್ರಮಿಸಿಕೊಂಡಿದ್ದನು. ಆಂತರಿಕವಾಗಿಯೂ ಉಮ್ಮತ್ತೂರಿನ ಗಂಗರಾಜು, ಕಂಚಿಯ ಸಾಂಬುವರಾಯನ ದ್ವೇಷವನ್ನು ಎದುರಿಸಬೇಕಾಗಿತ್ತು. ಇಂತಹ ಸನ್ನಿವೇಶದಲ್ಲಿ ವೀರನರಸಿಂಹನ ಇಷ್ಟಕ್ಕೆ ವಿರುದ್ದವಾಗಿ ಅವನ ಚಿಕ್ಕ ಮಗುವನ್ನು ಸಿಂಹಾಸನಕ್ಕೆ ತರದೆ ಅವನ ಸೋದರ ಕೃಷ್ಣದೇವರಾಯನನ್ನು ಸಿಂಹಾಸನಕ್ಕೆ ತರುವಲ್ಲಿ ತಿಮ್ಮರಸನು ಯಶಸ್ವಿಯಾದನು. ಏಕೆಂದರೆ ಹಲವಾರು ವರ್ಷಗಳಿಂದಲೂ ವೀರನರಸಿಂಹನ ಕುಟುಂಬದೊಡನೆ ಉತ್ತಮ ಬಾಂಧವ್ಯ ಇಟ್ಟುಕೊಂಡಿದ್ದ ಸಾಳ್ವ ತಿಮ್ಮರಸನಿಗೆ ಕೃಷ್ಣದೇವರಾಯನ ಮೇಲೆ ಅಪಾರ ಪ್ರೇಮವಿತ್ತು. ಡಾಮಿಂಗೋ ಪಯಸ್‌ನು ಇವನನ್ನು ಕುರಿತು ಕೃಷ್ಣದೇವರಾಯನಿಗೆ "ಎಲ್ಲರಿಗಿಂತಲೂ ಪ್ರಿಯನಾದವನೆಂದರೆ ತಿಮ್ಮರಸು ಎಂಬ ಹಿರಿಯ ಅವನು ಇಡೀ ಮನೆಯನ್ನು ನಿಯಂತ್ರಿಸುತ್ತಾನೆ ಮತ್ತು ಮಹಾಪ್ರಭುಗಳು ಅವನೊಂದಿಗೆ ರಾಜನೊಂದಿಗೆ ನಡೆದುಕೊಂಡಂತೆಯೇ ನಡೆದುಕೊಳ್ಳುತ್ತಾರೆ"[೧೭] "ಸಾಳ್ವತಿಮ್ಮ ಅರಮನೆ ಪ್ರವೇಶಿಸುವ ಪ್ರಧಾನ ವ್ಯಕ್ತಿಯಾಗಿದ್ದು ಎಲ್ಲದರ ಮೇಲ್ವಿಚಾರಣೆ ಮಾಡುತ್ತಾನೆ. ಏಕೆಂದರೆ ಅವನೇ ರಾಜನನ್ನು ಬೆಳಸಿ ರಾಜನನ್ನಾಗಿ ಮಾಡಿದವ ಮತ್ತು ರಾಜ ಅವನನ್ನು ತಂದೆಯಂತೆ ಕಾಣುತ್ತಾನೆ. ರಾಜ ಅವನನ್ನು ಯಾವಾಗ ಕರೆದರೂ ದೊರೆ ಸಾಲ್ಪಟಿನಿಕ (ಸಾಳ್ವತಿಮ್ಮ) ಎಂದು ಸಂಬೋಧಿಸುತ್ತಾನೆ"[೧೮] ಈ ದಾಖಲೆಗಳಿಂದ ಕೃಷ್ಣದೇವರಾಯನನ್ನು ಚಿಕ್ಕ ವಯಸ್ಸಿನಿಂದಲೂ ಪ್ರೀತಿಯಿಂದ ಬೆಳಸಿದವನು ಸಾಳ್ವತಿಮ್ಮರಸನೇ ಆಗಿದ್ದುದರಿಂದ ಚಕ್ರವರ್ತಿ ಅವನಿಗೆ ಹೆಚ್ಚುಗೌರವವನ್ನು ನೀಡುತ್ತಿದ್ದನು. ಈ ಕೃತಜ್ಞತೆಗಾಗಿ ತಿಮ್ಮರಸನಿಗೆ ಕೃಷ್ಣದೇವರಾಯ ಕನಕಾಭಿಷೇಕ ಮಾಡಿ ಅದರ ಸ್ಮರಣೆಗೋಸ್ಕರ ತಾಮ್ರ ನಾಣ್ಯಗಳನ್ನು ಅಚ್ಚು ಹಾಕಿಸಿ ಅದರ ಒಂದು ಕಡೆ ತನ್ನ ಹಾಗೂ ಮತ್ತೊಂದು ಮುಖದಲ್ಲಿ ತಿಮ್ಮರಸುಗಾರು ಎಂಬ ಹೆಸರನ್ನು ಬರೆಸಿದನು. ಇದು ಪ್ರಧಾನಿ ಮತ್ತು ಚಕ್ರವರ್ತಿಯ ಹೆಸರು ಜೊತೆಗಿರುವುದು ಅಪೂರ್ವವಾಗಿದೆ. ಆದ್ದರಿಂದಲೋ ಏನೋ ಬಾಪಟ್ಟ ತಾಲ್ಲೂಕಿನ ಒಂದು ಶಾಸನವು ತಿಮ್ಮರಸು ಮತ್ತು ಕೃಷ್ಣದೇವರಾಯರು ಏಕಶರೀರದಂತಿದ್ದರು ಎಂದು ದಾಖಲಿಸಿದೆ.[೧೯]

ಕೃಷ್ಣದೇವರಾಯನು ವಿಜಯನಗರ ಚಕ್ರವರ್ತಿಯಾದ ನಂತರ ಸಾಳುವ ತಿಮ್ಮರಸು ಕ್ರಿ.ಶ. ೧೫೧೦ ಅಕ್ಟೋಬರ್‌ನಲ್ಲಿ ಕೊಂಡವೀಡು ರಾಜ್ಯವನ್ನು ಆಳ್ವಿಕೆ ಮಾಡುತ್ತಿದ್ದನೆಂದು ಹೇಳಲಾಗಿದೆ.[೨೦] ಆಗ ಅವನು ಅಬ್ಬಾನಾಯಕ ಎಂಬುವನನ್ನು ತನಗೆ ಸೇರಿದ ರಾಜ್ಯದ ಅಮ್ಮನಬ್ರೋಲು ಸೀಮೆಯ ಕೊಚ್ಚೆರಕೋಟೆ ಕಟ್ಟಕದ ನಾಯಕನನ್ನಾಗಿ ಮಾಡಿದನು. ಆದ್ದರಿಂದ ಅಬ್ಬಾನಾಯಕನು ಗೋಣಗುಂಟ ಅಮರೇಶ್ವರ ದೇವರಿಗೆ ತಿಮ್ಮರಸುವಿಗೆ ಪುಣ್ಯವಾಗಲಿ ಎಂದು ಗೋಣಗುಂಟ ಗ್ರಾಮದಲ್ಲಿ ಭೂದಾನ ಮಾಡಿದ್ದನ್ನು ಅದೇ ಶಾಸನವು ತಿಳಿಸುತ್ತದೆ. ಆದರೆ ಈ ಶಾಸನದಲ್ಲಿ ತಿಮ್ಮರಸುವನ್ನು ಪ್ರಧಾನಿ ಎಂದು ಹೇಳಿರದಿದ್ದರೂ ಅದೇ ವರ್ಷದ ಅದೇ ತಿಂಗಳಿನ ಶಾಸನವು ಅವನನ್ನು ಪ್ರಧಾನಿ ಎಂದು ಹೇಳುತ್ತದೆ.[೨೧] ಇದರಿಂದ ಸಾಳುವ ತಿಮ್ಮರಸನು ಕೃಷ್ಣದೇವರಾಯನ ಆಳ್ವಿಕೆಯ ಆರಂಭದಲ್ಲೇ (ವೀರನರಸಿಂಹನ ಕಾಲದಿಂದಲೂ ಪ್ರಧಾನಿಯಾಗಿದ್ದನು) ಪ್ರಧಾನಿ ಹುದ್ದೆಯಲ್ಲಿಯೇ ಮುಂದುವರಿದನೆಂದು ಖಚಿತಪಡಿಸಬಹುದು.

ಕೃಷ್ಣದೇವರಾಯನನ್ನು ಸಿಂಹಾಸನಕ್ಕೆ ತರುವಲ್ಲಿ ಮಹತ್ತರ ಪಾತ್ರ ವಹಿಸಿದ ಸಾಳ್ವತಿಮ್ಮರಸುವು ತುಂಬಾ ಅನುಭವಿ. ಇವನನ್ನು ಶಾಸನವು "ಉದಯಗಿರಿ ಕಂನಡಿಗ ಕುಲತಿಲಕಂ ವಿಪ್ರಾಗ್ರಗಣ್ಯಂ ಸತ್ಕುಲ ಪ್ರಸೂತಂ ಶಿವಪೂಜಾ ಧುರಂಧರ ಸರ್ವಗುಣ ಸಂಪನ್ನ"[೨೨] ಎಂದು ಹೊಗಳಿದೆ. ಆದ್ದರಿಂದ ಇವನು ಸ್ಮಾರ್ತ ಬ್ರಾಹ್ಮಣನಾಗಿದ್ದು ಉದಯಗಿರಿ ಕನ್ನಡಿಗರಿಗೆ ತಿಲಕಪ್ರಾಯನಾಗಿದ್ದನು ಎಂದು ಅಭಿಪ್ರಾಯ ಪಡಬಹುದು. ಇಂಥಹ ವ್ಯಕ್ತಿ ಕೃಷ್ಣದೇವರಾಯನಿಗೆ ದಕ್ಷಿಣ ಭಾರತದಾದ್ಯಂತ ಸಾಮ್ರಾಜ್ಯ ವಿಸ್ತರಿಸಲು ನೆರವಾಗಿದ್ದನು. ಒರಿಸ್ಸಾ ದಂಡಯಾತ್ರೆಯಲ್ಲಿ ಕೃಷ್ಣದೇವರಾಯನು ಸೈನ್ಯವನ್ನು ಎರಡು ಭಾಗ ಮಾಡಿ ಒಂದರ ನೇತೃತ್ವವನ್ನು ಸಾಳ್ವತಿಮ್ಮರಸನೇ ವಹಿಸಿಕೊಂಡಿದ್ದನು. ಇವನು ಕಂದಕೂರು, ವಿನುಕೊಂಡ, ನಾಗಾರ್ಜುನ ಕೊಂಡ, ಕೊಂಡವೀಡು ಮೊದಲಾದ ಕೋಟೆಗಳನ್ನು ಜಯಿಸಿ ರಾಯನೊಂದಿಗೆ ಕೊಂಡವೀಡು ಬಳಿ ಸೇರಿಕೊಂಡನು. ಈ ಕೃತಜ್ಞತೆಗೋ ಏನೋ ಕ್ರಿ.ಶ. ೧೫೧೪ರಲ್ಲಿ ಸಾಳ್ವತಿಮ್ಮರಸನ ಮಗನಾದ ರಾಯಸ್ತ ಕೊಂಡಮರಸಯ್ಯನಿಗೆ ಉದಯಗಿರಿ ದುರ್ಗದ ದುರ್ಗಾಧಿಪತಿಯನ್ನಾಗಿ ಮಾಡಿದನೆಂದು ತೋರುತ್ತದೆ.[೨೩]

**ಸಾಳುವ ತಿಮ್ಮರಸರು ನೀಡಿರುವ ಶಾಸನೋಕ್ತ ದತ್ತಿಗಳು**

ತಿಮ್ಮರಸರು ವೀರನರಸಿಂಹರ ಮಹಾಪ್ರಧಾನಿಯಾಗಿದ್ದಾಗಲೇ ಚಕ್ರವರ್ತಿಗಳ ಮನ ಒಲಿಸಿ ಅನೇಕ ಸಾರ್ವಜನಿಕ ಕೆಲಸಗಳನ್ನು ಕೂಡಾ ಮಾಡಿದ್ದಾರೆ.

೧. ಕ್ರಿ.ಶ. ೧೫೦೮ರಲ್ಲಿ ತಮ್ಮ ನಾಯಕತನಕ್ಕೆ ಸೇರಿದ್ದ ಗುತ್ತಿರಾಜ್ಯದ ಪೆನ್ನಾಡಿ ಸೀಮೆಯ ವಿವಾಹ ಸುಂಕವನ್ನು ರದ್ದುಮಾಡಿ ವೀರನರಸಿಂಹರಾಯರಿಗೆ ಪುಣ್ಯವಾಗಲಿ ಎಂದು ಶಾಸನ ಹಾಕಿಸಿದ್ದಾರೆ (Inscription of Vijayanagara rulers, vol. IV No - 70, I.C.H.R. Bangalore - 2009)

೨. ಕ್ರಿ.ಶ. ೧೫೦೯ರಲ್ಲಿ ಗುತ್ತಿರಾಜ್ಯದ ಪೆನ್ನಬಾಡಿ ಸೀಮೆಯ ನೆಲದಾಲಪಾಡು ಗ್ರಾಮವನ್ನು ವೀರನರಸಿಂಹ ರಾಯರಿಗೆ ಪುಣ್ಯವಾಗಲಿ ಎಂದು ತಾಡಪತ್ರಿಯ ರಾಮೇಶ್ವರ ದೇವರ ಪೂಜಾಕಾರ್ಯ ಮತ್ತು ಪ್ರಾಕಾರ, ಗೋಪುರ, ಬೋಗ ಮಂಟಪದ ನಿರ್ಮಾಣ ಚಟುವಟಿಕೆಗೆ ಸರ್ವಮಾನ್ಯವಾಗಿ ನೀಡಿದ್ದಾನೆ (I.V.R. Vol - IV No. 72)

೩. ಕ್ರಿ.ಶ. ೧೫೧೨ರಲ್ಲಿ ಪೊತ್ತಪ್ಪಿ ನಾಡಿನ ಪರಾಂತಲೂರ್ ಗ್ರಾಮವನ್ನು ತಿರುಪತಿಯ ವೆಂಕಟೇಶ್ವರನಿಗೆ ದತ್ತಿಯಾಗಿ ನೀಡಿದನು. ಮತ್ತು ದೇವರ ನೈವೇದ್ಯಕ್ಕಾಗಿ ಆ ಗ್ರಾಮದ ಆದಾಯವನ್ನು ಸಂಗ್ರಹಿಸಲು ಸ್ಥಾನಿಕರಿಗೆ ಅಧಿಕಾರ ನೀಡಿದ್ದೆ. ಅಲ್ಲದೆ ಅಗತ್ಯವಾದ ವಸ್ತುಗಳನ್ನು ಪೂರೈಸಲು ಶ್ರೀ ಭಂಡಾರದಲ್ಲಿ ಪಡೆದುಕೊಳ್ಳಬೇಕೆಂದು ಆದೇಶಿಸಲಾಗಿದೆ (Vijayanagar and Krishandevaraya - page 64, ICHR B'lore 2010)

೪. ಕ್ರಿ.ಶ. ೧೫೧೪ರಲ್ಲಿ ತಲಕಾಡಿನ ಕೀರ್ತಿನಾರಾಯಣ ದೇವರಿಗೆ ಥಾಯೂರು ಸ್ಥಳದ ಕಾವಾಹಳ್ಳಿ ಒಳಗಣ ಆದಾಯದ ಬಾಬ್ತು ೧೩೨ ಗದ್ಯಾಣವನ್ನು ದತ್ತಿ ಬಿಟ್ಟಿದ್ದಾನೆ. (ಕೃಷ್ಣದೇವರಾಯನ ಶಾಸನಗಳು, ಸಂಪುಟ ೧. ನಂ. ೫೨).

೫. ಕ್ರಿ.ಶ. ೧೫೧೭ರಲ್ಲಿ ಮುಲಕಿನಾಡು ಸೀಮೆಯ ಕಡಪ ಗ್ರಾಮದ ತಿರುವೆಂಗಳನಾಥ ದೇವರ ನಿತ್ಯಾಪೂಜಾ ಕಾರ್ಯಗಳಿಗೆ ೨ ಖಂಡುಗ ಭೂಮಿಯನ್ನು ೩ ಸ್ಥಳಗಳಲ್ಲಿ ದಾನ ನೀಡಿದ್ದಾನೆ (I.V.R. vol - IV No - 108)

೬. ಕ್ರಿ.ಶ. ೧೫೧೭ರಲ್ಲಿ ತನ್ನ ಕುಟುಂಬ ವರ್ಗದವರಿಗೆಲ್ಲಾ ಪುಣ್ಯವಾಗಲಿ ಎಂದು ಚೆಜಾರ್ಲಗ್ರಾಮದ ಕಪೋತೇಶ್ವರ ದೇವಾಲಯಕ್ಕೆ ಪೆದ್ದಪಾಡು ಎಂಬ ಗ್ರಾಮದ ಆದಾಯದಲ್ಲಿ ೧೨ ವರಹಾವನ್ನು ದತ್ತಿಯಾಗಿ ನೀಡಿದ್ದಾನೆ. (I.V.R. vol - IV No - 107)

೭. ಕ್ರಿ.ಶ. ೧೫೧೮ ರಲ್ಲಿ ಕಟ್ಟಮಲ್ಲಯ್ಯನ ಮೂಲಕ ಮದನೂರು ಗ್ರಾಮದ ರಾಮೇಶ್ವರ ದೇವರ ಗುಡಿಯ ಶಿಖರ ಗರ್ಭಗೃಹ, & ಅರ್ಧಮಂಟಪ ಶಿಥಿಲವಾದುದರಿಂದ ಅದನ್ನು ಜೀರ್ಣೋದ್ಧಾರ ಮಾಡಿಸಿ ಹೊಸದಾಗಿ ಭೋಗಮಂಟಪ ಪರಿವಾರದೇವತೆಗೆ ಪ್ರಕಾರ ಕಟ್ಟಿಸಿ ದೇವರ ಪೂಜಾಕಾರ್ಯಗಳಿಗೆ ಇಡೀ ಮದನೂರು ಗ್ರಾಮವನ್ನು ಕೃಷ್ಣದೇವರಾಯನಿಗೆ ಪುಣ್ಯವಾಗಲಿ ಎಂದು ದತ್ತಿ ಬಿಟ್ಟಿದ್ದಾನೆ. (I.V.R. vol - IV No - 112)

ಸಾಳ್ವ ತಿಮ್ಮರಸ ತನ್ನ ಒಡೆಯನಾದ ಚಕ್ರವರ್ತಿ ಕೃಷ್ಣದೇವರಾಯನಿಗೆ ಪುಣ್ಯವಾಗಲಿ ಎಂದು ದೇವಾಲಯಗಳಿಗೆ ದಾನ ದತ್ತಿಗಳನ್ನೂ ನೀಡಿದ್ದರೂ, ಅದೇ ರೀತಿ ಸಾಳ್ವತಿಮ್ಮರಸನ ಅಧೀನದಲ್ಲಿನ ಅಧಿಕಾರಿ ವರ್ಗದವರೂ ಕೂಡಾ ಅವನ ಹೆಸರಿನಲ್ಲಿ ಪುಣ್ಯವಾಗಲೆಂದು ನೀಡಿದ್ದಾರೆ.

ಉದಾ: (೧) ಸಾಳ್ವತಿಮ್ಮರಸು ಮತ್ತು ಆತನ ಪತ್ನಿಗೆ ಪುಣ್ಯವಾಗಲಿ ಎಂದು ದಳವಾಯಿ ಆಹೋಬಲಯ್ಯನ ಕಾರ್ಯಕರ್ತನಾದ ವಾವಿಲಪತಿದೇವರಾಜು ನಾಗಯ್ಯನು ಪೆನುಗೊಂಡೆ ಮಾರ್ಜ್ವಾಡ ಸೀಮೆಯಲ್ಲಿನ ವಾವಿಲಪಾಡು ಎಂಬ ಗ್ರಾಮದ ಶಿವ ದೇವಾಲಯಕ್ಕೆ ಭೂದತ್ತಿಯನ್ನು ಅದೇ ಗ್ರಾಮದಲ್ಲಿ ನೀಡಿದ್ದಾನೆ.[೨೪]

(೨) ತಿಮ್ಮರಸನಿಗೆ ಪುಣ್ಯವಾಗಲಿ ಎಂದು ತಿರುವೆಂಗಳನಾಥನ ತಿರುನಾಳ ದಿನಗಳಲ್ಲಿ ತಿರುಮಲಕ್ಕೆ ಹೋಗಿ ಬರುವ ಸತಾನಿ ವೈಷ್ಣವ ಮತ್ತು ಬ್ರಾಹ್ಮಣ ಯಾತ್ರಾರ್ಥಿಗಳಿಗೆ ಅನುಕೂಲವಾಗಲಿ ಎಂದು ಚಿದ್ದಿರಪಾಲ ಎಂಬ ಗ್ರಾಮದಲ್ಲಿ ಧರ್ಮಛತ್ರವನ್ನು ಗುರುಜಪಳ್ಳಿ ಚನ್ನಯ್ಯ ಎಂಬುವನು ನಿರ್ಮಿಸಿದನು.[೨೫]

ಸಾಳ್ವ ತಿಮ್ಮರಸನು ಉದಯಗಿರಿ ದುರ್ಗದ ನಿರ್ವಹಣೆಯೇ ಅಲ್ಲದೆ ಕೊಂಡವೀಡು ದುರ್ಗಾಧಿಪತಿಯಾಗಿಯೂ ಕೃಷ್ಣದೇವರಾಯನು ಅವನನ್ನು ನೇಮಕ ಮಾಡಿದ್ದನೆಂದು ಹೇಳಲಾಗಿದೆ. ಈ ಕೊಂಡವೀಡು ಪ್ರದೇಶವನ್ನು ಕೃಷ್ಣದೇವರಾಯನು ತನ್ನ ಪೂರ್ವದ ದಂಡಯಾತ್ರೆಯ ಸಮಯದಲ್ಲಿ ಗೆದ್ದುಕೊಳ್ಳಲು ಸಾಳುವ ತಿಮ್ಮನ ಯೋಜನೆಗಳು ಕಾರಣವಾಗಿದ್ದವು. ಆದ್ದರಿಂದ ಈ ಹೊಸ ಪ್ರದೇಶವನ್ನು ಕೃಷ್ಣದೇವರಾಯ ಕೊಂಡವೀಡು ರಾಜ್ಯ ಎಂದು ಸೃಷ್ಟಿಸಿ, ಅದಕ್ಕೆ ಕೊಂಡವೀಡು ಸ್ಥಳವನ್ನು ಪ್ರಧಾನ ಕೇಂದ್ರವನ್ನಾಗಿ ಮಾಡಿದನು. ಅದರ ಆಡಳಿತದ ನಿರ್ವಹಣೆಯನ್ನು ಅನುಭವಿ ಸಾಳುವ ತಿಮ್ಮರಸನಿಗೆ ನೀಡಿದನು.[೨೬]

ಕ್ರಿ.ಶ. ೧೫೧೦ರಲ್ಲೇ ಕೊಂಡವೀಡನ್ನು ಸಾಳುವ ತಿಮ್ಮರಸನು ಆಳ್ವಿಕೆ ಮಾಡುತ್ತಿದ್ದಾನೆಂಬ ಸೂಚನೆ ಶಾಸನದಲ್ಲಿರುವುದರಿಂದ[೨೭] ಅಲ್ಲಿಂದ ತನ್ನ ಮಗನಾದ ರಾಯಸ್ತ ಕೊಂಡಮರಸಯ್ಯನಿಗೆ ಕೊಡುವವರೆಗೆ ಸಾಳ್ವತಿಮ್ಮರಸನೇ ಆಡಳಿತ ನಡೆಸುತ್ತಿದ್ದನು. ಕ್ರಿ.ಶ. ೧೫೧೬ ಫೆಬ್ರವರಿ ತಿಂಗಳ ಶಾಸನದಲ್ಲಿ ಕೊಂಡಪಲ್ಲಿ, ಕೊಂಡವೀಡು ರಾಜ್ಯಗಳ ಅಧಿಪತಿಯಾಗಿ ರಾಯಸ್ತ ಕೊಂಡಮರಸಯ್ಯನು ಆಳ್ವಿಕೆ ಮಾಡುತ್ತಿದ್ದನೆಂಬ[೨೮] ವಿಚಾರ ಶಾಸನದಲ್ಲಿ ಇರುವುದರಿಂದ ೧೫೧೬ರ ವೇಳೆಗೆ ತಿಮ್ಮರಸನು ತನ್ನ ಮಗನನ್ನು ಕೊಂಡವೀಡು ದುರ್ಗದ ಅಧಿಪತಿಯಾಗಿ ಮಾಡಿದ್ದನೆಂದು ಹೇಳಬಹುದು. ಕ್ರಿ.ಶ. ೧೫೨೦ರ ಮೇ ತಿಂಗಳ ಶಾಸನದಲ್ಲಿ ಸಾಳ್ವತಿಮ್ಮರಸನ ಕಿರಿಯ ಅಳಿಯ ಕೊಂಡವೀಡನ್ನು ಆಳ್ವಿಕೆ ಮಾಡುತ್ತಿದ್ದನೆಂಬ[೨೯] ಉಲ್ಲೇಖ ಇರುವುದರಿಂದ ಆ ವೇಳೆಗೆ

ಕೊಂಡವೀಡು ತನ್ನ ಮಗನಿಂದ ಬಿಡಿಸಿಕೊಂಡು ಅದನ್ನು ತನ್ನ ಅಳಿಯನಿಗೆ ನೀಡಿದ್ದನೆಂದು ಹೇಳಬಹುದು. ನಂತರ ಕೊಂಡಮರಸಯ್ಯನನ್ನು ಉದಯಗಿರಿ ದುರ್ಗಕ್ಕೆ ಕ್ರಿ.ಶ. ೧೫೨೦ ಮೇನಲ್ಲಿ[೩೦] ಬದಲಾಯಿಸಿದರು. ಕೊಂಡಮರಸಯ್ಯ ನಿಗೆ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಅವನ ಮಗ ರಾಯಸ್ತ ಅಯ್ಯಪ್ಪರಸ ಕುಂದುರ್ಪೆರಾಜ್ಯದ ಜಾಲುವಟ್ಟಿ ಗ್ರಾಮವನ್ನು ಕಂಭದೂತ ಮಲ್ಲಿಕಾರ್ಜುನ ದೇವರಿಗೆ ದತ್ತಿ ಬಿಟ್ಟನು ಎಂಬ ಶಾಸನದ ೩೧. ಆಧಾರದಮೇಲೆ ೧೫೨೫ರ ವೇಳೆಗೆ ರಾಯಸ್ತ ಕೊಂಡಮರಸಯ್ಯನು ಮರಣ ಹೊಂದಿದನೆಂಬ ಅಂಶ ಸ್ಪಷ್ಟವಾಗುತ್ತದೆ. ನಂತರ ಉದಯಗಿರಿಯು ಅವನ ಮಗ ರಾಯಸಂ ಅಯ್ಯಪ್ಪರಸನ ಅಧೀನದಲ್ಲಿತ್ತೆಂದು ಕ್ರಿ.ಶ. ೧೫೨೭ ಆಗಸ್ಟ್‌ನಲ್ಲಿ ಹಾಕಿಸಲಾದ ಶಾಸನದಲ್ಲಿ ಉಲ್ಲೇಖವಾಗಿದೆ[೩೨].

ಸಾಳುವ ತಿಮ್ಮರಸನಿಗೆ ಸಾಳ್ವ ಗೋವಿಂದರಾಜು ಎಂಬ ತಮ್ಮನಿದ್ದನು. ಇವನು ಕ್ರಿ.ಶ. ೧೫೧೩ರಲ್ಲಿ ತೆರಕಣಾಂಬಿ ಸೀಮೆಯನ್ನು ಆಳುತ್ತಿದ್ದ[೩೩]. ಅವನ ಅಣ್ಣ ಸಾಳುವ ತಿಮ್ಮರಸ ಗುತ್ತಿ ಸೀಮೆಯಿಂದ ಕೊಂಡವೀಡು ರಾಜ್ಯಕ್ಕೆ ಬದಲಾದಾಗ ಕ್ರಿ.ಶ. ೧೫೧೪ರಲ್ಲಿ ಗುತ್ತಿ ಸೀಮೆಯನ್ನು ನಾಯಕತನದಿಂದ ಆಳುತ್ತಿದ್ದನು.[೩೪] ಇದರ ಜೊತೆಗೆ ಕ್ರಿ.ಶ. ೧೫೧೮ರ ವೇಳೆಗೆ ಉಮ್ಮತ್ತೂರು ರಾಜ್ಯವನ್ನು ಆಡಳಿತ ಮಾಡುತ್ತಿದ್ದುದು[೩೫] ಹೀಗೆ ಸಾಳುವ ಗೋವಿಂದರಾಜು ಆಂಧ್ರದ ಗುತ್ತಿ ಕರ್ನಾಟಕದ ತೆರಕಣಾಂಬಿ ಮತ್ತು ಉಮ್ಮತ್ತೂರು ರಾಜ್ಯಗಳ ಆಡಳಿತ ಮಾಡುತ್ತಿದ್ದುದು ಸ್ಪಷ್ಟವಾಗುತ್ತದೆ. ತರಕಣಾಂಬಿ ಮತ್ತು ಉಮ್ಮತ್ತೂರು ರಾಜ್ಯಗಳು ಕಾವೇರಿ ನದಿಯ ಮುಖ್ಯ ಭೂಮಿಯಲ್ಲಿದ್ದು ಫಲವತ್ತಾದ ಪ್ರದೇಶಗಳಾಗಿದ್ದವು. ಗುತ್ತಿಯು ಗಣಿಗಾರಿಕೆಯುಳ್ಳ ಪ್ರದೇಶವಾಗಿತ್ತು. ಈ ಪ್ರದೇಶಗಳು ಅಧಿಕ ಆದಾಯ ತರುವ ಆಯಕಟ್ಟಿನ ಪ್ರದೇಶಗಳಾಗಿದ್ದವು. ಇಂಥಹ ಸ್ಥಳಗಳನ್ನು ಪ್ರಭಾವ ಶಾಲಿಯಾಗಿದ್ದ ಇವರು ಕೃಷ್ಣದೇವರಾಯನ ಕಾಲದಲ್ಲಿ ಅವುಗಳನ್ನು ಯಾರಿಗೂ ಬಿಟ್ಟುಕೊಡದೆ ತಮ್ಮ ಅಧೀನದಲ್ಲಿರಿಸಿಕೊಂಡಿದ್ದುದು ಸ್ಪಷ್ಟವಾಗುತ್ತದೆ.

ಸಾಳುವ ಗೋವಿಂದರಾಜನ ಅಣ್ಣ ಸಾಳುವ ತಿಮ್ಮರಸು ಮಹಾಪ್ರಧಾನಿಯಾಗಿದ್ದರೂ ಮೊದಲು ಗುತ್ತಿ ಉದಯಗಿರಿ ಕೊಂಡವೀಡು ಮುಲುಕಿನಾಡು ಸೀಮೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದನು. ಕಾರ್ಯಭಾರದ ಒತ್ತಡದಿಂದಲೋ ಅಥವಾ ಬೇರಿನ್ನಾವ ಕಾರಣದಿಂದಲೋ ಏನೋ ಗುತ್ತಿಗೆ ತನ್ನ ಸೋದರ ಗೋವಿಂದ ರಾಜನನ್ನು ನೇಮಿಸಿದನು. ಉದಯಗಿರಿಗೆ ತನ್ನ ಮಗ ಕೊಂಡಮರಸನನ್ನು ನೇಮಕ ಮಾಡಿ ಕೊಂಡವೀಡನ್ನು ತನ್ನ ಅಳಿಯನಾದ ನಾದೆಂಡ್ಲಗೋಪನಿಗೆ ನೀಡಿದನು. ಹೀಗೆ ಈ ರಾಜ್ಯಗಳನ್ನು ತನ್ನ ಕುಟುಂಬದವರಿಗೆ ಹಂಚಿಕೆಮಾಡಿದ್ದಲ್ಲದೆ ತನ್ನ ಮಗನಿಗೆ ಹೆಚ್ಚುವರಿಯಾಗಿ ಪೊದ್ದಿಲಸೀಮೆ, ಕೊಂಡಪಲ್ಲಿಯನ್ನು ಕೊಡಿಸಿದನು. ತನ್ನ ಮೊಮ್ಮಗನಾದ ರಾಯಸದ ಅಯ್ಯಪ್ಪರಸುವಿಗೆ ಗಂಡಿಕೋಟೆ ಅಡ್ಡಂಕಿ ಸೀಮೆಯನ್ನು ಕೊಡಿಸಿದನು. ರಾಯಸದ ಕೊಂಡಮರಸ ೧೫೨೫ರಲ್ಲಿ ಮರಣಹೊಂದಿದ ಮೇಲೆ ಮೊದಲ ದುರ್ಗವಾದ ಉದಯಗಿರಿಯನ್ನು ರಾಯಸರ ಅಯ್ಯಪ್ಪರಸು ಪಡೆದುಕೊಂಡನು. ಒಟ್ಟಾರೆ ಹೇಳುವುದಾದರೆ ವಿಜಯನಗರದ ಇಡೀ ಆಂಧ್ರಪ್ರದೇಶದ ಬಹುಪಾಲು ಭಾಗಗಳು ಸಾಳ್ವತಿಮ್ಮನ ಕುಟುಂಬದ ಅಧೀನದಲ್ಲಿದುದು ಸ್ಪಷ್ಟವಾಗುತ್ತದೆ. ಈ ಭಾಗಗಳಿಗೆ ಬೇರೆಯವರನ್ನು ನೇಮಕ ಮಾಡದೆ ಇರಲು ಏನಾದರೂ ಕಾರಣವಿತ್ತೇ ಎಂಬುದನ್ನು ವಿಶ್ಲೇಷಿಸಿದಾಗ ಕೆಲವು ಅಂಶಗಳನ್ನು ಊಹಿಸಬಹುದು.

ಮೊದಲನೆಯದಾಗಿ ಈ ಕುಟುಂಬ ವಿಜಯನಗರಕ್ಕೆ ಅತ್ಯಂತ ನಿಷ್ಠೆಯಿಂದಿದ್ದು ಮತ್ತು ಸಾಳ್ವತಿಮ್ಮರಸು ಕೃಷ್ಣದೇವರಾಯನನ್ನು ಪಟ್ಟಕ್ಕೆ ತರಲು ಯೋಜನೆ ರೂಪಿಸಿ ಯಶಸ್ವಿಯಾಗಿದ್ದುದು, ಚಕ್ರವರ್ತಿ ಸಾಳ್ವತಿಮ್ಮನ ಮತ್ತು ಅವನ ಕುಟುಂಬದ ಬಗೆಗೆ ಅಪಾರ ವಿಶ್ವಾಸವಿಡಲು ಕಾರಣವಾಗಿದೆ. ಎರಡನೆಯದಾಗಿ ಇವರ ಅಧೀನದಲ್ಲಿದ್ದ ಪ್ರದೇಶಗಳಾದ ಉದಯಗಿರಿ, ಕೊಂಡವೀಡು, ಗಂಡಿಕೋಟೆ ಮತ್ತು ಗುತ್ತಿ ಪ್ರಮುಖ ಪಟ್ಟಣಗಳಾಗಿದ್ದವು ಇವು ಕೋರಮಂಡಲ ಮತ್ತು ಆಂಧ್ರ ಕರಾವಳಿತೀರವನ್ನು ವಿಜಯನಗರಕ್ಕೆ ಸಂಪರ್ಕಿಸುವ ಪ್ರಮುಖ ವ್ಯಾಪಾರಿ ಹೆದ್ದಾರಿಯಾಗಿದ್ದವು. (ಕೊಂಡವೀಡು ಮುಖಾಂತರ ಒಂದು ಮಾರ್ಗವಾದರೆ ಪೆನಗೊಂಡೆ ಮೂಲಕ ಮತ್ತೊಂದು ಮಾರ್ಗವಾಗಿತ್ತು.) ಅಲ್ಲದೆ ಗುತ್ತಿಯಲ್ಲಿನ ವಜ್ರದ ಗಣಿಗಳಿಂದ ಅಧಿಕ ಆದಾಯ ಲಭ್ಯವಾಗುತ್ತಿತ್ತು. ಈ ಆದಾಯವೇ ಈ ಪ್ರದೇಶಗಳನ್ನು ತಮ್ಮ ಅಧೀನದಲ್ಲಿಟ್ಟು ಕೊಳ್ಳಲು ಪ್ರೇರಣೆ ನೀಡಿರಬಹುದೇ?

ಮೂರನೆಯದಾಗಿ ಒರಿಸ್ಸಾದ ಗಜಪತಿಯ ದಾಳಿಯನ್ನು ತಡೆಗಟ್ಟಲು ಚಕ್ರವರ್ತಿಗೆ ನಿಷ್ಠೆಯಿಂದ ಇದ್ದವರು ಬೇಕಾಗಿತ್ತು ಆದ್ದರಿಂದಲೋ ಏನೋ ಕೃಷ್ಣದೇವರಾಯ ಮರುಮಾತಿಲ್ಲದೆ ಸಾಳ್ವತಿಮ್ಮರಸನ ಕುಟುಂಬ ವರ್ಗದವರ ಮೇಲೆ ಅಪಾರ ವಿಶ್ವಾಸವಿದ್ದುದರಿಂದ ಆ ಪ್ರದೇಶಗಳನ್ನು ನೀಡಿರಬಹುದೇ?

ಒಟ್ಟಾರೆ ಯಾವುದೇ ಕಾರಣಗಳಿದ್ದರೂ ಇಷ್ಟೊಂದು ಸುದೀರ್ಘ ಅವಧಿಗೆ ಸಾಮ್ರಾಜ್ಯದ ಬಹುಪಾಲು ಭಾಗದಲ್ಲಿ ಸಾಳ್ವತಿಮ್ಮರಸನ ಕುಟುಂಬ ವರ್ಗದವರ ಅಧಿಕಾರವಿದ್ದುದು ಸ್ಪಷ್ಟವಾಗುವುದಲ್ಲದೆ. ರಾಜ್ಯದಲ್ಲಿ ಅವರೆಷ್ಟು ಪ್ರಭಾವಶಾಲಿಗಳು

ಎಂಬುದನ್ನು ತೋರಿಸುತ್ತದೆ. ಸಾಳ್ವತಿಮ್ಮರಸುವಿನ ತಂದೆ ರಚಿರಾಜ ಕುಟುಂಬದ ಹಿರಿಯ ಅವನು ಮಹಾಮಂಡಲೇಶ್ವರ ನಾಗಿದ್ದು ಪೊಟ್ಟದುರ್ತಿಸೀಮೆಯನ್ನು ಆಡಳಿತ ಮಾಡುತ್ತಿದ್ದನು. ಸ್ವತಃ ತಾನು ಸಾಮ್ರಾಜ್ಯದ ಮಹಾ ಪ್ರಧಾನಿಯ ಹುದ್ದೆಯಲ್ಲಿದ್ದು ತಮ್ಮನಾದ ಸಾಳ್ವ ಗೋವಿಂದರಾಜನನ್ನೂ ಕ್ರಿ.ಶ. ೧೫೧೯ರ ವೇಳೆಗೆ ಮಹಾ ಪ್ರಧಾನಿಯ[೩೬] ಮಟ್ಟಕ್ಕೆ ತಂದನು. ಅಲ್ಲದೆ ಅವನು ೧೫೨೯ರಲ್ಲಿ ಬಾಗಿಲ ಪ್ರಧಾನಿಯ ಹುದ್ದೆಯಲ್ಲಿದ್ದನು.[೩೭] ಸಾಳ್ವ ತಿಮ್ಮರಸನ ಮಗ ಕೊಂಡಮರಸಯ್ಯ ಮತ್ತು ನಾರಾಣಪ್ಪ ಹಾಗೂ ಮೊಮ್ಮಗ ಅಯ್ಯಪ್ಪರಸ ರಾಯಸ ಕಛೇರಿಯ ಹಿರಿಯ ಅಧಿಕಾರಿಗಳು. ಇವನ ಅಳಿಯ ನಾದೆಂಡ್ಲೆಗೋಪ ಕೊಂಡವೀಡು ದುರ್ಗಾಧಿಪತಿ. ಹೀಗೆ ಇವನ ಕುಟುಂಬದವರು ರಾಜ್ಯದ ಆಯಕಟ್ಟಿನ ಹುದ್ದೆಗಳಲ್ಲಿದ್ದು ಇಡೀ ರಾಜ್ಯದ ಆಡಳಿತವನ್ನು ನಿಯಂತ್ರಿಸುತ್ತಿದ್ದುದು ಸ್ಪಷ್ಟವಾಗುತ್ತದೆ. ಇದು ಅನೇಕರ ಅಸೂಯೆಗೆ ಕಾರಣವಾಯಿತೆಂದು ತೋರುತ್ತದೆ. ಅದಕ್ಕಾಗಿ ಅವರು ಸಾಳ್ವತಿಮ್ಮನ ವಿರುದ್ಧ ಅವಕಾಶಕ್ಕಾಗಿ ಕಾಯುತ್ತಿದ್ದರು. ಕೃಷ್ಣದೇವರಾಯನ ಆರುವರ್ಷದ ಬಾಲಕ ತಿರುಮಲನ ಅಕಾಲ ಮರಣದ ಆಪಾದನೆಯನ್ನು ಸಾಳ್ವತಿಮ್ಮರಸನ ಮೇಲೆ ಹೊರಿಸಲಾಯಿತು. ಇದನ್ನು ನಂಬಿದ ಕೃಷ್ಣದೇವರಾಯ ಸಾಳ್ವತಿಮ್ಮನ ಕಣ್ಣುಗಳನ್ನು ಕೀಳಿಸಿದನೆಂದು ಹೇಳಲಾಗಿದೆ. ಆದರೆ ಇದನ್ನು ಆಧಾರ ಸಮೇತವಾಗಿ ಇತ್ತೀಚೆಗೆ ವಿದ್ವಾಂಸರು ತಳ್ಳಿಹಾಕಿದ್ದಾರೆ. ಆದರೂ ಸಾಳ್ವತಿಮ್ಮರಸನ ಪ್ರಾಬಲ್ಯವನ್ನು ಸಹಿಸಲಾಗದವರು ಈ ಘಟನೆಯನ್ನು ಹಬ್ಬಿಸಿರಬಹುದು. ಇದರಿಂದ ಪೂರ್ವಾಪರ ಆಲೋಚನೆ ಮಾಡದ ಕೃಷ್ಣದೇವರಾಯ ಮಗನನ್ನು ಕಳೆದುಕೊಂಡ ದುಃಖದಲ್ಲಿ ಸಾಳ್ವತಿಮ್ಮನಿಗೆ ನೀಡುತ್ತಿದ್ದ ಪ್ರಾಮುಖ್ಯತೆ ಕಡಿಮೆ ಮಾಡಿರಬಹುದು. ಇದಕ್ಕೆ ಪೂರಕವೇನೋ ಎಂಬಂತೆ ಕ್ರಿ.ಶ. ೧೫೨೪ರ ನಂತರ ಸಾಳ್ವತಿಮ್ಮರಸನ ಶಾಸನಗಳಾವುವೂ ಇಲ್ಲವಾಗಿರುವುದು ಮತ್ತು ಅವನ ಕುಟುಂಬ ವರ್ಗಕ್ಕೆ ಸೇರಿದವರ ಶಾಸನಗಳು ಇಲ್ಲದೆ ಇರುವುದು ಪರೋಕ್ಷವಾಗಿ ಧೃಢೀಕರಿಸುತ್ತವೆ. ಆದರೆ ೧೫೨೮ ಆಗಸ್ಟನಲ್ಲಿ ಹಾಕಿಸಲಾದ ಶಾಸನದಲ್ಲಿ ರಾಯಸ ಅಯ್ಯಪ್ಪರಸು ಉದಯಗಿರಿಯಲ್ಲಿ ಆಳುತ್ತಿದ್ದನೆಂದು ಉಲ್ಲೇಖ ಇದೆ[೩೮] ಮತ್ತು ೧೫೨೫ ಅಕ್ಟೋಬರ್‌ನಲ್ಲಿ ಅಯ್ಯಪ್ಪರಸು ಕುಂದುರ್ಪಿ ರಾಜ್ಯದ ಒಡೆತನವನ್ನು ಹೊಂದಿದ್ದನೆಂದು ಅಂಶ ಇದೆ[೩೯]. ಇದರಿಂದ ತನ್ನ ಮಗ ತಿರುಮಲರಾಯ ಸತ್ತುಹೋದ ಒಂದೇ ವರ್ಷದಲ್ಲಿ ಕೃಷ್ಣದೇವರಾಯನಿಗೆ ತನ್ನ ತಪ್ಪಿನ ಅರಿವಾದಂತೆ ತೋರಿ. ಪುನಃ ಸಾಳ್ವತಿಮ್ಮನ ಕುಟುಂಬ ವರ್ಗದವರಿಗೆ ಪ್ರಾಮುಖ್ಯತೆ ನೀಡಿದ್ದುದು ಕಂಡುಬರುತ್ತದೆ. ಇದಕ್ಕೆ ಪೂರಕವಾಗಿ ಸಾಳ್ವ ಗೋವಿಂದರಾಜನನ್ನು ೧೫೨೪ರಲ್ಲಿ ಬಾಗಿಲ ಪ್ರಧಾನಿಯನ್ನಾಗಿ ನೇಮಕ ಮಾಡಿಕೊಂಡು ತನ್ನ ತಪ್ಪನ್ನು ತಿದ್ದಿಕೊಳ್ಳುವ ಪ್ರಯತ್ನ ಮಾಡಿರಬಹುದು ಎಂದು ಹೇಳಬಹುದು. ಕ್ರಿ.ಶ. ೧೫೨೪ರ ನಂತರ ಸುಮಾರು ೫ ವರ್ಷಗಳ ಕಾಲ ಶಾಸನಗಳಲ್ಲಿ ಉಲ್ಲೇಖವಾಗದಿದ್ದ ತಿಮ್ಮರಸನು ೧೫೨೯ರ ಏಪ್ರಿಲ್‌ನಲ್ಲಿ ಅಮರನಾಯಕರಾದ ದೀಕ್ಷಿತಯ್ಯನವರು ಹಾಕಿಸಿದ ಶಾಸನದಲ್ಲಿ ಕಾಣಿಸಿಕೊಂಡಿದ್ದಾರೆ. ಅವರು ಕೃಷ್ಣದೇವರಾಯನ ಜೊತೆ ತಿಮ್ಮರಸುವಿಗೆ ಪುಣ್ಯವಾಗಲಿ ಎಂದು ಭೂದಾನ ಮಾಡಿದ್ದಾರೆ[೪೦]. ಕ್ರಿ.ಶ. ೧೫೨೫ರ ವೇಳೆಗೆ ತನ್ನ ಮಗನಾದ ರಾಯಸ್ತ ಕೊಂಡಮರಸನನ್ನು ಕಳೆದುಕೊಂಡು ತನ್ನ ಮೇಲೆ ಬಂದ ಕೊಲೆಯ ಆಪಾದನೆಯಿಂದ ನೊಂದಿದ್ದ ತಿಮ್ಮರಸು ಕ್ರಿ.ಶ. ೧೫೨೯ ಏಪ್ರಿಲ್‌ವರೆಗೂ ಬದುಕಿರಬಹುದು. ಆ ನಂತರ ಇವನ ಯಾವ ಶಾಸನಗಳೂ ಇಲ್ಲದಿರುವುದು ಅವನ ಮೊಮ್ಮಗ ರಾಯಸ್ತ ಅಯ್ಯಪ್ಪರಸ ಅಚ್ಯುತರಾಯನ ಕಾಲದಲ್ಲಿ ಮುಂದುವರಿದಿದ್ದರೂ ಅವನ ಶಾಸನಗಳಲ್ಲಿಯೂ ಉಲ್ಲೇಖ ವಾಗದೆ ಇದ್ದುದರಿಂದ ಪ್ರಾಯಶಃ ಅದೇ ಅವಧಿಯಲ್ಲಿ ಅವನು ಮರಣ ಹೊಂದಿರಬಹುದು.

ಸಾಳ್ವತಿಮ್ಮರಸರಿಗೆ ಕೃಷ್ಣಾಂಬಿಕೆ ಎಂಬ ಸೋದರಿಯೂ ತಿರುಮಲಾಂಬ ಎಂಬ ಮಗಳೂ ಇದ್ದಳು. ತನ್ನ ಸೋದರಿಯನ್ನು ನಾಂದಿಂಡ್ಲ ಕೋನ ಮಂತ್ರಿ ಎಂಬುವನಿಗೆ ವಿವಾಹ ಮಾಡಿಕೊಟ್ಟಿದ್ದನು. ಇವರ ಮಗನಾದ ಅಪ್ಪಾಮಾತ್ಯನಿಗೆ ತಿಮ್ಮರಸರು ತನ್ನ ಮಗಳಾದ ತಿರುಮಲಾಂಬನನ್ನು ಕೊಟ್ಟು ವಿವಾಹ ಮಾಡಿದರು. ಈ ಅಪ್ಪಾಮಾತ್ಯನ ತಮ್ಮ ಗೋಪ ಮಂತ್ರಿ ಇವರಿಬ್ಬರನ್ನು ತಿಮ್ಮರಸರು ಕೊಂಡವೀಡು ದುರ್ಗಕ್ಕೆ ಅಧಿಪತಿಗಳನ್ನಾಗಿ ಮಾಡಿದರು. ಗೋಪ ಮಂತ್ರಿ "ಪ್ರಭೋಧ ಚಂದ್ರೋದಯ"ಕ್ಕೆ ವ್ಯಾಖ್ಯಾನವನ್ನು "ಕೃಷ್ಣಾರ್ಜುನ ಸಂವಾದ" ಎಂಬ ಕಾವ್ಯವನ್ನು ಬರೆದಿದ್ದಾರೆ. ಈ ಎರಡೂ ಕೃತಿಗಳಲ್ಲೂ ತಾನು ತಿಮ್ಮರಸರ ಕೃಪೆಯಿಂದ ಕೊಂಡವೀಡು ದುರ್ಗಾಧ್ಯಕ್ಷನಾಗಿ ನೇಮಕಗೊಂಡೆನೆಂದು ಹೇಳಿಕೊಂಡಿದ್ದಾನೆ. ಸಾಳ್ವ ತಿಮ್ಮರಸ ಆಡಳಿತಗಾರನೆ ಅಲ್ಲದೆ ಪಂಡಿತನೂ ಆಗಿದ್ದನು. ಇವನು ಅಗಸ್ತ್ಯಕೃತ ಚಂಪೂಭಾರತಕ್ಕೆ ವ್ಯಾಖ್ಯಾನ ಬರೆದಿದ್ದಾನೆ ಎಂದು ಹೇಳಲಾಗಿದೆ.

"ಇತಿ ಶ್ರೀ ಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಕರ್ನಾಟೇಶ್ವರ ಶ್ರೀ. ಕೃಷ್ಣರಾಯ ಶಿರಃ ಪ್ರಧಾನ ಸಕಲಾಗಮ ವಾರಂಪಾರಪರೀತ ಸಾಳ್ವತಿಮ್ಮಯ ದಂಡನಾಥ ವಿರಚಿತಾಯಾಂ ಬಾಲ ಭಾರತ ವ್ಯಾಖ್ಯಾಯಾಂ ಮನೋಹರಾಖ್ಯಾಯಾಂ ಪಂಚಮಸ್ಸರ್ಗಂ[೪೧]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಕೃಷ್ಣದೇವರಾಯನ **ಆಮುಕ್ತ ಮಾಲ್ಯದ** (ಕನ್ನಡಕ್ಕೆ) ಡಾ॥ ನಿರುಪಮಾ, ಪುಟ ೪೩, ಪ್ರಸಾರಾಂಗ ಕನ್ನಡ ವಿ.ವಿ. ಹಂಪೆ ೨೦೧೧.
೨. ಅದೇ ಪು ೪೬.
೩. ಅದೇ ಪು ೬೪.
೪. ಡಾ. ಡಿ.ಎನ್. ಯೋಗೀಶ್ವರಪ್ಪ, **ಕೃಷ್ಣದೇವರಾಯನ ಆಳ್ವಿಕೆಯಲ್ಲಿ ನಾಯಕತನಗಳು,** (ಅಪ್ರಕಟಿತ ಪ್ರಬಂಧ) ೨೦೧೧ ಜನವರಿ ೨೭ ಮತ್ತು ೨೮ ರಂದು ಹಂಪೆಯಲ್ಲಿ ನಡೆದ ವಿಜಯನಗರ ಅಧ್ಯಯನ ವಿಚಾರ ಸಂಕಿರಣದಲ್ಲಿ ಮಂಡಿಸಲಾಗಿತ್ತು.
೫. ಚಿಲಕೂರಿ ವೀರಭದ್ರರಾವು **ತಿಮ್ಮರಸು ಮಂತ್ರಿ,** (ತೆಲುಗು ಭಾಷೆ) ಆರ್ಯಪುಸ್ತಕಾಲಯ, ರಾಜಮಹೇಂದ್ರಿ ೧೯೫೦.
೬ ಡಿ.ವಿ. ಪರಮಶಿವಮೂರ್ತಿ, **ಕೃಷ್ಣದೇವರಾಯನ ಶಾಸನಗಳು,** ಸಂಖ್ಯೆ ೫೫, ೪೭, ತಗರಪುರ, ಪ್ರಸಾರಾಂಗ, ಕನ್ನಡ ವಿವಿ. ಹಂಪಿ.
೭. *Inscriotipns of Vijayanagara Rulers,*, Vol. IV, No. 69, 85,110,109 ICHR, Bangalore 2009.
**ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧, ಸಂಖ್ಯೆ ೪೮, ೧೨೪, ೧೪೮, ೧೫೨.
೭ಎ. ಅದೇ ನಂ. ೧೨೮.
೮. ಅದೇ ನಂ. ೪೮, ೮೫, ೧೨೪, ೧೫೨.
ಅದೇ ನಂ. ೮೫, ೧೦೯.
೯. *Inscriptions of Vijayanagara Rulers,* Vol. IV No-84.
೧೦. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧, ಪ್ರಸ್ತಾವನೆ ಪುಟ ೬೦.
೧೧. *Inscriptions of Vijayanagar,* Vol. IV, No. 70, 72.
೧೨. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧, ಸಂಖ್ಯೆ ೨೧.
೧೩. ಅದೇ ಸಂಖ್ಯೆ ೨೩.
೧೪. *Inscriptions of Vijayanagara Rulers,* Vol. IV, No. 70,72.
೧೫. ಅದೇ ೭೦.
೧೬. ಅದೇ ೭೨.
೧೭. **ಪ್ರವಾಸಿ ಕಂಡ ವಿಜಯನಗರ,** (ಸಂ) ವಿವೇಕ ರೈ, ಪುಟ ೬೫, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ ೨೦೦೫.
೧೮. ಅದೇ ಪುಟ ೭೮ ಮತ್ತು ೭೯.
೧೯. ARIE, 1897, No. 186
೨೦. *Inscriptions of Vijayanagara Rulers,* Vol. IV, No. 75, ICHR. Bangalore 2009.
೨೧. ಅದೇ ಸಂಖ್ಯೆ ೭೬.
೨೨. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧, ಸಂ. ೩೩೧, ಜೋಳಸಮುದ್ರಂ.
೨೩. *Inscriptions of Vijayanagara Rulers,* Vol. IV, No. 93, ICHR, Bangalore 2009.
೨೪. ಅದೇ ನಂ. ೧೨೯.
೨೫. ಅದೇ ನಂ. ೧೨೩.
೨೬ ಅದೇ ನಂ. ೧೨೮.
೨೭. ಅದೇ ನಂ. ೭೫.
೨೮. ಅದೇ ನಂ. ೯೯.
೨೯. ಅದೇ ನಂ. ೧೨೮.
೩೦. ಅದೇ ನಂ. ೧೩೦.
೩೧. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧, ನಂ. ೩೪೧.
೩೨. *Inscriptions of Vijayanagara Rulers,* Vol. IV, No. 156.
೩೩. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧. ನಂ. ೪೮.
೩೪. *Inscriptions of Vijayanagara Rulers,* Vol. IV, No. 85.
೩೫. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧, ನಂ. ೮೬.
೩೬. ಅದೇ ನಂ. ೧೧೮.
೩೭. ಅದೇ ನಂ. ೨೪೨.
೩೮. *Inscriptions of Vijayanagara Rulers,* Vol, IV. No. 156.
೩೯. **ಕೃಷ್ಣದೇವರಾಯನ ಶಾಸನಗಳು,** ಸಂಪುಟ ೧. ನಂ. ೩೪೧.
೪೦. ಅದೇ ನಂ. ೩೪೯.
೪೧. *Sources of Vijayanagara History,* P. 143.



# ಪೂರ್ವಕರ್ನಾಟಕದ ಪಾಳೇಗಾರರ ಆಡಳಿತ ಒಂದು ನೋಟ

ಡಾ. ಸಿ.ಆರ್. ಶ್ಯಾಮಲ*

ಆಡಳಿತ ಕ್ರಮವು ಒಂದು ರಾಜ್ಯದ ಮುಖ್ಯಾಂಶವಾಗಿದೆ. ರಾಜ್ಯದ ಮತ್ತು ಪ್ರಜೆಗಳ ಏಳ್ಗೆಯು ಆ ರಾಜ್ಯದ ಆಡಳಿತ ಕ್ರಮವನ್ನು ಅನುಸರಿಸುತ್ತದೆ. ಕರ್ನಾಟಕದ ಪೂರ್ವ ಭಾಗವಾದ ಬಳ್ಳಾರಿ, ಚಿತ್ರದುರ್ಗ ಹಾಗೂ ತುಮಕೂರುಗಳಲ್ಲಿ, ಇನ್ನೂರು ಮುನ್ನೂರು ವರ್ಷಗಳವರೆಗೆ ಪಾಳೆಯಗಾರರು ಆಡಳಿತ ಮಾಡಿರುವುದು ತಿಳಿದ ವಿಷಯವೇ. ಕೆಲವು ಪಾಳೆಯ ಪಟ್ಟುಗಳಲ್ಲಿ ಬೇರೆ ಬೇರೆ ಮನೆತನಗಳು ಬಂದು, ಅಷ್ಟು ವರ್ಷಗಳವರೆಗೆ ಆಳಿದರೂ, ರಾಜ್ಯಡಳಿತದ ಮೂಲ ತತ್ವವು ಒಂದೇ ಆಗಿದ್ದಿತು. ಕಾಲಕ್ಕೆ ತಕ್ಕಂತೆ, ತಮಗೆ ಅನುಕೂಲ ವಾಗುವಂತೆ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡಿದ್ದರು.

ಕೆಲವು ಪಾಳೆಯಪಟ್ಟುಗಳು ವಿಜಯನಗರದ ಅರಸರ ಕಾಲದಲ್ಲಿಯೇ ಅಸ್ತಿತ್ವದಲ್ಲಿತ್ತೆಂದು ತಿಳಿದಿದೆಯಷ್ಟೇ. ಕೆಲವು ಪೂರ್ವ ಪಾಳೆಯಪಟ್ಟುಗಳು ಚಿತ್ರದುರ್ಗ, ಹಾಗಲವಾಡಿ, ಬಳ್ಳಾರಿ, ಹರಪನಹಳ್ಳಿ, ಬಿಜ್ಜಾವರ (ಮಧುಗಿರಿ), ಹರತಿ – ಕೃಷ್ಣದೇವರಾಯನ ಕಾಲದ ಮುಂಚೆಯೇ ಅಸ್ತಿತ್ವಕ್ಕೆ ಬಂದಿದ್ದವು. ಅವು ವಿಜಯನಗರ ಸಾಮ್ರಾಜ್ಯದ ಒಂದು ಭಾಗವಾಗಿತ್ತು. ಇವರೆಲ್ಲಾ ವಿಜಯನಗರ ಸಾಮ್ರಾಜ್ಯದ ಅಮರನಾಯಕ ರಾಗಿದ್ದರು.

ಪೂರ್ವ ಕರ್ನಾಟಕ ಎಲ್ಲಾ ಪಾಳೆಯಗಾರರು ವಿಜಯನಗರದ ಅರಸರ ಆದರ್ಶಗಳನ್ನೂ ಮಾದರಿಗಳನ್ನೂ ಅನುಸರಿಸುತ್ತಿದ್ದರು. ವಿಜಯನಗರ ಸಾಮ್ರಾಜ್ಯವು ವಿಕೇಂದ್ರೀ ಕೃತ ಹಾಗೂ ಊಳಿಗಮಾನ್ಯ ಅಂಶಗಳನ್ನು ಒಳಗೊಂಡಿದ್ದಿತು. ಈ ಪದ್ಧತಿಯನ್ನು 'ನಾಯಕ' ಪದ್ಧತಿಯೆಂದು ಕರೆಯುತ್ತಿದ್ದರು. ಇವರು ವಿಜಯನಗರದ ಅರಸರಿಗೆ ಕಪ್ಪವನ್ನೂ, ಯುದ್ಧದ ಸಮಯದಲ್ಲಿ ಸೈನ್ಯವನ್ನೂ ಒದಗಿಸುತ್ತ, ವಿಧೇಯರಾಗಿದ್ದು, ಅವರ ಆಡಳಿತ ಪದ್ಧತಿಯನ್ನು ಅನುಸರಿಸಿದರು.

ಇವರು 'ಸಪ್ತಾಂಗ ಸೂತ್ರ'ದ ಪದ್ಧತಿಯ ಮೇರೆಗೆ ಆಡಳಿತ ನಡೆಸುತ್ತಿದ್ದರು (ರಾಜ, ಮಂತ್ರಿಮಂಡಲ, ಪ್ರಾಂತಾ ಡಳಿತ, ಕೋಶ, ಬಲ, ದುರ್ಗ ಮತ್ತು ನ್ಯಾಯಾಂಗ.) ತಮ್ಮ ಆಡಳಿತ ಕ್ರಮ ಸುಲಭವಾಗಲು ಕೇಂದ್ರಾಡಳಿತ, ರಾಜ್ಯಾಡಳಿತ, ಊರಾಡಳಿತ ಮತ್ತು ಗ್ರಾಮಾಡಳಿತವೆಂದು ಮಾಡಿ ಕೊಂಡಿದ್ದರು. ಗ್ರಾಮಾಧಿಕಾರಿಗಳು ಊರಧಿಕಾರಿಗಳಿಗೂ, ಅವರು ರಾಜ್ಯಾಧಿಕಾರಿಗಳಿಗೂ, ಅವರು ಕೇಂದ್ರಾಧಿಕಾರಿ ಗಳಿಗೂ ಉತ್ತರಿಸಬೇಕಾಗಿತ್ತು. ಕೇಂದ್ರಾಡಳಿತದಲ್ಲಿ ಪಾಳೆಯಗಾರನೇ ಸರ್ವಾಧಿಕಾರಿ. ತಮ್ಮನ್ನು ರಾಜ, ಅರಸು, ಒಡೆಯ, ನಾಯಕ, ಗೌಡ ಎಂದು ಕರೆದುಕೊಳ್ಳುತ್ತಿದ್ದರು. ತಮ್ಮ ಪ್ರಜೆಗಳನ್ನು ಒಳಗಿನ ಮತ್ತು ಹೊರಗಿನ ಶತ್ರುಗಳಿಂದ, ವ್ಯಾಧಿಗಳಿಂದ, ಕ್ಷಾಮ, ಅತಿವರ್ಷ–ಪ್ರವಾಹಗಳಿಂದ ಉಂಟಾಗುವ ಅನಾಹುತಗಳಿಂದ ರಕ್ಷಿಸಿದ್ದಾರೆ. ರಾಜನ ಕರ್ತವ್ಯಗಳನ್ನು ಸಮರ್ಥವಾಗಿ ನಡೆಸಿಕೊಂಡು ಬಂದಿದ್ದಾರೆ.

ಇತರೇ ಪಾಳೆಯಗಾರರಿರಲಿ, ಇವರೂ ತಮ್ಮತಮ್ಮಲ್ಲೇ ಯುದ್ಧ ಮಾಡಿ ಒಬ್ಬರಿಗೊಬ್ಬರು ಶತ್ರುಗಳಾಗಿದ್ದರು. ಇವರು ಒಬ್ಬರಿಗೊಬ್ಬರು ಒಳಶತ್ರುಗಳಾದರೆ, ಮೊಗಲರು, ಬಿಜಾಪುರ ದವರು, ಹೈದರಲಿ, ಟಿಪ್ಪೂಸುಲ್ತಾನರು, ಮರಾಠರು, ಬ್ರಿಟಿಷ ಹೊರಗಿನ ಶತ್ರುಗಳು. ಇವರುಗಳಿಂದ ತಮ್ಮ ಪಾಳೆಯ ಪಟ್ಟುಗಳನ್ನೂ ಪ್ರಜೆಗಳನ್ನೂ ರಕ್ಷಿಸಿದ್ದಾರೆ. ಶರಣು ಬಂದವರನ್ನು ತಮ್ಮ ಪ್ರಾಣ ಒತ್ತೆಯಿಟ್ಟು ಹೇಗೆ ಕಾಪಾಡುತ್ತಿದ್ದರೆಂಬುದಕ್ಕೆ ನಿದರ್ಶನಗಳಿವೆ. ಅವರು ಚುರುಕಾಗಿಯೂ ತೀಕ್ಷ್ಣಮತಿ ಗಳಾಗಿಯೂ ಇದ್ದರು. ಶಕ್ತಿಯಿಂದಾಗದಿದ್ದರೆ ಯುಕ್ತಿಯಿಂದ ಶತ್ರುಗಳನ್ನು ಗೆಲ್ಲುತ್ತಿದ್ದರು. ಸಮಾಜದ ಶತ್ರುಗಳನ್ನು, ದುಷ್ಟರನ್ನು ಅತಿ ಕಠಿಣವಾಗಿ ಶಿಕ್ಷಿಸುತ್ತಿದ್ದರು. ಇವರು ಸಮಾನ ಧರ್ಮೀಯರಾಗಿದ್ದು, ಎಲ್ಲಾ ಧರ್ಮ, ಮತ, ಪಂಥಗಳನ್ನು ಸಮಾನತೆಯಿಂದ ಕಾಣುತ್ತಿದ್ದುದಲ್ಲದೆ, ಉದಾರವಾಗಿ ದಾನ ದತ್ತಿಗಳನ್ನೂ ಬಿಟ್ಟುಕೊಡುತ್ತಿದ್ದರು. ಪ್ರಜೆಗಳ ಆರ್ಥಿಕ ಸ್ಥಿತಿ ಉತ್ತಮಗೊಳ್ಳುವಂತೆ, ಯುದ್ಧದಲ್ಲಿ ಮಡಿದವರಿಗೆ, ಸಂತೋಷದ ಸುದ್ದಿ ತಂದವರಿಗೆ, ದೇವಸ್ಥಾನ–ಕೆರೆ–ಬಾವಿ–ಗ್ರಾಮಗಳನ್ನು ಜೀರ್ಣೋದ್ಧಾರ ಮಾಡಿದವರಿಗೆ ಉದಾರ ವಾಗಿ ದಾನ–ದತ್ತಿಗಳನ್ನು ಕೊಟ್ಟಿದ್ದಾರೆ. ಹೀಗೆ ತಮ್ಮ ಕರ್ತವ್ಯಗಳನ್ನು ನಿಷ್ಠೆಯಿಂದ ಪಾಲಿಸುತ್ತಾ 'ರಾಜಾ' ಎಂಬ ಹೆಸರನ್ನು ಸಾರ್ಥಕ ಪಡಿಸಿಕೊಂಡಿದ್ದರು.

* # ೧೦೫, ಲಭಸ್ಮೃಷ್ಟಿ, ವಲ್ಲಭ ರಸ್ತೆ, ವಿಲೆಪಲೇ (ಪಶ್ಚಿಮ), ಮುಂಬೈ–೪೦೦೦೫೬.

ಇವರ ಅರಸೊತ್ತಿಗೆ ಆನುವಂಶಿಕವಾಗಿದ್ದು, ಮೊದಲನೆಯ ಮಗನೇ ಉತ್ತರಾಧಿಕಾರಿಯಾಗಿ, 'ಯುವರಾಜ'ನಾಗುತ್ತಿದ್ದನು. ಇವನನ್ನು 'ಸಾಹೇಬ್ ಜಾದೆ', 'ಪಟ್ಟದ ಕುಮಾರ' ಎಂದೂ ಕರೆಯುತ್ತಿದ್ದರು. ಮೊದಲನೆಯ ಮಗನು ದೈಹಿಕವಾಗಿ ಅಥವಾ ಮಾನಸಿಕವಾಗಿ ಯೋಗ್ಯನಲ್ಲದಿದ್ದರೆ ಅಥವಾ ಅಕಾಲ ಮರಣ ಹೊಂದಿದ್ದರೆ, ಆತನ ತಮ್ಮನಿಗೆ ಪಟ್ಟಕಟ್ಟಿದ ಉದಾಹರಣೆಗಳಿವೆ. ಪಾಳೆಯಗಾರರಿಗೆ ಮಕ್ಕಳಿಲ್ಲದಿದ್ದರೆ ಅಥವಾ ಬಾಲಕನಾಗಿದ್ದರೆ, ಪಾಳೆಯಗಾರನ ಸಹೋದರರು ಪಟ್ಟಕ್ಕೆ ಬಂದಿದ್ದಾರೆ. ಕೆಲವು ಕಡೆ ಮೊಮ್ಮಗ ಅಥವಾ ಸಹೋದರ ಮಕ್ಕಳು ಪಟ್ಟವೇರಿದ್ದಾರೆ. ಪಾಳೆಯ ಗಾರನಿಗೆ ಹತ್ತಿರದ ಸಂಬಂಧಿಗಳ್ಯಾರೂ ಇಲ್ಲದಿದ್ದರೆ, ದೂರದ ಸಂಬಂಧಿಕರ ಮಕ್ಕಳನ್ನು ದತ್ತು ತೆಗೆದುಕೊಂಡು ಪಟ್ಟ ಕಟ್ಟಿದ್ದಾರೆ. ಕೆಲವೊಮ್ಮೆ ಹೆಚ್ಚು ಮಕ್ಕಳಿದ್ದರೆ, ಸಂಸ್ಥಾನದ ರಕ್ಷಣೆಯ ದೃಷ್ಟಿಯಿಂದ, ಪಾಳೆಯಗಾರರು ಇತರೇ ಮಕ್ಕಳಿಗೆ ರಾಜ್ಯದ ಬೇರೆಬೇರೆ ದಿಕ್ಕುಗಳಲ್ಲಿ ಅಥವಾ ಗಡಿ ಪ್ರದೇಶಗಳಲ್ಲಿ ಆಳುವ ಹಕ್ಕನ್ನು ಕೊಟ್ಟಿರುವರು. ಹೀಗೆ ಹಂಚಿ ಕೊಡುವುದರಿಂದ ಒಳ ಜಗಳಗಳಾಗದೆ, ಹೊರಗಿನ ಶತ್ರುಗಳ ಕಡೆಗೂ ಗಮನವಿಟ್ಟಂತಾಗಿ, ಅವರಿಗೆ ಸ್ವಾತಂತ್ರ್ಯ ಕೊಟ್ಟಂತೆಯೂ, ತಮ್ಮ ಹಕ್ಕಿನೊಳಗಿಟ್ಟುಕೊಂಡಂತೆಯೂ ಇರುತ್ತಿತ್ತು.

ಇವರು ಬಹುಪತ್ನಿತ್ವ ಪದ್ಧತಿಯನ್ನು ಅನುಸರಿಸುತ್ತಿದ್ದರು. ಯುದ್ಧದಲ್ಲಿ ಸೋತ ಪಾಳೆಯಗಾರನು, ತನ್ನ ರಾಜಕೀಯ ಭದ್ರತೆಗಾಗಿ, ತನ್ನ ಸಹೋದರಿಯನ್ನೋ ಮಗಳನ್ನೋ ಆತನಿಗೆ ಮದುವೆ ಮಾಡಿಕೊಡುತ್ತಿದ್ದರು. ಇವರನ್ನು 'ನಾಗತಿ'ಯರೆಂದು ಕರೆಯುತ್ತಿದ್ದರು. ಇದರಿಂದ ಪಾಳೆಯಗಾರನ ಶೌರ್ಯ ಹಾಗೂ ರಾಜ್ಯದ ವಿಸ್ತಾರ ತಿಳಿಯುತ್ತಿತ್ತು. ಅದೊಂದು ವೈಭವದ ಸಂಕೇತವಾಗಿತ್ತು. ಪೂ.ಕ.ಪಾ.ರಿಗೆ ಇಬ್ಬರಿಗಿಂತ ಹೆಚ್ಚು ಪತ್ನಿಯರಿದ್ದರು. ಚಿತ್ರದುರ್ಗದ ಪಾಳೆಯಗಾರರಿಗೆ ನಾಲ್ಕರಿಂದ ಮೂವತ್ತಕ್ಕೂ ಹೆಚ್ಚು ಪತ್ನಿಯರಿದ್ದರು. ಈ ನಾಗತಿಯರಲ್ಲಿ ಕೆಲವರು ಸಕ್ರಿಯ ಪಾತ್ರವನ್ನು ವಹಿಸಿದ್ದಾರೆ. ಇನ್ನು ಕೆಲವರು ರಾಜ್ಯದಾಡಳಿತದಲ್ಲಿ ಪರೋಕ್ಷವಾಗಿಯೋ ಅಪರೋಕ್ಷವಾಗಿಯೋ ಭಾಗವಹಿಸಿದ್ದಾರೆ. ಇವರು ಸಹಗಮನ ಪದ್ಧತಿಯನ್ನು ಅನುಸರಿಸುತ್ತಿದ್ದರು.

ಚಿತ್ರದುರ್ಗದ ಪಾಳೆಯಗಾರರಿಗೆ ಮುದ್ರಾಂಕಿತಗಳನ್ನಿಟ್ಟು ಕೊಳ್ಳುವ ಹಕ್ಕಿತ್ತು. ಅವರ ಮುದ್ರಾಂಕಿತ ವರ್ತುಳವಾಗಿದ್ದು, ಒಳಗೆ ಸೂರ್ಯ ಚಂದ್ರರಿದ್ದು, ಆಳುತ್ತಿದ್ದ ಪಾಳೆಯಗಾರನ ಹೆಸರಿರುತ್ತಿತ್ತು. ಇಂತಹ ಒಂದು ಮುದ್ರಾಂಕಿತ ಶ್ರೀ ಬಿ. ರಾಜಶೇಖರಪ್ಪನವರ ಹತ್ತಿರವಿದೆಯೆಂದು ತಿಳಿದುಬಂದಿದೆ. ಇನ್ನು, ಎಲ್ಲಾ ಪಾಳೆಯಗಾರರ ಧ್ವಜ ಒಂದೇ 'ಹನುಮದ್ಗರುಡ'. ಇವರಿಗಿದ್ದ ಬಿರುದುಗಳಿಂದ, ಇವರ ಪರಾಕ್ರಮ, ಯುದ್ಧ ವ್ಯವಸ್ಥೆ, ಶೌರ್ಯಗಳು ತಿಳಿದುಬರುತ್ತವೆ. ಕೇಂದ್ರಾಡಳಿತದಲ್ಲಿ ಪಾಳೆಯಗಾರನ ಅಗತ್ಯಕ್ಕನುಗುಣವಾಗಿ ಮಂತ್ರಿಮಂಡಲದ ಕ್ರಮವಿತ್ತು. ಇವರ ಶಾಸನಗಳಲ್ಲಿ ಅಮಾತ್ಯ, ಸಚಿವ, ಪ್ರಧಾನಿ ಎಂಬ ಪದಗಳನ್ನು ಕಾಣುತ್ತೇವೆ. ಬೇರೆ ಬೇರೆ ಖಾತೆಗಳಿಗೆ ಬೇರೆ ಬೇರೆ ಮಂತ್ರಿಗಳಿದ್ದರು.

ಇವರ ಸಂಸ್ಥಾನಗಳಲ್ಲಿ ಗುರುಗಳಿಗೆ ಮುಖ್ಯ ಸ್ಥಾನವಿತ್ತು. ಇವರು ಪಾಳೆಯಗಾರನ ಹಿತೈಷಿಯಾಗಿ, ಸಮಯೋಚಿತವಾಗಿ ಸಲಹೆಯನ್ನು ಕೊಡುತ್ತಿದ್ದರು. ಕೆಲವೊಮ್ಮೆ ಪುರೋಹಿತರಾಗಿಯೂ, ಧರ್ಮಾಧಿಕಾರಿಯಾಗಿಯೂ ಕೆಲಸ ಮಾಡಬೇಕಾಗುತ್ತಿತ್ತು.

ಹಿಂದೆಯೇ ಹೇಳಿರುವಂತೆ, ಒಳ ಹಾಗೂ ಹೊರ ಶತ್ರುಗಳ ಉಪಟಳ ಯಾವಾಗಲೂ ಇರುತ್ತಿದ್ದುದರಿಂದ, ಸುರಕ್ಷೆ ಹಾಗೂ ರಕ್ಷಣೆಗಾಗಿ ಸೈನ್ಯದ ಅಗತ್ಯವಿರುತ್ತಿತ್ತು. ಆದ್ದರಿಂದ ಮಂತ್ರಿಮಂಡಲದಲ್ಲಿ ಸೇನಾಪತಿಗೆ ಮುಖ್ಯಸ್ಥಾನವಿತ್ತು. ಇವನ ಕೈಕೆಳಗೆ ಅನೇಕ ಸೇನಾಪತಿಗಳಿರುತ್ತಿದ್ದರು. ಇವರನ್ನು 'ದಳವಾಯಿ' ಎಂದೂ ಕರೆಯುತ್ತಿದ್ದರು. ಇವರು ವ್ಯವಸ್ಥಿತವಾದ, ಅತ್ಯುನ್ನತವಾದ, ಶಿಸ್ತುಬದ್ಧವಾದ ಸೈನ್ಯವನ್ನು ಹೊಂದಿದ್ದರು. ಇವರು ತಮ್ಮ ಸೈನಿಕ ಪಡೆಯನ್ನು ನಾಲ್ಕು ವಿಭಾಗ ಗಳನ್ನಾಗಿ ಮಾಡಿದ್ದರು. ಕಾಲ್ದಳ (ಪದಾತಿ), ಕುದುರೆದಳ, ಗಜಸೇನೆ ಮತ್ತು ಗೋಲಂದಾಜು (ಫಿರಂಗಿದಳ). ಚಿತ್ರದುರ್ಗದ ಸೈನ್ಯದಲ್ಲಿ ಬೇಡರಪಡೆಯೂ ಇತ್ತು. ಇವರು ಸ್ವಾಮಿಭಕ್ತರೂ, ಪರಾಕ್ರಮಿಗಳೂ, ವಿಶ್ವಾಸಿಗಳೂ ಮತ್ತು ಶತ್ರುಗಳಿಗೆ ಕ್ರೂರಿಗಳೂ ಆಗಿದ್ದರು. ಸೈನ್ಯದಲ್ಲಿ ಇತರ ಜಾತಿಗಳೊಡನೆ ಬ್ರಾಹ್ಮಣರೂ, ಮುಸ್ಲಿಮರೂ ಮರಾಠರೂ ಇದ್ದರು. ಪೂ.ಕ.ಪಾ. ತುರುಕಾಳಗ, ಬಯಲುಕಾಳಗ, ಗಡಿಯುದ್ಧ ಮತ್ತು ಕೋಟೆಕಾಳಗಗಳನ್ನು ಮಡುತ್ತಿದ್ದರು. ಕೋಟೆಗಳನ್ನು ರಕ್ಷಿಸಿದವರಿಗೆ 'ಕೋಟೆಮಾನ್ಯ', ಮಡಿದ ಸೈನಿಕರ ಹೆಸರಿನಲ್ಲಿ 'ನೆತ್ತರಕೊಡುಗೆ', ಗೆದ್ದು ಬಂದವರಿಗೆ 'ಬಾಳ್ಗಳ್ಚು' ಎಂಬ ದತ್ತಿಗಳನ್ನೂ ಬಿರುದುಗಳನ್ನೂ ಕೊಡುತ್ತಿದ್ದರು. ಹೇಡಿಯಂತೆ ಯುದ್ಧ ಭೂಮಿಯಿಂದ ಓಡಿ ಹೋದವರಿಗೆ ಕಠಿಣ ಶಿಕ್ಷೆಯನ್ನು ಕೊಡುತ್ತಿದ್ದರು. ಇವರು ತಮ್ಮ ಸೈನಿಕರ ಅನುಕೂಲದ ಕಡೆಗೆ ಹೆಚ್ಚು ಗಮನವಿಟ್ಟರು. ಅವರಿಗೆ ಇನಾಮು, ಜಹಗೀರಿಗಳನ್ನು ಕೊಡು ತ್ತಿದ್ದರು. ಯುದ್ಧದಲ್ಲಿ ಮಡಿದ ಸೈನಿಕರ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ಅವರ ಸಂರಕ್ಷಣೆಗಾಗಿ ಹಾಲು–ಬೆಣ್ಣೆ– ಹಣವೆಂದು ಬಾಲ್ಯಾವಸ್ಥೆ ತೀರುವವರೆಗೂ ಸಂಬಳದಂತೆ ಕೊಡುತ್ತಿದ್ದರು. ದೊಡ್ಡವರಾದ ಮೇಲೆ ಸೈನ್ಯದಲ್ಲಿ ಚಾಕರಿ ಯನ್ನು ಕೊಡುತ್ತಿದ್ದರು.

ಅವರ ಸೈನ್ಯದಲ್ಲಿದ್ದ ಪಡೆಗಳ ಬೇರೆಬೇರೆ ಹೆಸರುಗಳನ್ನೂ, ಯುದ್ಧಕ್ಕೆ ಹೊರಟಾಗ ಉಪಯೋಗಿಸುತ್ತಿದ್ದ

ಆಯುಧಗಳ ಹಾಗೂ ವಾದ್ಯಗಳ ಹೆಸರುಗಳನ್ನೂ ನಾವು ತಿಳಿಯಬಹುದು.

ಸಂಧಿವಿಗ್ರಹಿಯ ಕರ್ತವ್ಯ ಶತ್ರುಗಳೊಡನೆ ಸಂಧಿಯನ್ನೋ ಒಪ್ಪಂದವನ್ನೋ ಶಾಂತಿಯನ್ನೋ ಮಾಡಿಸುವುದು. ಈತನನ್ನು 'ವಕೀಲ' ಎಂದೂ ಕರೆಯುತ್ತಿದ್ದರು. 'ವಕೀಲ' ಎಂಬ ಪದವನ್ನು ಚಿತ್ರದುರ್ಗ ಸಂಸ್ಥಾನದಲ್ಲಿ ಮಾತ್ರ ಕೇಳುತ್ತೇವೆ. ದ್ವಾರನಾಯಕನಿಗೆ ಮತ್ತೊಂದು ಹೆಸರು 'ಪ್ರತೀಹಾರಿ'. ಈತನು ನಿಪುಣನೂ ಕರ್ತವ್ಯನಿಷ್ಠನೂ ಆಗಿರುತ್ತಿದ್ದನು. ಬೂದಿಹಾಳಿನ ಮೂಲಪುರುಷನು ಮೊದಲನೆಯ ಪ್ರೌಢದೇವರಾಯನ ದ್ವಾರನಾಯಕನಾಗಿದ್ದನು. ಪಾಳೆಯಗಾರರ ರಕ್ಷಣೆಯ ಹೊಣೆ ಅಂಗರಕ್ಷಕನದು.

ಕೆಲವು ಕಾಗದ ಪತ್ರಗಳಿಂದ ಪೂ.ಕ.ಪಾ.ರ ನ್ಯಾಯ ತೀರ್ಮಾನದ ರೀತಿಯನ್ನು ತಿಳಿಯಬಹುದು. ಕೆಲವೊಮ್ಮೆ ನ್ಯಾಯದ ತೀರ್ಪನ್ನು ಕೊಡುವ ಮೊದಲು ಪಾಳೆಯಗಾರರು ದ್ವಾರಪಾಲಕರ, ದೂತರ, ತಳವಾರರ ಸಹಾಯವನ್ನು ಪಡೆಯುತ್ತಿದ್ದರು. ಸಾಧಾರಣ ತಪ್ಪಿಗೆ ಹಣದ ರೂಪದಲ್ಲೋ ಮುಟ್ಟುಗೋಲೊ ಶಿಕ್ಷೆ. ದೊಡ್ಡ ತಪ್ಪು ಮಾಡಿದವರಿಗೆ ರಾಜ್ಯದಿಂದ ಬಹಿಷ್ಕಾರ. ಸ್ವಾಮಿದ್ರೋಹ ಅಥವಾ ರಾಜ್ಯದ್ರೋಹ ಮಾಡಿದವರಿಗೆ ಮರಣ ದಂಡನೆ. ನ್ಯಾಯ ತೀರ್ಮಾನಿಸಿದಾಗ ಕೆಲವು ಕಡೆ 'ದೃಷ್ಟಿ ದೀವಿಗೆ', 'ಮುದ್ದೆ ತುಪ್ಪದ ಪ್ರಮಾಣ', 'ವಿಘ್ನೇಶ್ವರ ಶಾಸ್ತ್ರ ಓದಿಸುವುದು' ಮುಂತಾದ ಪದಗಳು ಬರುತ್ತವೆ. 'ದೃಷ್ಟಿ ದೀವಿಗೆ' 'ಮುದ್ದೆ ತುಪ್ಪದ ಪ್ರಮಾಣ' ಇವುಗಳ ಅರ್ಥವಾಗಲೀ ಕ್ರಮವಾಗಲೀ ತಿಳಿದು ಬಂದಿಲ್ಲ. ದೈವಕ್ಕೆ ಹೆದರಿ ಸತ್ಯವನ್ನು ಒಪ್ಪಿಕೊಳ್ಳುತ್ತಿದ್ದರೆಂಬುದು ಸತ್ಯ. ಇನ್ನು 'ವಿಘ್ನೇಶ್ವರ ಶಾಸ್ತ್ರ ಓದಿಸುವುದು' ಇದರ ಅರ್ಥ ಮೊನ್ನೆಮೊನ್ನೆ ಡಾ. ಬಿ. ರಾಜಶೇಖರಪ್ಪನವರಿಂದ ತಿಳಿದುಬಂದಿತು. ದಿನ ಹೋದಂತೆ 'ವಿಜ್ಞಾನೇಶ್ವರ' ಜನರ ಬಾಯಲ್ಲಿ 'ವಿಘ್ನೇಶ್ವರ' ಆಯಿತು. ವಿಜ್ಞಾನೇಶ್ವರ ಎಂಬಾತನು ಆರನೇ ವಿಕ್ರಮಾದಿತ್ಯನ ಕಾಲದ ಆಸ್ಥಾನ ಕವಿ. 'ಮಿತಾಕ್ಷರ ಸಂಹಿತ' ಎಂಬುದು ಆತನ ಕೃತಿ. ಇದು ಶ್ರೇಷ್ಠ ಹಿಂದೂ ನ್ಯಾಯ ಗ್ರಂಥ. ಈ ಗ್ರಂಥ ಅಖಿಲ ಭಾರತ ಮಾನ್ಯವಾಗಿತ್ತೆಂದೂ, ಆ ಶಾಸ್ತ್ರ ಗ್ರಂಥವನ್ನು ಓದಿಸಿ ಅದರಂತೆ ನಡೆಯುತ್ತಿದ್ದರೆಂದೂ ಹೇಳಿದರು.

ಪ್ರಾಂತಾಡಳಿತವನ್ನು ನಾಡಾಳಿತವೆಂದೂ ರಾಜ್ಯಾಡಳಿತವೆಂದೂ ಹೇಳಬಹುದು. ಇವರು ತಮ್ಮ ಸಂಸ್ಥಾನವನ್ನು ವಿಭಾಗ, ಉಪವಿಭಾಗಗಳನ್ನಾಗಿ ಮಾಡಿ ಸುವ್ಯವಸ್ಥಿತವಾಗಿ ಆಳಿದ್ದಾರೆ. ರಾಷ್ಟ್ರ, ವೇಂಠೆ, ನಾಡು, ದೇಶ, ಸೀಮೆ, ರಾಜ್ಯ, ವಳಿತ ಎಂದು ಉಪಭಾಗಗಳನ್ನಾಗಿ ಮಾಡಿ, ಅವುಗಳಿಗೆ ಪ್ರತ್ಯೇಕವಾದ ಅಧಿಕಾರಿಗಳನ್ನು ನೇಮಿಸಿದ್ದರು.

ತಮ್ಮ ಆಡಳಿತ ಘಟಕಗಳಲ್ಲಿ ಶಾಂತಿ, ಕಾನೂನು ವ್ಯವಸ್ಥೆಯನ್ನು ನೋಡಿಕೊಳ್ಳುವುದು, ಕೇಂದ್ರಾಡಳಿತದ ಆದೇಶಗಳನ್ನು ಸಮರ್ಪಕವಾಗಿ ಜಾರಿಗೆ ತರುವುದು, ಸ್ಥಳೀಯ ವ್ಯಾಜ್ಯಗಳನ್ನು ಪರಿಹರಿಸುವುದು, ತೆರಿಗೆ ಕಂದಾಯಗಳನ್ನು ಸಂಗ್ರಹಿಸುವುದು, ಯುದ್ಧ ಸಮಯದಲ್ಲಿ ಕೇಂದ್ರಕ್ಕೆ ಸೈನ್ಯವನ್ನು ಒದಗಿಸುವುದು, ಇವರ ಮುಖ್ಯ ಕರ್ತವ್ಯಗಳು.

ಆಯಗಾರ ಪದ್ಧತಿ ಗ್ರಾಮಾಡಳಿತದ ಪ್ರಧಾನವಾದ ವ್ಯವಸ್ಥೆ. ಇದಕ್ಕೆ ಬಾರಾಬಲೂತಿ ಪದ್ಧತಿ ಅಥವಾ ಕೈವಾಡದವರೆಂದು ಹೇಳುತ್ತಿದ್ದರು. ಇದರಲ್ಲಿ ಸಮಾಜದ ಪ್ರತಿಯೊಂದು ವೃತ್ತಿಯ ಮುಖ್ಯಸ್ಥರಿದ್ದು, ಗ್ರಾಮಾಡಳಿತವನ್ನು ನಡೆಸುತ್ತಿದ್ದರು.

ಗೌಡ, ಶಾನುಭೋಗರ ಅಧಿಕಾರವು ಆನುವಂಶಿಕವಾಗಿರುತ್ತಿತ್ತು. ಗೌಡನ ಇತರೆ ಕರ್ತವ್ಯಗಳಲ್ಲಿ ರೈತರಿಂದ ಕಂದಾಯ, ತೆರಿಗೆಗಳನ್ನು ವಸೂಲಿ ಮಾಡಿ ಪಾರುಪತ್ಯಗಾರನಿಗೆ ಮುಟ್ಟಿಸುವುದು ಮತ್ತು ಸರಕಾರದ ಪರವಾಗಿ ಕೆಲಸಗಳನ್ನು ನೋಡಿಕೊಳ್ಳುವುದು. ಇನ್ನು ಶಾನುಭೋಗನ ಕರ್ತವ್ಯಗಳಲ್ಲಿ ಲೆಕ್ಕಪತ್ರಗಳನ್ನು ನೋಡಿಕೊಳ್ಳುವುದು ಮುಖ್ಯವಾಗಿತ್ತು. ಇತರೆ ಆಯಗಾರರು ತಮ್ಮ ಜನರ ಕಷ್ಟನಷ್ಟಗಳನ್ನು, ಅವರ ಅನುಕೂಲ ಅನಾನುಕೂಲಗಳನ್ನು ಸಭೆಯಲ್ಲಿ ನಿವೇದಿಸಿಕೊಂಡಾಗ, ಇತರರು ಚರ್ಚಿಸಿ ಒಂದು ಒಪ್ಪಂದಕ್ಕೆ ಬರುತ್ತಿದ್ದರು. ಹೀಗಾಗಿ, ಗ್ರಾಮಾಡಳಿತವು ಸುಸೂತ್ರವಾಗಿ ಸಾಗುತ್ತಿತ್ತು. ನಾಡಿನ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಕೆಲವು ಅಧಿಕಾರಿಗಳಿದ್ದರು. ಅವರುಗಳು ಗ್ರಾಮದ ಸುಧಾರಣೆಗಾಗಿ ಕಾಯಿದೆಗಳನ್ನು ರಚಿಸುತ್ತಿದ್ದರು. ಆದಾಯದ ಮೊತ್ತ, ವಿವಿಧ ರೀತಿಯ ಸುಂಕಗಳ ತೆರಿಗೆಗಳ ಮೊತ್ತಗಳನ್ನು ನಿಶ್ಚಯಿಸುವುದು, ಗಡಿಗಳನ್ನು ನಿಶ್ಚಯಿಸಿ ಲಿಂಗಮುದ್ರೆ ಅಥವಾ ವಾಮನಮುದ್ರೆ ಗಳಿರುವ ಕಲ್ಲುಗಳನ್ನು ನಡೆಸುವುದು ಅವರ ಆದ್ಯ ಕರ್ತವ್ಯಗಳಾಗಿತ್ತು.

ದುರ್ಗವು ಬಹಳ ಮುಖ್ಯವಾದುದು. ಗಿರಿದುರ್ಗ, ವನದುರ್ಗ ಮತ್ತು ಜಲದುರ್ಗವೆಂಬ ಪ್ರಕಾರಗಳಿವೆ. ಇವರ ದುರ್ಗಗಳೆಲ್ಲಾ ಗಿರಿದುರ್ಗಗಳು. ಚಿತ್ರದುರ್ಗದ ಕೋಟೆ ಮಾತ್ರ ಮೂರೂ ಪ್ರಕಾರದ ದುರ್ಗವಾಗಿ ಜಯಿಸಲು ಬಹಳ ಕಠಿಣವಾಗಿತ್ತು.

ಹೀಗೆ ಪೂರ್ವ ಕರ್ನಾಟಕದ ಪಾಳೆಯಗಾರರ ಆಡಳಿತ ಕ್ರಮವನ್ನು ವೀಕ್ಷಿಸಿದಾಗ, ತಮ್ಮ ಸಂಸ್ಥಾನದ ಎಲ್ಲಾ ಆಡಳಿತ ಘಟಕಗಳಲ್ಲಿ ದಕ್ಷರಾದ, ನಿಷ್ಠರಾದ ಅಧಿಕಾರಿಗಳನ್ನು ನೇಮಿಸಿ, ಪ್ರಜೆಗಳ ಅನಾನುಕೂಲದ ಕಡೆಗೆ ಲಕ್ಷ್ಯವಿಟ್ಟು, ಜನಮನ್ನಣೆಯನ್ನು ಪಡೆದುಕೊಂಡಿದ್ದರೆಂದು ತಿಳಿದುಬರುತ್ತದೆ.





# ಹೊಂಗನೂರು-ಕೂಡ್ಲೂರಿನ ಶಾಸನಗಳ ವಿವೇಚನೆ

ಕನ್ಯಾಕುಮಾರ್. ಪಿ.*

ಜಿಲ್ಲಾ ಕೇಂದ್ರ ರಾಮನಗರಕ್ಕೆ ೧೩ ಕಿ.ಮೀ. ದೂರದಲ್ಲಿರುವ ಚನ್ನಪಟ್ಟಣ ತಾಲ್ಲೂಕು ಪ್ರಾಂತ್ಯದಲ್ಲಿ ದೊರೆತಿರುವ ಶಾಸನಗಳು ಮತ್ತು ಇನ್ನಿತರ ಮಾಹಿತಿಳಿಂದ ಇಲ್ಲಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಅಂಶಗಳು ಹೇಗೆ ಬೆಳೆದುಬಂದವೆಂಬುದನ್ನು ತಿಳಿಸುತ್ತವೆ. ಏಳನೆಯ ಶತಮಾನದಲ್ಲಿ ಗಂಗರ ಆಡಳಿತಕ್ಕೆ ಸೇರಿದ್ದ ಪ್ರಾಂತ್ಯ ಚೋಳರ ಕಾಲದಲ್ಲಿ ಮಹತ್ವ ಪಡೆಯಿತು. ಚೋಳರ ಆಕ್ರಮಣಗಳಿಗೆ ಸಿಲುಕಿದ ಈ ಪ್ರಾಂತ್ಯದಲ್ಲಿ ಹೊಂಗನೂರು, ಕೂಡ್ಲೂರು, ಮಳೂರು, ಮಳೂರುಪಟ್ಟಣ, ಅಬ್ಬೂರು, ಬ್ರಹ್ಮಣಿಪುರಗಳು ಪ್ರಖ್ಯಾತ ಹೊಂದಿ ಮುಖ್ಯ ಧಾರ್ಮಿಕ, ವಾಣಿಜ್ಯ ಪಟ್ಟಣ ಗಳಾಗಿದ್ದವು. ಇವುಗಳಲ್ಲಿ ಹೊಂಗನೂರು ಮತ್ತು ಕೂಡ್ಲೂರು ಗಳು ಶಾಸನೋಕ್ತಗೊಂಡಿದ್ದು ಗಂಗರ ಕಾಲದಿಂದಲೂ ಪ್ರಸಿದ್ಧಿಗೆ ಬಂದಿದ್ದವು.

ಹೊಂಗನೂರು ಗ್ರಾಮ ಚನ್ನಪಟ್ಟಣಕ್ಕೆ ೫ ಕಿ.ಮೀ. ದೂರದಲ್ಲಿದೆ. ದೇವಾಲಯಗಳ ವಿಚಾರದಲ್ಲಿ ಮಳೂರಿನಂತೆಯೇ ಪ್ರಸಿದ್ಧಿ ಪಡೆದಿದೆ. ಇಲ್ಲಿನ ವೇಣುಗೋಪಾಲ ಸ್ವಾಮಿ ದೇವಾಲಯ, ಆಂಜನೇಯಸ್ವಾಮಿ ದೇವಾಲಯ ಮತ್ತು ಈಶ್ವರನ ದೇವಾಲಯ ಮುಖ್ಯವಾದವುಗಳು. ಚೋಳರ ಕಾಲದಲ್ಲಿ ಹೊಂಗನೂರು ಅಗ್ರಹಾರವಾಗಿ ೧೦೦೧ರಲ್ಲಿ ಅಸ್ತಿತ್ವಕೆಕ ಬಂದು 'ತ್ರೈಲೋಕ್ಯ ಮಹಾದೇವಿ ಚತುರ್ವೇದಿ ಮಂಗಲಂ' ಎಂದು ಕರೆಯಲ್ಪಟ್ಟಿತು[೧].

ಹೊಂಗನೂರು ಹೊಯ್ಸಳರ ಕಾಲದಲ್ಲಿ ಹೊಯ್ಸಳ ಉಪದಂಡನಾಯಕನ ಸೇನಾ ನೆಲೆಯಾಗಿ ಪ್ರಸಿದ್ಧಿಗೆ ಬಂದಿತು. ಇಲ್ಲಿನ ಸುತ್ತಮುತ್ತಲ ಹಳ್ಳಿಗಳಲ್ಲಿರುವ ಅಸಂಖ್ಯಾತ ವೀರಗಲ್ಲುಗಳಿವೆ. ವಿಜಯನಗರದ ಸದಾಶಿವರಾಯ ಈ ಗ್ರಾಮವನ್ನು ಕೊನೇಲಿ ಅರಸುಗಳ ಮಕ್ಕಳಾದ ಕೊಂಜರಾಜ ಜಯದೇವ ಅರಸರ ವಶಕ್ಕೆ ಕೊಟ್ಟಿದ್ದನು. ಅನಂತರ ಇವರು ಮೇಲುಕೋಟೆ ಚೆಲ್ವಪಿಳ್ಳೆ ದೇವರಿಗೆ ದಾನವಾಗಿ ಕೊಟ್ಟರು. ವೇಣುಗೋಪಾಲಸ್ವಾಮಿ ದೇವಾಲಯವು ಗರ್ಭಗುಡಿ, ಗರುಡಧ್ವಜ, ಸುಖನಾಸಿಗಳನ್ನು ಒಳಗೊಂಡಿದ್ದು, ನವರಂಗದಲ್ಲಿ ಆಳ್ವಾರರನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಮೇಲೆ ವಿಮಾನ ಶಿಖರವು ದ್ವಿತಲ ರೂಪವಾಗಿರುವುದು ಮತ್ತು ಶಿಖರವು ಚತುರಾಕಾರವಾಗಿದೆ. ಇಲ್ಲಿನ ಮತ್ತೊಂದು ಪ್ರಾಚೀನ ದೇವಾಲಯವೆಂದರೆ ಕುಂದವ್ಯೆ ವಿಣ್ಣಗರ್ ಆಳ್ವರ ದೇವಸ್ಥಾನ. ಇದು ಕ್ರಿ.ಶ. ೧೧೧೩ರಲ್ಲಿ ನಿರ್ಮಾಣಗೊಂಡಿದೆ. ಇದೇ ಗ್ರಾಮದ ಪೂರ್ವಭಾಗದಲ್ಲಿ ಆಂಜನೇಯಸ್ವಾಮಿ ದೇವಾಲಯವಿದೆ. ಅಂತೆಯೇ ದ್ರಾವಿಡ ಶೈಲಿಯಲ್ಲಿರುವ ಈಶ್ವರನ ದೇವಾಲಯವು ಗರ್ಭಗುಡಿ, ನವರಂಗ, ಮುಖಮಂಟಪಗಳನ್ನು ಒಳಗೊಂಡಿದೆ. ಹೊರಗೆ ನಂದಿ ವಿಗ್ರಹ ಎಡಪಾರ್ಶ್ವದಲ್ಲಿ ಶಾಸನ ಮತ್ತು ವೀರಗಲ್ಲುಗಳಿದ್ದು ಹೊಂಗನೂರು ಐತಿಹಾಸಿಕ ಪ್ರಸಿದ್ಧಿ ಪಡೆದಿದೆ.

ಕ್ರಿ.ಶ. ೧೦೦೦ರ ಮೊಗೇನಹಳ್ಳಿ ಶಾಸನವು[೨] ವೆಜ್ಜನಾಡು, ಗಜ್ಜವಾಡಿ [ನೊಳ]ಮ್ಬವಾಡಿ, ದೆಡಿಗವಾಡಿಯ ಹೆಸರನ್ನು ಉಲ್ಲೇಖಿಸಿ ಆ ಕಾಲದ ನಾಡು, ವಿಭಾಗಗಳನ್ನು ಹೇಳುವುದರ ಜೊತೆಗೆ ಕೆಳಲೆನಾಡು ಪುಜ್ಜನೂರು ಎಂದು ಉಲ್ಲೇಖಿಸುವುದರೊಂದಿಗೆ ಹೊಂಗನೂರಿನ ಅಸ್ತಿತ್ವವನ್ನು ತಿಳಿಸುತ್ತದೆ. ಹೊಂಗನೂರು ಆ ಕಾಲದ ಮುಖ್ಯ ಸ್ಥಳವಾಗಿ ೧೬ನೇ ಶತಮಾನದವರೆವಿಗೂ ಪ್ರಸಿದ್ಧಿ ಹೊಂದಿತೆಂಬುದನ್ನು ಶಾಸನಗಳು ತಿಳಿಸುತ್ತವೆ. ಕ್ರಿ.ಶ. ೧೪೩೭ರ ಇಮ್ಮಡಿ ದೇವರಾಯನ ಕಾಲದ ಶಾಸನದಲ್ಲಿ[೩] 'ತಿರುಮಲೆ ಮಳೆಊರು ಪಟ್ಟಣದ ತಿರುಮಲೆ ಹೊಂಗನೂರು ಹುಯಿಲೊಳಗೆ ಬಿದ್ದ' ಎಂಬುದನ್ನು ಸೂಚಿಸಿದೆ. ಗಂಗರ ಆಳ್ವಿಕೆಯ ಕಾಲದಲ್ಲಿ ತಮಿಳುನಾಡಿನ ಚೋಳರು ಪ್ರಾಬಲ್ಯರಾಗಿದ್ದು, ಕ್ರಿ.ಶ. ೯೮೭ರಲ್ಲಿ ಚಾವುಂಡರಾಯನ ನಂತರ ಕ್ರಿ.ಶ. ೧೧೧೬ರ ವರೆವಿಗೂ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ಅಧಿಕಾರದಲ್ಲಿದ್ದು, ಗಂಗರಾಳ್ವಿಕೆಯ ಪ್ರದೇಶವನ್ನು ಆಕ್ರಮಿಸಿದರು. ಕ್ರಿ.ಶ. ೧೦೦೦ಕ್ಕೂ ಮೊದಲು ಬೆಂಗಳೂರು ಜಿಲ್ಲೆಯಲ್ಲಿ ಚನ್ನಪಟ್ಟಣವನ್ನೊಳಗೊಂಡಂತೆ ತಮಿಳು ಶಾಸನಗಳು ಇರಲಿಲ್ಲ. ನಂತರದಿಂದ ಅಂದರೆ ಚೋಳರು ಗಂಗನಾಡುಗಳ ಮೇಲೆ ಆಕ್ರಮಣ ಮಾಡಿದ ನಂತರದಿಂದ ಕ್ರಿ.ಶ. ೧೦೦೪ರಿಂದ ತಮಿಳು ಶಾಸನಗಳು ಕ್ರಿ.ಶ. ೧೩೮೪ರ ವರೆವಿಗೂ ನಿರಂತರವಾಗಿಯೇ ಮುಂದುವರಿದುಕೊಂಡು ಬಂದಿವೆ.

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ-೫೬೦೦೫೬.

ಚನ್ನಪಟ್ಟಣ ಪ್ರಾಂತ್ಯದಲ್ಲಿ ೧೮೬ ಶಾಸನಗಳ ಪೈಕಿ ೮೦ ಶಾಸನಗಳು ತಮಿಳು ಭಾಷೆಯ ಶಾಸನಗಳೇ. ಕ್ರಿ.ಶ. ೧೦೧೮ರ ವೇಳೆಗೆ ಚೋಳರ ಆಡಳಿತದ ದಟ್ಟ ಪ್ರಭಾವ ಇಲ್ಲಿ ಕಾಣುತ್ತದೆ. ರಾಜೇಂದ್ರ ಚೋಳದೇವ ತನ್ನ ಆಳ್ವಿಕೆಯ ೭ನೆಯ ವರ್ಷದಲ್ಲಿ ಸಿಂಹಳವನ್ನು ಗೆದ್ದು ಬಂದಾಗ ಹೊಂಗನೂರಿನ ಸಂಬಂಧವೂ ಕಾಣಬರುತ್ತದೆ. ಕ್ರಿ.ಶ. ೧೦೧೩ರಲ್ಲಿ 'ಹೊಂಗನೂರಿಗೆ ತ್ರೈಲೋಕ್ಯ ಮಾದೇವಿ ಚತುರ್ವೇದಿ ಮಂಗಲ' ಎಂಬ ಹೆಸರು ಇದ್ದದ್ದು ಶಾಸನೋಕ್ತ ಗೊಂಡಿದೆ[೪]. ಈ ಶಾಸನದಲ್ಲಿಯೇ ಪೊನ್ನಕ್ಕ ಎಂಬಾಕೆ ದಾನ ನೀಡಿದ ಬಗ್ಗೆ ವಿವರಗಳೂ ಇವೆ.

ಹೊಂಗನೂರು ಗ್ರಾಮದಲ್ಲಿ ೦೮ ಶಾಸನಗಳು ಲಭ್ಯವಿದ್ದು ಎಲ್ಲವೂ ದಾಖಲೆಯಾಗಿವೆ. ಈ ಗ್ರಾಮದಲ್ಲಿ ಲಭ್ಯವಿರುವ ಶಾಸನಗಳ ಪೈಕಿ ಕ್ರಿ.ಶ. ೧೦೧೮ರ ಶಾಸನವೇ ಪ್ರಾಚೀನದ್ದು[೫]. ಇದು ರಾಜೇಂದ್ರ ಚೋಳನು ಹೊಂಗನೂರಿಗೆ ಭೇಟಿ ಕೊಟ್ಟ ವಿಷಯವನ್ನು ಪ್ರಸ್ತಾಪಿಸುತ್ತಾ, ಸ್ವಲ್ಪ ಕಾಲ ತಂಗಿದ್ದ ವಿಚಾರವನ್ನು ತಿಳಿಸುತ್ತದೆ. ಇದೇ ಶಾಸನ ಕುಂದ್ಯೆವನ್ನಾಗರ್ ಆಳ್ವಾರ್ ದೇವರಿಗೆ ದಾನವಿಟ್ಟ ಸಂಗತಿಯನ್ನು ತಿಳಿಸುತ್ತದೆ. ಗ್ರಾಮದ ವೀರಗಲ್ಲು ಶಾಸನ[೬] ಈಶ್ವರ ದೇವಾಲಯದ ದಕ್ಷಿಣದ ಅಶ್ವಥಕಟ್ಟೆಯ ಬಳಿಯಿದ್ದು ಪ್ರತಾಪ ಚಕ್ರವರ್ತಿ ಸಿಂಹದೇವರಸ ಆಳ್ವಿಕೆ ನಡೆಸುವಾಗ ಅವನ ಪ್ರಧಾನ ಮಲ್ಲಿದೇವ ದಂಡನಾಯಕ ಸಗುಂದರ ಕೋಟೆಯಲ್ಲಿ ಕಾದಾಡಿ ಅದನ್ನು ವಶಪಡಿಸಿಕೊಳ್ಳುವಾಗ ಮಡಿದ ವಿಚಾರವನ್ನು ತಿಳಿಸುವುದರೊಂದಿಗೆ ಇದರ ಸಂಬಂಧವಾಗಿ ಆತನ ಪತ್ನಿ ನಾಗವ್ವ ಇಲ್ಲಿ ಸ್ಮರಣಾರ್ಥವಾಗಿ ವೀರಗಲ್ಲನ್ನು ಪ್ರತಿಷ್ಠಾಪಿಸಿದ ಬಗ್ಗೆ ತಿಳಿಸುತ್ತದೆ.

ಈಗಾಗಲೇ ಹೇಳಿರುವಂತೆ ಕ್ರಿ.ಶ. ೧೦೦೦ದ ಮೊಗೇನಹಳ್ಳಿ ಶಾಸನವು ವೆಜ್ಜನಾಡು, ಗಜ್ಜವಾಡಿ, ನೊಳಮ್ಬವಾಡಿ, ದಡಿಗವಾಡಿಯ ಹೆಸರನ್ನು ಉಲ್ಲೇಖ ಮಾಡಿ ಆ ನಾಡು ಪುಂಗನೂರು ಎಂದು ಹೇಳಿ ಇಂದಿನ ಹೊಂಗನೂರಿನ ಅಸ್ತಿತ್ವವನ್ನು ಹೇಳುತ್ತದೆ. ಈ ಹೊಂಗನೂರು ಗ್ರಾಮ ಆ ಕಾಲದ ಮುಖ್ಯ ಸ್ಥಳವಾಗಿದ್ದು ೧೬ನೇ ಶತಮಾನದವರೆವಿಗೂ ಪ್ರಸಿದ್ಧಿಗೆ ಬಂದಿತ್ತು. ಇದರ ಜೊತೆಗೆ ಕ್ರಿ.ಶ. ೧೪೩೭ರ ದೇವರಾಯನ ಕಾಲದ ಶಾಸನದಲ್ಲಿ ತಿರುಮಲೆ ಮಳಊರು ಪಟ್ಟಣದ ತಿರುಮಲೆ ಹೊಂಗನೂರು ಹುಯಿಲೊಳಗೆ ಬಿದ್ದ ಎಂದಿರುವುದು ಈ ಹೊಂಗನೂರು ಗ್ರಾಮ ಚೋಳರ ಕಾಲದಲ್ಲಿ 'ವೀರ ಕಾಳಗದ ನೆಲೆಯಾಗಿತ್ತು' ಎಂಬುದನ್ನು ತಿಳಿಯಬಹುದು. ಹೀಗೆ ಪ್ರಸಿದ್ಧಿಯಾದ ಹೊಂಗನೂರು ಪ್ರಾಂತ್ಯ ಚೋಳರ ನಂತರ ಹೊಯ್ಸಳ ಮತ್ತು ವಿಜಯನಗರದರಸರ ಆಳ್ವಿಕೆಗೆ ಒಳಪಟ್ಟಿತ್ತು. ಹೊಯ್ಸಳರ ಕಾಲದಲ್ಲೂ ಹೊಂಗನೂರು ಹೊಯ್ಸಳ ಉಪದಂಡನಾಯಕನ ಸೇನಾ ನೆಲೆಯಾಗಿ ಬಂದಿತ್ತು. ೩ನೇ ನರಸಿಂಹನ ಹಿರಿಯ ಕಾಳೇಯ ದಣ್ಣನಾಯಕ ಹೊಂಗನೂರನ್ನು ಉಪರಾಜಧಾನಿಯನ್ನಾಗಿ ಮಾಡಿಕೊಂಡು ಇಲ್ಲಿ ವಾಸ್ತವ್ಯ ಹೂಡಿದ್ದನು. ಒಂದು ಕಾಲದಲ್ಲಿ ಹೊಂಗನೂರನ್ನು 'ತಮಿಳುಪುರಿ' ಎಂದೇ ಕರೆಯಲಾಗಿತ್ತು.

ಚನ್ನಪಟ್ಟಣದಿಂದ ೬ ಕಿ.ಮೀ. ಅಂತರದಲ್ಲಿರುವ ಕೂಡ್ಲೂರು ಗ್ರಾಮವು ಪ್ರಾಚೀನ ಗಂಗವಾಡಿ ೯೬.೦೦೦ ಪ್ರದೇಶದ ಒಂದು ಭಾಗವಾಗಿತ್ತು. ಗಂಗರ ಪ್ರಮುಖ ನೆಲೆಯಾಗಿತ್ತು. ಕಣ್ವ ನದಿಯ ಎಡದಂಡೆಯ ಮೇಲೆ ಒಂದೇ ಸರಣಿಯಲ್ಲಿ ಬರುವ ಮುಖ್ಯ ಗ್ರಾಮಗಳಾದ ದೊಡ್ಡಮಳೂರು, ಮಳೂರು, ಮಳೂರು ಪಟ್ಟಣಗಳ ಜೊತೆಯಲ್ಲಿರುವ ಪ್ರಮುಖ ಗ್ರಾಮ ಈ ಕೂಡ್ಲೂರು. ಚೋಳರ ಕಾಲದಲ್ಲಿ 'ರಾಜ ರಾಜ ಚತುರ್ವೇದಿ ಮಂಗಲಂ' ಎಂದು ಕರೆಯಲ್ಪಡುತ್ತಿದ್ದ ಕೂಡ್ಲೂರು ಗ್ರಾಮ ಶ್ರೀ ವೈಷ್ಣವ ಮತ್ತು ಸ್ಮಾರ್ತ ಬ್ರಾಹ್ಮಣರಿದ್ದ ಸ್ಥಳ. ಶಾಸನಗಳಲ್ಲಿ ಕೂಡಲೂರು ಎಂದೇ ಉಲ್ಲೇಖವಾಗಿರುವ ಗ್ರಾಮದಲ್ಲಿ, ಶ್ರೀರಾಮ ದೇವಸ್ಥಾನ, ಶ್ರೀ ಮಂಗಳೇಶ್ವರ ದೇವಾಲಯಗಳು ಪ್ರಾಚೀನವುಗಳು. ಇವುಗಳ ಜೊತೆಗೆ ಗದ್ದೆ ಚಲ್ಲಮ್ಮ ದೇವಾಲಯವೂ ಒಂದು. ಇವುಗಳಲ್ಲಿ ಕ್ರಿ.ಶ. ೧೧೦೦ರಲ್ಲಿ ರಚನೆಯಾಗಿರಬಹುದಾದ ಮಂಗಳೇಶ್ವರ ದೇವಾಲಯ ಅತಿ ಪ್ರಾಚೀನವಾದದ್ದು.[೭]

ಕೂಡ್ಲೂರು ಗ್ರಾಮದಲ್ಲಿ ಒಟ್ಟು ೨೩ ಶಾಸನಗಳು ಲಭ್ಯವಿದೆ. ಅವುಗಳಲ್ಲಿ ೧೬ ಶಾಸನಗಳು ಅರವ ಲಿಪಿಯವುಗಳಾಗಿವೆ. ಕೂಡ್ಲೂರು ಗ್ರಾಮ ಅಗ್ರಹಾರ ಮತ್ತು ಪ್ರಮುಖ ಪಟ್ಟಣವಾಗಿದ್ದು, ತಮಿಳು ಶಾಸನಗಳು ಈ ಗ್ರಾಮವನ್ನು 'ಕೂಡಲೂರು' ಮತ್ತು 'ರಾಜ ರಾಜ ಚತುರ್ವೇದಿ ಮಂಗಲ' ಎಂದು ಕರೆದಿವೆ.[೮] ಗ್ರಾಮದ ಶಾಸನೋಕ್ತ ದೇವಾಲಯ ಶ್ರೀರಾಮ ದೇವಾಲಯದಲ್ಲಿನ ಶಾಸನ[೯] ಕಾನಕನಹಳ್ಳಿ ವೆಂಕಟಲಕ್ಷ್ಮಿಯು ಶ್ರೀರಾಮನವಮಿ ಉತ್ಸವಕ್ಕೆ ಅದೇ ಊರಿನ ಶಾನುಭೋಗ ಕಪನಿತಯ್ಯನಿಂದ ತೆಂಗಿನ ತೋಟವನ್ನು ಕ್ರಯಕ್ಕೆ ಪಡೆದು ಅದನ್ನು ದೇವರಿಗೆ ಅರ್ಪಿಸಿದ ವಿಷಯವನ್ನು ತಿಳಿಸುತ್ತದೆ. ದೇವಾಲಯದ ಪೂರ್ವ ಮಹಾದ್ವಾರಕ್ಕೆ ದಕ್ಷಿಣ ಪಾರ್ಶ್ವದಲ್ಲಿ ೪ ಶಾಸನಗಳಿದ್ದು[೧೦] ಅವು ಅರವಕ್ಷರಗಳಿಂದ ಕೂಡಿವೆ. ಈ ನಾಲ್ಕು ಶಾಸನಗಳು ಶ್ರೀರಾಮ ದೇವರಿಗೆ ನೀಡಿದಂತಹ ದಾನಗಳನ್ನು ಉಲ್ಲೇಖಿಸಿದವುಗಳಾಗಿವೆ. ಶ್ರೀರಾಮ ಮಹಾಮಂಡಲೇಶ್ವರ ತ್ರಿಭುವನಮಲ್ಲ ತಲಕಾಡು, ಕೊಂಗು, ನಂಗಲಿ, ಕೊಯರೂರ್, ಗಂಗಾಪಾಟಿ, ನೊಲಂಬಪಾಡಿ, ಉಚ್ಚಂಗಿ, ಪನಂಗಲ್, ವನವಾಸಿ, ಪಲಸಿಗೆ, ಪನ್ನೀರ್ ಚೆಯಿರ ಮುನ್‌ಗೊಂಡನಾದ ಶ್ರೀ ವಿಷ್ಣುವರ್ಧನ ಶಾಹಸ ಶೂರ ವೀರ ವಿಜಯ ವಲ್ಲಾಲದೇವನ್ ನೀಡಿದ ದಾನದ ಉಲ್ಲೇಖವನ್ನು ಶಾಸನ

ತಿಳಿಸುತ್ತದೆ.[೧೧] ಇದೇ ದೇವಾಲಯದ ದಕ್ಷಿಣ ಗೋಡೆಯಲ್ಲಿ ಶಾಸನ ಅಸ್ಪಷ್ಟವಾಗಿದ್ದು ತ್ರುಟಿತಗೊಂಡಿದೆ. ಶಾಸನದ ಪಠ್ಯ ಇಂತಿದೆ.[೧೨]

**ಕೊಟಪಯ್ಯನ ಭಟ್ಟ . . . . . . ಅಜ್ಜ . . . .**
**ಸಾನ್ತಾರ ಬಸದಿ . . . ಲ್ಮಲಿ ಒಡೆಯ . . .**
**ಲಿಯಾ . . . ಜ್ಞಾ. . ರಯ್ಯ ಕೊಣ್ಡಬಿಳ್ತು**
**ಮೂಗಣ್ಡುಗಂಮಣ್ನು ಅಯ್ಯಪ್ಪರಾ ಕೊಟ್ಟಿಪ**

ಎಂದಿದ್ದು ೩ನೇ ಸಾಲಿನಲ್ಲಿ ಉಲ್ಲೇಖವಾಗಿರುವ ಕೊಣ್ಡಬಿಳ್ತು ಎಂಬ ಪದ ಶಾಸನದಲ್ಲಿ ಉಲ್ಲೇಖವಾಗಿರುವಂತಹ ವ್ಯಕ್ತಿಗಳು ಕೊಂಡಕ್ಕೆ ಬಿದ್ದು ಆತ್ಮಾರ್ಪಣೆ ಮಾಡಿಕೊಂಡಿದ್ದರ ಸ್ಮರಣಾರ್ಥ ಈ ಆತ್ಮನಬಲಿ ಕಲ್ಲನ್ನು ನೆಟ್ಟಿರುವವರೆಂದು ಶಾಸನದ ಒಕ್ಕಣೆಯಿಂದ ತಿಳಿಯಬಹುದಾಗಿದೆ.

ಅದೇ ಗ್ರಾಮದ ದೊಡ್ಡಯಲ್ಲೇಗೌಡ ಮನೆಯ ಮುಂದೆ ದಕ್ಷಿಣ ಪಾರ್ಶ್ವದಲ್ಲಿ ಇದ್ದ ಶಾಸನವೊಂದು[೧೩] ೧೭೬೭ರಲ್ಲಿ ಹೈದರಾಲಿ ಕೂಡ್ಲೂರು ಗ್ರಾಮವನ್ನು ಸಯೆದ್ ಮಹಮ್ಮದ್ ಅಖಿಲ್ ಖಾದ್ರಿ ಎಂಬುವರಿಗೆ ಫಕೀರ ಧರ್ಮಕ್ಕೆ ಇನಾಮಾಗಿ ಬಿಟ್ಟ ವಿಷಯವನ್ನು ಪ್ರಸ್ತಾಪಿಸಿದೆ. ಈ ಗ್ರಾಮದಲ್ಲಿ ದೊರೆತಿರುವ ೨೩ ಶಾಸನಗಳ ಪೈಕಿ ೧೫ ಶಾಸನಗಳು[೧೪] ಚೋಳರ ಅವಧಿಯವೇ, ಈ ೧೫ ಶಾಸನಗಳು ಗ್ರಾಮದ ಪ್ರಾಚೀನ ದೇವಾಲಯಗಳಾದ ಮಂಗಳೇಶ್ವರ ದೇವಾಲಯಕ್ಕೆ ನೀಡಿದ ದಾನದ ವಿಷಯಗಳ ದಾಖಲೆಗಳಾಗಿವೆ. ಈ ಎಲ್ಲಾ ಶಾಸನಗಳ ಸೂಕ್ಷ್ಮ ಅಧ್ಯಯನದಿಂದ ತಿಳಿದು ಬರುವ ಸತ್ಯಾಂಶವೆಂದರೆ ಈ ಕೂಡ್ಲೂರು ಗ್ರಾಮದಲ್ಲಿನ ಮಂಗಳೇಶ್ವರ/ವಲ್ಲಾಳೀಶ್ವರ ದೇವಾಲಯ ಅತ್ಯಂತ ಪ್ರಾಚೀನ ದೇವಾಲಯವಾಗಿತ್ತೆಂದು ತಿಳಿದುಬರುತ್ತದೆ. ಕ್ರಿ.ಶ. ೧೧೯೫ಕ್ಕಿಂತಲೂ ಹಿಂದೆಯೇ ಈ ದೇವಾಲಯ ಅಸ್ತಿತ್ವದಲ್ಲಿತ್ತೆಂದು ಶಾಸನಗಳು ತಿಳಿಸುತ್ತವೆ.[೧೫] ಅಂತೆಯೇ ಈ ದೇವಾಲಯದಲ್ಲಿ 'ಚಂದ್ರಶೇಖರ ದೇವರು ಇತ್ತೆಂದು [ಲಿಂಗಾಕೃತಿ] ಶಾಸನ ತಿಳಿಯಪಡಿಸಿವೆ.

ಒಟ್ಟಾರೆ ಈ ಗ್ರಾಮದಲ್ಲಿ ದೊರೆತಿರುವ ಶಾಸನಗಳು ಗ್ರಾಮದಲ್ಲಿ ಅಸ್ತಿತ್ವದಲ್ಲಿದ್ದ ಬಹುಸಂಖ್ಯಾತ ಪ್ರಾಚೀನ ದೇವಾಲಯುಗಳನ್ನು ಸೂಚಿಸುವಲ್ಲಿ ನೆರವಾಗಿವೆ. ಅಂತಿಮವಾಗಿ ಚನ್ನಪಟ್ಟಣ ತಾಲ್ಲೂಕು ಪ್ರಾಂತ್ಯದ ಪ್ರಮುಖ ಗ್ರಾಮುಗಳಾದ ಹೊಂಗನೂರು ಮತ್ತು ಕೂಡ್ಲೂರು ಪ್ರದೇಶಗಳು ಗಂಗರ ಆಳ್ವಿಕೆಯಿಂದ ಹಿಡಿದು ವಿಜಯನಗರದ ಅರಸರ ನಂತರದ ಪಾಳೆಯಗಾರರ ಕಾಲದವರೆಗೂ ಮಹತ್ವ ಪಡೆದಿದ್ದು ಚೋಳರಾಳ್ವಿಕೆಯ ಸಮಯದಲ್ಲಿ ಹೆಚ್ಚಿನ ಬದಲಾವಣೆಗೆ ಒಳಗಾದವು. ತಮಿಳುನಾಡಿನಿಂದ ಬಂದ ಚೋಳರು ತಮ್ಮ ಆಡಳಿತಾವಧಿಯಲ್ಲಿ ತಾವು ನೀಡಿದ ದಾನ-ದತ್ತಿಗಳನ್ನು ತಮಿಳು ಭಾಷೆ ಮತ್ತು ಲಿಪಿಯಲ್ಲಿ ಹಾಕಿಸಿರುವುದು ವಿಶೇಷ. ಈ ದಾನ ದತ್ತಿಗಳನ್ನು ನೀಡಿದವರು ರಾಜ ಮಾತ್ರವಲ್ಲ, ಬದಲಾಗಿ ಬಹುತೇಕ ದಾನಗಳು ದಾನಿಗಳಿಂದ, ಸ್ಥಳೀಯ ಅಧಿಕಾರಿಗಳಿಂದ ನೀಡಿದವುಗಳಾಗಿವೆ. ಚತುರ್ವೇದಿ ಮಂಗಲ, ತಮಿಳುಪುರಿ ಎಂದು ಕರೆಯಿಸಿಕೊಳ್ಳುತ್ತಿದ್ದ ಈ ಗ್ರಾಮಗಳಲ್ಲಿನ ದೇವಾಲಯಗಳಲ್ಲಿ ತಮಿಳು ಭಾಷೆಯ ಅರ್ಚಕರು ಹೆಚ್ಚಾಗಿದ್ದಂತೆ ತೋರುತ್ತದೆ. ಹಾಗಾಗಿ ಸಹಜವಾಗಿಯೇ ಆ ಎರಡು ಗ್ರಾಮಗಳಲ್ಲಿ ತಮಿಳು ಶಾಸನಗಳೇ ಹೆಚ್ಚು. ಚೋಳರು ಮಾತ್ರವಲ್ಲದೆ ಹೊಯ್ಸಳರು ಮತ್ತು ಪೂರ್ವಾವಧಿ ರಾಯರ ಹಲವು ಶಾಸನಗಳು ತಮಿಳು ಭಾಷೆಯಲ್ಲಿಯೇ ಇವೆ. ಇದರರ್ಥ ತಮಿಳು ಶಾಸನಗಳನ್ನು ಕನ್ನಡಿಗರು ಹಾಕಿಸಿದರೆ ? ಇದರಿಂದಲೇ ಕನ್ನಡದ ಅರಸರ ಕಾಲದಲ್ಲಿ ತಮಿಳು ಶಾಸನಗಳು ಮುಂದುವರಿದವು. ಎರಡು ಗ್ರಾಮಗಳಲ್ಲಿ ದೊರೆತಿರುವ ಶಾಸನಗಳೆಲ್ಲವೂ ದಾನ ಶಾಸನಗಳೇ, ಹಾಗಾಗಿ ಯಾವ ಶಾಸನಗಳಲ್ಲಿಯೂ ಕೃಷಿ, ವಾಣಿಜ್ಯ ನಿಬಂಧನೆಗಳಿಗೆ ಸಂಬಂಧಿಸಿದ ವಿಷಯಗಳಲ್ಲ. ಆದರೂ ಪುಂಗನೂರು ಗ್ರಾಮದ ಗೋಷ್ಠಿಯ ಸದಸ್ಯರು ಮಣಲೂರಿನ ದೇವಾಲಯಕ್ಕೆ ನೀಡಿದ ದೇವದಾನ ಭೂಮಿಯನ್ನು ಸ್ವೀಕರಿಸಿದ ಮಣಲೂರಿನ ಮಹಾಜನರು ಈ ಭೂಮಿಯನ್ನು ಮಣಲೂರಿನ ಕೆರೆಯ ಸಹಾಯದಿಂದ ಬೇಸಾಯ ಮಾಡಬಹುದೆಂದು, ತೊಂದರೆ ನೀಡಿದವರಿಗೆ ಸ್ವತಃ ನೀವೇ ೫೦ ಕವಿಂಜುವಿನ ದಂಡ ವಿಧಿಸಬಹುದೆಂಬ ವಾಣಿಜ್ಯ ನಿಬಂಧನೆಯನ್ನು ವಿಧಿಶಿದ ವಿಷಯವೊಂದು ಮಾತ್ರ ದಾಖಲಾಗಿದೆ.[೧೬]

ಹೊಂಗನೂರು ಗ್ರಾಮ ಮತ್ತು ಕೂಡ್ಲೂರು ಗ್ರಾಮಗಳು ಚನ್ನಪಟ್ಟಣ ಪ್ರಾಂತ್ಯದಲ್ಲಿ ತಮಿಳು ಭಾಷೆಯ ಶಾಸನಗಳ ಅಸ್ತಿತ್ವದಲ್ಲಿ ಕೂಡ್ಲೂರು ಗ್ರಾಮಕ್ಕೆ ೭ನೆಯ ಸ್ಥಾನ ದೊರೆತಿದ್ದು ತಮ್ಮದೇ ಆದ ವಿಶೇಷ ಮಹತ್ವವನ್ನು ಪಡೆದುಕೊಂಡಿವೆ.

[ಈ ಲೇಖನವನ್ನು ಸಿದ್ಧಪಡಿಸಲು ನೆರವಾದ ಡಾ. ಎಂ.ಜಿ. ನಾಗರಾಜ್, ಡಾ. ಎಚ್.ಎಸ್. ಗೋಪಾಲರಾವ್, ಡಾ. ಎಸ್. ನಾಗರತ್ನಮ್ಮ ನವರಿಗೆ ಧನ್ಯವಾದಗಳು.]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಎಪಿಗ್ರಾಫಿಯಾ ಕರ್ನಾಟಿಕ. IX, ಚನ್ನಪಟ್ಟಣ ೭೬, (ರೈಸ್ ಆವೃತ್ತಿ).

೨, ೩, ೪, ೫, ೬, ೭, ೮ ಅದೇ., ಚನ್ನಪಟ್ಟಣ ೪೬, ೪೨, ೧೩೫, ೪೬, ೧೧೫, ೧೧೮, (ರೈಸ್ ಆವೃತ್ತಿ).

೯, ೧೦, ೧೧, ೧೨, ೧೩, ೧೪, ೧೫, ೧೬. ಅದೇ., ಚನ್ನಪಟ್ಟಣ, ೧೦೮, ೧೦೯, ೧೧೦, ೧೧೧, ೧೧೨, ೧೧೩, ೧೧೪, ೧೧೫, ೧೧೬, ೧೧೬ (ಎ), ೧೧೭, ೧೧೮, ೧೧೯, ೧೨೦, ೧೨೧, ೧೨೨, ೧೨೩, ೧೨೪, ೧೨೫, ೧೨೫(ಎ), ೧೨೬, ೧೨೭ [ಅರವಕ್ಷರದವುಗಳು].

೨೦

# ಶಾಸನಗಳ ಹಿನ್ನೆಲೆಯಲ್ಲಿ ಬನ್ನೂರು ಒಂದು ವಿವೇಚನೆ

**ವೇಮಗಲ್ ಮೂರ್ತಿ***

ಇಂದಿನ ಮೈಸೂರು ಜಿಲ್ಲೆಯ ತಿರುಮಕೂಡಲು ನರಸೀಪುರ (ತಿ. ನರಸೀಪುರ) ತಾಲ್ಲೂಕಿನ ಹೋಬಳಿ ಕೇಂದ್ರವಾಗಿರುವ ಬನ್ನೂರು, ಇತಿಹಾಸದ ಅನೇಕ ಪ್ರಮುಖ ಘಟನಾವಳಿಗಳಿಗೆ ಸಾಕ್ಷಿಯಾಗಿದೆ.

ಗಂಗರ ಕಾಲದಿಂದ ಆರಂಭವಾಗುವ ಬನ್ನೂರಿನ ಇತಿಹಾಸವು ಮೈಸೂರು ಅರಸರ ಆಡಳಿತದವರೆಗೂ ಅವಿಚ್ಛಿನ್ನವಾಗಿ ನಡೆದು ಬಂದಿದೆ. ಇಲ್ಲಿ ದೊರೆತಿರುವ ಶಾಸನಗಳಲ್ಲಿ ಅತ್ಯಂತ ಪ್ರಾಚೀನವಾದದ್ದೆಂದರೆ ರಾಮಸ್ವಾಮಿ ದೇಗುಲದ ಉತ್ತರ ದಿಕ್ಕಿನ ಕರುವು ಕಲ್ಲಿನ ಬಳಿ ಇರುವ ಶಾಸನವೇ ಆಗಿದೆ. ಈ ಶಾಸನವು ೮ನೆಯ ಶತಮಾನಕ್ಕೆ ಸೇರಿದ್ದು, ವಿವರಗಳು ನಷ್ಟವಾಗಿದ್ದರೂ, ಗಂಗರ ದೊರೆ ಶ್ರೀಪುರುಷನನ್ನು ಉಲ್ಲೇಖಿಸುತ್ತದೆ. ೧೦-೧೧ನೆಯ ಶತಮಾನದಲ್ಲಿ ಈ ಪ್ರಾಂತ್ಯವು ಚೋಳರ ವಶಕ್ಕೆ ಸಂದಿರುವುದನ್ನು ಇಲ್ಲಿನ ಶಾಸನಗಳಿಂದ ತಿಳಿಯಬಹುದಾಗಿದೆ. ನಂತರ ಚೋಳರನ್ನು ಸೋಲಿಸಿ ತಲಕಾಡನ್ನು ವಿಷ್ಣುವರ್ಧನ ಪಡೆದುಕೊಂಡ ಮೇಲೆ ಈ ಭಾಗವು ಹೊಯ್ಸಳರ ನೇರವಾದ ಆಳ್ವಿಕೆಗೆ ಸಂದಾಯವಾಯಿತು. ಆದರೂ ಇಲ್ಲಿನ ಕೆಲವು ಶಾಸನಗಳ ಭಾಷೆ ತಮಿಳೇ ಆಗಿರುತ್ತದೆ. ಹೊಯ್ಸಳರಿಗೂ, ಚೋಳರಿಗೂ ಆಗಾಗ ನಡೆಯುತ್ತಿದ್ದ ಕಾಳಗಕ್ಕೆ ಇಲ್ಲಿನ ಶಾಸನಗಳು ಸಾಕ್ಷಿಯಾಗಿವೆ. ಹೊಯ್ಸಳರ ವಿಷ್ಣುವರ್ಧನ ಹಾಗೂ ಎರಡನೆಯ ಬಲ್ಲಾಳನ ಶಾಸನಗಳ ಅವಲೋಕನದಿಂದ ಈ ಪ್ರಾಂತ್ಯದಲ್ಲಿ ಹೊಯ್ಸಳ ಸಾಮ್ರಾಜ್ಯವನ್ನು ಭದ್ರವಾಗಿ ಸ್ಥಾಪಿಸಿದ ಮೇಲೆ ಅವರು ಈ ಊರಿಗೆ ನೀಡಲಾದ ಪ್ರಾಮುಖ್ಯತೆಯನ್ನು ನಾವು ಗಮನಿಸಬೇಕಾಗುತ್ತದೆ.

ನಂತರದ ದಿನಗಳಲ್ಲಿ ವಿಜಯನಗರದ ಅರಸರು ಈ ಪ್ರಾಂತ್ಯವನ್ನು ಆಳಿದರು. ಉಮ್ಮತ್ತೂರು ರಾಜ್ಯ, ತೆರಕಣಾಂಬಿ ರಾಜ್ಯಗಳನ್ನು ವಿಜಯನಗರದ ಅರಸರು ರೂಪಿಸುವಾಗ ಈ ಬನ್ನೂರು ಪ್ರಾಂತ್ಯವು ಉಮ್ಮತ್ತೂರು ರಾಜ್ಯದ ಗಡಿ ಪ್ರದೇಶವಾಗಿ ಬಹುಶಃ ರೂಪುಗೊಂಡಿರಬೇಕು. ವಿಜಯನಗರದ ಅರಸರ ತರುವಾಯ, ಮೈಸೂರು ಅರಸರ ಆಡಳಿತಕ್ಕೆ ಈ ಪ್ರದೇಶವು ಒಳಪಟ್ಟಿತ್ತು.

ಬನ್ನೂರು ಪ್ರಾದೇಶಿಕವಾಗಿ ಅಷ್ಟೇನೂ ಬೆಟ್ಟಗುಡ್ಡಗಳು ಇಲ್ಲದೇ ಇರುವ, ಕಾವೇರಿ ನದಿಯ ತಪ್ಪಲು ಪ್ರದೇಶವಾಗಿದ್ದು ಪ್ರಾಚೀನ ಕಾಲದಿಂದಲೂ ಕೃಷಿಯೇ ಆಧಾರವಾದ ಪ್ರದೇಶ. ಆದುದರಿಂದಲೇ ಇಲ್ಲಿ ಅನೇಕ ರೀತಿಯ ಬೆಳೆಗಳನ್ನು ಬೆಳೆಯಲು ಸಾಧ್ಯವಾಯಿತು. ಇಲ್ಲಿನ ಗದ್ದೆ, ತೋಟಗಳನ್ನು ದೇಗುಲಗಳಿಗೆ ದಾನವಾಗಿ ನೀಡಿರುವುದು ಅಲ್ಲಿನ ಕೃಷಿ ಚಟುವಟಿಕೆಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ನಾವು ಸಾಮಾನ್ಯವಾಗಿ ಮಲೆನಾಡಿನ ಕೃಷಿಯ ವ್ಯಾಪ್ತಿಯಲ್ಲಿ ಸೇರಿಸುವ ಅಡಿಕೆ ಮರವನ್ನು ಇಲ್ಲಿನ ಶಾಸನಗಳಲ್ಲಿ ದಾನವಾಗಿ ನೀಡಿರುವುದನ್ನು ನೋಡಿದರೆ ಇಲ್ಲಿ ಅಡಿಕೆ ಬೆಳೆಯನ್ನು ಕೂಡ ವ್ಯವಸ್ಥಿತವಾಗಿ ನಡೆಸುತ್ತಿದ್ದರು ಎಂಬುದು ಮನವರಿಕೆಯಾಗುತ್ತದೆ.

ಆಡಳಿತ ವಿಭಾಗವಾಗಿ 'ಬನ್ನೂರು' ಪ್ರಾಚೀನ ಗಂಗರಸರ ಕಾಲದಲ್ಲಿ ಯಾವ ವಿಭಾಗದಲ್ಲಿತ್ತು ಎಂಬುದರ ಉಲ್ಲೇಖ ಸ್ಪಷ್ಟವಾಗಿಲ್ಲದಿದ್ದರೂ ಚೋಳರ ಆಳ್ವಿಕೆಯ ಹೊತ್ತಿಗೆ ಬನ್ನೂರು ಮುಡಿಗೊಂಡ ಚೋಳಮಂಡಲದ ಭಾಗವಾದ ವಡಗೆರೆ ನಾಡಿನಲ್ಲಿ ಅಂತರ್ಗತವಾಗಿತ್ತು.

ಇಂತಹ ಬನ್ನೂರು ಶಾಸನಗಳಲ್ಲಿ ಬನ್ನಿಯೂರು, ವಹ್ನಿಪುರ, ವನ್ನಿಯೂರು, ಎಂಬೆಲ್ಲಾ ಹೆಸರುಗಳಿಂದ ಕರೆಯಲ್ಪಟ್ಟಿದೆ. ಅಲ್ಲದೆ ಇದು ಪ್ರಾಚೀನ ಪ್ರಮುಖ ಅಗ್ರಹಾರವಾಗಿದ್ದು ದೇವಾಲಯಗಳ ತಾಣವಾಗಿಯೂ ಇದ್ದುದಕ್ಕೆ ಸಾಕ್ಷಿಯಾಗಿ ಬನ್ನೂರನ್ನು 'ಜನನಾಥ ಚತುರ್ವೇದಿ ಮಂಗಲ' ಎಂದು ಹೊಯ್ಸಳರ ಶಾಸನಗಳು ಕರೆದಿರುವುದು ಅದರ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತದೆ.

ಇಲ್ಲಿ ಹಲವಾರು ದೇವಾಲಯಗಳು ಇದ್ದಿರುವ ಬಗ್ಗೆ ಅಲ್ಲಿನ ಶಾಸನಗಳಿಂದ ನಮಗೆ ತಿಳಿದು ಬರುತ್ತದೆ. ಅವುಗಳಲ್ಲಿ ಪ್ರಮುಖವಾದ ದೇವಾಲಯಗಳೆಂದರೆ ೧) ಹನುಮಂತೇಶ್ವರ,

* # ೧೭೨, ೭ನೆಯ ಮುಖ್ಯರಸ್ತೆ, ೨ನೆಯ ಅಡ್ಡರಸ್ತೆ, ಮೊದಲನೆಯ ಮಹಡಿ, ಶ್ರೀನಿವಾಸನಗರ, ಬೆಂಗಳೂರು-೫೬೦೦೫೦.

೨) ಕೈಲಾಸೇಶ್ವರ, ೩) ವಿಷ್ಣು ದೇವಾಲಯ, ೪) ರಾಮಚಂದ್ರ, ೫) ರಘುಪತಿಸ್ವಾಮಿ ದೇವಾಲಯಗಳು. ಇಷ್ಟೇ ಅಲ್ಲದೆ ಜನ್ಮಾಂಜನೇಯ ದೇವಾಲಯ, ಸರೋವರ ಆಂಜನೇಯ ಮತ್ತು ಹೇಮಾದ್ರಮ್ಮ ದೇವಾಲಯಗಳೂ ಇವೆ.

ಕೆಲವು ದೇವಾಲಯಗಳಿಗೆ ಸಂದಂತಹ ದತ್ತಿ ದಾನಗಳನ್ನು ಶಾಸನಗಳ ಮುಖೇನ ವಿಶ್ಲೇಷಿಸಲಾಗಿದೆ. ಮುಂದೆ:

### ೧) ವಿಷ್ಣು ದೇವಾಲಯ

ಕ್ರಿ.ಶ. ೧೧೩೫ರಲ್ಲಿ ಹೊಯ್ಸಳರ ರಾಜ ವಿಷ್ಣುವರ್ಧನನ ಕಾಲದಲ್ಲಿ ಬನ್ನಿಯೂರಾದ, ಜನನಾಥ ಚತುರ್ವೇದಿ ಮಂಗಲದ ೧೭೦೦ ಮಹಾಜನ ಕೂಡಿರುವ ವಿಷ್ಣುದೇವನಿಗೆ ಬೆಳ್ವಲದ ಬಾದಾಮಿಯ ಹುವಿಯರ ನಾರಸಿಂಹದೇವ ಮಾಡಿದ ಧರ್ಮ ಇಂತಿದೆ. ಉತ್ತರಾಯಣ ಸಂಕ್ರಮಣದಲ್ಲಿ ನಂದಾದೀವಿಗೆಗಾಗಿ ೩ ಗದ್ಯಾಣ, ಸಂಜೆ ಅಗ್ಗಿಷ್ಟಿಕೆಗೆ ೩ ಗದ್ಯಾಣ, ತಾಂಬೂಲಕ್ಕೆ ೨ ಗದ್ಯಾಣ, ಹೀಗೆ ೧೧ ಗದ್ಯಾಣದ ಜೊತೆಗೆ ಊರಿನ ಮಹಾಜನಗಳು ಅಗ್ಗಿಷ್ಟಿಕೆಗೆ ನೀಡಿರುವ ೧ ಗದ್ಯಾಣ ಸೇರಿ ಒಟ್ಟು ೧೨ ಗದ್ಯಾಣ ನೀಡಿರುವುದರ ವಿಷಯ ತಿ.ನ.ಶಾ. ಸಂಖ್ಯೆ ೬೯ರಲ್ಲಿ ಪ್ರಸ್ತಾಪಿಲ್ಪಟ್ಟಿದೆ. ನಾರಸಿಂಹದೇವ ಮಾತ್ರವಲ್ಲದೆ, ಊರಿನ ಮಹಾಜನಗಳೂ ದಾನ ಕೊಟ್ಟಿದ್ದಾರೆ, ಇದರಿಂದ ಇಲ್ಲಿನ ಜನಗಳಲ್ಲಿ ಸಾಮರಸ್ಯ ಎಷ್ಟೊಂದು ಇತ್ತೆಂದು ತಿಳಿದುಬರುತ್ತದೆ.

ವಡಕರೈನಾಡಿನ ವಣ್ಣಿಯೂರಿನ (ಜನನಾಥ ಚತುರ್ವೇದಿ ಮಂಗಲ) ಮಹಾಜನಗಳು ಮಣವಾಳ ಆಳ್ವಾರರ ಪ್ರತಿಷ್ಠೆಗಾಗಿ ಕಾವೇರಿ ನೀರನ್ನು ಹುಣ್ಣಿಮೆಯಂದು ಹಾಗೂ ಸಾಮನಪಲ್ಲಿಯನ್ನು (ಸಾಮನಹಳ್ಳಿ) ದೇವದಾನವಾಗಿ ಬಿಟ್ಟಿದ್ದು ತಿಳಿದುಬರುತ್ತದೆ (ತಿ.ನ.ಶಾ.ಸಂ. ೬೮).

### ೨) ಹನುಮಂತೇಶ್ವರ

ಈ ದೇವಾಲಯವು ತುಂಬಾ ಹಳೆಯದಾದದ್ದು. ದೇವಾಲಯದಲ್ಲಿರುವ ಲಿಂಗವನ್ನು ಹನುಮಂತನೇ ಪ್ರತಿಷ್ಠಾಪಿಸಿದನೆಂದು ಐತಿಹ್ಯವಿದೆ. ಕ್ರಿ.ಶ. ೧೫೪೧ರಲ್ಲಿ ಅಚ್ಚುತರಾಯ ಮಹಾರಾಯನ ಆಳ್ವಿಕೆಯಲ್ಲಿ ಈತನ ಮಂತ್ರಿ ವರದಪ್ಪನಣ್ಣನ ಪ್ರತಿನಿಧಿ ಕಂನಪನಾಯಕರ ಮಗ ತಂಮನಾಯಕರು ವಹ್ನಿಪುರದ ಹನುಮಂತೇಶ್ವರ ದೇವರಿಗೆ ಹೊಸದಾಗಿ ರಥವನ್ನು ಕಟ್ಟಲು ಹಾಗೂ ಉಮಾಸ್ಕಂದೇಶ್ವರ, ವಿಘ್ನೇಶ್ವರ ಮುಂತಾದ ಸೌಮ್ಯದೇವರುಗಳನ್ನು ಹೊಸದಾಗಿ ಮಾಡಿಸಿ ಆಚಂದ್ರಾರ್ಕವಾಗಿ ರಥೋತ್ಸವ ನಡೆಯಲು ಕಾವೇರಿ ಕಾಲುವೆಯ ಕೆಳಗೆ ೬ ಖಂಡುಗ ಗದ್ದೆ, ಕಲ್ಲುಮಡವೆಯ ತೆಂಗಿನ ತೋಟ ಹಾಗೂ ಅಲ್ಲಿನ ೯೦೦ ಅಡಿಕೆ ಮರಗಳನ್ನು ದಾನವಾಗಿ ನೀಡಿರುವುದರ ಬಗ್ಗೆ ಪ್ರಸ್ತಾಪವಿದೆ ಇಷ್ಟೇ ಅಲ್ಲದೆ ನಿತ್ಯಪ್ರಾತಃ ಕಾಲದ ಧ್ಯಾನಕ್ಕಾಗಿ ತಂಮನಾಯಕರ ಹೆಂಡತಿ ತಿಪ್ಪಂಮ್ಮನೂ ಹನುಮಂತೇಶ್ವರ ದೇವರಿಗೆ ಗದ್ದೆ ಕಾಲುವೆ ಕೆಳಗೆ ಒಂದು ಖಂಡುಗ ಹಾಗೂ ೭ ಖಂಡುಗ ಗದ್ದೆ, ೯೦೦ ಅಡಿಕೆ ಮರಗಳನ್ನು 'ಬನ್ನೂರಿನ ಹೆಬ್ಬಾರುಗಳ' ಗೌಡರ, ಮಹಾಜನಗಳ ಹಾಗೂ ಊರ ಶ್ಯಾನುಭೋಗರ ಸಮಕ್ಷಮದಲ್ಲಿ ನೀಡಿರುವುದು ಮತ್ತು ತಂಮನಾಯಕರು ಹೆಡೆಹಳ್ಳಿಯ ಪಡುವಣ ಕೆರೆಯನ್ನು, ಆ ಕೆರೆ ಕೆಳಗಿನ ಗದ್ದೆ ತೋಟವನ್ನು ಹಿರಣ್ಯೋದಕ ದಾನವಾಗಿ ನೀಡಿದ್ದಾರೆ. ಈ ವಿಷಯವು ಹನುಮಂತೇಶ್ವರ ದೇವಾಲಯದ ಪ್ರಾಕಾರದಲ್ಲಿ ಗಿರಿಜಾ ಕಲ್ಯಾಣ ಮಂಟಪದಲ್ಲಿ ನೆಟ್ಟಿರುವ ಶಾಸನದ ಸಂಖ್ಯೆ ತಿ.ನ.ಶಾ.ಸಂ. ೫೫ ರಿಂದ ತಿಳಿದುಬರುತ್ತದೆ.

ಕ್ರಿ.ಶ. ೧೪೨೧ರಲ್ಲಿ ಮಾದರಸರು, ಪಿರಿಯಣ್ಣ ಒಡೆಯರು ಹಾಗೂ ದೇವರಸರು ನಿರೂಪಿಸಿದಂತೆ ಒಂದು ಸಾವಿರದ ಅಡಿಕೆ ಮರದಿಂದ ಬರುವ ಸುಂಕವನ್ನು ದಣಾಯ್ಯ ಒಡೆಯರಿಗೆ ಒಳ್ಳೆಯದಾಗಲೆಂದು ಹನುಮಂತೇಶ್ವರ ದೇವರಿಗೆ ಮಾನ್ಯವಾಗಿ ಬಿಟ್ಟಿದ್ದಾರೆ (ತಿ.ನ.ಶಾ.ಸಂ. ೬೦).

ಅಂತೆಯೇ ಇದೇ ತಿ.ನ.ಶಾ.ಸಂ. ೬೦ರಲ್ಲಿ ಬುತಿಗನಹಳ್ಳಿ ಬರನ ಮಗ, ಕೇತನ ಮಗ, ದಾದನ ಮಗ ಹಾಗೂ ಮತಿಗನಹಳ್ಳಿಯ ಕದನ ಮಗ ಕೊಮಾರ ಗಾಣಿಕೆಮೊದೆ ಸುಂಕವನ್ನು ಹನುಮಂತೇಶ್ವರ ದೇವರ ನಂದಾದೀವಿಗೆಗಾಗಿ ನೀಡಿದ್ದಾರೆ.

ಹಾಗೆಯೇ ತಿ.ನ.ಶಾ.ಸಂ. ೬೨ರಲ್ಲಿ ಪಾಣಗಶೆಟ್ಟಿಯ ಅಳಿಯ ತನ್ನ ಸ್ವಇಚ್ಚೆಯಂತೆ ಹನುಮಂತೇಶ್ವರನಿಗೆ ೩ ಗದ್ಯಾಣವನ್ನು ಧನುರ್ಮಾಸದ ದೀಪಕ್ಕಾಗಿ ವೈಶ್ಯವೃತ್ತಿಯನ್ನು ಬಿಟ್ಟಿರುವುದು ತಿಳಿದುಬರುತ್ತದೆ.

ಹೀಗೆ ಅನೇಕರು ತಮ್ಮ ಸ್ವಂತ ಇಚ್ಚೆಯಂತೆ ಹನುಮಂತೇಶ್ವರನಿಗೆ ದಾನಗಳನ್ನು ಬಿಟ್ಟಂತೆ ತಿ.ನ.ಶಾ.ಸಂ. ೬೪ರಲ್ಲಿ, ಅಂದರೆ ಕ್ರಿ.ಶ. ೧೯೯೯ರಲ್ಲಿ ಪೆಣಮಾಂಡ ಹೆಗ್ಗಡೆಯವರು ತಾವೇ ಕೊಂಡು ಕೊಟ್ಟ ನಂದಾದೀವಿಯ ಸೊಡರ್ ಎಣ್ಣೆಗೆ ಆ ಊರಿನ ಸ್ಥಾನಿಕ ಗೋಣಿಯ ಜೀಯ ಪರದೇಸಿಯಪ್ಪನವರ ಮೊಮ್ಮಕ್ಕಳು, ವಂಶದವರು ದೇವರ ಭಂಡಾರವಾಗಿ ಕೊಟ್ಟ ಗದ್ಯಾಣ ೩, ಈ ಬಡ್ಡಿಯಿಂದ ನಿತ್ಯಪಡಿಯ ಸೊಡರು ಸಲ್ಲಿಸುವುದಕ್ಕಾಗಿ ಬಿಟ್ಟಿರುವ ವಿಷಯದ ಬಗ್ಗೆ ಪ್ರಸ್ತಾಪವಿದೆ.

ಈ ಮೇಲೆ ಬಿಟ್ಟಿರುವ ದಾನಗಳನ್ನು ಗಮನಿಸಿದರೆ, ಊರಿನ ಮುಖ್ಯ ಜನಾಂಗದವರಷ್ಟೇ ಅಲ್ಲದೆ, ಸಾಮಾನ್ಯ ಜನರ ಸಮ್ಮುಖದಲ್ಲಿಯೂ ದಾನ ಕೊಡುತ್ತಿರುವುದು

(ಸಾಕ್ಷಿಗಳಾಗಿ) ಅಂದಿನ ಸಾಮರಸ್ಯದ ಸಾಮಾಜಿಕ, ಪರಿಸರಕ್ಕೆ ಕನ್ನಡಿ ಹಿಡಿದಂತಿದೆ.

ಹಾಗೆಯೇ ಹನುಮಂತೇಶ್ವರ ದೇವರಿಗೆ ಕ್ರಯಕ್ಕೆ ಗದ್ದೆ ಕೊಂಡು ಬಿಟ್ಟಿರುವುದು, ಅಡಿಕೆಯಿಂದ ಬರುವ ಸುಂಕವನ್ನು ದೇವರಿಗೆ ಬಿಟ್ಟಿರುವುದು, ಗಾಣಿಕೆ ಮೊದೆ ಸುಂಕವನ್ನು ದೇವರಿಗೆ ಬಿಟ್ಟಿರುವುದು, ಗದ್ಯಾಣವನ್ನು ದಾನವಾಗಿ ಬಿಟ್ಟಿರುವುದು, ಧನುರ್ ಮಾಸದ ದೀಪಕ್ಕಾಗಿ ವೈಶ್ಯ ವೃತ್ತಿಯನ್ನು ಬಿಟ್ಟಿರುವ ವಿಷಯಗಳು ವಿಶೇಷವೆನಿಸುತ್ತದೆ.

ಕ್ರಿ.ಶ. ೧೬-೧೭ರಲ್ಲಿ ಆಚರಸರು ಹನುಮಂತೇಶ್ವರ ದೇವರ ದಧ್ಯಾನ್ನಕ್ಕಾಗಿ ಕಾಲುವೆ ಗದ್ದೆ ಸಿರಿದೇವಿ ಬಳಿಯ ಹಳ್ಳದಲ್ಲಿ ೧ ಖಂಡುಗ ಗದ್ದೆ ಕ್ರಯಕ್ಕೆ ಕೊಂಡು ಸ್ವಾಮಿಗೆ ಅರ್ಪಿಸಿರುವ ವಿಷಯ ವಿಶೇಷವೆನಿಸುತ್ತದೆ (ತಿ.ನ.ಶಾ.ಸಂ. ೫೬).

**೩) ಕೈಲಾಸದೇವರಿಗೆ**

ಬನ್ನೂರು (ವಹ್ನಿಪುರ) ಭಾರದ್ವಾಜ ಗೋತ್ರದ ರುಕ್ಶಾಖಾಧ್ಯಾಯಿಗಳಾದ ಚಿಕ್ಕಲಿಂಗರಸರ ಮಕ್ಕಳು 'ಕಪಿನಿ' ಎಂಬಾತನು ತಮ್ಮ ಮನೆತನದ ಹಿರಿಯರಿಗೆ ಎಲ್ಲವೂ ಒಳ್ಳೆಯದಾಗಲೆಂದು ತಮಗೆ ಸರ್ವಮಾನ್ಯವಾಗಿ ಬಂದಿರುವ 'ಗುಂಡ ಸಮುದ್ರ'ದ ತಟಾಕವನ್ನು ಹಿರಣ್ಯೋದಕ ದಾನವಾಗಿ ಕೈಲಾಸದೇವರಿಗೆ ಬಿಟ್ಟಿದ್ದಾರೆ ಎಂಬ ವಿಷಯ ಕ್ರಿ.ಶ. ೧೫೫೩ರ ತಿ.ನ.ಶಾ.ಸಂ. ೪೫ರಿಂದ ತಿಳಿಯುತ್ತದೆ.

**೪) ರಘುಪತಿಸ್ವಾಮಿ/ರಾಮಚಂದ್ರ ದೇವರಿಗೆ**

ಕ್ರಿ.ಶ. ೧೬೧೫ ತಿ.ನ.ಶಾ.ಸಂ. ೫೦ರಲ್ಲಿ ವೆಂಕಟಪತಿ ದೇವ ಮಹಾರಾಯ ವಹ್ನಿಪುರದ ರಾಮಚಂದ್ರದೇವರಿಗೆ ಅರ್ಚನೆ, ಅಂಗ, ರಂಗ ವೈಭೋಗ ಪಡಿತರಕ್ಕೆ ಮತ್ತು ಮೈಸೂರಿನ ಚಾಮರಸ ಒಡೆಯರ ಮಕ್ಕಳು ಹಾಗೂ ದೇವರಾಜ ವಡೇರು 'ರಘುಪತಿಸ್ವಾಮಿಗೆ' ಬನ್ನೂರು ಬಳಿ ತಮಗೆ ಹಿಂದಿನಿಂದಲೂ ಉಂಬಳಿಯಾಗಿ ಬಂದಿರುವ 'ಬೇವಿನಹಳ್ಳಿ' ಗ್ರಾಮವನ್ನು ಅರ್ಪಿಸಿದ್ದಾರೆ.

ಮೇಲೆ ಹೇಳಿದ ದಾನಗಳಷ್ಟೇ ಅಲ್ಲದೆ ಭಟವೃತ್ತಿಗಾಗಿ ಚಾವಯ್ಯ ಎಂಬಾತನು ಭೂಮಿದಾನವನ್ನು ನೀಡಿರುವ ವಿಷಯ ಕ್ರಿ.ಶ. ೯ನೆಯ ಶತಮಾನದ ತಿ.ನ.ಶಾ.ಸಂ. ೪೭ ರಿಂದ ತಿಳಿಯುತ್ತದೆ. ಇಲ್ಲಿನ 'ಭಟವೃತ್ತಿ' ದಾನವು ದಾನಗಳಲ್ಲಿ ಒಂದು ವಿಶೇಷ ದಾನ ಎನಿಸುತ್ತದೆ.

ಬನ್ನೂರಿನ ಊರಿನ ಗೌಡರು ಹಾಗೂ ಶಾನುಭೋಗರು ಊರಿನ ಎಲ್ಲಾ ಜನರ ಮುಂದೆ ನಾವಿದರಿಗೆ ತೆರಿಗೆ ವಿನಾಯತಿ ನೀಡಿರುವ ವಿಷಯವನ್ನು ಪ್ರಸ್ತಾಪಿಸಿ ಇದನ್ನು ತಪ್ಪಿಸಿದವರು ನಾಯಿಮಾಂಸ ತಿನ್ನುತ್ತಾರೆ ಹಾಗೂ ಈ ಶಾಸನವನ್ನು ಹಾಳು ಮಾಡಿದವರು ನಾವಿದರ ಮಕ್ಕಳಾಗಿ ಹುಟ್ಟುತ್ತಾರೆ ಎನ್ನುವ ವಿಶೇಷವಾದ ಶಾಪಾಶಯ ಕ್ರಿ.ಶ. ೧೬ನೆಯ ಶತಮಾನದ ತಿ.ನ.ಶಾ.ಸಂ. ೫೧ರಲ್ಲಿ ಸಿಗುತ್ತದೆ.

ಸಾರ್ವಜನಿಕರಿಂದ ಸ್ವಾಮಿಗೆ ಕಾಣಿಕೆ ಮುಖಾಂತರ ಅರ್ಪಿಸಲ್ಪಟ್ಟ ಕಾಣಿಕೆಗಳು ಅಂದರೆ, ಅವು ಎಣ್ಣೆ, ಅಕ್ಕಿ, ತುಪ್ಪ, ಚಿನ್ನ ಹೀಗೆ ಯಾವುದೇ ರೂಪದಲ್ಲಿದ್ದರೂ ಅದು ದೇವರ ಖಜಾನೆಗೇ ಸೇರಬೇಕೆಂದು ಇದನ್ನು ತಪ್ಪಿಸಿದವರಿಗೆ ೨ ಕೊಳಗ ಭತ್ತ ದಂಡದ ರೂಪದಲ್ಲಿ ಕೊಡಬೇಕೆಂದು ಕ್ರಿ.ಶ. ೧೦ನೆಯ ಶತಮಾನದ ತಿ.ನ.ಶಾ.ಸಂ. ೫೯ರಲ್ಲಿ ಹೇಳಲ್ಪಟಿದೆ. ಇದೊಂದು ಕುತೂಹಲಕಾರಿಯಾದ ವಿಷಯ ವಾಗಿದೆ.

ಕ್ರಿ.ಶ. ೧೧ನೆಯ ಶತಮಾನದ ತಿ.ನ.ಶಾ.ಸಂ. ೭೦ರಲ್ಲಿ ವಣ್ಣಿಯೂರಿನಲ್ಲಿ ಬಂಗಾರ ದಾನವನ್ನು ನೀಡಿರುವ ವಿಷಯ, ಕಾಲಭಟ್ಟರಸನ ಮಗನಿಂದ (ಇಲ್ಲಿ ಮಗನ ಹೆಸರಿಲ್ಲ) ಪೆರುವಣ್ಣೆಯೂರಿನಲ್ಲಿ ಕೊಂಡ ಜಮೀನನ್ನು, ಆಹಾರ ದಾನ್ಯವನ್ನು ಕೊಳ್ಳುವುದಕ್ಕಾಗಿ ಬಿಟ್ಟಿರುವ ವಿಷಯಗಳು ವಿಶೇಷವಾಗಿವೆ.

ಇಷ್ಟೇ ಅಲ್ಲದೆ ತಿ.ನ.ಶಾ.ಸಂ. ೫೭ರಲ್ಲಿ ಕ್ರಿ.ಶ. ೧೦ನೆಯ ಶತಮಾನದಲ್ಲಿ ಚೋಳರ ಒಂದನೆಯ ರಾಜ ರಾಜ ಆಳುತ್ತಿದ್ದ ಕಾಲದಲ್ಲಿ ಎಲ್ಲರಿಗೂ ಒಳ್ಳೆಯದಾಗಲೆಂದು ಕಂದಲೂರು ಸಲ್ಯೆ, ಕೊಡಗು, ಮಲೆನಾಡು, ಕೊಲ್ಲಾಲಂ, ಕಳಿಂಗಂ, ಮಾದನ ಮಂಗಲಂಗಳ ವಡೆಯನ್ ದೇವಸ್ಥಾನದ ಉತ್ತರಕ್ಕಿರುವ ೩ ಖಂಡಗ ಗದ್ದೆ ಮತ್ತು ಕೆರೆ ಬಿಟ್ಟಿರುವುದು ತಿಳಿಯುತ್ತದೆ.

ಈ ಮೇಲಿನ ವಿಷಯಗಳನ್ನೆಲ್ಲಾ ಕ್ರೋಡೀಕರಿಸಿ ಹೇಳುವುದಾದರೆ 'ಬನ್ನೂರು' ಶಾಸನಗಳ ಹಿನ್ನೆಲೆಯ ಅಧ್ಯಯನದಿಂದ ಒಂದು ಒಳ್ಳೆಯ ರಾಜಕೀಯ, ಧಾರ್ಮಿಕ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ.

[ಈ ಲೇಖನದಲ್ಲಿ ಬಳಸಿರುವ ಶಾಸನ ಸಂಖ್ಯೆಗಳು, ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೫-(ಪರಿಷ್ಕೃತ), ತಿ. ನರಸೀಪುರ ತಾಲ್ಲೂಕಿನದಾಗಿರುತ್ತದೆ. ಈ ಲೇಖನ ಬರೆಯುವಾಗ ಕೆಲವು ಸಲಹೆ, ಸೂಚನೆಗಳಿತ್ತ ಆತ್ಮೀಯರಾದ ಸುಂಕಂ ಗೋವರ್ಧನ್ ಅವರಿಗೆ ನನ್ನ ವಂದನೆಗಳು.]





# ಗದಗ ಜಿಲ್ಲೆಯ ಶಾಸನೋಕ್ತ ಅಗ್ರಹಾರಗಳು

ಶಂಕ್ರಪ್ಪ ಎಂ. ಬಡಿಗೇರ*

ಗದಗ ಜಿಲ್ಲೆಯ ೧೯೯೭ರಲ್ಲಿ ಧಾರವಾಡ ಜಿಲ್ಲೆಯಿಂದ ವಿಭಜಿತಗೊಂಡು ಹೊಡ ಜಿಲ್ಲೆಯಾಗಿ ರಚನೆಗೊಂಡಿತು. ಪ್ರಸ್ತುತ ಈ ಜಿಲ್ಲೆಯಲ್ಲಿ ಗದಗ, ನರಗುಂದ, ಮುಂಡರಗಿ, ರೋಣ ಮತ್ತು ಶಿರಹಟ್ಟಿ ಎಂಬ ಐದು ತಾಲ್ಲೂಕುಗಳಿವೆ.

ಪ್ರಾಚೀನ ಕಾಲದಲ್ಲಿ ಗದಗ ಪ್ರಮುಖ ಅಗ್ರಹಾರವಾಗಿತ್ತು. ವಿಶೇಷವಾಗಿ ರಾಷ್ಟ್ರಕೂಟರ ಹಾಗೂ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಪ್ರಮುಖ ವಿದ್ಯಾಕೇಂದ್ರ ವಾಗಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ. ೧೨೧೩ರ ಶಾಸನದಲ್ಲಿ "ಅಸ್ತಿ ದಕ್ಷಿಣಾಪಥೆ ಬೆಳ್ವಲ ತ್ರಿಶತಮಧ್ಯೆ ಕೃತುಕೋನಾಮ ಮಹಾಅಗ್ರಹಾರ" ಎಂದು ಪ್ರಸ್ತಾಪವಿದೆ. ಶಾಸನದಲ್ಲಿ ಕೃತಕ ಎಂದರೆ ಈಗಿನ ಗದಗ. ಇದು ಬೆಳ್ವಲನಾಡಿನ ದೊಡ್ಡ ಅಗ್ರಹಾರವಾಗಿತ್ತು. ಪಾಂಡವಕುಲ ರಾಜನಾದ ಜನಮೇಜಯ ಇಲ್ಲಿನ ಎಪ್ಪತ್ತೆರಡು ಜನ ಬ್ರಾಹ್ಮಣರಿಗೆ ಭೂಮಿ, ಮನೆ, ಹೂದೋಟ ಹಾಗೂ ೭೩೮ ಗದ್ಯಾಣವನ್ನು ದಾನಕೊಟ್ಟ ಬಗ್ಗೆ ತಿಳಿದುಬರುತ್ತದೆ.[೧] ಇದೇ ಶಾಸನದ ೩೬ ಹಾಗೂ ೩೯ ಸಾಲಿನಲ್ಲಿ "ಶ್ರೀಮದ್‌ಗ್ರಹಾರ ಗದುಗು" ಎಂಬ ಉಲ್ಲೇಖವಾಗಿದೆ. ಸತ್ಯಾಶ್ರಯ ಇರವಬಿಡಂಗನ ಕ್ರಿ.ಶ. ೧೦೦೮ರ ಶಾಸನದಲ್ಲಿರುವ 'ಬೆಳ್ವಲ ೩೦ ಬಳಿಯ ಅಗ್ರಹಾರ 'ಕದ್ದುಗೆ (ನೊಳು) ಚಕ್ರವರ್ತಿಯ ಪೆರ್ಗ್ಗಡೆ' ಎಂಬ ಉಲ್ಲೇಖವು ಗದಗ ಅಗ್ರಹಾರವಾಗಿತ್ತೆಂದು ಸೂಚಿಸುವದು.[೨] ಗದಗ ಅಗ್ರಹಾರವು ಲಕ್ಕುಂಡಿ ಅಗ್ರಹಾರಕ್ಕಿಂತ ಚಿಕ್ಕದಾಗಿದ್ದರೂ ಇಲ್ಲಿನ ಮಹಾಜನರ ಪಾಂಡಿತ್ಯವನ್ನು ನೋಡಿದಾಗ ಇದು ಪ್ರಮುಖ ಅಗ್ರಹಾರವಾಗಿತ್ತೆಂದು ತಿಳಿಸುವುದು. ಇವರು ತ್ರಿಕೂಟೇಶ್ವರ ಹಾಗೂ ವೀರನಾರಾಯಣ ದೇವರ ಪಾದಪದ್ಮ ರಾಧಕರೆಂದು ಹೇಳಿಕೊಂಡಿದ್ದಾರೆ. ಇವರು ಕೇವಲ ವೇದಾಧ್ಯಯನ ಮಾಡುವದಷ್ಟೆ ಅಲ್ಲದೇ ಅದನ್ನು ಬೋಧಿಸುವುದರಲ್ಲಿ ನಿಪುಣರಾಗಿದ್ದರು. ಹೀಗೆ ಗದಗ ಕ್ರಿ.ಶ. ೯ನೇ ಶತಮಾನದಿಂದ ೧೨ನೇ ಶತಮಾನದವರೆಗೂ ಮಹಾ ಅಗ್ರಹಾರವಾಗಿತ್ತೆಂದು ಕಂಡುಬರುತ್ತದೆ.

**ಬೆಟಗೇರಿ :** ಗದಗ ನಗರಕ್ಕೆ ಹೊಂದಿಕೊಂಡಿರುವ ಬೆಟಗೇರಿ ಪ್ರಾಚೀನ ಕಾಲದಲ್ಲಿ ಮಹಾ ಅಗ್ರಹಾರವಾಗಿತ್ತು. ಇಲ್ಲಿ ೨೦೦ ಬ್ರಾಹ್ಮಣರಿದ್ದರೆಂದು ತಿಳಿಯುವುದು. ಇಲ್ಲಿನ ಮಹಾಜನರನ್ನು ಶಾಸನದಲ್ಲಿ "ಸತ್ಯಭಾಗಮ ಕುಶಲರ್ವೇದ ವೇದಾಂತ ಸಿದ್ಧಾಂತಾಗಮ ತರ್ಕವಾದ ವ್ಯಾಕರಣಾದಿ ಸರ್ವ ಶಾಸ್ತ್ರ ಪೂರ್ಣತಃ ಸಭಾ ಶೋಭಿತರ್ವಾಪ್ರಜನ ಪೂಜಿತ ನಿತ್ಯಕರ್ಮಾಥಿದಿಯ ಭಾಗ್ಯತ ದೇವತಾ ಸಂತರ್ಪಿತರ್- ಸಕಲ ಕಲಾಗಮಕುಶಲ ಜ್ಞಾನ ಪರಿಪೂರ್ಣರ್" ಎಂದು ಕರೆಯಲಾಗಿದೆ.[೩]

**ಹೊಂಬಳ :** ಗದಗನಿಂದ ಉತ್ತರಕ್ಕೆ ೧೨ ಕಿ.ಮೀ. ದೂರದಲ್ಲಿದೆ. ೧೧೮೯ರ ನಾಲ್ಕನೇ ಸೋಮೇಶ್ವರನ ಶಾಸನದಿಂದ ಇದು ಒಂದು ಮಹಾಅಗ್ರಹಾರವಾಗಿತ್ತೆಂದು ತಿಳಿದುಬರುತ್ತದೆ.

"ವಸುಧೆಗೆ ಭೋರಿಭೋಧರ್‌ಪಯೋಧರೆಗುಜ್ಜಳ ದೇದರ್ಗಿಕಾವಸನೆಗೆಕುಂತಲಾ ಕೃತಿಯೆ ನಿರ್ಪ್ಪದು ಕುಂತಳ ದೇಶದಲ್ಲಿ ಶೋಭಿಸುವುದು. ಬೆಳ್ವಲಂ ತಿಳಕದಂತರೊಳ್ಕೆ ಮನೀಯಾಕಾನ್ತಿಯೆಂಸದು ಮಹಾಅಗ್ರಹಾರಮೆನಿಸಿರ್ಪ್ಪದು ಪೊಂಬಳಲೋರ್ಜ್ಜಿ ತೋರ್ಜ್ಜಿತಂ ಅದು ಚೆಲ್ವೆನ ನೆಲೆನಿಸಿರ್ಪ್ಪದು ಮುಂನಂನೋಳ್ಪಜನಕೆ ಬಳಕಿರ್ಪ್ಪಜನರ್ಕದು ಸುಖದಕರಮೆನಸಿರ್ಪ್ಪದು ಪೊಂಬಳ ಅಗ್ರಹಾರ ಚೂಡಾರತ್ನಂ" ಎಂದು ಶಾಸನದಲ್ಲಿ ಉಲ್ಲೇಖಿತಗೊಂಡಿದೆ.[೪] ಇಲ್ಲಿನ ೧೨೦ ಮಹಾಜನರಿಗೆ ಸ್ಥಳೀಯ ಕಲಾವಿದರು, ಅರವತ್ತೊಕ್ಕಲುದವರು ಮತ್ತು ವ್ಯಾಪಾರಿಗಳು ಅನೇಕ ದಾನ ದತ್ತಿ ನೀಡಿದರೆಂದು ತಿಳಿಸುವುದು. ಮತ್ತೊಂದು ಶಾಸನದಲ್ಲಿ ಹೊಂಬಳದ ಅಗ್ರಹಾರದಲ್ಲಿ ವೇದ, ವೇದಾಂಗ, ನ್ಯಾಯಶಾಸ್ತ್ರ, ಮೀಮಾಂಸೆ, ಆಗಮ ಮುಂತಾದ ವಿಷಯಗಳಲ್ಲಿ ಪರಿಣಿತರಾದ ೧೨೦ ಮಹಾಜನರಿದ್ದರೆಂದು ಈ ಶಾಸನದಿಂದ ಕಂಡುಬರುವುದು.

**ಕುರ್ತಕೋಟಿ :** ಗದಗ ತಾಲ್ಲೂಕಿನ ಕುರ್ತಕೋಟಿಯು ಗದುಗಿನಿಂದ ನೈಋತ್ಯಕ್ಕೆ ೧೬ ಕಿ.ಮೀ. ದೂರದಲ್ಲಿದೆ. ಕ್ರಿ.ಶ.

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಪುರಾತತ್ತ್ವ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩೨೭೬.

೧೦೮೨ರ ಶಾಸನದಲ್ಲಿ 'ಶ್ರೀಮದ್‌ಗ್ರಹಾರ ಕುರ್ತಕೊಂಟೆ' ಎಂದು ಪ್ರಸ್ತಾಪ ಬಂದಿದೆ.[೫] ಇದರಿಂದ ಇದು ಈ ನಾಡಿನ ಪ್ರಮುಖ ಅಗ್ರಹಾರವಾಗಿತ್ತೆಂದೇ ತೋರುತ್ತದೆ. ಇಲ್ಲಿಯ ಬ್ರಾಹ್ಮಣರು ಸಕಲ ಶಾಸ್ತ್ರಗಳಲ್ಲಿ ಪಾರಂಗತರಾಗಿ ಗುಣಳಂಕೃತ ರಾಗಿದ್ದರು. ಯಮನಿಯಮ ಸ್ವಾದ್ಯಾಯಧ್ಯಾನ ಧಾರಣರಾದ ಷಟ್ಕರ್ಮನಿಷ್ಟನಿರತರ ಮೌನಾನುಷ್ಠಾನ ಪರಾಯನರಾದ ಸಪ್ತಸೋಮ ಸಂಸ್ಥಾಭದ್ರಾವಗಾಹನ ಪವಿತ್ರಕೃತ ಶರೀರಾದ ಪರಮ ಉಪಕಾರಿಗಳು ಆಶ್ರೀತಜನಕಲ್ಪವೃಕ್ಷಕರು ಏಕವಾಕ್ಯರು ದುಷ್ಟನಿಗ್ರಹಿಗಳು ಸೃಷ್ಟಪ್ರತಿಪಾಲಕರು ಆದ ೨೦೦ ಮಹಾಜನರಿದ್ದರೆಂದು ತಿಳಿದುಬರುತ್ತದೆ.[೬]

ಇನ್ನೊಂದು ಶಾಸನದಲ್ಲಿ ಕುರ್ತಕೋಟಿಯು ಮಹಾ ಅಗ್ರಹಾರವಾಗಿತ್ತೆಂದು ಪ್ರಸ್ತಾಪವಿದೆ. ಇಲ್ಲಿನ ಮಹಾಜನರಲ್ಲಿ ಪಿಟ್ಟಿಯಬಟ್ಟನನ್ನು ವಿಶೇಷವಾಗಿ ವರ್ಣಿಸಲಾಗಿದೆ. ಭೂಮಿಯ ಮೇಲೆ ಇವನ ಸಮಾನರು ಇಲ್ಲವೆಂದು, ತನ್ನ ಗೋತ್ರವೆಂಬ ಆಕಾಶಕ್ಕೆ ಚಂದ್ರನಂತೆ, ಉದಾರಿಯಾದ ಚತುರ್ವೇದ ವೇದಾಂಗ ವಿಶಾರದನಾದ ಪಿಟ್ಟಿಯಬಟ್ಟನು ಬ್ರಾಹ್ಮಣರ ವಂಶವೆಂಬ ಸಮುದ್ರಕ್ಕೆ ಚಂದ್ರನಂತಿದ್ದನೆಂದು ಶಾಸನ ವರ್ಣಿಸಿದೆ.[೭] ಪಿಟ್ಟಿಯಬಟ್ಟನ ಮಗ ನಾಗವರ್ಮ, ಇವನ ಹೆಂಡತಿ ಚಾವುಂಡಕಬ್ಬೆ, ಇವರ ಮಗ ಎರಗ ಹೀಗೆ ಇವರ ವಂಶಾವಳಿ ಶಾಸನದಲ್ಲಿ ಸ್ಪಷ್ಟವಾಗಿದೆ. ಎರಗನು ಸಾಮಾಜಿಕ ಕಾರ್ಯಗಳಾದ ಕೆರೆ, ಬಾವಿ ಅರವಟ್ಟಿಗೆಗಳನ್ನು ನಿರ್ಮಿಸಿದ್ದನು. ಇವನು ಎರ್ಮ್ಮಗನೂರು ಕುರಿಪಟ್ಟಿಯಲ್ಲಿ ವಿಷ್ಣುದೇವಾಲಯ ವನ್ನು ನಿರ್ಮಿಸಿದನು. ಇವುಗಳನ್ನು ರಕ್ಷಿಸುವ ಹೊಣೆ ಕುರ್ತಕೋಟಿಯ ಅಗ್ರಹಾರದ ಮಹಾಜನದ್ದಾಗಿತ್ತೆಂದು ಶಾಸನದಿಂದ ತಿಳಿದುಬರುವದು.[೮]

**ಯಳವತ್ತಿ :** ಗದಗದಿಂದ ದಕ್ಷಿಣಕ್ಕೆ ೨೯ ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ಇದನ್ನು "ಶ್ರೀಮನುಮಹಾಗ್ರಾಮಂ ರಾಮಸ್ವಾಮಿಯದತ್ತಿಯ ಅಗ್ರಹಾರ ಯಳವತ್ತಿಯ ಮಹಾಜನ ನೂರಿಪ್ಪತ್ ದಿಂಬರ್‌ನೆಸೆಸುವ ಅಗ್ರಹಾರ ಶಿಖಾಮಣಿ ನಿವಾಸಂಜಗಂನಿವಾಸಂ" ಎಂದು ಬಣ್ಣಿಸಿದೆ.[೯] ಈ ಅಗ್ರಹಾರವನ್ನು ೧೨೨ ಮಹಾಜನಗಳಿಂದ ಶೋಭಿಸುವ 'ಅಗ್ರಹಾರ ಶಿಖಾಮಣಿ' ಎಂದು ಕರೆಯುತ್ತಿದ್ದರು. ಇಲ್ಲಿಯ ಬ್ರಾಹ್ಮಣರು ಸಕಲಸ್ವಾಧ್ಯಾಯಯುಕ್ತರಾಗಿದ್ದರು. (ಸ್ವಾಧ್ಯಾಯ ಆರ್ಯ ಷಟ್‌ಕರ್ಮಗಳಲ್ಲಿ ಒಂದು ಆಗಮ ವಿಷಯವನ್ನು ಓದಿ ಕೇಳಿ ಮನನಮಾಡಿ ಧ್ಯಾನಿಸುವುದು. ಇದರಲ್ಲಿ ೧) ವಾಚನ, ೨) ಪೃಚ್ಛನ, ೩) ಅನುಪೇಕ್ಷೆ, ೪) ಆಮ್ನಾಯ, ೫) ಧರ್ಮೋಪದೇಶ ಎಂಬ ಐದು ಅಂಶಗಳಿವೆ).[೧೦] ಕಲಿಯುವ ಪ್ರಭಾವಕ್ಕೆ ಒಳಗಾದರವರಾಗಿದ್ದರು. ಶಬ್ದಶಾಸ್ತ್ರ ಮೊದಲಾದ ಶಾಸ್ತ್ರ ವಿಷಯಗಳಲ್ಲಿ ಪರಿಣಿತರಾಗಿದ್ದರು.

ಇಲ್ಲಿಯ ಮಹಾಜನಗಳ ಸುರೀಕುಲಾನ್ವಯದಲ್ಲಿ ಹುಟ್ಟಿದ ದಾಸಿಮಯ್ಯನು ಗುಣಪ್ರವರ ಎನಿಸಿದ್ದನು. ಆತನ ಹೆಂಡತಿ ಚಂದಿಕವ್ವೆ, ಈ ದಂಪತಿಗಳ ಮಗ ಸುಯಿಮಯ್ಯ. ಈತನ ಹೆಂಡತಿ ಮಾರಿಕವ್ವೆ ಈಕೆ ನಿಜಗೋತ್ರಧಾರೆ. ಈ ದಂಪತಿಗಳಿಗೆ ಶಂಕರನೆಂಬ ಮಗನಿದ್ದನು. ಹೀಗೆ ಇವರ ವಂಶಾವಳಿಯು ಶಾಸನಗಳಿಂದ ದೊರೆಯುತ್ತದೆ.[೧೧]

ಈ ಅಗ್ರಹಾರದ ಬ್ರಾಹ್ಮಣರು ಪವಿತ್ರೀಕೃತಶರೀರವುಳ್ಳವ ರಾಗಿದ್ದರು. ಏಕವಾಕ್ಯಾರೂ, ಧರ್ಮವಿಚಾರ ಪ್ರತಿಪಾಲಕರು ಎನಿಸಿದ್ದರು. ಯಳವತ್ತಿಯ ಗುಂಡೇಶ್ವರ ದೇವರ ಪುಷ್ಕರಣಿಗಾಗಿ ಇಲ್ಲಿಯ ೧೨೨ ಮಹಾಜನಗಳಿಗೆ ಶಿವನಬಿಲ್ಲಯ್ಯನು ಮೂರು ಮತ್ತರು ಭೂಮಿದಾನ ಕೊಟ್ಟನೆಂದು ಶಾಸನದಲ್ಲಿ ಉಲ್ಲೇಖಗೊಂಡಿದೆ.[೧೨]

**ನೀಲಗುಂದ :** ಗದಗದಿಂದ ನೈಋತ್ಯಕ್ಕೆ ೨೦ ಕಿ.ಮೀ. ದೂರದಲ್ಲಿದೆ. ಶಾಸನಗಳಲ್ಲಿ ಈ ಊರು 'ನೀರ್ಗುಂದ' ಎಂದು ಉಲ್ಲೇಖಗೊಂಡಿದೆ. ಇದು ಬೆಳ್ವಲ ಮುನ್ನೂರರ, ಮುಳಗುಂದ ೧೨ಕ್ಕೆ ಸೇರಿದ್ದಿರಬೇಕು. ಕ್ರಿ.ಶ. ೮೬೬ರ ನೀಲಗುಂದ ಶಾಸನದಲ್ಲಿ "ಶ್ರೀಮದನಾದಿಯಗ್ರಹಾರಂ" ಎಂದು ಕರೆದಿದೆ.[೧೩] ಇದು ಗದಗ ಜಿಲ್ಲೆಯ ಪ್ರಾಚೀನ ಅಗ್ರಹಾರವಾಗಿದೆ. ಇಲ್ಲಿಯ ಬ್ರಾಹ್ಮಣರನ್ನು 'ಮಹಾಜನರು ನೂರಿಪ್ಪತಿರ್ಬರ್'ವೆನಿಸುವ ಎಂದು ಕರೆಯಲಾಗಿದೆ. ಇದರಿಂದ ಈ ಅಗ್ರಹಾರದಲ್ಲಿ ೧೨೨ ಮಹಾಜನಗಳಿದ್ದ ರೆಂದು ಕಂಡುಬರುವುದು. ಕ್ರಿ.ಶ. ೧೧೦೮ರ ಶಾಸನದಲ್ಲಿ ಇಲ್ಲಿಯ ಮಹಾಜನಗಳು ವೇದಶಾಸ್ತ್ರ ಪಾರಂಗತರು, ಉಮಾವಲ್ಲಭಪ್ರಜಾನಿರತರು, ಉಲ್ಲಸದರು, ವಿಚಾರಕರು ಆಗಿದ್ದರು ಎಂದು ಬಣ್ಣಿಸಿದೆ.[೧೪] ಇಲ್ಲಿ ವಿದ್ಯಾಮೂರ್ತಿ ಸಾಮಚಿಂತಾಮಣಿ, ತೇಜೋಮಯ ಅಮಳಕೀರ್ತಿಯಿಂದ ಮಹಾಮಹಿಮನಾಗಿದ್ದ ವ್ಯಕ್ತಿಯೊಬ್ಬನ ಹೆಸರನ್ನು ವಿದ್ಯಾಮೂರ್ತಿ ಎಂದು ಶಾಸನ ಉಲ್ಲೇಖಿಸಿದೆ. ಈ ಹೆಸರಿನ ಭಾಗದ ಶಾಸನ ಒಡೆದುಹೋಗಿದ್ದರಿಂದ ಆ ವ್ಯಕ್ತಿಯ ಹೆಸರು ಲವರ್ಮ್ಮಯ್ಯ ಎಂದು ಅಪೂರ್ಣವಾಗಿ ಕಂಡುಬರುತ್ತದೆ.[೧೫] ನೀಲಗುಂದದ ಈ ಮಹಾಜನಗಳ ಎದುರಿಗೆ ಹೋರಾಡಿ ಸತ್ತ ಆಮ್ಮಣಿಕ ನೆನಪಿಗೆ ಒಂದು ವೀರಗಲ್ಲು ನಿಲ್ಲಿಸಿದೆ.[೧೬] ಈ ಅಗ್ರಹಾರದ ಮಹಾಜನಗಳಿಗೆ ನೀಲಗುಂದ ಊರೊಡೆಯ ತಿಲಕರಸನ ಸುಪುತ್ರ ನಾಚರಸನು ದಾನ ಕೊಟ್ಟನು.

ವೀರಬಲ್ಲಾಳನ ದ್ವಿತೀಯ ಪುತ್ರ ಚಿಕ್ಕನರಸಿಂಗಯ್ಯನು ನೀಲಗುಂದದ ಸ್ವಯಂಭೂ ಕಲಿದೇವರ ಅಂಗಭೋಗ, ನಂದಾದೀವಿಗೆಗೆ ಎರಡು ಮತ್ತರು ಭೂಮಿ ದಾನ ಕೊಟ್ಟನೆಂದು ತಿಳಿಯುತ್ತದೆ. ಈ ದಾನವನ್ನು ಕಾಪಾಡುವ

ಜವಾಬ್ದಾರಿ ಈ ಮಹಾಜನಗಳಿಗಿತ್ತೆಂದು ಅಲ್ಲಿಯ ಕಂಬದ ಮೇಲ್ಪಟ್ಟಿಕೆಯ ಶಾಸನದಲ್ಲಿ ಉಲ್ಲೇಖಿಸಿದೆ.

**ಹೊಸೂರು** : ಗದಗದಿಂದ ಉತ್ತರಕ್ಕೆ ೧೫ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೪೪ರ ಶಾಸನದಿಂದ ಇಲ್ಲಿ ಬ್ರಾಹ್ಮಣರು ನೆಲೆಸಿದ್ದರೆಂದು ತಿಳಿದುಬರುತ್ತದೆ. ಈ ಶಾಸನ ಮಹಾಜನ ಏಳುನೂರು ಎಂದು ಕರೆದಿದೆ. ಇಲ್ಲಿಯ ಧರ್ಮಪಾರವರು ಪುಣ್ಯ ಬೀಜವನ್ನು ನಿರಂತರವಾಗಿ ಶೋಭಿಸುವ ಬೆಳೆಸಿರಿಯನ್ನು ಈ ೭೦೦ ಕೃತ ಕರ್ತ್ಯರಾಗಿದ್ದ ರೆಂದು ಹೇಳಿದೆ. ಇವರು ಲೋಕದ ಜನರ ಹೊಗಳಿಕೆಗೆ ಪಾತ್ರರಾಗಿದ್ದರು. ಈ ಬ್ರಾಹ್ಮಣರು ಮಾಡಿದ ಮಹತ್ಕಾರ್ಯ ವೆಂದರೆ ಹೊಸೂರಿನಲ್ಲಿ ಇಂದ್ರಚಕ್ರಾದಿವ್ಯ ಗಂಧರ್ವ ಭವನಗಳನ್ನು ಹೋಲುವಂತಹ 'ಮೂಲಸ್ಥಾನೇಶ್ವರ ಭವನ' ವನ್ನು ಕಟ್ಟಿಸಿದರೆಂದು ತಿಳಿದುಬರುತ್ತದೆ. ಹೊಸೂರಿನ ಪ್ರಭುಗಾವುಂಡನು ಈ ಮೂಲಸ್ಥಾನದೇವರಿಗೆ ಅಡಿಕೆ ತೋಟ ದಾನ ಕೊಡುವಾಗ ಈ ಊರಿನ ೭೦೦ ಬ್ರಾಹ್ಮಣರು ಉಪಸ್ಥಿತರಿದ್ದರೆಂದು ಈ ಶಾಸನ ತಿಳಿಸುತ್ತದೆ.[೧೭]

**ಲಕ್ಕುಂಡಿ** : ಗದಗದಿಂದ ೧೧ ಕಿ.ಮೀ. ದೂರದಲ್ಲಿದೆ. ಕರ್ನಾಟಕದಲ್ಲಿ ಅತ್ಯಂತ ಗಣ್ಯ ಐತಿಹಾಸಿಕ ಕೇಂದ್ರಗಳಲ್ಲಿ ಒಂದಾಗಿದೆ. ಪೌರಾಣಿಕವಾಗಿ ಶ್ರೀರಾಮನು ಲಕ್ಕುಂಡಿಯನ್ನು ಅಗ್ರಹಾರವನ್ನಾಗಿ ಕೊಟ್ಟನೆಂಬ ನಂಬಿಕೆಯಿಂದ ಈ ಊರಿನ ಶಾಸನಗಳ 'ಶ್ರೀರಾಮದತ್ತಿಗ್ರಹಾರ' ಎಂಬ ಪದವನ್ನು ಪದೇ ಪದೇ ಬಳಸಲಾಗಿದೆ. ಕ್ರಿ.ಶ. ೧೦೦೭ರ ಶಾಸನದಲ್ಲಿ ಶ್ರೀಮದ್ರಾಮಯಮಮ(ಹಿಂ)ದ್ರದತ್ತ ಹಾಗೂ ೧೨ನೇ ಶತಮಾನದ ಶಾಸನದಲ್ಲಿ (ರಾಮದತ್ತಿ ಮಹಾಗ್ರಾಮಂ ಶ್ರೀಗಳಂ ಸ್ವಧರ್ಮದಿಂ ಸುರಕ್ಷಿತ) ಲೊಕ್ಕಿಗೊಂಡಿಯು ಅಗ್ರಹಾರ ವಾಗಿತ್ತೆಂದು ಉಲ್ಲೇಖವಿದೆ. ದಶರಥ ಕುಲಪುತ್ರ ಶ್ರೀರಾಮನು ಲಕ್ಕುಂಡಿಯನ್ನು ಅಗ್ರಹಾರವನ್ನಾಗಿ ನಿರ್ಮಿಸಿ ಬ್ರಾಹ್ಮಣರಿಗೆ ನೀಡಿದ್ದನು. ಇದನ್ನು ರಾಮದತ್ತಿ ಅಗ್ರಹಾರ, ಶ್ರೀಮದ್ರಮಾಮ ಯೇಂದ್ರದತ್ತ ಅಗ್ರಹಾರ, ದಾಶರಥಿ ದತ್ತ ಅಗ್ರಹಾರ ಎಂಬ ಅರ್ಥಗಳಿಂದ ಸಂಬೋಧಿಸಲಾಗುತ್ತಿತ್ತು. ಲಕ್ಕುಂಡಿಯನ್ನು ಅಗ್ರಹಾರವನ್ನಾಗಿಸಿ ದಾನ ನೀಡಿದ್ದು ಐತಿಹಾಸಿಕವಾಗಿ ಸತ್ಯವೆಂದು ಹೇಳಬಹುದು.

ಒಂದೊಂದು ಕಾಲದಲ್ಲಿ ಒಂದೊಂದು ಅಗ್ರಹಾರಗಳಲ್ಲಿ ವಿಪ್ರ ಪಂಡಿತರು ಪ್ರತಿನಿಧಿಗಳಾಗಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಇವರು ಮಹಾಜನರಾಗಿದ್ದು ಆಯಾ ಗ್ರಾಮಕ್ಕೆ ಅನ್ವಯಿಸುವ ಆಡಳಿತ ಹಾಗೂ ಮೇಲ್ವಿಚಾರಣೆ ಇತ್ಯಾದಿ ಪ್ರಮುಖ ವಿಷಯಗಳಲ್ಲಿ ಭಾಗಿಗಳಾಗಿ ವ್ಯವಹರಿಸು ವದರೊಂದಿಗೆ ವಿದ್ಯಾರ್ಥಿಗಳಿಗೆ, ಶಿಷ್ಯರಿಗೆ ಬೋಧನೆ ಮಾಡುತ್ತಿದ್ದರು. ಮಾಸವಾಡಿ-೧೪೦ರೊಳಗೆ ಸೇರಿದ ಲಕ್ಕುಂಡಿಯ ರಾಜಕೀಯ ಚಟುವಟಿಕೆಗಳ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿತ್ತು. ಅಷ್ಟೇ ಅಲ್ಲದೆ ಬೆಳ್ವಲ-೩೦೦ ನಾಡಿನ ೧೮ ಅಗ್ರಹಾರಗಳಲ್ಲಿ ಒಂದಾಗಿತ್ತು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಲೊಕ್ಕಿಗುಂಡಿಯಲ್ಲಿ ಆಶೇಷ ಮಹಾಜನ, ಮಹಾಜನ ಸಾಸಿರ್ವರ್ ಎಂದು ಹಲವಾರು ಶಾಸನಗಳಲ್ಲಿ ವಿವರಿಸಲ್ಪಟ್ಟಿದೆ. ಶ್ರೀರಾಮಚಂದ್ರ ಸ್ವಾಮಿಯ ಮಹಾಅಗ್ರಹಾರ ವಾಗಿದ್ದ ಲಕ್ಕುಂಡಿಯು ಒಂದು ಪ್ರತಿಷ್ಠಿತ ಶಿಕ್ಷಣ ಕೇಂದ್ರವಾಗಿದ್ದಿತು. ಇಲ್ಲಿ ಅಧ್ಯಯನ, ಅಧ್ಯಾಪನ ಕೈಗೊಂಡು ರಾಜರು, ವರ್ತಕರಿಂದ ದತ್ತಿ ದಾನಗಳನ್ನು ಸ್ವೀಕರಿಸಿ ಅಧ್ಯಯನನಿರತ ವಿದ್ಯಾರ್ಥಿಗಳ ಶಿಕ್ಷಣಕ್ಕಾಗಿ ವಿನಿಯೋಗಿಸು ತ್ತಿದ್ದರು. ವೇದ ವೇದಾಂಗ, ಉಪನಿಷತ್ತು, ವ್ಯಾಕರಣ, ಗಣಿತ ಇನ್ನೂ ಮುಂತಾದ ಅನೇಕ ವಿಷಯಗಳನ್ನು ಬೋಧಿಸುತ್ತಿದ್ದ ರೆಂಬುದು ಇಲ್ಲಿ ದೊರೆತಿರುವ ಶಾಸನಗಳಲ್ಲಿ ಉಲ್ಲೇಖ ಗೊಂಡಿದೆ.[೧೮]

**ಚಿಂಚಲಿ** : ಗದಗ ತಾಲ್ಲೂಕಿನ ಚಿಂಚಲಿಯು ಗದಗದಿಂದ ನೈರುತ್ಯಕ್ಕೆ ೨೩ ಕಿ.ಮೀ. ದೂರದಲ್ಲಿದ್ದು, ಈ ಊರನ್ನು ಪ್ರಾಚೀನ ಶಾಸನಗಳಲ್ಲಿ 'ಸಿಂಚಲ' ಎಂದು ಕರೆಯಲಾಗಿದೆ. ಇದು ಬೆಳ್ವಲ ೩೦೦ಕ್ಕೆ ಸೇರಿದ್ದು, ೫೬ ಮಹಾಜನರನ್ನು ಹೊಂದಿದ್ದ ಅಗ್ರಹಾರವಾಗಿತ್ತು. ಕ್ರಿ.ಶ. ೧೧೮೫ರ ಶಾಸನವು ಶ್ರೀಧರ ದಂಡನಾಯಕ ಮತ್ತು ಅವನ ಮಡದಿ ಚಿಂಚಲ ಕ್ಷೇತ್ರದ ಸ್ವಯಂಭೂ ತೀರ್ಥದ ಮಲ್ಲಿಕಾರ್ಜುನ ದೇವರಿಗೆ ೬ ಮತ್ತರು (ಪಾರ್ವಗೋಲು), ಊರಿನ ೫೬ ಮಹಾಜನರಿಗೆ ೪ ಮತ್ತರು ಭೂಮಿಯನ್ನು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ.[೧೯]

**ರೋಣ** : ರೋಣವು ಗದಗದಿಂದ ೩೮ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೧೧ರ ಶಾಸನವು "ಧರಣಿ ವನಿತೆಯ ಹಾರಂ ರೋಣಗ್ರಹಾರ ಮತಿ ವಿಸ್ತಾರಂ" ಎಂದು ಬಣ್ಣಿಸಿ ಇದು ಒಂದು ದೊಡ್ಡ ಅಗ್ರಹಾರ ಮತ್ತು ವಿದ್ಯಾಕೇಂದ್ರ ವಾಗಿತ್ತೆಂದು ಸ್ಪಷ್ಟಪಡಿಸುತ್ತದೆ.[೨೦]

ಹಂಗ್ಯೆ ಕುಲಕ್ಕೆ ಸೇರಿದ ನಾಗವಿಷ್ಣುಮಯ್ಯ ಎಂಬುವನು ಒಂದು ಸಭಾಮಂಟಪ ಮತ್ತು ಒಂದು ಸತ್ರವನ್ನು ಇಲ್ಲಿಯ ಕಪ್ಪಯಂಗೇರಿಯಲ್ಲಿ ಕಟ್ಟಿಸಿದನು ತಾನು ಕಟ್ಟಿಸಿದ ಸಭಾ ಮಂಟಪ ಹಾಗೂ ವಖ್ಖಣ ಶಾಲೆಗಳ ದೀಪಗಳಿಗಾಗಿ ಎಣ್ಣೆ ದಾನ ಕೊಟ್ಟನು. ನಾಗವಿಷ್ಣುಮಯ್ಯನ ತಮ್ಮ ಸಭಾಮಂಟಪ ಸೊರ್ದರೆಣ್ಗೆಗ್ಯಂ ವಖ್ಖಣ ಶಾಲೆಯ ಸೊರ್ದರೆಣ್ಗೆಗ್ಯಂ ಬಿಟ್ಟು ಗದ್ಯಾಣ ಅರವಟ್ಟಿಗೆ ನಡೆಸುವ ಸಲುವಾಗಿ ೫ ಗದ್ಯಾಣವನ್ನು ಹೈಂಗೈರು ಸಭಾಮಂಟಪದಲ್ಲಿ ವೈದ್ಯಕೀಯ ಶ್ರವಣಕ್ಕೆ, ಧರ್ಮ ಹಾಗೂ ವಖ್ಖಣ ಶಾಲೆಯಲ್ಲಿ ವಖ್ಖಣ ಶಾಸ್ತ್ರವನ್ನು ಅಭ್ಯಾಸ ಮಡಲು ಬಿಟ್ಟು ಗದ್ಯಾಣ ೩೦ ಎಂದು ಶಾಸನಗಳಿಂದ

ತಿಳಿದುಬರುತ್ತದೆ. ತಮ್ಮ ವಖ್ಖಣ ಶಾಲೆಯಲ್ಲಿ ಐಂದ್ರೋತ್ಸವ ಪೂಜೆ ಮಾಡಿ ಸರಸ್ವತೀ ಭೋಜನಕ್ಕೆಂದು ಬಿಟ್ಟ ಗದ್ಯಾಣ ೨೦೦ ಎಂದು ತಿಳಿಸುತ್ತದೆ.[೨೧] ಈ ಮೇಲಿನ ಅಂಶಗಳಿಂದ ರೋಣ ಒಂದು ವಿದ್ಯಾಕೇಂದ್ರವಾಗಿದ್ದು, ಇಲ್ಲಿ ಒಂದು ವಖ್ಖಣ (ಗಣಿತ) ಶಾಲೆ ಇದ್ದು ಈ ಶಾಲೆಯಲ್ಲಿ ವಖ್ಖಣ (ಗಣಿತ) ಶಾಸ್ತ್ರದ ನಡೆಯುತ್ತಿತ್ತೆಂದು ತಿಳಿದುಬರುತ್ತದೆ. ಈ ಶಾಲೆಯಲ್ಲಿ ಇಂದ್ರನಿಗಾಗಿ ನಡೆಯುತ್ತಿದ್ದ ಉತ್ಸವ ಮತ್ತು ಸರಸ್ವತೀ ಭೋಜನವನ್ನು ಕುರಿತು ಹೇಳುತ್ತದೆ. ಕ್ರಿ.ಶ. ೧೧೧೩ರ ಶಾಸನದಲ್ಲಿ ಮಹಾವಿಷ್ಣು ಭಟ್ಟೋಪಾಧ್ಯಯನ ಹೆಸರಿದೆ.[೨೨]

**ನಿಡಗುಂದಿ :** ರೋಣದಿಂದ ೧೧ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೭೪ರ ಶಾಸನದಲ್ಲಿ "ಮಾದವ ದಂಡೇಶನ ವಿನುತಜನಭೂಮಿಯಾ ನಾಡೊಳ್ ಚೆಲ್ವೆನಿಸಿದ ನಿಡಗುಂದಿ ಜಗಜ್ಜನಸ್ತುತ್ಯಾಗ್ರಹಾರ ಚೂಡಾರತ್ನಂ" ಎಂದು ಉಲ್ಲೇಖವಿದೆ.[೨೩] ಈ ಅಗ್ರಹಾರದಲ್ಲಿ ೪೦೦ ಮಹಾಜನರಿದ್ದು, ಇದನ್ನು ಕಲ್ಯಾಣ ಚಾಲುಕ್ಯ ದೊರೆ ಒಂದನೆಯ ಸೋಮೇಶ್ವರನ ಮಗಳಾದ ಸುಗ್ಗಲೆಯು ತನ್ನ ಸಹೋದರ ಎರಡನೆಯ ಸೋಮೇಶ್ವರನ ಆಳ್ವಿಕೆಯಲ್ಲಿ (ಕ್ರಿ.ಶ. ೧೦೭೬) ತ್ರಿಭೋಗಾಭ್ಯಂತರ ಸಿದ್ಧಿಯಿಂದ ಆಳುತ್ತಿದ್ದಳು.

**ಬೆಳವಣಿಕಿ :** ರೋಣದಿಂದ ೧೫ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೦೨ರ ಶಾಸನದಿಂದ ಇದು ಪ್ರಮುಖ ಅಗ್ರಹಾರವಾಗಿತ್ತೆಂದು ತಿಳಿದುಬರುವದು. ಶ್ರೀವಲ್ಲಭದೇವ ಪಾದಾಂಬುಜಾರಾಧನರ್ ನಾಮಾದಿ ಸಮಸ್ತ ಪ್ರಶಸ್ತಿ ಸಹಿತ 'ಶ್ರೀಮದಗ್ರಹಾರಂ ಬೆಳವಣಿಕಿಊರೊಡೆಯ ಶ್ರೀವಿಷ್ಣು ಭಟ್ಟೋಪಾಧ್ಯಾಯ ಪ್ರಮುಖ ಮಹಾಜನರ್‌ರೆಣ್ಣತ್ತಾನಾಲ್ವರ್ ಶ್ರೀಪಾದ ಪದ್ಮೋಪಜೀವಿ' ಎಂದು ಉಲ್ಲೇಖವಿದೆ.[೨೪] ಈ ಶಾಸನದಲ್ಲಿ ೮೪ ಮಹಾಜನರ ವರ್ಣನೆಯನ್ನು ಮಾಡಲಾಗಿದೆ. ಮಹಾವಿಷ್ಣು ಭಟ್ಟೋಪಾಧ್ಯಾಯ, ಪಾದಪದ್ಮೋಪಜೀವಿ ಚಾವುಂಡಿ, ಆತನ ಹೆಂಡತಿ ನಾಸ್ತಿಕಬ್ಬೆಯು ಸಭಾಮಂಟಪಕ್ಕೆ ಭೂದಾನ ಮಾಡಿದಳೆಂದು ಉಲ್ಲೇಖವಿದೆ.

**ಜಕ್ಕಲಿ :** ರೋಣದಿಂದ ೧೪ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೨೦ರ ಶಾಸನದಲ್ಲಿ "ಚತುರ್ವೇದ ಪಾರಗರಪ್ಪ ಶ್ರೀಮದಗ್ರಹಾರ ಜಕ್ಕಲಿಯು ಪ್ರಮುಖ ಮಹಾಜನಂಗಳಿನ್ನೂರ್ವರು" ಎಂದು ಉಲ್ಲೇಖವಿದೆ.[೨೫] ಇಲ್ಲಿಯ ೨೦೦ ಮಹಾಜನರು ಸೋಮೇಶ್ವರ ದೇವರಿಗೆ ನೀಡಿದ ಭೂಮಿದಾನವನ್ನು ಪ್ರತಿಪಾಲಿಸುತ್ತಿದ್ದರೆಂದು ಶಾಸನದಿಂದ ತಿಳಿಯುವದು.

**ಹಿರೇಹಾಳ :** ರೋಣದಿಂದ ೮ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೫೦ರ ಶಾಸನದಲ್ಲಿ "ಶ್ರೀಮದಗ್ರಹಾರಂ ಕಿಸುವಾದಿಯುರೂಡೆಯ. ಪ್ರಮುಖ ಮಹಾಜನ ವೆಣ್ಣೆತ್ತನಾಲ್ವರಂ ಶ್ರೀಮದಗ್ರಹಾರಂ ಹೊಂನೆಯನೂರು ಊರೊಡೆಯ ಶ್ರೀ ಪ್ರಮುಖ ಮಾಹಜನಂಗಳು ನಾಲ್ವತ್ತಿಬ್ಬರ್.[೨೬]" ಎಂದು ಕಿಸುವಾದಿ ಇಂದಿನ ಹಿರೇಹಾಳ ಗ್ರಾಮವಾಗಿದೆ. ಇಲ್ಲಿ ೮೪ ಮಹಾಜನರಿದ್ದರೆಂದು ತಿಳಿದುಬರುತ್ತದೆ. ಇದೇ ಶಾಸನದಲ್ಲಿ ಹೊನ್ನಿಯನೂರು ಅಗ್ರಹಾರದ ೪೨ ಮಹಾಜನರ ವರ್ಣನೆಯಿದೆ. ಈ ಅಗ್ರಹಾರದಲ್ಲಿ ವಿದ್ಯಾಭ್ಯಾಸ ನಡೆಯುತ್ತಿತ್ತೆಂದು ಶಾಸನದಿಂದ ಸ್ಪಷ್ಟವಾಗುವದು. ಹೀಗೆ ಕಿಸುವಾದಿ ಮತ್ತು ಹೊಂನ್ನಿಗನೂರು ಪ್ರಾಚೀನ ಕಾಲದ ಅಗ್ರಹಾರಗಳಾಗಿದ್ದವೆಂದು ಸ್ಪಷ್ಟವಾಗುತ್ತದೆ.

**ಸವಡಿ :** ರೋಣದಿಂದ ೭ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೦೮೩ರ ಶಾಸನದಿಂದ ಇದು ಪ್ರಮುಖ ಅಗ್ರಹಾರವಾಗಿತ್ತೆಂದು ಉಲ್ಲೇಖವಿದೆ. ಇಲ್ಲಿನ ೪೦೦ ಮಹಾಜನರು ಪಂಡಿತರು ಧರ್ಮಾನುಸಕ್ತರಾಗಿದ್ದರು.[೨೭] ಗಂಗರ ಜಾಜಿಮಯ್ಯನು ಚಂದ್ರಭೂಷಣ ಪಂಡಿತರ ಕಾಲನ್ನು ತೊಳೆದು ಬೆಳ್ಳೀರೆಯ ದಕ್ಷಿಣಕ್ಕೆ ೨೪ ಮತ್ತರು ಭೂಮಿಯನ್ನು ಹಾಗೂ ದೇವರ ಪೂಜೆಗೆ ಹೂದೋಟವನ್ನು ದಾನ ನೀಡಿದನು. ಇದನ್ನು ೪೦೦ ಮಹಾಜನರು ಪ್ರತಿಪಾಲಿಸುತ್ತಿದ್ದರು.[೨೮]

**ಕರಮುಡಿ :** ರೋಣದಿಂದ ೮ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನದಲ್ಲಿ "ಶ್ರೀಮತ್‌ಕದಿರ್ಯ್ಮಡಿಯ ಮಹಾಜನೋರ್ವರುಮಂ" ಎಂಬ ಉಲ್ಲೇಖವಿದೆ. ಇದರಿಂದ ೨೦೦ ಮಹಾಜನರನ್ನೊಳಗೊಂಡ ಈ ಗ್ರಾಮವು ಅಗ್ರಹಾರವಾಗಿತ್ತೆಂದು ತಿಳಿಯುತ್ತದೆ. ಇಲ್ಲಿನ ಒಬ್ಬಲೇಶ್ವರ ದೇವರ ಅಂಗಭೋಗ, ಪೂಜಾ ವಿಧಿಗಾಗಿ, ದೇಗುಲದ ಜೀರ್ಣೋದ್ಧಾರಕ್ಕಾಗಿ ಮತ್ತು ವಿದ್ಯೆದಾನಕ್ಕಾಗಿ ಭೂಮಿದಾನ ಮತ್ತು ಹಣದಾನ ಮಾಡಿದ ಬಗ್ಗೆ ಮಾಹಿತಿ ದೊರೆಯುವದು.[೨೯]

**ತೋಟಗಂಟಿ :** ರೋಣದಿಂದ ೧೦ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೧೩ರ ಶಾಸನದಿಂದ ಎಲೆಯ ಪೂರ್ವವಳ್ಳಿ ಪ್ರಮುಖ ಅಗ್ರಹಾರವಾಗಿತ್ತೆಂದು ತಿಳಿದುಬರುತ್ತದೆ. ಈ ಅಗ್ರಹಾರಕ್ಕೆ ಭೂಮಿದಾನವನ್ನು ಸಿಂಧ ಅರಸರು ದಾನ ನೀಡಿದರೆಂದು ಉಲ್ಲೇಖವಿದೆ. ಶಾಸನದಲ್ಲಿ ಎಲೆಯಪೂರ್ವವಳ್ಳಿಯನ್ನು ಇಂದಿನ ರೋಣ ತಾಲ್ಲೂಕಿನ ತೋಟಗಂಟಿ ಗ್ರಾಮವೆಂದು ಗುರುತಿಸಲಾಗಿದೆ. ಮಠಗಳು ಧಾರ್ಮಿಕ ಸಂಸ್ಥೆಗಳಾದರೂ ಕೂಡ ಅಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಅನುಕೂಲತೆ ಇದ್ದದ್ದನ್ನು ತಿಳಿಯಬಹುದು. ಇದರಿಂದ ಮಠಗಳು ವಿದ್ಯಾಸಂಸ್ಥೆಗಳಾಗಿದ್ದವೆಂದು ಹೇಳಬಹುದು. ಅಂತಹ ಒಂದು ಮಠ ಜಕ್ಕಲಿ ಎಂಬಲ್ಲಿ ಇತ್ತೆಂದು ಕ್ರಿ.ಶ. ೧೧೨೦ರ ಶಾಸನದಲ್ಲಿ ಪ್ರಸ್ತಾಪವಿದೆ.[೩೦]

**ಮಲ್ಲಾಪೂರ (ಬೆಳವಣಿಕಿ) :** ರೋಣ ತಾಲ್ಲೂಕಿನ ಮಲ್ಲಾಪೂರದ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು ಬೆಳವಣಿಗೆ ೮೪ ಮಹಾಜನರನ್ನೊಳಗೊಂಡ ಅಗ್ರಹಾರವಾಗಿತ್ತೆಂದು ತಿಳಿದುಬರುತ್ತದೆ. ಬೆಳ್ವಲ-೩೦೦೦ರ ಆಡಳಿತ ವಿಭಾಗಕ್ಕೆ ದುಗ್ಗಿಮಯ್ಯ ದಂಡನಾಯಕನಾಗಿದ್ದು, ಇವನ ಅಧೀನದಲ್ಲಿ ಸಾಮಾಜಿಕ ಕಾರ್ಯಗಳು ನಡೆಯುತ್ತಿದ್ದವು.

**ಇಟಗಿ :** ರೋಣದಿಂದ ಈಶಾನ್ಯಕ್ಕೆ ೧೩ ಕಿ.ಮೀ. ದೂರದಲ್ಲಿದೆ. ಈ ಊರನ್ನು ಶಾಸನಗಳಲ್ಲಿ 'ಯಿಟ್ಟಿಗೆ', 'ಇಟ್ಟಿಗೆ' ಎಂದು ಕರೆಯಲಾಗಿದೆ. ಕಿಸುಕಾಡು-೭೦ಕ್ಕೆ ಸೇರಿದ ಮಹಾಗ್ರಹಾರವಾಗಿತ್ತು. ಕ್ರಿ.ಶ. ೧೦೫೪ರ ಶಾಸನದಲ್ಲಿ ಸ್ಥಳಿಕನಾದ ಶ್ರೀಪತಿ ಚಮೂಪನು ಶ್ರೀಸ್ವಯಂಭೂ ದೇವಾಲಯವನ್ನು ನಿರ್ಮಿಸಿ ಅದಕ್ಕೆ ಭೂದಾನ ಮಾಡಿದ ಸಂದರ್ಭದಲ್ಲಿ ನಾಡೊಡೆಯು ವಿಕ್ಕಿರಸ, ಗ್ರಾಮದ ಪೆರ್ಗಡೆ ಬಿಲ್ಲಯ್ಯ, ನೆರೆಯ ಹೊನ್ನಿಗನೂರು ಜನಗಳು ದ್ಠಾನ ಮಾಡಿದ ಉಲ್ಲೇಗಳಿವೆ.[೩೧]

**ನರಗುಂದ :** ನರಗುಂದವು ಗದಗದಿಂದ ೫೧ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೪೭ರ ಜಗದೇಕಮಲ್ಲನ ನರಗುಂದ ಶಾಸನದಲ್ಲಿ "ಲಕ್ಷ್ಮೀವಿಹಾರಂ ನೆಗದ್ದುರ್ದು ನೆರೆಗುಣ್ಗ್‌ಭರಾನು ಅಗ್ರಹಾರಂ" ಎಂದು ನಿರೂಪಣೆಯಿದೆ.[೩೨] ಈ ಶಾಸನದಲ್ಲಿ ಶಂಕರ ಮತ್ತು ಸಹೋದರ ನಾರಾಯಣ ಭಟ್ಟರು ಕೀರ್ತಿನಾರಾಯಣನೊಂದಿಗೆ ನರಗುಂದ ಅಗ್ರಹಾರದ ಮಹಾಜನರಿಂದ ಭೂಮಿ ಪಡೆದು ದಾನ ನೀಡಿದನೆಂದು ತಿಳಿದುಬರುತ್ತದೆ. ನರಗುಂದದ ಇನ್ನೊಂದು ಶಾಸನದಲ್ಲಿ ಬತ್ತಗಾವೆ ಪದಿನೆಂಟರೊಳಮ್ ಪರಿಪೂರ್ಣಲಕ್ಷ್ಮೀಂ ಧರಿಸಿದ ಅಗ್ರಹಾರ ಮೆಸೆಗುಂ ನರಗುಂದ ಮೀಳಾತಾಳಾ ಗ್ರದೋಳ್ ಎಂದು ನರಗುಂದ ಅಗ್ರಹಾರದ ವರ್ಣನೆಯಿದೆ.[೩೩] ೨೨೦ ಮಹಾಜನರ ಸಮ್ಮುಖದಲ್ಲಿಯೇ ರುದ್ರದೇವನು ಹಿರಿಯ ನರಗುಂದ ಧವಳಶಂಕರ ದೇವರಿಗೆ ಹಣದಾನ ನೀಡಿದನು. ಈ ಅಗ್ರಹಾರವು ತಿಲಕದಂತೆ ಭೂಮಿಯ ಮೇಲೆ ಕಂಗೊಳಿಸುತ್ತಿತ್ತು. ಹೇಮಗಿರಿ ಯಚಿಶೆಟ್ಟಿಯು ಈ ಅಗ್ರಹಾರಕ್ಕೆ ಭೂಮಿದಾನ ನೀಡಿದ ಬಗ್ಗೆ ಶಾಸನದಲ್ಲಿ ಉಲ್ಲೇಖವಿದೆ.[೩೪]

**ದಂಡಾಪೂರ :** ನರಗುಂದದಿಂದ ೧೨ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೭೭-೭೮ರ ಶಾಸನದಲ್ಲಿ ಹರಿಪುರವನ್ನು ಮಹಾ ಅಗ್ರಹಾರ ಪಡವಗೇರಿ ಎಂದು ಉಲ್ಲೇಖವಿದೆ. ಇದರಿಂದ ದಂಡಾಪೂರದ ಅಗ್ರಹಾರದಲ್ಲಿ ಮಹಾಜನಗಳು ಇದ್ದು ಇವರು ಸಾಮಾಜಿಕ ಕಾರ್ಯಗಳನ್ನು ಮಾಡುತ್ತಿದ್ದರೆಂದು ಸ್ಪಷ್ಟವಾಗುತ್ತದೆ.[೩೫]

**ಪೇಠಾಲೂರು :** ಇದು ಮುಂಡರಗಿಯಿಂದ ವಾಯವ್ಯಕ್ಕೆ ೧೧ ಕಿ.ಮೀ. ದೂರದಲ್ಲಿದೆ. ಈ ಊರನ್ನು ಶಾಸನಗಳಲ್ಲಿ 'ಆಲೂರು', 'ಮಾಳದಾಲೂರು' ಎಂದು ಕರೆಯಲಾಗಿದೆ. ಇದು ಮಾಸವಾಡಿ-೧೪೦ಕ್ಕೆ ಸೇರಿತ್ತು. ಕ್ರಿ.ಶ. ೧೦೧೦ರ ಶಾಸನವು ನೆರೆಯ ಸಿರಿವೂರು (ಶಿರೂರ) ಅಮರಚಾರ ಬಟ್ಟಾರರಿಗೆ ವಣಿಗ್ಯೆಯ ಬಟ್ಟರು ಆಲೂರಿಗೆ ನೀಡಿದ ಭೂದಾನದ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೧೦೬೮ ಶಾಸನವು ಇದು ಒಂದು ಅಗ್ರಹಾರವಾಗಿದ್ದು ೨೦೦ ಮಹಾಜನರನ್ನು ಒಳಗೊಂಡಿತ್ತು. ಕ್ರಿ.ಶ. ೧೯೧ರ ಶಾಸನವು ಲೆಂಕ ಸುರಿಗೆಯ ಮಹಾದೇವಯ್ಯ ಮಾಳದ ಆಲೂರಿನಲ್ಲಿ ತಾನೇ ನಿರ್ಮಿಸಿದ ತ್ರೈಪುರುಷ ದೇವಾಲಯಕ್ಕೆಂದು ಬಿಟ್ಟ ೨೦೦ ಮತ್ತರು ಭೂಮಿಯನ್ನು ದಾನ ನೀಡಿದ ವಿಷಯವನ್ನು ತಿಳಿಸುತ್ತದೆ.

ಕ್ರಿ.ಶ. ೧೧೨೪ರ ಶಾಸನವು ದಂಡನಾಯಕ ಸುರಿಗೆಯ ನಾಗರಸನು ೧೦ ಮತ್ತರು ಭೂಮಿಯನ್ನು ಸತ್ರಕ್ಕೆ ಮತ್ತು ಶಿಕ್ಷಣ ವ್ಯವಸ್ಥೆಗೆ ಹಾಗೂ ಉಪಾಧ್ಯಾಯರ ವೇತನಕ್ಕೆಂದು ೩೦ ಗದ್ಯಾಣವನ್ನು ವೃದ್ಧಿಪೊನ್ನಾಗಿ ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೧೨೪ರ ಶಾಸನದ ಪ್ರಕಾರ ಸುರಿಗೆಯ ಪೆರುಮಾಡಿ ಅರಸರು ಮಂಟಪ ಕಟ್ಟಿಸಿ ದೇವಿಯ ಅಂಗರಂಗ ಭೋಗಕ್ಕೆ ೫೦ ಮತ್ತರು ಭೂಮಿಯನ್ನು ದಾನಕೊಟ್ಟ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೬ನೇ ಶತಮಾನದ ಶಾಸನವು ದುರ್ಗಾಪರಮೇಶ್ವರಿಗೆ ಸುವರ್ಣ ದಾನ ಮಾಡಿದ ವಿಷಯವನ್ನು ಉಲ್ಲೇಖಿಸಿದೆ.[೩೬]

**ಡೋಣಿ :** ಮುಂಡರಗಿ ತಾಲ್ಲೂಕಿನಿಂದ ವಾಯವ್ಯಕ್ಕೆ ೨೮ ಕಿ.ಮೀ. ದೂರದಲ್ಲಿದೆ. ಇದನ್ನು ಪ್ರಾಚೀನ ಶಾಸನಗಳಲ್ಲಿ 'ದ್ರೋಣಾಪುರ', 'ದ್ರೋಣಿಪುರ', 'ಡೋಣಿಕಾಗ್ರಾಮ', 'ಡೋಣಿ' ಎಂದೆಲ್ಲ ಕರೆಯಲಾಗಿದೆ. ಇದು ಮಾಸವಾಡಿ-೧೪೦ಕ್ಕೆ ಸೇರಿದ ಅಗ್ರಹಾರವಾಗಿದ್ದು, ೬೦ ಮಹಾಜನರನ್ನು ಒಳಗೊಂಡಿತ್ತು. ಕ್ರಿ.ಶ. ೧೦೮೦ರ ಶಾಸನವು ಅರಸಿ ಲಕ್ಷ್ಮೀ ಮಹಾದೇವಿ, ದ್ರೋಣಾಪುರ ಅಗ್ರಹಾರದ ೬೦ ಮಹಾಜನರು ಮತ್ತು ಶೆಟ್ಟಿಯರು ಕೂಡಿ ಸಿದ್ದೇಶ್ವರ ದೇವರಿಗೆ ದಾನಗಳನ್ನು ಬಿಟ್ಟ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೯೮ರ ಶಾಸನವು ಸಿದ್ದೇಶ್ವರ ದೇವರಿಗೆ ಊರಿನ ಮಹಾಜನರಿಗೆ ಭೂಮಿಯನ್ನು ದಾನಬಿಟ್ಟ ವಿಷಯವನ್ನು ತಿಳಿಸುತ್ತದೆ.[೩೭]

**ಮೇವುಂಡಿ :** ಇದು ಮುಂಡರಗಿಯಿಂದ ವಾಯವ್ಯಕ್ಕೆ ೧೦ ಕಿ.ಮೀ. ದೂರದಲ್ಲಿದೆ. ಇದು ಪ್ರಾಚೀನ ಶಾಸನಗಳಲ್ಲಿ 'ಮೇಳವಿಂಡು', 'ಮೇಳವೀಡಿ' ಮೇವುಂಡಿ ಎಂದೆಲ್ಲ ಉಲ್ಲೇಖಿತಗೊಂಡಿದೆ. ಇದು ಮಾಸವಾಡಿ ೧೪೦ರ ರಾಜಧಾನಿ ಪಟ್ಟಣವಾಗಿತ್ತು. ಕ್ರಿ.ಶ. ೮೯೭ರ ಶಾಸನದಲ್ಲಿ ಇದು ೫೦೦ ಮಹಾಜನರನ್ನು ಒಳಗೊಂಡ ಅಗ್ರಹಾರ ವಾಗಿತ್ತೆಂದು ಪ್ರಸ್ತಾಪವಿದೆ. ಕ್ರಿ.ಶ. ೮೯೭ ಶಾಸನವು ಇಮ್ಮಡಿಕೃಷ್ಣನ ಆಳ್ವಿಕೆಯಲ್ಲಿ ಮಹಾಸಾಮಂತನೊಬ್ಬ

ಮಾಸವಾಡಿ-೧೪೦ ರಾಜಧಾನಿ ಮೇಳವೀಡುನಲ್ಲಿ (ಮೇವುಂಡಿ) ಇಂದ್ರನಿಗೆ ಸಮಾನವಾದ ದೇಗುಲವನ್ನು ನಿರ್ಮಿಸಿ ಅಲ್ಲಿನ ೫೦೦ ಮಹಾಜನರಿಗೆ ೧೫೦೦ ಮತ್ತರು ಭೂಮಿಯನ್ನು ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ.[೩೮]

**ತಾಮ್ರಗುಂಡಿ :** ಮುಂಡರಗಿಯಿಂದ ವಾಯವ್ಯಕ್ಕೆ ೫ ಕಿ.ಮೀ. ದೂರದಲ್ಲಿದೆ. ಈ ಊರನ್ನು ಶಾಸನಗಳಲ್ಲಿ 'ಕಿಸುಗುಣ್ಡಿ' ಎಂದು ಕರೆಯಲಾಗಿದೆ. ಇದು ೫೦ ಮಹಾಜನರನ್ನು ಹೊಂದಿದ ಅಗ್ರಹಾರವಾಗಿತ್ತು ಮಾಸವಾಡಿ-೧೪೦ ಕ್ಕೆ ಸೇರಿತ್ತು. ಕ್ರಿ.ಶ. ೧೦೫೪ ಶಾಸನವು ಕಿಸುಗುಣ್ಡಿಯನ್ನು ಆಳುತ್ತಿದ್ದ ದಾಸಿಮಯ್ಯನು ಮೂಲಸ್ಥಾನ ಕಲಿದೇವರಿಗೆ ವಿಷ್ಣುದೇವರಿಗೆ ನಂದಾದೀಪಕ್ಕೆಂದು, ಸತ್ರಕ್ಕೆಂದು ಮಹಾಜನರಿಗೆ ದಾನಕೊಟ್ಟ ವಿಷಯವನ್ನು ಸ್ಪಷ್ಟಪಡಿಸುವದು.[೩೯]

**ಬಿದರಳ್ಳಿ :** ಮುಂಡರಗಿಯಿಂದ ನೈಋತ್ಯಕ್ಕೆ ೩೨ ಕಿ.ಮೀ. ದೂರದಲ್ಲಿದೆ. ಇದು ತುಂಗಭದ್ರಾ ನದಿ ದಂಡೆಯ ಮೇಲೆ ಇರುವ ಈ ಪ್ರಾಚೀನ ಶಾಸನಗಳಲ್ಲಿ ಬಿದುರ್ವಳ್ಳಿ ಎಂದು ಉಲ್ಲೇಖಗೊಂಡಿದ್ದು ಮಾಸವಾಡಿ-೧೪೦ಕ್ಕೆ ಸೇರಿತ್ತು. ಕ್ರಿ.ಶ. ೧೦೫೨ರ ಶಾಸನವು ಅಗ್ರಹಾರ ಬಿದರ್ವಳ್ಳಿಯ ದೇಗುಲಕ್ಕೆ ದಾನ ಬಿಟ್ಟ ವಿಷಯವನ್ನು ತಿಳಿಸುತ್ತದೆ. ಕ್ರಿ.ಶ. ೧೧೮೦ರ ಶಾಸನವು ಸೋಮನಾಥ ದೇವರಿಗೆ ಭೂದಾನ ನೀಡಿದ ವಿಷಯವನ್ನು ತಿಳಿಸುತ್ತದೆ.[೪೦]

**ಬರದೂರು :** ಮುಂಡರಗಿಯಿಂದ ವಾಯವ್ಯಕ್ಕೆ ೫ ಕಿ.ಮೀ. ದೂರದಲ್ಲಿದೆ. ಈ ಊರು ೧೦೩೨ರ ಶಾಸನದಲ್ಲಿ ಭರತಾಪುರ ಎಂದು ಕರೆಯಲ್ಪಟ್ಟಿದೆ. ಇದು ೨೦೦ ಮಹಾಜನರನ್ನು ಒಳಗೊಂಡಿದ್ದ ಅಗ್ರಹಾರವಾಗಿತ್ತು. ಇದು ಮಾಸವಾಡಿ-೧೪೦ಕ್ಕೆ ಸೇರಿತ್ತು. ಕ್ರಿ.ಶ. ೧೦೩೨ರ ಶಾಸನದಲ್ಲಿ ಭರತಾಪುರದ ಭರತೇಶ್ವರ ದೇವರಿಗೆ ೨ ಮತ್ತರು ಭೂಮಿಯನ್ನು ದಾನಬಿಟ್ಟ ವಿಷಯವನ್ನು ತಿಳಿಸುತ್ತಾ ದಾನ ನೀಡಿದ ಭೂಮಿಯನ್ನು ೨೦೦ ಮಹಾಜನರಿಗೆ ಹಣ ಕೊಟ್ಟು ಖರೀದಿಸಲಾಯಿತು ಎಂದು ಹೇಳುವ ಈ ಶಾಸನದಲ್ಲಿ ರಾಜರ ಹೆಸರಾಗಲಿ ಅಥವಾ ದಾನಿಯ ಉಲ್ಲೇಖವು ಇಲ್ಲ.[೪೧]

**ಯಳವತ್ತಿ :** ಶಿರಹಟ್ಟಿಯಿಂದ ವಾಯವ್ಯಕ್ಕೆ ೧೨ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೧೫೧ರ ಶಾಸನದ ೧೨೦ ಮಹಾಜನರು ಗುಂಡೇಶ್ವರ ದೇವರಿಗೆ ದಾನಬಿಟ್ಟ ವಿಷಯವಿದೆ. ಕ್ರಿ.ಶ. ೧೧೫೮ರ ಶಾಸನವು ಭಾಗಾಶಃ ಹಾಳಾಗಿದ್ದು ನಾಗೇಶ್ವರ ಗುಡಿಯ ಆಚಾರ್ಯದೇವರಿಗಾಗಿ ಪಂಡಿತರಿಗೆ ದಾನಬಿಟ್ಟ ವಿಷಯವನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೧೮೯ರ ಶಾಸನದಲ್ಲಿ ಗುಂಡೇಶ್ವರ ದೇವರಿಗೆ ಉಮಚಗಿಯ ಗ್ರಾಮವನ್ನು ದಾನ ನೀಡಿದ ಅಂಶವನ್ನು ತಿಳಿಸುತ್ತದೆ. ಕ್ರಿ.ಶ. ೧೧೯೫ರ ಶಾಸನವು ಮಾಗುಂಡಿ (ಮಾಗಡಿ) ನೀಲಕಂಠದೇವರ ಶಿಷ್ಯನಾದ ಶಿವನಮಲ್ಲಯ್ಯನು ಗುಂಡನಾಥ ದೇವರಿಗೆ ಪುಷ್ಕರಣಿ ಕಟ್ಟಿಸಿ ಭೂಮಿಯನ್ನು ದಾನ ಕೊಟ್ಟ ವಿಷಯವನ್ನು ತಿಳಿಸುತ್ತದೆ.[೪೨]

ಗದಗ ಜಿಲ್ಲೆಯ ಅಗ್ರಹಾರಗಳಲ್ಲಿ ಮಹಾಜನ ಎಂಬ ವಿವಿಧ ಸಂಖ್ಯೆಯ ವಿದ್ವಾಂಸರಿದ್ದರು. ಇವರು ಪ್ರಾಚೀನ ಶಿಕ್ಷಣ ಪದ್ಧತಿಯ ನೇತಾರರಾಗಿದ್ದರು. ಇವರು ಸ್ವತಃ ಅಗ್ರಹಾರದ ಆಡಳಿತವನ್ನೇ ನೋಡಿಕೊಳ್ಳು ತ್ತಿದ್ದರು. ಅಗ್ರಹಾರವನ್ನು ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ವಿದ್ಯಾನಿಪುಣರಾಗಿ ಸಾಮಾಜಿಕ ಧಾರ್ಮಿಕ ಹಾಗೂ ಶೈಕ್ಷಣಿಕ ವಿಧಿವಿಧಾನಗಳನ್ನು ಮುಂದುವರೆಸಿಕೊಂಡು ಬಂದಿದ್ದರು. ಅಗ್ರಹಾರಗಳಲ್ಲಿ ಹೋಮ, ಯಾಗ, ಪುರಸ್ಕಾರಗಳು ಸರ್ವೇಸಾಮಾನ್ಯ ವಾಗಿದ್ದವು.

ಗದಗ ಜಿಲ್ಲೆಯಲ್ಲಿ ಶಾಸನೋಕ್ತ ಅಗ್ರಹಾರಗಳು ೩೫ಕ್ಕೂ ಹೆಚ್ಚು ಇತ್ತೆಂದು ತಿಳಿದುಬರುತ್ತವೆ. ಅದರಲ್ಲಿ ೧೬ ಮಹಾ ಅಗ್ರಹಾರಗಳು ಆಗಿದ್ದವು. ಜಿಲ್ಲೆಯ ಅಗ್ರಹಾರದ ಸಂಸ್ಕೃತಿಯು ಕ್ರಿ.ಶ. ೯ನೇ ಶತಮಾನದಿಂದ ೧೨ನೇ ಶತಮಾನದವರೆಗೂ ಪ್ರವರ್ಧಮಾನವಾಗಿ ಬೆಳೆದಿದ್ದನ್ನು ಗಮನಿಸಬಹುದು. ಅಗ್ರಹಾರಗಳು ಮಹಾಜನಗಳ ಸಂಖ್ಯೆಯ ಆಧಾರದ ಮೇಲೆ ಪ್ರಾಧಾನ್ಯತೆ ಹೊಂದಿದ್ದವು.

ಮಹಾಜನರ ಸಂಖ್ಯೆಯ ಆಧರಿಸಿ ಅಲ್ಲಿನ ಶಿಕ್ಷಣಕೇಂದ್ರ ಹಾಗೂ ಅದರ ಗಾತ್ರವನ್ನು ಗುರುತಿಸಲಾಗಿತ್ತು. ಅಗ್ರಹಾರವು ೪೦೦ಕ್ಕೂ ಅಧಿಕ ಸಂಖ್ಯೆಯಲ್ಲಿ ಮಹಾಜನಗಳನ್ನು ಒಳಗೊಂಡಿದ್ದರೆ ಅದನ್ನು ಮಹಾ ಅಗ್ರಹಾರವೆಂದು, ೪೦೦ ಕ್ಕಿಂತ ಕಡಿಮೆ ಸಂಖ್ಯೆಯಲ್ಲಿ ಮಹಾಜನಗಳನ್ನು ಒಳ ಗೊಂಡಿದ್ದರೆ ಅವುಗಳನ್ನು ಅಗ್ರಹಾರಗಳೆಂದು ಕರೆಯ ಲಾಗುತ್ತಿತ್ತು. ಅದರನ್ವಯ ಗದಗ ಜಿಲ್ಲೆಯಲ್ಲಿ ಮಹಾ ಅಗ್ರಹಾರಗಳೆಂದರೆ ಗದಗ, ಬೆಟಗೇರಿ, ಹೊಂಬಳ, ಹೊಸೂರು, ಲಕ್ಕುಂಡಿ, ನಿಡಗುಂದಿ, ಸವಡಿ, ನರಗುಂದ, ದಂಡಾಪೂರ, ಮೇವುಂಡಿ, ಇಟಗಿ ಇತ್ಯಾದಿ. ಮಧ್ಯಮ ಗಾತ್ರದ ಅಗ್ರಹಾರಗಳೆಂದರೆ ಕುರ್ತಕೋಟಿ, ಯಳವತ್ತಿ, ನೀಲಗುಂದ, ರೋಣ, ಬೆಳವಣಿಕಿ, ಜಕ್ಕಲಿ, ಹಿರೇಹಾಳ, ಕರಮುಡಿ, ಮಲ್ಲಾಪೂರ, ಪೇಠಾಲೂರ, ತಾಮ್ರಗುಂಡಿ, ಬೆಂತೂರು ಮುಂತಾದವುಗಳು. ಇವುಗಳಲ್ಲದೇ ಗದಗ ಜಿಲ್ಲೆಯಲ್ಲಿ ಲಕ್ಷ್ಮೇಶ್ವರ, ಡಂಬಳ, ಸೂಡಿ ಇತ್ಯಾದಿಗಳು ಬ್ರಹ್ಮಪುರಿ ಮತ್ತು ಘಟಿಕಾಲಯಗಳಾಗಿರುತ್ತವೆ. ಮಠಗಳು ಧಾರ್ಮಿಕ ಸಂಸ್ಥೆಗಳಾದರೂ ಕೂಡ ಅಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಅನುಕೂಲತೆ ಇದ್ದದ್ದನ್ನು ಶಾಸನಗಳಿಂದ ತಿಳಿಯ ಬಹುದು. ಇದರಿಂದ ಮಠಗಳು ವಿದ್ಯಾಸಂಸ್ಥೆಗಳಾಗಿದ್ದವೆಂದು ಹೇಳಬಹುದು. ಅಂತಹ ಒಂದು ಮಠ ಜಕ್ಕಲಿ ಎಂಬಲ್ಲಿ

ಇದ್ದಿತ್ತೆಂದು ಕ್ರಿ.ಶ. ೧೧೨೦ರ ಶಾಸನ ತಿಳಿಸುತ್ತದೆ. ಹೀಗೆ ಗದಗ ಜಿಲ್ಲೆಯಲ್ಲಿ ಅನೇಕ ವಿದ್ಯಾಕೇಂದ್ರಗಳು ಇದ್ದಿದ್ದನ್ನು ಇಲ್ಲಿಯ ಶಾಸನಗಳು ವಿವರಿಸುತ್ತವೆ. ಅಗ್ರಹಾರದ ಜನರನ್ನು ಮಹಾಜನವೆಂದು ಕರೆದಿರುವುದು ಅವರ ವಿದ್ವತ್ತಿಗೆ ಎಂಬುದು ಸ್ಪಷ್ಟವಾಗುತ್ತದೆ. ಕ್ರಿ.ಶ. ೧೬ನೇ ಶತಮಾನದ ನಂತರ ಅಗ್ರಹಾರದ ಸಂಸ್ಕೃತಿಯು ಅವನತಿಯ ಹಾದಿ ಹಿಡಿಯಿತು. ಇದಕ್ಕೆ ಪ್ರಮುಖವಾದ ಕಾರಣಗಳೆಂದರೆ ಸಾಮ್ರಾಜ್ಯಗಳ ಪತನ, ರಾಜಕೀಯ ಅರಾಜಕತೆ ಹಾಗೂ ಅಸ್ಥಿರತೆಗಳೇ ಮುಖ್ಯ ಕಾರಣಗಳಾಗಿವೆ. ಅಲ್ಲದೇ ಬ್ರಿಟೀಷರು ಮತ್ತು ವಿದೇಶೀಯರ ಆಗಮನದಿಂದಾದ ವ್ಯಾಪಾರೀಕರಣ ಹಾಗೂ ಕೈಗಾರಿಕೀಕರಣಗಳಿಂದ ಅಗ್ರಹಾರ ಸಂಸ್ಕೃತಿಯು ಕ್ಷೀಣವಾಯಿತು.

[ಈ ಲೇಖನವನ್ನು ಬರೆಯಲು ಮಾರ್ಗದರ್ಶನ ಮಾಡಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ ಡಾ. ಎಸ್.ವೈ. ಸೋಮಶೇಖರ್ ಹಾಗೂ ಇನ್ನುಳಿದ ಎಲ್ಲರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.]



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *South Indian Inscriptions*, ಸಂ. XV, ಶಾ.ಸಂ. ೧೫೯.
೨. ಅದೇ ಸಂ. XVIII, ಶಾ. ಸಂ. ೪೨.
೩. ಎಂ.ಎಸ್. ನರೇಗಲ್, ಉತ್ತರ ಗದಗ ಜಿಲ್ಲೆಯ ಶಾಸನಗಳು, (೨೦೧೦), ಪುಟ ೧೯೦.
೪. SII, ಸಂ. XV, ಶಾ.ಸಂ. ೭೩.
೫. ಅದೇ ಸಂ. XI, ಶಾ.ಸಂ. ೧೨೭, ಪುಟ ೧೪೭.
೬ ಅದೇ XI, ಶಾ.ಸಂ. ೧೨೭, ಪುಟ ೧೪೭.
೭, ೮. ಎಂ.ಎಸ್. ನರೇಗಲ್ಲ, ಪೂರ್ವೋಕ್ತ.
೯. ಬಿ.ವಿ. ಶಿರೂರ, ಮುಳಗುಂದ ನಾಡು, ಒಂದು ಅಧ್ಯಯನ, ಪುಟ ೧೦೬.
೧೦. ಕಮಲಾ ಹಂಪನಾ ಕೆ.ಆರ್. ಶೇಷಗಿರಿ (ಸಂ.) ಚಾವುಂಡರಾಯ ಪುರಾಣ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೮೩, ಅನುಬಂಧ ೧, ಪುಟ ೪೬೩.
೧೧, ೧೨, ೧೩. ಬಿ.ವಿ. ಶಿರೂರ, ಪೂರ್ವೋಕ್ತ, ೧೦೭.
೧೪. SII, XI-II, ಶಾ.ಸಂ. ೨೦೪. ೧೫. ಅದೇ.
೧೬ ಬಿ.ವಿ. ಶಿರೂರ, ಪೂರ್ವೋಕ್ತ, ಪುಟ ೧೦೮.
೧೭. SII, ಸಂ. XV, ಶಾ.ಸ. ೩೬, ಪುಟ ೪೫, ೧೧೪೮.
೧೮. ತುಕಾರಾಮ ಪವಾರ, ಲಕ್ಕುಂಡಿ ಶಿಲ್ಪಕಲಾ ಸಂಸ್ಕೃತಿ, ಪುಟ ೧೧-೧೩.
೧೯. (ಪ್ರಸಂ.) ಸೂರ್ಯನಾಥ ಕಾಮತ್, ಪುಟ ೯೩೫, ಧಾರವಾಡ ಜಿಲ್ಲಾ ಗೆಜೆಟಿಯರ್.
೨೦. SII, XI-II, ಶಾ.ಸಂ. ೧೫೯.
೨೧. ಎಸ್.ಎಲ್. ಶಾಂತಕುಮಾರಿ, ರೋಣ ಪ್ರದೇಶದ ಪ್ರಾಚೀನ ವಿದ್ಯಾಕೇಂದ್ರಗಳು, ಪುಟ ೩೯.
೨೨. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪುಟ ೯೩೬.೨೩. ಅದೇ.
೨೪. SII, ಸಂ. XI, ಶಾ.ಸಂ. ೧೬೮.
೨೫. ಅದೇ ಸಂ. XI-II, ಶಾ.ಸಂ. ೧೬೮.
೨೬ ಅದೇ ಸಂ. XV, ಶಾ.ಸಂ. ೧೩.
೨೭. ಎಂ.ಎಸ್. ನರೇಗಲ್, ಪೂರ್ವೋಕ್ತ, ಪುಟ ೧೯೩.
೨೮, ೨೯. ಅದೇ.
೩೦. SII, ಸಂ. XI/II, ಶಾ.ಸಂ. ೨೪೧.
೩೧. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪುಟ ೮೯೪.
೩೨. SII, ಸಂ. XVIII, ಶಾ.ಸಂ. ೧೫೦.
೩೩. SII, ಸಂ. XVIII, ಶಾ.ಸಂ. ೧೪೧.
೩೪, ೩೫. ಎಂ.ಎಸ್. ನರೇಗಲ್, ಪೂರ್ವೋಕ್ತ, ಪುಟ ೧೯೪.
೩೬. ಪೂರ್ವೋಕ್ತ, ಪುಟ ೮೯೩.
೩೭. ಸೂರ್ಯನಾಥ ಕಾಮತ್, ಪೂರ್ವೋಕ್ತ, ಪುಟ ೯೪೫.
೩೮ ರಿಂದ ೪೨ ಕ್ರಮವಾಗಿ ಅದೇ, ಪುಟ ೯೯೫, ೯೪೭, ೯೭೮, ೯೭೪, ೯೯೮.




# ಅರಸೀಕೆರೆ ತಾಲ್ಲೂಕಿನ ಶಾಸನೋಕ್ತ ಅಗ್ರಹಾರಗಳು: ಒಂದು ವಿಶ್ಲೇಷಣೆ

**ಡಾ. ಹನುಮನಾಯಕ***

**ಪೀಠಿಕೆ:** ಅಗ್ರಹಾರಗಳು ಮಧ್ಯಕಾಲೀನ ದಕ್ಷಿಣ ಭಾರತದ ಸಮಾಜ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರದಲ್ಲಿ ಮಹತ್ತರ ಪಾತ್ರ ವಹಿಸಿದ್ದವು. ಗ್ರಾಮಾಂತರ ಪ್ರದೇಶಗಳಲ್ಲಿ ಬ್ರಾಹ್ಮಣರು ಮತ್ತು ಇತರ ಸಾಮಾಜಿಕ ವರ್ಗದವರೊಂದಿಗೆ ವಾಸಿಸುತ್ತಿದ್ದಂತಹ ನೆಲೆಗಳಿಗೆ ಅಗ್ರಹಾರಗಳೆಂದು ಕರೆಯಲಾಗಿದೆ. ಇವುಗಳನ್ನು ಹೆಚ್ಚಾಗಿ ಅರಸರು, ಬ್ರಾಹ್ಮಣರು ಮಹಾಜನರು ನೀಡುತಿದ್ದ ಸೇವೆಗೆ ಅಂದರೆ ದೇವಾಲಯಗಳಲ್ಲಿ ಪೂಜೆ, ಮತ್ತು ವಿದ್ಯೆಯನ್ನು ನೀಡುವುದಕ್ಕೆ ಪ್ರತಿಯಾಗಿ ಅವರ ಜೀವಿತಕ್ಕೆ ಅನುವು ಮಾಡಿಕೊಡುವ ಉದ್ದೇಶದಿಂದ ಸ್ಥಾಪಿಸಿದ ನೆಲೆಗಳಾದ್ದವು. ಅಗ್ರಹಾರಗಳ ಕುರಿತು ಕೆಲವು ಸಂಶೋಧಕರು ಅಧ್ಯಯನ ಮಾಡಿದ್ದರೂ ಸಹ ಅರಸೀಕೆರೆ ತಾಲ್ಲೂಕಿನ ಅಗ್ರಹಾರಗಳ ಕುರಿತು ಆಳವಾದ ಅಧ್ಯಯನ ಆಗಿಲ್ಲ.[೧] ಈ ಭಾಗದಲ್ಲಿ ಸುಮಾರು ೧೨ ನೆಯ ಶತಮಾನದ ಆರಂಭದ ಕಾಲದಲ್ಲಿ (ಕ್ರಿ.ಶ. ೧೧೦೫) ಮೊತ್ತಮೊದಲ ಬಾರಿಗೆ ಅಗ್ರಹಾರದ ಉಲ್ಲೇಖವಾಗಿದ್ದು, ಹದಿನೈದನೆಯ ಶತಮಾನದ ಪ್ರಾರಂಭದ (ಕ್ರಿ.ಶ. ೧೪೧೧) ಕಾಲದಲ್ಲಿ ಕೊನೆಯ ಉಲ್ಲೇಖವಾಗಿದೆ ಸುಮಾರು ಮುನ್ನೂರು ವರ್ಷಗಳ ಅಂತರದಲ್ಲಿ ೨೨ ಅಗ್ರಹಾರಗಳು ಇಲ್ಲಿಯ ಶಾಸನಗಳಲ್ಲಿ ಉಲ್ಲೇಖಗೊಂಡಿವೆ. ಇವುಗಳಲ್ಲಿ ಕೆಲವನ್ನು ಹೊಸತಾಗಿಯೂ ಇನ್ನೂ ಕೆಲವನ್ನು ಈಗಾಗಲೆ ಇದ್ದಂತಹ ಹಳೆಯ ಹಳ್ಳಿಗಳನ್ನು ಅಗ್ರಹಾರಗಳಾಗಿ ಪರಿವರ್ತಿಸಿರುವುದನ್ನು ಕಾಣಬಹುದು. ಅಗ್ರಹಾರಗಳನ್ನು ಕುರಿತು ಎಸ್.ಕೆ. ಕೊಪ್ಪಾರವರು ಕೆಲವು ಗಮನಾರ್ಹ ಪ್ರಶ್ನೆಗಳನ್ನು ಎತ್ತಿರುವುದು ಬಹಳ ಮಹತ್ವದ್ದಾಗಿದೆ. ಅವುಗಳೆಂದರೆ ೧) ಮಧ್ಯಕಾಲೀನ ಕೃಷಿ ಸಮಾಜದ ಆರ್ಥಿಕ ವ್ಯವಸ್ಥೆಯಲ್ಲಿ ಅಗ್ರಹಾರಗಳು ವಹಿಸಿದ ಪಾತ್ರವೇನು? ಹಾಗೂ ೨) ಅಗ್ರಹಾರಗಳು ಕೇವಲ ಶಿಕ್ಷಣ ಸಂಸ್ಥೆಗಳಾಗಿರದೇ ಇತರೆ ಕ್ಷೇತ್ರಗಳಲ್ಲಿ ವಹಿಸಿದ ಪಾತ್ರವೇನು?[೨] ಈ ಲೇಖನದಲ್ಲಿ ಇಂತಹ ಪ್ರಶ್ನೆಗಳನ್ನು ಆಧಾರವಾಗಿಟ್ಟುಕೊಂಡು, ಅಗ್ರಹಾರಗಳನ್ನು ಏತಕ್ಕಾಗಿ ಸ್ಥಾಪಿಸಿದರು, ಅವುಗಳ ಸ್ಥಾನಮಾನಗಳು ಏನು, ಮತ್ತು ಅವುಗಳು ಮಧ್ಯಕಾಲೀನ ಕರ್ನಾಟಕದ ಸಮಾಜ, ರಾಜಕೀಯ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಮಾಡಿದ ಪರಿಣಾಮಗಳನ್ನು ಕುರಿತು ವಿಮರ್ಶಿಸಲಾಗುವುದು.

**ಚಾರಿತ್ರಿಕ ಹಿನ್ನಲೆ:** ಅರಸೀಕೆರೆ ತಾಲ್ಲೂಕಿನಲ್ಲಿ ಮಾನವನ ನೆಲೆಗಳನ್ನು ಹಳೇಶಿಲಾಯುಗದ ಕಾಲದಿಂದಲೂ ಗುರುತಿಸಬಹುದು. ಇಂತಹ ನೆಲೆಗಳು ಬೃಹತ್ ಶಿಲಾಯುಗದ ಕಾಲದಲ್ಲಿ ಅತ್ಯಧಿಕ ಸಂಖ್ಯೆಯಲ್ಲಿ (೬೬) ಕಂಡುಬಂದಿವೆ. ಇತಿಹಾಸದ ಆರಂಭದ ಕಾಲದಿಂದ ಸುಮಾರು ಕ್ರಿ.ಶ. ೧೧ ನೆಯ ಶತಮಾನದವರೆಗೆ ಮಾನವನ ನೆಲೆಗಳ ಬಗ್ಗೆ ಶಾಸನಗಳಲ್ಲಿ ಬಹಳ ವಿರಳವಾದ (೧೪) ಮಾಹಿತಿ ಸಿಗುತ್ತದೆ. ಆದರೆ ಕ್ರಿ.ಶ. ೧೨–೧೩ ನೆಯ ಶತಮಾನದಲ್ಲಿ ಇವುಗಳ ಸಂಖ್ಯೆ ಅತ್ಯಧಿಕವಾಗಿದ್ದುದನ್ನು (೧೬೦) ಶಾಸನಗಳಲ್ಲಿ ಕಾಣಬಹುದು. ಈ ಭಾಗದ ಮಾನವ ನೆಲೆಗಳು ಯಾವುದೇ ನದಿ ಪಾತ್ರ ಇಲ್ಲದಿರುವುದರಿಂದ ಅದರ ಪ್ರಭಾವಕ್ಕೊಳಗಾಗದೇ ಕೇವಲ ಮಳೆಯಾಧಾರಿತ ಕೆರೆ ನೀರಾವರಿ ಅವಲಂಬಿಸಿ ಅಸ್ತಿತ್ವಕ್ಕೆ ಬಂದವುಗಳಾಗಿವೆ. ಇಂತಹ ನೆಲೆಗಳಲ್ಲಿ ಕೆಲವನ್ನು ಕ್ರಿ.ಶ. ೧೨ನೆಯ ಶತಮಾನದಿಂದೀಚೆಗೆ ಆಡಳಿತ ವರ್ಗದವರಾದ ಸಾಮಂತ, ಪೆರ್ಗಡೆ, ಪ್ರಭುಗಾವುಂಡ ಮತ್ತಿತರು ಅಗ್ರಹಾರಗಳನ್ನಾಗಿ ಪರಿವರ್ತಿಸಿರುವುದು ಕಂಡುಬರುತ್ತದೆ.

ಅಗ್ರಹಾರಗಳ ಪ್ರಾಚೀನತೆಯನ್ನು ಪೂರ್ವ ಮೌರ್ಯರ ಕಾಲಕ್ಕೆ ಕೊಂಡೊಯ್ಯಬಹುದು.[೩] ಇವುಗಳ ಸಂಖ್ಯೆ ಗುಪ್ತರ ಕಾಲದಲ್ಲಿ ಅಧಿಕಗೊಳ್ಳುತ್ತವೆ.[೪] ಕರ್ನಾಟಕದಲ್ಲಿ ಕದಂಬರ ಕಾಲದಲ್ಲಿ ಪ್ರಥಮ ಬಾರಿಗೆ ಅಗ್ರಹಾರಗಳು (ತಾಳಗುಂದ) ಅಸ್ತಿತ್ವದಲ್ಲಿದ್ದುದನ್ನು ಕಾಣಬಹುದು.[೪ಅ] ಲೀಲಾ ಶಾಂತಕುಮಾರಿಯವರು ಅಗ್ರಹಾರಗಳನ್ನು ಸ್ಥಾಪಿಸಲು

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ, ದಕ್ಷಿಣ ಕನ್ನಡ ಜಿಲ್ಲೆ–೫೭೪೧೯೯.

ಹಲವಾರು ಕಾರಣಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ; ೧) ವಿದ್ಯಾಭ್ಯಾಸ ಮತ್ತು ಸಾಂಸ್ಕೃತಿಕ ಬೆಳವಣಿಗೆಗಾಗಿ, ೨) ಜ್ಞಾನಾರ್ಜನೆಯಲ್ಲಿ ತೊಡಗಿದ್ದವರಿಗೆ ಆಹಾರ ಮತ್ತಿತರ ಸೌಕರ್ಯ ಒದಗಿಸಲು, ೩) ಜನರ ಧಾರ್ಮಿಕ ಭಾವನೆಗಳು, ೪) ಒಬ್ಬ ರಾಜ ಅಥವಾ ಅಧಿಕಾರಿ ಯುದ್ಧದಲ್ಲಿ ಜಯಗಳಿಸಿದಾಗ, ೫) ತಾವು ನೀಡಿದ ಮಾತನ್ನು/ಒಪ್ಪಂದವನ್ನು ಪೂರ್ಣ ಗೊಳಿಸುವುದಕ್ಕಾಗಿ, ೬) ಪಟ್ಟಾಭಿಷೇಕದ ಸಂದರ್ಭದಲ್ಲಿ, ೭) ಬ್ರಾಹ್ಮಣರಲ್ಲಿದ್ದ ವಿದ್ವತ್ತನ್ನು ಗುರುತಿಸುವುದಕ್ಕಾಗಿ, ೮) ತಮ್ಮ ಹೆಸರನ್ನು ಚಿರಸ್ಥಾಯಿಗೊಳಿಸುವುದಕ್ಕಾಗಿ, ೯) ಬ್ರಾಹ್ಮಣರ ಗುಂಪು ವಲಸೆ ಬಂದು ಅಲ್ಲಿ ನೆಲೆಸಲು ತೀರ್ಮಾನಿಸಿದಾಗ, ೧೦) ತಮ್ಮ ಪಾಪ ಕರ್ಮಗಳನ್ನು ಕಳೆದುಕೊಳ್ಳಲು, ಮತ್ತು ೧೧) ಸ್ಥಳೀಯ ದೇವರ ನಿತ್ಯ ಬೇಡಿಕೆಗಳನ್ನು ಪೂರೈಸುವುದಕ್ಕೋಸ್ಕರವಾಗಿ.[೫] ಇವು ಹೊರನೋಟಕ್ಕೆ ಪ್ರಮುಖವಾಗಿ ಕಂಡುಬಂದರೂ ಅಂದಿನ ರಾಜಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳು ಅಗ್ರಹಾರಗಳ ಉಗಮಕ್ಕೆ ನೆರವಾಗಿದ್ದ ಅಂಶಗಳನ್ನು ವಿದ್ವಾಂಸರು ಗುರುತಿಸುವಲ್ಲಿ ವಿಫಲರಾಗಿದ್ದಾರೆ.

**ಅಗ್ರಹಾರದ ವಿವಿಧ ಹೆಸರುಗಳು :** ಅಗ್ರಹಾರಗಳನ್ನು ವಿವಿಧ ಹೆಸರಿನಿಂದ ಕರೆಯಲಾಗಿದೆ. ಅವುಗಳೆಂದರೆ ಮಹಾಅಗ್ರಹಾರ, ಪಿರಿಯ ಅಗ್ರಹಾರ, ಅನಾದಿ ಅಗ್ರಹಾರ, ಪರಮೇಶ್ವರದತ್ತಿ ಅಗ್ರಹಾರ, ಉತ್ತಮ ಅಗ್ರಹಾರ,[೬] ಕೇಶವಪುರ,[೭] ಮತ್ತು ಭತ್ತಗ್ರಾಮ.[೮] ಇದಲ್ಲದೆ ಅಗ್ರಹಾರಗಳಲ್ಲಿ ಶೈವ ಮತ್ತು ವೈಷ್ಣವ ಅಗ್ರಹಾರಗಳಿದ್ದುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೯] ಅಗ್ರಹಾರಗಳಲ್ಲಿ ಎರಡು ರೀತಿಯವು ಕಂಡುಬರುತ್ತವೆ. ಅವುಗಳೆಂದರೆ ಸರ್ವನಮಸ್ಯ ಅಗ್ರಹಾರ ಮತ್ತು ನಿಯತಕಾರಕ ಅಗ್ರಹಾರಗಳು. ಮೊದಲನೆಯದನ್ನು ಯಾವುದೇ ರೀತಿಯ ತೆರಿಗೆಗಳಿಲ್ಲದೆ ದಾನ ನೀಡಿದ ಗ್ರಾಮಗಳು ಮತ್ತು ಎರಡನೆಯದು ನಿಗಧಿತ ಪ್ರಮಾಣದ ತೆರಿಗೆಯನ್ನು ಪಾವತಿಸುವುದಾಗಿತ್ತು.[೧೦] ಈ ಮೇಲಿನ ಹೆಸರುಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಪುರೋಹಿತಶಾಹಿ ವರ್ಗ (ಶೈವ ಮತ್ತು ವೈಷ್ಣವ) ಗ್ರಾಮೀಣ ಪ್ರದೇಶಗಳಲ್ಲಿ ಆಳವಾದ ಪ್ರಭಾವವನ್ನು ಬೀರಿದ್ದಿದು ಕಂಡುಬರುತ್ತದೆ.

ಶಾಂತಕುಮಾರಿಯವರು ತಮ್ಮ ಕೃತಿಯಲ್ಲಿ ಸುಮಾರು ೧೩ ಅಗ್ರಹಾರಗಳನ್ನು ಕುರಿತು ಚರ್ಚಿಸಿದ್ದು, ಅವುಗಳೆಲ್ಲಾ ಸಾಮಾನ್ಯವಾಗಿ ಉತ್ತರ ಕರ್ನಾಟಕಕ್ಕೆ ಸೇರಿದವುಗಳಾಗಿವೆ. ಆದರೆ ನಕ್ಷೆಯಲ್ಲಿ ಅರಸೀಕೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ಕೇವಲ ನಾಲ್ಕು ಅಗ್ರಹಾರಗಳನ್ನು ಮಾತ್ರ ಗುರುತಿಸಿದ್ದಾರೆ. ಅವುಗಳೆಂದರೆ ಕಣಕಟ್ಟೆ, ಬಾಣಾವರ, ಅರಸೀಕೆರೆ ಮತ್ತು ಹಾರನಹಳ್ಳಿ.[೧೧] ಆದರೆ ಶಾಸನಗಳಲ್ಲಿ ಬಾಣಾವರ ಅಗ್ರಹಾರವಾಗಿದ್ದುದಕ್ಕೆ ಉಲ್ಲೇಖಗಳಿಲ್ಲ. ವಸಂತಲಕ್ಷ್ಮಿಯವರು ತಮ್ಮ ಲೇಖನದಲ್ಲಿ ಅರಸೀಕೆರೆ ತಾಲ್ಲೂಕಿಗೆ ಸಂಬಂಧಿಸಿದಂತೆ ನಾಲ್ಕು ಅಗ್ರಹಾರಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ ಅರಕೆರೆ, ಕೆಲ್ಲಂಗೆರೆ, ಹಾರನಹಳ್ಳಿ ಮತ್ತು ತಳಲೂರು. ಈ ಅಗ್ರಹಾರಗಳಲ್ಲಿ ಕಾಶ್ಮೀರಿ ಬ್ರಾಹ್ಮಣರು ವಾಸವಾಗಿದ್ದರೆಂದು ಅಭಿಪ್ರಾಯಪಟ್ಟಿದ್ದಾರೆ.[೧೨] ಆದರೆ ನನ್ನ ಶೋಧನೆಯಲ್ಲಿ ಅರಸೀಕೆರೆ ತಾಲ್ಲೂಕಿನಲ್ಲಿ ೨೨ ಅಗ್ರಹಾರಗಳು ಕಂಡುಬಂದಿವೆ. ಇವುಗಳ ಪೈಕಿ ೧೨ನೇ ಶತಮಾನದಲ್ಲಿ ೭, ೧೩ನೇ ಶತಮಾನದಲ್ಲಿ ೧೩, ೧೪ನೇ ಶತಮಾನದಲ್ಲಿ ೩ ಮತ್ತು ೧೫ನೇ ಶತಮಾನದಲ್ಲಿ ಕೇವಲ ಒಂದು ಅಗ್ರಹಾರ ಉಲ್ಲೇಖಗೊಂಡಿದೆ. ಸ್ಥಳನಾಮ ಮತ್ತು ವ್ಯಕ್ತಿನಾಮಗಳನ್ನು ಆಧರಿಸಿ ಹುಡುಕಿದರೆ ಅತಿರಥಮಂಗಲ ಎಂಬ ಇನ್ನೊಂದು ಅಗ್ರಹಾರವನ್ನು ನಮ್ಮ ಪಟ್ಟಿಗೆ ಸೇರಿಸಬಹುದು. ಹಾಗೇನಾದರು ಪರಿಗಣಿಸಿದರೆ ಅದು ಅರಸೀಕೆರೆ ತಾಲ್ಲೂಕಿನ ಶಾಸನೋಕ್ತ ಪ್ರಥಮ ಅಗ್ರಹಾರವಾಗುತ್ತದೆ. ಈ ಉಲ್ಲೇಖವು ಚಲುವನಹಳ್ಳಿಯ ೯ನೆಯ ಶತಮಾನದ ವೀರಗಲ್ಲು ಶಾಸನದಲ್ಲಿದೆ.[೧೩] ಇದನ್ನು ಹೊರತುಪಡಿಸಿದರೆ ಉಳಿದ ಅಗ್ರಹಾರಗಳು ಕ್ರಿ.ಶ. ೧೨ನೆಯ ಶತಮಾನದಿಂದ ೧೫ನೆಯ ಶತಮಾನದವರೆಗೆ ಅಸ್ತಿತ್ವದಲ್ಲಿದ್ದುದು ಕಂಡು ಬರುತ್ತದೆ. ಇಲ್ಲಿಯ ಅಗ್ರಹಾರಗಳ ಪೈಕಿ ಕೆಲ್ಲಂಗೆರೆಯು ಅಗ್ರಹಾರಕ್ಕೆ ಸಂಬಂಧಿಸಿದಂತೆ ೧೧ ಶಾಸನಗಳು ಮಾಹಿತಿ ನೀಡುವುದರಿಂದ ಇದು ಅತ್ಯಂತ ಪ್ರಸಿದ್ಧ ಮತ್ತು ಪ್ರಭಾವಶಾಲಿ ಅಗ್ರಹಾರವಾಗಿತ್ತೆಂದು ಭಾವಿಸಬಹುದು. ಇವುಗಳಲ್ಲಿ ಕೆಲ್ಲಂಗೆರೆಯನ್ನು ಅಗ್ರಹಾರ ಹರಿಹರಪುರ, ಶ್ರೀಮದನಾದಿ ಅಗ್ರಹಾರ ಹರಿಹರಪುರವೆಂದು ವರ್ಣಿಸಲಾಗಿದೆ. ಇವುಗಳ ಉಲ್ಲೇಖವನ್ನು ಕ್ರಿ.ಶ. ೧೧೪೨ ರಿಂದ ೧೩೬೭ ರವರೆಗೆ ಕಾಣಬಹುದು. ಇದೇ ಸಮಯದಲ್ಲಿ ಅಸ್ತಿತ್ವಕ್ಕೆ ಬಂದ ಮತ್ತೊಂದು ಅಗ್ರಹಾರವೆಂದರೆ ತಳಿರೂರು. ಇದಕ್ಕೆ ಸಂಬಂಧಿಸಿದಂತೆ ಐದು ಶಾಸನಗಳಿದ್ದು, ಅವುಗಳಲ್ಲಿ ಇದನ್ನು ಅಗ್ರಹಾರ ಹರಿಹರಪುರ, ಶ್ರೀಮದ್ ಅಗ್ರಹಾರ, ಶ್ರೀಮದನಾದಿ ಅಗ್ರಹಾರ ಮಧುಸೂಧನಪುರವೆಂದು ಉಲ್ಲೇಖಿಸಲಾಗಿದೆ. ಇದು ಕೂಡಾ ಕೆಲ್ಲಂಗೆರೆಯ ಅಗ್ರಹಾರದ ರೀತಿಯಲ್ಲಿಯೇ ಅತೀ ಹೆಚ್ಚು ಕಾಲ (೧೧೪೨–೧೩೬೮) ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಮೂರನೆ ಸ್ಥಾನದಲ್ಲಿ ಹಾರುವನಹಳ್ಳಿ ಅಗ್ರಹಾರ ಕಂಡುಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ನಾಲ್ಕು ಶಾಸನಗಳಿದ್ದು, ಅವುಗಳಲ್ಲಿ ಇದನ್ನು ಶ್ರೀಮದನಾದಿ ಅಗ್ರಹಾರ, ಅಗ್ರಹಾರ ಸೋಮನಾಥಪುರ, ಪಿರಿಯಪಟ್ಟದ ಅಗ್ರಹಾರ ಮತ್ತು ಹಿರಿಯ ಸೋಮ ನಾಥಪುರವೆಂದು ಬಣ್ಣಿಸಲಾಗಿದೆ

(೧೨೩೪-೧೨೮೦). ಉಳಿದ ಅಗ್ರಹಾರಗಳಿಗೆ ಸಂಬಂಧಿಸಿದಂತೆ ಕೇವಲ ಒಂದು ಅಥವಾ ಎರಡು ಶಾಸನಗಳಲ್ಲಿ ಮಾಹಿತಿ ಸಿಗುತ್ತದೆ.

**ಅಗ್ರಹಾರಗಳಿಗಿದ್ದ ಸ್ಥಾನಮಾನಗಳು:** ಆಡಳಿತ ವರ್ಗವು ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮಗಳನ್ನು ಬ್ರಾಹ್ಮಣರ ಜೀವಿತಕ್ಕೋಸ್ಕರ ದಾನ ಮಾಡಲಾಗಿತ್ತು. ಅಂತಹ ಗ್ರಾಮಗಳ ದೇವಾಲಯಗಳಲ್ಲಿ ನಿರಂತರವಾಗಿ ವಿದ್ಯಾದಾನ, ಅರ್ಚನೆ ಮಾಡುವುದಕ್ಕೋಸಕ್ಕರ ಅವರಿಗೆ ಯಾರೂ ಕೂಡ ತೊಂದರೆ ಕೊಡಬಾರದೆಂಬ ಉದ್ದೇಶದಿಂದ ಈ ಕೆಳಕಂಡ ಷರತ್ತುಗಳನ್ನು ಮಾಡಲಾಗಿತ್ತು. ಅವುಗಳೆಂದರೆ; ೧) ಅಗ್ರಹಾರಗಳಿಗೆ ಯಾವುದೇ ಸರ್ಕಾರಿ ಅಧಿಕಾರಿಗಳು, ಸೈನಿಕರು, ಪೋಲಿಸ್ ಮುತ್ತಿತರು ಮಹಾಜನರ ಅನುಮತಿಯಿಲದೇ ಪ್ರವೇಶಿಸುವಂತಿರಿರಲಿಲ್ಲ, ೨) ರಾಜನಾಗಲಿ ಅಥವಾ ರಾಜನ ಅಧಿಕಾರಿಗಳಾಗಲಿ ಅಗ್ರಹಾರದ ಭೂಮಿ, ದನಕರುಗಳನ್ನು ವಶಪಡಿಸಿಕೊಳ್ಳುವಂತಿರಲಿಲ್ಲ, ಮಾರುವಂತಿಲ್ಲ ಹಾಗೂ ಕೊಳ್ಳುವಂತಿರಲಿಲ್ಲ, ೩) ಅಗ್ರಹಾರದ ಆಂತರಿಕ ವಿಷಯಗಳಲ್ಲಿ ರಾಜ್ಯದ ಅಧಿಕಾರಿಗಳು ಪಾಲ್ಗೊಳ್ಳುವಂತಿರಲಿಲ್ಲ[೧೪]. ಇವುಗಳನ್ನು ಸರ್ವನಮಸ್ಯ ಅಗ್ರಹಾರಗಳೆಂದು ಗುರುತಿಸಲಾಗಿದೆ.

**ಅಗ್ರಹಾರಗಳ ಮೇಲೆ ವಿಧಿಸಿದ್ದ ಇತಿ–ಮಿತಿಗಳು:** ಎರಡನೆ ರೀತಿಯಾದ ನಿಯತಕಾರಕ ಅಗ್ರಹಾರಗಳಲ್ಲಿ ಬ್ರಾಹ್ಮಣರನ್ನು ಆಡಳಿತ ವರ್ಗವು ತನ್ನ ಹಿಡಿತದಲ್ಲಿಟ್ಟುಕೊಳ್ಳುವುದಕ್ಕೋಸ್ಕರ ಈ ಕೆಳಗಿನ ನಿಬಂಧನೆಗಳನ್ನು ಹಾಕಿತ್ತು. ಅವುಗಳೆಂದರೆ; ೧) ಮಹಾಜನರು ತಮಗೆ ಭೂಮಿಯನ್ನು ಬೇರೆಯವರಿಗೆ ಮಾರುವಂತಿರಲಿಲ್ಲ ಹಾಗೂ ಒತ್ತೆಯಿಡುವಂತಿರಲಿಲ್ಲ. ಅದಕ್ಕೆ ಬದಲಾಗಿ ಅವರು ಅಗ್ರಹಾರದಲ್ಲಿರುವವರೆಗೂ ಅಲ್ಲಿಯ ಉತ್ಪನ್ನವನ್ನು ಅನುಭವಿಸಬಹುದಾಗಿತ್ತು. ೨) ಅಗ್ರಹಾರದ ಮಹಾಜನರು ಗೌರವಯುತವಾದ ಜೀವನ ನಡೆಸಬೇಕಾಗಿತ್ತು. ಸ್ಥಳಿಯ ಜಗಳಗಳಲ್ಲಾಗಲಿ, ಹೊಡೆದಾಟಗಳಲ್ಲಾಗಲಿ, ಕೆಟ್ಟ ಭಾಷೆಯಿಂದ ನಿಂದಿಸುವುದು ಅಪರಾಧವಾಗಿದ್ದು, ಅಂತಹವರಿಂದ ದಂಡವನ್ನು ವಸೂಲಿ ಮಾಡಲಾಗುತಿತ್ತು.[೧೫]

**ಅರಸೀಕೆರೆ ತಾಲ್ಲೂಕಿನ ಅಗ್ರಹಾರಗಳು:** ಇಲಿಯ ೨೨ ಅಗ್ರಹಾರಗಳ ಪೈಕಿ ಕೇವಲ ಒಂದೇ ಒಂದು ಬ್ರಹ್ಮಪುರಿಯ ಉಲ್ಲೇಖ ಶಾಸನದಲ್ಲಿ ಕಂಡುಬಂದಿದೆ. ಕ್ರಿ.ಶ.೧೧೦೧ ರ ಮನಕತ್ತೂರು ಶಾಸನದಲ್ಲಿ ಮಹಾಪ್ರಭು ಸಂಕಗಾವುಂಡನು ತಾನು ಹೊಸದಾಗಿ ಸ್ಥಾಪಿಸಿದ ಮನಗತ್ತೂರು ಗ್ರಾಮ ಮತ್ತು ಚಾವೇಶ್ವರ ದೇವಾಲಯ ನಿರ್ಮಿಸಿದ ಸಂದರ್ಭದಲ್ಲಿ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಒಂದು ಸಲಗೆ ಗದ್ದೆ ಮತ್ತು ಏಳು ಮತ್ತರು ಹೊಲವನ್ನು ದಾನವಾಗಿ ನೀಡಿದ್ದುದು ತಿಳಿದುಬರುತ್ತದೆ.[೧೬] ಬ್ರಹ್ಮಪುರಿ ಎಂದರೆ ನಗರಗಳಲ್ಲಿ ಅಥವಾ ಪಟ್ಟಣಗಳಲ್ಲಿ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗ.[೧೭] ಬ್ರಹ್ಮಪುರಿಗಳು ಪಟ್ಟಣದ ಭಾಗಗಳಾಗಿದ್ದವು.[೧೮] ಈ ಶಾಸನದಲ್ಲಿ ಬ್ರಹ್ಮಪುರಿ ಯಾವ ಪಟ್ಟಣದಲ್ಲಿತ್ತು ಎಂಬುದು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಆದರೆ ಮನಕತ್ತೂರು ಸಮೀಪದಲ್ಲಿರುವ ಬಾಣಾವರದಲ್ಲಿ ಕ್ಷೇತ್ರಕಾರ್ಯ ಮಾಡಿದಾಗ ಅದು ಕ್ರಿ.ಶ. ೧೨ ನೆಯ ಶತಮಾನದಲ್ಲಿ ಬ್ರಾಹ್ಮಣರಿಂದ ಕೂಡಿದ್ದ ನೆಲೆಯಾಗಿತ್ತೆಂದು ಊಹಿಸಬಹುದು.

**ಅಗ್ರಹಾರಗಳ ಸ್ಥಾಪನೆ:** ಮಹಾಪ್ರಧಾನ ಸರ್ವಾಧಿಕಾರಿ ಭೂಚಿದೇವನು ಹೊಯ್ಸಳ ದೊರೆ ಒಂದನೆ ನರಸಿಂಹನಿಂದ ನೀರ್ಗುಂದ ನಾಡಿನಲ್ಲಿ ಹುಲ್ಲೇಕೆರೆ ಗ್ರಾಮವನ್ನು ಪಡೆದು, ಅದನ್ನು ಸೋಮನಾಥಪುರ ಅಗ್ರಹಾರವನ್ನಾಗಿ ನಾಮಕರಣ ಮಾಡಿದ್ದನ್ನು ಕ್ರಿ.ಶ.೧೧೬೨ ರ ಹುಲ್ಲೇಕೆರೆ ಶಾಸನವು ತಿಳಿಸುತ್ತದೆ[೧೮.ಅ] ಕ್ರಿ.ಶ.೧೧೯೪ ರ ಬೊಮ್ಮೇನಹಳ್ಳಿ ಶಾಸನವು ದಂಡನಾಯಕ ಮಧುಸೂಧನ ಎಂಬುವವನು ತನ್ನ ಹೆಸರಿನಲ್ಲಿ ಮಧುಸೂಧನಪುರವೆಂಬ ಅಗ್ರಹಾರವನ್ನು ಸ್ಥಾಪಿಸಿ ಅಲ್ಲಿ ಮಲ್ಲಿಕಾರ್ಜುನದೇವರಿಗೆ ತ್ರಿಕೂಟ ದೇವಾಲಯವನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ನಂತರ ಇವನು ಅಲ್ಲಿಯ ಮಹಾಜನರ ಅನುಮತಿಯೊಂದಿಗೆ ಆ ದೇವಾಲಯಕ್ಕೆ ಭೂದಾನ ಮಾಡಿದನು.[೧೯] ಕೇರಳದ ವರ್ತಕ ಮಹಾವಡ್ಡವ್ಯವಹಾರಿ ಬಂಡಿನಾಂಬಿಶೆಟ್ಟಿಯ ಅಳಿಯ ಕಡನಾಂಬಿಶೆಟ್ಟಿಯು ಮುತ್ತನಹೊಸವೂರಿನಲ್ಲಿ (ಹಿರಿಯೂರು) ಅಗ್ರಹಾರವನ್ನು ಸ್ಥಾಪಿಸಿ, ಅಲ್ಲಿಯ ಕುಂಜೇಶ್ವರ ದೇವರಿಗೆ ಕಲ್ಲೆಯನಾಯಕನ ಹಳ್ಳಿಯನ್ನು ದಾನ ಮಾಡಿದನು.[೨೦] ಕ್ರಿ.ಶ.೧೨೮೯ ರ ನಾಗವೇದಿ ಶಾಸನವು ವಮ್ಮಲಿಗೆಯ ಮಾರಯ್ಯನ ಮುಮ್ಮಡಿ ಬಲ್ಲಾಳನಿಂದ ದಾನವಾಗಿ ಪಡೆದ ನಾಗವೇದಿ ಗ್ರಾಮವನ್ನು ನಂತರ ಅಗ್ರಹಾರವನ್ನಾಗಿ ಪರಿವರ್ತಿಸಿ ೫೫ ಬ್ರಾಹ್ಮಣರಿಗೆ ನೀಡಿ ನಂತರ ಅಲ್ಲಿಯ ಬ್ರಾಹ್ಮಣರು/ಮಹಾಜನರು ಅಲ್ಲಿಯ ದೇವಾಲಯಕ್ಕೆ ಭೂದಾನ ಮಾಡಿದ್ದನ್ನು ತಿಳಿಸುತ್ತದೆ.[೨೧] ಈ ಮೇಲಿನ ವಿವರಣೆಗಳಿಂದ ಅಗ್ರಹಾರಗಳನ್ನು ಮುಖ್ಯವಾಗಿ ರಾಜ್ಯದ ಅಧಿಕಾರಿಗಳು ಮತ್ತು ಶ್ರೀಮಂತ ವರ್ತಕರು (ರಾಜಶ್ರೇಷ್ಠಿಗಳು) ಸ್ಥಾಪಿಸಿದ್ದನ್ನು ತಿಳಿಯಬಹುದು. ಇಂತಹ ಕಾರ್ಯಗಳನ್ನು ಮಾಡುವ ಮುಖಾಂತರ ಅಧಿಕಾರಿಗಳು, ಮತ್ತು ವರ್ತಕರು ಸಹ ರಾಜರಂತೆ ಪುರೋಹಿತಶಾಹಿ ವರ್ಗದವರ ನಿಕಟ ಸಂಪರ್ಕ ಹೊಂದಿ ಆ ಮುಖಾಂತರ ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಗ್ರಾಮೀಣ ಪ್ರದೇಶಗಳಲ್ಲಿ ತಮ್ಮ ಅಧಿಕಾರದ ಮುದ್ರೆಯನ್ನು ಒತ್ತುವುದಾಗಿತ್ತು.

**ಅಗ್ರಹಾರದ ಮಹಾಜನರಿಗೆ ವಿವಿಧ ರೀತಿಯ ದಾನ:** ಪುರೋಹಿತಶಾಹಿ ವರ್ಗಕ್ಕೆ ಉತ್ಪನ್ನ/ ಆದಾಯವನ್ನು ವರ್ಗಾಯಿಸುವುದರ ಜೊತೆಗೆ ಸಮಾಜದ ಇತರ ವರ್ಗದವರು ವಿವಿಧ ರೀತಿಯ ದಾನ ಮಾಡಿರುವುದನ್ನು ಕಾಣಬಹುದು. ಉದಾಹರಣೆಗೆ ಮಹಾಪ್ರಧಾನ ಸರ್ವಾಧಿಕಾರಿ ಶ್ರೀಕರಣದ ಹೆಗ್ಗಡೆ ಕೇತಣ್ಣನು ಕೆಲ್ಲಂಗೆರೆ ಅಗ್ರಹಾರದ ಬ್ರಾಹ್ಮಣರ ಆಹಾರ ಮತ್ತು ಅವರ ನಿರ್ವಹಣೆಗಾಗಿ ಗದ್ದೆ, ಹೊಲವನ್ನು ನೀಡಿದ್ದನ್ನು ಹಾಗೂ ಅಲ್ಲಿಯ ಚೆನ್ನಕೇಶವ ದೇವರ ಕಾರ್ಯಕ್ಕೆ ಭೂಮಿಯನ್ನು ನೀಡಿದ್ದನ್ನು ಕ್ರಿ.ಶ.೧೧೭೩ ರ ಕೆಲ್ಲಂಗೆರೆಯ ಶಾಸನವೊಂದು ತಿಳಿಸುತ್ತದೆ.[೨೨] ಮುರುಂಡಿಯ ಕ್ರಿ.ಶ.೧೧೭೪ ರ ಶಾಸನವು ಎರಡನೆ ಬಲ್ಲಾಳನು ಹೆಗ್ಗಡೆ ಎರೆಯಣ್ಣನಿಗೆ ಮುರಿಹಿಂಡಿ ಗ್ರಾಮವನ್ನು ಸರ್ವಭಾದಾಪರಿಹಾರವಾಗಿ ನೀಡಿದ್ದನ್ನು, ನಂತರ ಅದನ್ನು ಶ್ರೀ ನರಸಿಂಹಪುರ ಎಂಬ ಅಗ್ರಹಾರವನ್ನಾಗಿ ಮಾಡಿ ಅದನ್ನು ಕನ್ನಡ (ಕರ್ನಾಟ ಬಾಲಶಿಕ್ಷೆ) ಕಲಿಯುವ ೧೨ ವಿದ್ಯಾರ್ಥಿಗಳು, ಕಲಿಸುವ ೨೦ ಗುರುಗಳು ಮತ್ತು ಅಡಿಗೆಯವರ ಜೀವಿತಕ್ಕೆ ದಾನ ಮಾಡದ್ದನ್ನು ತಿಳಿಸುತ್ತದೆ.[೨೩] ಕ್ರಿ.ಶ.೧೧೭೫ರ ಅಲ್ಲಿಯ ಮತ್ತೊಂದು ಶಾಸನವು ಮಹಾಪ್ರಧಾನ ಸರ್ವಾಧಿಕಾರಿ ಶ್ರೀಕರಣದ ಹೆಗ್ಗಡೆಯ ಕೇತಣ್ಣನು ೧೮೦೦ ಅಡಿಕೆ ಮರಗಳಿದ್ದ ತೋಟವನ್ನು ೨೦೦೦ ಕಂಬ ಹೊಲವನ್ನು ಕ್ರಯಕ್ಕೆ ಕೊಂಡು ನಂತರ ಅದನ್ನು ಇಮ್ಮಡಿ ಬಲ್ಲಾಳನ ಉಪಸ್ಥಿತಿಯಲ್ಲಿ ಕೆಲ್ಲಂಗೆರೆ ಅಗ್ರಹಾರದ ಮಹಾಜನರಿಗೆ ನೀಡಿದ್ದನ್ನು ತಿಳಿಸುತ್ತದೆ. [೨೪] ಕೆಲ್ಲಂಗೆರೆಯ ಬ್ರಾಹ್ಮಣರು ಅಲ್ಲಿಯ ಚೆನ್ನಕೇಶವ ದೇವರ ಕಾರ್ಯಕ್ಕೆ ಭೂಮಿ ಮತ್ತು ಹತ್ತು ಗದ್ಯಾಣಗಳನ್ನು ಅಲ್ಲಿಯ ೨೦೦ ಮಹಾಜನರಿಗೆ ನೀಡಿದ್ದನ್ನು ಕ್ರಿ.ಶ. ೧೧೯೦ ರ ಕೆಲ್ಲಂಗೆರೆಯ ಶಾಸನ ತಿಳಿಸುತ್ತದೆ.[೨೫] ಇಲ್ಲಿ ಗಮನಿಸಬೇಕಾದ ಪ್ರಮುಖ ಅಂಶವೆಂದರೆ ಬ್ರಾಹ್ಮಣರು ಮಹಾಜನರಿಗೆ ಭೂಮಿ ಮತ್ತು ಹಣವನ್ನು ದಾನ ಮಾಡುವುದು. ಇದರಿಂದ ಕ್ರಿ.ಶ. ೧೨ನೆಯ ಶತಮಾನದ ಸಮಯಕ್ಕೆ ಬ್ರಾಹ್ಮಣರು ಪ್ರಬಲ ಭೂಮಾಲೀಕರಾಗಿ ಹೊರಹೊಮ್ಮಿದ್ದುದು ಕಂಡುಬರುತ್ತದೆ. ಕ್ರಿ.ಶ.೧೨೨೦ರ ತಳಲೂರು ಶಾಸನವು ಕೆಲವು ಭಕ್ತರು ಮಧುಸೂದನ ದೇವರ ಕಾರ್ಯಕ್ಕೆ ೩೫ ಗದ್ಯಾಣಗಳನ್ನು ಮತ್ತು ಭೂಮಿಯನ್ನು ಹಾಗೂ ಅಲ್ಲಿಯ ಕೆರೆಯ ನಿರ್ವಹಣೆಗಾಗಿ ಭೂಮಿಯನ್ನು ತಳಲೂರು ಅಗ್ರಹಾರದ ಮಹಾಜನರಿಗೆ ನೀಡಿದ್ದನ್ನು ತಿಳಿಸುತ್ತದೆ.[೨೬] ಕ್ರಿ.ಶ.೧೨೪೮ ರ ನೇರ್ಲಿಗೆಯ ತಾಮ್ರ ಶಾಸನವು ಹೊಯ್ಸಳ ದೊರೆಸೋಮೇಶ್ವರನು ನೇರ್ಲಿಗೆಯ ಉತ್ಪನ್ನದಲ್ಲಿ ಸ್ವಲ್ಪ ಭಾಗವನ್ನು ಅಲ್ಲಿಯ ಮಹಾಜನಗಳಿಗೆ ನೀಡಿದ್ದನ್ನು ತಿಳಿಸುತ್ತದೆ.[೨೭] ಅದೇ ಶಾಸನವು ಈ ಅಗ್ರಹಾರವನ್ನು ವೀರಬಲ್ಲಾಳ ಚತುರ್ವೇದಿಮಂಗಲವೆಂದು ಉಲ್ಲೇಖಿಸಿದೆ.[೨೮] ಕ್ರಿ.ಶ. ೧೨೬೫ ರ ಹಾರನಹಳ್ಳಿ ಶಾಸನವು ಕಂದಾಯ ಅಧಿಕಾರಿಗಳು ಭೂಕಂದಾಯದಿಂದ ಬಂದಂತಹ ಹಣವನ್ನು ಪಿರಿಯಪಟ್ಟದ ಹಿರಿಯಸೋಮನಾಥಪುರವಾದ ಹಾರನಹಳ್ಳಿಯ ಚೆನ್ನಕೇಶವ ದೇವರಿಗೆ ದಾನ ಮಾಡಿದ್ದನ್ನು ತಿಳಿಸುತ್ತದೆ.[೨೯] ಕ್ರಿ.ಶ. ೧೨೯೪ ರ ಕೆಲ್ಲಂಗೆರೆಯ ಶಾಸನವು ದೇವಪ್ಪನ ಮಗ ಚಂದಪ್ಪನು ಕೆರೆಯ ನಿರ್ವಹಣೆಗಾಗಿ ಒಂದು ಎತ್ತಿನ ಗಾಡಿಯನ್ನು ಕೆಲ್ಲಂಗೆರೆಯ ಮಹಾಜನರಿಗೆ ದಾನ ಮಾಡಿದ್ದನ್ನು, ಹಾಗೆಯೇ ಆ ಮಹಾಜನರು ಗಾಡಿಯ ಚಾಲಕನ ಜೀವಿತಕ್ಕೆ ಗದ್ದೆ ಮತ್ತು ಹೊಲವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೩೦] ಕ್ರಿ.ಶ.೧೩೧೮ರ ಅಲ್ಲಿಯ ಮತ್ತೊಂದು ಶಾಸನ ರಾಮಣ್ಣ ಎಂಬುವವನು ಕೆಲ್ಲಂಗೆರೆ ಅಗ್ರಹಾರದ ಮಹಾಜನರಿಗೆ ಒಂದು ಗದ್ಯಾಣವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. ಇದಕ್ಕೆ ಪ್ರತಿಯಾಗಿ ಮಹಾಜನರು ಅಲ್ಲಿಯ ಸಮಸ್ಯೆಗಳನ್ನು ನಿವಾರಿಸುವುದಾಗಿತ್ತು.[೩೧] ಈ ಮೇಲಿನ ವಿವರಣೆಗಳು ಅಗ್ರಹಾರದ ಜವಾಬ್ದಾರಿಯು ಮಹಾಜನರ ಕೈಯಲ್ಲಿದ್ದುದನ್ನು ಸ್ಪಷ್ಟವಾಗಿ ತಿಳಿಸುತ್ತವೆ.

**ಮಹಾಜನರಿಂದ ಭೂಮಿ ಮತ್ತಿತರ ದಾನಗಳು:** ಅಗ್ರಹಾರದ ಮಹಾಜನರು ಒಂದು ಸಂಘದಂತಿದ್ದು, ಪ್ರಮಾಣಿಕವಾಗಿ ಕಾರ್ಯ ನಿರ್ವಹಿಸುತಿದ್ದುದರಿಂದ ಸಮಾಜದ ಎಲ್ಲಾ ವರ್ಗದವರು ಅವರಿಗೆ ವಿವಿಧ ರೀತಿಯ ದಾನ ಮಾಡುತಿದ್ದರು. ದಾನದ ರೂಪದಲ್ಲಿ ಬಂದಂತಹ ಆಧಾಯವನ್ನು ಮಹಾಜನರು ವಿವಿಧ ಉದ್ದೇಶಗಳಿಗಾಗಿ ವಿನಿಯೋಗಿಸುತ್ತಿದ್ದರು. ಉದಾಹರಣೆಗೆ ಗಾಣಿಗ (ತೆಲ್ಲಿಗ) ಸಮುದಾಯದ ಜಕ್ಕವ್ವೆಯು ಕೆಲ್ಲಂಗೆರೆಯಲ್ಲಿ ಕಟ್ಟಿಸಿದ ಗ್ರಾಮೇಶ್ವರ ದೇವರಿಗೆ ಅಲ್ಲಿಯ ಅಗ್ರಹಾರದ ಮಹಾಜನರು ೫೦೦ ಕಂಬ ಗದ್ದೆ, ೭೦೦ ಕಂಬ ಹೊಲವನ್ನು ನೀಡಿದ್ದನ್ನು ಕ್ರಿ.ಶ.೧೧೪೨ರ ಕೆಲ್ಲಂಗೆರೆ ಶಾಸನವು ತಿಳಿಸುತ್ತದೆ.[೩೨] ಕ್ರಿ.ಶ.೧೧೬೧ರ ಕೆಲ್ಲಂಗೆರೆ ಶಾಸನವು ಕೆಲ್ಲಂಗೆರೆ ಅಗ್ರಹಾರದ ಮಹಾಜನಗಳು ಅಲ್ಲಿಯ ಧರ್ಮೇಶ್ವರ ದೇವರ ಅಮೃತಪಡಿಗೆ (ನೈವೇದ್ಯ), ನಂದಾದೀಪ, ಮತ್ತು ಗರ್ಭಗುಡಿಯ ನವೀಕರಣಕ್ಕಾಗಿ ಅಲ್ಲಿಯ ಸ್ಥಾನಿಕ ಶಿವಶಕ್ತಿ ಪಂಡಿತನಿಗೆ ಗದ್ದೆ, ತೋಟ, ಮತ್ತು ಹೊಲವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೩೩] ೧೨ನೆಯ ಶತಮಾನದ ತಳಲೂರು ಶಾಸನವು ತಳಲೂರು ಅಗ್ರಹಾರದ ಮಹಾಜನರು ಮಧುಸೂದನ ದೇವರಿಗೆ ದೇವಾಲಯವನ್ನು ಕಟ್ಟಿದು, ಹಾಗೂ ಅದರ ವಿಸ್ತರಣೆಗಾಗಿ ಮತ್ತು ಪೂಜಾ ಕೆಲಸಗಳಿಗಾಗಿ ಅಡಿಕೆ ತೋಟ, ಗದ್ದೆ, ಮತ್ತು ಹೊಲವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೩೪]

ಕ್ರಿ.ಶ.೧೧೮೧ರ ಕೆಲ್ಲಂಗೆರೆ ಶಾಸನವು ಒಂದು ಸಾವಿರ ಮಹಾಜನರು, ಅಲ್ಲಿಯ ವರ್ತಕರು, ಉಗುರು-೩೦೦, ಮತ್ತು ಪ್ರಜೆಗಾವುಂಡರೊಡಗೂಡಿ ಧರ್ಮೇಶ್ವರ ದೇವರ ನಂದಾ ದೀಪಕ್ಕೆ ಎಣ್ಣೆಯನ್ನು ಪೂರೈಸುವುದಕ್ಕಾಗಿ ಎರಡು ಎಣ್ಣೆಯ ಕೈಗಾಣಗಳನ್ನು ದಾನವಾಗಿ ನೀಡಿದ್ದನ್ನು ತಿಳಿಸುತ್ತದೆ.[೩೫] ಕ್ರಿ.ಶ.೧೨೩೪ರ ಹಾರನಹಳ್ಳಿ ಶಾಸನವು ಹಾರುವನಹಳ್ಳಿ ಅಗ್ರಹಾರದ ಮಹಾಜನರು ಶ್ರೀ ಲಕ್ಷ್ಮೀನರಸಿಂಹ ದೇವರ ದೇವಾಲಯದ ನಿರ್ವಹಣೆಗಾಗಿ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೩೬] ೧೨೩೯ ರ ಬಾಗಡೆಯ ಶಾಸನವು ಅಗ್ರಹಾರದ ಅಶೇಷ ಮಹಾಜನಗಳು ಗಡಿ ವಿವಾದದಲ್ಲಿ ಸತ್ತಂತಹ ಜಕ್ಕಯ್ಯನ ಕುಟುಂಬದವರಿಗೆ ೪೦೦ ಕಂಬ ಭೂಮಿಯನ್ನು ಉಂಬಳಿಯಾಗಿ ನೀಡಿದ್ದನ್ನು ತಿಳಿಸುತ್ತದೆ.[೩೭] ಕ್ರಿ.ಶ.೧೨೫೪ ರ ಹಿರಿಯೂರು ಶಾಸನವು ನಾಗರಹಳ್ಳಿ ಅಗ್ರಹಾರದ ಅಶೇಷ ಮಹಾಜನರು ಮುತ್ತನ ಹೊಸವೂರಿನ ಕುಂಜೇಶ್ವರ ದೇವಾಲಯದ ನವೀಕರಣೆಗಾಗಿ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೩೮] ಕೆಲ್ಲಂಗೆರೆಯ ಮಹಾಜನರು ಯಾವುದೋ ಉದ್ದೇಶಕ್ಕಾಗಿ ಬಮ್ಮಿಹಳ್ಳಿ ಮತ್ತು ಸೂಳೆಕೆರೆಯಲ್ಲಿ ಭೂದಾನ ಮಾಡಿದ್ದನ್ನು ಕ್ರಿ.ಶ.೧೨೯೮ರ ಸೂಳೆಕೆರೆ ಶಾಸನ ತಿಳಿಸುತ್ತದೆ.[೩೯] ಕ್ರಿ.ಶ.೧೧೫೮ರ ಕೋಡಿಹಳ್ಳಿ ಶಾಸನವು ತಳಿರೂರು ಅಗ್ರಹಾರದ ಮಹಾಜನರು ಮಲ್ಲಿಕಾರ್ಜುನ ದೇವರ ನೈವೇದ್ಯಕ್ಕಾಗಿ ಭೂಮಿಯನ್ನು ನೀಡಿದ್ದನ್ನು ಹಾಗೂ ಆ ಭೂಮಿಯನ್ನು ನಂತರ ಮಹಾದೇವ ಪಂಡಿತರಿಗೆ ನೀಡಿದ್ದನ್ನು ತಿಳಿಸುತ್ತದೆ.[೪೦] ೧೩೨೪ರ ಗಂಡಸಿಯ ಶಾಸನವು ಕಂಚಿಯ ನಾಯಕನು ಬಹುಶಃ ಕೆರೆಯನ್ನು ಕಟ್ಟಿಸಿದ್ದಕ್ಕಾಗಿ ಅವನಿಗೆ ಹಿರಿಯ ಗಂಡಸಿ ಅಗ್ರಹಾರದ ಅಶೇಷ ಮಹಾಜನಗಳು ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೪೧] ಕ್ರಿ.ಶ.೧೩೩೫ರ ಮಾಡಾಳು ಶಾಸನವು ಶ್ರೀಮದನಾದಿ ಅಗ್ರಹಾರ ಬಲ್ಲಾಳಪುರವೆಂದು ಪ್ರಸಿದ್ಧವಾಗಿದ್ದ ಕಿತ್ತನಕೆರೆಯು ಹಾಳಾಗಿದ್ದಾಗ ಅಲ್ಲಿಯ ಮಹಾಜನರುಕಾಮೇಯ ದಣ್ಣಾಯಕನ ಅನುಮತಿಯೊಂದಿಗೆ ಅದನ್ನು ನವೀಕರಿಸಿದ್ದನ್ನು ತಿಳಿಸುತ್ತದೆ.[೪೨] ಕ್ರಿ.ಶ.೧೩೬೮ರ ತಳಲೂರು ಶಾಸನವು ತಳಿರೂರು ಅಗ್ರಹಾರದ ಮಹಾಜನರು ಅಲ್ಲಿಯ ಮಧುಸೂದನ ದೇವರ ಕಾರ್ಯಕ್ಕೆ ಉಯ್ಯಗೊಂಡನ ಹಳ್ಳಿಯಲ್ಲಿ ಭೂದಾನ ಮಾಡಿದ್ದನ್ನು ತಿಳಿಸುತ್ತದೆ.[೪೩] ಕ್ರಿ.ಶ.೧೩೬೮ರ ಅರಸೀಕೆರೆ ಶಾಸನವು ಮಹಾಗ್ರಹಾರ ಅರಸೀಕೆರೆ ಅಶೇಷ ಮಹಾಜನಗಳು ಅಲ್ಲಿಯ ಸಾವಿರದ ಒಕ್ಕಲುಗಳೊಡನೆ ಸೇರಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿ ಅದರ ನಿರ್ವಹಣೆಗಾಗಿ ೪೦ ಕಂಬ ಗದ್ದೆಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.

**ಹಣ ಸಂದಾಯ:** ಅಗ್ರಹಾರದ ಮಹಾಜನರು ವಿವಿಧ ಉದ್ದೇಶಗಳಿಗಾಗಿ ಭೂಮಿಯನ್ನು ಕೊಡುವುದು ಜೊತೆಗೆ ಹಣವನ್ನು ಸಂದಾಯ ಮಾಡಿರುವುದು ಶಾಸನಗಳಿಂದ ಕಂಡುಬರುತ್ತದೆ. ಉದಾ: ಕ್ರಿ.ಶ.೧೧೯೧ರ ತಳಲೂರು ಶಾಸನವು ತಳಿರೂರು ಅಗ್ರಹಾರದ ಮಹಾಜನಗಳು ಚೆನ್ನಕೇಶವ ದೇವರಿಗೆ ನಿಗಧಿತ ಪ್ರಮಾಣದ ಶುಲ್ಕವನ್ನು ಪಾವತಿಸಿದ್ದನ್ನು ತಿಳಿಸುತ್ತದೆ.[೪೫] ತಳಲೂರಿನ ೧೨೭೧ರ ಶಾಸನವು ಅಲ್ಲಿಯ ಮಹಾಜನರು ತಮ್ಮ ಭೂಮಿಗೆ ನಾರಣಘಟ್ಟ ಕೆರೆಯಿಂದ ನೀರನ್ನು ಪಡೆದುದಕ್ಕೆ ಒಂದು ಗದ್ಯಾಣವನ್ನು ಪಾವತಿಸಿದ್ದನ್ನು ತಿಳಿಸುತ್ತದೆ.[೪೬] ಕೆಲ್ಲಂಗೆರೆಯ ೧೩೬೭ರ ಶಾಸನವು ಅಲ್ಲಿಯ ಮಹಾಜನರು ಕೆರೆಯ ಭಂಡಿಯನ್ನು ನಿರ್ವಹಿಸುತಿದ್ದವನ ಜೀವಿತಕ್ಕಾಗಿ ಮತ್ತು ಎತ್ತುಗಳು, ಕೋಣಗಳು, ಗಾಡಿಯ ಎಣ್ಣೆ, ಕಬ್ಬಿಣದ ಸಲಕರಣೆಗಳಾದ ಹಾರೆ, ಗುದ್ದಲಿ ಮುಂತಾದವುಗಳನ್ನು ಹೊಂದಲು ಅಲ್ಲಿಯ ಸುಂಕದಿಂದ ಬಂದ ಆದಾಯದಿಂದ ಹಣವನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ.[೪೭]

**ಮಹಾಜನರ ಅನುಮತಿ ಪಡೆದು ಇತರರು ದೇವಾಲಯಗಳನ್ನು ಕಟ್ಟುತಿದ್ದುದು:** ಕ್ರಿ.ಶ.೧೨೩೨ರ ಬೆಂಡೆಕೆರೆ ಶಾಸನವು ಮಹಾವಡ್ಡವ್ಯವಹಾರಿ, ಉಭಯ ನಾನಾದೇಶಿ ವರ್ತಕನಾದ ದಾಮೋದರ ಶೆಟ್ಟಿಯು ಶ್ರೀಮದನಾದಿ ಅಗ್ರಹಾರ, ಜಯಗೊಂಡಪುರವೆಂದು ಕರೆಯಲಾಗುತ್ತಿದ್ದ ಬೆಂಡೆಕೆರೆಯಲ್ಲಿ ಅಲ್ಲಿಯ ೫೨ ಮಹಾಜನಗಳ ಅನುಮತಿ ಪಡೆದು ತನ್ನ ಹೆಸರಿನಲ್ಲಿ ದಾಮೋದರೇಶ್ವರ ಎಂಬ ಶಿವಾಲಯವನ್ನು ಕಟ್ಟಿಸಿ ಅದರ ಪೂಜಾ ಕೆಲಸಗಳಿಗೆ (ಅಂಗಭೋಗ, ರಂಗಭೋಗ) ೮೦ ಕಂಬ ಗದ್ದೆಯನ್ನು ಅರಕೆರೆಯ ಕೆರೆಯ ಕೆಳಗೆ ದಾನ ನೀಡಿದ್ದನ್ನು ತಿಳಿಸುತ್ತದೆ.[೪೮] ಕ್ರಿ.ಶ.೧೨೩೩ರ ಅರಕೆರೆ ಶಾಸನವು ಕೇರಳದ ಶ್ರೀಮಂತ ವರ್ತಕ ವಡ್ಡವ್ಯವಹಾರಿ ದಾಮೋದರ ಶೆಟ್ಟಿಯು ಸರ್ವಜ್ಞಪುರ, ಪಿರಿಯ ಅಗ್ರಹಾರವೆನಿಸಿದ್ದ ಅರಕೆರೆಯಲ್ಲಿ ಅಲ್ಲಿಯ ಮಹಾಜನರ ಅನುಮತಿ ಪಡೆದು ಚೆನ್ನಕೇಶವ, ಲಕ್ಷ್ಮಿ ನಾರಾಯಣ ಮತ್ತು ಗೋಪಾಲದೇವರಿಗೆ (ತ್ರಿಕೂಟಾಚಲ) ದೇವಾಲಯುವನ್ನು ಕಟ್ಟಿಸಿ ಅದರ ನಿರ್ವಹಣೆಗಾಗಿ ಭೂಮಿಯನ್ನು ದಾನ ಮಾಡಿದ್ದನ್ನು ತಿಳಿಸುತ್ತದೆ. [೪೯] ಬೆಂಡೆಕೆರೆ ಮತ್ತು ಅರಕೆರೆ ಗ್ರಾಮಗಳು ಅಗ್ರಹಾರಗಳಾಗಿದ್ದರಿಂದಲೂ ಮತ್ತು ದಾಮೋದರ ಶೆಟ್ಟಿಯು ಕೇರಳದವನಾಗಿದ್ದರಿಂದ ಮಹಾಜನರ ಅನುಮತಿ ಪಡೆದು ದೇವಾಲಯ ಮತ್ತಿತರ

ಕೆಲಸ ಕಾರ್ಯಗಳನ್ನು ಮಾಡುವುದು ಅನಿವಾರ್ಯವಾಗಿತ್ತೆಂದು ಮೇಲಿನ ಎರಡು ಶಾಸನಗಳಿಂದ ತಿಳಿದು ಬರುತ್ತದೆ. ಇದಲ್ಲದೆ ಈ ಎರಡು ಅಗ್ರಹಾರಗಳು ಸರ್ವನಮಸ್ಯ ಅಗ್ರಹಾರಗಳಾಗಿದ್ದು, ಅಲ್ಲಿಯ ಸಂಪೂರ್ಣ ಜವಾಬ್ದಾರಿ ಮತ್ತು ಹತೋಟಿ ಮಹಾಜನರ ಹಿಡಿತದಲ್ಲಿದ್ದುದನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು.

**ಭೂಮಿಯನ್ನು ಕೊಳ್ಳುವುದು ಮತ್ತು ಮಾರುವುದು:** ಮಹಾಜನರು ವಿವಿಧ ಕಾರ್ಯಗಳಿಗೆ ಸ್ಥಳೀಯ ಆದಾಯವನ್ನು ವಿನಿಯೋಗ ಮಾಡುವುದರ ಜೊತೆಗೆ ಭೂಮಿಯ ಮೇಲೆ ಬಂಡವಾಳ ಹೂಡುವುದನ್ನು ಗಮನಿಸಿದರೆ ಮಧ್ಯಕಾಲೀನ ಆರ್ಥಿಕ ವ್ಯವಸ್ಥೆಯಲ್ಲಿ ಭೂಮಿಗಿದ್ದ ಸ್ಥಾನ ಮತ್ತು ಮೌಲ್ಯವನ್ನು ಅರಿಯಬಹುದು. ಉದಾ: ಉಂಡಿಗನಾಳಿನ ೧೨೩೪ರ ಶಾಸನವು ಹಾರುವನಹಳ್ಳಿ ಅಗ್ರಹಾರದ ಮಹಾಜನರು ಅಲ್ಲಿಯ ಪ್ರಜೆಗಳೊಡಗೂಡಿ ಉಂಡಿಗನಾಳಿನ ನಿಂಬೇಶ್ವರ ದೇವರ ಸೇವಾ ಕಾರ್ಯಕ್ಕೆ ಮತ್ತು ಅದರ ನಂದಾದೀವಿಗೆಗೆ, ನೈವೇದ್ಯಕ್ಕೆ ಮಾಚಜೀಯನಿಂದ ಭೂಮಿಯನ್ನು ಕ್ರಯಕ್ಕೆ ಕೊಂಡು ದಾನ ಮಾಡಿದ್ದನ್ನು ತಿಳಿಸುತ್ತದೆ.[೫೦] ಕೆಲ್ಲಂಗೆರೆಯ ೧೨೮೮ರ ಶಾಸನವು ಅಗ್ರಹಾರ ಕೆಲ್ಲಂಗೆರೆಯ ಮಹಾಜನರು ೧೦೦೦ ಕಂಬ ಭೂಮಿಯನ್ನು ಕ್ರಯಕ್ಕೆ ಕೊಂಡಿದ್ದನ್ನು ತಿಳಿಸುತ್ತದೆ.[೫೧] ಸೂಳೆಕೆರೆಯ ೧೩೧೦ರ ಶಾಸನವು ಕೆಲ್ಲಂಗೆರೆ ಅಗ್ರಹಾರದ ಮಹಾಜನರು ವಿಠಲಪ್ರಭು ಎಂಬುವವನಿಗೆ ಭೂಮಿಯನ್ನು ಮಾರಿದ್ದನ್ನು ಹಾಗೂ ಅವರು ಕೆಲವು ತೆರಿಗೆಗಳನ್ನು ಪಾವತಿಸಿದ್ದನ್ನು ತಿಳಿಸುತ್ತದೆ.[೫೨] ಇದುವರೆಗೂ ಬ್ರಾಹ್ಮಣರು ಭೂಮಿಯನ್ನು ದಾನದ ರೂಪದಲ್ಲಿ ಪಡೆಯುತಿದ್ದವರು ೧೩ನೆಯ ಶತಮಾನದ ವೇಳೆಗೆ ತಾವೂ ಕೂಡ ದೇವಾಲಯ ಮತ್ತಿತರ ಕಾರ್ಯಗಳಿಗೆ ಭೂಮಿಯನ್ನು ದಾನ ಮಾಡುವುದು, ಕೊಳ್ಳುವುದು ಮತ್ತು ಮಾರುವುದರಲ್ಲಿ ತೊಡಗಿಸಿಕೊಂಡಿರುವುದನ್ನು ಗಮನಿಸಿದರೆ ಪುರೋಹಿತಶಾಹಿ ವರ್ಗವೂ ಸಹ ಭೂಮಿಯನ್ನು ಹೊಂದಿ/ಭೂಮಾಲೀಕರಾಗಿ ಆ ಮುಖಾಂತರ ತಮ್ಮ ಆರ್ಥಿಕ, ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಉತ್ತಮ ಪಡಿಸಿಕೊಳ್ಳಲು ಹವಣಿಸುತ್ತಿದ್ದುದು ಕಂಡು ಬರುತ್ತದೆ.

**ಶೈವರಿಗೂ ಮತ್ತು ಬ್ರಾಹ್ಮಣರ ನಡುವೆ ಇದ್ದ ಸಮಸ್ಯೆಗಳು:** ೧೨೭೪ರ ಶಾಸನವು ಶೈವ ಮತ್ತು ಬ್ರಾಹ್ಮಣರ ನಡುವೆ ಅಲ್ಲಿಯ ಉತ್ಪನ್ನದ ಬಗ್ಗೆ ಸಮಸ್ಯೆ ಬಂದಾಗ ಅದನ್ನು ಚರ್ಚಿಸಿ ಒಪ್ಪಂದಕ್ಕೆ ಬಂದಿದ್ದನ್ನುತಿಳಿಸುತ್ತದೆ. ಇದರ ಪ್ರಕಾರ ಕಣಕಟ್ಟೆಯ ಅಗ್ರಹಾರದ ಒಟ್ಟು ಉತ್ಪನ್ನವಾದ ಐದು ಗದ್ಯಾಣದಲ್ಲಿ ಐದು ಹಣವನ್ನು (೧.೧೦) ಶೈವ ದೇವಾಲಯದ (ಕಮ್ಮಟೇಶ್ವರ) ಖರ್ಚಿಗೆ ಬಿಟ್ಟು ಉಳಿದ ೪ ೧/೨ ಗದ್ಯಾಣವನ್ನು ಮಹಾಜನರು ಇಟ್ಟುಕೊಳ್ಳುವಂತೆ ತೀರ್ಮಾನಿಸಲಾಯಿತು.[೫೩] ಕಣಕಟ್ಟೆಯ ಅದೇ ಕಾಲದ ಇನ್ನೊಂದು ಶಾಸನವು ಅವರೀರ್ವರ ನಡುವೆ ಭೂಮಿಗೆ ಸಂಬಂಧಪಟ್ಟ ಸಮಸ್ಯೆಯಿದ್ದುದನ್ನು ತಿಳಿಸುತ್ತದೆ. ಅದರ ಪ್ರಕಾರ ಮಹಾಜನರಿಗೆ ಸೇರಿದ್ದ ಭೂಮಿಯನ್ನು ಅಕ್ರಮವಾಗಿ ಕಮ್ಮಟೇಶ್ವರ ದೇವಾಲಯದ ಶೈವ ಅರ್ಚಕರು ಅನುಭವಿಸುತಿದ್ದರು. ಇದನ್ನು ಅಲ್ಲಿಯ ಗಾವುಂಡರು, ಹುಳಿಯಾರುನಾಡಿನ ಪ್ರಭು ಮತ್ತು ಶ್ರೀಮಂತ ವರ್ತಕ ಪೊನ್ನಚಶೆಟ್ಟಿ ಪರಿಶೀಲಿಸಿ ಆ ಭೂಮಿಯನ್ನು ಮತ್ತೆ ಮಹಾಜನರಿಗೆ ವಾಪಸ್ಸು ಮಾಡಲಾಯಿತು.[೫೪]

**ಉಪಸಂಹಾರ:** ಅಗ್ರಹಾರಗಳು ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಗಣನೀಯ ಪಾತ್ರವನ್ನು ವಹಿಸಿದ್ದನ್ನು ಮೇಲಿನ ವಿವರಣೆಗಳಿಂದ ತಿಳಿಯಬಹುದು,. ಗುಪ್ತರ ಆಳ್ವಿಕೆಯನಂತರ ರಾಜಕೀಯ ಅಸ್ತಿರತೆಯಿಂದಾಗಿ ಅವರ ಸ್ಥಾನದಲ್ಲಿ ಸಣ್ಣಪುಟ್ಟ ಅಧಿಕಾರಿಗಳು ಗ್ರಾಮಾಂತರ ಪ್ರದೇಶಗಳಲ್ಲಿ ತಮ್ಮ ಅಧಿಕಾರವನ್ನು ಶಾಶ್ವತ ಹಾಗೂ ವಂಶ ಪಾರಂಪರ್ಯಗೊಳಿಸುವ ನಿಟ್ಟಿನಲ್ಲಿ ಪುರೋಹಿತಶಾಹಿ ವರ್ಗದ ನೆರವನ್ನು ಗಣನೀಯ ಪ್ರಮಾಣದಲ್ಲಿ ಪಡೆಯಲಾರಂಭಿಸಿತ್ತು. ಪುರೋಹಿತಶಾಹಿ ವರ್ಗವು ವೇದ, ಶಾಸ್ತ್ರ, ಪಂಚಾಂಗ ಮತ್ತಿತರ ಕ್ಷೇತ್ರಗಳಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದರಿಂದ ಅವರು ಶೂದ್ರ ವರ್ಗಕ್ಕೆ ಸೇರಿದ ಆಡಳಿತಗಾರರ ವಂಶಾವಳಿ ಹಾಗೂ ಪ್ರಶಸ್ತಿಗಳನ್ನು ರಚಿಸಿ ಅವರನ್ನು ಸೂರ್ಯ ವಂಶ ಮತ್ತು ಚಂದ್ರ ವಂಶಗಳಿಗೆ ಸೇರಿಸುವುದು ಮತ್ತು ಪೌರಾಣಿಕ ವ್ಯಕ್ತಿ/ನಾಯಕರೊಂದಿಗೆ ಹೋಲಿಕೆ ಮಾಡುವ ಅಥವಾ ಸಂಬಂಧ ಬೆಳೆಸುವ ಮುಖಾಂತರ ಆಳುವ ವರ್ಗದ ಸ್ಥಾನಮಾನಗಳನ್ನು ಕಾನೂನು ಬದ್ಧ ಮಾಡುವುದರ ಜೊತೆಗೆ ಅವುಗಳನ್ನು ಪಾವಿತ್ರ್ಯಗೊಳಿಸಿ ಅವರನ್ನುಅಂದಿನ ಸಮಾಜದಲ್ಲಿ ಉನ್ನತ ಮಟ್ಟಕ್ಕೇರಿಸಿದರು. ಎರಡನೆಯದಾಗಿ ಗುಪ್ತರ ಆಳ್ವಿಕೆನಂತರ ಅಂತರರಾಷ್ಟ್ರೀಯ ವ್ಯಾಪಾರ (ರೋಮ್) ಕುಸಿದು ಉತ್ತರ ಭಾರತದಲ್ಲಿ ನಗರಗಳುಕ್ಷೀಣಿಸಿ ಪುರೋಹಿತಶಾಹಿ ವರ್ಗ ತನ್ನ ಬೆಂಬಲಿಗರನ್ನು ಕಳೆದುಕೊಳ್ಳಲಾರಂಭಿಸಿದಾಗ ಅವರು ನಗರಗಳನ್ನು ತೊರೆದು ಗ್ರಾಮೀಣ ಪ್ರದೇಶಗಳ ಕಡೆ ವಲಸೆ ಬರಲಾರಂಭಿಸಿದರು. ಗ್ರಾಮೀಣ ಪ್ರದೇಶಗಳಲ್ಲಿ ಅವರು ತಮ್ಮ ಪಂಚಾಂಗದ ಮುಖಾಂತರ ಮಳೆ ಬೀಳುವ ಕಾಲ, ಉಳುಮೆಯ ಕಾಲ, ಬೀಜ ಸಂರಕ್ಷಣೆ, ಗೊಬ್ಬರ ತಯಾರಿಕೆ,ನೀರನ್ನು ಸಂಗ್ರಹಿಸಿ ಅದನ್ನು ಕೃಷಿಗೆ ಸದುಪಯೋಗ ಪಡಿಸಿಕೊಳ್ಳುವ ಅರಿವನ್ನು ಹೆಚ್ಚಿನ ಪ್ರಮಾಣದಲ್ಲಿ

ನೀಡಲಾರಂಭಿಸಿದರು. ಇದರಿಂದಾಗಿ ರೈತರು ಹೆಚ್ಚು ಪ್ರಮಾಣದ ಕೃಷಿ ಉತ್ಪನ್ನಗಳನ್ನು ಬೆಳೆದು ಅಧಿಕ ಲಾಭಗಳಿಸಲಾರಂಭಿಸಿದರು. ಇದಲ್ಲದೇ ಇದೇ ಸಮಯದಲ್ಲಿ ಕೃಷಿ ಆಧಾರಿತ ಗುಡಿ ಕೈಗಾರಿಕೆಗಳು ಸ್ತಿತ್ವಕ್ಕೆ ಬಂದು ಅರ್ಥಿಕ ಕ್ಷೇತ್ರದಲ್ಲಿ ಮಹತ್ತರ ಪಾತ್ರವನ್ನು ವಹಿಸಿದ್ದನ್ನು ಕಾಣಬಹುದು. ಇಂತಹ ಬೆಳವಣಿಗೆಗಳಿಂದಾಗಿ ಸ್ಥಳೀಯ ವ್ಯಾಪಾರ, ಅಂತರರಾಷ್ಟ್ರೀಯ ವ್ಯಾಪಾರ, ವ್ಯಾಪಾರಕೇಂದ್ರಗಳು, ವ್ಯಾಪಾರ ಸಂಘಗಳು ಅಸ್ತಿತ್ವಕ್ಕೆ ಬಂದವು. ಇದರಿಂದಾಗಿ ಮಧ್ಯಕಾಲೀನ ಕರ್ನಾಟಕದಲ್ಲಿ ಸಾಹಿತ್ಯ, ಶಿಲ್ಪಕಲೆ, ಶಿಕ್ಷಣ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳು ಬೆಳೆದು ಅಂದಿನ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಜೀವನದ ಮೇಲೆ ಗಣನೀಯ ಪ್ರಭಾವವನ್ನು ಬೀರಿದ್ದವು. ಇಂತಹ ಬೆಳವಣಿಗೆಗಳಿಂದಾಗಿ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದಂತಹ ಆರ್ಯ ವಂಶಕ್ಕೆ ಸೇರಿದ ಬ್ರಾಹ್ಮಣರು ಇಲ್ಲಿಯ ಸ್ಥಳೀಯ ಆಳರಸರ ಸಹಾಯದಿಂದ ಭದ್ರ ನೆಲೆಯೂರಿ ತಮ್ಮ ಸಂಸ್ಕೃತಿಯನ್ನು ಸ್ಥಳೀಯಗೊಳಿಸುವಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿದ್ದನ್ನು ಸ್ಪಷ್ಟವಾಗಿ ಕಾಣಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಜಿ.ಎಮ್.ಮೊರೇಸ್‌ರವರ **ಕದಂಬಕುಲ**, ಮರು ಮುದ್ರಣ, (ಮದ್ರಾಸ್, ೧೯೯೦), ಚಿದಾನಂದ ಮೂರ್ತಿಯವರ **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, (ಮೈಸೂರು, ೧೯೭೯), ಲೀಲಾ ಶಾಂತಕುಮಾರಿಯವರ **ಹಿಸ್ಟರಿ ಆಫ್ ದಿ ಅಗ್ರಹಾರಾಸ್ ಇನ್ ಕರ್ನಾಟಕ**, ೪೦೦–೧೩೦೦, (ಮದ್ರಾಸ್, ೧೯೮೬), ಮತ್ತು ವಸಂತಲಕ್ಷ್ಮಿಯವರ ಲೇಖನ **'ಹಾಸನ ಜಿಲ್ಲೆಯ ಕೇಶವಪುರಗಳು'** ಇತಿಹಾಸ ದರ್ಶನ, ಸಂಪುಟ.೧೭, (ಬೆಂಗಳೂರು, ೨೦೦೨) ಮತ್ತಿತರ ಬರಹಗಳು ಮತ್ತು ಲೇಖನಗಳು ಅಗ್ರಹಾರಗಳನ್ನು ಕುರಿತು ಸಾಕಷ್ಟು ಮಾಹಿತಿ ನೀಡುತ್ತವೆ. ಆದರೆ ಅರಸೀಕೆರೆಯ ಅಗ್ರಹಾರಗಳನ್ನು ಕುರಿತು ಸಮಗ್ರವಾದ ಅಧ್ಯಯನಗಳು ಇದುವರೆಗೂ ಆಗಿಲ್ಲ.

೨. ಎಸ್.ಕೆ. ಕೊಪ್ಪಾ., 'ಅಗ್ರಹಾರ–ಭತ್ತಗ್ರಾಮ : ಒಂದು ಟಿಪ್ಪಣಿ' ಇನ್ **ಇತಿಹಾಸ ದರ್ಶನ**, ಸಂಪುಟ ೫, (ಬೆಂಗಳೂರು, ೧೯೯೦), ಪು ಟ ೧೦೭.

೩. ಆರ್.ಎಸ್. ಶರ್ಮಾ., **ಇಂಡಿಯನ್ ಫ್ಯೂಡಲಿಸಂ**, ೩೦೦–೧೨೦೦, (ಮದ್ರಾಸ್, ೧೯೬೫), ಪುಟ ೨–೩.

೪. ಅದೇ., ಪುಟ ೪.

೫. ಕ್ರಿ.ಶ. ೪೫೦ ರ ತಾಳಗುಂದದ ಶಾಸನವು ಕದಂಬ ವಂಶದ ಸ್ಥಾಪಕನಾದ ಮಯೂರ ಶರ್ಮನು ತನ್ನ ಪ್ರಾಥಮಿಕ ವಿದ್ಯಾಭ್ಯಾಸವನ್ನು ತಾಳಗುಂದ ಅಗ್ರಹಾರದಲ್ಲಿ ಮುಗಿಸಿದನಂತರ ತನ್ನ ಅಜ್ಜನೊಂದಿಗೆ ಉನ್ನತ ವಿದ್ಯಾಭ್ಯಾಸಕ್ಕಾಗಿ ಕಂಚಿಯ ಘಟಿಕಾಸ್ಥಾನಕ್ಕೆ ಹೋಗಿದ್ದುದನ್ನು ತಿಳಿಸುತ್ತದೆ. ಹೆಚ್ಚಿನ ಮಾಹಿತಿಗಾಗಿ ನೋಡಿ.

೬ ಲೀಲಾ ಶಾಂತಕುಮಾರಿ., ಪೂರ್ವೋಕ್ತ., ಪುಟ ೧೮–೨೧.

೭. ಅದೇ., ಪುಟ ೨೪.

೮. ವಸಂತಲಕ್ಷ್ಮಿ ಕೆ., 'ಹಾಸನ ಜಿಲ್ಲೆಯ ಕೇಶವಪುರಗಳು', ಇನ್ **ಇತಿಹಾಸ ದರ್ಶನ**, ಸಂಪುಟ.೧೭, (ಬೆಂಗಳೂರು, ೨೦೦೨೦), ಪು೧ ೨೧೨.

೯. ಕೊಪ್ಪಾ ಎಸ್.ಕೆ., ಪೂರ್ವೋಕ್ತ., ಪುಟ ೧೦೬.

೧೦. ಸಾಮಕ್ ಎಸ್.ಜಿ. 'ಬಾಳಗಾರು ಅಗ್ರಹಾರದ ಪ್ರಾಚ್ಯಾವಶೇಷಗಳು', **ಇತಿಹಾಸ ದರ್ಶನ**, ಸಂಪುಟ ೧೭, (ಬೆಂಗಳೂರು ೨೦೦೨), ಪುಟ ೧೮೧.

೧೧. ಲೀಲಾ ಶಾಂತಕುಮಾರಿ., ಪೂರ್ವೋಕ್ತ, ಪು೧ ೬೪.

೧೨. ಅದೇ., ಪು. ೧೨೩.

೧೩. ವಸಂತಲಕ್ಷ್ಮಿ., ಪೂರ್ವೋಕ್ತ., ಪುಟ ೧೬೮–೬೯.

೧೪. ಹನುಮನಾಯಕ, 'ಅರಸೀಕೆರೆ ತಾಲ್ಲೂಕಿನ ಎರಡು ಅಪ್ರಕಟಿತ ಶಾಸನವುಳ್ಳ ವೀರಗಲ್ಲುಗಳು', **ಇತಿಹಾಸ ದರ್ಶನ**, ಸಂಪುಟ.೧೦, ಬೆಂಗಳೂರು, ೧೯೯೫, ಪುಟ ೯೩–೯೬.

೧೫. ಲೀಲಾ ಶಾಂತಕುಮಾರಿ, ಪೂರ್ವೋಕ್ತ., ಪುಟ ೭೧–೭೨.

೧೬. ಅದೇ., ಪು. ೭೨.

೧೭. **ಎಪಿಗ್ರಾಫಿಯ ಕರ್ನಾಟಿಕ.**, ಸಂಪುಟ ೧೦, (ಪರಿಷ್ಕೃತ), ಅರಸೀಕೆರೆ ೫೭.

೧೮. ಜಿ.ಎಮ್. ಮೊರೇಸ್, ಪೂರ್ವೋಕ್ತ, ಪುಟ ೨೯೯.

೧೯. ಚಿದಾನಂದಮೂರ್ತಿ, ಪೂರ್ವೋಕ್ತ., ಪುಟ ೨೧೬.

೨೦ ರಿಂದ ೫೬ ಕ್ರಮವಾಗಿ ಎ.ಕ. ೧೦. ಅರಸೀಕೆರೆ ೧೮೪, ೩೯, ೩೧೮, ೧೨೪, ೧೫೧, ೨೨೭, ೧೫೨, ೧೫೭, ೧೬೬, ೨೮೬, ೨೮೬, ೨೩೩, ೧೫೬, ೧೫೪, ೧೪೯, ೧೭೪, ೧೬೦, ೧೬೩, ೩೨೫, ೨೩೨, ೨೧೩, ೨೧೭, ೧೪೨, ೧೯೭, ೧೧೫, ೧೬೭, ೧, ೧೬೧, ೧೬೫, ೧೫೩, ೫೨, ೩೧೪, ೨೪೯, ೧೫೯, ೧೪೪, ೯೧, ೮೯.



# ಚನ್ನರಾಯಪಟ್ಟಣ ತಾಲೂಕಿನ ಹೊಯ್ಸಳರ ಕಾಲದ ಶಾಸನೋಕ್ತ ತೆರಿಗೆಗಳು

**ಶ್ರೀ ಮಧುರಾಜ್***

**'ಕಂದಾಯ ಪದಗಳ'** ಮಹತ್ವವನ್ನು ಮನಗಾಣುವ ದೃಷ್ಟಿಯಿಂದ ಹಾಸನ ಜಿಲ್ಲೆಯ ಚನ್ನರಾಯ ಪಟ್ಟಣ ತಾಲೂಕಿನಲ್ಲಿ ದೊರೆತ ಶಾಸನಗಳಲ್ಲಿ ಕಂಡು ಬಂದ 'ತೆರಿಗೆಯ ಪದ'ಗಳನ್ನು ಬಳಸಿಕೊಂಡು ಭೌಗೋಳಿಕ ಸನ್ನಿವೇಶದ ಅನುಸಾರ ವಿಧಿಸಲಾದ ತೆರಿಗೆಗಳ ಬಗ್ಗೆ ಅಧ್ಯಯನ ನಡೆಸಿ ಕಂದಾಯ ಪದ್ಧತಿಯ ರೂಪುರೇಷೆಗಳನ್ನು ವಿಶ್ಲೇಷಿಸುವ ಒಂದು ಪ್ರಯತ್ನ ಇದಾಗಿದೆ. ಇಲ್ಲಿ ಹೊಯ್ಸಳರ ಆಳ್ವಿಕೆಯ ಅವಧಿಗೆ ಸೇರಿದಂತಹ ಶಾಸನಗಳನ್ನು ಮಾತ್ರ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಚನ್ನರಾಯಪಟ್ಟಣ ತಾಲೂಕಿನಲ್ಲಿ ಒಟ್ಟು ನೂರ ನಲವತ್ತ ಮೂರು ಶಾಸನಗಳು ದೊರೆತಿದ್ದು, ಇದರಲ್ಲಿ ೫೮ (ಐವತ್ತೆಂಟು) ಶಾಸನಗಳು ಹೊಯ್ಸಳರ ಆಳ್ವಿಕೆಯ ಕಾಲಾವಧಿಗೆ ಸಂಬಂಧಪಟ್ಟದ್ದಾಗಿರುತ್ತದೆ. ಇಲ್ಲಿ ಹದಿನಾಲ್ಕು ಶಾಸನಗಳಲ್ಲಿ ಮಾತ್ರ ತೆರಿಗೆ ಅಥವಾ ಶುಲ್ಕದ ಪದಗಳನ್ನು ನಾವು ಕಾಣಬಹುದಾಗಿದೆ. ಶಾಸನಗಳಲ್ಲಿ ಅಭ್ಯಾಗತೆ, ಕಿರುಕುಳ, ಪಟ್ಟಭದ್ದ, ಆನೆಯ ಸೆಸೆ, ಕುದುರೆಯ ಸೆಸೆ, ಖಾಣ, ವೊಳವಾರು, ಹೊರವಾರು, ವೊದಲ ಸಿದ್ಧಾಯ, ವೋವತ್ತಕಾರುಣ್ಯ, ಮಗ್ಗಮಾನ್ಯ, ವೂರಮಳಬ್ರಯ, ತಿಪ್ಪೆ ಸುಂಕ, ಗಾಣದೆರೆ, ಸೆಸೆ ಮಾನ್ಯ, ಸೆಸೆ, ಹದಿಕೆ ಮುಂತಾದ ಒಟ್ಟು ಮೂವತ್ತೇಳು ತೆರಿಗೆಯ ಪದಗಳ ಉಲ್ಲೇಖವಿದೆ. ಚನ್ನರಾಯ ಪಟ್ಟಣ ತಾಲೂಕಿನಲ್ಲಿ ಕಂಡುಬರುವ ಒಟ್ಟು ಶುಲ್ಕ ಪದಗಳ ಸಂಖ್ಯೆ ಇಪ್ಪತ್ತೈದು. ಈ ಶಾಸನಗಳನ್ನು ಕಾಲಾನುಕ್ರಮದಲ್ಲಿ ಜೋಡಿಸಿದಾಗ ಕ್ರಿ.ಶ. ೧೧೧೭ ರಿಂದ ಕ್ರಿ.ಶ. ೧೨೭೬ರ ವರೆಗಿನ ಅವಧಿಯದ್ದಾಗಿದೆ. ಪ್ರಪ್ರಥಮ ಬಾರಿಗೆ ಕಂಡು ಬರುವಂತಹ ತೆರಿಗೆಯ ಪದ 'ಸೆಸೆ' ಇದು ಕ್ರಿ.ಶ. ೧೨ನೆಯ ಶತಮಾನದ 'ಜನಿವಾರ'[೧] ಶಾಸನದಲ್ಲಿ ನೋಡಬಹುದಾಗಿದೆ.

ಅತ್ಯಂತ ಹೆಚ್ಚು ಉಲ್ಲೇಖವಾದ 'ಸಿದ್ಧಾಯ' ಎಂಬ ತೆರಿಗೆಯ ಪದ ಎಂಟು ಬಾರಿ ಪುನರ್ಬಳಕೆಯಾದುದನ್ನು ನೋಡಬಹುದು. ಮಾತ್ರವಲ್ಲ, ಈ ಪದ ಎಲ್ಲಾ ಕಾಲಘಟ್ಟದಲ್ಲಿ ಕಾಣಸಿಕ್ಕಿದ್ದು ಅತ್ಯಂತ ಪ್ರಧಾನವಾದ ಆದಾಯದ ಮೂಲವಾಗಿದ್ದು ಇಂತಹ 'ಸಿದ್ಧಾಯ' ಪದವು ಸಿದ್ಧ + ಆಯ ಎನ್ನುವ ಪದದಿಂದ ರಚಿತವಾಗಿದ್ದು ಸ್ಥಿರವಾದ ಅಥವಾ ಖಚಿತವಾದ ಆದಾಯ ಎನ್ನುವ ಅರ್ಥವನ್ನು ಕೊಡುತ್ತವೆ[೨]. ಆದ್ದರಿಂದ ಈ ತೆರಿಗೆ ರಾಜ್ಯದ ಆದಾಯದ ಪ್ರಧಾನ ಆಕರವಾಗಿತ್ತೆಂದರೆ ತಪ್ಪಾಗಲಾರದು. ಈ ತೆರಿಗೆಯ ಪದವನ್ನು ಸಾಮಾನ್ಯವಾಗಿ ಭೂಮಿಯ ಒಡೆತನದ ಮೇಲೆ ವಿಧಿಸುತ್ತಿದ್ದ ತೆರಿಗೆಯೆಂದು ಭಾವಿಸಲಾಗಿತ್ತು. ಆದರೆ ಇದನ್ನು ಮನೆ, ಅಂಗಡಿ ಹಾಗೂ ಅಗ್ರಹಾರ ಹಳ್ಳಿಗಳ ಮೇಲೆ ವಿಧಿಸುವ ಪದಗಳ ಜೊತೆಗೆ ಬಳಕೆಯಾಗಿರುವುದನ್ನು ನಾವು ವಿವಿಧ ಶಾಸನಗಳಲ್ಲಿ ನೋಡಬಹುದಾಗಿದೆ. ಆದ್ದರಿಂದ ಸಿದ್ಧಾಯ ಕೇವಲ ಕೃಷಿ ಭೂಮಿಯ ಮೇಲೆ ವಿಧಿಸಿದ ಶುಲ್ಕವಾಗಿರದೆ ಇತರ ಮೂಲಗಳಿಂದಲೂ ಒಗ್ಗೂಡಿದಂತಹ ಶುಲ್ಕವೂ ಹೌದು, ಹೆಚ್ಚಾಗಿ 'ಸಿದ್ಧಾಯ'ವನ್ನು ವಾರ್ಷಿಕವಾಗಿ ನಗದು ಅಥವಾ ಧಾನ್ಯ ರೂಪದಲ್ಲಿ ರಾಜ್ಯಾಡಳಿತವು ಪಡೆದುಕೊಳ್ಳುತ್ತಿತ್ತು. ಅದಲ್ಲದೆ ಈ ಶುಲ್ಕದ ಪ್ರಮಾಣ ವನ್ನು ಕಾಲಕಾಲಕ್ಕೆ ನಿಗದಿಪಡಿಸುವ ಹಾಗೂ ಪರಿಷ್ಕರಣೆ ಗೊಳಿಸುವ ಪರಿಪಾಠವೂ ಜಾರಿಯಲ್ಲಿತ್ತೆಂಬ ಅಭಿಪ್ರಾಯವನ್ನು ಈ ಹಿಂದೆ ನಡೆದ ತೆರಿಗೆ ಪದ್ಧತಿಯ ಸಂಶೋಧನೆಗಳಿಂದ ವ್ಯಕ್ತವಾಗಿದೆ[೩].

ದೊರೆತ ಹದಿನಾಲ್ಕು ಶಾಸನಗಳಲ್ಲಿ ಎಂಟು ಶಾಸನಗಳು 'ಸಿದ್ಧಾಯ' ಪದವನ್ನು ಉಲ್ಲೇಖಿಸಿದ್ದು, ಅವುಗಳಲ್ಲಿ ಮೂರು ಶಾಸನಗಳು ಕೇವಲ 'ಸಿದ್ಧಾಯ' ಪದವನ್ನಲ್ಲದೆ ಇನ್ನಿತರ ಯಾವುದೇ ತೆರಿಗೆ ಪದವನ್ನು ಹೊಂದಿರದೆ ಇರುವುದು 'ಸಿದ್ಧಾಯ' ರಾಜ್ಯದ ಆದಾಯದ ಸಿಂಹಪಾಲನ್ನು ಪಡೆದಿತ್ತೆನ್ನುವುದರಲ್ಲಿ ಸಂಶಯವಿಲ್ಲ. ಕ್ರಿ.ಶ. ೧೧೪೮ರ ಆನೆಕೆರೆ[೪] ಶಾಸನದಲ್ಲಿ ದಾಖಲಾದ ಮೊದಲ 'ಸಿದ್ಧಾಯ'

* ಇತಿಹಾಸ ಉಪನ್ಯಾಸಕರು, ಪೂರ್ಣಪ್ರಜ್ಞ ಪದವಿ ಪೂರ್ವ ಕಾಲೇಜು, ಅದಮಾರು, ಉಡುಪಿ ಜಿಲ್ಲೆ-೫೭೪೧೧೯.

ಪದವು ಸಿದ್ಧಾಯದ ಪೂರ್ವ ನಿಗದಿ ಹಾಗೂ ಪರಿಷ್ಕರಣೆಯ ಬಗ್ಗೆ ನಡೆದ ಚರ್ಚೆಗೆ ಮಹತ್ವವನ್ನು ನೀಡುತ್ತದೆ.

'ಸೆಸೆ' ಅಥವಾ 'ಸೇಸೆ' ತೆರಿಗೆಯ ಪದ ತಲಾ ಮೂರು ಬಾರಿ ಪ್ರಸ್ತಾಪಿಸಲಾಗಿದೆ. 'ಸೆಸೆ' ಪದ ಅರ್ಥೈಸುವಲ್ಲಿ ಗೊಂದಲಗಳಿರುವುದನ್ನು ಗಮನಿಸಬಹುದು. ಈ ತೆರಿಗೆಯನ್ನು ರಾಜ ಅಥವಾ ಚಕ್ರವರ್ತಿಯ ವಿಹಾಹ ಸಮಾರಂಭದ ಪ್ರಯುಕ್ತ ವಿಧಿಸುತ್ತಿದ್ದ ತೆರಿಗೆ[೫] ಎಂಬ ವಾದವು ಒಂದೆಡೆಯಾದರೆ, ಈ 'ಸೆಸೆ'ಯನ್ನು ರಾಜನು ಕೆಲವೊಂದು ವಿಶೇಷ ಸಂದರ್ಭದಲ್ಲಿ ಧ್ಯಾನದ ರೂಪದಲ್ಲಿ ಸಂಗ್ರಹಿಸುತ್ತಿದ್ದ ತೆರಿಗೆಯ ವಿಧ ಎಂಬ ವಾದ ಇನ್ನೊಂದೆಡೆ ಇದಲ್ಲದೆ 'ಸೆಸೆ' ಎಂಬ ಪದ ತಪ್ಪಾಗಿ ಶಾಸನಗಳಲ್ಲಿ 'ಸೆಸೆ' ಎಂದು ಕೊರೆಯಲಾಗಿದ್ದು, ರಾಜನಿಗೆ ನೀಡುತ್ತಿದ್ದ ಒಂದು ಬಗೆಯ ತೆರಿಗೆ[೬] ಅಥವಾ ಮೇವಿನ ಮೇಲೆ ಹೇರುತ್ತಿದ್ದ ತೆರಿಗೆಯೂ ಆಗಿರಬಹುದೆಂಬ ಅನಿಸಿಕೆಯೂ ಇದೆ. ಕ್ರಿ.ಶ. ೧೨೭೬ರ ಬಾಳಗಂಚಿ[೭] ಶಾಸನದಲ್ಲಿ ದಾಖಲಾದ 'ಖಾಣ' ತೆರಿಗೆ ಪದವು ಮೇವಿನ ಮೇಲೆ ವಿಧಿಸುತ್ತಿದ್ದ ತೆರಿಗೆಯನ್ನು ಪ್ರತಿನಿಧಿಸುತ್ತದೆ.

'ಆನೆಯ ಸೆಸೆ' ಮತ್ತು 'ಕುದುರೆಯ ಸೆಸೆ' ಎಂಬ ಎರಡು ತೆರಿಗೆ ಪದಗಳ ಉಲ್ಲೇಖವು ಶಾಸನಗಳಲ್ಲಿ ಎರಡು ಬಾರಿ ಉಲ್ಲೇಖಗೊಂಡಿದೆ. 'ಆನೆಯ ಸೆಸೆ' ಮತ್ತು 'ಕುದುರೆಯ ಸೆಸೆ' ಎಂಬ ಎರಡು ತೆರಿಗೆ ಪದಗಳು ಕ್ರಿ.ಶ. ೧೨೫೨ರ ಅಗ್ರಹಾರ ಬೆಳುಗಲಿ ಶಾಸನ[೮] ಮತ್ತು ಕ್ರಿ.ಶ. ೧೨೭೬ರ ಬಾಳಗಂಚಿ[೯] ಶಾಸನದಲ್ಲಿ ಪ್ರತ್ಯೇಕವಾಗಿ ಒಂದೊಂದು ಬಾರಿ ಈ ಶಾಸನಗಳಲ್ಲಿ ದಾಖಲಾಗಿದೆ. ಒಂದು ಅಭಿಪ್ರಾಯದಂತೆ ರಾಜನು ತನ್ನ ಆನೆ ಮತ್ತು ಕುದುರೆಗಳಿಗೆ ಮೇವನ್ನು ಪೂರೈಸಲು ತೆರಿಗೆಗಳನ್ನು ವಿಧಿಸುತ್ತಿದ್ದ. ಇದನ್ನು 'ಖಾಣ' ಎಂದು ನಮೂದಿಸಿರುವುದು ಬೆಳಕಿಗೆ ಬಂದಿದೆ. ಚೆನ್ನರಾಯ ಪಟ್ಟಣ ತಾಲೂಕಿನಲ್ಲಿ ಕ್ರಿ.ಶ. ೧೨೭೬ರ ಬಾಳಗಂಚಿ[೧೦] ಶಾಸನದಲ್ಲಿ ಬಳಕೆಯಾಗಿರುವುದನ್ನು ಗಮನಿಸಬಹುದು. ಇನ್ನೊಂದೆಡೆ ವ್ಯಾಪಾರಸ್ಥರು ವಿದೇಶ ಅಥವಾ ದೂರದ ಊರಿನಿಂದ ತಂದ ಕುದುರೆ ಮತ್ತು ಆನೆಗಳ ಮೇವಿನ ಖರ್ಚನ್ನು ಸರಿದೂಗಿಸಲು ವಿಧಿಸಿರಬಹುದಾದ ತೆರಿಗೆ ಎಂಬ ವಾದವೂ ಇದೆ. ರಾಜನು ತನ್ನ ಪ್ರಜೆಗಳಿಗೆ ರಕ್ಷಣೆಯನ್ನು ನೀಡುವುದು ಮೊದಲ ಆದ್ಯತೆಯಾಗಿದ್ದು, ಆ ನಿಟ್ಟಿನಲ್ಲಿ ಬಲಿಷ್ಠ ಸೈನ್ಯದ ಅವಶ್ಯಕತೆ ಇದ್ದು, ಆನೆ ಮತ್ತು ಕುದುರೆಗಳು ಸೈನ್ಯದ ಶಕ್ತಿ ಹೆಚ್ಚಿಸುತ್ತದೆ ಎಂಬುದು ನಿಜ ಸಂಗತಿ. ಆ ಕಾರಣಕ್ಕಾಗಿ ರಾಜನು ತನ್ನ ಅತ್ಯಂತ ದೊಡ್ಡ ಪ್ರಮಾಣದ ವೆಚ್ಚವನ್ನು ಭರಿಸಲು ಈ ತೆರಿಗೆಗಳನ್ನು ವಸೂಲಿ ಮಾಡುವ ಸಾಧ್ಯತೆ ಇದೆ. ಉಳಿದಂತೆ ಎಲ್ಲಾ ತೆರಿಗೆ ಪದಗಳು ಕೇವಲ ಒಂದೊಂದು ಬಾರಿ ಪ್ರತ್ಯೇಕ ಶಾಸನಗಳಲ್ಲಿ ಉಲ್ಲೇಖ ಗೊಂಡಿದ್ದು, ರಾಜನ ಬೊಕ್ಕಸಕ್ಕೆ ಹೆಚ್ಚಿನ ಆದಾಯ ತರುವಂತಹ ಶುಲ್ಕದ ಮೂಲಗಳಾಗಿರಲು ಸಾಧ್ಯವಿಲ್ಲ.

ಈ ವಿಶ್ಲೇಷಣೆಗೆ ಒಳಪಡಿಸಿದ ಹದಿನಾಲ್ಕು ಶಾಸನಗಳನ್ನು ಕಾಲಾನುಕ್ರಮದಲ್ಲಿರಿಸಿ ನೋಡಿದಾಗ ಮೊದಲ ಮೂರು ಶಾಸನಗಳಲ್ಲಿ ತಲಾ ಒಂದು ತೆರಿಗೆ ಪದದ ಉಲ್ಲೇಖವನ್ನು ನಾವು ಕಾಣುತ್ತೇವೆ. ಇಲ್ಲಿ ಮೂರೂ ಶಾಸನಗಳು ಹೊಯ್ಸಳ ವಿಷ್ಣುವರ್ಧನನ ಆಳ್ವಿಕೆಯ ಅವಧಿಗೆ ಸೇರಿದ್ದು, ರಾಜನು ಕಲ್ಯಾಣದ ಚಾಲುಕ್ಯರ ಸಾಮಂತನಾದ ರಾಜನಿಗೆ ಕೆಲವೊಂದು ತೆರಿಗೆಗಳನ್ನು ವಿಧಿಸುವಂತಹ ಸ್ವಾತಂತ್ರ್ಯ ಇಲ್ಲವಾಗಿತ್ತೆಂದು ತಿಳಿದುಬರುತ್ತದೆ. ಮಾತ್ರವಲ್ಲ ರಾಜ್ಯವು ತನ್ನ ಬಾಲ್ಯಾವಸ್ಥೆಯಲ್ಲಿರುವುದನ್ನು ಪ್ರತಿಬಿಂಬಿಸುವಂತೆ ಕಾಣುತ್ತದೆ. ಏಕೆಂದರೆ ಈ ತೆರಿಗೆಗಳನ್ನು ಹೊರತಾದ ವಿಶೇಷ ಆದಯವೇನೂ ರಾಜ್ಯಕ್ಕಿರಲಿಲ್ಲವೆಂಬುದು ಗೋಚರಿಸುತ್ತದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಕ್ರಿ.ಶ. ೧೧೪೯ರ ಅಣತಿಯಲ್ಲಿ ದೊರೆತ ಶಾಸನ[೧೧] ಮತ್ತು ಅಲ್ಲೇ ದೊರೆತ ಇನ್ನೊಂದು ಶಾಸನದಲ್ಲಿ 'ಸಿದ್ಧಾಯ'[೧೨] ಪದವನ್ನು ಉಲ್ಲೇಖಿಸುವ ಮೂಲಕ 'ಸಿದ್ಧಾಯ'ದ ಮಹತ್ವವನ್ನುಎತ್ತಿ ಹಿಡಿಯುತ್ತದೆ.

ಕ್ರಿ.ಶ. ೧೧೮೧ರ ನಂತರ ದೊರೆತ ಶಾಸನಗಳು ವಿವಿಧ ಪ್ರದೇಶಗಳಲ್ಲಿ ಹಂಚಿ ಹೋಗಿದ್ದು, ನಾನಾ ರೀತಿಯ ತೆರಿಗೆ ಪದಗಳ ಉಲ್ಲೇಖವನ್ನು ನಾವು ನೋಡಬಹುದಾಗಿದೆ. ಈ ಕಾಲಘಟ್ಟದಲ್ಲಿ ಹೊಯ್ಸಳರು ಸ್ವತಂತ್ರಗೊಂಡು ಆಡಳಿತವನ್ನು ನಡೆಸಿದಂತಹ ಕಾಲವಾಗಿದ್ದು, ಸಾಮ್ರಾಜ್ಯದ ವಿಸ್ತರಣೆಯೂ ಆಗಿರುವುದರಿಂದ ಕಂದಾಯ ವಿಧಿಸುವ ಅಧಿಕಾರ ಹಾಗೂ ವ್ಯಾಪ್ತಿ ಹೆಚ್ಚಿಸಿಕೊಂಡಿರುವುದನ್ನು ಈ ಶಾಸನಗಳು ಖಚಿತಪಡಿಸುತ್ತವೆ. ಇದಲ್ಲದೆ ತೆರಿಗೆ ವಿನಾಯಿತಿ ನೀಡುವಂತಹ ಪದಗಳಾದ 'ವೋವತ ಕಾರುಣ್ಯ' 'ಸೇಸೆಮಾನ್ಯ', 'ಮಗ್ಗ ಮಾನ್ಯ' ಇತ್ಯಾದಿಗಳನ್ನು ಗಮನಿಸಿದಾಗ ತೆರಿಗೆ ಹೇರುವ ಹಾಗೂ ವಿನಾಯಿತಿ ನೀಡುವ ಸರ್ವಾಧಿಕಾರ ರಾಜರಲ್ಲಿ ತ್ತೆಂಬುದು ಹೆಚ್ಚು ಅರ್ಥಪೂರ್ಣವಾಗಿ ವ್ಯಕ್ತವಾಗಿದೆ. ಕ್ರಿ.ಶ. ೧೧೮೧ರ ಚನ್ನರಾಯಪಟ್ಟಣದ ಶಾಸನ 'ಗಾಣದೆರೆ'[೧೩]ಯ ಮತ್ತು ಕ್ರಿ.ಶ. ೧೨೨೩ರ ಕೆಂಬಾಳು ಶಾಸನ 'ಮಗ್ಗಮಾನ್ಯ[೧೪] ಪದವನ್ನು ಉಲ್ಲೇಖಿಸುತ್ತದೆ. ಈ ಎರಡೂ ಪದಗಳು ಎಣ್ಣೆ ಅಥವಾ ಬೆಲ್ಲ ತಯಾರಿಕೆ ಮತ್ತು ಕೈಮಗ್ಗದ (ಹತ್ತಿ ಮತ್ತು ರೇಷ್ಮೆಯ) ಘಟಕಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯಾಗಿದ್ದು, ಈ ಪ್ರದೇಶಗಳು ಕೈಗಾರಿಕೆಗಳ ತಾಣವಾಗಿತ್ತೆಂಬುದನ್ನು ಸೂಚಿಸುತ್ತದೆ. ಉಳಿದಂತೆ ಬೇರೆ ಯಾವ ಶಾಸನಗಳಲ್ಲೂ ಇಂತಹ ತೆರಿಗೆಗಳ ಉಲ್ಲೇಖವಿಲ್ಲ.

ಹೊಯ್ಸಳರ ಸಮಕಾಲೀನ ಕೆಲವು ಗ್ರಂಥಗಳು ಸುಂಕ ಪದ್ಧತಿ ಹಾಗೂ ಅದರ ಪ್ರಮಾಣವನ್ನು ನಿಗದಿಪಡಿಸಿರುವುದನ್ನು ನಾವು ಕಾಣುತ್ತೇವೆ. ಉದಾಹರಣೆಗೆ: ಸೋಮೇಶ್ವರನ ಪ್ರಕಾರ ಪ್ರಾಣಿಗಳು ಮತ್ತು ಚಿನ್ನದ ಮೇಲೆ ಶೇಕಡಾ ೫೦ ರಷ್ಟು ಸುಂಕ ವಿಧಿಸಬೇಕು. ಇನ್ನಿತರ ವಸ್ತುಗಳಾದ ಸುಗಂಧ ದ್ರವ್ಯ, ಔಷಧಿ, ಹೂ, ಹಣ್ಣು, ತರಕಾರಿ, ಮಣ್ಣಿನ ಮಡಿಕೆ, ಚರ್ಮದ ಸಾಮಗ್ರಿ ಇತ್ಯಾದಿಗಳ ಮೇಲೆ ಶೇಕಡಾ ೧೬ರಷ್ಟು ಸುಂಕವನ್ನು ವಿಧಿಸಬಹುದೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ.[೧೫] ಹೊಯ್ಸಳರ ಸಾಮ್ರಾಜ್ಯದಲ್ಲಿ ವ್ಯಾಪಾರ ವಹಿವಾಟುಸಮೃದ್ಧವಾಗಿದ್ದರಿಂದ ಸುಂಕದಿಂದ ಬಂದ ಆದಾಯವು ರಾಜ್ಯಾದಾಯದ ಮುಖ್ಯ ಆಕರವಾಗಿತ್ತೆಂಬುದು ಸ್ಪಷ್ಟ.

ಕ್ರಿ.ಶ. ೧೧೮೧ರ ಚನ್ನರಾಯಪಟ್ಟಣ ಶಾಸನ 'ಹೊಂಗೆ ವೀಸದ'(?) 'ವೊಳವಾರು' ಮತ್ತು ಹೊರವಾರು[೧೬] ಕ್ರಿ.ಶ. ೧೧೮೯ 'ಆನೆಕೆರೆ' ಶಾಸನ 'ವೋವತ್ತ ಕಾರುಣ್ಯ'[೧೭] (ಆಮದು ಸುಂಕ ರಹಿತ ಪ್ರದೇಶ) ಹಾಗೂ ಕ್ರಿ.ಶ.೧೧೯೧ರ ಕುಂದೂರು ಶಾಸನ[೧೮] ಲಹಕ್ಕವೆಂಬ ಹಳ್ಳಿಯನ್ನು ಆಮದುಸುಂಕದಿಂದ ಮುಕ್ತಗೊಳಿಸಿದ ಪ್ರಸ್ತಾಪ ಇಲ್ಲಿ ಉಲ್ಲೇಖಾರ್ಹವಾಗಿದೆ. ಸಾಮಾನ್ಯವಾಗಿ ಪರಮಾಧಿಕಾರವನ್ನು ಹೊಂದಿರುವ ಸಾಮ್ರಾಜ್ಯದಲ್ಲಿ ವಿದೇಶದಿಂದ ಅಥವಾ ಇನ್ನಿತರ ಆಡಳಿತಕ್ಕೆ ಒಳಪಟ್ಟ ಪ್ರದೇಶದಿಂದ ಬಂದಂತಹ ಸರಕುಗಳ ಮೇಲೆ ಆಮದು ಸುಂಕವನ್ನು ವಿಧಿಸುವುದು ಸಾಮಾನ್ಯ. ಆದರೆ ಇಲ್ಲಿ ಸಂಪೂರ್ಣ ಸುಂಕ ಹೇರಿದ ಅಥವಾ ಮುಕ್ತಗೊಳಿಸಿದ ಉದಾಹರಣೆಗಳು ಗೋಚರಿಸುತ್ತಿದ್ದು, ಇದು ಸ್ಥಳೀಯ ಆಡಳಿತಗಳು ಸ್ವಾಯತ್ತತೆಯನ್ನು ಪಡೆದಿತ್ತೆಂಬುದನ್ನು ತೋರಿಸುವುದು ಮಾತ್ರವಲ್ಲದೆ ಕೇಂದ್ರಾಡಳಿತದಲ್ಲಿ ತೀವ್ರತರವಾದ ಬದಲಾವಣೆ ಕಂಡು ಬಂದರೂ ಸ್ಥಳೀಯಾಡಳಿತದಲ್ಲಿ ಅದಕ್ಕನುಗುಣವಾಗಿ ಬದಲಾವಣೆಗಳು ಕಂಡುಬರುತ್ತಿರಲಿಲ್ಲವೆಂಬುದಕ್ಕೆ ಉತ್ತಮ ನಿದರ್ಶನವಾಗಿದೆ.

ಕ್ರಿ.ಶ. ೧೨೦೫ರ ಸಾಗತವಳ್ಳಿಯ ಶಾಸನ 'ಬಾಲಪಣ'[೧೯] ತೆರಿಗೆ ಪದದ ಉಲ್ಲೇಖವಿರುವುದನ್ನು ಗಮನಿಸಬಹುದಾಗಿದೆ. ಬಹುಶಃ ಇದು ಪಶುಗಳ ಮೇಲೆ ವಿಧಿಸುವ ತೆರಿಗೆಯಾಗಿರಬಹುದೆಂಬ ಅಭಿಪ್ರಾಯವನ್ನು ಕೇಶೀರಾಜನ 'ಶಬ್ದಮಣಿದರ್ಪಣ' ಕೃತಿಯು ದೃಢಪಡಿಸುತ್ತದೆ. ಈತನ ಪ್ರಕಾರ "ಹೈಹಯನು ಶಿವನ ಒಂದು ಎತ್ತಾದರೂ ಸರಿಯೇ ಬಾಲ ಪಣವನ್ನು ಕೇಳದೆ ಬಿಡುವವನಲ್ಲ" (ಬಾಲವಣವಂ ಬೇಡುವ ನೊಂದೆ ಗೊಂದೆಗಮನಂ ಗಾರತಿಯಂ ಹೈಹಯಂ) ತೆರಿಗೆ ಹಾಕುವ ಒಂದು ಹಸುವಿಗೆ ಎಂದು ಹೇಳುವ ಬದಲು ಒಂದು ಬಾಲಕ್ಕೆ ಎಂದು ಹೇಳುವ ಸಂಪ್ರದಾಯ ಉತ್ತರ ಭಾರತದಲ್ಲಿ ಈಗಲೂ ಪ್ರತೀತಿಯಲ್ಲಿದೆ.[೨೦] ಆದರೆ ಸಾಗತವಳ್ಳಿಯ ಶಾಸನವು ಅಸ್ಪೃಷ್ಯ ಮಗುವಿನ ಮೇಲೆ (ಹೊಲೆಯರ ಬಾಲಪಣ) ಎಂದು ನಮೂದಿಸಿರುವುದನ್ನು ಗಮನಿಸಿದರೆ ಇಂತಹ ತೆರಿಗೆಗಳನ್ನು ಒಂದು ನಿರ್ದಿಷ್ಟ ಸಮುದಾಯದ ಮಕ್ಕಳ ಮೇಲೆ ಹೇರುತ್ತಿದ್ದ ತೆರಿಗೆ[೨೧]ಯಾಗಿರಬಹುದೆಂಬ ಊಹೆಯನ್ನುಂಟುಮಾಡುತ್ತದೆ.

ಕ್ರಿ.ಶ. ೧೨೨೩ರ ಕೆಂಬಾಳು ಶಾಸನ 'ತಿಪ್ಪೆಸುಂಕ"[೨೨]ದ ಉಲ್ಲೇಖವಿದ್ದು ಈ ಪ್ರದೇಶದಲ್ಲಿ ವ್ಯವಸಾಯ ಹಾಗೂ ಪಶುಸಂಗೋಪನೆ ಮುಖ್ಯ ಜೀವನಾಧಾರ ಕಸುಬಾಗಿತ್ತೆನ್ನಬಹುದು.

ಕ್ರಿ.ಶ. ೧೨೨೬ರ ಬಾಳಗಂಚಿಯ ಶಾಸನ 'ವೂರಮಳಬ್ರಯ'[೨೩] ತೆರಿಗೆ ಪದವನ್ನು ಹೊಂದಿದ್ದು ಆಡಳಿತವು ಪ್ರತಿಯೊಂದು ಊರನ್ನು ಒಂದೊಂದು ತೆರಿಗೆಯ ಘಟಕಗಳಾಗಿ ವಿಂಗಡಿಸಿತ್ತು ಎನ್ನಬಹುದು.

'ಹದಿಕೆ' ಎಂಬ ಶುಲ್ಕದ ಉಲ್ಲೇಖವು ಕ್ರಿ.ಶ. ೧೨೫೯ರ 'ಪುರ' ಶಾಸನ[೨೪]ದಲ್ಲಿ ಕಾಣಬಹುದಾಗಿದೆ, ಬಹುಷಃ ಇದು ಒಂದು ವಿಧದ ಕಾಣಿಕೆ ಅಥವಾ ಕಪ್ಪವಾಗಿದೆ. ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ರಾಜನು ಇದನ್ನು ನಿರೀಕ್ಷಿಸುತ್ತಿದ್ದಂತೆ ವ್ಯಕ್ತವಾಗುತ್ತದೆ. ಕ್ರಿ.ಶ. ೧೨೨೦ರ ಶಾಸನವು 'ಕೋಟೆಯ ಹದಿಕೆ'[೨೫] ಎಂಬ ಶುಲ್ಕದ ಪ್ರಸ್ತಾಪ ಮಾಡಿರುವುದರಿಂದ ಹದಿಕೆಯು ಕಂದಾಯದ ಪದವಾಗಿದೆಯೆಂಬುದಕ್ಕೆ ಪುರಾವೆ ಒದಗಿಸುತ್ತದೆ.

ಈ ಅಧ್ಯಯನವನ್ನು ಕ್ರಿ.ಶ. ೧೧೧೬ರ ಶಾಸನದಿಂದ ಮೊದಲುಗೊಂಡು ಮುಂದಿನ ಕಾಲಘಟ್ಟವನ್ನು ಗಮನಿಸುತ್ತಾ ಹೋದಂತೆ ಈ ಹಿಂದೆ ಕಂಡರಿಯದ ಹೊಸ ತೆರಿಗೆ ಪದಗಳ ಉಲ್ಲೇಖವನ್ನು ನಾವು ನೋಡಬಹುದು.

ಈ ಮೊದಲೇ ವಿಶ್ಲೇಷಿಸಿದಂತೆ 'ಸಿದ್ಧಾಯ'ದ ಉಲ್ಲೇಖ ಸಾಮಾನ್ಯವಾಗಿದ್ದು ಸಾಮ್ರಾಜ್ಯದಾಹ ಹೆಚ್ಚಾದಂತೆ ವಿಸ್ತಾರವಾದ ಸಾಮ್ರಾಜ್ಯದ ಭದ್ರತೆಗೆ ಬಲಿಷ್ಠ ಸೇನೆಯ ಅಗತ್ಯವಿದ್ದು, ಪ್ರಜೆಗಳ ಸಂಪತ್ತು ಮತ್ತು ಜೀವದ ರಕ್ಷಣೆಗೆ ಕುಂದುಂಟಾಗಬಾರದೆಂಬ ಉದ್ದೇಶದಿಂದ ಪ್ರಜೆಗಳ ಮೇಲೆ ಹೆಚ್ಚುವರಿ ತೆರಿಗೆ ಹೇರಲು ಮುಂದಾಗುತ್ತವೆ, ಹಾಗಾಗಿ ಸೇನಾ ಕಾರ್ಯಚರಣೆಗೆ ತಗಲುವ ವೆಚ್ಚವನ್ನು ಫಲಾನುಭವಿಗಳು ಭರಿಸುತ್ತಿದ್ದರು. ಸಾಮಂತರಾಗಿದ್ದಾಗ ಇಂತಹ ವೆಚ್ಚ ಮಾತ್ರವಲ್ಲ ಶತ್ರು ಭಯವೂ ಕಡಿಮೆಯಿದ್ದು, ಅವಶ್ಯಕತೆಗಳನ್ನು ಇನ್ನಿತರ ಮೂಲಗಳಿಂದ ಸರಿದೂಗಿಸಬಹುದಾಗಿತ್ತು. ಆದರೆ ಹೊರೆ ಹೆಚ್ಚಾದಂತೆ ಸೇನೆಯವೆಚ್ಚ,

ವಿಧಿಸುವ ತೆರಿಗೆಗಳು ಹೆಚ್ಚಾಗುತ್ತಾ ಹೋಗುತ್ತದೆ. ಈಗಾಗಲೇ ತಿಳಿಸಿದಂತೆ ಆನೆಯ ಸೆಸೆ ಮತ್ತು ಕುದುರೆಯ ಸೆಸೆ ತಲಾ ಎರಡು ಬಾರಿ ಉಲ್ಲೇಖಗೊಂಡಿದ್ದು, ಪುನರಾವರ್ತನೆಗೊಂಡ ಮೂರನೆಯ ತೆರಿಗೆ ಪದ ಇದಾಗಿದೆ. ಇದಲ್ಲದೆ ಕ್ರಿ.ಶ. ೧೨೭೬ರ ಬಾಳಗಂಚಿ ಶಾಸನ 'ಕಟಕಸೇಸೆ'[೨೬] (ಸೇನೆಯ ಶುಲ್ಕ)ವನ್ನು ಪ್ರಸ್ತಾಪಿಸಿರುವುದು ಸಮಯದ ಅವಶ್ಯಕತೆಯನ್ನು ತೋರಿಸುವುದರ ಜೊತೆಗೆ ಯುದ್ಧವು ಪ್ರಜೆಗಳ ಮೇಲೆ ಹೊರೆಯನ್ನು ದ್ವಿಗುಣಗೊಳಿಸುತ್ತಿತ್ತು ಎಂಬುದರಲ್ಲಿ ಎರಡು ಮಾತಿಲ್ಲ.

ಈ ಶಾಸನವು ಹಲವು ನೂತನ ತೆರಿಗೆ ಪದಗಳ ಪ್ರಯೋಗ ಮಾಡಿರುವುದನ್ನು ನೋಡಬಹುದು. ಇಲ್ಲಿ ಉಲ್ಲೇಖಗೊಂಡ ಕಿರುಕುಳ ಎಂದರೆ ಚಿಕ್ಕ ತೆರಿಗೆ, ಸಮಾನ್ಯ ವಸ್ತುಗಳು ತೆರಿಗೆಯಿಂದ ವಿನಾಯಿತಿ ಪಡೆದಿರಲಿಲ್ಲ ಎಂಬುದನ್ನು ತಿಳಿಸುತ್ತದೆ. ಇದಲ್ಲದೆ 'ಅಭ್ಯಾಗತೆ'ಯನ್ನು ರಾಜನು ನಡೆಸುವ ಅತಿಥಿ ಸತ್ಕಾರಕ್ಕಾಗಿ ತಗಲುವಂತಹ ವಿಶೇಷವಾದ ವೆಚ್ಚವನ್ನು ಭರಿಸುವುದಕ್ಕಾಗಿ ವಿಧಿಸುವ ತೆರಿಗೆಯಾಗಿರಬಹುದು ಅದರಂತೆ 'ಪುತ್ರೋಛ್ಚಾಹ' ಎಂಬ ತೆರಿಗೆಯನ್ನು ಗಂಡು ಮಗುವಿನ ಜನನಕ್ಕೆ ವಿಧಿಸುವಂತಹ ತೆರಿಗೆಯಾಗಿದ್ದು ಈ ಕಾಲಘಟ್ಟದಲ್ಲಿ ಗಂಡು ಶಿಶು ಒಂದು ವಿಶೇಷ ಸೌಲಭ್ಯ ಅಥವಾ ಸಾಮಾಜಿಕವಾಗಿ ಗೌರವ ತರುವಂತಹ ವಿಷಯವೆಂದು ಭಾವಿಸಲಾಗುತ್ತಿತ್ತು. ರಾಜನು ಪಟ್ಟಾಭಿಷೇಕ ಕಾರ್ಯಕ್ರಮಕ್ಕೆ ತಗಲುವ ವೆಚ್ಚವನ್ನು ಭರಿಸುವ ಉದ್ದೇಶದಿಂದ ವಿಧಿಸುವ ವಿಶೇಷ ತೆರಿಗೆಯೇ 'ಪಟ್ಟಭದ್ಧ' ವಾಗಿರಬಹುದು. ಈ ಪ್ರದೇಶ ರಾಜಧಾನಿಗೆ ಸಮೀಪದಲ್ಲಿದ್ದುದರಿಂದ ಈ ತೆರಿಗೆಗೆ ಅರ್ಹರಾಗಿದ್ದಿರಬಹುದೆಂದು ನಾವು ಗ್ರಹಿಸಬಹುದು. 'ಕೆರೆ', 'ಕಟ್ಟೆ', 'ಕಾಲುವೆ'ಗಳ ಮೇಲಿನ ಶುಲ್ಕವನ್ನು ಈ ಶಾಸನ ಪ್ರಸ್ತಾಪಿಸಿದ್ದು ಕೃಷಿಗೆ ಪೂರಕವಾಗಿ ನೀರಾವರಿ ಸೌಲಭ್ಯವನ್ನು ನೀಡುವುದಕ್ಕೋಸ್ಕರ ಫಲಾನುಭವಿಗಳಿಂದ ಈ ತೆರಿಗೆಯನ್ನು ಪಡೆಯಲಾಗುತ್ತಿತ್ತು. ಅದರಂತೆ 'ಅಳಿವು' ಎಂಬ ತೆರಿಗೆ ಪದ ಪ್ರಾಕೃತಿಕ ವಿಕೋಪದಿಂದ ಉಂಟಾಗುವ ನಷ್ಟವನ್ನು ಸರಿತೂಗಿಸಲು ಆಪತ್ತಿನ ಸಂದರ್ಭದಲ್ಲಿ ವಿಧಿಸಲಾದ ತೆರಿಗೆಯೆಂದರೆ ತಪ್ಪಾಗಲಾರದು. ಇಲ್ಲಿ ಉಲ್ಲೇಖಗೊಂಡ ಮತ್ತೊಂದು ತೆರಿಗೆ ಪದ 'ಬಿಟ್ಟಿ;'[೨೭] ಎಂದರೆ ದೈಹಿಕ ಶ್ರಮರೂಪದ ತೆರಿಗೆ ಇದನ್ನು ಮನು–'ಕುಶಲಕರ್ಮಿಗಳು;, 'ಶೂದ್ರ'ರು ಮಾಸಿಕವಾಗಿ ಒಂದೆರಡು ದಿನಗಳ ದೈಹಿಕ ಶ್ರಮವನ್ನು ರಾಜ್ಯಕ್ಕೆ ಕೊಡಬೇಕೆಂದಿದ್ದಾನೆ. ಆದರೆ ದಕ್ಷಿಣ ಭಾರತದಲ್ಲಿ ಯಾವುದಾದರೂ ನೀರಾವರಿ ಯೋಜನೆಗಳು ಮತ್ತು ದೇವಸ್ಥಾನದ ನಿರ್ಮಾಣ ಕಾರ್ಯಗಳಿಗೆ ಜನರಿಂದ ಉಚಿತವಾಗಿ ಅಥವಾ ಬಿಟ್ಟಿಯಾಗಿ ದೈಹಿಕ ಶ್ರಮವನ್ನು ರಾಜ್ಯದ ಅವಶ್ಯಕತೆಗಳಿಗನುಗುಣವಾಗಿ ನೀಡಬೇಕಿತ್ತು.[೨೮]

ಕ್ರಿ.ಶ. ೧೧೧೭ರಿಂದ ೧೨೭೬ರ ವರೆಗಿನ ಅವಧಿಯಲ್ಲಿ ೧೪ ಕಂದಾಯ ಸಂಬಂಧಿತ ಶಾಸನಗಳಲ್ಲಿ ಪ್ರಥಮ ಅರವತ್ತು ವರ್ಷಗಳ ಅವಧಿಯಲ್ಲಿ ಕೇವಲ ಮೂರು ಕಂದಾಯ ಪದಗಳ ಉಲ್ಲೇಖ ಕಂಡು ಬಂದಿದೆ. ನಂತರದ ಐವತ್ತು ವರ್ಷಗಳ ಅವಧಿಯಲ್ಲಿ ಐದು ಶಾಸನಗಳಲ್ಲಿ ೨೩ ತೆರಿಗೆ ಪದಗಳು ಕಂಡು ಬಂದಿದೆ. ಕಾಲಕ್ಕನುಗುಣವಾಗಿ ರಾಜ್ಯದ ಆದಾಯ ವೃದ್ಧಿಸಲು ಹೊಯ್ಸಳರ ಕಾಲದಲ್ಲಿ ವಿವಿಧ ಕಂದಾಯಗಳನ್ನು ವಿಧಿಸುತ್ತಾ ಬಂದಿರುವುದು ಖಚಿತವಾಗಿ ತಿಳಿಯುತ್ತದೆ. ಕಂದಾಯ ಪದಗಳ ವ್ಯಾಪ್ತಿ ಕ್ರಮೇಣ ಹೆಚ್ಚಿ, ರಾಜ್ಯದ ಜವಾಬ್ದಾರಿಯು ಹೆಚ್ಚಾಗಿದ್ದುದು ಈ ಶಾಸನಗಳ ಅಧ್ಯಯನದಿಂದ ನಮಗೆ ಕಾಣುತ್ತದೆ. ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ಈ ಶಾಸನಗಳ ಕಂದಾಯ ಪದಗಳು ಹೊಯ್ಸಳರ ಕಾಲದಲ್ಲಿ ಆದಾಯ ಹೆಚ್ಚಿಸಿಕೊಳ್ಳಬೇಕಾದ ಅನಿವಾರ್ಯತೆಯನ್ನು ವ್ಯಕ್ತಪಡಿಸುತ್ತದೆ. ಇಂದಿನ ರಾಜ್ಯಗಳ ಕಂದಾಯ ವ್ಯವಸ್ಥೆಯ ವೈಶಾಲ್ಯತೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿರುವ ರೀತಿಯಲ್ಲೇ ಹೊಯ್ಸಳರ ಕಾಲದಲ್ಲೂ ಕಂದಾಯ ವ್ಯವಸ್ಥೆ ವಿಸ್ತೃತಗೊಳ್ಳುತ್ತಾ ಸಾಗಿರುವುದನ್ನು ಈ ಅಧ್ಯಯನ ಹಾಗೂ ವಿಶ್ಲೇಷಣೆಗಳು ಖಚಿತಪಡಿಸುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯ ಕರ್ನಾಟಿಕ,** ಸಂ. ೧೦, (ಪರಿಷ್ಕೃತ) ಎ.ಕ. ೧೦, ಚನ್ನರಾಯಪಟ್ಟಣ, EC X CP. 142, 12th Century A.D.

೨. Dr. S. Gururajachar., *Some aspects of Economic and Social Life in Karnataka,* (A.D., 1000-1300), p. 142.

೩. *Ibid,* p.p. 142,143.

೪. EC X ಎ.ಕೆ. ೧೦, ಚನ್ನರಾಯಪಟ್ಟಣ, 33, C. 1189 A.D.

೫. ಡಾ. ಎಂ. ಚಿದಾನಂದಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** (ಕ್ರಿ.ಶ. 450–1150) ಪುಟ 447.

೬. Dr. S. Gururajachar., *Some aspects of economic and Social Life in Karnataka,* (A.D., 1000-1300), p.p. 146, 143

೭. EC X CP 134, C. 1276 A.D, ಅದೇ, ೧೩೪, ಕ್ರಿ.ಶ. ೧೨೭೬.

೮. EC X CP 92 C. 1252 A.D.

೯. EC X CP 134, C. 1276 A.D

೧೦. EC X CP 134, C. 1276 A.D.

೧೧. EC X CP 78, C. 1139 A.D.

೧೨. EC X CP 79, C. 1139 A.D.

೧೩. EC X CP 9, C. 1181 A.D.

೧೪. EC X CP 70, C. 1223 A.D.

೧೫. Dr. S. Gururajachar *some aspects of Economic and Social Life in Karnataka,* (A.D. 1000-1300) P.157

೧೬. EC X CP 9, C. 1181 A.D.

೧೭. EC X CP 33, C. 1189 A.D.

೧೮. EC X CP 56, C. 1191 A.D.

೧೯. EC X CP 22, C. 1205 A.D.

೨೦. ಡಾ. ಎಂ. ಚಿದಾನಂದಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** (ಕ್ರಿ.ಶ. 450–1150) ಪುಟ 445.

೨೧. Dr. S. Gururajachar., *Some aspects of Economic and Social life in Karnataka,* (A.D. 1000-1300) PP.159, 160

೨೨. EC X CP 70, C. 1223 A.D.

೨೩. EC X CP 134, C. 1276 A.D.

೨೪. EC X CP 126, C. 1259 A.D.

೨೫. Dr. S. Gururajachar., *Some aspects of economic and social life in karnataka,* (A.D. 1000-1300) P.163

೨೬. EC X CP 134, C. 1276 A.D.

೨೭. ಡಾ. ಎಂ. ಚಿದಾನಂದಮೂರ್ತಿ., **'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'** (ಕ್ರಿ.ಶ. 450–1150) ಪು. 445.

೨೮. Dr. S. Gururajachar., *some aspects of economic and social life in karnataka,* (A.D. 1000-1300) PP.160,161.

೭೪

# ವಡ್ಡರಾವುಳ ಮತ್ತು ಹೆರ್ಜ್ಜುಂಕ ತೆರಿಗೆ–ಒಂದು ಟಿಪ್ಪಣಿ

ಡಾ. ಜಗದೀಶ*

ಪ್ರಾಚೀನ ಕರ್ನಾಟಕದಲ್ಲಿ ಅನೇಕ ತೆರಿಗೆಗಳನ್ನು ವಸೂಲು ಮಾಡಲಾಗುತ್ತಿತ್ತು. ಅವುಗಳಲ್ಲಿ ವಡ್ಡರಾವುಳ ಒಂದು ಶಾಸನಗಳಲ್ಲಿ ಒಟ್ಟೊಟ್ಟಾಗಿ ಸಾಮಾನ್ಯವ ಆಗಿ ವಡ್ಡರಾವುಳ, ಹೆರ್ಜ್ಜುಂಕ ಮತ್ತು ಬಿಲ್ಕೊಡೆ ಕಾಣಿಸಿಕೊಳ್ಳುತ್ತವೆ. ಡಾ॥ ಶ್ರೀನಿವಾಸ ರಿತ್ತಿ ತಮ್ಮ ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾ ಕೋಶದಲ್ಲಿ [೧] ವಡ್ಡರಾವುಳ ವೃದ್ಧರಾಜಕುಲ ಎಂಬ ಸಂಸ್ಕೃತ ಪದದಿಂದ ಬಂದ ಶಬ್ದವೆಂದೂ ರಾಜ ಮನೆತನದ ವೃದ್ಧರ ಪೋಷಣೆಗಾಗಿ ಈ ಕರವನ್ನು ಹಾಕಲಾಗುತ್ತಿತ್ತೆಂದು ಹೇಳಿರುತ್ತಾರೆ. ಆದರೆ ಈ ವಿವರಣೆ ಸಂದರ್ಭಕ್ಕೆ ಹೊಂದುವುದಿಲ್ಲ. ಬಹುಶಃ ನಗದು ವ್ಯಾಪಾರಕ್ಕೆ ಸಂಬಂಧಿಸಿದ ದೊಡ್ಡ ಮೊತ್ತದ ಕರವಿರಬೇಕು ಎಂದು ತಿಳಿಸುತ್ತಾರೆ. ಹೆರ್ಜ್ಜುಂಕ ಕುರಿತಾಗಿ ಹಿರಿದಾದ ಸುಂಕ, ಯಾವುದೊಂದು ಊರಿನ ಅಥವಾ ಪ್ರದೇಶದ ಒಟ್ಟು ಸುಂಕ, ಹೆಚ್ಚು ಆದಾಯ ತರುವ ಸುಂಕ ಎಂಬ ವಿವರಣೆ ಇದೆ.

ಸಾಮಾನ್ಯವಾಗಿ ವಡ್ಡರಾವುಳ ಮತ್ತು ಹೆರ್ಜ್ಜುಂಕವನ್ನು ಒಟ್ಟಾಗಿ ಎರಡು ಶಾಸನಗಳಲ್ಲಿ ನಮೂದಿಸಿರುವುದನ್ನು ಕಾಣಬಹುದು. ಈ ಎರಡು ಸುಂಕಗಳಲ್ಲಿ ಬಿಲ್ಕೊಡೆ ಸಹ ಕಾಣಿಸಿಕೊಳ್ಳುತ್ತದೆ. ಇದು ಮಾರಾಟದ ಸರಕುಗಳ ಮೇಲಿನ ಕರ ಎಂಬ ವಿವರಣೆ ಇದೆ.

ಬಿ.ಆರ್. ಗೋಪಾಲರು ತಮ್ಮ 'ದಿ. ಚಾಲುಕ್ಯಾಸ್ ಅಂಡ್ ದಿ ಕಲಚೂರಿಸ್' ಕೃತಿಯಲ್ಲಿ ಬನವಾಸಿ ಪ್ರದೇಶದಲ್ಲಿ ಇರುವ ಆಡಳಿತಾಧಿಕಾರಿಗಳನ್ನು ಬದಲಿಸುವ ನೀತಿ ಇತ್ತೆಂದು ಮತ್ತು ಈ ನೀತಿಯು ಅಧಿಕಾರಿಗಳು ಪ್ರಬಲರಾಗುವುದನ್ನು ತಪ್ಪಿಸುತ್ತಿತ್ತೆಂದು ಭಾವಿಸಲಾಗಿತ್ತು ಎಂದು ಶಾಸನಾಧಾರಗಳನ್ನು ನೀಡಿದ್ದಾರೆ. ಚಟ್ಟಯ್ಯ ಕ್ರಿ.ಶ ೯೯೧–೯೯೩ ಮತ್ತು ೧೦೦೬–೧೦೧೨ ಹೀಗೆ ಎರಡು ಅವಧಿಯಲ್ಲಿ ಬನವಾಸಿಯಲ್ಲಿ ಆಳುತ್ತಿದ್ದನು, ಈ ಮಧ್ಯದ ಅವಧಿ ೧೦೦೨–೧೦೦೩ರಲ್ಲಿ ಭೀಮರಸನು ಆಳುತ್ತಿದ್ದನು.[೨] ಅದೇ ರೀತಿ ಗುಂಡ್ಡಮರಸನು ಬನವಾಸಿಯಲ್ಲಿ ೧೦೮೦ರಲ್ಲಿ ಮತ್ತು ತರ್ದ್ದವಾಡಿ ನಾಡಿನಲ್ಲಿ ೧೦೮೩ ರಲ್ಲಿರುತ್ತಾನೆ. ಅನಂತಪಾಲ ದಂಡನಾಯಕನು ಬನವಾಸಿ ಪ್ರಾಂತ್ಯವನ್ನಾಳುತ್ತ ಬೆಳ್ವೊಲ ಮತ್ತು ಪುರಿಗೆರೆ ೩೦೦ ವಿಭಾಗಗಳ ಆಡಳಿತವನ್ನು ಕ್ರಿ.ಶ. ೧೧೦೩–೧೧೦೭ ಅವಧಿಯಲ್ಲಿ ಆಳುತ್ತಿದ್ದಾನೆ. [೩]

ಈ ಅಧಿಕಾರಿಗಳಲ್ಲಿ ಗುಂಡ್ಡಮರಸ ಹಾಗೂ ಅನಂತಪಾಲ ವಡ್ಡರಾವುಳ ಮತ್ತು ಪೆರ್ಜ್ಜುಂಕ ಹಾಗೂ ಬಿಲ್ಕೊಡೆಯ ಸುಂಕವನ್ನು ಆಳುತ್ತಿರುವುದನ್ನು ಈ ಕೆಳಗಿನ ಶಾಸನಗಳಿಂದ ನೋಡಬಹುದು.

ಗವರೇಶ್ವರ ದೇವರ ಅಂಗಭೋಗಕ್ಕವಲ್ಲಿಯ ಖಂಡ ಸ್ಫುಟಿತ ಜೀರ್ಣ್ಣೋಧ್ಧಾರಕಂ ಕೊಟ್ಟ ಧಂರ್ಮ್ಮಾಯಂ ಶ್ರೀನಗರಂಗಳಂಡಿಗಳಲು ವರ್ಷಕ್ಕೆ ಪ್ರತ್ಯೇಕ ವೀಸಂ ಹತ್ತು, ಚಿಂನ ಗೆಯಿಕದ ಬೆವಹಾರಿಗರು ಪ್ರತ್ಯೇಕ ವರ್ಷಕೆ ವೀಸಂ ಹತ್ತು, ಸ್ಥಳದ ಗವಱೆಗಳು ವರ್ಷಕೆ ಹಸುಂಬೆಗೆ ಪಣವೊಂದು, ನಾನಾದೇಶಿಗವಱೆಗಳು ವರ್ಷಕ್ಕೆ ದಸುಂದಗೆ ಹಾಗವೊಂದು, ಕರ್ಪೂರ ಕಸ್ತೂರಿ ಕುಂಕುಮ ಶ್ರೀಖಂಡ ಮುತ್ತೊಳಗಾಗಿ ಸಮಸ್ತ ತೂಕದ ಭಂಡವನತಕ್ಕಂ ಪೊಂಗೆ ಕಾಣಿ ಎರಡು, ಸ್ಥಳದ ದೂಸಿಗ ವ್ಯವಹಾರಿಗಳಲುಂ ನಾನಾದೇಶಿದೂಸಿಗ ವ್ಯವಹಾರಿಗಳಲುಂ ಪೊಂಗೆ ಕಾಣಿ ಎರಡು, ಮೆಳಸು ಜೀರಗೆ ಸಾಸವಿ ಸದಹುಗೆವೋವ ಕೊತ್ತುಂಬಲಿ ಯೊಳಗಾಗಿ ಪೊಂಗೆ ವೀಸವೊಂದು, ಸಖ್ಖರೆ ಯಿಂಗು ಸೂಂಠಿ ಹಿಪ್ಪಲಿ ಏಲೆಯಕ್ಕಿ ಯಲ್ಲ ವರಿಸಿನಾರು ಪೇರು ಸಮಸ್ತ ತೂಕದ ಭಂಡಕ್ಕೆ ಪೊಂಗೆ ವೀಸವೊಂದು, ಹೆಜ್ಜುಂಕ ವಡ್ಡರಾವುಳಕೆ ನಡವ ದಂಡನಾಯಕರು ಹತ್ತಕೊಂದ ಹೇಜಿನ ಸುಂಕವಂ ಬಿಟ್ಟುಕೊಟ್ಟರು ಸ್ಥಳದ ಹೇಱುವ ಬಣಂಜಿಗರು ಹೊಱಗಣಿಂದ ಬಂದ ಸಮಸ್ತ ಬಣಂಜಿಗರು ಹೇಱಿಂಗೆ ಮಾನವೊಂದು ಮಾಲಗಾಱ ನಾಲ್ವೊತ್ತೊಕಲಲು ತಂಮ ಕರಂಡಗೆಗಳಲು ಪ್ರತ್ಯೇಕ ಹೂವಿನ ಸರವೊಂದು ತಂಬುಲಿಗರು ಸಾಸಿರ್ಬ್ಬರಲು ಚೈತ್ರ ಪವಿತ್ರ ಪರ್ವ್ವ ಬಿಯಕ್ಕೆ ವೊಕ್ಕಲಲು ಎಲೆ ಸಾಯಿರ ವೊಂದುಮ ತೆಲ್ಲಿಗಯ್ವತ್ತೊಕ್ಕಲಲುಂ ದೇವರ

* # ೬೬, ಮೊದಲನೆಯ ಅಡ್ಡರಸ್ತೆ, ಹೊಸಮನೆ ಬಡಾವಣೆ, ಶಿವಮೊಗ್ಗ–೫೭೭೨೦೧.

ನಂದಾದೀವಿಗೆಗೆ ಗಾಣಂಗಳಲು ಪ್ರತ್ಯೇಕ ಎಣ್ಣೆ ಸೊಂಟಿಗೆ ವೊಂದು ಜಿಡ್ಡುಳಿಗೆ ಯೆಪ್ಪತ್ತಱ ಮಂನೆಯ ಎಕ್ಕಲರಸಂ ಮುಖ್ಯವಾಗಿ . . . ಎಂದು ಶಿಕಾರಿಪುರ ಶಾಸನ ಉಲ್ಲೇಖಿಸುತ್ತದೆ. [೪]

"ಇನ್ತು ದಯಾತ್ಯ ದಣ್ಣಾಧಿಪತಿ ಬನವಾಸೆ ಪನ್ನಿರ್ಛ್ಚಾಸಿರ ಮುಮಂ ಶಾನ್ತಳಿಗೆ ಸಾಯಿರಮುಮಂ ಪದಿನೆಂಟು ಭತ್ತ ಗ್ರಾಮಗಳಂ ಮೇಲ್ವಟ್ಟೆಯ ವಡ್ಡರಾವುಳದ ಸುಂಕಮುಮಂ ಸುಖಸಂಕಥಾವಿನೋದದಿಂ . . . . ಮಠದ ಸೊಡರೆಂಣ್ಣೆಗಂ ವಡ್ಡರಾವುಳಂ ಪೆರ್ಜ್ಜುಂಕ ಎರಡು ಬಿಲ್ಕೊಡೆ ಅನ್ತು ನಾಲ್ಕು ಸುಂಕಮುಮಂ" ಎಂದು ಸೊರಬ ಶಾಸನ ಉಲ್ಲೇಖಿಸುತ್ತದೆ.[೫]

"ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಾಧಿಪತಿ ಮಹಾಪ್ರಧಾನ ದಂಣ್ಡನಾಯಕ ಮನೆವೆರ್ಗ್ಗಡೆ ದಂಣ್ಡನಾಯಕಂ ಗುಂಣ್ಡಮರಸರು ಬನವಸೆ ನಾಡೊಳಗಣ ಕಂಪಣ ಮಗ್ರಹಾರಂ ವಡ್ಡರಾವುಳಂ ಹೆಜ್ಜುಂಕ ಯೆರಡುಂ ಬಿಲ್ಕೊಡೆಯ ಮನಾಳುತ್ತಿರೆ ಯಿವರ ವಂಶದೊಳಗೆ ಜ್ಯೇಷ್ಠನುದಿತ್ಯಕೃಷ್ಣನು ಮೆನಿಸಿದ ಸಮಧಿಗತ ಪಂಚಮಹಾಶಬ್ದ ಮಹಾಸಾಮನ್ತಾಧಿಪತಿ ಮಹಾಪ್ರಷಣ್ಡ ದಣ್ಡನಾಯಕಂ ವಿಬುಧ ಪ್ರದಾಯಕಂ ಹಯುವತ್ಸರಾಜಂ ರೂಪ ಮನೋಜಂ ಪರಾರ್ತ್ಥ ಜೀಮೂತವಾಹನ ಯರಿತಟಭೈರವಂ ಗುಣ್ಣನಸಂನ್ನಾಹ ಸಮಸ್ತ ನಾಮಾವಸೀ ಸಮೇತರಪ್ಪ ಜೆಕ್ಕಮರಸನುಂ" ಎಂದು ಶಿಕಾರಿಪುರ ಮತ್ತೊಂದು ಶಾಸನ ಉಲ್ಲೇಖಿಸುತ್ತದೆ. [೬]

"ಸಮಸ್ತ ಪ್ರಶಸ್ತಿ ಸಹಿತಂ ಸ್ರೀಮದ್ದಂಡನಾ ಸ್ರೀಧರ ಯ್ಯಂಗಳು ಮೇಲ್ವಟ್ಟೆಯ ವಡ್ಡರಾವುಳ ಎರಡುಂ ಬಿಲ್ಕೊಡೆಯ ನಾಳುತ್ತಮಿರೆ . . . . . ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ಪೆರ್ಗ್ಗಡೆ ಚಂಗಮಯ್ಯಂಗಳೆ ಬನವಾಸೆ ಪನ್ನಿರ್ಛ್ಚಾಸಿರದ ದವಸಾಯದ ಸುಮಕಮಂ ವಡರಾವುಳ ಡರಡುಂ ಬಿ . . ಕಡೆಯ ಮನಾಳುತ್ತಂ ಚಾಳುಕ್ಯ ವಿಕ್ರಮಕಾಲದ ೧೩ ನೆಯ . . ." ಎಂದು ಸಬರಬದ ಎಲೆವಾಳ ಶಾಸನ ಉಲ್ಲೇಖಿವಿದೆ. [೭]

ಶಿಕಾರಿಪುರ ತಾಲೂಕಿನ ಮತ್ತೊಂದು ಶಾಸನದಲ್ಲಿ ಹೀಗೆ ಉಲ್ಲೇಖಿವಿದೆ. "ಸಮಧಿಗತ ಪಞ್ಚಮಹಾಶಬ್ದ ಮಹಾಸಾಮನ್ತಾಧಿಪತಿ ಮಹಾಪ್ರಚಣ್ಡ ದಣ್ಡನಾಯಕನ ನನ್ತ ಪಾಳನಾ ಬೆಸದಿಂ ಬನವಾಸಿ ಪನ್ನಿರ್ಚ್ಚಾಸಿದರ ವಡ್ಡರಾವುಳದ ಸುಂಕದಧಿಷ್ಠಾಯಕಂ ಶ್ರೀಮದ್ದಣ್ಡನಾಯಕಂ ಮಾದಿರಾಜಂ ಚಾಳುಕ್ಯ ವಿಕ್ರಮ ವರ್ಷದ ೨೨ ನೆಯ ಈಶ್ವರ ಸಂವತ್ಸರದ ಪೌಷ್ಯ ಸುದ್ಧ ೧೦ ಆದಿತ್ಯವಾರದನ್ದನುತ್ತರಾಯಣ ಸಂಕ್ರಮಣ ನಿಮಿತ್ತಂ ಶ್ರೀಮದಗ್ರಹಾರ ಮಾರಸಿಂಗನ ಬೇಗೂರ ವಿಷ್ಣುದೇವರಿಗ್ಗೆ ಧಾರಾಪೂರ್ವ್ವಕ . . ಡಿ ಆಗ್ರಾಮದ ಅಡಕೆಯ ವಡ್ಡರಾವುಳದ ಸುಂಕದೊಳಗೆ ಮೂ . . . ಲಕ್ಕಡಕೆಯ ಸುಂಕಮುನುಂ ಮತ್ತಂ ತಮಗೆ ನಡೆವ ಕಿಱುಕುಳ ಸುಂಕದೊಳಗೆ ಬಿಲ್ಕಡೆಯ ಎಲೆಯ ಹೇಜಿಂಗೆ ದಸವನ್ದ ಮುಮಂ ಮತ್ತಂ ಕ . . ಭೂಮಿಂಗೆ ಸುಂಕ ವೀಸಮುಮಂ। ದವಸಾಯದೊಳಗೆ . . . ನಮುಂ ಬಿಟ್ಟು ॥" [೮]

"ಶ್ರೀಮದ್ದಣ್ಡನಾಯಕ ಗೋವಿನ್ದರಸರ್ ಮೇಲ್ವಟ್ಟೆಯ ವಡ್ಡರಾವುಳ ಮುವೆರಡುಂ ಬಿಲ್ಕೊಡೆಯುಯಂ ಪೆರ್ಜ್ಜುಂಮುಂ ಪಡೆದು ಸುಖಸಂಕಥಾವಿನೋದದಿಂ ಪ್ರತಿಪಾಳಿಸುತ್ತಮಿರೆ ॥ . . . . . . .ಶ್ರೀಮತ್ಕೇದಾರೇಶ್ವರ ದೇವರ ಧ'ೂಪ ದೋಪ ನಿವೇದ್ಯಕ್ಕೆಂದು। ಅವಾಗರದೋಳ್ಪಿಡಿವಲ್ಲಿ ಮಾಱುವಡಮೆಱಡು ಲಕ್ಕವಡಕೆಗೆ ಪೆರ್ಜ್ಜುಂಕವುಮಂ ವಡ್ಡರಾವುಳವುಮೆರಡುಂ ಬಿಲ್ಕೊಡೆಯುಂ ಸರ್ವ್ವ ನಮಸ್ಯಮೆಂದು ಬಿಟ್ಟರ್ ॥" ಹಾಗೂ "ಧಾರಾಪೂರ್ವ್ವಕಂ ಮಾಡಿ ಜಿಡ್ಡುಳಿಗೆ ನಾಡೊಳಗಣ ತದವಣಲೆಯುಮ ನಾಡೊಳಗೆ ಸ್ಥಳವೃತ್ತಿಯಾಗಿ ಹಕ್ಕಲೆಯ ಹೊಲನುಮಂ ತ್ರಿಭೋಗಾಭ್ಯನ್ತರವಾಗಿ ಕೊಟ್ಟು ಮತ್ತ ವಲೆಯಡಕೆ ಧಾನ್ಯವೆಂಬೀ ವಸ್ತುಗಳು ಮೊದಲಾಗಿ ಕ್ರಯವಿಕ್ರಯ ಯೋಗ್ಯಂಗಳಪ್ಪುವರ್ಕ್ಕೆಲ್ಲಂ ವಡ್ಡರಾವುಳಂ ಹೆರ್ಜ್ಜುಂಕಮೆಂಬಿವು ಮೊದಲಾಗಿ ಯುಳ್ಳನ್ತಪ್ಪ ಸುಂಕ ಗಳೆಲ್ಲಮಂ ಬಿಟ್ಟುಕೊಟ್ಟ ಸರ್ವ್ವನಮಸ್ಯವಾಗಿ ಕೊಟ್ಟಾಗಳ್ ॥" ಎಂದು ಶಿಕಾರಿಪುರ ತಾಲೂಕಿನ ಶಾಸನದಲ್ಲಿ ಉಲ್ಲೇಖಿವಿದೆ. [೯]

ಶ್ರೀಕೇದಾರೇಶ್ವರದೇವರ ತೋಂಟದಲು ಪುಟ್ಟುವಾವು ದಂನ್ನದ ಗೋಂಟಡಕೆಯ ವಡ್ಡರಾವುಳ ಹೆಜ್ಜುಂಕ ವೆರಡುಂ ಬಿಲ್ಕೊಡೆಯ ಸುಂಕವನತುಮಂ ಮತ್ತವಾ ತೋಂಟದೆಲೆಯ ಪಂನ್ನಾಯದೆಲ್ಲಾ ಸುಂಕಮುಮಂ ಸರ್ವ್ವಾಭಾಧಾ ಪರಿಹಾರ ವಾಗಿ ನಡವಂತಾಗಿರಲು ಬಿಟ್ಟುಕೊಟ್ಟ ॥ ಎಂದು ಮತ್ತೊಂದು ಶಿಕಾರಿಪುರ ತಾಲೂಕಿನ ಶಾಸನ ಉಲ್ಲೇಖಿಸಿದೆ.[೧೦]

ಬಾದಾಮಿಯ ಬೊಮ್ಮನಾಯಕ ನೆರಡುನೂಱಱ ಹೆರ್ಜ್ಜುಂಮನಾಳುತ್ತ ದೇವರ ಚೈತ್ರ ಪವಿತ್ರದಂದು ಕುಕ್ಕನೂರ "ಮೂವತ್ತಱೊಳಗೆಲ್ಲಯಾದೊಡಂ ಗುಡಿಯ ಬೀಡಿಗಂ ಅಡಕೆ ಮೆಣಸು ಧಸರಿಯ ಮಳವೆ ಸೀರೆಯ ಮಳವೆ ಹದವಿನ ಮಳವೆ ಅರಸಿನದ ಮಳವೆ ಅಲ್ಲದ ಮಳವೆ ನೇಲಯ ಕೊಡ ಎತ್ತಿನಲು ಕತ್ತೆಯಲು ಕೋಣನಲು ಏನ ಹೇಜಿ ಬಂದಡಂ ಹೆರ್ಜ್ಜುಂಕ ಬೀರವಣ ವಡ್ಡಲಾವುಳ ಸಹಿತ ಹತ್ತಕೊಂದು ದಸವಂದಮಾಗಿ ಚಾಳುಕ್ಯ ವಿಕ್ರಮ ಕಾಲದ ೫೦ನೆಯ . . . ." ಎಂಬ ಉಲ್ಲೇಖ ಯಲಬುರ್ಗಾ ತಾಲೂಕಿನ ಶಾಸನದಲ್ಲಿದೆ. [೧೧]

"॥ ಭರತಂ ಮುನ್ನಂ ರಾಜ್ಯದ ಭರಮಂ ತಾಳ್ದಿಟ್ಟು ಸುಂಕಮಂ ಮಾರ್ಪ್ಪಂದಾದರದಿಂ ಗೌಡದ ಗೌತಮೇಶ್ವ

ೇವಂಗಿತ್ತ ನೆರೆಡು ಸುಂಕದ ತೆಱೆಯ ॥ ಪಿರಿಯ ತೆಱೆ ಡ್ಡರಾವುಳ ವರಸರ ಸಾಮಂತ ಭುಕ್ತಿ ಪೆರ್ಜ್ಜುಂಕಂ ದೇವರಿ ಂತು ಸರ್ಬ್ಬಭಾಧಾ ಪರಿಹಾರಂ ಭರತನಂದೆವತ್ತಿಸಿ ನಡೆಗುಂ ಂತೀ ಧರ್ಮ್ಮಮಂ ಸವಿಸ್ತರಂ ಕೇಳ್ದು ದೇವರ ದೇವಂಗೆ ಾಲ್ಕು ಲಕ್ಕವಡಕೆಯ ವಡ್ಡರಾವುಳದ ಸುಂಕಮುಮಂ ೆರ್ಜ್ಜುಂಕಮುಮತಾವುಂ ಭಾಸ್ಕರಯ್ಯನುಂ ಧಾರಾಪೂರ್ಬ್ಬಕಂ ಟ್ಟು ಕೊಟ್ಟರಿಂತೀ ಧರ್ಮ್ಮಮಂ ಪ್ರತಿಪಾಳಿಸಿದಾತಂಗೆ ುರುಕ್ಷೇತ್ರ . . . ." ಎಂಬ ಉಲ್ಲೇಖವು ಶಿಕಾರಿಪುರ ಾಲೂಕಿನ ಶಾಸನದಲ್ಲಿದೆ. ೧೨

ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಎರಡು ೀತಿಯ ಮಾರ್ಗ ಸುಂಕಗಳಿವೆ. ಮೇಲ್ವಟ್ಟೆ ಮತ್ತು ಕೀಳ್ವಟ್ಟೆ. ಮೇಲ್ವಟ್ಟೆಯು ಹೆದ್ದಾರಿಗಳ ಸುಂಕವಾದರೆ, ಕೀಳ್ವಟ್ಟೆಯು ಗ್ರಾಮಗಳಿಗೆ ಹೋಗುವ ಚಿಕ್ಕ ರಸ್ತೆಗಳ ಮೇಲೆ ಸಾಗಿಸುವ ಹಾರಾಟದ ಸರಕುಗಳ ಮೇಲಿನ ಸುಂಕ. ಬೀರವಣವು ಾರಿಗೆ ಸುಂಕ. ಗೌಜ ಗ್ರಾಮದ ಶಾಸನವು ಹಿಂದೆ ಭರತನು ಗೌತಮೇಶ್ವರ ದೇವರಿಗೆ ಬಿಟ್ಟ ಎರಡು ತೆರಿಗೆಗಳನ್ನು ಪ್ರಸ್ತಾಪಿಸುತ್ತದೆ. ಈ ಎರಡು ತೆರಿಗೆಗಳ ವಿವರ ಹೀಗಿದೆ, ಪಿರಿಯ ತೆರೆ ವಡ್ಡರಾವುಳ ಮತ್ತು ಅರಸರ ಸಾಮಂತ ಭುಕ್ತಿ ಪೆರ್ಜ್ಜುಂಕ. ಕೆಲವು ಅಧಿಕಾರಿಗಳು ಮೇಲ್ವಟ್ಟೆಯ ವಡ್ಡರಾವುಳ ಮತ್ತು ಪೆರ್ಜ್ಜುಂಕ ಆಳುತ್ತಿರುವುದನ್ನು ಕಾಣಬಹುದು. ಪ್ರಾಯಶಃ ಇದರಿಂದ ಮುಖ್ಯ ಮಾರ್ಗಗಳಲ್ಲಿ ಇರುವ ಠಾಣೆಗಳಲ್ಲಿ ಸಂಕಲಿಸಲಾಗುತ್ತಿದ್ದ (ವಸೂಲಾಗುತ್ತಿದ್ದ) ಸುಂಕವು ಸಾಮ್ರಾಟರಿಗೆ ಸಲ್ಲುತ್ತಿತ್ತು. ಇದನ್ನು ಅರಸರ ಸಾಮಂತರು ನೀಡುತ್ತಿದ್ದರು ಮತ್ತು ಮೇಲ್ವಿಚಾರಣೆಗಾಗಿ ಅಧಿಕಾರಿಗಳನ್ನು ನೇಮಿಸಲಾಗುತ್ತಿತ್ತು. ಬಿಲ್ಕೊಡೆ ಅಥವಾ ಬೀರವಣವು ಸಾಗಣೆ ಸಮಯದಲ್ಲಿ ಕಳ್ಳಕಾಕರಿಂದ ರಕ್ಷಣೆಗೆ ನೀಡುವ ಸಲುವಾಗಿ ಪಡೆಯುತ್ತಿದ್ದ ಸುಂಕ ಆಗಿತ್ತೆಂದು ತೋರುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


1. ಡಾ॥ ಶ್ರೀನಿವಾಸ ರಿತ್ತಿ, ೨೦೦೦, **ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.
2. ಡಾ॥ ಬಿ.ಆರ್. ಗೋಪಾಲ್, ೧೯೮೧, **ದಿ ಚಾಲುಕ್ಯಾಸ್ ಅಂಡ್ ದಿ ಕಲಚೂರಿಸ್,** ಕರ್ನಾಟಕ ವಿಶ್ವವಿದ್ಯಾಲಯ, ಪುಟ ೭೯.
3. ಅದೇ ಪುಟ ೨೭೩.
4. ಎ.ಕ.೭, (ರೈಸ್ ಆವೃತ್ತಿ), ಶಿಕಾರಿಪುರ ತಾಲೂಕು ನಂ ೧೧೮, ಸೋಮೇಶ್ವರ ದೇವಸ್ಥಾನದ ಬಾಗಲಿನ ಬಲಭಾಗದಲ್ಲಿ ನೆಟ್ಟಕಲ್ಲು, ಬೆಳಗಾಮಿ ಕ್ರಿಶ ೧೦೫೪.
5. ಎ.ಕ.೮, (ರೈಸ್ ಆವೃತ್ತಿ), ಸೊರಬ ತಾಲೂಕು, ನಂ ೨೯, ತೊರೆವಂದ ಗ್ರಾಮದ ಬಯಲ ಬಸವನ ಗುಡಿ ಬಳಿ ನೆಟ್ಟ ೨ನೆಯ ಕಲ್ಲು ಕ್ರಿಶ ೧೦೭೪.
6. ಎ.ಕ. ೭, (ರೈಸ್ ಆವೃತ್ತಿ), ಶಿಕಾರಿಪುರ ತಾಲೂಕು ನಂ ೧೦೦, ವಿರಕ್ತ ಮಠದ ತುಂಬೋ ಹೊಂಡದ ಏರೀ ಮೇಲಿರುವ ಕಲ್ಲು, ಬೆಳಗಾಮಿ ಕ್ರಿಶ ೧೦೮೦.
7. ಎ.ಕ. ೮, (ರೈಸ್ ಆವೃತ್ತಿ), ಸೊರಬ ತಾಲೂಕು, ಎಲೆವಾಳ ನಂ ೩೮೮, ಬಸವಣ್ಣನ ಗುಡಿ ಮುಂದೆ ನೆಟ್ಟ ನಾಲ್ಕನೆಯ ಕಲ್ಲು, ಕ್ರಿಶ ೧೧೮೯
8. ಎ.ಕ. ೭, (ರೈಸ್ ಆವೃತ್ತಿ), ಶಿಕಾರಿಪುರ ತಾಲ್ಲೂಕು, ನಂ. ೧೩, ಬೇಗೂರು ಮಲ್ಲಿಕಾರ್ಜುನ ದೇವಾಲಯಕ್ಕೆ ಆಗ್ನೇಯದಲ್ಲಿ ಅಶ್ವತ್ಥ ಮರದ ಬುಡದಲ್ಲಿ ಕ್ರಿಶ ೧೧೯೮.
9. ಎ.ಕ. ೭, (ರೈಸ್ ಆವೃತ್ತಿ), ಶಿಕಾರಿಪುರ ತಾಲ್ಲೂಕು, ನಂ. ೯೮ ಮತ್ತು ೧೦೦, ಕೇದಾರೇಶ್ವರ ದೇವಾಲಯ ೭ನೆಯ ಕಲ್ಲು ಮತ್ತು ೯ನೆಯ ಕಲ್ಲು ಬೆಳಗಾಮಿ ಕ್ರಿ.ಶ. ೧೧೦೩ ಮತ್ತು ಕ್ರಿ.ಶ. ೧೧೨೯.
10. ಎ.ಕ. ೭, (ರೈಸ್ ಆವೃತ್ತಿ), ಶಿಕಾರಿಪುರ ತಾಲೂಕು ನಂ ೧೦೪, ಕೇದಾರೇಶ್ವರ ದೇವಾಲಯ ೧೩ನೆಯ ಕಲ್ಲು, ಬೆಳಗಾಮಿ ಕ್ರಿಶ ೧೧೫೫.
11. ಕೊಪ್ಪಳ ಜಿಲ್ಲೆ, ಯಲಬುರ್ಗ ತಾಲೂಕು, ಕುಕ್ಕನೂರು ನಂ ೧೭, ಕ್ರಿ.ಶ. ೧೧೫೪, ಕ.ವಿ.ಶಾ.ಸಂ. ೨, ಹಂಪಿ, ಕ.ವಿ.ವಿ.
12. ಎ.ಕ. ೭, (ರೈಸ್ ಆವೃತ್ತಿ), ಶಿಕಾರಿಪುರ, ನಂ ೪೮, ಗೌಜ, ಗೌತಮೇಶ್ವರ ದೇವರ ಪ್ರಾಕಾರದಲ್ಲಿ ಕ್ರಿ.ಶ. ೧೦೭೬.



# ಐತಿಹಾಸಿಕ ತುಳುನಾಡಿನಲ್ಲಿ ಮೂಲಿಗಳು ಮತ್ತು ಶಕ್ತಿ ಕ್ಷೇತ್ರಗಳು

**ಡಾ. ಇಂದಿರಾ ಹೆಗ್ಗಡೆ***

**ಪ್ರಾಚೀನ** ಬುಡಗಟ್ಟು ಜನಾಂಗದ ಅನೇಕ ಪದ್ಧತಿಗಳನ್ನು, ಪರಂಪರೆಗಳನ್ನು ಇಂದಿಗೂ ಮುಂದುವರಿಸಿರುವ ತುಳುನಾಡು ತನ್ನ ಅನನ್ಯತೆಯಿಂದ ವಿಶ್ವದ ಗಮನಸೆಳೆದಿದೆ. ತುಳುನಾಡಿನ ಜನರು ಜಾನಪದ ಪರಂಪರೆ ಪದ್ಧತಿಗಳನ್ನು ಸಾಧ್ಯವಾದಷ್ಟು ಜತನದಿಂದ ಕಾಯ್ದುಕೊಂಡು ಬಂದಿದ್ದಾರೆ ಅಂತಹ ಸಂಪ್ರದಾಯ ಶಕ್ತಿ ಕ್ಷೇತ್ರಗಳಲ್ಲಿ ನಿಯೋಜಿತರಾಗುವ ಮೂಲಿಗಳು.

## ಮೂಲಿ ಪದದ ಅರ್ಥ

ಮೂಲಿ ಪದವು ಮೂಲದಿಂದ ನಿಷ್ಪನ್ನವಾಗಿದೆ. ಆದಿಯದ್ದು, ಮೂಲದಿಂದ ಬಂದುದು. ಮೂಲಿ ರೂಢಿಗತ ಪದ್ಧತಿ ಪ್ರಕಾರ ಮೂಲಿಗಳು ಎಂದರೆ ಚಾಕ್ರಿಯವರು. ನಾಗಮೂಲ ಕ್ಷೇತ್ರಗಳಲ್ಲಿ ಮೂಲಿಗಳು ಇದ್ದುದು ಕಂಡು ಬರುತ್ತದೆ. ತುಳುವರ ಮೂಲಸ್ಥಾನ ಕ್ಷೇತ್ರಗಳಲ್ಲಿ ಕೆಲವು ವಂಶದವರು ವಂಶ ಪಾರಂಪರ್ಯವಾಗಿ ಮೂಲಿಗಳಾಗಿ ಸೇವೆ ಮಾಡುತ್ತಿದ್ದ ಬಗ್ಗೆ ಮಾಹಿತಿ ದೊರಕುತ್ತದೆ. ಇಂತಹ ಕ್ಷೇತ್ರಗಳು ಕಾಲಾನಂತರದಲ್ಲಿ ಪರಿವರ್ತನಗೊಂಡಿವೆ. ಆದರೂ ಒಂದೆರಡು ಕಡೆ ಮೂಲಿಗಳು ಇದ್ದ ಬಗ್ಗೆ, ಈಗಲೂ ಇರುವದು ನಮ್ಮ ಗಮನಕ್ಕೆ ಬಂದಿದೆ. ಮೂಲಿಗಳನ್ನು ತುಳು ಭಾಷೆಯಲ್ಲಿ ಮೂಲಿ, ಎಂದೂ ಕನ್ನಡದಲ್ಲಿ ಪಾದಮೂಲಿ ಎಂದೂ ಕರೆಯುತ್ತಾರೆ.

## ಮೂಲಿಗಳ ನೇಮಕ

ಮೂಲ ಕ್ಷೇತ್ರದ ಮೂಲ ಕುಟುಂಬದ ವ್ಯಕ್ತಿ ಮೂಲಿಯಾಗಿ ನೇಮಕವಾಗುವುದಿದ್ದರೂ ಮೂಲಿಗಳ ನೇಮಕ ಮಾಡುವ ಕ್ರಿಯೆ ಇದೆ. ಸಂಬಂಧಪಟ್ಟ ಕ್ಷೇತ್ರದ ಯಜಮಾನ ಅಥವಾ ಗುತ್ತು ಬೀಡುಗಳ ಯಜಮಾನ ಮೂಲಿಗಳಿಗೆ 'ಎಣ್ಣೆ' ನೀಡಿ ಆತನನ್ನು ಅಧಿಕೃತವಾಗಿ ಆ ಕ್ಷೇತ್ರಕ್ಕೆ ಮೂಲಿಯಾಗಿಸುತ್ತಾನೆ.

೧ ಕಾಸರಗೋಡಿನಲ್ಲಿ ಮಾತ್ರ ಇರುವ "ಬಾಕುಡರು" ಎಂಬ ದಲಿತ ಜನಾಂಗದವರು ನೀಡಿದ ಮಾಹಿತಿಯಂತೆ ದೈವಗಳ ಚಾಕ್ರಿಯವರನ್ನು, ಸೇವಕರನ್ನು ಮೂಲೆರ್> ಮೂಲಿಗಳು ಎಂದು ಕರೆಯುತ್ತಾರೆ.

ಕಾಸರಗೋಡಿನ ಬಲ್ಲ ಎಂಬಲ್ಲಿ ಈ ವಂಶದವರ ನಾಗಮೂಲ ಕ್ಷೇತ್ರ ಇದೆ. ಇಲ್ಲಿ ಪಂಚ ದೈವಗಳು ಇವೆ. ನಾಗ ಕನ್ನಿಕೆಯನ್ನು ಉಲ್ಲಾಲ್ತಿ ಎಂದೂ ನಾಗಬಿರ್ಮೆರನ್ನು (ನಾಗಬ್ರಹ್ಮ)ನನ್ನು ಉಲ್ಲಾಯ ಎಂದು ಇಲ್ಲಿ ಕರೆಯುತ್ತಾರೆ. ಈ ನಾಗ ಶಕ್ತಿಗಳಿಗೆ ಇಲ್ಲಿ ಕೋಲ/ನರ್ತನ ಸೇವೆ ಸಾಧಾರಣವಾಗಿ ವರ್ಷಕ್ಕೊಮ್ಮೆ ಒಮ್ಮೆ ನಡೆಯುತ್ತದೆ.

ಇಲ್ಲಿ ನಾಲ್ (ನಾಲ್ಕು) ಕಾರ್ನೆರ್ ಎಂಬ ಹೆಸರಲ್ಲಿ ನಾಲ್ಕು ಜನ ದೈವ ಚಾಕ್ರಿಯವರು ಇರುವುದು ನಡೆದು ಬಂದ ಪದ್ಧತಿ. ಈಗ (೨೦-೩-೦೭) ಒಬ್ಬರೇ ಇದ್ದಾರೆ. ಇತರರು ನಿಧನರಾಗಿದ್ದಾರೆ. ಬೇರೆಯವರನ್ನು ನೇಮಿಸುವ ಬಗ್ಗೆ ಚರ್ಚೆ ನಡೆಯುತ್ತಿದೆ. ನಾಲ್ ಕಾರ್ನರನ್ನು ನಿಯಮಿಸುವಾಗ ಬಡಾಜೆಯ ಬ್ರಾಹ್ಮಣ ತಂತ್ರಿಗಳು ಕಲಶ ನೀರು ಸುರಿದು ಪವಿತ್ರಗೊಳಿಸುವ ಕ್ರಿಯೆ ಇದೆ. ನಾಲ್ ಕಾರ್ನೆರ್‌ನ್ನು ಕಾರ್ನಪ್ಪಾಡರೆಂದು ಕರೆಯುತ್ತಾರೆ. ಕಾರ್ನಪ್ಪಡರು ಉಲ್ಲಾಲ್ತಿ ಚಾಕ್ರಿಗೆ. ಕ್ಷೇತ್ರದಲ್ಲಿ ದೈವ ಸೇವೆಗೆ ಬೇಕಾಗುವ ವಸ್ತುಗಳನ್ನು ಎತ್ತಿ ಕೊಡುವವರು. ಇವರು ಬೂತದ ಮಾನಿ/ಪಾತ್ರಿ ಆಗುವುದಿಲ್ಲ. ಬೂತದ ಮಾನಿ ಬೇರೆ ವ್ಯಕ್ತಿ.

ನಾಗ ಬಿರ್ಮೆರ ಮುಡಿ (ಅಣಿ) (೭.೫೦) ಕೋಲು ಉದ್ದದ ಅಣಿ (ಮುಡಿ/ಹೆಡೆ)ಯನ್ನು ಪಾತ್ರಿಯ ತಲೆಗೆ ಇವರು ಇಡಬೇಕು. ನಾಲ ಕಾರ್ನೆರ (ನಾಲ್ಕು ಹಕ್ಕಿನವರು) ಕೋಲದ ೨ ದಿನ ಮೊದಲು ಉಪವಾಸ ವ್ರತ ಹಿಡಿದು ಕಂಗಿನ ಪಾಲೆಯನ್ನು ಇವರು ಕಡಿದು ತರಬೇಕು. ಕುಕ್ಕಂಬಿಯನ್ನು ಇವರು ಕಟ್ಟಬೇಕು.

* # ೬, ಕೃಷ್ಣಾ ರೆಸಿಡೆನ್ಸಿ, ೮ನೇ ಅಡ್ಡರಸ್ತೆ, ಅಮರಜ್ಯೋತಿ ನಗರ, ವಿಜಯನಗರ, ಬೆಂಗಳೂರು-೫೬೦೦೪೦.

**ಕುಕ್ಕಂಬಿಲ :** ಬಿರ್ಮೆರ ಅಂದರೆ ನಾಗ/ಮರಿ. ರ್ಮೆರೆಗೆ ಕುಕ್ಕಂಬಿಲ ಆಗಬೇಕು. ಮೂರು ಕುಕ್ಕು(ಮಾವು) ಂದು ಹಲಸಿನ ಕೊಂಬೆಗಳನ್ನು ನಾಲ್ ಕಾರ್ನರ್ ತಂದು ೆಲದ ಮೇಲೆ ಗುಂಡಿ ತೋಡಿ ನೆಡುತ್ತಾರೆ. ಅದನ್ನು ಗಟ್ಟಿಯಾಗಿ ಕಟ್ಟು ಸುತ್ತ ದರಿ ಇಟ್ಟು ದೀಪ ಹೊತ್ತಿಸುತ್ತಾರೆ. ದನ್ನು ಕುಕ್ಕಂಬಿಲ ಎಂದು ಕರೆಯುತ್ತಾರೆ.

ಈ ಮೂಲಿಗಳು ಇವರು ದೈವಪಾತ್ರಿಗಳಾಗುವಂತಿಲ್ಲ. ಶಾಸನಗಳಲ್ಲಿ ನಾಲ್ವರು ಮೂಲಿಗಳ ಪ್ರಸ್ತಾಪ ಇವೆ.

ಕ್ರಿ.ಶ. ೧೪೧೧ರ ಮುಲ್ಕಿ ಬಪ್ಪನಾಡು ದುರ್ಗಾ ಪರಮೇಶ್ವರಿ ದೇವಸ್ಥಾನದ ಶಾಸನದಲ್ಲಿ ಬಾಡ ಕೂಡ ಬಾಕುಡರು/ಕೊರಗರು) ಮೂಲಿಗಳ ಬಗ್ಗೆ ಹೇಳಲಾಗಿದೆ. ಬಾಡ ಕೂಡ ಎಂದರೆ ಕೊರಗರು ಎಂದು ವಿದ್ವಾಂಸರು ವರಣೆ ನೀಡಿದ್ದಾರೆ. ಬಹುಷ ಬಾಕುಡ ಎಂಬ ಪದ ಬಾಡ ಕೂಡ ಆಗಿರಬೇಕು. ಬಾಕುಡರು ಕೊರಗರ ಸಮಾನ ಜಾತಿ. ಶಿರ್ವದ ಕಟ್ಟಿಂಗೇರಿಯಲ್ಲಿ ಬ್ರಹ್ಮಸ್ಥಾನ ಮೂಲಸ್ಥಾನದ ಆಲಡೆ ಇದೆ. ಕಟ್ಟಿಂಗೇರಿ ಆಲಡೆ ಹಿಂದೆ 'ಗುಡ್ಡು ಬಾಕುಡರ' ಮೂಲಸ್ಥಾನವಾಗಿತ್ತು. ಇವರು ವೃತ್ತಿಯಲ್ಲಿ ಬೇಡರು. ಇಲ್ಲಿಯ ಆಡಳಿತ ಮುಕ್ತೇಶ್ವರರಾದ ರಾಮಮೋಹನ ಹೆಬ್ಬಾರರ ಪ್ರಕಾರ ಬಾಕುಡರ ಮೂಲಸ್ಥಾನ ಇದು ಎಂಬುದಕ್ಕೆ ಮಾಹಿತಿಯೂ ಇದೆ. ಅವರು ವಸ್ತ್ರಹೀನರಾಗಿದ್ದರು. ಈ ವಿಷಯ ಅಷ್ಟಮಂಗಳ ಪ್ರಶ್ನೆಯಲ್ಲಿ ಕೂಡಾ ತೋರಿ ಬಂದಿತ್ತು. ಈ ಆಲಡೆಯು ಹಿಂದೆ ಕಾಡಾಗಿತ್ತು. ಬಾಕುಡರ ಸುಪರ್ದಿಯಲ್ಲಿ ಇತ್ತು ಬಾಕುಡರು ಆದಿ ಮೂಲ ಜನಾಂಗ. 'ನಾವು ಭೂಮಿ ಪುತ್ರರು' 'ನಾವು ದಿರಡೆರ್' (ದ್ರಾವಿಡರು). ಎಂದು ಕಾಸರಗೋಡಿನ ಬಾಕುಡರು ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ನನ್ನಲ್ಲಿ ಒತ್ತಿ ಹೇಳಿದ್ದರು.

ಶಿರ್ವ ಕಟ್ಟಿಂಗೇರಿಗೆ ಈಗಲೂ ಇವರು ಬಂದು ಆಲಡೆ ದೇವಸ್ಥಾನದ ತುಸು ದೂರದಲ್ಲಿರುವ ಹುತ್ತಕ್ಕೆ ತಮ್ಮದೇ ಕ್ರಮದಲ್ಲಿ ತಂಬಿಲ ಕಟ್ಟಲು ಬರುತ್ತಾರೆ. ಕಟ್ಟಿಂಗ ಎಂದರೆ ಹಿರಿ ಜಾತಿ ಅರಸ. ಗುರಿಕಾರ ಎನ್ನುತ್ತಾರೆ. ಕನ್ನಡ ನಿಘಂಟು ಕಟ್ಟಿಕಾರ ಎಂದರೆ ಅರಸರ ಓಲಗದಲ್ಲಿ ಶಿಸ್ತನ್ನು ಕಾಪಾಡುವ ವೇತಧಾರಿ ಎನ್ನುತ್ತದೆ. ಕಟ್ಟಿಗೆ ಹಿಡಿಯುವವ. ತುಳುವಿನಲ್ಲಿ ಕೋಲುಕಾರ ಎಂಬ ಪದವಿದೆ. ಇವರು ಯುದ್ಧದಲ್ಲಿ ಕೋಲು ಅರ್ಥಾತ್ ಬಡಿಗೆ ಹಿಡಿದು ಹೋರಾಡುವವರು. ಇವರೂ ಮುಂಡಾಲ ಜಾತಿಯ ಅಸ್ಪೃಶ್ಯ ವರ್ಗ. ಬಾಕುಡರೋ ಸಮಾನರೂ ಆಗಿರಬಹುದು.

ಶಿರ್ವ ಕಟ್ಟಿಂಗೇರಿ ಕ್ಷೇತ್ರ ಪರಿಸರದಲ್ಲಿ ರಸ್ತೆ ಅಗೆಯುವಾಗ ಗುಡಿಸಲುಗಳ ಇದ್ದ ಕುರುಹು ಅವರು ಆರಾದನೆ ಮಾಡುತ್ತಿದ್ದ ಕಂಚಿನ ಪಾಪೆಗಳು ಸಿಕ್ಕಿವೆ. ತೂಕುಲ (ನೇತಾಡುವ ದೀಪ) ಸಿಕ್ಕಿವೆ ಎಂದು ರಾಮಮೋಹನ ಹೆಬ್ಬಾರರು ಮಾಹಿತಿ ನೀಡಿದ್ದರು.

ಇಲ್ಲಿ ಆರು ಎಕ್ರೆ ದೇವರ ಕೆರೆ ಇದೆ. ಬಹುಷಃ ಇದು ಕಟ್ಟಿಂಗರ ಕೆರೆ (ಕಟ್ಟಿಂಗೆರೆ) ಆಗಿರಬೇಕು.

ಬಾರಕೂರಿನ ಸೋಮನಾಥ ದೇವಸ್ಥಾನದ ಶಿಲಾಫಲಕದ ಕ್ರಿ.ಶ. ೧೪೬೩ ಬರಹದಲ್ಲಿ ಕಟ್ಟುಂಗರೆಯ ಪ್ರಸ್ತಾಪ ಇದೆ.

ಸಾಲು

೧೮ [ಪಡು]–

೧೯ ವಲು ಕಟ್ಟುಂಗರೆಯಿಂದಂ ಮೂಡಲು ಬಡಗಲು ಬೆ[ಟ್ಟಿ]ನ ಬಳಿಯ..' (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ ತುಳುನಾಡಿನ ಶಾಸನಗಳು ಶಾಸನ ಸಂ ೭೭ ರಮೇಶ.) ಇರುವ 'ಕಟ್ಟುಂಗರ' ಎನ್ನುವುದು ಕಟ್ಟುಂಗ ಜಾತಿ ಆಗಿರುವ ಸಾಧ್ಯತೆ ಇದೆ.

ಶಿರ್ವ ಕಟ್ಟಂಕೇರಿ ಕ್ಷೇತ್ರದ ಭೂಮಿಯ ಒಡೆಯರು ಮತ್ತು ದೇವಳ ಆಡಳಿತ ಮೊಕ್ತೇಸರರು ಜೈನರಾಗಿದ್ದರು. ೧೭೫೭ರಲ್ಲಿ ಮೂಡಬಿದ್ರೆಯ ಜೈನ ಅರಸು ಇದರ ಉಸ್ತುವಾರಿಯನ್ನು ಹೆಬ್ಬಾರರ ಕುಟುಂಬಕ್ಕೆ ನೀಡಿದ್ದರು.

**ಮೂಲಿಗಳ ನೇಮಕ : ೨**

ಮಂಗಳೂರಿನ ಬಳಿ ಜಪ್ಪುನ ಮೊಗರುವಿನ ಗುಡ್ಡೆಗುತ್ತಿನ ಚಾವಡಿ ದೈವ ವೈಜನಾಥ. ಇಲ್ಲಿ ವೈಜನಾಥ ಭೂತಾರಾಧನೆಯ ಪದ್ಧತಿಯಂತೆ ಉಪಾಸನೆಗೊಳ್ಳುತ್ತಿದೆ. ವೈಜನಾಥ ಗುಡ್ಡೆ ಗುತ್ತಿನ ಚಾವಡಿಯ ಉಯ್ಯಾಲೆಯಲ್ಲಿ ಇದ್ದರೂ ಆತನ ಕ್ಷೇತ್ರ ಸಮೀಪದ 'ಕಂರ್ಬು' ಎನ್ನುವ ಕಾಡಿನ ಸ್ಥಳ. ಈ ಕ್ಷೇತ್ರದಲ್ಲಿ ವೈಜನಾಥ ಮತ್ತು ಪರಿವಾರ ದೈವಗಳಿಗೆ ಗುಡಿ ಇದೆ. ಈ ಗುಡಿಯ ಬಳಿ ಬಿಲ್ಲವ ಜಾತಿಯ ಪರಂಪರೆಯ ಮನೆ ಇದೆ. ಇದನ್ನು ವೈಜನಾಥನ ಭಂಡಾರ ಮನೆ ಎನ್ನುತ್ತಾರೆ. ಇಲ್ಲಿ ವೈಜನಾಥನ ಮೊಗವಾಡ ಆಯುಧ ಪರಿಕರಗಳು ಇವೆ. ಈ ಮನೆಯ ವ್ಯಕ್ತಿ ವೈಜನಾಥನ ಚಾಕ್ರಿಗೆ ನೇಮಕವಾಗುವ ಪ್ರಕ್ರಿಯೆ ಇದೆ. ಆ ಮನೆಯ ವಂಶದ ಹಿರಿಯನಿಗೆ 'ಎಣ್ಣೆ' ನೀಡಿ ಉಮನ ಎಂದು ಕರೆಯುವ ಪದ್ಧತಿ ಮುಂದುವರೆದಿದೆ. ಈತ ವೈಜನಾಥನ ಮೂಲ ಕುಟುಂಬ. ಮುಂದೆ ಆತನನ್ನು 'ಉಮನ' ಎಂದು ಕರೆಯುತ್ತಾರೆ. ಅದೇ ವಂಶದವ ಚಾಕ್ರಿಯವನಾಗಿ ನೇಮಕ ಆಗುವುದಿದ್ದರೂ ಪ್ರತಿ ತಲೆಮಾರಿನಲ್ಲೂ ನೇಮಕ ಆಗಬೇಕು. ಇವನನ್ನು ಮೂಲಿ ಎಂದು ಕರೆಯುತ್ತಾರೆ. ಈಗ ಗುಡ್ಡೆ

ಗುತ್ತಿನ/ಕಂಬ್ಳಿ ಸ್ಥಾನದ ವೈಜನಾಥನ ಚಾಕ್ರಿಯನ್ನು 'ಉಮನ ಮೂಲಿ' ಮಾಡುತ್ತಿದ್ದಾನೆ. ಈತ ವೈಜನಾಥನ ಉಪಾಸನಾ ಸಂದರ್ಭದಲ್ಲಿ ಸಲಕರಣೆಗಳನ್ನು ಒದಗಿಸಿಕೊಡುತ್ತಾನೆ. ಗುಡ್ಡೆ ಗತ್ತಿನ ಚಾವಡಿಯಲ್ಲಿ ನಡೆಯುವ ಉಪಾಸನಾ ಕಾರ್ಯ ಗಳಲ್ಲೂ ಈತನೇ ಪರಿಕರ ಒದಗಿಸಬೇಕು. ಈ ಉಮನ ಮನೆತನಕ್ಕೆ ಗುಡ್ಡೆ ಗುತ್ತು ೨೦೦ ಮಾಡಿ ಜಾಗ ಉಂಬಳಿ ಬಿಟ್ಟ ದಾಖಲೆ ಇದೆ ಎನ್ನುತ್ತಾರೆ ಗುಡ್ಡೆ ಗುತ್ತಿನವರು. ಈ ಭೂಮಿಯಿಂದ ಬರುವ ಉತ್ಪತ್ತಿಯಿಂದ ಆತ ವೈಜನಾಥನ ಸ್ಥಾನ/ಕ್ಷೇತ್ರದಲ್ಲಿ ವರ್ಷಕ್ಕೆ ಎರಡು ಆಚರಣೆಯನ್ನು ಮಾಡಬೇಕಿತ್ತು. ಈ ಭೂಮಿಯನ್ನು ಆತ ಮಾರುವಂತಿಲ್ಲ. ಆದರೆ ಆ ಕುಟುಂಬವರು ಈ ಭೂಮಿಯನ್ನು ಮಾರಿದಾಗ ಈ ವಿವಾದ ಕೋರ್ಟು ಮೆಟ್ಟಲು ಹತ್ತಿದೆ. ವೈಜನಾಥನ ಮೂಲಿ ವೈಜನಾಥನ ಮಾಧ್ಯಮ (ಪಾತ್ರಿ)ಯಾಗುವುದಿಲ್ಲ. ಪಾತ್ರಿಯಾಗುವ ಬೇರೆ ವ್ಯಕ್ತಿ. ಪಾತ್ರಿಯಾಗುವವನನ್ನು ಅಂತ ಪೂಜಾರಿ ಎಂದು ಕರೆಯುತ್ತಾರೆ.

**ಮೂಲಿ ಪದಗಳನ್ನು ಉಲ್ಲೇಖಿಸುವ ಶಾಸನಗಳ ಪ್ರಾದೇಶಿಕತೆ**

ಮೂಡಬಿದಿರೆ, ಉಡುಪಿ, ಕುಂದಾಪುರ ಮತ್ತು ಪುತ್ತೂರು ತಾಲ್ಲೂಕುಗಳಲ್ಲಿ ಮೂಲಿ ಮತ್ತು ಪಾದ ಮೂಲಿಗಳು ಜವಾಬ್ದಾರಿಯನ್ನು ಶಾಸನಗಳು ಉಲ್ಲೇಖಿಸಿವೆ. ಈ ಶಾಸನ ಕಟ್ಟಲೆಗಳು ಮೂಲಕ್ಷೇತ್ರಗಳ ಉಪಾಸನೆಗೆ ಮೂಲಿಗಳು ಒದಗಿಸಬೇಕಾದ ಸೇವೆಯನ್ನು ಉಲ್ಲೇಖಿಸುತ್ತವೆ. ಮೂಲತಃ ಇಂತಹ ಕ್ಷೇತ್ರಗಳು ತುಳುವರ 'ಮೂಲ ತಾನ ಆದಿ ಆಲಡೆ'ಗಳು. ನಾಗ ಮತ್ತು ಪರಿವಾರ ಶಕ್ತಿಯ ಕ್ಷೇತ್ರಗಳು. ಇಂತಹ ಕೆಲವು ಆಲಡೆಗಳು ಪರಿವರ್ತನೆಯಾಗಿ ದುರ್ಗಾ, ಶೈವ, ಜನಾರ್ದನ ದೇವಸ್ಥಾನವೂ ಆಗಿದೆ. ಆದರೆ ಅಂತಹ ಕ್ಷೇತ್ರಗಳೂ ಮೂಲ ತಾನದ ನಾಗ ಪರಿವಾರದ ನಂಬಿಕೆಯನ್ನು ಕಳೆದುಕೊಂಡಿಲ್ಲ ಉದಾಹರಣೆಗೆ ಎರ್ಮಾಳು ಜನಾರ್ದನ ದೇವಸ್ಥಾನ. ಈ ಕ್ಷೇತ್ರದ ಒಂದೆರಡು ಶಾಸನಗಳು ಮೂಲಿಗಳ ಬಗ್ಗೆ ಪಾದ ಮೂಲಿಗಳ ಬಗ್ಗೆ ಉಲ್ಲೇಖಿಸುತ್ತವೆ. ಆದರೆ ಮೂಲತಃ ಜನಾರ್ಧನ ದೇವಸ್ಥಾನ ತುಳುವರ ಆದಿ ಮೂಲ ಕ್ಷೇತ್ರ. ಈಗಲೂ ಇಲ್ಲಿಗೆ ಆದಿಮೂಲದ ಕುಟುಂಬಗಳು ತಮ್ಮ ಕುಲ ದೈವ-ನಾಗ ಕ್ಷೇತ್ರದ ಪಂಚ ದೈವಗಳನ್ನು ಉಪಾಸಿಸುತ್ತಾರೆ.

**ಮೂಲಿ, ಪಾದ ಮೂಲಿಗಳ ಬಗ್ಗೆ ಉಲ್ಲೇಖಿಸುವ ಶಾಸನಗಳ ಸಂಖ್ಯೆ**

ತುಳುನಾಡಿನ ಶಕ್ತಿ ಕ್ಷೇತ್ರಗಳಲ್ಲಿ ಇರುವ ನಿಯೋಜಿತ ರಾಗುವ ಮೂಲಿಗಳ ಬಗ್ಗೆ ಸುಮಾರು ೧೫ ಶಾಸನಗಳಲ್ಲಿ ಮಾಹಿತಿ ಸಿಗುತ್ತವೆ.

ಕ್ರಿ.ಶ. ೧೨೦೪ರಿಂದ ಕ್ರಿ.ಶ. ೧೫೬೭ರವರೆಗಿನ ಶಾಸನಗಳು ಮೂಲಿ ಮತ್ತು ಪಾದಮೂಲಿಗಳನ್ನು ಉಲ್ಲೇಖಿಸುತ್ತವೆ.

ಶಾಸನಗಳಲ್ಲಿ 'ಪಾದ ಮೂಲಿ' ಮತ್ತು 'ಮೂಲಿ' ಎಂದೂ ಉಲ್ಲೇಖಿಸಿದ್ದಾರೆ.

**ಶಾಸನಗಳು**

೧ **ಯೆರ್ಮಾಳು ಜನಾರ್ದನ ದೇವರ ಪ್ರಾಕಾರದೊಳಗಿನ ಶಿಲಾ ಫಲಕ ಕ್ರಿಶ. ೧೪೦೨** (SII., Vol. IX, P.II No. 426)-1.

೬ ಸಾಲು ಕಳಲಿಗೆ ಲಕ್ಕಪ್ಪಗಳ ಮಕ್ಕಳು ಗಣಪ

೭ ೦ಣಗಳು ಯೆರ್ಮ್ಮಾಳ ಶ್ರೀ ಜನಾರ್ಧನ ದೇವರ ಸ್ಥಾನದಲಿ ಮಾಡಿದ ಧರ್ಮ್ಮದ ಕ್ರಮ-

೮ ವೆಂತೆಂದೆಡೆ ಯೆರ್ಮ್ಮಾಳ ಆದಂತಿಯಾದ ಮಾರಂದು ವೆರ್ಗ್ಗಡೆಯ-

೯ ರು ಆ ಊರ ೨೪ ಪ್ರಜೆ ಜನನಿಗಳು ಯೆರ್ಮ್ಮಾಳ ದೇವರ ಪಾದಮೂಲಿಗಳು

೧೦ ಯಿವರೆಲ್ಲರ ಸನುಮತದಿಂದ ಅವರುಗಳು ಮುಂತಾಗಿ ಆ ಗಣಪಂ-

೧೧ ಣಗಳು ಆ ಪಾದ ಮೂಲಿ ವಿಷ್ಣು ನೆಲ್ಲಿ, ನಾರಣ ನೆಲ್ಲಿ ಕೇಶವ ನೆಲ್ಲಿ ಯಿವರು

೧೨ ಕಯ್ಯಲ್ಲಿ ಅರ್ದ ಪರಿಚ್ಛೇದವಾಗಿ ಮೂಲಿಯ ಹಣಸಹಿತವಾಗಿ ಕೊ-

೧೩ ಕೊ-ಮೂಲ ಪರಿಚ್ಛೇದವಾಗಿ ಧಾರಾ ಪೂರ್ವ್ವಕವಾಗಿ ಕೊಂಡ ಕ್ಷೇತ್ರದ ವಿ-

೧೪ ವರ ಯೆರ್ಮ್ಮಾಳ ದೇವಾಲ್ಯದ ಯೀಶಾ(೦)ನ್ಯದ ಮೂಲೆಯ ಪಾಳದೇವವರ

೧೫ ಮಜಲುಉ ಆ ಭೂಮಿಯ ಚತುಸ್ಸೀಮೆ

೩೭ . . . . . ಜನಾರ್ಧನ ದೇವರ ಆ ಪಾದಮೂಲಿ

೩೮ . . . . . ಯವರೆಲ್ಲರ ಮತದಿಂದ ಮಾರ

ಎಂಬ ಒಕ್ಕಣೆ ಇದೆ.

ಪಾಲದೇವರು ಎಂದರೆ ಯಾರು? ಕೆಲಿಂಜೆ ಉಲ್ಲಾಲ್ತಿಯ ಕಾಡಿನ ಮೂಲ ಸಾನಿಧ್ಯಕ್ಷೇತ್ರವನ್ನು 'ಪಾಲಮಂಟಮೆ' ಎಂದು ಕರೆಯುತ್ತಾರೆ. ಇಲ್ಲಿ ಒಂದು ನಿಲುವುಗಲ್ಲು ಕೂಡಾ ಇದೆ. ಯಾರ್ಮಾಳು ದೇವಾಲ್ಯದ ಈಶಾನ್ಯ ಮೂಲೆಯಲ್ಲಿ ಪಾಳದೇವರು ಇದ್ದರೆಂದು ತಿಳಿದುಬರುತ್ತದೆ.

ಯೆರ್ಮಾಳು ಜನಾರ್ಧನ ದೇಗುಲ ಕ್ರಿ.ಶ. ೧೪೦೨ರ ಎರಡು ಶಾಸನಗಳಲ್ಲಿ– SII., VOL.VII, No. 270

"ಯೆರ್ಮಾಳು ದೇವರ ಪಾದಮೂಲಿಗಳು") ಎಂಬ ಉಲ್ಲೇಖವಿದೆ.

ಶಂಕರನಾರಾಯಣ ದೇವಸ್ಥಾನದ ಶಾಸನ (SII., VOL. IX, P.II.No. 419).

ಆ ಮೂಲಿಗಳ ಹಿರಿಯ ಬಳಿ ಅಣವೋಂತಪಿ ಹಳಿಯ ಕವಿಲ ಹಳಿಯ ವಿತಲ ಹಳಿಯ ವೆಂಡಎದ ಹಳಿಯ– ಹೀಗೆ ಉಲ್ಲೇಖಿಸಲಾಗಿದೆ.

**ಕ್ರಿ.ಶ. ೧೨೦೪ರ ವೀರ ಕುಲಶೇಖರಾಳುಪೇಂದ್ರನ ಮಂಗಳೂರು ಕೆನರಾ ಹೈಸ್ಕೂಲ್ ಶಾಸನ**

೨೮ ಡ [|*] ಪಾದಮೂಲದವರು ನಿವೇದ್ಯಕ್ಕೆ ಯಿಕ್ಕುವ ಅಕ್ಕಿ ಹೊತ್ತು ತಪ್ಪಿದಡೆ ಕುಂದಿದಡೆ ದಿನ ದಿನ ನಡವ ಕಥಾಮಾಲೆ[ಯ]

೨೯ ಯಿಷ್ಟನೂ ದಿನಾಯ ನೋಡಿ ಹೇಳ ದಿದ್ದಡೆ....' (ಕೆ.ವಿ. ರಮೇಶಮತ್ತು ಎಂ.ಜೆ. ಶರ್ಮತುಳುನಾಡಿನ ಶಾಸನಗಳು ೩೬) ಇದು ಬಂಕೆಶ್ವರ ದೇವರಿಗೆ ನೀಡಿದ ದಾನ ಶಾಸನ ಬಂಕೇಶ್ವರ ದೇವರು....ಬೈಂಕೇಶ್ವರ ದೇವರು ಮಂಗಳೂರು ತಾಲೂಕಿನ ಕಳುವಾರುನಲ್ಲಿದೆ.

**ಮಹಾಲಿಂಗೇಶ್ವರ ದೇಗುಲ ಬಸ್ರೂರು. ಕ್ರಿ.ಶ. ೧೪೮೭ರ ಶಾಸನ** (SII,VOL. IX, P. II. No. 473).

೧೯ ದೆ ಧರೆಯಿಂದಂ ಬಡಗಲು ಪಡುವಲು ನಡುವೆ ಓಣಿಯರ ಅಂಣಿ ಮೂಲಿಯ ಹಿತಿಲ ಗಡಿಯಿ–

೨೦ ಂದಂ ಮುಡಲ ಬಡಗಲು ಜನದಾರಾಧ್ಯರ ಗಡಿ ಅಂಣ ಮೂಲಿಯ ಹಿತ್ತಿಲಗಡಿಯಿಂದ ತೆಂಕಲು

೨೧ ಯಿಂತೀ ಚತುಸೀಮೆಯಿಂದ

೨೭ [ಉ]ದಯ ತಾಳುವನ ಬಡಗ ತಯಪಾಡಿಯ ಒಳಗೆ ಮೂಲಿ ಮಾದಂಣ ಸೆಟ್ಟಿಯ ಅಳಿಯ ಬೆಂಮ ಸೆ

೨೮ ಟ್ಟಿ ರುದ್ರಕ್ಷೆಯ ಒಡೆಯರ ಮಠಕೆ ಮಾಡಿದ ದ (೦)ರ್ಮಯೀಚನಾಬಿಂನಾಣಿಯ ಮಗ ಕೇಶ ಬಿನ್ನಾಣಿ

೨೯ ಸುಬ್ರಮಣ್ಯ ಬಿಂನಾಣಿಯ ಮಗ ಸಕ್ರುಘ್ನ ಬಿನ್ನಾಣಿ ಯಿವರಿಬರ ಮೂಲ ರುದ್ರಕ್ಷೆ ಒಡೆಯರ ಅ–

೩೦ ರುವಾರ ತಂಕ ಅಡಕೆತಾಲ

ಬಿಂನಾಣಿ ಎನ್ನುವುದು ಬಂಟರ ವಂಶನಾಮ ಮತ್ತು ಉಲನಾಮ. ಮಾದಂಣಟ್ಟಿ ನಾಡವ ಜಾತಿಯ ಬಂಟರು.

**ಕ್ರಿ.ಶ. ೧೪೩೧ರ ಪುತ್ತೂರಿನ ಮಹಾಲಿಂಗೇಶ್ವರ ಶಾಸನ** (SII.,Vol.,XXVII.No 105)

ನಾಲ್ವರು ಪಾದಮೂಲಿಗಳ ವಿಚಾರ ಬರುತ್ತದೆ.

೬ ----------ಕ್ರಿಯಾ ಶಕ್ತಿ

೭ ದೇವರುಗಳು [ಪು]ತ್ತೂರಿಗೆ ವಿಜಯ ಮಾಡಿದಲ್ಲಿ ಆ ಕ್ರಿಯಾ ಶಕ್ತಿ ದೇವರುಗಳು ಅಂಣಪ್ಪಗಳ ಬುಧಿವಂತ ಮನುಷ್ಯ ದೇ–

೮ ವರಸನು (ಮೂ)ಳಿ ಊರ ಅಧಿಕಾರಿ ದೇವರಸನು ಪರಿವಾರ ನಾಲ್ವರು ನಾಯಕವಾಡಿಗಳು ಕೂಡಿ ದೇವರ ಪಾ–

೯ ದ [ಮೂ]ಲಿ[ನಕಾ]ಸು ಭಂಡಾರಿ ಮೊದಲಾದ ನಾಲ್ವರು ಪಾದಮೂಲಿಗಳ ನಿಲಿಸಿ ಮಾಡಿದ ಧರ್ಮಗಳ ವಿವರ ದೇವರಅಮೃ–

೧೦ ತ ಪಡಿಗೆ ಉಷಾ ಪೂಜೆಗೆ ನಿತ್ಯಸ್ಥಿತಿ ನಯಿವೇದ್ಯಕ್ಕೆ ಅಕ್ಕಿ ಹಾನೆ ೨ ಕುಡುತೆ

೮೨ ನಾಲ್ವರ ಪಾದಮೂಲಿಗಳು ಬಂ

೮೩ ಗರ ಮನು[ಷ್ಯಂ ಸಹವಾಗಿ.

೮೪ ದವಚೆ . ಗ್ರಾಮ . . . . .

**ಕುಂದಾಪುರ ಶಂಕರನಾರಯಣ ಪಾಂಡೇಶ್ವರ ಕ್ರಿ.ಶ. ೧೪೦೭ರ ಶಾಸನ** (SII.,VOL.XVII.No.86)

೧೫ ಂತೆದರೆ ಪಾಂಡೈಸ್ವರದ ಶಂಖರನಾರಾಣ ದೇವರ ಪಾ–

೧೬ [ದೆ] ನರಿಯಾದೆಯನು ಪಾಂಡೇಸ್ವರದ ಹತ್ತು ಪ್ರಜೆ ಉರವ

೧೭ ರು ಮುಕ್ಕಾಲು ವಟ್ಟಗಳು ಹೆಗ್ಗಡೆಯೂ ಅರಸೂ ಕೂ

೧೮ ಡಿ ಸಂಖರ ನಾರಾಯಣದೇವರ ಪಾದಮೂಲಿಗಳು

೧೯ ಅರಮನೆಗೆ ಬಹಪ . ಮರ್ಯಾದೆ ಅಯದು – ಹೊಂನನು ನಂದ

೨೦ ದೀವಿಗೆಯ ಧರ್ಮಕ್ಕೆ [ಧಾ]ಟಿ ಪಜುವರಕವಾಗಿ ಅರಸುಗಳು ಕೊಟದಟರು

ಕ್ರಿ.ಶ. ೧೫೬೭ರ ಶಾಸನದಲ್ಲಿ "ಹಲರ ಕಟ್ಟಲೆಯವರು ತಮ್ಮ ಕುಲಸ್ವಾಮಿಯಹ ನಾರಾಯಣದೇವರಲ್ಲಿ......" ಎಂಬ ಉಲ್ಲೇಖದಲ್ಲಿ ನಾರಾಯಣಸ್ವಾಮಿ ಎನ್ನುವ ಹೆಸರು ವಿಷ್ಣುವಿನದ್ದು ನಾರಾಯಣ ಆಗಿರಲಾರದು. ತುಳುವರ ಕುಲಸ್ವಾಮಿ ನಾಗ ಬ್ರಹ್ಮ ಆಗಿರಬೇಕು. ಈ ಭಾಗದಲ್ಲಿ

ನಾಗನನ್ನು ನರಯಣ ಎನ್ನುತ್ತಾರೆ, ಸೂರ್ಯನನ್ನು ನರಯಣ ಎನ್ನುತ್ತಾರೆ.

ಸಾಮಾನ್ಯವಾಗಿ ಶಕ್ತಿ ಸ್ಥಳಗಳಲ್ಲಿ ಪಾದಮೂಲಿಗಳು ಕಂಡು ಬರುತ್ತಾರೆ.

**ಕುಂದಾಪುರ ಉಪ್ಪುಂದ ದುರ್ಗಾಪರಮೇಶ್ವರಿ ದೇವಾಲಯದ ಕ್ರಿ.ಶ. ೧೫೨೮ ತಾಮ್ರ ಶಾಸನ**

೭೧ .......................... . ಭಂ

೭೨ ಡಾರಿಗಳವರಿಂದ ಕಾವಲು ಮುಂತಾದದ ಮಾಡಿಸಿಕೊಂಬುದಕೆ ನಿಮ್ಮಡಿಗಳೆ ಕರ್ತರು ಯೀ ಧರ್ಮ್ಮಂ

೭೩ ಸ್ಥಳಂಗಳ ಮೂಲಿಗರು ಆನಿಗರಿಗೆ ಮೂಲ ಮುಂತಾದ ವ್ಯವರಗಳನು ಮಾಡಸಲ್ಲ ಯೀ ಬರೆದು ಕೊಟ್ಟ ....

ಇದು ರಾಮಚಂದ್ರ ತೀರ್ಥಶ್ರೀಪದಂಗಳಿಗೆ...ಕೊಟ್ಟ ಧರ್ಮ ಮೂಲ ದಾನ ಶಾಸನ (ಡಾ। ಪಿ.ಎನ್. ನರಸಿಂಹಮೂರ್ತಿ, ಕುಂದಾನಾಡಿನ ಶಾಸನಗಳು ಸಂ. ೬೫)

**ಕ್ರಿ.ಶ. ೧೪೦೭ರ ಶಾಸನ** (SII.,Vol.,XXVII.No.84) ಸ್ಥಳ ?

ಹೊಸಬು ಮೂಲಿಯನು ಅಂನ್ಯಾಯದಲಿ ಅರಸಿನ ಬಂಟರೂ ಕೊಂದ ಸಂಮಂಧ.... ಹೊಸಬು ಮೂಲಿಯ ಕುಟುಂಬದವರಿಗೆ ಪರಿಹಾರ ಕೊಟ್ಟ ಶಿಲಾ ಶಾಸನ

**ಬಳಪ ಸುಳ್ಯ-ಪುತ್ತೂರಿನ ತ್ರಿಶೂಲಿನ ದೇವಸ್ಥಾನದ ಕ್ರಿ.ಶ. ೧೪೯೩ರ ಶಾಸನ** (SII.,VOL.XVII.No.376)

'ದುರ್ಗಾ ದೇವಸ್ಥಾನದ ಪಾದಮೂಲಿಗಳು ತೆಗೆದ ಕಟಲೆಯಿಂದ' ಎಂಬ ಉಲ್ಲೇಖ ಇದೆ.

ಕ್ರಿ.ಶ. ೧೪೧೧ರ ಬಪ್ಪನಾಡು ದುರ್ಗಾ ಪರಮೇಶ್ವರಿ ದೇವಸ್ಥಾನದ ಶಾಸನ (SII VOL., VII 259.)

ಬಾಡ ಕೂಡ (ಬಾಕುಡರು/ಕೊರಗರು) ಮೂಲಿಗಳ. ಬಗ್ಗೆ ಹೇಳಲಾಗಿದೆ.

**ಕ್ರಿ.ಶ. ೧೩೭೭ರ ಶಾಸನ** (SII.,VOL.,IX.P.II.416) ಸ್ಥಳ

...ಆಮೂಲಿಗರೇ ತರು ಸಿದ್ಧಾಯ ನಟ್ಟು ಬೆಡೆ ಯೆಸೆ ಒಸಗೆ ಜೋಡಿ ಯಿವೆಲ್ಲವನು ಮೂಲಿಗರೇ ನಡೆಸಿ ದೇವರಿಗೆ ಬಹರು.."

**ಮೂಬಿದಿರೆಯ ಹೊಸ ಬಸದಿ ಗೌರಿ ದೇವಾಲಯ ವೀರ ಕುಲಸೇಖರನ ೧೪೬೪ರ ಶಾಸನ** (SII.,VOL.VII.No.224)

"...ಕ [ಲಟಿ] ಯರು ಪಾದಮೂಲದ ಕಟಿದಿರ್ದು ಬರಯಿಸಿದ ಲಿಖಿತ ಸಾಸನ-

೧೯ . . . ಶ್ರೀ ಬಲಿ

೨೦ . ಲಿ ಬಾರದಿದ್ದಡೆ ೫ ರ ಹೊನ್ನ ಅರಸಿಂಗೆ

೨೧ ದೇವರಿಗೆ ಪಾದ ಮೂಲದ ತಪ್ಪುವ

೨೨ ರು ದುರ್ಗಾ ದೇವಿಗೆ ನೈವೇದ್ಯಕ್ಕೆ ......."

**ಉಪ್ಪುಂದ ಶ್ರೀ ದುರ್ಗಾ ಪರಮೇಶ್ವರಿ ದೇವಸ್ಥಾನದ ೧೫೬೨ರ ತಾಮ್ರ ಶಾಸನ** - ಹೆಗ್ಗ (ಡಾ। ಪಿ.ಎನ್. ನರಸಿಂಹಮೂರ್ತಿ, ಕುಂದಾನಾಡಿನ ಶಾಸನಗಳು ಸಂ. ೭೩)

೨೬ ಡೆ ಲಿಂಗಪ್ಪ ಹೆಗ್ಗಡೆ ಮುಂತಾದವರು ಕೆರ ಗಜನಿಯ ನಾಲ್ಕಕ್ಕೆ

೨೭ ವೊಂದು ಪಾಲು ಸ್ಥಳ ಮೂಲಿಗರ ಕಯ್ಯ ಮಾಡಿಕೊಂಡ ಆದಿವೊತ್ತೆ

೨೮ ಮೂಲ ಮುಂತಾದ ವ್ಯವಹಾರಗಳನು ಸಲ್ಲದೆಂಬುದ ಕಂಡು

೨೯ ಆ ಸಾಧನಗಳನು ತೆಗೆಯಿಸಿ ಆ ದೇವಿಯ ಧರ್ಮ್ಮದೇವಸ್ಥಾನಾಧಿಪ-

೩೦ ತ್ಯಕ್ಕೆ ನೀಉ ಮೂಲಿಗಳಾದ ಸಮ್ಮಂಧ ಕರೆ ಗಜನಿಯ ನಾಲ್ಕಕ್ಕೆ

೩೧ ಪಾಲ ಸ್ಥಳಕ್ಕೆ ಮೂ (ಹಡ ೮) ಆದ್ದವನು ನಮ್ಮ ಭಂಡಾರ -

೩೨ ಕ್ಕೆ ನಿಮ್ಮ ಕಯ್ಯಲು ಸಲೆ ಸಲಿಸಿಕೊಂಡು ಆ ಸರ್ವಸ್ವವನು ನಿವಗೆ ಸ-

೩೩ ರ್ವ(ಮಾ)ನ್ಯವಾಗಿ ಕೊಟ್ಟೆಉ ಆ ಸರ್ವ್ವಸ್ವಗಳಿಗೆ ಉಂಟಾದ ಗಜನಿಮ .

ಎರಡನೆಯ ವೀರಪಾಂಡ್ಯದೇವನ ಆಳ್ವಿಕೆಗೆ ಸೆರಿದ **ಕ್ರಿ.ಶ. ೧೩೧೮ರ ಮೂಡಬಿದ್ರಿಯ ಗೌರೀ ದೇವಸ್ಥಾನದ ಶಾಸನ** (ಕೆ.ವಿ. ರಮೇಶ ಮತ್ತು ಎಂ.ಜೆ. ಶರ್ಮ ತುಳುನಾಡಿನ ಶಾಸನಗಳು ಸಂ. ೪೯)

೧೮ ಈದಕ್ಕೆ ವಿದ್ಧಿವರಿಸಂಪ್ರತಿ . . . . . ದ ಮೂಡೆ ೯ ಆಗ್ರಕ್ಕೆ ಸಲಿ-

೧೯ ಸುವುದು ಕೆಡುವಿಂಬೆಟ್ಟಿನವರು ಕೊಡಂಗೊಡಲವರು ಮು-

೨೦ ಕ್ಕಾಲಟ್ಟಿಯವರು ಪಾದಮೂಲಂ ಕೂಡಿ ದುರ್ಗ್ಗಾದೇವಿಗೆ ಅಗ್ರವಂ ಸಲಿ-

೨೧ ಸುವಂತಾಗಿ ಕಯಿಧಾರೆ ಎಱೆದು ವ್ರಿತ್ತಯಂ ಕೊಟ್ಟರು [।*] ಈ ಧರ್ಮ್ಮವಂ

೨೨ ಸಲಿಸದಿರ್ದ್ದಡೆ ಅರಸಿಂಗೆ ೫೦೦ ಹೊನ್ನಂ ತಪ್ಪುವರು [।*] ಈ ಭೂಮಿಯ-

೨೩ ನುತ್ತು ಮೂಲಿಗರು ಭತ್ತವಂ ಕೊಡಂದ ಫಕ್ಷ........

"ಪರಿವಡೆಯ ಪಾದ ಮೂಲದ ಭೂಮಿ ವಾಸುವ ಪಾದ ಮೂಲದ ಭೂಮಿ" ಎಂಬ ಉಲ್ಲೇಖ ಇದೆ.

**ಮುಕ್ಕಾಲು ವಟ್ಟಿ, ಮುಕ್ಕಾಲು ಶೆಟ್ಟಿ ಮುಕ್ಕಾಲ್ದಿ-**

ಉಡುಪಿಯಿಂದ ದಕ್ಷಿಣಕ್ಕೆ ಜುಮಾದಿ/ಧೂಮಾವತಿ ಮುಂತಾದ ಶಕ್ತಿದೈವಗಳ ಅರ್ಚಕರನ್ನು ಮತ್ತು ದೈವ ಮಾಧ್ಯಮರನ್ನು 'ಮುಕ್ಕಾಲ್ದಿ' ಎಂದೂ ಉಡುಪಿಯಿಂದ ಉತ್ತರಕ್ಕೆ 'ಮುಕ್ಕಾಲು ಸೆಟ್ರು' ಎಂದೂ ಕರೆಯುವುದು ಪದ್ಧತಿ. ಸ್ವಾಮಿ ಮನೆಗಳಿಗೂ ಇವರೇ ಅರ್ಚಕರು. ಜಾನಪದ ಪರಂಪರೆಯಲ್ಲಿ ಉಳಿದು ಬಂದಿರುವ ಅಬ್ರಾಹ್ಮಣ ವರ್ಗದ ಶಕ್ಕೆ ಬಲಿಯಲ್ಲಿ ಮುಕ್ಕಾಲು ಸೆಟ್ರು ನಾಗ ಪಾತ್ರಿಯಾಗುತ್ತಾರೆ. ಬ್ರಾಹ್ಮಣ ಸ್ಥಾನದಲ್ಲಿ ಮುಕ್ಕಾಲು ಸೆಟ್ರು ಇರುತ್ತಾರೆ.

ಗ್ರಾಮಾಧಿಕಾರದ ಗುತ್ತು ಬೀಡು ಮನೆಗಳಲ್ಲಿ ಪಟ್ಟಾಭಿಷೇಕದ ಪದ್ಧತಿ ಇದೆ. ಪಟ್ಟ ಆದ ತಮ್ಮ ಚಾವಡಿ ದೈವಗಳ ಮಾತ್ರ ಅರ್ಚನೆಯನ್ನು ಯಜಮಾನ ಮಾಡುತ್ತಾರೆ. ಇಲ್ಲಿಯೂ ದರ್ಶನ ಪಾತ್ರಿಯಾಗಿ ಕುಟುಂಬದ, ಜಾತಿಯ ಹೊರಗಡೆಯವರನ್ನು ನೇಮಿಸುತ್ತಾರೆ. ಹಾಗೆ ನೇಮಿಸುವಾಗ 'ಎಣ್ಣೆ ನೀಡುವುದು' ಪದ್ಧತಿ. ಇದನ್ನೇ ಬೂಳ್ಯ ನೀಡುವುದು ಎನ್ನುತ್ತಾರೆ. 'ಮುಕ್ಕಾಲು ಸೆಟ್ಟಿ ಮತ್ತು ಪಾದಮೂಲಿಯವರು ಕೂಡಿ ದುರ್ಗಾದೇವಿಗೆ 'ಅಗ್ರವಂ' ಸಲಿಸುವಂತಾಗಿ ಕಯಿದಾರೆ ಎರೆದು ವೃತ್ತಿಯಂ ಕೊಟ್ಟರು' ಎನ್ನುವಲ್ಲಿ ಕೂಡಾ ಈ ವೃತ್ತಿಗೆ ಅವರನ್ನು ನೇಮಿಸುವ ಸಂದರ್ಭ ಇದು ಎಂದು ಅರ್ಥೈಸಬಹುದು. ಇದನ್ನೇ ತುಳುಭಾಷೆಯಲ್ಲಿ 'ಎಣ್ಣೆ ಬೂಳ್ಯ ನೀಡುವುದು' ಎನ್ನುತ್ತಾರೆ. ಒಂದು ದೈವದ ಹೆಸರಲ್ಲಿ ಎಣ್ಣೆ ಪಡೆದ ಅರ್ಚಕ ಅಥವಾ ದರ್ಶನ ಪಾತ್ರಿ ಬೇರೆ ದೈವಗಳ ಸೇವೆ ಮಾಡುವಂತಿಲ್ಲ.

ಮುಕ್ಕಾಲು ಸೆಟ್ಟಿ ಮತ್ತು ಪಾದಮೂಲಿಯವರು ಕೂಡಿ ದುರ್ಗಾದೇವಿಗೆ ಅಗ್ರವಂ ಸಲಿಸುವಂತಾಗಿ ಕಯಿಧಾರೆ ಎರೆದು ವೃತ್ತಿಯಂ ಕೊಟ್ಟರು' ಎಂಬ ಶಾಸನ ಉಲ್ಲೇಖ ಇದೆ.

ಮುಕ್ಕಾಲು ವಟ್ಟಿಗಳ ಬಗ್ಗೆ ಮಾಹಿತಿ ನೀಡುವ ಕೆಲವು ಶಾಸನಗಳು.

ನಿರುವಾರ **ಬಾರ್ಕೂರು ದುರ್ಗಾಭಗವತಿ ದೇಗುಲ ಕ್ರಿಶ. ೧೩೮೭ರ ಶಾಸನ** (S.I.I. Vol. XXVII.No.64)........

೧೩ ನಿರುವಾರದ ದುರ್ಗ್ಗಾ

೧೪ ಭಗವತಿಯ ಸ್ಥಾನವನು ನಾಲ್ವರು ಮುಕ್ಕಾಲುವಡ್ಡಿಗ[ಳು] ಗ್ರಾಮವೂ ಒಪ್ಪಿ ಆರ

೧೫ ಸಿನವಾಕ ಕೊಂಡು ಆ ಮುಕಾಲು ವಡ್ಡಿಗಳು ಗ್ರಾಮವನು ಬರೆಸಿದ ಶಿಲಾ ಶಾಸನ ದ

೧೬ ಕ್ರಮ......

೨೯ . . . . ನೌಲ್ವರು ಮುಕ್ಕಾಲ ವಡಿಗಳಿಗೆ ಆಸ್ಥಾನಕೆ ನಡುವಂಥಾ ವಧದ ವಿವರ

೩೦ ತಟ್ಟಗ ಬಾಳುಗಳಿಂದ ನಯಿ[ವೇ]ದ್ಯಕ್ಕೆ ಶೂಲ ಪಾಣಿ ನಡೆಸುವರು

**ಕ್ರಿಶ. ೧೪೨೫ರ ಶಾಸನ** (S.I.I. VOL.IX.P.II.No.441)

ಕುಂದಾಪುರದೊಳಗಣ ಗ್ರಾಮ ಜಗತ್ತು ಮುಕ್ಕಾಲುಗಳನು ಕರಸಿ ವಿಚಾರಿಸುವ ಬರಹ ಇದೆ.

**ಕ್ರಿಶ. ೧೪೬೪ರ ಶಾಸನ** (SII.,VOL.XXVII.No.141)

'......ಶಾಸನವು ದುರ್ಗಾಭಗವತಿಯ ಸ್ತಾನದಲಿ ನಾಲಕು ಮುಕಾಲುವಟಿನ ಮುಂದಿಟ್ಟು ಒಪ್ಪಿ ಬರೆದ ಶಿಲಾ ಶಾಸನ") ಎಂಬ ಉಲ್ಲೇಖಗಳು ಮುಕ್ಕಾಲು ಸೆಟ್ಟಿಗಳ ಮಹತ್ವವನ್ನು ಸಾರುತ್ತವೆ.

**ಮೂಲಿಗ:** ಕೆಲವು ಶಾಸನಗಳಲ್ಲಿ ಮೂಲಿಗರು ಎಂಬ ಪ್ರಸ್ತಾಪ ಬರುತ್ತದೆ. ಬೇಸಾಯದ ಭೂಮಿಯನ್ನು ಶಾಶ್ವತವಾಗಿ ಬಾಡಿಗೆಗೆ ತೆಗೆದುಕೊಂಡವ: ಇವನಿಗೆ ಭೂಮಿಯನ್ನು ಗೇಣಿಗೆ ಕೊಡುವ ಮತ್ತು ಮಾರುವ ಹಕ್ಕು ಇರುತ್ತದೆ. (ಕೆ.ವಿ. ರಮೇಶ್ ಪು. ೭೪) ಮೂಲಿಗರು ಅಂದರೆ ಆಯಾ ಕ್ಷೇತ್ರದ ಭೂಮಿಯನ್ನು ಪಡೆದು ಅದರ ಉತ್ಪತ್ತಿಯ ನಿಗದಿತ ಗೇಣಿಯನ್ನು ಕೊಡುವವರು. ಇವರಿಗೆ ಆಸ್ತಿಯನ್ನು ಮಾರುವ ಮರು ಗೇಣಿಗೆ (ಚಾಲಿ-ತಾತ್ಕಾಲಿಕ) ಗೇಣಿಗೆ ನೀಡುವ ಅಧಿಕಾರ ಇದೆ. ಆದರೆ ಮರು ಗೇಣಿಗೆ ನೀಡುವಾಗ ಮೂಲಿಗನೇ ಕ್ಷೇತ್ರಕ್ಕೆ ಸಲ್ಲಬೇಕಾದ ಗೇಣಿಗೆ ಜವಾಬುದಾರನು ಜಮೀನ್ದಾರರೂ ಮೂಲ ಗೇಣಿಗೆ ಕೊಡುವ ಪದ್ಧತಿ ಇತ್ತು. ಇಂತಹ ಗೇಣಿ ವ್ಯವಸಾಯ ಮಾಡುವವರು ಮೂಲಗೇಣಿ ದಾರರು. ಶಾಸನ ಭಾಷೆಯಲ್ಲಿ ಮೂಲಿಗರು. ಮೂಲಗೇಣಿ ಭೂಮಿಯನ್ನು ವಾಪಾಸು ಪಡೆಯುವ ಸಂದರ್ಭ ಕಡಿಮೆ.

**ಕ್ರಿ.ಶ. ೧೩೬೯**–ಪಿ.ಎನ್. ನರಸಿಂಹಮೂರ್ತಿ ಇತಿಹಾಸ ದರ್ಶನ ಸಂ. ೨೧ ಅಮೃತೇಶ್ವರ ದೇವಾಲಯ ಓಮಂಜೂರು ೪೦................ಭತ್ತವನೂ ಆ

೪೧ ಕಾರಾಳ್ಮೆಯ ಮೂಲಿಗರು ಕೊಡದೆ ವುಳಿಸಿದಂತೆ ತಂಮ ಕಾರಾಳ್ಮೆಯ ಭೂಮಿಯನೂ ತಾವಾಗಿ ಬಿಟ್ಟವರು–ಇದು ಮೂಲ ಗೇಣಿ

**ಕ್ರಿ.ಶ. ೧೪೦೪ರ ಶಾಸನದ**ಲ್ಲಿ ಕುಲಾಯಿ ಚಿತ್ರಾಪುರದ ದುರ್ಗಾದೇವಿಯ ಮೂಲಿಗರ ಪ್ರಸ್ತಾಪ ಇದೆ.

ಮೂಲ, ಮೂಲಿ ಸಂಬಂಧಿತ ಇತರ ಪದಗಳು

ಮೂಲ್ಯ–ಮೂಲ್ಯೆ :

ಕುಂಬಾರ ಜಾತಿಯನ್ನು ತುಳುಭಾಷೆಯಲ್ಲಿ 'ಮೂಲ್ಯ' ಎನ್ನುತ್ತಾರೆ. ಇವರು ಮನೆಯ ಹೊರಗಿನ ಕಾಡಿನ ಕೆಲವೊಂದು ದೈವಗಳ ಅರ್ಚನೆ ಹಾಗೂ ದರ್ಶನ ಪಾತ್ರಿಯಾಗಿ ಕೆಲಸ ಮಾಡುತ್ತಾರೆ. ಕೆಲವು ಬಾರಿ ಮೂಲಿಪದವು ಜಾತಿಯನ್ನು ಸೂಚಿಸುವ ಸಾಧ್ಯತೆ ಇರುವುದರಿಂದ ಮೇಲ್ವರ್ಗದ ಮೂಲಿಗಳು ಮೂಲಿ ಎಂದು ಕರೆಸಿಕೊಳ್ಳಲು ಬಯಸುವುದಿಲ್ಲ.

**ಮೂಲದವರು ಅಥವಾ ಮೂಲೊಗು ಉಂತುನಾಯೆ**

ತುಳುನಾಡಿನಲ್ಲಿ ಗುತ್ತ ಬೀಡುಗಳಲ್ಲಿ ಶಾಶ್ವತವಾಗಿ ಇರುವ ಸೇವಕರಿಗೆ 'ಮೂಲದಾಲು' ಎಂದು ಕರೆಯುತ್ತಾರೆ. ಮೂಲಕ್ಕೆ ನಿಲ್ಲುವವರು ತಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳುತ್ತಾರೆ. ಅವರು ತನ್ನ ಯಜಮಾನನ ಮನೆಯ ಮುಲಕ ಗುರುತಿಸಿಕೊಳ್ಳುತ್ತಾರೆ. ಆ ಮನೆಯ ಹಿರಿತಾಯಿಯ ಅಕ್ಕರೆಯ ಮಕ್ಕಳಂತೆ ಇರುತ್ತಾರೆ. ಇವರು ಜೀತದಾಳಯಗಳು.

**ಮೂಲರು**

ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಬೈಲಂಗಡಿಯ ರಾಜ ಗದ್ದುಗೆಯಲ್ಲಿ ಕುಳಿತು ಆಳುವ ಅರಸನಿಗೆ ಇರುವ ಪೂರ್ವ ಪರಂಪರೆಯ ಹೆಸರು. ಒಂದು ಸೀಮೆಯ ಅರಸನಾಗುವಾಗಬೇಕಾದರೆ ಆಗುವ ಪಟ್ಟದ ವಿಧಿ ವಿಧಾನಗಳಲ್ಲಿ ಪಟ್ಟದ ನಾಮಧಾರಣೆ ಆಗುತ್ತದೆ. ಬೈಲಂಗಡಿಯ ಸೀಮೆಗೆ ಪಟ್ಟ ಆಗುವವನಿಗೆ "ಮೂಲರು" ಎಂಬ ಹೊಸ ಹೆಸರು ನೀಡುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಮೊಗ್ರಾಲ್ ಪಡುಮನೆಯಂತಹ ಗುತ್ತು ಬೀಡಿನಲ್ಲೂ ಬೈಲಂಗಡಿಯಂತೆ 'ಮೂಲ' ಹೆಸರಲ್ಲಿ ಅಧಿಕಾರ ಗ್ರಹಣ (ಪಟ್ಟ್/ಗಡಿ) ಆಗುತ್ತದೆ. ಮುಂದೆ ಅನೇಕ ಕಡೆ ಪಟ್ಟದಲ್ಲಿ ಕುಳಿತು ಆಳುವವನ್ನು ಮಾತ್ರ ಕರೆಯುತ್ತಿದ್ದ ಉಪನಾಮ ಅವರ ವಂಶಸ್ಥರಲ್ಲಿ ಉಪನಾಮವಾಗಿ ಮುಂದುವರಿಯಿತು.



# ವೀರಶೈವ ಮತ್ತು ಕಾಶ್ಮೀರಿ ಶೈವ ಒಂದು ವಿಶ್ಲೇಷಣೆ

ಡಾ. ಸಿದ್ಧಲಿಂಗಶಿವಾಚಾರ್ಯ ಸ್ವಾಮಿಗಳು*

ಜಗತ್ತಿನ ಎಲ್ಲ ಧರ್ಮಗಳ ಸಾರವನ್ನು ಒಳಗೊಂಡಿರುವ ಲಿಂಗಾಯತ ಧರ್ಮದ ಆಚರಣೆಗಳು, ನೀತಿ ಸಂಹಿತೆಗಳು ಮಾನವರ ಕಲ್ಯಾಣವನ್ನು, ತನ್ಮೂಲಕ ಲೋಕ ಕಲ್ಯಾಣವನ್ನು ಸಾಧಿಸಲು ಬೇಕಾದ ತತ್ವಗಳನ್ನು ಒಳಗೊಂಡಿವೆ. ಮನುಕುಲದ ಶಾಂತಿ, ನೆಮ್ಮದಿಗಾಗಿ, ಒಳಿತಿಗಾಗಿ ಕಾಲಕಾಲಕ್ಕೆ ಶ್ರಮಿಸಿರುವ ಬುದ್ಧ, ಮಹಾವೀರ, ಶಂಕರ, ಬಸವಣ್ಣ, ಅಲ್ಲಮಪ್ರಭು, ಮುಂತಾದವರು ಹೊಸ ತತ್ವಗಳನ್ನು ನೀಡಿದ್ದಾರೆ. ಎಲ್ಲ ಧರ್ಮಗಳ ಗುರಿ, ಮಾನವ ಕಲ್ಯಾಣ ಸಾಧಿಸುವುದು ಎಂದಿದ್ದಾರೆ ಬಸವಣ್ಣನವರು. ಅನುಭವ ಕೇವಲ ಲೌಖಿಕವಾದುದ್ದಲ್ಲ, ಅದು ಲೌಖಿಕ ಪಾರಮಾರ್ಥಿಕಗಳ ಸಂಗಮ. ಇದರಿಂದ ಮೂಡಿ ಬಂದದ್ದು ಅನುಭವ ಮಂಟಪದ ಕಲ್ಪನೆ. ಬಸವಣ್ಣನವರು 'ಓಂ'ಕಾರದ ಅನುಸಂಧಾನ ಮಾಡಿ ನಮಃ ಶಿವಾಯ ಎಂಬ ಪಂಚಾಕ್ಷರಿ ಮಂತ್ರದ ಮಹತ್ವವನ್ನು ಚನ್ನಬಸವಣ್ಣನವರಿಗೆ ಮನನ ಮಾಡಿಸಿದರು. ಅನುಭಾವ ಮೂರ್ತಿಗಳದ ಶರಣರು, ಅರಿವು ಆಚಾರಳೆರಡರ ಸಂಗಮವಗಿ ಜ್ಯೋತಿ ಮುಟ್ಟಿದ ಜ್ಯೋತಿಯಂತೆ ಜಗತ್ತಿಗೆ ಆಧ್ಯಾತ್ಮದ ಬೆಳಕನ್ನು ನೀಡಿದರು. 'ಪ್ರಣವದ ಬೀಜ ಬಿತ್ತಿ, ಪಂಚಾಕ್ಷರಿಯ ಬೆಳೆ ಬೆಳೆದು, ಪರಮ ಪ್ರಸಾದವನೊಂದು ರೂಪ ಮಾಡಿ ಮೆರೆದು ಭಕ್ತಿ ಫಲವನುಂಡಾತ ನಮ್ಮ ಬಸವಯ್ಯನು". ಅರಿವು ಸಂಪಾದಿಸಿ ಆಚಾರವನಂಗಗೊಳಿಸಿ, ೭೭೦ ಎಳುನೂರೆಪ್ಪತ್ತು ಅಮರ ಗಣಂಗಳ, ಅನುಭವಮೂರ್ತಿಗಳ ಮಾಡಿದಾತ ನಮ್ಮ ಬಸವಯ್ಯನು ಎಂದಿದ್ದಾರೆ, ಬಸವಣ್ಣನವರ ವಿಚಾರ ಪತ್ನಿ ನೀಲಮ್ಮ ತಮ್ಮದೊಂದು ವಚನದಲ್ಲಿ. ಅನುಭವ ಮಂಟಪದ ಮೂಲಕ ಶರಣರು ಅರಿವಿನ ಸನ್ಮಾರ್ಗದಲ್ಲಿ ನಡೆದರು.

ಶೈವ ಪದದ ಪ್ರಾಚೀನತೆಯನ್ನು ಡಾ. ಶಂ.ಬಾ. ಜೋಷಿಯವರು ವೇದಗಳ ಕಾಲಕ್ಕೆ ಸೇರಿದ್ದೆಂದು 'ಶಿವರಹಸ್ಯ' ಎಂಬ ಕೃತಿಯಲ್ಲಿ ಹೇಳಿದ್ದಾರೆ. ಈ ಶಬ್ದದ ಮೂಲವು ಋಗ್ವೇದದಲ್ಲಿದೆ. ರುದ್ರನು, ವೃಷಭನು ಎಂದರೆ ವೀರನು, ಆದ್ದರಿಂದ ಆತನ ಉಪಾಸಕರು ವೀರರು, ಬಲಿಷ್ಟರೂ, ಜಟಾಧಾರಿಯೂ, ವೀರಪುತ್ರರನ್ನುಳ್ಳವನು ರುದ್ರ ಎಂದಿದ್ದಾರೆ. ವೀರಶೈವ ಪದಕ್ಕೆ ಕೆಲವು ಆಧಾರಗಳು, ಸೂಕ್ಷ್ಮಾಗಮ, ಕಾಮಿಕಾಗಮ, ವಾತುಲಾಗಮಗಳಲ್ಲಿ ಕಂಡುಬರುತ್ತವೆ. ಉಪನಿಷತ್ತಿನಲ್ಲಿ ವಿವರಿಸಲಾಗಿರುವ, ವಿಶೇಷ ಶಕ್ತಿಯನ್ನುಳ್ಳ ಪರಮಾತ್ಮ, ತತ್ವದ ದೇವತೆಗಳಲ್ಲಿ ಶಿವನೇ ಶ್ರೇಷ್ಟನೆಂದು, ವೀರಶೈವ ಧರ್ಮದ ಮತಾಚಾರ್ಯರು ಹೇಳಿದ್ದಾರೆಂದು, ನಿವೃತ್ತ ನ್ಯಾಯಾಧೀಶರಾದ ಶ್ರೀ ಪಿ. ಮಹದೇವಯ್ಯನವರು ತಮ್ಮ "ವೀರಶೈವ ಪ್ರಾಚೀನತೆ ಮತ್ತು ಘನತೆ" ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಶ್ರೀಕರಭಾಷ್ಯಕ್ಕೆ ಆಧಾರ ಗ್ರಂಥ ಎಂಬುದನ್ನು ವಿದ್ವಾಂಸರು ನಿರ್ಣಯಿಸಿದ್ದಾರೆ. ವಚನಗಳಲ್ಲಿ ಹೊಸ ಮತ ಸ್ಥಾಪಿಸಿದ ಉಲ್ಲೇಖಗಳಿಲ್ಲ ಆದರೆ ವೀರಶೈವ, ವೀರ ಮಾಹೇಶ್ವರ, ಜಂಗಮ, ಲಿಂಗ ಲಿಂಗಾಯತ ಮೊದಲಾದ ಹೆಸರುಗಳ ಉಲ್ಲೇಖಗಳಿವೆ. ವೀರಶೈವ ಧರ್ಮದ ಉಗಮ ಮತ್ತು ಪ್ರಗತಿಯನ್ನು ಸನಾತನ ಧರ್ಮದ ಶಿವಾಗಮಗಳಲ್ಲಿ ಕಾಣಬಹುದು. ಶೈವಧರ್ಮದ ಉಗಮವು ಭಾರತದಲ್ಲಿಯೇ ಎನ್ನುವುದು ಗಮನಾರ್ಹ. ಭಾರತದ ಮೂಲ ನಿವಾಸಿಗಳಾದ ದ್ರಾವಿಡರು, ಶೈವದ ಪರಿಪೂರ್ಣ ರೂಪವಾದ ವೀರಶೈವರಲ್ಲಿ. ಪರಶಿವನ ಕಲ್ಪನೆ, ಶಕ್ತಿವಿಶಿಷ್ಟತೆ, ಲಿಂಗಧಾರಣೆ, ಲಿಂಗಾರ್ಚನೆ ಮೊದಲಾದ ರೂಪಗಳನ್ನು ಕಾಣಬಹುದು. ಆರ್ಯರ ಆಗಮನದೊಂದಿಗೆ, ಆರ್ಯ-ದ್ರಾವಿಡ ಸಂಸ್ಕೃತಿಗಳು ಮಿಲನವಾಗಿ ಶ್ರೇಷ್ಠ ಧರ್ಮದ ಉದಯಕ್ಕೆ ಕಾರಣವಾಯಿತು. ಆರ್ಯರ ಯಜ್ಞಯಾಗಗಳನ್ನು ಪ್ರಾಣಿಬಲಿಯುನ್ನು ವಿರೋಧಿಸಿದ ಕೆಲವು ಆರ್ಯರು ಮತ್ತು ದ್ರಾವಿಡರೂ ಒಂದಾಗಿ ಶೈವ ಮತ ಸ್ಥಾಪಿಸಿ ಪ್ರಾಣಿ ಬಲಿ, ಮಾಂಸಾಹಾರ ನಿಷೇಧಿಸಿ ಸಾತ್ವಿಕ ಲಿಂಗಾಯತ ಧರ್ಮದ ಹುಟ್ಟಿಗೆ ಕಾರಣರಾದರು. ಉಪನಿಷತ್ತಿನ ಜ್ಞಾನಮಾರ್ಗ ಶಿವಾಗಮಗಳಲ್ಲಿನ ಭಕ್ತಿಮಾರ್ಗ, ಯೋಗಿಗಳ ಯೋಗಮಾರ್ಗವು ಮುಪ್ಪರಿಗೊಂಡು ಲಿಂಗಾಯತದ ಸಾಧನ ಮಾರ್ಗವಾಗಿದೆ. ಹನ್ನೆರಡನೇ ಶತಮಾನದ ಹಿಂದಿನ ವೀರಶೈವ/ಲಿಂಗಾಯತ

* ಮಹಾಮಹತ್ತಿನ ಮಠ, ಕವಲೇದುರ್ಗ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ-೫೭೭೪೮೧.

ಧರ್ಮ, ಶೂದ್ರರಿಗೂ ಸ್ತ್ರೀಯರಿಗೂ, ದೇಹದ ಮೇಲೆ ಲಿಂಗ ಧರಿಸಿ ಪೂಜಿಸುವ ಅಧಿಕಾರ ಕೊಟ್ಟಿರುವುದನ್ನು ಕಾಣಬಹುದು. ಆದರೆ ಜಾತಿ ಭೇದ, ಲಿಂಗಭೇದಗಳೂ ಮುಂದುವರಿದಿರುವುದು ನಂತರವೂ ವಿದ್ವಾಂಸರು. ಜೀವ-ಶಿವೈಕ ತತ್ವಗಳನ್ನು ವಚನೋಪನಿಷತ್ತಿನಲ್ಲಿಯೂ ಕಾಣಬಹುದು. "ದೇವನೊಬ್ಬ ನಾಮ ಹಲವು, ನಂಬಿ ಕರೆದೊಡೆ ಓ ಎನ್ನನೇ ಶಿವನು, ಎನ್ನವಲ್ಲಿ ಶಿವನ ಕುರಿತ ಭಕ್ತಿಯನ್ನೂ ಕಾಯಕವೇ ಕೈಲಾಸ ಎಂಬಲ್ಲಿ ಕರ್ಮಸಿದ್ಧಾಂತವನ್ನೂ, ದಯವಿಲ್ಲದ ಧರ್ಮ ವಾವುದಯ್ಯಾ ಎನ್ನುವುದರಲ್ಲಿ ಅಹಿಂಸೆಯೇ ಪರಮ ಧರ್ಮ ವೆನ್ನುವುದನ್ನೂ ಶರಣಸತಿ, ಲಿಂಗಪತಿ ಎನ್ನುವಲ್ಲಿ ಇಷ್ಟ ಲಿಂಗೋಪಾಸನೆ, ಏಕ ಪತ್ನೀ ವ್ರತವನ್ನು ಕಾಣಬಹುದು. ಶರಣ ತತ್ವಗಳು ಸಮಾಜವನ್ನು ಸರ್ವ ಸಮಾನತೆಯ ದಾರಿಯಲ್ಲಿ ಮನೋ ವಿಕಾಸದ ಮಾರ್ಗ ತೋರಿದವು.

ವೀರಶೈವನಾದಡೆ ಪರಧನ, ಪರಸ್ತ್ರೀಯರ ಮುಟ್ಟದಿರಬೇಕು. ಎಂದೂ ಪರಹಿಂಸೆಯನೆಸಗದಿರಬೇಕು. ಒಡಲಳಿದಡೆಯೂ ಹಿಡಿದಾಚಾರವ ಬಿಡದಿರಬೇಕು. ಇಂತೀ ವೀರಾಚಾರವು ನೆಲೆಗೊಳ್ಳದೆ ವೀರವಂಶದಲ್ಲಿ ಹುಟ್ಟುವ ಮಾತ್ರಕ್ಕೆ ವೀರಶೈವನೆಂತಪ್ಪನಯ್ಯಾ ಕೂಡಲ ಚೆನ್ನಸಂಗಮದೇವಾ. ಎಂಬ ವಚನದಲ್ಲಿ ಚೆನ್ನಬಸವಣ್ಣನವರು ಲಿಂಗಾಯತ ತತ್ವದ ತಿರುಳನ್ನು ಚಿತ್ರಿಸಿದ್ದಾರೆ. ಲಿಂಗಾಯತ ಸಂಸ್ಕಾರ, ಸಂಸ್ಕೃತಿ, ಸದಾಚಾರಗಳನ್ನು ತಿಳಿಸಿದ್ದಾರೆ.

ವೀರಶೈವಕ್ಕೆ ಇತಿಹಾಸವಿದೆ – ಅಧ್ಯಯನವಿಲ್ಲ, ಸಂಹಿತೆ ಇದೆ – ವ್ಯವಸ್ಥೆ ಇಲ್ಲ, ಸಂಸ್ಕೃತಿ ಇದೆ – ಸಂವಹನ ಇಲ್ಲ, ದರ್ಶನವಿದೆ – ಮಾರ್ಗದರ್ಶನವಿಲ್ಲ, ಪರಂಪರೆ ಇದೆ – ಪರಿಣಾಮವಿಲ್ಲ, ಅನುಭಾವವಿದೆ – ಅನುಷ್ಠಾನವಿಲ್ಲ, ಸಿದ್ಧಾಂತವಿದೆ – ಸಾಧನೆ ಸಿದ್ಧಿಗಳಿಲ್ಲ, ಸಮಾಜವಿದೆ–ಸಂಘಟನೆ ಇಲ್ಲ, ಈ ಎಲ್ಲಾ ಇಲ್ಲಗಳನ್ನು ಇಲ್ಲವಾಗಿಸುವ ಹಂಬಲ ಗುರು – ವಿರಕ್ತರಲ್ಲಿ ಇಲ್ಲ. ವೀರಶೈವದ ಪ್ರಾಚೀನ ಇತಿಹಾಸ ಅಸ್ಪಷ್ಟವಾಗಿರುವಂತೆ, ಅದನ್ನು ಸರಿಯಾಗಿ, ತಿಳಿದುಕೊಳ್ಳುವ ಪ್ರಯತ್ನ ಹಿಂದೆಯೂ ನಡೆದಿಲ್ಲ ಇಂದೂ ನಡೆಯುತ್ತಿಲ್ಲ. ಕೆಲವರ ಪ್ರಯತ್ನಗಳಿಗೆ ಮಾನ್ಯತೆಯೂ ಸಿಗುತ್ತಿಲ್ಲ. ಇತಿಹಾಸವಿಲ್ಲದ ಕಾರಣ, ವೀರಶೈವ ಕುರಿತು ಊಹಾ–ಪೋಹಗಳು ಕಾಣಿಸಿಕೊಂಡಿವೆ ಎನ್ನುತ್ತಾರೆ ಶ್ರೀ ನಂದಿಮಠರು. ಆಗಮಗಳಲ್ಲಿ ಪಂಚಾಚಾರ್ಯರ ಅಥವಾ ಬಸವಣ್ಣ ಅಲ್ಲಮಪ್ರಭುಗಳ ಉಲ್ಲೇಖ ಕಂಡುಬರುವುದಿಲ್ಲ ಎಂದಿದ್ದಾರೆ ವಿದ್ವಾಂಸರಾದ ಶಿ.ಶಿ. ಬಸವನಾಳರು. ಸಿದ್ಧಾಂತ ಶಿಖಾಮಣಿಯಾಗಲಿ ವಚನಗಳಾಗಲಿ ಪ್ರಧಾನವಾಗಿ ವೀರಶೈವ/ಲಿಂಗಾಯತರ ಸ್ವತಂತ್ರ ಮತ್ತು ಶ್ರೇಷ್ಠ ಧರ್ಮ ಎಂದು ಪ್ರತಿಪಾದಿಸುತ್ತವೆ. ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ಸಕಲ ಮಾನವರ ಕಲ್ಯಾಣಕ್ಕಾಗಿ ಇಷ್ಟಲಿಂಗ ಧಾರಣೆಗೆ ವೀರಶೈವ/ಲಿಂಗಾಯತರ ಮಹತ್ವ ನೀಡಿದೆ. ಇಷ್ಟಲಿಂಗವನ್ನು ಅರಿತು ಸಮಭಾವದಿಂದ ಮನೋವಿಕಾಸವನ್ನು ಹೊಂದಬಹುದು ಎನ್ನುತ್ತಾರೆ ಶರಣರು. ಯಾರು ರಾಗ–ದ್ವೇಷಗಳಿಂದ ಮುಕ್ತರಾಗಿ ತತ್ವ ಚಿಂತನೆಯಲ್ಲಿ ತೊಡಗಿ, ಸಂಕಲ್ಪ ವಿಕಲ್ಪಗಳಿಂದ ಬಿಡುಗಡೆಗೊಂಡಿರುವರೋ ಅವರೇ ಲಿಂಗಾಯತ. ಯಾರು ಮತ್ತೊಬ್ಬರ ದೋಷಗಳತ್ತ ಕುರುಡರಾಗುವರೋ ಪರಸ್ತ್ರೀಯರ ವಿಷಯದಲ್ಲಿ ಷಂಡರೋ, ಪರಹಿಂಸೆಯನೆಸಗುವಲ್ಲಿ ಆಸಕ್ತಿ ಇಲ್ಲದವರೋ ಅವರೇ ನಿಜವಾದ ಲಿಂಗಾಯತರು ಎಂದಿದ್ದಾರೆ ಶರಣರು. ಸಿರಿಯುಳ್ಳವನೇ ಸಿರಿವಂತ, ಗುಣವುಳ್ಳನೇ ಗುಣವಂತ, ಲಿಂಗವುಳ್ಳವನೇ ಲಿಂಗವಂತನು ಲಿಂಗ ಗುಣಗಳನ್ನು ಅಯತ, ಸ್ವಾಯತ, ಸನ್ನಿಹಿತ ಮಾಡಿಕೊಡವನೇ ಲಿಂಗಾಯತನು, ಲಿಂಗಾಂಗ ಸಾಮರಸ್ಯದ ಸವಿಯನ್ನುಂಡವನೇ ನಿಜವಾದ ಲಿಂಗಾಯತ. ಲಿಂಗಾಯತ ವೀರಶೈವ ಉತ್ಪತ್ತಿಯನ್ನು ಸುಂದರವಾಗಿ ನಿರೂಪಿಸಿದ್ದಾರೆ.

ಅನೇಕ ಶರಣರು ಅದರಲ್ಲೂ ಚನ್ನಬಸವಣ್ಣನವರು ವೀರಶೈವ ಪದವನ್ನು ಅರ್ಥಪೂರ್ಣವಾಗಿ ವಚನಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಶಿವ ಸಂಸ್ಕೃತಿಯನ್ನು, ಶರಣ ಸಂಸ್ಕೃತಿಯನ್ನು ಪರಿಣಾಮಕಾರಿ ಯಾಗಿ ಪ್ರಯೋಗ ನಡೆಸಿದವರು, ಬಸವಣ್ಣನವರ ಹಿರಿಯ ಸಮಕಾಲೀನರಾಗಿದ್ದ ಮಾದಾರ ಚನ್ನಯ್ಯ, ಡೋಹಾರ ಕಕ್ಕಯ್ಯ, ಜೇಡರದಾಸಿಮಯ್ಯ, ಕೆಂಭಾವಿ ಭೋಗಯ್ಯ, ಮುಂತಾದ ಶರಣರು. ವಿವೇಕ ಮತ್ತು ವಿರಾಗ ಇವೆರಡು ಸಾಧಕನ ಅಮೂಲ್ಯ ಸಂಪತ್ತುಗಳು. ಇವುಗಳನ್ನು ಕಾಪಾಡಲು ಮನುಷ್ಯನಿಗಿರುವ ರಕ್ಷಾ ಕವಚಗಳೆಂದರೆ ಅಷ್ಟಾವರಣಗಳು. ಭೌತಿಕ ಮತ್ತು ಮಾನಸಿಕ ಸ್ಥರದಲ್ಲಿ ಅಷ್ಟಾವರಣಗಳಿಗೆ ಪ್ರಮುಖ ಸ್ಥಾನ. ಪರಮ ಸೂಕ್ಷ್ಮವಾದ ಚಿದಾಕಾಶದಲ್ಲಿ ಪ್ರವೇಶಿಸಿದಾಗ ನಿರುಪಾದಿಕ ಅಷ್ಟಾವರಣದ ಅನುಭವವಾಗುತ್ತದೆ. ಅಷ್ಟಾವರಣಗಳಾದ ಗುರು ಲಿಂಗ, ವಿಭೂತಿ, ರುದ್ರಾಕ್ಷಿ, ಮಂತ್ರ, ಜಂಗಮ, ಪಾದೋದಕ, ಪ್ರಸಾದಗಳಿಂದ ಮನುಷ್ಯ ಲಿಂಗಾಂಗಿಯಾಗಿ ಸಾಧಕನಾಗಿ ಲಿಂಗಾಂಗ ಸಾಮರಸ್ಯದ ಮೂಲಕ ಉನ್ನತವಾದ ಮಾನವೀಯ ಮೌಲ್ಯಗಳನ್ನು ಹೊಂದಬಹುದೆಂದು ಶರಣರು ತಿಳಿಸುತ್ತಾರೆ.

ವಿವೇಕದಿಂದ ಮನೋವಿಕಾಸವನ್ನು ಸಾಧಿಸಬಹುದು. ಗುರು ಒಬ್ಬ ಮಹಾನುಭಾವಿ, ಭಿನ್ನ ಭೇದದ ಭಾವ ಅಳಿದು, ಪ್ರಭುವಿನಲ್ಲಿ ಒಂದಾದ ಸತ್ಯ ಶರಣ. ಅಂಥ ಪರಮ ಗುರು, ಶಿಷ್ಯನಿಗೆ ಶಿವನ ಚಿತ್ಕಳೆಯನ್ನು ಮನದಲ್ಲಿ ಆವಾಹಿಸಿ ಲಿಂಗ ರೂಪದಲ್ಲಿ ದೀಕ್ಷೆ ನೀಡುತ್ತಾನೆ. ಲಿಂಗಧಾರಿಯಾದ

ರಣ ತನುಮನ ಬುದ್ಧಿಗಳಲ್ಲಿನ ಮಾಲಿನ್ಯವನ್ನು ಳೆದುಕೊಂಡು, ಪವಿತ್ರನಾಗಿ ದಿವ್ಯ ಶಾಂತಿಯನ್ನು ಅನುಭವಿಸುತ್ತಾನೆ. ಜೀವಭಾವ ನೀಗಿ, ಮನೋವಿಕಾಸವನ್ನು ಹೊಂದುತ್ತಾನೆ.

ಭಕ್ತಿ ಮಾರ್ಗದಲ್ಲಿ ನೂರೆಂಟು ಸಂದೇಹ, ಶಂಕೆಗಳನ್ನು ಎದುರಾಗುತ್ತೆವೆ. ಇವುಗಳಿಗೆ ಉತ್ತರ ಕಂಡುಕೊಳ್ಳಲು ಗುರುವಿನ ಮಾರ್ಗದರ್ಶನ ಬೇಕು, ಗುರುವಿನಿಂದ ಪಡೆದ ದೀಕ್ಷೆ, ಲಿಂಗ, ಜಂಗಮ, ಮುಂತಾದ ಅಷ್ಟಾವರಣಗಳ ಅನುಷ್ಠಾನದಿಂದ ಸಂಶಯಗಳು ದೂರವಾಗಿ ನಿಜಾನಂದ ಹೊಂದಬಹುದು, ಜ್ಞಾನವನ್ನು ನೀಡುವ ಗುರುವು ಮೊದಲು ತಾನು ಜ್ಞಾನಿಯಾಗಿರಬೇಕು. ತತ್ವ, ಸಿದ್ಧಾಂತಗಳನ್ನು, ತಂತ್ರ ಅಥವಾ ಶಾಸ್ತ್ರಗಳನ್ನು ಬಲ್ಲವರಾಗಿರಬೇಕು. ಶಿಷ್ಯನ ಗ್ರಹಿಕೆಯ ಶಕ್ತಿಯನ್ನು ಅರಿತು, ಆತನ ಅಭಿರುಚಿಗೆ ತಕ್ಕ ಜ್ಞಾನವನ್ನು ನೀಡಬೇಕು. ಒಬ್ಬನಿಗೆ ಜ್ಞಾನ, ಇನ್ನೊಬ್ಬನಿಗೆ ಕರ್ಮ, ಮತ್ತೊಬ್ಬನಿಗೆ ನಡಾವಳಿ ಇಷ್ಟ, ಅವರವರ ಭಾವಕ್ಕೆ, ಅವರವರ ದೃಷ್ಟಿಗೆ ತಕ್ಕಂತೆ ಯುಕ್ತಿಯಿಂದ ಭೋದಿಸಬೇಕು, ಇದಕ್ಕಾಗಿ ಗುರುವಾದವನು ಎಲ್ಲ ಸಿದ್ಧಾಂತಗಳನ್ನು ಕರಗತ ಮಾಡಿಕೊಂಡಿರಬೇಕು. ಎಂದಿದ್ದಾರೆ ಅವಿರಳ ಜ್ಞಾನಿ ಚೆನ್ನಬಸವಣ್ಣನವರು. ಸಹ ಜೀವಿಗಳ ಹಿತಚಿಂತನೆಯೇ ಧರ್ಮದ ಮೂಲ. ಹಿತವಾದುದನ್ನು ಹೇಳುವ ಗುರುವಿನ ಹೃದಯ ನಿರ್ಮಲವಾಗಿರಬೇಕು. ಸ್ವಾರ್ಥದ ಸೋಂಕೂ ಆತನಲ್ಲಿರಬಾರದು, ಆತ ಸತ್ಯವಂತನೂ ಪ್ರಾಮಾಣಿಕನೂ ಆಗಿರಬೇಕು. ಜಾತಿ, ಕುಲ, ದರ್ಮ, ಸಂಪ್ರದಾಯಗಳಿಗೆ ಕಟ್ಟುಬೀಳದೆ ಭೇದಭಾವ ಮಾಡದೆ ಎಲ್ಲ ಮಾನವರೂ ಸುಖಿಗಳಾಗಲಿ ಎಂದು ಅನವರತ ಚಿಂತನೆ ನಡೆಸುವವರು ನಿಜವಾದ ಗುರುಗಳು. ಜನಸಾಮಾನ್ಯರಿಗೆ ನಿಜವಾಗಿಯೂ ಹಿತವಾದುದನ್ನೇ ಭೋದಿಸಿ ಸನ್ಮಾರ್ಗದಲ್ಲಿ ನಡೆಸುವವರೇ ಶ್ರೇಷ್ಠವಾದ ಗುರುಗಳು. ವಿರಕ್ತಿ, ವಿಚಾರ ಮತ್ತು ಆಚಾರಗಳಿಗೆ ಅರಸನಾಗಿರಬೇಕು ಲೋಭ, ಮೋಹಗಳಿಂದ ಬಂಧಿತನಾಗಿರ ಬಾರದು. ವಿಷಯಗಳಿಗೆ ವಿರಕ್ತನಾಗಿರಬೇಕು. ಇಂತಹ ಸದ್ಗುರುವಿಗೆ ಶರಣಾಗಿ ಮನೋವಿಕಾಸವನ್ನು ಹೊಂದುವ ಮಾರ್ಗವನ್ನು ವೀರಶೈವ ಸಾಹಿತ್ಯ ತೋರುತ್ತದೆ.



## ಆಧಾರಸೂಚಿ


೧. ಕಾಶೀನಾಥ ಶಾಸ್ತ್ರಿ ಪಂ, **ಸಿದ್ಧಾಂತ ಶಿಖಾಮಣಿ,** ಮೈಸೂರು, ೧೯೮೨.

೨. ಜಯದೇವಪ್ಪ ಜೈನಕೇರಿ, **ಇತಿಹಾಸ ಸಂಪದ,** ೨೦೦೭, ಶಾಂತಲಾ ಪ್ರಕಾಶನ, ಶಿವಮೊಗ್ಗ.

೩. ಶಿವಕುಮಾರಸ್ವಾಮಿ ಡಾ. **ಚಂದ್ರಣ್ಣ ಜ್ಞಾನಾಗಮ,** ೨೦೦೨, ಬೆಂಗಳೂರು.

೨೭

# ಶಿವಶರಣ ಅಂಬಿಗರ ಚೌಡಯ್ಯ ಒಂದು ಅಧ್ಯಯನ

ಕುಂ.ಬಾ. ಸದಾಶಿವಪ್ಪ*

ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲೂಕಿನ ಚೌಡದಾನಪುರ, ಅದೇ ತಾಲೂಕಿನ ಕೆರೆಮಲ್ಲಾಪುರ, ಬಳ್ಳಾರಿ ಜಿಲ್ಲೆಯ ಮೈಲಾರಗಳಲ್ಲಿ ಒಂದೊಂದು ಶಾಸನಗಳು ಬರುವುವು. ಚೌಡದಾನಪುರದ ಶಾಸನದಲ್ಲಿ ಬರುವ ಅಂಬೇನಾಯಕನನ್ನೇ ಅಂಬಿಗರ ಚೌಡಯ್ಯನೆಂದು ವಿದ್ವಾಂಸರು ಚರ್ಚಿಸಿರುವರು. ಹಿರೇಕುರುವತ್ತಿಯ ಶ್ರೀಮಲ್ಲಿಕಾರ್ಜುನ ದೇವಾಲಯದ ತೊಲೆಯ ಮೇಲೆ ಕೆತ್ತಿದ ಕ್ರಿ.ಶ.೧೨೦೧ರ ಶಾಸನದಲ್ಲಿ ಹೊಯ್ಸಳ ಅರಸರ ಕೆಲವು ಅಧಿಕಾರಿಗಳ ಹೆಸರು ಕೆಳಗಿನಂತಿರುವುವು:

೧. ಮಾದೆಯ ನಾಯಕ, ೨. ರಾಮೇಯ ನಾಯಕ, ೩. ಮಾಯ ನಾಯಕ, ೪. ವೀರ ಭಂಗೆಯ ನಾಯಕ, ೫. ಮಾಯೆ ನಾಯಕ.

ಇವರು ಯಾಹು ಮಲ್ಲೇಶ್ವರ ದೇವರಿಗೆ ನಂದಾದೀಪ ಎಣ್ಣೆಗಾಗಿ ಹಣ ನೀಡುವರು ಇಂಥ ಒಬ್ಬ ನಾಯಕ ಚೌಡದಾನಪುರದ ಮಣಂಬೆ-ಅಂಬೆ ನಾಯಕನಿರಬೇಕು. ಮೈಲಾರ ಶಾಸನದ ಪ್ರಕಾರ ಶ್ರೀ ಶಿವದೇವರು ಮುಕ್ತನಾಥ ಲಿಂಗದಲ್ಲಿ ಉದ್ಭವಿಸಿ ಶ್ರೀ ಕುರುವತ್ತಿ ನಂದೀಶ್ವರ ಶ್ರೀ ಮೈಲಾರಲಿಂಗ, ಶ್ರೀ ಹೊನ್ನಮ್ಮದೇವಿ ಅಂಬಿಗರ ಚೌಡಯ್ಯನವರಿಗೆ ಲಿಂಗಧಾರಣೆ ಮಾಡಿದನೆಂದು ತಿಳಿಸಿದೆ.

ಕೆರೆಮಲ್ಲಾಪುರದ ಶಾಸನವೂ ಇತ್ತೀಚಿನದು. ಶ್ರೀ ಶರೀಫ ಸಾಹೇಬರು ರಚಿಸಿದ ಶಿವದೇವ ಚರಿತ್ರೆಯಲ್ಲಿ ಈ ವಿಚಾರ ಪ್ರಸ್ತಾಪವಾಗಿದೆ. ಅಂಬಿಗರ ಚೌಡಯ್ಯ ೧೩ನೇ ಶತಮಾನಕ್ಕೆ ಸೇರಿದವನೆಂದು ಹೇಳಿರುವರು. ಶಿವದೇವರು ಮುಕ್ತಿನಾಥ ಲಿಂಗದಲ್ಲಿ ಉದ್ಭವಿಸಿ ಚೌಡಯ್ಯನವರಿಗೆ ಲಿಂಗಧಾರಣೆ ಮಾಡಿದರು ಎಂಬುದು ಅಸಹಜವಾದದ್ದು. ಹಿರಿಯ ಕವಿಗಳಾದ ಹರಿಹರ ರಾಘವಾಂಕರ ಕಾವ್ಯಗಳಲ್ಲಿ ಎಲ್ಲಿಯೂ ಚೌಡಯ್ಯನ ಹೆಸರು ಪ್ರಸ್ತಾಪವಾಗಿಲ್ಲ. ಷಡಕ್ಷರದೇವನ ಬಸವರಾಜ ವಿಜಯದಲ್ಲಿ ಹೀಗಿದೆ:-

ಅ) ನಿಡಗುಡಿ ಮಾರ ನಂಬಿಗ ಚೌಡಯ್ಯ (ಪ-೧೩)

ಆ) ಅಂಬಿಗರ ಚೌಡನಾರೋಗಿಸಿದಂ ಆರೋಗಣೆಯಂ (ಪ-೭೦)

ಇ) ತೋಂಟದ ಸಿದ್ಧಲಿಂಗರ ಶಿಷ್ಯ ಘನ ಲಿಂಗ ದೇವರು ತಮ್ಮ ವಚನದಲ್ಲಿ ಚೌಡಯ್ಯನವರನ್ನು ಸ್ಮರಿಸಿದ್ದಾರೆ.

"ನಿಮ್ಮಾಣೆ ಎನಗೊಂದು ಕರುಣಿಸಯ್ಯ ತಂದೆ ಡೋಹರ ಕಕ್ಕಯ್ಯ ಮಾದಾರ ಚನ್ನಯ್ಯ ಅಂಬಿಗರ ಚೌಡಯ್ಯ ಇಂತಪ್ಪ ಶಿವಶರಣರ ಮನೆಯ ಬಾಗಿಲು ಶುನಕನ ಮಾಡಿ...."

ಆರ್. ನರಸಿಂಹಾಚಾರ ಇವರ ಕಾಲ ಪ್ರಕಾರ ಕ್ರಿ.ಶ. ೧೧೬೦ ಎಂದು ಡಾ॥ ಎಸ್. ವಿದ್ಯಾಶಂಕರ ಗುರುಲಿಂಗಪ್ಪ ಧಬಾಲೆ, ಪ್ರೊ॥ ಎನ್.ಕೆ. ರಾಮಚಂದ್ರಪ್ಪ ಬೂಸರೆಡ್ಡಿ ಎಲ್ಲರೂ ೧೨ನೆಯ ಶತಮಾನವೆಂದು ಪ್ರತಿಪಾದಿಸಿದರೆ. ವಿ.ಎಸ್. ಶ್ರೇಷ್ಠಿಯವರು ಅಂಬಿಗರ ಚೌಡಯ್ಯ ೧೧೬೦ ರಿಂದ ೧೨೪೦ ಎಂದು ತಿಳಿಸಿರುವರು.

ಕಲ್ಯಾಣ ಚಾಲುಕ್ಯರಿಗೆ ಪ್ರಿಯವಾದ ಪ್ರದೇಶ ಬಾಗಳಿ, ನೀಲಗುಂದ ಅರಸಿಕೆರೆ, ಕುಂಚೂರು, ಹಲುವಾಗಲು, ಹಿರೇಕುರುವತ್ತಿ, ಮೇಲಾರ, ಹೊಳಲು, ಹಿರೇಹಡಗಲಿ ಮತ್ತು ಹೂವಿನ ಹಡಗಲಿಗಳು. ಆಗಾಗ್ಗೆ ಈ ಭಾಗದ ಜನರನ್ನು ತಮ್ಮ ಸೇನೆಗೆ ಸೇರಿಸಿಕೊಳ್ಳುತ್ತಿದ್ದರೆಂದೂ ಸೇರಿದವರಲ್ಲಿ ಅಂಬಿಗರ ಚೌಡಯ್ಯನೂ ಒಬ್ಬನು. ಬಸವಣ್ಣನವರ ಪ್ರಭಾವಕ್ಕೆ ಒಳಗಾಗಿ ಲಿಂಗದೀಕ್ಷೆಯನ್ನು ಪಡೆದು ಶಿವಶರಣನಾಗಿರಬೇಕು.

ಆದ್ದರಿಂದ ಚೌಡಯ್ಯನವರು ೧೨ನೆಯ ಶತಮಾನಕ್ಕೆ ಸೇರಿದವರೆಂದು ಗ್ರಹಿಸಲು ಸಾಧ್ಯ.

**ಜನ್ಮಭೂಮಿಯ ಬಗೆಗೆ ಇರುವ ವಾದಗಳು**

ಅಂಬಿಗರ ಚೌಡಯ್ಯನು ಬಸವ ಕಲ್ಯಾಣದ ತ್ರಿಪುರಾಂತಕ ಕೆರೆಯ ಬಳಿಯ ತ್ರಿಪುರಾಂತ ಕೇಶಿಯೂರಿನವನೆನ್ನುವರು. ಆ, ಸ್ಥಳದಲ್ಲಿ ಇವರ ಗುಹೆಯಿದೆ. ಅಲ್ಲಿ ಐದು ಎಕರೆ ಭೂಮಿಯನ್ನು ಕರ್ನಾಟಕ ಸರಕಾರ ಮುಂಜೂರು ಮಾಡಿದೆ. ಗುಹೆಗೆ ಮಂಟಪವನ್ನು ಅದರ ದ್ವಾರಕ್ಕೆ ಗೋಪುರವನ್ನು ಹೊಸದಾಗಿ ನಿರ್ಮಿಸಲಾಗಿದೆ. ಊರ ಒಳಗೆ ಕೋಳಿ ಜನಾಂಗದವರು ಒಂದು ಸಂಘವನ್ನು ಮಾಡಿ ಆಗಾಗ ಅಂಬಿಗರ ಚೌಡಯ್ಯನ ಬಗ್ಗೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸುವರು. ಪ್ರಾಚೀನ ಗುಹೆಗೆ ಹೊರಗೆ ಚೌಕವನ್ನು ನಿರ್ಮಿಸಿರುವರು. ಒಳಗೆ ನಾಲ್ಕು ಲಿಂಗಗಳಿರುವುವು. ಅವು

* ಗೋಸಾಯಿಗುಡ್ಡ (ಲೋಕೋಪಯೋಗಿ ಇಲಾಖೆ ಹಿಂದೆ) ಹೊಸಪೇಟೆ ರಸ್ತೆ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ-೫೮೩೧೩೧.

ಈಗಿನ ಕಾಲಕ್ಕೆ ಸೇರಿದವು. ಕೋಳಿ ಜನಾಂಗದ ಒಬ್ಬ ಶಾಸಕ ಜಮಾದಾರ ಈ ಅಭಿವೃದ್ಧಿ ಕಾರ್ಯಗಳಿಗೆ ಕಾರಣನು ಎಂದು ಅವರು ಹೇಳುವರು. ಗುಹೆಯಲ್ಲಿ ಚೌಡಯ್ಯ ಶಿವಧ್ಯಾನ ಜಪ, ತಪಗಳನ್ನು ಮಾಡುತ್ತಿದ್ದನೆಂದು ಹೇಳಿದರು.

**ಇನ್ನೊಂದು ವಾದದ ಪ್ರಕಾರ**

ಅಂಬಿಗರ ಚೌಡಯ್ಯ ಗ್ರಾಮವನ್ನು ತನ್ನ ಗುರುವಾದ ಶಿವದೇವರಿಗೆ ದಾನ ಕೊಟ್ಟಿದ್ದರಿಂದ ಆ ಗ್ರಾಮಕ್ಕೆ ಚೌಡ ದಾನಪುರವೆಂದು ಹೆಸರು ಉಂಟಾಯಿತು. ಮೊದಲು ಆ ಗ್ರಾಮಕ್ಕೆ ಶಿವಪುರವೆಂದು ಕರೆಯುತ್ತಿದ್ದರು. ತುಂಗಭದ್ರಾ ನದಿಯ ದಡದಲ್ಲಿ ನಾರಸೀಪುರ, ಸಿವಪುರ ಚಂದಾಪುರ ಎಂಬುದು ಗ್ರಾಮಗಳಿರುತ್ತವೆ. ನಾರಸೀಪುರ ಹಾಳಾಗಿದೆ.

ಚೌಡಯ್ಯ ಒಬ್ಬ ಸಾಮಾನ್ಯ ಅಂಬಿಗನು ಅವನು ಗ್ರಾಮವನ್ನು ಶಿವದೇವ ಗುರುಗಳಿಗೆ ದಾನ ಮಾಡಿದರೆಂದರೆ, ಹೇಗೆ? ರಾಜ, ದೇಸಾಯಿಗಳಾಗಿದ್ದರೆ ದಾನ ಮಾಡಲು ಸಾಧ್ಯ ಎಂದು ಡಾ॥ ಎಸ್. ವಿದ್ಯಾಶಂಕರರು ಪ್ರಶ್ನೆ ಮಾಡಿರುವರು. ಅದಕ್ಕೆ ಚೌಡದಾನಪುರದವರು ಹೇಳುವುದು ಹೀಗಿದೆ. ಗ್ರಾಮದ ಹತ್ತಿರದ ಗುತ್ತರಸನ ಮಗನಿಗೆ ಹಾವು ಕಚ್ಚಿ ಸಾವಿನ ಸಂಕಟದಲ್ಲಿದ್ದಾಗ, ಅರಸರ ಕಡೆಯಿಂದ ಕರೆಬರಲು ಚೌಡಯ್ಯ ಅವರಲ್ಲಿಗೆ ತೆರಳಿ ಗಿಡಮೂಲಿಕೆ ಔಷಧಿಯನ್ನು ಕೊಟ್ಟು ಆ, ಹುಡುಗನನ್ನು ಸಾವಿನಿಂದ ಪಾರು ಮಾಡಿದುದಕ್ಕಾಗಿ ಅರಸ ಮೆಚ್ಚಿ ಚೌಡಯ್ಯನಿಗೆ ಪೂರ್ವ ಪಶ್ಚಿಮ ಏಳು, ಉತ್ತರ ದಕ್ಷಿಣ ಹದಿನಾಲ್ಕು ಮೈಲುಗಳ ವಿಶಾಲವಾದ ಭೂಮಿಯನ್ನು ಉಂಬಳಿಯಾಗಿ ಕೊಟ್ಟನೆಂದು ಆ, ಪ್ರದೇಶದಲ್ಲಿ ಬರುವ ಗ್ರಾಮವೇ ಶಿವಪುರ, ನಂತರದಲ್ಲಿ ಚೌಡಯ್ಯ ದಾನಪುರವೆಂದು ಕರೆಸಿಕೊಂಡಿದೆ ಎಂದು ಆ, ಪ್ರದೇಶದ ಗಡಿಗಳಲ್ಲಿ ಲಿಂಗಮುದ್ರೆ ಕಲ್ಲುಗಳು ಈಗಲೂ ಕಾಣಬರುತ್ತವೆ.

ಚೌಡದಾನಪುರದ ಹತ್ತಿರ ಹರಿದ ತುಂಗಭದ್ರಾ ನದಿಯ ದಡದಲ್ಲಿ ಅಂಬಿಗರ ಚೌಡಯ್ಯನ ಸನಾಧಿಯಿದ್ದು ಅದಕ್ಕೆ ಮಂಟಪವನ್ನು ನಿರ್ಮಿಸಿರುವರು. ಅದಕ್ಕೆ ನೀರಿನ ಅಲೆಗಳು ಅಪ್ಪಳಿಸುತ್ತಾ ಬಂದು ಶಿಥಿಲ ಸ್ಥಿತಿಯನ್ನು ಹೊಂದಿದ್ದಿತು. ೧.೧.೧೯೬೮ರಲ್ಲಿ ಜೀರ್ಣೋದ್ಧಾರಗೊಂಡು ಕುಂಬಾಭಿಷೇಕ ಪಡೆದಿದೆ ಎಂದು ಹೇಳುವರು.

"ಆದರೆ ಚೌಡಯ್ಯನ ವಚನದಲ್ಲಿ ಅಂಬಿಗ ಎಂದು ಕುಂದು ನುಡಿಯದಿರು ನಂಬಿದರೆ ಒಂದೆ ಹುಟ್ಟಿನಲಿ
ಕಡೆಯ ಹಾಯಿಸುವ ನಂಬಿಗರ ಚೌಡಯ್ಯ"

೧) ಹಾಗಾದರೆ ಚೌಡಯ್ಯ ದೋಣಿ ನಡೆಸಿದ್ದು ಕೆರೆಯಲ್ಲಿಯೇ? ನದಿಯಲ್ಲಿಯೇ?

೨) ಅವರ ವಚನಗಳಲ್ಲಿ ಬೀರ, ಮೈಲಾರ, ಉಚ್ಚಂಗಿ ದ್ದುರ್ಗಿ ದೇವರುಗಳು ನೆಲೆ ಚೌಡದಾನಪುರಕ್ಕೆ ಹತ್ತಿರ ವಾಗಿಯೇ? ಬಸವ ಕಲ್ಯಾಣಕ್ಕೆ ಹತ್ತಿರವಾಗಿವೆಯೇ?

೩) ಅಂಬಿಗರ ಚೌಡಯ್ಯನ ವಚನಗಳಲ್ಲಿ ಭಾಷೆ ಧಾರವಾಡ ಮತ್ತು ಬಳ್ಳಾರಿ ಜಿಲ್ಲೆಯದು ಇರುತ್ತದೆ.

**ಬೀದರ ಜಿಲ್ಲೆಯ ಭಾಷೆ**

ಕನ್ನಡ ಉರ್ದು, ಮರಾಠಿ, ತೆಲಗು ಭಾಷೆಗಳಲ್ಲಿ ಬೆರೆತಿದೆ. ಅದಕ್ಕೆ ಸ್ವಂತಿಕೆ ಕಡಿಮೆ.

ಉದಾ: ಹೋತೀನಿ, ಹೇಳಿದಿ, ನಮ್‌ಬ್ಯೆಲಿ, ರಕ್ತ ಸುರದಿ, ಜಗಡ, ಬಂದಿ (ಬಂದಿರುವಿ), ದಕಾನ್ (ಮುಚ್ಚಳ), ಸೊಡ್ಡು (ಕಸಬರಿಗೆ), ಕುತ್ತಿದಿ (ಕುಳಿತಿದಿ), ಕೊಂಡಿ (ಬಾಗಿಲ ಚಿಲಕ), ತಟ್ಟೆ (ಕದ),ಉರಿಬಂದ (ಜ್ವರ ಬಂದಿದೆ) ಅಣ್ಣಂದುಯೇಣ್ತಿ, ನೀರಕೊಂಡಿ (ನೀರ ಕುಡಿಯುವುದು), ಮಕ್ಕೊತಿನಿ (ಮಲಗುವೆನು)

**ಕಲ್ಯಾಣ ಕ್ರಾಂತಿಯಾಗಿ ಅಲ್ಲಿದ್ದ ಶರಣರು ಚದುರಿದ್ದು**

**ಮೊಲ್ಲಿ ಬೊಮ್ಮಣ್ಣ ಜಗದೇವಯ್ಯ**
**ಪಂಜುಗಾರರಾಗ ಬಿಜ್ಜಳನ ಇರಿದು ಬರಲು**
**ಎಲ್ಲ ಪ್ರಥಮರು ಇಲ್ಲಿ ಬರಬಾರದೆಂದು ಕಲ್ಯಾಣವ ಬಿಟ್ಟು**

(ಉಲ್ಲೇಖ:ಅಂಬಿಗರ ಚೌಡಯ್ಯ ಪು-೧೬೨ ಸಂ.ಎಸ್.ಎಸ್. ಭೂಸರೆಡ್ಡಿ)

ಚೌಡಯ್ಯ ಬಸವಣ್ಣನವರು ಕೂಡಲ ಸಂಗಮದಲ್ಲಿ ಐಕ್ಯವಾದ ಸಂಗತಿಯನ್ನು ತಿಳಿಸುವನು.

"ಕಲ್ಯಾಣ ಕೆಟ್ಟಿತ್ತು, ಒಂದು ಮುವತ್ತಾರು ವರುಷಕ್ಕೆ ಬಸವಣ್ಣನು ಸಂಗಮನೊಳು ಐಕ್ಯವಾದರು"

(ಸಂ ಭೂಸರೆಡ್ಡಿ ಪು.೧೬೨)

ಅಂಬಿಗರ ಚೌಡಯ್ಯ ಹಿಂದಿನ ಧಾರವಾಡ-ಈಗಿನ ಹಾವೇರಿ ಜಿಲ್ಲೆಯ ರಾಣೀಬೆನ್ನೂರು ತಾಲೂಕು ಗುತ್ತಲದ ಬಳಿಯಿರುವ ಚೌಡಯ್ಯ ದಾನಪುರದಲ್ಲಿ ಹುಟ್ಟಿ ಬೆಳೆದು ಬಸವ ಕಲ್ಯಾಣಕ್ಕೆ ತೆರಳಿ ಅಲ್ಲಿ ಸಾಧಕನಾಗಿ ಶಿವಶರಣವಾಗಿ ಸುಮಾರು ೨೭೮ ವಚನಗಳನ್ನು ರಚಿಸಿ, ನಿರ್ದಾಕ್ಷಣ್ಯ ನುಡಿಗಳಿಂದ ಲೋಕ ಖ್ಯಾತನಾಗಿರಬೇಕು.

[ಕೃತಜ್ಞತೆ : **ಸೇನೆಗೆ ಸೇರಿದ್ದು, ಹೇಳಿದವರು :** ೧) ಹಿರೇಕುರುವತ್ತಿಯ ಚಕ್ಕಿ ಚನ್ನಪ್ಪ ೨) ತೆಲುಗರ ಅಡಿವಜ್ಜ ೩) ಶಾನುಭೋಗರ ಮಾರ್ತಾಂಡರಾವ್ ೪) ಮೈಲಾರದ ಸಣ್ಣ ತಮ್ಮಪ್ಪಯಯ್ಯ ೫) ಚೌಡದಾನಪುರದ ಕುಂಬಾರ ನಾಗಪ್ಪ.
**ಔಷಧಿ ವಿಚಾರ ಹೇಳಿದವರು :** ವೀರಭದ್ರಪ್ಪ ದೀಪಾವಳಿ ಚೌಡದಾನಪುರ.]

**ಆಧಾರಸೂಚಿ**

**ಕರ್ನಾಟಕ ಕವಿ ಚರಿತೆ,** ಆರ್. ನರಸಿಂಹಾಚಾರ್., **ಶಿವದೇವ ಚರಿತ್ರೆ,** ಶಿಶುನಾಳ ಶರೀಫರು., **ಶಾಸನಗಳಲ್ಲಿ ಶಿವಶರಣರು,** ಎಂ.ಎಂ. ಕಲಬುರ್ಗಿ., **ಅಂಬಿಗರ ಚೌಡಯ್ಯ,** ಡಾ॥ ಎಸ್. ವಿದ್ಯಾಶಂಕರ್., **ನಿಜಶರಣ ಅಂಬಿಗರ ಚೌಡಯ್ಯ, ವಚನ-ನಿರ್ವಚನ,** ಡಾ॥ ಎಸ್.ಎಂ. ಹಿರೇಮಠ., **ಶರಣ ಅಂಬಿಗರ ಚೌಡಯ್ಯ,** ಗುರುಲಿಂಗಪ್ಪ ಧಬಾಲೆ., **ಅಂಬಿಗರ ಚೌಡಯ್ಯನವರ ವಚನಗಳು,** ಪ್ರೊ॥ ಎನ್.ಕೆ. ರಾಮಚಂದ್ರಪ್ಪ.



# ಶ್ರೀ ಮಹಾಲಿಂಗೇಶ್ವರ ಮಠ, ಮಹಾಲಿಂಗಪೂರ

ಪ್ರೊ. ಎಂ.ಎಂ. ಗೊಂದಿ*

ಶ್ರೀ ಮಹಾಲಿಂಗಪೂರ ಕ್ಷೇತ್ರ ಅನ್ನ ಮತ್ತು ಜ್ಞಾನದಾಸೋಹಗಳ ಬೃಹತ್ ಸೇವಾಸಾಗರ, ಧರ್ಮ ಕ್ರಾಂತಿಯ ದಿವ್ಯ ಕ್ಷೇತ್ರ ಶ್ರೀ ಮಠದ ಸಂಸ್ಥಾಪಕರು ಶ್ರೀ ಮಹಾಲಿಂಗೇಶ್ವರರು. ೧೭ನೇ ಶತಮಾನದಲ್ಲಿ ಆರಂಭವಾದ ಈ ಕ್ಷೇತ್ರದ ಪ್ರಗತಿಪರ ಚಟುವಟಿಕೆಗಳು ನರಗಟ್ಟಿಯಿಂದ ವರಗಟ್ಟಿಯಾಗಿ ಮಹಾಲಿಂಗೇಶ್ವರರಿಂದ ಮಹಾಲಿಂಗ ಪೂರವಾಗಿ ಪ್ರಸಿದ್ದಿಗೆ ಬಂದಿತು. ಈ ಕ್ಷೇತ್ರಕ್ಕೆ ಭಕ್ತಿಯ ಭಸ್ಮ ಲೇಪಿಸಿ ಸಿದ್ಧಿಯ ಪುಷ್ಪ ಮುಡಿಸಿದವರು ಶ್ರೀ ಮಹಾಲಿಂಗ ಶಿವಯೋಗಿಗಳು. ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲೂಕಿನ ಗ್ರಾಮ ಮಹಾಲಿಂಗಪೂರ ಮುಧೋಳದ ಸಂಸ್ಥಾನದ ಘೋರ್ಪಡೆ ಮನೆತನ ಮತ್ತು ಶ್ರೀ ಮಹಾಲಿಂಗೇಶ್ವರರ ಗಾಢ ಸಂಬಂಧ ಹಾಗೂ ಶ್ರೀ ಮಹಾಲಿಂಗೇಶ್ವರ ಮಠ ಪ್ರವರ್ಧಮಾನಕ್ಕೆ ಬಂದುದು ಪ್ರಸ್ತುತ ಪ್ರಭಂಧದಲ್ಲಿ ಉಲ್ಲೇಖಿತವಾಗಿದೆ. ಆ ಕಾಲದ ದಾಖಲೆಗಳು ಶ್ರೀ ಮಠದಲ್ಲಿದ್ದು ಇಂದಿಗೂ ಅವುಗಳು ಪ್ರಸ್ತುತವಾಗಿವೆ. ಜಗಜ್ಯೋತಿ ಬಸವಣ್ಣನವರ ಸಿದ್ಧಾಂತಗಳನ್ನು ಆದರ್ಶಗಳನ್ನು ಸಾಕಾರಗೊಳಿಸಿ, ಬೆಳಕಿನ ಯುಗ ನಿರ್ಮಾಣ ಮಾಡುವ ಕೈಂಕರ್ಯದಲ್ಲಿ ವೀರ ವೈರಾಗ್ಯ ಸಂಪನ್ನ ಶಿವಯೋಗಿಗಳನ್ನು ಪಡೆದಿದೆ.

ಮಾಲೋಜಿಯು ಕ್ರಿ.ಶ. ಸು. ೧೭೭೦ ರಿಂದ ೧೮೦೫ ರವರೆಗೆ ಜೀವಿಸಿದ್ದನೆಂದು ನಿರ್ಣಯಿಸಬಹುದಾಗಿದೆ. ೧೭೭೨ ನೆಯ ನವಂಬರ್ ೧೮ ರಿಂದ ಒಂಬತ್ತು ತಿಂಗಳು ಮಾತ್ರ ರಾಜ್ಯವಾಳಿದ ನಾರಾಯಣರಾವ ಪೇಶ್ವೆಯ ಕೊಲೆಯ ಸತ್ಯಸಂಗತಿಯನ್ನು ತಿಳಿದುಕೊಳ್ಳಲು ಪುಣೆಯ ಅರಮನೆಗೆ ಹೋದ ಮಹತ್ವದ ರಾಜಕಾರಣಿ ಮಾಲೋಜಿಯೂ ಒಬ್ಬನಾಗಿದ್ದನು. ಆತನು ೧೮೦೫ ರಲ್ಲಿ ಮರಣ ಹೊಂದಿದನು. ಸು.೧೭೭೦ ರಿಂದ ೧೮೦೫ ರ ವರೆಗಿನ ಅವಧಿಯಲ್ಲಿ ಮಹಾಲಿಂಗ ಜಂಗಮನಾಥನು ಜೀವಿಸಿದ್ದನೆಂದು ಬಸವ ಕವಿಯ ಮಹಾಲಿಂಗಲೀಲೆ ಕಾವ್ಯದೊಳಗಣ ಐತಿಹಾಸಿಕ ಸಂಗತಿಗಳಿಂದ ನಿರ್ಧರಿಸಬಹುದು.

**ಯೋಗಿ ಗುರುಲಿಂಗಾರ್ಯರ ತಪೋಭೂಮಿ ಢಪಳಾಪುರ (ಮಹಾಲಿಂಗ ಮುನಿನಾಥನು ಗುರುಕಾರುಣ್ಯ ಪಡೆದ ಸ್ಥಳ)**

ಮಹಾಲಿಂಗೇಶ್ವರರು ದಂಡಕಾರಣ್ಯದಲ್ಲಿ ಕಂದ ಮೂಲಾಧಿಗಳನ್ನು ಸೇವಿಸುತ್ತ ಏಕಾಗ್ರ ಚಿತ್ತದಿಂದ ತಪೋನಿರತ ರಾದರು, ಆಗ ಸ್ವಪ್ನದಲ್ಲಿ ಪರಶಿವನು "ಮಹಾಲಿಂಗಾ ನೀನು ಇನ್ನು ಮೇಲೆ ತೀರ್ಥಕ್ಷೇತ್ರ ಪರ್ಯಟನ ಜಪ ತಪಗಳನ್ನು ನಿಲ್ಲಿಸಿ ಡಪಳಾಪುರಕ್ಕೆ ಹೋಗು ಅಲ್ಲಿರುವ ಶಿವಯೋಗಿ ಗುರುಲಿಂಗ ಜಗದಾರ್ಯರನ್ನು ಕಂಡು ಸೇವೆಗೈದು ಗುರು ಕರುಣೆಯನ್ನು ಪಡೆಯಬೇಕು ಕಂದಾ" ಎಂದು ಆಣತಿ ಇತ್ತು ಕಣ್ಮರೆಯಾದರು.

ಮಹಾಲಿಂಗ ಜಂಗಮ ಮುನಿನಾಥನು ಭೂಮಿಗಿಳಿದು ಬಂದರು ಮತ್ತು ಭರತಖಂಡದ ಗೌಳ, ದ್ರಾವಿಡ ಮೊದಲಾದ ದೇಶಗಳ ಶ್ರೀಕ್ಷೇತ್ರಗಳನ್ನು ಸಂದರ್ಶಿಸಿದರು. ಶಿವನ ಪ್ರತಿರೂಪವಾದ ಪರಮ ಶಿವಲಿಂಗಗಳನ್ನು ಸ್ಥಾಪಿಸಿದರು. ಗಾರ್ಘ್ಯ ತಟನೀ ತಟದಲ್ಲಿ ತಟೇಶ್ವರನೆಂದ ಲಿಂಗವನ್ನು, ಗೋರಕ್ಷ ಪಟ್ಟಣದ ಜಿನಾಲಯದಲ್ಲಿ ಗೋಳಕೇಶ್ವರ ಲಿಂಗವನ್ನು ನೆಲೆಗೊಳಿಸಿದರು. ಮತ್ತು ಮಾರ್ಕಂಡೇಯನು ಚಿರಂಜೀವಿ ಯಾಗಿ ಮೆರೆದ ಪವಿತ್ರ ಸ್ಥಾನವೆಂದು ಅರಿತು ಅಲ್ಲಿ ತಪವನ್ನಾ ಚರಿಸಲು ಬಯಸಿದರು. ಶ್ರೀ ಮಹಾಲಿಂಗರು ದಂಡಕಾರಣ್ಯದ ಪೂರ್ವ ದಿಕ್ಕಿನಲ್ಲಿರುವ ಢಪಳಾಪುರ ಕ್ಷೇತ್ರಕ್ಕೆ ಆಗಮಿಸಿದರು. ಅಲ್ಲಿ ಗುರುಲಿಂಗರು ಶಿವಯೋಗ ಸಮಾಧಿಯಲ್ಲಿ ಮುಳುಗಿದ್ದರು ಅವರ ಕನಸಿನಲ್ಲೂ ಪರಶಿವನೇ ಬಂದು "ಮಹಾಲಿಂಗನೆಂದ ಜಂಗಮ ಮೂರ್ತಿಗೆ ಗುರೂಪದೇಶ ನೀಡಿ ಆತನನ್ನು ಶಿಷ್ಯನೆಂದು ಪರಿಗ್ರಹಿಸಿ, ಕೃತಾರ್ಥನಾಗಿ ಮಾಡಬೇಕು" ಎಂದು ಹೇಳಿ ಅಂತರ್ಧಾನನಾದನು. ತಮ್ಮ ಆಶ್ರಮಕ್ಕೆ ಬಂದ ಮಹಾಲಿಂಗನನ್ನು ಪ್ರೇಮದಿಂದ ಆದರಿಸಿ ಬರಮಾಡಿಕೊಂಡು ಸಿಂಹ ಪೀಠದಲ್ಲಿ ಕುಳ್ಳಿರಿಸಿದರು. ಗುರುಲಿಂಗ ಜಗದಾರ್ಯರು ಮಹಾಲಿಂಗನೆಂಬ ಈ ಶಿಷ್ಯನಿಗೆ ವೀರಶೈವ ಧರ್ಮದ ಅಷ್ಟಾವರಣ, ಪಂಚಾಚಾರ್ಯ, ಷಟ್‌ಸ್ಥಲ ಸಿದ್ಧಾಂತ ಲಿಂಗ ಪೂಜಾ ವಿಧಿ ವಿಭೂತಿ ಮಂತ್ರ, ರುದ್ರಾಕ್ಷಿ

* ಮುಖ್ಯಸ್ಥರು, ಇತಿಹಾಸ ವಿಭಾಗ, ಎಸ್.ಎಸ್.ಎಮ್.ಎಸ್. ಕಾಲೇಜ್, ಅಥಣಿ–೫೯೧೩೦೪.

ಮಹಿಮೆ, ಲಿಂಗಾಂಗ ಸಾಮರಸ್ಯ ವಿಧಾನ "ನಮಃಶಿವಾಯ" ಎಂಬ ಪಂಚಾಕ್ಷರಿ ಮಂತ್ರದ ಮಹಿಮೆ ಅರುಹಿದರು. ಹೀಗೆ ಮಹಾಲಿಂಗರು ಜ್ಞಾನದ ಖನಿಯಾಗಿ ಕಂಗೊಳಿಸಿದರು.

**ಕೃಷ್ಣೆಯು ಮಹಾಲಿಂಗೇಶ್ವರ ಮತ್ತು ದುರುದುಂಡೇಶ್ವರರಿಗೆ ದಾರಿಯನ್ನು ಬಿಟ್ಟಿದ್ದು**

ಮಹಾಲಿಂಗ ಜಂಗಮರು ಸದ್ಗುರುವಿನಿಂದ ಪುನಿತ ರಾಗಿ ಮಾರ್ಗದಲ್ಲಿ ಶ್ರೀ ದುರುದುಂಡೇಶ್ವರನು (ಅರಭಾವಿ) ಸಂದರ್ಶಿಸಿದರು, ಇವರಿರ್ವರಿಗೆ ಕೃಷ್ಣಾ ನದಿಯು ಮುಂದೆ ಹೋಗಲು ದಾರಿ ನೀಡಿತು.

**ಶ್ರೀ ಮಹಾಲಿಂಗೇಶ್ವರ ಗರ್ಭ ಗುಡಿ (ಹೊರವಲಯದ)**

ಗುರುಲಿಂಗಾರ್ಯರು "ಮಹಾಲಿಂಗಾ ನೀನು ಸಂಚಾರಗೈಯುತ ಹೋಗುವಾಗ ಚೈತ್ರ ಶುದ್ಧ ಚತುರ್ದಶಿಯ ದಿನ ಎಲ್ಲಿ ನಿಲ್ಲುವೆಯೋ ಅದೇ ನಿನ್ನ ಕರ್ಮ ಭೂಮಿ ಅಲ್ಲಿ ಓರ್ವ ಶಿವಭಕ್ತೆ ನಿನ್ನನ್ನು ಬರಮಾಡಿಕೊಳ್ಳುವಳು" ಎಂದು ಮನದುಂಬಿ ಆಶೀರ್ವದಿಸಿದರು. ಬಾಗಲಕೋಟ ಜಿಲ್ಲೆಯ ಮುಧೋಳ ಸಂಸ್ಥಾನದ ನರಗಟ್ಟಿಯ ಶಿವಾಲಯಕ್ಕೆ ಬಂದರು. ಅಲ್ಲಿ ಸಿದ್ದಾಯಿ ಎಂಬ ವೃದ್ಧೆಗೆ ಪರಶಿವನು ಕನಸಿನಲ್ಲಿ ಹೇಳಿದಂತೆ ಆ ದೇವಾಲಯಕ್ಕೆ ಬಂದ ಈ ಜಂಗಮನಾಥನನ್ನು ಕಂಡು ಬೆರಗಾದಳು, ಆಗ ಮಹಾಲಿಂಗರು ಇದು ಯಾವ ಊರು? ಇಂದು ಯಾವ ದಿನ ? ನಿನ್ನ ಹೆಸರೇನು? ಎಂದು ಕೇಳಿದರು ಆಗ ಅಲ್ಲಿಯ ಜನ "ಇದು ನರಗಟ್ಟಿ ಎಂಬ ಊರು, ಇಂದು ಚೈತ್ರ ಶುದ್ಧ ಚತುರ್ದಶಿಯ ದಿನ ಇವಳ ಹೆಸರು ಸಿದ್ದಾಯಿ" ಎಂದು ಹೇಳಿದರು. ಆಗ ಮಹಾಲಿಂಗರಿಗೆ ತಮ್ಮ ಗುರುಗಳಾದ ಗುರುಲಿಂಗಾರ್ಯರು ಹೇಳಿದ ಮಾತು ನೆನಪಾಯಿತು. ಆಗ ಊರ ಹಿರಿಯರು ಸಿದ್ದಾಯಿಯು ಚರ್ಚಿಸಿ ನರಗಟ್ಟಿಯ ದಕ್ಷಿಣ ದಿಕ್ಕಿನಲ್ಲಿರುವ ಚೆನ್ನಗಿರಿಯನ್ನು ತೋರಿಸಿ ತಪಸ್ಸಿಗೆ ಪ್ರಶಾಂತವಾದ ಸ್ಥಳ ಎಂದು ಹೇಳಿದರು, ಅಲ್ಲಿ ಮಹಾಲಿಂಗರು ತಪವನ್ನು ಆಚರಿಸಿದರು. ಶ್ರೀ ಮಹಾಲಿಂಗೇಶ್ವರರು, ಹೊರವಲಯದ ದೇವಾಲಯದಿಂದ ಇಲ್ಲಿಗೆ ಆಗಮಿಸಿ ತಪಸ್ಸುಗೈದ ಸ್ಥಳ ಇಂದಿಗೂ ಚನ್ನಗಿರಿ ಬೆಟ್ಟದಲ್ಲಿ ಇದನ್ನು ಕಾಣಬಹುದು.

**ರುದ್ರಮ್ಮ ಶಿವಶರಣೆಗೆ ಕಣ್ಣು ನೀಡಿದ್ದು**

ಪುರದಲ್ಲಿ ರುದ್ರಮ್ಮ ಎಂಬ ಶಿವಶರಣೆ ಹುಟ್ಟುಗುರುಡಿ ಯಾಗಿದ್ದಳು ಅವಳು ಸಿದ್ದೇಶ್ವರ ಗುಡಿಯಲ್ಲಿರುವ ಶ್ರೀ ಮಹಾಲಿಂಗೇಶ್ವರರನ್ನು ಸಂದರ್ಶಿಸಿದಳು ಮಹಾಲಿಂಗರು ತಮ್ಮ ಪವಿತ್ರ ಕಮಂಡಲದಲ್ಲಿರುವ ರುದ್ರಾಭಿಷೇಕದ ಪುಣ್ಯ ಜಲವನ್ನು ಆಕೆಯ ಕಣ್ಣುಗಳಿಗೆ ಸಿಂಪಡಿಸಿ ನೇತ್ರವನ್ನಿತ್ತರು. ಈ ಸಂಗತಿ ಬಸವ ಕವಿಯ ಕಾವ್ಯದಲ್ಲಿದೆ. ಮಹಾಲಿಂಗ ಮುನಿನಾಥರು ತಪಪ್ರಭಾವದಿಂದ ನರಗಟ್ಟಿಯ ನಾಗಯ್ಯ ಮತ್ತು ಮುಪ್ಪಿನಾಂಬೆಯ ಎಂಬ ದಂಪತಿಗಳು ಪ್ರತಿನಿತ್ಯ ಓರ್ವ ಜಂಗಮರನ್ನು ಭಕ್ತಿಯಿಂದ ಪೂಜೆ ಮಾಡಿ ಅವರ ಪಾದೋದಕ ಸ್ವೀಕರಿಸಿ ವೀರ ಮಹೇಶ ವ್ರತವನ್ನು ಆಚರಿಸುತ್ತಿದ್ದರು. ಆಗ ಒಂದು ದಿನ ಎಷ್ಟೇ ಹುಡುಕಿದರು ಒಬ್ಬ ಜಂಗಮನು ಸಿಗಲಿಲ್ಲ ಆಗ ಅವರೀರ್ವರು ಪ್ರಾಣ ಕೊಡಲು ಸಿದ್ದರಾದರು, ಮತ್ತು ಪರಶಿವನು ಕನಸಿನಲ್ಲಿ ಕಾಣಿಕೊಂಡು ಮಹಾಲಿಂಗನೆಂಬ ಜಂಗಮ ಶ್ರೇಷ್ಠನಿದ್ದಾನೆ ಆತನನ್ನು ಕರೆತಂದು ನಿಮ್ಮ ವ್ರತ ಪೂರೈಸಿರಿ" ಎಂದು ಹೇಳಿದ. ಅವರಿರ್ವರು ಮಹಾಲಿಂಗೇಶ್ವರರನ್ನು ಕರೆತಂದು ವ್ರತ ಪೂರೈಸಿ ಪರಶಿವನ ಆಶೀರ್ವಾದ ಪಡೆದರು.

**ಮುಧೋಳ ಸಂಸ್ಥಾನದ ಘೋರ್ಪಡೆ ಮನೆತನದ ದೊರೆ ಮಾಲೋಜಿ ಮತ್ತು ಮಗುವಿಗೆ ಶ್ರೀ ಮಹಾಲಿಂಗರು ಜೀವದಾನ ಮಾಡಿದ್ದು**

(ಮುಧೋಳ) ರಾಜನಾದ ಮಾಲೋಜಿ ಘೋರ್ಪಡೆಗೂ ಆಶ್ವರ್ಯ ಉಂಟುಮಾಡಿತು. ಆತ ಮಹಾತ್ಮರ ಶ್ರೀ ಚರಣ ಕಮಲಗಳ ದರುಶನ ಭಾಗ್ಯ ಪಡೆಯಬೇಕೆಂದು ಬಯಸಿದ. ಮಾಲೋಜಿ ದೊರೆಯು ನರಗಟ್ಟಿಗೆ ಹೋಗಲು ಆನೆ ಕುದುರೆ ರಥ ಕಾಲ್ದಳಗಳ ಸೇನೆ ಮಂಗಲ ವಾದ್ಯಗಳೊಂದಿಗೆ ಚತುರಂಗ ಬಲಸಹಿತ ನರಗಟ್ಟಿಗೆ ಹೊರಟನು. ನರಗಟ್ಟಿ ಊರಿನ ಮುಖ್ಯ ಬೀದಿಗಳಲ್ಲಿ ಮಾಲೋಜಿಯ ಚತುರಂಗ ಸೈನ್ಯದ ಭವ್ಯ ಮೆರವಣಿಗೆ ಹೊರಟಿತು. ಮಕ್ಕಳೂ ಸಹ ಬೆರಗಾಗಿ ಆ ದೃಶ್ಯವನ್ನು ನೋಡುತ್ತಿದ್ದರು. ಮಕ್ಕಳ ಗುಂಪಿನಲ್ಲಿದ್ದ ಮಹಾಲಿಂಗನೆಂಬ ಬಾಲಕನು ಮುನ್ನುಗ್ಗಿ ನಡೆದಾಗ ಮಧ್ಯದಲ್ಲಿ ಬಂದ, ಆ ಬಾಲಕನನ್ನು ನೋಡಿದ ದೊರೆಯ ಆನೆ ಮದವೇರಿದಂತೆ ಕೋಪಿಸಿಕೊಂಡು ಸೊಂಡಿಲುನಿಂದ ಚಂಡನ್ನು ಒಗೆಯುವಂತೆ ಆ ಮಗುವನ್ನು ಎತ್ತಿ ನೆಲಕಪ್ಪಳಿಸಿತು, ಆಗ ಆ ಮಗು ಅಸುನಿಗಿತು. ಸುದ್ದಿ ತಿಳಿದ ತಾಯಿ ಗಂಗವ್ವ ಹುಚ್ಚಿಯಂತೆ ಓಡೋಡಿ ಬಂದು ಜೋರಾಗಿ ಅಳತೊಡಗಿದಳು. ಆಗ ಮಾಲೋಜಿ ಅರಸನು ದುಖಃ ತಪ್ತನಾಗಿ "ಎಲೇ ತಾಯಿಯೇ ಅಳಬೇಡ ಪರಮ ಪಾವನರಾದ ಮಹಾಲಿಂಗ ಮುನಿವರ್ಯರನ್ನು ಪ್ರಾರ್ಥಿಸಿ ಮಗುವನ್ನು ಬದುಕಿಸಿ ಕೊಡುವೆ" ಎಂದು ಹೇಳಿದನು. ಮಾಲೋಜಿ ಅರಸನು ದುಖಃದಿಂದ ಪರಿತಪಿಸುತ ನರಗಟ್ಟಿಯ ಚನ್ನಗಿರಿಗೆ ಬಂದನು. ಪರಿಪರಿಯಿಂದ ಬೇಡಿಕೊಂಡನು ಆಗ ಶಿವಭಕ್ತೆ ಗಂಗವ್ವಳು ಸಹ ಅನೇಕ ವ್ರತ, ಲಿಂಗ ಪೂಜೆಗಳ ಫಲದಿಂದ ಪಡೆದ ಮಗನಿಗೆ



ಮಹಾಲಿಂಗ ಮುನಿನಾಥನ ತಪೋಭೂಮಿ

ಮಹಾಲಿಂಗನೆಂದು ಹೆಸರಿಟ್ಟೆ ಅವನನ್ನು ಕಳೆದುಕೊಂಡಿದ್ದೇನೆ" ಏನು ಮಾಡಲಿ ಎಂದು ಜೋರಾಗಿ ಪರಿತಪಿಸಿದಳು. ಮಹಾಲಿಂಗ ಮುನಿನಾಥನು ಮಾಲೋಜಿ ದೊರೆಯನ್ನು ಗಂಗವ್ವೆಯನ್ನು ಸಮಾಧಾನಪಡಿಸಿದರು. "ಶಿವನ ಪಂಚಾಕ್ಷರಿ ಮಂತ್ರ, ವಿಭೂತಿ ಮಹಿಮೆಯನ್ನು ಜಗಕ್ಕೆ ತೋರಲು ಅವನಾಡಿದ ಲೀಲೆ" ಎಂದು ಹೇಳಿದರು "ನಮಃ ಶಿವಾಯ"



ಮಹಾಲಿಂಗೇಶ್ವರ ದೇವಾಲಯದ ಮಹಾದ್ವಾರ

ಎಂಬ ಪಂಚಾಕ್ಷರಿ ಮಂತ್ರವನ್ನು ಪಠಿಸಿದರು ಪವಿತ್ರ ವಿಭೂತಿಯನ್ನು ಮಗುವಿನ ಹಣೆಗೆ ಧರಿಸಿದ ಕೂಡಲೇ ನಿದ್ರೆಯಿಂದ ಎಚ್ಚೆತ್ತಂತೆ ಎದ್ದು ಕುಳಿತಿತು ಆಗ ಮಾಲೋಜಿಗೆ ಹೋದ ಜೀವ ಬಂದಂತಾಯಿತು ಮತ್ತು ಮಹಾಲಿಂಗೇಶ್ವರ ರಿಗೆ ನಮಸ್ಕರಿಸಿದನು ಇಂದಿಗೂ ಘೋರ್ಪಡೆ ಮನೆತನದ ಕುಲದೈವ ಅಂದಿನಿಂದ ಮಹಾ ಲಿಂಗೇಶ್ವರರೇ ಆಗಿದ್ದಾರೆ.



ಮಠದಲ್ಲಿರುವ ಸನ್ನದು



ಬಸವ ತೀರ್ಥ

### ನರಗಟ್ಟಿಪುರದ ದಾನ ಮಾಲೋಜಿ ದೊರೆಯಿಂದ

ಮಾಲೋಜಿ ಗೋರ್ಪಡೆ ರಾಜನಿಗೆ ಈ ಘಟನೆಯಿಂದ ಮನಸ್ಸು ತುಂಬಿ ಬಂದಿತು "ಈ ನರಗಟ್ಟಿಪುರವನ್ನು ದಾನವಾಗಿ ಕೊಡುತ್ತೇನೆ ಸ್ವೀಕರಿಸಬೇಕು" ಎಂದು ಅರಿಕೆ ಮಾಡಿಕೊಂಡಾಗ ಮುನಿಗಳು "ಕನಸಿನಲ್ಲಿಯೂ ನೆನಸದ ಶಾಶ್ವತವಲ್ಲದ ಈ ಭೂಮಿಯನ್ನು ನಾನು ಸ್ವೀಕರಿಸಲಾರೆ". ರಾಜನು ಪರಿಪರಿಯಿಂದ ಅವರನ್ನು ಬೇಡಿಕೊಂಡನು ರಾಜನ ಅಚಲ ನಿಷ್ಠೆಗೆ ಸೋತನು ಮತ್ತು ರಾಜನು "ಚಂದ್ರಬಿಂಬ ಬಿಸಿಯಾಗಬಹುದು ಸೂರ್ಯ ತಂಪಾಗಬಹುದು ನಾನಿತ್ತ ದಾನವನ್ನು ಮರಳಿ ಬಯಸಿದರೆ ನನಗೆ ಗೋಹತ್ಯ ಮಾಡಿದ ಪಾಪ ಪ್ರಾಪ್ತವಾಗಲಿ. ನನ್ನ ಭಕ್ತಿ ಕಾಣಿಕೆಯೆಂದು ಈ ಗ್ರಾಮವನ್ನು ಸ್ವೀಕರಿಸು ಗುರುವೇ" ಎಂದು ಬಿನ್ನವಸಿಕೊಂಡನು. ಮುನಿಗಳು ಒಪ್ಪಿದರು ನರಗಟ್ಟಿಯ ದಾನ ಪತ್ರವನ್ನು ಕಂಚಿನ ಪಟದಲ್ಲಿ ಬರೆಯಿಸಿ ಅವರಿಗಿತ್ತನು. ಈಗಲೂ ದಾನ ಪತ್ರ ಶ್ರೀ ಮಹಾಲಿಂಗೇಶ್ವರ ಮಠದಲ್ಲಿದೆ. ನಾನಾ ವರ್ಣದ ಹೂಗಳಿಂದ ಅಲಂಕರಿಸಿದ ಪಲ್ಲಕ್ಕಿಯಲ್ಲಿ ಮಹಾಲಿಂಗೇಶ್ವರರನ್ನು ಕುಳ್ಳಿರಿಸಿ ವಂದಿಮಾಗದ ರಿಂದ ಜಯಘೋಷ ಹಾಕುತ್ತ ಮೆರವಣಿಗೆ ನಡೆಯಿತು.

ಎಂಟು ದಿಕ್ಕುಗಳಲ್ಲಿ ಎಂಟು ಲಿಂಗಮುದ್ರೆಗಳು ಸ್ಥಾಪನೆಯಾಗಿದ್ದು ಇಂದಿಗೂ ಇವೆ. ಈ ಲಿಂಗಮುದ್ರೆಗಳ ಜಾತ್ರೆ ಇಂದಿಗೂ ನಡೆಯುತ್ತದೆ.

### ಚನ್ನಗಿರಿ ದುರ್ಗ

ಚನ್ನಗಿರಿ ಸುತ್ತಲೂ ಕೋಟೆ ಇದ್ದು ಇಂದಿಗೂ ನಾವು ನೋಡ ಬಹುದಾಗಿದೆ. ಮಹಾಲಿಂಗೇಶ್ವರರ ತಪಃ ಪ್ರಭಾವದಿಂದ ನರಗಟ್ಟಿಯು ವರಗಟ್ಟಿಯಾಗಿ ನಂತರ ಮಹಾಲಿಂಗಪೂರವೆಂದು ಹೆಸರು ಪಡೆಯಿತು. ಮಠ ಮಹಾಲಿಂಗೇಶ್ವರ ಮಠವಾಯಿತು.

### ಬಸವ ತೀರ್ಥ

ಶ್ರೀ ಮಹಾಲಿಂಗೇಶ್ವರರು ಮಹಾಲಿಂಗ ಪೂರದಲ್ಲಿ ಚನ್ನಗಿರಿಯಿಂದ ಪಶ್ಚಿಮಕ್ಕೆ ಒಂದು ಭಾವಿಯನ್ನು ತೋಡಿಸಲು ದಾನಯ್ಯನೆಂಬುವನಿಗೆ ವಹಿಸಿಕೊಟ್ಟರು ಒಡ್ಡರು ಉಪಯೋಗಿಸಿದ ಹಾರಿಗಳು ಬಾಗಿದವು ಸುತ್ತಿಗೆಗಳು ಸಿಡಿದವು ಛಾಣಗಳು ಮುರಿದವು ಆಗ ದಾನಯ್ಯ ಬಸವಾ ಎಂದು ಸ್ಮರಿಸಿ ಹೊಡೆಯಲು ಬಂಡೆಗಲ್ಲು ಭಾಗವಾಯಿತು. 'ಬ' ಎಂದು ಹೊಡೆಯಲು ಬಂಡೆಗಲ್ಲು ಭಾಗವಾಯಿತು 'ಸ' ಎದು ಜಡಿಯಲು ರಭಸದಿಂದ ಭಾಗಗಳು ಸರಿದವು 'ವ' ಎಂದು ವಡೆಯಲು ಆ ವಡೆದ ಕಲ್ಲು ಸೀಳಿತು. ಇದೆ ಬಸವ ತೀರ್ಥ ಎಂದು ಹೆಸರಾಯಿತು.

### ರಾಮಲಿಂಗ ಪ್ರತಿಷ್ಠಾಪನೆ (ರಾಮಲಿಂಗ ದೇವಾಲಯ- ಇಂದಿನ ಚನ್ನಗಿರೇಶ್ವರ ದೇವಾಲಯ)

ರಜತಪುರದಲ್ಲಿಯ (ಮುಧೋಳ ತಾಲೂಕ ಬೆಳಗಲಿ) ರಾಮಲಿಂಗವನ್ನು ಚನ್ನಗಿರಿಯಲ್ಲಿ ಪ್ರತಿಷ್ಠಾಪಿಸಿದರು ಆ ರಾಮಲಿಂಗವು ತಾನು ಹೇಳಿದಂತೆ ಮುನಿಗಳ ಜೊತೆ ಉರುಳುತ್ತ ಬಂದಿದೆ ಅದರ ಕುರುಹಾಗಿ ಇಂದಿಗೂ ಆ ಲಿಂಗದ ನೆತ್ತಿಯಲ್ಲಿ ತಗ್ಗು ಇದ್ದುದ್ದನ್ನು ನೋಡಬಹುದು. ಇದೆ ಚನ್ನಗಿರಿ ಬೆಟ್ಟದಲ್ಲಿರುವ ಚೆನ್ನಗಿರೇಶ್ವರ ದೇವಾಲಯ.

### ಶ್ರೀ ಮಹಾಲಿಂಗೇಶ್ವರರು ಹರಿಯಾಗಿ ದರ್ಶನ ನೀಡಿದ್ದು

ಮೋದಪುರ ಮಾಲೋಜಿಯು ವಿಭೂತಿ ಮಾದೋದಕ ಮಹಿಮೆಯನ್ನು ಮಹಾಲಿಂಗ ಮುನಿಗಳಿಂದ ಕೇಳಿ ತಿಳಿದನು. ಮಾಲೋಜಿಗೆ ಸಕರೋಜಿ ಎಂಬ ತಮ್ಮನಿದ್ದನು ಇವನು ಹರಿಭಕ್ತನಾಗಿದ್ದನು ಮತ್ತು ವಿಷ್ಣುವನ್ನು ಮಾತ್ರವೇ ಪರಮಾತ್ಮನೆಂದು ನಂಬಿದ್ದನು. ಆಗ ಮೋದಪುರದಲ್ಲಿ ಶ್ರೀ ಮಹಾಲಿಂಗೇಶ್ವರರು ಬಂದಾಗ "ಶಿವ ಜಂಗಮರ ದರ್ಶನ ಪೂಜೆ ಪುನಸ್ಕಾರಗಳು ವಿಷ್ಣುವಿನ ಪರಮ ಭಕ್ತನಾದ ನನಗೆ ಉಚಿತವಲ್ಲ" ಎಂದು ಸಲ್ಲದ ವಿಚಾರಗಳು ಅವನ ಮನಸ್ಸಿಗೆ ಬಂದವು ಮತ್ತು ದರ್ಶನ ಮಾಡಿಕೊಂಡು ಬರಲು ಬಿಡಾರವನ್ನು ಪ್ರವೇಶಿಸಿದ ಒಳಗೆ ಪ್ರವೇಶಿಸಿದಾಗ ಸಕರೋಜಿಗೆ ಆಶ್ಚರ್ಯ ಕಾದಿತ್ತು, ಏನೆಂದರೆ "ಸಭಾ ಮಧ್ಯದ ರಮ್ಯ ಸಿಂಹಾಸನದಲ್ಲಿ, ಶ್ರೀ ವಿಷ್ಣುವಿನ ಮೂರ್ತಿಯನ್ನು ಕಂಡು ಬೆರಗಾದನು, ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರನಾಗಿ ಗೋಚರಿಸಿದ ಮಹಾಲಿಂಗರ ಲೀಲೆಯನ್ನು ಕಂಡು ಸಕರೋಜಿಯು, ಅಪರಾಧವನ್ನು ಮನ್ನಸಬೇಕೆಂದು ಬೇಡಿಕೊಂಡನು. ಮುನಿವರ್ಯರು ಶಿವನ ರೂಪದಲ್ಲಿ ಆತನಿಗೆ ಕಾಣಿಸಿ ಹರಿ-ಹರ ದ್ವಂದ್ವವು ಪರಿಹಾರವಾಯಿತು. ಆಗ ಸಕರೋಜಿಯು ಅವರ ಆಶೀರ್ವಾದ ಪಡೆದನು. ಘೋರ್ಪಡೆ ವಂಶಕ್ಕೆ ಮಹಾಲಿಂಗೇಶ್ವರರೇ "ಆರಾಧ್ಯ ದೈವ"ವಾಗಿದ್ದಾನೆ.

### ಮಾಲೋಜಿ ಮಗ ಗೋವಿಂದನ ರೋಗ ಪರಿಹಾರ

ಮಾಲೋಜಿಗೆ ಗೋವಿಂದ ರಾಜನೆಂಬ ಮಗನಿದ್ದನು ಅವನಿಗೆ ಮಲರೋಗ ಇತ್ತು ಯಾವುದೇ ಚಿಕಿತ್ಸೆ ಉಪಯೋಗವಾಗಲಿಲ್ಲ. ಮುನಿವರ್ಯರು ಆತನನ್ನು ನೋಡಿ "ರಾಜಾ ಇದು ಪೂರ್ವಜನ್ಮದ ಸಂಚಿತ ಕರ್ಮದ ಪ್ರತಿಫಲ ಈ ರೋಗ ಗೋವಿಂದರಾಜನ ನರನಾಡಿಗಳಲ್ಲಿ ಪಸರಿಸಿತು ಆತನು ಮರಣ ಹೊಂದಿದ ಎಂದು ಹೇಳಿ ಗಾಯತ್ರಿ ಮಂತ್ರ ಶತರುದ್ರೀಯ ಮಂತ್ರಗಳನ್ನು ಜಪಿಸಿದರು ಓಂ ನಮಃ ಶಿವಾಯ ಎಂಬ ಷಡಕ್ಷರ ಮಂತ್ರವನ್ನು ಪಠಿಸಿ ಗೋವಿಂದರಾಜನ

ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಹಾಕಿದರು ಗೋವಿಂದ ರಾಜನು ಕಣ್ದೆರೆದು ಕುಳಿತನು.

**ಕೇದಾರಭಾವನ ವಿಷಬಾಧೆಯಿಂದ ಮುಕ್ತನಾಗಿದ್ದು**

ಮಾಲೋಜಿ ರಾಜನಿಗೆ ಕೇದಾರಭಾವನೆಂಬ ಇನ್ನೊಬ್ಬ ಮಗನಿದ್ದನು ಅವನು ಅತೀ ಪರಾಕ್ರಮಶಾಲಿಯಾಗಿದ್ದನ್ನು ಸಹಿಸದ ಉಳಿದ ರಾಣಿಯರು ಆತನಿಗೆ ಗೊತ್ತಾಗ ದಂತೆ ಊಟದಲ್ಲಿ ವಿಷ ಬೆರೆಸಿದರು ಕೇದಾರಭಾವ ಒದ್ದಾಡ ತೊಡಗಿದನು ಯಾವುದೇ ಔಷಧ ಪ್ರತಿಫಲ ನೀಡಲಿಲ್ಲ ಕೊನೆಗೆ ಮಹಾಲಿಂಗ ಮುನಿಗಳ ಶ್ರೀ ಚರಣಗಳಲ್ಲಿ ಅವನನ್ನು ತಂದು ಪ್ರಾರ್ಥಿಸಿದರು. ಇವೆಲ್ಲ ಪೂರ್ವ ಜನ್ಮದ ಪ್ರಾರಬ್ಧ ಕರ್ಮ ಎಂಥು ಹೇಳಿದರು ಮತ್ತು ಪ್ರಣವ ಪಂಚಾಕ್ಷರಿ ಮಂತ್ರವನ್ನು ಜಪಿಸಿ ಪವಿತ್ರ ವಿಭೂತಿಯನ್ನು ಮೈತುಂಬ ಧರಿಸಿ ಭಕ್ತಿಯಿಂದ ಪಾವನ ಪಾದೋದಕ ಸೇವಿಸಿದರೆ ಈ ರೋಗ ಶಮನವಾಗುತ್ತದೆ ಎಂದು ಹೇಳಿದರು ಆಗ ಕೇದಾರಭಾವನು ಅವರ ಮಾರ್ಗದರ್ಶನದಂತೆ ಮಾಡಿದಾಗ, ಆತನಿಗೆ ಸಮಾಧಾನವಾಯಿತು. ಈ ಅದ್ಭುತವನ್ನು ಕಂಡು ಮಾಲೋಜಿ ಪರಿವಾರ ಸಂತೋಷಪಟ್ಟಿತು.

**ನಾರಾಯಣನೆಂಬ ಮಗುವಿಗೆ ಜೀವದಾನ**

ಮಾಲೋಜಿಯ ತಮ್ಮನಾದ ಸಕರೋಜಿ, ಮಕ್ಕಳಾದ ಗೋವಿಂದರಾಜ ಕೇದಾರಭಾವ ರಾಣಿಯರು ಮಂತ್ರಿಗಳಿಗೆಲ್ಲ ಮಹಾಲಿಂಗರೇ ಆರಾಧ್ಯ ದೈವರಾದರು. ಗೋವಿಂದರಾಜನ ಮಗ ನಾರಾಯಣನೆಂಬ ಕೂಸು ಬಾಲಗ್ರಹ ಪೀಡಿತವಾಗಿ ಅಳುತ್ತಿತ್ತು ಕೊನೆಗೆ ಮಗು ನಿಧನ ಹೊಂದಿತು. ಆಗ ಮಹಾಲಿಂಗರು ಶಿವಪಂಚಾಕ್ಷರಿ ಮಂತ್ರ ಜಪಿಸಿ ಪವಿತ್ರ ವಿಭೂತಿಯನ್ನು ಮಗುವಿನ ಹಣೆಗೆ ಹಚ್ಚಿದಾಗ ಮಗು ಬದುಕಿತು. ಪ್ರಜೆಗಳಿಗಾಗಿ ಅರವಟಿಕೆಗಳನ್ನಿಟ್ಟನು ದಿನ-ದಲಿತರಿಗೆ, ಭಿಕ್ಷುಕರಿಗೆ ಧರ್ಮಶಾಲೆ ಕಟ್ಟಿಸಿ ಅನ್ನ ಛತ್ರಗಳನ್ನು ತೆರೆದನು ಸಾಲು ಮರಗಳನ್ನು ನೆಟ್ಟನು, ದೇವಾಲಯಗಳನ್ನು ನಿರ್ಮಿಸಿದನು. ಹೀಗೆ ಮಾಲೋಜಿಯ ಭಕ್ತಿ ಬೆಳೆಯುತ್ತ ಹೋಯಿತು.

**ಸ್ವರ್ಗಗಾಮಿನಿ ಕುದುರೆಗೆ ಜೀವದಾನ**

ಮಾಲೋಜಿ ಅರಸನ ಶ್ರೇಷ್ಠ ಜಾತಿಯ ಸ್ವರ್ಗ ಗಾಮಿನಿ ಎಂಬ ಕುದುರೆ ಆತನ ಪಂಚಪ್ರಾಣವಾಗಿತ್ತು ಒಂದು ದಿನ ಅದಕ್ಕೆ ಚಾಂದನಿ ಎಂಬ ರೋಗದಿಂದ ಮರಣವನ್ನಪ್ಪಿತು. ಮಹಾಲಿಂಗರು ಸ್ವರ್ಗಗಾಮಿನಿ ಕುದುರೆಯ ಹಣೆಯಮೇಲೆ ತಮ್ಮ ಅಮೃತ ಹಸ್ತವನ್ನಿಟ್ಟರು ಆಗ ಕುದುರೆ ಎದ್ದು ನಿಂತಿತು.

**ಪತ್ರಿ ಪರಗಣೆ ದುರ್ಗದ ವಿಜಯ**

ಪತ್ರಿ ಪರಗಣೆ ದುರ್ಗವನ್ನು ಆಳುತ್ತಿದ್ದ ರಾಜನು ಯುದ್ಧಕ್ಕೆ ಸನ್ನದ್ಧನಾದನು ಮಾಲೋಜಿಯು ಇವನನ್ನು ಮಟ್ಟಹಾಕಬೇಕೆಂದು ಆಲೋಚಿಸಿದ ಮತ್ತು ದಂಡೆತ್ತಿ ಹೋಗಲು ನಿಶ್ಚಯಿಸಿದ, ಹೋಗುವ ಮುನ್ನ ಮಹಾಲಿಂಗ ಮುನಿಗಳಿಗೆ ನಮಸ್ಕರಿಸಿ ಯುದ್ಧಕ್ಕೆ ಹೊರಟನು ಅವನೊಂದಿಗೆ ಮಗನಾದ ಗೋವಿಂದರಾಜನು ಸಹ ಮುನಿಗಳ ಆಶೀರ್ವಾದ ಪಡೆಯದೆ ಕುದುರೆ ಏರಿ ಮುನ್ನುಗ್ಗಿದ ತಂದೆ ಮಕ್ಕಳಿಬ್ಬರು ಸಾಕ್ಷಾತ್ ಕಾಲಭೈರವನಂತೆ ಹೋರಾಡಿ ದರು ಆಗ ಎರಡು ಕಡೆ ಅಪಾರ ನಷ್ಟವಾಯಿತು ಈ ದುರ್ಭರ ಪ್ರಸಂಗದಲ್ಲಿ ಮಾಲೋಜಿಯು ಆರಾಧ್ಯ ದೈವನಾದ ಮಹಾಲಿಂಗರನ್ನು ಮಹಾಲಿಂಗಾ ಎಂದೂ ಕೂಗಿದನು ಆಗ ಮಹಾಲಿಂಗರು ಪತ್ರಿ ಪರಗನೆ ದುರ್ಗದ ಕೊತ್ತಳದ ಮೆಲೆ ಬಂದು ಕೆಳಗೆ ಬಿದ್ದಿದ್ದ ಆತನಿಗೆ ಖಡ್ಗವನ್ನು ಕೊಟ್ಟರು. ಆಗ ಮಾಲೋಜಿಯು ಮಗ ಗೋವಿಂದನಿಗೆ ಆ ದೃಶ್ಯ ತೋರಿಸಿದರು. ದರುಶನ ಪಡೆಯದೆ ಬಂದದ್ದು ತಪ್ಪಾಯಿತೆಂದು ತಿಳಿದು ಭಕ್ತಿಯಿಂದ ನಮಿಸಿದನು. ಸ್ವರ್ಗ ಗಾಮಿನಿ ಕುದುರೆಯು ವೀರಾವೇಶದಿಂದ ಓಡಾಡಿತು ಆಗ ಮಹಾಲಿಂಗೇಶ್ವರರು ಖಡ್ಗವನ್ನು ಕೊಟ್ಟು ಜಯಶಾಲಿಯಾಗು ಎಂದು ಆಶೀರ್ವದಿಸಿದರು. ಇದು ಇಂದಿಗೂ ಮಠದಲ್ಲಿದೆ.

**ಅಮೃತಲಿಂಗ ಪ್ರತಿಷ್ಠಾಪನೆ**

ಮೋದಪುರದಲ್ಲಿ ಮಹಾಲಿಂಗೇಶ್ವರರು ಮಾಲೋಜಿ ರಾಜನ ಪರಿವಾರ ಮತ್ತು ಜನತೆಯ ಸಲುವಾಗಿ ಅಮೃತ ಲಿಂಗವನ್ನು ಪ್ರತಿಷ್ಠಾಪಿಸಿದರು. ಮುಧೋಳ ನಗರದ ವಾಯವ್ಯ ದಿಕ್ಕಿನಲ್ಲಿದೆ ಅದಕ್ಕೆ ಮೋಕ್ಷಸಿದ್ದನ ಗುಡಿ ಎನ್ನುತ್ತಾರೆ. ಆದರೆ ಇದೇ ಅಮೃತಲಿಂಗ ದೇವಾಲಯ ಎಂದು ಜನಾಭಿಪ್ರಾಯ. ಮೋದಪುರದಲ್ಲಿ ಅಮೃತ ಲಿಂಗವನ್ನು ಸ್ಥಾಪಿಸಿದಂತೆ ಬಸವೇಶ ಲಿಂಗ ಮುದ್ರೆಯನ್ನು ಸ್ಥಾಪಿಸಿದರು ಇದರಿಂದಾಗಿ ರಾಣಿಯರು ಮುನಿಗಳ ಅನುಗ್ರಹಕ್ಕೆ ಪಾತ್ರರಾಗಿ ಬ್ರಹ್ಮಹತ್ಯಾ ದೋಷದಿಂದ ಮುಕ್ತಿ ಪಡೆದರು ಮತ್ತು ಸಂತಾನ ಪಡೆದರು.

**ಸುಟ್ಟೋಟ್ಟಿ ಗ್ರಾಮ**

ಇಂದಿನ ಸುಟ್ಟೊಟ್ಟಿ ಆಗ ಸಟರಟ್ಟಿ ಎಂದು ಹೆಸರಿತ್ತು. ಇದು ಮುಧೋಳ ನಗರದ ಪಶ್ಚಿಮ ದಿಕ್ಕಿನಲ್ಲಿದ್ದು ಇಂದು ಅದು ಓಣಿಯಾಗಿದೆ, ಮಾಲೋಜಿ ಅರಸನು ನಿರ್ಮಿಸಿದ ಸುಂದರ ಮಹಾಲಿಂಗೇಶ್ವರ ದೇವಾಲಯವಿದೆ.

**ಶ್ರೀ ಮಹಾಲಿಂಗೇಶ್ವರರು ಸಿದ್ದಾಯಿಗೆ ಜಟೆ ನೀಡಿದ್ದು**

ವಜ್ರಮಟ್ಟಿ ಮನೆತನದ ಸೇವಕಿ ಸಿದ್ದಾಯಿಗೆ ಮಹಾಲಿಂಗೇಶ್ವರರು ಅಂತಿಮ ಕಾಲದ ಬಗ್ಗೆ ತಿಳಿಸಿದಾಗ

ಅವಳು ದುಃಖ ತಪ್ತಳಾಗಿ ನೀನಿಲ್ಲದೆ ನಾನಿರಲು ಸಾಧ್ಯವಿಲ್ಲ ನಿನ್ನ ದರುಶನ ಭಾಗ್ಯ ಬೇಕು ಎಂದು ಅಂಗಲಾಚಿದಾಗ ಮಹಾಲಿಂಗ ಮುನಿಗಳು ತಮ್ಮ ಜಡೆಯಲ್ಲಿರುವ ೫ ಎಳೆ ಕೂದಲಗಳನ್ನು ತೆಗೆದು ಅವಳ ಕೈಗಿತ್ತರು ಮತ್ತು ನಿನಗೆ ನೋಡಬೇಕೆಂದೆನಿಸಿದಾಗ ಇದರಲ್ಲಿ ನೋಡು ನಾನು ಕಾಣುತ್ತೇನೆ ಪ್ರತಿ ವರ್ಷ ಈ ಜಡೆ ಒಂದು ಕಡಲೆ ಕಾಳಿನಷ್ಟು ಬೆಳೆಯುತ್ತದೆ ಎಂದು ಅವಳಿಗೆ ಸಮಾಧಾನ ಮಾಡಿದರು ನಂತರ ಮಹಾಲಿಂಗರು ಚೆನ್ನಗಿರಿಯಲ್ಲಿ ಶಿವಯೋಗಿ ಸಮಾಧಿಯಲ್ಲಿ ಲೀನನಾದರು.

### ಕರಡಿ ಮಜಲು

ಭಕ್ತರು ತಮ್ಮ ಹರಕೆಗಳನ್ನು ಪೂರೈಸಿಕೊಳ್ಳಲು ಜಟೋತ್ಸವ ಮಾಡುತ್ತೇವೆಂದು ಬೇಡಿಕೊಳ್ಳುತ್ತಾರೆ ಈ ಸಂದರ್ಭದಲ್ಲಿ ನುಡಿಸುವ ವಾದ್ಯವೇ ಕರಡಿ ಮಜಲು. ಇವರ ಮನೆತನ ಇಂದಿಗೂ ಇದೆ, ಆನುವಂಶಿಕವಾಗಿ ಇವರ ಮನೆತನಕ್ಕೆ ಕರಡಿ ವಾದನ ನುಡಿಸುವ ಹಕ್ಕಿದೆ. ಕರಡಿ ಮಜಲು ಇಲ್ಲದೆ ಜಟೋತ್ಸವ ನಡೆಯುವದಿಲ್ಲ. ಇವರ ಮನೆತನಕ್ಕೆ ರಾಷ್ಟ್ರಪ್ರಶಸ್ತಿ ಬಂದಿದೆ. (ಚನ್ನಪ್ಪಾ ವೀರಭದ್ರಪ್ಪಾ ಕರಡಿ) ಅವರ ಮನೆತನದ ಹೆಸರು ಕೂಡ ಕರಡಿ ಎಂದೇ ಇದೆ.

### ಸನದುಗಳು

ಮಹಾಲಿಂಗೇಶ್ವರ ಮಠ ಮತ್ತು ಮುಧೋಳ ಸಂಸ್ಥಾನಕ್ಕೂ ಅವಿನಾಭಾವ ಸಂಬಂಧವಿದೆ, ಕ್ರಿ.ಶ. ೧೭೯೩ರಲ್ಲಿ ಘೋರ್ಪಡೆ ಮನೆತನದ ದೊರೆ ನಾರಾಯಣ ಈ ಮಠಕ್ಕೆ ನೀಡಿದ ಸನದು ಹೀಗಿದೆ.

ಮಹಲಿಂಗಪುರದ ಸರ್ವಹಕ್ಕು, ವೀರಶೈವ ಲಿಂಗ ಧಾರಣೆ ಮೊದಲು ಮಾಡಿ ಅಂತ್ಯದವರೆಗೆ ಆಗುವ ಎಲ್ಲ ಸಂಸ್ಕಾರಗಳನ್ನು ಮಾಡುವ ಹಕ್ಕು, ಸರ್ವರ ದೀಕ್ಷಾ ಮೋಕ್ಷದ ಕಾರ್‍ಯದ ಹಕ್ಕು, ತಪ್ಪು ಮಾಡಿದವರಿಂದ ಅಪರಾಧ ಕಾಣಿಕೆಯನ್ನು ಪಡೆಯುವ ಹಕ್ಕು, ನಷ್ಟಸಂತತಿಯಾದವರ ಆಸ್ತಿಯನ್ನು ಪಡೆಯುವ ಹಕ್ಕು ಇವೆಲ್ಲ ಮಹಾಲಿಂಗಪುರದ ಮಾಹಾ ಲಿಂಗೇಶ್ವರ ಮಠಕ್ಕಿವೆ.

**ಪಂಚಾಚಾರದ ಹಕ್ಕುಗಳನ್ನು ಮಠದವರು ಕೆಳಗೆ ಕಾಣಿಸಿದಂತೆ ತಗೆದುಕೊಳ್ಳಬೇಕು.**

ಲಿಂಗಧಾರಣೆ : ಗಂಡು ಹುಟ್ಟಿದರೆ ೧೦ ದುಡ್ಡು, ಹೆಣ್ಣು ಹುಟ್ಟಿದರೆ ೫ ದುಡ್ಡು, ದೀಕ್ಷಾ ವಿಧಾನ : ರೂ ೧–೫–೦, ಗುಗ್ಗಳಕ್ಕೆ : ೧ ತೆಂಗಿನಕಾಯಿ, ೩೫ ಬಾಳೆ ಹಣ್ಣು ರೂ ೨–೧೨–೦, ಲಗ್ನಕ್ಕೆ : ೧–೧೦–೦, ಪುನರ್ವಿವಾಹಕ್ಕೆ: ೧–೬–೦, ಬಿಡುಗಡೆ (ಸೋಡ ಪತ್ರಕ್ಕೆ : ೧–೦–೦, ಸಮಾಧಿಗೆ: ೮ ಮೊಳ ಅರಿವೆ.

### ಗುರುಪರಂಪರೆ ಮತ್ತು ಆಯಾ ಗುರುಗಳ ಕಾಲ

೧. ಶ್ರೀ ಮಹಲಿಂಗಸ್ವಾಮಿಗಳು ಕ್ರಿ.ಶ. ಸು. ೧೭೫೦; ೨. ಶ್ರೀ ಮುರಗಿ ಮಹಾರುದ್ರ ಸ್ವಾಮಿಗಳು, ಕ್ರಿ.ಶ. ಸು. ೧೭೯೩; ೩. ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳು, ಕ್ರಿ.ಶ. ಸು. ೧೮೫೫; ೪. ಶ್ರೀ ಮಹಾಲಿಂಗ ಸ್ವಾಮಿಗಳು, ಕ್ರಿ.ಶ. ಸು. ೧೮೬೫; ೫. ಶ್ರೀ ಬಸವಲಿಂಗ ಸ್ವಾಮಿಗಳು, ಕ್ರಿ.ಶ. ಸು, ೧೮೭೪–೧೯೩೬; ೬. ಶ್ರೀ ಗುರುಲಿಂಗ ಸ್ವಾಮಿಗಳು, ಕ್ರಿ.ಶ. ಸು. ೧೯೩೬.

ಹೀಗೆ ಮಹಾಲಿಂಗೇಶ್ವರ ಮಠ ಇಂದಿಗೂ ಅದೇ ಸಂಪ್ರದಾಯಗಳನ್ನು ಅನುಸರಿಸುತ್ತಾ ಬಂದಿದೆ.

### ಶ್ರೀ ಮಹಾಲಿಂಗೇಶ್ವರ ಮಠ

ಶ್ರೀ ಮಹಾಲಿಂಗೇಶ್ವರ ಶಿವಯೋಗಿ ರಾಜೇಂದ್ರ ಮಹಾಸ್ವಾಮಿಗಳ ನೇತೃತ್ವದಲ್ಲಿ ಮುನ್ನಡೆಯುತ್ತಿದೆ. ಈ ಮಠದಲ್ಲಿ ವರ್ಣ ಚಿತ್ರಗಳಿವೆ. ಇಬ್ರಾಹಿಂ ಆದಿಲ್ ಶಹಾ ನೀಡಿದ ಸನದು ಸಿಕ್ಕಿಲ್ಲ. ಈ ಮಠದಿಂದ ಅನೇಕ ಧಾರ್ಮಿಕ ಸಾಮಾಜಿಕ ಕಾರ್ಯಗಳು ಜರಗುತ್ತಿದೆ. ಭಕ್ತರು ತಮ್ಮ ಹರಕೆಗಳು ಪೂರೈಸಲು ಬೇಡಿಕೊಂಡಂತಹ ಜಟೋತ್ಸವ ಕಾರ್ಯಕ್ರಮ ಈ ಶ್ರೀಗಳ ನೇತೃತ್ವದಲ್ಲಿಯೇ ನಡೆಯುತ್ತದೆ.



### ಆಧಾರಸೂಚಿ


ಬಸವ ಕವಿ, **ಮಹಾಲಿಂಗಲೀಲೆ**, ಶ್ರೀ ಮುರುಘಾಮಠ, ಧಾರವಾಡ, ೧೯೫೪.

ಅಣ್ಣಾಜಿ ಫಡತಾರೆ, **ಶ್ರೀ ಮಹಾಲಿಂಗೇಶ್ವರ ಮಹಾತ್ಮೆ**, ಶ್ರೀ ಬಿ.ಪಿ. ಅಡನೂರ (ಪ್ರಕಾಶಕರು), ೧೯೯೭.

೭೯

# ಬೀರಪ್ಪ-ವೀರಭದ್ರರ ಸಮನ್ವಯ ಸಂಗತಿಗಳು

**ಡಾ. ಎಫ್.ಟಿ. ಹಳ್ಳಿಕೇರಿ***

ಕರ್ನಾಟಕದಲ್ಲಿ ಶಿಷ್ಟ ಮತ್ತು ಜಾನಪದ ದೈವಗಳ ಸಂಖ್ಯೆ ಅಧಿಕವಾದುದು. ಜಾನಪದ ದೈವಗಳ ಆಚರಣೆ ಸಂಪ್ರದಾಯ ಜಾತ್ರೆ ಉತ್ಸವಗಳು ವಿಶಿಷ್ಟ ರೀತಿಯಲ್ಲಿ ನಡೆಯುತ್ತವೆ. ಕುರುಬ ಸಮುದಾಯವನ್ನು ಗಮನಿಸಿ ಹೇಳುವುದಾದರೆ, ಬೀರಪ್ಪ, ಮಾಳಪ್ಪ, ಮೈಲಾರ, ಜಟ್ಟೆಪ್ಪ, ಇಟ್ಟಪ್ಪ ಮೊದಲಾದವರು ಸಾಂಸ್ಕೃತಿಕ ನಾಯಕರು. ಈ ನಾಯಕರು ತಮ್ಮ ಅಗಾಧವಾದ ಸಾಧನೆಯಿಂದ ದೈವತ್ವಕ್ಕೇರಿದ್ದಾರೆ. ಹೀಗಾಗಿ ಇವರು ಬೀರಲಿಂಗ, ಮಾಳಿಂಗರಾಯ, ಮೈಲಾರಲಿಂಗ, ಜಟ್ಟಿಂಗೇಶ್ವರ ಎಂದು ಜನಮಾನಸದಲ್ಲಿ ಪ್ರಸಿದ್ಧರಾಗಿದ್ದಾರೆ. ಇಂಥ ದೈವಗಳ ಉಗಮ ವಿಕಾಸ ಸಂಸ್ಕೃತಿ ಭೌಗೋಳಿಕ ಪರಿಸರ ಪರಸ್ಪರ ಸಂಬಂಧಗಳ ಕುರಿತು ಈವರೆಗೆ ಸಮಗ್ರ ಅಧ್ಯಯನ ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಬೀರಪ್ಪ ಮತ್ತು ವೀರಭದ್ರರ ಸಮನ್ವಯ ಕುರಿತು ಕೆಲವು ಸಂಗತಿಗಳನ್ನು ಇಲ್ಲಿ ಚರ್ಚಿಸಲಾಗುವುದು.

**೧. ಬೀರಪ್ಪ ಮತ್ತು ವೀರಭದ್ರ : ಇತಿವೃತ್ತ ವಿಚಾರ**

ಬೀರಪ್ಪ, ಕುರುಬರ ಪರಮ ದೈವವಾದರೆ, ವೀರಭದ್ರ ಲಿಂಗಾಯತರ ಆರಾಧ್ಯದೈವ. ಈ ದೈವಗಳ ಇತಿವೃತ್ತ ವಿಚಾರ ತುಂಬ ಸಂಕೀರ್ಣತೆಯಿಂದ ಕೂಡಿದೆ. ಹೀಗಾಗಿ ಬೀರಪ್ಪ ಮತ್ತು ವೀರಭದ್ರರ ತಂದೆತಾಯಿ ಸ್ಥಳ ಇತ್ಯಾದಿ ವಿವರಗಳ ಕುರಿತು ಚರ್ಚಿಸಿ, ಒಂದು ನಿರ್ಧಾರಕ್ಕೆ ಬರುವುದು ಅಷ್ಟು ಸುಲಭವಲ್ಲ. ಆದರೂ ಉಲಪಬ್ಧವಿರುವ ಆಕರಗಳ ನೆರವಿನಿಂದ ಪುರಾಣ ಮತ್ತು ಚಾರಿತ್ರಿಕ ಹಿನ್ನೆಲೆಯಲ್ಲಿ ಇವರಿಬ್ಬರ ಇತಿವೃತ್ತವನ್ನು ಹೀಗೆ ಕ್ರೋಢೀಕರಿಸಿ ಹೇಳಬಹುದು.

ಬೀರಪ್ಪ ಕುರುಬರ ಆರಾಧ್ಯದೈವ. ಹಾಲುಮತ ಕಾವ್ಯಪುರಾಣಗಳಲ್ಲಿ ಈತನನ್ನು ಬೀರಣ್ಣ, ಲಿಂಗಬೀರಣ್ಣ, ಬೀರಲಿಂಗ, ಬೀರಲಿಂಗೇಶ್ವರ, ಬೀರದೇವ, ಸಿದ್ಧಬೀರ, ಕರಿಸಿದ್ಧ, ಬೀರೋಬಾ ಎಂದು ಪರ್ಯಾಯವಾಗಿ ಕರೆಯಲಾಗುತ್ತಿದೆ. ಬರಮದೇವ (ಬ್ರಹ್ಮದೇವ) ಮತ್ತು ಸುರಾವತಿ (ಸರಸ್ವತಿ) ಬೀರಪ್ಪನ ತಂದೆ ತಾಯಿಗಳು. ಸೋದರಮಾವ ಕಾಳಿನಾರಾಯಣ. ಅಕ್ಕ ಮಾಯವ್ವಳು ಬೀರಪ್ಪನನ್ನು ಸಾಕಿ ಸಲುಹಿದವಳು. ತನ್ನ ಅಗಾಧವಾದ ಶೌರ್ಯ ಸಾಹಸ ಗುಣಗಳಿಂದ ಈತ ನಾಯಕತ್ವ (Hero) ದ ಗುಣಗಳನ್ನು ಹೊಂದಿದವನು. ದೈತ್ಯ ಕೋಣಾಸುರನ ವಧೆ, ಹಾವಿನ ಹೆಡೆಯ ಮೇಲೆ ಏರಿದ್ದು, ಕಾಳಿನಾರಾಯಣನ ಕುತಂತ್ರವನ್ನು ಹಿಮ್ಮೆಟ್ಟಿಸಿದ್ದು ಇವೇ ಮುಂತಾದ ಪರಾಕ್ರಮ ಮತ್ತು ಸಾಹಸಗಳನ್ನು ಪ್ರದರ್ಶಿಸಿದ್ದನ್ನು ಹಾಲುಮತ ಕಾವ್ಯಪುರಾಣಗಳು ನಿರೂಪಿಸುತ್ತವೆ.[೧] ಇವುಗಳಲ್ಲದೇ ಶಾಸನಗಳಂಥ ದಾಖಲು ಸಾಹಿತ್ಯದಲ್ಲಿಯೂ ಬೀರಪ್ಪನ ಬಗೆಗೆ ಉಲ್ಲೇಖಗಳಿವೆ. ಬರದೋಂ ಬೀರಯ್ಯ (ಶಕೆ–೯೩೦), ಯೀ ಬೀರಲಿಂಗಕ್ಕೆ ಹೊಲಬಾವಿ ಕಳೆಕೊಟ್ಟರು (ಶಕೆ–೧೦೬೧) ಎಂಬಂಥ ಹೇಳಿಕೆಗಳು ಈತನ ಪ್ರಾಚೀನತೆ ಯನ್ನು ತಿಳಿದುಕೊಳ್ಳಲು ನೆರವಾಗುತ್ತವೆ.[೨] ಇನ್ನು ಕನ್ನಡ ಕಾವ್ಯಗಳಲ್ಲಿ ಸಾಂದರ್ಭಿಕವಾಗಿ ಬೀರಪ್ಪನ ಕುರಿತು ಉಲ್ಲೇಖಗಳಿವೆ. ಮಾರಯ್ಯ ಬೀರಯ್ಯ ಕೇತಯ್ಯಗಳೆಂಬ ದೈವಗಳನ್ನು ಶಿವಶರಣರು ತಮ್ಮ ವಚನಗಳಲ್ಲಿ ದಾಖಲಿಸಿದ್ದಾರೆ.[೩]

ಇಂಥ ಪರಾಕ್ರಮಶಾಲಿಯಾದ ಬೀರಪ್ಪನನ್ನು ಕುರುಬರು ಆರಾಧನೆ ಮಾಡುತ್ತ ಬಂದರು. ಈ ಕಾರಣವಾಗಿ ದೈವತ್ವಕ್ಕೇರಿ ಜನಮಾನಸದಲ್ಲಿ ಪ್ರಸಿದ್ಧನಾದ ಈತ ಬೀರಲಿಂಗ–ಬೀರಲಿಂಗೇಶ್ವರ, ಸಿದ್ಧಬೀರ–ಸಿದ್ಧಬೀರೇಶ್ವರ, ಕರಿಸಿದ್ಧ–ಕರಿಸಿದ್ದೇಶ್ವರ ಹೆಸರಿನಿಂದ ಆರಾಧನೆಗೊಳ್ಳುತ್ತಿದ್ದಾನೆ. ಹೀಗಾಗಿ ನಾಡಿನಾದ್ಯಂತ ಈತನ ಹೆಸರಿನಲ್ಲಿ ಗುಡಿಗುಂಡಾರಗಳು, ದೇವಾಲಯಗಳು ಸ್ಥಾಪನೆಗೊಂಡಿವೆ. ಕೋಣಗನೂರು, ಮುರಗುಂಡಿ, ಅಲಕನೂರು, ರಾಯಭಾಗ, ಹಾರೂಗೇರಿ, ತಾಳಿಕಟ್ಟೆ ಮೊದಲಾದವುಗಳು ಈತನ ಪ್ರಸಿದ್ಧ ನೆಲೆಗಳಾಗಿವೆ. ಕುರುಬರ ಪ್ರತಿಯೊಂದು ಮನೆತನಗಳಲ್ಲಿ ವ್ಯಕ್ತಿಗಳಿಗೆ ಬೀರಪ್ಪ, ಬೀರಯ್ಯ, ಬೀರೇಶ, ಬೀರಲಿಂಗ ಬೀರಮ್ಮ ಎಂಬ ಹೆಸರಿಡುವ ಪದ್ಧತಿ ಈಗಲೂ ಕಾಣಬಹುದು. ಕುರುಬರು ಈತನನ್ನು ನಾನಾ ರೀತಿಯಾಗಿ ಆರಾಧನೆ ಮಾಡುತ್ತಾರೆ. ದಕ್ಷಿಣ ಕರ್ನಾಟಕದಲ್ಲಿ ಹನ್ನೆರಡು ವರ್ಷಕ್ಕೊಮ್ಮೆ ಜರುಗುವ ಬೀರಪ್ಪನ

* ಪ್ರಾಧ್ಯಾಪಕ, ಹಸ್ತಪ್ರತಿ ಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ – ೫೮೩೨೭೬.

ತೋಪುಜಾತ್ರೆ ವೈಭವಪೂರ್ಣವಾದುದು. ಈತನನ್ನು ಕುಣಿತದ ಮೂಲಕ ಆರಾಧಿಸುವ ಈರಗಾರರು. ಪಲ್ಲಕ್ಕಿ ಉತ್ಸವಗಳು ವಿಶೇಷವಾಗಿವೆ.

ಇನ್ನು ವೀರಭದ್ರನ ಇತಿವೃತ್ತವನ್ನು ಸಹ ಪೌರಾಣಿಕ ನೆಲೆಯಲ್ಲಿ ಗುರುತಿಸುತ್ತ ಬರಲಾಗಿದೆ. ಲಿಂಗಾಯತ (ವೀರಶೈವ) ಸಮುದಾಯದ ಆರಾಧ್ಯ ದೈವವಾದ ಈತ ದಕ್ಷಯಾಗವನ್ನು ನಾಶಪಡಿಸುವ ಸಲುವಾಗಿ ಶಿವನ ಹಣೆಗಣ್ಣಿನಿಂದ ಜನಿಸಿದನೆಂಬ ಪ್ರತೀತಿಯಿದೆ. ಹರಿಹರ (ವೀರಭದ್ರದೇವರ ರಗಳೆ), ರಾಘವಾಂಕ (ವೀರೇಶ ಚರಿತೆ), ಶಾಂತೀವರ (ವೀರಭದ್ರ ಲೀಲಾರತ್ನ), ಚನ್ನಣ್ಣ ವೀರೇಶ್ವರ ಚರಿತೆ), ರಂಗನಾಥ (ವೀರಭದ್ರ ವಿಜಯ) ಮೊದಲಾದ ಕವಿಗಳು ವೀರಭದ್ರನ ಅವತಾರ, ಆತನ ಶೌರ್ಯಾತಿಶಯ ಗುಣಗಳನ್ನು ರಂಜನೀಯವಾಗಿ ವರ್ಣಿಸಿದ್ದಾರೆ. ನಾಡಿನಾದ್ಯಂತ ಈತನ ಹೆಸರಿನಲ್ಲಿ ದೇವಾಲಯಗಳಿವೆ; ಸುಂದರವಾದ ಮತ್ತು ಬೃಹದಾಕಾರವಾ ಮೂರ್ತಿಶಿಲ್ಪಗಳಿವೆ. ಹಂಪಿ, ನಿಜಗಲ್ಲು, ಯಡೂರ, ಗೊಡಚಿ, ಕುರುಗೋಡು, ರಾಚೋಟಿ, ಲೇಪಾಕ್ಷಿ ಮೊದಲಾದವುಗಳು ವೀರಭದ್ರನ ಪ್ರಸಿದ್ಧ ನೆಲೆಗಳಾಗಿವೆ. ಹಾಗೆಯೇ ವೀರಭದ್ರನ ಆಚರಣೆಯ ವಿಧಿವಿಧಾನಗಳು ವಿಶಿಷ್ಟಪೂರ್ಣವಾಗಿವೆ. ಗುಗ್ಗಳ ಸೇವೆ, ಪುರವಂತಿಕೆ ಸೇವೆ, ವೀರಭದ್ರ ಕುಣಿತ, ಕಾಸೆಕುಣಿತ, ವೀರಗಾಸೆ ಮೊದಲಾದ ಆಚರಣೆ ಮತ್ತು ಕಲೆಗಳ ಪ್ರದರ್ಶನವನ್ನು ಈಗಲೂ ಕಾಣಬಹುದು.

### ೨. ಬೀರದೇವರ ಪರಿಷ್ಕೃತರೂಪ ವೀರಭದ್ರ

ಕುರುಬರ ಬೀರದೇವ ಮತ್ತು ಲಿಂಗಾಯತ (ವೀರಶೈವ)ರ ವೀರಭದ್ರ ದೈವಗಳಲ್ಲಿ ಅನೇಕ ಸಾಮ್ಯತೆಗಳನ್ನು ನಾವು ಕಾಣುತ್ತೇವೆ. ಬೀರಪ್ಪನ ಉಪಾಸಕರಾದ ವೀತರಗಾರರಂತೆ ವೀರಭದ್ರನಿಗೆ ಪುರವಂತೆಂಬ ಉಪಾಸಕ ರಿದ್ದಾರೆ. ಇವರಿಬ್ಬರು ತೊಡುವ ಉಡುಗೆಗಳು, ಬಳಸುವ ಗೌರವ ಬಿರುದುಗಳು, ನಡೆಸುವ ಆಚರಣೆಗಳಲ್ಲಿ ಅಷ್ಟೇನೂ ವ್ಯತ್ಯಾಸಗಳಿಲ್ಲ. ವೀರಭದ್ರನ ಮಗ್ಗಲಿರುವ ದಕ್ಷಬ್ರಹ್ಮನ ವಿಗ್ರಹಕ್ಕೆ ಹೊಂದಿಕೊಂಡು ಕುರುಬರ ಸಾಕುಪ್ರಾಣಿಯಾದ ಟಗರಿನ ತಲೆಯಿರುವುದು. ಕುರಿಗಳಿಗೆ ತಪ್ಪಲು ಕೀಳಲು ಹಾಗೂ ಕಾಯಲು ಬಳಸುವ ಕೋಲಿಗೆ ದೋಟಿ ಎಂದು ಕರೆಯುತ್ತಾರೆ. ಈ ದೋಟಿಯು ವೀರಭದ್ರನ ವಿಗ್ರಹದ ಮಗ್ಗಲು ಕಡ್ಡಾಯವಾಗಿ ಇರುತ್ತದೆ. ಕೆಲವು ದೇವಾಲಯಗಳಲ್ಲಿ ಬೀರಪ್ಪ–ವೀರಭದ್ರ ಜೊತೆಜೊತೆಯಾಗಿಯೂ ಪೂಜೆಗೊಳ್ಳುತ್ತಿರುವುದು. ಇಂಥ ಅಂಶಗಳನ್ನು ಗಮನಿಸಿದರೆ ವೀರಭದ್ರನು ಬೀರಪ್ಪನ ಪರಿಷ್ಕೃತರೂಪವೆಂಬುದು ಸ್ಪಷ್ಟವಾಗುತ್ತದೆ. ಇನ್ನೂ ಮುಂದುವರಿದು ಎಂ.ಎಂ. ಕಲಬುರ್ಗಿ ಅವರು ಹೇಳುವಂತೆ "ಎರಡನೆಯ ಘಟ್ಟದಲ್ಲಿ ಹೊಸ ವೀರಣ್ಣ (ವೀರಭದ್ರ) ಆಕಾರಗೊಳ್ಳಲಾಗಿ, ಮೊದಲನೆಯ ಘಟ್ಟದ ಬೀರಪ್ಪನನ್ನು ಮುದಿವೀರಣ್ಣ ಅಂದರೆ ಕುರುಬರ ಬೀರಪ್ಪನೆಂದು ಹೇಳಬೇಕಾಗುತ್ತದೆ."[೪]

ಕುರುಬರ ಆರಾಧ್ಯದೈವನಾದ ಬೀರಪ್ಪನು ಯಾವುದೋ ಒಂದು ಹಂತದಲ್ಲಿ ವೀರಭದ್ರನಾಗಿ ಪರಿಷ್ಕೃತಗೊಂಡ ಬಗೆಗೆ ಕೆಲವು ಕುರುಹುಗಳನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಗುಂಥರ್ ಸೊಂತೈಮರ್ ರಾ.ಚಿಂ. ಢೇರೆ, ಎಂ.ಎಂ. ಕಲಬುರ್ಗಿ ಮತ್ತು ಗೋವಿಂದಮೂರ್ತಿ ದೇಸಾಯಿಯವರು ಚರ್ಚಿಸಿದ್ದಾರೆ. ಆ ಹೇಳಿಕೆಗಳನ್ನು ಇಲ್ಲಿ ಗಮನಿಸಬಹುದಾಗಿದೆ.

### ೧. ಗುಂಥರ ಸೊಂಥಾಯಮರ

"ಗೋಧನಪಾಲಕನಾದ ವಿಠಲನು ಗೊಲ್ಲರ (ಗವಳಿಗಳ) ಆರಾಧ್ಯ ದೈವನಿದ್ದಂತೆ, ಕುರಿ–ಟಗರುಗಳ ಪಾಲಕನಾದ ಬೀರದೇವರು ಕುರುಬರ ಆರಾಧ್ಯದೈವ. ಈ ಬೀರದೇವರೇ ವೀರಶೈವರ ಪ್ರಭಾವದಿಂದ ವೀರಭದ್ರನಾಗಿರಬೇಕು ಅಥವಾ ವೀರಭದ್ರೀಕರಣಗೊಂಡರಿಬೇಕು."[೫]

### ೨. ರಾ.ಚಿಂ. ಢೇರೆ

"ಬೀರೋಬಾ/ಬೀರಪ್ಪ ಈ ಹೆಸರಿನಲ್ಲಿಯ ಬೀರ ಎಂಬ ಪದವು ಧ್ವನಿ ಸಾಮ್ಯದಿಂದಾಗಿ ಪ್ರತಿಷ್ಠಿತ ಶೈವಧರ್ಮದ ವೀರಭದ್ರನ ನೆನಪಾಗುವುದು ಸಹಜ. ಅಲ್ಲದೇ ಉಗ್ರ ಸ್ವಭಾವದ ದೃಷ್ಟಿಯಿಂದಲೂ ನೋಡಿದರೆ ಬೀರಪ್ಪ ಮತ್ತು ವೀರಭದ್ರರಲ್ಲಿ ಸಾಮ್ಯವಿದೆ. ಹೆಸರಿನಲ್ಲಿಯ ಉಚ್ಚಾರ ಸಾಮ್ಯ ಹಾಗೂ ಉಗ್ರ ಸ್ವಭಾವದಲ್ಲಿಯ ಸಾಮ್ಯವು ಬೀರಪ್ಪನನ್ನು ವೀರಭದ್ರೀ ಕರಣಗೊಳಿಸಲು ತುಂಬಾ ಸುಲಭವಾಯಿತು. ವೀರಶೈವರು ಈ ಹೊಸ ಗೋವಳಿಗರ ಪೂರ್ವಶ್ರದ್ಧೆಯನ್ನು ಎತ್ತರಿಸಿ ಕೊಳ್ಳಲು ಮತ್ತು ಅವರ ಪೂರ್ವಶ್ರದ್ಧೆಯ ಸಂತರ್ಪಣಗೊಳಿಸಿ ಕೊಳ್ಳಲು ಬೀರಪ್ಪನ ಹಲವು ಸ್ಥಳಗಳನ್ನೆಲ್ಲ ವೀರಭದ್ರೀಕರಣ ಗೊಳಿಸಿದರು. ಆಂಧ್ರ–ಕರ್ನಾಟಕ–ಮಹಾರಾಷ್ಟ್ರದಲ್ಲಿಯ ವೀರಶೈವರ ಪ್ರಭಾವ ಕ್ಷೇತ್ರದಲ್ಲಿ ವೀರಭದ್ರೋಪಾಸನೆಗೆ ವಿಶೇಷ ಮಹತ್ವ ಪ್ರಾಪ್ತವಾಗಲು ಈ ಸಾಮಾಜಿಕ ಹಿನ್ನೆಲೆಯೇ ಕಾರಣವಾಗಿದೆ."

"ವಿರೂಪಾಕ್ಷನು ವೀರಭದ್ರನ ಅಂದರೆ ಮೂಲದ ವಿರೂಪನ–ಬೀರಪ್ಪನ ಒಂದು ಪರ್ಯಾಯ ನಾಮವಾಗಿ ರುತ್ತದೆ."[೬]

### ೩. ಎಂ.ಎಂ. ಕಲಬುರ್ಗಿ

"ಕುರುಬರ ಬೀರಪ್ಪನ ಪರಿಷ್ಕೃತರೂಪ ಲಿಂಗಾಯತರ ವೀರಭದ್ರ."[೭]



ವೀರಭದ್ರೇಶ್ವರ ದೇವಸ್ಥಾನ ಎಡೂರ



ಬೀರಪ್ಪನ ಮೂರ್ತಿ

### ೪. ಗೋವಿಂದಮೂರ್ತಿ ದೇಸಾಯಿ

"ವೀರಲಿಂಗ–ಬೀರದೇವರು–ವಿಠ್ಠಲ–ವೀರಭದ್ರ ಒಂದರಲ್ಲಿ ಒಂದು ಸಮನ್ವಯಗೊಂಡಂತೆ ಕಾಣುತ್ತವೆ."[೮]

ಈ ಹೇಳಿಕೆಗಳನ್ನು ಅವಲೋಕಿಸಿದಾಗ ಬೀರಪ್ಪನ ಮುಂದುವರಿದ ರೂಪವೇ ವೀರಭದ್ರ ಎಂಬುದು ಸ್ಪಷ್ಟವಾಗುತ್ತದೆ.

### ೩. ಹಂಪೆಯ ವಿರೂಪಾಕ್ಷ ಬೀರಪ್ಪನೇ ?

ಬೀರಪ್ಪ ವೀರಭದ್ರರಂತೆ ಆರಾಧನೆಗೊಳ್ಳುತ್ತಿರುವ ಪ್ರಸಿದ್ಧ ದೈವಗಳಲ್ಲಿ ವಿರೂಪಾಕ್ಷನೂ ಒಬ್ಬ. ವಿಶ್ವಪರಂಪರೆಯ ತಾಣಗಳಲ್ಲಿ ಒಂದಾದ ಹಂಪೆ ಈತನ ಪ್ರಮುಖ ನೆಲೆ. ವಿಜಯನಗರ ಸಾಮ್ರಾಜ್ಯದ ಅಧಿದೈವನಾದ ವಿರೂಪಾಕ್ಷನನ್ನು ಹರಿಹರ ರಾಘವಾಂಕರಾದಿಯಾಗಿ ಅನೇಕ ಕವಿಗಳು ತಮ್ಮ ಕೃತಿಗಳ ಮೂಲಕ ಮನದುಂಬಿ ಸ್ತುತಿಗೈದಿರುವರು. ಅಷ್ಟೇ ಏಕೆ, ವಿಜಯನಗರದ ಶಾಸನಗಳಲ್ಲಿ ರಾಜನ ಹೆಸರಿರದೆ "ಶ್ರೀ ವಿರೂಪಾಕ್ಷ" ಎಂಬ ಅಂಕಿತದೊಂದಿಗೆ ಮುಕ್ತಾಯ ಗೊಳ್ಳುತ್ತದೆ. ರಾ.ಚಿ. ಢೇರೆಯವರು ವಿರೂಪಾಕ್ಷನ ಮೂಲವನ್ನು ಬೀರಪ್ಪನ ಮೂಲಕ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಿದ್ದಾರೆ. ಅವರೇ ಹೇಳುವಂತೆ "ವಿರೂಪಾಕ್ಷನು ವೀರಭದ್ರನ ಅಂದರೆ ಮೂಲದ ವಿರೂಪನ–ಬೀರಪ್ಪನ ಒಂದು ಪರ್ಯಾಯ ನಾಮವಾಗಿರುತ್ತದೆ."[೯] ಇನ್ನೂ ಮುಂದುವರೆದು ಎಂ.ಎಂ. ಕಲಬುರ್ಗಿ ಅವರು ಲೇಖನವೊಂದನ್ನು ಚರ್ಚಿಸುತ್ತಾ "ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ ಹುಕ್ಕಬುಕ್ಕರು ಕುರುಬರೆಂಬುದನ್ನು, ಹಂಪೆಯ ಸುತ್ತಮುತ್ತ ಕುರುಬರು ಅಧಿಕ ಸಂಖ್ಯೆಯಲ್ಲಿರುವುದನ್ನು ನೆನೆದರೆ, ಇಲ್ಲಿಯ ವಿರೂಪಾಕ್ಷಲಿಂಗ ಮೂಲತಃ ಕುರುಬರ ಆರಾಧ್ಯದೈವ ಬೀರಪ್ಪನಾಗಿರಬಹುದೆಂಬ ನಂಬುಗೆ ಇನ್ನೂ ಗಟ್ಟಿಯಾಗುತ್ತದೆ."[೧೦]

ಬೀರಪ್ಪನ ವೀರಗಾರರು ಹಾಗೂ ವೀರಭದ್ರನ ಪುರವಂತರ ಆಚರಣೆಗಳಲ್ಲಿ ಸಮಾನ ಅಂಶಗಳಿರುವುದು, ವೀರಭದ್ರನ ವಿಗ್ರಹದ ಮಗ್ಗುಲಲ್ಲಿ ಕುರುಬರ ಟಗರಿನ ಚಿತ್ರವಿರುವುದು, ಕುರುಬರ ದೋಟಿಗಳಿರುವುದನ್ನು ಗಮನಿಸಿ ಕಲಬುರ್ಗಿಯವರು "ವೀರಭದ್ರನು ಬೀರಪ್ಪನ ಪರಿಷ್ಕೃತ ರೂಪ" ಎಂದು ಹೇಳಿರುವುದು ಸರಿಯಾಗಿದೆ. ಈ

ಹೇಳಿಕೆಯನ್ನು ಬೆಂಬಲಿಸುವಂತೆ ನಾನು ಚಳ್ಳಕೆರೆ ಪರಿಸರದಲ್ಲಿ ಕ್ಷೇತ್ರಕಾರ್ಯ ಕೈಕೊಂಡ ಸಂದರ್ಭದಲ್ಲಿ ಗೌರಿಬಿದನೂರು ತಾಲೂಕಿನ ನಗರಗೆರೆ ಗ್ರಾಮಕ್ಕೆ ಸಂಬಂಧಿಸಿದ ತಾಮ್ರಪತ್ರದ ಪ್ರತಿಯೊಂದು ದೊರೆತಿತ್ತು. ಬೀರಪ್ಪ ಮತ್ತು ವೀರಭದ್ರನಿಗೆ ಸಂಬಂಧಿಸಿದಂತೆ ಕುರುಬರು ಮತ್ತು ಬಣಜಿಗರ ನಡುವೆ ಹುಟ್ಟಿಕೊಂಡ ವ್ಯಾಜ್ಯವನ್ನು ಬಗೆಹರಿಸಿದ ವಿವರಗಳನ್ನು ಈ ತಾಮ್ರಶಾಸನ ತಿಳಿಸುತ್ತದೆ.[೧೧] ಈ ವ್ಯಾಜ್ಯ ಹುಟ್ಟಿಕೊಂಡಿರುವುದಕ್ಕೆ ಬಹುಮುಖ್ಯ ಕಾರಣ, ವೀರಭದ್ರನಿಗೂ ಮತ್ತು ಬೀರದೇವರಿಗೂ ಬಿರುದುಗಳು ಒಂದೇ. ಆದರೆ ಕುರುಬರು ಬೀರದೇವರ ಉತ್ಸವ ನಡೆಯುವಾಗ ಈ ಬಿರುದುಗಳನ್ನು ಘೋಷಿಸಬಾರದೆಂಬುದು ಬಣಜಿಗರ ತಕರಾರು. ಈ ಬಿರುದುಗಳನ್ನು ಬಹುಹಿಂದಿನಿಂದಲೂ ಕುರುಬರು ಘೋಷಿಸುತ್ತಿದ್ದರು. ಬೀರದೇವ ವೀರಭದ್ರನಾಗಿ ರೂಪಾಂತರ ಗೊಂಡಾಗ ಈ ಬಿರುದುಗಳು ಸಹಜವಾಗಿ ವೀರಭದ್ರನ ಆಚರಣೆಯಲ್ಲಿ ಮುಂದುವರೆದವು. ಈಗಲೂ ಸಹಿತ ಕುರುಬರಲ್ಲಿ ಈರಗಾರ ಅಥವಾ ವೀರಗಾರರೆಂಬ ಭಕ್ತವರ್ಗವಿದೆ. ಬೀರಪ್ಪ ರೇವಣಸಿದ್ಧ ಮಾಳಿಂಗರಾಯ ಮೊದಲಾದ ದೈವಗಳ ಜಾತ್ರೆ ಉತ್ಸವಗಳಲ್ಲಿ, ಕುರುಬರ ಸಾಮಾಜಿ ಧಾರ್ಮಿಕ ಕಾರ್ಯಗಳಲ್ಲಿ ವೀರಗಾಸೆ ಧರಿಸಿಕೊಂಡು ಕಬ್ಬಿಣದ ಸಲಾಕೆಯಿಂದ ಹೊಕ್ಕುಳ ಹೊಟ್ಟೆ ಬಾಯಿ ಕತ್ತು ನಾಲಿಗೆಗೆ ಚುಚ್ಚಿಕೊಂಡು ತಮ್ಮ ಉಗ್ರಭಕ್ತಿಯನ್ನು ತೋರ್ಪಡಿಸುತ್ತಿರುವುದನ್ನು ಕಾಣಬಹುದು. ಇವರನ್ನು ಈರಗಾರರು ಎಂದು ಕರೆಯಲಾಗುತ್ತಿದೆ. ಇಂಥ ಸಂದರ್ಭದಲ್ಲಿ ಛತ್ರಿ ಚಾಮರ ಕಳಸ ಹಗಲುದೀವಟಿಗೆ ಮುಂತಾದ ಗೌರವ–ಬಿರುದುಗಳನ್ನು ಬಳಸುವುದು ಎರಡೂ ಪರಂಪರೆಯಲ್ಲಿ ಕಾಣಬಹುದು. ಈ ಕಾರಣಕ್ಕಾಗಿ ಕುರುಬರು ಇಂಥ ಗೌರವ–ಬಿರುದುಗಳನ್ನು ಧರಿಸಿಕೊಳ್ಳಬಾರದೆಂದು ಬಣಜಿಗರು ವ್ಯಾಜ್ಯ ತೆಗೆದಂತಿದೆ. ಕುರಬರು ಹಂಪಿಗೆ ಬಂದು ಈ ವ್ಯಾಜ್ಯವನ್ನು ರಾಜನ ಸಮ್ಮುಖದಲ್ಲಿ ಪರಿಹರಿಸಿಕೊಂಡ ಬಗ್ಗೆ ಪ್ರಸ್ತುತ ಶಾಸನ ವಿವರಿಸುತ್ತಿದೆ. ಶುಭಕಾರ್ಯಕ್ಕೆ ಕುರುಬರು ಮುಂದೆ ಇರಬೇಕು. ಅವರ ಕಂಬಳಿ ಗದ್ದುಗೆ ಬೇಕು. ಆದರೆ ಅವರು ಉತ್ಸವಗಳಲ್ಲಿ ಗೌರವ–ಬಿರುದುಗಳನ್ನು ಧರಿಸಲಿಕ್ಕೆ ಅವಕಾಶ ವಿಲ್ಲವೇ? ಎಂದು ಪ್ರಶ್ನಿಸುವುದರ ಮೂಲಕ ಅರಸರು ಹಲವು ಗಣ್ಯರ ಸಮ್ಮುಖದಲ್ಲಿ ಈ ವ್ಯಾಜ್ಯವನ್ನು ಬಗೆಹರಿಸಿ, "ಕುರುಬರಿಗೂ ಬಣಜಿಗರಿಗೂ ಸ್ವಾಮಿಗಳಿಗೂ ಮುಂದೆ ಏನೂ ವ್ಯಾಜ್ಯಕ್ಕೆ ಕಾರಣವಿಲ್ಲ ಎಂದು ಹೇಳಿ ವೀರಭದ್ರ ದೇವರಿಗೂ ಬೀರದೇವರಿಗೂ ಒಂದೇ ಸಮೂಹವೆಂದು ಹೇಳಿ, ಕುರುಬರಿಗೆ ಸಾವಿರ ಬಿರುದು ಸಲ್ಲುವವು" ಎಂದು ಎರಡೂ ಸಮುದಾಯವನ್ನು ಸಮಾಧಾನಪಡಿಸಲಾಗಿದೆ. ಈ ಶಾಸನದ ಮೂಲಕ ಕೆಲವು ಸ್ವಾರಸ್ಯಕರವಾದ ಸಂಗತಿಗಳು ನಮ್ಮ ಗಮನ ಸೆಳೆಯುತ್ತವೆ. ಈ ವ್ಯಾಜ್ಯ ಹಂಪೆಯಲ್ಲಿಯೇ ಬಗೆಹರಿಯಬೇಕೆಂದು ತೀರ್ಮಾನಿಸಿದ್ದು, ಉಜ್ಜಿನಿ, ಚಿತ್ರಕಲ್ಲು, ಕಣೆಕಲ್ಲು, ಗುಳಿಸಂದ್ರ, ಲಕ್ಕೆಹಳ್ಳಿ ಮೊದಲಾದ ಮೂವತ್ತಾರು ಗ್ರಾಮದ ಕುರುಬರು ಬೀರದೇವರ ಪಲ್ಲಕ್ಕಿಯೊಂದಿಗೆ ಹಂಪೆಗೆ ಬಂದದ್ದು, ಅಲ್ಲಿ ಗಂಗೆಪೂಜೆ ಮಾಡಿಸಿದ್ದು, ತೇರುಬಜಾರಿನಲ್ಲಿ ಬೀಡುಪಟ್ಟಿದ್ದು, ಹೀಗೆ ಅನೇಕ ಮಾಹಿತಿಗಳನ್ನು ಇಲ್ಲಿ ದಾಖಲಿಸಲಾಗಿದೆ.

ಇನ್ನೂ ಮುಂದುವರೆದು ಹೇಳುವುದಾದರೆ, ರಾಯಚೂರು ಜಿಲ್ಲೆಯ ಮಸ್ಕಿ ಶಾಸನಗಳಲ್ಲಿ "ಶ್ರೀ ಬೀರೂಪಾಕ್ಷಲಿಂಗಾಯ ನಮಃ" ಎಂಬ ಪಾಠವಿರುದು.[೧೨] ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಹಂಪೆಯ ವಿರೂಪಾಕ್ಷ ಮೂಲದಲ್ಲಿ ಬೀರಪ್ಪನಾಗಿದ್ದನೆಂದು ಹೇಳಬಹುದಾಗಿದೆ. ವಿರೂಪಾಕ್ಷ ದೇವಲಯದ ಬಲಭಾಗದ ಎತ್ತರವಾದ ಗುಡ್ಡಪ್ರದೇಶದಲ್ಲಿ ವಿರೂಪಾಕ್ಷನ ಮೂಲವೆಂದು ಹೇಳುವ ದೇವಾಲಯವಿದೆ. ಇದು ಆರಂಭದಲ್ಲಿ ಬೀರಪ್ಪನ ಗದ್ದುಗೆಯಾಗಿತ್ತು. ನಂತರದಲ್ಲಿ ವಿರುಪಾಕ್ಷನ ದೇವಾಲಯ ವಾಗಿತ್ತೆಂಬುದು ಹಂಪಿಯ ಸುತ್ತಮುತ್ತಲಿನ ಜನರ ಅಭಿಪ್ರಾಯವಾಗಿದೆ. ಇದಕ್ಕೆ ಪುಷ್ಟಿಯನ್ನು ನೀಡುವಂತೆ ಹಂಪಿಯ ಪರಿಸರ, ಅದರಲ್ಲಿಯೂ ಸಿರಗುಪ್ಪ ತೆಕ್ಕಲಕೋಟೆ ಭಾಗದ ಕುರುಬರು ಪ್ರತಿವರ್ಷ ಶ್ರಾವಣ ಮಾಸದಲ್ಲಿ ಈ ದೇವಸ್ಥಾನಕ್ಕೆ ಬಂದು ಪೂಜೆ ಸಲ್ಲಿಸಿ ಪ್ರಸಾದ ವಿತರಿಸಿ ಹೋಗುವ ಪದ್ಧತಿಯನ್ನು ಇಂದಿಗೂ ನಡೆಸಿಕೊಂಡು ಬಂದಿದ್ದಾರೆ.

### ೪. ಬೀರಪ್ಪ–ವೀರಭದ್ರರ ಕ್ಷೇತ್ರಗಳು

ಬೀರಪ್ಪನನ್ನು ವೀರಭದ್ರನೊಂದಿಗೆ ಸಮನ್ವಯ ಗೊಳಿಸುವ ಪ್ರಕ್ರಿಯೆ ಆರಂಭವಾದುದು ಮಹಾರಾಷ್ಟ್ರದಲ್ಲಿ. ಅದೂ ಲಿಂಗಾಯತ (ವೀರಶೈವ) ಪ್ರಭಾವವು ಗಾಢವಾದ ಮೇಲೆ ಎಂದು ಹೇಳಬಹುದು. ಮಹಾರಾಷ್ಟ್ರದ ನಗರ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ಬೀರಪ್ಪನನ್ನು ವೀರಭದ್ರನೆಂದು ಪೂಜಿಸುತ್ತಾರೆ. ಉದಾಹರಣೆಗೆ ಕೆಲವು ಕ್ಷೇತ್ರಗಳನ್ನು ಇಲ್ಲಿ ಗಮನಿಸಬಹುದು ಮಹಾರಾಷ್ಟ್ರದ ಪುಣತಾಂಬೆ ತಾಲ್ಲೂಕಿನ ಧೋತ್ರೆ ಎಂಬ ಊರಲ್ಲಿ ಬೀರಪ್ಪನಿಗೆ ವೀರಭದ್ರನೆಂಬ ಪ್ರತಿಷ್ಠೆ ದೊರಕಿದೆ. ಸ್ಥಿರಜೀವಿ ಕುರುಬರ ಮೇಲೆ ಲಿಂಗಾಯತ ಸಂಪ್ರದಾಯದ ಪ್ರಭಾವವನ್ನು ಕಾಣಬಹುದಾಗಿದೆ.

ಬೀರಪ್ಪನು ಪರಿಷ್ಕೃತಗೊಂಡು ವೀರಭದ್ರನಾದುದಕ್ಕೆ ಒಂದು ಉತ್ತಮ ನಿದರ್ಶನ., ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಎಡೂರು ಕ್ಷೇತ್ರ, ಕೃಷ್ಣಾನದಿಯ ಎಡದಂಡೆಯ

ಮೇಲೆ ನೆಲೆಸಿದ ಎಡೂರು, ವೀರಭದ್ರನ ಪ್ರಮುಖ ಕ್ಷೇತ್ರವಾಗಿದೆ. ಇದೇ ಊರಿನಲ್ಲಿ ಕಾಡದೇವರು ಹೆಸರಿನ ಮಠವೊಂದಿದೆ. ಈ ಮಠದ ಪೀಠಾಧ್ಯಕ್ಷರೇ ವೀರಭದ್ರ ಮಂದಿರದ ಪೂಜಾರಿಗಳಾಗಿದ್ದಾರೆ. ಈ ಮಠದ ಮೂಲಪೀಠವು ಕೊಲ್ಹಾಪುರ ಸನಿಹದ ಸಿದ್ದಗಿರಿಯ ಕಚೇರಿ ಎಂಬಲ್ಲಿದೆ. ಎಡೂರು ಗ್ರಾಮದಿಂದ ಒಂದು ಮೈಲು ಅಂತರದಲ್ಲಿ ಕೋಟೆಯಂತಹ ಪ್ರಾಕಾರದೊಳಗೆ ಭವ್ಯವಾದ ವೀರಭದ್ರ ದೇವಾಲಯವಿದೆ. ಇಲ್ಲಿನ ವೀರಭದ್ರನು ಮೂರ್ತಿರೂಪದಲ್ಲಿದ್ದಾನೆ. ಜಾತ್ರೆ ಅಥವಾ ಪಲ್ಲಕ್ಕಿಯ ಮೆರವಣಿಗೆಗಾಗಿ ಪಂಚಧಾತುಗಳಿಂದ ತಯಾರಿಸಿದ ಉತ್ಸವಮೂರ್ತಿಯಿದೆ. ಖಡ್ಗ ತ್ರಿಶೂಲ ಬಿಲ್ಲು, ಬಾಣಗಳಿಂದ ಕೂಡಿದ ಎಂಟು ಇಂಚಿನ ಚತುರ್ಭುಜ ವೀರಭದ್ರನ ಉತ್ಸವ ಮೂರ್ತಿಯು ಹಿತ್ತಾಳೆ ಪ್ರಭಾವಳಿಯ ಮಧ್ಯಭಾಗದಲ್ಲಿ ಕೂಡ್ರಿಸಲಾಗಿದೆ.

ವೀರಭದ್ರದೇವರ ಸ್ಥಾಪನೆ ಮಾಡುವ ಮುನ್ನ ಈ ಕ್ಷೇತ್ರದ ಪರಿಸರದ ವರ್ಣನೆ ಕುತೂಹಲಕಾರಿಯಾಗಿದೆ. "ಆ ಕಾಲದಲ್ಲಿ ಶ್ರೀ ವೀರಭದ್ರಲಿಂಗದ ಖ್ಯಾತಿ ಅಷ್ಟೊಂದಿರಲಿಲ್ಲ. ಇಲ್ಲಿಯ ಪೂರ್ವ ಕಾಲದ ವಿಶಾಲ ಯಜ್ಞಕುಂಡದ ಸುತ್ತಲಿನ ಮಣ್ಣು ಕುಸಿದು ಬಿದ್ದು ಅದರೊಳಗೆ ಹುಲ್ಲು-ಪೊದರು ಬೆಳೆಯಿತು. ಅಂದರೆ ಶ್ರೀ ವೀರಭದ್ರಲಿಂಗವು ನೆಲದೊಳಗೆ ಹೂತಿ ಹೋಗಿ ನಾಮಾವಶೇಷಗೊಂಡಿತು. ಆ ಯಜ್ಞಕುಂಡದ ಮೇಲಿನ ಕಾಡಿನಲ್ಲಿ ದನ ಕುರಿಗಳನ್ನು ಮೇಯಲು ಬಿಡುವ ಕುರುಬರು ಮತ್ತು ದನಗಾಹಿಗಳು ತಮ್ಮ ಬೀರ (ಬೀರಪ್ಪ) ಎಂಬ ದೇವರನ್ನು ಸ್ಥಾಪನೆ ಮಾಡಿದರು ಮತ್ತು ಅಲ್ಲೊಂದು ಪುಟ್ಟ ಮಂದಿರವನ್ನು ಕಟಿದರು. ಶ್ರೀ ವೀರಭದ್ರನ ಸನಿಹ ಅಥವಾ ದೂರಪ್ರದೇಶದಲ್ಲಿ ವಾಸಿಸುವ ಎಷ್ಟೋ ಭಕ್ತರು ಈ ಕ್ಷೇತ್ರದರ್ಶನಕ್ಕೆ ಬರುತ್ತಿದ್ದರು. ಆಗವರು ಈ ಬೀರನನ್ನೇ ವೀರ (ಶ್ರೀ ವೀರಭದ್ರ)ನೆಂದು ತಿಳಿದು ಪೂಜೆ ಗುಗ್ಗುಳಗಳಿಂದ ಆರಾಧಿಸಿ ಸಂತುಷ್ಟರಾಗಿ ಮರಳುತ್ತಿದ್ದರು."[೧೩]

ಇನ್ನು ವಿಶೇಷವೆಂದರೆ, ಈ ದೇವಾಲಯದ ಗರ್ಭಗುಡಿ ಹೊರಮಗ್ಗಲು ಒಂದು ಮಾಡವಿದೆ. ಇದನ್ನು ಬೀರಪ್ಪನ ಗದ್ದುಗೆ ಎಂದು ಕರೆಯಲಾಗುತ್ತದೆ. ಇತ್ತೀಚೆಗೆ ಹೆಗಲ ಮೇಲೆ ಕಂಬಳಿ ಹೊದ್ದ ಬೀರಪ್ಪನ ಹೆಸರಿನ ಪುರುಷ ವಿಗ್ರಹವನ್ನು ಸ್ಥಾಪಿಸಲಾಗಿದೆ.

ಈವರೆಗಿನ ವಿವೇಚನೆಯಿಂದ ಕಂಡ ಬರುವ ಸಂಗತಿಗಳನ್ನು ಕ್ರೋಢಿಕರಿಸಿ ಈ ಕೆಳಗಿನಂತೆ ಹೇಳಬಹುದಾಗಿದೆ.[೧] ಬೀರಪ್ಪ ಯಾವುದೋ ಕಾಲಘಟ್ಟದಲ್ಲಿ ವೀರಭದ್ರನಾಗಿ ಪ್ರಸಿದ್ಧಿಗೊಂಡಿದ್ದಾನೆ.[೨] ಈ ಎರಡೂ ದೈವಗಳ ಸಂಪ್ರದಾಯ ನಂಬಿಕೆ ಮತ್ತು ಆಚರಣೆಗಳಲ್ಲಿ ಸಾಕಷ್ಟು ಸಾಮ್ಯತೆಗಳನ್ನು ಕಾಣಬಹುದಾಗಿದೆ.[೩] ಬೀರಪ್ಪನೇ ವೀರಭದ್ರನಾಗಿ ರೂಪಾಂತರಗೊಂಡಿರುವುದಕ್ಕೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಎಡೂರು ಗ್ರಾಮದ ವೀರಭದ್ರೇಶ್ವರ ದೇವಾಸ್ಥನ ಉತ್ತಮ ನಿದರ್ಶನವಾಗಿದೆ.[೪] ಹಂಪೆಯ ವಿರೂಪಾಕ್ಷನ ಮೂಲವನ್ನು ಬೀರಪ್ಪನಲ್ಲಿ ಗುರುತಿಸಬಹುದಾಗಿದೆ.[೫] ಬೀರಪ್ಪ ವೀರಭದ್ರ ಮತ್ತು ವಿರೂಪಾಕ್ಷ ದೈವಗಳ ಕುರಿತು ವ್ಯಾಪಕ ಕ್ಷೇತ್ರಕಾರ್ಯ ನಡೆಸಿ ಅಧ್ಯಯನ ಕೈಕೊಂಡಾಗ ಅನೇಕ ಹೊಸ ಸಂಗತಿಗಳು ತಿಳಿಯುವ ಸಾಧ್ಯತೆಗಳಿವೆ.



## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ಸಿದ್ಧಪ್ಪ ಮೇಟಿ ಹಾಡಿದ ಜನಪದ ಹಾಲುಮತ ಮಹಾರಾಷ್ಟ್ರ, ರಸ್ತಾಪುರ ಭೀಮಕವಿಯ ಹಾಲುಮತೋತ್ತೇಜಕ ಪುರಾಣದಲ್ಲಿ ಬೀರಪ್ಪನ ಚರಿತ್ರೆ ನಿರೂಪಗೊಂಡಿದೆ.

೨. ಹೆಚ್ಚಿನ ಮಾಹಿತಿಗಾಗಿ ನೋಡಿ : **ಶಾಸನಗಳಲ್ಲಿ ಕುರಬರು, ಹಾಲುಮತ ಸಂಸ್ಕೃತಿ,** ಸಂ. ೧, ಪುಟ-೧.

೩. ಆರ್.ಸಿ. ಹಿರೇಮಠ (ಸಂ), **ಬಸವಣ್ಣನವರ ವಚನಗಳು,** ಪುಟ ೨೨೩.

೪. ಎಂ.ಎಂ. ಕಲಬುರ್ಗಿ, **ಮಾರ್ಗ** (ಸಂ-೪) (೨೦೦೪), ಪುಟ-೩೯೫, ಸಪ್ನ ಬುಕ್ ಹಾಸ್, ಬೆಂಗಳೂರು.

೫. Gunther Somthiemer, *A Note on Biroba the Dhanagar God of Maharastra.*

೬ ರಾ.ಚಿ. ಢೇರೆ, **ಶ್ರೀ ವಿಠ್ಠಲ ಒಂದು ಮಹಾಸಮನ್ವಯ,** (ಅನು-ಚಂದ್ರಕಾಂತ ಪೋಕಳೆ), ಪುಟ ೭೧, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೨.

೭. ಎಂ.ಎಂ. ಕಲಬುರ್ಗಿ, **ಮಾರ್ಗ** ಸಂ. ೪ರ (೨೦೦೪), ಪುಟ ೩೭೫.

೮. ಗೋವಿಂದಮೂರ್ತಿ ದೇಸಾಯಿ, ಹಂಪೆಯ ವಿರೂಪಾಕ್ಷ ಬೀರೇದವರೇ ?, **ಸಂಯುಕ್ತ ಕರ್ನಾಟಕ,** ೩೦-೫-೧೯೯೩.

೯. ಡಾ. ಚಿ. ಢೇರೆ, **ಶ್ರೀ ವಿಠ್ಠಲ ಒಂದು ಮಹಾಸಮಸನ್ವಯ,** (ಅನು: ಚಂದ್ರಕಾಂತ ಪೋಕಳೆ).

೧೦. ಎಂ.ಎಂ. ಕಲಬುರ್ಗಿ, **ಮಾರ್ಗ.** ಸಂ. ೩ (೧೯೯೮), ಪುಟ ೨೨೧, ನರೇಶ್ ಅಂಡ್ ಕಂಪೆನಿ, ಬೆಂಗಳೂರು.

೧೧. ಹೆಚ್ಚಿನ ಮಾಹಿತಿಗಾಗಿ ನೋಡಿ : ಕುರುಬರಿಗೆ ಸಂಬಂಧಿಸಿದ ವಿಜಯನಗರದ ಅಪ್ರಕಟಿತ ತಾಮ್ರಶಾಸನ, **ಹಾಲುಮತ ಸಂಸ್ಕೃತಿ,** ಸಂ-೧, ಪುಟ-೨೩.

೧೨. **ರಾಯಚೂರು ಜಿಲ್ಲೆಯ ಶಾಸನಗಳು,** ಕ.ವಿ.ವಿ. ಹಂಪಿ, ಸಂ. ೭, ಲಿಂಗಸುಗೂರು ೩೬, ೩೯.

೧೩. ರಾ.ಚಿ. ಢೇರೆ, **ಶ್ರೀ ವಿಠ್ಠಲ ಒಂದು ಮಹಾಸಮನ್ವಯ,** (ಅನು: ಚಂದ್ರಕಾಂತ ಪೋಕಳೆ), ಪುಟ ೭೩.

೮೦

# ಭೃಂಗಿ ಸೇವೆ

**ಡಾ. ಲಿಂಗದಹಳ್ಳಿ ಹಾಲಪ್ಪ***

**ಕು**ರುಬರು ಶೈವ ಪರಂಪರೆಯವರೂ, ಸಾಮಾಜಿಕ ...ಾಗಿ ವೀರಪರಂಪರೆಯವರೂ ಆಗಿದ್ದಾರೆ. ಇವರ ಕುಲದೈವ ...ೀರಪ್ಪನಾಗಿದ್ದರೂ, ಇವರು ಮೈಲಾರಲಿಂಗ, ಮಾಳಿಂಗ ...ಾಯ, ಹುಲ್ಲಪ್ಪ-ಚಂದಪ್ಪ, ಸೋಮೇಶ್ವರ, ಚಿಂಚಲಿ ...ಾಯವ್ವ ಮೊದಲಾದ ದೈವಗಳನ್ನು ಮನೆ ದೇವರೆಂದು ...ಳಿದು ಪೂಜಿಸುತ್ತಾರೆ. ಮಧ್ಯಕರ್ನಾಟಕದ ಕೆಲವು ಸೀಮಿತ ...ದೇಶಗಳಲ್ಲಿ ಪೂಜೆಗೊಳ್ಳುತ್ತಿರುವ ಸೋಮೇಶ್ವರ ಅಥವಾ ...ೋಮಲಿಂಗ ಅಥವಾ ಸೋಮಬೀರಪ್ಪನ ಆಚರಣೆಗಳಲ್ಲಿ ...ೃಂಗಿ ಸೇವೆಯೂ ಒಂದಾಗಿದೆ.

**...ೃಂಗಿ ಅಥವಾ ಭಿಂಗಯ್ಯನೆಂದರೆ...**

ಮಧ್ಯಕರ್ನಾಟಕದ ಚಿಕ್ಕಮಗಳೂರು ಜಿಲ್ಲೆ, ಕಡೂರು ...ಾಲೂಕು, ಖಂಡುಗದಳ್ಳಿಯ ಸೋಮೇಶ್ವರ ದೇವಾಲಯದಲ್ಲಿ ...ಈ ಆಚರಣೆ ನಡೆಯುತ್ತದೆ. ಸೋಮೇಶ್ವರ ದೈವವು ...ಾಲುಮತಸ್ಥರಾದ ಕುರುಬ ಜನಾಂಗದ ಮನೆದೇವರಾಗಿದ್ದು, ...ಾತಿ, ಮತ ಬೇಧವಿಲ್ಲದೇ ಕುರುಬರು, ತೆಲುಗುಗೌಡರು, ...ುಡಿವಾಳಶೆಟ್ಟರು ಮತ್ತು ರೆಡ್ಡಿಲಿಂಗಾಯತರು ಈ ದೇವರನ್ನು ...ೂಜಿಸುತ್ತಾರೆ ಮತ್ತು ಒಕ್ಕಲುಮಕ್ಕಳಾಗಿದ್ದಾರೆ. ಚಿಕ್ಕಮಗಳೂರು ...ಲ್ಲೆ ಕಡೂರು, ತರಿಕೆರೆ, ಅಜ್ಜಂಪುರ ಮೊದಲಾದ ...ಾಲೂಕುಗಳಲ್ಲಿ ವಾಸವಾಗಿರುವ ಕುರುಬರ ಸಂಗಮಕುಲದ ...ುಮಾರು ೮೦೦ ಮನೆತನಗಳು ಈ ದೇವರ ಒಕ್ಕಲಾಗಿದ್ದು, ...ವನನ್ನು ಬೀರಪ್ಪನ ರೂಪವೆಂದು ಪರಿಗಣಿಸಿದ್ದಾರೆ. ಹನ್ನೆರಡು ವರ್ಷಕ್ಕೊಮ್ಮೆ ಜರುಗುವ ಇವನ ಜಾತ್ರೆಯನ್ನು ಸೋಮಬೀರಪ್ಪನ ಜಾತ್ರೆಯೆಂದು ಕರೆಯುತ್ತಾರೆ. ಈ ಜಾತ್ರೆಯಲ್ಲಿ ಭೃಂಗಿ ಧೀಕ್ಷೆಯನ್ನು ಕಡೂರು ತಾಲೂಕು ಕೇದಿಗೆರೆ ಎಂಬ ಗ್ರಾಮದ ಕುರುಬ ಜನಾಂಗದ ಸಂಗಮಕುಲದ ಕೋರುಡುಗರಿಗೆ ಕೊಡಲಾಗುತ್ತದೆ. ಇಂತಹ ೬೪ ಮನೆತನಗಳು ಆ ಊರಲ್ಲಿವೆ.

ಜಾನಪದ ಕತೆಯ ಪ್ರಕಾರ ಕಾಣಿಕೆಣ್ಣ, ವೀರಣ್ಣ ಮತ್ತು ಬೊಮ್ಮಣ್ಣ ಎಂಬ ಅಸುರರನ್ನು ಸಂಹರಿಸಲು ಸೋಮೇಶ್ವರನ ಪತ್ನಿ ಪಾರ್ವತಿಯು ಶಕ್ತಿಚೌಡಮ್ಮನ ಅವತಾರವೆತ್ತಿ ಸಂಹಾರ ಮಾಡುತ್ತಾಳೆ. ಅವಳ ಈ ಉಗ್ರ ಅವತಾರವನ್ನು ಇಳಿಸುವುದು ದೇವಾನುದೇವತೆಗಳಿಗೆ ಕಷ್ಟವಾಗುತ್ತದೆ. ಆಗ ಕೃಷ್ಣನು ಶಿವರೂಪಿಯಾದ ಸೋಮೇಶ್ವರನಿಗೆ 'ಅಣ್ಣ, ನೀನು ಭೃಂಗಿ ಅವತಾರ ತಾಳು, ನಿನ್ನ ಎದೆಯ ಮೂರು ಕೂದಲನ್ನು ಕಿತ್ತುಕೊಂಡು ಚಾಟಿ ಮಾಡಿಕೋ. ಮಂಡಕ್ಕಿ ರಾಶಿ ಹಾಕಿ ಅದರ ಸುತ್ತಲೂ ಚಾಟಿ ಬಾರಿಸುತ್ತ ಕುಣಿದು ನರ್ತಿಸಿ ಶಾಂತಗೊಳಿಸು.' ಎಂದು ಸಲಹೆ ನೀಡುತ್ತಾನೆ. ಅವನ ಸಲಹೆಯಂತೆ ಸೋಮೇಶ್ವರನು ಭೃಂಗಿ ಅವತಾರವೆತ್ತಿ, ಎದೆಗೂದಲು ಕಿತ್ತು ಚಾಟಿ ಮಾಡಿಕೊಂಡು, ನರ್ತಿಸಿ ಅವಳನ್ನು ಶಾಂತಗೊಳಿಸುತ್ತಾನೆ. ಮತ್ತು ಅವಳನ್ನು ಅರ್ಧಾಂಗಿಯಾಗಿ ವರಿಸಿ ಅಲ್ಲಿಯೇ ನೆಲೆಸುತ್ತಾನೆ.

**"ಭಿಂಗಯ್ಯ ಅಥವಾ ಭೃಂಗಿ ಎಂದರೆ ನಡೆದಾಡುವ ಕುರುಬರ ಗುರು ಸೋಮೇಶ್ವರ"** ಎಂಬ ಅಭಿದಾನವು ಸೋಮೇಶ್ವರನಿಗೆ ದೊರೆತಿದೆ.

ಇದೊಂದು ಪ್ರಾಚೀನ ಆಚರಣೆಯಾಗಿದೆ. ಇದರ ಆರಂಭದ ಕಾಲಮಾನ ಕುರಿತಂತೆ ಯಾವುದೇ ಶಾಸನ, ದಾಖಲೆಗಳು ಲಭ್ಯವಾಗಿಲ್ಲ. ಕ್ರಿ.ಶ. ೧೪೯೮ರ ಸುಮಾರಿಗೆ ವಿಜಯನಗರದ ಮೊದಲ ಅರಸರಾದ ಸಂಗಮರ ಆಳ್ವಿಕೆ ಕೊನೆಗೊಂಡಿತು. ತಮ್ಮ ಮನೆತನದ ಆಳ್ವಿಕೆ ಕೊನೆಗೊಂಡಾಗ ಅಲ್ಲಿರಲು ಬಯಸದ ಸಂಗಮ ಕುಲದ ಅನೇಕ ಕುರುಬ

* ಮನೆ ಸಂಖ್ಯೆ : ಟೈಪ್ ೪/೫೯, ಆರ್.ಟಿ.ಪಿ.ಎಸ್. ಕಾಲೋನಿ, ಶಕ್ತಿನಗರ, ತಾ: ಜಿ: ರಾಯಚೂರು-೫೮೪೧೭೦.

ಮನೆತನಗಳು ವಿಜಯನಗರ ಬಿಟ್ಟು ಹೊಯ್ಸಳರ ಧೋರಸಮುದ್ರದ ಕಡೆಗೆ ಹೊರಡುತ್ತಾರೆ. ಸಂಗಮ ಕುಲದ ಮನೆತನಗಳು ಮೂಲತಹ ಹೊಯ್ಸಳರ ದ್ವಾರಸಮುದ್ರದ ನಂಟನ್ನು ಹೊಂದಿದ್ದವೆಂದೂ ಅಲ್ಲಿಗೆ ಹೋಗುವಾಗ ಮಾರ್ಗಮಧ್ಯದಲ್ಲಿ, ಇಲ್ಲಿ ಎಲ್ಲ ಸೌಲಭ್ಯಗಳು ದೊರೆತದ್ದರಿಂದ ಇಲ್ಲಿಯೇ ನೆಲೆಸಿದರೆಂದೂ ಹೇಳುತ್ತಾರೆ. ಅಂದಿನಿಂದ ಇವರು ಸೋಮೇಶ್ವರನ ಆರಾಧನೆಯನ್ನು, ರೇವಣಸಿದ್ಧರ ಆಚರಣೆಗಳನ್ನೂ ನಡೆಸುತ್ತಾ ಬಂದಿದ್ದಾರೆಂದು' ಹೇಳುತ್ತಾರೆ.

ಸೋಮೇಶ್ವರ ದೈವದ ಉತ್ಸವ ಮೂರ್ತಿಯನ್ನು ಗಮನಿಸಿದಾಗ, ಉತ್ಸವಮೂರ್ತಿಯು ಮೂರು ದೈವ ಶಿಲ್ಪಗಳನ್ನು ಒಳಗೊಂಡಿದೆ. ಮಧ್ಯದಲ್ಲಿ ಪಾರ್ವತಿ (ಚೌಡಮ್ಮ>ಚೊಕ್ಕಾಪುರದಮ್ಮ), ಎಡಗಡೆ ಸೋಮೇಶ್ವರನ ಮೂರ್ತಿ (ಅವನ ತೊಡೆಗಳ ಮೇಲೆ ಪಾರ್ವತಿ ಮತ್ತು ಚೌಡಮ್ಮ ಕುಳಿತಿದ್ದಾರೆ), ಬಲಗಡೆ ರೇವಣಸಿದ್ಧರ ಮೂರ್ತಿ ಇದೆ. ಒಂದೇ ತಳಪಾಯದ ವೇದಿಕೆಯ ಮೇಲೆ ಈ ಮೂರೂ ಶಿಲ್ಪಗಳನ್ನು ಕೆತ್ತಿ ನಿಲ್ಲಿಸಲಾಗಿದೆ. ರೇವಣಸಿದ್ಧರು ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿದ್ದಾರೆ. ಅವರು ಹನ್ನೆರಡನೆಯ ಶತಮಾನದ ಶರಣರಲ್ಲಿ ಹಿರಿಯರೂ, ಕುರುಬ ಸಮಾಜದಿಂದ ಬಂದವರೆಂದೂ ಸಾಂಸ್ಕೃತಿಕ ಇತಿಹಾಸಕಾರರಾದ ಮಹಾರಾಷ್ಟ್ರದ ಡಾ. ರಾಮಚಂದ್ರ ಚಿಂತಾಮಣ ಢೇರ ಮತ್ತು ಡಾ. ಎಂ. ಎಂ. ಕಲಬುರ್ಗಿ ಅವರು ಒಪ್ಪಿಕೊಂಡಿದ್ದಾರೆ. ಇತಿಹಾಸಕಾರರು ಅವರ ಕಾಲಮಾನವನ್ನು ಕ್ರಿ.ಶ. ೧೧೧೦ ರಿಂದ ಕ್ರಿ.ಶ. ೧೨೧೭ವರೆಗೆ ಎಂದು ಗುರುತಿಸಿದ್ದಾರೆ. ಅಂದಿನಿಂದ ಈ ಆಚರಣೆಯನ್ನು ಹುಟ್ಟು ಹಾಕಿರಬಹುದೆಂದು ಊಹಿಸಿದರೆ ಇಂದಿಗೆ ಈ ಆಚರಣೆ ಆರಂಭವಾಗಿ ಸುಮಾರು ಎಂಟು ನೂರು ವರ್ಷಗಳಾದವೆಂದು ಹೇಳಬಹುದು.

## ಭೃಂಗಿ/ ಭಿಂಗಯ್ಯನವರ ವಂಶಾವಳಿ

ಈ ಪಟ್ಟದೀಕ್ಷೆಯನ್ನು ಕುರುಬ ಜನಾಂಗದಲ್ಲಿ ಎಲ್ಲರೂ ತೆಗೆದುಕೊಳ್ಳುವಂತಿಲ್ಲ. ಕಡೂರು ತಾಲೂಕಿನ ಕೇದಿಗೆರೆ ಗ್ರಾಮದ ಹಾಲುಮತ ಸಂಗಮಕುಲದ ಮನೆತನಗಳು ಇದಕ್ಕೆ ಬಾಧ್ಯಸ್ಥವಾಗಿವೆ. ಈ ಮನೆತನದಲ್ಲಿ ಹುಟ್ಟುವ ಪ್ರತಿಯೊಬ್ಬ ಗಂಡು ಮಗುವೂ, ಪ್ರತಿ ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ಸೋಮೇಶ್ವರ ಜಾತ್ರೆಯಲ್ಲಿ ಧೀಕ್ಷೆಯನ್ನು ಪಡೆಯುತ್ತಾರೆ. ಇಂದು ಅವು ೬೪ ಮನೆತನಗಳಿವೆ. ಕಾಲಾಂತರದಲ್ಲಿ ಒಂದು ಮನೆತನವು ವಿಭಾಗವಾಗಿ ೬೪ ಭಿಂಗಯ್ಯನವರ ಮನೆತನಗಳಾಗಲು ತಗಲುವ ಕಾಲವು ಸುಮಾರು ಆರು ಅಥವಾ ಏಳು ಶತಮಾನಗಳು ಎಂದು ಭಾವಿಸಿದರೆ ಈ ಆಚರಣೆಯ ಆರಂಬವು ರೇವಣಸಿದ್ಧರ ಕಾಲವನ್ನೇ ನಿರ್ದೇಶಿಸುತ್ತದೆ.

## 'ಗುರು'ಮೂರ್ತಿಯ ವೇಷಭೂಷಣಗಳು

ಭಿಂಗಯ್ಯನು ಸಂಗಮ ಕುಲದ ಕುರುಬರಿಗೆ ಗುರುವಾಗಿದ್ದಾನೆ. ಕುರುಬರ ಕುಲದೈವ ಬೀರಪ್ಪನ ಸಂಪ್ರದಾಯದಲ್ಲಿ ದಳವಾಯಿಯು ದೈವೀಪುರುಷನಾದರೆ, ಬೀರಪ್ಪನ ಪರಿಷ್ಕೃತ ರೂಪವಾದ ಸೋಮಬೀರಪ್ಪನ ಸಂಪ್ರದಾಯದಲ್ಲಿ ಭೃಂಗಿಯು ಗುರುಸ್ವರೂಪಿಯಾಗಿರುವುದು ಕಂಡುಬರುತ್ತದೆ. ದೈವಸ್ವರೂಪಕ್ಕಿಂತ ಗುರುಸ್ಥಾನಕ್ಕೆ ಹೆಚ್ಚಿನ ಬೆಲೆಕೊಡುವ ಶರಣಸಂಪ್ರದಾಯವು ಕುರುಬರ ಈ ಧಾರ್ಮಿಕ ಪರಂಪರೆಯಲ್ಲಿ ಹೆಚ್ಚು ಪ್ರಭಾವ ಬೀರಿರುವುದು ವ್ಯಕ್ತವಾಗುತ್ತದೆ. ಕುರುಬರ ಜನಾಂಗದ ಸಂಗಮ ಕುಲದ ಗುರುವಿನ ವೇಷಭೂಷಣಗಳು ಕುಲಗುರು ರೇವಣಸಿದ್ಧೇಶ್ವರರು ಸ್ಥಾಪಿಸಿದ ಕುರುಬರ ಕುಲಗುರುಗಳಾದ ಒಡೆಯರ ವೇಷವನ್ನು ಹೋಲುವುದು ಗಮನಾರ್ಹವಾಗಿದೆ. ಸಾಮಾನ್ಯ ದಿನಗಳಲ್ಲಿ ಭಿಂಗಯ್ಯನು ತನಗಿಷ್ಟಬಂದ ಬಟ್ಟೆಬರೆ ಧರಿಸಬಹುದು, ಆದರೆ ಜಾತ್ರೆ ಮತ್ತು ಉತ್ಸವದ ಸಂದರ್ಭದಲ್ಲಿ ಸಾಂಪ್ರದಾಯಿಕ ಉಡಪನ್ನು ಧರಿಸಲು ಇಷ್ಟಪಡುತ್ತಾನೆ.

೧. ಕೇಸರಿವರ್ಣದ ಪಂಚೆಯನ್ನು ಲುಂಗಿಯಂತೆ ಉಟ್ಟು, ಹೆಗಲಮೇಲೆ ಅದೇ ಬಣ್ಣದ ಒಡೆಯರ ವಸ್ತ್ರವನ್ನು ಹಾಕಿಕೊಂಡಿರುತ್ತಾನೆ.

೨. ಹೆಗಲಿಗೆ ಕೇಸರಿ ಅಥವಾ ಭಂಡಾರ ಬಣ್ಣದ ಜೋಳಿಗೆಯನ್ನು ಧರಿಸಿ ಅದರಲ್ಲಿ ಭಂಡಾರದ ಬಟ್ಟಲು, ವಿಭೂತಿ ಗಟ್ಟಿ ಮುಂತಾದವುಗಳು ಇರುತ್ತವೆ.

೩. ಕಾಲಿಗೆ ಚಪ್ಪಲಿಗಳನ್ನು ಧರಿಸಿರುವುದಿಲ್ಲ ಮತ್ತು ಮೈಗೆ, ಹಣೆಗೆ ವಿಭೂತಿಯನ್ನು ಹಚ್ಚಿಕೊಂಡು ಭಂಡಾರವನ್ನು ಪೂಸಿಸಿಕೊಂಡಿರುವುದನ್ನು ಗಮನಿಸಬಹುದು.

೪. ಕೈಯಲ್ಲಿ ನಾರಿನಿಂದ ಹೆಣೆದ ಚಾಟಿ ಹಿಡಿದಿರುತ್ತಾನೆ.

೫. ಸೋಮೇಶ್ವರನ ಮೆರವಣಿಗೆಯಲ್ಲಿ ಭೃಂಗಿಯ ಜಾಗಟೆ ಬಾರಿಸುವುದು ಕಂಡುಬರುತ್ತದೆ.

೬ ಸಾಮಾನ್ಯವಾಗಿ ಕೈಯಲ್ಲಿ ಬೆತ್ತವನ್ನು ಹಿಡಿದಿರುತ್ತಾನೆ.

## ಭೃಂಗಿ ಸೇವೆ

ಮೊದಲನೆಯ ಹಂತದಲ್ಲಿ, ಹಾಲುಮತ ಸಂಗಮ ಕುಲದ ಕುರುಬರಿಗೆ ಗುರುವಾದ ಸೋಮೇಶ್ವರನನ್ನು ಪ್ರತಿನಿಧಿಸುವ ಭಿಂಗಯ್ಯನು, ಸ್ಥಾವರಮೂರ್ತಿಯ ಆರಾದನೆ ಮಾಡುವುದು ಕಂಡುಬರುತ್ತದೆ. ಪ್ರತಿಸೋಮವಾರ ಶ್ರದ್ಧಾಭಕ್ತಿಯಿಂದ ಸೋಮೇಶ್ವರ, ಚೌಡಮ್ಮನವರ ಪೂಜೆ ಮಾಡುತ್ತಾನೆ. ಉಪವಾಸವಿದ್ದು ವ್ರತ ನಡೆಸುತ್ತಾನೆ. ಸ್ಥಾವರಮೂರ್ತಿಯ ದರ್ಶನವಾಗುವವರೆಗೆ ಒಂದು ಹನಿ

ೀರನ್ನೂ ಸೇವಿಸುವುದಿಲ್ಲ. ಪ್ರತಿವರ್ಷ ಮೊದಲನೇ ಶ್ರಾವಣ ಸೋಮವಾರದಂದು ನಡೆಯುವ ಸೋಮೇಶ್ವರನ ಉತ್ಸವದಲ್ಲಿ, ಶಕ್ತಿ ದೇವತೆಯಾದ ಚೌಡಮ್ಮನ ಮೂರ್ತಿಯ ಮುಂದೆ ಭೃಂಗಿ ನೃತ್ಯವನ್ನು ಮಾಡುತ್ತಾನೆ. ದಸರಾ ಆಚರಣೆಯಲ್ಲಿ, ಸೋಮೇಶ್ವರ ಒಂಬತ್ತು ದಿನಗಳ ಕಾಲ ಪಟ್ಟಕ್ಕೆ ಕುಳಿತುಕೊಳ್ಳುತ್ತಾನೆ. ಒಂಬತ್ತನೆಯ ದಿನ ಸೋಮೇಶ್ವರ ಎನ್ನಿಮುಡಿಯುವ (ಇದಕ್ಕೆ ಅಂಬೊಡೆಯುವುದು ಎನ್ನುವರು) ಸಂದರ್ಭದಲ್ಲಿ ಸೋಮೇಶ್ವರನ ಸ್ಥಾವರಮೂರ್ತಿಯ ಎದುರಿನಲ್ಲಿ ಭೃಂಗಿ ನೃತ್ಯ ಮಾಡುತ್ತಾನೆ. ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ 'ಸೋಮ-ಬೀರಪ್ಪ'ನ ಜಾತ್ರೆಗೆ ಒಂದು ತಿಂಗಳ ಮೊದಲು ಎಲ್ಲ ಹಾಲುಮತ ಸಂಗಮಕುಲ ಒಕ್ಕಲು ಮನೆಗಳಿಗೆ ಭಂಡಾರ ಚೀಟಿ, ಆಮಂತ್ರಣ ಒಯ್ದು, ಅವರಿಗೆ ಜಾತ್ರೆಗೆ ಮೀಸಲು ತರುವ ಆದೇಶಕೊಟ್ಟು, ಕಟ್ಟುಕಟ್ಟಳೆ ಹಾಕಿ ಬರುತ್ತಾನೆ.

ಎರಡನೇ ಹಂತದಲ್ಲಿ ಭಕ್ತರಿಗೆ ಗುರುವಾಗಿ ನಡೆದು ಕೊಳ್ಳುತ್ತಾನೆ. ಜಾತ್ರೆ ಹಬ್ಬ-ಹರಿದಿನಗಳಲ್ಲಿ ಭಕ್ತರ ಮನೆಯಲ್ಲಿ ಪೂಜೆ ನೆರವೇರಿಸಿ ಪ್ರಥಮ ಪ್ರಸಾದ ಸೇವೆ, ಪ್ರಥಮ ಸ್ವೀಕರಿಸು ತ್ತಾನೆ. ಭಕ್ತರ ಮನೆಯ ಶುಭಕಾರ್ಯಗಳು, ನಾಮಕರಣ, ಗೃಹಪ್ರವೇಶ, ಮದುವೆ ಇತ್ಯಾದಿ ಶುಭಕಾರ್ಯ ನಡೆಸಿ ಕೊಡುತ್ತಾನೆ. ಚಾಟಿಯಿಂದ ಅವರಿಗೆ ಹೊಡೆದು ಆಶೀರ್ವಾದ ಮಾಡುತ್ತಾನೆ. ದೇವಸ್ಥಾನದಲ್ಲಿ ನಡೆಯುವ ಪೂಜೆ-ಉತ್ಸವಗಳಲ್ಲಿ ಪ್ರಥಮ ಪ್ರಸಾದ ಮತ್ತು ಮೊದಲ ಪಂಕ್ತಿಯ ಭೋಜನವನ್ನು ಸ್ವೀಕರಿಸುತ್ತಾನೆ. ಭಕ್ತರ ಮನೆಯಲ್ಲಿ ಜನನ, ಮರಣ, ಮುಟ್ಟು ಮುಂತಾದ ಸಂದರ್ಭದಲ್ಲಿ ಸೂತಕ ನಿವಾರಣೆ ಮಾಡುತ್ತಾನೆ.

**ಭಿಂಗಯ್ಯ(ಭೃಂಗಿ) ನರ್ತನ**

ಪೌರಣಿಕ ಕಥೆಯ ಪ್ರಕಾರ, ಸೋಮೇಶ್ವರನೊಂದಿಗೆ ದುಷ್ಟ ಸಂಹಾರಕ್ಕೆ ಪಾರ್ವತಿಯು ಶಕ್ತಿ ಅವತಾರವನ್ನು ತಾಳುತ್ತಾಳೆ. ಯುದ್ಧದ ನಂತರ ಅವಳ ರೌಧ್ರಾವತಾರವನ್ನು ಶಾಂತಗೊಳಿಸಲು ಶ್ರೀಕೃಷ್ಣನ ಆದೇಶದಂತೆ ಸೋಮೇಶ್ವರ (ಶಿವ)ನು ಭೃಂಗಿ ಅವತಾರವನ್ನು ತಾಳಿ ಕುಣಿದು ಅವಳನ್ನು ಶಾಂತಗೊಳಿಸುತ್ತಾನೆ. ಕತೆಯ ಸಂದರ್ಭದಲ್ಲಿ ಪಾರ್ವತಿಯ ಶಕ್ತಿ ಅವತಾರವನ್ನು ಇಳುವಲು ಶ್ರೀಕೃಷ್ಣ ಪರಮಾತ್ಮ ಭೂಮಿಯ ಮೇಲೆ ಪ್ರತ್ಯಕ್ಷನಾಗುತ್ತಾನೆ. ('ಕೃಷ್ಣ'ನಿಗೆ ಕುರುಬರ ಸಂಸ್ಕೃತಿಯಲ್ಲಿ ಜುಂಜಪ್ಪನೆಂದು ಕರೆಯುತ್ತಾರೆ. ಇವನ ಮೂರ್ತಿಯನ್ನು ಎಲ್ಲ ಬುಡಕಟ್ಟಿನ ಕುರುಬರು ಮನೆಯಲ್ಲಿಟ್ಟು ಪೂಜಿಸುವುದು ಕಂಡುಬರುತ್ತದೆ. ದಿವಂಗತ ವಿ.ಆರ್. ಹನುಮಂತಯ್ಯ (ಸಂ.ಪ್ರೊ, ಸುಧಾಕರ), ಕುರುಬರ ಚರಿತ್ರೆ, ೧೯೨೬, ಪುಟ ೨೮). ಭೂಮಿಗೆ ಬಂದ ಶ್ರೀಕೃಷ್ಣ ಸೋಮೇಶ್ವರ(ಶಿವ)ನಿಗೆ "ಅಣ್ಣ ನಿನ್ನ ಎದೆಯೊಳಗಿನ ಮೂರು ಕೂದಲನ್ನು ಕಿತ್ತುಕೋ. ಅವುಗಳನ್ನು ಹೊಸೆದು ಚಾಟಿ ಮಾಡಿಕೊಂಡು, ಭೃಂಗೇಶ್ವರ ಆಟವಾಡು. ಮಂಡಕ್ಕಿ ರಾಶಿ ಸುರಿದು ಅದರ ಸುತ್ತ ಭೃಂಗಿಯಾಗಿ ನರ್ತಿಸು. ನಿನ್ನ ನರ್ತನದಿಂದ ತಾಯಿ ಸಂಪ್ರೀತಳಾಗಿ ತನ್ನ ಮಾರಿ ಅವತಾರದ ಉಗ್ರ ರೂಪವನ್ನು ಇಳಿಸಿಕೊಳ್ಳುತ್ತಾಳೆ' ಎಂದು ಸಲಹೆ ನೀಡುತ್ತಾನೆ. ಸೋಮೇಶ್ವರನು ಭೃಂಗೇಶ್ವರನ ಅವತಾರ ತಾಳುತ್ತಾನೆ. ತನ್ನ ಎದೆಯ ಮೇಲಿನ ಮೂರು ಕೂದಲನ್ನು ಕಿತ್ತುಕೊಂಡು ಹೊಸೆದು ಚಾಟಿಯಾಗಿ ಮಾಡಿಕೊಂಡು, ಮಂಡಕ್ಕಿ ರಾಶಿ ಸೃಷ್ಟಿಸಿ ಅದರ ಸುತ್ತ ತನ್ನ ಸಹಚರರೊಂದಿಗೆ ನರ್ತಿಸತೊಡಗುತ್ತಾನೆ. ಅವನ ನೃತ್ಯ ಎಷ್ಟು ಸುಂದರ ಮತ್ತು ಆಕರ್ಷಣಿಯವಾಗಿತ್ತೆಂದರೆ ಮಾರಿ ಅವತಾರ ಎತ್ತಿದ ಪಾರ್ವತಿ ತನ್ನ ಎಲ್ಲ ರೋಷ-ತಪ್ತತೆಗಳನ್ನು ಕಡಿಮೆಗೊಳಿಸಿ ಶಾಂತಳಾಗುತ್ತಾಳೆ.

ಶ್ರೀಕೃಷ್ಣನು ನೀಡಿದ ಸಲಹೆಗೆ ಮತ್ತು ಸಂದರ್ಭಕ್ಕೆ ತಕ್ಕಂತೆ ಈ ನೃತ್ಯದ ಓಘವನ್ನು ಗುರುತಿಸುತ್ತೇವೆ. ಇಲ್ಲಿ ಕಾಣುವ ಇನ್ನೊಂದು ವಿಶೇಷವೆಂದರೆ ಸಾಮಾನ್ಯವಾದ ಸಂದರ್ಭಗಳಲ್ಲಿ ಭಿಂಗಯ್ಯನವರು ಚೊಕ್ಕಾಪುರದಮ್ಮ(ಶಕ್ತಿ)ನ ಮುಂದೆ ಮಾತ್ರ ಈ ನೃತ್ಯ ಮಾಡಿದ ನಂತರ ಪೂಜೆಯ ಪ್ರಸಾಧವನ್ನು ಸ್ವೀಕರಿಸುತ್ತಾರೆ. ಸೋಮೇಶ್ವರನೇ ಭೃಂಗಿಯಾಗಿರುವುದರಿಂದ ಸೋಮೇಶ್ವರನ ಜಾತ್ರೆಯಲ್ಲಿ ಸೋಮೇಶ್ವರ ಸ್ಥಾವರ ಮೂರ್ತಿಯ ಮುಂದೆ ಈ ನೃತ್ಯವನ್ನು ಪ್ರದರ್ಶಿಸಲಾಗುತ್ತದೆ. ಕುತೂಹಲವೆಂದರೆ ಸೋಮೇಶ್ವರನು ಉತ್ಸವಮೂರ್ತಿಯ ರೂಪದಲ್ಲಿ ಪಲ್ಲಕ್ಕಿಯನ್ನೇರಿ ಭೃಂಗಿಗಳ ಜೊತೆ ಸೇರಿ ತಾನೂ ಸ್ಥಾವರ ರೂಪದ ಭೃಂಗಿಯಾಗಿ ಕುಣಿಯುತ್ತಾನೆ ಮತ್ತು ಪ್ರದಕ್ಷಿಣೆ ಹಾಕುತ್ತಾನೆ.

ಭೃಂಗಿ ಪಟ್ಟಗಟ್ಟಿಸಿಕೊಂಡಿರುವ ಎಲ್ಲ ಭಿಂಗಿಯ್ಯನವರು ಸ್ನಾನ ಮಾಡಿ, ಮಡಿಯುಟ್ಟು ಜೋಳಿಗೆ ಧರಿಸಿ ಕೈಯಲ್ಲಿ ಚಾಟಿ ಹಿಡಿದುಕೊಳ್ಳುತ್ತಾರೆ. ಅಮ್ಮನ ದೇವಸ್ಥಾನದ ಮುಂದೆ ಕಂಬಳಿ ಅಥವಾ ಇತರ ಗದ್ದುಗೆಯ ಮೇಲೆ ಬಾಳೆ ಹಣ್ಣಿನ ರಸಾಯನ ಮಾಡಿ ಇಟ್ಟುಕೊಂಡು, ಸುತ್ತಲೂ ಚಾಟಿ ಬೀಸುತ್ತ ಕುಣಿಯುವುದು ಕಂಡುಬರುತ್ತದೆ. ಆವೇಶಗೊಂಡು ವೃತ್ತಾಕಾರವಾಗಿ ಸುತ್ತುತ್ತ ನೆಲದ ಮೇಲೆ ಮುಂಗಾಲುಗಳ ಮೇಲೆ ಕೂಡ್ರುತ್ತ, ಕುಪ್ಪಳಿಸುತ್ತ, ನೆಗೆಯುತ್ತ ನೃತ್ಯ ಮಾಡುತ್ತಾರೆ. ಜೋರಾಗಿ 'ಹಾ', 'ಆಹಾ' ಎಂದು ಶಬ್ದವನ್ನು ಹೊರಡಿಸುತ್ತ ನೃತ್ಯ ಮಾಡುವುದು ಕಂಡುಬರುತ್ತದೆ. ಈ ನೃತ್ಯದ ಉದ್ದಕ್ಕೂ ಚಾಟಿಗಳ 'ಛಟ್' 'ಛಟ್' ಶಬ್ದಗಳು ಕೇಳಿಸುತ್ತವೆ. ನಡುವೆ ಭಕ್ತರಿಗೆ ಚಾಟಿಯಿಂದ ನವಿರಾಗಿ ಹೊಡೆದು ಆಶೀರ್ವಾದವನ್ನೂ ಮಾಡುತ್ತಾರೆ. ನೃತ್ಯ ಮುಗಿದ ನಂತರ ಪೂಜೆಯ ಪ್ರಸಾದವನ್ನು ಸ್ವೀಕರಿಸುತ್ತಾರೆ.

### ಕವಣಿ ಕಟ್ಟುವುದು

ಭಿಂಗಯ್ಯನವರು ಹನ್ನೆರಡು ವರ್ಷಕ್ಕೊಮ್ಮೆ ನಡೆಯುವ ಸೋಮೇಶ್ವರನ ಜಾತ್ರೆಯಲ್ಲಿ, ಉಯ್ಯಾಲೆ ಉತ್ಸವದಲ್ಲಿ ಸೋಮೇಶ್ವರ ಉಯ್ಯಾಲೆಯಾಡುವಾಗ ಅವನ ಮುಂದೆ ನೃತ್ಯ ಮಾಡುತ್ತ ಭಕ್ತಿಯೇ ಮೈದುಂಬಿದವರಾಗಿ ಭಾವಪರವಶರಾಗುವುದು ಕಂಡುಬರುತ್ತದೆ. ಜಾತ್ರೆಯಲ್ಲಿ ನಡೆಯುವ ಭಿಂಗಯ್ಯನ ನೃತ್ಯವು ಅತ್ಯಂತ ಆಕರ್ಷಣೀಯ ವಾದದ್ದಾಗಿದೆ.

ಒಂದು ದೊಡ್ಡ ಹಾಸಿನ ಮೇಲೆ ಮಂಡಕ್ಕಿ, ಬಾಳೆಹಣ್ಣಿನ ರಾಶಿ ಸುರಿಯುತ್ತಾರೆ. ಅದರಲ್ಲಿ ಸ್ವಲ್ಪ ಭಾಗವನ್ನು ದೇವರ ಮುಂದೆ ಇಟ್ಟು ಪ್ರಸಾದ ಮಾಡುತ್ತಾರೆ. ಈ ಸಮಾರಂಭಕ್ಕೆ 'ಕವಣಿ ಕಟ್ಟುವುದು' ಎಂದು ಹೆಸರು. ನಂತರ ಎಲ್ಲ ಭೃಂಗಿಗಳು ತಮ್ಮ ಭೃಂಗಿವೇಷ ಧರಿಸಿ ಈ ಮಂಡಕ್ಕಿ ರಾಶಿಯನ್ನು ನರ್ತಿಸುತ್ತ ಪ್ರದಕ್ಷಿಣೆ ಹಾಕುತ್ತಾರೆ. ನೃತ್ಯ ನಡೆಯುತ್ತದೆ. ನೃತ್ಯದ ಮಧ್ಯೆ ಸೋಮೇಶ್ವರನಿಗೆ ಪೂಜೆಪುನಸ್ಕಾರಗಳು ನಡೆಯುತ್ತವೆ. ನೃತ್ಯ ಮುಗಿದ ನಂತರ ಮಂಡಕ್ಕಿಯ ಪ್ರಸಾಧವನ್ನು ಭಿಂಗಯ್ಯಗಳಿಗೆ ಹಂಚಲಾಗುತ್ತದೆ. ಜಾತ್ರೆಯಲ್ಲಿ ಓಡಾಡುತ್ತ ಚಾಟಿಯಿಂದ ಭಕ್ತರಿಗೆ ಆಶೀರ್ವಾದ ಮಾಡುತ್ತ, ಗುಂಪುಗುಂಪಾಗಿ ಕುಣಿಯುತ್ತ ಹೆಜ್ಜೆ ಹಾಕುವುದು ಕಂಡುಬರುತ್ತದೆ. ಸೂಕ್ಷ್ಮವಾಗಿ 'ಭೃಂಗಿ ನೃತ್ಯವನ್ನು ಗಮನಿಸಿದರೆ ಇದು ಕುದುರೆಯು ನೆಗೆದು, ಕುಪ್ಪಳಿಸುತ್ತ ಹೆಜ್ಜೆ ಹಾಕುವ, ತಾಳಕ್ಕೆ ಅನುಗುಣವಾಗಿ ನರ್ತಿಸುವಂತೆ ಕಂಡುಬರುತ್ತದೆ. ಇದೇ ಗತ್ತಿನಲ್ಲಿ 'ಮೈಲಾರಲಿಂಗ'ನ ಸನ್ನಿದಿಯಲ್ಲಿ ಕುದುರೆ ನೃತ್ಯ ಮಾಡುವ ಕುದುರೆ ಗೊರವರನ್ನು ನಾವು ನೋಡ ಬಹುದು.

### ದಳವಾಯಿ ಮತ್ತು ಭಿಂಗಯ್ಯ: ಒಂದು ಸಾಂಸ್ಕೃತಿಕ ಮುಖಾಮುಖಿ

ಭಿಂಗಯ್ಯನ ಆಚರಣೆಯು ಒಂದು ಗುರು ಪದವಿಯಾಗಿದೆ. ಈ ಆಚರಣೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕೆಲವೊಂದು ಪ್ರಶ್ನೆಗಳು ಉದ್ಭವಿಸುತ್ತವೆ. ಈ ಆಚರಣೆಯು ಕುರುಬರ ಸಂಗಮ ಕುಲದಲ್ಲಿ ಮಾತ್ರ ಕಂಡುಬರುವ ಆಚರಣೆಯಾಗಿದೆ. ಇದು ಇತರ ಕುರುಬರಲ್ಲಿ ಅಂದರೆ ಬಿಜ್ಜಳಕುಲ, ಹಾಲಕುಲ, ಗೌಡಕುಲ ಸಾವ(ಮ)ಂತ ಕುಲ, ಕನಕಕುಲ, ರಾಜಕುಲ, ಕೃಷ್ಣಕುಲ, ಬಂಟಕುಲ, ದಾಸಕುಲ, ಬೀರಕುಲ, ದಳವಡಿಕುಲ, ಬಸವಕುಲ, ಶಾತಕುಲ, ಮಾನ>ಮಾನವ್ಯ>ಮಾನೆಗೊಲ, ನೊಳಂಬಕುಲ, ಮಾಳವಕುಲ, ರಾಯಕುಲ, ಸಾದಕುಲ, ಸಾಲ್ವಕುಲ, ಸೇನಕುಲ, ಅರಸಕುಲ, ಹಂಡೆಕುಲ, ರಟ್ಟಕುಲ, ಹಟ್ಟಿಗಾರಕುಲ ಮೊದಲಾದ ಕುರುಬ ಮೂಲದ ಕ್ಷಾತ್ರ ಕುಲಗಳಲ್ಲಿ ಇದು ಏಕೆ ಕಂಡು ಬರುವುದಿಲ್ಲ. ಈ ಎಲ್ಲ ಕುಲದವರು ಬೀರಪ್ಪನ ಆರಾಧಕರಾಗಿದ್ದಾರೆ ಮತ್ತು ಬೀರಪ್ಪನ ಜೀವಂತರೂಪವಾದ ದಳವಾಯಿಯನ್ನು ಒಪ್ಪಿಕೊಂಡಿದ್ದಾರೆ. ಮತ್ತು ವೀರಗಾರರನ್ನು ಹೊಂದಿದ್ದಾರೆ. ಈ ಕುರಿತುಇವರನ್ನು ಪ್ರಶ್ನಿಸಿದರೆ ಬೀರಪ್ಪನೇ ಸೋಮಪ್ಪ ಎಂದು ಹೇಳುತ್ತಾರೆ. ಕುರುಬರ ಕುಲಗುರುಗಳಾದ ರೇವಣಸಿದ್ಧರಿಂದ ಆರಂಭಗೊಂಡ 'ಒಡೆಯರ' ಗುರು ಮನೆತನಗಳು ಇದ್ದಾಗ್ಯೂ, ಭಿಂಗಯ್ಯ ಗುರು ಪದವಿಯು ಯಾಕೆ ಆರಂಭವಾಯಿತು? ಒಡೆಯರು ಮನೆತನದ ಗುರುಗಳಿಗೆ ಸಮಾಂತರವಾಗಿ ಹುಟ್ಟಿಕೊಂಡ ಪದವಿಯೆ? ಅಧ್ಯಯನದ ಪ್ರಕಾರ ಕುರುಬರ ಕುಲದೈವ ಬೀರಪ್ಪನ ಪರಿಷ್ಕೃತ ರೂಪವೇ ಸೋಮೇಶ್ವ ರನಾಗಿದ್ದಾನೆ. ಬೀರಪ್ಪನ ಜೀವಂತ ರೂಪ ದಳವಾಯಿ ಯಾದರೆ, ಸೋಮೇಶ್ವರನ ಜೀವಂತ ಗುರು ರೂಪಿ ಭಿಂಗಯ್ಯನಾಗಿದ್ದಾನೆ. ಇಲ್ಲಿ ಇನ್ನೊಂದು ಗಮನಿಸಬೇಕಾದ ಅಂಶವೆಂದರೆ ಭಿಂಗಯ್ಯನ ಜೋಳಿಗೆಯಲ್ಲಿ ಭಂಡಾರ ಮತ್ತು ವಿಭೂತಿ ಎರಡೂ ಇವೆ. ಇವನು ಎರಡನ್ನೂ ಧರಿಸಿರುತ್ತಾನೆ. ಭಂಡಾರ ಸಂಸ್ಕೃತಿ ಪ್ರಾಚೀನ ಕುರುಬರ ಸಂಸ್ಕೃತಿಯಾಗಿದ್ದು, ವಿಭೂತಿ ಸಂಸ್ಕೃತಿಯ ಉದಯಕ್ಕೆ ರೇವಣ್ಣಸಿದ್ಧರು ಕಾರಣರಾಗಿದ್ದಾರೆ.ಅಂದರೆ, ಮೂಲ ಭಂಡಾರ ಸಂಸ್ಕೃತಿಗೆ ಸೇರಿದ್ದ ಹಾಲುಮತಸ್ಥರನ್ನು ಶರಣಸಂಸ್ಕೃತಿಯತ್ತ (ವಿಭೂತಿ) ಕರೆದೊಯ್ಯುವ ಸಾಂಸ್ಕೃತಿಕ, ಧಾರ್ಮಿಕ ಪರಿವರ್ತನೆಯ ಕೊಂಡಿಯ ಸಂಕೇತವಾಗಿ ಭೀಂಗಯ್ಯನ ಸ್ಥಾನ ನಿಂತಿದೆಯೇ?

### ಆಧಾರಸೂಚಿ


ಲಿಂಗದಹಳ್ಳಿ ಹಾಲಪ್ಪ (ಡಾ), ಭಿಂಗಯ್ಯ (ಕುರುಬ ಜನಾಂಗದ ಜೀವಂತ ಗುರು ಸೋಮೇಶ್ವರ)

ಜಿರಾದಾರ ಬಿ.ಜೆ. (ಡಾ), **ಕುರುಬರ ಗುರು ಒಡೆಯರು, ಸಾಂಕೃತಿಕ ಅಧ್ಯಯನ**, ೨೦೧೦, ವಿಕಾಸ ಪ್ರಕಾಶನ, ಹೊಸಪೇಟೆ

ಸುಧಾಕರ (ಸಂ) (ಮೂಲ : ವಿ.ಆರ್. ಹನುಮಂತಯ್ಯ), **ಕುರುಬರ ಚರಿತ್ರೆ**, ೧೯೩೬, ಪ್ರತಿಭಾ ಪ್ರಕಾಶನ, ಮೈಸೂರು

ಹಳ್ಳಿಕೇರಿ ಎಫ್. ಟಿ.(ಡಾ), **ಕುರುಬರ ಗುರು ಒಡೆಯರು**, ೨೦೦೭, ವಿಕಾಸ ಪ್ರಕಾಶನ, ಹೊಸಪೇಟೆ

ವಕ್ತೃಗಳು : ಕೆ.ಎಸ್. ಬಸಪ್ಪ ಮತ್ತು ಮಕ್ಕಳು, ಗೌಡರು ಖಂಡುಗದಹಳ್ಳಿ ಸೋಮೇಶ್ವರ ದೇವಸ್ಥಾನ (೮೫ ವರ್ಷ). ತಾಲ್ಲೂಕು ಕಡೂರು, ಜಿಲ್ಲಾ ಚಿಕ್ಕಮಗಳೂರು.



# ಕುಲ ಹಾಗೂ ಪರಮೆ ಕುಲದ-ಶೋಧನೆ

ರಘು ಆರ್.*

**ಭೋ**ಗಭೂಮಿಯಲ್ಲಿ ಜನಿಸಿದ ಹೆಣ್ಣು-ಗಂಡುಗಳಿಬ್ಬರು ತಮ್ಮ ತಮ್ಮ ಕುಲವನ್ನು ವಂಶ ಉಳಿಸಿ, ಬೆಳಸಿಕೊಂಡು ಬರುತ್ತಿದ್ದಾರೆ.

"ಸತ್ಯವನುಡಿದ" ಅಜ್ಞಾತಕುಲದಿಂದ ಹುಟ್ಟಿದ "ಜಾಬಾಲಾಳ" ಮಗ ಸತ್ಯಕಾಮ ಋಷಿ, ಕುಂಬಾತಿಯ ಮಗ ಸರ್ವಜ್ಞನು, ಮಾತಂಗನ ಮಗಳು ಮಾತಂಗಿ, ಅರುಂಧತಿಯು ಪರಮ ಪತಿವ್ರತೆ (ವಶಿಷ್ಠನ ಹೆಂಡತಿ), ಭೀಷ್ಮನ ತಾಯಿ ಗಂಗೆ (ಪರಮಸುಂದರಿ), ವ್ಯಾಸನ ತಾಯಿ ಮತ್ಸ್ಯಗಂಧಿ (ಸತ್ಯವತಿ), ಗೌತಮ ಮಹರ್ಷಿಯ ತಾಯಿ, ವಶಿಷ್ಠ ಮಹರ್ಷಿಯ ತಾಯಿ ಊರ್ವಶಿ, ಸಾಂಖ್ಯ ಮಹರ್ಷಿಯ ತಾಯಿ ಮಾದಿಗಳು, ಪರಾಶರ ಮಹರ್ಷಿಯ ತಾಯಿ ಮಾದಿಗಳು, ಬೃಹಸ್ಪತಿಯ ತಾಯಿ, ಮುಂತಾದ ಯತಿಗಳು ಕಾಲಘಟ್ಟದಲ್ಲಿ 'ಪರಮೆಕುಲ'ದವರಾಗಿ ಹೋಗಿದ್ದಾರೆ. ಸ್ತ್ರೀಯಗರ್ಭದಲ್ಲಿ ನವಮಾಸ ತುಂಬಿ ನೋವು ನಲಿವು ಅನುಭವಿಸಿ, ಶ್ರೇಷ್ಠಪುತ್ರ ಅಥವ ಶ್ರೇಷ್ಠಪುತ್ರಿಯ ಪಡೆದವಳನ್ನು 'ಪರಮೆಕುಲ'ದವಳೆಂದು, ಸತ್ಯವೆಂದು ತಿಳಿದುಬರುತ್ತದೆ. ಅಂದು ಇಂದು ಮುಂದು ಮಗುವಿಗೆ ಜನ್ಮ ನೀಡುವ ತಾಯಿ, ತಾಯ್‌ತನವನ್ನು, ಕುಲವನ್ನು, ಉಳಿಸಿಕೊಂಡು ಹೋಗುವವಳಾಗಿದ್ದಾಳೆ. ಹೆಣ್ಣು ಮಾಳಿಯಾಗದೆ, ಬಂಜೆಯಾಗದೆ, ಇರುವುದು ಪುಣ್ಯವೆಂದು ಭಾವಿಸಬೇಕು. ಸ್ತ್ರೀಯ ಗುಣಸ್ವಭಾವ ಕರ್ಮಗಳಿಂದ, ಮೌಲ್ಯದ ಮೇಲೆ ಶ್ರೇಷ್ಠಪುತ್ರಿ-ಶ್ರೇಷ್ಠಪುತ್ರನ ಪಡೆದವಳನ್ನು "ಪರಮೆ"ಕುಲದವಳೆಂದು ಒಪ್ಪಬೇಕಾಗುತ್ತದೆ.

ಮಾನವೀಯ ಜ್ಞಾನ, ಗುಣಲಕ್ಷಣಗಳಿಂದ "ಚಂಡಾಲ" ಕುಲದಲ್ಲಿ ಜನ್ಮತಾಳಿದ ಮಾತಂಗನು ಬ್ರಾಹ್ಮಣನಾಗುತ್ತಾನೆ. ಕ್ಷತ್ರಿಯ ಕುಲದಿಂದ ಜನ್ಮತಾಳಿದ ವಿಶ್ವಾಮಿತ್ರನು ಬ್ರಾಹ್ಮಣನಾಗುತ್ತಾನೆ. ವಶಿಷ್ಠ ವಂಶದವನಾದ ಪರಾಶರಮುನಿಯ ಪುರುಷ ಗುಣಸ್ವಭಾವ ಕರ್ಮಗಳಿಂದ "ಪರಮನೆಂದು" ಒಪ್ಪಿಕೊಳ್ಳಬೇಕಾಗುತ್ತದೆ. ಉದಾ: ಭೀಷ್ಮ, ವಶಿಷ್ಠ, ಪರಾಶರ, ವ್ಯಾಸ, ಶುಕ, ಇವರೆಲ್ಲರೂ ಪರಮ ಭಾಗವತರಾಗಿದ್ದಾರೆ.

ಇಸ್ಲಾಂ ಧರ್ಮದಲ್ಲಿ ಜನ್ಮನೀಡಿದ ತಾಯಿ, ಮಗುವಿನ ಜನ್ಮಕ್ಕೆ ಕಾರಣರಾದವರ ತಂದೆಯ ಹೆಸರನ್ನು ಹೇಳದೆ ಹೋದಾಗ ಅವಳನ್ನು ಧರ್ಮಭ್ರಷ್ಟಳೆಂದು, ತಾಯಿ ಮಗುವನ್ನು ಆ ಸಮಾಜದಿಂದ ದೂರವಿಟ್ಟು, ಇಸ್ಲಾಂ ಕುಲಕ್ಕೆ ಸೇರಿಸಿಕೊಳ್ಳುವುದಿಲ್ಲವೆಂದು ಮೌಲ್ವಿಗಳಿಂದ ತಿಳಿದುಬರುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಬೇಡರಕುಲದವನಾದ ರತ್ನಾಕರನು ಸಾಮಾಜಿಕ ಬ್ರಹ್ಮಜ್ಞಾನಿಯಾಗಿ ಆದಿಕವಿಯಾಗಿ, ಮಹರ್ಷಿವಾಲ್ಮೀಕಿಯು ರಾಮಾಯಣವನ್ನು ಸಂಸ್ಕೃತದಲ್ಲಿ ಪ್ರಥಮವಾಗಿ ನವರಸ ಭಾವಗಳನ್ನು ತುಂಬಿ ಮಹಾಕಾವ್ಯವನ್ನು ರಚಿಸಿದ್ದಾನೆ. ಪ್ರಾಪಂಚಿಕ ಜ್ಞಾನದಿಂದ ಬೇಡಬ್ರಾಹ್ಮಣನೆಂದು ಕರೆಯಿಸಿಕೊಂಡಿದ್ದಾನೆ.

ರಾಮಾಯಣದ ಕಾವ್ಯದಲ್ಲಿ ಅಗ್ನಿದೇವತೆಯು ಕೊಟ್ಟ ಪರಮಜೀವ ಅಣು ಸತ್ವಪಾಯಸದಿಂದ (ವರದಿಂದ) ಜನಿಸಿದ ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಜ್ಞರು ಕ್ಷತ್ರಿಯ ಕುಲದ ಸೂರ್ಯವಂಶವೆಂದು (ಇಕ್ಷ್ವಾಕುವಂಶ) ಶ್ರೀರಾಮನನ್ನು ಪರಮಾತ್ಮನೆಂದು (ಪರಮಕುಲವೆಂದು)ತಿಳಿದುಕೊಂಡು ಬರುತ್ತಿದ್ದೇವೆ.

ಈ ಪ್ರಕೃತಿಯ ಬ್ರಹ್ಮಾಂಡದಲ್ಲಿ ಅಯೋನಿಜರು ಮತ್ತು ಯೋನಿಜರು ಎಂದು ಪ್ರಾಣಿ, ಮಾನವ, ದೇವತೆ, ದೇವರುಗಳು, ಸಾಂಸ್ಕೃತಿಕ ಸಮಾಜದಲ್ಲಿ ಸೃಷ್ಟಿಯಾಗಿದ್ದಾರೆ. ಬ್ರಹ್ಮಾಂಡದಲ್ಲಿರುವ ಪ್ರಕೃತಿಯನ್ನು ಪೋಷಿಸುವ ಅಷ್ಟದಿಕ್ಪಾಲಕರಾಗಿ ಭೂಮಿಯಲ್ಲಿ ಜನಿಸಿದ, ವಾಯು, ವರುಣ, ಅಗ್ನಿ, ಭೂಮಿ, ದಂಡಿಸುವ-ಯಮ, ನಿಯಮ-ಕಾನೂನು, ಸೂರ್ಯ-ಚಂದ್ರ ಇವರುಗಳಿಗೆ ಮರಣವಿಲ್ಲವೆಂದು, ಈ ಜಗತ್ತು ಶಾಶ್ವತವೆಂದು ತಿಳಿದುಬರುತ್ತದೆ. ಬ್ರಹ್ಮಾಂಡದ ಪ್ರಾಕೃತಿಕ ಜಗತ್ತಿನ ದೇವರು ಒಬ್ಬನೇ, ಪರಮ ಆತ್ಮಗಳೆಲ್ಲವೂ ಒಂದೇ ಎಂಬ ಸತ್ಯ ತಿಳಿದುಬರುತ್ತದೆ.

ಪ್ರಮುಖವಾದ ದೇವರುಗಳಲ್ಲಿ ಪರಮ-ಬ್ರಹ್ಮ, ಪರಮ-ವಿಷ್ಣು, ಪರಮ-ಶಿವ, ಎಂದು ಸೃಷ್ಟಿ, ಸ್ಥಿತಿ, ಲಯವೆಂದು ಗುಣಾತ್ಮಕ ಮೌಲ್ಯವುಳ್ಳ ಕರ್ಮನಿರತ

* ಚಿತ್ರಕಲಾ ಶಿಕ್ಷಕರು, # ೨೧೮/ಪಿ, ಚಿತ್ರಚಾವಡಿ ಬೀದಿ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ-೫೭೧೪೪೦.

ದೇವರುಗಳಾಗಿವೆ. ಋಷಿಮುನಿಗಳ ಶಾಪದಿಂದ, ಲೋಕ ಕಲ್ಯಾಣಾರ್ಥವಾಗಿ, ಕಾರ್ಯಕಾರಣ ಸಂಬಂಧಗಳಿಂದ ಭೂಲೋಕದಲ್ಲಿ ಜನಿಸಿದ ಶ್ರೀರಾಮ, ಶ್ರೀಕೃಷ್ಣ-ಬಲರಾಮ, ಪರಶುರಾಮರ ಮರಣದ ಸಂಗತಿಯು ತಿಳಿದುಬರುತ್ತದೆ. ಬ್ರಹ್ಮ, ವಿಷ್ಣು, ಶಿವ, ಗಣಪತಿ ಮತ್ತು ಸುಬ್ರಹ್ಮಣ್ಯ ಇವರುಗಳು ಅಯೋನಿಜರಾಗಿ ಜನ್ಮತಾಳಿದ್ದಾರೆ.

ವಾಲ್ಮೀಕಿ ರಾಮಾಯಣ ಮಹಾಕಾವ್ಯದಲ್ಲಿ ಶ್ರೀರಾಮ, ಲಕ್ಷ್ಮಣ, ಭರತ, ಶತ್ರುಘ್ನ ಯೋನಿಜರಾಗಿ ಸೂರ್ಯವಂಶದಲ್ಲಿ ಹುಟ್ಟಿ ಮರಣಹೊಂದಿರುವುದು, ಮತ್ತು ವಂಶ ಬೆಳೆದು ಮುಂದೆ ತಟಸ್ಥವಾಗಿರುವುದು, ಇತಿಹಾಸ ಪುರಾಣದಲ್ಲಿ ಕಂಡುಬರುತ್ತದೆ. ಇವರ ಕುಲವು ಇಕ್ಷ್ವಾಕುವಂಶವಾಗಿ (ಸೂರ್ಯವಂಶ) ಬೆಳೆದಿರುವುದು, ಇತಿಹಾಸದಲ್ಲಿ ಮತ್ತು ಸಾಮಾಜಿಕ ಸಂಸ್ಕೃತಿಯಲ್ಲಿ ಕಂಡು ಬರುತ್ತದೆ. ಕಾವ್ಯವಾದ ಮಹಾಭಾರತದಲ್ಲಿ ಶ್ರೀಕೃಷ್ಣ-ಬಲರಾಮ ಯೋನಿಜರಾಗಿ ಹುಟ್ಟಿ ಜನ್ಮತಾಳಿ ಮರಣಹೊಂದಿದ್ದಾರೆ. ಇವರ ಕುಲ, ಯಾದವ ರೆಂದು ಇತಿಹಾಸದಲ್ಲಿ ಯಾದವ ವಂಶವೆಂದೂ ಉಳಿದು ಕೊಂಡುಬಂದಿದೆ. ದೇವತೆಗಳ ವರದಿಂದ ಮತ್ತು "ಗೋತ್ರ" ಪ್ರವರ್ತಕನಾದ "ಪರಮದೇವ" ಮುನಿಯ ಮಗ ವ್ಯಾಸ ಮುನಿಯ ನಿಯೋಗ ಪದ್ಧತಿಯಿಂದ ಮತ್ತು ಗಾಂಧಾರಿಯ ಪಿಂಡ ಸಂರಕ್ಷಣೆಯಿಂದ ಕೌರವವಂಶ ಬೆಳೆದು ಚಂದ್ರವಂಶ (ಕುರುವಂಶ)ಎಂದು ಬೆಳೆದುಬಂದಿದೆ. ಬ್ರಹ್ಮಾಂಡ ಪ್ರಕೃತಿ ಯಲ್ಲಿ ಇತಿಹಾಸ ಸಂದರ್ಭದಿಂದ, ಪುರಾಣದ ಮೌಲ್ಯಗಳ ಕಥೆಯನ್ನು, ಸಂಘರ್ಷದ ನವರಸ ಕಾವ್ಯವನ್ನು ಸಾಮಾಜಿಕ ವಾಗಿ ಸಂದರ್ಭಕ್ಕೆ ಅನುಸಾರವಾಗಿ ಬರೆದಿರುವುದು ಸತ್ಯವಾಗಿದೆ. ಪುರಾಣದಿಂದ ಇತಿಹಾಸ ರಚನೆ ಸಾಧ್ಯವಿಲ್ಲದ್ದು ಅಪ್ರಸ್ತುತವಾದದ್ದು. ಇತಿಹಾಸದಿಂದ ಪುರಾಣದ ಕಥೆಯನ್ನು ರಚಿಸಿರುವುದು ಸತ್ಯವಾಗಿದೆ.

ಭೋಗ ಭೂಮಿಯಲ್ಲಿ ಪ್ರತಿಜೀವಿ ಮತ್ತು ಮಾನವಕುಲ ಜೀವಿತದಲ್ಲಿ, ಕಾಲ ಕಾಲಕ್ಕೆ ಗಂಗವಂಶ, ಕದಂಬವಂಶ, ಹೊಯ್ಸಳವಂಶ, ರಾಷ್ಟ್ರಕೂಟವಂಶ, ಚಾಲುಕ್ಯವಂಶ, ವಿಜಯನಗರ ಅರಸರ ವಂಶ, ಮೈಸೂರು ಅರಸರ ವಂಶ, ಪಾಳ್ಯಗಾರರ ನಾಯಕರವಂಶ, ಋಷಿ-ಮುನಿಗಳ ವಂಶ ದೇವತೆಗಳ ವಂಶ, ದೇವರುಗಳ ವಂಶ, ನಾಯಕ ಅರಸರ ವಂಶ, ಯತಿಗಳ ವಂಶ, ಚೋಳ ಮತ್ತು ಪಲ್ಲವ ಅರಸರ ವಂಶ, ರಾಜರುಗಳವಂಶ, ದಂಡನಾಯಕರ ವಂಶ ವೀರರ ವಂಶ, ರಾಜ್ಯಕ್ಕಾಗಿ ಬಲಿದಾನ ಮಾಡಿದ ಗರುಡವಂಶ, ಹೀಗೆ ಸಾಂಸ್ಕೃತಿಕ ಜೀವನದ ಇತಿಹಾಸದಲ್ಲಿ ಪ್ರಾಂತೀಯವಾಗಿ ಕುಲವಂಶಗಳ ವರ್ಣಗಳು ಶಿಲಾಶಾಸನಗಳಲ್ಲಿ ದಾಖಲಿಸಿ ದ್ದಾರೆ. ಎಂದು ಕಂಡುಬರುತ್ತದೆ ಮಾನವರ ವರ್ಗಗಳ ಮತ್ತು ಬುಡಕಟ್ಟುಗಳ ವರ್ಣ, ಗಂಡು ಮತ್ತು ಹೆಣ್ಣುಗಳ ಮೂಲ ವರ್ಣಸಂಕರವಾಗಿರುವುದು, ಇತಿಹಾಸದಲ್ಲಿ ಪ್ರಾದೇಶಿಕವಾಗಿ ಕಂಡುಬಂದಿದೆ ಮತ್ತು ದಾಖಲೆಯ ಶಾಸನವಾಗಿದೆ.

ಕುಲ(ವಂಶ)ಗಳ ಗುಣ ಸ್ವಭಾವವನ್ನು ವರ್ಣಿಸುತ್ತಾ, ಪಾಂಡವರ ಕುಲ ವರ್ಣಿಸಿದಾಗ ಯಮನಿಂದ ಧರ್ಮರಾಯ, ವಾಯುವಿನಿಂದ ಭೀಮ, ಇಂದ್ರನಿಂದ ಅರ್ಜುನ, ಅಶ್ವಿನಿ ದೇವತೆಗಳಿಂದ ನಕುಲ, ಸಹದೇವ, ಹೀಗೆ ಹಲವು ಕುಲ ಗೋತ್ರಗಳು, ಸಪ್ತರ್ಷಿಕುಲ ಗೋತ್ರಗಳು, ಶೈವ, ವೈಷ್ಣವ, ಜೈನ ಯತಿಗಳ ಕುಲಗೋತ್ರಗಳು, ಶ್ರೀರಾಮ ಇಕ್ಷ್ವಾಕುವಂಶ, ಶ್ರೀಕೃಷ್ಣ ಯದುವಂಶ (ಗೊಲ್ಲ), ಅಂಜನಾದೇವಿ ಮಗ ಆಂಜನೇಯ ವಾಯುಪುತ್ರ, ಕೌರವರು ಕುರುವಂಶ-ಹೀಗೆ ಪುರಾಣಗಳಲ್ಲಿ, ಕಾವ್ಯಗಳಲ್ಲಿ, ತಿಳಿದುಬರುತ್ತದೆ.

ಯಜ್ಞಾ-ಯಾಗಾದಿಗಳು ಲೋಕಕಲ್ಯಾಣಾರ್ಥವಾಗಿ ನಡೆಯುವ ಸಂದರ್ಭಗಳಲ್ಲಿ ಬೇಡರಪಡೆ, ಬೇಡಬ್ರಾಹ್ಮಣರಿಗೆ ರಕ್ಷಣೆ ನೀಡುತ್ತಿತ್ತು, ಯಜ್ಞದ ಫಲಾಫಲಗಳನ್ನು ಪಡೆಯಲು ಬೇಡರ ಪತ್ನಿಯರಲ್ಲಿ ಬೇಡಯತಿಗಳು, ಬೇಡಬ್ರಾಹ್ಮಣರು, ಪರಸ್ತ್ರೀಗಳ ಸಹಗಮನದಿಂದ ಜನಿಸಿದ ಮಕ್ಕಳನ್ನು ಔರಸಪುತ್ರ ಮತ್ತು ಮಾನಸಪುತ್ರರೆಂದು ಕರೆದು, ಪ್ರೀತಿಯಿಂದ ತೊಡೆಯ ಮೇಲೆ ಕೂರಿಸಿಕೊಂಡು, ವೇದ ಉಪನಷತ್ ಪುರಾಣಗಳನ್ನು ಹೇಳುತ್ತಿದ್ದರೆಂದು, ಉಪನಿಷತ್ ಕಥೆಯ ಭಾಗದಲ್ಲಿ ಕುಲವಂಶಗಳ ಬಗ್ಗೆ ಉಲ್ಲೇಖಿಸಲಾಗಿದೆ.

ದೇವರುಗಳಲ್ಲಿ ಮಾನವದೇಹ-ಆನೆತಲೆ (ರುಂಡ) ಸೇರಿಸಿ ಗಜರಾಜ (ಗಣಪತಿ) ಪಾರ್ವತಿಯ ತನಯ ನಾಗಿ, ಶೈವಸಂಸ್ಕೃತಿಯಲ್ಲಿ ಪುರಾಣದಲ್ಲಿ ತಿಳಿಯುತ್ತದೆ. ಜೈನ ತೀರ್ಥಂಕರನ ಪಾದಪೀಠದಲ್ಲಿ ಶರಭನ ಚಿತ್ರ ಚಿತ್ರಿತವಾಗಿ, ಸಾಂಸ್ಕೃತಿಕ ಸಂಕೇತವಾಗಿದೆ. ಹೀಗೆ ಕಥಾಸಂದರ್ಭಕ್ಕೆ, ಪುರಾಣದ ಸಂದರ್ಭಕ್ಕೆ ಲೋಕಕಲ್ಯಾಣಾರ್ಥವಾಗಿ ಶತ್ರುಗಳನ್ನು ನಾಶಮಾಡಲು ಪಾಮರರ ಗುಣಗಳನ್ನು, ಭಕ್ತರ ಗುಣಗಳನ್ನು ತೋರಿಸಲು ಶರಭೇಶ್ವರಮೂರ್ತಿ, ವಾರಾಹಿ, ಶುಕಮುನಿ (ಗಿಳಿಮುಖ), ನಂದಿ-ಭೃಂಗಿ, ರಾಹು-ಕೇತು, ಗಂಡು ಭೇರುಂಡ, ನವಗ್ರಹ ದಶಾವತಾರಗಳಲ್ಲಿ ಪ್ರಾಣಿಜೀವಿ, ಮಾನವರ ಮಿಶ್ರರೂಪದ ಚಿತ್ರಣ ಸಾಹಿತ್ಯದಲ್ಲಿ, ಚಿತ್ರ ಮತ್ತು ಶಿಲ್ಪಗಳಲ್ಲಿ ಕಂಡುಬರುತ್ತದೆ. ಈ ರೂಪಗಳ ಗುಣಮೌಲ್ಯಗಳ ಹಿನ್ನೆಲೆಯು ಕಥಾಸಂದರ್ಭವು, ಇತಿಹಾಸದ ಪೂರಕ ಚಿತ್ರಣ ವೆಂದು ತಿಳಿದುಬರುತ್ತದೆ. ಇತಿಹಾಸದಿಂದ ಪುರಾಣವನ್ನು ಸೃಷ್ಟಿಸಿರುವುದು ಸತ್ಯವಾಗಿದೆ.

ರಾಜ ಕ್ಷತ್ರಿಯ ಕುಲದ ಅನ್ಯವರ್ಣದ ಕ್ಷತ್ರಿಯಕುಲದಲ್ಲಿ ಕನ್ಯೆಯನ್ನು ಮದುವೆಯಾದರೆ, ಪಟ್ಟದ ರಾಣಿಯಾಗಿ

ಸ್ಥಾನಪಡೆಯುತ್ತಿದ್ದಳು. ರಾಜ ಕ್ಷತ್ರಿಯ ವರ್ಣವನ್ನು ಬಿಟ್ಟು, ಚತುರ್ವರ್ಣಗಳಿಂದ ಕನ್ಯೆಯನ್ನು ಗಾಂಧರ್ವ ವಿಧಿಯಿಂದ (ವಿವಾಹ) ವರಿಸಿದರೆ, ಅವರಲ್ಲಿ ಜನಿಸಿದ ಗಂಡು (ಹೆಣ್ಣು) ಮಕ್ಕಳಿಗೆ ಪಿತೃಗೋತ್ರವಿಟ್ಟು ಅವನ ಗುಣ ಸ್ವಭಾವಕ್ಕೆ, ಬುದ್ಧಿವಂತಿಕೆಗೆ, ವೀರತ್ವಕ್ಕೆ, ದಂಡನಾಯಕನಾಗಿ ಮಂತ್ರಿಯಾಗಿ ಕೋಶಾಧಿಕಾರಿಯಾಗಿ ವಿವಿಧ ಹುದ್ದೆಗಳನ್ನು ನೀಡಿ, ಮಕ್ಕಳ ಪ್ರೀತಿಗೆ ಪಾತ್ರರಾಗುವ ಪದ್ಧತಿಯು ಇತಿಹಾಸದ ಸಾಂಸ್ಕೃತಿಕ ಜೀವನದಲ್ಲಿ ಬೆಳೆದುಬಂದಿದೆ. ಹೆಣ್ಣು ಮಕ್ಕಳಾದರೆ ತಾಯಿ ಕುಲಕ್ಕೆ ಸೇರಿಸಿ ಅವರವರ ವರ್ಣಕ್ಕೆ ಸೇರಿಸಿ ಜಾತಿಗಳಾಗಿವೆ. ಹೀಗೆ ವರ್ಣಸಂಕರವಾಗಿ ನೂರಾರು ಜಾತಿ ಬೆಳೆದಿದೆ. ರಾಜರುಗಳ ಸೈನ್ಯದ ದಂಡಿನಲ್ಲಿ ಸ್ತ್ರೀಕಾಮಾಟಿಗರು ರಾಜರ ಮತ್ತು ಸೈನಿಕರ ಕಾಮತೃಪ್ತಿಗೊಳಿಸಿ, ಅವರಿಂದ ಉಂಟಾದ ಪಿಂಡವನ್ನು ಗೌರವಪೂರಕವಾಗಿ ಸ್ವೀಕರಿಸಿ ಕಾಮಾಟಿಗರ ವಂಶವು ಸಾಮಾಜಿಕವಾಗಿ ಬೆಳೆದು ಕುಲವರ್ಣಗಳಾಗಿ ವರ್ಣಸಂಕರವೆಂದು ತಿಳಿದುಬರುತ್ತದೆ. ರಾಜಮಹಾರಾಜರ ಸಂಘರ್ಷದಲ್ಲಿ ಮಿತ್ರತ್ವದಲ್ಲಿ ಬಾಂಧವ್ಯದಲ್ಲಿ ವೀರರು, ಶೂರರು, ದಂಡ ನಾಯಕರು, ಗರುಡರು, ರಾಜ-ರಾಣಿಯರ, ಯತಿಗಳ ಕುಲವಂಶಗಳು ಬೆಳೆದು ಶಾಸನಗಳಲ್ಲಿ ಉಲ್ಲೇಖವಾಗಿರುವುದು ಕಂಡುಬರುತ್ತದೆ.

ಸಾಮಾಜಿಕ ಸಂಸ್ಕೃತಿಯಲ್ಲಿ ಗಂಡು-ಹೆಣ್ಣುಗಳ ಕುಲಗೋತ್ರಗಳು ತಿಳಿದುಬರುತ್ತದೆ. ಎಡ್ಗರ್ ಥರಸ್ಟನ್ 'ಕ್ಯಾಸ್ಟ ಅಂಡ್ ಟ್ರೈಬ್ ಸದರನ್‌ಇಂಡಿಯಾ' ಎಂಬ ಪುಸ್ತಕದಲ್ಲಿ ಸಾಮಾಜಿಕ ಸಂಸ್ಕೃತಿಯ ಕುಲಗೋತ್ರಗಳನ್ನು ದಾಖಲಿಸಿದ್ದಾನೆ. ತಮಿಳುನಾಡಿನ ಕೊಯಮತ್ತೂರು ಜಿಲ್ಲೆ ಮತ್ತು ಸೇಲಂ ಜಿಲ್ಲೆ ರಿಪೋರ್ಟಿನಲ್ಲಿ ತೊರೆಯ ಜಾತಿಯ ಬಗ್ಗೆ ಹೇಳಿಕೆ ಈ ರೀತಿ ದಾಖಲಿಸಿದ್ದಾನೆ. ಮತ್ಸ್ಯಗಂಧಿಯ ಮತ್ತು ಗಂಧವತಿಯ ತಂದೆ ಮೀನುಹಿಡಿಯುವವ (ದಾಸರಾಜ). ಇವಳು ಹಸ್ತಿನಾಪುರದ ರಾಜನಾದ ಶಂತನುನನ್ನು ಮದವೆ ಯಾಗಿದ್ದಳು. ಈ ಕಥೆಯು ಮಹಾಭಾರತದಲ್ಲಿ ಬರುತ್ತದೆ ಎಂದು ಇವಳ ಸಾಂಸ್ಕೃತಿಕ ಕುಲಗೋತ್ರಗಳಲ್ಲಿ, ವಶಿಷ್ಟಗೋತ್ರ, ಮುಗಿಲಕುಲ, ಎಂದು ದಾಖಲಿಸಿದ್ದಾನೆ.

ಮಹಾಭಾರತದ ಕಾವ್ಯದಲ್ಲಿ ಬರುವ ಹಸ್ತಿನಾಪುರದ ಕ್ಷತ್ರಿಯ ಕುಲದರಾಜ ಶಂತನು ಪರಮಸುಂದರಿ ಗಂಗಾದೇವಿ, ಗಂಗಾಕುಲದ ಕನ್ಯೆಯನ್ನು ಗಾಂಧರ್ವವಿಧಿಯಿಂದ ವರಿಸುತ್ತಾನೆ ಮಾತುಕೊಟ್ಟಂತೆ. ಗಂಗೆಯು ಜನಿಸಿದ ೬ ಮಕ್ಕಳನ್ನು ನದಿನೀರಿಗೆ ತೇಲಿಬಿಡುತ್ತಾಳೆ. ಶಂತನು ತನ್ನ ವಂಶಕ್ಕೆ ಪುತ್ರ ಬೇಕೆಂದು ಗಂಗೆಗೆ ಕೊಟ್ಟ ಒಪ್ಪಂದದ ಕರಾರನ್ನು ಮುರಿದು, ೭ನೇ ಮಗುವನ್ನು ತನ್ನಲ್ಲಿ ಉಳಿಸಿಕೊಳ್ಳುತ್ತಾನೆ. ಗಂಗೆಯು ಶಂತನು ರಾಜನಿಂದ ಮುನಿಸಿಕೊಂಡು ಜಾತಿಕುಲಗಳ ಸಾಮಾಜಿಕ ಮೌಲ್ಯಗಳಿಂದ ದೂರ ಸರಿಯುತ್ತಾಳೆ. ಗಂಗಾ ಪುತ್ರನು ಕ್ಷತ್ರಿಯ ವಂಶದವನಾಗಿ ಬೆಳೆಯುತ್ತಾನೆ. ದೇವವ್ರತನು ಪ್ರಾಪ್ತವಯಸ್ಕನಾದ ಸಂದರ್ಭದಲ್ಲಿ, ಶಂತನು ಕಿರಾತರಪಾಳ್ಯದ ದಾಸರಾಜನ ಮಗಳು (ಸತ್ಯವತಿ) ಸುಗಂಧಿನಿಯನ್ನು ಮೋಹಿಸಿ ಚಿಂತಾಕ್ರಾಂತನಾಗುತ್ತಾನೆ. ದೇವವ್ರತನು ತಂದೆಯ ಮನೋಭಿಲಾಸದಂತೆ ಮತ್ತು ಪಾಳ್ಯದ ದಾಸರಾಜನ ಕಟ್ಟುಕರಾರಿನಂತೆ ಸುಗಂಧಿನ ಹೊಟ್ಟೆಯಲ್ಲಿ ಹುಟ್ಟಿದ ಪುತ್ರನಗೆ ಪಟ್ಟಕಟ್ಟುತ್ತೇನೆಂದು, ಈ ರಾಜ್ಯಕ್ಕೆ ರಕ್ಷಕನಾಗಿರುತ್ತೇನೆಂದು ಶಪಥಮಾಡುತ್ತಾನೆ. ದೇವವ್ರತನು ಭೀಷ್ಮ ಪ್ರತಿಜ್ಞೆ ಮಾಡಿದ್ದರಿಂದ ದೇವತೆಗಳು ಭೀಷ್ಮನೆಂದು ಕರೆಯುತ್ತಾರೆ. ರಾಜ್ಯ ಭೋಗ ಸುಖವನ್ನು ಎಲ್ಲಾ ಭಾಗ್ಯಗಳನ್ನು ತೊರೆದು ತೊರವಿಯಂತಾಗು ತ್ತಾನೆ. ಗಂಗಾಪುತ್ರ ಗಾಂಗೇಯ ಭೀಷ್ಮ ಪರಮಪುತ್ರನೆಂದು (ಪೆರುಮ್ಮೈ ಮಗನ್) ಕರೆಯಿಸಿಕೊಳ್ಳತ್ತಾನೆ.

ಮಹಾಭಾರತದ ಹಸ್ತಿನಾಪುರದ ರಾಜ ಶಂತನು ಹೆಂಡತಿ ಸುಗಂಧಿನಿಯ (ಸತ್ಯವತಿ) ಮಕ್ಕಳಾದ ಚಿತ್ರಾಂಗದ, ವಿಚಿತ್ರ ವೀರ್ಯ ಇವರು ಅಕಾಲ ಮೃತ್ಯುವಿಗೆ ಈಡಾದರು. ಸೊಸೆ ಯಂದಿರಾದ ಅಂಬಿಕೆ ಅಂಬಾಲಿಕೆಗೆ ಮಕ್ಕಳಿರಲಿಲ್ಲ, ಹೀಗಾಗಿ ಈ ವಂಶ ಬೆಳೆಯದೆ ನಿಂತು ಹೋಗುವುದಲ್ಲಾ ಎಂದು ಸತ್ಯವತಿಗೆ ಚಿಂತೆಯಾಯಿತು. ಮತ್ಸ್ಯಗಂಧಿಯ ಮೊದಲನೆಯ ಮಗ ವ್ಯಾಸರನ್ನು (ಪರಮದೇವಮುನಿಯ ಮಗ ವ್ಯಾಸ) ಕರೆದಳು, ತಮ್ಮನ ವಂಶ ಬೆಳೆಯಲು ಹೇಳಿದಳು. ಈ ಸಂದರ್ಭದಲ್ಲಿ ವ್ಯಾಸನ ನಿಯೋಗ ಪದ್ಧತಿಯಿಂದ ಅಂಬಿಕೆ ಅಂಬಾಲಿಕೆಗೆ ಧೃತರಾಷ್ಟ್ರ ಮತ್ತು ಪಾಂಡುಕುಮಾರ, ದಾಸಿಯಿಂದ ವಿದುರ ಹುಟ್ಟಿ ವಂಶ ಬೆಳೆಯಲು ಅವಕಾಶ ವಾಯಿತು. ದೂರ್ವಾಸ ಮುನಿಯು ಕುಂತಿಗೆ ಕೊಟ್ಟ ವರದಿಂದ ಪಂಚಪಾಂಡವರ ವಂಶ ಬೆಳೆಯಿತು ಪಾಂಡುವಂಶವೆಂದು ಗುರ್ತಿಸಿಕೊಂಡಿದೆ.

ಧೃತರಾಷ್ಟ್ರನ ಹೆಂಡತಿ ಗಾಂಧಾರಿಯು ಕುಂತಿಗೆ ಆದ ಮಕ್ಕಳ ವಿಷಯ ತಿಳಿದು ಹೊಟ್ಟೆಕಿಚ್ಚಿನಿಂದ ಹೊಟ್ಟೆಯನ್ನು ಕಿವಿಚಿಕೊಳ್ಳುತ್ತಾಳೆ. ಆಗ ಪಿಂಡ ಕಳಚಿಕೊಳ್ಳತ್ತದೆ ಮತ್ತೆ ಸತ್ಯವತಿಯು ವ್ಯಾಸನನ್ನು ಕರೆಯಿಸಿ ಈ ಪಿಂಡವನ್ನು ರಕ್ಷಿಸಲು ಹೇಳುತ್ತಾಳೆ. ೧೦೧ ಕುಂಬಗಳಲ್ಲಿ ಪಿಂಡವಿಟ್ಟು ೧೦೦ ಗಂಡು ಮತ್ತು ಒಂದು ಹೆಣ್ಣುಮಗುವನ್ನು ಪಡೆಯಲು ವ್ಯಾಸನು ಕಾರಣನಾಗುತ್ತಾನೆ. ಹೀಗೆ ಕೌರವ ವಂಶ ಮತ್ತು ಪಾಂಡವ ವಂಶ ಬೆಳೆದಿದೆ. ಕಿರಾತನ ಮಗಳು ಸತ್ಯವತಿ ಪರಾಶರ (ಪರಮದೇವ) ಮುನಿಯಿಂದ ವ್ಯಾಸನನ್ನು ಮತ್ತು ಶಂತನು ರಾಜನಿಂದ ಮಕ್ಕಳನ್ನು ಪಡೆದಿದ್ದು ಹಾಗೂ "ಭೀಷ್ಮ ತನುಜ" ಸರತತಿಯನ್ನು ಹಿರಿಯಮಗನಾದ ವ್ಯಾಸನಿಂದ ಪುತ್ರಸಂತಾನ ಪಡೆದಿದ್ದು, ಪಿಂಡವನ್ನು ರಕ್ಷಣೆಮಾಡಿದ್ದು

ವಂಶವಾಹಿನಂಯು ಬೆರಿಕೆಂಯಾಗಿರುವುದು ತಿಳಿದುಬರುತ್ತದೆ. ಈ ಕಥೆಯನ್ನು ಎಡ್ಗರ್ ಥರಸ್ಟನ್ ತೊರೆಯ ಜಾತಿಯ ಪದ್ಧತಿಯಲ್ಲಿ ಸಂಸ್ಕೃತಿಯ ವಿಷಯ ಸಂಗ್ರಹ ಮಾಡುವಾಗ, ಮತ್ಸ್ಯಗಂಧಿಯನ್ನು (ಗಂಧವತಿ)ವಶಿಷ್ಠ ಗೋತ್ರ, 'ಮುಗಿಲಕುಲ' ದವರು ಎಂದು ದಾಖಲಿಸಿ ಕೊಂಡಿದ್ದಾನೆ.

ಕಿಟಲ್–ಕನ್ನಡ–ಇಂಗ್ಲೀಷ್‌ನ ನಿಘಂಟಿನಲ್ಲಿ 'ಪರಮೆ' ಎಂದರೆ ಉತ್ತಮವಾದ ಕನ್ಯೆ ಎಂದು ಹೇಳಿದ್ದಾನೆ ಈ ಸತ್ಯದಿಂದ "ಪರಮ–ಪರಮೆಕುಲ" ಕುಲಗೋತ್ರದಿಂದ ಎಡತೊರೆ ನಾಡಿನಲ್ಲಿ ಗಂಗರ (ತಲಕಾಡಿನ) ವಂಶವನ್ನು ಸತ್ಯವನ್ನು ಶಾಸನಗಳಿಂದಲೂ ಶೋಧಿಸಲಾಗಿದೆ ಎಡತೊರೆ ನಾಡಿನಲ್ಲಿ ರಾಜ ಮಹಾರಾಜರ ಸಂಘರ್ಷದಲ್ಲಿ ವೀರ–ಶೂರರ ದಂಡನಾಯಕರ, ಗರುಡರ, ರಾಜ–ರಾಣಿಯರ, ಯತಿಗಳ, ಧರ್ಮಾತ್ಮರ, ಸ್ತ್ರೀಕುಲ ವಂಶಗಳು ಶಾಸನಗಳಲ್ಲಿ ಕಂಡು ಬರುತ್ತದೆ.

೦೧. ಗಂಗವಂಶ :– ಪೃಥ್ವಿಪತಿ ಶ್ರೀಪುರುಷ ಪ್ರಥಮ ನಾಮಧೇಯ, ತಾ.ಶಾ.ಗಳಿಗೆಕೆರೆ. ನಾ.ತಾ: ಮಂಡ್ಯಜಿಲ್ಲೆ

೦೨. ಪರಮಗೂಳ :– ಪರಮಗೂಳನ ಮಗ ಹರಿಕೇಸರಿ ತಲಕಾಡು.೨೦೭.ತಿ.ನ.ತಾ:ಮೈ,ಜಿ, ಶ್ರೀಮತ್ಪರಮ ಗಂಭೀರ ಶ್ಲೋಕ ಶಾಸನಗಳಲ್ಲಿದೆ.

೦೩. ಬಾಣವಂಶ :– ಪೃಥ್ವಿ ನಿರಗುಂದರಾಜ–ಪರಮಗೂಳ ದೇವರಹಳ್ಳಿ. ನಾ.ತಾ.ಶಾ.೧೪೯ ಮಂಡ್ಯಜಿಲ್ಲೆ.

೦೪.ಮುಗಿಲಕುಲ:– ಶ್ರೀಮನ್‌ಮುಗಿಲಕುಲದಲ್ಲಿ, ಕನ್ನೆಯನಾಯಕ(ಲೆಂಕವಾಳಿಯನಾಯಕರವಂಶ) ೧೨ನೇ ಶತಮಾನ ವಿಷ್ಣುವರ್ಧನ ರಾಜರ ಗರುಡ ರಾಗಿದ್ದು ಅಗ್ರಹಾರ ಬಾಚಳ್ಳಿ ಕೆ.ಆರ್.ಪೇಟೆ ತಾ: ಮಂಡ್ಯಜಿಲ್ಲೆ.

೦೫. ಬ್ರಹ್ಮಕ್ಷತ್ರಿಯಕುಲ:–ಚಾವುಂಡರಾಯ (ಮಂತ್ರಿ) ದಂಡನಾಯಕ. ಆಲೂಗೂಡು, ತಿ.ನ.ತಾ:ಮೈ.ಜಿ.

೦೬. ರಾವಳಕುಲ:– ಮೈಸೂರು ಸಂಸ್ಥಾನ, ೧೬ ಜಾತಿಗಳಲ್ಲಿ ಈ ಸಂಸ್ಕೃತಿಯಾಗಿದೆ. ರಾವಳಮೊದಲಿಯಾರ್‌ಮಗನ್ ಗಂಗಾಧರದೇರ್ವಮಗನ್ ವಿಷ್ಣುವರ್ಧನ ಕಾಲ ೧೨ನೇ ಶತಮಾನ ತಲಕಾಡು.ತಿ.ನ.ತಾ:ಮೈ.ಜಿ.

೦೭. ತಾಮ್ರಕಶ್ಯಪಕುಲ:–ಪುನ್ನಾಟದರಾಜ (ಪುಂರಾಷ್ಟ್ರ) ರಾಷ್ಟ್ರವರ್ಮನು ಎಡೆತೊರೆನಾಡು ಮಾಂಬಳ್ಳಿ ಯ.ತಾ: ಚಾ.ನ.ಜಿ.

೦೮. ಮಣಲೆವಂಶ:–ಮಣಲೆಅರಸ–ಅಧಿಕಾರಿ (ಸಗರವಂಶ) ವೀರಕಲ್ಲುಣಿ. ತಿ.ನ.ತಾ:ಮೈ.ಜಿ.

೦೯. ಹಾರೀತವಂಶ:–ಹೆಣ್ಣುಮಗಳು ಕದಂಬ (ಸಗರವಂಶ) ಕುಂಧಾಚ್ಚಿ ನಿರ್ಗಂದದ ಪರಮಗೂಳ ರಾಜನ ಹೆಂಡತಿಯಾಗಿದ್ದಳು(ಮರುವರ್ಮರಾಜನ ಮಗಳು)

೧೦. ಪರಮೆಕುಲ:–ತೊರೆಯರ ತಾತಣ್ಣ ಬಿನ್ ಮಾರಣ್ಣ ಹಳ್ಳದಮಾದಳ್ಳಿ.ಗು.ಪೆ.ತಾ: ಮೈ.ಜಿ.

೧೧. ಹಾರಿದ್ರಗೋತ್ರ:–ಪರಪದಿ ಬಟ್ಟ ಬ್ರಾಹ್ಮಣ.

೧೨. ಮೋಡ(ದ)ಕುಲ:–ಪೆರುಮಾಳ ದಂಡನಾಥನ (ದಣ್ಣಾನಾಯಕ) ತ್ರಿಯಂಬಕಪುರ, ಮತ್ತು ತೆರಕಣಾಂಬಿ ಗು.ತಾ.ಚಾ,ಜಿ. ಮತ್ತು ಎಡತಲೆ ನಂಜನಗೂಡು. ತಾ: ಮೈ.ಜಿ.

೧೩. ಪರಮ–ಪ್ರಥಮ:–ಚರಮ–ಕೊನೆಯ ಪರಮ–ಸನ್ಯಾಸಿ ರಾವಳ–ಸನ್ಯಾಸಿ ತೊರವಿ–ಸನ್ಯಾಸಿ ತಮಿಳಿನಲ್ಲಿ ಅರ್ಥಬರುತ್ತದೆ.

೧೪. ತೊರೆಯಕುಲ:–ಮೈಸೂರು ಸಂಸ್ಥಾನದ ತೊರೆಯ ಜಾತಿಯ ಮಾರನಾಯಕ ಮೈಸೂರು ಸಂಸ್ಥಾನ ಚರಿತಸಾರ ಪಠ್ಯಪುಸ್ತಕ.

೧೫. ಎರುಮೈನಾಯಕ:– (ಎಮ್ಮೆಕುಲ) ಭೂಮಿಕುಲ, ವಡಗರು, ಬೆಳ್ಳಿಕುಲ, ನಾಗರಕುಲ ತೊರೆಯಬಡಗರು ಮುಂತಾದವುಗಳು.

೧೬. ಪರಮದೇವ:–ಏಚಿರಾಜನ ಪೂಚಕಬ್ಬೆಯ ಪುತ್ರ ನಖಿಳ ತೀರ್ಥಂಕರ ಪರಮದೇವ, ಪರಮಚರಿತಾ (ಗಂಗರಾಜನ ತಂದೆ ಏಚಿರಾಜನ ಪೂಚಕಬ್ಬೆಯ ಪುತ್ರ ಪರಮನ ಹೆಂಡತಿ ಲಕ್ಷ್ಮೀ) ಶ್ರವಣಬೆಳಗೊಳ, ಹಾಸನ ಜಿಲ್ಲೆ.

**ಪರಮೆಕುಲದ ಶಾಸನ. (ಪರಮೆಯರಕುಲ) ಗುಂಡ್ಲುಪೇಟೆ ತಾಲ್ಲೂಕು**

ಹಳ್ಳದಮಾದಹಳ್ಳಿ ಶಾಸನ ಸಂಖ್ಯೆ ೮೩ ೧೧ನೇ ಶತಮಾನ ಪರಮೆಯರ ಕುಲ ಬಗ್ಗೆ ತಿಳಿಯುತ್ತದೆ

೧. ಸ್ವಸ್ತಿ ಶ್ರೀಮತ್ ಪರಮೆಯರ ಕು

೨. ಲದ ತೊರೆಯರ ಮಾರಣ್ಣಗಂ ಅನ್ನವ್ವೆಯಕ್ಕಂಗಂಪುಟ್ಟ

ಗುಂಡ್ಲುಪೇಟೆ ತಾ: ಹಳ್ಳದಮಾದಹಳ್ಳಿ ಶಿಲಾಶಾಸನದಲ್ಲಿ ಸ್ವಸ್ತಿ ಶ್ರೀಮತ್ ಪರಮೆಯರ ಕುಲದ ತೊರೆಯರ ಮಾರಣ್ಣ ನಿಗೂ ಮತ್ತು ಅನ್ನವ್ವೆಯಕ್ಕಂಗೆ ಹುಟ್ಟಿದವ ತಾತಣ್ಣನೆಂದು ಜಾತಿ ಕುಲ ಗುಣ ಮೌಲ್ಯಗಳನ್ನು ಪರಮೆಯರ ಕುಲದಿಂದ ತಿಳಿಸುತ್ತದೆ ("ಪರಮಕುಲದ–ಪರಮೆಕುಲದ" ಇತಿಹಾಸ ಪುರಾಣದಲ್ಲಿ ಮಹಾಭಾರತದಲ್ಲಿ ಕಂಡು ಬರುತ್ತದೆ) ಪಡಿಗೆರೆ ಗ್ರಾಮವನ್ನು ವಾವಿನಾಯಕನ (ದಂಡನಾಯಕ) ವಿದಾತ್ತ

ಶ್ರೀಮಾದವಯ ದೇವರಿಗೆ ಸ್ನಾನಕ್ಕೆ ಆ ಕವಿಲೆಯನ್ನು ಬಿಟ್ಟು ನನ್ದನವನವನ್ನು ಮಾಡಿಸಿ ನಂದಾ ದೀವಿಗೆಯನ್ನು ಹೂಮಾಲೆ ಯನ್ನು ಕೊಟ್ಟು ಪೂಜಿಸಲು ನಿಯಮಿಸಿದ್ದನು. ವಯಸ್ಸಿನಲ್ಲಿ ಬ್ರಹ್ಮಚಾರಿರ್ಯವನ್ನು ಪಾಲಿಸಿ ಸಂಸಾರವೆಂಬ ತೊರೆಯಲ್ಲಿ ಬೆಸೆದು ತೊರೆಯಲ್ಲಿ ಮುಳುಗಿ ಈಜುವಂತ ವನಾಗಿ ಯಾರಿಂದಲೂ ನಂದನೆಯು ಬೇಡವೆಂದೂ ಪರಮನಲ್ಲಿ ಬೇಡಿಕೊಳ್ಳುತ್ತಾನೆ. ಈ ಶಾಸನವು ದಶದಿಕ್ಕಿನಲ್ಲಿ ಕೀರ್ತಿ ಪಡೆದ 'ಪರಮಭೀಷ್ಮನ' ನೆನಪು ಸ್ಮರಿಸುವ ಸಾರಾಂಶವನ್ನು ತಿಳಿಸುತ್ತದೆ.

ಜೈನರ ಪರಮಾರ್ಥ ಪದಕೋಶದಲ್ಲಿ 'ಪರಮಕುಲ' ನೋಡಿ ಆಜ್ಞಾಚಕ್ರ ಎಂದು ತಿಳಿಸಿದೆ. ಎಡತೊರೆಯ ದಂಡಾಧಿಕಾರಿ ಹಾಗೂ ದಂಡನಾಯಕ ಸಂದರ್ಭಕ್ಕೆ, ನ್ಯಾಯಕ್ಕೆ ಧರ್ಮಕ್ಕೆ ಸತ್ಯಕ್ಕೆ ಗುರುವಾಕ್ಯ ಪರಿಪಾಲನೆ ಮತ್ತು ಶಿಕ್ಷಿಸುವವನು ಕಟ್ಟಾಜ್ಞೆ ಮಾಡಿ ಸರ್ವಕಾಲಕ್ಕು ನಡೆಯುವಂತೆ ಚಕ್ರಾದೇಶ ಪಾಲಿಸಿ ಆದೇಶ ಮಾಡುವವನನ್ನು ಪರಮ ಕುಲದವರೆಂದು ತಿಳಿದುಬರುತ್ತದೆ.

೧. ವೈದಿಕ ಪರಂಪರೆಯಲ್ಲಿ 'ಪರಮ' ಎಂದರೆ ಶ್ರೇಷ್ಠ (ತಮಿಳಿನಲ್ಲಿ ಪೆರುಮೈ) ಎಂಬ ಅರ್ಥವಿದೆ ಪರಮನ ಹೆಸರಿನಲ್ಲಿ ಶ್ರೀಮತ್‌ಪರಮ ಗಂಭೀರ ಎಂದು ಶ್ರವಣಬೆಳಗೊಳದ ಹಲವು ಜೈನ ಶಾಸನಗಳಲ್ಲಿದೆ.

೨. ತಮಿಳುನಾಡು ಧರ್ಮಪುರಂ ಜಿಲ್ಲೆ ಪುತ್ತನ್ ಕೊಟ್ಟೈ ಪಿರುದಿ ಗಂಗದಿ ಕಟ್ಟಣ್ಯೆ ಪರುಮರ್ ಎಂದಿದೆ. ಕಟ್ಟಣ್ಯೆ ಪರುಮರ್ ಎಂದರೆ ಗಂಗ ಅರಸರ ಹೆಸರಾಗಿದೆ. ಕಡ್ಡಾಣಿ (ಕಟ್ಟಣ್ಯೆ) ಎಂಬುದು ಶ್ರೀಪುರುಷನ (ರಾಜನ) ಬಿರುದಾಗಿದೆ.

೩. ಕೃಷ್ಣಪಾಡಿಯಂ ಮತ್ತೊಂದು ಶಾಸನದಲ್ಲಿ ಕಟ್ಟಣ್ಯೆ ಪರಮರನ ಆಳ್ವಕೆ ಕೃಷ್ಣಗಿರಿ ಜಿಲ್ಲೆ ತಮಿಳುನಾಡಿನಲ್ಲಿದೆ. (ತೊರೆಯರ್ ಸಮೂಹ, ತೊರೆಯನ್ ಮತ್ತು ತೊರೆವಾಳ್ ನಾಯಕರೆಂದು ಜಾತಿ ಸೂಚಕವಾಗಿ ಬಳಸಿದ್ದಾರೆ).

೪. ಮೂಗೂರು ನಾಡಾಳುವ ಚಿಟಿಯನಾಯಕನ ಮಗ ಪೆರಮಾಳನಾಯಕನು ಹಲವು ನಾಯಕರು ವೀರ ಸ್ವರ್ಗಸ್ತರಾದವರ ಹೆಸರನ್ನು ಶಾಸನದಲ್ಲಿ ಹೇಳಿದ್ದಾನೆ.

೫. ಅರಿಕೇಸರಿಯ ತಂದೆ "ಪರಮಕೂಳನು" ರಾಜ ಶ್ರೀಪುರುಷನ ಕಾಲದಲ್ಲಿ, ತೊರೆಯನಾಡಿನಲ್ಲಿ ಅರಸರು ಮತ್ತು ಅಧಿಕಾರಿಗಳಿದ್ದರೆಂದು ತಿಳಿಯುತ್ತದೆ.

೬. ಕಂಪಲಿ ರಾಜ್ಯ (ಕುಮ್ಮಟದುರ್ಗ) ಬೇಡರಕುಲದ ಪುವ್ವಾಲಿಗೋತ್ರ (ಪೆರಮನಾಯಕ) ಶ್ರೀಸಂಗಮೇಶ್ವರ ದೇವನ ಪಾದಪದ್ಮಾರಾಧಕರುಮಪ್ಪ ಮುಮ್ಮಡಿ ಸಿಂಗೆಯನಾಯಕನ ಕುಮಾರ ವೀರಕಂಪಿಲದೇವನು ತಮ್ಮ ತಾಯಿ ಮಾದಯನಾಯಕಿನಿ ಸಿಂಗೆಯನಾಯಕ ಪೆರುಮಾಳನಾಯಕ ಈ ಮೂವರ ಸ್ಮರಣೆಗೆ ಲಿಂಗ ಪ್ರತಿಷ್ಠೆ ಮಾಡಿಸಿದ್ದಾರೆ, ಎಂಬುದು ಶಾಸನದಿಂದ ತಿಳಿದುಬರುತ್ತದೆ (ಮದ್ರಾಸ್ ರಿಪೋರ್ಟ್).

೭. ತುಳುವಂಶದ ಶ್ರೀಕೃಷ್ಣದೇವರಾಯ ರಾಜಾಧಿರಾಜ, ರಾಜಪರಮೇಶ್ವರ, ರಾಜವಾಲ್ಮೀಕಿಂ ಮತ್ತು ರಾಜವ್ಯಾಸಂ ಎಂಬ ಬಿರುದನ್ನು ಕ್ರಿ.ಶ. ೧೫೩೫ರಲ್ಲಿ ನೀಡಿದ್ದು ದೇವಲಾಪುರ ತಾಮ್ರಶಾಸನದಲ್ಲಿ ತಿಳಿಸುತ್ತದೆ. (ನಾ.ತಾ॥ ಮಂ.ಜಿ.)

೮. ಚಾಮರಾಜನಗರ ಜಿಲ್ಲೆ ಹರದನಹಳ್ಳಿ ಗ್ರಾಮದ ತಾಮ್ರಶಾಸನ ಕ್ರಿ.ಶ. ೧೩೪೫ ಶ್ರೀಮಲ್ಯೆ ಮಹದೇಶ್ವರ ಸ್ವಾಮಿಯು ಬೇಡರ ಕಂನಯನಂದ ಪೂಜಿಸಿಕೊಂಡು ಬೇಡರ ಕಂನಯನ ದೃಡಕ್ಕೆ ಮೆಚ್ಚಿ ಮೋಕ್ಷವಂ ಕೊಟ್ಟು ಬೇಡಕಂಪಣ ಪಟಗಾರ ರಾಯಣ್ಣನಾಯಕನಗೆ ಬಿಳಿಛತ್ರಿ ಪಂಚೆ ಒಂಟಿತೋಡ ಬಳೆಸಾಲು ಕೊಟ್ಟು ಈ ವಂಶದವರು (ಬೇಡರು ಲಿಂಗಧಾರಣೆ ಮಾಡಿಸಿ ಕೊಂಡು ಬೇಡ ಕಂಪಣರಾದರು) ಪೂಜೆ ಸಲ್ಲಿಸಲಿ ಎಂದು ತಾಮ್ರಶಾಸನದಲ್ಲಿ ನಮೂದಿಸಿದೆ. (ಇವರಿಗೆ ಲಿಂಗಧಾರಣೆಯಾಗಿದ್ದರು ವೀರಶೈವ ಲಿಂಗಾಯತರಿಗೆ ಹೆಣ್ಣು ಕೊಟ್ಟು ತರುವ ಸಂಪ್ರದಾಯ ವಿರುವುದಿಲ್ಲ ಇವರನ್ನು ತಮ್ಮಡಿಗಳೆಂದು ಕರೆಯುತ್ತಾರೆ).

೯. ಮೈಸೂರು ಸಂಸ್ಥಾನದ ಮೂಲ ಪುರುಷ ತೊರೆಯ ಜಾತಿಯ ಮಾರನಾಯಕನು ಕ್ರಿ.ಶ. ೧೪೯೯ರಲ್ಲಿ ದಂಡನಾಯಕನಾಗಿದ್ದು ಅಧಿಕಾರಕೋಸ್ಕರ ಯದುವಂಶದ ಕನ್ಯೆಯನ್ನು ಲಗ್ನವಾಗಲು ಕೇಳಿ ದುರಾದೃಷ್ಟದಿಂದ ಮೋಸಕ್ಕೆ ಬಲಿಯಾಗಿ, ಅಧಿಕಾರ ಕಳೆದುಕೊಂಡು ಮೋಸದಿಂದ ಕೊಲ್ಲಲ್ಪಟ್ಟನು. ಎಂದು ಮೈಸೂರು ಸಂಸ್ಥಾನದ ಚರಿತ್ರೆ ಪಠ್ಯಪುಸ್ತಕದಿಂದ ತಿಳಿದುಬರುತ್ತದೆ.

೧೦. ಕಾವೇರಿ ಕಬಿನಿನಾಡು ಪುನ್ನಾಟದ ರಾಜ ದಂಡ ನಾಯಕರು ಈ ಪ್ರದೇಶದಲ್ಲಿ ಸಾಮಾಜಿಕವಾಗಿ ಕ್ಷಾತ್ರಾಮನೋಧರ್ಮದ ಬೇಡರು ವೀರಪುರಷರಾಗಿ, ಧೀರರು, ಶೂರರಾಗಿ ಯುದ್ಧ ಸಂದರ್ಭಗಳಲ್ಲಿ ಕಾಡುಮೃಗ ಬೇಟೆಯ ಸಂದರ್ಭಗಳಲ್ಲಿ ಶೌರ್ಯದಿಂದ ಹೋರಾಡುತ್ತಿದ್ದರು. ಬೇಟೆಯ ನಾಯಿಗಳನ್ನು ಯುದ್ಧಗಳಲ್ಲಿ ಬಳಸುವುದು ಹಾಗೂ ಅಶ್ವದಳ,

ಅಶ್ವರೋಹಣ ವಿದ್ಯೆಯಲ್ಲಿ ಪಾರಂಗತರಾಗಿದ್ದರು ಮತ್ತು ಆನೆಗಳನ್ನು ಪಳಗಿಸಿ ಗಜಪಡೆಯನ್ನು ರೂಢಿಸಿಕೊಂಡು ಯುದ್ಧ ಮಾಡುತ್ತಿದ್ದರು. ಗಜಶಾಸ್ತ್ರ ಮತ್ತು ಅಶ್ವಶಾಸ್ತ್ರ ಗ್ರಂಥಗಳನ್ನು ಬರೆದಿದ್ದರೆಂದು ತಿಳಿದುಬರುತ್ತದೆ. ಎರಮೈನಾಡೆಂದು ಮಹಿಶ ನಾಡೆಂದು ಉಲ್ಲೇಖಿಸಲಾಗಿದೆ. ಎಮ್ಮೆಗಳ ಕುರಿಗಳ (ಮೇಕೆ) ಪಶುಪಾಲನೆಯನ್ನು ಮಾಡುತ್ತಿದ್ದರು. ಎರುಮೆ ಕುಲದವರು (ಎಮ್ಮೆ ಕುಲದವರು) ಭೂಮಿಕುಲದವರು, ನಾಗಕುಲದವರು, ತೊರೆಯಬಡಗರು, ವಡಗರು ಮತ್ತು ಪೂರ್ವದಿಕ್ಕಿನಲ್ಲಿ ಊರನ್ನು ಕಟ್ಟಿಕೊಂಡು ಎಡತೊರೆನಾಡೆಂದು ಮತ್ತು ತೊರೈಕಾರಟ್ಟಿ ತೊರೆಯನಾಡೆಂದು ಗುರ್ತಿಸಿಕೊಂಡಿರುವುದು ಶಾಸನಗಳಿಂದ ಕಂಡುಬರುತ್ತದೆ ಇದಕ್ಕೆ ಪೂರಕವಾಗಿ ವೀರಗಲ್ಲುಗಳಲ್ಲಿ ೧೧೬ ರಾವಳೇಶ್ವರನ ಶಿಲ್ಪಗಳಲ್ಲಿ ಪೀಠಭಾಗದಲ್ಲಿ ಸೈನಕರು ಮತ್ತು ಗುದ್ದಾಟದ ಟಗರು ಹೋರಾಟದ ಸಂಕೇತವಾಗಿ ಬಳಸಿ ಉಬ್ಬು ಶಿಲ್ಪಗಳಲ್ಲಿ ಕೆತ್ತಿರುವುದು ಕಂಡುಬರುತ್ತದೆ (ಷ. ಶೆಟ್ಟರು) ಆರಂಭಕಾಲದ ದ್ರಾವಿಡ ಸಂಬಂಧದ ಸಂಸ್ಕೃತಿಯ ಚಿಂತನೆಮಾಡಿ ಶಂಗಂ-ತಮಿಳಗಂ. ಎಂಬ ಕನ್ನಡನಾಡು-ನುಡಿಯಲ್ಲಿ ಬೇಡರ ಸಂಸ್ಕೃತಿಯ ಬಗ್ಗೆ ತಿಳಿಸಿಕೊಟ್ಟಿದ್ದಾರೆ.

೧೧. ಪ್ರೊ. ಒ.ಡಿ. ಹೆಗ್ಗಡೆಯವರು ಹಾಲುಮತ ಪುರಾಣದಲ್ಲಿ ಹೇಳಿರುವಂತೆ ಮೂಲನಿವಾಸಿಯಾದ ಬೇಡ ಜನಾಂಗ, ಚೋಳರ ಕಾಲದಲ್ಲಿ ಬೇಡ ಕುಲದವರು ಪ್ರಜ್ಞಾವಂತ ಸಮಾಜದಲ್ಲಿ ಐದು ಜಾತಿಗಳಾಗಿವೆ ಎಂದು ತಿಳಿಸಿವೆ. ಬೇಡರು, ಬೆಸ್ತರು, ಕುರುಬಗೌಡರು, ಗಂಗಡಿಕಾರ ಗೌಡರು, ಯಾದವರು ಎಂದು ಗುರ್ತಿಸಿದ್ದಾರೆ.

ಶಾಸನಗಳಲ್ಲಿ ಮುಗಿಲಕುಲ, ಮೋಡಕುಲ, ಬಾಣವಂಶ ರಾಜರ ದಂಡನಾಯಕರ ಎರುಮೈನಾಯಕರ, ಭೂಮಿಕುಲ, ನಾಗಕುಲ, ತೊರೆಯಬಡಗರು-ವಡಗರು, ಇಳೆಯರ್ ಗರುಡರ ವಂಶ ಕುಲಗಳನ್ನು ರಾಣಿಯರ ಸ್ತ್ರೀವಂಶ ಕುಲಗಳನ್ನು ಉಲ್ಲೇಖಿಸಿದೆ. ಈ ಕುಲಗಳನ್ನು ಸಮೀಕರಿಸಿದಲ್ಲಿ ಗಂಗವಂಶದ (ತಲಕಾಡು) ಬೇಡರು-ಬೆಸ್ತರು ಎಂದು ತಿಳಿದು ಬರುತ್ತದೆ.

ಸ್ಥಳಪುರಾಣದಲ್ಲಿ 'ತಲ' ಮತ್ತು 'ಕಾಡ' ಎಂಬ ಬೇಡರಿಂದ ತಲಕಾಡು ನಗರ ಸ್ಥಾಪಿತವಾಯಿತೆಂದು ತಿಳಿದು ಬರುತ್ತದೆ. ಸ್ಕಂದಪುರಾಣದಲ್ಲಿ ಬರುವ ಮುರುಗನನಗೆ ವಳ್ಳಿಯಂಬ ಬೇಡರ ಮಗಳನ್ನು ಎರಡನೆಯ ಹೆಂಡತಿಯಾಗಿ ವಿವಾಹ ಮಾಡಿಕೊಟ್ಟಿರುವುದು ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಬೇಡರಿಗೆ ಪಳನಿಯ ದೇವಸ್ಥಾನದಲ್ಲಿ ವಿಶೇಷ ಮರ್ಯಾದೆ ಕೊಡುವುದು ಕಂಡುಬರುತ್ತದೆ. ವೈಷ್ಣವ ಸಂಪ್ರದಾಯದ ನರಸಿಂಹ ಪುರಾಣದಲ್ಲಿ ಲಕ್ಷ್ಮೀನರಸಿಂಹನ ಕಥೆಯ ಭಾಗದಲ್ಲಿ ಬೇಡರ ಮಗಳು ಚಂಚು ಲಕ್ಷ್ಮೀಯನ್ನು ಎರಡನೆಯ ಪತ್ನಿಯಾಗಿ ಶ್ರೀಶೈಲ ನಾಡಿನಲ್ಲಿ ಮದುವೆಯಾಗಿರುವುದು ತಿಳಿದು ಬರುತ್ತದೆ. ಹೀಗೆ ರಾಜರ ಸಾಂಸ್ಕೃತಿಕ ಸಮಾಜದ ಸಂಸ್ಕೃತಿಯಲ್ಲಿ ಬೇಡರ ಮೂಲವನ್ನು ತಿಳಿಯಬಹುದು. ಶಿಲ್ಪ ಲಕ್ಷಣಗಳಲ್ಲಿ ಕರ್ನಾಟಕವನ್ನಾಳಿದ ಗಂಗರಮೂಲ ವಂಶಸ್ಥರು ಬೇಡ-ಬೆಸ್ತರಾಗಿರುತ್ತಾರೆ, ಎಂಬುದನ್ನು ಶಿಲ್ಪ ಸಂಸ್ಕೃತಿಯಲ್ಲಿ ಪುಷ್ಠಿ ದೊರೆಯುತ್ತದೆ ಎಂದು ಡಾ॥ ದೇವರು ಕೊಂಡಾರೆಡ್ಡಿಯವರ ತಲಕಾಡು ಗಂಗರ ದೇವಾಲಯಗಳಲ್ಲಿದೆ ಎಂದು ತೋರಿಸಿ ಕೊಟ್ಟಿದ್ದಾರೆ.

ತಲಕಾಡಿನ ವೈದ್ಯನಾಥೇಶ್ವರ ದೇವಾಲಯದಲ್ಲಿ ಹತ್ತಾರು ಕಂಬಗಳಲ್ಲಿ ಹೊರ ಪ್ರಕಾರಗಳಲ್ಲಿ ಶಿವಭಕ್ತನಾದ ಬೇಡರಕಣ್ಣಪ್ಪ ಮತ್ತು ಮೀನುಗಾರ ಕುಲದವನಾದ ಅತಿಭಕ್ತ ಇಬ್ಬರು ೬೩ ಪುರಾತನರ ಪುರಾಣದಲ್ಲಿ ಪ್ರಮುಖವಾಗಿ ಶಿಲೆಗಳಲ್ಲಿ ಕೆತ್ತಿರುವುದು ಕಂಡುಬರುತ್ತದೆ. ಮತ್ತು ತಮಿಳುನಾಡು ಮತ್ತು ಕರ್ನಾಟಕದಲ್ಲಿ ಕಂಚಿನ ಮೂರ್ತಿಗಳು ಕೂಡ ಇದೆ. ಅಲ್ಲಲ್ಲಿ ಬೇಡರಕಣ್ಣಪ್ಪ ಮತ್ತು ಅತಿಭಕ್ತನ ಉತ್ಸವಗಳನ್ನು ಮಾಡುತ್ತಿರುವುದು ವೈದಿಕಪದ್ಧತಿಯಲ್ಲಿ ರೂಢಿಯಲ್ಲಿದೆ. ಗಂಗರನಾಡು, ತಲಕಾಡು-ತೊರೆಯುರನಾಡಿ(ತೊರೈಕಾರಟ್ಟಿ)ನಲ್ಲಿ ಯಳಂದೂರು, ಚಾಮರಾಜನಗರ, ನಂಜನಗೂಡು, ಮೂಗೂರು, ಶ್ರೀರಂಗಪಟ್ಟಣದ, ದೇವಾಲಯದ ಕಂಬಗಳಲ್ಲಿ ಶಿವಲಿಂಗಕ್ಕೆ ಕಣ್ಣು ನೀಡುತ್ತಿರುವ ದೃಶ್ಯವನ್ನು ಮತ್ತು ಮೀನಿನ ಮೇಲೆ ಕುಳಿತು ಜ್ಞಾನಪಟ್ಟಿಕೆಯನ್ನು ಧರಿಸಿರುವಂತೆ (ವ್ಯಾಸ) ಉಬ್ಬು ಶಿಲ್ಪ ಲಕ್ಷಣದಲ್ಲಿ, ಶಿಲ್ಪಗಳನ್ನು ತೋರಿಸಿದ್ದಾರೆ. ಶಿವದೇವಸ್ಥಾನದ ಕಂಬಗಳಲ್ಲಿ ಪ್ರಮುಖವಾಗಿ ಈ ಶಿವಭಕ್ತರ ಶಿಲ್ಪಗಳು ಹೆಚ್ಚಾಗಿ ಕಂಡುಬರುವುದರಿಂದ ಶಿಲ್ಪಸಂಸ್ಕೃತಿಯಲ್ಲಿ ಕುಲಪದ್ಧಿತಿಗೆ, ಸಂಸ್ಕೃತಿಗೆ ಸಂಬಂಧಪಟ್ಟಂತೆ "ಪರಿವಾರ-ಪಾಂಚಾಳ"ರಿಂದಲೂ ಮತ್ತು ರಾಜರುಗಳು ಪ್ರೋತ್ಸಾಹ ನೀಡಿರುವುದರಿಂದ ಈ ಶಿಲ್ಪಗಳು ಹೆಚ್ಚಾಗಿ ಪ್ರಮುಖ ಕಂಬಗಳಲ್ಲಿ ಕೆತ್ತಲ್ಪಟ್ಟಿರುವುದು ಕಂಡುಬರುತ್ತದೆ.

ಹೆಮ್ಮಿಗೆ ರಾವಳೇಶ್ವರ ದೇವಸ್ಥಾನದ ಪಕ್ಕದಲ್ಲಿರುವ ಉಯ್ಯಾಲೆ ತೋರಣ ಅಡ್ಡ ಕಂಬದಲ್ಲಿ ಬೆಸ್ತರ ಸಂಕೇತ ಮೀನು ಮತ್ತು ಕ್ಷತ್ರಿಯರ ಸಂಕೇತವಾಗಿ ಕುದುರೆ ಸವಾರನನ್ನು ಮತ್ತು ಗಂಗರ ಕಾಲದ ಎರಡು ಕೈಗಳ ಗಜಲಕ್ಷ್ಮೀಯನ್ನು ಕೆತ್ತಿದ್ದಾರೆ. ಅದೇ ಕಲ್ಲಿನ ಹಿಂಬದಿಯಲ್ಲಿ ಬೇಟೆಯಾಡುವ ಸಂದರ್ಭವನ್ನು (ಭೇಟೆಗಾರ ಜಿಂಕೆ) ಎರಡು ಕಡೆಗಳಲ್ಲಿ, ಮಧ್ಯಭಾಗದಲ್ಲಿ ೨ ಹಂಸಗಳನ್ನು ಗಂಗರಕುಲ (ವಂಶ)



ಹೆಮ್ಮಿಗೆ ತೋರಣ ಕಲ್ಲು

ಲಕ್ಷಣಕ್ಕೆ ಸಂಕೇತವಾಗಿ ಬಳಸಿಕೊಂಡಿದೆ. ಶಿಲ್ಪಸಂಸ್ಕೃತಿಯಲ್ಲಿ ಬೇಡರು ಮತ್ತು ಬೆಸ್ತರು ಮೌಲ್ಯವನ್ನು ತೋರಿಸಿ ಕೊಟ್ಟಿದ್ದಾರೆ. ತಲಕಾಡಿನ ವೈದ್ಯನಾಥೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ತಾಯಿಮಗುವಿನ ಮತ್ತು ಸ್ತ್ರೀ (ರಾಣಿ) ಶಿಲ್ಪ ರಾಜನಿಗೆ ಸಂಬಂಧಪಟ್ಟ ಇತಿಹಾಸದ ಕಥೆಯೊಂದು, ನೂರಾರು ಶಿಲ್ಪಗಳಲ್ಲಿ, ಈ ಲಕ್ಷಣವು ಚಾಮರಾಜನಗರ ಜಿಲ್ಲೆ, ಮೈಸೂರು ಜಿಲ್ಲೆ, ಮತ್ತು ಮಂಡ್ಯ ಜಿಲ್ಲೆಗಳಲ್ಲಿ, ಕಂಡುಬರುತ್ತದೆ.

ಯತಿಗಳಾದ ೨೪ ತೀರ್ಥಂಕರರ ಶಿಲ್ಪಚಿತ್ರಗಳಲ್ಲಿ ಪೀಠಭಾಗದಲ್ಲಿ ೨೪ ಪ್ರಾಣಿಗಳನ್ನು ಜೈನ ದಿಗಂಬರ ಮಹಾಪುರಾಣ ಗ್ರಂಥದಲ್ಲಿ ಚಿತ್ರಿಸಿದ್ದಾರೆ. ಶರಭ ಪ್ರಾಣಿಯನ್ನು ಐದು ಪ್ರಾಣಿಗಳ (ಪ್ರಭೇದಗಳ)ಮೌಲ್ಯವನ್ನು ಸಮೀಕರಿಸಿ, ಬಲಿಷ್ಠ ಶರಭ ಪ್ರಾಣಿಯ ಚಿತ್ರ ಶಿಲ್ಪ ಮುಖೇನ ಶಿಲ್ಪಿ ದಾಖಲಿಸಿದ್ದಾನೆ. ಆದರೆ ಜೈನ ದಿಗಂಬರ ಸಂಸ್ಕೃತಿಯಲ್ಲಿ, ನಿಷ್ಠೆಗೆ ಹೆಸರಾದ ನಾಯಿ ಪ್ರಾಣಿಯನ್ನು ಯಾವ ತೀರ್ಥಂಕರರ ಸಂಕೇತವಾಗಿ ನೀಡಿಲ್ಲದಿರುವುದು, ನಾಯಿಯಿಂದ ಜೈನರ ಇತಿಹಾಸದ ಪತನಕ್ಕೆ ಮುಖ್ಯ ಸಂದರ್ಭವಿರಬೇಕೆಂದು, ನಾನು ಶಿಲ್ಪ ಸಂಸ್ಕೃತಿಯಿಂದ ಭಾವಿಸಿದ್ದೇನೆ. ನಾಯಿಯನ್ನು ಬಿಟ್ಟು ಕಾಲ್ಪನಿಕ ಪ್ರಾಣಿಗೆ ಹೆಚ್ಚು ಮೌಲ್ಯ ನೀಡಿರುವುದು, ಐದು



ಮೀನಿನ ಮೇಲೆ ಕುಳಿತ ವ್ಯಾಸ ಶಿಲ್ಪ

ಪ್ರಾಣಿ ಪ್ರಭೇದಗಳ ವರ್ಣ ಸಂಕರವಾಗಿರುವುದು, ಮಾನವನ ವರ್ಣಸಂಕರದ ಸಂಕೇತವಾಗಿದೆ. ಎಂದು ತಿಳಿದುಬರುತ್ತದೆ. ಉದಾ:–ಕುಕ್ಕಟ ಸರ್ಪ(ದಿಗಂಬರ ಸಂಸ್ಕೃತಿ) ಕರ್ನಾಟಕದ ರಾಜ್ಯದ ಲಾಂಛನ ಶರಭಪ್ರಾಣಿ ಮತ್ತು ಮೈಸೂರು ಸಂಸ್ಥಾನದ ಲಾಂಛನ ಗಂಡುಭೇರುಂಡ ಪಕ್ಷಿಯಾಗಿದೆ.(ಮನುಷ್ಯನ ಮಾದರಿಯಲ್ಲಿಯು ಇದೆ.)

"ಪರಮು–ಪರಮೆ" ಕುಲಗಳು ಆಧ್ಯಾತ್ಮಿಕವಾಗಿ ಅನುಷ್ಠಾನದಲ್ಲಿ ಸನಾತನ ವೈದಿಕ ಸಂಸ್ಕೃತಿಯಲ್ಲಿ ಪರಮ ಪಾವನಮೂರ್ತಿ ಶಿವನೆಂದು ಕಂಡುಕೊಂಡಿದ್ದಾನೆ. ಜೈನ ಸಂಸ್ಕೃತಿಯಲ್ಲಿ ಶ್ರೀಮತ್ ಪರಮ ಗಂಭೀರ, ಪರಮ ಜಿನೇಶ್ವರನೆಂದು ಶ್ಲೋಕವಾಗಿ ಜಿನಶಾಸನಗಳಲ್ಲಿ, ಇತಿಹಾಸ ಪೂರ್ವಕವಾಗಿ ಕಂಡುಬರುತ್ತದೆ. ಆಧ್ಯಾತ್ಮದಲ್ಲಿ ಶ್ರೇಷ್ಠಗುಣ ಮೌಲ್ಯಗಳನ್ನು ಪದಾರ್ಥಸಾರ ಗ್ರಂಥದಲ್ಲಿ ಪರಮನ ಬಗ್ಗೆ, ಜೈನಸಂಸ್ಕೃತಿಯಲ್ಲಿ ಪರಮಾಗಮದಲ್ಲಿ ಸಾಹಿತ್ಯದಲ್ಲಿ ಬಳಕೆಯಾಗಿರುವುದು ಬ್ರಹ್ಮಮಯ ಸತ್ಯವಾಗಿದೆ.

'ಪರಮಕುಲ–ಪರಮೆಕುಲ' ಶೋಧನೆಯಿಂದ ತೊರೆಯ ನಾಡಿನ ತಲಕಾಡಿನ ಗಂಗರ ಮೂಲವನ್ನು ಕುಲವಂಶ ಸಂಸ್ಕೃತಿಯನ್ನು ಸಮೀಕರಿಸಿ ಬೇಡರು–ಬೆಸ್ತರು ಒಂದೇ ಮೂಲದವರು ಎಂದು ತಿಳಿದುಬರುತ್ತದೆ ವಿಶಾಲವಾಗಿ ಸಂಶೋಧನೆಗೆ ಒಳಪಡಿಸಬೇಕೆಂದು ನಮ್ಮ ಆಶಯವಾಗಿದೆ.

[ಈ ಲೇಖನದಲ್ಲಿ ಸೂಚಿತವಾಗಿರುವ ಪರಮ ಶಬ್ದದ ವಿವರಗಳು ಹಾಗೂ ಅರ್ಥ ಗೊಂದಲಗಳಿಂದ ಕೂಡಿದ್ದು, ಅಷ್ಟೊಂದು ಸಮರ್ಥ ನೀಯವಾಗಿಲ್ಲ. ಬೇರೆ ಆಕರಗಳನ್ನು ಹಾಗೂ ಇತರ ಶಾಸನೋಲ್ಲೇಖಗಳನ್ನು ಪರಿಶೀಲಿಸಿ ಮತ್ತಷ್ಟು ವಿಶ್ಲೇಷಣೆ ವಸ್ತುನಿಷ್ಠವಾಗಿ ನಡೆಯಬೇಕಿದೆ. –ಸಂ.]



## ಆಧಾರಸೂಚಿ


೧. ಜಾಬಾಲಾ–ಅನುಷ್ಠಾನ ವೇದಾಂತ, ರಾಮಕೃಷ್ಣ ಆಶ್ರಮ, ಛಾಂದೋಗ್ಯ ಉಪನಿಷತ್, ಮೈಸೂರು.

೨. ಪರಮೆ ಉತ್ತಮವಾದ ಕನ್ಯೆ ಎಫ್. ಕಿಟಲ್ ಕನ್ನಡ–ಇಂಗ್ಲಿಷ್ ನಿಘಂಟು.

೩. ಪರಮ ಭಾಗವತರು, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ವಶಿಷ್ಠ, ವ್ಯಾಸ, ಪರಾಶರ ಜೀವನ ಚರಿತ್ರೆ.

೪. ಇಸ್ಲಾಂಧರ್ಮದ ಮೌಲ್ವಿಗಳು, ಶಾಂತಿ ಪ್ರಕಾಶನ, ಮಂಗಳೂರು.

೫. ಚಿತ್ತೂರು ಜಿಲ್ಲಾ ಅದಾಲತ್ತು ಕೋರ್ಟಿನ ತೀರ್ಮಾನ (ವಿಶ್ವಕರ್ಮ ಸಮಾಜ ವಿಶ್ವ ಬ್ರಾಹ್ಮಣ)

೬ ಮಹಾಭಾರತದ ಶಿಲ್ಪಸಂಸ್ಕೃತಿ ಮತ್ತು ಶಿಲ್ಪ ಲಕ್ಷಣಗಳು ಡಾ॥ ಜ್ಞಾನಾನಂದರವರು.

೭. ಎಪಿಗ್ರಾಫಿಯ ಕರ್ನಾಟಕ, ೧. ೨. ೩. ೪. ೫. ೬. ೭. ಸಂಪುಟಗಳು.

೮. ತೊರೆಯ ಜಾತಿಯ ಬಗ್ಗೆ ಕ್ಯಾಸ್ಟ್ ಅಂಡ್ ಟ್ರೈಬ್ ಸದರನ್ ಇಂಡಿಯಾ ವ್ಯಾಲಿ ನಂ. ೧ A ಮತ್ತು B ಎಡ್ಗರ್ ಥರಸ್ಟನ್ ತಮಿಳುನಾಡು, ಕೊಯಮತ್ತೂರು ಜಿಲ್ಲೆ. ಮತ್ತು ಸೇಲಂ ಜಿಲ್ಲೆ.

೯. ಜೈನರ ಪರಮಾರ್ಥ ಪದಕೋಶ 'ಪರಮಕುಲ' ನೋಡಿ.

೧೦. ಪೆರುಮನಾಯಕ–ಮದರಾಸು ಎಪಿಗ್ರಫಿ, ವ್ಯಾ. ನಂ. ೫೧.

೧೧. ತೊರೆಯರಮಾರನಾಯಕ– ಕ್ರಿ.ಶ. ೧೯೦೬ ರಲ್ಲಿ ಪಠ್ಯಪುಸ್ತಕ ಮೈಸೂರಿನ ಚರಿತ್ರೆ.

೧೨. ರಾಜಪರಮೇಶ್ವರ–ರಾಜವಾಲ್ಮೀಕಿಂ ಮತ್ತು ರಾಜವ್ಯಾಸಂ ಬಿರುದು ಕ್ರಿ.ಶ. ೧೪೩೫, ದೇವಲಾಪುರ ತಾಮ್ರಶಾಸನ ೧೬೦. ಪು. ಸಂ. ೧೫೭ ರಲ್ಲಿದೆ.

೧೩. ಜೈನ ಮಹಾಪುರಾಣ ಶ್ರವಣಬೆಳಗೊಳ ವಿಷಯ ಮತ್ತು ಚಿತ್ರ ಸಂಪುಟ.

೧೪. ನಿರ್ಗುಂದದ ಪರಮಗೂಳ ರಾಜನ ಮಡದಿ ಸಗರಕುಲದ ಮರುವರ್ಮ ರಾಜನ ಮಗಳು–ಕುಂದಾಚ್ಚಿ–ಶ್ರೀ ಪುರುಷನ. ೭೬–೭೭. ಎ.ಕ. ೪, ಸಂಪುಟ ನಾ.ಮ. ತಾ. ೮೫, ದೇವರಹಳ್ಳಿ, ಮಂಡ್ಯ ಜಿಲ್ಲೆ.

೧೫. ಚಂದ್ರಕೊಡೆ ಡಾ, ಹಂಪನಾಗರಾಜಯ್ಯ, ಪ್ರಾ.ಕ.ವಿ.ಹಂ.ವಿ.ಕ.

೧೬. ಬ್ರಹ್ಮಕ್ಷತ್ರಿಯ–ಬ್ರಹ್ಮದೇವರಕಂಬ, ಶ್ರವಣಬೆಳಗೊಳ. ಚಾ.ವಿ. ಚಾಮುಂಡರಾಯ ಪುರಾಣ, ಸಂಪಾದಕರು ಕಮಲಾ ಹಂಪನಾ, ಕೆ.ಆರ್. ಶೇಷಗಿರಿ.

೧೭. ರಾಜಾವಳೀ ಕಥಾಸಾರ ದೇವಚಂದ್ರ. ವಿ. ಅನುವಾದ :– ಬಿ.ಎಸ್. ಸಣ್ಣಯ್ಯ, ಕನಕಗಿರಿ ಜೈನಕ್ಷೇತ್ರ, ಮಲೆಯೂರು, ಚಾಮರಾಜನಗರ ಜಿಲ್ಲೆ.

೧೮. ಧರೆಗೆ ದೊಡ್ಡವರು ಪಣದ ಬಲಗೈಪಟ್ಟಿ, ಪಣದ ಎಡಗೈಪಟ್ಟಿ, ಡಾ॥ ಸುಭಾಷಭರಣಿ. ಐ.ಪಿ.ಎಸ್.



# ಹಜರತ್ ಖ್ವಾಜಾ ಬಂದಾನವಾಜ್ ಗೇಸೂದರಾಜ್ ಸಾಹಿತ್ಯ ಕ್ಷೇತ್ರಕ್ಕೆ ನೀಡಿರುವ ಕೊಡುಗೆಗಳು : ಒಂದು ವಿಶ್ಲೇಷಣೆ

ಡಾ. ಶಾಹೀನಾ ಬಾನೂ*

ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಗುಲ್ಬರ್ಗಾ ಒಂದು ಪ್ರಮುಖ ಜಿಲ್ಲೆಯಾಗಿದೆ. ಗುಲ್ಬರ್ಗಾದಲ್ಲಿ ಹಜರತ್ ಖ್ವಾಜಾ ಬಂದನವಾಜ್‌ಗೇಸೂದಾರಾಜ್ ೧೪ನೇ ಶತಮಾನದಲ್ಲಿ ಸೂಫಿ ಪಂಥ ಪ್ರಚಾರ ಮಾಡಿದರು. ಅವರ ದರ್ಗಾ ಗುಲ್ಬರ್ಗ ದಲ್ಲಿದೆ. ಅವರು ಅನೇಕ ಪವಾಡಗಳನ್ನು (ಕರಾಮತ್) ಮಾಡಿದರು. ಅಲ್ಲಿ ಇಂದಿಗೂ ವಾರ್ಷಿಕ ಜಾತ್ರೆ (ಉರುಸ್) ನಡೆಯುತ್ತಿದೆ. ಗುಲ್ಬರ್ಗದ ಸೂಫಿಗಳಲ್ಲಿ ಅತ್ಯಂತ ಜನಪ್ರಿಯವಾಗಿದ್ದರು. ದೆಹಲಿಯ ತೊಘಲಕ್ ಮತ್ತು ಸೈಯದ್ ಸಂತತಿಗಳು ಗತಿಸಿದ ಮೇಲೆ ಅಲ್ಲಿಂದ ಅನೇಕ ಸೂಫಿಗಳು ಬಹಮನಿ ಸುಲ್ತಾನ ರಾಜಧಾನಿಯಾದ ಗುಲ್ಬರ್ಗಕ್ಕೆ ವಲಸೆ ಬಂದರು. ಹೀಗೆ ವಲಸೆ ಬಂದ ಸೂಫಿ ಸಂತರ ಹಜರತ್ ಖ್ವಾಜಾ ಬಂದಾನವಾಜ್ ಗೇಸೂದರಾಜ್ ಇವರಿಂದಲೂ ಗುಲ್ಬರ್ಗದಲ್ಲಿ ಸೂಫಿ ಪಂಥ ಪ್ರಚಾರಗೊಂಡಿತು. ಗುಲ್ಬರ್ಗ ಇಂದಿಗೂ ಕರ್ನಾಟಕದ ಪ್ರಸಿದ್ಧ ಸೂಫಿ ಕೇಂದ್ರವಾಗಿದೆ. ಗುಲ್ಬರ್ಗದ ಪ್ರಸಿದ್ಧ ಸಂತ ಹಜರತ್ ಖ್ವಾಜಾ ಬಂದಾನವಾಜು ಗೇಸೂದರಾಜ್‌ರವರು ಧರ್ಮ ಬೋಧಕರಾಗಿ, ಪವಾಡ ಪುರುಷರಾಗಿ, ವಚನಕಾರರಾಗಿ, ಶರಣರಾಗಿ, ಅಬ್ದಾಲರಾಗಿ, ಅವಧೂತರಾಗಿ, ವಲಿಅಲ್ಲಾಹರಾಗಿ, ಸೂಫಿ ಸಂತರಾಗಿ, ಸನ್ಮಾರ್ಗದರ್ಶಕರಾಗಿ, ಜಗತ್ತಿಗೆ ಕೊಡುಗೆ ನೀಡಿದ್ದಾರೆ. ಅವರ ಬದುಕಿನಿಂದ ಬಹಳ ಕಲಿಯಬೇಕಾಗಿದೆ.

ಈ ಮಹಾ ಮಹಿಮಾ ಪುರುಷ, ಸೂಫಿಸಂತರ, ಜೀವನ ಚರಿತ್ರೆಯನ್ನು ಅವರ ರೀತಿ–ನೀತಿಗಳು, ಆಚಾರ–ವಿಚಾರಗಳು ಜನಸಾಮಾನ್ಯರಿಗೂ ಮಾದರಿ ಆಗಿದೆ.

ನಮಾಜ್, ರೋಜಾ, ಹಜರತರಿಗೆ ಬಾಲ್ಯದಿಂದಲೇ ಪರಿಪಾಠವಾಗಿದ್ದವು. ಹಜರತರು ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಹಜರತ್ ಖ್ವಾಜಾ ಶೇಖನಸೀರೋದ್ದೀನ್ ಚಿರಾಘ ದೆಹಲಿಯವರು ಮುರೀದ (ಶಿಷ್ಯ)ರಾದರು.

ಸರ್ವಶಕ್ತ ಅಲ್ಲಾಹನ ನಿರ್ಧಾರದಂತೆ ಹಜರತ್ ಖ್ವಾಜಾ ಬಂದಾನವಾಜ್ ಗೇಸೂದರಾಜ್‌ರ ಶುಭ ವಿವಾಹವು ಬೀಬೀರಝಖಾತೂನ ಎಂಬುವವರ ಸಂಗಡವಾಯಿತು. ಹಜರತರ ವಿವಾಹವಾದಾಗ ಅವರ ವಯಸ್ಸು ೪೦ ವರ್ಷ ವಾಗಿತ್ತು.

ಹಜರತ್ ಖ್ವಾಜಾ ಬಂದಾನವಾಜ್ ಗೇಸೂದರಾಜ್‌ರು ಸಾಹಿತ್ಯ ಕ್ಷೇತ್ರಕ್ಕೆ ಅಪಾರವಾದ ಕೊಡುಗೆ ನೀಡಿದ್ದಾರೆ. ಯಾವ ವಲ್ಲಿಅಲ್ಲಾಹರು ಇವರಷ್ಟು ಕೃತಿಗಳನ್ನು ರಚಿಸಿಲ್ಲ. ಹುಟ್ಟು ವಲಿ ಅಲ್ಲಾಹರಾದ ಹಜರತರು ಈ ಭವದಲ್ಲಿ ಇದ್ದದ್ದು ೧೦೪ ವರ್ಷ ೦೪ ತಿಂಗಳು ೧೨ ದಿನಗಳು. ಹಜರತ್‌ರು ರಚಿಸಿದ ಕೃತಿಗಳು ೧೦೫. ಹಜರತರಿಗೆ ಅಲ್ಲಾಹ ಎಷ್ಟು ವರ್ಷ ಜೀವನ ದಯಪಾಲಿಸಿದ್ದಾನೊ ಅಷ್ಟೂ ವರ್ಷ ಅವರಿಂದ ಕೃತಿ ರಚನೆಯ ಕೆಲಸ ಮಾಡಿಸಿಕೊಂಡಿದ್ದಾನೆ. ಅಲ್ಲಾಹನು ಹಜರತರ ಸಾಹಿತ್ಯ ಕ್ಷೇತ್ರ ವಿಶಾಲವಾಗುವಂತೆ ಕೃಪೆ ಮಾಡಿದ್ದಾನೆ. ಕೃತಿ ರಚನೆಯು ಹಜರತರ ಅದ್ಭುತ ಪವಾಡವಾಗಿದೆ (ಕರಾಮತ್). ಅವರ ಬದುಕಿನ ಉದ್ದಕ್ಕೂ ಸಾಹಿತ್ಯ ರಚನೆ ನಡೆದು ಬಂದಿದೆ. ಮಾನವನ ಜೀವನದ ಉನ್ನತಿಗಾಗಿ ಹಜರತರು ಆಧ್ಯಾತ್ಮಿಕ ವಿಷಯಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಹಜರತರ ಸಾಹಿತ್ಯ ಕ್ಷೇತ್ರ ಒಂದು ವಿಷಯಕ್ಕೆ ಸೀಮಿತವಾಗಿರದ ಮಾನವನ ಸರ್ವಾಂಗೀಣ ಉನ್ನತಿಗಾಗಿ ಪೂರಕವಾಗಿದೆ.

ಹಜರತರು ಬಹು ಭಾಷೆಗಳಲ್ಲಿ ಪ್ರವೀಣತೆ ಹೊಂದಿದ್ದರು. ಸಂಸ್ಕೃತ, ದಖ್ಖನಿಉರ್ದು, ಅರಬ್ಬಿ, ಪರ್ಶಿಯನ್ ಭಾಷೆಗಳಲ್ಲಿ ಹಜರತರು ತಮ್ಮ ಕೃತಿಗಳನ್ನು ರಚನೆ ಮಾಡಿದ್ದಾರೆ. ಆದರೆ ಅವರ ಕೆಲವು ಕೃತಿಗಳು ಘನವಾದ ವಿಷಯಗಳನ್ನು ಬಿಂಬಿಸುವುದರಿಂದ ಸಾಮಾನ್ಯರಿಗೆ ಅರ್ಥೈಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅಂತಹ ಕೃತಿಗಳು ಹೆಚ್ಚು ಪ್ರಚಾರದಲ್ಲಿ ಇಲ್ಲ. ಕೆಲವು ಕೃತಿಗಳು ಸುಜ್ಞಾನಿಗಳಿಗೆ ದಾರಿದೀಪವಾಗಿವೆ.

* ಸಹ ಪ್ರಾಧ್ಯಾಪಕರು, ಮಹಾರಾಣಿ ಕಲಾ ಕಾಲೇಜು, ಬೆಂಗಳೂರು–೫೬೦೦೦೧.

ಹಜರತರು ದಕ್ಷಿಣ ಭಾರತದ ಉರ್ದು ಭಾಷೆಯ ಪಿತಾಮಹರು, ಮಹಾಲೇಖಕರು, ಕವಿಗಳು, ವಿಮರ್ಶಕರು, ಬಹುಭಾಷೆಯ ಪಂಡಿತರು. ಹಜರತರ ಸಾಹಿತ್ಯ ಕ್ಷೇತ್ರದಲ್ಲಿ ಸರ್ವ ವಿಧದ ವೈಶಿಷ್ಟವನ್ನು ಅಡಗಿಸಿಟ್ಟು ಅಲ್ಲಾಹನು ಅವರಿಗೆ ವಲಿಅಲ್ಲಾಹರಾಗಿ ಮಾಡಿದನು.

ಹಜರತರು ರಚಿಸಿದ ೧೦೫ ಕೃತಿಗಳಲ್ಲಿ ಎರಡು ಭಾಗವಾಗಿ ಮಾಡಬಹುದು.

೧. ಹಜರತರು ದೆಹಲಿಯಲ್ಲಿ ಇರುವಾಗ ಬರೆದ ಕೃತಿಗಳು.

೨. ಹಜರತರು ಗುಲ್ಬರ್ಗಾಕ್ಕೆ ಪ್ರಯಾಣ ಮಾಡುವಾಗ ಹಾಗೂ ಗುಲ್ಬರ್ಗಾ ದಲ್ಲಿದ್ದಾಗ ರಚಿಸಿದ ಕೃತಿಗಳು.

ಹಜರತರು ದೆಹಲಿಯಲ್ಲಿ ಮತ್ತು ಪ್ರವಾಸದಲ್ಲಿ ರಚಿಸಿದ ಕೃತಿಗಳಲ್ಲಿ ಪ್ರಮುಖವಾದವುಗಳು ಮತ್ತು ಲಭ್ಯವಿರುವ ಕೃತಿಗಳ ಹೆಸರುಗಳು ಇಲ್ಲಿ ಪ್ರಸ್ತಾಪಿಸಿರುವೆ.

೧. **ತಫ್‌ಸೀರ್ ಏ ಮುಲ್ತ ಕತ್ (Tafsir-i-Multa-Qat):** ಇದು ಸೂಫಿ ಸಂತರ ನಿಯಮಗಳ ಬಗ್ಗೆ ಮಾಹಿತಿ ನೀಡುತ್ತದೆ. ಈ ಕೃತಿಯನ್ನು ಅರಬ್ಬಿ ಭಾಷೆಯಲ್ಲಿ ರಚಿಸಿದರು.

೨. **ಶರಾ–ಏ–ಅವಾರಿಫ್–ಅಲ್–ಮಾಆರಿಫ್ (Sharh-i-Awarif-al-maarif) :** ಈ ಕೃತಿಯನ್ನು ಅರಬ್ಬಿ ಮತ್ತು ಪರ್ಶಿಯನ್ ಭಾಷೆಯಲ್ಲಿ ರಚಿಸಿದ್ದಾರೆ.

೩. **ತಫ್ಸ್ ಸೀರ್ ಬ ತರ್ಕೀಬ್ (Tafsir-Ba Tarkeeb):** ಇದರಲ್ಲಿ ಕುರಾನ್‌ನ ಐದು ಅಧ್ಯಾಯಗಳ (ಪಾರೇ) ವಿವರಣೆಯನ್ನು ನೀಡಿದ್ದಾರೆ.

೪. **ಷಿಜರ ಆನ್‌ಸಾಬ (Shijara Ansab) :** ಈ ಕೃತಿ ಇವರ ವಂಶ ಪರಂಪರೆಯ ಬಗ್ಗೆ ಮಾಹಿತಿ ನೀಡುತ್ತದೆ. ಹಜರತರು ೭೦ ಕೃತಿಗಳನ್ನು ಪರಾಮರ್ಶಿಸಿ ಈ ಕೃತಿ ರಚಿಸಿದ್ದಾರೆ.

೫. **ಶಾರಾ–ಏ–ರಿಸಾಲಾ–ಏ–ಖುಶೀರಿಯಾ (Shara-i-risalah-i-qushayriyah) :** ಇದು ಅರಬ್ಬಿ ಭಾಷೆಯಲ್ಲಿ ಇದ್ದದ್ದು ಅದನ್ನು ಹಜರತರು ಪಾರ್ಸಿ ಭಾಷೆಗೆ ಭಾಷಾಂತರಿಸಿದ್ದಾರೆ.

೬. **ಶಾರಾ–ಏ–ತಮ್‌ಹಿದಾತ ಐನೂಲ್–ಖಜಾ ಅತ್ (Sharh-i-Tamhidat-i-nul-Khwajath) :**

೭ **Tarjumah-i-Adab-al-muridin** ಈ ಮೇಲಿನ ಎರಡು ಕೃತಿಗಳನ್ನು ಪಾರ್ಸಿಯ ಭಾಷೆಯಲ್ಲಿ ರಚಿಸಿದ್ದಾರೆ. ಈ ಕೃತಿಗಳು ಸೂಫಿ ಪಂಥದ ಬಗ್ಗೆ ಮಾಹಿತಿ ನೀಡುತ್ತದೆ.

೮. **ರಿಸಾಲಾ ದರ್–ಬಯಾನ್ (Risala-Dar-Bayan):** ಬೂದ್ ಹಸ್ತ ಓ ಬಾಷದ್ : ಈ ಕೃತಿ ಸೂಫಿ ಸಂತರಿಗೆ ಸಂಬಂಧಪಟ್ಟಿದ್ದಾಗಿದೆ.

೯. **ಖಿಲಾಫತ್‌ನಾಮಾ (Khalafatnama) :** ಈ ಕೃತಿ ಹಜರತರು ಅರಬ್ಬಿ ಭಾಷೆಯಲ್ಲಿ ರಚಿಸಿದರು. ಈಕೃತಿಯಲ್ಲಿ ಹಜರತರು ಹಜರತ ಮಹಮ್ಮದ್ ಪೈಗಂಬರರ ವಂಶಾವಳಿಯಿಂದ ಹಿಡಿದು ತಮ್ಮ ತನಕ ಬಂದ ವಂಶಸ್ತರ ವಿಷಯದ ಬಗ್ಗೆ ವಿವರಣೆ ನೀಡಿದ್ದಾರೆ.

೧೦. **ತರ್ಜುಮಾ ರಿಸಾಲಾ ಶೇಖ ಮೊಹೀಯೂದ್ದೀನ್ ಇಬ್ನೆ ಅರಬ್ಬಿ (Tarjuma-Risala -Shaikh Mouhuddin Ibna-Arabi) :** ಈ ಕೃತಿಯನ್ನು ಹಜರತರು ಭಾಷಾಂತರಿಸಿದಾರೆ. ಈ ಕೃತಿ ಸೂಫಿ ಸಂತರು ಶೇಖ ಮೊಹೀಯೂದ್ದೀನ್ ಇಬ್ನೆ ಅರಬ್ಬಿ ಬದುಕಿನ ಬಗ್ಗೆ ವಿವರಣೆ ನೀಡಿದ್ದಾರೆ.

೧೧. **ರಿಸಾಲಾ ಇಸ್ತೆಖಾಮತ್, ಶರೀಅತ್, ತರಿಖತ್, ಹಖಿಕತ್ (Risala Ishtakhamat, Shariat, Tariqat, Haqikat)** : ಈ ಕೃತಿ ಸೂಫೀ ಸಂತರ ನಿಯಮಾವಳಿಗಳನ್ನು ಬಗ್ಗೆ ಮಾಹಿತಿ ನೀಡುತ್ತದೆ.

೧೨. **ಹಜಾಯರುಲ್ ಖುದಸ್, ಉರ್ಫ ಇಷ್ಕನಾಮ (Hazair-al-Quds, also known as Ishqnama)** : ಈ ಕೃತಿಯು ಅಲ್ಲಾಹನ ಜೊತೆಗೆ ಹೇಗೆ ಪ್ರೇಮ ಸಂಬಂಧ ಮಾಡಬೇಕು ಎಂಬ ನಿಯಮಾವಳಿಗಳ ಬಗ್ಗೆ ಮಾಹಿತಿ ನೀಡುತ್ತದೆ.

೧೩. **ಮಲ್‌ಪೂಜ್ ಅವ್ವಲ್ :** ಈ ಕೃತಿ ದೆಹಲಿಯಲ್ಲಿ ರಚಿಸಿದ್ದಾರೆ. ಇದು ಭಾಗ–೧.

೧೪. **ಮಲ್‌ಪೂಜ್‌ಸಾನಿ :** ಈ ಕೃತಿ ಗುಜರಾತನಲ್ಲಿ ರಚಿಸಿದ್ದಾರೆ. ಇದು ಭಾಗ–೨.

ಹಜರತರು ಗುಲ್ಬರ್ಗಾದಲ್ಲಿದ್ದಾಗ ರಚಿಸಿದ ಮತ್ತು ಲಭ್ಯವಿದ್ದ ಕೃತಿಗಳನ್ನು ಇಲ್ಲಿ ವಿವರಿಸಿರುವರು :

೧. ಚಕ್ಕಿನಾಮ (Chakkinama)

೨. ಶಾದಿನಾಮ (Shadinama)

೩. ಶಿಕಾರನಾಮ (Shikarnamah)

೪. ಮೇರಾಜ್‌ಜುಲ್ ಆಶೀಖೀನ್ (Miraj-ul-Ashiquin)

೫. ಶತರಂಜನಾಮಾ (Shatharanjnama)

ಈ ಕೃತಿಗಳನ್ನು ದಖ್ಖನಿ ಉರ್ದು ಭಾಷೆಯಲ್ಲಿ ಹಜರತರು ರಚನೆ ಮಾಡಿದ್ದಾರೆ.

೬. ಶಾರಾ ಆದಾಬುಲ್ ಮುರಿದ್ಯೆನ (Sharh-i-Adabal-Muridin) : ಈ ಕೃತಿ ಪಾರ್ಸಿ (ಪರ್ಶಿಯನ್) ಭಾಷೆಯಲ್ಲಿ ರಚನೆ ಮಾಡಿದ್ದಾರೆ.

೭. ಮಕ್ತುಬಾತ (Muktubat) : ಹಜರತರು ಬರೆದು ೨೫ ಪತ್ರಗಳನ್ನೊಳಗೊಂಡ ಒಂದು ಕೃತಿ.

೮. ತರ್ಜುಮಾ ಶರೀಫ್, ಈ ಕೃತಿ ೮೧೦ ಹಿಜರಿಯಲ್ಲಿ ರಚಿಸಿದ್ದಾರೆ.

೯. ಸೀರತುನ್ ನಬಿ ಸಲ್ಲಲ್ಲಾಹು ಅಲೈವಸಲ್ಲಂ (Sirathun Nabi Sallalahu Alihiyasalum) : ಇದು ಹಜರತರ ಮಹಮ್ಮದ್ ಪೈಗಂಬರರ ಜೀವನ ಚರಿತ್ರೆ ಕೃತಿಯಾಗಿದೆ.

೧೦. ರಿಸಾ ಲಾ ದರ್ ಬಯಾನ್ ಮಾರಿಫತ್ (Risala Dar Bayan Marifat)

೧೧. ಅಸಮಾರ್-ಅಲ್-ಅಸ್‌ರಾರ್ (Asmar-al-Asrar)

೧೨. ಜರ್‌ಬುಲ್ ಅಮ್ಸಾಲ್ (Zarbul-Amasul) ಈ ಕೃತಿಯಲ್ಲಿ ಘಟನೆಗಳ ಉದಾಹರಣೆಗಳು ನೀಡಿದ್ದಾರೆ.

೧೩. ಅಖೀದಾ (Akhida) (ನಂಬುಗೆ)

೧೪. ಔರಾಖೆ ಮಕ್‌ಸೂಸ್ (Aurakhe Makhsoos) ಈ ಕೃತಿಯು ಅಲ್ಲಾಹನಿಗಾಗಿ ಜಪ ಮಾಡುವ ಮುಖ್ಯ ಮುಖ್ಯವಾದ ಮಂತ್ರಗಳನ್ನೊಳಗೊಂಡಿದೆ.

೧೫. ವಜುದುಲ್ ಆರಿಫೀನ್ (Wajud-dul-Arifine)

೧೬. ಶಾರಾ ಖಸೀದಾ ಇಮಾಮೀ

೧೭. ಶರಾ ಖಸೀದಾ ಹಾಫೀಜ್

೧೮. ಶರಾ ಫಿಖಾ ಅಕ್ಬರ

೧೯. ಹವಾಸಿ ಖುವ್ವತುಲ್ ಖುಲೂಬ

೨೦. ದೂಸರಿ ಶಾರಾ ಅವಾರೀಫ್ : ಈ ಕೃತಿ ಪಾರ್ಸಿ (Persian) ಭಾಷೆಯಲ್ಲಿ ೮೧೦ ಹಿಜರಿಯಲ್ಲಿ ರಚಿಸಿದ್ದಾರೆ.

೨೧. ಖಾತೀಮ ಶರೀಫ್ಞ

೨೨. ರಿಸಾಲಾ ದರ್ ಬಯಾನ್ ಇಶಾರಾತ ಮುಹಿಬ್ಬಾನೆ ಹಖ್ ಜಲ್ಲೆ ಜಲಾಲಹು

೨೩. ರಿಸಾಲಾ ದರ್ ಬಯಾನ್ ಜಿಕ್ರ ಓಮುರಾಖೇಬಾ

೨೪. ದೀವಾನ್-ಅನಿಸುಲ್-ಇಷ್ಕ್ (Diwan-Anisul-Ishaq) : ಇದು ಹಜರತರ ಸಂಪಾದನಾ ಕೃತಿ

೨೫. ಚಾರ್ ನುಸ್ಸಖಾ ಮಲ್‌ಪ್ಪುಜಾತ್ : ಇವು ನಾಲ್ಕು ಸಂಪಾದನೆಯ ಕೃತಿಗಳು. ಇವುಗಳಲ್ಲಿ ಒಂದನ್ನು ದೆಹಲಿಯಲ್ಲಿ ಇರುವಾಗ ಸಂಪಾದಿಸಿದ್ದರು. ಇನ್ನುಳಿದವು ಮೂರು ಕೃತಿಗಳು ಹಸನಾಬಾದ (ಈಗಿನ ಗುಲ್ಬರ್ಗಾ) ದಲ್ಲಿ ಸಂಪಾದಿಸಿದ್ದರು.

೨೬. ಅನೀಸುಲ್ ಉಶ್ಯಾಖ್

೨೭. ಶರಾ ಮಶಾರುಖುಲ್ ಅನ್ವಾರ

೨೮. ಶಾರಾ ತಾರೀಫ್ ಶಾರಾ ಆದಾಬೇ ಮುರೀದ್ಯೆನ್ : ಇದನ್ನು ಅರಬ್ಬಿ ಭಾಷೆಯಲ್ಲಿ ರಚಿಸಿದ್ದಾರೆ.

೨೯. ಶಾರಾ ಖುಸೂಸುಲ್ ಹುಕುಂ

೩೦. ಶಾರಾ ರಿಸಾಲಾ ಖಶೀರೀಯಾ

೩೧. ಖತ್-ಎ-ಉಲ್ ಖುದುಸ್.

೩೨. ಶಾರಾ ಇಲಹಾಮಾತ್ ಹಜರತ ಗೌಸೆ ಆಜಂ

೩೩. ವಜುದುಲ್ ಅರಿಷೀನ್

೩೪. ಯಖೀದಾ ವಜುದುಲ್ ಅರಿಫೀನ್

೩೫. ಖತಾಯರುಲ್ ಖುದ್ದುಸ್ ಅಲ್‌ಮಾರೂಫ್ ಬಾರಿತಾಲಾ ಇಶ್ಕಿಯಾ

೩೬. ಹದಯ ಖುಲ್ ಉನ್ಸ

೩೭. ಅನೀಸುಲ್ ಉಶ್ಯಾಖ್

೩೮. ಶಾರಾ ಖಸೀರಿ ಓ ಖಾತೀಮಾ ಶರೀಫ್

೩೯. ರಿಸಾಲಾ ದರ್ ಬಯಾನ್ ಅದಾಬ್ ಸುಲೂಕ್ ಝೂಹೇರಾ

ಹಜರತರ ಸಾಹಿತ್ಯದಲ್ಲಿ ಅಲ್ಲಾಹನ ಪ್ರೇಮ ಗಳಿಸಲು ಮಾರ್ಗವಿದೆ. ಜಗದ ಆಸೆ ಕಳೆಯಲು ಸೂಚನೆಗಳಿವೆ. ಹಜರತರು ರಚಿಸಿದ ವಿಷಯಗಳಲ್ಲಿ ಶೇರ, ಶಾಯರಿ, ಗಜಲ್ ಇವುಗಳು ಒಂದು ವಿಶಿಷ್ಟ ಸ್ಥಾನವನ್ನು ಹೊಂದಿವೆ. ಹಜರತರ ಎಲ್ಲಾ ಕೃತಿಗಳ ಕೇಂದ್ರಬಿಂದು ಅಲ್ಲಾಹನನ್ನು ಒಲಿಸುವುದೇ ಆಗಿದೆ.

ಹಜರತರ ಪಾರ್ಸಿ ಶೇರು **ಜಾನೆ ಅಸ್ತ ಹರ ಆಯಿನಾ ಬೇಖಾಮೇದ ರಫ್‌ತನ್ ಅಂದರ ಗಂ ಮೇ ಇಸ್ಕ ತೂ ರವತ ಉಲಾ ಅತರ್** ಇದರ ಅರ್ಥ ಈ ಜೀವ ಒಂದು ದಿನ ಖಂಡಿತ ಹೊರಟು ಹೋಗುವುದು. ಆದ್ದರಿಂದ ನೀವು ಅಲ್ಲಾಹನೊಂದಿಗೆ ಪ್ರೇಮ ಬೆಳೆಸಿರಿ ಎಂದು.

**ಕಾರೆ ಅಸ್ತವರಾಯೇಲ್ಮ ರೌ ಆರಾಬಾಸ್‌ದರ್ಶ**
**ಬಂಧ ಗೊಹರಮ ಭಾಸ್ ರೌ ಕಾನ ರಬಾಸ್**

ಇದು ಸಹ ಪಾರ್ಸಿ ಶೇರು. ಇದರ ಅರ್ಥ ವಿದ್ಯೆಯಿಂದ ಇನ್ನೊಂದು ದೊಡ್ಡ ಕೆಲಸವಿದೆ. ಅದರಲ್ಲಿ ತಲ್ಲೀನನಾಗು.

ರತ್ನಗಳನ್ನು ಪಡೆಯಲು ರತ್ನದ ಹಾರದಲ್ಲಿ ಹುಡುಕಬೇಡ. ಅದ್ದನು ಪಡೆಯಲು ರತ್ನಗಳ ಖನಿಯಲ್ಲಿ ಹೊರಟುಹೋಗು ಎಂದರ್ಥ.

**ದಿಲ್ ಹಸ್ತ ಮುಖಾದು ಘಾಹ ಬಗುಜರ ಉಬ್ಯಾ**
**ಜಾನೆ ಮಂಜಿಲ್ ಆಖೀರಸ್ತ ರೌಜಾರಾಬಾಸ್**

ಇದು ಸಹ ಪಾರ್ಸಿ ಶೇರು ಇದೆ. ಇದರ ಅರ್ಥ ಹೃದಯವನ್ನು ಅಲ್ಲಾಹನ ನೆನಪಿನ ಕೇಂದ್ರಸ್ಥಾನ ಮಾಡಿ ಕೊಂಡಿರು. ದೇಹದ ಒಳಗೆ ಮತ್ತು ಒಳಗಿನಿಂದ ಹೊರಗೆ ಬರುವ ಉಸಿರಿನಲ್ಲಿ ಅಲ್ಲಾಹನ ನೆನಪು ಇರಬೇಕು ಎಂದರ್ಥ.

ಮನುಷ್ಯ ಸತ್ತ ಮೇಲೆ ಬರುವ ತೊಂದರೆ ಅನುಭವಿಸ ಬೇಕಾದಂತಹ ಭಯಾನಕ ನರಕದ ಯಾತನೆ ಇವುಗಳನ್ನು ಎದುರು ಇಟ್ಟು ಬಾಳಬೇಕು. ಸ್ವರ್ಗದ ಗುರಿ ಇಟ್ಟು ಸುಮಾರ್ಗ ದಲ್ಲಿ ನಡೆಯಬೇಕು.

**ಮೈ ಆಸೀಖ್ ಇಸ್ ದೇವುಕಾ**
**ಜಿನೆ ಮುಜೆ ಜೀವು ದಿಯಾ**

ಇದು ಹಜರತರ ಶೇರು ಶಾಯರಿಯಲ್ಲಿ ಉರ್ದು ಶಾಯರಿ. ಅದರಲ್ಲಿಯೂ ಇದು ದಖನಿ ಉರ್ದಿ ಶಾಯರಿ ಇದರ ಅರ್ಥ ನಾನು ಪ್ರೀತಿ ಆತನೊಡನೆ ಮಾಡುತ್ತೇನೆ, ಯಾರು ನನಗೆ ಜೀವಕೊಟ್ಟನು.

**ಓ ಪೀವು ಮೆರೆ ಜೀವುಕೊ ಬರ್ಮಾಲಿಯಾ**

ಇದು ಸಹ ದಖನಿ ಉರ್ದುವಿನ ಶಾಯರಿ. ಇದರ ಅರ್ಥ ಓ ಅಲ್ಲಾಹ ನೀನು ನನ್ನ ಜೀವಕ್ಕೆ ಪ್ರೀತಿಯ ಆಗರ ಮಾಡಿದೆ ಎಂದು.

**ಮೋರಾ ಮಾಶೂಕ್ ಬೇಮಿಸಾಲ ಹೈ ನೂರೆ ನಬೀ**
**ಪಯಾ, ನೂರೆ ನಬೀ ರಸೂಲಕಾ ಓ ಮೇರೆ ಜಿುಮೆ ಭಾಯ**

ಇದು ಸಹ ದಖನಿ ಉರ್ದುವಿನ ಶಾಯರಿಯಲ್ಲಿದೆ. ಅಲ್ಲಾಹ ನಿನ್ನ ಬಗ್ಗೆ ಹಜರತ ಮಹಮ್ಮದ್ ಪೈಗಂಬರರಿಂದ ಪಡೆದುಕೊಂಡೆ ಎಂದು ಅರ್ಥ.

ಹಜರತರು ಕೆಲವು ಬೀಸುವ ಕಲ್ಲಿನ ಪದವನ್ನು ಪಾರಾಮಾರ್ಥಕ ಅರ್ಥ ಬರುವಂತೆ ಬರೆದಿದ್ದಾರೆ.

**ದೇಕೊವಾಜೀಬ್ ತನಕೀ ಚೆಕ್ಕಿ**
**ಪೀವು ಚಾತರ್ ಹೋಗೆ ಸಕ್ಕಿ**
**ಸೌಕನ್ ಇಬಲಿಸ್ ಖೀಚ್ ಖೀಚ್ ಧಕ್ಕಿ**
**ಕಹೇಯ್ಯಾ ಬೀಸ್‌ಮಿಲ್ಲಾ ಅಲ್ಲಾಹು**

ಈ ರೀತಿಯಾಗಿ ಹಜರತರು ಈ ದೇಹ ಒಂದು ಬೀಸುವ ಕಲ್ಲು ಮಾಡಿ ಹಜರತ್ ಮಹಮ್ಮದ್ ಪೈಗಂಬರರ ನುಡಿ ಜೀವನ ಸಾಗಿಸಲು ಮುಖ್ಯ ಆಧಾರ. ಸುತ್ತು ತಿರುಗುವ ಬೀಸುವ ಕಲ್ಲಿಗೆ ಮಧ್ಯದ ಗುಂಜಿ ಮುಖ್ಯ ಆಧಾರ ಎಂದು ಪದ ರಚಿಸಿದ್ದಾರೆ. ಹಜರತರು ಪಾರ್ಸಿ, ಅರಬ್ಬಿ, ದಖನ, ಉರ್ದು, ಬೀಸಕಲ್ ಪದ, ಶೇರಶಾಯರಿಗಳಲ್ಲಿ ಇರುವ ವಿಷಯ ಜನರಿಗೆ ಸುಮಾರ್ಗದೆಡೆಗೆ ಕೊಂಡೊಯ್ಯುವುದೇ ಆಗಿದೆ.

ಹಜರತ್ ಮಹಮ್ಮದ್ ಪೈಗಂಬರರು ನಡೆದ ಹಾದಿಯಲ್ಲಿ ನಾವೆಲ್ಲ ನಡೆಯಬೇಕೆಂಬುದೇ ಹಜರತರ ಶೇರಶಾಯರಿಯಲ್ಲಿ ಮತ್ತು ಪದ್ಯಗಳಲ್ಲಿ ಅಡಕವಾದ ವಿಷಯವಾಗಿದೆ.

ಕೃತಿಗಳಲ್ಲಿ ರೀತಿ ನೀತಿಗಳು, ನಡತೆ ನಿಯಮಾವಳಿಗಳು, ಆಗು–ಹೋಗುಗಳು, ಸೂಚನೆ ಕೊಡುವ ಪಾಠಗಳು ಹೆಚ್ಚಾಗಿವೆ. ಅವರ ಸಾಹಿತ್ಯದಲ್ಲಿ ವಲಿ ಅಲ್ಲಾಹರ ಇರವು, ಮುರೀದ ಆಗುವ ರೀತಿ, ಮುರೀದ ಮಾಡುವ ರೀತಿ, ಮುರೀದ ನಡೆಯುವ ರೀತಿ, ಮಾನವನು ಬಾಳುವ ರೀತಿ, ಅಲ್ಲಾಹನ ನಮಾಜ್ ಮಾಡುವ ರೀತಿ, ಊಟ ಮಾಡುವ ರೀತಿ, ಏಕಾಗ್ರತೆಯ ರೀತಿ ಹೀಗೆ ಸಾವಿರಾರು ರೀತಿಗಳನ್ನು ಹಜರತರ ಸಾಹಿತ್ಯ ಕ್ಷೇತ್ರದಲ್ಲಿ ಅಡಕವಾಗಿದೆ.

ವಿಜ್ಞಾನ ಎಷ್ಟೇ ಮುಂದುವರೆದರೂ ಮನುಷ್ಯನಿಗೆ ಶಾಶ್ವತ ಶಾಂತಿ ತಂದುಕೊಡದು. ವಲಿಅಲ್ಲಾಹರ ಕೃತಿಗಳು ಶ್ರೇಷ್ಠ ಜ್ಞಾನ ಖನಿಯಾಗಿದೆ.



## ಆಧಾರಸೂಚಿ


೧. ರಹಮತ್ ತರೀಕೆರೆ, **ಕರ್ನಾಟಕದ ಸೂಫಿಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಾಲ್ಯೂಂ–೧, ೧೯೯೮, ವಾಲ್ಯೂಂ–೨, ೨೦೦೧.

೨. ಹರದೇಶಿ ನಾಗೇಶ್ (ಸಂ.) ಬಿ.ಬಿ. ಹೆಂಡಿ, ಎಂ.ಎಸ್. ಲಠ್ಠೆ ಹಾಗೂ ಎಂ.ಜಿ. ಬಿರಾದಾರ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೮೩.

೩. ಚೆನ್ನಣ್ಣ ವಾಲಿಕಾರ (ಸಂ.), **ಗುಲ್ಬರ್ಗಾ ಜಿಲ್ಲೆಯ ತ್ರಿಪದಿಗಳು,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೪. ರಾಜಶೇಖರ, ಜಿ., **ಬಿಜಾಪುರದ ಸೂಫಿಗಳು,** ಸಾಹಿತ್ಯ ವಿಮರ್ಶೆ–೧೯೮೮ (ಸಂ. ರಾಜೇಂದ್ರ ಚೆನ್ನಿ), ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೮೯.

೫. Abdul Jabbar Malkapuri, *Fi-Tazkira-yi-Auliya-i-Deccan,* Vol.II, Hasan Press (Hyderabad, 1913).

೬ Basheeruddin Ahmed, *Waquiyate Mumlikate Bijapur,* Vol. II, Publisher Karnataka Urdu Academy (Bangalore, 2004).

೭. *Deccan Herald* (Spectrum), 5th March, 1999.

೮. *Gulbarga District Gazetteer,* Government of Karnataka Publications, 1997.

೯. Hussaini, S.S.K., *Gisudiraz on Sufism* (Delhi, 1983).

೧೦. Moinuddin Ahmed, Vlama, *The Boon and Bane of Islamic Society,* Kitab Bhavan (New Delhi, 1990).

೧೧. Mujeeb, M., *The Indian Muslims* (London, 1967).

೧೨. Richard Maxwell Eation, *Sufi's of Bijapur,* 130-1700, Princeton University Press (Priceton, 1978).

೧೩. *The Souvenir of Hazarat Khaja Bandanawaz Gesudaraz*RH, 600th Urs Celebrations 2004 (Hyderabad, 2004).

೧೪. *The Souvenir of Hazarat Khaja Bandahnawaz Gisudiraz,* 606th Urs Celebration 2010 (Hyderabad, 2010).

೧೫. Mohamed Sulemani Sidiqi, *The Bahmani Sufis,* Idria Adabiy, Delhi, 1989.

೧೬. Saiyid Athar Abbas Rizvi, *A History of Sufism in India,* Vol.1 (1978), Munishiram Mohanlal Publication Pvt. Ltd., Delhi, 1986.

೧೭. Saiyid Athar Abbas Rizvi, *A History of Sufism in India,* Vol.II (1983), Munishiram Mohani Publication Pvt. Ltd., Delhi, 1992.



# ಕೆಳದಿ ಇತಿಹಾಸದಲ್ಲಿ ಫ್ರೆಂಚರು

ಕೆಳದಿ ಗುಂಡಾಜೋಯಿಸ್*

ಕ್ರಿ.ಶ. ೧೪೯೯ ರಿಂದ ೧೭೬೩ರವರೆಗೆ ಭಾರತದ ಚರಿತ್ರೆಯಲ್ಲಿ ಪ್ರಮುಖ ಸಂಸ್ಥಾನವೆನಿಸಿದ ಕೆಳದಿ ರಾಜ್ಯದ ಅಧೀನದಲ್ಲಿ ದಕ್ಷಿಣ ಭಾರತದಲ್ಲಿ ಪಶ್ಚಿಮ ಭಾಗದ ಕಡಲ ತೀರದ ಬಹುಭಾಗ ಸ್ವಾಮ್ಯಕ್ಕೆ ಸೇರಿದ್ದನ್ನು ಗೋವಾದ ದಿ॥ ಡಾ. ಬಿ.ಎಸ್. ಶಾಸ್ತ್ರಿ, ಪಿಸುರ್ಲೆಂಕರ್, ಡಾ. ವಸಂತ ಮಾಧವರವರು ಸಿದ್ಧಪಡಿಸಿ ದಾಖಲಿಸಿರುವುದು ಇತಿಹಾಸವೇದ್ಯವೇ ಆಗಿದೆ. ಉತ್ತರ ಕನ್ನಡದ ಕಾರವಾರ ಅಂಕೋಲದಿಂದಾರಂಭಿಸಿ ಕೇರಳದ ಬಿಲಿಯಾಪಟಮ್‌ವರೆಗೆ ಕೆಳದಿ ಅರಸರ ಅಧಿಕಾರ ವ್ಯಾಪ್ತಿಯಲ್ಲಿ ಸಾಗರೋತ್ತರ ಇತಿಹಾಸದಲ್ಲಿ ರೋಚಕ ಸಂಗತಿಗಳನ್ನು ಬಿತ್ತರಿಸುತ್ತದೆ. ಪೋರ್ಚುಗೀಸ್, ಡಚ್, ಇಟಲಿ, ಇಂಗ್ಲೀಷ್, ಅರೇಬಿಯಾ, ಫ್ರೆಂಚ್ ಇತಿಹಾಸಗಳು ಕೆಳದಿ ಇತಿಹಾಸದಲ್ಲಿ ಸಮ್ಮಿಳಿತಗೊಂಡು ವೈವಿಧ್ಯಮಯ ಆಕರಗಳನ್ನು ನೀಡುತ್ತವೆ. ಫಾದರ್ ಹೆನ್ರಿ (೧೯೨೫) ಹೆರಾಸ್, ಸಿಲ್ವ್, ಪೀಟರ್ ಆಳ್ವಾರಿಸ್, ಡಾ. ಚಿಟ್ನೀಸ್, ಡಾ. ಸ್ವಾಮಿನಾಥನ್, ಡಾ. ಬಿ.ಎಸ್. ಶಾಸ್ತ್ರಿ, ಡಾ. ವಸಂತಮಾಧವರವರನ್ನು ಒಟ್ಟಾರೆ ಬೇರೆ ಯಾರೂ ಇಂತಹ ಆಕರಗಳನ್ನು ಬಳಸಿಕೊಂಡಿರುವುದು ಕಂಡುಬರುವುದಿಲ್ಲ. ವಿಶೇಷವಾಗಿ ಕೆಳದಿ ಇತಿಹಾಸ ಸಂಶೋಧಕರು ಇವುಗಳನ್ನು ಗಮನಿಸದೇ ಇದ್ದುದರಿಂದ ಈವರೆಗಿನ ದಕ್ಷಿಣ ಭಾರತದ ಇತಿಹಾಸವು ಅಪೂರ್ಣವೆಂದೇ ಹೇಳಬೇಕಾಗುತ್ತದೆ. ಇಷ್ಟಾದರೂ ಕಡಲ ತೀರದ ವಾಣಿಜ್ಯೋದ್ದಿಮೆ ಇತಿಹಾಸದಲ್ಲಿ ಈ ಕೆಳಗಿನ ಅಪ್ರಕಟಿತ ಆಕರಗಳು ಸಂಶೋಧನೆಗಾಗಿ ಎದುರುನೋಡುತ್ತಿವೆ.

1. Canara, Livro da Correspondencia do (The Book of Correcpendence concernnig), mss in the HAG. Goa.
2. Cartazyes, Livro de, (Sailing permits the Book of mss in the HAG, Goa.
3. Moncoes do Reno, Livro das-mss in the HAG.
4. Regimentos e Instucoes, Livro de (Orginentos e Instrncoes, the Book fo). Ibid.
5. Reis Vizyihos, Livro de (Neighbouring kings, The Book of) Ibid, codices 979 (1742-1745), 980 (1746-1750), 981 (1750-1753) and 982 (1770-1777). In corporate the correspondence of the viceroys of goa with various rulers in India.
6. Sarkar, Sir Jadumath and pissurlencar, P.S.S. Correspondence Between MSS in the History Research centre of the university of Bombay's centre of post graduate Instruction and Research, Panaji, Goa.

ಇತ್ಯಾದಿ– ಅಪೂರ್ಣ–

ಕೆಳದಿ ಇತಿಹಾಸದಲ್ಲಿ ಕಂಡುಬರುವ ಫ್ರೆಂಚರ ಕುರಿತು ಉಪಲಬ್ಧ ಆಕರಗಳೊಂದಿಗೆ ವಿದ್ವಾಂಸರ ಗಮನಕ್ಕೆ ತರಲು ಈ ಪ್ರಬಂಧವನ್ನು ಸಾದರಪಡಿಸುತ್ತಿದ್ದೇನೆ.

ಪಶ್ಚಿಮ ತೀರದ ಕಡಲೋತ್ತರ ಕೆಳದಿ ಇತಿಹಾಸಾಧ್ಯಯನವನ್ನರಿಯಲು ಪೋರ್ಚುಗೀಸ್, ಫ್ರೆಂಚ್, ಇಂಗ್ಲೀಷ್, ಮರಾಠಿ, ಡಚ್ ಭಾಷೆಗಳಲ್ಲಿ ಪ್ರಭುತ್ವ ಪಡೆದುಕೊಂಡಲ್ಲಿ ಮಾತ್ರ ಸಾಧನೆಗೈಯಲು ಸಾಧ್ಯವಾಗುತ್ತದೆ. ಗೋವಾದ ಪಿಸುರ್ಲೆಂಕರ್‌ರವರು ಇವುಗಳನ್ನು ಕರಗತ ಮಾಡಿಕೊಂಡಿದ್ದುದರಿಂದ ಸಧ್ಯಕ್ಕೆ ಅವರು ಪ್ರಕಟಿಸಿದ ಆಕರಗಳನ್ನೇ ಮೊರೆಹೋಗುವಂತಾಗಿದೆ. ಇಂತಹ ವಿಪುಲ ಆಕರಗಳಲ್ಲಿ ಸಂಕ್ಷಿಪ್ತವಾಗಿ ಈ ಕೆಳಗಿನ ಮೂಲ ಸಾಮಗ್ರಿಗಳನ್ನು ಅವಲೋಕಿಸಬಹುದಾಗಿದೆ.

೧. ಕರ್ನಲ್ ಜಿ.ಬಿ. ಮಲ್ಲೇಶನ್‌ರವರ History of the French in India, London-1893.

೨. English / Latin / Konkani Records parish archives of - Gangolli, Kundapura, Shirva, Milagris, Mangalore, Milagris-Kalyanapura,

* ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ, ಸಾಗರ ತಾಲ್ಲೂಕು–೫೭೭೪೦೧.

Rosario, Kallyanapura, Rosario-Mangalore, Farangipet, Kirur, Barkur, Basrur, Honnavara, Miryan, Karwar, Sunkeri, Kumta, Chandavara, Gundilala and Nagara.

3. Livro de correspondincia do canara.

೪. ಪಾಂಡಿಚೆರಿಯ ಪತ್ರಾಗಾರದಲ್ಲಿಯೂ ಹಲವಷ್ಟು ಸಂಗ್ರಹಗಳಿದ್ದು, ವಿಪುಲ ದಾಖಲೆಗಳು Royal Asiatic Soceity, Paris ನಲ್ಲಿವೆ. ಇತ್ಯಾದಿ.

## ಕರಾವಳಿಯಲ್ಲಿ ಫ್ರೆಂಚರು

ಫ್ರೆಂಚರು ರೋಮನ್ ಕೆಥೋಲಿಕ್‌ರಾಗಿದ್ದು ವ್ಯಾಪಾರೋದ್ದಿಮೆ ಕೈಗೊಳ್ಳಲು ಭಾರತಕ್ಕೆ ಬಂದರು. ಪಾಂಡಿಚೇರಿಯೇ ಅವರ ಕೇಂದ್ರಸ್ಥಾನವಾಯಿತು. ಪಶ್ಚಿಮ ಕರಾವಳಿ ಹಾಗೂ ಮಲಬಾರ್‌ನಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಲು ಪ್ರಯತ್ನಿಸಿದರು. ಕ್ರಿ.ಶ. ೧೭-೧೮ನೇ ಶತಕದಲ್ಲಿ ಹಲವು ಕಾಲ ಕೇರಳದ ಮಾಹೆ ಪ್ರದೇಶವು ಅವರ ಚಟುವಟಿಕೆಗಳ ಕೇಂದ್ರವಾಯಿತು. ಭಾರತದಲ್ಲಿ ಫ್ರೆಂಚ್ ಪ್ರಭಾವವನ್ನು ವಿಸ್ತರಿಸಲು ರಾಜ್ಯ ವಿಸ್ತರಣೆಗಾಗಿ ವೈಸರಾಯ ಡೂಪ್ಲೆ ಒಂದು ದೊಡ್ಡ ಯೋಜನೆಯನ್ನು ರೂಪಿಸಿದನು. ಕರಾವಳಿಯ ಅಧಿಪತಿ ಕೆಳದಿ ಅರಸರೊಂದಿಗೆ ಮಲಬಾರಿನ ರಾಜನ ಮುಖಾಂತರ ಈತನು ವ್ಯವಹರಿಸುವಂತಾಯಿತು. ಫ್ರೆಂಚ್ ವರ್ತಕರೂ ಕೆಳದಿ ರಾಜ್ಯದಿಂದ ಮೆಣಸು ಮತ್ತು ಇತರೆ ವಾಣಿಜ್ಯೋದ್ಯಮ ಸರಕುಗಳನ್ನು ಕೊಳ್ಳಲು ಆಸಕ್ತಿ ವಹಿಸಿದ್ದರು. ೧೬೭೮ನೇ ಸೆಪ್ಟೆಂಬರ್ ೧೬ರ ಮಾಹಿತಿಯೊಂದು ಅವರು ಬಾರಕೂರಿನಲ್ಲಿ ನಾರಣಮಲ್ಲನೊಂದಿಗೆ ವ್ಯಾಪಾರೋದ್ಯಮದಲ್ಲಿ ತೊಡಗಿದ್ದುದು ಕಂಡುಬರುತ್ತದೆ.[೧] ಹೀಗೆ ಮಲಬಾರ್ ಕರಾವಳಿಯ ಮುಖಾಂತರವಾಗಿ ಫ್ರೆಂಚ್ ಮಿಷನರಿಗಳು ಕೆಳದಿ ರಾಜ್ಯವನ್ನು ಪ್ರವೇಶಿಸಲು ಪ್ರಯತ್ನಿಸಿದರು.[೨]

೧೭೫೧ ಅಕ್ಟೋಬರ್‌ನಲ್ಲಿ ಇಮ್ಮಡಿ ಬಸಪ್ಪನಾಯಕನಿಗೆ ಮಲಬಾರಿನ ಕೋಲತ್ತಿರಿ ರಾಜನೊಂದಿಗೆ ಯುದ್ಧವಾಯಿತು. ಈ ನೆರೆಹೊರೆಯ ಯುದ್ಧವನ್ನು ದುರುಪಯೋಗಪಡಿಸಿಕೊಂಡು ಡೂಪ್ಲೆಯ ಯೋಜನೆ ಮೇರೆಗೆ ಫ್ರೆಂಚರು ಇದರಲ್ಲಿ ಪ್ರವೇಶ ಮಾಡಲು ನಿರ್ಧರಿಸಿದರು. ೧೭೫೧ರಲ್ಲಿ (ಡಿಸೆಂಬರ್) ಇಮ್ಮಡಿ ಬಸಪ್ಪನಾಯಕನ ವಿರುದ್ಧವಾಗಿ ಮಲಬಾರಿನ ಅರಸನಿಗೆ ಫ್ರೆಂಚರು ಸಹಾಯ ನೀಡಿದರು.[೩] ಸಹಜವಾಗಿಯೇ ಈ ಸನ್ನಿವೇಶವು ಪೋರ್ಚುಗೀಸರಿಗೆ ಬಿಕ್ಕಟ್ಟುಂಟಾಯಿತು. ಪಶ್ಚಿಮ ಕರಾವಳಿಯ ರಾಜಕಾರಣದಲ್ಲಿ ಫ್ರೆಂಚರ ಮಧ್ಯಪ್ರವೇಶದಿಂದ ಅವರ ಸ್ವಾಮ್ಯಕ್ಕೆ ಧಕ್ಕೆಯುಂಟಾಗುವ ಭೀತಿಯೂ ತಲೆದೋರಿತು. ಜೊತೆಗೆ ಈ ಘರ್ಷಣೆಯಲ್ಲಿ ಫ್ರೆಂಚರು ಮೂಗು ತೂರಿಸಿದುದು ಪೋರ್ಚುಗೀಸರಿಗೆ ವಿಚಿತ್ರವಾದ ಧರ್ಮಸಂಕಟವನ್ನುಂಟು ಮಾಡಿತು.[೪] ಡೂಪ್ಲೆಯು ಕೆಳದಿ ರಾಜ್ಯವನ್ನು ಕಬಳಿಸಿ ತನ್ನ ಅಧೀನದಲ್ಲಿರಿಸಿಕೊಳ್ಳಲು ಹವಣಿಸಿ ತಮಗೆ ಆಯುಧ ಹಾಗೂ ಸೈನಿಕರನ್ನು ಸಹಾಯವಾಗಿ ಕೊಟ್ಟು ಮಂಗಳೂರು ಹಾಗೂ ಇತರ ಬಂದರುಗಳಲ್ಲಿ ಇಮ್ಮಡಿ ಬಸಪ್ಪನಾಯಕನಿಗೆ ಎದುರಾಗಿ ಹಾಗೂ ಬಹಿರಂಗವಾಗಿ ಹಗೆಯನ್ನು ಘೋಷಿಸಲು ಪೋರ್ಚುಗೀಸರನ್ನು ವಿನಂತಿಸಿಕೊಂಡನು.[೫] ಕೆಳದಿ ಅರಸರೊಂದಿಗೆ ನಿಕಟ ಸಂಪರ್ಕದಿಂದಿದ್ದ ಪೋರ್ಚುಗೀಸರು ಇದನ್ನು ನಿರಾಕರಿಸಿದರು. ಡೂಪ್ಲೆಯ ದುರಾಸೆಯನ್ನು ಅರಿತಿದ್ದ ಅವರು ಕೆಳದಿ ಅರಸರೊಂದಿಗೆ ಇರುವ ವ್ಯಾಪಾರೋದ್ದಿಮೆ ಸಂಬಂಧವನ್ನು ಸುಲಭವಾಗಿ ಕಡಿದುಕೊಳ್ಳುವಂತಿರಲಿಲ್ಲ. ಇಷ್ಟಾದರೂ ಕೆಳದಿ ರಾಜ್ಯದ ಅಧೀನದಲ್ಲಿದ್ದ ಮಂಗಳೂರಿನ ಮೇಲೆ ಫ್ರೆಂಚರು ಆಕ್ರಮಣವನ್ನೆಸಗಿದರು. ಇಮ್ಮಡಿ ಬಸಪ್ಪನಾಯಕನು ಪೋರ್ಚುಗೀಸರೊಂದಿಗೆ ತಮಗಿದ್ದ ಪರಂಪರಾಗತ ಸ್ನೇಹದ ನೀತಿಗನುಗುಣವಾಗಿ ಈ ಸಮಯದಲ್ಲಿ ಫ್ರೆಂಚರ ವಿರುದ್ಧವಾಗಿ ಸಹಾಯಕ್ಕೆ ಕೋರಿದನು. ಅವರು ನೀಡಿದ ಉತ್ತರ ಹಾರಿಕೆಯದಾಗಿತ್ತು. ಫ್ರೆಂಚರಿಗೆ ತಾವು ಸಹಾಯ ಮಾಡಿಲ್ಲವಾದ್ದರಿಂದ ಕೆಳದಿಗೂ ಮಾಡಲು ಸಾಧ್ಯವಿಲ್ಲ ಎಂದು ಹೇಳಿದರು. ಹಾಗಾದರೆ ಕೆಳದಿಯೊಂದಿಗೆ ಮಾಡಿಕೊಂಡ ನಿರ್ದಿಷ್ಟ ಒಪ್ಪಂದಗಳ ಗತಿಯೇನು ಎಂದು ಕೇಳಿದ್ದಕ್ಕೆ ಏಷ್ಯದ ಯಾವ ಶತ್ರುವು ಯುದ್ಧಕ್ಕೆ ಬಂದರೂ ಕೆಳದಿಗೆ ನಾವು ಸಹಾಯ ಮಾಡುವವರೇ ಹೊರತು ಯುರೋಪಿಯನ್ ರಾಜರ ವಿರುದ್ಧವಾಗಿ ಈ ರೀತಿ ವ್ಯಾಖ್ಯಾನಿಸುತ್ತಾ ಧಾರ್ಮಿಕ ಭಾವನಾತ್ಮಕ ನಂಟು ಉಂಟು ಮಾಡಿದರು. ಫ್ರೆಂಚರಿಗೆ ಸಹಾಯ ಮಾಡದೇ ಹೋದರೂ ಹಿಂದೂ ರಾಜರನ್ನು ಕೈಬಿಟ್ಟರು. ಅದೂ ಇಮ್ಮಡಿ ಬಸವಪ್ಪನಾಯಕನು ಡೂಪ್ಲೆಯಿಂದಾಗಿ ಫ್ರೆಂಚರನ್ನು ಎದುರಿಸುತ್ತಿದ್ದ ಅಪಾಯಕಾರೀ ಸಂದರ್ಭದಲ್ಲಿ ಪೋರ್ಚುಗೀಸರು ಕೆಳದಿಯ ನೆರವಿಗೆ ಬರಲಿಲ್ಲ. ಇದರಿಂದ ಬಸವಪ್ಪನಿಗೆ ಸೋಲುಂಟಾಯಿತು. ೧೭೫೨ರ ಫೆಬ್ರವರಿಯಲ್ಲಿ ಫ್ರೆಂಚರು ಮತ್ತು ಬಸವಪ್ಪನ ನಡುವೆ ಶಾಂತಿ ಸ್ಥಾಪಿಸಲು ಪೋರ್ತುಗೀಜರು ಪ್ರಯತ್ನಿಸಿದರು. ಫ್ರೆಂಚರ ಪ್ರತಿನಿಧಿ ಮಾರ್ಕ್ವಿಸ್ ದೆ ಡೂಪ್ಲೆನಿಗೆ ಬರೆಯುತ್ತಾ ಒಪ್ಪಂದಕ್ಕೆ ಫ್ರೆಂಚರ ಷರತ್ತುಗಳನ್ನು ತಿಳಿಸಲು ಕೇಳಿದನು. ೧೭೫೪ರಲ್ಲಿ ಸಂಧಿಯ ಮಾತುಕತೆಗಾಗಿ ಪಾಂಡಿಚೆರಿಗೆ ರಾಯಭಾರಿಯನ್ನು ಕಳಿಸಲು ಕೆಳದಿ ಅರಸನು ನಿರ್ಧರಿಸಿದನು.[೬]

## ಕಡಲುಗಳ್ಳ ತುಳಾಜಿ ಆಂಗ್ರಿಯ

ಡಾ. ಬಿ.ಎಸ್. ಶಾಸ್ತ್ರಿರವರು ಈತನನ್ನು ಕುರಿತು–

Tulaji Angriya, master of the territory from Bankot to suvarnadurga in south Konkam, was a running sore on the side of the seelore trade of the european powers on the west coast of India. He had his own arouned fleet with which the haresed the dutch, the english, the french and the portiguese all along the coast.

ಈ ರೀತಿ ಪ್ರಸ್ತಾಪಿಸಿ ಕಡಲ ತೀರದಲ್ಲಿ ಪ್ರಬಲನಾಗಿರುವ ಸಮುದ್ರಗಳ್ಳನಾಗಿದ್ದ ಈತನ ಕುರಿತು ವ್ಯವಸ್ಥಿತ ಸಂಶೋಧನೆಯ ಅಗತ್ಯತೆಗೆ ಡಾ. ಶಾಸ್ತ್ರಿ ಒತ್ತಿ ಹೇಳಿದ್ದಾರೆ. ತುಳಾಜಿ ಹಾಗೂ ಫ್ರೆಂಚರೊಂದಿಗೆ ಬಸವಪ್ಪನಿಗೆ ಅನಿವಾರ್ಯವಾಗಿ ಯುದ್ಧವುಂಟಾಯಿತು. ತುಳಾಜಿಯು ಆಗಾಗ ಕೆಳದಿ ರಾಜ್ಯದ ಬಂದರುಗಳನ್ನು ದಾಳಿ ಮಾಡಿ ಸೂಲಿದು ಕಷ್ಟನಷ್ಟಗಳಿಗೀಡು ಮಾಡಿದನು. ೧೭೪೭ನೆಯ ಜನವರಿಯಲ್ಲಿ ಮಂಗಳೂರಿನ ಪೋರ್ತುಗೀಜ ವ್ಯಾಪಾರ ಕೇಂದ್ರದಿಂದ ಮತ್ತು ಅಲ್ಲಿಯ ಮಂಡಲಾಧಿಕಾರಿಯ ಅರಮನೆಯಿಂದ ಅವನು ಬೆಲೆ ಬಾಳುವ ವಸ್ತುಗಳನ್ನು ದೋಚಿಕೊಂಡು ಹೋದನು. ತಮ್ಮ ಯುದ್ಧ ಜಹಜುಗಳಲ್ಲಿ ಹೆಚ್ಚಿನವು ಭೋಸ್ಲೆಯವರೊಡನೆ ಕಾದಾಡುತ್ತಿದ್ದುದರಿಂದ ಪೋರ್ತುಗೀಜರು ಮಂಗಳೂರಿನಲ್ಲಿ ನಿಸ್ಸಹಾಯಕರಾಗಿದ್ದರು. ಬಸವಪ್ಪನು ಕೂಡ ತನ್ನ ಯುದ್ಧ ನೌಕೆಯನ್ನು ತ್ರಿಯಂಬಕದಾಸನ ನೇತೃತ್ವದಲ್ಲಿ ಭೋಸ್ಲೆಯವರ ವಿರುದ್ಧ ಪೋರ್ತುಗೀಸರ ಸಹಾಯಕ್ಕೆ ಕಳಿಸಿದ್ದನು. ವೈಸ್‌ರಾಯನು ಬಸವಪ್ಪನಿಗೆ ಕೃತಜ್ಞತೆ ಅರ್ಪಿಸಿದನು.[೭] ತುಳಾಜಿ, ಪೋರ್ಚುಗೀಸ್, ಫ್ರೆಂಚ್ ಕುರಿತು ವಿಪುಲ ಮಾಹಿತಿಯಿದೆ ತುಳಾಜಿ ೧೭೫೦ರಲ್ಲಿ ಗೋಕರ್ಣಕ್ಕೂ ಧಾಳಿ ಮಾಡಿದುದು ವ್ಯಕ್ತಪಡುತ್ತದೆ.[೮]

## ಈ ಪ್ರಬಂಧಕ್ಕೆ ಸಾಧಕವಾಗುವ ಇತರ ಅಂಶಗಳು

ಕೆಳದಿ ಇತಿಹಾಸದಲ್ಲಿ ಫ್ರೆಂಚರ ಚಟುವಟಿಕೆಗಳಿಗೆ ಪೋರ್ಚುಗೀಸ್, ಡಚ್, ಇಂಗ್ಲೀಷ್, ಮರಾಠಿ ಹಾಗೂ ಮಲಬಾರಿನ ಇತಿಹಾಸದ ಆಕರಗಳನ್ನು ತುಲನಾತ್ಮಕ ಅಧ್ಯಯನ ದೊಂದಿಗೆ ಸೂಕ್ಷ್ಮವಾಗಿ ಸಂಶೋಧಕರು ಅವಲೋಕಿಸುವುದು ಅಗತ್ಯ. ಹಲವು ಮಾದರಿಗಳನ್ನು ಇಲ್ಲಿ ನೀಡಲಾಗಿದೆ.

೧೭೩೬–೩೭ನೇ ಫೆಬ್ರವರಿ ೯–೨೦ನೇ ತಾರೀಖಿನಲ್ಲಿ ಕೆಳದಿ ಅರಸ ಇಮ್ಮಡಿ ಸೋಮಶೇಖರನಾಯಕನಿಗೂ ಮತ್ತು ಈಸ್ಟ್ ಇಂಡಿಯಾ ಕಂಪೆನಿಯ ತಲಚೇರಿಯ ಆಫೀಸಿನ ಮುಖ್ಯ ಅಧಿಕಾರಿ ಸ್ಟೀಫನ್ ಲೋನಿಗೂ ಆದ ಕರಾರು.

ಕರಾರು ನಂ. ೪. ಕೆಳದಿ ರಾಜಧನಿಯ ಸೈನ್ಯ ಕೊಲತ್ತಿರಿ ರಾಜ್ಯವನ್ನು ಜಯಿಸಿದರೆ ಅಲ್ಲಿಂದ ಒಳ್ಳೆಯ ಮೆಣಸನ್ನು ಏಲಕ್ಕಿಯನ್ನೂ ಕೊಂಡು ಹೋಗುವ ಅಧಿಕಾರ ಕಂಪೆನಿಗೆ ಇರುತ್ತದೆ. ಇದಕ್ಕೆ ಮುಂಚೆ ಕೊಲತ್ತಿರಿ ಮತ್ತು ಇಂಗ್ಲೀಷರಿಗೆ ಆದ ಕರಾರು ಸಿಂಧುವಾಗಿರುತ್ತದೆ. ಕಂಪೆನಿಯವರು ಕೊಲತ್ತಿರಿ ಅರಸನಿಗೆ ಪಾವ್ತಿಸುವ ಸುಂಕವನ್ನು ಕೆಳದಿ ಅರಸನಿಗೆ ಸಲ್ಲಿಸತಕ್ಕುದು.

ಕರಾರು ನಂ. ೫ ಕಂಪೆನಿಯವರ, ಮುಂಬಯಿ ಗವರ್ನರ ಅಥವಾ ತಲಚೇರಿ ಅಧಿಕಾರಿಯ ಹಡಗುಗಳಲ್ಲಿ ಕರಾವಳಿಯ ಬಂದರುಗಳಿಂದ ಅಕ್ಕಿ ಅಥವಾ ಇತರ ವಸ್ತುಗಳನ್ನು "ಅದಲಾಮಿ" ಸುಂಕವಿಲ್ಲದೆ ಕೊಳ್ಳಬಹುದು. ಆದರೆ ಇಂಗ್ಲೀಷ್ ಬಾವುಟವನ್ನು ಹತ್ತಿಸಿಕೊಂಡು ಬರುವ ಪ್ರತಿಯೊಂದು ಹಡಗುಗಳ ಮೇಲೆ ವಾಡಿಕೆಯ ಸುಂಕವನ್ನು ಹೊರಿಸಲಾಯಿತು.

ಕರಾರು ನಂ. ೬ ಕಣ್ಣಿನೂರಿನಿಂದ ೫ ಮೈಲು ಉತ್ತರಕ್ಕಿರುವ ಬಲಿಯಾಪಟ್ಟಣ ಹೊಳೆಯ ದ್ವಾರದ ಹತ್ತಿರ ಮದಕರದಿಂದ ೧/೨ ಲೀಗು ಉತ್ತರಕ್ಕೆ ಬಿದನೂರು (ಕೆಳದಿ) ಅರಸನು ಕೋಟೆ ಕಟ್ಟಬಾರದು ಬಲಿಯಾಪಟ್ಟಣ ಕೋಟೆಗೂ ತಳಿಪರಾಂಬಾ ಕೋಟೆಗೂ ಮಧ್ಯದಲ್ಲಿ ಕೆಳದಿಯವರು ಕೋಟೆ ನಿರ್ಮಿಸಬಹುದು. ಬಲಿಯಾಪಟ್ಟಣದಿಂದ ದಕ್ಷಿಣಕ್ಕೆ ಪೂತ್ತಿನಾ ಮತ್ತು ಪುನೆಲ್ಲಾ ಮಲೆಗಳವರೆಗೆ ಕಂಪೆನಿ ಹಕ್ಕಿನ ಸ್ಥಳವಾಗಿರುತ್ತದೆ. ಈ ಪ್ರದೇಶದಲ್ಲಿ ಬಿದನೂರಿನವರು ಮುಂದುವರಿಯಬಾರದು.

ಕರಾರು ನಂ. ೭ ಮೇಲೆ ಹೇಳಿದ ಸ್ಥಳ ಹೊರತು ಬಿದನೂರು ಅರಸರು ಕೋಟೆ ಕಟ್ಟಬಹುದು. ಸೈನ್ಯವನ್ನು ತರಬಹುದು. ಇದಕ್ಕೆ ಇಂಗ್ಲೀಷಿನವರು ಯಾವ ತರಹದಲ್ಲಿಯೂ ಅಡ್ಡಿ ಮಾಡಬಾರದು. ಈ ಕೋಟೆಗಳಿಗೆ ಬೇಕಾದ ಸಾಮಗ್ರಿ ತರುವ ಹಡಗುಗಳಿಗೂ ಉಪದ್ರಪಡಿಸ ಬಾರದು.

ಕರಾರು ನಂ. ೮ ಇಂಗ್ಲೀಷರು ಕೆಳದಿ ರಆಜ್ಯದ ಶತ್ರುಗಳಿಗೆ ಯಾವ ವಿಧದ ಸಹಾಯವನ್ನು ಮಾಡಕೂಡದು.

ಇದೇ ರೀತಿಯಲ್ಲಿ ೧೯೩೯–೪೦ರಲ್ಲಿ (ಫೆಬ್ರವರಿ ೨೬ನೇ ತಾರೀಖು) ಕೆಳದಿ ಅರಸನ ಅಧಿಕಾರಿ ಗವರ್ನರ ಸೂರಪ್ಪಯ್ಯನು ಇಮ್ಮಡಿ ಸೋಮಶೇಖರನಾಯಕನ ದಸ್ಕತು ಸಹಿತ ಒಪ್ಪಂದವನ್ನು ತಲಚೇರಿ ಮುಖ್ಯಾದಿಕಾರಿ ವಿಲ್ಯಮ್ ವೇಕ್ ಮತ್ತು ವಿಲ್ಯಮ್ ಜೇಸನ್‌ಗೆ ಸಲ್ಲಿಸಿದನು. ಮಂಗಳೂರಿನಲ್ಲಿರುವ ಇಂಗ್ಲೀಷರ ಕನ್ನಡ ಭಾಷಾಂತರಕಾರ ಪೇದ್ರುರಂಗೆಲ್ ಮುಖಾಂತರ ತಲಚೇರಿಯ ಮೇಯರ್

ಸ್ಟೀಫನ್ ಲೋನಿಗೆ ತಿಳಿಸಿದ ಕರಾರುಗಳು ಕನ್ನಡದಲ್ಲಿರುವುದು ಗಮನಾರ್ಹವಾದುದು. ಬೂದಿ ಬಸಪ್ಪನಿಗೂ, ಪ್ರಧಾನಿ ಮಹದೇವಪ್ಪ ಮತ್ತು ಇಂಗ್ಲೀಷ್ ಕಂಪೆನಿಗೂ ತಾ. ೨೫-೧೦-೧೭೫೭ರಲ್ಲಿ ಆದ ಕರಾರು, ದಿ. ೩೦-೧೦-೧೭೫೧ರಂದು ಇಂಗ್ಲೀಷ್ ಹಾಗೂ ಬಿದನೂರು ಅಧಿಕಾರಿಗೆ ಇಂಗ್ಲೀಷ್ ಕಂಪೆನಿ ಕನ್ನಡ ಭಾಷಾಜ್ಞಾನಿ ಅಂತೋನಿಯೋ ಪಿಯರ್ಸ್ ಬರಕೊಟ್ಟು ಕರಾರುಗಳು ತಲಚೇರಿಯ ಪತ್ರಾಗಾರಗಳಲ್ಲಿವೆ.[೯]

ವಿಲಿಯಂ ಲೋಗನ್‌ರವರ ಮಲಬಾರ್ ಮ್ಯಾನ್ಯುಯಲ್ಲಿ ಕಂಡಂತೆ-

The Kings of Bedunr (Keladi) were the first to grant immunity 1736-37, and therice afterwards ratified it i then followed the kolattiri prince on 8th may 1749 ratified in 1760; and finally the kadattunad Raja granted similar immunity in 1761. pp. 170.

An artificial famine is therefore always possible in malabar, and as matter of fact, such fauines used to occur prethy fregnetty in former times when the supply of grain came from only one or two foreign ports, thns in October 1755, The king of bednur, to whom the rice exporting port of Mangalore belonged, laid an embargo an grain, because of the ravages comunitted in his centtery by a bnccaneering expedition under the mapilla chief of cannanore this placed the french at mahe[10] the English at teelicherry, the dutch at cannanore, and the malabar Nayars and mapillas -the whole community in fact in a state of comparative fanine.

The french at mahe marked the recipt of the news of the capture of madras with every demonstration of joy and with much expenditure of gunpawder from all their forts. The english factors at once set to work to prepare for a siege by the french fleet. Provisions and biquors were laid in, men were enlisted, the garrison was conceutrated as much as possible, The native chiegs, the prince regent, the Bednur raja....pp. 383.

The portion of north malaboar which was at this time tuibntary to the king of Bednur, pp. 386.

Finding no friend near home, Mr. dorricl had perforce to seek them abroad, and an the 7th july he advised the Bednur governor of Mangalore that now was his opportunity to siee Nileswaram fort. His real object in tendering this advrise was to prevent its falling into the hands of the French for it was only too abvions by this time that the french were stirring with a view to benefit themselves in the impending stanggle, and the nileswaram country yielded sandalwood and cardious, which would be lost to the english if the french settled there-

pp. 388-389 ಇತ್ಯಾದಿ.

### ಉಪಸಂಹಾರ

ಪಶ್ಚಿಮ ಕರಾವಳಿಯಲ್ಲಿ ಅರಬ್ಬೀ ಸಮುದ್ರದ ಸಂಪೂರ್ಣ ಸ್ವಾಮ್ಯವನ್ನು ಹೊಂದಿದ ಕೆಳದಿ ರಾಜ್ಯವನ್ನು ತನ್ನ ಅಧೀನದಲ್ಲಿರಿಸಿಕೊಳ್ಳಲು ಫ್ರೆಂಚ್ ವೈಸ್‌ರಾಯ ಡೂಪ್ಲೆಯ ಕುಟಿಲ ಕಾರಸ್ಥಾನವು ಅವರ ಚಟುವಟಿಕೆಯ ಕೇಂದ್ರವಾದ ಮಾಹೆಯಿಂದ ಆರಂಭಗೊಂಡತಾಯಿತು. ಕೆಳದಿ ಅರಸರು ಚತುರೋಪಾಯಗಳಿಂದ ಎದುರಿಸಿರುವುದು ಫ್ರೆಂಚರನ್ನು ಕುರಿತು ಕೆಳದಿ ಇತಿಹಾಸದಲ್ಲಿ ರೋಚಕ ಸಂಗತಿಗಳು ಉಪಲಬ್ಧವಿದೆ ಕನ್ನಡ ಭಾಷಾಂತರಕಾರರ ಉಲ್ಲೇಖ ಕೆಳದಿ ರಾಜ್ಯದ ರಾಜ್ಯಭಾಷೆಯ ಕನ್ನಡದ ಸ್ಥಾನಮಾನವು ಗಮನಾರ್ಹ. ವೈಜ್ಞಾನಿಕ ರೀತಿಯಲ್ಲಿ ತರುಣ ಸಂಶೋಧಕರು ಇದರ ಅಧ್ಯಯನ ಕೈಗೊಂಡಲ್ಲಿ ಮಹಾಪ್ರಬಂಧವನ್ನು ವಿಶ್ವವಿದ್ಯಾಲಯದಲ್ಲಿ ಸಾದರಪಡಿಸುವಷ್ಟು ಮೂಲ ಸಾಮಗ್ರಿಗಳು ಕಂಡುಬರುತ್ತವೆ. ಪಾಂಡಿಚೆರಿಯ ಪತ್ರಾಗಾರ ದಲ್ಲಿರುವುದನ್ನು ನಾನು ಅವಲೋಕಿಸಿದ್ದೇನೆ. ಬಿಬ್ಲಿಯೋತೀಕ್ ನ್ಯಾಷನಲ್, ಆರ್ಕೈವ್ ನ್ಯಾಷನಲ್, ಮಿನಿಸ್ಟ್ರೆಡೆಲಾಗೆರ್ರ, ಮಿನಿಸ್ತ್ರೆ ಡೆಸಫೇರ್ಸ್ ಎತ್ರೋಂಜೆರ್, ಮುಂತಾದೆಡೆಗಳ ಸಂಗ್ರಹಗಳನ್ನು ಫ್ರೆಂಚ್ ಭಾಷಾತಜ್ಞರಾದ ಡಾ. ಸುಮನ್ ವೆಂಕಟೇಶ್, ಡಾ. ವಸುಂಧರಾ ಫಿಲಿಯೋಜಾರವರ ಸಹಾಯಗಳೊಂದಿಗೆ ಸಾಧಿಸಬಹುದೇನೋ? ದಿ॥ ಡಾ. ಬಿ.ಎಸ್. ಶಾಸ್ತ್ರಿಗಳೇ ನುಡಿದಂತೆ-

It was customary for every viceroy of goa to send to the king of portugal an annual report and some times more, on the state of affairs in the reighforhoad of goa such a report would cover not only portguese relations with such neighbours lent also relations among the neighbours themselves. The french naturally figured in such reports. There relations with the british, Dutch, Nizyam, Marathas, Keladi and local chiefs were accounted for in the reports. The report of 12-1-

1752 contains constic remarks about the french anfitions in India.[11]

There are many more reports, bent not mentioned here for want of space.

In conchsion, I may assent that a researcher on the french activities in India (in general keladi marine archaeology in particular) will find it rewarding indeed to go through the portuguese mateinal in the Historical Archives of goa.

ಎಂಬುದಾಗಿ ಮುಂದಿನ ಸಂಶೋಧಕರಿಗೆ ಕರೆ ನೀಡಿರುವುದು ಸಮಯೋಚಿತವಾಗಿದೆ. ದಿ॥ ಡಾ. ಬಿ.ಎಸ್. ಶಾಸ್ತ್ರಿರವರು ನನ್ನ ಆತ್ಮೀಯರಲ್ಲಿ ಶ್ರೇಷ್ಟ ವಿದ್ವನ್ಮಣಿಗಳು, ಪೋರ್ಚುಗೀಸ್, ಫ್ರೆಂಚ್ ಮುಂತಾದ ಭಾಷೆಗಳಲ್ಲಿ ಪ್ರಭುತ್ವ ಗಳಿಸಿದ್ದ ಶಾಸ್ತ್ರಿಗಳು ಲಿಸ್ಬನ್‌ನಲ್ಲಿ ಸಂಗ್ರಹಿಸಿದ ಅಮೂಲ್ಯ ದಾಖಲೆಗಳು ಎಲ್ಲಿದೆಯೋ ತಿಳಿಯದಂತಾಗಿದೆ. ಪೋರ್ಚುಗೀಸ್ ಹಾಗೂ ಇತರೆ ಸಾಗರೋತ್ತರ ಕೆಳದಿ ಸಂಪುಟವನ್ನು ಹೊರತರಲು ಯೋಜಿಸಿ, ನನ್ನೊಂದಿಗೆ ಸದಾ ಸಂಪರ್ಕವನ್ನಿರಿಸಿಕೊಂಡಿದ್ದರು. ಕೆಳದಿ ಇತಿಹಾಸಕ್ಕೆ ಇಂತಹ ವಿದ್ವಾಂಸರ ಕಣ್ಮರೆಯಿಂದ ಆದ ನಷ್ಟಗಳನ್ನು ನೆನೆಯುತ್ತಾ ಈಗಲೂ ಕೊರಗುವಂತಾಗಿದೆ. ಈಚೆಗೆ ಹೊರನಾಡಿನ ವಿದ್ವಾಂಸರು ಕೆಳದಿ ಇತಿಹಾಸದ ಪ್ರಾಮುಖ್ಯತೆಯನ್ನು ಮನಗಂಡು ವಿಶ್ವವಿದ್ಯಾಲಯದ ಮಹಾಪ್ರಬಂಧಕ್ಕಾಗಿ ನನ್ನೊಂದಿಗೆ ಚರ್ಚಿಸಲು ಧಾವಿಸುತ್ತಿದ್ದಾನೆ.

[ಪಾಂಡಿಚೇರಿಯ ಪತ್ರಾಗಾರದಲ್ಲಿನ ನನ್ನ ಸಂಶೋಧನೆಗೆ ಸಹಾಯ ಮಾಡಿದ ಚಿ॥ ಕೆ.ಜಿ. ನಾಗರಾಜ್‌ಗೆ ಕೃತಜ್ಞತೆಗಳು.]

## ಅನುಬಂಧ

Public Department Diary-pp. 248-9.

Tellicherry
26th August 1737

The king of Colastpee and prince of pallyhaving represented the Damoages resnting thro the eitrance of my army and being desirous of selthing the general travqilihity we have muntnally agreed on the sulose quent conditions namely.

That from the fort of madday westward to urbelly southward, as the river winds to the foot of the hills-Eastward with all the country northward of said river, shall hereafter appertain to the king of keladi, and from the parts afaresaid southward, the king of casastree shall enjoy what appertains to him, and, tis moreovere agreed that neither of the aforesaid powers shall enter with an armed force for invading or molesting in any wise the assigned territonies of either. In testimony where of I deliver this writing in presence of the english chief & the council of tellicherry, thro" whose mediation this treaty is settled, dated august 26: 1737.

Reed on
Thursday 13th October 1737

Sd/-
Surappaiah
Governor of Manglore Dt.
General of Canarese army

## ಕನ್ನಡದಲ್ಲಿ ಸಾರಾಂಶ

ನನ್ನ ಸೈನ್ಯವು, ಕೊಲತ್ತರಸನ ಮತತು ಪಳ್ಳಿಕೋವೀಗತತು ಅರಸನ ರಾಜ್ಯಗಳಲ್ಲಿ ಹೋಗಿ ಅವರಿಗೆ ಬಹಳ ನಷ್ಟವಾದ್ದರಿಂದಲೂ ಇನೂ ಮುಂದೆ ಇಬ್ಬರು ಸರಸರಿಗೂ ಸಮಾಧಾನವಿರುವ ಹಾಗೆ ನಮ್ಮಿಬ್ಬರೊಳಗೆ ಈ ಕೆಳಗಿನ ಶರ್ತಗಳ ಪ್ರಕಾರ ಆದ ಒಪ್ಪಂದ.

ಮಾಡಾಯಿ ಕೋಟೆಯಿಂದ ಪಶ್ಚಿಮಕ್ಕೆ, ಊರ ಬಳ್ಳಿವರೆಗೆ ದಕ್ಷಿಣಕ್ಕೆ ಪೂರ್ವಕ್ಕೆ ತಳಿಪರಾಯ ನದಿಯು ಹೇಗೆ ಗುಡ್ಡದಿಂದ ಹರಿದು ಬಂದದೋ ಅಲ್ಲಿವರೆಗೆ ಇರುವ ರಾಜ್ಯವು ಕೆಳದಿಗೆ ಸೇರತಕ್ಕದ್ದು. ಇದರ ದಕ್ಷಿಣಕ್ಕೆ ಬಾಕಿ ಉಳಿದ ರಾಜ್ಯವು ಕೊಲತ್ತರಸನಿಗೆ ಇರತಕ್ಕದ್ದು. ಇಬ್ಬರಲ್ಲಿ ಯಾವನೊಬ್ಬನು, ಒಬ್ಬನ ರಾಜ್ಯದಲ್ಲಿ ಇನ್ನೊಬ್ಬನು ಪ್ರವೇಶಿಸಕೂಡದು. ಇದಕ್ಕೆ ಆಧಾರವಾಗಿ ನಾನು ತಲಚೇರಿಯ ಇಂಗ್ಲೀಷ್ ಅಧಿಕಾರಿ ಮತ್ತು ಕೌನ್ಸಿಲಿನ ಮುಂದೆ ಈ ಕರಾರನ್ನು ಒಪ್ಪಿಸಿದ್ದೇನೆ.

(ದಸ್ಕತು) ಸೂರಪ್ಪಯ್ಯ
ಮಂಗಳೂರಿನ ಗೌರ್ನರ ಮತ್ತು ಕನ್ನಡ ಸೈನ್ಯದ ಜನರಲ್*

* ಮಹಾಜನ್ ಸಮಿತಿಯ ವರದಿಯಲ್ಲಿಯೂ ಈ ಅಂಶವು ಉಲ್ಲೇಖನಗೊಂಡಿರುವುದನ್ನು ಅವಲೋಕಿಸಬಹುದು.

೧) ಕಾಳೀ ನದಿ
೨) ಗಂಗಾವಳಿ ನದಿ
೩) ಅಘನಾಶಿನಿ ನದಿ
೪) ಶರಾವತಿ ನದಿ
೫) ಗಂಗೊಳ್ಳಿ ನದಿ
೬) ಅಂಜಿ ದ್ವೀಪ
೭) ಕಾರವಾರ
೮) ಅಂಕೋಲ
೯) ಗೋಕರ್ಣ
೧೦) ಕುಮಟಾ
೧೧) ಹೊನ್ನಾವರ
೧೨) ಗೆರಸೊಪ್ಪ
೧೩) ಕುಂದಾಪುರ
೧೪) ಗಂಗೊಳ್ಳಿ
೧೫) ಭಟ್ಕಳ
೧೬) ಕಲ್ಯಾಣಪುರ
೧೭) ಮುಲ್ಕಿ
೧೮) ಮಂಗಳೂರು
೧೯) ಉಳ್ಳಾಲ
೨೦) ಕಾಸರಗೋಡ
೨೧) ಚಂದ್ರಗಿರಿ
೨೨) ಉಪ್ಪಿನಂಗಡಿ
೨೩) ಬಂಗಾಡಿ
೨೪) ಕಾರ್ಕಳ
೨೫) ಕಳಸ
೨೬) ಬಿದನೂರು
೨೭) ಇಕ್ಕೇರಿ
೨೮) ಕೆಳದಿ




ಕರ್ನಾಟಕ ಇತಿಹಾಸದಲ್ಲಿ ಕಡಲ ತೀರದ ಸ್ವಾಮ್ಯತೆ ಕೆಳದಿ ರಾಜ್ಯಕ್ಕೆ ಸೇರಿದ್ದು, ದಕ್ಷಿಣ ಭಾರತದ ಇತಿಹಾಸದಲ್ಲಿ ಇದನ್ನು ಕಡೆಗಣಿಸುವಂತಿಲ್ಲವೆಂಬುದನ್ನು ವಿದ್ವಾಂಸರು ಮರೆಯಬಾರದು.

## ಅನುಬಂಧ

## ಪೋರ್ಚುಗೀಸರು ಕೆಳದಿ ಅರಸರೊಂದಿಗೆ ಮಾಡಿಕೊಂಡಿದ್ದ ನಿರ್ದಿಷ್ಟ ಒಪ್ಪಂದ

No. 7

An article of the Treaty of piece between the nayak of Ikery and the portuguese viceroy.

Copia dos apontamentos of fizyerao os ganres Antonio de mello de castro emel corte real de sampayo, sobre o ajustamento das ditas pazyes.

Aos chiristaos que viver nas terras del rery do canara, he necesaro que el rey do canara as oblique a uqe abedecao nas couzas que tocao a nossaley aos pes que andarem no dito reino, e que as padres as posao castigar naquillo que erraxem contra a by tamben somos infomados ure alguns Bramanes obrigao aos christaos dehiren festijar a festa de seus pagodes com salnas de mosqueteria e outras onzas que nossa by prohibe, Eassy el rey do canar deve mandar que daquy por diante se nao faca, e os I fizerem mandalos castigar.

(Mancoes de rano No. 23; Ano de 1653; folio 163; pazyes e tratados No I anno de 1571; foloios 58-59 Mangalore a Historical Sketch- George M. Moraes with a prefce by the Rev. H. Heras, S.J.

ಇದು ಇಂಗ್ಲೀಷ್ ಲಿಪಿ, ಪೋರ್ಚುಗೀಸ್ ಭಾಷೆ. ಪೋರ್ಚುಗೀಸ್ ಭಾಷೆಯಲ್ಲಿರುವ ಅನೇಕ ಭಾಗಗಳನ್ನು ಕನ್ನಡದಲ್ಲಿಯೂ ಪಿಸುರ್ಲೆಂಕರ್‌ರವರ ಅಸೆಂಟೋ ಸಂಪುಟಗಳಲ್ಲಿ ಅವಲೋಕಿಸಬಹುದಾಗಿದ್ದು, ಇದರ ಮಾದರಿಯನ್ನು ಇತಿಹಾಸ ದರ್ಶನದಲ್ಲಿ ಪ್ರಕಟವಾದ ನನ್ನ ಲೇಖನದಲ್ಲಿಯೂ ಕಾಣಬಹುದು.



## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು

೧. ಎಂ.ಎ. ದೇಸಾಯಿ ; *Chittakula, Karwar A History,* ಪುಟ ೩೨.
೨. *Secretariat Inward Letter Books,* No. 2, 1739-40; ಕ್ರಿ.ಶ. ೧೭೪೦ ಫೆಬ್ರವರಿಯ ಪತ್ರವ್ಯವಹಾರ.
೩. *Livro de correspondincia do canara;* No. 2 Fls 76077.
೪. Ibid., Fls 86-87.
೫. Ibid., 78-79.
೬ Ibid., 93-96.
೭. L.C.C. II 1767-1769, Fl 1 & 2.
೮. Ibid., Fl 46.
ಲಿವ್ರೋ ದಾ ಕರೆಸ್ಪಾಂಡಾಂಸಿಯಾದು ಕ್ಯಾನರಾ ಎಲ್.ಸಿ.ಸಿ.ವಿ.ಕ. ೩೮ ದಲ್ಲಾಳಿಗೆ ವೈಸ್‌ರಾಯನ ಪತ್ರ ತಾ ೨೧-೧೧-೧೭೪೯.
೯. ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ ಎಂ. ಗಣಪತಿರಾವ್ ಐಗಳ್, ಪುರವಣಿ ೧.
೧೦. *The French settlement of Mahe* is sitiated in the south of the mouth of the river Mahe with a roomy harbour whose rocky bar admits vessels up to 70 tons.. Logan : Malabar manual Vol. II pp. cccxxiii.
೧೧. Moccoes, No. 124-A, fls 166-70.

### ಆಕರ ಗ್ರಂಥಗಳು


೧. *Studies in Indo Portuese History,* Dr. B.S. Shastry, I.B.H. Prakashana, Bangalore 560009-1981.
೨. *Keladi polity,* Dr. K.N. chitins Karnatak university Dharwar 1974.
೩. *Malabar Manual :* William Logan, I & II Volmmes. Madras, R. Hill, ovt press, 1987.
೪. **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ,** ಎಂ. ಗಣಪತಿರಾವ್ ಐಗಳ್, ೧೯೨೨.
೫. **ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ,** ಡಾ. ಪಿಯಸ್ ಫಿಡೆಲಿಸ್ ಪಿಂಟೋ, ಸಮನ್ವಯ ಪ್ರಕಾಶನ ಮಂಗಳೂರು, ೧೯೯೯.
೬ *Mangalore : A Historical Sketch,*Prof. George M. Moraes 1927 Asian Educational Services, New Delhi.
೭. **ಕೆಳದಿ ಐತಿಹಾಸಿಕ ನಿಬಂಧಗಳು,** (ಡಾ. ಬಿ.ಎಸ್. ಶಾಸ್ತ್ರಿ ಲೇಖನ.) ಕೆಳದಿ ವಸ್ತು ಸಂಗ್ರಹಾಲಯ, ಇತಿಹಾಸ ಸಂಶೋಧನಾ ಸಂಸ್ಥೆ ಕೆಳದಿ (ಸಂ) ಡಾ. ಜಿ.ಎಸ್. ದೀಕ್ಷಿತ್-೧೯೯೯.



# ಮೈಸೂರು ಮತ್ತು ಐಗೂರು (ಬಲಂ) ನಾಯಕರ ಸಂಬಂಧಗಳು

**ಡಾ. ಬಿ.ಎಸ್. ಪುಟ್ಟಸ್ವಾಮಿ***

'ಐಗೂರು ವಿಜಯನಗರ ಕಾಲದಲ್ಲಿ ಉದಯಿಸಿದ ಒಂದು ಸಣ್ಣ ಪಾಳೆಪಟ್ಟು, ಬಲಂ ಅಥವಾ ಮಂಜಾರಾಬಾದ್ ಐಗೂರುಪಾಳೆಪಟ್ಟಿಗೆ ಸೇರಿದ್ದು, ಈ ಭಾಗಕ್ಕೆ ಬಲಂ ಎಂಬ ಹೆಸರು ಇದ್ದುದನ್ನು ಕಾಣಬಹುದಾಗಿದೆ. ಬಲಂ ಎಂಬುದು ಬಲ್ಲಾಳದ ಮೂಲ ಸ್ವರೂಪ ಇರಬಹುದೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಶ್ರೀಮನ್ಮಹಾರಾಜರ ವಂಶಾವಳಿಯಲ್ಲಿ ಬಲ್ಲಾ. ಐಗೂರು ಮತ್ತು ಬಲಂ ಮಂಜರಾಬಾದಿನ ಐಗೂರು ಎಂಬ ಪ್ರಸ್ತಾಪವನ್ನೂ, ಕೆಲವು ಸಾಹಿತ್ಯ ಆಕರಗಳಲ್ಲಿ ಬೇಲೂರಿಗೆ ಬಲಂ, ಐಗೂರು, ಮಣಿನಾಗಪುರ, ವೇದಾಪುರ, ಸೌಭಾಗ್ಯಪುರ, ಮಂಜರಾಬಾದ್ ಎಂಬೆಲ್ಲಾ ಹೆಸರುಗಳು ಇರುವುದನ್ನು ಕಾಣುತ್ತೇವೆ. ವಿಜಯನಗರದ ಪತನಾನಂತರ ಬಲಂ ಪಾಳೇಗಾರ ಮಂಚಯ್ಯನಾಯಕನ ಮಗ ಹಿರಿಯ ಸಿಂಗಪ್ಪನಾಯಕನು ಐಗೂರು ಸಂಸ್ಥಾನವನ್ನು ಆಳಿದನೆಂದು ಹೇಳಲಾಗಿದೆ. ಈ ನಾಯಕರು ಕಾಶ್ಯಪಗೋತ್ರದ ಆಪಸ್ತಂಭ ಸೂತ್ರದವರೆಂದು ಹೇಳಿಕೊಂಡಿದ್ದಾರೆ. ಬಲಂ ಪಾಳೇಗಾರರನ್ನು ಕುರಿತು ಸುಮಾರು ೬೦ಕ್ಕೂ ಹೆಚ್ಚು ಶಾಸನಗಳು ಲಭ್ಯವಾಗುತ್ತವೆ.

೧೫೬೫ರ ತಾಳಿಕೋಟೆ ಯುದ್ಧಾನಂತರ ವಿಜಯನಗರ ಪತನಗೊಂಡರೂ ಉತ್ತರಾಧಿಕಾರಿ ಸಾರ್ವಭೌಮತ್ವ ಪೆನುಗೊಂಡೆಯಲ್ಲಿ ೧೬೬೮ರವರೆಗೂ ಅಸ್ತಿತ್ವದಲ್ಲಿತ್ತು. ಅರವೀಡು ಮನೆತನದ ಕೊನೆಯ ಅರಸ ಮೂರನೆಯ ರಂಗರಾಯ ಕೆಳದಿ ಶಿವಪ್ಪನಾಯಕನ ಆಶ್ರಯ ಪಡೆದು ನಂತರ ಅವನಿಂದ ಬೇಲೂರನ್ನು ಪಡೆದು ಅಲ್ಲಿಯೇ ಅಂತ್ಯಗೊಂಡನು.

ಮೈಸೂರಿನ ಪಶ್ಚಿಮಭಾಗದಲ್ಲಿ ಆಳಿದ ಬೇಲೂರು ನಾಯಕರು ಈ ಪ್ರದೇಶದಲ್ಲಿ ಸಾಕಷ್ಟು ದೀರ್ಘಕಾಲ ಆಳ್ವಿಕೆ ನಡೆಸಿ ಪ್ರಸಿದ್ಧರಾಗಿದ್ದಾರೆ. ೧೩೯೭ ರಿಂದಲೂ ಬೇಲೂರು ಪ್ರಾಂತ್ಯ ವಿಜಯನಗರ ಅಧೀನದಲ್ಲಿದ್ದು ಬಲಂ ಪಾಳೇಗಾರ ಮಂಚಯ್ಯನಾಯಕನ ಪುತ್ರ ಹಿರಿಯ ಸಿಂಗಪ್ಪನಾಯಕನು ಮಣಿನಾಗಪುರ ಎಂಬ ಅಭಿಧಾನದಿಂದ ಕೂಡಿದ್ದು ಐಗೂರು ಸಂಸ್ಥಾನಕ್ಕೆ ಅಧಿಪತಿಯಾಗಿದ್ದನು. ಈ ನಾಯಕರ ಪ್ರಾರಂಭದ ಕೆಲವು ದೊರೆಗಳ ವಿಷಯ ಅಸ್ಪಷ್ಟವಾಗಿದ್ದರೂ ೧೬ನೇ ಶತಮಾನದಲ್ಲಿ ಯರ್ರ ಕೃಷ್ಣಪ್ಪನಾಯಕನು ಆಳಿದನೆಂದು, ಆನಂತರ ೧೫೬೬ರಿಂದ ೧೫೮೪ ವರೆಗೆ ವೆಂಕಟಾದ್ರಿನಾಯಕನು ಆಳಿದನೆಂದು ಶಾಸನಗಳಿಂದ ತಿಳಿದುಬರುತ್ತದೆ.

೧೫೮೮ ರಿಂದ ೧೬೨೫ರವರೆಗೆ ಆಡಳಿತ ನಡೆಸಿದ ಕೃಷ್ಣಪ್ಪನಾಯಕನ ಕಾಲದಲ್ಲಿ ಮೈಸೂರಿನ ಒಡೆಯರೊಂದಿಗೆ ವೈಮನಸ್ಯವುಂಟಾಯಿತು. ಪ್ರಾರಂಭದ ಘಟ್ಟದಿಂದಲೇ ಮೈಸೂರು ಮತ್ತು ಬೇಲೂರು ನಾಯಕರ ನಡುವೆ ವೈರತ್ವ ಇದ್ದುದು ಗಮನಿಸಬೇಕಾದ ಸಂಗತಿಯಾಗಿದೆ. ಒಡೆಯರ್ ವಂಶದ ಸಾಹಸಿ ದೊರೆ **ರಾಜಒಡೆಯರ್** ವಿಜಯನಗರದ ಪ್ರತಿನಿಧಿಯನ್ನು ಅಡಗಿಸಿ ಸ್ವಾತಂತ್ರ್ಯವನ್ನು ಘೋಷಿಸಿ ಕೊಂಡನು ರಾಜ ಒಡೆಯರ್ ವಿರುದ್ಧ ಅನೇಕ ಪಾಳೆಯ ಗಾರರು ಒಕ್ಕೂಟವನ್ನು ರಚಿಸಿಕೊಂಡು ದಾಳಿನಡೆಸಿದರು.

೧೬೦೮ರಲ್ಲಿ ಬೇಲೂರಿನ ಕೃಷ್ಣಪ್ಪನಾಯಕ, ಗ್ರಾಮದ ವೀರರಾಜಯ್ಯ, ಮೂಗೂರು ಬಾಲಲೋಚನ, ಯಳಂದೂರು ಇಮ್ಮಡಿ ರಾಜನಾಯಕ ಮತ್ತು ಉಮ್ಮತ್ತೂರು ಮಲ್ಲರಾಜಯ್ಯ ಮುಂತಾದವರು ಸೇನೆಯೊಂದಿಗೆ ಕುಣಿಗಲ್‌ನಲ್ಲಿ ಸಭೆ ಸೇರಿ ಶ್ರೀರಂಗಪಟ್ಟಣವನ್ನು ಸಾಧಿಸಲು ಪ್ರಯತ್ನ ನಡೆಸಿದರು. ರಾಜ ಒಡೆಯರ್ ಇವರನ್ನು ಎದುರಿಸಿ ಹಿಮ್ಮೆಟ್ಟಿಸಿದ್ದಲ್ಲದೆ ಬೇಲೂರು ಗ್ರಾಮವನ್ನು ಸ್ವಾಧೀನಪಡಿಸಿಕೊಂಡನು.

ಕೆಳದಿಯ ಸಾಹಿತ್ಯ ಕೃತಿಗಳಲ್ಲಿ ಮತ್ತೊಂದು ಮಹತ್ವದ ಸಂಗತಿಯು ಕಂಡುಬರುತ್ತದೆ. ಶಿವಪ್ಪನಾಯಕನ ಆಶ್ರಯವನ್ನು ಕೋರಿ ಬಂದ ವಿಜಯನಗರದ ಶ್ರೀರಂಗರಾಯನಿಗೋಸ್ಕರ ಬೇಲೂರನ್ನು ಸ್ವಾಧೀನಪಡಿಸಿಕೊಂಡು ಸಕ್ಕರೆ ಪಟ್ಟಣದ

* ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ವಿಶ್ವೇಶ್ವರಪುರ ಕಲಾ ಮತ್ತು ವಾಣಿಜ್ಯ ಕಾಲೇಜು, ಕೆ.ಆರ್. ರಸ್ತೆ, ಬೆಂಗಳೂರು–೫೬೦೦೦೪.

ಅಧಿಪತ್ಯವನ್ನು ನೀಡಿರುವುದು ಕಂಡುಬರುತ್ತದೆ. ಮುಂದೆ ಮೈಸೂರಿನ ಒಡೆಯರು ದಕ್ಷಿಣದಲ್ಲಿ ಪ್ರಬಲರಾಗಿ ರಾಜ್ಯವನ್ನು ವಿಸ್ತರಿಸುತ್ತಾ ಹೋದಾಗ ಪಶ್ಚಿಮದಲ್ಲಿದ್ದ ಅನೇಕ ಪಾಳೇಪಟ್ಟುಗಳನ್ನು ಗೆದ್ದುಕೊಂಡರು. ಮೈಸೂರಿನ ದೊಡ್ಡದೇವರಾಜ ಒಡೆಯನು ಕೆಳದಿಯ ಶಿವಪ್ಪನಾಯಕನಿಂದ ಹಾಸನ, ಸಕ್ರೆಪಟ್ಣ, ವಸ್ತಾರೆಗಳನ್ನು ಜಯಿಸಿ ಖಂದಣ ಹಣಬರುವಂತೆ ಏರ್ಪಾಡುಮಾಡಿದನೆಂದು ಹೇಳಲಾಗಿದೆ. ಇದು ಸ್ವಲ್ಪಮಟ್ಟಿನ ಉತ್ಪ್ರೇಕ್ಷೆ ಇದ್ದಂತೆ ಕಂಡುಬರುತ್ತದೆ. ವಿಜಯನಗರದ ಶ್ರೀರಂಗರಾಯನನ್ನು ಶತ್ರುಗಳಿಂದ ರಕ್ಷಿಸಿ ಅವನಿಗೆ ಅಗತ್ಯವಾದ ವ್ಯವಸ್ಥೆಯನ್ನು ಮಾಡಲಾಗಿತ್ತು. ಈ ದೃಷ್ಟಿಯಿಂದ ೧೬೬೪ರಲ್ಲಿ ಬೇಲೂರಿನ ರಕ್ಷಣೆಗಾಗಿ ಕೆಳದಿ ಸೋಮಶೇಖರನಾಯಕನು ಮೈಸೂರು ಸೈನ್ಯವನ್ನು ಹೊಡೆದೋಡಿಸಿದನು. ೧೭ನೇ ಶತಮಾನದಲ್ಲಿ ಬೇಲೂರು ನಾಯಕರು ಪ್ರಬಲರಾಗಿ ಮೈಸೂರಿನ ಮೇಲೆ ಕೆಲವು ಯುದ್ಧಗಳನ್ನು ಮಾಡಿದುದು ಕಂಡುಬರುತ್ತದೆ. ಈ ನಾಯಕರು ಕಳದಿ ರಾಣಿ ಚೆನ್ನಮ್ಮಾಜಿ ಮತ್ತು ಬಿಜಾಪುರದೊಂದಿಗೆ ಕೂಡಿಕೊಂಡು ವಸುಧಾರೆ ಮತ್ತು ಹಲವು ಪ್ರಾಂತ್ಯಗಳನ್ನು ಮೈಸೂರಿನಿಂದ ವಶಪಡಿಸಿಕೊಂಡರು. ಪರಿಣಾಮ ಬಹುಬೇಗ ಮೈಸೂರು ಒಡೆಯರು ಬೇಲೂರಿನ ಮೇಲೆ ಸೇಡು ತೀರಿಸಿಕೊಳ್ಳುವುದು ಸಾಧ್ಯವಾಯಿತು. ೧೬೯೩–೧೭೦೦ರಲ್ಲಿ ಬೇಲೂರಿಗೆ ಸೇರಿದ ೭೦೦೦ ಸೀಮೆಗಳು ಹಾಗೂ ಶನಿವಾರಸಂತೆ ಹೋಬಳಿಯು ಮೈಸೂರು ಸೈನ್ಯದ ದಾಳಿಗೆ ತುತ್ತಾಯಿತು. ೧೬೯೪ರಲ್ಲಿ ಕೆಳದಿ ಮತ್ತು ಮೈಸೂರು ದೊರೆಗಳು ಒಪ್ಪಂದ ಮಾಡಿಕೊಂಡಾಗ ಬಲಂ ನಾಯಕರಿಗೆ ಆರು ನಾಡುಗಳು ಲಭ್ಯವಾದವು. ೧೮ನೇ ಶತಮಾನದ ಮಧ್ಯಭಾಗದಲ್ಲಿ ಮೈಸೂರು ಒಡೆಯರು ದೌರ್ಬಲ್ಯದಿಂದ ಕೊಡಿದ್ದು, ಪರಿಣಾಮವಾಗಿ ಅಧಿಕಾರ ಅವರಿಂದ ಕೈತಪ್ಪಿ ಮೂಲೆಗುಂಪಾದರು. ಪರಿಸ್ಥಿತಿಯ ಲಾಭ ಪಡೆದುಕೊಂಡ ಹೈದರ್ ರಾಜ್ಯದಲ್ಲಿ ತನ್ನ ಪ್ರಾಬಲ್ಯದಿಂದ ಅಧಿಕಾರ ಕೇಂದ್ರೀಕರಿಸಿಕೊಂಡು ಆಳ್ವಿಕೆ ಪ್ರಾರಂಭಿಸಿದನು. ೧೭೬೩ರಲ್ಲಿ ಬೇಲೂರಿಗೆ ಸೇರಿದ ಕೆಲವು ಪ್ರದೇಶಗಳನ್ನು ಹೈದರ್ ವಶಪಡಿಸಿಕೊಂಡನು. ಮುಂದೆ ೩ನೇ ಆಂಗ್ಲೋ–ಮೈಸೂರು ಯುದ್ಧದಲ್ಲಿ ಬ್ರಿಟೀಷರು ಟಿಪ್ಪುವಿನ ಮೇಲೆ ಯುದ್ಧವನ್ನು ಕೈಗೊಂಡಾಗ ಬೇಲೂರುನಾಯಕರು ಬ್ರಿಟೀಷರ ಪಕ್ಷವನ್ನು ಸೇರಿಸಿಕೊಂಡು ಯುದ್ಧದಲ್ಲಿ ಭಾಗವಹಿಸಿದರು. ಯುದ್ಧದ ನಂತರ ಬೇಲೂರಿನ ನಾಯಕನು ಭಯದಿಂದ ಕೊಡಗಿಗೆ ಓಡಿಹೋಗಿದ್ದನೆಂದು ಕೆಲವು ಮೂಲಗಳು ತಿಳಿಸುತ್ತವೆ. ಆದರೆ ಟಿಪ್ಪುವು ಕೊಡಗಿನ ಮೇಲೆ ದಾಳಿ ಮಾಡಿದ ಸಂಧರ್ಭದಲ್ಲಿ ಬಲಂ ಪ್ರಾಂತ್ಯವನ್ನು ಗೆದ್ದುಕೊಂಡು ಕೋಟೆಯನ್ನು ನಿರ್ಮಿಸಿ ಅದಕ್ಕೆ **ಮಂಜರಾಬಾದ್** ಎಂದು ಹೆಸರಿಟ್ಟನು.

ಬೇಲೂರು (ಐಗೂರು) ಪಾಳೆಪಟ್ಟು ಮೈಸೂರಿನಿಂದ ಸಾಕಷ್ಟು ದೂರದಲ್ಲಿ ಹಾಗೂ ಅರಣ್ಯ ಮತ್ತು ಬೆಟ್ಟಗುಡ್ಡಗಳ ನಡುವೆ ಇದ್ದುದರಿಂದ ಅವರಿಗೆ ಸಹಜವಾಗಿ ನೈಸರ್ಗಿಕವಾದ ರಕ್ಷಣೆಯು ಲಭಿಸಿದ್ದಿತು. ಅರಣ್ಯಗಳ ಮಧ್ಯೆ ಇದ್ದ ಈ ಪ್ರದೇಶಕ್ಕೆ ಹಾದು ಹೋಗಿ ಅವರನ್ನು ಸೋಲಿಸುವುದು ಬಹು ದುಸ್ತರವಾಗಿದ್ದಿತು. ಕೊಡಗಿನಲ್ಲಿ ಹೈದರ್ ಮತ್ತು ಟಿಪ್ಪು ವಿರುದ್ಧ ದಂಗೆಗಳು ನಡೆಯುತ್ತಿದ್ದಾಗ ಐಗೂರು ಪಾಳೇಗಾರರು ಕೊಡಗಿನೊಂದಿಗೆ ಸಂಪರ್ಕ ಹೊಂದಿ ಹೈದರ್ ಮತ್ತು ಟಿಪ್ಪುವಿನ ಆಳ್ವಿಕೆಯನ್ನು ಧಿಕ್ಕರಿಸಿ, ಸ್ವತಂತ್ರರಾಗುವ ಪ್ರಯತ್ನಗಳನ್ನು ನಡೆಸಿದರು. ಆದರೆ ಹೈದರ್ ಮತ್ತು ಟಿಪ್ಪು ಕರ್ನಾಟಕದ ಎಲ್ಲಾ ಪಾಳೇಗಾರರನ್ನು ಸದೆ ಬಡಿದು ವಿಶಾಲವಾದ ರಾಜ್ಯವನ್ನು ಸ್ಥಾಪಿಸುವ ಗುರಿಯನ್ನು ಹೊಂದಿದ್ದರು. ಆದುದರಿಂದ ಹೈದರ್ ಈ ನಾಯಕರನ್ನು ಸೋಲಿಸಿ ಅವರು ವಾರ್ಷಿಕವಾಗಿ ಐದು ಸಾವಿರ ಪಗೋಡ ಪೊಗದಿಯನ್ನು ಸಲ್ಲಿಸುವಂತೆ ಮಾಡಿದನು. ಸ್ವಲ್ಪ ಕಾಲ ಈ ನಾಯಕರು ಹೈದರ್ ಮತ್ತು ಟಿಪ್ಪುವಿಗೆ ಅಧೀನರಾಗಿದ್ದು ಕೊಂಡಿದ್ದರು. ಟಿಪ್ಪುವಿನ ಮರಣಾನಂತರ ಕೃಷ್ಣಪ್ಪನಾಯಕನ ಮಗನಾದ ವೆಂಕಟಾದ್ರಿನಾಯುಕನು ಮತ್ತೆ ತನ್ನ ರಾಜ್ಯವನ್ನು ಆಕ್ರಮಿಸಿಕೊಂಡು ಐಗೂರುನ್ನು ಕೇಂದ್ರವಾಗಿಸಿಕೊಂಡು ಅರಣ್ಯ ಮಧ್ಯದಲ್ಲಿರುವ **ಅರಕೆರೆಕೋಟೆ**ಯನ್ನು ಭದ್ರಪಡಿಸಿ ಅಲ್ಲಿಯೇ ನಿಂತನು.

೪ನೇ ಆಂಗ್ಲೋ–ಮೈಸೂರು ಯುದ್ಧಾನಂತರ ಬ್ರಿಟೀಷರು ಮೈಸೂರು ರಾಜ್ಯವನ್ನು ಒಡೆಯರ್ ಸಂತತಿಗೆ ಹಿಂತಿರುಗಿಸಿದರು. ಪೂರ್ಣಯ್ಯನನ್ನು ದಿವಾನನನ್ನಾಗಿ ಮತ್ತೆ ನೇಮಿಸಲಾಯಿತು. ಪೂರ್ಣಯ್ಯನು ಹೈದರ್ ಮತ್ತು ಟಿಪ್ಪು ಅನುಸರಿಸಿದ್ದ ವಿದೇಶಾಂಗ ನೀತಿಯನ್ನೆ ಅನುಸರಿಸಿ ಅಳಿದುಳಿದ ಪಾಳೇಗಾರರನ್ನು ನಿರ್ಮೂಲನೆ ಮಾಡುವ ನೀತಿಯನ್ನು ಅನುಸರಿಸಿದನು. ಈ ರೀತಿಯಲ್ಲಿ ಮೈಸೂರು ಪ್ರದೇಶದಲ್ಲಿ ಉಳಿದಿದ್ದ ಪಾಳೇಗಾರರಲ್ಲಿ ಬಲಂನ ವೆಂಕಟಾದ್ರಿನಾಯಕನು ಪ್ರಮುಖವಾಗಿದ್ದನು. ದೊಂಡಿಯವಾಘ ಎಂಬ ಸಾಹಸಿ ನಾಯಕನು ಬ್ರಿಟೀಷರ ವಿರೋಧಿಯಾಗಿ ಸ್ವತಂತ್ರವಾಗಿರಲು ಪ್ರಯತ್ನಗಳನ್ನು ನಡೆಸುತ್ತಿದ್ದನು. ಈ ಸಂದರ್ಭದಲ್ಲಿ ಪೂರ್ಣಯ್ಯನ ಯೋಜನೆಯಂತೆ ಬ್ರಿಟೀಷ್ ಸೈನ್ಯದ ಸಹಾಯದೊಂದಿಗೆ ಮೈಸೂರು ಸೈನ್ಯವು ಬಲಂ ಪಾಳೇಗಾರರನ್ನು ಹಾಗೂ ದೊಂಡಿಯವಾಘನನ್ನು ಅಡಗಿಸಲು ಪ್ರಯತ್ನಿಸಿತು. ವೆಂಕಟಾದ್ರಿನಾಯಕನು ಅರಣ್ಯ ಪ್ರದೇಶದಲ್ಲಿ ಅಭೇದ್ಯವಾದ ಕೋಟೆಯನ್ನು ನಿರ್ಮಿಸಿಕೊಂಡು ಅಲ್ಲಿ ಕಾರ್ಯಾಚರಣೆ

ನಡೆಸುತ್ತಿದ್ದುದರಿಂದ ಅವನನ್ನು ಸೋಲಿಸುವುದು ಬಹು ಕಷ್ಟವಾಯಿತು. ಕಡೆಗೆ ಮೈಸೂರು ಸೈನ್ಯವು ಬ್ರಿಟೀಷ್ **ಲೆಫ್ಟಿನೆಂಟ್ ಕರ್ನಲ್ ಮಾಂಟ್ರಿಸ್ಯೂರ್**ನ ನೇತೃತ್ವದಲ್ಲಿ ದಂಡೆತ್ತಿ ಹೋಗಿ ಅರಕೆರೆ ಕೋಟೆಯ ಮೇಲೆ ದಾಳಿ ನಡೆಸಿತು. ಆದರೆ ವೆಂಕಟಾದ್ರಿನಾಯಕನು ಪುನಃ ಕೋಟೆಯನ್ನು ವಶಪಡಿಸಿಕೊಂಡು ತನ್ನ ಪ್ರಾಬಲ್ಯ ಸ್ಥಾಪಿಸಿದನು. ಅನಂತರ ವಿಷಯ ತಿಳಿದ **ಅರ್ಥರ್ ವೆಲ್ಲಸ್ಲಿಯು** ಭಾರಿ ಸೈನ್ಯದೊಂದಿಗೆ ವೆಂಕಟಾದ್ರಿನಾಯಕನ ರಾಜಧಾನಿಯ ಮೇಲೆ ದಾಳಿ ನಡೆಸಿದನು. ನಾಯಕನು ಕಾಡಿನ ಮಧ್ಯೆ ಅವಿತುಕೊಂಡಿದ್ದು ಮೈಸೂರಿನ ಸೈನ್ಯಕ್ಕೆ ಸಾಕಷ್ಟು ಕಿರುಕುಳ ಕೊಟ್ಟನು. ೧೮೦೨ರ ಫೆಬ್ರವರಿಯಲ್ಲಿ ಮೈಸೂರು ಸೈನ್ಯವು ಸ್ಥಳೀಯರ ನೆರವು ಪಡೆದು ವೆಂಕಟಾದ್ರಿನಾಯಕನನ್ನು ಸೆರೆಹಿಡಿದು ನಂತರ ಅವನನ್ನು ಹುಗ್ಗಿಹಳ್ಳಿಯಲ್ಲಿ ಗಲ್ಲಿಗೇರಿಸಲಾಯಿತು. ಅನೇಕ ದಶಕಗಳಿಂದ ಮೈಸೂರಿಗೆ ಶರಣಾಗದೆ ಉಳಿದಿದ್ದ ಬಲಂ ಪಾಳೇಪಟ್ಟು ಕೊನೆಗೊಂಡು ಮೈಸೂರು ರಾಜ್ಯದಲ್ಲಿ ವಿಲೀನಗೊಂಡಿತು. ವೆಂಕಟಾದ್ರಿನಾಯಕನು ನಿರ್ಮಿಸಿದ ಎಲ್ಲಾ ಕೋಟೆಗಳನ್ನು ನಾಶಪಡಿಸಿದ್ದಲ್ಲದೆ ಅವನ ಸಂಬಂಧಿಗಳನ್ನು ಬಂಧಿಸಿ ಸೆರೆಮನೆಯಲ್ಲಿರಿಸಿದನು. ಅಲ್ಲಿನ ಅಮಲ್ದಾರರಿಗೆ ಬಲಂ ಪ್ರದೇಶದ ಎಲ್ಲಾ ದೊಡ್ಡ ವೃಕ್ಷಗಳನ್ನು ಕಡಿದು ಹಾಕುವಂತೆ ಆದೇಶ ನೀಡಲಾಯಿತು. ಈ ರೀತಿಯಾಗಿ ೧೪ನೇ ಶತಮಾನದಲ್ಲಿ ಸ್ಥಾಪನೆಯಾದ ಬೇಲೂರು ಸಂಸ್ಥಾನವು ದಕ್ಷಿಣ ಭಾರತದಲ್ಲಿ ತನ್ನದೇ ಆದ ಇತಿಹಾಸವನ್ನು ಹೊಂದಿ ಕಣ್ಮರೆಯಾಯಿತು. ಬೇಲೂರು ನಾಯಕರು ಶೌರ್ಯ, ಸಾಹಸ, ಔದಾರ್ಯ, ಪ್ರಜಾನುರಾಗಕ್ಕೆ ಹೆಸರುವಾಸಿಯಾಗಿದ್ದವರು. ಮೈಸೂರಿನ ಸಣ್ಣ ಸಂಸ್ಥಾನವೊಂದು ಒಡೆಯರು, ಹೈದರ್, ಟಿಪ್ಪು ಹಾಗೂ ಬ್ರಿಟೀಷರ ವಿರುದ್ಧ ಶೌರ್ಯ, ಸಾಹಸದಿಂದ ಹೋರಾಡಿದ ಪ್ರಕರಣವು ಮೈಸೂರಿನ ಇತಿಹಾಸದಲ್ಲಿ ನಡೆದ ಒಂದು ರೋಚಕ ಅಧ್ಯಾಯವಾಗಿದೆ.

೪ನೇ ಆಂಗ್ಲೋ–ಮೈಸೂರ್ ಯುದ್ಧಾನಂತರ ಬ್ರಿಟೀಷ್ ಸರ್ಕಾರದಿಂದ ದಕ್ಷಿಣ ಭಾರತದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ನೇಮಿಸಲ್ಪಟ್ಟ ಕರ್ನಲ್ ಮೆಕೆಂಜಿ ಬೇಲೂರು ನಾಯಕರ ಇತಿಹಾಸಕ್ಕೆ ಸಂಬಂಧಪಟ್ಟ ಅನೇಕ ಕೈಫಿಯತ್‌ಗಳನ್ನು ಸಂಗ್ರಹಿಸಿದನು. ಅವುಗಳಲ್ಲಿ ಈ ಕೆಳಗಿನವು ಪ್ರಮುಖವಾಗಿವೆ.

೧. ಅಂಕನಾಥಪುರದ ಅರ್ಕೇಶ್ವರಸ್ವಾಮಿ ಕೈಫಿಯತ್,
೨. ಚಿಕ್ಕಮಗಳೂರು ಕೈಫಿಯತ್,
೩. ವಸುಧಾರೆ ಗ್ರಾಮದ ಕೈಫಿಯತ್
೪. ಹಳೇಬೀಡು ಕೈಫಿಯತ್,
೫. ಜಮಾಲಾಬಾದ್ ಕೈಫಿಯತ್,
೬. ಮರದಾಳ ಕೈಫಿಯತ್

ಇದಲ್ಲದೆ ಅರ್ಥರ್ ವೆಲ್ಲಸ್ಲಿಯ **ಲೆಟರ್ಸ್ ಅಂಡ್ ಡಿಸ್ಪಾಚರ್ಸ್ ಆಫ್ ಡ್ಯೂಕ್ ಆಫ್ ವೆಲ್ಲಿಂಗ್ಟನ್** ಎಂಬ ಗ್ರಂಥವು ಬೇಲೂರಿನ ಕಡೆಯ ಪಾಳೇಗಾರ ವೆಂಕಟಾದ್ರಿನಾಯಕನ ಹೋರಾಟವನ್ನು ವಿವರವಾಗಿ ಚಿತ್ರಿಸುತ್ತದೆ.

ಬೇಲೂರು (ಬಲಂ) ಪಾಳೇಗಾರರ ಮೇಲೆ ಮೈಸೂರಿನ ಒಡೆಯರು ಸಾಕಷ್ಟು ದ್ವೇಷವನ್ನು ಬೆಳೆಸಿಕೊಂಡಿದ್ದು ಆ ಪಾಳೇಪಟ್ಟಿನ ವಿನಾಶದನಂತರವೂ ಈ ದ್ವೇಷ ಸಂಬಂಧವು ಮುಂದುವರೆಯಿತು. ದಿವಾನ್ ಪೂರ್ಣಯ್ಯನು ಮೈಸೂರು ಪ್ರದೇಶದ ಮಾಜಿ ಪಾಳೇಗಾರರಿಗೆ ಹಾಗೂ ಅವರ ಕುಟುಂಬದವರಿಗೆ ನಿವೃತ್ತ ವೇತನವನ್ನು ನೀಡಿ ಅವರನ್ನು ಮೈಸೂರಿನಲ್ಲಿ ನೆಲಸುವಂತೆ ಮಾಡಿದ್ದನು. ವೆಂಕಟಾದ್ರಿನಾಯಕನ ಸಂತತಿಯವರಿಗೆ ನಿವೃತ್ತಿ ವೇತನವನ್ನು ನೀಡುವ ಪ್ರಶ್ನೆ ಬಂದಾಗ ಹಲವಾರು ಸಬೂಬುಗಳನ್ನು ನೀಡಿ ಅದನ್ನು ತಡೆಹಿಡಿಯಲು ಪ್ರಯತ್ನ ಮಾಡಲಾಯಿತು. ನಿವೃತ್ತಿ ವೇತನವನ್ನು ಪಡೆಯಲು ವೆಂಕಟಾದ್ರಿನಾಯಕನ ಕುಟುಂಬದವರು ಹಲವಾರು ವರ್ಷಗಳ ಕಾಲ ಸರ್ಕಾರದೊಡನೆ ವ್ಯವಹರಿಸಿ ಬಹಳಷ್ಟು ತೊಂದರೆಯನ್ನು ಅನುಭವಿಸಿದರು.

**ಆಧಾರಸೂಚಿ**


೧. ರೈಸ್.ಬಿ.ಎಲ್. (ಸಂ) **ಎಫಿಗ್ರಾಫಿಯಾ ಕರ್ನಾಟಿಕ,** ಸಂ. ೪, ಭಾಗ–೨, ಮೈಸೂರು ಜಿಲ್ಲೆ, ೧೮೯೮.
೨. **ಹಾಸನ ಜಿಲ್ಲಾ ಗೆಜೆಟಿಯರ್.**
೩. ಕಲಬುರ್ಗಿ ಎಂ.ಎಂ. (ಸಂ) **ಕರ್ನಾಟಕದ ಕೈಫಿಯತ್ತುಗಳು,** ಕನ್ನಡ ವಿ.ವಿ., ಹಂಪಿ, ೧೯೯೪.
೪. ಪುಟ್ಟಸ್ವಾಮಿ.ಬಿ.ಎಸ್. (ಸಂ) **ಕೈಫಿಯತ್ತುಗಳು ಕಂಡ ಮೈಸೂರು ರಾಜಕೀಯ ಚರಿತ್ರೆ.**
೫. **ಗೋಪಾಲ್. ಆರ್.** (ಸಂ) **ಹಾಸನ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ**



# ಶ್ರೀಪಾಂಡುರಂಗಾಶ್ರಮರ ಕಾಲದಲ್ಲಿ ಚಿತ್ರಾಪುರ ಸಾರಸ್ವತ ಸಮಾಜದಲ್ಲಿ ಬದಲಾವಣೆ

ಡಾ|| ಎ.ಕೆ. ಶಾಸ್ತ್ರಿ*

ಶ್ರೀಪಾಂಡುರಂಗಾಶ್ರಮ ಸ್ವಾಮಿಗಳವರ ಕಾಲ (೧೮೯೩-೧೯೧೫)ದಲ್ಲಿ ಚಿತ್ರಾಪುರ ಸಾರಸ್ವತ[೧] ಸಮಾಜದಲ್ಲಿ ಉಂಟಾದ ಬದಲಾವಣೆ ಕುರಿತು ವಿವೇಚಿಸುವ ಮುನ್ನ, ಚಿತ್ರಾಪುರ ಮಠದ ಹಿನ್ನೆಲೆ ಮತ್ತು ಪೂರ್ವದಿಂದಲೂ ನಡೆದು ಬಂದ ಗುರು-ಶಿಷ್ಯ ಸಂಬಂಧದ ಕಿರುಪರಿಚಯ ಅಗತ್ಯವೆಂದು ತೋರುತ್ತದೆ. ಗೋಕರ್ಣಕ್ಷೇತ್ರದ ಭಂಡಿಕೇರಿಯಲ್ಲಿ[೨] ಚಿತ್ರಾಪುರ ಸಾರಸ್ವತರ ಮಠ ಕ್ರಿ.ಶ. ೧೭೦೮ರಲ್ಲಿ ಸ್ಥಾಪನೆಯಾಯಿತು. ಪ್ರಥಮ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳು (ಕ್ರಿ.ಶ. ೧೭೦೮-೧೭೨೦) ಪೀಠವನ್ನಲಂಕರಿಸಿದ ಪ್ರಥಮ ಗುರುಗಳು[೩]. ಅಂದಿನಿಂದ ಇಂದಿನ ವರೆಗೂ ಮಠ ಮತ್ತು ಗುರು ಪರಂಪರೆ ಸಾಗಿ ಬಂದಿದೆ. ಪ್ರಥಮ ಶ್ರೀ ಶಂಕರಾಶ್ರಮ ಸ್ವಾಮಿಗಳು (೧೭೨೦--೧೭೫೭) ಪೀಠದಲ್ಲಿ ಎರಡನೆಯವರಾಗಿದ್ದು, ಅವರ ಸಮಾಧಿಯು ಭಟಕಳ ತಾಲೂಕಿನ ಶಿರಾಲಿಗೆ ಹೊಂದಿಕೊಂಡಿರುವ ಚಿತ್ರಾಪುರ ಮಠದಲ್ಲಿದೆ. ಅಂದಿನಿಂದ ಸಾರಸ್ವತರ ಮಠ ಗೋಕರ್ಣದ ಭಂಡಿಕೇರಿಯಿಂದ[೪] ಚಿತ್ರಾಪುರಕ್ಕೆ ಸ್ಥಳಾಂತರಗೊಂಡಿತು. ನಂತರದಲ್ಲಿ ಪೀಠವನ್ನಲಂಕರಿಸಿದವರು, ಕ್ರಮವಾಗಿ, ದ್ವಿತೀಯ ಶ್ರೀ ಪರಿಜ್ಞಾನಾಶ್ರಮ, ದ್ವಿತೀಯ ಶ್ರೀ ಶಂಕರಾಶ್ರಮ, ಶ್ರೀ ಕೇಶವಾಶ್ರಮ, ಶ್ರೀ ವಾಮನಾಶ್ರಮ, ಶ್ರೀಕೃಷ್ಣಾಶ್ರಮ, ಶ್ರೀ ಪಾಡುರಂಗಾಶ್ರಮ, ಶ್ರೀ ಆನಂದಾಶ್ರಮ, ತೃತೀಯ ಶ್ರೀ ಪರಿಜ್ಞಾನಾಶ್ರಮ ಮತ್ತು ಇಂದು ಪೀಠದಲ್ಲಿರುವ ಶ್ರೀ ಸದ್ಯೋಜಾತ ಶಂಕರಾಶ್ರಮ ಸ್ವಾಮಿಗಳು. ಪ್ರಸ್ತುತ ಲೇಖನ, ಪೀಠದಲ್ಲಿ ಆರನೆಯವರಾದ, ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳವರ ಕಾಲದಲ್ಲಿ ಸಾರಸ್ವತ ಸಮಾಜದಲ್ಲಿ ಉಂಟಾದ ಬದಲಾವಣೆಗೆ ಸಂಬಂಧಿಸಿದ್ದರಿಂದ, ಅದಕ್ಕೆ ಸಂಬಂಧಿಸಿದ ಕೆಲವು ಚಾರಿತ್ರಿಕ ದಾಖಲೆಗಳ ಸಮೀಕ್ಷೆ ಇಂತಿದೆ.

ಮಠ ಸ್ಥಾಪನೆ ಆದಾಗಿನಿಂದ ಗುರು ಮತ್ತು ಶಿಷ್ಯರ ನಡುವಿನ ಸಂಬಂಧ ಅನ್ಯೋನ್ಯವಾಗಿ ನಡೆದು ಬಂದಿತೆಂಬುದಕ್ಕೆ ಮಠದಲ್ಲಿ ದೊರಕಿದ ಚಾರಿತ್ರಿಕ ದಾಖಲೆಗಳೇ ಸಾಕ್ಷಿ[೫]. ಗುರು-ಶಿಷ್ಯ ಸಂಬಂಧ ಕುರಿತು, ಪ್ರಥಮ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳ ಶಾಸನ[೬] ಮತ್ತು "ನಾವು ಹತ್ತು ಸಮಸ್ತರು ಯಿದ್ದು ನಂಮ ನಂಮ ಸ್ವಧರ್ಮಗಳ ನಿಂಮ ಅನುಜ್ಞೆಯಿಂದ ನಡಕೊಂಡು ಬಹೆವು", ಎಂದು ಕೊಳೊಶಿ ಕುಶಸ್ತಳದ ಹತ್ತು ಸಮಸ್ತರು ಪ್ರಥಮ ಶ್ರೀ ಶಂಕರಾಶ್ರಮ ಶ್ರೀ ಪಾದಂಗಳಿಗೆ ಬರೆಸಿಕೊಟ್ಟ ಬಿನ್ನವತ್ತಳೆ[೭], ಇವು ಬೆಳಕು ಚೆಲ್ಲುತ್ತವೆ.

ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಆದಿಯಲ್ಲಿ, ಅಂದರೆ, ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳವರ ಕಾಲದಲ್ಲಿ ಚಿತ್ರಾಪುರ ಮಠದ ದಾಖಲೆಗಳ ಆಧಾರದಿಂದ ಸ್ಪಷ್ಟವಾಗಿ ಗುರುತಿಸ ಬಹುದಾಗಿದೆ.

ತಮ್ಮ ಮನೆತನದ ಮೂವರು ಸದಸ್ಯರು ಮಾಗಲಪುರ ಆರ್ಯಸಮಾಜದ[೮] ಸದಸ್ಯರಾಗಿರುವದರಿಂದ, ತಮ್ಮನ್ನು ಸಾರಸ್ವತ ಸಮಾಜದಿಂದ ಹೊರಗೆ ಇಡುವದಕ್ಕೆ ಸಂಬಂಧಿಸಿ, ಚಿತ್ರಾಪುರ ಮಠದ ಮಂಗಳೂರು ಮಹಾ ಸಭೆಯವರು ಅಖೈರ ತೀರ್ಪು ಕೊಡಲು ವ್ಯಾದೆ ಮಾಡಿರುವದರಿಂದ ತಮ್ಮ ಮನೆತನದಿಂದ ಮಠಕ್ಕೆ ಕೊಡುವ ವಂತಿಗೆಯನ್ನು ಕೊಡಬೇಕೋ ಅಥವಾ ಕೊಡಬಾರದೋ ಎಂಬುದನ್ನು, ಸದರಿ ಮಹಾಸಭೆಯು ಇತ್ಯರ್ಥಪಡಿಸಿದ ಮೇಲೆಯೇ ಹೇಳುವೆವು, ಎಂಬ ಅಭಿಪ್ರಾಯ.

೧೮೮೯ರ ಭಿನ್ನವತ್ತಳೆಯಿಂದ ತಿಳಿದುಬರುತ್ತದೆ[೯]. ಮಂಜೇಶ್ವರದ ಸಾರಸ್ವತ ಸಭೆಯಲ್ಲಿ ಕಾರ್ನಾಡ ಶಾಂತಪ್ಪಯನವರು ಹಾಜರ್ ಇರದ್ದರಿಂದ, ತಮ್ಮ ಪತ್ರವನ್ನು ಸಭೆಯವರಿಗೆ ತೋರಿಸಿ, ನಂತರ ಶ್ರೀಯವರ ಸನ್ನಿಧಿಗೆ ಒಪ್ಪಿಸುವಂತೆ, ಶಿರಾಲಿಯ ಮಂಗೀಶ ಶರ್ಮಾ, ಮಂಜೇಶ್ವರದ ಸಾರಸ್ವತ ಬ್ರಾಹ್ಮಣರ ಪುರೋಹಿತ ವೇದ ಮೂರ್ತಿ ವಾಸುದೇವ ಭಟಜಿಯವರಿಗೆ ನೀಡಿದರು. "...ವೊಬ್ಬ ಭಟ್ಟನು

* 'ಭವಾನಿ', ಟಿ.ಎಸ್.ಎಸ್. ರೈಸ್‌ಮಿಲ್ ಕೆಳಗೆ, ವಿದ್ಯಾಗಿರಿ, ಶಿರಸಿ, ಉತ್ತರ ಕನ್ನಡ-೫೮೧೪೦೨.

ಬರಕೊಂಡ ಬಿಂನಹಾ ಪತ್ರದ ಸಂಮಂಧವಾಗಿ ಆ ಪ್ರಕರಣವು ವಿಚಾರಕ್ಕೆ ಮುಂದೆ ಬಂದ ಸಮಯದಲ್ಲಿ ಸಭೆಯವರು (ಮಂಗಳೂರು ಮಹಾಸಭೆ) ಚಂನಾಗಿ ವಿಚಾರ ಮಾಡಿ ಆರ್ಯ ಸಮಾಜದವರು ಬ್ರಾಹ್ಮಣ ಕರ್ಮಕ್ಕೆ ಅಯೋಗ್ಯವಾಗಿ ನಡಿಯುವದಿಲ್ಲವೆಂತಲೂ ವರ್ಣಾಶ್ರಮಕ್ಕೆ ಸರಿಯಾಗಿ ನಡಿಯುತ್ತಾರೆಂತಲೂ ಇವರು ಮಾಡುವ ಯೆಲ್ಲಾ ಕರ್ಮಗಳು ಆಕ್ಷೇಪಕರಗಳಲ್ಲವೆಂತಲೂ ಅನ್ಯಥಾ ಅವರು ದೋಷಕ್ಕೆ ಪಾತ್ರರಲ್ಲ"ಎಂತ ಮಹಾಸಭೆಯ ಮುಂದೆ ನಾರ್ಣರಾಯ ರೆಂಬುವರು ತಿಳಿಸಿದ ವೃತ್ತಾಂತವೂ ಸದರಿ ಭಿನ್ನವತ್ತಳೆಯಲ್ಲಿ ಉಲ್ಲೇಖವಾಗಿದೆ.

ದಯಾನಂದ ಸರಸ್ವತಿಗಳಿಂದ ಸ್ಥಾಪಿಸಲ್ಪಟ್ಟ ಆರ್ಯಸಮಾಜ, ಅನೇಕ ಸಮಾಜ ಸುಧಾರಣಾ ಕಾರ್ಯಗಳನ್ನು ಹಮ್ಮಿಕೊಂಡಿದ್ದರಿಂದ, ಆಧುನಿಕ ಪ್ರಗತಿಪರ ಸಾರಸ್ವತರು ಆರ್ಯ ಸಮಾಜದ ಸದಸ್ಯರಾಗಿದ್ದು ಸ್ವಾಭಾವಿಕ ಸಾರಸ್ವತ ಸಮಾಜದ ಅನೇಕ ಯುವಕರು ಆಂಗ್ಲಶಿಕ್ಷಣ ಪಡೆದು, ಪಾಶ್ಚಿಮಾತ್ಯ ಬದುಕಿಗೆ ಒಲವು ತೋರಲು ಪ್ರಾರಂಭಿಸಿ, ನಂತರದಲ್ಲಿ ಬ್ರಿಟಿಷ್ ಸರಕಾರದ ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸಿಲು ಆರಂಭಿಸಿದ್ದು, ಸಾರಸ್ವತ ಸಮಾಜದಲ್ಲಾದ ಒಂದು ಮಹತ್ವದ ತಿರುವು, ಎಂಬುದನ್ನೂ ಗಮನದಲ್ಲಿರಿಸಬೇಕು.

ಜಾತಿಯ ಕಟ್ಟುಪಾಡುಗಳು ಬಿಗಿಯಾಗಿದ್ದ ಅಂದಿನ ಕಾಲದಲ್ಲಿ ಅನ್ಯಜಾತಿಯವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವ ಪದ್ಧತಿಯನ್ನು ಇನ್ನುಳಿದ ಮಠಗಳಂತೆ, ಚಿತ್ರಾಪುರ ಮಠವೂ ಸಮ್ಮತಿಸಲಿಲ್ಲ ಎಂಬುದು. ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಸೌಮ್ಯಸಂವತ್ಸರ (ಕ್ರಿ.ಶ. ೧೯೧೦)ದಲ್ಲಿ, ಮುಂಬಯಿ ನಗರದಲ್ಲಿ ವಾಸಿಸುತ್ತಿದ್ದ ಕೃಷ್ಣರಾವ ಸಖಾರಾಮ ಮಮುರೇಕರ ಕುಳಕರ್ಣಿ, ಪುರುಷೋತ್ತಮ ಚಿಂತಾಮಣರೇಗೆ, ಶಂಕರ ವಾಸುದೇವ ಕರಂಡೆ, ನಾರಾಯಣ ವಾಮನ ಪಾಟಗಾಂವಕರ, ಜಗನ್ನಾಥ ಮಂಗೇಶ ದೇವೂಳಕರ, ಮುಂತಾದವರಿಗೆ ಮರಾಠಿ ಭಾಷೆಯಲ್ಲಿ ಬರೆದ ಆಶೀರ್ವಾದ ಪತ್ರಿಕೆಯಿಂದ ತಿಳಿದುಬರುತ್ತದೆ.[೧೦] ಅನಾದಿಕಾಲದಿಂದಲೂ ಚಾಲ್ತಿಯಲ್ಲಿದ್ದ ಬ್ರಾಹ್ಮಣ, ಕ್ಷತ್ರಿಯ ಇತ್ಯಾದಿ ವರ್ಣಭೇದ ಮತ್ತು ಅನುಲೋಮ, ವಿಲೋಮ ಜಾತಿಭೇದ, ಇವೆಲ್ಲ ಶಾಸ್ತ್ರಸಮ್ಮತವಾಗಿರುವದರಿಂದ, ಅನ್ಯಜಾತಿಯವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವ ಏಕೀಕರಣ ಪದ್ಧತಿ ಸಾಂಹರ್ಯದೋಷ ಉಂಟುಮಾಡುವದರಿಂದ ಮತ್ತು ಅದರ ಫಲವೂ ಅನರ್ಥವಾಗಿರುವುದರಿಂದ, ಇಂಥ ಏಕೀಕರಣವನ್ನು ಮಠ ಪುರಸ್ಕರಿಸುವದಿಲ್ಲ. ಬೋಧಾಯನ, ಮನು, ದೇವಲ, ರಲ್ಲ, ಯಾಜ್ಞವಲ್ಕ್ಯ ಮೊದಲಾದ ಶಾಸ್ತ್ರಜ್ಞರ ವಚನಗಳನ್ನು ಮತ್ತು ಭಗವದ್ಗೀತೆ ಮತ್ತು ಸ್ಕಾಂದಪುರಾಣದ ಶ್ಲೋಕಗಳನ್ನು ಈ ವಿಷಯಕ್ಕೆ ಸಂಬಂಧಿಸಿ ಪ್ರಸ್ತುತ ಆಶೀರ್ವಾದ ಪತ್ರಿಕೆಯಲ್ಲಿ ಉಲ್ಲೇಖಿಸಲಾಗಿದೆ.

ಭಟ್ಕಳ, ಶಿರಾಲಿ ಮತ್ತು ಮುರ್ಡೇಶ್ವರ, ಈ ಮೂರು ಊರುಗಳ ಚಿತ್ರಾಪುರ ಮಠದ ಶಿಷ್ಯವರ್ಗದ ಗೌಡಸಾರಸ್ವತ ಬ್ರಾಹ್ಮಣರು ಕೂಡಿ, ರಾ॥ರಾ॥ ಭವಾನಿಶಂಕರ ರಾಮರಾವ ನಾಗ್ರಕಟ್ಟೆ ಇವರಿಗೆ ಅಧ್ಯಕ್ಷರಾಗಿ ನೇಮಿಸಿ, ಮಾಡಿದ ಸಭೆಯಲ್ಲಿ ಚರ್ಚೆಯಿಂದ ನಿರ್ಣಯಿಸಿದ ಸಾಧಾರಣ ಸಂವತ್ಸರ (೧೯೧೧)ದ ಅಭಿಪ್ರಾಯ ಪತ್ರದ, ಏಕೀಕರಣ ವಿರೋಧಿಸುವ ಕೆಲವು ಅಂಶಗಳನ್ನು ಗಮನಿಸುವದು ಸೂಕ್ತ.[೧೧]

"ಹೊಟ್ಟೆ ತುಂಬಿಕೊಳ್ಳುವ ಬಗ್ಗೆ ಪರದೇಶದಲ್ಲಿ ಹೋದಾಗ ಅಲ್ಲಿ ಆಗುವ ಅಡಚಣೆಗಳು ದೂರ ಮಾಡುವ ಬಗ್ಗೆ ಮತ್ತು ಸಮಾಜವು ಬೆಳೆಸುವದರಿಂದ ಆಗುವ ಲಾಭ ಪಡಿಯುವ ಬಗ್ಗೆ ಕೂಡಾ, ಅನಾದಿಕಾಲದಿಂದ ಪ್ರತ್ಯ ಪ್ರತ್ಯೇಕ ವಿಂಗಡವಾಗಿ ನಡಿಯುತ್ತ ಬರುವ ವಿವಿಧ ಪೋಟಭೇದ ಗಳಂದೆನ್ನುವ ಜಾತಿಗಳ ಈಗ ಏಕೀಕರಣ ಮಾಡುವದು ಎಂತ ಕಂಡುಬರುತ್ತದೆ.

...ಎಲ್ಲಿ ಹೋದರು, ತಾವು ತಮ್ಮ ಸ್ವಧರ್ಮಾಚರಣೆ ಯಿಂದ ನಡೆದರೆ ಪರಧರ್ಮದವರು ಸಹ ಮರ್ಯಾದೆ ಕೊಡುತ್ತಾರೆ. ಸ್ವೇಚ್ಛಾಚಾರದಿಂದ ನಡೆದರೆ ಸ್ವಧರ್ಮದವರಂತು ಆಯಿತು, ಅನ್ಯಜಾತಿಯವರು ಸಹ ತಿರಸ್ಕರಿಸುತ್ತಾರೆಂಬುವದು, ನಮ್ಮ ಬಾಂಧವರಿಗೆ ಗೊತ್ತಿದ್ದ ಸಂಗತಿಯೇ.

ಅಲ್ಪ ಜನಸಂಖ್ಯೆಯ ಜಾತಿಯಂದರೆ, ನಮ್ಮಂತೆ ಪಾರ್ಸಿ, ಜ್ಯೂ ಮುಂತಾದ ಕೆಲವು ಜಾತಿಗಳಿದ್ದು ಅವರು ಪರಿಷದದಿಂದ ಏಕೀಕರಣ ಮಾಡದೇ ತಮ್ಮೊಳಗೆ ಒಬ್ಬರಿಗೊಬ್ಬರು ತನುಮನಧನದಿಂದ ಸ್ವಾಭಿಮಾನದಿಂದ ಮದ್ದತ ಮಾಡಿ ಎಷ್ಟು ಮರ್ಯಾದೆಯಿಂದ ಇರುತ್ತಾರೆಂಬುದು ನಮ್ಮ ಬಾಂಧವರಿಗೆ ಗೊತ್ತಿಲ್ಲದೇ ಇರದು.

ಶುರುವಿನಲ್ಲಿ, ಈ ಪರಿಪದ ಎಲ್ಲಿ ಯಾವ ಕಾರಣದಿಂದ ಹುಟ್ಟಿತು? ಅಲ್ಲ ಅದರ ಪರಿಣಾಮ ಏನಾಯಿತು? ನಂತರ ಒಮ್ಮಿಂದೊಮ್ಮೆ ತಿರುಗಿ ಬೆಳಗಾಂವಿನಲ್ಲಿ ಹೊಸದಾಗಿ ಬೇರೆರೂಪದಿಂದ ಹುಟ್ಟಲಿಕ್ಕೆ ಮೂಲ ಪುರುಷರು ಯಾರು? ಅವರಿಗೆ ಬಂದಂಥ ದೊಡ್ಡ ಸಂಕಟವೇನು? ಎಂಬ ಸಂಗತಿಗಳು ನಮ್ಮ ಬಾಂಧವರೇ ಆಲೋಚಿಸತಕ್ಕದ್ದು.

.....ಪರಾವಲಂಬನ ಶ್ರೇಯಸ್ಕರವಾಗಲಿಕ್ಕಿಲ್ಲ. ಯಾಕೆಂದರೆ ನಮ್ಮ ಜನರು ಸ್ವತಂತ್ರಪ್ರಿಯರು, ಸಾಹಸಿಗಳು ಇರುತ್ತಾರೆ. ತಮ್ಮ ವಿದ್ಯಾಬಲದಿಂದ ಇವರು ಉಚ್ಚಸ್ಥಿತಿ ಹೊಂದಿದರೆ ಪರಿಪದದಂಥ ಏಕೀಕರಣ ಸಂಘಗಳ ಅವಶ್ಯಕತೆಯೇ

ತೋರುವದಿಲ್ಲ. (God helps those who help then selves) ಸ್ವಯತ್ನವಿದ್ದಲ್ಲಿ ದೇವರೇ ಸಹಾಯವಾಗುತ್ತಾನೆ.

ಪ್ರಿಯ ಬಾಂಧವರುಗಳಿರಾ, ಪ್ರಜೆ ಪಾಲನೆಯಲ್ಲಿ ನ್ಯಾಯ ನೀತಿ ರಕ್ಷಣೆ ಬಗ್ಗೆ ಹ್ಯಾಗೆ ರಾಜಾಂಕುಶವು ಅಗತ್ಯ ಉಂಟೋ, ಅದೇ ರೀತಿ ನಮಗೆ ಈ ಕ್ಷಣಿಕ ಜನ್ಮ ಸಾಫಲ್ಯವಾಗುವ ಬಗ್ಗೆ ಧರ್ಮಾಂಕುಶ ಅವಶ್ಯ ಉಂಟು ಎಂತ ಈ ನಮ್ಮ ಚಿತ್ರಾಪುರ ಮಠದ ಮೂಲಪೀಠದವರಿಗೆ ಆಗಿನ ನಮ್ಮ ಪೂರ್ವಜರು ತಾವು ತಮ್ಮ ಪರಂಪರೆಯಾಗಿ ಸಂತತಿ ಪಾರಂಪರ್ಯದವರು ಕೂಡಾ, ಅಘೋರ ಅಘೋರ ಪಾಪಗಳನ್ನು ಖುಲ್ಲಾ ಉಲ್ಲೇಖಿಸಿ ಅಂಥ ಪಾಪಗಳಿಗೆ ಗುರಿಯಾದೇವು ಎಂತ ಬಹು ಕಠಿಣವಾದ ಪ್ರತಿಜ್ಞಾ ಲೇಖವು ಬರಕೊಟ್ಟಿದ್ದು, ಆ ಲೇಖವು ಈಗ ಸಜೀವ ಮೂರ್ತಿಮಂತ ಇದ್ದು, ಧರ್ಮ ಸಂಬಂಧದಲ್ಲಿ ಸರಕಾರ ಸೂತ್ರವಿಲ್ಲವೆಂದು ನಾವು ಈ ರೀತಿ ಸ್ವೇಚ್ಛಾಚಾರದಿಂದ ಶ್ರೀಮಠದ ಅಪ್ಪಣೆ ವಿರುದ್ಧ ಇಂಥ ಏಕೀಕರಣದ ಬಗ್ಗೆ ಕೂಡುವರೇ ಪ್ರಯತ್ನ ಮಾಡುವರು ಮುಂತಾದ ಅನುಚಿತ ಕಾರ್ಯಗಳಲ್ಲಿ ನಾವು ಉದ್ಯುಕ್ತರಾದರೆ, ಮತ್ತು ಆ ಕಾರಣದಿಂದ ಶ್ರೀಗುರು ಹಿರಿಯಾರೂ, ದೇವರೂ, ನಮ್ಮ ಮೂಲ ಪುರುಷರ ಪ್ರತಿಜ್ಞೆಗಳು, ಕೂಡಾ ಕುಪಿತವಾದರೆ ನಮಗೆ ಈ ಇಡೀ ಜಗತ್ತಿನ ಏಕೀಕರಣದ ಪರಿಪದವು ಬೆಂಬಲಕ್ಕಿದರೂ ಪರಿಣಾಮ ಏನು ಆದೀತು ಎಂಬುದು ಇತಿಹಾಸಗೊತ್ತಿದ್ದ ಸುಜ್ಞ ನಮ್ಮ ಬಾಂಧವರಿಗೆ ವಿಶೇಷ ಉಲ್ಲೇಖಮಾಡಿ ಬರಿಯುವದು ಅವಶ್ಯ ತೋರುವದಿಲ್ಲ; ಮುಖ್ಯ ನಮ್ಮ ಈ ಕ್ಷಣಿಕ ಜೀವನದಲ್ಲಿ ನಾಂವಾಗಿ ನಮ್ಮ ಕೈಯಿಂದ ಇಂಥ ಅನುಚಿತ ಅಪಯಶದಿಂದುಂಟಾಗುವ ಗುರುಹಿರಿಯರ ದ್ರೋಹ ಕ್ಷೋಧಗಳು ಹೊತ್ತುಕೊಳ್ಳುವದು ನಮ್ಮ ಬಾಂಧವರಿಗೆ ಸರ್ವಥಾ ಬೇಡವಾಗಿ ನಮ್ಮ ಅಭಿಪ್ರಾಯ ವ್ಯಕ್ತಮಾಡಿರುತ್ತೇವೆ.

ಬಾಂಧವರೇ! ನಮ್ಮ ಶ್ರೇಯೋಭಿವೃದ್ಧಿಯನ್ನು ಹಗಲಿರುಳು ಇಚ್ಛಿಸುವ ಶ್ರೀಗುರುಗಳು ಮೊದಲೇ ನಮ್ಮ ಪೈಕಿ ಕೆಲವರ ವರ್ತನದ ಬಗ್ಗೆ ಎಷ್ಟು ಬೇಜಾರದಿಂದ ಇದ್ದರೆಂಬುದು, ಮತ್ತು ಈಗ ಏಕೀಕರಣ ಪ್ರಕರಣದಿಂದ ಎಷ್ಟರ ಮಟ್ಟಿಗೆ ಅವರಿಗೆ ತಾಪವಾಗಿರ ಬಹುದೆಂದು ಸುಜ್ಞರಿಗೆ ಉಲ್ಲೇಖಿಸುವದು ಅಗತ್ಯವಿಲ್ಲ. ಆದ್ದರಿಂದ ನಮ್ಮ ಪೂರ್ವಜರ ಪ್ರತಿಜ್ಞೆಯನ್ನು ಸ್ಮರಣೆಗೆ ತಂದು, ಆ ಮೂಲ ಪುರುಷರ ಬೀಜಾಂಶವು ನಮ್ಮಲ್ಲಿ ಈಗ ಇದ್ದ ಪಕ್ಷಕ್ಕೆ ಮತ್ತು ಆ ಬಗ್ಗೆ ನಮ್ಮಲ್ಲಿ ಸ್ವಾಭಿಮಾನವಿದ್ದ ಪಕ್ಷಕ್ಕೆ ನಮ್ಮ ಪೂರ್ವಜರ ಪ್ರತಿಜ್ಞೆ ಉಲ್ಲಂಘಿಸದೇ ಹಿರಿಯರ ಕಾಲದಿಂದ ಈವರೇಗೆ ನಡಿಯುತ್ತ ಬಂದಂತೆ ನಾಂವು ಎಲ್ಲರೂ ಭಕ್ತಿ ವಿಶ್ವಾಸದಿಂದ ನಡಿಯುವಲ್ಲಿ ದೇಶ ಪರದೇಶಗಳಲ್ಲಿದ್ದ ನಮ್ಮ ಯಾವತ್ತೂ ಬಾಂಧವರ ಸಕಲಾಭೀಷ್ಟಗಳನ್ನು ಪೂರೈಸುವ ಭರಿಭಾರ ಶ್ರೀಗುರುದೇವರಿಗೆ ಕೊಡಿಯಿದೆ.

ಪೂರ್ವದಿಂದಲೂ ಬಂದ ಸಮಾಜ ವ್ಯವಸ್ಥೆಯನ್ನು ಚಿತ್ರಾಪುರ ಮಠದ ಸ್ವಾಮಿಗಳು ಪುರಸ್ಕರಿಸುತ್ತಿದ್ದು, ಹೊಸದಾಗಿ ಪ್ರಾರಂಭವಾದ ಏಕೀಕರಣ ಪದ್ಧತಿಯನ್ನು ತಿರಸ್ಕರಿಸುತ್ತಿದ್ದು, ಅದರಿಂದಾಗಿ ಶ್ರೀಗಳ ಮನಸ್ಸಿಗೆ ಬೇಜಾರು ಉಂಟಾಯಿತೆಂಬ ಅಂಶಗಳು ಮೇಲ್ಕಾಣಿಸಿದ ಪತ್ರದಲ್ಲಿ ಉಲ್ಲೇಖವಾಗಿವೆ.

ಶ್ರೀಮಠದಿಂದ ಶಿಷ್ಯಸ್ವೀಕಾರ ಆಗುವ ಪೂರ್ವದಲ್ಲಿ ಏಕೀಕರಣ ಪರಿಷತ್ತಿಗೆ ಅನುಸರಿಸುವವರು, ವಿಲಾಯಿಗೆ ಹೋಗಿ ಜಾತಿಯವರ ಸಂಪರ್ಕಕ್ಕೆ ಅನರ್ಹರಂತ ಮೊದಲೇ ಇತ್ಯರ್ಥವಾಗಿರುವಂತೆ, ಅವರನ್ನೂ ಜಾತಿಯಿಂದ ನಿಷಿದ್ಧ ಮಾಡುವ ಸಂಗತಿ, ಉಡ್ಪಿ ಶ್ರೀ ಶಂಕರನಾರಾಯಣ ದೇವಸ್ಥಾನದಲ್ಲಿ ಉಡ್ಪಿ ಗೌಡಸಾರಸ್ವತ ಬ್ರಾಹ್ಮಣ ಸಭೆಯವರು ಶ್ರೀಶಕೆ ೧೮೩೪ (೧೯೧೩)ನೇ ಪರಿಧಾವಿ ಸಂವತ್ಸರದ ಚೈತ್ರ ಬ.೧೨ಯು ರವಿವಾರ ದಿವಸ ಸಭಾಕೂಡಿ ಮಾಡಿದ ಪ್ರೊಸೀಡಿಂಗ್ಸ (ನಡೆವಳಿಕೆಗಳು)ನಿಂದ ತಿಳಿದುಬರುತ್ತದೆ.[೨] ಬೈಂದೂರು ನಾರಾಯಣರಾಯರು ಅಂದಿನ ಸಭೆಯ ಅಧ್ಯಕ್ಷರಾಗಿದ್ದು, ಶ್ರೀಮಠಕ್ಕೆ ಭಿನ್ನವಿಸಿಕೊಳ್ಳಲು ಅವರನ್ನೇ ಪ್ರತಿನಿಧಿಯಾಗಿ ಆರಿಸಲಾಯಿತು.

ಶಿವರಾವ್ ಮಂಜುನಾಥಯ್ಯ ಅಮ್ಲಾಡಿ (ರೇಲ್ವೆ ಡಾಕ್ಟರ್, ಧಾರವಾಡ), ಸದಾಶಿವ ಅನಂತಯ್ಯಾ ನಾಡ್ಕರ್ಣಿ (ಅಳ್ನಾವರ), ಮುಂತಾದ ಶ್ರೀಮಠದ ಶಿಷ್ಯರು ಶಾ.ಶ.೧೮೩೯, ಆನಂದ ಸಂವ, ಆಶ್ವೀನ ಶುಕ್ಷ ೧೫, ರವಿವಾರ (ದಿ.೪ ಅಕ್ಟೋಬರ್ ೧೯೧೪)ರಂದು, ಸ್ವಂತದ ಸಲುವಾಗಿಯೂ, ತಮ್ಮ ಅವಿಭಕ್ತ ಕುಟುಂಬಗಳ ಅಪ್ರಾಯಸ್ತರ ಸಲುವಾಗಿಯೂ, ತಮ್ಮ ಸಂತತಿ ಮುಂತಾದ ವಾರಿಸದಾರರ ಸಲುವಾಗಿಯೂ, ದೃಢ ಭಕ್ತಿಯಿಂದಲೂ, ಆತ್ಮಸಂತೋಷದಿಂದಲೂ, ಪ್ರತಿಜ್ಞಾ ಪೂರ್ವಕವಾಗಿ ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳಿಗೆ ಬರಕೊಟ್ಟ ಕರಾರುಪತ್ರದ ಶರ್ತಗಳ್ಯಾವವೆಂದರೆ:–

೧. ಶಿಷ್ಯ ವರ್ಗದವರಾದ ನಾವು ನಮ್ಮ ಬ್ರಹ್ಮಕರ್ಮಕ್ಕೆ ಯೋಗ್ಯವಾದ ರೀತಿಯಲ್ಲಿಯೂ ನಮ್ಮ ಪೂರ್ವಜರು ನಡಕೊಂಡು ಬಂದ ಶಿಷ್ಟಾಚಾರದಂತೆಯೂ ಶ್ರೀ ಸಂಸ್ಥಾನದ ಕಡಿಯಿಂದ ಕೊಡೋಣಾದ ವ ಕೊಡೋಣಾಗುವ ಆಜ್ಞೆಗಳಿಗೆ ವಿಧೇಯುವಾಗಿಯೂ ನಡಕೊಳ್ಳುತ್ತೇವೆ. ಮತ್ತು ದೋಷಾರ್ಹರೆಂದು ಉಲ್ಲೇಖಿಸಿದ ಏಕೀಕರಣ ಯುವತಿಯರ ಮುಂತಾದ ವಿವಾಹ ವಗೈರೆ ಅನಾಚಾರಗಳನ್ನು ಮಾಡಲಿಕ್ಕಿಲ್ಲ. ಮತ್ತು ಅಂಥ ಅನಾಚಾರಗಳನ್ನು ವ ಶ್ರೀಸನ್ನಿಧಿಯಿಂದ ದೋಷಿಗಳೆಂತ ವಿಂಗಡಿಸಲ್ಪಡುವ ಜನರನ್ನು ಸಹ ಕೂಡಿ ನಡಿಯಲಿಕ್ಕಿಲ್ಲ ಮತ್ತು ಈ ಸಂಬಂಧ ಶ್ರೀ ಸಂಸ್ಥಾನದಿಂದ

ಆಗುವ ಈ ವರೆಗೆ ಆದ ಆಜ್ಞೆಗಳಿಗೆ ಮೀರಿ ಎಂದೂ ನಡೆಯಲಿಕ್ಕಿಲ್ಲ.

೨. ಶ್ರೀ ಸಂಸ್ಥಾನದ ಆಜ್ಞೆಗೆ ಯಾ ಧರ್ಮಾಚರಣೆಗೆ ವಿರೋಧವಾಗಿ ನಡಕೊಂಡಲ್ಲಿ ಶ್ರೀಯುವರಿಂದ ವಿಧಿಸಲ್ಪಡುವಂಥ ಪ್ರಾಯಶ್ಚಿತ್ತ ಮುಂತಾದ್ದರಿಂದ ಪುನೀತರಾಗುವೆವು. ಮತ್ತು ದಂಡ ಪ್ರಾಯಶ್ಚಿತ್ತ ವಗೈರೆಯಿಂದ ಪರಿಹಾರ್ಯವಲ್ಲದ ದೋಷಗಳನ್ನು ಮಾಡುವವರು ನಮ್ಮ ಜಾತಿವರ್ಗದಿಂದ ತ್ಯಜಿಸಲ್ಪಡಲಿಕ್ಕೆ ಪಾತ್ರರಾಗಿರತಕ್ಕದ್ದು.

೩. ತತ್ಸಂಬಂಧಿ ಶ್ರೀಸಂಸ್ಥಾನದಿಂದಾಗುವ ನಿರ್ಣಯಗಳು, ಯಾ ಅಪ್ಪಣೆಗಳು ಯೋಗ್ಯವಲ್ಲೆಂತಾಗಲಿ, ಮಾಸಹಾನಿಕರವೆಂತಾಗಲಿ, ಯಾವದೇ ತರದ ನಷ್ಟದವು ಗಳೆಂತಾಗಲಿ ಸರಕಾರದ ಯಾವ ನ್ಯಾಯಸ್ಥಾನಗಳಲ್ಲಿಯೂ ಸಾಧಿಸುವ ಹಕ್ಕು, ಯಾ ಸ್ವತಂತ್ರ, ನಮಗೂ ನಮ್ಮ ಕುಟುಂಬದವರಿಗೂ, ವ ವಾರಿಸದಾರರಿಗೆ ಕೂಡಾ ಇರುವದಿಲ್ಲ.

೪. ಶ್ರೀಮಠದ ಸಂಸ್ಥೆಯು ನಮ್ಮ ವರ್ಗದ ಹಿತಕ್ಕಾಗಿ ಶಾಶ್ವತ ನಡಿಯುವ ಅನುಕೂಲತೆ ಬಗ್ಗೆ ಶುಕ್ಲ ಸಂವತ್ಸರದ ಶಾಸನ ಪ್ರಕಾರ ಮತ್ತು ಅದರ ದುರಸ್ತಿಯಿಂದ ಮುಂದೆ ಆಗಬಹುದಾದ ಶಾಸನಗಳ ಪ್ರಕಾರ ವಂತಿಗೆಯನ್ನು ಶಾಶ್ವತವಾಗಿಯೂ ಸರಾಗವಾಗಿಯೂ ಶಿಷ್ಯವರ್ಗದವರಾದ ನಾವು, ನಮ್ಮ ಕುಟುಂಬದವರು, ಸಂತತಿಯವರು ಶ್ರೀ ಸಂಸ್ಥಾನಕ್ಕೆ ಕೊಡುತ್ತ ಬರುವೆವು.

೫. ಮೇಲಿನ ಶರ್ತದಂತೆ ವಸೂಲಾಗುವ ಎಲ್ಲ ವಂತಿಗೆ ಹಣಗಳು ಹಿಂದಿನ ಒಪ್ಪಂದದ ಮೇರೆಗೆ ಮಠಮಾನ್ಯಕ್ಕೆ ಒಪ್ಪಿಸಿದ್ದಾಗಿದ್ದು ಅವುಗಳನ್ನು ಶ್ರೀಸಂಸ್ಥಾನದ ಅಗತ್ಯವುಳ್ಳ ಖರ್ಚಿಗೂ ಶ್ರೀಸ್ವಾಮಿಗಳವರು ಆರಾಧಿಸುವ ಶ್ರೀ ಭವಾನಿಶಂಕರ ದೇವರ ವಿನಿಯೋಗಕ್ಕೂ ಉಪಯೋಗಿಸಿ ಹೆಚ್ಚಿಗೆ ಉಳದ ಅಂಶ ಶ್ರೀಭವಾನಿಶಂಕರ ದೇವರ ಬಗ್ಗೆ ಸ್ಥಿರಚರ ಆಸ್ತಿ ವೃದ್ಧಿಪಡಿಸುವ ಸಮ್ಮಂಧ ವಿನಿಯೋಗಿಸಲಿಕ್ಕೆ ಸಹ ಶ್ರೀಸ್ವಾಮಿಗಳವರು ಪೂರ್ಣ ಹಕ್ಕುದಾರರಾಗಿರುತ್ತಾರೆ. ಮತ್ತು ಈ ಶ್ರೀ ಸಂಸ್ಥಾನಕ್ಕೆ ಒಪ್ಪಿದ ಎಲ್ಲ ಸ್ಥಿರ ಚರ ಸೊತ್ತುಗಳು ಶೋಭಕೃತು ಸಂವತ್ಸರದ ಪುಷ್ಯಶುಕ್ಲ ೧೨ಯಲ್ಲು ಶ್ರೀಮತ್ ಪರಿಜ್ಞಾನಾನಂದಾಶ್ರಮ ಶ್ರೀ ಸ್ವಾಮಿಗಳವರಿಗೆ ನಮ್ಮ ಜಾತಿವರ್ಗದ ಹತ್ತು ಸಮಸ್ತರು ಬರಕೊಟ್ಟ ತಹಾಕರಾರ ಮೇರೆಗೆ ಪೂರ್ವಕಾಲದ ಲಾಗ್ಯಾತು ಶ್ರೀ ಭವಾನಿಶಂಕರ ದೇವರ ವಿನಿಯೋಗಗಳ ಬಗ್ಗೆ ವರ್ಷಾಸನ ವಂತಿಗೆ ಮುಂತಾದ ಅನೇಕ ವಿಧಗಳಿಂದ ಸಂಗ್ರಹವಾದ್ದಾಗಿದ್ದು ಅವುಗಳು ಶ್ರೀ ಭವಾನಿಶಂಕರ ದೇವರ ಪೂರ್ಣ ಹಕ್ಕಿನದಾಗಿರುತ್ತದೆ. ಆದದರಿಂದ ಸದ್ರಿಸೊತ್ತುಗಳ ಮೇಲೆ ಯಾ ಅವುಗಳ ಉತ್ಪತ್ತಿಯ ಮೇಲೆ ಯಾ ವಂತಿಗೆ ವಗೈರ ಹಣಗಳ ಮೇಲೆ ಶಿಷ್ಯವರ್ಗದವರಾದ ನಮಗೆ, ಯಾ ನಮ್ಮ ಕುಟುಂಬದವರಿಗೆ, ನಮ್ಮ ಸಂತತಿಯವರಿಗೆ ಯಾವದೇ ವಿಧದ ಹಕ್ಕು ಸ್ವಾಮಿತ್ವ ಸಂಬಂಧವಿರುವದಿಲ್ಲ. ಅಂಥ ಯಾವದೇ ಸೊತ್ತುಗಳು ಯಾ ಅವುಗಳ ಉತ್ಪನ್ನ ಸಹ ಯಾವದೇ ಕಾರಣಗಳಿಂದ ವಾಪಸ ಕೇಳಲಿಕ್ಕೆ ಆಗಲೀ, ಅನ್ಯ ಕೆಲಸಕ್ಕೆ ಉಪಯೋಗಿಸಬೇಕೆಂತ ಹೇಳಲಿಕ್ಕಾಗಲೀ ಶಿಷ್ಯವರ್ಗದವರಾದ ನಮಗೆ ನಮ್ಮ ಕುಟುಂಬದವರಿಗೆ ನಮ್ಮ ಸಂತತಿಯವರಿಗೆ ಎಷ್ಟು ಮಾತ್ರಕ್ಕೂ ಹಕ್ಕು ಇರುವುದಿಲ್ಲ.

೬. ಏವಂಚ ಮೇಲೆ ತೋರಿಸಿದ ಒಪ್ಪಂದಗಳನ್ನು ಊರ್ಜಿತ ಇಟ್ಟು ಅವುಗಳಂತೆ ಸಹ ನಡಕೊಳ್ಳಲಿಕ್ಕೂ ನಾವು ಈ ಮೂಲಕ ಒಪ್ಪಿದೃಢಪಡಿಸಿರುತ್ತೇವೆ.

೭. ನಮ್ಮ ಜಾತಿವರ್ಗದವರ ಪೈಕಿ ಈ ಕರಾರಿಗೆ ಸಹಿಕೊಟ್ಟು ಬದ್ದರಾಗಲಿಕೆ ಯಾರು ತಿರಸ್ಕಾರ ಮಾಡುವರೋ ಅಂಥವರು ನಮ್ಮ ಜಾತಿವರ್ಗದಿಂದ ತ್ಯಾಗಾರ್ಹರಾದ್ದರಿಂದ ಅನ್ನಪಾನ ಶರೀರ ಸಂಬಂಧ ವಗೈರೆಗಳಿಂದ ಅಂತವರೊಡನೆ ನಾವು ನಮ್ಮ ಕುಟುಂಬದವರು, ಸಂತತಿಯವರು ಸಹ ಕೂಡಿ ನಡಿಯಲಿಕ್ಕಿಲ್ಲ.

೮. ಈ ಕರಾರು ರದ್ದುಪಡಿಸಬೇಕೆಂತ ಹೇಳುವ ಹಕ್ಕು ನಮಗೂ, ನಮ್ಮ ಕುಟುಂಬದವರಿಗೂ, ನಮ್ಮ ಸಂತತಿಯವರಿಗೂ ವಾರಿಸದಾರರಿಗೆ ಸಹ ಇರುವದಿಲ್ಲ. ಇದರಂತೆ ಶಾಶ್ವತವಾಗಿ ನಡಕೊಂಡು ಬಂದೇವು ಎಂತ ಸಹ ದೃಢ ಭಕ್ತಿಯಿಂದಲೂ ಆತ್ಮಸಂತೋಷದಿಂದಲೂ ಪ್ರತಿಜ್ಞಾಪೂರ್ವಕ ಬರಕೊಟ್ಟ ಕರಾರು."[೧೩]

ಒಟ್ಟಿನಲ್ಲಿ, ಸುಮಾರು ಐದು ದಶಕಗಳಿಗಿಂತಲೂ ಹೆಚ್ಚಿನ ಅವಧಿ ಪೀಠವನ್ನಲಂಕರಿಸಿದ ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳವರ ಕಾಲದಲ್ಲಿ, ಚಿತ್ರಾಪುರ ಸಾರಸ್ವತ ಸಮಾಜದ ಕೆಲವರು ಪಾಶ್ಚಿಮಾತ್ಯ ಶಿಕ್ಷಣದ ಪ್ರಭಾವದಿಂದಾಗಿ ಮತ್ತು ಆರ್ಯ ಸಮಾಜದೊಂದಿಗಿನ ಸಂಪರ್ಕದಿಂದಾಗಿ , ಅನ್ಯ ಜಾತಿಯವರೊಂದಿಗೆ ವೈವಾಹಿಕ ಸಂಬಂಧ ಬೆಳೆಸುವ ಏಕೀಕರಣ ಪದ್ಧತಿ, ವಿದೇಶಯಾತ್ರೆ, ವಿಧವಾ ವಿವಾಹ, ಮುಂತಾದ ನೂತನ ಪದ್ಧತಿಗಳನ್ನು ಅನುಸರಿಸಲು ಪ್ರಾರಂಭಿಸಿದರೆಂಬುದು ಸ್ಪಷ್ಟವಾಗುತ್ತದೆ. ಸ್ವಾಮಿಗಳು ಮತ್ತು ಸಂಪ್ರದಾಯಸ್ಥರು ಇಂಥ ಬದಲಾವಣೆಯನ್ನು ಪುರಸ್ಕರಿಸಲಿಲ್ಲ. ಪ್ರಾಚೀನ ಕಾಲದಿಂದಲೂ ಬಂದ ಧರ್ಮಾಚರಣೆಗಳಿಗೆ ವಿರೋಧವಾಗಿ ವರ್ತಿಸಿದವರನ್ನು ಜಾತಿಯಿಂದ ಹೊರಗಿಡ ಲಾಯಿತೆಂಬ ಅಂಶವೂ ಬೆಳಕಿಗೆ ಬರುತ್ತದೆ. ಈ ಗೊಂದಲ ಪರಿಹಾರ ಆಗುವವರೆಗೆ ತಮ್ಮ ಉತ್ತರಾಧಿಕಾರಿಯನ್ನು

ನಿಯಮಿಸಲು ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಸಿದ್ಧರಿರಲಿಲ್ಲವೆಂಬುದೂ ತಿಳಿದು ಬರುತ್ತದೆ. ಅದಕ್ಕಾಗಿಯೇ ಸಾರಸ್ವತ ಸಮಾಜದ ಅನೇಕ ಸಂಪ್ರದಾಯಸ್ಥ ಕುಟುಂಬದವರು. ಸ್ವಾಮಿಗಳಿಗೆ ಮತ್ತು ಶ್ರೀಮಠಕ್ಕೆ ತಮ್ಮ ವಿಧೇಯತೆಯನ್ನು ಸೂಚಿಸುವ ಪ್ರತಿಜ್ಞಾಪೂರ್ವಕವಾದ ಕರಾರು ಪತ್ರಗಳನ್ನು ೧೯೧೩ ಮತ್ತು ೧೯೧೪ರ ಅವಧಿಯಲ್ಲಿ ಸ್ವಾಮಿಗಳಿಗೆ ಸಮರ್ಪಿಸಿದರು. ಆನಂತರವೇ ಶ್ರೀ ಪಾಂಡುರಂಗಾಶ್ರಮ ಸ್ವಾಮಿಗಳು ಶ್ರೀ ಆನಂಧಾಶ್ರಮರನ್ನು ಶಿಷ್ಯರನ್ನಾಗಿ ಸ್ವೀಕರಿಸಿದರು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಚಿತ್ರಾಪುರ ಮಠದಲ್ಲಿ ಲಭ್ಯವಿರುವ ಎಲ್ಲ ಚಾರಿತ್ರಿಕ ದಾಖಲೆಗಳಲ್ಲಿ ಚಿತ್ರಾಪುರ ಸಾರಸ್ವತರನ್ನು 'ಗೌಡಸಾರಸ್ವತ' ಎಂದೇ ಉಲ್ಲೇಖಿಸಲಾಗಿದೆ. ಕೌಂಡಿಣ್ಯ, ಕೌಶಿಕ, ವತ್ಸ, ಅತ್ರಿ,, ಭಾರದ್ವಾಜ ಮತ್ತು ಶಂಕ–ಪಿಂಗಳ–ಕುತ್ಸ ಎಂಬ ೯ ಬೇರೆಬೇರೆ ಗೋತ್ರಗಳನ್ನು ಚಿತ್ರಾಪುರ ಸಾರಸ್ವತ ಬ್ರಾಹ್ಮಣರಲ್ಲಿ ಕಾಣಬಹುದಾಗಿದೆ. ಎಂಬುದಾಗಿ ಶ್ರೀ ವಿ.ಎನ್. ಕುಡವ ಅವರು, 'ಹಿಸ್ಟೊರಿ ಆಫ್ ದಿ ದಕ್ಷಿಣಾತ್ಯ ಸಾರಸ್ವತ್ಸ್' (ಸಂಯುಕ್ತ ಗೌಡಸಾರಸ್ವತ ಸಭಾ, ಮದ್ರಾಸ, ೧೯೭೨), ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ.

೨. ಪೂರ್ವದಲ್ಲಿ, ಭಂಡಿ (ಚಕ್ಕಡಿ, ಗಾಡಿ)ಗಳನ್ನು ಗೋಕರ್ಣಕ್ಕೆ ಬರುವವರು ಮತ್ತು ಅಲ್ಲಿಂದ ಹೋಗುವವರು ಈ ಕೇರಿ (ಓಣಿ)ಯಲ್ಲಿ ನಿಲ್ಲಿಸುತ್ತಿದ್ದುದರಿಂದ, ಈ ಕೇರಿಗೆ 'ಭಂಡಿಕೇರಿ' ಎಂಬ ಹೆಸರು ಪ್ರಾಪ್ತವಾಯಿತು. ಇದೇ ಸ್ಥಳದಲ್ಲಿ ಸಾರಸ್ವತ ಬ್ರಾಹ್ಮಣರ ಮಠ ಸ್ಥಾಪನೆಯಾಗಿದ್ದರಿಂದ, ಈ ಮಠಕ್ಕೆ 'ಭಂಡಿಕೇರಿ ಮಠ' ಎಂದೇ ಕರೆಯಲಾಯಿತು.

೩. ಶೃಂಗೇರಿ ಜಗದ್ಗುರು ಪರಂಪರೆಯಲ್ಲಿ ೨೭ನೆಯವರಾದ ದ್ವಿತೀಯ ಶ್ರೀ ಸಚ್ಚಿದಾನಂದ ಭಾರತಿಗಳು (ಕ್ರಿ.ಶ ೧೭೦೫–೧೭೪೧) ಚಿತ್ರಾಪುರ ಸಾರಸ್ವತರ ಪ್ರಥಮ ಗುರುಗಳಾದ ಶ್ರೀ ಪರಿಜ್ಞಾನಾಶ್ರಮ ಸ್ವಾಮಿಗಳ ಪಟ್ಟಾಭಿಷೇಕ ನೆರವೇರಿಸಿದರೆನ್ನಲಾಗಿದೆ. ಇಂದಿಗೂ ಆ ಸಂಪ್ರದಾಯ ಮುಂದುವರಿದಿರುವುದು ಒಂದು ವಿಶೇಷ. ಪ್ರಸ್ತುತ ಪೀಠದಲ್ಲಿರುವ ಶ್ರೀ ಸದ್ಯೋಜಾತ ಶಂಕರಾಶ್ರಮ ಸ್ವಾಮಿಗಳ ಪಟ್ಟಾಭಿಷೇಕವೂ, ಇಂದಿನ ಶೃಂಗೇರಿ ಜಗದ್ಗುರುಗಳಾದ ಶ್ರೀಶ್ರೀ ಭಾರತೀತೀರ್ಥರ ಸಮ್ಮುಖದಲ್ಲೇ ಜರುಗಿತು.

೪. "ಸಿದ್ಧಾರ್ಥಿ ಸಂವತ್ಸರ ಮಾರ್ಗಶಿರ ಶು. ೧೦ರಲ್ಲೂ ಶ್ರೀಮತ ಕೆಳದಿ ಬಸವಪ್ಪ ನಾಯಕರು ಮಾಳಮಲ್ಲಿ ಬರಶಿಕಳುಹಿದ ಕಾರ್ಯ.... ಕೋಟಿ ತೀರ್ಥ ಸಮೀಪದಲ್ಲಿ ಭಂಡಿಕೇರಿಯೆಂಬ ಸ್ಥಳದಲ್ಲು ತಂನ ಗುರು ಮಠ ಕಟ್ಟಿಶಿ ಪ್ರತಿಷ್ಠೆ ಮಾಡುವ ಭವಾನಿ ಶಂಕರ ದೇವರಿಗೆ...." ಎಂದು ಕೆಳದಿ ಇಮ್ಮಡಿ ಬಸವಪ್ಪನಾಯಕರ ಭಾಷಾಪತ್ರದಲ್ಲಿ ಉಲ್ಲೇಖಿಸಲಾಗಿದೆ. ಭಾಷಾಪತ್ರದ ಕಾಲ, ಗುರುವಾರ, ನವೆಂಬರ್ ೨೯, ೧೭೩೯. ಅಂದು ಪೀಠದಲ್ಲಿದ್ದವರು ಪ್ರಥಮ ಶ್ರೀ ಶಂಕರಾಶ್ರಮ ಸ್ವಾಮಿಗಳು.

ಡಾ॥ ಎ.ಕೆ. ಶಾಸ್ತ್ರಿ **'ದಿ ರಿಕಾರ್ಡ್ಸ್ ಆಫ್ ಶ್ರೀ ಚಿತ್ರಾಪುರ ಮಠ'** (ಚಿ.ದಾ), ಚಿ.ದಾ. ೫, ಶ್ರೀ ಚಿತ್ರಾಪುರ ಮಠ, ೨೦೦೮.

೫. ಚಿತ್ರಾಪುರ ಮಠದಲ್ಲಿ ಸುಮಾರು ೨೦,೦೦೦ ಚಾರಿತ್ರಿಕ ದಾಖಲೆಗಳಿದ್ದು, ಪ್ರಸ್ತುತ ಲೇಖನದ ಲೇಖಕರು ಬೇರೆ ಬೇರೆ ಸ್ವಾಮಿಗಳ ಕಾಲಕ್ಕೆ ಸೇರಿದ ದಾಖಲೆಗಳನ್ನು ವಿಂಗಡಿಸಿ, ಆಯ್ದ ದಾಖಲೆಗಳನ್ನು, ಪೂರ್ವೋಲ್ಲೇಖಿತ 'ದಿ ರಿಕಾರ್ಡ್ಸ್ ಆಫ್ ಶ್ರೀ ಚಿತ್ರಾಪುರ ಮಠ' ಎಂಬ ಗ್ರಂಥದಲ್ಲಿ ಅಳವಡಿಸಿದ್ದಾರೆ.

೬. ಚಿ.ದಾ. ೩.

೭. ಚಿ.ದಾ. ೪.

೮. ಸ್ವಾಮಿ ದಯಾನಂದ ಸರಸ್ವತಿಗಳು ೧೮೭೫ರಲ್ಲಿ ಆರ್ಯಸಮಾಜವನ್ನು ಸ್ಥಾಪಿಸಿದರು. ಲಾಲಾ ಲಜಪತರಾಯ, ಸ್ವಾಮಿ ಶ್ರದ್ಧಾನಂದ ಮೊದಲಾದ ಮಹಾನ್ ವ್ಯಕ್ತಿಗಳು ಆರ್ಯ ಸಮಾಜದಿಂದಲೇ ಬಂದವರೆಂಬುದು ಗಮನಾರ್ಹ, ಡಿ.ಎ.ವಿ. ವಿದಾಸಂಸ್ಥೆಗಳಲ್ಲಿ ಅನೇಕ ಸಾತಂತ್ರ್ಯ ಯೋಧರು ಸಿದ್ಧರಾದರು. ಅಸ್ಪ್ರಶ್ಯತೆ ನಿವಾರಣೆ, ಮಹಿಳೆಯರಿಗೆ ಶಿಕ್ಷಣ, ಜಾತಿ ಕಟ್ಟುಪಾಡುಗಳನ್ನು ಸಡಿಲಿಸುವದು, ವಿಧವಾ ವಿವಾಹ ಬಾಲ ವಿವಾಹ ತಡೆಗಟ್ಟುವದು, ಇತ್ಯಾದಿ ಅನೇಕ ಸಮಾಜ ಸುಧಾರಣಾ ಕಾರ್ಯಗಳನ್ನು ಆರ್ಯಸಮಾಜ ಹಮ್ಮಿಕೊಂಡಿತ್ತು. ವೈದಿಕ ಧರ್ಮ ಪ್ರಚಾರ ಮತ್ತು ಹಿಂದೂ ಸಮಾಜ ಸುಧಾರಣೆಗಾಗಿ ದಯಾನಂದ ಸರಸ್ವತಿಗಳು ತಮ್ಮ ಜೀವನವನ್ನೇ ಮುಡುಪಾಗಿಟ್ಟರು.

೯. ಚಿ.ದಾ. ೧೨೨

೧೦. ಚಿ.ದಾ. ೧೩೯

೧೧. ಅದೇ. ೧೪೧.

೧೨. ಅದೇ. ೧೪೨.

೧೩. ಚಿ.ದಾ.



# ೧೮೪೨ರಲ್ಲಿ ರಚಿತವಾದ 'ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ ಪುಸ್ತಕ'ದಲ್ಲಿರುವ ಮೈಸೂರು ಇತಿಹಾಸದ ಬಗ್ಗೆ ಕೆಲವು ಟಿಪ್ಪಣಿಗಳು

**ಪ್ರೊ. ಜಿ. ಅಶ್ವತ್ಥನಾರಾಯಣ***

೧. ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ ಪುಸ್ತಕ ಎಂಬ ಗ್ರಂಥವು ಆಕ್ಸ್‌ಫರ್ಡಿನ ಇಂಡಿಯನ್ ಇನ್ಸಿಟ್ಯೂಟಿನಲ್ಲಿರುವ ಲೈಬ್ರರಿಯಿಂದ ಶ್ರೀನಿವಾಸ ಹಾವನೂರರು ತಮ್ಮ ಹೊಸಗನ್ನಡ ಅರುಣೋದಯ ಗ್ರಂಥದ ರಚನೆಗಾಗಿ ದೇಶಗಳಲ್ಲಿರುವ ಕನ್ನಡ ಸಾಮಗ್ರಿಯನ್ನು ಕಲೆ ಹಾಕುತ್ತಿರುವಾಗ ಆಕ್ಸ್‌ಫರ್ಡ್ ವಿವಿ ಗ್ರಂಥಾಲಯಲ್ಲಿ ಅನಾಮತ್ತಾಗಿ ಕಣ್ಣಿಗೆ ಬಿದ್ದು ಸಂಗ್ರಹಿಸಿದ ಪುಸ್ತಕಗಳಲ್ಲಿ ಒಂದು.

೨. ಕಲ್ಲಚ್ಚಿನ ಪ್ರತಿ. ೧೩೦ ಪುಟಗಳಿವೆ ಇದರ ಲೇಖಕ ತುಮಕೂರಿನ ದೊ. ನರಸೈಯ್ಯ, ಪ್ರಕಟನೆ ಕಾಲ ೧೮೪೨ (ಶಾಲಿವಾಹನ ಶಕೆ ೧೭೬೪) ಹ. ನರಶಿಂಗೈಯ್ಯನಿಂದ ಬೆಂಗಳೂರಿನಲ್ಲಿರುವ ವರ್ಣಯಂತ್ರದಲ್ಲಿ ಮುದ್ರಿಸಲ್ಪಟ್ಟಿತು.

ದೇಶೀಯರಿಂದ ಪ್ರಕಟವಾದ ಆದ್ಯ ಗ್ರಂಥಗಳಲ್ಲಿ ಒಂದು ಶ್ರೀಹಾ ಅಜ್ಞಾತ ಲೇಖನದ ಅಪರಿಚಿತ ಗ್ರಂಥ.

೩. ಪುಸ್ತಕದ ಹೆಸರು **ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ ಪುಸ್ತಕ** ಎಂಬ ಹೆಸರು ಇದ್ದುದರಿಂದ ಇದರಲ್ಲಿ ಮೈಸೂರಿನ ಇತಿಹಾಸ ಇದೆ ಎಂಬುದು ಹೆಸರಿನಿಂದ ತಿಳಿಯುವುದಿಲ್ಲ. ಹಾಗಾಗಿ ಮೈಸೂರಿನ ಇತಿಹಾಸಕಾರರ ಗಮನಕ್ಕೆ ಬಂದಿಲ್ಲ ಮತ್ತು ಪ್ರತಿ ವಿದೇಶದಲ್ಲಿದ್ದುದರಿಂದ ವಿದೇಶದ ಕನ್ನಡ ಗ್ರಂಥಗಳನ್ನು ಹಾವನೂರ್ ಅವರಿಗೆ ಮುಂಚೆ ವಿಶೇಷ ಗಮನ ಕೊಟ್ಟವರಿಲ್ಲದ್ದರಿಂದ ಯಾರಿಗೂ ಈ ಗ್ರಂಥ ಪರಿಚಯವಾಗಲಿಲ್ಲ.

ಹಾವನೂರರು ಈ ಅಂಶ ಗಮನಿಸಿ ತಮ್ಮ **ಹೊಸಗನ್ನಡ ಅರುಣೋದಯ**ದಲ್ಲಿ ಪುಸ್ತಕದ ಹೆಸರನ್ನು ಕೊಡುವಾಗ ಮೈಸೂರು ಸಂಸ್ಥಾನದ ವಿವರವು ಎಂದು ಸೇರಿಸಿದ್ದಾರೆ. ಇದರಿಂದ ಪುಸ್ತಕದ ಮೂಲ ಹೆಸರೇ **ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ**, ಮೈಸೂರು ಸಂಸ್ಥಾನದ ವಿವರವು ಎಂದಿದೆ. ಎಂದು ತಪ್ಪಾಗಿ ಪುಸ್ತಕ ನೋಡಿದವರು ತಿಳಿಯುವಂತಾಗಿದೆ.

೪. ಬೆಂಗಳೂರಿನಲ್ಲಿ ೧೮೪೨ರಲ್ಲಿ ಮೊಟ್ಟ ಮೊದಲ ಬಾರಿಗೆ ಕಲ್ಲಚ್ಚಿನ ಮುದ್ರಾಯಂತ್ರ ಸ್ಥಾಪಿಸಿದವನು ಓರ್ವ ಮ್ಯಾಜಿಸ್ಟ್ರೇಟನು. ಅಲ್ಲಿ ಅಚ್ಚಾದ ೮ ಪುಸ್ತಕಗಳಲ್ಲಿ ಇದೊಂದು.

೫. ಮಂಗಳೂರು ಸಮಾಚಾರ ಪತ್ರಿಕೆಯ ನವೆಂಬರ್ ೧ರ ೧೮೪೩ ಸಂಚಿಕೆಯಲ್ಲಿ ಬೆಂಗಳೂರಿನಿಂದ ಪತ್ರಿಕೆಗೆ ಬಂದ ೮ ಪುಸ್ತಕಗಳ ಪಟ್ಟಿ ಹೀಗಿದೆ.

ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ ಪುಸ್ತಕ (೧೮೪೨)

ಅನುಭಾವಾಮೃತವೆಂಬ ಗ್ರಂಥವು

ಇ) ಬಾಲಶಿಕ್ಷೆ ಅಂಕಲೆಖ್ಖ ಸಂಕಲಿಕ ನಕಲಿತ ಗುಣಕ ಭಾಗಹರಣ ಸಹಾ

ಈ) ಠಗರೆಂಬುವ ಫಾಶೀಕಾರರ ಚರಿತ್ರೆಯು.

ಉ) ವಿದುರನೀತಿಯೆಂಬ ಗ್ರಂಥವು ಟೀಕು ಸಹಾ

ಊ) ಪಾಠಶಾಲೆಯಲ್ಲಿವೋದುವ ವಿದ್ಯಾರ್ಥಿಗಳ ವುಪಯೋಗದ ಬಾಲಬೋಧೆ.

ಋ) ರಾಜಸೇವೆಯ ಲಕ್ಷಣವು.

ೠ) ಆಸ್ಥಾನ ಜ್ಯೋತಿಯೆಂಬ ಪದ್ಯಗಳು.

(ಹೊಗಅ ಪುಟ ೪೩)

ಈ ಎಂಟು ಪುಸ್ತಕಗಳ ಉಲ್ಲೇಖ. ಕನ್ನಡ ಗ್ರಂಥಲೋಕ (ಮೈವಿವಿ) ಸಂಪುಟಗಳಲ್ಲಿಯಾಗಲೀ ವಿದೇಶಗಳಲ್ಲಿರುವ ಲೈಬ್ರರಿ ಗ್ರಂಥಸೂಚಿಗಳಲ್ಲಾಗಲೀ ಉಲ್ಲೇಖ ಕಂಡುಬಂದಿಲ್ಲ.

[ಶ್ರೀಹಾ–ಕನ್ನಡದ ಪ್ರಥಮ ಪ್ರಕಾಶಕರು ಯಾರು ಲೇಖನದಿಂದ]

* # ೯೫, ೩೪ 'ಬಿ' ಅಡ್ಡರಸ್ತೆ, ೧೬ನೆಯ ಮುಖ್ಯರಸ್ತೆ, 'ಬಿ' ಬ್ಲಾಕ್, ಜಯನಗರ, ಬೆಂಗಳೂರು–೫೬೦೦೪೧.

೬. ಆದ ಕಾರಣ ಶ್ರೀನಿವಾಸ ಹಾವನೂರರ ಲೇಖನ ವಿವರಗಳು ಪ್ರಪ್ರಥಮವಾಗಿದ್ದು ಈ ಲೇಖನ ಆ ಬಗ್ಗೆ ಎರಡನೆಯದಾಗಿದೆ.

೭. ಮೈಸೂರು ಇತಿಹಾಸದ ದೃಷ್ಟಿಯಿಂದ ಇದು ಮಹತ್ವ ಗ್ರಂಥಗಳಲ್ಲಿ ಒಂದಾಗಿದೆ ಏಕೆಂದರೆ ಇಲ್ಲಿರುವ ಹಲವಾರು ಮಾಹಿತಿಗಳು ಬೇರೆಲ್ಲಿಯೂ ಸಿಗುವುದಿಲ್ಲ.

೮. ಲೇಖಕ ಮುಮ್ಮಡಿ ಕೃಷ್ಣರಾಜ ಒಡೆಯರ ಸಮಕಾಲೀನನಾಗಿದ್ದು ಅವರ ಬಗ್ಗೆ ವಿವರವಾಗಿ ಬರೆದಿದ್ದಾನೆ.

೯. ಜಗದುತ್ಪತ್ತಿ ಸ್ಥಿತಿಲಯಗಳ ವಿವರಣ ಗ್ರಂಥದ ೧೩೦ ಪುಟಗಳಲ್ಲಿ ೧ನೇ ಪುಟದಿಂದ ೪೫ ಪುಟಗಳವರೆಗೆ ಧಾರ್ಮಿಕ ವಿಚಾರಗಳಿವೆ. ೪೬ನೇ ಪುಟದಿಂದ ಮೈಸೂರು ಇತಿಹಾಸ ಪ್ರಾರಂಭವಾಗುತ್ತದೆ. ಯದುರಾಜರಿಂದ ಹಿಡಿದು ಮುಮ್ಮಡಿ ಕೃಷ್ಣರಾಜರವರೆಗೆ (೧೯೪೨ನೆಯ) ಇತಿಹಾಸದ ಸಂಗತಿಗಳಿವೆ. ಹೈದರ ಟಿಪ್ಪು ಪೂರ್ಣಯ್ಯನವರ ಬಗ್ಗೆ ಸಾಕಷ್ಟು ವಿವರಗಳಿವೆ.

೧೦. ಇಡೀ ಗ್ರಂಥ ಪ್ರಶ್ನೋತ್ತರರೂಪವಾಗಿವೆ. ಇದು ವಿಶೇಷ. ಮತ್ತು ಇಡೀ ಗ್ರಂಥದಲ್ಲಿ ಪ್ರಶ್ನೆಗಳಿಗಾಗಲೀ ಉತ್ತರಗಳಿಗಾಗಲೀ ಲೇಖನ ಚಿಹ್ನೆಗಳಾವುದನ್ನೂ ಬಳಸಿಲ್ಲ. ಪ್ರಶ್ನೆಗೆ ಪ್ರಶ್ನಾರ್ಥಕ ಚಿಹ್ನೆ ಇಲ್ಲ. ಉತ್ತರಗಳಿಗೆ ಪೂರ್ಣ ವಿರಾಮ ಚಿಹ್ನೆಯೂ ಇಲ್ಲ.

೧೧. ಉದಾಹರಣೆಗೆ ಈ ಪ್ರಶ್ನೆ ಉತ್ತರ ಗಮನಿಸಿ (ಪುಟ ೪೬).

ಪ್ರ: ಇಂಗಲೀಷು ದೇಶಂಬುದು ಈ ಹಿಂದುಸ್ಥಾನ ದೇಶಕ್ಕೆ ಯೆಷ್ಟು ದೂರವಿದೆ.

ಉ: ನೆಟ್ಟಗೆ ನೋಡಿದರೆ ಸುಮಾರು ಐನೂರು ಯೋಜನ ದೂರವಿರಬಹುದು ಸಮುದ್ರದ ಮೇಲೆ ಹೋಗಬೇಕಾದರೆ ಮಧ್ಯೆಯಿರುವ ಕೆಲವು ದೇಶಗಳು ಸುತ್ತಿಕೊಂಡು ಹೋಗಬೇಕಾದ ಕಾರಣ ಸಾವಿರದ ನಾನೂರು ಯೋಜನೆಗಳ ದೂರವಾಗಿರುತ್ತೆ.

೧೨. ಈ ಪುಸ್ತಕವು ಹ.ನರಶಿಂಗೈಯ್ಯನಿಂದ ಬೆಂಗಳೂರಲ್ಲಿರುವ ವರ್ಣಯಂತ್ರದಲ್ಲಿ ಮುದ್ರಿಸಲ್ಪಟ್ಟಿತು. ಶಾಲಿವಾಹನಶಕೆ ೧೭೬೪ ಎಂದಿದೆ.

ಇಲ್ಲಿ ವರ್ಣಯಂತ್ರ ಎಂದರೆ ಬಣ್ಣದ ಮುದ್ರಣಯಂತ್ರ ಎಂದಲ್ಲ ಛಾಪಖಾನೆಗೆ ವರ್ಣಯಂತ್ರ ಎಂದು ಕರೆಯುತ್ತಿದ್ದರು ಎನ್ನುತ್ತಾರೆ ಶ್ರೀನಿವಾಸ ಹಾವನೂರರು.

೧೩. ಈ ಗ್ರಂಥದಲ್ಲಿ ಕುತೂಹಲಕಾರಿ ಸಂಗತಿಗಳಿವೆ ಎಂಬುದಕ್ಕೆ ಒಂದೆರಡು ನಿದರ್ಶನಗಳನ್ನು ತಿಳಿಸುತ್ತಿದ್ದೇನೆ.

ಪುಟ ೩೬ರಲ್ಲಿ ಪ್ರಶ್ನೆ – ಉತ್ತರ ಹೀಗಿದೆ.

ಪ್ರ: ಹಿಂದೂಸ್ಥಾನ ದೇಶದಲ್ಲಿ ಯಿರುವ ಜಾತಿಗಳ ಹೆಸರುಗಳೇನು. (ಪುಸ್ತಕದಲ್ಲಿ ಪಟ್ಟಿ ರೂಪದಲ್ಲಿಲ್ಲ ಇಲ್ಲಿ ಪಟ್ಟಿ ಮಾಡಿದೆ).

ಉ: ೧. ಯಲನಾಡು ೨. ಮುಲಿಕಿನಾಡು
೩. ವೇಗಿನಾಡು ೪. ಕಾಸಲನಾಡು
೫. ಶೀರನಾಡು ೬. ಬಡಗನಾಡು
೭. ಬಬ್ಬೂರುಕಂಮಿ ೮. ವುರುಚುಕಂಮಿ
೯. ಕಂನಡ ಕಂಮಿ ೧೦. ಹೊಯಿಶಣಿಗ
೧೧. ತೆಲುಗ್ಬ್ರಾಣ್ಯ ೧೨. ನಂಗಿಪುರ
೧೩. ನಂದವೈದಿಕ ೧೪. ಅರವೇಲು
೧೫. ಶುಕ್ಲಯಜು ೧೬. ಅರವತ್ತೊಕ್ಕಲು
೧೭. ದೇಶಸ್ಥ ೧೮. ವಾನಸ
೧೯. ನಿಂಡೂರು ನಾರಾಯಣ ೨೦. ಪೆರಿಬೃಹಚ್ಚರಣ
೨೧. ಕಂಟಮಾಣಿಕ ಬೃಹಚ್ಚರಣ
೨೨. ಹೇನುಗುಂಟಿ ವಡಮ ೨೩. ವಡದೇಶದ ವಡಮ
೨೪. ಸಂಕೇತಿ ೨೫. ಗುಜ್ಜರಕೋಟಿ
೨೬. ಕಂದಾವರ ೨೭. ಶಿವಹಳಿ
೨೮. ಹೈಗ ೨೯. ತುಳುವ
೩೦. ನಂಬೂರಿ ೩೧. ಚೋಳಿ ಆರಾಧ್ಯ
೩೨. ಶಿವದ್ವಜ ೩೩. ಕೊಂಕಣಿ
೩೪. ಗೌಡಸಾರಸ್ವತ ೩೫. ಕಾನಕುಬ್ಜ
೩೬. ಉತ್ಕಳ ೩೭. ಮೈಧೂಳ
೩೮. ಚಿತ್ಪಾನಾನಿ ೩೯. ಕರಾಡಿ
೪೦. ಕಾಯತಿ ೪೧. ಕನೋಜಿ
೪೨. ಸೇಣವಿ ೪೩. ಮಾಧ್ಯಂದಿನ
೪೪. ಪೌಷ್ಟಿಕ ೪೫. ಕಾಣ್ವ
೪೬. ಕಾತ್ಯಾಯನ ೪೭. ಮಿಶ್ರ
೪೮. ದೇವರುಷಿ ೪೯. ರೇಗಡ
೫೦. ಖೇಡಾ ಮಾರಕ

ಇವೆಲ್ಲಾ ಬ್ರಾಹ್ಮಣ ಜಾತಿಗಳು ಯಿವರಲ್ಲಿ ಕೆಲವರು ಪಂಚದ್ರಾವಿಡದಲ್ಲೂ ಕೆಲವರು ಪಂಚಗೌಡದಲ್ಲೂ ಶೇರಿಕೆ ಎಂದು ಹೇಳಿ ಇವರ ವೃತ್ತಿಗಳನ್ನು ವಿವರಿಸಿದ್ದಾರೆ. ಹೀಗೆ ಚಾತುರ್ವರ್ಣ್ಯ ವಿವರಗಳನ್ನು ನರಸೈಯ್ಯ ನೀಡಿದ್ದಾನೆ ಈ

ಜಾತಿ ಉಪಜಾತಿಗಳು ಯಾವ ವೃತ್ತಿ ಮಾಡುತ್ತಾರೆ ಎಂಬುದನ್ನು ಹೇಳುವುದನ್ನು ಗಮನಿಸಿದರೆ ಅಚ್ಚರಿ ಆಗುತ್ತದೆ.

ಉದಾಹರಣೆಗೆ (ಪು. ೩೮) "ಹೆಗ್ಗಣಿಗ ಕಿರುಗಾಣಿಗ ಜ್ಯೋತಿನಗರ ಯಿವರು ಯಂಣೆ ಮಾಡುತ್ತಾರೆ. ಇವರಲ್ಲಿ ಕಿರುಗಾಣಿಗರು ಮರದಗಾಣವೂ ಯರಡು ಯೆತ್ತುಗಳು ಕಟ್ಟುತ್ತಾರೆ.

ಹೆಗ್ಗಾಣಿಗರು ಮರದ ಗಾಣವೂ ವೊಂದು ಯೆತ್ತು ಕಟ್ಟುವುದೂ

ಜ್ಯೋತಿನಗರದವರು ಕಲ್ಲುಗಾಣ ಯೆರಡೆತ್ತು ಕಟ್ಟುತ್ತಾರೆ.

೧೫. ಯದುರಾಜರಿಂದ ಹಿಡಿದು ಮುಮ್ಮಡಿ ಕೃಷ್ಣರಾಜ ಒಡೆಯರವರೆಗೆ ಎಲ್ಲ ರಾಜರ ಹೆಸರೂ ಬಂದಿದೆ. ರಾಜ ಒಡೆಯರ ವಿವರ ಸ್ವಲ್ಪ ಹೆಚ್ಚಾಗಿದೆ. ಪ್ರಾರಂಭದಲ್ಲಿ ಮೈಸೂರು ಎಂಬ ಹೆಸರು ಹೇಗೆ ಬಂದಿತು ಎಂಬುದಕ್ಕೆ ಪೌರಾಣಿಕ ಕಥೆಯನ್ನು ಹೀಗೆ ವಿವರಿಸಿದ್ದಾನೆ.

"ಪೂರ್ವದಲ್ಲಿ ಅತ್ರಿ ಋಷೀಶ್ವರನ ನಯನದಿಂದ ಚಂದ್ರ ಜನಿಸಿದನಾಗಿ ಯಾವಂಶದಲ್ಲಿ ಯಯಾತಿ ಮಹಾರಾಯನ ಮಗನಾದ ಯದುರಾಯನ ವಂಶದಲ್ಲಿ ವಸುದೇವನ ಗರ್ಭದಿಂದ ಹುಟ್ಟಿದ ಕೃಷ್ಣದೇವರು ಅವತಾರ ಸಮಾಪ್ತ ಕಾಲದಲ್ಲಿ ತಮ್ಮ ವಡಹುಟ್ಟಿದವಳಾದ ಚಾಮುಂಡಿಯೆಂಬ ಹೆಸರುಳ್ಳ ಮಾಯಾದೇವಿಯನ್ನ ಕರೆದು ಕುಂತಲ ದೇಶದಲ್ಲಿ ನಮ್ಮ ವಂಶಸ್ಥರಿದ್ದಾರೆ ಅವರನ್ನು ಸಂರಕ್ಷಣೆ ಮಾಡಿಕೊಂಡ ಹೇಳಿದರಿಂದ ಆಕೆ ಬಂದು ಮಹಾಬಲಾಚಲವೆಂಬ ಪರ್ವತದಲ್ಲಿದ್ದ ನಿಂತು ಆ ಸಮೀಪ ಮಹಿಷಾಪುರಿ ಪಟ್ಟಣದಲ್ಲಿ ಮಹಿಷಾಸುರನೆಂಬ ರಾಕ್ಷಸನ್ನ ಸಂಹರಿಸಿಯಾದ ನಂತರ ಅರಸುಗಳಿಗೆ ಆವೂರು ಕೊಟ್ಟು ಅವರಿಗೆ ತಾನು ಮನೆದೇವತೆ ಯಾಗಿ ನಿಂತಳು. ಆದಕಾರಣ ಯೀ ವೂರಿಗೆ ಮಹಿಶೂರೆಂಬ ಹೆಸರುಂಟಾಯಿತು" (ಪುಟ ೪೯).

೧೬. ಯದುರಾಜರಿಂದ ಮುಮ್ಮಡಿಯವರೆಗೆ ರಾಜರ ವಿವರ ಕೊಡುವಾಗ ದಿನಾಂಕಗಳನ್ನು ಹೇಳಿದ್ದಾನೆ. ಉಳಿದ ಗ್ರಂಥಗಳಲ್ಲಿ ಹೇಳಿದ ದಿನಾಂಕಗಳಿಗೂ ಇವುಗಳಿಗೆ ವ್ಯತ್ಯಾಸವಿದೆಯೇ ಎಂಬುದನ್ನು ಪರಿಶೀಲಿಸಬೇಕಾಗಿದೆ.

ಕಂಠೀರವ ನರಸರಾಜ ಒಡೆಯುರು ಬಹು ಖ್ಯಾತಿಯನು ಹೊಂದಿ ಶಾಲಿವಾಹನಶಕೆ ೧೫೭೯ನೇ ವಿಕಾರಿ ಸಂವತ್ಸರ ಶ್ರಾವಣ ಬ೭ಲು ಯಿವರು ಸ್ವರ್ಗಸ್ಥರಾದರು.

ಶಕೆ ೧೬೨೬ನೇ ತಾರಣ ಸಂವತ್ಸರದ ಕಾರ್ತಿಕ ಬ। ಅಮಾವಾಸೆಯಲ್ಲು ಚಿಕ್ಕದೇವರಾಯ ಮಹಾರಾಜ ವಡೆಯರು ಸ್ವರ್ಗಸ್ಥರಾದರು.

ತದನಂತರ ಯಿವರ ಮಗ ಚಿಕ್ಕಕಂಠೀರವ ನರಸರಾಜ ವಡೆಯರಿಗೆ ಪಟ್ಟವಾಯಿತು ಯಿವರು ಮೂಗರಾದ್ದರಿಂದ ಮೂಗರಶಿನವರೆಂದು ಪ್ರಶಿದ್ಧಿ ಆಯಿತು. ಯಿವರು ವಂಭತ್ತು ಯರಡೂವರೆ ತಿಂಗಳು ಆಳಿ ಸ್ವರ್ಗವನ್ನು ಹೊಂದಿದರು.

ಯಿವರ ಕುಮಾರರಾದ ದೊಡ್ಡ ಕೃಷ್ಣರಾಜ ವಡೆಯರಿಗೆ ೧೬೩೫ನೇ ಜಯ ಸಂವತ್ಸರ ಫಾಲ್ಗುಣ ಬ ೧ ಲು ಪಟ್ಟಾಭಿಷೇಕವಾಯಿತು.

ಶಕೆ ೧೬೪೫ನೇ ಕ್ರೋಧಿ ಸಂವತ್ಸರದಲ್ಲಿ ಅರಕಾಡುನ ನವಾಬು ಸಾತುಲ್ಲಾಖಾನರು ದಂಡು ಮುಂತಾಗಿ ಪಟ್ಟಕ್ಕೆ ಬಂದುದರಿಂದ ವೊಂದು ಲಕ್ಷ ಗೋಪಾಲಿ ವರಹಾ ಕೊಟ್ಟು ಸಲ್ಲಾ ಮಾಡಿಕೊಂಡರು (ಪುಟ ೬೦).

ಚಿಕ್ಕಕೃಷ್ಣರಾಜ ವಡೆಯರವರು ಶಕೆ ೧೬೮ನೆ ವೈಶಾಖ ಬ೧ಲು ವೈಕುಂಠ ಯಾತ್ರೆಯನ್ನು ಮಾಡಿದರು.

೧೭. ಹೈದರಾಲಿ ವಿಷಯ ಸಾಕಷ್ಟು ಬಂದಿದೆ (ಪುಟ ೭೧-೯೭) ಹೈದರಾಲಿ ರಾಜ್ಯಗಳನ್ನು ಗೆದ್ದ ವಿವರ ಯುದ್ಧದ ವಿವರಗಳು ಬಂದಿವೆ. ಯುದ್ಧದ ವಿವರಕ್ಕೆ ಒಂದು ನಿರ್ದಶನ (ಪುಟ ೮೫)

ಶಕೆ ೧೭೦೨ನೇ ಶಾರ್ವರಿ ಸಂವತ್ಸರ ಜ್ಯೇಷ್ಟ ಮಾಸದಲ್ಲು ನವಾಬರು ಆರ್ಕಾಡು ಮೇಲೆ ಮೋಹಿಮು ಹೊರಟರು ಅವರ ಸಂಗಡ ಹಾಜರು ಯಿದ್ದ ಫವುಜಿನ ವಿವರ :

೧) ರೆಬೇಲೆ ಬಾರುಗಿರ ಕಚೇರಿ ಕುದುರೆ ೧೩೦೦

೨) ಸೆವಾರ ಕಚೆರಿ ಕುದುರೆ ೧೮೦೦೦

೩) ಬಾರಕಚೆರಿಬಾರಿನ ಜನ ೬೦೦೦೦ಕ್ಕೆ ಗಡಿಗಳಲ್ಲಿ ತೈನಾತಿ ೨೦೦೦೦ ಹೊಗಲಾಗಿ ಬಾಕಿ ೪೦೦೦೦

೪) ಅಹಷಾಮು ಕಚೇರಿ ಪ್ಯಾದೆ ೨೦೦೦೦

೫) ಕಾಮಾಟಿ ಕಚೇರಿನ ಫರು ೬೦೦೦

೬) ಬಾಣದಾರು ೭೦೦೦

೭) ಯಿಂಗರೀಜಿ ಜಾನಿಗೋರಾ ೫೦೦

೮) ಸವಣೂರು ಹಕೀಮಖಾನರ ಮಕ್ಕಳು ೭ ಸವಾರ್ರು ೭೦೦೦

೯) ಕಡಪೆಮಿಾರ ಅಲ್ಲಿ ರಾಜಾಖಾನರ ಫವುಜು ೪೦೦೦

೧೦) ಹಬ್ಬಿಶಿಯವರು ೧೦೦

೧೧) ಅರಬ್ಬಸ್ತಾನ ಜನ ೧೦೦೦

೧೨) ಪಿರಂಗಿಗಳು ೩೦೦ ಯಿದಕ್ಕೆ ತಕ್ಕ ಮದ್ದು ಗುಂಡು ಸಹಾ

೧೩) ಮೋದಿಖಾನೆ ವರದಿಯತ್ತು ೧೨೦೦೦

೧೪) ಶೀಮೆ ಕಂದಾಚಾರದ ಪ್ಯಾದೆ ೮೦೦೦೦ ಪೈಕಿ ಸಂಗಡ ಹೋದದ್ದು ೪೦೦೦೦

೧೫) ಚೇಲಖಾನೆ ಆನೆ ೧೦೦೦

೧೬) ಷತರಖಾನೆ ವಂಟೆ ೬೦೦೦

೧೭) ಮಹಲುದಾರ ಜೋಪದಾರ ನಜೀಬ ಬಿಜಮತಗಾರ ಷರಾಷ ಗೊಲ್ಲ ಭೋಯಮಶಾಲಜಿ ವಗೈರೆ ಜನರು

೧೮) ದಂಡಿನ ಬಾಜಾರು ಚೌದರಿಗಳು ೫ ಜನ ಬಾಜಾರು ಸುದಾ ೧೫೦೦೦

೧೯) ಪಾಳ್ಳೆಗಾರ್‍ರುಯವರ ಸಲತನತುಸುದಾ ೧೫೦೦೦

ಆನೆಗೊಂದಿ ಕನಕಗಿರಿ

ಹರಪನಹಳ್ಳಿ ರಾಯದುರ್ಗ

ಜರಿಮಲೆ ಹಾವನೂರು

ಮಲ್ಲೆವಾರು

೨೦) ಹರಿಕಾರ್‍ರು ನಾಯಕರು ಸುದಾ ೧೦೦೦

೨೧) ಜಹಸೋದರು ೧೦೦೦

ಯೀ ಮೇರೆ ಹೊರಟರು.

೧೮. ಹೈದರಾಲಿ ಅಂತ್ಯವನ್ನು ನರಸೈಯ್ಯ ಬಣ್ಣಿಸಿರುವ ರೀತಿ ಕುತೂಹಲಕಾರಿಗಿದೆ. (ಪುಟ ೯೬-೯೭)

"ಶುಭಕೃತು ಸಂವತ್ಸ ಕಾರ್ತೀ ಮಾಸದಲ್ಲಿ ನವಾಬರಿಗೆ ಬೆನ್ನುಮೇಲೆ ಬೆನ್ನು ಫಣಿಯೆಂಬ ಹುಣ್ಣುಯೆದ್ದು ಬಹುವುಪದ್ರವಾಗಿ ಕೇವಲ ನಿಸೂಕ್ತವಾದ್ದರಿಂದ ನವಾಬರು ಮೃತವಾದರೆಂದು ದಂಡಿನಲ್ಲಿ ಪುಕಾರಾಗಿ ಜನರೆಲ್ಲಾ ಕಟ್ಟು ತಪ್ಪಿದರಿಂದ ಈ ವರ್ತಮಾನ ನವಾಬರು ಕೇಳಿ ಹೊರಗೆ ಬಂದು ಮಸಲಂದಿನ ಮೇಲೆ ಕುಳಿತು ಫವುಜಿನ ಸರದಾರ್‍ರನ್ನೆಲ್ಲ ಕರೆಸಿ ಸಲ್ಲಾಂ ಮುಜರೆ ಸಹ ತೆಗೆದುಕೊಂಡು ರೋಜು ಬಟವಾಡಿಗೆ ಹುಕುಂ ಕೊಟ್ಟು ಕೆಟ್ಟ ಸುದ್ದಿ ಹುಟ್ಟಿಶಿದ ನಾಲ್ಕು ಜನ ಹರಿಕಾರರನ್ನ ಹಿಡತರಶಿ ಇಬ್ಬರನ್ನು ಆನೆ ಕಾಲಿಗೆ ಕಟ್ಟಿಶಿ ಯಳಶಿ ಇಬ್ಬರನ್ನು ತೋಫಿನ ಬಾಯಿಗೆ ಕಟ್ಟಿಶಿ ಉಡಾಯಿ ವಶಿಳಿಕ್ಕೆ ಯೆದ್ದು ಹೋದರು. ತರುವಾಯ ಅಲ್ಲಿಂದ ಕೂಚುಮಾಡಿ ಚನ್ನಪಟ್ಟಣದ ಮುಖವಾಗಿ ವೊಂದು ಮಜಲು ಹೋಗಿ ಇಳಿದರು.

ಮಾರ್ಗಶಿರ ಶು ೩ ಸ್ಥಿರವಾರ ದಿವಸ ಮಧ್ಯಾಹ್ನದಲ್ಲಿ ಅಬ್ಬೂಮಹಂಮದರು ಮಿರಮಹಂಮದ ಸಾದಕರು ತೋಷಿಖಾನೆ ಕೃಷ್ಣರಾಯರು ಪೂರ್ಣಯ್ಯನವರು ಅಂಚೆಗುರಿಕಾರ ಶಾಮೈಯ್ಯನವರು ಈ ಐದು ಜನವನ್ನು ನವಾಬರು ವಳಗೆ ಕರಶಿಕೊಂಡು ಇನ್ನು ಮೇಲೆ ನಮ್ಮ ದೇಹ ನಿಲ್ಲುವುದಿಲ್ಲ ಶ್ರಮ ಬಹಳವಾಯಿತು ಮುಂದೆ ದೌಲತ್ತು ಮಾಡಬೇಕಾದರೆ ಟೀಪು ಸುಲತಾನರು ವಿನಹಾ ಕರೀಂ ಸಾಬರಿಗೆ ಅಪ್ಷರ ನಿರ್ವಹವಿಲ್ಲ. ನೀವು ಈ ಸ್ಥಳಾ ಬಿಡದೆ ಈ ಸುದ್ದಿ ಹೊರಗೆ ಹುಟ್ಟಿಸದೆ ಅತಿ ಜರೂರಾಗಿ ಸುಲತಾನರನ್ನ ಕರಶಿಕೊಂಡು ಅವರಿಗೆ ದೌಲತ್ತು ಮಾಡಿ ಅವರ ಬಳಿಯಲ್ಲಿ ನೀವೆಲ್ಲರೂ ಜೀವನಾ ಮಾಡುವುದೆಂದು ಅಪ್ಪಣೆ ಕೊಟ್ಟು ದೈವಾಧೀನರಾದರು.

ಟೀಪೂಸುಲ್ತಾನರಿಗೆ ಅರ್ಜಿ ಬರಕೊಂಡು ಕರಶಿ ಅವರಿಗೆ ಪಟ್ಟಾ ಕಟ್ಟಿ ನವಾಬರ ಲಾಷ ಕೋಲಾರದ ಬಳಿಗೆ ಕಳಿಹಿಸಿಕೊಟ್ಟು ಅಲ್ಲಿ ಗೋರಿ ಮಾಡಿಶಿದರು.

೧೯. ಹೈದರ ಬಗ್ಗೆ ಇಷ್ಟೆಲ್ಲಾ ವಿವರವಾಗಿ ಬರೆದ ಇತಿಹಾಸಕಾರ ದೊ. ನರಸೈಯ್ಯ ಟೀಪು ವಿಚಾರವನ್ನು ಒಂದೇ ವಾಕ್ಯದಲ್ಲಿ ಮುಗಿಸಿಬಿಟ್ಟಿದ್ದಾರೆ (ಪುಟ ೯೮)

ಟೀಪು ಸುಲತಾನರು ದೌಲತ್ತಿಗೆ ಬಂದ ತರುವಾಯ ೧೬ ವರುಷದ ವಳಗೆ ನವಾಬರು ಸಂಪಾದಿಶಿದ್ದ ದೌಲತ್ತೆಲ್ಲಾ ಕಳೊಕೊಳ್ಳುತ್ತಾ ಬಂದು ಶಕೆ ೧೭೭೨ನೆ ಸಿದ್ಧಾರ್ಥಿ ಸಂವತ್ಸರ ಚೈತ್ರ ಬ ೩೦ ಶನಿವಾರದ ದಿವಸ ಯಿಂಗರೇಜ ಬಾದಷಹಾರ ಕಡೆ ಜರ್ನಲ ಆರೀಸು ಸಾಹೇಬರವರು ಫವುಜು ಸುದಾ ಬಂದು ಲಡಾಯಿ ಮಾಡಿ ಶ್ರೀರಂಗಪಟ್ಟಣವನ್ನ ಠಾಣೆ ಹಾಕಿ ಪೂರ್ವದಿಂದ ಆ ಸಂಸ್ಥಾನಕ್ಕೆ ಬಾಧ್ಯರು ಯಾರೆಂದು ವಿಚಾರಿಸಿ ಮಹಾರಾಜ ಕೃಷ್ಣರಾಜ ವಡೆಯರು ಬಾದ್ಯರೆಂದು ತಿಳಿದು ಅವರಿಗೆ ಪಟ್ಟಾಭಿಷೇಕವನ್ನು ಮಾಡಿದರು.

ಅನಂತರ ಮುಮ್ಮಡಿ ಅವರಿಗೂ ಯಿಂಗರೇಜ ಬಾದಷಹಾರ ಕಡೆಯವರಿಗೂ ಆದ ಒಪ್ಪಂದದ ವಿವರಗಳು ವಿಶದವಾಗಿ ಬಂದಿದೆ.

೨೦. ಪೂರ್ಣಯ್ಯನವರು ಯಾವುದೇ ನ್ಯೂನತೆಯಿಲ್ಲದೆ ನಡೆದರು (ಪು. ೧೧೯) ಎಂದು ಹೇಳಿದರೂ ಅವರನ್ನು ನಿವೃತ್ತಿಗೊಳಿಸಿದ್ದರ ಸ್ಮಾರಕವನ್ನು ಹೀಗೆ ಹೇಳಲಾಗಿದೆ.

ಪ್ರ: "ಪೂರ್ಣಯ್ಯನವರ ಜೀವಾಂತ್ಯದ ಪರಿಯಂತಕ್ಕು ದಿವಾನಗಿರಿ ಅವರ ಸ್ವಾಧೀನದಲ್ಲೆಯಿತ್ತೆ.

ಉ: ಇಲ್ಲವು ಪ್ರಜೋತ್ಪತ್ತಿ ಸಂವತ್ಸರದಲ್ಲಿ ಸ್ವಲ್ಪ ವಿಷಯದಲ್ಲಿ ಮಹಾರಾಜ ಕೃಷ್ಣರಾಜ ವಡೆಯ ಬಹದುರ್‍ರವರ

ಚಿತ್ತಕ್ಕೆ ಬೇಸರ ತೋರಿ ಅವರ ಸ್ವಾಧೀನ ತಪ್ಪಿಸಿ ಖಾಸಾ ತಾವೆ ರಾಜ್ಯದ ಕೆಲಸ ನೋಡುವುದಕ್ಕೆ ಆರಂಭಿಸಿದರು.

೨೧. ಪೂರ್ಣಯ್ಯನವರು ನಿವೃತ್ತರಾಗುವ ವೇಳೆ ಬೊಕ್ಕಸದಲ್ಲಿ ಇದ್ದ ಹಣದ ವಿವರ ಹೀಗಿದೆ.

"ಸಂಬಳಗಾರ್ರ ಸಂಬಳಗಳೂ ಕುಂಪಣಿ ಸರಕಾರಕ್ಕೆ ಕೊಡತಕ್ಕ ಹಣವೂ ಇತರೆ ವೆಚ್ಚಗಳು ಸಹಾ ಕಳೆದು ೭೦೮೦ ಲಕ್ಷ ಪರವಾದ ಪರಿಯಂತ್ರಕ್ಕು ಇತ್ತು." (ಪು. ೧೧೯)

ಅನಂತರ ಮುಮ್ಮಡಿ ಅವರ ಆಳ್ವಿಕೆ ವಿಚಾರವೂ ಅವರಿಂದ ಆಳ್ವಿಕೆಯಲ್ಲಿ ದಾನದಿಂದ ಮಹಾರಾಜರು ಸಾಲ ಮಾಡಿದ್ದನ್ನು ಹೇಳಿ ಕಮೀಷನರ ನೇಮಕವಾದ ವಿಚಾರ ಹೇಳಲಾಗಿದೆ ಕಮೀಷನರರಿಂದ ಆದ ಪ್ರಯೋಜನ ಹೇಳಿ ಆಗ ಮೈಸೂರು ರಾಜ್ಯದಲ್ಲಿ ಇದ್ದ ಗ್ರಾಮ, ಮನೆ ಅಂಗಡಿ ಸಂಸಾರಗಳು ಹುಟ್ಟುವಳಿ ವೆಚ್ಚ ಇತ್ಯಾದಿಗಳ ಅಂಕಿ ಅಂಶಗಳನ್ನು ಕೊಡಲಾಗಿದೆ.

೨೨. ಕೆಲವು ಅಂಕಿ ಅಂಶಗಳು ಹೀಗಿವೆ:

ಗ್ರಾಮಗಳು ೩೧೨೭೨ ಮನೆಗಳು ೫೭೬೪೫೯ ಸಂಸಾರಗಳು ೪೮೨೬೧೨ ಜನರು ೨೧,೭೧೭೫೪ ದೇವಸ್ಥಾನಗಳು ೨೯೯೪೭ ಜಂಗಮರ ಮಠಗಳು ೧೪೦೨ ಜೈನರ ಬಸ್ತಿಗಳು ೧೫೩ ಫಕೀರರ ಮೊಕಾನುಗಳು ೩೫೯ ಮಸೀದಿಗಳು ೫೧೭ ಇತ್ಯಾದಿ.

೨೩. ಕೊನೆಯಲ್ಲಿ ಹಾನರೇಬಿಲು ಈಸ್ಟಿಂಡಿಯಾ ಕಂಪೆನಿ ಬಹದುರ್ರವರ ಸ್ವಾಧೀನದಲ್ಲಿ ದೇಶಗಳಲ್ಲಿ ಹುಟ್ಟುವಳಿ ವೆಚ್ಚದ ವಿವರಗಳನ್ನು ಕೊಡಲಾಗಿದೆ.

೧೮೨೮ನೇ ೧ನೇ ತಾರೀಖಿನವರೆಗೆ ೧೦ ಕೋಟಿ ರೂಪಾಯಿಗಳು ಅಧಿಕ ಸಾಲ ಈಸ್ಟಿಂಡಿಯಾ ಕಂಪೆನಿಗೆ ಇದ್ದುದನ್ನು ಈ ಅಂಕಿ ಅಂಶಗಳು ಹೇಳುತ್ತವೆ.

ಗ್ರಂಥದ ಕೊನೆಯ ವಾಕ್ಯ ಹೀಗಿದೆ : (ಪುಟ ೧೩೦) ಯಿ ನಾಲ್ಕು ಗವುನರಮೆಂಟುಗಳೊಳಗೂ ಯುದ್ದಯೋಗ್ಯ ವಾಗಿರುವ ಕುದುರೆಗಳು ಪ್ಯಾದೆಗಳು ಮೊದಲಾದ ಜನಗಳು ೧ ಲಕ್ಷ ೫೦೦೦೦

ಬ್ರಿಟೀಷುಯಂಬುವ ಯಿಂಗಲೀಷುಜನ ಸುಮಾರು ೨೦೦೦೦ ಮಿಕ್ಕ ಜನಗಳು ೧೩೦೦೦೦

೨೪. ಗ್ರಂಥ ಅಪೂರ್ಣವಾಗಿ ಮುಗಿದಿರುವ ಹಾಗಿದೆಯಲ್ಲದೆ ಎಂದು ಶ್ರೀನಿವಾಸ ಹಾವನೂರನ್ನು ಕೇಳಿದಾಗ (ಅವರೇ ಈ ಗ್ರಂಥವನ್ನು ಅಧ್ಯಯನಕ್ಕೆ ಒದಗಿಸಿದವರು) ಇಲ್ಲ ಗ್ರಂಥ ಇರುವುದೇ ಅಷ್ಟು ಎಂದಿದ್ದರು.

[ಕಲ್ಲಚ್ಚಿನ ಪ್ರತಿಯನ್ನು ನೀಡಿ ಉಪಕರಿಸಿದ ಶ್ರೀನಿವಾಸ ಹಾವನೂರರಿಗೆ ನಾನು ಕೃತಜ್ಞನಾಗಿದ್ದೇನೆ.]



## ಆಧಾರಸೂಚಿ


೧. **ಜಗದುತ್ಪತ್ತಿ ಸ್ಥಿತಿ ಲಯಗಳ ವಿವರಣದ ಪುಸ್ತಕ,** (೧೮೪೨), ಲೇ: ತುಮಕೂರಿನ–ದೊ–ನರಸೈಯ್ಯ (ಕಲ್ಲಚ್ಚು ಪ್ರತಿ).

೨. **ಹೊಸಗನ್ನಡ ಅರುಣೋದಯ,** (೨ನೇ ಮುದ್ರಣ ೨೦೦೦), ಕನ್ನಡ ಪುಸ್ತಕ ಪ್ರಾಧಿಕಾರ.

೩. **ಕನ್ನಡ ಪ್ರಥಮ ಪ್ರಕಾಶಕರು ಯಾರು ?** (ಲೇಖನ), ಶ್ರೀನಿವಾಸ ಹಾವನೂರ.

೪. **ಮಹಿಸೂರು ಸಂಸ್ಥಾನದ ಚರಿತ್ರೆ,** ಎಂ. ಶಾಮರಾವ್, ೧೯೮೪, ದ್ವಿಮು.

೫. **ಮೈಸೂರು ಕೈಪಿಡಿ,** ೧೯೩೫, (ಮಿಡ್ಲ್ ಸ್ಕೂಲ್ ಪಠ್ಯಗ್ರಂಥ ವಿದ್ಯಾಭ್ಯಾಸ ಇಂಗ್ಲಿಷ್).

೬ **ಮಹಿಶೂರ ಮಹಾರಾಜ ಚರಿತ್ರಂ,** ಅಯ್ಯಶಾಸ್ತ್ರಿ ೧೯೧೬.

೭. **ಮುಮ್ಮಡಿ ಶ್ರೀ ಕೃಷ್ಣರಾಜ ಮಹೀಪಾಲ ವಂಶರತ್ನಾಕರ,** ಎ.ಎನ್. ನಿರಂಜನರಾಜ ಅರಸು, ೧೯೯೩.

೮. **ಬೆಂಗಳೂರಿನ ಇತಿಹಾಸ,** ಬ.ನ. ಸುಂದರರಾವ್, ೨೦೧೦.

೯. **ಕರ್ನಾಟಕ ಪರಂಪರೆ,** (ಸಂಪುಟ ೨), ೧೯೭೦, ಮೈಸೂರು, ಕನ್ನಡ ಸಂಸ್ಕೃತಿ ಇಲಾಖೆ.

೧೦. **ಇತಿಹಾಸ ಪುರಾತತ್ತ್ವ,** (ಕನ್ನಡ ವಿಷಯ ವಿಶ್ವಕೋಶ, ಮೈವಿವಿ).


ಟಿಪ್ಪಣಿ : ಪ್ರಕೃತ ಕಲ್ಲಚ್ಚಿನ ಗ್ರಂಥದಲ್ಲಿರುವ ಕೆಲವು ವಿಷಯಗಳನ್ನಷ್ಟೆ ಪ್ರಸ್ತಾಪಿಸಲಾಗಿದೆ. ಇಲ್ಲಿರುವ ವಿಷಯಗಳು ಉಳಿದ ಮೈಸೂರು ಇತಿಹಾಸದ ಗ್ರಂಥಗಳಲ್ಲಿ ಹೇಗೆ ನಿರೂಪಿತವಾಗಿವೆ ಎಂಬುದನ್ನು ತೌಲನಿಕವಾಗಿ ಅಧ್ಯಯನ ಮಾಡುವ ಅಗತ್ಯವಿದೆ. ಈ ಗ್ರಂಥ ಅಚ್ಚಾದರೆ ಇತಿಹಾಸದ ಅಭ್ಯಾಸಿಗಳಿಗೆ ಉಪಯುಕ್ತ ಮಾಹಿತಿ ಸಿಗುತ್ತದೆ.



೮೭

# ವಸಾಹತುಶಾಹಿ ವ್ಯವಸ್ಥೆಯಲ್ಲಿ ಮೈಸೂರು ಅರಸರ ಬ್ರಿಟೀಷ್ ಅಧಿಕಾರಿಗಳ ವಿಹಾರ ಮತ್ತು ಬೇಟೆ ಒಂದು ಅಧ್ಯಯನ : ೧೭೯೯-೧೯೪೭

ಟಿ.ಎಸ್.ದೇವೇಂದ್ರ

'ಮನರಂಜನೆ ಕಾರ್ಯಕ್ರಮ ಪ್ರಕೃತಿಯಲ್ಲಿ ನಲಿದಾಡುತ್ತಿರುವ ಪ್ರಾಣಿ ಪ್ರಪಂಚವನ್ನು ನೋಡಿ ಆನಂದಿಸುವುದಲ್ಲದೆ, ಅವುಗಳನ್ನು ಬೇಟೆಯಾಡುವುದು ರಾಜಮನೆತನದ ಧೈರ್ಯದ ಸಂಕೇತ, ಭಾರತಕ್ಕೆ ಆಗಮಿಸಿದ ಈಸ್ಟ್ ಇಂಡಿಯಾ ಕಂಪನಿಯ ಬ್ರಿಟೀಷ್ ಅಧಿಕಾರಿಗಳೂ ಸಹ ತಮ್ಮ ಮನರಂಜನೆಗಾಗಿ ಬೇಟೆಯಾಡುತ್ತಿದ್ದರು. ಮೇ ೪, ೧೭೯೯ರಂದು ಮೈಸೂರು ಸಂಸ್ಥಾನ ಬ್ರಿಟೀಷರ ವಶವಾಯಿತು. ಸಂಸ್ಥಾನದ ಭೂಭಾಗಗಳನ್ನು ವಿಭಜಿಸಿಕೊಳ್ಳುವ ಒಪ್ಪಂದಕ್ಕೆ ಸಹಿ ಮಾಡಲಾಯಿತು. ತದ ನಂತರ ಮೈಸೂರು ಸಂಸ್ಥಾನದಲ್ಲಿ ಬ್ರಿಟೀಷ್ ಸರ್ಕಾರದ ಪರೋಕ್ಷ ಆಡಳಿತ ಆರಂಭವಾಯಿತು. ಈ ಆಡಳಿತ ದೇಶೀಯ ಸಂಸ್ಥಾನ ಮಹಾರಾಜರು ನಿರ್ವಹಿಸುತ್ತಿದ್ದರೂ ನಿಯಂತ್ರಣ ಬ್ರಿಟೀಷರ ವಶದಲ್ಲಿದ್ದಿತು. ೧೭೯೯ರ ಒಪ್ಪಂದದ ಎಲ್ಲಾ ಕರಾರುಗಳನ್ನು, ನಿರ್ದೇಶನಗಳನ್ನು ಕಡ್ಡಾಯವಾಗಿ ಅನುಸರಿಸಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು.

ಹಯವಧನರಾವ್‌ರವರು ತಿಳಿಸುವಂತೆ ಮಾರಿಕಸ್ ವೆಲ್ಲೆಸಿರವರು ಕಿರ್ಕಪ್ಯಾಟ್ರಿಕ್ ರವರಿಗೆ ಮೈಸೂರು ಸಂಸ್ಥಾನ ಮತ್ತು ಶ್ರೀರಂಗ ಪಟ್ಟಣವನ್ನು ವಶದಲ್ಲಿರಿಸಿಕೊಳ್ಳಬೇಕಾದರೆ ಸಹಾಯಕ ಸೈನ್ಯ ಪದ್ಧತಿಯ ಒಪ್ಪಂದ ಬಹಳ ಪ್ರಯುಕ್ತವಾದುದ್ದು. ಏಕೆಂದರೆ ಮಹಾರಾಜರು ಮತ್ತು ದಿವಾನರು ಬ್ರಿಟೀಷ್ ಸರ್ಕಾರದ ನಿರ್ದೇಶನಗಳಂತೆ ನಡೆದು ಕೊಳ್ಳಬೇಕಾಗುತ್ತದೆ. ವೆಲ್ಲೆಸ್ಲಿಯ ಮೈಸೂರಿನ ಪ್ರಥಮ ರೆಸಿಡೆಂಟ್ ರಾದ ಬ್ಯಾರಿಕ್ಲೆಸ್‌ರವರಿಗೆ ನಿರ್ದೇಶನವನ್ನು ನೀಡಿ ಬ್ರಿಟೀಷ್ ಸರ್ಕಾರ ಸಿದ್ಧ ಪಡಿಸಿದ ಒಪ್ಪಂದದ ಪ್ರಕಾರ ಮಹಾರಾಜರು ಮತ್ತು ದಿವಾನರು ಬ್ರಿಟೀಷ್ ಸರ್ಕಾರದ ಅಧಿಕಾರಿಗಳಿಗೆ, ಎಲ್ಲಾ ಸೌವಲತ್ತುಗಳನ್ನು ನೀಡಬೇಕು ಹಾಗೂ ಅವರ ಭದ್ರತೆ, ಮನರಂಜನೆ ಮುಂತಾದವುಗಳಿಗೆ ತೊಂದರೆಯಾಗದಂತೆ ಕಾರ್ಯವನ್ನು ನಿರ್ವಹಿಸಬೇಕೆಂದು ನಿರ್ದೇಶನ ನೀಡಲಾಗಿತು. ಸಹಾಯಕ ಸೈನ್ಯ ಒಪ್ಪಂದ ಮತ್ತು ತದ ನಂತರ ಬಂದ ೧೮೮೧ ಮೈಸೂರು ವರ್ಗಾವಣಾ ಒಪ್ಪಂದ ಹಾಗೂ ೧೯೧೩ರ ಮೈಸೂರು ಒಪ್ಪಂದ, ಮುಂತಾದ ಎಲ್ಲಾ ಒಪ್ಪಂದಗಳಲ್ಲೂ ಮೂಲ ಒಪ್ಪಂದದ ಕರಾರುಗಳನ್ನು ದಿಕ್ಕರಿಸದಂತೆ ಕಾರ್ಯವನ್ನು ನಿರ್ವಹಿ ಸಬೇಕೆಂದು ನಿರ್ದೇಶನ ನೀಡಲಾಗಿತ್ತು. ವಾರ್ಷಿಕವಾಗಿ ನೀಡಬೇಕಾಗಿದ್ದ ೨೪ ೧/೨ ಲಕ್ಷ ರೂ.ಗಳನ್ನು ಸಹಾ ಯಾವುದೇ ವ್ಯತ್ಯಾಸವಿಲ್ಲದಂತೆ ನಿರ್ವಹಿಸಬೇಕಾದ ಒತ್ತಾಯ ಮೈಸೂರು ಅರಸರ ಮೇಲಿದ್ದಿತು. ಆದುದರಿಂದ ಬ್ರಿಟೀಷ ಅಧಿಕಾರಿಗಳ ಮನರಂಜನೆಗಳಿಗೆ ಹೆಚ್ಚು ಅವಕಾಶಗಳನ್ನು ಕಲ್ಪಿಸುವ ಉದ್ದೇಶದಿಂದ ಮೈಸೂರು ಪ್ರಾಂತ್ಯದ ಅಭಯಾರಣ್ಯಗಳಲ್ಲಿ ಬೇಟೆಯಾಡುವ, ಅರಣ್ಯಗಳಲ್ಲಿ ವಿಹರಿಸುವ ಎಲ್ಲಾ ಸೌವಲತ್ತುಗಳನ್ನು ಕಲ್ಪಿಸಿಕೊಡಲಾಗುತ್ತಿತ್ತು. ಟಿಪ್ಪುಸುಲ್ತಾನ್ ಸಾವನ್ನಪ್ಪಿದ ನಂತರ ಮೈಸೂರು ಸಂಸ್ಥಾನದಲ್ಲಿ ಆಡಳಿತವನ್ನು ನಡೆಸಿದ ಒಡೆಯರ ವಂಶ ಹಾಗೂ ಮದ್ರಾಸ್ ಪ್ರೆಸಿಡೆನ್ಸಿಯಿಂದ ಯೋಜನೆಗೆ ಒಳಗಾಗಿದ್ದ ಬ್ರಿಟೀಷ್ ರೆಸಿಡೆಂಟರೂ ಸಹ ಬೇಟೆಯಾಡುವ ಮನರಂಜನೆ ಕಾರ್ಯಕ್ರಮಗಳಲ್ಲಿ ಆಗಿಂದಾಗ್ಗೆ ಭಾಗವಹಿಸಿದ್ದರ ಬಗ್ಗೆ ಅಂದಿನ ಆಧಾರಗಳಲ್ಲಿ ಉಲ್ಲೇಖಗಳಿವೆ.[೧] ೧೮೭೦ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಶಿಕಾರಿಗಾಗಿ ಎಲ್ಲಾ ವ್ಯವಸ್ಥೆಯನ್ನು ಮಾಡಿದ್ದರು ಹಾಗೆಯೇ ೧೯೦೯ರಲ್ಲಿ ಮೈಸೂರು ಜಿಲ್ಲೆಯ ಹುಣಸೂರು ಹೆಗ್ಗಡದೇವನ ಕೋಟೆ ಅರಣ್ಯ ಪ್ರದೇಶದಲ್ಲಿ ಹುಲಿ, ಚಿರತೆ ಮುಂತಾದ ಕ್ರೂರ ಮೃಗಗಳನ್ನು ಬೇಟೆಯಾಡುವ ವ್ಯವಸ್ಥೆಯನ್ನು ಕಲ್ಪಿಸಿದ್ದರು.

ರಾಬರ್ಟ್ ಹೆಚ್. ಈಲಿಯೇಟ್ ಇಂಗ್ಲೆಂಡ್ ದೇಶದ ಕಾಫಿ ಬೆಳೆಗಾರ ಮೈಸೂರು ಪ್ರಾಂತ್ಯದಲ್ಲಿ ಅಪಾರವಾದ ಕಾಫಿ ಬೆಳೆಬೆಳೆದ ಅನುಭವವನ್ನು ಹೊಂದಿದ್ದನು. ಅಲ್ಲದೆ ಮೈಸೂರಿನ ಅರಣ್ಯಸಂಪತ್ತಿನ ಬಗ್ಗೆ ವಿಶೇಷ ಅಧ್ಯಯನ

✷ ಅಸೋಸಿಯೇಟ್ ಪ್ರೊಫೆಸರ್, ಬಿ.ಇ.ಎಸ್. ಪದವಿ ಕಾಲೇಜು, ಜಯನಗರ, ಬೆಂಗಳೂರು-೫೬೦೦೧೧.

ಮಾಡಿ "ಗೋಲ್ಡ್ ಸ್ಪೋರ್ಟ್ಸ್ ಮತ್ತು ಕಾಪಿಪ್ಲಾಂಟಿಂಗ್ ಇನ್ ಮೈಸೂರ್"[೨] ಎಂಬ ಪುಸ್ತಕದಲ್ಲಿ ಉತ್ತರ ಕೆನರಾದ ಗೆಜೆಟ್‌ನಲ್ಲಿ ಹೆಸರಿಸಲಾಗಿದ್ದ ಲೇಟ್ ಕಲೋನಿಲ್ ಡಬ್ಲೂ ಪೇತಾನ್, ಒಂದು ಬಣದ ಕ್ರೂರ ಮೃಗಗಳ ಬಗ್ಗೆ ತಿಳಿಸುತ್ತಾ, ೨೨ ವರ್ಷಗಳಲ್ಲಿ ಉತ್ತರ ಕರ್ನಾಟಕದ ಭಾಗಗಳಲ್ಲಿ ೧೮೭೭ರ ಹೊತ್ತಿಗೆ ೫೧೧ ಹುಲಿಗಳನ್ನು ಕೊಲ್ಲಲಾಯಿತು. ಸದರಿ ಕ್ರೂರಮೃಗಗಳಿಂದ ೪೪ ಜನರು ಸಾವನ್ನಪ್ಪಿದರು. ಲೆಫ್ಟಿನೆಂಟ್ ಪವರ ಮದ್ರಾಸ್ ರೆಜಿಮೆಂಟಿನಲ್ಲಿ ೩೫ನೇ ತುಕಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದವರ ಪ್ರಕಾರ ೧೮೫೬ ಮತ್ತು ೧೮೮೭ರಲ್ಲಿ ೫೧ ಕರಡಿಗಳ ೨೨ ಜನರನ್ನು ಸಾಯಿಸಿದವು. ಅದರಲ್ಲಿ ಲಾರ್ಡ್ ಎಡ್ವರ್ಡ್ ಪೆರ್ಸಿಸೆಂಟ್ ಮೌರಿ. ಡ್ಯೂಕರ್ ಎರಡನೇ ಮಗನಾಗಿದ್ದನು. ೧೮೫೬ರಿಂದ ೧೮೭೭ರವರೆಗೆ ೮೧೫ ಪ್ಯಾಂಥರ್‌ಗಳನ್ನು ಕೊಲ್ಲಲಾಯಿತು.

ಹೀಗೆ ಕ್ರೂರ ಮೃಗಗಳು ಸಾರ್ವಜನಿಕರಿಗೆ ತೊಂದರೆ ಉಂಟು ಮಾಡುತ್ತಿದ್ದುದ್ದರಿಂದ ಬೇಟೆಯಾಡಲು ಸರ್ಕಾರ ಅಪ್ಪಣೆಯನ್ನು ನೀಡಿತ್ತು ಎಂಬುದಾಗಿ ಹಾಗೂ ಕ್ರೂರ ಮೃಗಗಳನ್ನು ಬೇಟೆಯಾಡಲು ಮೈಸೂರು ಪ್ರಾಂತ್ಯದಲ್ಲಿ ಅನುಸರಿಸುತ್ತಿದ್ದ ವಿಧಾನಗಳನ್ನು ಚರ್ಚಿಸಿದ್ದಾರೆ. ಈಲಿಯೇಟ್‌ರವರ ಪ್ರಕಾರ ಪಶ್ಚಿಮ ಘಟ್ಟ ಪ್ರದೇಶಗಳು ಹಾಗೂ ಮೈಸೂರು ಪ್ರಾಂತ್ಯದಲ್ಲಿ ಅಭಯಾರಣ್ಯವಿದ್ದು ರಾಜವಂಶಗಳು ಯುರೋಪಿನ ಅಧಿಕಾರಿಗಳು ತಮ್ಮ ಬಿಡುವಿನ ಸಮಯಗಳಲ್ಲಿ ಬೇಟೆಯಾಡುವ ಮನರಂಜನೆ ಕಾರ್ಯಕ್ರಮಗಳಿಗೆ ತೆರಳುತ್ತಿದ್ದರು. ಅದಕ್ಕಾಗಿ ಬೇಕಾಗಬಹುದಾದ ಎಲ್ಲಾ ಸವಲತ್ತುಗಳನ್ನು ಸರ್ಕಾರ ಒದಗಿಸುತ್ತಿತ್ತು.

೧೮೯೧ರಲ್ಲಿ ಸರ್ಕಾರದ ಸಮಿತಿ ಶಿಫಾರಸ್ಸು ಮಾಡಿದ ಕಾಯ್ದಿಟ್ಟ ಅರಣ್ಯ ಪ್ರದೇಶಗಳು ಈ ಕೆಳಕಂಡಂತಿವೆ.

| ಕ್ರಮ.ಸಂಖ್ಯೆ | ಕಾಯ್ದಿಟ್ಟ ಅರಣ್ಯ ಪ್ರದೇಶ | ಅರಣ್ಯ ಪ್ರದೇಶದ ಹೆಸರು | ಜಿಲ್ಲೆ | ವಿಸ್ತೀರ್ಣ ಮೈಲಿಗಳಲ್ಲಿ | ಉಸ್ತುವಾರಿ ಜವಾನರು | ಸಲಹೆ |
|---|---|---|---|---|---|---|
| ೧. | ೯,೪೦,೪೧,೪೨,೪೪,೪೫ | ಕಾಕನಕೋಟೆ | ಮೈಸೂರು | ೫೫ | ೨ | |
| ೨. | ೮,೧೦,೪೩ | ಬೇಗೂರು | ಮೈಸೂರು | ೪೨ | ೨ | |
| ೩. | ೫೦ | ಬೇರಂಬಡಿ | ಮೈಸೂರು | ೧೦ ೧/೨ | ೪ | |
| ೪. | ೧೪,೫೫ | ಚಾಮರಾಜ ನಗರ | ಮೈಸೂರು | ೯೮ ೧/೨ | ೪ | |
| ೫. | ೧ | ಹಿರಿಕಾಲ ಗುಡ್ಡೆ | ಹಾಸನ | ೨೭ ೧/೨ | ೧ | |
| ೬. | ೧ | ಲಕ್ಕವಳ್ಳಿ | ಕಡೂರು | ೪೮ | ೨ | |
| ೭. | ೩.೪ | ತೇಗೂರು ಗುಡ್ಡ | ಕಡೂರು | ೯ | ೧ | |
| ೮. | ೨ | ಮುತ್ತುಡಿ | ಕಡೂರು | ೧೫ ೧/೨ | ೧ | |
| ೯. | ೨೩,೨೬ | ಸಕ್ಕರೆ ಬಯಲು | ಶಿವಮೊಗ್ಗ | ೧೫ | ೧ | |
| ಒಟ್ಟು | | | | ೪೦೩ | ೧೮ | |

| ಕ್ರಮ.ಸಂಖ್ಯೆ | ಅಧಿಕಾರಿಗಳು | ಒಟ್ಟು ಜನ | | ಪ್ರತಿಯೊಬ್ಬರಿಗೆ ಮಾಡುತ್ತಿದ್ದ ವೆಚ್ಚ ೧೨ ತಿಂಗಳಿಗೆ |
|---|---|---|---|---|
| ೧. | ಕಛೇರಿ ವೆಚ್ಚ | ೧ | ರೂ.೪೦೦ | ೪೮೦೦.೦ |
| ೨. | ಕಾರ್ಕೂನರಿಗೆ | ೧ | ರೂ. ೨೫ | ೩೦೦.೦೦ |
| ೩. | ಜವಾನರಿಗೆ | ೮ | ರೂ.೮ | ೭೬೮.೦೦ |
| ೪. | ಕಲಾಸಿ | ೧ | ರೂ.೮ | ೯೬.೦೦ |
| ೫. | ವಾಚರ್‌ಗಳು | ೧೮ | ರೂ.೧೦ | ೨೧೬೦.೦೦ |
| | | | ಒಟ್ಟು | ೮,೦೨೪.೦೦ |

ವಸಾಹತುಶಾಹಿ ವ್ಯವಸ್ಥೆ ಭಾರತವನ್ನು ಪ್ರವೇಶಿಸಿದ ನಂತರ ಮೈಸೂರು ಸಂಸ್ಥಾನ ಬ್ರಿಟೀಷರ ವಶವಾಯಿತು. ಬ್ರಿಟೀಷ ಆಡಳಿತ ವ್ಯವಸ್ಥೆಯು ಪ್ರತ್ಯಕ್ಷ ಹಾಗೂ ಪರೋಕ್ಷ ಆಡಳಿತದಲ್ಲಿ ಮೈಸೂರಿನ ಸ್ವಾಭಾವಿಕ ಸಂಪನ್ಮೂಲಗಳನ್ನು ಹಾಗೂ ಆಡಳಿತವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸುವ ಪ್ರಯತ್ನವನ್ನು ಬ್ರಿಟೀಷ ರೆಸಿಡೆಂಟರುಗಳು ನಿರ್ವಹಿಸಿದರು. ಯುರೋಪಿನ ಮಿಲಿಟರಿ ಅಧಿಕಾರಿಗಳು ಅಥಿತಿಗಳು ಮೈಸೂರು ಸಂಸ್ಥಾನವನ್ನು ಪ್ರವೇಶಿಸಿದ ನಂತರ ೧೮೮೧ರ ಅಧಿಕಾರ ವರ್ಗಾವಣೆ ಒಪ್ಪಂದದ ಪ್ರಕಾರ ಮಹಾರಾಜರು ಘನ ಬ್ರಿಟೀಷ್ ಸರ್ಕಾರದ ನಿರ್ದೇಶನಗಳನ್ನು ಜಾರಿಗೆ ತರಬೇಕಾಗಿತ್ತು. ಆದುದರಿಂದಲೇ ಬ್ರಿಟೀಷರ ಮನರಂಜನೆಗಾಗಿ ಮೈಸೂರಿನ ಅಭಯಾರಣ್ಯದಲ್ಲಿ ಬೇಟೆಯಾಡಲು ಪ್ರತ್ಯೇಕವಾದ ಕಾಯ್ದಿಟ್ಟ ಅರಣ್ಯವನ್ನು ನಿಗದಿ ಪಡಿಸಲಾಯಿತು. ಅಲ್ಲದೆ ಅವರಿಗೆ ಬೇಕಾಗಬಹುದಾದ ಸಕಲ ಸವಲತ್ತುಗಳನ್ನು ಒದಗಿಸಿಕೊಡಲಾಗುತ್ತಿತ್ತು.[೪]

೧೯೦೧ ಏಪ್ರಿಲ್ ೮ರಂದು ಮೈಸೂರು ಸರ್ಕಾರ ಗೇಮ್ ಮತ್ತು ಫಿಷಿಂಗ್ ಪ್ರಿಸರ್‌ವೇಷನ್ ರೆಗ್ಯುಲೇಷನ್ ಎಂಬ ಕಾಯಿದೆಯನ್ನು ಜಾರಿಗೆ ತಂದಿತು. ಈ ಕಾಯಿದೆಯ ಪ್ರಕಾರ ಕ್ರೂರಮೃಗಗಳನ್ನು ಮತ್ತು ಹಕ್ಕಿಗಳನ್ನು, ಮನರಂಜನೆಗಾಗಿ ಮೀನು ಹಿಡಿಯುವುದನ್ನು ನಿಯಂತ್ರಣ ದಲ್ಲಿಡಲು ಹಲವಾರು ನಿಯಮಗಳನ್ನು ರೂಪಿಸಿತು. ಮಹಾರಾಣಿಯವರು ಬಾಲಕ ಮಹಾರಾಜರ ಪರವಾಗಿ ಜಾರಿಗೆ ತರಲಾಗಿದ್ದ ಅಂಶಗಳಿಗೆ ಒಪ್ಪಿಗೆ ನೀಡಿದರು. ಸ್ಥಳೀಯ ಪ್ರದೇಶಗಳನ್ನು ಗುರುತು ಹಚ್ಚಿ ಕಾಯ್ದಿಟ್ಟ ಅಭಯಾರಣ್ಯವನ್ನು ನಿರ್ಧರಿಸಲಾಯಿತು. ಮನರಂಜನೆಯ ಆಟ ಹೇಗಿರುತ್ತದೆಂದು ಕಾಯ್ದೆಯಲ್ಲಿ ನಿರ್ದೇಶನ ನೀಡಲಾಯಿತು. ಈ ಎಲ್ಲಾ ಅಂಶಗಳನ್ನು ಮೈಸೂರು ಸರ್ಕಾರದ ರಾಜ ಪತ್ರದಲ್ಲಿ ಮುದ್ರಿಸಲಾಗಿತ್ತು. ಮಹಾರಾಜರು ಮತ್ತು ಬ್ರಿಟೀಷ ಅಧಿಕಾರಿಗಳು ಬೇಟೆಯಾಡಬಹುದಾದ ಹಲವು ಪ್ರಾಣಿಗಳ ಬಗ್ಗೆ ಪೂರ್ಣವಾದ ಮಾಹಿತಿಯನ್ನು ಸರ್ಕಾರಕ್ಕೆ ನೀಡಿತ್ತು. ಈ ಕಾಯಿದೆಯ ಉಲ್ಲಂಘನೆಗೆ ಸಂಬಂಧಿಸಿದಂತೆ ಪ್ರತಿ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಪೂರ್ಣ ಜವಾಬ್ದಾರಿಯನ್ನು ಸರ್ಕಾರ ನೀಡಿತ್ತು. ಉದ್ದೇಶಿತ ಬೇಟೆ ಯಾಡುವ ಕಾರ್ಯಕ್ರಮಕ್ಕಾಗಿ ಹಲವು ಭಾಗಗಳಲ್ಲಿರುವ ಅಭಯಾರಣ್ಯವನ್ನು ಸರ್ಕಾರ ಕಾಯ್ದಿರಿಸಿತು.[೫]

ಮೈಸೂರು ಸರ್ಕಾರ ಈ ಕಾಯಿದೆಯನ್ವಯ ಸರ್ಕಾರದ ಪರವಾನಗಿ ಇಲ್ಲದೆ ಬೇಟೆಯಾಡುವುದನ್ನು ನಿರ್ಬಂಧಿಸಲಾಯಿತು. ಪ್ರತಿ ಜಿಲ್ಲೆಗೆ ಸೇರಿದ ಜಿಲ್ಲಾ ದಂಡಾಧಿಕಾರಿಯವರಿಗೆ ಪರವಾನಗಿ ಸಂಬಂಧಿಸಿದಂತೆ ಪೂರ್ಣ ಅಧಿಕಾರವನ್ನು ನೀಡಲಾಯಿತು. ಮೈಸೂರಿನ ಕಾಕನಕೋಟೆ, ಬೇಗೂರು ಮತ್ತು ಬೆರಂಬಾಡಿ ಹಾಗೂ ಮೈಸೂರು ಜಿಲ್ಲೆಯ ಚಾಮರಾಜನಗರ, ಹಾಸನ ಜಿಲ್ಲೆಯ ರಿಕಾಲಗುಡ್ಡ, ಕಡೂರು ಜಿಲ್ಲೆಯ ತೇಗೂರುಗುಡ್ಡ ಶಿವಮೊಗ್ಗಜಿಲ್ಲೆಯ ಸಕ್ಕರೆಬಯಲು ಮುಂತಾದ ಪ್ರದೇಶಗಳನ್ನು ಗೇಮ್ ರಿಸರ್ವ್ ಕಾಯಿದಿಟ್ಟ ಅರಣ್ಯ ಎಂಬುದಾಗಿ ಘೋಷಿಸಿದರು. ೧೯೦೪ರಲ್ಲಿ ಗೇಮ್ ರಿಸರ್ವ್ ಎಂಬ ಅಭಯಾರಣ್ಯವನ್ನು ನೋಡಿಕೊಳ್ಳುವ ಉಸ್ತುವಾರಿ ಅಧಿಕಾರಿಗಳನ್ನು ನೇಮಕ ಮಾಡಿದರು. ಪ್ರತಿ ವರ್ಷ ೧೧,೦೦೦/- ರೂ.ಗಳನ್ನು ಅದರ ವೆಚ್ಚಕ್ಕಾಗಿ ನಿಗದಿ ಪಡಿಸಿದನು. ಅಲ್ಲದೆ ಒಂದು ಪ್ರತ್ಯೇಕ ಇಲಾಖೆಯನ್ನು ಸೃಷ್ಠಿಸಿ ಅದಕ್ಕೆ ಬೇಕಾದ ಎಲ್ಲಾ ಮಾನವ ಸಂಪನ್ಮೂಲವನ್ನು ಒದಗಿಸಿದನು.[೬]

ಕಬಿನಿ ನದಿಯ ದಡದ ಮೇಲಿರುವ ಕಾಕನಕೋಟೆ ಅರಣ್ಯ ಪ್ರದೇಶದಲ್ಲಿ ಆನೆಗಳನ್ನು ಹಿಡಿಯುವ 'ಖೆಡ್ಡಾ' ಎಂಬ ಯೋಜನೆಯನ್ನು ರೂಪಿಸಿದರು. ೧೯೨೨-೨೩ರಂದು ಇದರಿಂದ ಭಯಕ್ಕೊಳಗಾದ ಆನೆಗಳು ಕೊಡಗು ಮತ್ತು ಮಲಿಬಾರ ಅರಣ್ಯ ಪ್ರದೇಶಗಳಿಗೆ ಪಲಾಯನ ಮಾಡಿದವು. ೧೯೪೦ರಲ್ಲಿ ಕಾಕನಕೋಟೆಯ ಬಳಿ ಖೆಡ್ಡಾ ಯೋಜನೆಯನ್ನು ಮಹಾರಾಜರು ಶಾಶ್ವತಗೊಳಿಸಲು ೨೦-೦೨-೧೯೩೦ ರಂದು ಮೈಸೂರು ಸರ್ಕಾರ ಒಂದು ವಿಶೇಷವಾದ ಆಜ್ಞೆಯನ್ನು ಹೊರಡಿಸಿ ಇಂಗ್ಲೆಂಡಿನ ಬ್ರಿಟೀಷ ಮ್ಯೂಜಿಯಂಗೆ ಕ್ರೂರ ಮೃಗಗಳ ಮೂಳೆ ಚರ್ಮಗಳ ಅವಶ್ಯಕತೆ ಇದೆ, ಅದನ್ನು ಪೂರೈಸುವಂತೆ ಅಂದಿನ ಮೈಸೂರು ರೆಸಿಡೆಂಟರು ಆಜ್ಞಾಪಿಸಿರುವುದನ್ನು ತಿಳಿಸಿದರು. ಮೈಸೂರಿನ ಸ್ವಾಭಾವಿಕ ಇತಿಹಾಸ ಇಲಾಖೆಯ ವಿಭಾಗದಲ್ಲಿ ಲಭ್ಯವಿರುವ ಈ ಮೇಲ್ಕಂಡ ವಸ್ತುಗಳನ್ನು ಅತಿ ಜಾಗರೂಕರಾಗಿ ತಲುಪಿಸಲು ನಿರ್ದೇಶಿಸಿದ್ದರು. ಶಿಕಾರಿ ಆಡುತ್ತಿದ್ದ ಬೇಟೆಗಾರರಿಗೂ ತಮಗೆ ಅಲಭ್ಯವಾದ ಕ್ರೂರ ಮೃಗಗಳ ಮತ್ತು ಆನೆಯ ಚರ್ಮ, ದಂತ, ಮೂಳೆಗಳು ಮುಂತಾದುವುಗಳನ್ನು ಪೂರೈಸುವಂತೆ ಮೈಸೂರು ಸರ್ಕಾರ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಸಾರ್ವಜನಿಕರಿಗೆ ತಿಳಿಸಿತು.[೭] ಈ ಆಜ್ಞೆಯ ಅನ್ವಯ ಮೈಸೂರು ಪ್ರಾಂತ್ಯದ ಅರಣ್ಯ ಪ್ರದೇಶಗಳಲ್ಲಿ ಹಲವಾರು ಪ್ರಾಣಿಗಳನ್ನು ಬೇಟೆ ಆಡಲಾಯಿತು. ಅಲ್ಲದೆ ಈ ಆಜ್ಞೆಯನ್ನು ದುರ್ಬಳಕೆ ಮಾಡಿಕೊಂಡ ಎಷ್ಟೋ ನಿದರ್ಶನಗಳ ಬಗ್ಗೆ ವರದಿಗಳಾಗಿವೆ. ಶಸ್ತ್ರಾಸ್ತ್ರಗಳನ್ನು ಬಳಸುವಾಗ ತಮ್ಮ ಸ್ವಂತ ಭದ್ರತೆಗೆ ತೊಂದರೆ ಉಂಟಾದರೆ ಮಾತ್ರ ಈ ಕಾಯಿದೆಯನ್ನು ಉಪಯೋಗಿಸಿ ಕೊಳ್ಳಬಹುದಾಗಿತ್ತು. ಮೈಸೂರು ರಾಜವಂಶದ ಸದಸ್ಯರು ಬೇಟೆಯಾಡಲು ಅರಣ್ಯವನ್ನು ಪ್ರವೇಶಿಸಿದಾಗ ಆ ಕುಟುಂಬಕ್ಕೆ ಸಂಪೂರ್ಣವಾದ ಭದ್ರತೆಯನ್ನು ಒದಗಿಸಲಾಗುತ್ತಿತ್ತು.

ಜನವರಿ ೨೦ನೇ ತಾರೀಖು ೧೯೩೨ರಂದು ಯುರೋಪಿನ ಅತಿಥಿಗಳು "ಷೂಟಿಂಗ್ ಟ್ರಿಪ್"ಗಾಗಿ ಮೈಸೂರು ಪ್ರಾಂತ್ಯಕ್ಕೆ ಆಗಮಿಸಿದರು. ಬಂದ ಅಥಿತಿಗಳಿಗೆ ಎಲ್ಲಾ ಸವಲತ್ತುಗಳನ್ನು ಒದಗಿಸಲು ಮಹಾರಾಜರು ಆದೇಶಿಸಿದ್ದರು. ಮೈಸೂರು ಸಂಸ್ಥಾನದಲ್ಲಿ ಬೇಟೆಯಾಡುವುದು ಒಂದು ರಾಜಮನೆತನದ ಪ್ರಮುಖವಾದ ಆಟವಾಗಿತ್ತು. ಶಿಕಾರಿ ಹೋಗುವುದು ಷೂಟಿಂಗ್ ಕ್ಯಾಂಪ್‌ಗಳಲ್ಲಿ ಭಾಗವಹಿಸುವುದು ಮತ್ತು ಅದಕ್ಕೆ ಸಂಬಂಧಿಸಿದಂತೆ ಕಾಲಕಾಲಕ್ಕೆ ತಕ್ಕಂತೆ ಮಹಾರಾಜರು ಆದೇಶಗಳನ್ನು ಹೊರಡಿಸುತ್ತಿದ್ದರು. ವೈಸ್‌ರಾಯಗಳು ಗೌವನರ್ ಜನರಲ್‌ಗಳು, ಪ್ರೆಸಿಡೆನ್ಸಿಯ ಗೌವನರ್‌ಗಳು. ರೆಸಿಡೆಂಟರು ಮುಂತಾದ ಅಥಿತಿಗಳಿಗೆ ಎಲ್ಲಾ ಸವಲತ್ತುಗಳನ್ನು ಕಲ್ಪಿಸುವ ವ್ಯವಸ್ಥೆಯನ್ನು ಮಹಾರಾಜರು ಮಾಡುತ್ತಿದ್ದರು.[೯] ಡಿಸೆಂಬರ್ ೧ನೇ ತಾರೀಖು ೧೯೩೬ರಂದು ಬ್ರಿಟೀಷ್ ಅಧಿಕಾರಿ ಮೇಜರ್ ಗ್ರಟನ್ ಬಂಡೀಪುರ ಗೇವರ್ ರಿಝರ್ವ್ ಅರಣ್ಯಕ್ಕೆ ಬೇಟಿ ನೀಡಿ ಮೂರು ದಿವಸಗಳು ಅಲ್ಲಿ ನೆಲೆಸಿದ್ದರು. ಮೇಜರ್‌ರವರು ಈ ಬಾಗದಲ್ಲಿ ಹಲವಾರು ಪ್ರಾಣಿಗಳನ್ನು ಬೇಟೆಯಾಡಿದರು. ೨೫-೦೫-೧೯೩೬ರಲ್ಲಿ ಮಹಾರಾಜರ ಆಪ್ತಕಾರ್ಯದರ್ಶಿ ಯವರಾದ ಎಸ್.ಎಸ್. ಗಾನ್‌ತಯೋಟಿ ಎಂಬುವರು ಅರಣ್ಯ ಅಧಿಕಾರಿಗಳಿಗೆ ಪತ್ರವನ್ನು ಬರೆದು ಮಹಾರಾಜ ಸಾಹೇಬರು ಕಾಡು ಎಮ್ಮೆಗಳನ್ನು ಬೇಟೆಯಾಡಲು ಬಂಡೀಪುರ ಅರಣ್ಯಕ್ಕೆ ಬರುತ್ತಿದ್ದು ಅವರ ಹುಟ್ಟುಹಬ್ಬದ ಪ್ರಯುಕ್ತ ನಡೆಸುವ ಶಿಕಾರಿಗೆ ತಗಲುವ ಎಲ್ಲಾ ವೆಚ್ಚವನ್ನು ಅರಮನೆ ಭರಿಸುತ್ತದೆ. ಇದಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಯನ್ನು ಮಾಡಬೇಕೆಂದು ತಿಳಿಸಿದರು. ಅವರು ಅಂದು ಅರಣ್ಯದಲ್ಲೆ ತಂಗಲಿದ್ದು ಬಂಡೀಪುರದ ವಿದ್ಯುತ್‌ಶಕ್ತಿ ಸ್ಥಾವರದ ವಿಶ್ರಾಂತಿ ಧಾಮದಲ್ಲಿ ವಿದ್ಯುತ್ ಕೊರತೆ ಉಂಟಾಗ ದಂತೆ ನೋಡಿಕೊಳ್ಳಬೇಕೆಂದು ತಿಳಿಸಿದರು.[೧೦]

ಅರಣ್ಯ ಪ್ರದೇಶದ ಸುತ್ತಮುತ್ತಲೂ ಆನೆಗಳ ದಾಳಿ ಹೆಚ್ಚಾಗಿತ್ತು. ಬಂಡೀಪುರ, ಬಿಳಿಗಿರಿರಂಗನಬೆಟ್ಟ ಮುಂತಾದ ಅಭಯಾರಣ್ಯಗಳಲ್ಲಿ ವಾಸಿಸುತ್ತಿದ್ದ ಪ್ರಾಣಿಗಳಿಂದ ನಾಗರೀಕರು ಅಪಾರ ಹಾನಿಯನ್ನು ಅನುಭವಿಸುತ್ತಿದ್ದರು. ೧೯೩೨ರಲ್ಲಿ ಪ್ಲಾಂಟೇಷನ್‌ನಲ್ಲಿ ದುಡಿಯುತ್ತಿದ್ದ ಕೂಲಿ ಜನರು ಸಾವನ್ನಪ್ಪಿದರು. ಹೀಗೆ ಮೈಸೂರು ಪ್ರಾಂತ್ಯದಾದ್ಯಂತ ಹಲವಾರು ಘಟನೆಗಳು ನಡೆದವು. ಇದನ್ನು ಕಂಡ ಮೈಸೂರು ರೆಸಿಡೆಂಟರು ಮತ್ತು ಮಹಾರಾಜರು ತಮ್ಮ ಸ್ವಂತ ರಕ್ಷಣೆಗಾಗಿ ಆನೆಗಳನ್ನು ಬೇಟೆಯಾಡುವ ಪರವಾನಗಿ ನೀಡಿದರು. ಅಲ್ಲದೆ ಜನವರಿ ೩೦, ೧೯೩೪ರಂದು ಹೌಸ್‌ದಾರ್ ಕಾರ್ಯದರ್ಶಿಯವರು ಒಂದು ಆಜ್ಞೆಯನ್ನು ಹೊರಡಿಸಿ ಸತ್ತಂತಹ ಆನೆಯ ದಂತಗಳನ್ನು ಮೈಸೂರು ಸರ್ಕಾರಕ್ಕೆ ಒಪ್ಪಿಸಬೇಕು. ದಂತಗಳನ್ನು ಅರಮನೆಯ ಬಾಗಿಲುಗಳನ್ನು ಚಿತ್ರಕರಿಸುವ ತೀರ್ಮಾನ ತೆಗೆದುಕೊಂಡರು. ಅರಮನೆಯ ಗೊಂಬೆ ತೊಟ್ಟಿಲು ಎರಡು ಬಾಗಿಲುಗಳನ್ನು ೧೯೩೪ರಂದು ಮಾರಮತ್ ಇಲಾಖೆಯು ಆನೆಯ ದಂತಗಳಿಂದ ಶೃಂಗರಿಸಿತು. ಇದೇ ಸಂದರ್ಭದಲ್ಲಿ ಅಭಯಾರಣ್ಯದ ಪ್ರದೇಶಗಳಲ್ಲಿ ಅಲಭ್ಯವಿರುವ ಕ್ರೂರ ಪ್ರಾಣಿಗಳನ್ನು ಸೆರೆ ಹಿಡಿದು ಮೈಸೂರಿನ ಪ್ರಾಣಿಸಂಗ್ರಾಲಯಕ್ಕೆ ಒಪ್ಪಿಸುವ ಆಗ್ನೇಯನ್ನು ಹೊರಡಿಸಿದರು. ೨೩-೦೨-೧೯೫೩. ಕೀಲಿ ಕಛೇರಿಯ ಭಕ್ಷಿಯವರು ತಿಳಿಸುವಂತೆ ಲಂಬಾಣಿ ಕುಟುಂಬ ದವರು ಹುಲಿ ಮರಿಯನ್ನು ಸಂಗ್ರಹಿಸಿ ಪ್ರಾಣಿ ಸಂಗ್ರಾಲಯಕ್ಕೆ ಒಪ್ಪಿಸಲಾಯಿತು.[೧೧]

## ಬೇಟೆಯಾಡಲು ವಿಧಿಸಿಲಾಗಿದ್ದ ನಿರ್ಬಂಧಗಳು

ಮೈಸೂರು ಸಂಸ್ಥಾನ ಕ್ರೂರ ಮೃಗಗಳನ್ನು ಬೇಟೆಯಾಡುವ ಆಟಕ್ಕೆ ಸಂಬಂಧಿಸಿದಂತೆ ೧೯೩೧ ಜುಲೈ ೬ರಂದು ಕಾನೂನನ್ನು ರಚಿಸಿದರು. ಈ ಕಾನೂನಿನನ್ವಯ.

ಎ) ಸರ್ಕಾರದ ಅಪ್ಪಣೆ ಇಲ್ಲದೆ ಬೇಟೆಯಾಡುವುದನ್ನು ನಿರ್ಬಂಧಿಸಲಾಯಿತು.

ಬಿ) ಪರವಾನಗಿ ಇಲ್ಲದೆ ಯಾವುದೇ ಕ್ರೂರ ಮೃಗವನ್ನು ಬೇಟೆಯಾಡುವುದು, ಅಥವಾ ಸಾಯಿಸುವುದು ಕಾನೂನಿನ ಪ್ರಕಾರ ಅವಕಾಶವಿಲ್ಲ. ಕ್ರೂರ ಮೃಗಗಳು ನಗರ ಪ್ರದೇಶಗಳಲ್ಲಿ ಕಂಡಾಗ, ಪರವಾನಗಿ ಇಲ್ಲದಿದ್ದರೂ ಬೇಟೆಯಾಡಬಹುದು. ಅಲ್ಲದೆ ಆಗಿಂದಾಗ್ಗೆ ಅರಣ್ಯ ಅಧಿಕಾರಿಗಳು ತೆಗೆದುಕೊಳ್ಳುವ ತೀರ್ಮಾನಗಳಂತೆ, ಬೇಟೆಯಾಡಬಹುದು.

ಸಿ) ಜೂನ್ ೩೦. ೧೯೩೫ಕ್ಕಿಂತ ಮುಂಚೆ, ವಿಶೇಷ ಅಪ್ಪಣೆ ಇಲ್ಲದೆ ಬೇಟೆಯಾಡುವುದನ್ನು ನಿಷೇಧಿಸಲಾಗಿತ್ತು. ಸರ್ಕಾರವು ಬೇಟೆಯಾಡಲು ಬೇಕಾಗಬಹುದಾದ ಸಲಕರಣೆಗಳನ್ನು ನಿಷೇಧಿಸಿತು.

ಡಿ) ಮೈಸೂರು ಸರ್ಕಾರದ ನಿರ್ದೇಶನದಂತೆ ಸರ್ಕಾರದ ಆಜ್ಞೆಗಳನ್ನು ಉಲ್ಲಂಘಿಸಿದವರ ವಿರುದ್ಧ ಕಾನೂನಿನ ಪ್ರಕಾರ ಕ್ರಮ ಕೈಗೊಳ್ಳುವುದು ಹಾಗೂ ಕಾರಾಗೃಹಕ್ಕೆ ಕಳುಹಿಸಲಾಗುವುದು ಎಂದು ನಿರ್ದೇಶನ ನೀಡಿತ್ತು.[೧೨]

೧೯೩೨ ಸೆಪ್ಟೆಂಬರ್ ೨೬ರಂದು ಮೈಸೂರು ಸಂಸ್ಥಾನದ ಪರಿವೀಕ್ಷಣಾ(ಶೋಧನಾ) ಸಮಿತಿ. ಈ ಸಮಿತಿಯ ಮನರಂಜನೆಗಾಗಿ ಮಹಾರಾಜರ ಕುಟುಂಬದಿಂದ ವೆಚ್ಚವಾದ ಹಣ ಎಷ್ಟು. ಯುರೋಪಿನ ಅಧಿಕಾರಿಗಳು ಮನರಂಜನೆಗಾಗಿ ಖರ್ಚುಮಾಡಿದ ಹಣಎಷ್ಟು, ಮತ್ತು ಇತರೆ ಬಾಬ್ತುಗಳ ಬಗ್ಗೆ ಸಂಪೂರ್ಣವಾಗಿ ಶೋದನೆ ಮಾಡಿ ಅರಮನೆ ಲೆಕ್ಕಪತ್ರ ಇಲಾಖೆಗೆ ವರದಿಯನ್ನು ಸಲ್ಲಿಸಿತು. ಯುರೋಪಿನ ವೀಕ್ಷಕರು ಮತ್ತು ಅಧಿಕಾರಿಗಳು ಬೇಟೆಯಾಡಲು ಬಂದಿದ್ದಾಗ, ಅರಣ್ಯ

ಪ್ರದೇಶದಲ್ಲಿ ಬೆಲೆ ಬಾಳುವ ವಸ್ತುಗಳು ಕಳ್ಳತನವಾಗುತ್ತಿದೆ. ಹಾಗೂ ಇದನ್ನು ಹತೋಟಿಗೆ ತರಲು ಯಾವುದೇ ಅಧಿಕಾರಿಯು ಆಸಕ್ತಿವಹಿಸುತ್ತಿಲ್ಲ. ಪರಜೀಸ್ ಎಂಬ ಗುಂಪು ಸತತವಾಗಿ ಅರಣ್ಯದಲ್ಲಿ ಓಡಾಡಿ ಈ ಕೆಲಸ ಮಾಡುತ್ತಿದೆ. ಅಲ್ಲದೆ ಹಲವು ಹಕ್ಕಿಗಳನ್ನು ಹಿಡಿದು ಮೈಸೂರಿನ ಅಕ್ಕಪಕ್ಕದಲ್ಲಿ ಮತ್ತು ನಗರದಲ್ಲಿ ಮಾರಾಟ ಮಾಡುತ್ತಿದ್ದಾರೆ. ಇದರ ಬಗ್ಗೆ ಕಾನೂನಿನ ಪ್ರಕಾರ ಶಿಸ್ತಿನ ಕ್ರಮ ಕೈಗೊಳ್ಳಬೇಕೆಂದು ತಿಳಿಸಿದರು.[೨] ಮೈಸೂರು ಸಂಸ್ಥಾನದಲ್ಲಿ ಕಾನೂನು ವ್ಯವಸ್ಥೆ ಸುಗಮವಾಗಿದ್ದರೂ ಕ್ರೂರ ಮೃಗಗಳ ಬೇಟೆಯಾಡುವ, ಮನರಂಜನಾ ಕಾರ್ಯಕ್ರಮ ಕಾನೂನಿನ ವಿರುದ್ಧವಾಗಿ ನಡೆಯುತ್ತಲಿತ್ತು ೧೯೩೫ ಜನವರಿ ೧೧ರಂದು ಹೌಸ್ ದಾರ್ ಕಾರ್ಯದರ್ಶಿಯವರು ಸರ್ಕಾರಕ್ಕೆ ಪತ್ರವನ್ನು ಬರೆದು ಕಾನೂನು ಉಲ್ಲಂಘನೆಯಾದ ಬಗ್ಗೆ ತಿಳಿಸುತ್ತಾ ೨೨೦/– ರೂ.ಗಳನ್ನು ದಂಡದ ರೂಪದಲ್ಲಿ ಸಂಗ್ರಹಿಸಲಾಗಿದೆ. ಎಂದು ತಿಳಿಸಿದರು. ಈ ಸಂಗ್ರಹಿಸಿದ ಮೊತ್ತವನ್ನು ಸರ್ಕಾರಿ ಖಜಾನೆಗೆ ಜಮೆ ಮಾಡುತ್ತಿದ್ದರು.

ಮೈಸೂರು ಸಂಸ್ಥಾನವನ್ನು ಆಳುತ್ತಿದ್ದ ರಾಜವಂಶವು ಆಗಿಂದಾಗ್ಗೆ ಕ್ರೂರಮೃಗಗಳನ್ನು ಬೇಟೆಯಾಡುವ ಪ್ರವೃತ್ತಿಯನ್ನು ಹೊಂದಿದ್ದರು. ೧೮೯೯ರಿಂದ ೧೯೪೫ರವರೆಗೂ ಅಧಿಕಾರ ವನ್ನು ನಿರ್ವಹಿಸಿದ ಎಲ್ಲಾ ರಾಜಮನೆತನವು ಈ ಮನರಂಜನೆ ಕಾರ್ಯಕ್ರಮದಿಂದ ಹೊರತಾಗಿರಲಿಲ್ಲ. ಅದಕ್ಕಾಗಿ ಅಭಯಾರಣ್ಯಗಳಲ್ಲಿ ವಿಶ್ರಾಂತಿಗೃಹಗಳನ್ನು ನಿರ್ಮಿಸಿ ಉತ್ತಮ ರಸ್ತೆ ಸೌಲಭ್ಯ ಕಲ್ಪಿಸಿದ್ದರು. ಸುಮಾರು ೮ರಿಂದ ೧೦ದಿನಗಳ ಕಾಲ ತಂಗುತ್ತಿದ್ದ ರಾಜವಂಶದ ಭದ್ರತೆಗಾಗಿ ಎಲ್ಲ ಸೌಲಭ್ಯಗಳನ್ನು ರೂಪಿಸಲಾಗುತ್ತಿತ್ತು. ಹೀಗೆ ಮೈಸೂರು ಪ್ರಾಂತ್ಯದಲ್ಲಿ ಬೇಟೆಯಾಡುವುದು ಒಂದು ಮನರಂಜನೆಯ ಕಾರ್ಯಕ್ರಮವಾಗಿ ಅಭಿವೃದ್ಧಿಗೊಂಡಿತು. ಸಂಸ್ಥಾನದ ಅರಮನೆ ಆಡಳಿತವು ಅಪಾರವಾದ ಹಣವನ್ನು ಇದರ ನಿರ್ವಹಣೆಗಾಗಿ ವೆಚ್ಚಮಾಡುತ್ತಿತ್ತು. ವಸಾಹತುಶಾಹಿ ವ್ಯವಸ್ಥೆಯಲ್ಲಿ ಮೈಸೂರು ಅರಸರ ಸಾರ್ವಭೌಮಮ ಮತ್ತು ಅಧೀನ ವ್ಯವಸ್ಥೆಗಳ, ದ್ವಿಮುಕ ನೀತಿಗಳಲ್ಲಿ ಮನರಂಜನಾ ಕಾರ್ಯಕ್ರಮಗಳು ಸರಳವಾಗಿ ಸರಾಗವಾಗಿ ಜರುಗುತ್ತಿದ್ದವು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಗೋಲ್ಡ್ ಸ್ಪೋರ್ಟ್ ಅಂಡ್ ಕಾಫಿ ಪ್ಲಾಂಟಿಂಗ್ ಇನ್ ಮೈಸೂರು** ರಾಬರ್ಟ್ ಹೆಚ್. ಈಲಿಯೇಟ್. ಪುಟ ೪೮–೪೯.

೨. ಜಿ.ಪಿ.ಓ. ೧೯೩೧–೩೮ ಷೋಟಿಂಗ್ ಕ್ಯಾಂಪಸ್ ಆಫ್ ದಿ ರಾಯಲ್ ಪಾರ್ಟಿ ಅಂಡ್ ಸ್ಟೇಟ್ ಗೆಸ್ಟ್‌ಸ್–ಮೈಸೂರು ಪಾರಿಸ್ಟ ಇಲಾಖೆ, ರಾಜ್ಯ ಪತ್ರಗಾರ ಬೆಂಗಳೂರು. ಪುಟ ೩೪.

೩. **ಪ್ರೊಸಿಡಿಂಗ್ಸ್ ಆಫ್ ದಿ ಗೌರ್ನ್‌ಮೆಂಟ್ ಆಫ್ ಹಿಸ್ ಹೈನೆಸ್ ದಿ ಮಹಾರಾಜ ಆಫ್ ಮೈಸೂರು.** ಪುಟ. ೧೮೪.

೪. ಜಿ.ಪಿ.ಓ. ೧೯೨೬–೩೧ **ಪರಸ್ನಲ್ ಪೇಪರ್ಸ್ ಆಫ್ ಡಿ.ಎನ್. ನೀಲಿಕಂಟನ್‌ರಾವ್**, ಗೇವರ್ ಪ್ರಿಸರ್ವ ಆಫೀಸರ್, ಕರ್ನಾಟಕ ರಾಜ್ಯ ಪತ್ರಗಾರ ಬೆಂಗಳೂರು. ಪುಟ ೫.

೫. **ಪ್ರೋಸಿಡಿಂಗ್ಸ್ ಆಫ್ ದಿ ಗೌರ್ನ್‌ಮೆಂಟ್ ಆಫ್ ಹಿಸ್ ಹೈನೆಸ್ ದಿ ಮಹಾರಾಜ ಆಫ್ ಮೈಸೂರು,** ರಾಜ್ಯ ಪತ್ರಗಾರ ಇಲಾಖೆ, ಬೆಂಗಳೂರು. ಪುಟ ೧೮೩

೬ **ಗೋಲ್ಡ್ ಸ್ಪೋರ್ಟ್ ಅಂಡ್ ಕಾಫಿ ಪ್ಲಾಂಟಿಂಗ್ ಇನ್ ಮೈಸೂರು,** ರಾಬರ್ಟ್ ಹೆಚ್. ಈಲಿಯೇಟ್. ಪುಟ ೯೪.

೭. ಜಿಲ್ಲಾಧಿಕಾರಿಯ ಪತ್ರ ೧೪ ಜೂನ್ ೧೯೨೯ ಮೈಸೂರು ರಾಜ್ಯ ಪತ್ರಗಾರ ಮೈಸೂರು. ಪುಟ ೧೨.

೮. **ಗೋಲ್ಡ್ ಸ್ಪೋರ್ಟ್ ಅಂಡ್ ಕಾಫಿ ಪ್ಲಾಂಟಿಂಗ್ ಇನ್ ಮೈಸೂರು,** ರಾಬರ್ಟ್ ಹೆಚ್. ಈಲಿಯೇಟ್. ಪುಟ ೯೪.

೯. **ಪ್ರೊಸಿಡಿಂಗ್ಸ್ ಆಫ್ ದಿ ಗೌರ್ನ್‌ಮೆಂಟ್ ಆಫ್ ಹಿಸ್ ಹೈನೆಸ್ ದಿ ಮಹಾರಾಜ ಆಫ್ ಮೈಸೂರು,** ಫಾರಿಸ್ಟ್ ಇಲಾಖೆ, ಕರ್ನಾಟಕ ರಾಜ್ಯ ಪತ್ರಗಾರ ಪುಟ ೪೨.

೧೦ ಈ.ಪಿ.ಓ. ೧೯೩೨ **ಷೋಟಿಂಗ್ ಟ್ರಿಪ್ ಆಫ್ ಯುರೋಪಿಯನ್ ಗೆಸ್ಟ್** ಜಿ.ಪಿ.ಓ. ೧೯೩೩–೩೫, **ಕಿಲ್ಲಿಂಗ್ ಆಫ್ ವೈಲ್ಡ್ ಎಲಿಪೆಂಟ್ಸ್ ಅಂಡ್ ಫಿಕ್ಸಿಂಗ್ ದಿ ಟಸ್ಕಸ್ ಆಶ್ ಕ್ಯೂರಿಯಸ್ ಇನ್ ಪ್ಯಾಲೇಸ್** ಮೈಸೂರು ಮಹಾರಾಜರ ಆಗ್ನೆ–ಮೇ ೨೮ ೧೯೩೩, ಕರ್ನಾಟಕ ರಾಜ್ಯ ಪತ್ರಗಾರ ಬೆಂಗಳೂರು.

೧೧. ಜಿ.ಪಿ.ಓ. ೧೯೩೦ ಸೆಂಡಿಂಗ್ ಆಫ್ ಸ್ಕಿನ್ಸ್ ಅಂಡ್ ಸ್ಕೂಲ್ಸ್ ಆಫ್ ವೈಲ್ಡ್ ಅನಿಮಲ್ಸ್ ಫಾರ್ ಬ್ರಿಟೀಷ್ ಮ್ಯೂಜಿಯಂ, ರಾಜ್ಯಪತ್ರಗಾರ ಬೆಂಗಳೂರು. ಪುಟ ೨೭.

೧೨. **ಡೈರೀಸ್ ಆಫ್ ಡಿ.ಎನ್. ನೀಲಕಂಠನ್ ರಾವ್.** ಗೇಮ್ ಪ್ರಿಸರ್ವಸ್ ಆಫೀಸರ್ ಮೈಸೂರು, ಕರ್ನಾಟಕ ರಾಜ್ಯ ಪತ್ರಗಾರ, ಬೆಂಗಳೂರು. ಪುಟ ೧೧೬.




# ಮೈಸೂರು ಸಂಸ್ಥಾನದಲ್ಲಿ ಸಂಗೀತಗಾರರ ಸ್ಥಿತಿ ಮತ್ತು ಪಾತ್ರ, ಒಂದು ಅಧ್ಯಯನ (೧೭೯೯-೧೯೪೭)

**ಡಾ. ಎಂ. ಗೋವಿಂದಪ್ಪ***

೧೭೯೯ ಮೇ ೪ರಂದು ಟಿಪ್ಪುಸುಲ್ತಾನ್ ಸಾವನ್ನಪ್ಪಿದನು. ಮೈಸೂರು ಸಾಮ್ರಾಜ್ಯ ಬ್ರಿಟೀಷರ ವಶವಾಯಿತು. ೧೭೯೯ರಲ್ಲಿ ಸಾಮ್ರಾಜ್ಯವನ್ನು ವಿಭಜಿಸುವ ಕೆಲಸವು ಸುಸೂತ್ರವಾಗಿ ನೆರವೇರಿತು. ಲಾರ್ಡ್ ವೆಲ್ಲೆಸ್ಲಿರವರು ಸಹಾಯಕ ಸೈನ್ಯ ಪದ್ಧತಿಯನ್ನು ಮೈಸೂರಿನ ಮೇಲೆ ಒತ್ತಾಯ ಪೂರಕವಾಗಿ ಹೇರಿದ್ದ ಅಲ್ಲದೇ, ಒಪ್ಪಂದದ ೬ ಮತ್ತು ೭ನೇ ನಿಯಮಗಳ ಪ್ರಕಾರ ಬ್ರಿಟೀಷ್ ಸರ್ಕಾರ ಮೈಸೂರಿನ ಮೇಲೆ ಆರ್ಥಿಕ ನಿಬಂಧನೆಗಳನ್ನು ಹೇರಿದರು. ಮುಮ್ಮಡಿ ಕೃಷ್ಣರಾಜ ಒಡೆಯರ್ ಮತ್ತು ದಿವಾನರು ಬ್ರಿಟೀಷ್ ನಿರ್ದೇಶನಗಳನ್ನು ಕಡ್ಡಾಯವಾಗಿ ಪಾಲಿಸಬೇಕಾಗಿತ್ತು. ಆದುದರಿಂದ ತಮ್ಮ ಮನಬಂದಂತೆ ಅಧಿಕಾರಿಗಳನ್ನು ಮತ್ತು ಇತರೆ ಅರಮನೆಯ ಮನರಂಜನಾ ವ್ಯವಸ್ಥೆಯನ್ನು ರೂಪಿಸುವ ಸ್ವಾತಂತ್ರ್ಯವಿರಲಿಲ್ಲ. ಅರಮನೆ ಆಡಳಿತದ ಮೇಲೆ ಹೆಚ್ಚಿನ ಗಮನವನ್ನು ಹರಿಸುವಂತೆ ವೆಲ್ಲೆಸ್ಲಿ ಮೈಸೂರಿನ ರೆಸಿಡೆಂಟನಾಗಿದ್ದ ಕರ್ನಲ್ ಬ್ಯಾರಿಕ್ಲೋಸ್ ರವರಿಗೆ ನಿರ್ದೇಶಿಸಿದ್ದರು. ಆದುದರಿಂದ ಸಂಗೀತ, ನಾಟಕ ಮತ್ತು ಪಕ್ಕ ವಾದ್ಯಗಳನ್ನು ನುಡಿಸುತ್ತಿದ್ದ ವಿದ್ವಾನರು ಅಲ್ಪಸಂಬಳಕ್ಕಾಗಿ ದುಡಿಯುವ ಸ್ಥಿತಿ ಉದ್ಭವವಾಗಿತ್ತು. ಹಲವು ವಿದ್ವಾಂಸರಿಗೆ ಸ್ವಂತ ಮನೆ ಮತ್ತು ಜಮೀನು ಇರಲಿಲ್ಲ. ಹಲವು ಸಂದರ್ಭಗಳಲ್ಲಿ ತಮಗೆ ಒದಗಿಬರಬಹುದಾದ ಆಪತ್ತುಗಳನ್ನು ಎದುರಿಸುವ ಆರ್ಥಿಕ ಸ್ವಾಯತ್ತತೆಯೂ ಇರಲಿಲ್ಲ. ಎಲ್ಲಾ ವಿಷಯಗಳಿಗೆ ಅರಮನೆ ಆಡಳಿತವನ್ನು ಅವಲಂಬಿಸಬೇಕಾಗಿತ್ತು.

ಮೈಸೂರು ಸಂಸ್ಥಾನ ಆರ್ಥಿಕವಾಗಿ ಅರಮನೆಯ ಸಂಗೀತಗಾರರಿಗೆ ಸಂಬಳ ನೀಡುವಷ್ಟು ತೊಂದರೆಯಲ್ಲೇನು ಇರಲಿಲ್ಲ. ಆದರೆ ಸಹಾಯಕ ಸೈನ್ಯ ಪದ್ಧತಿಯ ಒಪ್ಪಂದದ ಪ್ರಕಾರ ರಾಜನು ನಿಬಂಧನೆಗಳಿಗೆ ಒಳಪಟ್ಟಿದ್ದರಿಂದ ಅರಮನೆಯ ಸಂಗೀತಗಾರರಿಗೆ ಇಂತಹ ಆರ್ಥಿಕ ದುಸ್ಥಿತಿ ಎದುರಾಗಿತ್ತು. ಹಲವು ಸಂದರ್ಭಗಳಲ್ಲಿ ಮಹಾರಾಜರು ಮುಂಗಡ ಹಣವನ್ನು ನೀಡಿರುವ ನಿದರ್ಶನಗಳು ಕಂಡು ಬರುತ್ತವೆ. ಈ ನಿಬಂಧನೆಗಳು ೧೮೮೧ರ ಅಧಿಕಾರ ವರ್ಗಾವಣೆ ಮತ್ತು ೧೯೧೩ರ ಮೈಸೂರು ಒಪ್ಪಂದಗಳಲ್ಲೂ ಮರುಕಳಿಸಿದವು. ಮೈಸೂರು ಸಂಸ್ಥಾನದ ಸಂಗೀತಗಾರರು ಇಂತಹ ಸಂಕಷ್ಟಗಳಿಂದ ಹೊರಬರಲು ದೇಶದ ಹಲವಾರು ಭಾಗಗಳಲ್ಲಿ ಸಂಚರಿಸುವ ಮತ್ತು ಕಾರ್ಯಕ್ರಮಗಳನ್ನು ನೀಡುವ ಪ್ರಯತ್ನಗಳನ್ನು ಮಾಡುತ್ತಿದ್ದರು ಆದಾಗ್ಯೂ ಆರ್ಥಿಕ ಸ್ವಾವಲಂಬನೆ ವೃದ್ಧಿಯಾಗಲಿಲ್ಲ.

ಟಿಪ್ಪುಸುಲ್ತಾನನ ಸಾವಿನ ನಂತರ ಮೈಸೂರು ಸಂಸ್ಥಾನವನ್ನು ವಿಭಜಿಸಿ, ಒಂದು ಭಾಗವನ್ನು ಮೈಸೂರಿನ ಪ್ರಾಚೀನ ಹಿಂದುವಂಶದವರಾದ ಮೈಸೂರು ಮಹಾರಾಜರಿಗೆ ನೀಡಲಾಯಿತು. ರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್ ೫ ವರ್ಷದ ಬಾಲಕರಾಗಿದ್ದರು. ಅವರಿಗೆ ಅಧಿಕಾರವನ್ನು ನೀಡಲಾಯಿತು. ಆಡಳಿತವನ್ನು ನಿರ್ವಹಿಸಲು ದಿವಾನ್ ಪೂರ್ಣಯ್ಯನವರನ್ನು ರೀಜಂಟರನ್ನಾಗಿ ಆಯ್ಕೆ ಮಾಡಲಾಯಿತು. ೧೮೮೧ರ ನಂತರ ಮಹಾರಾಜರು ಪ್ರಾಪ್ತ ವಯಸ್ಕರಾಗಿ ಮೈಸೂರು ಆಡಳಿತವನ್ನು ನೇರವಾಗಿ ನಿರ್ವಹಿಸಿದರು. ೧೭೯೯ ರಿಂದ ೧೯೪೭ರವರೆಗೆ ಮೈಸೂರು ಸಂಸ್ಥಾನವನ್ನಾಳಿದ ಮಹಾರಾಜರ ಕೇಂದ್ರಾಡಳಿತ ಮೈಸೂರು ಅರಮನೆಯಾಗಿತ್ತು. ಆಡಳಿತದಲ್ಲಿ ಎಲ್ಲಾ ವ್ಯವಹಾರಗಳನ್ನು ನೋಡಿಕೊಳ್ಳಲು ಪ್ರತ್ಯೇಕ ವಿಭಾಗಗಳನ್ನು ರಚಿಸಿದ್ದರು.[೧]

ಮಹಾರಾಜರು ತಮ್ಮ ಬಿಡುವಿನ ವೇಳೆಯಲ್ಲಿ ಮನರಂಜನಾ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಬೇಟೆಯಾಡುವುದು, ಸಂಗೀತ ಕೇಳುವುದು, ನಾಟ್ಯ ಶಾಲೆಯಲ್ಲಿ ನರ್ತನ ದೃಶ್ಯಗಳನ್ನು ವೀಕ್ಷಿಸುವುದು ಹೀಗೆ ಹಲವಾರು ಲಲಿತಕಲಾ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಆಸ್ಥಾನದಲ್ಲೇ ಹಲವಾರು ಸಂಗೀತ ವಿದ್ವಾಂಸರಿಗೆ ರಾಜಾಶ್ರಯವನ್ನು ನೀಡಿದ್ದರು. ಯಕ್ಷಗಾನ ಚಿತ್ರಗಳನ್ನು ಬಿಡಿಸುವುದು ಮುಂತಾದ ಕಾರ್ಯಕ್ರಮಗಳಿಗೂ ಪ್ರೋತ್ಸಾಹವನ್ನು ನೀಡುತ್ತಿದ್ದರು. ಸಂಗೀತದಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿದ್ದ ರಾಜ

* ಅಸೋಸಿಯೇಟ್ ಪ್ರೊಫೆಸರ್, ಕನಕಪುರ ರೂರಲ್ ಕಾಲೇಜು, ಕನಕಪುರ-೫೬೨೧೧೭.

ಮನೆತನ, ವೈಣಿಕ ವಿದ್ವಾನರು, ಸಂಗೀತ ವಿದ್ವಾನರು, ಹಿಂದೂಸ್ತಾನ ಸಂಗೀತ, ಅರಮನೆ ಕಲೆಗೆ ಸಂಬಂಧಿಸಿದ ಸಂಗೀತ ಮುಂತಾದವು ಗಳಿಗೆ ವಿಶೇಷ ಪ್ರೋತ್ಸಾಹವನ್ನು ನೀಡುತ್ತಿದ್ದರು. ಲಲಿತಕಲೆ, ಚಿತ್ರಕಲೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ಈ ಯುಗವನ್ನು ಸುವರ್ಣಯುಗ ಎಂದೇ ಕರೆಯಲಾಗಿದೆ. ಮೈಸೂರಿನ ಒಡೆಯರೇ ಸಂಗೀತವನ್ನು ಕಲಿತಿದ್ದರು. ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ ವೀಣೆ ಕೃಷ್ಣಯ್ಯ ಪ್ರಮುಖ ವೈಣಿಕರಾಗಿದ್ದರು. ಚಾಮರಾಜ ಒಡೆಯರು, ಚಿಕ್ಕದೇವರಾಜ ಒಡೆಯರು ದೊಡ್ಡ ಸಂಗೀತಗಾರರಾಗಿದ್ದರು. ಚಿಕ್ಕದೇವರಾಜರಿಂದ ರಚಿತವಾದ ಗೀತಗೋಪಾಲ ಸಂಗೀತದ ಗೇಯ ಕೃತಿಯಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ್ ರಚಿಸಿದ ಶ್ರೀತತ್ವನಿಧಿ ಎಂಬ ಪುಸ್ತಕವು ಸ್ವರ, ರಾಗ ಮತ್ತು ತಾಳದ ಬಗ್ಗೆ ಹೆಚ್ಚು ವಿವರಣೆಯನ್ನು ನೀಡುತ್ತದೆ.[3] ಬಕ್ಷಿ ವೆಂಕಟಸುಬ್ಬಯ್ಯ, ಸಾಂಬಯ್ಯ, ಮೂಗೂರೂ ಸುಬ್ಬಣ್ಣ, ಸದಾಶಿವರಾವ್ ಮುಂತಾದವರು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದು ಹೆಸರುವಾಸಿಯಾದ ಸಂಗೀತ ಗಾರರು, ಮಹಾರಾಜರು ಚಿನ್ನದ ವೀಣೆಯನ್ನು ಹಲವರಿಗೆ ಬಳುವಳಿಯಾಗಿ ನೀಡಿದ್ದರು, ಅಲ್ಲದೆ ವೆಂಕಟ ಸುಬ್ಬಯ್ಯ ಎಂಬುವರಿಗೆ ಹೆಗ್ಗಡದೇವನ ಕೋಟೆಯ ಬಳಿ ಶಂಕಹಳ್ಳಿ ಎಂಬುದನ್ನು ಬಳುವಳಿಯಾಗಿ ನೀಡಿದರು. ಮಹಾರಾಜರಿಗೆ ಹತ್ತಿರವಾದ ಇವರು ಆಡಳಿತದಲ್ಲೂ ಹೆಚ್ಚಾಗಿ ಪಾಲ್ಗೊಳ್ಳು ತ್ತಿದ್ದರು. ಆದುದರಿಂದಲೇ ಮಹಾರಾಜರು ೧೨೦ ಪಗೋಡ ಗಳಷ್ಟು ಹಣವನ್ನು ಅವರ ಸಂಬಳವನ್ನಾಗಿ ನೀಡುತ್ತಿದ್ದರು. ಇವರ ಮಗನಾದ ದೊಡ್ಡ ಶೇಷಣ್ಣ ಎಂಬುವರನ್ನು ಮೈಸೂರು ಸಂಸ್ಥಾನದ ಸಂಗೀತ ಇಲಾಖೆಯ ಮುಖ್ಯಸ್ಥರನ್ನಾಗಿಯೂ ಸಹ ಆಯ್ಕೆ ಮಾಡಿದ್ದರು.

ಸಂಗೀತಗಾರರಿಗೆ ಎಲ್ಲಾ ಸೌಲಭ್ಯಗಳನ್ನೂ ಮತ್ತು ಬಳುವಳಿ ಗಳನ್ನೂ ನೀಡುವ ಪ್ರವೃತ್ತಿಯು ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದವರೆಗೂ ಮುಂದುವರೆಯಿತು. ವೀಣೆ ಶೇಷಣ್ಣ, ವೀಣೆ ಸುಬ್ಬಣ್ಣ, ಚಿಕ್ಕಸುಬ್ಬರಾಯಪ್ಪ, ವೀಣೆಶಾಮಣ್ಣ, ವೀಣೆ ಶಿವರಾಮಯ್ಯ, ವೀಣೆ ವೆಂಕಟಗಿರಿಯಪ್ಪ ಮುಂತಾದವರು ವೈಣಿಕ ವಿದ್ವಾನರಾಗಿ ಮೈಸೂರು ಸಂಸ್ಥಾನದಲ್ಲಿ ಹೆಸರು ಮಾಡಿದವರು. ಸಂಗೀತ ವಿದ್ವಾನರಾದ ಬಿಡಾರಂ ಕೃಷ್ಣಪ್ಪ, ಕೆ. ವಾಸುದೇವಾಚಾರ್ಯ, ಟಿ. ಕರಿಗಿರಿರಾವ್, ಟಿ. ಚೌಡಯ್ಯ ಮತ್ತು ಹರಿಕೇಶನಲ್ಲೂರು ಮುತ್ತಯ್ಯ ಭಾಗವತರ್ ಮುಂತಾದವರು ಹೆಸರು ಮಾಡಿದ್ದರು. ಹಿಂದೂಸ್ಥಾನಿ ಸಂಗೀತ ದಲ್ಲಿ ಫಯಜ್ ಖಾನ್, ಗೋಹರ್ ಜಾನ್ ಮುಂತಾದವರು ಹೆಸರು ಮಾಡಿದ್ದರು. ಹಿಂದೂಸ್ಥಾನಿ ಸಂಗೀತಗಾರರು ಮುಸ್ಲಿಮರಾಗಿದ್ದರು ಆಸ್ಥಾನದಲ್ಲಿ ಉತ್ತಮವಾದ ಅವಕಾಶ ಗಳು ದೊರೆತಿದ್ದವು. ಮೈಸೂರು ಮಹಾರಾಜರ ಧಾರ್ಮಿಕ ಸಹಿಷ್ಣುತೆಗೆ ಇದು ಉದಾಹರಣೆ ಯಾಗಿದೆ. ಸಂಗೀತವನ್ನು ರಾಜವಂಶಿಯರು ಕೇಳಿ ಆನಂದಿಸುವುದೇ ಅಲ್ಲದೇ ಸಂಗೀತಕ್ಕೆ ಹೆಚ್ಚು ಪ್ರೋತ್ಸಾಹವನ್ನು ನೀಡಲು ಸಂಗೀತ ತರಗತಿಗಳನ್ನು ನಡೆಸುತ್ತಿದ್ದರು. ಚಂದ್ರಶಾಲಾತೊಟ್ಟಿ, ಅರಮನೆಯ ಸಂಗೀತ ಶಾಲೆ, ಅಲ್ಲದೆ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನಗಳು ನಡೆದಾಗ ಅಲ್ಲಿ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸಿದ್ದರು.[೩]

ಮೈಸೂರು ಸಂಸ್ಥಾನದ ಸಂಗೀತಗಾರರಿಗೆ ರಾಜಮನೆತನ ಪ್ರತಿಯೊಬ್ಬ ಸಂಗೀತಗಾರರ ಸಾಮರ್ಥ್ಯ ಮತ್ತು ವಿದ್ವತ್‌ನ್ನು ಪರಿಗಣಿಸಿ ಸಂಬಳವನ್ನು ನೀಡುತ್ತಿದ್ದರು. ಪ್ರತಿವರ್ಷ ಅವರವರ ವಿದ್ವತ್ತಿಗೆ ಅನುಗುಣವಾಗಿ ಹೆಚ್ಚುವರಿ ಸಂಬಳವನ್ನು ನೀಡುತ್ತಿದ್ದು ಈ ಕೆಳಕಂಡ ಚಾಮುಂಡಿ ತೊಟ್ಟಿ ಇಲಾಖೆಯ ಅಧೀನ ದಲ್ಲಿರುವ ಸಂಗೀತಗಾರರ ಸಂಬಳ ಮತ್ತು ಇತರೆ ವಿವರಗಳನ್ನು ಕೊನೆಯಲ್ಲಿ ನೀಡಲಾಗಿದೆ.

ಮಹಾರಾಜರು ಸಂಗೀತಗಾರರನ್ನು ಬೊಂಬಾಯಿ ಮದ್ರಾಸು ಮುಂತಾದ ಪ್ರಾಂತ್ಯಗಳಿಗೂ ಕಳುಹಿಸಿಕೊಡುತ್ತಿದ್ದರು. ಏಪ್ರಿಲ್ ೮, ೧೯೦೮ರಂದು ವೀಣೆಶೇಷಣ್ಣನವರನ್ನು ಬೊಂಬಾಯಿಯಲ್ಲಿ ಹೈಕೋರ್ಟು, ಚೀಫ್ ಜಡ್ಜ್‌ರವರ ಮತ್ತು ಗವರ್ನರ್ ಸಾಹೇಬರ ಬಂಗಲೆಗಳಲ್ಲಿ ಶೇಷಣ್ಣನವರ ವೀಣೆ ಕಛೇರಿಗಳು ನಡೆದವು. ಇವರಿಗೆ ೫೦೦ ರೂ. ಬಹುಮಾನ ಮತ್ತು ಸರ್ಟಿಫಿಕೇಟ್ ಸಹ ನೀಡಿದ್ದರು. ಸಂಗೀತಗಾರರ ವೈಯಕ್ತಿಕ ಜೀವನಶೈಲಿಯು ಸಹ ಬಹಳ ಕಠಿಣವಾಗಿತ್ತು. ಅಲ್ಲದೆ ದುಃಸ್ಥಿತಿಗಳಿಂದ ಕೂಡಿತ್ತು. ೧೮೯೬ ಡಿಸೆಂಬರ್ ೧೧ ರಂದು ವೀಣೆ ಶೇಷಣ್ಣ ಮೈಸೂರು ಅರಮನೆ ಕಂಟ್ರೋಲ್ ಸಾಹೇಬರು ಹುಜೂರು ಜನಾಬಿಗೆ ಮೈಸೂರು ಅರಮನೆ ನಾಮಿ ತೀರ್ಥದ ತೊಟ್ಟಿ ಇಲಾಖೆಗೆ ತನ್ನ ವೇದನೆ ಏನೆಂಬುದನ್ನು ನಿವೇದಿಸಿಕೊಂಡಿದ್ದಾರೆ. "ನನಗೆ ವಾಸಕ್ಕೆ ಸರಿಯಾದ ಮನೆಯಿಲ್ಲದೆ ಇದ್ದದ್ದರಿಂದಲೂ ಮತ್ತು ಗೃಹಕೃತ್ಯದ ಅನೇಕ ಅನಿವಾರ್ಯಗಳ ದೆಸೆಯಿಂದ ೩೫೦೦/– ರೂಪಾಯಿಗಳು ಅಡ್ವಾನ್ಸ್‌ಗೆ ಅಪ್ಪಣೆ ಆಬೇಕೆಂತಲೂ ಅದಕ್ಕಾಗಿ ನನ್ನ ತಲಬಿನಲ್ಲಿ ಅರ್ಧ ತಲಬನ್ನು ಸರ್ಕಾರಕ್ಕೆ ತೆಗೆದು ಕೊಳ್ಳುವುದಲ್ಲದೆ ವರ್ಷಕ್ಕೆ ಎರಡು ನೂರು ಐವತ್ತು ರೂಪಾಯಿ ಅಜಳದಾನ ಹೊರಿಗನ ಸಂಪಾದನೆಯಿಂದ ಡಿಟಿಲು ಸಾಲಕ್ಕಾಗಿ ಜುಮಾ ವರ್ಷ ಒಂದಕ್ಕೆ ೫೦೦/– ರೂಪಾಯಿಗಳ ಮೇರೆಗೆ ತೀರುಸುತ್ತೇನೆ. ನನ್ನನ್ನು ಉದ್ಧಾರ ಮಾಡಬೇಕೆಂದು ಬೇಡಿಕೊಳ್ಳುತ್ತೇನೆ"[೫] ಎಂದು ವಿನಯಪೂರ್ವಕವಾಗಿ ಮಹರಾಜರ ಬಳಿ ತನ್ನ ಕಷ್ಟಗಳನ್ನು ನಿವೇದಿಸಿಕೊಳ್ಳುತ್ತಿದ್ದರು.

ಡಿಸೆಂಬರ್ ೨೪, ೧೯೧೮ರಂದು ಬೆಂಗಳೂರಿನಲ್ಲಿ ಲಲಿತಕಲಾ ಹಬ್ಬವನ್ನು ಅಮೇಚುರು ಡ್ರಮ್ಯಾಟಿಕ್ ಸಂಘ

ಆಚರಿಸಿತು. ಈ ಅದ್ದೂರಿ ಹಬ್ಬಕ್ಕೆ ರವೀಂದ್ರನಾಥ ಟ್ಯಾಗೂರ್‌ರವರನ್ನು ಆಮಂತ್ರಿಸಲಾಗಿತ್ತು. ಅತಿ ಹೆಚ್ಚು ಹೆಸರು ಮಾಡಿದ್ದ ಸಂಗೀತ ವಿದ್ವಾನರನ್ನು ಈ ಸಭೆಗೆ ಆಮಂತ್ರಿಸಲಾಗಿತ್ತು. ವೀಣೆ ಶೇಷಣ್ಣ, ಸುಬ್ಬಣ್ಣ, ಬಿಡಾರಂ ಕೃಷ್ಣಪ್ಪ, ವಾಸುದೇವಾಚಾರ್ ಮತ್ತು ರಾಚಪ್ಪ ಎಂಬ ಸಂಗೀತಗಾರರನ್ನು ಮಹರಾಜರು ಕಳುಹಿಸಿದ್ದರು. ಇವರ ಸಂಗೀತಕ್ಕೆ ತಗಲಬಹುದಾದ ವೆಚ್ಚವನ್ನು ಸಂಸ್ಥೆಯು ಭರಿಸುವುದೆಂದು ತಿಳಿಸಿದರು ಅಲ್ಲದೆ ಸಂಗೀತ ಗಾರರಿಗೆ ವಿಶೇಷ ಬಹುಮಾನಗಳನ್ನು ನೀಡುತ್ತಿದ್ದರು.[೬] ೧೯೦೪ಳ ನವೆಂಬರ್ ೨ರಂದು ಮದುರೈ ಜಿಲ್ಲೆ ಜಮೀನ್ದಾರನಾದ ಕುದೀಪಿಕೊಲ್ಲಂರವರ ಮದುವೆ ಕಾರ್ಯಕ್ರಮ ಮದ್ರಾಸ್‌ನಲ್ಲಿ ಜರುಗಿಸಿ ಅಲ್ಲಿ ವೀಣೆ ಕಛೇರಿಯನ್ನು ನಡೆಸಲಾಯಿತು. ಈ ಜಮೀನ್ದಾರರು ಮೈಸೂರು ಅರಸರ ಸ್ನೇಹಿತರಾಗಿದ್ದುದ್ದರಿಂದ ರಾಜರು ಸಂಗೀತಗಾರರನ್ನು ಈ ಸಮಾರಂಭಕ್ಕೆ ಕಳುಹಿಸಿದರು. ಈ ಸಂಬಂಧ ಜಮೀನ್ದಾರರು ಮಹಾರಾಜರಿಗೆ ಪತ್ರದ ಮೂಲಕ ತಿಳಿಸಿದ್ದರು[೭]. ಬೆಳಗಾಂ ರಾಷ್ಟ್ರೀಯ ಕಾಂಗ್ರೆಸ್ ಸಮಾವೇಶ ೧೯೨೪ಳರಲ್ಲಿ ನಡೆದಾಗ ಅರಮನೆಯಿಂದ ಹಲವಾರು ಸಂಗೀತಗಾರರನ್ನು ಕಳುಹಿಸಲಾಗಿತ್ತು. ವಿದ್ವಾನ್ ಶೇಷಣ್ಣ, ವಾಸುದೇವಾಚಾರ್, ಬಿ. ಕೃಷ್ಣಪ್ಪ ಮತ್ತು ಸುಬ್ಬಣ್ಣ ಪ್ರಮುಖ ಸಂಗೀತಗಾರರಾಗಿ ಭಾಗವಹಿಸದ್ದರು. ಕಿರಿಯ ಸಂಗೀತಗಾರರಾದ ವೆಂಕಟಗಿರಿಯಪ್ಪ ಶಿವರಾಮಯ್ಯ, ಲಕ್ಷ್ಮೀನಾರಾಯಣಪ್ಪ ಸುಬ್ರಮಣ್ಯಯ್ಯ, ರಾಮರಾವ್ ಶ್ರೀನಿವಾಸ, ವೇದಾಂತಂ ಕೃಷ್ಣ ಅಯ್ಯಂಗಾರ್ ಪಾಲ್ಗೊಂಡಿದ್ದರು. ಸುಮಾರು ೬ ದಿವಸಗಳ ಕಾಲ ಬೆಳಗಾಂನಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್‌ನ ನಾಯಕರಿಗೆ ಮನರಂಜನೆ ನೀಡಿದರು. ಸುಮಾರು ಒಂದು ಲಕ್ಷ ಜನರು ಭಾಗವಹಿಸಿದ್ದರು. ಸಂಗೀತ ವಿದ್ವಾನರಿಗೆ ರೈಲ್ವೆ ಸಾರಿಗೆ ವೆಚ್ಚ ಮತ್ತು ಇತರೆ ವೆಚ್ಚಗಳನ್ನು ಅಧಿವೇಶನದ ಸ್ವಾಗತ ಸಮಿತಿಯು ನೀಡಿತು.[೮] ಇಂತಹ ಕಛೇರಿಗಳು ಬೊಂಬಾಯಿ ಮದ್ರಾಸು ಮತ್ತು ಕೇರಳದ ಹಲವಾರು ಪ್ರದೇಶಗಳಲ್ಲಿ ನಡೆದರೆ ಮಹಾರಾಜರು ಸಂಗೀತಗಾರರನ್ನು ಕಳುಹಿಸುತ್ತಿದ್ದರು. ಇದರ ಮೂಲಭೂತ ಉದ್ದೇಶ ಸಂಗೀತಗಾರರು ಆರ್ಥಿಕ ಸಂಕಷ್ಟದಿಂದ ಹೊರಬರಲಿ ಎಂಬುದಾಗಿತ್ತು.

## ಸಂಗೀತಗಾರರ ವಾಸ್ತವ್ಯದ ಸ್ಥಿತಿ

ಸಂಗೀತಗಾರರಿಗೆ ಆಸ್ಥಾನದಿಂದ ಸರ್ಕೀಟು ಹೋಗುವ ಅವಕಾಶವನ್ನು ಕಲ್ಪಿಸಿಕೊಡಲಾಗಿತ್ತು. ವೀಣೆ ಸುಬ್ಬಣ್ಣ ಅರಮನೆ ಇನ್‌ವಾಜ್ ಆಫೀಸ್‌ರವರ ಆಫೀಸಿಗೆ ಈ ರೀತಿಯಾಗಿ ತಿಳಿಸಿದ್ದಾರೆ. "ಈಗ ಸ್ವಲ್ಪ ದಿನಗಳ ಕೆಳಗೆ ನಾನು ಸರ್ಕೀಟು ಹೊರಡಲು ಪ್ರಯತ್ನಿಸಿ ಆ ಬಗ್ಗೆ ೨೩೫ ರೂಪಾಯಿ ಅಡ್ವಾನ್ಸಿಗೂ ಮತ್ತು ರಜಾಕ್ಕೂ ಬರೆದಿದ್ದಕ್ಕೆ ಅಡ್ವಾನ್ಸ್ ಸ್ಯಾಂಕ್ಷನ್ ಆಯಿತು ಮತ್ತು ರಜಾ ವಿಷಯದಲ್ಲಿ ಶ್ರೀಮನ್ ಮಹಾರಾಜರವರ ಸವಾರಿ ಮೈಸೂರಿಗೆ ಬರುವುದರೊಳಗಾಗಿ ಡ್ಯೂಟಿ ಮೇಲೆ ಹಾಜರಾಗಬೇಕೆಂದು ೧೮-೧-೧೯೦೪ನೇ ಮಕ್ಕಂ ೨೮೬೭ನ ನಂಬರ್ ಹುಕ್ಕುಂ ಅಪ್ಪಣೆ ಆಯಿತು. ಇದಕ್ಕೆ ಅನುಸಾರವಾಗಿ ತನ್ಮಧ್ಯದಲ್ಲಿ ೧೫ ದಿವಸಗಳು ಮಾತ್ರ ರಜಾ ಉಪಯೋಗಿಸಿಕೊಂಡು ವಾಪಸ್ ಬಂದು ಬೊಂಬಾಯಿಯಿಂದ ಬಂದಿದ್ದ ವಕೀಲರಲ್ಲಿಯೂ ಮತ್ತು ಮಿ. ಸ್ಟ್ರಾಂಗ್‌ವೇ ಸಾಹೇಬರವರಲ್ಲಿಯೂ ಅಪ್ಪಣೆಯಾದಂತೆ ಡ್ಯೂಟಿ ಮಾಡಿರುತ್ತೇನೆ. ಈಗ ದಯವಿಟ್ಟು ಮೇಲ್ಕಂಡ ಹುಕ್ಕುಂ ಅನುಸರಿಸಿ ಈ ತಿಂಗಳು ಇವತ್ತು ಲಾಗಾಯ್ತು ೨೦ ದಿವಸಗಳ ರಜ ಸ್ಯಾಂಕ್ಷನ್ ಮಾಡಿಸಬೇಕಾಗಿ ಕೋರುತ್ತೇನೆ."[೯] ಎಂದು ವಿನಯಪೂರಕವಾಗಿ ಬೇಡುತ್ತಿದ್ದರು. ಅರಮನೆಯ ಸುತ್ತ ನಿರ್ಮಿಸಲಾಗಿದ್ದ ಛತ್ರದಲ್ಲಿ ವಾಸಿಸುತ್ತಿದ್ದ ಸಂಗೀತಗಾರರು ಬಹಳ ಕಷ್ಟದ ಸ್ಥಿತಿಯಲ್ಲಿ ಬದುಕಬೇಕಾಗಿತ್ತು. ಅವರು ವಾಸಿಸುತ್ತಿದ್ದ ಮನೆಗಳೂ ಸಹ ದುಸ್ಥಿತಿಯಲ್ಲಿದ್ದವು. ಆದುದರಿಂದ ಮಳೆಗಾಲ ಆರಂಭವಾಗುವ ಮುನ್ನ ರಿಪೇರಿ ಮಾಡಿಸಿಕೊಳ್ಳುತ್ತಿದ್ದರು. ಮಾರ್ಚ್ ೨೪, ೧೯೧೭ರಂದು ಅರಮನೆ ಇಲಾಖೆ ದರ್ಬಾರ್ ಭಕ್ಷಿಯವರ ಸನ್ನಿಧಾನಕ್ಕೆ ವೀಣೆಸುಬ್ಬಣ್ಣ ಒಂದು ಅರ್ಜಿ ಬರೆದುಕೊಂಡು "ಪಶ್ಚಿಮ ವಾಹಿನಿಯಲ್ಲಿ ನಮ್ಮ ಹಿರಿಯರು ಕಟ್ಟಿಸಿರತಕ್ಕ ಛತ್ರವು ಬಹಳ ಶಿಥಿಲವಾಗಿ ಬಿದ್ದುಹೋಗುತ್ತಾ ಇದ್ದುದ್ದರಿಂದ ಆ ಕಾಮಗಾರಿಗಾಗಿ ಇದುವರೆಗೆ ಸಾವಿರ ರೂಪಾಯಿಗಳು ಖರ್ಚು ಮಾಡಿ ಕೆಳಗಿನ ಭಾಗ ಮತ್ತು ಹೊಸದಾಗಿ ಅಡಿಗೆಮನೆ ಎರಡು ಅಂಗಡಿಗಳು ಮತ್ತು ಹೊಳೆ ಹತ್ತಿರ ಇರತಕ್ಕ ಸೋಪಾನದ ಕೆಲಸಗಳು ಆಂಜನೇಯ ದೇವಸ್ಥಾನದ ಕೆಲಸಗಳು ಸಹ ಮಾಡಿಸಿದ್ದಾಯಿತು. ಮೇಲೆ ದಿವಾನ್‌ಖಾನೆ ಮತ್ತು ಬಿಸಲಮಚ್ಚು ಬಹಳ ಶಿಥಿಲವಾಗಿ ಬಿದ್ದುಹೋಗಿ ಛತ್ರವೆಲ್ಲಾ ನಷ್ಟವಾಗುತ್ತೆ. ಆದ್ದರಿಂದ ಸ್ವಾಮಿ ದಯವಿಟ್ಟು ಹುಜೂರ್ ಮಹಾಸನ್ನಿಧಾನಂಗಳಿಗೆ ಅರಿಕೆಮಾಡಿ ಕೊಡಿಸಿ ಆ ಮೊಬಲಗನ್ನು ನನ್ನ ತಲಬಿನಲ್ಲಿ ಮಹೆಯಾನಾ ಇಪ್ಪತ್ತು ರೂಪಾಯಿಗಳನ್ನು ವಜಾ ಹಾಕಿಕೊಳ್ಳುತ್ತಾ ಬರುವ ಹಾಗೆ ಶಿಪಾರಸು ಅಪ್ಪಣೆಯಾಗಬೇಕು. ಈ ಧರ್ಮವೆಲ್ಲಾ ಹುಜೂರ್ ಮಹಾಸನ್ನಿಧಾನಕ್ಕೆ ಹೊರತು ನಮ್ಮದೇನು ಅಲ್ಲಾ ಮುಖ್ಯ ಮಳೆಗಾಲ ಸಮೀಪವಾಗುತ್ತಾ ಬಂತು. ಜಾಗ್ರತೆ ಅಡ್ವಾನ್ಸ್ ಅಪ್ಪಣೆ ಕೊಡಬೇಕು. ಹಿರಿಯರು ನಡೆಸಿರುವ ಧರ್ಮಸ್ವಾಮಿ ಸಾರ್ಥಕ ಪಡಿಸಬೇಕು, ಸ್ವಾಮಿ"[೧೦]. ಹೀಗೆ ಸಂಗೀತಗಾರರು ತಮ್ಮ ಕಷ್ಟಗಳನ್ನು ಮಹಾರಾಜರ ಸನ್ನಿಧಿಗೆ ತಿಳಿಸುತ್ತಿದ್ದರು.

ಸಂಗೀತಗಾರರು ವಂಶ ಪಾರಂಪರ್ಯವಾಗಿ ರಾಜರ ಆಸ್ಥಾನದಲ್ಲೇ ಇರುತ್ತಿದ್ದರು. ಏಪ್ರಿಲ್ ೧೮, ೧೯೧೧ರಂದು

ವೀಣೆ ಚಿಕ್ಕಸುಬ್ಬರಾಯರವರು ಶ್ರೀಮನ್ ಮಹಾರಾಧಿರಾಜ ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಸಾರ್ವಭೌಮ ಅವರ ಹುಜೂರ್‌ಗೆ ಪತ್ರವನ್ನು ಬರೆದು "ನನ್ನ ವಂಶ ಪಾರಂಪರ್ಯವಾಗಿ ನಾಲ್ಕು ದಶಕದಿಂದಲೂ ಈ ಮಹಾ ಸಂಸ್ಥಾನದಿಂದಲೇ ಪೋಷಿತರಾಗುತ್ತಾ ಇದ್ದೇನೆ. ಈಗಲೂ ಮಹಾಸ್ವಾಮಿ ಸನ್ನಿಧಾನದಿಂದ ದಯಪಾಲಿಸುತ್ತಿರುವ ೨೦ ರೂಪಾಯಿ ವಿದ್ವತ್ ಸಂಬಳದಿಂದಲೇ ಜೀವನವು ಮಾಡಿಕೊಂಡು ಪ್ರಸ್ತ ಪ್ರಯೋಜನಾದಿ ಅನೇಕ ಕಾರ್ಯಗಳನ್ನು ನಿರ್ವಹಿಸುತ್ತಾ ಮಹಾಪ್ರಭುಗಳವರ ಶ್ರೇಯ ಪ್ರಾರ್ಥನೆಯನ್ನು ಸರ್ವಕಾಲದಲ್ಲಿಯೂ ಮಾಡಿಕೊಂಡು ಇದ್ದೇನೆ ಮಹಾಸ್ವಾಮಿ ನನಗೆ ೬೪ ವರ್ಷ ವಯಸ್ಸಾಯಿತು. ನನಗೆ ಸಂತಾನ ವಿಲ್ಲದ್ದರಿಂದ ನನ್ನ ತಂಗಿಯ ಮಗ ಅನಾಥನಾದ ವೆಂಕಟ ಗಿರಿಯಪ್ಪನೆಂಬ ಹುಡುಗನನ್ನು ಅವನ ಬಾಲ್ಯಾರಭ್ಯ ಸಾಕಿ ಇವನ ಎಳೆ ಮಗುವಾಗಿದ್ದಾಗಲೇ ದತ್ತು ಸ್ವೀಕಾರವನ್ನು ಮಾಡಿಕೊಂಡು ಕುಲವಿದ್ಯೆಯಾದ ವೀಣಾ ವಾದ್ಯವನ್ನು ತಕ್ಕಮಟ್ಟಿಗೆ ಚೆನ್ನಾಗಿ ಕಲಿಸಿರುತ್ತೇನೆ..."[೧೧] ಇವರಿಗೆ ಉಪನಯನ ಮತ್ತು ಇತರೆ ಕಾರ್ಯಗಳಿಗೆ ಅಡ್ವಾನ್ಸ್ ನೀಡುವ ಬಗ್ಗೆ ಹಣವನ್ನು ಪಡೆದುಕೊಳ್ಳಲು ಮತ್ತು ಈ ವಂಶಕ್ಕೆ ಸಹಕಾರ ನೀಡಬೇಕೆಂದು ಕೋರಿಕೊಂಡರು. ವೀಣೆ ಕೃಷ್ಣಪ್ಪ ೧೯೦೬ ತಾರೀಖು ಜುಲೈ ೩೦ರಂದು ಮಹಾರಾಜ ಶ್ರೀಕೃಷ್ಣರಾಜೇಂದ್ರ ಒಡೆಯರ್‌ರವರಿಗೆ ಪತ್ರವನ್ನು ಬರೆದು "ಗರೀಬನಾದ ನನಗೆ ಒಂದು ವರ್ಷದ ಲಗಾಯಿತು. ದೇಹದಲ್ಲಿ ಆಲಸ್ಯ ಉಂಟಾಗಿ ಪರದೇಶ ಸಂಚಾರ ಹೊರಡು ವುದಕ್ಕು ಸಹ ಯತ್ನವಿಲ್ಲದೆ ಶಕರದ ಖಾಯಿಲೆ ಗುಣಪಡಿಸಿ ಕೊಳ್ಳುವದಕ್ಕೂ ಮತ್ತು ಸಂಚಾರ ತಾಪತ್ರಯಕ್ಕೂ ಸಹ ಖರ್ಚಿಗೆ ಏನೇನೂ ಮಾರ್ಗವಿಲ್ಲದೆ ರಾಜಧಾನಿಯ ಪ್ರಜೆ ಗಳಿಂದ ನನಗೆ ಪ್ರಾಪ್ತವಾಗಿರುವ ಜವಾಹಿರಿ ಕೊಡುಗೆಯನ್ನು ಮತ್ತು ಬೆಂಗಳೂರು ಮದ್ರಾಸಿನಲ್ಲಿ ಸಂಪಾದಿಸಿದ ಬಂಗಾರದ ಮೆಡಲುಗಳನ್ನು ಸಹ ಗಿರವಿ ಇಟ್ಟ ಹಣವನ್ನು ತೆಗೆದು ಕೊಂಡಿರುವುದಲ್ಲದೆ ಇನ್ನೂ ಕೆಲವು ಕಡೆ ದಸ್ತಾವೇಜು ಮೂಲಕ ಕೈಸಾಲ ತಂದಿರುವುದು ಸೇರಿ ಒಂದು ಸಾವರಿ ರೂಪಾಯಿನವರೆಗೆ ಬಡ್ಡಿಯನ್ನು ಕೂಡ ಪಾವತಿ ಮಾಡಲು ಯತ್ನವಿಲ್ಲದೆ ಬಹಳವಾಗಿ ತೊಂದರೆಯನ್ನು ಅನುಭವಿಸು ತ್ತಿರುವ ಪಾದಸೇವಕನಿಗೆ ಮಹಾಪಾದದಿಂದ ಒಂದು ಸಾವಿರ ರೂಪಾಯಿ ಅಡ್ವಾನ್ಸ್‌ಗೆ ಅಪ್ಪಣೆ ಕೊಡಿಸಿ ಮೇಲ್ಕಂಡ ಪದಾರ್ಥ ಗಳನ್ನು ಮಹಾಸನ್ನಿಧಾನದಲ್ಲಿರಿಸಿಕೊಂಡು ಈಗ ನನಗೆ ಮಹಾಪಾದದಿಂದ ಸಲ್ಲುತ್ತಿರುವ ೨೦ ರೂಪಾಯಿ ತಲಬಿನಲ್ಲಿ ಮಾಹಿಯಾನಾ ೧೨ ರೂಪಾಯಿನ ಮೇಲೆ ಸದರಿ ಅಡ್ವಾನ್ಸಿಗೆ ವಜಾ ಕಟ್ಟಿಕೊಳ್ಳುವಂತೆ ಹುಕ್ಕುಂ ದಯಪಾಲಿಸಿ ಋಣದಿಂದ ಅತ್ಯಂತ ತೊಂದರೆಗೆ ಸಿಕ್ಕಿರುವ ನನ್ನನ್ನು ಉದ್ಧಾರ ಮಾಡಬೇಕು ಸ್ವಾಮಿ"[೧೨]. ಎಂದು ವಿನಯಪೂರ್ವಕವಾಗಿ ಮಹಾರಾಜರ ಮುಂದೆ ತಮ್ಮ ಆರ್ಥಿಕ ಸಂಕಷ್ಟಗಳನ್ನು ವ್ಯಕ್ತಪಡಿಸಿ ಅವರಿಂದ ಬರಬಹು ದಾದ ಅನುಕೂಲಗಳನ್ನು ಪಡೆದುಕೊಳ್ಳುತ್ತಿದ್ದರು.

ಪ್ರಪಂಚದ ಮಹಾಯುದ್ಧಗಳಿಂದ ವಸ್ತುಗಳ ಬೆಲೆಗಳು ಗಗನಕ್ಕೇರಿದವು. ಆ ಹಿನ್ನೆಲೆಯಲ್ಲಿ ಸಂಗೀತಗಾರರು ಜೀವನ ನಡೆಸಲು ಕಷ್ಟವನ್ನು ಅನುಭವಿಸುತ್ತಿದ್ದರು. ಆದುದರಿಂದ ಮಹಾರಾಜರಿಗೆ ತಮ್ಮ ಕಷ್ಟಗಳ ನಿವಾರಣೆ ಬಗ್ಗೆ ಬೇಡಿಕೆ ಸಲ್ಲಿಸಿದರು. ಮಹಾರಾಜರೂ ಅರಮನೆಯ ಲಲಿತ ಕಲೆಗಾರರ ಬಗ್ಗೆ ಸಹಾನುಭೂತಿಯನ್ನು ಹೊಂದಿದ್ದರು. ಹಾಗಾಗಿ ನವೆಂಬರ್ ೫, ೧೯೧೮ರಂದು ದರ್ಬಾರಿನ ಭಕ್ಷಿಯವರಿಗೆ ಆಜ್ಞೆಯನ್ನು ನೀಡಿ ಸಂಬಳವನ್ನು ಹೆಚ್ಚಿಸುವಂತೆ ತಿಳಿಸಿದರು. ಜನವರಿ ೧೯, ೧೯೨೨ರಂದು ಅರಮನೆ ಸಂಗೀತಗಾರರು ಹಾಗೂ ಕಲೆಗಾರರ ಮಕ್ಕಳ ವಿದ್ಯಾಭ್ಯಾಸಕ್ಕೆ ಕಷ್ಟವಾಗಿರುವು ದರಿಂದ, ಅವರ ಆರ್ಥಿಕ ಪರಿಸ್ಥಿತಿ ತುಂಬಾ ತೊಂದರೆಯಲ್ಲಿ ರುವುದರಿಂದ, ವಿದ್ಯಾಭ್ಯಾಸ ಮಾಡುತ್ತಿರುವ ಮಕ್ಕಳಿಗೆ ವಿದ್ಯಾರ್ಥಿವೇತನವನ್ನು ನೀಡುವ ತೀರ್ಮಾನವನ್ನು ಕೈಗೊಂಡರು.

### ಮೈಸೂರು ಸಂಸ್ಥಾನದಲ್ಲಿ ನಾಟಕ ಕಲೆ

ಮೈಸೂರು ಸಂಸ್ಥಾನದಲ್ಲಿ ನಾಟಕ ಪ್ರವೃತ್ತಿಯು ಪ್ರಾಚೀನ ಕಾಲದಿಂದ ಮುಂದುವರಿದುಕೊಂಡು ಬಂದಿರುವ ಕಲೆ. ಮಹಾರಾಜರು ಈ ಕಲೆಯನ್ನು ಪ್ರೋತ್ಸಾಹಿಸಿದರು.' ಅದಕ್ಕಾಗಿ ಶ್ರೀಚಾಮರಾಜೇಂದ್ರ ಕರ್ನಾಟಕ ನಾಟಕ ಸಂಸ್ಥೆಯನ್ನು ಸ್ಥಾಪಿಸಿದ್ದರು."[೧೩] ಈ ನಾಟಕ ಸಂಸ್ಥೆಯನ್ನು ನಿರ್ವಹಿಸುವಲ್ಲಿ ಹಲವಾರು ಸಮಸ್ಯೆಗಳು ಎದುರಾದವು. ತದನಂತರ ಇದನ್ನು ಮುಚ್ಚಲಾಯಿತು. ಶ್ರೀ ನರಸಿಂಹಯ್ಯ ಮೈಸೂರಿನ ಹೆಸರಾದಂತ ವಕೀಲರು ಮಹಾರಾಜರ ಅಪ್ಪಣೆ ಪಡೆದು ನಾಟಕಗಳಿಗೆ ಪ್ರೋತ್ಸಾಹವನ್ನು ನೀಡುತ್ತಿದ್ದರು. "ಶ್ರೀ ಶಾಕುಂತಲ ಕರ್ನಾಟಕ ನಾಟಕ ಸಭಾ" ಎಂಬ ಒಂದು ನಾಟಕ ಮಂಡಲಿಯನ್ನು ಸೃಷ್ಟಿಸಿದರು. ಎ.ವಿ. ವರದಾಚಾರ್, ಟಿ. ರಾಘವಾಚಾರಿ, ಗುಬ್ಬಿವೀರಣ್ಣ ಮುಂತಾದವರು ನಾಟಕ ಸಂಸ್ಕೃತಿಗೆ ಭದ್ರ ಬುನಾದಿಯನ್ನು ಹಾಕಿದರು. ಯಕ್ಷಗಾನಕ್ಕೆ ಮೈಸೂರು ಮಹಾರಾಜರು ಪ್ರೋತ್ಸಾಹ ನೀಡುತ್ತಿದ್ದರು. ಗುಂಪು ದಶಾವತಾರ ಆಟದವರ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಕಾಲದಲ್ಲಿ ಇವರುಗಳಿಗೆ ಬಂದಿತು. ಅರಮನೆ ಆನೆಬಾಗಿಲು ಬಲಗಡೆ ಕಾರಂಜಿಕೆರೆ ಇದ್ದ ಸ್ಥಳದಲ್ಲಿ ಚಪ್ಪರ ಹಾಕಿಸಿ ಇದರಲ್ಲಿ ವಿನಾಯಕಚೌತಿ ಆರಂಭದಿಂದಲೂ ಪ್ರತಿ ನಿತ್ಯವೂ ಯಕ್ಷಗಾನ ರೂಪವಾಗಿ ವೇಷ ಹಾಕಿಕೊಂಡು ಭಾರತ, ಭಾಗವತ,

ರಾಮಾಯಣ ಮುಂತಾದ ಆಟಗಳನ್ನು ಆಡುವಂತೆ ಅವಕಾಶವಿತ್ತು. ರಂಗಾಚಾರ್ಲುರವರು ದಿವಾನರಾದ ಮೇಲೆ ಅವರ ಅಪ್ಪಣೆ ಮೇರೆಗೆ ಅಂಬರೀಶ ನಾಟಕ ತಯಾರು ಮಾಡಿ ಹೊಸ ಸತ್ರದಲ್ಲಿ ಆಡಿದರು. ಆ ನಾಟಕ ನೋಡಿ ಸಂತೋಷಪಟ್ಟು, ಹರಿಶ್ಚಂದ್ರ ನಾಟಕವನ್ನು ತಯಾರು ಮಾಡಿದರು. ಎರಡೂ ನಾಟಕಗಳನ್ನು ಆಗಿನ ಮಹಾರಾಜರಾದ ಚಾಮರಾಜೇಂದ್ರ ಒಡೆಯರಲ್ಲಿ ಹಾಡುವ ಕಥೆ ಮಾಡುತ್ತೇವೆಂದು ಕೇಳಿಕೊಂಡರು. ಅದಕ್ಕೆ ಚಾಮರಾಜ ಒಡೆಯರ್ ತಮ್ಮ ಅಪ್ಪಣೆಯನ್ನು ನೀಡಿದ್ದರು. ಇದು ಒಡೆಯರ್ ಮನೆತನವು ಸಾಂಸ್ಕೃತಿಕ ಕಾರ್ಯಕ್ರಮಗಳ ಬಗ್ಗೆ ಇಟ್ಟಿದ್ದ ಆಸಕ್ತಿಯನ್ನು ಉಲ್ಲೇಖಿಸುತ್ತದೆ.

ಬ್ರಿಟಿಷರಿಂದ ಅಧಿಕಾರ ಒಡೆಯರ ವಂಶಕ್ಕೆ ವರ್ಗಾವಣೆಯಾದ ನಂತರ ದೇಶಿಯ ಸಂಸ್ಕೃತಿ ಬೆಳವಣಿಗೆಯಾಗಲು ಉತ್ತಮ ಅವಕಾಶಗಳು ಸೃಷ್ಟಿಯಾದವು. ಒಡೆಯರ ಮನೆತನದ ಅರಸರು ಸಹ ಸಂಸ್ಕೃತಿ ಮತ್ತು ಲಲಿತಕಲೆಗಳ ಬಗ್ಗೆ ವಿಶೇಷವಾದ ಆಸಕ್ತಿಯನ್ನು ಹೊಂದಿದ್ದರಿಂದ ಸಂಸ್ಥಾನದಲ್ಲಿ ಸಂಗೀತ, ನಾಟಕ, ನೃತ್ಯ, ಲಲಿತಕಲೆ ಮುಂತಾದವುಗಳಿಗೆ ಹೆಚ್ಚು ಪ್ರೋತ್ಸಾಹ ದೊರೆಯಿತು. ಬ್ರಿಟಿಷ್ ರೆಸಿಡೆಂಟರು ಮೈಸೂರಿನ ಉಸ್ತುವಾರಿಯನ್ನು ವಹಿಸಿದು ಹಲವು ವಿಶೇಷ ಸಂದರ್ಭಗಳಲ್ಲಿ ರೆಸಿಡೆಂಟರನ್ನು ಹಲವು ಕಾರ್ಯಕ್ರಮಗಳಿಗೆ ಆಮಂತ್ರಿಸಲಾಗುತ್ತಿತ್ತು. ದಸರಾಹಬ್ಬ, ಅಂದು ನಡೆಯುವ ಸಾಂಸ್ಕೃತಿಕ ಚಟುವಟಿಕೆಗಳ ವೀಕ್ಷಣೆಗೆ ರೆಸಿಡೆಂಟರನ್ನು ವಿಶೇಷ ಅತಿಥಿಯನ್ನಾಗಿ ಆಮಂತ್ರಿಸಲಾಗುತ್ತಿತ್ತು. ಯುರೋಪಿನ ಅತಿಥಿಗಳೂ ಸಹ ಭಾಗವಹಿಸುತ್ತಿದ್ದರು. ಮೈಸೂರು ಸಂಸ್ಥಾನದ ಅರಸರೂ ಸಂಗೀತಗಾರರಿಗೆ ವಿಶೇಷವಾಗಿ ಎಲ್ಲಾ ಸವಲತ್ತುಗಳನ್ನು ನೀಡುತ್ತಿದ್ದರು. ೧೮೮೧ರಲ್ಲಿ ಆಡಳಿತ ಮೈಸೂರು ಅರಸರಿಗೆ ವರ್ಗಾವಣೆಯಾದಾಗಿನಿಂದ ಭಾರತ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವತನಕ ಮೈಸೂರು ಅರಸರ ಪ್ರೋತ್ಸಾಹ ಸತತವಾಗಿ ದೊರೆಯುತ್ತಿತ್ತು. ಕರ್ನಾಟಕ ಸಾಂಸ್ಕೃತಿಕ ಲೋಕಕ್ಕೆ ಸಂಸ್ಥಾನದ ಅರಸರ ಕೊಡುಗೆ ಅಪಾರವಾಗಿತ್ತು.

[ಈ ಲೇಖನದಲ್ಲಿ ಸೂಚಿತವಾಗಿರುವ ಅಂಶಗಳು ಈಗಾಗಲೇ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಿಂದ ಪ್ರಕಟವಾದ ಕೃತಿಗಳಲ್ಲಿ ಸೇರ್ಪಡೆಯಾಗಿವೆ. ಈ ಲೇಖನದೊಳಗೆ ಸೂಚಿತವಾದ ಅನೇಕ ಹೆಸರುಗಳು ತಪ್ಪಾಗಿದ್ದವು. ಉದಾಹರಣೆಗೆ : ಬಿಡಾರಂ ಕೃಷ್ಣಪ್ಪ ಎಂಬುದಕ್ಕೆ ಭದ್ರಮ್ ಕೃಷ್ಣಪ್ಪ, ಬೈದರಾಮ ಕೃಷ್ಣಪ್ಪ, ಕಾನಕಾನಹಳ್ಳಿ ವಾಸುದೇವಾಚಾರ್ಯ ಎಂಬುದಕ್ಕೆ ಕಂಕನಹಳ್ಳಿ ವಾಸುದೇವಾಚಾರ್ಯ ಎಂಬಿತ್ಯಾದಿ. ಇವುಗಳನ್ನು ಹಾಗೂ ಇತರ ಮಾಹಿತಿ ದೋಷಗಳನ್ನು ಸಾಧ್ಯವಿರುವ ಮಟ್ಟಿಗೂ ಸರಿಪಡಿಸಲಾಗಿದೆ (ಸಂ)].



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎಂ. ಶ್ಯಾಮರಾವ್, **ಮಾಡ್ರನ್ ಮೈಸೂರ್**, ಪುಟ ೨೭೩.

೨. **ಸೆಲೆಕ್ಷನ್ ಆಫ್ ರೆಕಾರ್ಡ್ಸ್ ಫ್ರಂ ರೆಕಾರ್ಡ್ಸ್ ಆಫ್ ದಿ ಮೈಸೂರು ಪ್ಯಾಲೆಸ್**, ವಾಲ್ಯೂಮ್ ೧, ಪುಟ ೧.

೩. ಅದೇ., ಪುಟ ೫.

೪. **ಮ್ಯೂಜಿಕ್ ರೆಸಿಟಲ್ ಆಫ್ ಮೈಸೂರು ಪ್ಯಾಲೆಸ್ ಆರ್ಟಿಸ್ಟ್ ಅಟ್ ನ್ಯಾಷನಲ್ ಕಾಂಗ್ರೆಸ್ ಸೆಷನ್ ಬೆಳಗಾಂ**, ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು, ಪುಟ ೧೩೩.

೫. ಮೈಸೂರು ಅರಮನೆ ಪತ್ರ ಅಮೆಚೂರ್ ಡ್ರಮಟಿಕ್ ಅಸೋಸಿಯೇಷನ್, ಕರ್ನಾಟಕ ರಾಜ್ಯ ಪತ್ರಾಗಾರ, ಮೈಸೂರು ವಿಭಾಗ, ಪುಟ ೧೪೧.

೬. ಮೈಸೂರು ಅರಮನೆ ಪತ್ರಗಳು ಕರ್ನಾಟಕ ಪತ್ರಾಗಾರ, ಮೈಸೂರು ವಿಭಾಗ, ಪುಟ ೩೬.

೭. ಮೈಸೂರು ಅರಮನೆ ಪತ್ರ, ವೈಣಿಕ ವಿದ್ವಾನ್ ವೀಣೆ ಶೇಷಣ್ಣನವರ ಪತ್ರ, ೧೧ನೇ ಡಿಸೆಂಬರ್ ೧೮೯೬, ಕರ್ನಾಟಕ ರಾಜ್ಯ ಪತ್ರಾಗಾರ ಮೈಸೂರು, ಪುಟ ೧೬.

೮. ಮೈಸೂರು ಅರಮನೆ ಚಾಮುಂಡಿ ತೊಟ್ಟಿ ಇಲಾಖೆ ಸಂಗೀತ ವಿದ್ವಾನರ ಸೇವಾಪುಸ್ತಕ, ಕರ್ನಾಟಕ ರಾಜ್ಯ ಪತ್ರಾಗಾರ, ಮೈಸೂರು ವಿಭಾಗ.

೯. **ಸೆಲೆಕ್ಷನ್ಸ್ ಫ್ರಂ ದ ರೆಕಾರ್ಡ್ಸ್ ಆಫ್ ದ ಮೈಸೂರು ಪ್ಯಾಲೆಸ್**, ಮೈಸೂರು ವಿಭಾಗ, ಅರಮನೆ ಪತ್ರಗಳು, ಪುಟ ೧೯.

೧೦. ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು, ಮಾರ್ಚ್ ೪, ೧೯೧೭, ವೀಣೆ ಸುಬ್ಬಣ್ಣನವರು ಮಹಾರಾಜರಿಗೆ ಬರೆದ ಪತ್ರ.

೧೧. ಮೈಸೂರು ಅರಮನೆ ಪತ್ರಗಳು, ಕರ್ನಾಟಕ ರಾಜ್ಯ ಪತ್ರಗಾರ, ಮೈಸೂರು ವಿಭಾಗ, ಪುಟ ೪೦.

೧೨. ಮೈಸೂರು ಅರಮನೆ ಪತ್ರಗಳು, ಕರ್ನಾಟಕ ರಾಜ್ಯ ಪತ್ರಗಾರ, ಮೈಸೂರು ವಿಭಾಗ, ಪುಟ ೬೦.

೧೩. ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ, ಅರಮನೆ ಪತ್ರಗಳು, ಕರ್ನಾಟಕ ರಾಜ್ಯ ಪತ್ರಾಗಾರ, ಮೈಸೂರು, ಪುಟ ೧೮೧.

ಚಾಮುಂಡಿತೊಟ್ಟಿ ವಿಭಾಗದಲ್ಲಿದ್ದ ಸಂಗೀತ ವಿದ್ವಾನರು

| ಪದನಾಮ | ಹೆಸರು | ವಯಸ್ಸು | ಉದ್ಯೋಗಕ್ಕೆ ಸೇರಿದ ದಿನ | ಸೇವೆ | ಸಂಬಳ | ಹೆಚ್ಚುವರಿ ಸಂಬಳ |
|---|---|---|---|---|---|---|
| ವೀಣೆ | ವೈಣಿಕಶಿಖಾಮಣಿ ಶೇಷಣ್ಣ | ೫೩ ೧೮೮೨ | ಸೆಪ್ಟಂಬರ್ | ೨೫ | ೫೦ | ಆಗಸ್ಟ್ ೧೯೦೨-೧೦ |
| ವೀಣೆ | ಸುಬ್ಬಣ್ಣ | ೪೫ | ಜೂನ್ ೧೮೮೮ | ೧೯ | ೪೫ | ಮಾರ್ಚ್ ೧೮೯೧-೩೦ |
| ಆಗ್ರಾಫರಾನ | ಅಬ್ದುಲ್ ಖಾನ್ | ೩೨ | ಡಿಸೆಂಬರ್ ೧೮೯೬ | ೧೧ | ೨೫ | ಆಗಸ್ಟ್ ೧೯೯೦-೦೫ |
| ಹಾಡುಗಾರ | ಚಿಕ್ಕ ಸುಬ್ಬರಾವ್ | ೫೪ | ಅಕ್ಟೋಬರ್ ೧೮೯೨ | ೧೫ | ೨೦ | ಜುಲೈ ೧೯೦೪-೦೫ |
| ಹಾಡುಗಾರ | ಬಿ. ಕೃಷ್ಣಪ್ಪ | ೪೦ | ಅಕ್ಟೋಬರ್ ೧೮೮೫ | ೨೨ | ೨೦ | ಜುಲೈ ೧೯೦೪-೦೫ |
| ಹಾಡುಗಾರ | ಸೇತುರಾಂ | ೪೬ | ಮಾರ್ಚ್ ೧೮೮೯ | ೧೮ | ೧೫ | ಜುಲೈ ೧೯೦೪-೦೫ |
| ಹಾಡುಗಾರ | ಪಟ್ಟಾಭಿರಾಂ | ೪೮ | ಜುಲೈ ೧೮೯೩ | ೧೪ | ೧೦ | ಜುಲೈ ೧೯೦೪-೦೫ |
| ಹಾಡುಗಾರ | ಸೇತುರಾಮಯ್ಯ | ೪೧ | ಮಾರ್ಚ್ ೧೮೮೩ | ೨೪ | ೧೦ | ರಜಾ ಮೇಲ ಹೋಗಿದ್ದರು |
| ಹಾಡುಗಾರ | ಕರಿಗಿರಿಯಾಚಾರ್ | ೪೯ | ಏಪ್ರಿಲ್ ೧೯೦೩ | ೪-೯ | ೧೦ | ಜುಲೈ ೧೯೦೪-೦೪ |
| ಹಾಡುಗಾರ | ಕಾನಕಾನಹಳ್ಳಿ ವಾಸುದೇವಚಾರ್ | ೪೩ | ನವಂಬರ್ ೧೮೭೧ | ೩೬ | ೧೦ | ಜುಲೈ ೧೯೦೪-೦೪ |
| ಹಾಡುಗಾರ | ಶಿವರಾಮಯ್ಯ | ೧೯ | ಡಿಸೆಂಬರ್ ೧೯೦೦ | ೭ | ೯ | ಜುಲೈ ೧೯೦೪-೦೪ |
| ಹಾಡುಗಾರ | ಅನಂತ ಸುಬ್ಬಯ್ಯ | ೪೭ | ಏಪ್ರಿಲ್ ೧೯೦೩ | ೪ | ೬ | ಜುಲೈ ೧೯೦೪-೦೪ |
| ಮೋರ್ಚಿಂಗ್ | ರಾಮಾಚಾರ್ | ೬೨ | ಮಾರ್ಚ್ ೧೮೮೩ | ೨೭ | ೬ | ಜುಲೈ ೧೯೦೪-೦೪ |
| ನೌಕಾಲಿ | ಮಹಾಲಿಂಗಯ್ಯ | ೩೭ | ಏಪ್ರಿಲ್ ೧೯೦೫ | ೨-೯ | ೧೦ | ಜುಲೈ ೧೯೦೪-೦೪ |




# ಬೆಂಗಳೂರಿನಲ್ಲಿ ಪ್ಲೇಗ್ ಮತ್ತು ಮಲ್ಲೇಶ್ವರಂ ಬಡಾವಣೆಯ ರಚನೆ (೧೯೮೯–೧೯೦೨)

ಡಾ. ಶೋಭ*

೧೯೦೧ರಲ್ಲಿ ಮಾಧವರಾಯರ ಸಂಪಾದಕತ್ವದಲ್ಲಿ ಪ್ಲೇಗ್ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಅದರಲ್ಲಿ ಮಲ್ಲೇಶ್ವರಂ ಮತ್ತು ಬಸವನಗುಡಿ ಬಡಾವಣೆ ರಚನೆಗೊಂಡ ಬಗ್ಗೆ ವಿವರಗಳಿವೆ. ಈ ವರದಿಯೂ ಸೇರಿದಂತೆ ಮುಂದಿನ ಅನೇಕ ಲೇಖಕರು ಪ್ಲೇಗ್ ಪಿಡುಗಿನಿಂದಾಗಿ ಊರಾಚೆ ತತ್ಕಾಲಿಕವಾದ ಶಿಬಿರಗಳನ್ನು ಹಾಕಿದ್ದು ಆ ನಂತರ ಅವುಗಳನ್ನೇ ಬಡಾವಣೆಗಳನ್ನಾಗಿ ರಚಿಸಲಾಯಿತು ಎಂದೇ ಹೇಳಿದ್ದಾರೆ.

ಆದರೆ ಇದಕ್ಕೂ ಮೊದಲೇ ಇಂದಿನ ಮಲ್ಲೇಶ್ವರಂ ಪ್ರದೇಶದಲ್ಲಿ ಕೆಲವು ಅಭಿವೃದ್ಧಿ ಕಾರ್ಯಗಳು ನಡೆದಿದ್ದವು. ೧೮೬೦ರಲ್ಲಿ ಇಲ್ಲಿ ಬಡಾವಣೆಯೊಂದನ್ನು ರೂಪಿಸಬೇಕೆಂದು ಅಂದಿನ ಸಿಟಿ ಇಂಪ್ರೂವ್‌ಮೆಂಟ್ ಟ್ರಸ್ಟ್ ಬೋರ್ಡ್ ಯೋಜನೆಯನ್ನು ಹಾಕಿತ್ತೆಂದು ಆಧಾರ ರಹಿತವಾದ ಹೇಳಿಕೆಯೊಂದಿದೆ. ಬೆಂಗಳೂರಿನ ಪುರಸಭೆ ೧೮೬೨ರಲ್ಲಿಯೇ ಇದ್ದ ದಾಖಲೆಗಳಿವೆ. ೧೮೮೨ರಲ್ಲಿ ಸ್ಯಾಂಕಿ ಮಹಾಶಯನು ಇಂದಿನ ಸ್ಯಾಂಕಿ ಕೆರೆಯನ್ನು ಅಭಿವೃದ್ಧಪಡಿಸಿದ್ದು ಆತನ ಹೆಸರನ್ನೇ ಕರೆಗೆ ಇಡಲಾಗಿದೆ. (ಈಗಲೂ ಹಳೆಯ ತಲೆಮಾರಿನ ಜನರ ಬಾಯಲ್ಲಿ ಇರುವುದು 'ಗಂಧದ ಕೋಟಿ ಕೆರೆ' ಎಂದೇ). ೧೮೮೯ರಲ್ಲಿ ಮಲ್ಲೇಶ್ವರದ ಪಶ್ಚಿಮದ ಎಲ್ಲೆ ಎನ್ನಬಹುದಾದ ಬೆಂಗಳೂರು–ಅರಸೀಕೆರೆ ರೈಲ್ವೆ ಹಳಿಯನ್ನು ಹಾಕಲಾಯಿತು. ದಿವಾನ್ ಶೇಷಾದ್ರಿ ಅಯ್ಯರ್ ಅವರು ೧೮೮೯ರ ಮಾರ್ಚ್ ತಿಂಗಳಲ್ಲಿ ಬೆಂಗಳೂರಿನ ಅಭಿವೃದ್ಧಿಗಾಗಿ ಸಮಿತಿಯೊಂದನ್ನು ರಚಿಸಿದ್ದು ಅದು ಬೆಂಗಳೂರಿನ ಉತ್ತರ ಮತ್ತು ಪಶ್ಚಿಮಗಳಲ್ಲಿ ನೂತನ ಬಡಾವಣೆಗಳನ್ನು ನಿರ್ಮಿಸಲು ಶಿಫಾರಸ್ಸು ಮಾಡಿತ್ತು. ಹಾಗೂ ಈ ಸಮಿತಿ ಹಲವಾರು ಕಾರಣಗಳಿಂದ ಆಗಿಂದ್ದಾಗೆ ಬದಲಾಗುತ್ತಿತ್ತು. ಉತ್ತರ ಬಡಾವಣೆಯಲ್ಲಿ ಇಂದಿನ ಶೇಷಾದ್ರಿಪುರ, ಕುಮಾರ ಪಾರ್ಕ್, ಪ್ಯಾಲೆಸ್ ಗುಟ್ಟಹಳ್ಳಿ, ವೆಂಕಟರಂಗಾಪುರ, ವೈಯಾಲಿಕಾವಲ್, ಗಾಯಿತ್ರಿದೇವಿ ಪಾರ್ಕ್, ಮಲ್ಲೇಶ್ವರಂ ಪಶ್ಚಿಮ ಹಾಗೂ ಇವುಗಳ ಮಧ್ಯೆ ಕೋದಂಡರಾಮಪುರ, ಈಜುವಕೊಳದ ಬಡಾವಣೆ, ಮಹಮಡನ್ ಬ್ಲಾಕ್ ಮತ್ತು ಲಿಂಕ್ ರಸ್ತೆಗಳು ಸೇರ್ಪಡೆಗೊಂಡಿದ್ದವು.

ಮೊದಲಿಗೆ ಧರ್ಮಾಂಬುಧಿ ಕೆರೆಗೆ ಹೊಂದಿಕೊಂಡಿದ್ದ ಮಲ್ಲೇನಹಳ್ಳಿಯ ೩೭ ಮನೆಗಳನ್ನು ತೆರವುಗೊಳಿಸಿ ಮನೆ ಮಾಲಿಕರಿಗೆ ಸೂಕ್ತವಾದ ಪರಿಹಾರ ನೀಡಿದ್ದಲ್ಲದೆ ಅವರುಗಳಿಗೆ ಮಹಾರಾಜ ಮಿಲ್‌ನ ಪೂರ್ವ ಭಾಗದಲ್ಲಿ ನಿವೇಶನಗಳನ್ನು ನೀಡಲಾಯಿತು. ಕುಡಿಯುವ ನೀರಿಗಾಗಿ ಎರಡು ಭಾವಿಗಳನ್ನು ತೆಗೆಯಲಾಯಿತು. ರಸ್ತೆಗಳು ಮತ್ತು ಮುಚ್ಚಿದ ಬಚ್ಚಲುಗಳನ್ನು ನಿರ್ಮಿಸಲಾಯಿತು. ಈ ಹೊಸದಾದ ಪ್ರದೇಶಕ್ಕೆ ಹೊಸ ಮಲ್ಲೇನಹಳ್ಳಿ ಎಂದೇ ಹೆಸರಿಸಲಾಗಿತ್ತು. ಹೊಸ ಮಲ್ಲೇನಹಳ್ಳಿಯ ಪೂರ್ವಕ್ಕೆ ಗುಟ್ಟಹಳ್ಳಿ ಪ್ರದೇಶಕ್ಕೆ ಹೊಂದಿಕೊಂಡಿದ್ದ ಹೊಸ ರಸ್ತೆಯ ಬದಿಯಲ್ಲಿ ನೂರಒಂಬತ್ತು ನಿವೇಶನಗಳನ್ನು ನಿರ್ಮಿಸಿದ್ದು ಅವುಗಳಲ್ಲಿ ೬೫ ನಿವೇಶನಗಳನ್ನು ಬ್ರಾಹ್ಮಣರಿಗೂ, ೪೪ನ್ನು ಇತರ ಹಿಂದುಗಳಿಗೂ ಮೀಸಲಿರಿಸಿತು. ಅವುಗಳಲ್ಲಿ ೫೪ ನಿವೇಶನಗಳು ಹರಾಜಿನ ಮೂಲಕ ವಿಲೇವಾರಿಯಾಗಿದ್ದು ಮನೆಗಳನ್ನು ನಿರ್ಮಿಸುವ ಕಾರ್ಯ ಆರಂಭವಾಗಿತ್ತು. ಇವುಗಳಲ್ಲದೆ ಇನ್ನಷ್ಟು ದೊಡ್ಡ ನಿವೇಶನಗಳನ್ನು ವಿವಿಧ ಭಾಗಗಳಲ್ಲಿ ನಿರ್ಮಿಸಿ ಬಂಗಲೆಗಳಿಗಾಗಿ ಸೂಕ್ತವಾಗಿ ಪರಿವರ್ತಿಸಿ ಅರಮನೆಯ ಅಧಿಕಾರಿಗಳಿಗೆ ಮಾರಾಟ ಮಾಡಲಾಯಿತು. ಇದೇ ಮಾರ್ಚ್ ೧೮೮೯ರ ಸರ್ಕಾರಿ ಪತ್ರದಲ್ಲಿ ನಿವೇಶನಗಳನ್ನು ಪಡೆದು (ಬಂಗಲೆ ಮತ್ತು ಮನೆಗಳ ನಿವೇಶನ ಪಡೆದವರ) ಪೂರ್ತಿಯಾಗಿ ಮೊತ್ತ ನೀಡದವರ ಹೆಸರು ಮತ್ತು ಬರಬೇಕಾದ ಬಾಕಿ ಹಣದ ವಿವರಗಳು ಹಾಗೂ ನಿವೇಶನಗಳ ಸಂಖ್ಯೆಯನ್ನು ನೀಡಿದೆ. ಅಲ್ಲದೆ ೧೮೮೯ರಿಂದ ೨೮ ಜೂನ್ ೧೮೯೫ರ ವರೆಗಿನ ಖರ್ಚು ವೆಚ್ಚಗಳ ಪಟ್ಟಿಯನ್ನು ನೀಡಿದ್ದು ಇದು ನಂತರದ ಸೇರ್ಪಡೆಯಾಗಿದೆ. ೨೬ ಜೂನ್ ೧೮೯೫ರಲ್ಲೂ ಇನ್ನೂ ಹಳೆ ಬಾಕಿ ಉಳಿಸಿಕೊಂಡವರ ಹಾಗೂ ಮಧ್ಯದ ಅವಧಿಯಲ್ಲಿ ನಿವೇಶನ ಪಡೆದು ಪೂರ್ತಿ

* ಹಿರಿಯ ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ಮಾಡಬಾಳ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ–೫೬೧೨೦೧.

ಹಣ ನೀಡದವರ ಪಟ್ಟಿಯನ್ನೂ ನೀಡಲಾಗಿದೆ. ೧೮೯೫ರಲ್ಲಿ ಕಾದಿರಿಸಿದ ಜನಾಗದವರು ಬಾರದೇ ಹೋದಾಗ ಹಿಂದುಗಳಿಗೆ ಮೀಸಲಿರಿಸಿದ ನಿವೇಶನಗಳನ್ನು ಸ್ಥಳೀಯ ಕ್ರಿಶ್ಚಿಯನ್ ಅವರಿಗೆ ನೀಡಿದ್ದ ೭೦ ನಿವೇಶನಗಳಿಗೆ ಯಾರೂ ಬಾರದಿದ್ದರಿಂದ ಐದು ನಿವೇಶನಗಳಿಗೂ ಕಡಿತಗೊಳಿಸಲಾಯಿತು. ೨೮ ಮಾರ್ಚ್ ೧೮೯೫ರಲ್ಲಿ ನಗರಾಭಿವೃದ್ಧಿ ಸಮಿತಿಯನ್ನು ವಿಸರ್ಜಿಸಿ ನಿವೇಶನಗಳನ್ನು ಸಿಟಿ ಮುನ್ಸಿಪಾಲಿಟಿಗೆ ವರ್ಗಾಯಿಸಲಾಯಿತು. ಹಾಗೂ ಬಾಕಿ ಇರುವ ಕೆಲಸಗಳನ್ನು ತ್ವರಿತವಾಗಿ ಮುಗಿಸಲು ಮತ್ತು ಮೀಸಲಿರಿಸಿಯೂ ಆಯಾ ಸಮುದಾಯದವರು ಬಿಕರಿ ಮಾಡಿಲ್ಲದ ನಿವೇಶನಗಳನ್ನು ಜನ ಸಾಮಾನ್ಯರಿಗೆ ಹಂಚಲು ಆದೇಶಿಸಲಾಯಿತು.

ಪ್ರಾಯಶ ೧೮೯೩ರಿಂದಲೇ ಪ್ರಕ್ರಿಯೆ ಆರಂಭವಾಗಿದ್ದು ಜನವರಿ ೧೮೯೪ರಲ್ಲಿ ಸ್ಯಾಂಕಿಕೆರೆಯ ಕೆಳಭಾಗದಲ್ಲಿದ್ದ ಖಾಲಿ ಮೈದಾನವನ್ನು ವಶಪಡಿಸಿಕ್ಕೊಂಡು ನಿವೇಶನಗಳಾಗಿ ಪರಿವರ್ತಿಸುವ ಬಗ್ಗೆ ದಿವಾನರು ಒಪ್ಪಿಗೆ ಸೂಚಿಸಿರುವ ಪತ್ರ ಲಭ್ಯವಿದೆ. ಸದರಿ ಆಜ್ಞೆಯಿಂದ ಕೆಲವು ಸಂಗತಿಗಳನ್ನು ಗುರುತಿಸಬಹುದು. (ಹಿಂದಿನ ಆಜ್ಞೆಗಳಲ್ಲಿ ಇಲ್ಲದ) ಭೂಸ್ವಾಧೀನ ಕಾಯ್ದೆ ಸೆಕ್ಷನ್ ೬, ೧೮೭೦ರ ಪ್ರಕಾರ ಭೂಮಿಯನ್ನು ವಶಪಡಿಸಿಕೊಳ್ಳಲಾಯಿತು. ನಿವೇಶನಗಳು ಖಾಲಿಯಿದ್ದರೂ ಹಲವಾರು ವ್ಯಕ್ತಿಗಳ ವಶದಲ್ಲಿದ್ದವು ಹಾಗೂ ಅವುಗಳಿಗೆ ನಾಲ್ಕೂಬದಿಯಲ್ಲಿ ಅಚ್ಚುಕಟ್ಟುಗಳಿದ್ದು ಮಾಲಿಕರ ಹೆಸರಿಗೆ ನೋಂದಣಿ ಮಾಡಿಸಲಾಗಿತ್ತು. ವಶಪಡಿಸಿಕೊಂಡ ನಿವೇಶನಗಳ ಪೂರ್ವಕ್ಕೆ ನಾಲೆಯಿದ್ದು (ಸ್ಯಾಂಕಿ ಕರೆಯ ಕೋಡಿಯಿಂದ ಹೊರಬಂದ ನೀರು) ಅದು ಧರ್ಮಾಂಬುಧಿ ಕೆರೆಗೆ ಸಂಪರ್ಕ ಹೊಂದಿತ್ತು. (ಸ್ಯಾಂಕಿ ಕರೆಗೆ ಪಶ್ಚಿಮದಲ್ಲಿ ಇನ್ನೊಂದು ಕೋಡಿ ಇತ್ತು. ಈ ಎರಡೂ ಕೋಡಿಗಳು ಇತ್ತೀಚಿನ ವರ್ಷಗಳಲ್ಲೂ ನೋಡಬಹುದಿತ್ತು) ನಿವೇಶನದ ದಕ್ಷಿಣಕ್ಕೆ ರಂಗನಾಥಪುರ ಇತ್ತು. (ಈ ಪ್ರದೇಶ ಅದೇ ಹೆಸರಿನಲ್ಲಿ ಇಂದಿಗೂ ಇದೆ) ಪಶ್ಚಿಮಕ್ಕೆ ನೀರಿಗೆ ಸಂಬಂಧಿಸಿದ ಕಾರ್ಯಾಗಾರವಿತ್ತು (ವಾಟರ್ ವರ್ಕ್ಸ್) (ಪ್ರಾಯಶ ಈ ಕಾರ್ಯಾಗಾರ ಇಂದಿನ ತಿಪ್ಪಗೊಂಡನಹಳ್ಳಿಯಿಂದ ಬರುವ ೧೮೯೫ರಲ್ಲಿ ಆರಂಭವಾದ ನೀರಿನ ಸಂಸ್ಕರಣಾ ಕೇಂದ್ರ ಜ್ಯೂಯಲ್ ಫಿಲ್ಟರ್‌ಗೆ ವರ್ಗವಾಗುವ ಮೊದಲು ಸ್ಯಾಂಕಿಕೆರೆಯ ಪಶ್ಚಿಮದಲ್ಲಿ ನೀರು ಸಂಸ್ಕರಣಾ ಘಟಕ ಒಂದಿದ್ದು ಅಲ್ಲಿಂದ -ಹೆಸರಘಟ್ಟದಿಂದ ಬರುವ- ನೀರನ್ನು ಶುದ್ಧೀಕರಿಸಿ ಸರಬರಾಜು ಮಾಡುತ್ತಿದ್ದಿರಬಹುದು.) ಹೊಸದಾಗಿ ವಶಪಡಿಸಿ ಕೊಂಡ ನಿವೇಶನಗಳಲ್ಲಿ ಕೆಲಭಾಗ ರಂಗನಾಥಪುರಕ್ಕೂ ಇನ್ನು ಕೆಲಭಾಗ ಜಕ್ಕಸಂದ್ರಕ್ಕೂ ಸೇರಿದ್ದಾಗಿತ್ತು. ಇಂದು ಈ ಎರಡು ವಿಭಾಗಗಳೂ ಮಲ್ಲೇಶ್ವರದಲ್ಲಿ ಸೇರಿಹೋಗಿದ್ದರೂ ೧೯೪೫ರ ವರೆವಿಗೂ ಪ್ರತ್ಯೇಕವಾದ ಅಸ್ತಿತ್ವವನ್ನು ಪಡೆದಿತ್ತು. ಬೆಂಗಳೂರಿನ ಉತ್ತರ ಬಡಾವಣೆಗಾಗಿ ಹಲವಾರು ಬಾರಿ ಸಮಿತಿಗಳನ್ನು ಪುನಾರಚಿಸಲಾಗಿತ್ತು ಹಾಗೂ ೨೨ ಜನವರಿ ೧೮೯೮ರಿಂದ ೩೧ ಮಾರ್ಚ್ ೧೮೯೫ರ ವರೆಗೆ ೧,೪೧,೪೮೯ ರೂಪಾಯಿಗಳನ್ನು ವೆಚ್ಚಮಾಡಲಾಗಿತ್ತು. ೨೨ ಜೂನ್ ೧೮೯೨ರಲ್ಲಿ ಅಂದಿನ ಡೆಪ್ಯೂಟಿ ಕಮಿಶನರ್ ಆಗಿದ್ದ ವಿ.ಪಿ. ಮಾಧವರಾಯರು ಸಮಿತಿಯ ಅಧ್ಯಕ್ಷರಾದ ಮೇಲೆ ಬಡಾವಣೆಯ ಕಾಮಗಾರಿ ತ್ವರಿತಗೊಂಡಿತು.

ಹಳೆಯ ಮೈಸೂರು ಸೇರಿದಂತೆ ಬಾರತಾದ್ಯಂತ ಪ್ಲೇಗ್ ಒಮ್ಮೆಲೆ ಕಾಣಿಸಿಕೊಂಡಿದ್ದಲ್ಲ. ಆದರೆ ೧೮೯೭ರ ವೇಳೆಗೆ ಪ್ಲೇಗ್ ಉಲ್ಬಣಗೊಂಡು ಸಾವು ನೋವುಗಳು ಅಧಿಕ ಗೊಂಡವು. ಸರ್ಕಾರ ಮಧ್ಯೆ ಪ್ರವೇಶಿಸಿ ಪ್ಲೇಗ್‌ಗೆ ಮೂಲವಾದ ಹಳೆಯ ಹಾಗೂ ಇಕ್ಕಟ್ಟಾಗಿದ್ದ ಮನೆಗಳನ್ನು ಒಡೆದು ಹಾಕಿತು. ಪ್ಲೇಗ್ ಪೀಡಿತ ಪ್ರದೇಶದಿಂದ ಸಾಕಷ್ಟು ದೂರದಲ್ಲಿ ತತ್ಕಾಲಿಕವಾಗಿ ಶಿಬಿರಗಳನ್ನು (ಟೆಂಟ್) ಹಾಕಿ ವಸತಿ ಸೌಲಭ್ಯವನ್ನು ಮಾಡಿಕೊಡಲಾಯಿತು. ಮುಂದೆ ವಿ.ಪಿ. ಮಾಧವರಾಯರನ್ನು ಪ್ಲೇಗ್ ಕಮಿಶನರ್ ಆಗಿ ನೇಮಕ ಮಾಡಲಾಯಿತು. ಅವರು ೧ನೇ ಜುಲೈ ೧೮೯೮ರಿಂದ ೩೦ನೇ ಜೂನ್ ೧೮೯೯ರವರೆಗೆ ಪ್ಲೇಗ್ ಕಾಣಿಸಿಕೊಂಡ ಸ್ಥಳಗಳು, ಸಾವು-ನೋವುಗಳು, ಪರಹಾರ ಕುರಿತ ಕಾರ್ಯಕ್ರಮಗಳು, ಖರ್ಚು-ವೆಚ್ಚಗಳು ಇತ್ಯಾದಿಗಳನ್ನು ಕುರಿತು ವಿವರವಾಗಿ ವರದಿಯನ್ನು ನೀಡಿದ್ದಾರೆ

(ಬೆಂಗಳೂರಿನ ಸಿಟಿ ಹಾಗೂ ದಂಡು ಪ್ರದೇಶಗಳಿಗೆ ಪ್ರತ್ಯೇಕವಾಗಿ ವರದಿಯನ್ನು ತಯಾರಿಸಿದ್ದಾರೆ.) ವರದಿ ೧೯೦೧ರಲ್ಲಿ ಮುದ್ರಣಗೊಂಡಿದ್ದು ಲಭ್ಯವಿದೆ. ವರದಿಯ ಅನುಬಂಧದಲ್ಲಿ Sanitary Works ನ Superintending Enginer ಆಗಿದ್ದ, Standish Lee ಅವರು ನೀಡಿದ ಬೆಂಗಳೂರಿನ ಬಸವನಗುಡಿ ಮತ್ತು ಮಲ್ಲೇಶ್ವರಂ ಬಡಾವಣೆಗಳ ರಚನೆ, ನಿವೇಶನಗಳ ಮಾದರಿಗಳು, ಹರಾಜು ಪ್ರಕ್ರಿಯೆ, ಸಂದಾಯವಾದ ಮೊತ್ತ ಇತ್ಯಾದಿ ವಿವರಗಳೊಂದಿಗೆ ೧೮೯೮ರಲ್ಲಿ ಸಿದ್ಧವಾಗಿದ್ದ ಈ ಎರಡೂ ಬಡಾವಣೆಗಳ ನಕ್ಷೆಯನ್ನು ನೀಡಲಾಗಿದೆ. ಎಂದರೆ ಪ್ಲೇಗ್ ಕಾಣಿಸಿಕೊಳ್ಳುವ ಮೊದಲೇ ಬಡಾವಣೆಗಳು ಸಿದ್ದವಾಗಿದ್ದವು,

ಮಲ್ಲೇಶ್ವರದ ನಕ್ಷೆಯಲ್ಲಿ ಮುಖ್ಯವಾಗಿ ಕೆಳಭಾಗದಲ್ಲಿ ಇಂದಿನ ಸಂಪಿಗೆ ರಸ್ತೆ ಪೂರ್ತಿಯಾಗಿ ಎಡದಿಂದ ಬಲಕ್ಕೆ ಮತ್ತು ಐದನೇ ಅಡ್ಡರಸ್ತೆಯನ್ನು ತೆಂಗಿನಮರದ ರಸ್ತೆಯಿಂದ ಮೇಲ್ಭಾಗದಲ್ಲಿ ರೈಲ್ವೆಹಳಿಯವರೆಗೆ ಪ್ರಧಾನವಾಗಿ ತೋರಿಸಿದೆ.

ಬಲಭಾಗದಲ್ಲಿ ಇಂದಿನ ೧೫ನೇ ಅಡ್ಡರಸ್ತೆಯನ್ನು ಕೆಳಗಿನಿಂದ ಮೇಲಕ್ಕೆ ಗುರುತಿಸಿದ್ದರೂ ಅದರಾಚೆಗೆ ಹದಿನಾರನೇ ಅಡ್ಡರಸ್ತೆ ಸಹ ಇದೆ. ಇಂದಿನ ಮಂತ್ರಿಮಾಲ್ ಸಮುಚ್ಚಯದ ತೀರಾ ಎಡಬದಿಗೆ (ಮಹಾ)ರಾಜ ಮಿಲ್ಸ್ ಇದ್ದು ಅಲ್ಲಿಂದ ಒಂದನೆಯ ಅಡ್ಡರಸ್ತೆಯವರೆಗೆ ಮಿಲ್‌ಗೆ ಸೇರಿದ ಖಾಲಿ ಬಯಲು ಪ್ರದೇಶವಿತ್ತು. ಸಂಪಿಗೆ ರಸ್ತೆಯ ಪಶ್ಚಿಮಕ್ಕೆ ಏಳನೇ ಅಡ್ಡರಸ್ತೆಯವರೆಗೆ ಇದ್ದ ಪ್ರದೇಶವನ್ನು ನಿರುಪಯೋಗಿ ಬಯಲು (ಬ್ರೋಕನ್ ಗ್ರೌಂಡ್) ಎಂದು ಕರೆಯಲಾಗಿದೆ. ಇವಿಷ್ಟು ಪ್ರದೇಶ ಇಂದಿನ ಕೆ.ಸಿ. ಜನರಲ್ ಆಸ್ಪತ್ರೆ ಹಾಗೂ ಅದರ ಪಕ್ಕದ ಆಟದ ಮೈದಾನಗಳಾಗಿವೆ. ಸಂಪಿಗೆ ರಸ್ತೆ (ಅಥವ ೨ನೇ ಮುಖ್ಯರಸ್ತೆ) ಯ ಮೇಲೆ ಏಳನೇ ಅಡ್ಡರಸ್ತೆಯಿಂದ ೧೫ನೇ ಅಡ್ಡರಸ್ತೆಯವರೆಗೆ ಇಂದಿನ ಈಸ್ಟ್ ಪಾರ್ಕ್ ಮತ್ತು ವೆಸ್ಟ್ ಪಾರ್ಕ್ ರಸ್ತೆಗಳು ಸೇರಿದಂತೆ ಉದ್ಯಾನವನಕ್ಕಾಗಿ ಮೀಸಲಿರಿಸಿತ್ತು. ಅದು ಇಂದು ಕಡಿತಗೊಂಡು ೧೪ ಮತ್ತು ೧೭ನೇ ರಸ್ತೆಯವರೆಗೆ ವ್ಯಾಪಿಸಿದೆ. ವೆಸ್ಟ್‌ಪಾರ್ಕ್‌ನಲ್ಲಿ ಹನ್ನೊಂದು ಮತ್ತು ಹನ್ನೆರಡನೇ ಅಡ್ಡರಸ್ತೆ ಒಳಗಿನ ಪ್ರದೇಶವನ್ನು ಸಹ 'ನಿರುಪಯೋಗಿ ಬಯಲು' ಎಂದು ಕರೆದಿದ್ದು ಅದು ಇಂದಿನ ಹೊಸ ಮಾರುಕಟ್ಟೆಯ ಹಿಂದಿನ ಚಾಮುಂಡಿ ಸ್ಕೌಟ್ ಗ್ರೂಪ್ ಹಾಗೂ ಇನ್ನಿತರ ಸಂಸ್ಥೆಗಳಿಗೆ ನೀಡಲಾಗಿದೆ. ಸಂಪಿಗೆ ರಸ್ತೆಯ ಕೆಳಗೆ ಒಂದನೇ ರಸ್ತೆಯು ಸಿರೂರ್ ಪಾರ್ಕ್‌ನಿಂದ ಆರಂಭಿಸಿ ಗೀತಾಂಜಲಿ ಸಿನಿಮಾ ಮಂದಿರ ದಾಟಿ ಎಂಟನೇ ಅಡ್ಡರಸ್ತೆಯ ಬಳಿ ಸ್ವಲ್ಪ ಮೇಲಕ್ಕೆ ಸರಿದು ದೇವಸ್ಥಾನದ ರಸ್ತೆಯಲ್ಲಿ ಮುಂದುವರಿದು ಹದಿನಾರನೇ ಅಡ್ಡರಸ್ತೆಯವರೆಗೆ ವ್ಯಾಪಿಸಿದೆ. ಈ ಹದಿನಾರನೇ ಅಡ್ಡರಸ್ತೆ ಮೇಲ್ಭಾಗಕ್ಕೆ ವೆಸ್ಟ್ ಪಾರ್ಕ್ ರಸ್ತೆಯವರೆಗೆ ಮಾತ್ರ ಇದೆ. ಮಲ್ಲೇಶ್ವರದ ಪಶ್ಚಿಮಕ್ಕೆ ಪೂರ್ತಿಯಾಗಿ ಅರಸೀಕೆರೆ ರೈಲ್ವೆ ಮಾರ್ಗವಿದೆ. ಇದಕ್ಕೆ ಹೊಂದಿಕೊಂಡಂತೆ ಸಮಾನಾಂತರವಾಗಿ ರಸ್ತೆಯಿದ್ದು ಉತ್ತರಕ್ಕೆ ೧೫ನೇ ಅಡ್ಡರಸ್ತೆಗೆ ಸೇರ್ಪಡೆಗೊಂಡಿದೆ. ಹದಿನೈದನೆಯ ಅಡ್ಡರಸ್ತೆ ಮತ್ತು ಏಳನೇ ಮುಖ್ಯರಸ್ತೆ ಸೇರುವಲ್ಲಿಯಿಂದ ತುಮಕೂರಿನ ಕಡೆಗೆ ಹೋಗುವ ರಸ್ತೆಯನ್ನು ತೋರಿಸಿದೆ. ಮೂರು ಮತ್ತು ನಾಲ್ಕನೇ ಮುಖ್ಯರಸ್ತೆ ಹಾಗೂ ಏಳು ಮತ್ತು ಎಂಟನೇ ಅಡ್ಡರಸ್ತೆಯ ಮಧ್ಯದ ಪ್ರದೇಶವನ್ನು ಮಾರುಕಟ್ಟೆಗೂ ಅದಕ್ಕೆ ಹೊಂದಿಕೊಂಡಂತೆ ಎಂಟು ಮತ್ತು ಒಂಬತ್ತನೇ ಅಡ್ಡರಸ್ತೆಯ ಮಧ್ಯದ ಪ್ರದೇಶವನ್ನು ಶಾಲೆಗೂ ಮೀಸಲಿರಿಸಿತ್ತು. ಇವಿಷ್ಟು ೧೯೦೧ರಲ್ಲಿದ್ದ ಬಡಾವಣೆಯ ಒಟ್ಟು ನೋಟ. ಬಸವನಗುಡಿ ಬಡಾವಣೆಗೆ ಯಾವುದೇ ಅಡೆ-ತಡೆ ಇಲ್ಲದೆ ಇದ್ದುದರಿಂದ ಚಚ್ಚೌಕವಾಗಿ ಚದುರಂಗದ ಹಾಸಿನಂತೆ ರೂಪಿಸಲು ಸಾಧ್ಯವಾಯಿತು. ಆದರೆ ಮಲ್ಲೇಶ್ವರದಲ್ಲಿ ಅಂತಹ ಸೌಕರ್ಯ ಇಲ್ಲವಾದರೂ ರಸ್ತೆಗಳು ಅಡ್ಡ ಮತ್ತು ಉದ್ದವಾಗಿ ಸರಳ ರೇಖೆಯನ್ನು ಹಾಕಿದಂತಿವೆ. ಅಂದು ರಚನೆಗೊಂಡ ಬಸವನಗುಡಿ ಬಡಾವಣೆಯಲ್ಲಿಯೂ ಮಲ್ಲೇಶ್ವರದಷ್ಟು ಉದ್ದದ ಮತ್ತು ಅಗಲದ ರಸ್ತೆಗಳು ಇರಲಿಲ್ಲ. ಮಲ್ಲೇಶ್ವರದ ರಸ್ತೆಗಳು ಸೂರ್ಯನ ಗತಿಯನ್ನು ಅನುಸರಿಸಿ ನಿಖರವಾಗಿ ಉತ್ತರ-ದಕ್ಷಿಣವಾಗಿ ಇಲ್ಲವಾದರೂ ಕೆಲವು ಡಿಗ್ರಿಗಳಷ್ಟು ಓರೆಯಾಗಿದೆ. ಎಂಟರಿಂದ ಹದಿನೈದನೇ ಅಡ್ಡರಸ್ತೆ ಹಾಗೂ ಐದನೇ ಮುಖ್ಯರಸ್ತೆಯಿಂದ ರೈಲ್ವೆ ಲೈನ್‌ವರೆಗೆ ಇರುವ ಪ್ರದೇಶವನ್ನು ಬಂಗಲೇ ಮನೆಗಳಿಗಾಗಿ ಮೀಸಲಿರಿಸಿತ್ತು. ಈ ಭಾಗದಲ್ಲಿ ಒಂದು ಅಡ್ಡರಸ್ತೆಯಿಂದ ಇನ್ನೊಂದು ಅಡ್ಡರಸ್ತೆಯವರೆಗೆ ಮತ್ತು ಒಂದು ಮುಖ್ಯರಸ್ತೆಯಿಂದ ಇನ್ನೊಂದು ಮುಖ್ಯರಸ್ತೆಯುವರೆಗೆ ಒಂದೊಂದೇ ನಿವೇಶನದಂತಿದ್ದು ಅವುಗಳನ್ನು ಎಂಟು ಇಲ್ಲವೆ ಆರು ಭಾಗಗಳಾಗಿ ಗೆರೆ ಎಳೆದಿದ್ದರೂ (ಕಾಂಪೋಂಡ್ ಕಟ್ಟಿದ್ದು) ನಿವೇಶನ ಕೊಂಡವರು ತಾವೇ ಪುನರ್ ವಿಂಗಡಣೆ ಮಾಡಿಕೊಳ್ಳಲು ಅನುಕೂಲವಾಗಲೆಂಬ ಉದ್ದೇಶ ಇದ್ದಂತಿದೆ. ಇಂದು ಉದ್ದ ರಸ್ತೆ ಮತ್ತು ಅಡ್ಡ ರಸ್ತೆಯ ಮಧ್ಯದಷ್ಟು ವಿಶಾಲವಾದ ನಿವೇಶನಗಳು ಯಾವುದೂ ಇಲ್ಲವಾದರೂ ಎಚ್.ವಿ. ನಂಜುಂಡಯ್ಯ ಅವರು ವಾಸವಿದ್ದ ಮನೆಯನ್ನು ಮುಂದೆ ಬಾಲಕಿಯರ ಪ್ರೌಢಶಾಲೆಗೆ ನೀಡಲಾಗಿದೆ. ೪ನೇ ಮುಖ್ಯರಸ್ತೆಯ ವೇಮಾಲಾಡ್ಜ್ ೫ನೇ ಮುಖ್ಯರಸ್ತೆಯ ಬಿ.ಪಿ.ಇಂಡಿಯನ್ ಶಾಲೆ, ಹಿಮಾಂಶು ಮತ್ತು ಎಂ.ಎಲ್.ಎ. ಶಾಲಾ ಸಮುಚ್ಚಯ ಇತ್ಯಾದಿಗಳು ಹಳೆಯ ದೊಡ್ಡ ನಿವೇಶನಗಳಲ್ಲಿ ಬಹುಪಾಲು ಉಳಿಸಿಕೊಂಡಿವೆ.

ಪ್ಲೇಗ್ ವರದಿಯಂತೆ ಒಟ್ಟು ಮಲ್ಲೇಶ್ವರದ ಅಳತೆ, ನಿವೇಶನಗಳ ಮತ್ತು ರಸ್ತೆಗಳ ಅಳತೆ, ಮೀಸಲಾತಿ, ಖರ್ಚು-ವೆಚ್ಚ ಇತ್ಯಾದಿ ವಿವರಗಳು ದೊರೆಯುತ್ತವೆ. ಅದರಂತೆ ಮಲ್ಲೇಶ್ವರ ಉತ್ತರದಿಂದ ದಕ್ಷಿಣಕ್ಕೆ ೪,೪೦೦ ಅಡಿಗಳು, ಪೂರ್ವದಿಂದ ಪಶ್ಚಿಮಕ್ಕೆ ೩,೦೦೦ ಅಡಿಗಳು ಇದ್ದು ಒಟ್ಟು ೨೦೧ ಎಕರೆಗಳ ವ್ಯಾಪ್ತಿಯನ್ನು ಹೊಂದಿತ್ತು. ರಸ್ತೆಗಳು ಸೂರ್ಯನ ಗತಿಗೆ ಹೊಂದಿಕೊಂಡಿದೆ ಎಂದು ವರದಿಯಲ್ಲಿ ಹೇಳಿದ್ದರೂ ಅಷ್ಟು ನಿಖರವಾಗಿಲ್ಲ. ಹತ್ತು ಮುಖ್ಯರಸ್ತೆ ಗಳು, ಹದಿನೇಳು ಅಡ್ಡರಸ್ತೆಗಳು ಇದ್ದು ಕೆಲವು ಮುಖ್ಯರಸ್ತೆಗಳಿಗೆ ರಸ್ತೆಯ ಬದಿಯಲ್ಲಿ ನೆಟ್ಟಿದ್ದ ಮರಗಳನ್ನು ಅನುಸರಿಸಿ ಹೆಸರಿಸಲಾಗಿತ್ತು. ಉದಾಹರಣೆಗೆ ಎರಡನೆಯ ಮುಖ್ಯರಸ್ತೆ ಎಂದಿದ್ದರೂ ಅದು ಹೆಚ್ಚು ಬಳಕೆಯಲ್ಲಿ ಇರುವುದು 'ಸಂಪಿಗೆ ರಸ್ತೆ' ಎಂದೇ. ಅಂತೆಯೇ ಮೂರನೆ ಮುಖ್ಯರಸ್ತೆಗೆ 'ಬೇವಿನಮರದ ರಸ್ತೆ' (ಮಾರ್ಗೋಸ ರಸ್ತೆ) ಎಂಬ ಹೆಸರು ಬಳಕೆಯಲ್ಲಿದೆ. ಒಟ್ಟು ರಸ್ತೆಗಳಲ್ಲಿ ಅಡ್ಡಗಲವಾಗಿ ಆರು-


BANGALORE CITY.
PLAN OF MALLESWARAM EXTENSION.
1000 YDS
RANGANATANPALYA
SITE FOR SCHOOL
SITE FOR MARKET
1467 YDS
SCALE 660.1"
AREA 291 ACRES
BURIAL GROUND
POND
BROKEN GROUND
Southern Mahratta Railway
Proposed Sections of Roads
FOOTPATH ROADWAY TRAMWAY ROADWAY FOOTPATH
ROADWAY FOOTPATH ROADWAY
MAHARAJAS COTTON MILLS
TO BANGALORE



*House condemned as unfit for habitation under Plague Rules and being dismantled.*

೪೦ ಅಡಿಗಳು, ಮೂರು–೫೦ ಅಡಿಗಳು ಹಾಗೂ ಒಂದು ರಸ್ತೆ ೬೦ ಅಡಿಗಳೂ ಇದ್ದವು. ಇಂದಿನ ಐದನೇ ಅಡ್ಡರಸ್ತೆ (ಕೆ.ವಿ. ಪುಟ್ಟಪ್ಪ ರಸ್ತೆ) ೬೦ ಅಡಿಗಳಷ್ಟು ಅಡ್ಡವಾಗಿ ವಿಶಾಲ ವಾಗಿತ್ತು. ಆದರೂ ಜನರ ಬಾಯಲ್ಲಿ ಇಂದಿಗೂ ಹಳೆಯ ತಲೆಮಾರಿನವರು ನೂರಡಿ ರಸ್ತೆ ಎಂದೇ ಗುರುತಿಸುತ್ತಾರೆ.

ಮಲ್ಲೇಶ್ವರದ ಕೆಲಭಾಗದಲ್ಲಿ ಒಂದಿಷ್ಟು ರಸ್ತೆಗಳು ಸೇರ್ಪಡೆಗೊಂಡಂತೆ ಘಟಕವಾಗಿಸಿ ಐದು ಗುಂಪುಗಳಾಗಿ ಮಾಡಿ ಜಾತಿವಾರು ವಿಂಗಡಿಸಿ ಹಂಚಲಾಯಿತು. ರಾಜಾಮಿಲ್ ಮೇಲ್ಭಾಗದಿಂದ ರೈಲ್ವೆ ಲೈನ್‌ಗೆ ಹೊಂದಿ ಕೊಂಡಿರುವ ರಸ್ತೆಯಿಂದ ನಾಲ್ಕನೇ ಮುಖ್ಯರಸ್ತೆ ಹಾಗೂ ಐದನೇ ಅಡ್ಡರಸ್ತೆಯ ಉತ್ತರಕ್ಕೆ ಇರುವ ೧೦೯ ನಿವೇಶನಗಳು ಮಹಮಡನ್ ಪಂಗಡಕ್ಕೆ; ಐದರಿಂದ ಎಂಟನೇ ಅಡ್ಡರಸ್ತೆ ಮತ್ತು ನಾಲ್ಕನೇ ಮುಖ್ಯರಸ್ತೆಯ ನಡುವೆ ಬರುವ ೨೦೪ ನಿವೇಶನಗಳನ್ನು ಹಿಂದುಗಳಿಗೂ; ಎಂಟರಿಂದ ಹದಿನಾರನೇ ಅಡ್ಡರಸ್ತೆ ಮತ್ತು ನಾಲ್ಕನೇ ಮುಖ್ಯರಸ್ತೆಯ ಕೆಳಭಾಗದ ಹಾಗೂ ಒಂದನೇ ರಸ್ತೆ (ಸೌತ್ ಎಂಡ್ ರಸ್ತೆ) ಯಿಂದ ಐದನೇ ರಸ್ತೆಯ ಮಧ್ಯದಲ್ಲಿ ರೂಪಿಸಿದ್ದ ೩೪೩ ನಿವೇಶನಗಳನ್ನು ಬ್ರಾಹ್ಮಣರಿಗೂ; ಐದರಿಂದ ಏಳನೇ ಅಡ್ಡರಸ್ತೆ ಮತ್ತು ನಾಲ್ಕನೇ ಮುಖ್ಯರಸ್ತೆಯ ಮೇಲ್ಭಾಗದಲ್ಲಿರುವ ಐವತ್ತು ನಿವೇಶನಗಳನ್ನು ದೇಶೀಯ ಕ್ರಿಶ್ಚಿಯನ್ನರಿಗೂ; ಏಳರಿಂದ ಒಂಬತ್ತನೇ ಅಡ್ಡರಸ್ತೆ ಮತ್ತು ನಾಲ್ಕನೇ ಮುಖ್ಯರಸ್ತೆಯ ಮಧ್ಯೆ ಬರುವ ೧೫೦ ನಿವೇಶನಗಳನ್ನು ಲಿಂಗಾಯಿತರಿಗೂ ಮೀಸಲಿರಿಸಿತ್ತು. (ನಾಲ್ಕನೇ ಮುಖ್ಯರಸ್ತೆಯನ್ನು ತುಮಕೂರು ರಸ್ತೆ ಎಂದು ಕರೆದಿದೆ. ನಕ್ಷೆಯಲ್ಲಿರುವ ನಮೂದಿಗೂ ಮೇಲಿನ ವಿವರಕ್ಕೂ ಕೆಲವು ವ್ಯತ್ಯಾಸಗಳಿವೆ.)

ಉತ್ತಮ ಮತ್ತು ಬಂಗಲೋಗಳಿಗಾಗಿ ಎಂಟರಿಂದ ಹದಿನೈದನೇ ಅಡ್ಡರಸ್ತೆ ಮತ್ತು ನಾಲ್ಕನೇ ಮುಖ್ಯರಸ್ತೆಯ ಮೇಲ್ಭಾಗದಲ್ಲಿ ರೈಲ್ವೆ ಹಳಿಗಳವರೆಗಿನ ನವೇಶನಗಳನ್ನು ಮೂರು ಭಿನ್ನ ಅಳತೆಗಳಲ್ಲಿ ವಿಂಗಡಿಸಲಾಗಿತ್ತು. ಅವುಗಳೆಂದರೆ, ೧) ಪ್ರತಿಯೊಂದು ೧೨೦' x ೩೩೦' ಅಥವ ೧೦/೧೧

ಎಕರೆ ಪ್ರದೇಶದ ೧೫ ನಿವೇಶನಗಳು; ೨) ಪ್ರತಿಯೊಂದು ೧೫೦' x ೨೧೫' ಅಥವ ೩/೪ ಎಕರೆ ಪ್ರದೇಶದ ೨೪ ನಿವೇಶನಗಳು; ೩) ೨೦೦' x ೨೩೫' ಅಥವ ಒಂದು ಎಕರೆ ಪ್ರದೇಶದ ೪೫ ನಿವೇಶನಗಳನ್ನು ರೂಪಿಸಲಾಗಿತ್ತು. ಈ ನಿವೇಶನಗಳನ್ನು ಯಾವುದೇ ಮತದವರು ಪಡೆಯಬಹುದಾಗಿತ್ತು. ಎಂದರೆ ಒಟ್ಟಾರೆಯಾಗಿ ೯೪೦ ನಿವೇಶನಗಳು ಹರಾಜಿನ ಮೂಲಕ ಬಿಕರಿ ಮಾಡಲು ಸಿದ್ಧವಾಗಿತ್ತು. ಒಟ್ಟು ನಿವೇಶನಗಳಲ್ಲಿ ವಾಸಮಾಡಬಹುದಾದ ನಿರೀಕ್ಷಿತ ಜನಸಂಖ್ಯೆ ೬,೫೮೦ ಆಗಿತ್ತು. ಎಂದರೆ ಎಕರೆಗೆ ೨೨.೩ ಜನರಾಗಿದ್ದರು. (ಅದೇ ವೇಳೆಯಲ್ಲಿ ಲಂಡನ್ನಿನಲ್ಲಿ ಎಕರೆಗೆ ೫೯ ಮಂದಿ ಹಾಗೂ ಮುಂಬಯಿಯಲ್ಲಿ ಎಕರೆಗೆ ೫೦೦ ಮಂದಿ ವಾಸವಿದ್ದರು) ಮಲ್ಲೇಶ್ವರದ ರಸ್ತೆಗಳು ಸಾಮಾನ್ಯವಾಗಿ ಸಪಾಟಾಗಿದ್ದು ದಿಣ್ಣೆಗಳು ಬಂದ ಕೆಲವೆಡೆ ಅನಿವಾರ್ಯವಾಗಿ ಉಬ್ಬು–ತಗ್ಗುಗಳು ಉಳಿಯಿತು. ಎಲ್ಲ ರಸ್ತೆಗಳನ್ನೂ ಮುಂದಿನ ಭವಿಷ್ಯದಲ್ಲಿ ಹೆಚ್ಚಳಗೊಳ್ಳಬಹುದಾದ ಸಂಚಾರ ಸಾಧನಗಳನ್ನು ಗಮನದಲ್ಲಿರಿಸಿ ಇನ್ನಷ್ಟು ಅಗಲೀಕರಣ ಮಾಡಲು ಅನುಕೂಲವಾಗಿವಂತೆ ನಿರ್ಮಿಸಲಾಯಿತು. ರಸ್ತೆಗಳನ್ನು ನಿರ್ಮಿಸಲು ಪರಿಹಾರಧನ ನೀಡಲಾಗಿತ್ತು. ಮಲ್ಲೇಶ್ವರಂ ಬಡಾಬಣೆ ಸಿದ್ಧವಾದಮೇಲೆ ೯೦ ವಸತಿಗಳು ನಿರ್ಮಾಣವಾಗಿದ್ದು ಇನ್ನೂ ೪೦ ವಸತಿಗಳು ನಿರ್ಮಾಣದ ವಿವಿಧ ಹಂತಗಳಲ್ಲಿದ್ದವು. ಅಲ್ಲದೆ ಪ್ಲೇಗ್‌ನಿಂದಾಗಿ ಹಾಕಿದ್ದ ೮೦ ತತ್ಕಾಲಿಕ ಟೆಂಟ್‌ಗಳೂ ಇದ್ದವು. ಪ್ರಾಯಶ ಇವರುಗಳಿಗೆ ಪರಿಹಾರ ನೀಡಿದ್ದು ಈ ಧನವೂ ಸೇರಿದಂತೆ ರಸ್ತೆ ನಿರ್ಮಿಸಲು ಖರ್ಚಿನ ಒಟ್ಟು ಮೊತ್ತ ೧,೩೭,೨೬೧ ರೂಪಾಯಿಗಳೆಂದು ಅಂದಾಜಿಸಲಾಗಿತ್ತು ಆದರೆ ಪೂರ್ಣಗೊಂಡಾಗ ವೆಚ್ಚ ೧,೬೭,೮೨೧ ರೂಪಾಯಿಗಳಾಗಿದ್ದವು. ಒಟ್ಟು ೬೪೦ ನಿವೇಶನಗಳಿಗೆ ಕಾಂಪೌಂಡ್ ಕಟ್ಟಲಾಗಿದ್ದು ಅದರ ವೆಚ್ಚವನ್ನು ನಿವೇಶನದ ಅಳತೆ ಹಾಗೂ ಜಾತಿವಾರು ವಿವರ ನೀಡಲಾಗಿದ್ದು ರಚನೆಗೆ ಆದ ಖರ್ಚು ೧,೮೦,೦೦೦ ರೂಪಾಯಿಗಳಾಗಿದ್ದವು. ಬೇರೆ ಕಡೆಯ ವೆಚ್ಚಗಳಿಗೆ ಹೋಲಿಸಿದರೆ ಮಲ್ಲೇಶ್ವರಂ ರೂಪಿಸಲು ಆದ ಖರ್ಚು ಹೆಚ್ಚಾಗಿದೆ ಎಂದು ವರದಿ ನೀಡಿದ ಲೀ ಅವರೇ ಹೇಳಿದ್ದಾರೆ. ೩೧ನೇ ಡಿಸೆಂಬರ್ ೧೮೯೯ರ ವೇಳೆಗೆ ಸರ್ಕಾರದಿಂದ ಇನ್ನಷ್ಟು ನೆರವು ಬರುವ ನಿರೀಕ್ಷೆ ಇರುವುದಾಗಿ ತಿಳಿಸುತ್ತಾರೆ.

ಮಲ್ಲೇಶ್ವರಂ ಬಡಾವಣೆ ಆರಂಭವಾಗುವ ಮೊದಲೇ ೧೮೮೪ರಲ್ಲಿ ದಕ್ಷಿಣದ ತುದಿಯಲ್ಲಿ ದಿ ಮೈಸೂರ್ ಸ್ಪಿನ್ನಿಂಗ್ ಎಂಡ್ ಮ್ಯಾನುಫ್ಯಾಕ್ಚರಿಂಗ್ ಲಿಮಿಟೆಡ್ (ಜನಪ್ರಿಯವಾಗಿ ಮಹಾರಾಜಾ ಮಿಲ್) ಕ್ರಿಯಾಶೀಲವಾಗಿ ನಡೆಯುತ್ತಿತ್ತು. ಆದರೆ ಪ್ರಾಯಶ ೧೮೯೪ರಲ್ಲಿ ನಷ್ಟಕ್ಕೆ ಗುರಿಯಾಗಿ ಸ್ಥಗಿತಗೊಂಡಂತೆ ತೋರುತ್ತದೆ. ಅದೇ ವೇಳೆಗೆ ಮುಂಬಯಿಯಲ್ಲಿ ಯಶಸ್ವಿಯಾಗಿ ಹತ್ತಿ ಗಿರಣಿ ನಡೆಸುತ್ತಿದ್ದ ಎನ್.ಎಸ್. ಸಿರೂರ್ ಅವರನ್ನು ಮಹಾರಾಜರು ಕರೆತಂದು ಗಿರಣಿಯನ್ನು ಒಪ್ಪಿಸಿದಂತೆ ಕೆಲವು ದಾಖಲೆಗಳಿವೆ. ಸಿರೂರ್ ಅವರು ಯಶಸ್ವಿಯಾಗಿ ಮುನ್ನೆಡೆಸಿದ್ದು ಕಳೆದ ಶತಮಾನದ ಒಂಬತ್ತನೆಯ ದಶಕದವರೆಗೂ ನಡೆಯುತ್ತಿತ್ತು. ಆದರೆ ಮತ್ತೆ ಕಾರ್ಯ ನಿಲ್ಲಿಸುವ ಸ್ಥಿತಿಗೆ ಬಂದಿತು. ೧೯೮೬ರಲ್ಲಿ ಬೆಂಕಿಗೆ ಆಹುತಿಯಾಗಿ ಸಂಪೂರ್ಣವಾಗಿ ನಾಶಗೊಂಡಿತು. ಸಿರೂರ್ ಅವರು ಬಂದಮೇಲೆ ಇಂದಿಗೂ ಇರುವ ಸಿರೂರ್ ಪಾರ್ಕ್ ಪ್ರದೇಶದಲ್ಲಿ ಗಿರಣಿಯ ನೌಕರರಿಗೆ ವಸತಿ ಸೌಲಭ್ಯ ಕಲ್ಪಿಸಿದರು. ಉತ್ತರದ ತುದಿಯಲ್ಲಿ ಇಪ್ಪತ್ತನೆಯ ಶತಮಾನದ ಕೊನೆಯಲ್ಲಿ ತಾತಾ ವಿಜ್ಞಾನ ಮಂದಿರಕ್ಕೆ ಅನುಮತಿಸಿದ್ದು ಇಂದಿರುವ ಕಟ್ಟಡ ೧೯೦೦ರಲ್ಲಿ ಪೂರ್ಣಗೊಂಡು ಕಾರ್ಯಾರಂಭ ಮಾಡತೊಡಗಿತು. ಹನ್ನೊಂದನೇಯ ರಸ್ತೆ ಹಾಗೂ ಇಂದಿನ ವೈಯಾಳಿಕಾವಲ್ ಸೇರುವಲ್ಲಿ ೧೯೧೦ರಲ್ಲಿ ಪಾರ್ಸಿ ಜನಾಂಗಕ್ಕಾಗಿ ರುದ್ರಭೂಮಿ (ಇದು ಟವರ್ ಆಫ್ ಸೈಲೆಂಸ್ ಅಲ್ಲ) ಇದ್ದು ಇಂದಿಗೂ ಬಳಕೆಯಲ್ಲಿದೆ. ೧೯೦೨ರಲ್ಲಿ ಸ್ಯಾಂಕಿ ಕೆರೆಯ ಕೆಳಭಾಗ ಪ್ರದೇಶದಲ್ಲಿ ಪ್ರತ್ಯೇಕವಾಗಿ ಎರಡು ಸ್ನಾನಘಟ್ಟಗಳನ್ನು ನಿರ್ಮಿಸಲು ಸ್ಥಳೀಯ ಜನರ ಕೋರಿಕೆಯಂತೆ ೧,೫೪೪ ರೂಪಾಯಿ ವೆಚ್ಚದಲ್ಲಿ ಕಟ್ಟಲಾಯಿತು.

ಮುಂದಿನ ಈ ನೂರ ಹತ್ತು ವರ್ಷಗಳಲ್ಲಿ ಮಲ್ಲೇಶ್ವರಕ್ಕೆ ಇನ್ನಷ್ಟು ಪ್ರದೇಶಗಳು ಸೇರ್ಪಡೆಯಾಗಿ ದಿನೇ ದಿನೇ ಹೊಸ ಕಟ್ಟಡಗಳು ತಲೆ ಎತ್ತಿ ಹಳೆಯ ಬಡಾವಣೆಯ ಸ್ವರೂಪ ಸಂಪೂರ್ಣವಾಗಿ ಬದಲಾಗಿರುವುದರ ಅಧ್ಯಯನ ಸಮಕಾಲೀನ ಇತಿಹಾಸಕ್ಕೆ ಸಂಬಂಧಿಸಿದ್ದು.

## ಆಧಾರಸೂಚಿ


ಅಡಕ: ೧. ೧೮೯೮ರ ಮಲ್ಲೇಶ್ವರದ ನಕ್ಷೆ / ೨. ಪ್ಲೇಗ್ ವರದಿಯಲ್ಲಿರುವ ಪ್ಲೇಗ್ ಪೀಡಿತ ಒಂದು ಪ್ರದೇಶ.

ಆಕರ: ೧. ಪಿ.ಎನ್. ಮಾಧವರಾವ್, **ಮೈಸೂರಿನ ಪ್ಲೇಗ್ ವರದಿ–೧೮೯೮–೯೯**, ಬೆಂಗಳೂರು, ೧೯೦೧.

೨. ರಾ.ಕೃ. ಶ್ರೀಧರಮೂರ್ತಿ, **ಮಲ್ಲೇಶ್ವರಂ ಬೆಳೆದು ಬಂದ ದಾರಿ**, ಬೆಂಗಳೂರು, ೨೦೧೧.

೩. ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ಲಭ್ಯವಿರುವ ದಾಖಲೆಗಳು.



# ಬೆಂಗಳೂರಿನ 'ಸಂತೂಸಾಪೇಟೆ'ಯ ಇತಿಹಾಸ

ಡಾ. ತುಳಸಿರಾಮನಾಯಕ್*

ಬೆಂಗಳೂರಿನ 'ಸಂತೂಸಾಪೇಟೆ' ಹೃದಯ ಭಾಗದಲ್ಲಿದ್ದು, ಬಹಳ ಹಳೆಯದಾದ ಪ್ರಸಿದ್ಧ ವ್ಯಾಪರ ಕೇಂದ್ರ ಚಿಕ್ಕಪೇಟೆ ವಾರ್ಡ್ ಸಂಖ್ಯೆ ೨೮ (ಹಳೆಯದು) ಹೊಸದು ವಾರ್ಡ್‌ನಲ್ಲಿದೆ.

೧.ಸಂತೂಸಾಪೇಟೆ – ೭೮ ಸ್ವತ್ತುಗಳು; ೨ನೇ ತಿರುವು ೪ ಸ್ವತ್ತುಗಳು; ಸಂತೂಸಾಪೇಟೆಯ ವ್ಯಾಪ್ತಿಯಲ್ಲಿ ೩ನೇ ತಿರುವು ೩೪ ; ೧೩೧ ಸ್ವತ್ತುಗಳಿವೆ. ೪ನೇ ತಿರುವು ೧೫ ; ೫. ಚಿಕ್ಕಪೇಟೆ ಪಟೇಗಾರ್ ಬೀದಿ ೧೭ ; ೬ ಪಟ್ಟೇಗಾರ್ ಬೀದಿ ೨೪ ; ೭ ದರ್ಜಿಪೇಟೆ ಮಾಂಸದ ೮ ಮಾರುಕಟ್ಟೆಯಲ್ಲಿ ೧೪ ಸ್ವತ್ತುಗಳಿವೆ ; ಚಿಕ್ಕಪೇಟೆಯ ಪ್ರದೇಶದಲ್ಲಿ ೮೨ ಸ್ವತ್ತುಗಳಿವೆ; ಒಟ್ಟು ೨೧೩ ಸ್ವತ್ತುಗಳು.

ಇದೂ ಅಲ್ಲದೇ, ಇತ್ತೀಚೆಗೆ ಮಾಗಡಿ ರಸ್ತೆ, ಕಾಮಾಕ್ಷಿಪಾಳ್ಯದ ಹತ್ತಿರ 'ಪಟ್ಟೇಗಾರಪಾಳ್ಯ' ಎಂಬ ಹೆಸರಿನ ಗ್ರಾಮವಿದೆ. ಇವೆಲ್ಲವೂ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ದಾಖಲೆಯಲ್ಲಿವೆ. ಸಂತೂಸಾಪೇಟೆಯು ವಿಜಯಲಕ್ಷ್ಮಿ ಚಿತ್ರಮಂದಿರದ ಹಿಂಭಾಗದ ಪ್ರದೇಶ. ಈ ಪ್ರದೇಶದಲ್ಲಿ ಮೂಲತಃ ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ ಅಂದರೆ ಪಟ್ಟೇಗಾರರು ನೆಲಸಿರುವ ಪ್ರದೇಶ. ಇವರಮುಖ್ಯ ವೃತ್ತಿ ಬಟ್ಟೆ ಉತ್ಪಾದಿಸುವುದು ಅಥವಾ ನೇಯುವುದು. ಮಕ್ಕಳ ಉಡುಪು, ಸೀರೆಗಳು, ಶಾಲುಗಳು, ತಲೆಗೆ ಪೇಟ ಇತ್ಯಾದಿ. ವಿವಿಧ ಬಣ್ಣಗಳನ್ನು ಉಪಯೋಗಿಸಿ, ಬಟ್ಟೆಗಳನ್ನು ತಯಾರಿಸಿ, ಅವುಗಳಲ್ಲಿ ಅಚ್ಚುಕಟ್ಟಾದ ಪಟ್ಟೆಗಳನ್ನು ಎಳೆದು ಗುರುತು ಮಾಡುವುದು. ಇದರ ಕಲೆ, ಕುಶಲತೆ ಜನರಿಗೆ ಆಕರ್ಷಿಸುತ್ತದೆ. ಹೀಗಾಗಿ ಪ್ರಾರಂಭದಿಂದಲೂ ಜನಸಾಮಾನ್ಯರಿಂದ ರಾಜ ಮಹಾರಾಜರವರೆಗೆ ಈ ಉದ್ದಿಮೆ ಆಕರ್ಷಿಸುತ್ತಿದೆ.

ಕ್ರಿ.ಶ. ೧೮೬೩ರಲ್ಲಿ ಜಮ್‌ಶಡ್ಜೀ ನಸರವಾನ್ ಜೀ ಟಾಟಾರವರು ಜಪಾನಿಗೆ ಭೇಟಿಯಿತ್ತಾಗ ಅಲ್ಲಿ ಸಿರಿಕಲ್ಚರ್‌ನಲ್ಲಿ ನಡೆದಿದ್ದ ಪ್ರಗತಿಯನ್ನು ಗಮನಿಸಿದರು. ಬೆಂಗಳೂರಿನ ಹವ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಹೇರಳವಾಗಿರುವ ರೇಷ್ಮೆ ಹುಳುಗಳ ಸ್ಥಳಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಟಾಟಾರವರು ಬೆಂಗಳೂರಿನಲ್ಲಿ 'ರೇಷ್ಮೆ ಫಾರಂ' ಪ್ರಾರಂಭಿಸಲು ಇಬ್ಬರು ತಜ್ಞರನ್ನು ಜಪಾನಿನಿಂದ ಕರೆತಂದರು. ಇವರು ಸ್ಥಳೀಯ ಉದ್ದಿಮೆಯನ್ನು ಗಮನಿಸಿ, ಇವರ ಅಭಿಪ್ರಾಯದಂತೆ ಹಾಗೂ ಟಾಟಾರವರ ನಿರ್ದೇಶನದಂತೆ ಬಸವನಗುಡಿಯಲ್ಲಿ ೧೩ ಎಕರೆ ಜಮೀನಿನಲ್ಲಿ 'ಟಾಟಾ ಸಿಲ್ಕ್ ಫಾರಂ' ಅನ್ನು ಸ್ಥಾಪಿಸಿದರು. ಈಗ ಇಲ್ಲಿ ಉದ್ದಿಮೆ ಇಲ್ಲ. ಆದರೆ, ಬಸವನಗುಡಿ ಪ್ರದೇಶ ಅಭಿವೃದ್ಧಿಗೊಂಡು ಕೃಷ್ಣರಾಜೇಂದ್ರ ರಸ್ತೆಯಲ್ಲಿ "ಟಾಟಾ ಸಿಲ್ಕ್ ಫಾರಂ" ಬಸ್ ನಿಲ್ದಾಣ ಎಂದು ನಾಮಕರಣವಿರುವುದನ್ನು ದಿನನಿತ್ಯ ನಾವು ಗಮನಿಸಿದ್ದೇವೆ. In 1801 Bukanana also reported in his Tour Diary, the Weavers of Bangalore seem to me to be a very ingenious class of men and with due encouragement were capable of making very rich fine elegeant cloths of many kinds that may be in demand. He speaks of the Pttegar (silk weavers) and the 'cuttery' (kshatriyas people from southern parts of Gujarat) in Bangalore who prepared very strong and rich cloths. They dyed much of their silk in red, orange and yellow colours and were more wealthy than other weavers, he adds. He speaks of groups of weavers called the Bili Maggas who include the Shayanagararu, Padmasali and the Samayashale who wove white Muslim. Further he says, Bangalore Carpets were welkonwn for their durability and for the peculiarity of having the same pattern on both sides. The Central Jail of Bangalore during the 19th Century had a reputation for production of Carpets of good weave and attractive soft colouring. The pile carpets made in the central Jail. ಕ್ರಿ.ಶ. ೧೭೯೫ರಲ್ಲಿ ಟಿಪ್ಪು ತಂಜಾವೂರು ಹಾಗೂ ಬಾರಮಹಲಿನಿಂದ ಗುಜರಾತಿ ಖತ್ರಿಯವರನ್ನು ನೇಯ್ಗೆ ಕೆಲಸಕ್ಕಾಗಿ ಬೆಂಗಳೂರು ಹಾಗೂ

* # ೨೩೯೧, 'ಆನಂದಭವನ', ೭ನೇ ಮುಖ್ಯರಸ್ತೆ, ಬಿ.ಎಸ್.ಕೆ. ೨ನೇ ಹಂತ, ಬೆಂಗಳೂರು–೫೬೦೦೭೦.

ಅಕ್ಕಪಕ್ಕದ ಆಸುಪಾಸಿನಲ್ಲಿ ನೆಲಸುವಂತೆ ಮಾಡಿದ್ದು ಗಮನಾರ್ಹ. ಅಷ್ಟೂ ಅಲ್ಲದೆ, ರೇಷ್ಮೆಯಲ್ಲಿ ಪರಿಣತಿ ಪಡೆದ ಉದ್ದಿಮೆಗಾರರನ್ನು ಹೊರದೇಶಗಳಿಗೆ ಅದರಲ್ಲೂ ದಕ್ಷಿಣ ಚೈನಾಕ್ಕೆ ಅತ್ಯುತ್ತಮ ರೇಷ್ಮೆ-ಹುಳುಗಳ ಮೊಟ್ಟೆಗಳ ತಳಿಗಳನ್ನು ಅಮದು ಮಾಡಿಕೊಳ್ಳಲು ಪ್ರೇರೇಪಿಸಿದನು. ಕ್ರಿ.ಶ. ೧೭೯೧ರಲ್ಲಿ ಇಂಗ್ಲೀಷರು ಕೋಟೆಯನ್ನು ಆಕ್ರಮಿಸಿಕೊಂಡಾಗ ಕರ್ನಲ್ ವಿಲ್ಕ್ ಎಂಬಾತ ಕಣ್ಣಾರೆ ಕಂಡಿದ್ದನ್ನು ಈ ರೀತಿ ಹೇಳುತ್ತಾನೆ. "ನಾವು ಕೋಟೆಯೊಳಗೆ ನುಗ್ಗುವ ಮೊದಲೇ ಅಲ್ಲಿನ ಅತ್ಯಂತ ಬೆಲೆಬಾಳುವ ಸಾಮಾನುಗಳನ್ನು ಸಾಗಿಸಿಬಿಟ್ಟಿದ್ದರು. ಆದರೆ, ಹತ್ತಿಯ ಪಿಂಡಿಗಳು ಮತ್ತು ಬಟ್ಟೆಯ ಗಂಟುಗಳು ಎಲ್ಲಾ ಕಡೆಯು ಹರಡಿದ್ದವು". ಇದರಿಂದ, ಇದು ಒಂದು ದೊಡ್ಡ ಉತ್ಪಾದನಾ ಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. (ಕನ್ನಡ ಅನುವಾದ) ಕ್ರಿ.ಶ. ೧೭೮೦ರಲ್ಲಿ ಹೈದರನು ಆರ್ಕಾಟ್‌ನಿಂದ ಈ ಕೆಲಸಕ್ಕೆ ಜನರನ್ನು ಬರಮಾಡಿಕೊಂಡನು. ಚಿಕ್ಕದೇವ ರಾಯನ ಕಾಲ (೧೬೭೩-೧೭೦೪) ದಲ್ಲಿ ಬೆಂಗಳೂರಿನಲ್ಲಿ ೧೨೦೦೦ ನೇಯ್ಗೆಯವರ ಸಂಸಾರಗಳಿತ್ತು ಎಂದು ಮಾಹಿತಿ ಇದೆ. ಕಾಡುಗೋಡಿ ಹಾಗೂ ಸರ್ಜಾಪುರಗಳಲ್ಲಿ ನೇಯ್ಗೆ ಯವರು ಅಧಿಕ ಸಂಖ್ಯೆಯಲ್ಲಿದ್ದರು ಎಂದು ತಿಳಿದುಬರುತ್ತದೆ. ಹೊಯ್ಸಳರ ೩ನೆಯ ಬಲ್ಲಾಳನ ಕಾಲ ಕ್ರಿ.ಶ. ೧೩೦೧ರಲ್ಲಿ ೨ ಶಾಸನಗಳು ಗುಂಜೂರು (ವೈಟ್‌ಫೀಲ್ಡ್ ಹತ್ತಿರ) (ಬೆಂಗಳೂರು-೫೧,) ಮಡಿವಾಳ, (ಬೆಂಗಳೂರು-೬೫) ಮತ್ತು ಹೊಯ್ಸಳರ ಕಾಲದ ಕ್ರಿ.ಶ. ೧೧೧೦ ರಲ್ಲಿ ನಕ್ಕೂರು ಗ್ರಾಮ ಪ್ರಕಾರ ಈ ಪ್ರದೇಶಗಳಲ್ಲಿ ಇದರ ಮೇಲೆ ಹೇರುತ್ತಿದ್ದ ಕರವೇ (ತೆರಿಗೆ) ಸಾಕಷ್ಟು ಪ್ರಮಾಣದಲ್ಲಿತ್ತೆಂದು ತಿಳಿಸುತ್ತದೆ. ಕೆಂಪೇಗೌಡನ ಕಾಲದಲ್ಲಿ ನೇಯ್ಗೆಯವರು (ದೇವಾಂಗ ದವರು) ಬಂದು ನೆಲಸಿದರು.

ಈ ಪ್ರದೇಶಕ್ಕೆ 'ಸಂತೂಸಾಪೇಟೆ' ಎಂದು ಹೆಸರಿಸಲು ಕಾರಣವೇನು? ಈತನು ಯಾವ ಪದವಿ ಅಲಂಕರಿಸಿದ್ದ, ಅಂತಸ್ತೇನು, ಯಾರು ನಾಮಕರಣ ಮಾಡಿದರು? ಎಂಬುದರ ಬಗ್ಗೆ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಾಗಲೀ ಅಥವಾ ಸರ್ಕಾರದ ಇಲಾಖೆಗಳಲ್ಲಾಗಲೀ ಮಾಹಿತಿ ಲಭ್ಯವಿಲ್ಲ ಆದರೆ, ಇದೇ ಸಂತೂಸಾಪೇಟೆಯಲ್ಲಿ ವಾಸವಾಗಿರುವ ಶ್ರೀ ಕೆ.ಜಿ. ಗಂಗಾಧರ ಸಾ, ಉದ್ದಿಮೆಗಾರರ ಮನೆಯಲ್ಲಿರುವ "ವಂಶವೃಕ್ಷ" (ಫ್ಯಾಮಿಲಿ ಟ್ರೀ)ನಲ್ಲಿ 'ಸಂತೂಸಾ' ಎಂಬ ನಾಮಧ್ಯೇಯ ಇರುವುದು ಕಂಡುಬರುತ್ತದೆ. ಈ ದಾಖಲೆ ಪರಿಶೀಲಿಸಿದಾಗ, "ಗೋತ್ರ ಗೌತಮಋಷಿ, ಶಾಖ ಕಬಾಡಿ ಪೂಲೆ ಶೇವಂತಿ ಚಾವುಜ ಗಂಧ ಉಜಳೂ ಗಾಧಿ ಉಜಳೂ ಷೋಡಿ ನಿಸಾನ ಉಜಳೊ ತ್ರಿಕಾಳ ಸಂಧ್ಯಾರಾವ್ ಗಾಯತ್ರಿ ಮಂತ್ರ ಜಪಸಟಾವೇ ಇತರ ಧರ್ಮ ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ ಯಾಚ" ಎಂದಿದೆ. ಕ್ರಿ.ಶ. ೩೪೯ರಲ್ಲಿ ಮಾಂಡವಘಡ (ರಾಜಸ್ಥಾನ) ಇವರ ಮೂಲಸ್ಥಾನವಾಗಿದ್ದು, ಕ್ರಿ.ಶ. ೪೪೧ರಲ್ಲಿ ಹುಬ್ಬಳ್ಳಿ, ಗದಗನಲ್ಲಿ ಬಂದು ನೆಲಸಿದರು. ಪುನಃ ಕ್ರಿ.ಶ. ೫೯೨ರಲ್ಲಿ ಸುಲ್ತಾನಪುರ (ಬೆಳಗಾಂ) ನಲ್ಲಿ ಸ್ಥಳಾಂತರಾದರು. ಮತ್ತೆ ಕ್ರಿ.ಶ. ೮೮೦ರಲ್ಲಿ ಕೆಲವರು ಬಿಜಾಪುರದಲ್ಲಿ ಬಂದು ನೆಲಸಿದರು. ಇವರಲ್ಲಿ ಕೆಲವರು ಕ್ರಿ.ಶ. ೧೦೦೩ರಲ್ಲಿ ಮುಖ್ಯವಾಗಿ 'ರಾಮೂಸಾ ಸಂತೂಸಾ' ಪ್ರಪ್ರಥಮವಾಗಿ ಬೆಂಗಳೂರಿಗೆ ಬಂದು ಹೆಜ್ಜೆಯಿಟ್ಟರು ಎಂದು ಈ ವಂಶವೃಕ್ಷ ತಿಳಿಸುತ್ತದೆ. ಇದೇ ಪೀಳಿಗೆಯ ಮತ್ತೊಂದು ತಲೆಮಾರಿನ ನರಸೋಬ ಹಾಗೂ ತನುಬಾಯಿಗೆ ೭ ಜನ ಮಕ್ಕಳಿದ್ದು ವಿವರ ಹೀಗಿದೆ :

೧. ಬಾನೂಸಾ – ತುಕ್ಕುಬಾಯಿ

೨. ಸಂತೂಸಾ

೩. ತಾನೂಸಾ – ಲಕ್ಷ್ಮಿಬೈ

೪. ಲಕ್ಷ್ಮಣ ಸಾ

೫. ಗೋವಿಂದ ಸಾ

೬. ಚಿಕ್ಕ ಸಂತೂಸಾ

೭. ನರಸಿಂಗಸಾ ಲಕ್ಷ್ಮಿಬಾಯಿ (ಗಣೇಶ್ ಗುಡಿ ಸೋಮಲತ)

ಸಂಸಾರವು ಕೊನೆಯ ಕುಡಿಯಾಗಿದ್ದು, ಇವರಿಗೆ ಸಂತಾನ ಭಾಗ್ಯವಿಲ್ಲದ ಕಾರಣ ತಾವು ಗಳಿಸಿದ ಸ್ವತ್ತು, ಇದೇ ಸಂತೂಸಾಪೇಟೆಯಲ್ಲಿ ಶ್ರೀ ಪಾಂಡುರಂಗ ದೇವಸ್ಥಾನಕ್ಕೆ ಧಾರೆಯೆರದರೆಂದು ತಿಳಿದುಬರುತ್ತದೆ. ಇತ್ತೀಚೆಗೆ, ಇದೇ ದೇವಸ್ಥಾನ ಶಿಥಿಲಗೊಂಡಿದ್ದ ಕಾರಣ ಜೀರ್ಣೋದ್ಧಾರ ಮಾಡಿ, ಪ್ರತಿನಿತ್ಯವೂ ಪೂಜೆ, ಪುನಸ್ಕಾರಗಳು ನಡೆಯುತ್ತಿದೆ.

ಕ್ರಿ.ಶ. ೧೦೦೩ರಲ್ಲಿ 'ರಾಮೂಸಾ ಸಂತೂಸಾ' ಮೊಟ್ಟ ಮೊದಲನೆಯವನು ಈ ಪ್ರದೇಶದಲ್ಲಿ ಹೆಜ್ಜೆಯಿಟ್ಟವನು ಎಂದಾದರೆ, ಇತರೆ ಇಬ್ಬರೂ ಸಂತೂಸಾ (ಕ್ರಮ ಸಂಖ್ಯೆ ೨) ಮತ್ತು ಚಿಕ್ಕಸಂತೂಸ (ಕ್ರಮ ಸಂಖ್ಯೆ ೬) ಈ ವಂಶವೃಕ್ಷದಲ್ಲಿ ದಾಖಲಾಗಿರುವುದು ತಿಳಿದುಬರುತ್ತದೆ. ಇವರ ತಲೆಮಾರುಗಳು ಸಹ ಒಬ್ಬರಿಂದ ಮತ್ತೊಬ್ಬರಿಗೆ ಅಂತರವಿದೆ. ಈ ಮೂವರಲ್ಲಿ ಯಾರು, ಯಾವುದರಲ್ಲಿ ಪ್ರವೀಣರೋ ಅಥವಾ ಅಂತಸ್ತಿನಲ್ಲಿ ಯಾರೂ ಮೇಲ್ಪಂಕ್ತಿಯಲ್ಲಿದ್ದು, ಈ 'ಸಂತೂಸಾಪೇಟೆ' ನಾಮಕರಣಕ್ಕೆ ಕಾರಣರಾಗಿರುತ್ತಾರೆ ಎಂಬುದಕ್ಕೆ ಉತ್ತರ ಲಭ್ಯವಿಲ್ಲ. ಇದರ ಬಗ್ಗೆ ಸಂಶೋಧನೆ ಮಾಡಬೇಕಾಗಿದೆ.

ಆದರೆ 'ಸಂತೂಸಾಪೇಟೆ' ಎಂದು ಹೆಸರಿಸಿರುವ ನಾಮಧ್ಯೇಯವು ಈ ಜನಾಂಗದಲ್ಲಿರುವ ಒಬ್ಬ ಪ್ರತಿಭಾವಂತ

ವ್ಯಕ್ತಿಯೇ ಹೊರತು ಬೇರೆಯವರಲ್ಲ. ಎಂಬುದು ಸ್ಪಷ್ಟ. ಈ ಜನಾಂಗವು ವಿಜಯನಗರ ಸಾಮ್ರಾಜ್ಯ (೧೬ನೇ ಶತಮಾನ) ಉದಯವಾಗುವ ಮುನ್ನ ಅಂದರೆ, ಹೊಯ್ಸಳರ ಕಾಲ (೧೪ನೇ ಶತಮಾನ)ದ ವೇಳೆಯಲ್ಲಿ ಬೆಂಗಳೂರಿಗೆ ಬಂದು ನೆಲಸಿರಬಹುದು ಎಂದು ಈ ವಂಶವೃಕ್ಷ ಫ್ಯಾಮಿಲಿ ಟ್ರೀ) ದಿಂದ ತಿಳಿದುಬರುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ವಂಶವೃಕ್ಷ (ಫ್ಯಾಮಿಲಿ ಟ್ರೀ) ದ ನಕಲು ಶ್ರೀ ಕೆ.ಜಿ. ಗಂಗಾಧರ ಸಾ, ಉದ್ದಿಮೆದಾರರು ನೀಡಿದ ಆಧಾರ.

೨. ಶ್ರೀ ಕೆ.ಜಿ. ಗಂಗಾಧರ ಸಾ ಉದ್ದಿಮೆದಾರರ ಹೇಳಿಕೆ.

೩. ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ದಾಖಲೆಗಳು.

೪. ಡಾ. ಸೂರ್ಯನಾಥ ಕಾಮತ್, **ಬೆಂಗಳೂರು ಜಿಲ್ಲಾ ಗೆಜೆಟಿಯರ್,** ಬೆಂಗಳೂರು, ೧೯೯೦.

೫. ಡಾ. ಸೂರ್ಯನಾಥ ಕಾಮತ್, (ಮುಖ್ಯ ಸಂಪಾದಕರು), **ಕರ್ನಾಟಕ ಸ್ಟೇಟ್ ಗೆಜೆಟಿಯರ್** ಭಾಗ ೧, ಬೆಂಗಳೂರು, ೧೯೮೨.

೬ ಬ.ನ. ಸುಂದರರಾವ್, **ಬೆಂಗಳೂರಿನ ಇತಿಹಾಸ,** ಬೆಂಗಳೂರು, ೧೯೮೫.

೭. ಕೆ. ಚಂದ್ರಮೌಳಿ **'ಬೆಂಗಳೂರಿನ ನೋಟಗಳು'** ಬೆಂಗಳೂರು, ೨೦೦೨.

೮. ಡಾ. ತುಳಸಿರಾಮನಾಯಕ್ **ಬೆಂಗಳೂರಿನ ಸಂಕ್ಷಿಪ್ತ ಇತಿಹಾಸ;** ಬೆಂಗಳೂರು, ೨೦೧೦.



# ಬೆಂಗಳೂರು, ವಾರ್ಡ್ ನಂ. ೧೫೪ರಲ್ಲಿ ಅಂತರ್ಗತ ಐತಿಹಾಸಿಕ ಗ್ರಾಮ ನಾಗಸಂದ್ರ

**ಡಾ. ಬೆಂ.ಶಾ. ಶ್ಯಾಮಲಾ ರತ್ನಕುಮಾರಿ***

ಬೆಂಗಳೂರು – ೫೬೦೦೨೮ ರ ವಿಭಾಗ ಪ್ರತಿಷ್ಠಿತ ಬಸವನಗುಡಿ ಮತಕ್ಷೇತ್ರಕ್ಕೆ ಸೇರಿದೆ, ಬೆಂಗಳೂರು ದಕ್ಷಿಣ ತಾಲ್ಲೂಕಿನಲ್ಲಿ ಐತಿಹಾಸಿಕ ಗ್ರಾಮವಾದ ನಾಗಸಂದ್ರವನ್ನೊಳಗೊಂಡ ಮಹತ್ವದ ಪ್ರದೇಶವಾಗಿದೆ. ನನಗೆ ದೊರಕಿರುವ ಐತಿಹಾಸಿಕ ದಾಖಲೆಗಳ ಪ್ರಕಾರ ನಾಗಸಂದ್ರ ಗ್ರಾಮದ ಪ್ರಾಚೀನತೆ ೫೦೦ ವರ್ಷಗಳಷ್ಟು ಹಿಂದಿನ ವಿಜಯನಗರದ ಕಾಲಕ್ಕೆ ಸೇರುತ್ತದೆ.

**ದಾಖಲೆ (೧)**

ಈ ಗ್ರಾಮದ ಸ್ಥಾಪಕರು ಧುಮ್ಮಿದೊಡ್ಡನಾಯಕರು. ವಿಜಯನಗರದ ಪಟ್ಟದಲ್ಲಿ ಶ್ರೀಶಂಕುರಾಯರು, ಕೃಷ್ಣರಾಯರು, ಅಚ್ಯುತರಾಯರು, ತಿರುಮಲರಾಯರು, ರಾಮರಾಯರು, ಆನೆಗೊಂದಿರಾಯರು, ಬಲ್ಲಾಳರಾಯರು, ಗುರುಗಂಜಿ ರಾಯರು, ಕೆಂಧೂಳಿರಾಯರು, ಶ್ರೀರಂಗರಾಯರು, ಏಳು ಸಿಂಹಾಸನದ ರಾಯರು ಇದಾರೆ. ಶಾಲಿವಾಹನ ಶಕ ೧೩೨೪ ಎಂದರೆ ಕ್ರಿ.ಶ.೧೪೦೨ರಲ್ಲಿ ಧುಮ್ಮಿದೊಡ್ಡನಾಯಕರಿಗೆ ೧೬೦ ವರಹ ಸಂಬಳ ಮಾಡಿ ದರ್ಬಾರಿನಲ್ಲಿಟ್ಟು ಕೊಂಡರು.

**ದಾಖಲೆ (೨)**

ತೆಲುಗು ಭಾಷೆಯಲ್ಲಿರುವ ಜಯರೇಖೆಪತ್ರದಲ್ಲಿ ತಿಳಿಸಿರುವಂತೆ ಶ್ರೀಮದ್ ರಾಜಾಧಿರಾಜ ರಾಜಮಾರ್ತಾಂಡ ವೀರ ಪರಾಕ್ರಮಿಗಳಾದ ವಿಜಯನಗರ ಸಂಸ್ಥಾನ ರಾಯರ ಆಸ್ಥಾನದಲ್ಲಿದ್ದ ಯದುವಂಶದ ಧುಮ್ಮಿ ದೊಡ್ಡನಾಯಕ, ಸಲ್ಲೆ ತಿಮ್ಮನಾಯಕ (ಭಾವಮೈದುನರು) ಇವರಿಬ್ಬರು ರಾಯರ ಎದುರಿನಲ್ಲಿ ಹಾವುಮೆಟ್ಟಿ ಹುಲಿಯನ್ನು ಕೊಂದು, 'ಪಂಚ ಕಲ್ಯಾಣಿ' ಎಂಬ ಕುದುರೆಯನ್ನೇರಿ ಸವಾರಿ ಮಾಡಿ, ಅಂದೆ ರಾವುತ ಬಾಹ ಜೆಟ್ಟಿ, ಅಂದೆ ಮೊಲಗು ಬಹುಬಾಹು ರಾವುತ ಜೆಟ್ಟಿ ಇವರಿಬ್ಬರನ್ನು ಸೋಲಿಸಿ ತೋರಿದ ಈ ಮೂರು ಸಾಹಸಗಳನ್ನು ನೋಡಿ ಮೆಚ್ಚಿದ ರಾಯರು ಬಿರುದುಗಳನ್ನೂ ಬಹುಮಾನಗಳನ್ನೂ ಐದು ಗ್ರಾಮಗಳನ್ನೂ ಜಹಗೀರಿಯಾಗಿ ನೀಡಿದರು. ಈ ಯದುವೀರರಿಗೆ 'ಅಳ್ಳಿಕಾರ' (ಹಳ್ಳಿಕಾರ) ಎಂಬ ಹೆಸರು ಇರುವುದು. ಶಾಲಿವಾಹನ ಶಕ ೧೪೨೫ ಎಂದರೆ ಕ್ರಿ.ಶ. ೧೫೦೩ – ಪ್ಲವ ಸಂವತ್ಸರದ ಕಾರ್ತಿಕ ಶುದ್ಧ ವಿಶ್ವವಾರ (?). ದಾನ ಕೊಟ್ಟಿರುವುದು ಆನೆಗೊಂದಿ ಬಲ್ಲಾಳರಾಯರು, ತಿರುಮಲರಾಯರ ಮುದ್ರಣ, ಶ್ರೀಕೃಷ್ಣರಾಯರ ಮುದ್ರಣ.

**ದಾಖಲೆ (೩)**

ಶಾಲಿವಾಹನ ಶಕೆ ೧೪೨೮ ದುಂದುಭಿ ಸಂವತ್ಸರದ ಚೈತ್ರ ಶುದ್ಧ ೧೦ ದಶಮಿ ಎಡೆಯೂರು ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಯಡಿಯೂರು – ನಾಗಸಂದ್ರ – ಯಾದವ ಧುಮ್ಮಿದೊಡ್ಡ ನಾಯ್ಕ ಸಲ್ಲೆ ತಿಮ್ಮನಾಯಕರಿಗೆ ಜಹಗೀರಿ. ಕಟ್ಟೆಯ ಯಜಮಾನಿಕೆ ತಪ್ಪುನೆಪ್ಪುಗಳಿಗೆಲ್ಲ ಯಾದವ ಕಂಪಳಗಾರ ಕುಲದ ಚಿಕ್ಕ ಲಕ್ಕಪ್ಪಗೌಡ, ದೊಡ್ಡ ಲಕ್ಕಪ್ಪಗೌಡ ಇವರಿಗೆ ಕೊಟ್ಟರು.

ಇವರೇ ಮುಂದೆ ಅಚ್ಯುತರಾಯರ ಕಾಲಕ್ಕೆ ತಮಿಳು ನಾಡಿನಲ್ಲಿ ರಾಜಕೀಯ ಕ್ಷೋಭೆ ನಡೆದಾಗ ಅದನ್ನಡಗಿಸಲು ಸೇನಾನಾಯಕರಾಗಿ ನೇಮಿಸಲ್ಪಟ್ಟರು. ವಿಜಯನಗರದ ಸೇನಾನಾಯಕರಾದ ಇವರಿಗೆ 'ಹಳ್ಳಿಕಾರ'ರೆಂದು ಹೆಸರಿಸಿ ಗಡಿ ಮತ್ತು ಕಂದಾಯದ ಕಟ್ಟೆಗಳನ್ನು ನಿರ್ಮಿಸುವ ಅಧಿಕಾರ ವನ್ನು ನೀಡಲಾಯಿತು. ಅದರಂತೆ ಧುಮ್ಮಿ ದೊಡ್ಡನಾಯಕ, ಸಲ್ಲೆ ತಿಮ್ಮನಾಯಕರು ಹಾವುಮೆಟ್ಟಿ ಹುಲಿಯನ್ನು ಕೊಂದು ಶಿಲಾಶಾಸನ ಹಾಕಿಸಿಕೊಂಡು ೮೦ ಗಡಿಗಳನ್ನು ಸ್ಥಾಪಿಸಿದರು. ಆ ಪೈಕಿ ಬೆಂಗಳೂರಿನಲ್ಲಿ ಆರು ಗಡಿಗಳಿದ್ದವು. ಪಟ್ಟದ ಕಟ್ಟೆಗೆ ಸೇರಿದ ಬೆಂಗಳೂರು ಜಿಲ್ಲೆಯ ಈ ಕಾಲದ ಗ್ರಾಮಗಳಲ್ಲಿ ಚಾಮರಾಜಪೇಟೆ, ಬಸವನಗುಡಿ ಮತ್ತು ನಾಗಸಂದ್ರ ಸೇರಿದ್ದವು. ನಾಗಸಂದ್ರ – ಯಡಿಯೂರು ಅವಳಿ ಗ್ರಾಮಗಳನ್ನು ಧುಮ್ಮಿ ದೊಡ್ಡನಾಯಕರಿಗೂ ಸಲ್ಲೆ ತಿಮ್ಮನಾಯಕರಿಗೂ ಜಹಗೀರಿಯಾಗಿ ನೀಡಲಾಯಿತು.

* # ೨೭, ವಿಶಾಲಾಕ್ಷಿ ಕೃಪ, ಶ್ರೀ ಪರಮಹಂಸ ರಸ್ತೆ, ೨ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು–೫೬೦೦೨೮.

ನಾಗಸಂದ್ರ ಗ್ರಾಮವು ಯಡಿಯೂರುಕೆರೆ ಮತ್ತು ಚೆನ್ನಮ್ಮನಕೆರೆಯ ನಡುವಣ ಪ್ರದೇಶದ ಹರವನ್ನು ಹೊಂದಿದ್ದಿತು. ಈ ಪ್ರದೇಶವು ೧೯೫೦ರಲ್ಲಿ ತ್ಯಾಗರಾಜನಗರ ಎಂಬ ಹೆಸರಿನ ಬಡಾವಣೆಯಾಗಿ ರೂಪುಗೊಳ್ಳುವವರೆಗೆ ಹೊಲ, ತೋಟಗಳಿಂದ ಕೂಡಿದ್ದಿತು. ಹಾವಿನ ಹುತ್ತಗಳಿದ್ದ ಯಡಿಯೂರುಕೆರೆ ಮತ್ತು ಚೆನ್ನಮ್ಮನಕೆರೆ (ಕೆರೆ=ಸಂದ್ರ) ನಡುವಣ ಈ ಪ್ರದೇಶಕ್ಕೆ ನಾಗಸಂದ್ರ ಎಂಬ ಅನ್ವರ್ಥ ನಾಮ ಬಂದಿತು. ಹೀಗೆ ನಾಗಸಂದ್ರ ಗ್ರಾಮವು ಯಲಹಂಕದ ನಾಡಗೌಡ ಕೆಂಪೇಗೌಡನು ಬೆಂಗಳೂರನ್ನು ನಿರ್ಮಿಸುವುದಕ್ಕೆ ಮುಂಚೆಯೇ ನಾಗಸಂದ್ರ ಗ್ರಾಮವು ಅಸ್ತಿತ್ವ ದಲ್ಲಿ ಇದ್ದಿತು. ಇಂದಿಗೂ ನಾಗಸಂದ್ರ ಎಂಬ ಹೆಸರಿನಲ್ಲಿಯೇ ತ್ಯಾಗರಾಜನಗರ ಬಡಾವಣೆ ಬೆಂಗಳೂರು-೨೮ರ ಬಡಾವಣೆಯ ಅಂತರ್ಗತವಾಗಿ ತನ್ನ ಅಸ್ತಿತ್ವವನ್ನು ಉಳಿಸಿ ಕೊಂಡುಬಂದಿದೆ.

ಇಂದು ನಾಗಸಂದ್ರ ಗ್ರಾಮದ ಹರಹಿನಲ್ಲಿ ನರಸಿಂಹ ರಾಜ ಕಾಲೋನಿ, ತ್ಯಾಗರಾಜನಗರ, ಮಾಡೆಲ್‌ಹೌಸ್ ಬ್ಲಾಕ್, ಪಾಮಡಿ ಸುಬ್ಬರಾಮಚೆಟ್ಟಿ ಲೇಔಟ್, ಟಾಟಾ ಸಿಲ್ಕ್‌ಫಾರ್ಮ್, ಶಾಸ್ತ್ರಿನಗರ, ಎ.ಕೆ. ಕಾಲೋನಿ, ಬೋವಿ ಕಾಲೋನಿ, ಲಕ್ಕಪ್ಪ ಲೇಔಟ್, ತೋಟಗಳಾಗಿದ್ದ, ಜವರಯ್ಯ ಗಾರ್ಡನ್, ಕಲ್ಯಾಣಿ ತೋಟ, ದ್ರಾಕ್ಷಿ ತೋಟ, ಗಂಗಮ್ಮ ಬಡಾವಣೆ ಹಾಗೂ ಸಿ.ಟಿ. ಬೆಡ್ (ಚೆನ್ನಮ್ಮನ ಕೆರೆ ಅಚ್ಚುಕಟ್ಟು) ಭಾಗಗಳು ಅಡಕ ವಾಗಿವೆ.

## ನಾಗಸಂದ್ರ ಗ್ರಾಮದ ಹರಹಿನಲ್ಲಿರುವ ದೇವಾಲಯಗಳು ಮತ್ತು ಮಂದಿರಗಳು

ನಾಗಸಂದ್ರ ಗ್ರಾಮದ ಗ್ರಾಮದೇವರು ವೀರ ಆಂಜನೇಯ. ವೀರ ಆಂಜನೇಯನ ದೇವಾಲಯವು ನಾಗಸಂದ್ರ ವೃತ್ತದಿಂದ ದಕ್ಷಿಣಕ್ಕೆ ಸಾಗುವ ನಾಗಸಂದ್ರ ಮುಖ್ಯರಸ್ತೆ (ಇತ್ತೀಚೆಗೆ ಈ ರಸ್ತೆಯ ಹೆಸರು ಸರ್ ಎಂ. ವಿಶ್ವೇಶ್ವರಯ್ಯ ರಸ್ತೆ ಎಂದಾಗಿದೆ) ಯ ಬಲಬದಿಗೆ ಇದೆ. ಮೂಲದಲ್ಲಿ ಈ ಗುಡಿಯು ದಕ್ಷಿಣಾಭಿಮುಖವಾಗಿ ಒಪ್ಪಾರದಿಂದ ಕೂಡಿದ ಚಿಕ್ಕ ಗುಡಿಯಾಗಿದ್ದಿತು. ಈಗ ನವೀಕರಣಗೊಂಡು ವಿಸ್ತೃತ ದೇವಾಲಯವಾಗಿದೆ. ೨೦೦೧ರಲ್ಲಿ ನೂತನವಾಗಿ ಪೂರ್ವಾಭಿಮುಖವಾಗಿ ನಿರ್ಮಿತಗೊಂಡ ದೇವಾಲಯದಲ್ಲಿ ದೇವರ ಪುನರ್‌ಪ್ರತಿಷ್ಠಾ ಮಹೋತ್ಸವವು ನಡೆದಿದೆ. ದೇವಾಲಯದ ಮುಂದೆ ಉನ್ನತವಾದ ಗರುಡಸ್ಥಂಭವಿದೆ. ದೇವಾಲಯವನ್ನು ಪ್ರವೇಶಿಸಲು ಎರಡೂ ಬದಿಗಳಲ್ಲಿ ಮೆಟ್ಟಿಲುಗಳಿವೆ. ಸಾಲಾಗಿ ಮೂರು ಗರ್ಭಗುಡಿಗಳಿದ್ದು ಮಧ್ಯದ ಗರ್ಭಗುಡಿಯಲ್ಲಿ ೪-೫ ಅಡಿ ಎತ್ತರದ ವೀರಾಂಜನೇಯನ ವಿಗ್ರಹವಿದೆ, ಎಡಬದಿಯ ಗರ್ಭಗುಡಿಯಲ್ಲಿ ಸೀತಾಲಕ್ಷ್ಮಣರಿಂದ ಕೂಡಿದ ಕೋದಂಡರಾಮನ ವಿಗ್ರಹ ಹಾಗೂ ಬಲಬದಿಯ ಗರ್ಭಗುಡಿಯಲ್ಲಿ ಶ್ರೀ ಸತ್ಯನಾರಾಯಣನ ವಿಗ್ರಹವಿದೆ. ಕೈಸಾಲೆಯ ಎಡಬದಿಯಲ್ಲಿ ಪ್ರತ್ಯೇಕವಾಗಿ ಗಣೇಶನ ಗುಡಿಯಿದೆ. ಗರ್ಭಗುಡಿಗಳ ಸುತ್ತಲೂ ಪ್ರದಕ್ಷಿಣಾಪಥವಿರುವ ಸಾಂಧಾರ ದೇವಾಲಯವಾಗಿದೆ.

ಆಂಜನೇಯ ದೇವಸ್ಥಾನದ ಹೊರಭಾಗದಲ್ಲಿ ಎಡ ಬದಿಗೆ ಗೂಡಿನಲ್ಲಿ ಕಲ್ಲೊಂದಿದ್ದು ಅದರ ಮೇಲೆ ಅಸ್ಪಷ್ಟವಾದ ಕೆತ್ತನೆಯಿದೆ. ಸ್ಥಳೀಯರು ಇದನ್ನು **'ಉಪ್ಪಮ್ಮ'** ಎಂದು ಕರೆಯುತ್ತಾರೆ. ಸಿಡುಬು, ಗೌತಲಮ್ಮ, ಮುಂತಾದ ಪಿಡುಗುಗಳ ಸಂದರ್ಭಸಲ್ಲಿ ಈ ಕಲ್ಲಿನ ಮೇಲೆ ಮೊಸರು ಹಾಗೂ ಉಪ್ಪನ್ನು ರೋಗ ನಿವಾರಣಾರ್ಥ ಎರೆಯಲಾಗುತ್ತದೆ.

ನಾಗಸಂದ್ರದ ವೃತ್ತದಿಂದ ಮುಖ್ಯರಸ್ತೆಯಲ್ಲಿ ಸ್ವಲ್ಪ ದೂರ ಕ್ರಮಿಸಿದರೆ ಎಡಬದಿಯ ಅಡ್ಡರಸ್ತೆಯಲ್ಲಿರುವ ಎ.ಕೆ. ಕಾಲೋನಿ (ಮಾದಿಗರಹಟ್ಟಿ) ಯಲ್ಲಿ **ದಾಳಮ್ಮನ** ಗುಡಿಯಿದೆ. ಮೊದಲು ಒಪ್ಪಾರದಲ್ಲಿದ್ದ ಗುಡಿಯನ್ನು ಈಗ ಸಿಮೆಂಟ್ ಕಾಂಕ್ರೀಟ್‌ಗಳಿಂದ ಕಟ್ಟಲಾಗುತ್ತಿದೆ.

ಗುಡಿಯಲ್ಲಿ ಕುದುರೆಯ ಮೇಲೆ ಕುಳಿತ ದಾಳಮ್ಮ (ಧಾಳಿಯಮ್ಮ?), ಸಿಂಹವಾಹಿನಿ ಅಣ್ಣಮ್ಮ, ಕುದುರೆಯ ಮೇಲೆ ಕುಳಿತ ಪ್ಲೇಗಮ್ಮ, ಎಲ್ಲಮ್ಮ, ಕಾಳಮ್ಮ, ಮಾರಮ್ಮ, ಚೌಡೇಶ್ವರೀ ಎಂಬ ದೇವತೆಗಳ ಮೂರ್ತಿಗಳೂ ಹಾಗೂ ಚಿಕ್ಕದಾದ ನರಸಿಂಹ ಮತ್ತು ಕೃಷ್ಣನ ಮೂರ್ತಿಗಳೂ ಮೂರು ನಾಗ ಪ್ರತಿಮೆಗಳೂ ಇವೆ. ಮೂರ್ತಿಗಳೆಲ್ಲವೂ ಮಣ್ಣಿನವು. ಬಣ್ಣ ಬಳಿಯಲಾಗಿದೆ. ಮೂರ್ತಿಗಳು ನೋಡಲು ಭಾವಪೂರ್ಣ ವಾಗಿಯೂ ಸುಂದರವಾಗಿಯೂ ಇವೆ. ಕುರುಬಗೌಡರು ಇಲ್ಲಿ ಪೂಜಾ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಅಣ್ಣಮ್ಮನ ಜಾತ್ರೆಯ ಸಂದರ್ಭದಲ್ಲಿ ಈ ದೇವತೆಗಳ ಮೆರವಣಿಗೆ ನಡೆಯುತ್ತದೆ.

ಆಂಜನೇಯನ ದೇವಾಲಯದ ಎದುರಿಗೆ ಅಶ್ವತ್ಥಕಟ್ಟೆ ಮತ್ತು ಅದರ ಪಕ್ಕದಲ್ಲಿ ಈಗ್ಗೆ ೧೨ ವರ್ಷಗಳ ಹಿಂದೆ ನಿರ್ಮಿತವಾದ ಸತ್ಯವಿಘ್ನೇಶ್ವರನ ಗುಡಿ ಮತ್ತು ನವಗ್ರಹ ಕಟ್ಟೆಯೂ ಇವೆ.

ನಾಗಸಂದ್ರದ ಮುಖ್ಯ ರಸ್ತೆಯಲ್ಲಿ ಹಾಗೇ ಮುಂದುವರಿದರೆ ಬಲಬದಿಯ ಅಡ್ಡರಸ್ತೆಯಲ್ಲಿ **ಶ್ರೀ ವಿನಾಯಕ ಲಕ್ಷ್ಮೀ ವೆಂಕಟೇಶ್ವರ** ದೇವಸ್ಥಾನವಿದೆ. ಇದು ಮೊದಲು ಶ್ರೀ ವೆಂಕಟೇಶ್ವರ ಭಜನಾಮಂದಿರವಾಗಿದ್ದು ಇತ್ತೀಚೆಗೆ ಭಜನಾ ಮಂಡಳಿಯವರಿಂದ ನೂತನವಾಗಿ ನಿರ್ಮಿತಗೊಂಡಿದೆ.

ಗುಡಿಯು ಪೂರ್ವಾಭಿಮುಖವಾಗಿದ್ದು ಉತ್ತರದ ಕಡೆಗೆ ಸ್ಥಂಭದ್ವಾರವನ್ನು ಹೊಂದಿದೆ. ಭಜನಮಂಡಳಿ ೪೩ ವರ್ಷಗಳಿಂದಲೂ ದೇವಾಲಯದ ಚಟುವಟಿಕೆಗಳನ್ನು ನಿರ್ವಹಿಸಿಕೊಂಡುಬರುತ್ತಿದೆ.

ಶ್ರೀ ವಿನಾಯಕ ಲಕ್ಷ್ಮೀವೆಂಕಟೇಶ್ವರ ದೇವಾಲಯದಿಂದ ಮುಂದೆ ನಾಗಸಂದ್ರ ಮುಖ್ಯರಸ್ತೆಯಲ್ಲಿದೆ ಪ್ರಸಿದ್ಧವಾಗಿರುವ **ಗಣೇಶಮಂದಿರ**. ಇದು ಅತ್ಯಂತ ವಿಶಾಲವಾದ ದೇವಾಲಯವಾಗಿದೆ. ಇದನ್ನು ೧೯೫೫ರಲ್ಲಿ ವಡಮ ಪಂಗಡದ ರಾಜಗೋಪಾಲ ಐಯ್ಯರ್ ಸ್ಥಾಪಿಸಿದರು. ಇಲ್ಲಿ ದೇವತಾ ಗುಡಿಗಳ ಸಮುದಾಯವೇ ಇದೆ. ಮೂರು ಮುಖ್ಯ ಗರ್ಭಗುಡಿಗಳೂ ೯ ಪರಿವಾರ ದೇವತಾ ಗುಡಿಗಳೂ ಇವೆ. ಮೂರು ಮುಖ್ಯ ಗರ್ಭಗುಡಿಗಳಲ್ಲಿ ಮಧ್ಯದಗುಡಿಯಲ್ಲಿ ೩–೪ ಅಡಿ ಎತ್ತರದ ಗಣೇಶ, ಬಲಗಡೆಗೆ ಶಿವಪಂಚಾಯತನ (ಲಿಂಗ, ಸೂರ್ಯ, ವಿಷ್ಣು, ಅಂಬಿಕೆ, ಗಣೇಶ), ಎಡಗಡೆಗೆ ಸೀತಾಲಕ್ಷ್ಮಣ ಹನುಮಸಮೇತ ಶ್ರೀರಾಮನ ವಿಗ್ರಹಗಳಿವೆ. ಪರಿವಾರ ದೇವತೆಗಳ ಗುಡಿಗಳಲ್ಲಿ ಪ್ರಸನ್ನ ಆಂಜನೇಯ, ಸತ್ಯನಾರಾಯಣ, ವಲ್ಲೀದೇವಸೇನಾಸಮೇತ ಸುಬ್ರಹ್ಮಣ್ಯ, ಗೋಪಾಲಕೃಷ್ಣ, ಶಾರದಾಂಬಾ, ಶಂಕರಾಚಾರ್ಯ, ಕಾಳಿಕಾಂಬಾ, ದಕ್ಷಿಣಾಮೂರ್ತಿ, ಚಂಡಿಕೇಶ್ವರ ವಿಗ್ರಹಗಳಿವೆ. ಆವರಣದಲ್ಲಿ ಅಶ್ವತ್ಥಕಟ್ಟೆ, ನಾಗರಕಲ್ಲುಗಳಿವೆ. ಶ್ವೇತಾರ್ಕ (ಬಿಳಿ ಎಕ್ಕೆ), ಪಲಾಶ (ಮುತ್ತುಗ)ದ ಗಿಡಗಳೂ ಇವೆ. ಶಿಲಾಗರುಡಸ್ಥಂಭ ಇದೆ. ಮೂಲ ಗರ್ಭಗುಡಿಗಳಿಗೆ ವಿಮಾನ ಗೋಪುರಗಳೂ ಹಾಗೂ ದ್ವಾರದಲ್ಲಿ ರಾಜಗೋಪುರವಿವೆ. ಕೆತ್ತನೆಗಳಿರುವ ಮರದ ದೊಡ್ಡತೇರು ಮತ್ತು ಕೆತ್ತನೆಗಳೇನೂ ಇಲ್ಲದ ಚಿಕ್ಕತೇರುಗಳಿವೆ. ದೊಡ್ಡ ಮರದ ತೇರನ್ನು ಗಣೇಶ ಚತುರ್ಥಿಯಿಂದ ಪ್ರಾರಂಭವಾಗಿ ಅನಂತಚತುರ್ದಶಿಯವರೆಗೆ ನಡೆಯುವ ರಥೋತ್ಸವದಲ್ಲಿ ಬಳಸಲಾಗುವುದು. ರಾಮನವಮಿಯಂದು ರಥೋತ್ಸವಕ್ಕಾಗಿ, ವಿಜಯದಶಮಿಯಂದು ಎಲ್ಲ ದೇವರುಗಳ ರಥೋತ್ಸವಕ್ಕಗಿ ಚಿಕ್ಕ ತೇರನ್ನು ಬಳಸಲಾಗುವುದು.

ನಾಗಸಂದ್ರದ ಮುಖ್ಯರಸ್ತೆಯ ಕೊನೆಯಲ್ಲಿರುವ ಶಾಸ್ತ್ರಿನಗರದ ೮ನೇ ಮುಖ್ಯರಸ್ತೆಯ ಬಲಬದಿಗೆ **ಶ್ರೀ ಬಾಲಾಂಬಿಕಾ** ದೇವಸ್ಥಾನವಿದೆ. ಈ ದೇವಾಲಯವನ್ನು ೩೫ ವರ್ಷಗಳ ಹಿಂದೆ ಕಟ್ಟಲಾಗಿದ್ದು ಈಗ್ಗೆ ೨ ವರ್ಷಗಳ ಹಿಂದೆ ಕುಂಭಾಭಿಷೇಕದೊಂದಿಗೆ ನವೀಕರಣ ಮಹೋತ್ಸವವನ್ನು ಆಚರಿಸಲಾಯಿತು. ಇಲ್ಲಿ ಒಂದೇ ಸಾಲಿನಲ್ಲಿರುವ ಮೂರು ಗರ್ಭಗುಡಿಗಳಲ್ಲಿ ಕ್ರಮವಾಗಿ ಗಣೇಶ, ಬಾಲಾಂಬಿಕಾ, ಸುಬ್ರಹ್ಮಣ್ಯರ ಮೂರ್ತಿಗಳೂ, ಬಲಬದಿಗೆ ಮೊದಲು ಮಾರಮ್ಮನ ಸಂಕೇತವಾಗಿ ಇದ್ದ ಕಲ್ಲಿನ ಸ್ಥಳದಲ್ಲಿ ಚಿಕ್ಕದಾದ ಬಾಲಾಂಬಿಕೆಯ ಪ್ರತಿಮೆಯೂ ಇವೆ. ಗರ್ಭಗುಡಿಗಳ ಸುತ್ತಲೂ ಪ್ರದಕ್ಷಿಣಾಪಥವಿದೆ. ಬಾಲಾಂಬಿಕೆಯ ಗರ್ಭಗುಡಿಯ ದಕ್ಷಿಣ ಭಿತ್ತಿಯಲ್ಲಿರುವ ಕೋಷ್ಠದಲ್ಲಿ ದಕ್ಷಿಣಾಮೂರ್ತಿಯ ವಿಗ್ರಹವಿದೆ. ಗರ್ಭಗುಡಿಗಳ ಮುಂಭಾಗದಲ್ಲಿರುವ ಕೈಸಾಲೆಯಲ್ಲಿ ಚಿನ್ನದ ಮುಲಾಮಿನಿಂದ ಲೇಪಿತ ಲೋಹದ ಧ್ವಜಸ್ಥಂಭವಿದೆ. ಕೈಸಾಲೆಯ ಉತ್ತರದ ಭಾಗದಲ್ಲಿ ವೃತ್ತಕಾರವಾಗಿ ವಿಭಿನ್ನವಾಗಿರುವ ಪಂಚ ನಾಗಪ್ರತಿಮಾಸಮೂಹವೂ ಮತ್ತು ಅದರ ಮುಂಭಾಗದಲ್ಲಿ ಪತ್ನೀ ಮತ್ತು ವಾಹನಗಳಿಂದ ಕೂಡಿದ ನವಗ್ರಹಗಳೂ ಇವೆ. ನವಗ್ರಹಗಳಿರುವ ಕಡೆ ಒಳಚತ್ತಿನಲ್ಲಿ ರಾಶಿಚಕ್ರದ ವರ್ಣಚಿತ್ರ, ಹಾಗೂ ಗರ್ಭಗುಡಿಗಳ ಮುಂದಿನ ಕೈಸಾಲೆಯ ಒಳಛತ್ತಿನಲ್ಲಿ ಪುಷ್ಪಾಲಂಕರಣ, ಅದರ ಬಲಬದಿಗೆ ಶಿವನಿಗೆ ಭಿಕ್ಷೆ ನೀಡುತ್ತಿರುವ ಅನ್ನಪೂರ್ಣೇಶ್ವರಿ, ಎಡಬದಿಗೆ ಧನ ಮತ್ತು ಧಾನ್ಯ ಸಂಪತ್ತನ್ನು ನೀಡುತ್ತಿರುವ ಲಕ್ಷ್ಮಿಯ ದೊಡ್ಡಗಾತ್ರದ ಸುಂದರ ವರ್ಣಚಿತ್ರಗಳಿವೆ. ಅಂಚಿನಲ್ಲಿ ಹಂಸಗಳ ಸಾಲು, ಹಿಂಭಾಗದ ಛತ್ತಿನ ಅಂಚಿನಲ್ಲಿ ಗಿಳಿಗಳ ಸಾಲೂ ಹಾಗೂ ಚತ್ತಿನ ಮುಂಭಾಗದ ಅಂಚಿನಲ್ಲಿ ವಸ್ತ್ರಾಲಂಕರಣದ ಸಾಲೂ ಕಂಡುಬರುತ್ತವೆ. ಗರ್ಭಗುಡಿಯ ಮುಂಭಾಗದ ಭಿತ್ತಿಯಲ್ಲಿ ೫ ಅಡ್ಡಪಟ್ಟಿಕೆಗಳಿದ್ದು ಅವುಗಳಲ್ಲಿ ಕ್ರಮವಾಗಿ ಹೊಯ್ಸಳ ಶೈಲಿಯನ್ನೇ ಹೋಲುವ ಆನೆಗಳ ಸಾಲು, ಸಿಂಹಗಳ ಸಾಲು, ನಾಗದಂಪತಿಗಳು, ವಾದ್ಯ ನೃತ್ಯಗಾರರ ಸಾಲು, ಸಪ್ತಮಾತೃಕೆಯರ ಬಿಡಿವಿಗ್ರಹಗಳ ಸಾಲೂ ಇವೆ. ಮೂರೂ ಗರ್ಭಗುಡಿಗಳಿಗೂ ಪ್ರತ್ಯೇಕವಾಗಿ ವಿಮಾನಗೋಪುರಗಳಿವೆ. ಶ್ರೀ ಬಾಲಾಂಬಿಕೆಯ ಗರ್ಭಗೃಹದ ಮೇಲೆ ಶಾಲಾವಿಮಾನವೂ ಬದಿಯ ಗರ್ಭಗೃಹಗಳ ಮೇಲೆ ವರ್ತುಲ ತ್ರಿತಲ ವಿಮಾನಗಳೂ ಇವೆ. ಗರ್ಭಗುಡಿಗಳ ಭಾಗವನ್ನು ಕಪ್ಪುಶಿಲೆಯಿಂದ ನಿರ್ಮಿಸಲಾಗಿದೆ. ಶಿಲ್ಪಗಳು ಪ್ರಮಾಣಬದ್ಧವೂ ಭಾವಸೌಂದರ್ಯಯುಕ್ತವೂ ಅಗಿದ್ದು ನೋಟಕರ ಮನಸೆಳೆಯುತ್ತವೆ. ಕೈಸಾಲೆಯ ಬಲಭಾಗದಲ್ಲಿ ಶಿರಡಿ ಸಾಯಿಬಾಬಾ ಮತ್ತು ಶ್ರೀ ಶಂಕರಾಚಾರ್ಯರ ದೊಡ್ಡ ಪ್ರತಿಮೆಗಳನ್ನು ಪ್ರತಿಷ್ಠಾಪಿಸುವ ಯೋಜನೆ ರೂಪುಗೊಳ್ಳುತ್ತಿದೆ. ಹೀಗೆ ಈ ದೇವಾಲಯವು ಈ ಪ್ರದೇಶದಲ್ಲಿ ವಿಶಿಷ್ಟವಾದ ಸಾಂಧಾರ, ತ್ರಿಕೂಟಾಚಲ ವಾಸ್ತುವಿನ್ಯಾಸವುಳ್ಳ, ಕಪ್ಪುಶಿಲೆಯಲ್ಲಿ ಕಡೆಯಲ್ಪಟ್ಟ ಚಿಕಣಿ ಹಾಗೂ ಆಗಮಬದ್ಧ ದೇವಶಿಲ್ಪಕಲೆ ಮತ್ತು ವರ್ಣಚಿತ್ರಕಲೆಗಳ ಸಂಗಮ ಸ್ಥಾನವಾಗಿದೆ.

ತ್ಯಾಗರಾಜನಗರದ ಮೊದಲನೇ ಬ್ಲಾಕಿನಲ್ಲಿದೆ **ಪಾಂಡುರಂಗನ ಗುಡಿ**, ಇದು ಮೊದಲು ಭಜನಮಂದಿರವಾಗಿದ್ದು ೧೯೮೦ರ ದಶಕದಲ್ಲಿ ಗುಡಿಯಾಗಿ ರೂಪುಗೊಂಡಿದೆ. ಗರ್ಭಗುಡಿಯಲ್ಲಿ ೩–೪ ಅಡಿ ಎತ್ತರದ ಪಾಂಡುರಂಗ ರುಕ್ಮಾಬಾಯಿ ವಿಗ್ರಹಗಳಿವೆ. ಪಕ್ಕದಲ್ಲಿ ಗಣೇಶನ ವಿಗ್ರಹವೂ ಇದೆ. ದೇವಾಲಯದ ಈಶಾನ್ಯ ಭಾಗದಲ್ಲಿ ನವಗ್ರಹ

ವಿಗ್ರಹಗಳಿವೆ. ಪ್ರತಿವರ್ಷ ಆಷಾಢ ಮಾಸದಲ್ಲಿ ಬ್ರಹ್ಮರಥೋತ್ಸವ ಮತ್ತು ಕುಂಭಾಭಿಷೇಕ ಮಹೋತ್ಸವಗಳನ್ನು ನಡೆಸಲಾಗುತ್ತದೆ.

ತ್ಯಾಗರಾಜನಗರದ ಎರಡನೇ ಬ್ಲಾಕಿನ ಕೊನೆಯಲ್ಲಿ ಬಸ್ ಮಾರ್ಗದಲ್ಲಿ ಎಡಬದಿಗೆ ಇತ್ತೀಚೆಗೆ ಕಟ್ಟಲಾದ ಐಶ್ವರ್ಯ ಗಣಪತಿಯ ಚಿಕ್ಕ ಗುಡಿಯಿದೆ. ಇಲ್ಲಿಯೂ ಸಂಕಷ್ಟ ಗಣಪತಿ ಪೂಜೆ ಮತ್ತು ಪ್ರತಿನಿತ್ಯ ಎರಡು ಹೊತ್ತು ಪೂಜೆ ವಿಧಿವತ್ತಾಗಿ ನಡೆಯುತ್ತದೆ.

ಇದೇ ಬಸ್ ಮಾರ್ಗದಲ್ಲಿ ಬಲಬದಿಗಿದೆ **ಪ್ಲೇಗಮ್ಮ ಶ್ರೀ ರಾಜರಾಜೇಶ್ವರೀ ಅಮ್ಮನವರ ದೇವಾಲಯ.** ಬೆಂಗಳೂರಿನಲ್ಲಿ ೧೮೯೦ ರಲ್ಲಿ ಪ್ಲೇಗಿನ ಪಿಡುಗು ಸಂಭವಿಸಿದಾಗ ಅದರ ನಿವಾರಣೆಗಾಗಿ ಪ್ಲೇಗ್ ಮಾರಮ್ಮನಿಗೆ ಚಿಕ್ಕದಾದ ಗುಡಿಕಟ್ಟಿ ಮೊಸರನ್ನು ತಂಪುತನಿಯಾಗಿ ಎರೆಯುತ್ತಿದ್ದರು, ಬಲಿಯನ್ನೂ ನೀಡುತ್ತಿದ್ದರು. ಈಗಲೂ ತನಿಎರೆಯುವ ಹಾಗೂ ಪೂಜಾ ಕಾರ್ಯಗಳು ಭರದಿಂದ ನಡೆದಿವೆ.

ತ್ಯಾಗರಾಜನಗರದ ಎರಡನೇ ಬ್ಲಾಕಿನಲ್ಲಿ ವಿವೇಕಾನಂದ ರಸ್ತೆ, ಭೈರಪ್ಪ ಬ್ಲಾಕಿಗೆ ಸೇರಿದಂತೆ ದೊಡ್ಡ ಪ್ರಸನ್ನ ವೀರಾಂಜನೇಯ ದೇವಸ್ಥಾನವನ್ನು ಇತ್ತೀಚೆಗೆ ನಿರ್ಮಿಸಲಾಗಿದೆ.

ತ್ಯಾಗರಾಜನಗರದ ಮೂರನೇ ಬ್ಲಾಕಿನಲ್ಲಿ ಬಸ್ ಮಾರ್ಗದ ಬಲಬದಿಗೆ ಉತ್ತರಾಭಿಮುಖವಾಗಿರುವ ಶನಿದೇವರ ದೇವಾಲಯವಿದೆ. ೪೦ ವರ್ಷಗಳ ಹಿಂದಿನ ದೇವಾಲಯವಾಗಿದೆ. ಆದರೆ ಇತ್ತೀಚೆಗೆ ದೇವಾಲಯವನ್ನು ಬಡಾಯಿಸಲಾಗಿದೆ ಹಾಗೂ ನವೀಕರಿಸಲಾಗಿದೆ. ಈ ದೇವಾಲಯವನ್ನು ರೆಡ್ಡಿ ಸಮುದಾಯದ ಸಂಪತ್ತಪ್ಪ ಎಂಬುವವರು ಕಟ್ಟಿಸಿದರು.

ಇದೇ ಬ್ಲಾಕಿನ ಬೋವಿಕಾಲೋನಿಯಲ್ಲಿರುವ ಗೋವಿಂದರಾಜು+ಲಕ್ಷ್ಮಿಯವರ ಮನೆಯಲ್ಲಿ ೪೦ ವರ್ಷಗಳಿಂದ ಪ್ಲೇಗಮ್ಮ, ಸಪ್ಪಲಮ್ಮ ದೇವಿಯರ ಮೃತ್ತಿಕಾ ಮೂರ್ತಿಗಳು ಪೂಜೆಗೊಳ್ಳುತ್ತಿವೆ. ಲೋಹದ ಉತ್ಸವ ಮೂರ್ತಿಗಳೂ ಇವೆ. ಇಲ್ಲಿಂದ ಸ್ವಲ್ಪ ದೂರ ಮುಂದೆ ಹೋದರೆ ಮಾರಮ್ಮನ ಗುಡಿಯಿದೆ. ಅದೇ ರಸ್ತೆಯಲ್ಲಿ ಮುನ್ನಡೆದರೆ ಮನೆಯೊಂದರ ಮುಂಭಾಗದಲ್ಲಿ ವಿನಾಯಕ ಶಾರದಾ ಗುಡಿಯಿದೆ.

ನಾಲ್ಕನೇ ಬ್ಲಾಕಿನ ಏಳನೇ ರಸ್ತೆಯಲ್ಲಿ **ಲಕ್ಷ್ಮೀನರಸಿಂಹನ ದೇವಾಲಯವಿದೆ.** ಇಲ್ಲಿರುವ ಸ್ಥಂಭಕ್ಕೆ ಭಕ್ತರ ಇಷ್ಟಾರ್ಥವನ್ನು ನೀಡುವ ಮಹಿಮೆ ಇದೆಯೆಂದು ನಂಬಲಾಗಿದೆ. ಇಲ್ಲಿ ಉತ್ತರಾಭಿಮುಖವಾಗಿರುವ ಗರ್ಭಗುಡಿಗಳಲ್ಲಿ ಲಕ್ಷ್ಮೀ ನರಸಿಂಹ ಮತ್ತು ಶ್ರೀರಾಮರ ವಿಗ್ರಹಗಳಿವೆ.

ತ್ಯಾಗರಾಜನಗರದ ಮೂರನೇ ಬ್ಲಾಕಿನಲ್ಲಿದೆ ಕುಣಿಗಲ್ಲಿನ ಶ್ರೀ ಸಂಕಣ್ಣಾಚಾರ್ಯರಿಂದ ಸು. ೧೯೪೫-೪೬ರ ವೇಳೆಗೆ ಸ್ಥಾಪನೆಗೊಂಡ **ದತ್ತಾತ್ರೇಯ ಆಶ್ರಮ.** ಈಗ ಅದು ದೇವಾಲಯ ಸಂಕೀರ್ಣವಾಗಿ ಪ್ರಮುಖ ಧಾರ್ಮಿಕ ಕೇಂದ್ರವಾಗಿ ಬೆಳೆದುಬಂದಿದೆ. ದೇವಾಲಯದ ಪ್ರಾಂಗಣದಲ್ಲಿ ನವಗ್ರಹ ವೃಕ್ಷಗಳ ವನವಿದೆ. ದೇವಾಲಯದಲ್ಲಿ ದತ್ತಾತ್ರೇಯ, ಗಣಪತಿ, ಆಂಜನೇಯ, ಸಂಕಣ್ಣಾಚಾರ್ಯ ಮುಂತಾದ ದೇವರುಗಳ ವಿಗ್ರಹಗಳಿವೆ.

ದತ್ತಾತ್ರೇಯ ದೇವಸ್ಥಾನದ ಎದುರಿಗೆ ಮೋಟಗಾನಹಳ್ಳಿಯವರಾದ ಶ್ರೀ ಎ.ಎನ್. ಗಂಗಾಧರಶಾಸ್ತ್ರಿಯವರು ೧೯೪೮ರ ಸುಮಾರಿಗೆ ಬೆಂಗಳೂರಿಗೆ ಬಂದು ೧೯೫೦ರಲ್ಲಿ ತಮ್ಮ ಮನೆಯಲ್ಲಿಯೇ ಶ್ರೀ ಸಿದ್ಧಿಪ್ರದ ವಿದ್ಯಾಗಣಪತಿಯನ್ನು ಪ್ರತಿಷ್ಠಾಪನೆ ಮಾಡಿದರು. ಅದೇ ವರ್ಷ ಶ್ರೀ ವಿದ್ಯಾ ಗಣಪತಿ ಪ್ರಕಾಶನ ಸಂಸ್ಥೆಯೂ ಮೈದಳೆಯಿತು. ಇದರ ವತಿಯಲ್ಲಿ ರಾಮನಾಮ ತಾರಕಹೋಮ, ಸಾಮೂಹಿಕ ಲಲಿತಾಸಹಸ್ರನಾಮ ಪಠಣ, ಕುಂಕುಮಾರ್ಚನೆ, ಲಕ್ಷಾರ್ಚನೆ, ಧರ್ಮೋಪನಯನ ಮುಂತಾದ ಕಾರ್ಯಗಳನ್ನು ಆಗಿಂದಾಗ್ಗೆ ನಡೆಸಿದ್ದಾರೆ. ವಿದ್ಯಾ ಪ್ರಕಾಶನದ ಅಡಿಯಲ್ಲಿ ಶ್ರೀ ಜಯಚಾಮರಾಜ ಒಡೆಯರು ಪ್ರಕಟಿಸಿದ್ದ ಪುರಾಣಗಳನ್ನು, ವೇದಮಂತ್ರಭಾಗದ ಗ್ರಂಥಗಳನ್ನೂ ಸ್ತೋತ್ರ ಗ್ರಂಥಗಳನ್ನೂ ಪುನಃ ಪ್ರಕಟಿಸಲಾಗುತ್ತಿದೆ. ಅಲ್ಲದೆ, ತ್ರೈಮಾಸಿಕ ವಾರ್ತಾ ಎಂಬ ಪತ್ರಿಕೆಯನ್ನೂ ಹೊರತರುತ್ತಿದ್ದಾರೆ.

ತ್ಯಾಗರಾಜನಗರದ ನಾಲ್ಕನೇ ಬ್ಲಾಕಿನಲ್ಲಿ ವಿಶಾಲ ಪ್ರಾಂಗಣದೊಳಗಿದೆ **ಮುನೀಶ್ವರ ದೇವಾಲಯ.** ಇತ್ತೀಚೆಗಷ್ಟೇ ದೇವಾಲಯವನ್ನು ನವೀಕರಿಸಿ ಪಾಂಗಣದ ಮುಂದೆ ಮಹಾದ್ವಾರವನ್ನೂ ನಿರ್ಮಿಸಲಾಗಿದೆ. ಮುನೇಶ್ವರನ ವಿಗ್ರಹ ಚಿಕ್ಕದಾಗಿದೆ. ಪ್ರಾಂಗಣದಲ್ಲಿ ಅರಳೀಕಟ್ಟೆ ಮತ್ತು ನಾಗರಕಲ್ಲುಗಳಿವೆ. ಭಕ್ತಾದಿಗಳು ಆಲದ ಮರದ ಕೆಳಗೆ ಮುನೇಶ್ವರನ ಸಂಕೇತವಾಗಿ ಕಲ್ಲುಗಳನ್ನು (ಇಟ್ಟಿಗೆಗಳನ್ನು) ಇರಿಸಿ ಪೂಜಿಸಿ ಮಕ್ಕಳಿಗೆ ಹುಟ್ಟುಕೂದಲು ತೆಗೆಸುವ ಸಂಸ್ಕಾರವನ್ನು ನಡೆಸುತ್ತಾರೆ. ಮುನೀಶ್ವರನ ಪೂಜೆಯನ್ನು ಬೆಳಕೊಡ ಒಕ್ಕಲಿಗ ದಂಪತಿಗಳಾದ ಜಯಮ್ಮ-ರಾಮಯ್ಯ ಮಾಡುತ್ತಿದ್ದಾರೆ. ಚೈತ್ರದ ಹುಣ್ಣಿಮೆ(ಏಪ್ರಿಲ್)ಯ ದಿನದ ಕರಗೋತ್ಸವಕ್ಕೆ ಇಲ್ಲಿಂದ ದೊಡ್ಡತಾಳಿ ಮತ್ತು ಮುನೀಶ್ವರನ ಉತ್ಸವಮೂರ್ತಿಯನ್ನು ಒಯ್ಯಲಾಗುತ್ತದೆ.

ಪ್ರಾಚೀನ ನಾಗಸಂದ್ರ ಗ್ರಾಮದ ಪಶ್ಚಿಮ ಅಂಚಿನಲ್ಲಿರುವ ಗಂಗಮ್ಮ ಬಡಾವಣೆಯಲ್ಲಿ, **ಗಂಗಮ್ಮನ ದೇವಾಲಯವಿದೆ.** ಈ ದೇವಾಲಯದ ಆಡಳಿತ ನಿರ್ವಹಣೆಯನ್ನು ಶ್ರೀ ತಿರುಪತಿ

ಧನಕೋಟಿ ಗಂಗಮ್ಮ ದೇವಾಲಯ ಟ್ರಸ್ಟ್(ರಿ.) ನಡೆಸುತ್ತಿದೆ. ದೇವಾಲಯದ ಮುಂಭಾಗದಲ್ಲಿ ನೂತನವಾಗಿ ಮಹಾದ್ವಾರ ವನ್ನು ನಿರ್ಮಿಸಲಾಗಿದೆ. ದೇವಾಲಯ ವಿಶಾಲವಾದ ಪ್ರಾಂಗಣದ ಮಧ್ಯದಲ್ಲಿದೆ. ಗಂಗಮ್ಮನ ಮೂರ್ತಿಯು ಸುಂದರ ವಾಗಿದೆ. ದೇವಾಲಯದ ಕೈಸಾಲೆಯ ಪಾರ್ಶ್ವಗೋಡೆಯ ಮೇಲ್ಭಾಗದಲ್ಲಿರುವ ಗೂಡುಗಳಲ್ಲಿ ಅಷ್ಟಲಕ್ಷ್ಮಿಯರ ವರ್ಣರಂಜಿತ ಮೂರ್ತಿಗಳಿವೆ. ದೇವಾಲಯದ ಎಡಬದಿಯಲ್ಲಿ ಪಾಣಿವಟ್ಟದ ಮೇಲೆ ನವಗ್ರಹ ಪ್ರತಿಮೆಗಳಿವೆ. ಮುನೇಶ್ವರ ದೇವಾಲಯದಿಂದ ತ್ರಿಶೂಲವನ್ನು ತೆಗೆದುಕೊಂಡು ಹೋಗಿ ನೆಟ್ಟು ದೇವಾಲಯ ಕಟ್ಟಲು ಆರಂಭಿಸಲಾಯಿತಂತೆ. ಇಲ್ಲಿ ಬಳೆ ಬಣಜಿಗರು ಪ್ರಧಾನ ಅರ್ಚಕ ಮತ್ತು ಭಕ್ತ ವರ್ಗದವ ರಾಗಿದ್ದಾರೆ. ಈಗ್ಗೆ ೬೬ ವರ್ಷಗಳಿಂದ ವೈಶಾಖ ಹುಣ್ಣಿಮೆ ಯಂದು ಕರಗ ಮಹೋತ್ಸವವನ್ನು, ರಥೋತ್ಸವವನ್ನೂ, ಮೆರವಣಿಗೆಯನ್ನೂ ನಡೆಸಲಾಗುತ್ತಿದೆ. ಹುಣ್ಣಿಮೆಗೆ ಮೂರು ದಿನ ಮೊದಲು ಕಲಶ ಸ್ಥಾಪನೆಯಾಗುವುದು. ಅಂದು ಸಂಜೆ ದೇವಗಿರಿ(ಬನಶಂಕರಿ ಎರಡನೇ ಹಂತ)ವೆಂಕಟೇಶ್ವರ ಸ್ವಾಮಿ ದೇವಸ್ಥಾನದಿಂದ ದೇವಿಗೆ ಅರಿಶಿನ, ಕುಂಕುಮ, ಅಭಿಷೇಕಕ್ಕೆ ೧೧೦೮ ಕೊಡ ಹಾಲನ್ನು ಮೆರವಣಿಗೆಯಲ್ಲಿ ತಂದು ರಾತ್ರಿ ಗಂಗಮ್ಮ ದೇವಿಗೆ ಅಭಿಷೇಕ ಮಾಡಲಾಗುತ್ತದೆ. ಹುಣ್ಣಿಮೆಯ ನಂತರದ ಮಂಗಳವಾರದಂದು ಕೊಂಡ (ಬೆಂಕಿಯ ಮೇಲೆ ನಡೆಯುವುದು) ಹಾಯುವುದು ಮತ್ತು ಕರಗದ ಅಗ್ನಿಕುಂಡ ಪ್ರವೇಶ ಕಾರ್ಯಕ್ರಮಗಳು ದೇವಾಲಯದ ಪ್ರಾಂಗಣದಲ್ಲಿ ನಡೆಯುತ್ತವೆ.

ತ್ಯಾಗರಾಜನಗರದ ಮೂರನೇ ಬ್ಲಾಕಿನಲ್ಲಿ ಐದನೇ ಅಡ್ಡರಸ್ತೆಯಲ್ಲಿದೆ **ಭಗವಾನ್ ಶ್ರೀ ಮಹಾವೀರಸ್ವಾಮಿ ಜೈನ ಮಂದಿರ**. ಈ ಜಿನಮಂದರದ ನಿವೇಶನವನ್ನು ಇಲ್ಲಿದ್ದ ದುರ್ಗಾ ಇಂಡಸ್ಟ್ರೀಸ್ ಅವರಿಂದ ಖರೀದಿಸಿ ೧೯೯೬ರ ಏಪ್ರಿಲ್ ೨೬ರಂದು ಗುಜರಾತಿನ ಜೈನ ಶ್ವೇತಾಂಬರ ಆಚಾರ್ಯರು ಗಳಾದ ಸ್ಥೂಲಭದ್ರ ಸೂರಿಜೀ ಮತ್ತು ಚಂದ್ರೇಶ ವಿಜಯಜೀ ಅವರಿಂದ ನೂತನ ಮಂದಿರದಲ್ಲಿ ಭಗವಾನ್ ಮಹಾವೀರ ಸ್ವಾಮಿಯ ಪ್ರತಿಷ್ಠಾಪನೆ ನಡೆಯಿತು. ಇಲ್ಲಿ ಅರ್ಚಕರಾದ ಗೋವಿಂದರಾಮ್ ಪ್ರತಿದಿನ ಬೆಳಿಗ್ಗೆ ಪೂಜೆ ಮತ್ತು ಅಭಿಷೇಕ ಗಳನ್ನು ಮಾಡುತ್ತಾರೆ. ಚಾತುರ್ಮಾಸ್ಯಕ್ಕಾಗಿ ಗುಜರಾತ್ ಮತ್ತು ರಾಜಾಸ್ಥಾನಗಳಿಂದ ಜೈನ ಮಂಡಲಿಯ ಶ್ರಾವಕ ಮತ್ತು ಶ್ರಾವಿಕೆಯರು ಬಂದು ಇಲ್ಲಿ ವಾಸ್ತವ್ಯವಿರುತ್ತಾರೆ. ಆಗ ವಿಶೇಷ ಪೂಜೆ, ಪ್ರವಚನಗಳು ನಡೆಯುತ್ತವೆ.

ತ್ಯಾಗರಾಜನಗರದ ಮೂರನೇ ಬ್ಲಾಕ್, ನಾಲ್ಕನೇ ರಸ್ತೆಯ ಎಡಬದಿಯಲ್ಲಿರುವ ಉಡುಪಿ ಅಷ್ಟಮಠ ಗಳಲ್ಲೊಂದಾದ **ಕಾಣಿಯೂರು ಮಠ**ವನ್ನು ೨೦೧೦ರ ಫೆಬ್ರವರಿಯಲ್ಲಿ ಪೇಜಾವರಮಠದ ಶ್ರೀ ವಿಶ್ವೇಶತೀರ್ಥರು ಉದ್ಘಾಟಿಸಿದರು. ಕಾಣಿಯೂರು ಮಠದ ಈಗಿನ ಶ್ರೀಗಳು ಶ್ರೀ ವಿದ್ಯಾವಲ್ಲಭಸ್ವಾಮಿಗಳು. ಈ ಮಠಕ್ಕೆ ನಿವೇಶನವನ್ನು ಮಾರಿದವರು ಸಮೀಪದ ಪವಮಾನ ಮಂದಿರದವರು. ಮಠಕ್ಕೆ ಸೇರಿದಂತೆ ನೂತನವಾಗಿ ಪವಮಾನ ಸಭಾಮಂಟಪ ವನ್ನು ಕಟ್ಟಲಾಗಿದೆ. ಮಠದೊಳಗೆ ಪ್ರಾಣದೇವರು ಮತ್ತು ರಾಘವೇಂದ್ರಸ್ವಮಿಗಳ ಬೃಂದಾವನ ಇವೆ. ಶ್ರೀಕೃಷ್ಣನ ವಿಗ್ರಹವನ್ನು ದಾನವಾಗಿ ನೀಡಿದ್ದು ಇದರ ಪ್ರತಿಷ್ಠಾಪನೆಯು ಶೀಘ್ರದಲ್ಲೆ ನೆರವೇರಲಿದೆ. ಇಲ್ಲಿ ರಾಘವೇಂದ್ರಸ್ವಾಮಿಗಳ ಆರಾಧನೆಯನ್ನು ಮೂರು ದಿನಗಳ ಕಾಲ ನಡೆಸಲಾಗುತ್ತದೆ. ಹಾಗೂ ಶ್ರೀಗಳು ಬೆಂಗಳೂರಿನಲ್ಲಿ ವಾಸ್ತವ್ಯವಿದ್ದಾಗ ಬೆಳಿಗ್ಗೆ ೭ರಿಂದ ೮ರವರೆಗೆ ಶ್ರೀ ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳ ಬಗ್ಗೆ ಪಾಠವನ್ನು ಹೇಳಲಾಗುವುದು.

ಉಡುಪಿಯ ಅಷ್ಟಮಠಗಳಲ್ಲೊಂದಾದ ಪುತ್ತಿಗೆ ಮಠ ಹಾಗೂ ಶ್ರೀ ಕೃಷ್ಣನ ದೇವಾಲಯವು ನರಸಿಂಹರಾಜ ಕಾಲೋನಿಗೆ ಸೇರಿದಂತೆ ದೊಡ್ಡ ಬಸವನಗುಡಿ ರಸ್ತೆಯ ಬಲಬದಿಗಿದೆ. ಶ್ರೀಕೃಷ್ಣನ ದೇವಾಲಯವು ಗುಹೆಯಲ್ಲಿದ್ದಂತೆ ನಿರ್ಮಿಸಲಾಗಿದೆ. ಮಠವು ಉತ್ತರಾಭಿಮುಖವಾಗಿದೆ. ಇಲ್ಲಿ ಶ್ರೀಕೃಷ್ಣಜನ್ಮಾಷ್ಟಮಿಯನ್ನು ಅತ್ಯಂತ ವಿಜೃಂಭಣೆಯಿಂದ ನಡೆಸಲಾಗುವುದು. ಆ ಸಂದರ್ಭದಲ್ಲಿ ಬಾಲರಿಗೆ ಕೃಷ್ಣನ ವೇಷ ಹಾಕಿಸಿ ಸ್ಪರ್ಧೆ ನಡೆಸಿ ಬಹುಮಾನ ನೀಡುವರು.

ತ್ಯಾಗರಾಜನಗರದ ಒಂದನೇ ಬ್ಲಾಕಿನಲ್ಲಿ ಅದೇ ಹೆಸರಿನ ರಸ್ತೆಯಲ್ಲಿ **ಶ್ರೀ ಸಾಯಿಬಾಬಾ ಮಂದಿರ**ವಿದೆ. ಈ ಸಂಸ್ಥೆಯ ಮೂಲ ಹೆಸರು ಶ್ರೀ ಸಾಯಿ ಸ್ಪಿರಿಚುಯಲ್ ಸೆಂಟರ್. ಈ ಸಂಸ್ಥೆಯನ್ನು ಶ್ರೀ ರಾಧಾಕೃಷ್ಣಸ್ವಾಮೀಜಿಯವರು ೧೯೫೩ರ ಏಪ್ರಿಲ್, ೪ ಯುಗಾದಿಯಂದು ಪ್ರಾರಂಭಿಸಿದರು. ಇಲ್ಲಿ ಶಿರಡಿ ಶ್ರೀ ಸಾಯಿಬಾಬಾ, ಸಾಯಿದೂತ ಶ್ರೀ ನರಸಿಂಹ ಸ್ವಾಮೀಜಿ ಮತ್ತು ಸದ್ಗುರು ಶ್ರೀ ರಾಧಾಕೃಷ್ಣ ಸ್ವಾಮೀಜಿಯವರ ಪ್ರತಿಮೆಗಳಿಗೆ ದಿನವೂ ಪೂಜೆ ನಡೆಯುವುದು. ಭಕ್ತಾದಿಗಳು ಗುರುವಾರ ಗಾಗೂ ಎಲ್ಲ ವಿಶೇಷ ದಿನಗಳಂದು ಅಪಾರ ಸಂಖ್ಯೆಯಲ್ಲಿ ಸೇರುತ್ತಾರೆ. 'ಸಾಯಿಪಾದಾನಂದ' ಎಂಬ ಪತ್ರಿಕೆಯನ್ನು ಆಂಗ್ಲ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಪ್ರಕಟಿಸುತ್ತಿದೆ.

ನರಸಿಂಹರಾಜ ಕಾಲೋನಿಯಲ್ಲಿನ ಪ್ರಾಚೀನ ದೇವಾಲಯ ವೆಂದರೆ ಶಾಮಣ್ಣ ಪಾರ್ಕಿನ ಬಳಿ ಮಾಜಿ ಮುನಿಸಿಪಲ್ ಮತ್ತು ಎಂಡೋಮೆಂಟ್ ಇಲಾಖಾ ಮಂತ್ರಿಗಳಾಗಿದ್ದ ಪಾಮಡಿ ಶ್ರೀ ಸುಬ್ಬರಾಮ ಚೆಟ್ಟಿ (ಶೆಟ್ಟಿ)ರು ನಿರ್ಮಿಸಿದ **ಶ್ರೀರಾಮ ದೇವಾಲಯ**. ಇದರ ಪಕ್ಕದಲ್ಲೇ ರಾಘವೇಂದ್ರಸ್ವಾಮಿಗಳ

ಮಠ ಮತ್ತು ಸಮಾರಂಭ ಭವನ ಇವೆ. ಇಲ್ಲಿ ಪೂಜೆ, ಭಜನೆ, ಪುರಾಣ ಪ್ರವಚನಗಳು ನಡೆಯುತ್ತವೆ.

ನರಸಿಂಹರಾಜಾ ಕಾಲೋನಿಯಲ್ಲಿ ಪಾರ್ಕಿಗೆ ಹೊಂದಿಕೊಂಡಂತೆ ಇತ್ತೀಚಿನ ವರ್ಷಗಳಲ್ಲಿ **ಸೂರ್ಯಮಲ್ಲೇಶ್ವರ, ಅಂಬಾ ಭವಾನೀ ದೇವಾಲಯ**ಗಳನ್ನು ನಿರ್ಮಿಸಲಾಗಿದೆ. ಇಲ್ಲಿ ಅರಳೀಕಟ್ಟೆಯೂ ಇದ್ದು ಅರಳೀ ಅಥವಾ ಅಶ್ವತ್ಥವೃಕ್ಷಕ್ಕೆ ಪ್ರಾತಃಕಾಲದಲ್ಲಿ ಪ್ರದಕ್ಷಿಣೆ ಮಾಡಿ ಇಷ್ಟಾರ್ಥಗಳನ್ನು ಪಡೆದುಕೊಳ್ಳುವ ಭಕ್ತರ ಸಂಖ್ಯೆ ಅಧಿಕವಾಗಿದೆ.

ನರಸಿಂಹರಾಜ ಕಾಲೋನಿಯ ಕೇಂದ್ರಬಿಂದು ಇಲ್ಲಿನ **ರಾಮ ಮಂದಿರ**. ಇದಕ್ಕೆ ಸು. ೭೫ ವರ್ಷಗಳ ದೀರ್ಘ ಇತಿಹಾಸವಿದೆ. ೧೯೩೫ ರಲ್ಲಿ ಕೀರ್ತಿಶೇಷರಾದ ಮೈಸೂರು ಸಂಸ್ಥಾನದ ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ ದಿವ್ಯ ನಾಮಾಂಕಿತದಲ್ಲಿ ಕೇವಲ ಐವತ್ತು ಮನೆಗಳಿಂದ ಪ್ರಾರಂಭಗೊಂಡಿತು ನರಸಿಂಹರಾಜ ಕಾಲೋನಿ. ಈ ಬಡಾವಣೆಯ ಸಾಮಾಜಿಕ-ಸಾಂಸ್ಕೃತಿಕ ಕಾರ್ಯಕ್ರಮಗಳು ೧೯೩೯ರಿಂದ ೧೯೪೮ರವರೆಗೆ 'ಮಿತ್ರಸಂಘ' (ಫ್ರೆಂಡ್ಸ್ ಯೂನಿಯನ್)ದ ಆಶ್ರಯದಲ್ಲಿ ನಡೆದವು. ಭಜನೆ, ಹರಿಕಥೆ, ಸಂಗೀತ, ಸಾಹಿತ್ಯಗೋಷ್ಠಿ, ನಾಟಕ, ಚೈತ್ರಮಾಸದಲ್ಲಿ ಶ್ರೀರಾಮೋತ್ಸವ ಹಾಗೂ ಗಾಂಧೀ ಮತ್ತು ಕಸ್ತೂರಿ ಬಾ ಜಯಂತಿಗಳನ್ನು ಸಂಘವು ನಡೆಸುತ್ತಿದ್ದಿತು. ಜನಸಾಮಾನ್ಯರ ನೈತಿಕ-ಸಾಂಸ್ಕೃತಿಕ ಹಾಗೂ ಬೌದ್ಧಿಕ ಅಭಿವೃದ್ಧಿಯನ್ನು ಹೆಚ್ಚಿನ ಮಟ್ಟದಲ್ಲಿ ಸಾಧಿಸಲು ಸರ್ಕಾರದ ಮನ್ನಣೆ ಪಡೆದ ಸಂಸ್ಥೆ ಯೊಂದರ ಅಗತ್ಯವನ್ನು ಮನಗೊಂಡ ಕೆಲವರು ಹಿರಿಯರು ಸೇರಿ 'ಶ್ರೀ ನರಸಿಂಹರಾಜ ಕಾಲೋನಿ ಅಸೋಸಿಯೇಷನ್' ಎಂಬ ಹೆಸರಿನಲ್ಲಿ ೧೯೪೮ರ ಜನವರಿಯಲ್ಲಿ ಈ ಸಂಘವನ್ನು ಸ್ಥಾಪಿಸಿದರು. ಈ ಅಸೋಸಿಯೇಷನ್ನಿನ ಕಾರ್ಯಕಾರಿ ಸಮಿತಿಗೆ ದಿ॥ ಶ್ರೀ ಹೆಚ್. ವೆಂಕಟರಾಮಯ್ಯನವರು ಮೊದಲ ಅಧ್ಯಕ್ಷರಾಗಿದ್ದರು. ಆಗ ಬೆಂಗಳೂರು ಪುರಸಭೆಯ ಅಧ್ಯಕ್ಷರಾಗಿದ್ದ ಶ್ರೀ ಶಾಮರಾಜ ಅಯ್ಯಂಗಾರ್ಯರು ಅಸೋಸಿಯೇಷನ್ನಿನ ಆರಂಭೋತ್ಸವವನ್ನು ನೆರವೇರಿಸಿದರು. ಏಳು ಜನ ಹಿರಿಯರನ್ನೊಳಗೊಂಡ ವಿಶ್ವಸ್ಥ ಸಮಿತಿಯು ರಾಮಮಂದಿರದ ಕಾರ್ಯಾಡಳಿತವನ್ನೂ ಚಟುವಟಿಕೆಗಳನ್ನೂ ನಿರ್ವಹಿಸುತ್ತಿದ್ದಾರೆ. ೧೪-೧೨-೧೯೪೯ರಂದು ಈಗಿನ ನಿವೇಶನದಲ್ಲಿ ರಾಮಮಂದಿರದ ನಿರ್ಮಾಣಕ್ಕೆ ಶ್ರೀ ಪಾಮಡಿ ಸುಬ್ಬರಾಮ ಶ್ರೇಷ್ಠಿಯವರು ಶಿಲಾನ್ಯಾಸ ಮಾಡಿ ಕಟ್ಟಡದ ನಿಧಿಗೆ ೫೦೦೧ ರೂ.ಗಳ ಉದಾರ ದೇಣಿಗೆಯನ್ನು ನೀಡಿದರು. ಈ ರಾಮಮಂದಿರದಲ್ಲಿ ಸಂಗೀತ-ಭಜನೆ-ಹರಿಕಥೆ ಪ್ರವಚನಗಳ ಜೊತೆಗೆ ಈ ಹಿಂದೆ ನಡೆಸುತ್ತಿದ್ದ ಚೈತ್ರಮಾಸದ ರಾಮೋತ್ಸವವನ್ನೂ ಧಾರ್ಮಿಕ-ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಅನೂಚಾನವಾಗಿ ನಡೆಸಿಕೊಂಡು ಬರಲಾಗುತ್ತಿದೆ. ರಾಮಮಂದಿರದ ಕಟ್ಟಡವನ್ನು ಮಹಡಿಯನ್ನು ಕಟ್ಟುವುದರ ಮೂಲಕ ಬಡಾಯಿಸಿ ಕೆಳಗಿನ ಮತ್ತು ಮೇಲಿನ ಸಭಾಭವನಗಳನ್ನು ವಿವಾಹ, ಸಭೆ, ಸಮಾರಂಭಗಳಿಗೆ ಬಾಡಿಗೆಗೆ ನೀಡಲಾಗುತ್ತದೆ. ಈ ಕಟ್ಟಡದ ಪಶ್ಚಿಮದ ಕಡೆಗಿನ ಆವರಣದಲ್ಲಿ ಸಿಂಡಿಕೇಟ್ ಬ್ಯಾಂಕಿಗೆ ಬಾಡಿಗೆಗೆ ನೀಡಲಾಗಿದೆ. ಈ ಬಾಡಿಗೆಯ ಹಣವನ್ನು ಪ್ರೌಢಶಾಲಾ ವಿದ್ಯಾರ್ಥಿಗಳ ಉಚಿತ ವಿದ್ಯಾಭ್ಯಾಸಕ್ಕಾಗಿ ವಿನಿಯೋಗವಾಗುತ್ತಿದೆ. ಮಹಡಿಯ ಭಾಗದಲ್ಲಿ ೧೯೯೬ರಿಂದ ಎಲ್ಲ ವರ್ಗದ ಎಸ್.ಎಸ್.ಎಲ್.ಸಿ, ಪಿಯುಸಿ, ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಉಚಿತವಾಗಿ ಉಪನ್ಯಾಸ ತರಗತಿಗಳನ್ನು ನುರಿತ ಅಧ್ಯಾಪಕರುಗಳಿಂದ ಆಯೋಜಿಸಲಾಗುತ್ತಿದೆ. ಡಾ॥ ಡಿ.ವಿ.ಜಿ.ಯವರ ಪ್ರೇರಣೆಯಂತೆ ೧೯೬೪ರಲ್ಲಿ ಈ ಸಂಸ್ಥೆಯಿಂದ ಶ್ರೀಮದ್ವಾಲ್ಮೀಕಿ ರಾಮಾಯಣವನ್ನು ಮೂಲ ಸಹಿತ ಕನ್ನಡಕ್ಕೆ ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರಿಂದ ಅನುವಾದ ಮಾಡಿಸಿ ಪ್ರಕಟಿಸಲಾಯಿತು. ಶ್ರೀ ರಾಮೋತ್ಸವದ ವಜ್ರಮಹೋತ್ಸವದ ನೆನಪಿಗಾಗಿ ಭಗವನ್ನಾಮ ಪುಷ್ಪಾಂಜಲಿ, ಶ್ರೀ ರಾಮನಾಮ ವೈಭವಂ, ಶ್ರೀ ಅಷ್ಟೋತ್ತರ ಶತನಾಮ ಸ್ತೋತ್ರಾವಲೀ, ಶ್ರೀರಾಮ ಕಥಾ ನಾಮಾವಳಿ, ಶ್ರೀ ಬುಧಕೌಶಿಕಮುನಿ ವಿರಚಿತ ಶ್ರೀರಾಮ ರಕ್ಷಾ ಸ್ತೋತ್ರಂ ಗ್ರಂಥಗಳನ್ನೂ 'ಶ್ರೀರಾಮಚಂದ್ರ ಸುಪ್ರಭಾತ' ಮತ್ತು 'ವಂದೇ ವಾಲ್ಮೀಕಿ ಕೋಕಿಲಂ' ದೃಶ್ಯ- ಧ್ವನಿ ಸುರುಳಿಗಳನ್ನೂ ಬಿಡುಗಡೆ ಮಾಡಿದೆ. 'ಪ್ರಾಚೇತಸ ಪ್ರಭಾ' ಎಂಬ ಸ್ಮರಣ ಸಂಚಿಕೆಯನ್ನೂ ಹೊರತಂದಿದೆ.

ಅಶೋಕನಗರಕ್ಕೆ ಸೇರಿದಂತೆ ಕಲ್ಯಾಣಿ ಗಾರ್ಡನ್ಸ್ ಭಾಗದಲ್ಲಿ **ಸತ್ಯಭಾಮಮ್ಮ ಸೀತಮ್ಮ ಕಲ್ಯಾಣಿ, ಶ್ರೀ ರಾಘವೇಂದ್ರಾಶ್ರಮ** ಇದೆ. ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿನ ಶ್ರೀನಿವಾಸ ದೇವಸ್ಥಾನದಲ್ಲಿ ಕಲ್ಯಾಣಿಯೊಂದನ್ನು ಕಟ್ಟಿಸಿದ ಆನಂದ ತೀರ್ಥಾಚಾರ್ ಕುಟುಂಬದವರಿಗೆ 'ಕಲ್ಯಾಣಿ' ಎಂಬ ಬಿರುದು ದೊರಕಿತು. ಈ ಕಲ್ಯಾಣಿ ಆನಂದತೀರ್ಥಾಚಾರ್ಯರೇ ಬೆಂಗಳೂರಿಗೆ ಬಂದು ಈ ಭಾಗದಲ್ಲಿ ತಮ್ಮ ತಾಯಿ ಸತ್ಯಭಾಮಮ್ಮ ಮತ್ತು ಪತ್ನಿ ಸೀತಮ್ಮನವರ ಹೆಸರಿನಲ್ಲಿ ೧೯೫೪ರಲ್ಲಿ ರಾಘವೇಂದ್ರಾಶ್ರಮವನ್ನು ಸ್ಥಾಪಿಸಿದರು. ಇಲ್ಲಿ ರಾಘವೇಂದ್ರಸ್ವಾಮಿಗಳ ಬೃಂದಾವನ, ಅಡಿಗೆಶಾಲೆ, ಊಟದ ಭವನ ಮತ್ತು ಸಮಾರಂಭಗಳಿಗಾಗಿ ಸಭಾಭವನ ಇವೆ. ರಾಘವೇಂದ್ರಸ್ವಾಮಿಗಳ ಆರಾಧನೆ, ಮಧ್ವನವಮಿಗಳನ್ನು ಅದ್ದೂರಿಯಾಗಿ ನಡೆಸಲಾಗುತ್ತದೆ.

### ನಾಗಸಂದ್ರದ ಹರಹಿನಲ್ಲಿರುವ ವಿದ್ಯಾ ಮತ್ತು ಇತರ ಸಂಸ್ಥೆಗಳು

### ಎಸ್‌ಜಿಪಿಟಿಎ (ಶ್ರೀ ಗುರುರಾಜಾ ಪೇರೆಂಟ್ಸ್ ಟೀಚರ್ಸ್ ಅಸೋಸಿಯೇಷನ್ ವಿದ್ಯಾಸಂಸ್ಥೆ.)

೧೯೭೮ರ ಜೂನ್‌ನಲ್ಲಿ ಆಚಾರ್ಯ ಪಾಠಶಾಲೆಯಲ್ಲಿ ಈ ಸಂಸ್ಥೆ ಕಾರ್ಯಾರಂಭಮಾಡಿತು. ನರ್ಸರಿಯಿಂದ ಏಳನೇ ತರಗತಿಯವರೆಗೆ ತರಗತಿಗಳನ್ನು ಕರ್ನಾಟಕದ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಾಗಿದ್ದ ದಿ॥ ನಿಟ್ಟೂರು ಶ್ರೀನಿವಾಸರಾಯರು ಉದ್ಘಾಟಿಸಿದರು. ೧೯೭೮ರ ಸೆಪ್ಟೆಂಬರ್ ನಲ್ಲಿ ಸೌತ್ ಎಂಡ್ ರಸ್ತೆಯಲ್ಲಿ ಬಾಡಿಗೆ ಕಟ್ಟಡಕ್ಕೆ ತರಗತಿಗಳು ವರ್ಗಾಂತರಗೊಂಡವು. ೧೯೮೫ರಲ್ಲಿ ತ್ಯಾಗರಾಗನಗರದ ನೇತಾಜಿ ರಸ್ತೆಯಲ್ಲಿ ನಿವೇಶನವನ್ನು ಖರೀದಿಸಿ ೧೯೮೮ರಲ್ಲಿ ಶಾಲಾಕಟ್ಟಡಕ್ಕೆ ಮಾಜಿ ಸಂಸತ್ ಸದಸ್ಯರಾಗಿದ್ದ ಶ್ರೀ ಟಿ.ಆರ್. ಶಾಮಣ್ಣನವರ ಅಧ್ಯಕ್ಷತೆಯಲ್ಲಿ ಶಂಕುಸ್ಥಾಪನೆ ನೆರವೇರಿತು. ೧೯೯೦ರ ಜೂನ್ ತಿಂಗಳಲ್ಲಿ ಕಟ್ಟಡದ ಉದ್ಘಾಟನೆ ಯಾಯಿತು. ೧೯೫೫–೯೬ರಲ್ಲಿ ಪ್ರೌಢಶಾಲಾ ತರಗತಿಗಳು ಪ್ರಾರಂಭಗೊಂಡವು. ಮುಂದೆ ೨೦೦೭ರಲ್ಲಿ ಪದವಿ–ಪೂರ್ವ ತರಗತಿಗಳೂ ವಿಜ್ಞಾನ ಮತ್ತು ವಾಣಿಜ್ಯ ವಿಷಯಗಳಲ್ಲಿ ಪ್ರಾರಂಭವಾದವು. ಮಕ್ಕಳಿಗೆ ಶಾಲೆಗೆ ಬರಲು ಶಾಲಾ ವ್ಯಾನಿನ ವ್ಯವಸ್ಥೆ ಇದೆ. ವಾಲಿಬಾಲ್, ಟೆನ್ನಿಸ್, ಕ್ರಿಕೆಟ್, ಮುಂತಾದ ಕ್ರೀಡೆಗಳಿಗೆ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ನೃತ್ಯತಂಡ, ಬ್ಯಾಂಡ್ ಸೆಟ್ ತಂಡಗಳು ಅತ್ಯುತ್ತಮವಾಗಿದ್ದು ಒಳ್ಳೇ ಹೆಸರುಗಳಿಸಿವೆ.

ತ್ಯಾಗರಾಜನಗರದ ಎರಡನೇ ಬ್ಲಾಕಿನಲ್ಲಿ ಬಸ್ ಮಾರ್ಗ ದಲ್ಲಿ ಸೆಂದಿಲ್ ಕುಮಾರನ್ ಶಾಲೆಯಿದೆ. ಇಲ್ಲಿಯೂ ನರ್ಸರಿ ಯಿಂದ ಪ್ರೌಢಶಾಲೆಯವರೆಗೆ ಶಿಕ್ಷಣವನ್ನು ನೀಡಲಾಗುತ್ತಿದೆ.

ತ್ಯಾಗರಾಜನಗರದ ಮೂರನೇ ಬ್ಲಾಕಿನಲ್ಲಿ ದತ್ತಾತ್ರೇಯ ದೇವಸ್ಥಾನದ ಸಮೀಪದಲ್ಲಿದೆ ಶ್ರೀಮತಿ ಸರೋಜಮ್ಮನವರಿಂದ ಸ್ಥಾಪನೆಗೊಂಡ ಕಮಲಾನೆಹರು ಪಾಠಶಾಲೆ. ಇಲ್ಲೂ ಸಹ ನರ್ಸರಿಯಿಂದ ಪ್ರೌಢಶಾಲೆಯವರೆಗೆ ತರಗತಿಗಳು ನಡೆಯು ತ್ತವೆ.

ನರಸಿಂಹರಾಜಾ ಕಾಲೋನಿಯಲ್ಲಿರುವ ಆಚಾರ್ಯ ಪಾಠಶಾಲಾ ನಾಗಸಂದ್ರದ ಹರಹಿನಲ್ಲಿರುವ ಅತ್ಯಂತ ಹಳೆಯ ವಿದ್ಯಾಸಂಸ್ಥೆಯಾಗಿದೆ. ೧೯೩೫ರಲ್ಲಿ ಈ ಶಿಕ್ಷಣಸಂಸ್ಥೆಯು ಪ್ರಾರಂಭಗೊಂಡಿತು. ಈ ಶಿಕ್ಷಣಸಂಸ್ಥೆಗೆ ನಿವೇಶನವನ್ನು ಪುರಸಭೆ ಮತ್ತು ದಾನದತ್ತಿ ಇಲಾಖೆಯಲ್ಲಿ ಮಂತ್ರಿಗಳಾಗಿದ್ದ ಪಾಮಡಿ ಶ್ರೀ ಸುಬ್ಬರಾಮ ಚೆಟ್ಟರು ನೀಡಿದರು. ಸ್ಥಾಪಕರು ಶಿಕ್ಷಣಶಿಲ್ಪಿ ಎಂದು ಖ್ಯಾತಿವೆತ್ತ ಶ್ರೀ ಎನ್. ಅನಂತಾಚಾರ್ಯರು. ೧೯೪೨–೪೩ರಲ್ಲಿ ಎ.ಪಿ.ಎಸ್. ಬಾಲಕರ ಪ್ರೌಢಶಾಲೆ, ೧೯೪೬–೪೭ರಲ್ಲಿ ಎ.ಪಿ.ಎಸ್. ಬಾಲಕಿಯರ ಪ್ರೌಢಶಾಲೆ ಮತ್ತು ೧೯೫೬–೫೭ರಲ್ಲಿ ಆಚಾರ್ಯ ಪಾಠಶಾಲಾ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಕಾಲೇಜು ಪ್ರಾರಂಭಗೊಂಡವು. ಮುಂದೆ೧೯೮೬–೮೭ರಲ್ಲಿ ಎ.ಪಿ.ಎಸ್. ಕಲೆ ಮತ್ತು ವಿಜ್ಞಾನ ಕಾಲೇಜು ಹಾಗೂ ಎ.ಪಿ.ಎಸ್. ವಾಣಿಜ್ಯ ಕಾಲೇಜು ಎಂದು ಬೇರ್ಪಟ್ಟವು. ಈ ಶಿಕ್ಷಣ ಸಂಸ್ಥೆಯಲ್ಲಿ ಪ್ರೊ. ಎಂ.ವಿ. ಕೃಷ್ಣರಾವ್, ಪ್ರೊ. ಕೆ. ಅನಂತರಾಮಯ್ಯ, ಪ್ರೊ. ಆರ್.ಎಲ್. ನರಸಿಂಹಯ್ಯ, ಪ್ರೊ. ರಂಗಯ್ಯ, ಪ್ರೊ. ಟಿ. ಕೇಶವಭಟ್, ಪ್ರೊ. ಕೊರಟಿ ಶ್ರೀನಿವಾಸರಾವ್, ಡಾ. ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ, ಡಾ. ಸೂರ್ಯನಾಥಕಾಮತ್, ಡಾ. ಕೆ.ವಿ. ಆಚಾರ್ಯ, ಹೆಚ್.ಆರ್. ದಾಸೇಗೌಡ, ಶ್ರೀಮತಿ ಎಂ.ಆರ್. ಲಕ್ಷಮ್ಮ (ಎಂ.ಎಲ್.ಸಿ.), ಮುಂತಾದ ಪ್ರಸಿದ್ಧ ವಿದ್ವಾಂಸರೂ, ಶಿಕ್ಷಣ ತಜ್ಞರೂ ಸೇವೆ ಸಲ್ಲಿಸಿದ್ದರು. ೨೦೦೧ರಲ್ಲಿ ಅನಂತಾ ಚಾರ್ಯರ ಮಗ ಎಂ.ಆರ್. ಆಚಾರ್ಯ ಎ.ಪಿ.ಎಸ್. ಕಲೆ, ವಿಜ್ಞಾನ ಕಾಲೇಜಿಗೆ ಸೇರಿದಂತೆ ಎನ್. ಅನಂತಾಚಾರ್ಯರ ಹೆಸರಿನಲ್ಲಿ ಕಂಪ್ಯೂಟರ್ ಕೇಂದ್ರವನ್ನು ಸ್ಥಾಪಿಸಿದ್ದಾರೆ.

ಕುಮಾರನ್ಸ್ ಚಿಲ್ಡ್ರನ್ಸ್ ಹೋಂ ಎಂಬ ಶಾಲೆಯನ್ನು ತಮಿಳುನಾಡಿನ ಮೀನಾಕ್ಷಿ ಸುಬ್ರಹ್ಮಣ್ಯಂ ತ್ಯಾಗರಾಜನಗರದಲ್ಲಿ ಸ್ಥಾಪಿಸಿದರು. ಇದು ಅತ್ಯುತ್ತಮ ಶಾಲೆಯೆಂಬ ಖ್ಯಾತಿಯನ್ನು ಪಡೆದಿತ್ತು. ಇತ್ತೀಚೆಗೆ ಈ ಶಾಲೆಯ ಕಟ್ಟಡದಲ್ಲಿ ರಾಷ್ಟ್ರೀಯ ಶಿಕ್ಷಣ ಸಮಿತಿ ಟ್ರಸ್ಟ್ ಅಂಗವಿಕಲರ ಶಾಲೆ ಹಾಗೂ ಇಂಟೆಗ್ರೇಟೆಡ್ ಪ್ರೌಢಶಾಲೆಗಳನ್ನು ನಡೆಸುತ್ತಿದೆ.

ಶಾಸ್ತ್ರೀನಗರದಲ್ಲಿ ಆತ್ಮಶ್ರೀ ವಿದ್ಯಾಸಂಸ್ಥೆಯು ನರ್ಸರಿ ಯಿಂದ ಪಿ.ಯು.ಸಿ.ವರೆಗೆ ಶಿಕ್ಷಣವನ್ನು ನೀಡುತ್ತಿದೆ.

ತ್ಯಾಗರಾಜನಗರದ ವಿವೇಕಾನಂದರಸ್ತೆಯಲ್ಲಿ ಬಲಬದಿಗೆ ವಿವೇಕಾನಂದ ನರ್ಸರಿ ಮತ್ತು ಅನುದಾನಿತ ಹಿರಿಯ ಪ್ರಾಥಮಿಕ ಶಾಲೆ ಇದೆ.

ಸಿ.ಟಿ.ಬೆಡ್ (ಚನ್ನಮ್ಮನ ಕೆರೆ ದಂಡೆ) ಪ್ರದೇಶದಲ್ಲಿ ಎಸ್.ಎಸ್.ಎಂ. ವಿದ್ಯಾಸಂಸ್ಥೆಯು ನರ್ಸರಿಯಿಂದ ಪ್ರೌಢಶಾಲೆ ಯವರೆಗೆ ಶಿಕ್ಷಣವನ್ನು ನೀಡುತ್ತಿದೆ. ಈಗ ಈ ಶಾಲೆಯನ್ನು ಪಿ.ಇ.ಎಸ್. ವಿದ್ಯಾಸಂಸ್ಥೆಯು ದತ್ತುಸಂಸ್ಥೆಯಾಗಿ ಸ್ವೀಕರಿಸಿ ಆಡಳಿತವನ್ನು ನಿರ್ವಹಿಸುತ್ತಿದೆ.

ನರಸಿಂಹರಾಜ ಕಾಲೋನಿಯಲ್ಲಿ ೧೯೪೮ರಲ್ಲಿ ಗಾಂಧೀಜಿಯ ನೆನಪಿಗಾಗಿ ಕಾಲೋನಿಯ ೬ನೇ ಕ್ರಾಸಿನಲ್ಲಿದ್ದ ಖಾಲಿ ನಿವೇಶನದಲ್ಲಿ ನಡೆಸಿದ ಪ್ರಾರ್ಥನಾ ಸಭೆಯೇ ಮಹಿಳಾ ಮಂಡಲಿಯ ಉದಯಕ್ಕೆ ನಾಂದಿಯಾಯಿತು. ಮೂರು

ವರ್ಷಗಳ ನಂತರ ಎಸ್.ವಿ. ಕಲ್ಯಾಣಿ ಅವರ ಉತ್ತೇಜನದಿಂದ ಶಿಶುವಿಹಾರ ಪ್ರಾರಂಭವಾಯಿತು. ಕ್ರಮೇಣ ಶಿಶುವಿಹಾರದಿಂದ ಏಳನೇ ತರಗತಿಯವರೆಗೆ ಕನ್ನಡ ಮಾಧ್ಯಮದ ತರಗತಿಗಳು ಪ್ರಾರಂಭವಾದವು. ೧೯೭೨-೭೩ರಲ್ಲಿ ಆಂಗ್ಲ ಪ್ರೈಮರಿ ಶಾಖೆ ಪ್ರಾರಂಭವಾಯಿತು. ಕಾರ್ಪೊರೇಷನ್ನಿಂದ ಮಂಡಲಿಗೆ ಆಟದಮೈದಾನ ದೊರಕಿತು. ೧೯೭೭ರಲ್ಲಿ ಮಂಡಲಿಯು ರಜತೋತ್ಸವವನ್ನು ಆಚರಿಸಿತು. ೧೯೯೬ರಲ್ಲಿ ಆಂಗ್ಲ ಮಾಧ್ಯಮದಲ್ಲಿ ಪ್ರೌಢಶಾಲಾ ತರಗತಿಗಳು ಆರಂಭವಾದವು. ಈ ಶಾಲೆಯ ಮಾಂಟೆಸ್ಸೋರಿ ವಿಭಾಗವು ಸಮಗ್ರ ವ್ಯವಸ್ಥೆಯನ್ನು ಹೊಂದಿದ್ದು ಇಂಡಿಯನ್ ಮಾಂಟೆಸ್ಸೋರಿ ಸೆಂಟರ್‌ನಿಂದ ಮಾನ್ಯತೆ ಪಡೆದಿದೆ. ಈಗ ಸುಮಾರು ೧೨೦೦ ಮಕ್ಕಳು ಈ ವಿದ್ಯಾಸಂಸ್ಥೆಯಲ್ಲಿ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಫಲಿತಾಂಶವು ೯೮%ರಷ್ಟು ಇದೆ. ಈ ಸಂಸ್ಥೆಯು ೨೦೧೨ರ ಜನವರಿಯಲ್ಲಿ ವಜ್ರಮಹೋತ್ಸವವನ್ನು ಅದ್ದೂರಿಯಾಗಿ ಆಚಾರ್ಯ ಪಾಠಶಾಲೆಯ ಮುಂಭಾಗದ ಮೈದಾನದಲ್ಲಿ ನಡೆಯಿತು. ವಜ್ರಮಹೋತ್ಸವದ ಸವಿನೆನಪಿನಲ್ಲಿ 'ವಜ್ರ ದುಂದುಭಿ' ಎಂಬ ಸಂಸ್ಮರಣ ಸಂಚಿಕೆಯನ್ನು ಪ್ರಕಟಿಸ ಲಾಯಿತು.

ನರಸಿಂಹರಾಜ ಕಾಲೋನಿಯಲ್ಲಿರುವ ಇನ್ನೊಂದು ವಿದ್ಯಾಸಂಸ್ಥೆಯೆಂದರೆ ಮೂಕಾಂಬಿಕಾ ಶಾಲೆ. ಇಲ್ಲಿ ಬಾಲಕ ಬಾಲಕಿಯರಿಗೆ ನರ್ಸರಿಯಿಂದ ಪ್ರೌಢಶಾಲೆಯವರೆಗೆ ವಿದ್ಯಾಭ್ಯಾಸ ಸೌಲಭ್ಯ ದೊರೆಯುತ್ತಿದೆ.

ನರಸಿಂಹರಾಜ ಕಾಲೋನಿ ಮತ್ತು ತ್ಯಾಗರಾಜನಗರ ಗಳಲ್ಲಿ ಸಂಗೀತ ಮತ್ತು ಲಲಿತಕಲೆಗಳಲ್ಲಿ ಶಿಕ್ಷಣ ನೀಡುವ ಅನೇಕ ಸಂಸ್ಥೆಗಳಿವೆ. ಸಂಗೀತದ ಅಧ್ವರ್ಯುಗಳೆನಿಸಿದ ಶ್ರೀರಾಮನ ಭಕ್ತರೂ ಆದ ತ್ಯಾಗರಾಜರ ಹೆಸರನ್ನೇ ಬಡಾವಣೆಗೆ ಇಟ್ಟಿರುವುದು ಇಲ್ಲಿನ ಜನರಿಗೆ ಸಂಗೀತದ ಬಗ್ಗೆ ಇರುವ ಆಸಕ್ತಿ ಮತ್ತು ಆದರಗಳ ದ್ಯೋತಕವೇ ಆಗಿದೆ. ತ್ಯಾಗರಾಜನಗರದ ಮೊದಲನೇ ಬ್ಲಾಕಿನ ಪಾಂಡುರಂಗ ದೇವಸ್ಥಾನದ ರಸ್ತೆಯಲ್ಲಿ 'ಸ್ವರಾರ್ಣವ' ಎಂಬ ಸಂಗೀತ ಶಾಲೆಯಿದೆ. ಇದು ೧೯೮೦ರ ದಶಕದಿಂದಲೂ ಸಕ್ರಿಯವಾಗಿ ಸಂಗೀತ ಸರಸ್ವತಿಯನ್ನು ಓಲೈಸುತ್ತಿದೆ.

ತ್ಯಾಗರಾಜನಗರದ ಎರಡನೇಬ್ಲಾಕಿನ ನೇತಾಜಿರಸ್ತೆಯಲ್ಲಿ 'ಗಾನ ಕಲಾ ಮಂದಿರ'ವಿದೆ. ಇದನ್ನು ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ಸಂಗೀತ ಪ್ರಾಧ್ಯಾಪಕರಾಗಿದ್ದ ಎಂ.ಎ. ನರಸಿಂಹಾಚಾರ್ ಅವರ ಪುತ್ರಿ ವಿದುಷಿ ಮೀರಾ ನಡೆಸು ತ್ತಿದ್ದಾರೆ. ಇದೇ ಹೆಸರಿನಲ್ಲಿ ತ್ಯಾಗರಾಜನಗರದ ಆರನೇ ಮುಖ್ಯರಸ್ತೆಯಲ್ಲಿ ಪ್ರೊ. ನರಸಿಂಹಾಚಾರ್ಯರೇ ಸಂಗೀತ ಶಾಲೆಯನ್ನು ನಡೆಸುತ್ತಿದ್ದರು. ಆ ಕಾರಣವಾಗಿ ಆ ರಸ್ತೆಗೆ ಗಾನಕಲಾಮಂದಿರದ ರಸ್ತೆ ಎಂದೇ ಹೆಸರಿಡಲಾಗಿದೆ.

ತ್ಯಾಗರಾಜನಗರದ ಮೂರನೇ ಬ್ಲಾಕಿನಲ್ಲಿ ಅಯ್ಯರ್ ಟಿಫನ್ ರೂಮ್ಸ್‌ನ ಮಹಡಿಯಲ್ಲಿ ಬಾಬು ಸ್ಕೂಲ್ ಆಫ್ ರಿಧಮ್ಸ್ ಎಂಬ ಸಂಗೀತವಾದ್ಯಗಳ ಶಾಲೆ ಇದೆ. ಇವರೇ ವಾರಕ್ಕೆರಡು ದಿನ ದತ್ತಾತ್ರೇಯ ದೇವಸ್ಥಾನದ ಕಲಾ ಕೇಂದ್ರದಲ್ಲೂ ಕೀಬೋರ್ಡ್, ಮೃದಂಗದ ತರಗತಿಗಳನ್ನು ನಡೆಸುತ್ತಿದ್ದಾರೆ. ಅಯ್ಯರ್ ಟಿಫಿನ್ ರೂಮ್ಸ್ ಎದುರಿಗೆ 'ಪ್ರಪಂಚ' ವರ್ಲ್ಡ್ ಆಫ್ ಮ್ಯೂಸಿಕ್ ಎಂಬ ಸಂಗೀತ ಶಾಲೆಯನ್ನು ಕೊಳಲು ವಿದ್ವಾನ್ ಶಂಕರ್ ಅವರು ನಡೆಸು ತ್ತಿದ್ದಾರೆ.

ನಾಗಸಂದ್ರದ ಮುಖ್ಯರಸ್ತೆಯಲ್ಲಿರುವ ಗಣೇಶ ಮಂದಿರದ ತೇರುಬೀದಿಯಲ್ಲಿ 'ಶ್ರೀ ಲಲಿತಾ ವಿದ್ಯಾ ಶಾಲೆ' ಎಂಬ ಸಂಗೀತಶಾಲೆ ಇದೆ. ತ್ಯಾಗರಾಜನಗರದ ೯ನೇ ಮುಖ್ಯರಸ್ತೆಯಲ್ಲಿ 'ಸಪ್ತಸ್ವರ' ಎಂಬ ಸಂಗೀತ ಶಾಲೆ ಇದೆ. ಜವರಯ್ಯ ಗಾರ್ಡನ್ನಿನ ಮೂರನೇ ಕ್ರಾಸಿನಲ್ಲಿ 'ಕಲಾಕ್ಷಿತಿಜ' ಸ್ಕೂಲ್ ಆಫ್ ಆರ್ಟ್ಸ್ ಅಂಡ್ ಕ್ರಾಫ್ಟ್ಸ್ ಎಂಬ ಶಾಲೆ ಇದೆ.

ನರಸಿಂಹರಾಜ ಕಾಲೋನಿಯಲ್ಲಿ ಆಚಾರ್ಯ ಪಾಠಶಾಲಾ ಕಾಲೇಜಿನಲ್ಲಿ ಸಂಗೀತದ ಪ್ರಾಧ್ಯಾಪಕರಾಗಿದ್ದ ವಿದ್ವಾನ್ ವೀಣೆ ರಾಜಾರಾಯರು ಸುಪ್ರಸಿದ್ಧ ಸಂಗೀತಗಾರ ರಾಗಿದ್ದು ಅನೇಕರಿಗೆ ವೀಣೆ ಕಲಿಸಿದ್ದರು. ಅಂತರರಾಷ್ಟ್ರೀಯ ಖ್ಯಾತಿಯ ವಿದುಷಿ ಡಾ. ಸುಮಾ ಸುಧೀಂದ್ರ ಇವರ ಶಿಷ್ಯರಲ್ಲಿ ಒಬ್ಬರು.

ತ್ಯಾಗರಾಜನಗರದ ಆರನೇ ಮುಖ್ಯರಸ್ತೆಯಲ್ಲಿ 'ಯಕ್ಷ ದೇಗುಲ' ಎಂಬ ಸಂಸ್ಥೆಯೂ ಲಲಿತಕಲಾಕ್ಷೇತ್ರದಲ್ಲಿ ಶ್ರಮಿಸು ತ್ತಿದೆ.

**ಸಂಘ ಸಂಸ್ಥೆಗಳು**

ನಾಗಸಂದ್ರ ಹರಹಿನ ಪ್ರದೇಶದಲ್ಲಿ ಅನೇಕ ಪ್ರಮುಖ ಸಂಘ ಸಂಸ್ಥೆಗಳಿವೆ. ಅವುಗಳಲ್ಲಿ ಮುಖ್ಯವಾದುದೆಂದರೆ ನರಸಿಂಹರಾಜ ಕಾಲೋನಿಯಲ್ಲಿರುವ **ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ**. ೧೯೪೫ರಲ್ಲಿ ಡಾ. ಡಿ.ವಿ. ಗುಂಡಪ್ಪನವರು ಈ ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆಯಲ್ಲಿ ವರ್ಷದುದ್ದಕ್ಕೂ ದತ್ತಿ ಉಪನ್ಯಾಸಗಳು ಗಮಕ, ಸಂಗೀತ, ವಿಶೇಷ ಉಪನ್ಯಾಸಗಳು ಹಾಗೂ ವ್ಯಾಸ, ವಾಲ್ಮೀಕಿ ಜಯಂತಿ ಗಳೂ ನಡೆಯುತ್ತವೆ. ಅತ್ಯಂತ ಉಪಯುಕ್ತವಾದ ಗ್ರಂಥಗಳುಳ್ಳ ಗಣಕೀಕೃತ ಸುವ್ಯವಸ್ಥಿತ ಗ್ರಂಥಾಲಯವಿದೆ. ಈಗಿರುವ ಕಟ್ಟಡ ಇತ್ತೀಚೆಗೆ ನಿರ್ಮಿತವಾದದ್ದು.

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವನ್ನು** ಪ್ರೊ. ಎಂ.ವಿ. ಸೀತಾರಾಮಯ್ಯನವರು ೧೯೭೯ರಲ್ಲಿ ತಮ್ಮ ಗುರು ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರ ಸ್ಮರಣಾರ್ಥ ಸ್ಥಾಪಿಸಿದರು. ಈ ಸಂಸ್ಥೆಯು ಈಗ ನರಸಿಂಹರಾಜಾ ಕಾಲೋನಿಯಲ್ಲಿ ಮೂರನೇ ಮುಖ್ಯ ರಸ್ತೆಯಲ್ಲಿ ಬೆಂಗಳೂರು ಮಹಾನಗರ ಪಾಲಿಕೆ ನೀಡಿರುವ ನಿವೇಶನದಲ್ಲಿ ಸ್ವಂತ ಕಟ್ಟಡವನ್ನು ಹೊಂದಿದೆ. ಈ ಸಂಸ್ಥೆಯು ಸುಮಾರು ೩೦೦೦ ಹಸ್ತಪ್ರತಿಗಳನ್ನುಳ್ಳ ಹಸ್ತಪ್ರತಿ ಭಂಡಾರವನ್ನು, ೨೦೦೦೦ಕ್ಕೂ ಮೇಲ್ಪಟ್ಟು ಗ್ರಂಥಗಳಿರುವ ಗ್ರಂಥಭಂಡಾರವನ್ನೂ ಸುಸಜ್ಜಿತವಾದ ಸಭಾಭವನವನ್ನೂ ಹೊಂದಿದೆ. ಮೌಲಿಕವಾದ ಸಾಹಿತ್ಯ ಗ್ರಂಥಗಳನ್ನೂ ಪ್ರಕಟಿಸುತ್ತಿದೆ. ಎಂ.ವಿ.ಸೀ.ಯವರ ಹೆಸರಿನಲ್ಲಿ ಸಂಶೋಧನಾ ಕೇಂದ್ರವಿದ್ದು ಎಂ.ಫಿಲ್., ಪಿಹೆಚ್.ಡಿ. ಪದವಿಗಳಿಗಾಗಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನದ ಸೌಲಭ್ಯವನ್ನೂ ಒದಗಿಸುತ್ತಿದೆ. ಹಸ್ತಪ್ರತಿಶಾಸ್ತ್ರದ ಅಧ್ಯಯನಕ್ಕಾಗಿ ಮತ್ತು ಹಳಗನ್ನಡ ಕಾವ್ಯಗಳ ಅಧ್ಯಯನಕ್ಕಾಗಿ ತರಗತಿಗಳನ್ನು ನಡೆಸಿ ಅರ್ಹತಾಪತ್ರಗಳನ್ನೂ ವಿದ್ಯಾರ್ಥಿಗಳಿಗೆ ನೀಡುತ್ತದೆ. ವರ್ಷಕ್ಕೊಮ್ಮೆ ಹಸ್ತಪ್ರತಿಶಾಸ್ತ್ರದ ಸಮಾವೇಶವನ್ನು ರಾಷ್ಟ್ರೀಯ ಮಟ್ಟದಲ್ಲಿ ಆಯೋಜಿಸಿ ಅಲ್ಲಿ ಮಂಡಿಸಿದ ಪ್ರಬಂಧಗಳನ್ನು ಪಕಟಿಸುತ್ತಿದೆ. ಸಿರಿಕಂಟ ಎಂಬ ಹಸ್ತಪ್ರತಿ ತರಗತಿಗಳ ವಿದ್ಯಾರ್ಥಿಗಳ ವೇದಿಕೆಯಿಂದ ಮಾಸಿಕ ಉಪನ್ಯಾಸಗಳು, ದತ್ತಿ ಉಪನ್ಯಾಸಗಳು, ಸಿರಿಸಂಗೀತ, ಸಹೃದಯ ಗೋಷ್ಠಿ, ವಿಚಾರ ಕಮ್ಮಟಗಳು ಮುಂತಾದುವು ಈ ಸಂಸ್ಥೆಯ ಕಾರ್ಯಕ್ರಮಗಳಾಗಿವೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಕಟ್ಟಡದಲ್ಲಿಯೇ ಇದೆ **ಕರ್ನಾಟಕ ಇತಿಹಾಸ ಅಕಾದೆಮಿ**. ಈ ಸಂಸ್ಥೆಯನ್ನು ೧೯೮೬ರಲ್ಲಿ ಪ್ರೊ. ಜಿ.ಎಸ್. ದೀಕ್ಷಿತ್ ಮತ್ತು ಡಾ. ಸೂರ್ಯನಾಥ ಕಾಮತರು ಸ್ಥಾಪಿಸಿದರು. ಜನಸಾಮಾನ್ಯರಿಗೆ ಇತಿಹಾಸದಲ್ಲಿ ಆಸಕ್ತಿ ಮೂಡಿಸಲು, ಸಂಶೋಧನೆಯನ್ನು ಪ್ರೋತ್ಸಾಹಿಸಲು, ಐತಿಹಾಸಿಕ ಪರಂಪರೆಯನ್ನು ರಕ್ಷಿಸಲು ಈ ಸಂಸ್ಥೆಯು ಶ್ರಮಿಸುತ್ತಿದೆ. ಹತ್ತಾರು ವರ್ಷಗಳ ಕಾಲ ಪಿ.ಯು.ಸಿ. ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದಲ್ಲಿ ಕರ್ನಾಟಕ ಇತಿಹಾಸದಲ್ಲಿ ಪ್ರಶಸ್ತಿ ಪರೀಕ್ಷೆಗಳನ್ನು ಬೆಂಗಳೂರು, ಧಾರವಾಡ, ಗುಲ್ಬರ್ಗ, ಮಂಗಳೂರು, ಮೈಸೂರು, ತುಮಕೂರುಗಳಲ್ಲಿ ನಡೆಸಿತು. ಸಾವಿರಾರು ವಿದ್ಯಾರ್ಥಿಗಳು ಇದರ ಪ್ರಯೋಜನವನ್ನು ಪಡೆದುಕೊಂಡರು. ಈಗ ಬೆಂಗಳೂರು ಜಿಲ್ಲಾಘಟಕವು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮದ ಅಂಗವಾಗಿ ಪ್ರೌಢಶಾಲೆ, ಪದವಿಪೂರ್ವ ಮತ್ತು ಪದವಿ ವಿದ್ಯಾರ್ಥಿಗಳಿಗೆ ಭಾಷಣ ಮತ್ತು ಪ್ರಬಂಧ ಸ್ಪರ್ಧೆಗಳನ್ನು ನಡೆಸಿ ವಿಜೇತರಾದವರಿಗೆ ಆಗಸ್ಟ್ ತಿಂಗಳ ೧೬ರಂದು ನಡೆಸುವ ಐತಿಹಾಸಿಕ ಪರಂಪರೆ ಉಳಿಸಿ ಸಮಾರಂಭದ ದಿನ ಪ್ರಶಸ್ತಿ ಫಲಕಗಳನ್ನೂ ಬಹುಮಾನಗಳನ್ನೂ ವಿತರಿಸಲಾಗುತ್ತಿದೆ. ಅದೇ ಸಮಾರಂಭದಲ್ಲಿ ಐತಿಹಾಸಿಕ ಪರಂಪರೆ ಬಿಂಬಿಸುವ ಭಿತ್ತಿಪತ್ರವನ್ನೂ ಬಿಡುಗಡೆ ಮಾಡಲಾಗುತ್ತದೆ. ಇತಿಹಾಸ ಅಕಾದೆಮಿಯ ಘಟಕಗಳು ಮೈಸೂರು, ಬೆಳಗಾಂ, ಧಾರವಾಡ, ಬಳ್ಳಾರಿ, ಶಿವಮೊಗ್ಗ, ಗುಲ್ಬರ್ಗ ದಕ್ಷಿಣ ಕನ್ನಡ, ಮುಂತಾದ ಜಿಲ್ಲೆಗಳಲ್ಲಿದ್ದು ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳನ್ನೂ, ಪ್ರವಾಸಗಳನ್ನೂ, ಸ್ಮಾರಕಗಳ ರಕ್ಷಣೆಯನ್ನೂ ಕೈಗೊಳ್ಳುತ್ತಿವೆ. ಪ್ರತಿವರ್ಷವೂ ವಾರ್ಷಿಕ ಸಮ್ಮೇಳನಗಳನ್ನು ಕರ್ನಾಟಕದಾದ್ಯಂತ ನಡೆಸುತ್ತಾ ಬಂದಿದೆ. ಆ ಸಮ್ಮೇಳನಗಳಲ್ಲಿ ಆಯಾ ವರ್ಷದಲ್ಲಿ ಪಿಹೆಚ್.ಡಿ. ಪಡೆದ ವಿದ್ಯಾರ್ಥಿಗಳನ್ನು ಸನ್ಮಾನಿಸಲಾಗುವುದು ಹಾಗೂ ಒಬ್ಬ ಶಾಸನತಜ್ಞರಿಗೆ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗುವುದು, ಒಬ್ಬ ಇತಿಹಾಸತಜ್ಞರನ್ನು ಸಮ್ಮೇಳನಾಧ್ಯಕ್ಷರಾಗಿ ಆರಿಸಿ ಗೌರವಿಸಲಾಗುವುದು. ಸಮ್ಮೇಳನದಲ್ಲಿ ಸದಸ್ಯರು ಮಂಡಿಸುವ ನೂರಕ್ಕೂ ಮೇಲ್ಪಟ್ಟ ಸಂಶೋಧನಾತ್ಮಕ ಪ್ರಬಂಧಗಳನ್ನು ಇತಿಹಾಸ ದರ್ಶನ ಎಂಬ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು. ಕಳೆದ ವರ್ಷ ಈ ಸಂಸ್ಥೆಯು ತನ್ನ ರಜತ ಮಹೋತ್ಸವವನ್ನು ಆಚರಿಸಿತು.

ತ್ಯಾಗರಾಜನಗರದ ಎರಡನೇ ಬ್ಲಾಕಿನಲ್ಲಿ **ಅಧ್ಯಾತ್ಮ ಪ್ರಕಾಶ ಕಾರ್ಯಾಲಯ**ವಿದೆ. ರಸ್ತೆಗೂ ಸಂಸ್ಥೆಯ ಹೆಸರೇ ಇದೆ. ಹೊಳೆನರಸೀಪುರದ ಸಚ್ಚಿದಾನಂದ ಸರಸ್ವತೀ ಸ್ವಾಮಿಗಳು ೧೯೫೫ರಲ್ಲಿ ಈ ಬೆಂಗಳೂರು ಶಾಖೆಯನ್ನು ನರಸಿಂಹರಾಜಾ ಕಾಲೋನಿಯಲ್ಲಿ ಬಾಡಿಗೆ ಮನೆಯೊಂದರಲ್ಲಿ ಪ್ರಾರಂಭಿಸಿದರು. ೧೯೭೧ರಲ್ಲಿ ಸುಬ್ಬರಾಮಚೆಟ್ಟಿ ಲೇಔಟ್ಗೆ ಸೇರಿದ್ದ ಈಗಿನ ಸ್ವಂತ ಕಟ್ಟಡಕ್ಕೆ ವರ್ಗಾಯಿಸಲಾಯಿತು. ಶ್ರೀ ಶಂಕರಾಚಾರ್ಯರ ಅನೇಕ ಗ್ರಂಥಗಳನ್ನು ಈ ಸಂಸ್ಥೆ ಪ್ರಕಟಿಸಿದೆ. ಸ್ವಾಮಿಗಳು ಬೆಂಗಳೂರಿನಲ್ಲಿ ವಾಸ್ತವ್ಯವಿದ್ದಾಗ ಅಧ್ಯಾತ್ಮಿಕ ವಿಷಯಗಳ ಬಗ್ಗೆ ವೇ।ಬ್ರ। ಶ್ರೀ ಸುಬ್ಬರಾಯಶರ್ಮ ಮುಂತಾದ ಗಣ್ಯ ವಿದ್ವಾಂಸರಿಂದ ಪ್ರವಚನಗಳನ್ನು ಏರ್ಪಡಿಸಲಾಗುತ್ತದೆ. ಶಂಕರ ಕೃಪಾ ಮತ್ತು ಶಂಕರ ಭಾಸ್ಕರ ಎಂಬ ಪತ್ರಿಕೆಗಳನ್ನು ಈ ಸಂಸ್ಥೆಯು ನಿಯತವಾಗಿ ಹೊರಡಿಸುತ್ತಿದೆ. ಅಧ್ಯಾತ್ಮ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳ ಭಂಡಾರವೂ ಇದೆ.

**ಶ್ರೀಮನ್ಮಹಾಭಾರತ ಪ್ರಕಾಶನದ ಸಂಸ್ಥೆ**ಯೂ ತ್ಯಾಗರಾಜನಗರದ ಈಗಿನ ಪಾಂಡುರಂಗ ದೇವಾಲಯದ ರಸ್ತೆಯಲ್ಲಿದ್ದಿತು. ಮಹಾಭಾರತದ ಎಲ್ಲ ಸಂಪುಟಗಳನ್ನು ಸಮಗ್ರವಾಗಿ ಪ್ರಕಟಿಸಿತು.

ಕಾಲೋನಿಯ ೭ನೇ ರಸ್ತೆಯಲ್ಲಿದೆ **ಕಟ್ಟೇಬಳಗ.** ಈ ಸಂಸ್ಥೆ ಇರುವ ರಸ್ತೆಗೆ ಕಟ್ಟೇ ಬಳಗ ಭವನದ ರಸ್ತೆ ಎಂಬ ಹೆಸರಿದೆ. ಇದರ ಸ್ಥಾಪಕರು ಮಹಾನಗರ ಪಾಲಿಕೆಯ ಸದಸ್ಯರಾದ ಶ್ರೀ ಕಟ್ಟೆ ಸತ್ಯನಾರಾಯಣ ಅವರು. ಇತ್ತೀಚೆಗೆ ನಿರ್ಮಿಸಿರುವ ಕಟ್ಟೇ ಭವನದಲ್ಲಿ ವೇದ ಮತ್ತು ಯೋಗ ಹಾಗೂ ಸಂಗೀತ ತರಗತಿಗಳು ನಡೆಯುತ್ತಿವೆ. ಸಭಾಭವನ ವಿದ್ದು ಸಭೆ ಸಮಾರಂಭಗಳಿಗೆ ಬಾಡಿಗೆಗೆ ಕೊಡಲಾಗುತ್ತದೆ. ಕಾಲೋನಿಯ ಕಟ್ಟೇ ಬಳಗದ ಕಟ್ಟೆಯ ಬಳಿ ವರ್ಷದಾರಂಭದಲ್ಲಿ ವಿದ್ಯಾರ್ಥಿಗಳಿಗೆ ಉಚಿತವಾಗಿ ಪುಸ್ತಕಗಳನ್ನು ನೀಡಲಾಗುತ್ತದೆ, ಎಸ್.ಎಸ್.ಎಲ್.ಸಿ., ಪಿ.ಯು.ಸಿ. ಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದವರಿಗೆ ಬಹುಮಾನಗಳನ್ನು ನೀಡಿ ಪ್ರೋತ್ಸಾಹಿಸಲಾಗುವುದು. ಬಡಾವಣೆಯ ಮಾನ್ಯ ವ್ಯಕ್ತಿಗಳನ್ನೂ ಗೌರವಿಸಲಾಗುವುದು.

ಕಟ್ಟೇ ಬಳಗದ ವೇದಿಕೆಯ ಬಳಿಯೇ ಇರುವ ಇನ್ನೊಂದು ಸಂಸ್ಥೆ ನಿರಂತರ. ಇದು ಉಚಿತವಾಗಿ ಓದುಗರಿಗೆ ಸಮಾಚಾರ ಪತ್ರಿಕೆಗಳನ್ನು ಒದಗಿಸುತ್ತಿದೆ ಹಾಗೂ ಉಚಿತವಾಗಿ ವೈದ್ಯಕೀಯ ತಪಾಸಣಾ ಸೌಲಭ್ಯಗಳನ್ನು ಜನರಿಗೆ ನೀಡುತ್ತಿದೆ. ಚುನಾವಣಾ ಕಾಲದಲ್ಲಿ ನಾಯಕರಿಂದ ಭಾಷಣ ಸಭೆಗಳನ್ನು ಏರ್ಪಡಿಸುತ್ತದೆ.

ಈ ಪ್ರದೇಶದಲ್ಲಿರುವ ಬ್ಯಾಂಕುಗಳೆಂದರೆ ನಾಗಸಂದ್ರ ವೃತ್ತದಲ್ಲಿರುವ ಕರೂರು ವೈಶ್ಯ ಬ್ಯಾಂಕ್, ಡಿವಿಜಿ ರಸ್ತೆಯಲ್ಲಿರುವ ಕೆನರಾಬ್ಯಾಂಕ್, ಪಾಮಡಿ ಸುಬ್ಬರಾಮಚೆಟ್ಟಿ ರಸ್ತೆಯಲ್ಲಿರುವ ಐ.ಎನ್.ಜಿ. ವೈಶ್ಯ ಬ್ಯಾಂಕ್, ಕರ್ನಾಟಕ ಬ್ಯಾಂಕ್, ಶ್ರೀ ರಾಘವೇಂದ್ರ ಸಹಕಾರ ಬ್ಯಾಂಕ್, ಕಾಲೋನಿ ಶ್ರೀ ರಾಮಮಂದಿರದ ಆವರಣದಲ್ಲಿರುವ ಸಿಂಡಿಕೇಟ್ ಬ್ಯಾಂಕ್, ಕಾಲೋನ ಮೊದಲನೇ ಮುಖ್ಯ ರಸ್ತೆಯಲ್ಲಿರುವ ತ್ಯಾಗರಾಜ ಸಹಕಾರ ಬ್ಯಾಂಕ್, ತ್ಯಾಗರಾಜನಗರದ ಮೊದಲನೇ ಬ್ಲಾಕಿನ ಪಾಂಡುರಂಗ ದೇವಸ್ಥಾನದ ರಸ್ತೆಯಲ್ಲಿರುವ ಭಾರತೀಯ ಸ್ಟೇಟ್ ಬ್ಯಾಂಕ್, ಕಾಲೋನಿಯಲ್ಲಿರುವ ಹೆಚ್.ಡಿ.ಎಫ್.ಸಿ., ವಿಶ್ವೇಶ್ವರಯ್ಯ ಕೊ ಆಪರೇಟಿವ್ ಬ್ಯಾಂಕ್, ಶಾಸ್ತ್ರಿನಗರದ ೯ನೇ ಮುಖ್ಯರಸ್ತೆಯಲ್ಲಿರುವ ಶ್ರೀಮಾತಾ ಮಹಿಳಾ ಸಹಕಾರಿ ಬ್ಯಾಂಕ್, ಮುಂತಾದುವು.

ನಾಗಸಂದ್ರದ ಮುಖ್ಯರಸ್ತೆಯಲ್ಲಿ ಆಂಜನೇಯ ದೇವಸ್ಥಾನದ ದಕ್ಷಿಣ ದಿಕ್ಕಿಗೆ ಗರಡಿಮನೆ ಇದ್ದಿತು. ಇಲ್ಲಿನ ಕುಸ್ತಿಪಟುಗಳು ವಾರಕ್ಕೊಮ್ಮೆ ದೊಡ್ಡಣ್ಣ ಹಾಲ್ ಬಳಿ ನಡೆಯುತ್ತಿದ್ದ ಕುಸ್ತಿ ಪಂದ್ಯಗಳಲ್ಲಿ ಭಾಗವಹಿಸುತ್ತಿದ್ದರು. ತಮ್ಮಯ್ಯ ಎಂಬ ಮೂಗನೊಬ್ಬನು ಪ್ರಖ್ಯಾತ ಕುಸ್ತಿಪಟುವಾಗಿದ್ದನು. ಪಾಮಡಿ ಸುಬ್ಬರಾಮಚೆಟ್ಟಿ ರಸ್ತೆಯಲ್ಲಿ ಈಗ ಸ್ವರ್ಣ ಎಲೆಕ್ಟ್ರಿಕಲ್ಸ್ ಇರುವ ಕಡೆ ಪಾಂಡುರಂಗ ವ್ಯಾಯಾಮ ಶಾಲೆ ಇದ್ದಿತು. ನರಸಿಂಹರಾಜ ಕಾಲೋನಿಯಲ್ಲಿದ್ದ ರಾಷ್ಟ್ರೀಯ ವ್ಯಾಯಾಮ ಶಾಲೆಯನ್ನು ಇತ್ತೀಚೆಗೆ ತ್ಯಾಗರಾಜ ನಗರದ ಮೂರನೇ ಬ್ಲಾಕಿನಲ್ಲಿರುವ ದತ್ತಾತ್ರೇಯ ದೇವಸ್ಥಾನದ ಎದುರಿಗೆ (ಪೂರ್ವಕ್ಕೆ) ಕಟ್ಟಲಾದ ಕಟ್ಟಡಕ್ಕೆ ಸ್ಥಳಾಂತರಿಸಲಾಗಿದೆ. ಮಹೇಂದ್ರಕುಮಾರ ದಾನಿಯವರು ಇಲ್ಲಿನ ಮುಖ್ಯ ಶಿಕ್ಷಕರಾಗಿದ್ದಾರೆ. ಇಲ್ಲಿ ಜಿಮ್, ಯೋಗಥೆರಪಿ, ಕರಾಟೆ, ಡಾನ್ಸ್ ತರಗತಿಗಳು ನಡೆಯುತ್ತಿವೆ.

ಉಪಹಾರಗೃಹ, ದ್ವಾರಕಾಭವನ್, ಕುಮಾರಭವನ, ಉಪಹಾರಕೇಂದ್ರ, ಗಾಯಿತ್ರಿ ಟಿಫನ್ ಸೆಂಟರ್, ಐಯ್ಯರ್ ಟಿಫನ್‌ರೂಮ್ಸ್, ಜೋಳದರೊಟ್ಟಿ, ತಿಂಡಿಮನೆ ಮುಂತಾದುವು ಇಲ್ಲಿರುವ ಹೋಟೆಲುಗಳು.

ಕಾಲೋನಿಯಲ್ಲಿ ದೇವೇಂದ್ರ ಸ್ಟೋರ್ಸ್, ಪಾರ್ಶ್ವಂ ಸ್ಟೋರ್ಸ್, ಕುಸುಮಸ್ಟೋರ್ಸ್, ತ್ಯಾಗರಾಜನಗರದಲ್ಲಿ ಬಾಲಾಜಿ ಭಂಡಾರ, ರಾಕೇಶ್ ಸ್ಟೋರ್ಸ್, ಸಂಪತ್ ಅಂಗಡಿ, ಮೈತ್ರೇಯಿ ಸ್ಟೋರ್ಸ್, ಗುಪ್ತಸ್ಟೋರ್ಸ್ ಮುಖ್ಯ ಅಂಗಡಿಗಳು.

ಪ್ರಸಾದ್ ಕ್ಲಿನಿಕ್, ಚೈತನ್ಯ ಕ್ಲಿನಿಕ್, ಸುಧಾ ಆಯುರ್ವೇದ ಔಷಧಾಲಯ, ಶ್ರೀನಿವಾಸ ಹೋಮಿಯೋಪತಿ ಕ್ಲಿನಿಕ್, ಬಾಲಾಜಿ ಮಲ್ಟಿ ಸ್ಪೆಷಾಲಿಟಿ ಹಾಸ್ಪಿಟಲ್, ಡಯಾಬಿಟಿಸ್ ಅಂಡ್ ಹಾರ್ಮೋನ್ ಡಯೊಗ್ನಾಸ್ಟಿಕ್ ಲ್ಯಾಬೊರೇಟರಿ, ವಿಸ್ಮಯಾ ಡಯಾಬಿಟಿಸ್ ಕ್ಲಿನಿಕ್, ಕಾರ್ತಿಕ್ ನೇತ್ರಾಲಯ, ಕಾಲೋನಿಯಲ್ಲಿ ಮಹಾನಗರಪಾಲಿಕೆಯ ಆಸ್ಪತ್ರೆ ಈ ಮುಂತಾದುವು ವೈದ್ಯಕೀಯ ಕೇಂದ್ರಗಳು. ನಾಗಸಂದ್ರದ ಮುಖ್ಯರಸ್ತೆಯಲ್ಲಿ ಸತ್ಯ ವಿಘ್ನೇಶ್ವರನ ಗುಡಿಯ ಎಡ ಪಕ್ಕದಲ್ಲಿ ಪಶುಚಿಕಿತ್ಸಾಲಯವಿದೆ. ಇಲ್ಲಿ ಮೊದಲು ಕುದುರೆಗಳಿಗೆ ಚಿಕಿತ್ಸೆ ನೀಡಲಾಗುತಿದ್ದಿತು. ಈಗ ನಾಯಿಗಳಿಗೆ ವಿಶೇಷವಾಗಿ ಚಿಕಿತ್ಸೆ ನೀಡಲಾಗುತ್ತಿದೆ. ಟಿ.ಆರ್. ಮೆಡಿಕಲ್ಸ್, ಅಪೊಲೊಫಾರ್ಮ, ಸಾಗರ್ ಫಾರ್ಮ, ಗಣೇಶ್ ಮೆಡಿಕಲ್ಸ್, ರವಿಮೆಡಿಕಲ್ಸ್, ಮಾರುತಿಮೆಡಿಕಲ್ಸ್ ಔಷಧ ಕೇಂದ್ರಗಳು.

### ರಸ್ತೆಗಳು

ನಾಗಸಂದ್ರದಲ್ಲಿ ೨ ಮುಖ್ಯರಸ್ತೆಗಳು ೫ ಅಡ್ಡರಸ್ತೆಗಳು, ಟಾಟಾ ಸಿಲ್ಕ್ ಫಾರಂನಲ್ಲಿ ೯ ರಸ್ತೆಗಳು, ಮಾಡೆಲ್ ಹೌಸ್ ಬ್ಲಾಕಿನಲ್ಲಿ ೫ ರಸ್ತೆಗಳು, ಶಾಸ್ತ್ರಿನಗರದಲ್ಲಿ ೧೨ ರಸ್ತೆಗಳು, ತ್ಯಾಗರಾಜನಗರದಲ್ಲಿ ೪ ಬ್ಲಾಕುಗಳು, ಪಾಂಡುರಂಗ ದೇವಸ್ಥಾನದ ರಸ್ತೆ, ಸಾಯಿಬಾಬಾ ಮಂದಿರದ ರಸ್ತೆ, ನೇತಾಜಿ ರಸ್ತೆ, ಶ್ರೀ ಪರಮಹಂಸ ರಸ್ತೆ, ವಿವೇಕಾನಂದ ರಸ್ತೆ, ಹಳೆ ಅಂಚೆ ಕಛೇರಿಯ ರಸ್ತೆ, ಶ್ರೀರಾಮ ರಸ್ತೆ, ಮಂಜುನಾಥ

ರಸ್ತೆ, ರಾಮಕೃಷ್ಣ ರಸ್ತೆ, ಗಣೇಶ ಮಂದಿರದ ರಸ್ತೆ, ಆತ್ಮಶ್ರೀ ವಿದ್ಯಾಸಂಸ್ಥೆ ರಸ್ತೆ ಹೆಸರಿಸಬಹುದಾದುವು.

## ಈ ಪ್ರದೇಶದ ಗಣ್ಯ ವ್ಯಕ್ತಿಗಳು

ಟಿ. ಆರ್. ಶಾಮಣ್ಣ, ಅನಂತಾಚಾರ್, ಎನ್, ಕೃಷ್ಣಸ್ವಾಮಿ, ಪಾಮಡಿ ಸುಬ್ಬರಾಮಚೆಟ್ಟಿ, ನವರತ್ನರಾಮ್, ಉಷಾ ನವರತ್ನ ರಾಮ್, ಸಿ.ಅಶ್ವತ್ಥ್(ಸುಗಮ ಸಂಗೀತಗಾರರು), ಸಿ. ವಿಶ್ವನಾಥರಾವ್ (ನಟರು), ದ್ವಾರಕೀಶ್ (ಸಿನಿಮಾ ನಟರು) ಕೆಲವು ವರ್ಷಗಳು ಮಾತ್ರ, ಗದಾಧರ್ ಪ್ರೇಮಕುಮಾರ್, ಕಲ್ಯಾಣಿ ಪ್ರೇಮಕುಮಾರ್, ಜಯಶ್ರೀ(ಸುಗಮ ಸಂಗೀತ ಗಾರರು), ಕಸ್ತೂರಿ ಶಂಕರ್, ಹೆಚ್.ಎಲ್. ಶೇಷಚಂದ್ರ, ಆತ್ರೇಯ ಕ್ಲಿನಿಕ್ಕಿನ ಡಾ. ಲಕ್ಷ್ಮೀನಾರಾಯಣ, ಡಾ. ಕೆ. ನಾಗರಾಜ, ಕು.ರಾ.ಸೀ., ಮಾಸ್ತಿ ವೆಂಕಟೇಶ ಐಯ್ಯಂಗಾರ್‍ಯರ ಅಳಿಯ ಲಕ್ಷ್ಮಣ್, ನಂಜುಂಡರಾವ್, ಶ್ರೀಮತಿ ವಾಗೀಶ್ವರೀ ಶಾಸ್ತ್ರೀ, ಡಾ.ಶ್ಯಾಮರಾವ್, ರಾಯಚೂರು ಕೃಷ್ಣಾಚಾರ್, ವೆಂಕಟರಾವ್, ನಂಜುಂಡಯ್ಯ, ಹಳ್ಳಿಕಾರ ವಕ್ಕಲಿಗರ ಸಮಿತಿಯ ಅಧ್ಯಕ್ಷರಾದ ರಂಗೇಗೌಡರು, ಹುಚ್ಚಪ್ಪನವರು, ನರಸಪ್ಪನವರು, ಸುನಂದಾ ಪಿ. ಜಾಧವ್, ಲಲಿತಾ, ಸತ್ಯನಾರಾಯಣ, ವಿದ್ಯಾ ಜಾಗೀರ ದಾರ್, ಈ ಮುಂತಾದವರು.

ಈಗ ಈ ಪ್ರದೇಶದಲ್ಲಿ ವಾಸವಾಗಿರುವ ಪ್ರಮುಖ ಜನಸಮುದಾಯಗಳೆಂದರೆ ಹಳ್ಳಿಕಾರ ಒಕ್ಕಲಿಗರು, ಗಂಗಡಿ ಕಾರ ಒಕ್ಕಲಿಗರು, ಕುರುಬರು, ಮಾದಿಗರು, ಬೋವಿಗಳು, ತ್ರಿಮತಸ್ಥ ಬ್ರಾಹ್ಮಣರು, ಜೈನರು, ರಾಜಾಸ್ಥಾನೀ ಹಿಂದೂಗಳು, ಆರ್ಯವೈಶ್ಯರು, ರೆಡ್ಡಿಗಳು, ಮುಂತಾದವರು.

[ಈ ಲೇಖನ ಸಿದ್ಧಪಡಿಸಲು ಮಾಹಿತಿ ನೀಡಿದ ಎಲ್ಲ ಸಂಘ ಸಂಸ್ಥೆಗಳ, ದೇವಾಲಯಗಳ ಪದಾಧಿಕಾರಿಗಳಿಗೂ, ಅರ್ಚಕವರ್ಗದವರಿಗೂ, ಕ್ಷೇತ್ರವೀಕ್ಷಣೆಯಲ್ಲಿ ಜೊತೆಗಿದ್ದು ಸಹಕರಿಸಿದವರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.]



೬೨

# ಬೆಂಗಳೂರಿನ ಬಡಾವಣೆಯ ಅಭಿವೃದ್ಧಿಗೆ ಆರ್. ಜೈಮುನಿರಾವ್ ಜಾದವ್ ಕೊಡುಗೆ

ಡಾ. ಎಚ್. ಜಯಣ್ಣ ಕರಿಯಣ್ಣ*

ಬೆಂಗಳೂರು ನಿರ್ಮಾಪಕ ಹಿರಿಯ ಕೆಂಪೇಗೌಡರನ್ನು ಕರ್ನಾಟಕದ ರಾಜಧಾನಿ ಬೆಂಗಳೂರಿನ ಜನತೆ ಎಂದೂ ಮರೆಯಲಾರರು. ಬೆಂಗಳೂರು ನಗರ ವಿಸ್ತಾರವಾಗುತ್ತಾ ಹಲವಾರು ಬಡಾವಣೆಗಳು ಬೆಳದವು. ಆಯಾ ಬಡಾವಣೆಗಳ ಅಭಿವೃದ್ಧಿಗೆ ಶ್ರಮಿಸಿದ ಹಲವಾರು ಜನರಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿ ಮೈಸೂರರಸರ ದಿವಾನರ ಕಾಲದಲ್ಲಿ ದಾಸರ ಹಳ್ಳಿಯಲ್ಲಿ ನೆಲಸಿ ಆ ಬಡಾವಣೆಯ ಅಭಿವೃದ್ಧಿಗೆ ಶ್ರಮಿಸಿದ ಶ್ರೀ ಜೈಮುನಿರಾವ್ ಬಡಕುಟುಂಬದಲ್ಲಿ ಜನಿಸಿ ಸ್ವತಃ ಕ್ರಿಯಾಶೀಲ ಉದ್ಯಮಿಯಾಗಿ ಇಂದಿಗೂ ತಮ್ಮ ಹೆಸರನ್ನು ಚಿರಸ್ಥಾಯಿಯಾಗಿ ಉಳಿಸಿ ಹೋಗಿದ್ದಾರೆ.



### ಬಾಲ್ಯದಲ್ಲಿಯೇ ಧರ್ಮಾಸಕ್ತಿ

ಶ್ರೀರಾಣೋಜಿರಾವ್ ಜಾದವ್ ಮತ್ತು ತುಳಜಾಬಾಯಿ ದಂಪತಿಗಳು ಬೆಂಗಳೂರು ನಗರಕ್ಕೆ ಸೇರಿದ ನೆಲಮಂಗಲದಲ್ಲಿ ನೆಲಸಿ ಮರಗೆಲಸ ಮಾಡಿ ಬದುಕುತ್ತಿದ್ದರು. ಇವರಿಗೆ ಮನ್ನೂಬಾಯಿ ಎಂಬ ಮಗಳಿದ್ದಳು. ಮನೆದೇವರಾದ ಶ್ರೀಲಕ್ಷ್ಮೀನರಸಿಂಹಸ್ವಾಮಿ ಮತ್ತು ಎಲ್ಲಮ್ಮದೇವಿಯ ಕೃಪೆಯಿಂದ ಶ್ರೀವಿಕಾರಿನಾಮ ಸಂವತ್ಸರದ ಜ್ಯೇಷ್ಠ ಶುಕ್ಲ ಪೂರ್ಣಿಮೆ ಬುಧವಾರದ ದಿನ (ಅಂದರೆ ಕ್ರಿ.ಶ. ೧೯೦೧) ಗಂಡುಮಗು ಜನಿಸಿತು. ಆ ಮಗುವಿಗೆ ಹುಟ್ಟಿದ ಹನ್ನೊಂದನೆಯ ದಿನ ಜೈಮುನಿರಾವ್ ಜಾದವ್ ಎಂದು ನಾಮಕರಣ ಮಾಡಿದರು.

ಮಗುವಿನ ಶಿಕ್ಷಣಕ್ಕಾಗಿ ನೆಲಮಂಗಲವನ್ನು ಬಿಟ್ಟು ಬೆಂಗಳೂರಿನಲ್ಲಿಯೇ ಮನೆ ಮಾಡಿ ನೆಲಸಿದರು. ನೆಲಮಂಗಲ ದಲ್ಲಿ ಮಾಡುತ್ತಿದ್ದ ಮರಗೆಲಸದ ಉದ್ಯೋಗವನ್ನು ಇಲ್ಲಿಯೂ ಮುಂದುವರಿಸಿ ಕೊಂಡು ಬಂದರು. ಬಾಲಕ ಜೈಮುನಿಯನ್ನು ಮನೆಗೆ ಹತ್ತಿರವಿದ್ದ ಜನೋಪಕಾರಿ ದೊಡ್ಡಣ್ಣಶೆಟ್ಟರ ಧರ್ಮಸಂಸ್ಥೆಯ ಪ್ರಾಥಮಿಕ ಶಾಲೆಗೆ ಸೇರಿಸಿದರು. ಬಹಳ ಚೂಟಿಯಾಗಿದ್ದ ಬಾಲಕ ಜೈಮುನಿಗೆ ಗುರುಹಿರಿಯರ ಮೇಲೆ ಅಪಾರ ಪ್ರೀತಿ ಮತ್ತು ಗೌರವ ಹಾಗು ದೈವಭಕ್ತಿ. ಶಾಲೆಯಿಂದ ಬಂದಮೇಲೆ ತನ್ನ ಜೊತೆ ಮಕ್ಕಳನ್ನು ಕೂಡಿಕೊಂಡು ಮನೆಗೆ ಹತ್ತಿರವಿದ್ದ ಕಾಶಿ ವಿಶ್ವೇಶ್ವರ ದೇವಸ್ಥಾನಕ್ಕೆ ಹೋಗುತ್ತಿದ್ದ. ಸಂಜೆಹೊತ್ತು ಅಲ್ಲಲ್ಲಿ ನಡೆಯುತ್ತಿದ್ದ ಭಜನೆಯಲ್ಲಿ ಭಾಗವಹಿಸಿ ಮನೆಗೆ ಬರುತ್ತಿದ್ದ.

ಕಾರ್ತಿಕ ಮಾಸದಲ್ಲಿ ಬೆಳಗ್ಗೆ ೫ ಗಂಟೆಗೆ ಎದ್ದು ತಣ್ಣೀರಿನಲ್ಲಿ ಮಿಂದು ಹಿಂದಿನ ದಿನ ಸಂಜೆ ಗೆಳೆಯರ ಜೊತೆ ಸೇರಿ ಬಿಡಿಸಿ ತಂದಿದ್ದ ತುಂಬೆ ಹೂವಿನ ಜೊತೆ ಪೂಜಾರಿಯು ಬರುವ ಮೊದಲೇ ದೇವಾಲಯದ ಬಾಗಿಲಲ್ಲಿ ಕುಳಿತು ದೇವರ ಸ್ತೋತ್ರಗಳನ್ನು ಹೇಳಿಕೊಳ್ಳುತ್ತಿದ್ದ ಜೈಮುನಿಯನ್ನು ಪೂಜಾರಿ ನೋಡಿ, ಮಗು ಇದೇನು ಇಷ್ಟು

* ಆಶೀರ್ವಾದ, # ೨೯೩೩, ೧೩ನೇ ಮುಖ್ಯರಸ್ತೆ, ವಿಜಯನಗರ, ೨ನೇ ಹಂತ, ಬೆಂಗಳೂರು-೫೬೦೦೪೦.



ಬೇಗ ಬಂದಿರುವೆ ಎಂದು ಕೇಳಿದರೆ 'ನಾನು ತಂದ ತುಂಬೆ ಹೂವನ್ನು ಈಶ್ವರನ ತಲೆಯ ಮೇಲೆ ಮೊದಲು ಇರಿಸಬೇಕು ಅಂತ ತಂದಿದ್ದೇನೆ. ಆಮೇಲೆ ಬಂದರೆ ಹೂವನ್ನು ದೇವರ ಪಾದದ ಮೇಲೆ ಹಾಕುತ್ತೀರ. ಪೂಜೆ ಅಭಿಷೇಕ ಆಗುವವರೆಗೆ ಇಲ್ಲಿಯೇ ಕುಳಿತು ದೇವರ ದರ್ಶನ ಮಾಡುತ್ತೇನೆ' ಎನ್ನುತ್ತಿದ್ದ. ಇದು ಜೈಮುನಿಗೆ ಮತ್ತು ಪೂಜಾರಿಗೆ ಕಾರ್ತಿಕಮಾಸದಲ್ಲಿ ದಿನನತ್ಯದ ಅಭ್ಯಾಸವಾಗಿತ್ತು.

## ವೃತ್ತಿಪರತೆ ಮತ್ತು ಸೇವಾಮನೋಭಾವ

ದೇವಾಲಯದ ಅಂಗಳದಲ್ಲಿ ಮತ್ತು ಹೊರಗಡೆ ಸುತ್ತಲೂ ಬೆಳೆದು ನಿಂತಿದ್ದ ಗಿಡಗಂಟೆಗಳು ಹಾಗೂ ಕಸಕಡ್ಡಿಗಳಿಂದ ತುಂಬಿದ್ದ ಆವರಣವನ್ನು ಸ್ವಚ್ಛಮಾಡಲು ಯೋಚಿಸಿದ. ಆ ಕೆಲಸ ಕೈಗೊಳ್ಳಬೇಕಾದರೆ ಹಣದ ಅವಶ್ಯಕತೆ ಇತ್ತು. ಬಡತನದಲ್ಲಿದ್ದ ತಂದೆತಾಯಿಯ ಬಳಿ ಹಣ ಕೇಳುವಂತಿರಲಿಲ್ಲ. ಜೈಮುನಿ ಹಣದ ಸಂಪಾದನೆಗೆ ಉಪಾಯ ಮಾಡಿದ. ಒಂದು ಮರದ ಚೌಕಟ್ಟಿನಲ್ಲಿ ಗಡಿಯಾರವನ್ನು ಮಾಡಿ ಅದರೊಳಗೆ ಗರಗರ ತಿರಗುವ ಎರಡು ಕಡ್ಡಿಗಳನ್ನು ಇರಿಸಿ ೧ರಿಂದ ೧೨ರವರೆಗೆ ಅಂಕಿಗಳನ್ನು ಬರೆದನು. ದೇವಾಲಯದ ಬಾಗಿಲಲ್ಲಿ ಕುಳಿತು ಅಲ್ಲಿ ಬರುವ ಹುಡುಗರ ಮುಂದೆ ಅವನು ತಾನೇ ಸಿದ್ಧಪಡಿಸಿದ ಗಡಿಯಾರವನ್ನು ಇಟ್ಟು ಹೇಳಿದನು. 'ನೀವು ಈ ಗಡಿಯಾರದ ಮುಳ್ಳನ್ನು ತಿರುಗಿಸಿದರೆ ಆ ಮುಳ್ಳು ಯಾವ ಅಂಕಿಯ ಮೇಲೆ ನಿಲ್ಲುತ್ತದೆಯೋ ಅಷ್ಟು ಪೆಪ್ಪರ್‌ಮೆಂಟುಗಳನ್ನು ಕೊಡುತ್ತೇನೆ'. ಅದಕ್ಕೆ ನಿಗದಿಪಡಿಸಿದ ಹಣ ಒಂದುಕಾಸು. ಆ ಕಾಲದಲ್ಲಿ ೧೨ ಪೆಪ್ಪರ್‌ಮೆಂಟಿಗೆ ಒಂದು ಕಾಸು. ಅಂದು ನಿಂಬೆಹುಳಿ ಪೆಪ್ಪರ್‌ಮೆಂಟನ್ನು ಮಕ್ಕಳು ತುಂಬಾ ಇಷ್ಟಪಡುತ್ತಿದ್ದರು. ಹೀಗೆ ಆಟದ ಮೂಲಕ ಹಣದ ಸಂಪಾದನೆ ಮಾಡಿ ಆ ಹಣದಲ್ಲಿ ಪೊರಕೆ, ಬ್ರಷ್, ಸೋಪು ಮೊದಲಾದವು ಗಳನ್ನು ತಂದು ಒಂದು ಭಾನುವಾರ ತನ್ನ ಗೆಳೆಯರನ್ನೆಲ್ಲಾ ಸೇರಿಸಿ ಬಾವಿಯಿಂದ ನೀರುತಂದು ದೇವಾಲಯದ ಆವರಣ ದಲ್ಲಿದ್ದ ಕಲ್ಲುಮುಳ್ಳುಗಳನ್ನು ತೆಗೆದು ಒಳಗೆ ಮತ್ತು ಹೊರಗೆ ಹಾಸಿದ್ದ ಕಲ್ಲುಗಳನ್ನೆಲ್ಲಾ ಬೆಳ್ಳಗೆ ತೊಳೆದು ಶುಚಿಗೊಳಿಸಿದರು. ಮರುದಿನ ಬಂದು ನೋಡಿದ ಪುಜಾರಿ ಮೆಚ್ಚುಗೆಯಿಂದ ವಿಷಯ ತಿಳಿದು ಜೈಮುನಿಯನ್ನು ಕಂಡು ನಿನ್ನ ವೃತ್ತಿಪರತೆ ಹಾಗೂ ಸೇವಾಪ್ರವೃತ್ತಿಯನ್ನು ಮೆಚ್ಚಿದೆ. 'ನೀನೊಬ್ಬ ದೈವಾಂಶ ಪುರುಷ, ಎಲ್ಲರಿಗೂ ಈ ಬುದ್ದಿ ಬರುವುದಿಲ್ಲವೆಂದು ಹೇಳಿ, ಸೋಮವಾರ ಒಳ್ಳೆಯ ಊಟ ಹಾಕಿಸಿ ಸಂತೋಷಪಡಿಸಿ ದರು.

## ಭಜನಾಸಕ್ತಿ ಮತ್ತು ಸಾಹಿತ್ಯಪ್ರೇಮ

ಸ್ವಾತಂತ್ರ್ಯ ಪೂರ್ವದಲ್ಲಿ ಕೀರ್ತನಕಾರರಿಂದ ದೇವಸ್ಥಾನ ಗಳಲ್ಲಿ ಹರಿಕಥೆ ಮಾಡಿಸುತ್ತಿದ್ದರು. ಸಂಗೀತಗಾರರಿಂದ ಸಂಗೀತಕಚೇರಿಯೂ ನಡೆಯುತ್ತಿದ್ದವು. ಹಾಗೆ ಪ್ರತಿವಾರವೂ ಸೋಮವಾರ, ಗುರುವಾರ ಮತ್ತು ಶನಿವಾರದಂದು ಭಜನೆಗಳೂ ನಡೆಯುತ್ತಿದ್ದವು. ಇಂತಹ ಭಜನೆಮಂದಿರಗಳಿಗೆ ತಪ್ಪದೆಹೋಗುತ್ತಿದ್ದ ಬಾಲಕ ಜೈಮುನಿಗೆ ಅವರ ತಾಯಿ ತಮಗೆ ತಿಳಿದಿದ್ದ ಶಿವಾಜಿ, ಸಮರ್ಥ ರಾಮದಾಸ್, ಸಂತ ತುಕಾರಾಂ ಏಕನಾಥ ಮೊದಲಾದ ಸಾಧು ಸಂತರ ಜೀವನ ಕಥೆಗಳನ್ನು ಹೇಳುತ್ತಿದ್ದರು. ಈ ಎಲ್ಲವನ್ನು ಕೇಳುತ್ತಾ ಭಕ್ತಿ ಶ್ರದ್ಧೆಗಳು ಅವನಲ್ಲಿ ಬೆಳೆದಿತ್ತು. ದೇವಸ್ಥಾನವನ್ನು ಶುಚಿಗೊಳಿಸಿದ ಸಂತೋಷಕ್ಕೆ ಊಟ ಹಾಕಿಸುವ ಸೋಮವಾರದ ದಿನ ಭಜನೆ ಮಂಡಳಿಯೊಂದನ್ನು ಕರೆಸಿ ಭಜನೆ ಕಾರ್ಯಕ್ರಮವನ್ನು ಏರ್ಪಡಿಸಿದಾಗ ಅವರೊಂದಿಗೆ ದನಿ ಸೇರಿಸಿ ಶೃತಿಬದ್ಧವಾಗಿ ಶ್ರದ್ಧಾಭಕ್ತಿ ಮಾಧುರ್ಯದಿಂದ ಹಾಡುತ್ತಿದ್ದ ಜೈಮುನಿಯನ್ನು ಗಮನಿಸಿ 'ಮಗೂ ನೀನೇ ಒಂದು ಹಾಡನ್ನು ಹಾಡುತ್ತೀಯಾ?' ಎಂದರು. ಆಗ ತಾನು ಕಲಿತ್ತಿದ್ದ–

**"ಓಂ ನಮಶ್ಶಿವಾಯ ಎಂಬುವ ಮಂತ್ರ**
**ವೈರಿಯ ಹರಿಸುವುದು ಈ ಮಂತ್ರ**
**ಸನ್ಮತಿ ಗೈಯುವ ಭಿನ್ನ 'ನ' ಕಾರದ ಮಂತ್ರ**

ಉನ್ಮನ ತೋರುವುದೀ ಮಂತ್ರ–ಇತ್ಯಾದಿಯಾಗಿ ಹಾಡಿದ ಹಾಡನ್ನು ಕೇಳಿ ಎಲ್ಲರೂ ಸಂತೋಷದಿಂದ ಚಪ್ಪಾಳೆ ತಟ್ಟಿ ಮೆಚ್ಚುಗೆ ಸೂಚಿಸಿ – ನೀನು ನಮ್ಮ ಭಜನಾಮಂಡಳಿಗೆ ಸೇರಿಕೋ, ಪ್ರತಿವಾರ ನಾವು ನಡೆಸುವ ಭಜನೆಗಳಲ್ಲಿ ನೀನು ಪಾಲ್ಗೊಂಡು ಹಾಡಬಹುದು ಎಂದು ಕರೆದರು. ಭಜನೆಮಂದಿರ ಗಳಲ್ಲಿ ರಚಿಸಿ ಹಾಡಲು ಪ್ರಾರಂಭಿಸಿದ. ಇವನು ಶೃತಿಬದ್ಧವಾಗಿ ಸುಶ್ರಾವ್ಯವಾಗಿ ಹಾಡುವುದನ್ನು ಕಂಡು ಹಾರ್ಮೋನಿಯಂ

ಮತ್ತು ತಬಲ ನುಡಿಸುತ್ತಿದ್ದವರು ಜೈಮುನಿಗೆ ಈ ವಾದ್ಯಗಳನ್ನು ನುಡಿಸುವುದನ್ನು ಸಹ ಕಲಿಸಿದರು. ಚೆನ್ನಾಗಿ ನುಡಿಸುವುದನ್ನು ಕಲಿತ ಮೇಲೆ ಜೈಮುನ ಭಜನಾಮಂಡಳಿಗೆ ವಾದ್ಯಗಳನ್ನು ನುಡಿಸುತ್ತಿದ್ದುದಲ್ಲದೆ ನಾಟಕ ಮತ್ತಿತರ ಕಾರ್ಯಕ್ರಮಗಳಲ್ಲಿ ವಾದ್ಯಗಾರನಾಗಿ ಭಾಗವಹಿಸು ತ್ತಿದ್ದ. ಗೆಳೆಯರ ಜೊತೆ ಸೇರಿ ಕೆಂಪಾಬುಧಿ ಕೆರೆಯಲ್ಲಿ ಈಜುವುದನ್ನು ಕಲಿತ.

ಆಟಪಾಠಗಳಲ್ಲಿ ಚುರುಕು ವಿದ್ಯಾರ್ಥಿಯಾಗಿದ್ದ ಜೈಮುನಿಯು ಅನಿವಾರ್ಯವಾಗಿ ಶಾಲೆಯನ್ನು ಬಿಡಬೇಕಾಗಿ ಬಂತು. ಮನೆಯಲ್ಲಿ ಸದಾ ನೆಂಟರಿಷ್ಟರಿಂದ ತುಂಬಿರುತ್ತಿದ್ದ ದೊಡ್ಡ ಕುಟುಂಬದ ಖರ್ಚುವೆಚ್ಚಗಳನ್ನು, ತಂದೆಯ ಮರಗೆಲಸದಿಂದ ಸಂಪಾದಿಸುತ್ತಿದ್ದ ಹಣ ಯಾವ ಮೂಲೆಗೂ ಸಾಕಾಗುತ್ತಿರಲಿಲ್ಲ. ಹಾಗಾಗಿ ಓದುವುದನ್ನು ಬಿಟ್ಟು ತಂದೆಯ ಜೊತೆ ದುಡಿಯುವತ್ತ ಜೈಮುನಿ ಕೈ ಜೋಡಿಸಬೇಕಾಯಿತು. ತಂದೆಯ ಜೊತೆಯಲ್ಲಿ ಮರಗೆಲಸದ ಕೆಲಸವನ್ನು ಚೆನ್ನಾಗಿ ಕಲಿತು ಸ್ವತಂತ್ರವಾಗಿ ಕೆಲಸ ಮಾಡುವಷ್ಟು ನಿಪುಣನಾದನು.

ತಂದೆ ರಾಣೋಜಿರಾವ್ ಜಾದವ್ ಅವರು ವಯಸ್ಸಿಗೆ ಬಂದ ಮಗ ಜೈಮುನಿಗೆ ಸದ್ವಂಶ ಹಾಗೂ ವಿದ್ಯಾವಂತರು ಆಗಿದ್ದ ಈಶ್ವರರಾವ್ ಸೂರ್ಯವಂಶೆ ಮತ್ತು ರುಕುಮಾಬಾಯಿ ಅವರ ಮಗಳನ್ನು ತಂದು ವಿವಾಹಮಾಡಿದರು. ಮುಂದೆ ಕೆಲವು ದಿನಗಳಲ್ಲಿ ತಂದೆ ರಾಣೋಜಿರಾಯರು ೧೯೨೨ರಂದು ನಿಧನರಾದರು. ಹಾಗಾಗಿ ಸಂಸಾರದ ಪೂರ್ಣ ಜವಾಬ್ದಾರಿ ೨೨ ವಯಸ್ಸಿನ ಜೈಮುನಿಯ ಮೇಲೆ ಬಿತ್ತು.

ಹೀಗಿರುವಾಗ ಬಂಧುಗಳಾಗಿದ್ದ ಧರ್ಮಪ್ರಕಾಶ ಎಸ್. ಸಜ್ಜನರಾವ್ ಅವರು ವಿಶ್ವೇಶ್ವರಪುರದಲ್ಲಿ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನವನ್ನು ಕಟ್ಟಿಸುತ್ತಿದ್ದರು. ಆಗ ಅವರ ಮನೆಯಲ್ಲಿ ಎಲ್ಲಾ ಗೃಹಕಾರ್ಯಗಳಲ್ಲಿ ಸಹಕರಿಸಲು ಜೈಮುನಿರಾಯರು ನಿಯೋಜಿತರಾದರು. ಒಂದು ದಿನ ಸಜ್ಜನರಾಯರ ಪತ್ನಿ ತಾವು ಸ್ನಾನಮಾಡುವಾಗ ಕೊರಳಿನಲ್ಲಿದ್ದ ಆಭರಣವನ್ನು ಪ್ರತಿದಿನದಂತೆ ತೆಗೆದಿಟ್ಟು ಸ್ನಾನ ಮಾಡಿ ಬಂದು ಒಡವೆ ಕಾಣದೆ, ಜೈಮುನಿಯನ್ನು ಅನುಮಾನದಿಂದ ನೋಡಿ ಒಡವೆ ಇಲ್ಲಿಟ್ಟಿದ್ದೆ ನೋಡಿದೆಯಾ? ಎಂದು ಕೇಳಿದರು.'ಇಲ್ಲಾ ನಾ ನೋಡಲಿಲ್ಲ' ಎನ್ನಲು, ಅವರು ಮನೆಯ ಎಲ್ಲಾ ಕಡೆಯಲ್ಲಿ ಓಡಾಡುವವನು ನೀನೊಬ್ಬನೆ, ನೀನಲ್ಲದೆ ಕಳ್ಳತನ ಮಾಡಲು ಬೇರೆ ಯಾರು ಇಲ್ಲಿಗೆ ಬರುವುದಿಲ್ಲ. ನೀನು ತೆಗೆದು ಕೊಂಡಿದ್ದರೆ ಒಡವೆಯನ್ನು ಕೊಟ್ಟು ಬಿಡು ಎಂದು ಕಳ್ಳತನದ ಆಪಾದನೆ ಮಾಡಿದರು. ನನ್ನ ಸತ್ಯಸಂಧತೆಯ ಬಗ್ಗೆ ಅನುಮಾನ ಪಟ್ಟರಲ್ಲ ಎಂಬ ನೋವಿನಿಂದ ಕೆಲಸ ಮುಗಿಸಿ ಮನೆಗೆ ಬಂದು ತಾಯಿಗೆ ಎಲ್ಲಾ ವಿವರಗಳನ್ನು ಹೇಳಿ ಅತ್ತುಕೊಂಡು, ಇನ್ನು ಮುಂದೆ ಅವರ ಮನೆ ಕೆಲಸಕ್ಕೆ ಹೋಗುವುದಿಲ್ಲವೆಂದು ಹೇಳಿ ಬೇರೆ ಕಡೆ ಕೆಲಸ ಹುಡುಕಲು ಪ್ರಯತ್ನಿಸುತ್ತೇನೆ ಎಂದ.



ಇದಾದ ನಾಲ್ಕೈದು ದಿನಗಳ ನಂತರ ಅಂದು ಒಡವೆ ಇಟ್ಟಿದ್ದ ಬಟ್ಟಲ ಮೇಲೆ ದೇವರ ಪ್ರಸಾದಕ್ಕೆಂದು ತರಿಸಿದ್ದ ಕಲ್ಲುಸಕ್ಕರೆ ಪೊಟ್ಟಣವಿಟ್ಟು ಮರೆತಿದ್ದರು. ಮತ್ತೊಂದು ದಿನ ಕಲ್ಲುಸಕ್ಕರೆ ಪೊಟ್ಟಣ ತೆಗೆದಾಗ ತನ್ನ ಒಡವೆ ಅಲ್ಲಿಯೇ ಇರುವುದನ್ನು ನೋಡಿ ಆಕೆ ಜೈಮುನಿಯನ್ನು ಆಪಾದಿತನ್ನಾಗಿ ಮಾಡಿದ್ದಕ್ಕೆ ಬೇಜಾರಿನಿಂದ ಪತಿಗೆ ಹೇಳಿದರು. ನಂತರ ದಂಪತಿಗಳು ಜೈಮುನಿರಾಯರ ಮನೆಗೆ ಬಂದು ಜೈಮುನಿ ಯನ್ನು ವಿಚಾರಿಸಲಾಗಿ ಅವನ ತಾಯಿ ಕೆಲಸ ಹುಡುಕಲು ಹೋಗಿರುವುದಾಗಿ ತಿಳಿಸಿದರು. ಆಗ ಸತ್ಯ ಘಟನೆ ಹೇಳಿ ತಮ್ಮಿಂದಾದ ತಪ್ಪಿಗೆ ಕ್ಷಮೆ ಕೇಳಿ ಮತ್ತೆ ತಮ್ಮ ಮನೆಗೆ ಕೆಲಸಕ್ಕೆ ಬರಲು ತಿಳಿಸಿದರು. ಜೈಮುನಿಯ ತಾಯಿ ತನ್ನ ಮಗ ಅಪರಾಧಿ ಅಲ್ಲವೆಂದು ಸಾಬೀತಾಯಿತಲ್ಲ. ಪುನಃ ನಿಮ್ಮ ಮನೆಯಲ್ಲಿ ಕೆಲಸ ಮಾಡಲು ಇಷ್ಟಪಡುವುದಿಲ್ಲವೆಂದು ಹೇಳಿ ಕಳಿಸುತ್ತಾರೆ.

ಒಂದು ದಿನ ಸಾಯಂಕಾಲ ಸಜ್ಜನರಾಯರು ಜೈಮುನಿಯ ಮನೆಗೆ ಬಂದು ತುಳಜಾಬಾಯಿಯನ್ನು ಜೈಮುನಿ ಎಲ್ಲಿ ಕೆಲಸ ಮಾಡುತ್ತಿದ್ದಾನೆಂದು ವಿಚಾರಿಸುತ್ತಾರೆ. ಈಗ ಜೈಮುನಿಯು ಮನೆಯಲ್ಲಿಯೆ ಬೆಂಚುಗಳನ್ನು ಮಾಡಿ ಮಾರಾಟ ಮಾಡುವ ಉದ್ಯೋಗ ಪ್ರಾರಂಭಿಸಿದ್ದಾನೆ ಅವನು ಎಲ್ಲೂ ಕೆಲಸಕ್ಕೆ ಹೋಗುತ್ತಿಲ್ಲ ಎಂದರು. ಆಗ ಒಳಗಿನಿಂದ ಬಂದ ಜೈಮುನಿಯನ್ನು ಕುರಿತು ಸಜ್ಜನರಾಯರು 'ಮರಗೆಲಸವನ್ನು ನೀನು ನಿನ್ನ ತಂದೆಯವರ ಹಾಗೆ ತುಂಬಾ ಸೊಗಸಾಗಿ ಮಾಡುತ್ತಿಯೆ. ನಾನು ವಿಶ್ವೇಶ್ವರಪುರದಲ್ಲಿ ಕಟ್ಟಿಸುತ್ತಿರುವ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನದ ಬಾಗಿಲು ಕಿಟಕಿ ಮುಂತಾದ ಕೆಲಸಗಳನ್ನು ನಮ್ಮವನಾದ ನಿನ್ನಿಂದಲೇ ಮಾಡಿಸಬೇಕೆಂದು ನಿನ್ನನ್ನು ಕರೆಯಲು ಬಂದಿದ್ದೇನೆ. ಅದಕ್ಕೆ ಬೇಕಾದ ಮರದದಿಮ್ಮಿಗಳನ್ನು ಹುಣಸೂರಿಗೆ ಹೋಗಿ

ಖರೀದಿ ಮಾಡಿಕೊಂಡು ಬಂದು ದೇವಸ್ಥಾನದ ಕೆಲಸವನ್ನು ಪ್ರಾರಂಭಿಸಿ ಬಿಡು' ಎಂದು ಹೇಳಿ ಸಂಬಂಧಿಸಿದ ಮರಗೆಲಸದ ನಕ್ಷೆ ಮತ್ತು ಇತರ ವಿವರಗಳನ್ನೊಳಗೊಂಡ ಪುಸ್ತಕವನ್ನು ಅವನ ಕೈಗೆ ಕೊಟ್ಟರು. ಕೆಲಸ ಒಪ್ಪಿಕೊಳ್ಳಲು ಹಿಂದೆ ಮುಂದೆ ನೋಡುತ್ತಿದ್ದ ಮಗನಿಗೆ ದೇವಸ್ಥಾನದ ಕೆಲಸವಾದ್ದರಿಂದ ಬೇಡವೆನ್ನಬಾರದು ಒಪ್ಪಿಕೊಳ್ಳಲು ತಾಯಿ ಹೇಳಿದಾಗ ಜೈಮುನಿಯು ನಾಳೆಯಿಂದ ದೇವಸ್ಥಾನದ ಕೆಲಸಕ್ಕೆ ಬರುತ್ತೇನೆಂದು ಹೇಳಿ ಕಳಿಸಿದನು. ಅದರಂತೆ ದೇವಸ್ಥಾನದ ಬಾಗಿಲು ಕಿಟಕಿಗಳ ಮರಗೆಲಸವನ್ನಷ್ಟೇ ಅಲ್ಲದೆ ಗೋಪುರದ ಕೆಲಸ ಮತ್ತು ಅದರ ಮೇಲೆ ಒಂಬತ್ತು ಚಿನ್ನದ ಕಳಶಗಳ ಸ್ಥಾಪನೆಯ ಜೊತೆ ಇಂದಿಗೂ ಸುಬ್ರಹ್ಮಣ್ಯ ಷಷ್ಠಿಯ ದಿನ ಬೆಂಗಳೂರಿನ ಜನರನ್ನು ಆಕರ್ಷಿಸುತ್ತಿರುವ ಬೆಳ್ಳಿರಥವನ್ನು ನಿರ್ಮಿಸುವ ಕೆಲಸದಲ್ಲಿ ಮುಖ್ಯ ಪಾತ್ರ ವಹಿಸಿದ್ದನು.

### ಕೈಗಾರಿಕೋದ್ಯಮಿ ಮತ್ತು ಸಂಶೋಧಕ

ಚಿಕ್ಕಂದಿನಿಂದಲೇ ಭಜನೆಗಳಲ್ಲಿ ಹಾಡುವ ಆಸಕ್ತಿ ಇದ್ದ ಜೈಮುನಿಗೆ ಹಾರ್ಮೋನಿಯಂ ಬಗ್ಗೆ ವಿಶೇಷವಾದ ಆಕರ್ಷಣೆ ಇತ್ತು. ದೇವಸ್ಥಾನದ ಕೆಲಸ ಮುಗಿದ ಮೇಲೆ ಜೈಮುನಿರಾಯರು ಸ್ವಂತ ಉದ್ಯೋಗ ಮಾಡಲು ನಿಶ್ಚಯಿಸಿದರು. ತಾಯಿ ತುಳಜಾ ಬಾಯಿಗೂ ಮಗ ಸ್ವತಂತ್ರವಾಗಿ ಉದ್ಯೋಗ ಮಾಡಬೇಕೆಂಬ ಬಯಕೆ ಇತ್ತು. ಅವರು ತಮ್ಮ ಬಿಡುವಿನ ವೇಳೆಯಲ್ಲಿ ರೇಷ್ಮೆದಾರ ತೆಗೆದು ಮಗನ ಕೈಲಿ ಮಾರವಾಡಿಗಳಿಗೆ ಒಂದು ಕೇಜಿಗೆ ೨೦ರೂಗಳಂತೆ ಮಾರಿಸುತ್ತಿದ್ದರು. ಹಾಗೆ ಸಂಗ್ರಹಿಸಿದ ಹಣವನ್ನು ಒಗ್ಗೂಡಿಸಿಕೊಂಡು ಸುಪ್ರಸಿದ್ಧ ವ್ಯಾಪಾರಿಗಳಾದ ಎಂ. ರಾಮಚಂದ್ರರಾವ್ ಸಿಂಧ್ಯ ಅವರ ನೆರವಿನಿಂದ ಅರಳೇ ಪೇಟೆಯಲ್ಲಿ ಜೈಮುನಿರಾಯರು 'ಶ್ರೀಶಿವಾಜಿ ಹಾರ್ಮೋನಿಯಂ ವರ್ಕ್ಸ್' ಎಂಬ ಅಂಗಡಿಯನ್ನು ಪ್ರಾರಂಭಿಸಿ ಅಲ್ಲಿ ಹಾರ್ಮೋನಿಯಂ ತಯಾರಿಕೆ ಮತ್ತು ಫರ್ನಿಚರ್ ತಯಾರಿಕೆ ಕೆಲಸಗಳ ವ್ಯಾಪಾರ ಶುರು ಮಾಡಿದರು.

ಜೈಮುನಿರಾಯರ ಕಾರ್ಯಕ್ಷೇತ್ರ ಸಾಕಷ್ಟು ವಿಶಾಲ ವಾಯಿತು. ತಮ್ಮ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ರೂಪಿಸಲು ಸ್ವಂತ ನೆಲೆ ಬೇಕಾಯಿತು. ಆಗ ಅಗ್ರಹಾರ ದಾಸರಹಳ್ಳಿಯಲ್ಲಿ ಬಾಡಿಗೆ ಮನೆ ಮಾಡಿ ತಮ್ಮ ಕಾರ್ಯ ಚಟುವಟಿಕೆ ಮುಂದುವರಿಸಿದರು. ಮುಂದೆ ತಾವು ವಾಸ ಮಾಡುತ್ತಿದ್ದ ಅದೇ ಮನೆಯನ್ನು ಖರೀದಿಗೆ ಕೊಂಡು ಮನೆಗೆ ಹತ್ತಿರವಿದ್ದ ಖಾಲಿಜಾಗವನ್ನು ಬಾಡಿಗೆಗೆ ಪಡೆದು ಅಲ್ಲಿ ಹೆಂಚು ಮತ್ತು ಇಟ್ಟಿಗೆ ತಯಾರಿಸುವ ಪುಟ್ಟ ಕಾರ್ಖಾನೆ ಪ್ರಾರಂಭಿಸಿದರು. ತಯಾರಿಕೆ ಹೆಚ್ಚಿದಂತೆಲ್ಲ ಕೆಲಸಗಾರರು ಹೆಚ್ಚಾದರು. ಬಡವರೇ ಅಧಿಕವಾಗಿದ್ದ ಕೆಲಸಗಾರರಿಗೆ ಆಶ್ರಯ ಮತ್ತು ಪ್ರೋತ್ಸಾಹ ನೀಡುತ್ತಾ ಅವರ ಮಕ್ಕಳಿಗೂ ಹಾಗೂ ತಮ್ಮ ಮಕ್ಕಳಿಗೂ ತರಬೇತಿ ನೀಡಿ ಶಿಕ್ಷಣಕ್ಕೂ ಮಾರ್ಗದರ್ಶಕ ರಾದರು.

ಜೈಮುನಿಯವರು ತಮ್ಮ ಕಾರ್ಖಾನೆಯಲ್ಲಿ ಹೆಂಚು, ಇಟ್ಟಿಗೆ ತಯಾರಿಕೆಗೆ ಪ್ರಾಮುಖ್ಯತೆ ಕೊಟ್ಟಂತೆ ಇತರ ಕರಕುಶಲ ವಸ್ತುಗಳ ತಯಾರಿಕೆಗಳಿಗೂ ಪ್ರಾಮುಖ್ಯ ಕೊಡುತ್ತಿದ್ದರು. ನೀರು ತುಂಬುವ ಮಣ್ಣಿನ ಹೂಜಿಗೆ ನಲ್ಲಿಯನ್ನು ಜೋಡಿಸುತ್ತಿದ್ದರು. ಕಂಚಿನ ಗಂಟೆಯಂತೆ ಶಬ್ದ ಬರುವ ಮಣ್ಣಿನಗಂಟೆ ಹಾಗೂ ಇತರ ಪ್ರಮುಖ ಗೃಹೋಪಯೋಗಿ ಸುಂದರ ವಸ್ತುಗಳನ್ನು ತಯಾರಿಸಿ ಮಾರಾಟಕ್ಕಿಡುತ್ತಿದ್ದರು. ಈ ಎಲ್ಲಾ ವಸ್ತುಗಳನ್ನು ಮೈಸೂರಿನಲ್ಲಿ ನಡೆಯುತ್ತಿದ್ದ ವಸ್ತುಪ್ರದರ್ಶನದಲ್ಲಿ ಗ್ರಾಹಕರ ಕಣ್ಮನ ಸೆಳೆಯುವಂತೆ ಜೋಡಿಸಿಡುತ್ತಿದ್ದರು. ಅಲ್ಲದೆ ಇವರ ಮಳಿಗೆ ಪ್ರವೇಶದ್ವಾರದ ಬಳಿ ಅವು ಇದ್ದು ಅಲ್ಲಿಗೆ ಬರುವ ಎಲ್ಲರ ಗಮನವನ್ನು ಸೆಳೆಯುತ್ತಿದ್ದವು. ಹಾಗೆ ಹೆಚ್ಚಿನ ಮಾರಾಟವು ಆಗುತ್ತಿತ್ತು. ಅರಮನೆಯಿಂದ ಮಹಾರಾಣಿಯವರು ಸಹ ಭೇಟಿಕೊಡುತ್ತಿದ್ದರು. ಹಾಗೆ ಬಂದಾಗ ಅಲ್ಲಿ ತಮಗೆ ಮೆಚ್ಚಿಕೆಯಾದ ಸುಂದರ ವಸ್ತುಗಳನ್ನು ಕೊಂಡು ಅರಮನೆಯಲ್ಲಿ ಅಲಂಕರಿಸುತ್ತಿದ್ದರು. ಇಂದಿಗೂ ಅವು ಜಗನ್ಮೋಹನ ಅರಮನೆಯಲಿರುವುದನ್ನು ನೋಡಬಹುದು. ಇವರಲ್ಲದೆ ಮೈಸೂರಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರು ಮಳಿಗೆಗೆ ಬಂದು ಅಂದವಾಗಿ ಜೋಡಿಸಿದ್ದ ವಸ್ತುಗಳನ್ನ ಒಂದೊಂದಾಗಿ ನೋಡುತ್ತಾ ನೀರು ತುಂಬುವ ಮಣ್ಣಿನ ಹೂಜಿಗೆ ನಲ್ಲಿ ಜೋಡಿಸಿರುವುದನ್ನು ಮತ್ತು ಮಣ್ಣಿನ ಗಂಟೆಯನ್ನು ನೋಡಿ, ಕೈಲಿ ಹಿಡಿದು ಆಡಿಸಿದಾಗ ಕಂಚಿನ ಗಂಟೆಯ ನಾದವನ್ನು ಕೇಳಿ ಕುತೂಹಲ ದಿಂದ ಈ ಮಣ್ಣಿನ ಗಂಟೆಯಲ್ಲಿ ಕಂಚಿನ ನಾದ ಬರಲು ಏನು ಮಾಡಿದ್ದೀರಿ? ಎಂದು ಕೇಳಿದಾಗ ಜೈಮುನಿಯವರು 'ಆವಿ ಮಣ್ಣನ್ನು ಸುಡುವಾಗ ಅದರೊಳಗೆ ಉಕ್ಕನ್ನು ಸೇರಿಸುತ್ತೇವೆ. ಅದರಿಂದ ಈ ನಾದ ಬರುತ್ತದೆ' ಎಂದರು. ಇವುಗಳನ್ನು ಎಲ್ಲಿ ತಯಾರಿಸಲಾಗುತ್ತದೆ? ಎಂದಾಗ 'ನಾವೇ ತಯಾರು ಮಾಡುತ್ತೇವೆ. ಬೆಂಗಳೂರಿನ ದಾಸರಹಳ್ಳಿಯಲ್ಲಿ ಒಂದು ಚಿಕ್ಕ ಬಾಡಿಗೆ ಜಾಗದಲ್ಲಿ ಎತ್ತಿನ ಗಾಣದಿಂದ ಮಣ್ಣನ್ನು ರುಬ್ಬಿ ಹದಮಾಡಿ ಈ ಎಲ್ಲಾ ವಸ್ತುಗಳನ್ನು ತಯಾರಿಸುತ್ತೇವೆ ಎಂದಾಗ ದಿವಾನರು 'ಶಭಾಸ್' ಎಂದು ಮೆಚ್ಚಿಗೆ ಸೂಚಿಸಿ, ಬೆಂಗಳೂರಿಗೆ ಬಂದು ನನ್ನನ್ನು ಭೇಟಿ ಮಾಡುವಂತೆ ತಿಳಿಸಿ ಮುಂದಕ್ಕೆ ಹೋದರು. ಇದು ಮೈಸೂರು ದಿವಾನ್ ಮಿರ್ಜಾಸಾಹೇಬರ ಮೊದಲ ಭೇಟಿ.

ಜೈಮುನಿಯುವರು ವಸ್ತು ಪ್ರದರ್ಶನದಿಂದ ಬೆಂಗಳೂರಿಗೆ ಬಂದ ಮೇಲೆ ದಿವಾನರು ಹೇಳಿದ್ದಂತೆ ಒಂದು

ದಿನ ಮಗಳು ಮೀರಾ ಜೊತೆ ಮಿರ್ಜಾ ಸಾಹೇಬರನ್ನು ನೋಡಲು ಹೊರಟರು. ದೊಡ್ಡವರನ್ನು ನೋಡಲು ಹೋಗುವಾಗ ಬರಿಗೈಲಿ ಹೋಗಬಾರದೆಂಬುವ ಸಂಪ್ರದಾಯ ದಂತೆ ಬಣ್ಣದ ಹೂಜಿಗಳನ್ನು ಮತ್ತು ಕೆಲವು ಸುಂದರ ವಸ್ತುಗಳನ್ನು ತೆಗೆದುಕೊಂಡು ಮಿರ್ಜಾ ಅವರ ಮನೆಗೆ ಹೋದರು. ಮಿರ್ಜಾ ಅವರು ಜೈಮುನಿಯವರನ್ನು ಒಳಗೆ ಕರೆದು ಕೂಡಿಸಿ, ಕಾರ್ಖಾನೆಗೆ ಸಂಬಂಧಿಸಿದ ವಿವರಗಳನ್ನು ಪಡೆದು ಸೋಮವಾರ ತಾವು ಖುದ್ದಾಗಿ ಬಂದು ಪರಿಶೀಲಿಸಿ ಸರ್ಕಾರದಿಂದ ಸಾಲ ಮಂಜೂರು ಮಾಡುವುದಾಗಿ ಅಭಯವನ್ನಿತ್ತು ಉಪಚರಿಸಿ ಕಳಿಸಿದರು. ಮಿರ್ಜಾ ಅವರು ಮಾತು ಕೊಟ್ಟಿದ್ದಂತೆ ದಾಸರಹಳ್ಳಿಗೆ ಜೈಮುನಿರಾಯರನ್ನು ನೋಡಲು ಸೋಮವಾರ ಸರಿಯಾದ ಸಮಯಕ್ಕೆ ಬಂದ ಅವರನ್ನು ಉಪಚರಿಸಿ ಕಾರ್ಖಾನೆ ತೋರಿಸಲು ಕರೆದು ಕೊಂಡು ಹೋದರು. ಹೋಗುವಾಗ ದಾರಿಯಲ್ಲಿದ್ದ ದೊಡ್ಡ ಬಂಡೆಯನ್ನು ನೋಡಿ ಮಿರ್ಜಾ ಅವರು ಇದನ್ನು ಒಡೆಸಿ ಆ ಕಲ್ಲಿನಿಂದ ಏನಾದರೂ ಉಪಯುಕ್ತ ಕೆಲಸ ಮಾಡಲು ಸಲಹೆ ಇತ್ತರು. ಹಾಗು ಜೈಮುನಿಯವರ ಕಾರ್ಖಾನೆ ಇದ್ದ ಜಾಗವನ್ನು ನೋಡಿ ಇದು ಜೋಡಿಗ್ರಾಮವೆಂದು ಹೇಳತ್ತಿದ್ದೀರ, ಈಗ ಬರುತ್ತಿರುವ ಕಾನೂನಿನ ಪ್ರಕಾರ ಜೋಡಿಗ್ರಾಮಗಳನ್ನು ರದ್ದು ಪಡಿಸಲಾಗುತ್ತದೆ. ನೀವು ಈ ಜಾಗವನ್ನು ಖರೀದಿಸಿ. ನಾವು ನಿಮಗೆ ರಿಜರ್ವ್ ಬ್ಯಾಂಕಿನಿಂದ ಸಾಲ ಕೊಡಿಸುತ್ತೇವೆ ಎಂದರು.

ಎಲ್ಲವನ್ನು ಪರಿಶೀಲಿಸಿ ಹೊರಟ ಮಿರ್ಜಾ ಅವರನ್ನು ಅಲ್ಲಿಯೆ ಊಟಕ್ಕೆ ನಿಲ್ಲಿಸಿಕೊಂಡರು. ಆ ಊರಿನ (ದಾಸರಹಳ್ಳಿ) ಪಟೇಲರು, ಶಾನುಭೋಗರು, ಗೌಡ ಹಾಗೂ ಅಲ್ಲಿನ ಪ್ರಮುಖ ಹಿರಿಯರು ಸೇರಿ ಊಟ ಮಾಡಿದರು. ಊಟ ಮಾಡುತ್ತಿರು ವಾಗ ಮಿರ್ಜಾ ಅವರು ಶಾನುಭೋಗರಿಗೆ ಜೋಡಿದಾರರಿಂದ ಖಾಲಿ ಜಾಗವನ್ನು ಜೈಮುನಿ ಅವರ ಹೆಸರಿಗೆ ಮಾಡಿಸಿ ಕೊಡುವಂತೆ ಹೇಳಿದರು. ಮತ್ತು ಕಾನೂನಿನ ಬಗ್ಗೆಯೂ ತಿಳಿಸಿದರು. ಆ ಪ್ರದೇಶದಲ್ಲಿ ಒಂದು ಸ್ಕೂಲು ಕಟ್ಟಿಸಿ ಎಂದರು. ಆಗ ಪಟೇಲರು ಈಗಾಗಲೇ ಜೈಮುನಿಯವರು ಇಲ್ಲಿ ಕೂಲಿ ಮಠದಂತೆ ಸ್ಕೂಲು ಮಾಡಿ ಮನೆಮನೆಗೆ ಹೋಗಿ ಹುಡುಗ ರನ್ನು ಬರಮಾಡಿಕೊಂಡು ಶಾಲೆಯ ಮೇಷ್ಟ್ರಿಗೆ ತಮ್ಮ ಕೈಯಿಂದ ಸಂಬಳ ಕೊಡುತ್ತಿರುವುದಾಗಿ ತಿಳಿಸಿದರು. ಇದನ್ನು ಕೇಳಿ ಮತ್ತಷ್ಟು ಸಂತಸಗೊಂಡ ಮಿರ್ಜಾ ಅವರು ಜೈಮುನಿ ಅವರ ಮಕ್ಕಳು ಹಾಗೂ ಆ ಊರಿನ ಪ್ರಮುಖರಿಂದ ಬೀಳ್ಕೊಳ್ಳು ವಾಗ ಜೈಮುನಿಯವರಿಗೆ ಒಂದು ಚೀಟಿಯನ್ನು ಕೊಟ್ಟು ಇದನ್ನು ರಿಜರ್ವ್ ಬ್ಯಾಂಕ್‌ನಲ್ಲಿ ಕೊಟ್ಟರೆ ಅವರು ೫೦,೦೦೦/ ರೂಪಾಯಿಗಳ ಸಾಲ ಕೊಡುವುದಾಗಿ ಹೇಳಿ ಹೋದರು.

ಮಿರ್ಜಾ ಅವರು ನೀಡಿದ್ದ ಚೀಟಿಯನ್ನು ಬ್ಯಾಂಕಿನ ವರಿಗೆ ಕೊಟ್ಟಾಗ ಬ್ಯಾಂಕಿನವರಿಗೆ ನಂಬಿಕೆ ಬಾರದೆ ಸಾಲ ಮಂಜೂರು ಮಾಡಲಿಲ್ಲ. ಆಗ ವಿಧಿ ಇಲ್ಲದೆ ತಂದೆ ಮಗ ಇಬ್ಬರೂ ಮಿರ್ಜಾ ಅವರ ಮನೆಗೆ ಹೋಗಿ ವಿಷಯ ತಿಳಿಸಿ ದರು. ಮಿರ್ಜಾ ಅವರು, ತಂದೆ ಮಗನನ್ನು ಸತ್ಕರಿಸಿ 'ನಾವೇ ಹೋಗೋಣ' ಎಂದು ಹೇಳಿ ಅವರನ್ನು ತಮ್ಮ ಕಾರಿನಲ್ಲಿ ಕರೆದುಕೊಂಡು ಹೋಗಿ ನಿಂತು ರೂ. ೫೦,೦೦೦/- ಸಾಲ ಮಂಜೂರು ಮಾಡಿಸಿ ಬೆನ್ನುತಟ್ಟಿ ಹೋದರು. ಈ ಪ್ರಕರಣದಿಂದ ಅನೇಕರಿಗೆ ಜೈಮುನಿರಾಯರ ಬಗ್ಗೆ ಇದ್ದ ಗೌರವ ಅಭಿಮಾನಗಳು ಇನ್ನೂ ಹೆಚ್ಚಾದವು.

ಜನರಿಗೆಲ್ಲಾ ಪ್ರಯೋಜನ ವಾಗಲೆಂದು ಉಪಕಾರ ಬುದ್ಧಿಯಿಂದ ಬಹಳ ಅಗಲವಾದ ಬಾವಿಯನ್ನು ತೆಗೆಸಿದರು. ನೀರು ಬಂದ ತಕ್ಷಣ ಪೂಜೆ ಮಾಡಿ ಸಂತೋಷದಿಂದ ಎಲ್ಲರಗೂ ಸಿಹಿ ಹಂಚಿದರು. ದೊಡ್ಡಪ್ಪ ರಾಮಚಂದ್ರರಾಯರ ನೆರವಿನಿಂದ ಬಾವಿಗೆ ಕರೆಂಟ್ ಪಂಪ್ ಹಾಕಿಸಿದರು. ರಸ್ತೆಗಳಲ್ಲಿ ಸಿಮೆಂಟ್ ತೊಟ್ಟಿಗಳನ್ನು ಕಟ್ಟಿಸಿ ಅದರಲ್ಲಿ ನೀರು ಬಿಡುತ್ತಿದ್ದರು. ದನಕರುಗಳು ಬಂದು ನೀರು ಕುಡಿದು ಹೋಗುತ್ತಿದ್ದವು. ಊರಿನ ರೈತಾಪಿ ಜನರ ಅಗತ್ಯಗಳಿಗೆ ಬಾವಿ ನೀರನ್ನು ಬಳಸಿಕೊಳ್ಳಲು ಅವಕಾಶ ಮಾಡಿ ಕೊಟ್ಟು ಅವರ ಕಷ್ಟಗಳಿಗೆ ಸ್ಪಂದಿಸುತ್ತಿದ್ದರು.

ಅಲ್ಲಿದ್ದ ದೊಡ್ಡ ಕಲ್ಲುಬಂಡೆಯನ್ನು ಒಡೆದು ಬಹಳ ದಿನಗಳಿಂದ ಕನವರಿಸುತ್ತಿದ್ದ ಆಂಜನೇಯಸ್ವಾಮಿ ದೇವಸ್ಥಾನ ವನ್ನು ಕಟ್ಟಿಸಿದರು. ಅಲ್ಲಿ ದೊಡ್ಡದೊಂದು ಸಭಾಂಗಣ ನಿರ್ಮಾಣ ಮಾಡಿಸಿ ಅಲ್ಲಿ ಶಾಲೆ ಪ್ರಾರಂಭಿಸಿದರು. ಶಾಲೆಗೆ ಬರುವ ಪ್ರತಿಯೊಂದು ಮಗುವಿಗೂ ಬಿಳಿ ಷರಟು, ನೀಲಿ ನಿಕ್ಕರ್, ಬಿಳಿಯ ಟೋಪಿ, ಪುಸ್ತಕ, ಪೆನ್ಸಿಲ್‌ಗಳನ್ನು ಕೊಟ್ಟು ಮಕ್ಕಳು ಸಾಲೆಗೆ ಬರುವಂತೆ ಮಾಡಿದರು. ಶಾಲೆಗೆ ಬರುತ್ತಿದ್ದ ಮಕ್ಕಳಿಗೆ ತಾವೇ ರಚಿಸಿದ ಪ್ರಾರ್ಥನೆ, 'ಗುರುರ್ ಬ್ರಹ್ಮ ಗುರುರ್ ವಿಷ್ಣು' ಹೇಳಿಸಿ 'ಜನಗಣಮನ ಅಧಿನಾಯಕ ಜಯಹೇ' ಹೇಳಿಕೊಟ್ಟು ಮನೆಗೆ ಬರುತ್ತಿದ್ದರು. (ಈ ಶಾಲೆಗೆ ಗ್ರಾಮದ ಪಟೇಲ ಮತ್ತು ಭದ್ರಯ್ಯ ಎಂಬುವರು ಅವರ ತಂದೆ ಮುನಿತಿಮ್ಮಯ್ಯನವರ ಜ್ಞಾಪಕಾರ್ಥವಾಗಿ ೧೨೫೦/ -ರೂಗಳನ್ನು ಕೊಟ್ಟಿರುವುದನ್ನು ದಾಖಲಿಸಿದ್ದಾರೆ.) ಅಂದು ೨೫ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಕೂಲಿ ಮಠವು ಈಗ ಪೌರಾಡಳಿತಕ್ಕೆ ಒಳಪಟ್ಟು ಭವ್ಯಕಟ್ಟಡ ಮತ್ತು ೮೦೦ಕ್ಕೂ ಮೇಲ್ಪಟ್ಟ ವಿದ್ಯಾರ್ಥಿಗಳಿಂದ ಬೃಹತ್‌ಸಂಸ್ಥೆಯಾಗಿ ಬೆಳೆದಿದೆ. ಅದರೊಂದಿಗೆ ಹೆಂಚು ಮತ್ತು ಇಟ್ಟಿಗೆಗಳನ್ನು ಮಾಡುವ ಮಿಶನ್, ಮಣ್ಣು ಕಲಸುವ ಮಿಶನ್‌ಗಳನ್ನು ತರಿಸಿ ಕಾರ್ಖಾನೆಯ ಕೆಲಸವನ್ನು ಅಭಿವೃದ್ಧಿಪಡಿಸಿ ಆ ಊರಿನ

ಬಡ ಜನರಿಗೆ ಕೆಲಸ ಕೊಟ್ಟು ಬದುಕಲು ಅವಕಾಶ ಕಲ್ಪಿಸಿದರು. ಊರಿನಲ್ಲಿ ರಾಗಿಹಿಟ್ಟು ಬೀಸುವ ಮಿಶನ್ ಇಲ್ಲದೆ ಊರಿನ ಜನರು ಬೇರೆ ಕಡೆಗೆ ಹೋಗಿ ಹಿಟ್ಟು ಮಾಡಿಸಿ ತರುತ್ತಿದ್ದರು. ಊರಿಗೆ ರಾಗಿ ಮಿಶನ್ ಬಂದರೆ ಜನರಿಗೂ ಸಹಾಯ ವಾಗುತ್ತದೆ ಅಲ್ಲದೆ ಸಂಪಾದನೆಗೂ ದಾರಿ ಎಂದು ರಾಗಿ ಮಿಶನ್ ಒಂದನ್ನು ತರಿಸಿ ಸ್ಥಾಪಿಸಿದರು.

ಆಂಜನೇಯಸ್ವಾಮಿ ಗುಡಿ ಪ್ರತಿಷ್ಠಾಪನೆಯಾದ ಮೇಲೆ ಸರ್ ಮಿರ್ಜಾ ಅವರಿಂದ ಕರೆ ಬಂದು ಭೇಟಿ ಮಾಡಲು ಹೋದಾಗ ಕುಶಲಪ್ರಶ್ನೆಗಳ ನಂತರ ನೀವು ತೆಗೆದುಕೊಂಡಿದ್ದ ಸಾಲ ತೀರಿತೆ? ಎಂದು ಕೇಳಿದರು. ಇಲ್ಲಾ ಇನ್ನು ಸ್ವಲ್ಪ ಬಾಕಿ ಇದೆ ಎಂಬುದನ್ನು ಕೇಳಿ 'ನೋಡಿ ಈಗ ನಿಮಗೆ ಇನ್ನೂ ಹೆಚ್ಚಿನ ಸಾಲ ಕೊಡಿಸುತ್ತೇನೆ ಆ ಹಣದಲ್ಲಿ ಉಳಿದ ಸಾಲವನ್ನು ತೀರಿಸಿ ನಿಮ್ಮೂರಿನ ಜೋಡಿಗ್ರಾಮವನ್ನು ಕೊಂಡು ಪತ್ರ ಸಹಿ ಮಾಡಿಸಿಟ್ಟುಕೊಳ್ಳಿ' ಮೂಕರಾಗಿ ನಿಂತಿದ್ದ ಜೈಮುನಿಯವರಿಗೆ, ಹೆದರುವುದು ಬೇಡ ಜೋಡಿಗ್ರಾಮ ಗಳನ್ನು ತೆಗೆದುಹಾಕಲು ಸರ್ಕಾರದಿಂದ ರೂಲ್ಸ್ ಬಂದಿದೆ ಎಂದು ಧೈರ್ಯ ತುಂಬಿ ಕಳಿಸಿದರು.

ಜೋಡಿಗ್ರಾಮವನ್ನು ಕೊಳ್ಳುವುದಕ್ಕೆ ಹೋದಾಗ ಜೋಡಿದಾರರು ಅದು ನಮ್ಮ ಪಿತ್ರಾರ್ಜಿತ ಆಸ್ತಿ ನಾನು ಮಾರುವುದಿಲ್ಲವೆಂದು ಹಟ ಹಿಡಿದರು. ಆಗ ಸರ್ಕಾರದ ನಿಯಮವನ್ನು ತಿಳಿಸಿ, ಮಾರಿದರೆ ಹಣವಾದರೂ ಸಿಕ್ಕುತ್ತದೆ. ಇಲ್ಲವಾದರೆ ಹಣವೂ ಇಲ್ಲ, ಆಸ್ತಿಯೂ ನಮ್ಮ ಕೈ ಬಿಟ್ಟು ಸರ್ಕಾರಕ್ಕೆ ಸೇರಿ ಹೋಗುತ್ತದೆ ಎಂದು ಅವರ ಮಕ್ಕಳು ಮನವರಿಕೆ ಮಾಡಿದಮೇಲೆ ಜೋಡಿಗ್ರಾಮದ ೩೮೦ ಎಕರೆ ಜಮೀನನ್ನು ಸರ್ಕಾರದ ರೇಟಿನಂತೆ ಬೆಲೆ ಪಡೆದು ಜೈಮುನಿರಾಯರಿಗೆ ಮಾರುತ್ತಾರೆ.

ಚಿಕ್ಕ ಹುಡುಗ ಜೈಮುನಿ ಆಟವಾಡುತ್ತಿದ್ದಾಗ ಒಂದು ಕಪ್ಪಗಿರುವ ನಾಣ್ಯ ಸಿಕ್ಕಿದ್ದನ್ನು ತಾಯಿಯ ಕೈಗೆ ತಂದು ಕೊಟ್ಟಿದ್ದ. ಅದನ್ನು ತಾಯಿ ಅಕ್ಕಸಾಲಿಯ ಬಳಿ ತೋರಿಸಿದಾಗ ಅದನ್ನು ಉಜ್ಜಿ ತೊಳೆದಮೇಲೆ ಅದೊಂದು ಬೆಳ್ಳಿ ನಾಣ್ಯ. ಒಂದು ಕಡೆ ದಶರಥನ ಮೂವರು ಪತ್ನಿಯರಿರುವ ಚಿತ್ರ ಮತ್ತೊಂದು ಕಡೆ ರಾಮ, ಲಕ್ಷ್ಮಣ, ಸೀತಾ, ಮಾರುತಿಗಳಿಂದ ಕೂಡಿದ ಶ್ರೀರಾಮನ ಪಟ್ಟಾಭಿಷೇಕದ ಚಿತ್ರವಿರುವುದನ್ನು ನೋಡಿದ ಆಚಾರಿ ಇದು ರಾಮಟಂಕೀ ನಾಣ್ಯ. ಇದು ಎಲ್ಲರಿಗೂ ಸಿಕ್ಕುವುದಿಲ್ಲ, ಯೋಗಬೇಕು, ಇದನ್ನು ನಿಮ್ಮ ದೇವರ ಮನೆಯಲ್ಲಿಟ್ಟು ಪೂಜೆ ಮಾಡಿ. ನಿಮ್ಮ ಮಗ ದೊಡ್ಡ ವ್ಯಕ್ತಿಯಾಗುತ್ತಾನೆ, ಅವನಿಗೆ ದೇವಸ್ಥಾನ ಕಟ್ಟುವ ಯೋಗವಿದೆ ಎಂದು ಹೇಳಿದ್ದ. ಅದರಂತೆ ನೀನು ದೇವಸ್ಥಾನವನ್ನು ಕಟ್ಟಿಸಿ ಪರೋಪಕಾರಿಯಾಗಿರುವುದನ್ನು ತಿಳಿಸಿದ ತಾಯಿಯನ್ನು, ಆ ನಾಣ್ಯವನ್ನು ತೋರಿಸುವಂತೆ ಜೈಮುನಿ ಕೇಳಿದಾಗ ಹಾಗೆ ನೋಡಬಾರದು. ನವರಾತ್ರಿಯಲ್ಲಿ ಆಯುಧಪೂಜೆ ಮಾಡಿ, ದೇವರ ಮೆರವಣಿಗೆ ಮಾಡಿಸಿ ದೇವಾಲಯದ ಅಶ್ವತ್ಥ ಕಟ್ಟೆಯಲ್ಲಿ ಎರಡು ಬನ್ನಿಮರಗಳನ್ನು ನೆಟ್ಟು ಪೂಜಿಸು ಎಂದು ಹೇಳಿದರು. ತಾಯಿ ಹೇಳಿದಂತೆ ಮಾಡಿ ಬನ್ನಿ ಮರ ನೆಟ್ಟು ಪೂಜಿಸಿದ ನಂತರ ಆ ನಾಣ್ಯವನ್ನು ರಾಯರು ಭಕ್ತಿಯಿಂದ ಪೂಜಿಸಿದರು.

ರಾಯರು ತಮ್ಮಲ್ಲಿದ್ದ ಒಂದು ದೊಡ್ಡ ನಿವೇಶನದಲ್ಲಿ ೫೦ ಸೈಟುಗಳನ್ನು ಮಾಡಿ ಮನೆಯಿಲ್ಲದ ಬಡಕುಟುಂಬ ದವರಿಗೆ ಸುಲಭಬೆಲೆಗೆ ಕೊಟ್ಟು ಅವರಿಗೆ ಮನೆ ಕಟ್ಟಿಕೊಳ್ಳಲು ನೆರವಾದರು.

## ಸುಂದರ ಸರ್ಕಲ್ ನಿರ್ಮಾಣ

ಸರ್ ಮಿರ್ಜಾ ಅವರ ಅಪ್ಪಣೆಯಂತೆ ದಾಸರಹಳ್ಳಿ ಮುಖ್ಯ ರಸ್ತೆಯಲ್ಲಿ ಒಂದು ಸರ್ಕಲ್ ನಿರ್ಮಿಸಿ ಅದಕ್ಕೆ ಜೈಮುನಿರಾವ್ ಜಾದವ್ ಸರ್ಕಲ್ ಎಂದು ಕಲ್ಲಿನಲ್ಲಿ ಕೆತ್ತಿಸಿದರು. ರಾಜ್ಯದ ರಸ್ತೆಗೆ ಸೇರುವಂತೆ ಎರಡು ಹೊಸ ರಸ್ತೆಗಳನ್ನು ನಿರ್ಮಿಸಿ ಆ ಸರ್ಕಲ್ಲಿಗೆ ಸೇರುವಂತೆ ಮಾಡಿದರು. ಆ ರಸ್ತೆ ಇಕ್ಕೆಲಗಳಲ್ಲಿ ಸಾಲುಮರಗಳನ್ನು ನೆಟ್ಟರು. ಈಗ ಅವು ಹೆಮ್ಮರಗಳಾಗಿವೆ. ಸರ್ಕಲ್‌ನ ಸುತ್ತಲೂ ನಾಲ್ಕು ಕಲ್ಲು ಬೆಂಚುಗಳನ್ನು ಹಾಕಿಸಿದರು. ಆ ಸರ್ಕಲ್ಲಿನ ನಾಲ್ಕು ದಿಕ್ಕುಗಳಲ್ಲಿ ಕಂಬಗಳನ್ನು ನಿಲ್ಲಿಸಿ ಅವುಗಳ ಮೇಲೆ ದೇಶಭಕ್ತರ, ಮಹಾತ್ಮರ ಹೆಸರುಗಳನ್ನು ಕೆತ್ತಿಸಿದರು. ಪೂರ್ವದ್ವಾರಗಳಲ್ಲಿರುವ ಎರಡು ಕಂಬಗಳಲ್ಲಿ ಮಹಾತ್ಮ ಗಾಂಧಿ, ನೆಹರು, ಛತ್ರಪತಿ ಶಿವಾಜಿ, ಸಮರ್ಥ ರಾಮದಾಸರ ಹೆಸರುಗಳನ್ನೂ, ಪಶ್ಚಿಮ ದ್ವಾರದ ಎರಡು ಕಂಬಗಳಲ್ಲಿ ಮಾಗಡಿ ಕೆಂಪೇಗೌಡ, ರಂಗನಾಥಸ್ವಾಮಿ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದರ ಹೆಸರುಗಳನ್ನು ಉತ್ತರ ದ್ವಾರದ ಎರಡು ಕಂಬಗಳಲ್ಲಿ ತಂದೆ ರಾಣೋಜಿರಾವ್‌ಜಾದವ್, ತಾಯಿ ತುಳಜಾಬಾಯಿಜಾದವ್, ಶ್ರೀಕೋದಂಡರಾಮ, ಭಕ್ತ ಆಂಜನೇಯಸ್ವಾಮಿ ಹಾಗೂ ದಕ್ಷಿಣ ದ್ವಾರದ ಎರಡು ಕಂಬಗಳಲ್ಲಿ ಶ್ರೀ ಕೃಷ್ಣರಾಜೇಂದ್ರ ಒಡೆಯರು, ಶ್ರೀ ಜಯಚಾಮರಾಜ ಒಡೆಯರು, ಶ್ರೀ ಶಂಕರಾಚಾರ್ಯರು ಮತ್ತು ಶ್ರೀ ಲವಂಗ ಭಾರತೀ ಸ್ವಾಮಿಗಳ ಹೆಸರುಗಳನ್ನು ಕೆತ್ತಿಸಿದರು.

ಈ ಎಲ್ಲಾ ಹೆಸರುಗಳನ್ನು ಕೆತ್ತುವ ಮೊದಲು ತಾವೇ ಸ್ವತಃ ಕಲ್ಲುಗಳನ್ನು ನಯವಾಗಿ ಉಜ್ಜಿ ತೊಳೆದು ಸೀಮೆಸುಣ್ಣ ದಿಂದ ಬರೆದು ಚಿಕ್ಕ ಉಳಿಯಿಂದ ಕೆತ್ತಿ ಆನಂತರ ದೊಡ್ಡ ಕಲ್ಲುಗಳಲ್ಲಿ ಸಿಮೆಂಟಿನಿಂದ ಕೂರಿಸುತ್ತಿದ್ದರು. ಆ ಕಲ್ಲು ಕಂಬಗಳು ನೋಡಲು ಸುಂದರವಾಗಿ ಕಂಗೊಳಿಸುತ್ತಿದ್ದವು. ಕುಳಿತುಕೊಳ್ಳಲು ಹಾಕಿದ್ದ ಕಲ್ಲು ಬೆಂಚುಗಳ ಬಳಿ ನೆಟ್ಟು

ಬೆಳಸಿದ ಗಿಡಗಳು, ಅವುಗಳ ಹಿಂದೆ ಕಲ್ಲಿನ ಕಟ್ಟಡ ಆ ಕಟ್ಟಡದ ಕಲ್ಲಿನಲ್ಲಿ ರಂದ್ರ ಮಾಡಿ ಅಂದಗೊಳಿಸಿದ್ದರು. ಊರಿನ ಜನ, ಪಟೇಲ ಮತ್ತಿತರರು ಅವರ ಕಾರ್ಯವನ್ನು ಮೆಚ್ಚಿ ಹೊಗಳುತ್ತಿದ್ದರು.

ಜೈಮುನಿರಾಯರು ಅಲ್ಲಿ ಒಂದು ತೋಟವನ್ನು ಮಾಡಿ ಓಡಿಯಾಡಲು ರಸ್ತೆಗಳನ್ನು ನಿರ್ಮಿಸಿದರು. ಕೆಂಪು ಇಟ್ಟಿಗೆಗಳಿಂದ ದೊಡ್ಡ ಮತ್ತು ಎತ್ತರವಾದ ಕಾಂಪೌಂಡ್ ಕಟ್ಟಿಸಿ ಅವರ ಹೆಸರನ್ನು ಹಾಕಿಸಿ ಕೆಳಭಾಗದಲ್ಲಿ ಮಣ್ಣಿನಲ್ಲಿ ಆನೆಗಳನ್ನು ಮಾಡಿ ಅಲಂಕರಿಸಿದರು. ಹೆಸರಿನ ಮೇಲೆ ಎರಡು ವಿದ್ಯುತ್ ದೀಪಗಳನ್ನು ಹಾಕಿಸಿದರು. ತೋಟದಲ್ಲಿ ಸುಂದರವಾದ ಈಜು ಕೊಳವನ್ನು ಮಾಡಿಸಿದರು. ಸಿಟಿಯಿಂದ ಟೋಲ್ಗೇಟಿಗೆ ಬರುತ್ತಿದ್ದಂತೆ ಎರಡು ಫರ್ಲಾಂಗ್ ದೂರಕ್ಕೆ ಈ ತೋಟ ಕಾಣುತ್ತಿತ್ತು. ರಸ್ತೆ ಪಕ್ಕದಲ್ಲಿ ಸಾಲು ಗಿಡಗಳನ್ನು ನೆಡಿಸಿ ಅಚ್ಚುಕಟ್ಟಾದ ಅತಿಥಿ ಗೃಹವನ್ನು ಕಟ್ಟಿಸಿದರು. ತೋಟದಲ್ಲಿ ಬೆಳೆದ ಹಣ್ಣು ಹಂಪಲುಗಳಿಂದ ಅತಿಥಿ ಅಭ್ಯಾಗತರನ್ನು ಸತ್ಕರಿಸುತ್ತಿದ್ದರು. ಹಾಗೆ ಅಲ್ಲಿ ಬೆಳೆದ ಹಣ್ಣು ಹೂವುಗಳನ್ನು ತಪ್ಪದೇ ದೇವಸ್ಥಾನಕ್ಕೆ ಕಳಿಸುತ್ತಿದ್ದರು ಮತ್ತು ಹೂವಿನೊಂದಿಗೆ ಎಣ್ಣೆ ಮತ್ತು ದಿನಸಿಗಳನ್ನು ಪೂಜಾರಿಯ ಮನೆಗೂ ಕಳಿಸುತ್ತಿದ್ದರು. ರಾಯರ ಮನೆಯಲ್ಲಿ ಲಕ್ಷ್ಮಿ ನಲಿದಾಡುತ್ತಿದ್ದಳು.

ಜೈಮುನಿರಾವ್ ಸರ್ಕಲ್ಲಿನ ನಿರ್ಮಾಣಕ್ಕೆ ಕಾರಣರಾದ ಸರ್ ಮಿರ್ಜಾ ಅವರಿಂದ ಅನಾವರಣ ಮಾಡಿಸಲು ಮೈಸೂರಿಗೆ ಹೋಗಿ ಅವರನ್ನು ಕರೆದು ಬಂದರು. ಮಿರ್ಜಾ ಅವರು ಆಹ್ವಾನವನ್ನು ಸ್ವೀಕರಿಸಿ ತಾವು ಬರುವ ದಿನಾಂಕವನ್ನು ಬರೆದು ತಿಳಿಸಿದರು. ಊರಿನ ಪ್ರಮುಖರು, ಹಿರಿಯರು, ಪಟೇಲರು, ಜೋಡಿದಾರರು ಸೇರಿ ಸಂತಸ ಮತ್ತು ಸಂಭ್ರಮಗಳಿಂದ ಹಾರ ಹಾಕಿ, ಬೊಂಬಾಯಿಯಿಂದ ತಂದಿದ್ದ ಶಾಲನ್ನು ಹೊದಿಸಿ ಮಿರ್ಜಾ ಅವರನ್ನು ಸ್ವಾಗತಿಸಿ, ಸತ್ಕರಿಸಿ ಗೌರವಿಸಿದರು. ರಾಯರು ಊರಿನ ಪ್ರಮುಖರೆಲ್ಲರ ಪರಿಚಯ ಮಾಡಿಸಿದರು ಜೋಡಿದಾರರ ಮಗ ನಾಗರಾಜ, ಪಟೇಲರು, ಗೌಡ, ಶಾನುಭೋಗ ಇವರೆಲ್ಲ ಹೂವು ಹಣ್ಣುಗಳನ್ನಿತ್ತು ಕೃತಜ್ಞತೆ ಸಲ್ಲಿಸಿದರು. ರಾಯರ ತಾಯಿ ತಮಗೆ ಕಣ್ಣು ಕಾಣಿಸದು ಎಂದು ಮಿರ್ಜಾರಿಗೆ ಕೈಮುಗಿದರು. ಎಲ್ಲರೂ ನಿಂಬೆಹಣ್ಣಿನ ಪಾನಕ ಸೇವಿಸಿದ ನಂತರ ಸರ್ಕಲ್ ವೀಕ್ಷಣೆಗೆ ಹೊರಟರು.

ಸರ್ಕಲ್‌ನಲ್ಲಿ ನೆಡಿಸಿರುವ ಕಂಬಗಳು ಅವುಗಳ ಮೇಲೆ ಬರೆಸಿರುವ ಮಹನೀಯರ ಹೆಸರುಗಳು, ರಸ್ತೆ ಬದಿಯಲ್ಲಿನ ಸಾಲು ಮರಗಳು, ಕುಳಿತುಕೊಳ್ಳಲು ಮಾಡಿರುವ ಕಲ್ಲು ಬೆಂಚುಗಳ ಸೊಗಸು ನೋಡಿ ಸಂತಸಪಟ್ಟು ಬೆಂಚಿನ ಮೇಲೆ ಕುಳಿತರು. ತಕ್ಷಣ ಅಲ್ಲೇ ನಿಂತಿದ್ದ ತೋಟಿ ತಮಟೆ ಬಾರಿಸಿದ. ಈ ಶಬ್ದ ಕೇಳುತ್ತಿದ್ದಂತೆ ದೂರದಲ್ಲಿ ಆಟವಾಡುತ್ತಿದ್ದ ಮಕ್ಕಳು ಓಡಿ ಬಂದು ತಮಟೆಯ ತಾಳಕ್ಕೆ ಕುಣಿಯಲಾರಂಬಿಸಿದರು. ಮಕ್ಕಳೆಲ್ಲಾ ಪಟಾಕಿಯನ್ನು ಹಚ್ಚಿ ಸಂಭ್ರಮಿಸಿದರು. ಜೈಮುನಿಯವರು ಮಕ್ಕಳಿಗೆಲ್ಲಾ ಸಿಹಿ ಬೂಂದಿಯನ್ನು ತರಿಸಿ ಮಿರ್ಜಾ ಅವರ ಕೈಯಿಂದ ಹಂಚಿಸಿ ಆನಂದಿಸಿದರು.

**ಸರ್ಕಲ್ ಉದ್ಘಾಟನೆ**

ಅಲ್ಲಿಂದ ಮಿರ್ಜಾ ಅವರನ್ನು ಶಾಲೆ ಮತ್ತು ಆಂಜನೇಯಸ್ವಾಮಿ ದೇವಸ್ಥಾನಗಳನ್ನು ತೋರಿಸಲು ಕರೆದುಕೊಂಡು ಹೋದರು. ಪೂಜಾರಿ ಮಿರ್ಜಾ ಅವರಿಗೆ ಹಾರ ಹಾಕಿ ದೇವರಿಗೆ ಮಂಗಳಾರತಿ ಮಾಡಿ ತೀರ್ಥ ಪ್ರಸಾದಗಳನ್ನು ನೀಡಿದನು. ಮನೆಗೆ ಹಿಂದಿರುಗಿ ಬಂದ ಎಲ್ಲರಿಗೂ ಪುಷ್ಕಳ ಭೋಜನದ ಆತಿಥ್ಯ ನೀಡಿದರು. ಊಟವಾದನಂತರ ಫಲ ತಾಂಬೂಲವನ್ನು ಮೆಲ್ಲುತ್ತಾ ಮಿರ್ಜಾ ಅವರು ಹಲವಾರು ವಿಷಯಗಳ ಬಗ್ಗೆ ತಿಳಿದು ಮೆಚ್ಚುಗೆಯಿಂದ ನಿಮ್ಮ ಈ ಎಲ್ಲ ನಿಸ್ವಾರ್ಥ ಕೆಲಸಗಳನ್ನು ನಾನೇ ಹೋಗಿ ಮಹಾರಾಜರಿಗೆ ತಿಳಿಸುತ್ತೇನೆ. ಈಗ ಹೇಗೂ ಮಾಗಡಿ ರಂಗನಾಥಸ್ವಾಮಿಯ ಪೂಜೆ, ಉತ್ಸವ, ಜಾತ್ರೆ ಇದೆಯಲ್ಲ ಆಗ ಮಹಾರಾಜರು ಇದೇ ದಾರಿಯಲ್ಲಿ ಬರುತ್ತಾರೆ. ಆಗ ಅವರನ್ನು ಸರ್ಕಲ್ಲಿನಲ್ಲಿ ನಿಲ್ಲಿಸಿ ರಾಜಮರ್ಯಾದೆಗಳನ್ನು ಮಾಡಿ ನಿಮ್ಮ ಹೆಸರು ರಿಜಿಸ್ಟರಿನಲ್ಲಿ ದಾಖಲೆಯಾಗಿ ಸ್ಟಾಂಪ್ ಹಾಕುತ್ತಾರೆ. ನಿಮ್ಮ ಹೆಸರು ಶಾಶ್ವತವಾಗಿ ಉಳಿಯುತ್ತದೆ. 'ನಾನು ಡೆಲ್ಲಿಗೆ ಕಾಗದ ಬರೆಯುತ್ತೇನೆ. ಅಲ್ಲಿಯೂ ನಿಮ್ಮ ಹೆಸರು ನೋಂದಾಯಿಸಿಕೊಂಡು ಮುದ್ರೆ ಹಾಕುತ್ತಾರೆ, ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿ ಹೊರಟರು.

ಮಹಾರಾಜರು ಜೈಮುನಿರಾವ್ ಸರ್ಕಲ್ ಮೂಲಕ ಹಾದು ಹೋಗುವ ಬಗ್ಗೆ ಅವರನ್ನು ಸ್ವಾಗತಿಸುವ ಮತ್ತು ಸತ್ಕರಿಸುವ ಬಗ್ಗೆ ಊರಿನವರೆಲ್ಲಾ ಸೇರಿ ಮಹಾರಾಜರು ಹಾದು ಹೋಗುವ ಪೂರ್ವ – ಪಶ್ಚಿಮ ಭಾಗಗಲ್ಲಿದ್ದ ಮೂರು ಫರ್ಲಾಂಗ್ ಉದ್ದಕ್ಕೂ ಇರುವ ಮರಗಳಿಗೆ ಮಧ್ಯದಲ್ಲಿ ಎರಡು ಸುಣ್ಣದ ಬಿಳಿ ಪಟ್ಟೆಗಳ ನಡುವೆ ಕೆಮ್ಮಣ್ಣಿನ ಪಟ್ಟೆ ಬಳಿಸಿದರು. ಊರನ್ನು ಅಲಂಕರಿಸುವ ಕೆಲಸದಲ್ಲಿ ಊರಿನವರು, ಶಾಲಾ ಮಕ್ಕಳು, ನೆಂಟರಿಷ್ಟರು, ಬಂಧುಬಾಂಧವರು ಕೈ ಜೋಡಿಸುವುದರ ಜೊತೆ ಮಹಾರಾಜರನ್ನು ಹತ್ತಿರದಿಂದ ಕಾಣುವ ಅವಕಾಶದ ಸಂಭ್ರಮದಲ್ಲಿದ್ದರು. ಮಿರ್ಜಾರವರು ಪತ್ರ ಬರೆದು ಮಹಾರಾಜರು ಬರುವ ದಿನ ಮತ್ತು ವೇಳೆಗಳನ್ನು ತಿಳಿಸಿದರು. ಊರನ್ನು ಮತ್ತು ಊರ ಹೆಬ್ಬಾಗಿಲನ್ನು ತಳಿರು ತೋರಣಗಳಿಂದ ಬಣ್ಣ ಬಣ್ಣ ಬಾವುಟಗಳಿಂದ ಅಲಂಕರಿಸಿದರು.

ಮಹಾರಾಜರನ್ನು ಹತ್ತಿರದಿಂದ ನೋಡಬಹುದೆಂಬ ಆಸೆಯಿಂದ ನೂರಾರು ಜನರು ಅಲ್ಲಿ ನೆರದಿದ್ದರು. ಅಲ್ಲಿ ಮಹಾರಾಜರ ಫೋಟೋ, ಗಾಂಧೀಜಿ, ನೆಹರು ಫೋಟೋಗಳನ್ನಿಟ್ಟು ಹೂವಿನಿಂದ ಅಲಂಕರಿಸಿ ದೀಪ ದೂಪ, ಕರ್ಪೂರವನ್ನು ಹಚ್ಚಿಟ್ಟು, ವಾತಾವರಣವನ್ನು ಆಹ್ಲಾದಕರವನ್ನಾಗಿಸಿದ್ದರು. ಸರಿಯಾದ ಸಮಯಕ್ಕೆ ಮಹಾರಾಜರು ಬಂದು ಕಾರಿನಿಂದ ಇಳಿಯುತ್ತಿದ್ದಂತೆ ಮಂಗಳವಾದ್ಯಗಳು ಮೊಳಗಿದವು. ಚಪ್ಪಾಳೆಯೊಂದಿಗೆ ಹೂವಿನ ಹಾರ ಹಾಕಿ ಸ್ವಾಗತಿಸಿದರು. ರಾಜರು ಮುಂದೆ ಮುಂದೆ ಸಾಗುತ್ತಾ 'ಅದೇನಾ ದೇವಸ್ಥಾನ? ಅದೇನಾ ಹೊಸ ರಸ್ತೆ? ಅದೇನಾ ಶಾಲೆ?'ಎಂದು ಹಲವಾರು ಪ್ರಶ್ನೆಗಳನ್ನು ಕೇಳುತ್ತಾ ನೋಡಿ ನಗುತ್ತಾ ಎಲ್ಲರಿಗೂ ಕೈ ಮುಗಿದರು. ವಾದ್ಯಘೋಷಗಳು ಮುಗಿಲು ಮುಟ್ಟುತ್ತಿರುವ ಹರ್ಷೋದ್ಗಾರಗಳೊಂದಿಗೆ ರಾಜರು ತಮ್ಮ ಕಾರಲ್ಲಿ ಕುಳಿತರು. ಹಣ್ಣು, ಹೂವುವಿನ ಬುಟ್ಟಿಯನ್ನು ಮಹಾರಾಜರ ಕಾರಿನಲ್ಲಿ ಚಾಲಕನ ಹತ್ತಿರ ಇಟ್ಟರು. 'ಮಕ್ಕಳು ಮರಿಗಳಾದಿಯಾಗಿ 'ಬಹು ಪರಾಕ್ ಬಹು ಪರಾಕ್' ಎಂದು ಹೇಳುತ್ತಿದ್ದಂತೆ ಕಾರು ಮುಂದೆ ಹೊರಟಿತು.

ಜೈಮುನಿರಾಯರ ಕಾರ್ಯ ಸಾಧನೆಗಳಿಂದ ತಾವೆಲ್ಲರೂ ಇಷ್ಟು ಹತ್ತಿರದಿಂದ ರಾಜರ ದರ್ಶನ ಪಡೆಯಲು ಸಾಧ್ಯವಾಯಿತೆಂದು ಅಲ್ಲಿ ನೆರೆದಿದ್ದ ಜನರೆಲ್ಲರೂ ರಾಯರನ್ನು ಅಭಿನಂದಿಸಿದರು. ಅಂದು ಊರಿನವರೆಲ್ಲಾ ತಮ್ಮತಮ್ಮ ಮನೆಗಳಲ್ಲಿ ಹೋಳಿಗೆಯ ಹಬ್ಬದೂಟ ಮಾಡಿ ನೆಂಟರಿಷ್ಟರೊಂದಿಗೆ ಸಂತೋಷಪಟ್ಟರು.

## ಕಳ್ಳರ ಬಗ್ಗೆ ಉದಾರಭಾವ

ರಾಯರ ಕೌಟುಂಬಿಕ ಜೀವನದ ಬಗ್ಗೆ ಹೇಳುವ ಕೆಲವು ಮುಖ್ಯ ವಿಷಯಗಳಿವೆ. ರಾಯರು ನಾಲ್ಕು ಗಂಡು ಮತ್ತು ಐದು ಹೆಣ್ಣು ಮಕ್ಕಳ ತಂದೆಯಾಗಿದ್ದರು. ಎಂದೂ ತಮ್ಮ ಕುಟುಂಬದ ಬಗ್ಗೆ ಚಿಂತಿಸಲಿಲ್ಲ. ತಮ್ಮ ಸುತ್ತಮುತ್ತಲಿದ್ದ ಜನರ ನೆಮ್ಮದಿ ಸುಖ ಸಂತೋಷಗಳು ಅವರಿಗೆ ಮುಖ್ಯವಾಗಿತ್ತು. ಹೆಂಡತಿ ಮಕ್ಕಳ ಗೊಣಗಾಟದ ಬಗ್ಗೆ ಎಂದೂ ಯೋಚಿಸಲಿಲ್ಲ. ಹೀಗಾಗಿ ಮಕ್ಕಳು ಸ್ವತಂತ್ರವಾಗಿ ಬಿಸಿನೆಸ್ ಮಾಡಲು ಹೋಗಿ ಸಾಕಷ್ಟು ಹಣ ಕಳೆದುಕೊಂಡರು. ಸಾಲದೆ ಇರುವುದಕ್ಕೆ ಮಧ್ಯರಾತ್ರಿ ಅವರ ಮನೆಗೆ ಕಳ್ಳರು ನುಗ್ಗಿ ಧಾಳಿ ಮಾಡಿದಾಗ ರಾಯರು ಧೈರ್ಯವಾಗಿ ಹೋರಾಡಿದರೂ ಅದು ವ್ಯರ್ಥವಾಗಿ ತಲೆಗೆ ಮತ್ತು ಎಡಗಾಲಿಗೆ ಪೆಟ್ಟುಬಿದ್ದು ಪ್ರಜ್ಞೆತಪ್ಪಿ ಬಿದ್ದರು. ಸಹಾಯಕ್ಕೆ ಬಂದ ಹೆಂಡತಿಗೆ ಹೊರಗಿನಿಂದ ಸಹಾಯಕ್ಕೆ ಬಂದ ಮೇಸ್ತ್ರರಿಗೂ ಪೆಟ್ಟು ಬಿದ್ದು ಅವರುಗಳೂ ಸ್ಮರಣೆ ತಪ್ಪಿದರು. ಗಲಾಟೆಯಿಂದ ಎಚ್ಚರಗೊಂಡ ಅಕ್ಕಪಕ್ಕದವರು ನೆರವಿಗೆ ಬಂದಾಗ ಕಳ್ಳರು ಪರಾರಿಯಾದರು. ರಾಯರ ಕಾಲಿನ ಮೂಳೆ ಮುರಿದು ೨-೩ ತಿಂಗಳು ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಬೇಕಾಯಿತು. ಹೀಗೆ ರಾಯರ ಮೇಲೆ ಬಿದ್ದ ಕಷ್ಟಗಳ ಪರಂಪರೆಯಿಂದ ಮೇಲೆದ್ದು ಬರಲು ಹಲವು ಕಾಲವೇ ಬೇಕಾಯಿತು. ಸಾಲ ಕೊಟ್ಟವರ ಹಿಂಸೆಯಿಂದ ನೊಂದು ಕಾರ್ಖಾನೆಯನ್ನು ಪುನರಾರಂಭ ಮಾಡಲು ಪ್ರಯತ್ನ ಮಾಡಿದರು. ಉದ್ಯಮವಿಲ್ಲದೆ ಬದುಕಲೇಬೇಕಾದ ಅನಿವಾರ್ಯ ಕಷ್ಟದ ಸಂದರ್ಭದಲ್ಲಿ ಸೌದೆ ಮಾರಾಟ ಮಾಡುವ ಕೆಲಸವನ್ನು ಕಿರಿಯ ಮಗಳು ಮೀರಾ ಹೊತ್ತು ಕೊಂಡಳು.

ಹೀಗೆ ರಾಯರ ಹಳಿ ತಪ್ಪಿದ ಬದುಕು ಒಂದು ಹಂತ ತಲುಪುತ್ತಿರುವಂತೆ, ಒಂದು ದಿನ ಇದ್ದಕ್ಕಿದ್ದಂತೆಯೇ 'ಹೇಗೆ ನಡೆಯುತ್ತಿದೆ ನಿಮ್ಮ ಕಾರ್ಖಾನೆ' ಎನ್ನುತ್ತಾ ಕೆಂಗಲ್ ಹನುಮಂತಯ್ಯನವರು ಕಾರ್ಖಾನೆಗೆ ಬಂದರು. ಅನಿರೀಕ್ಷಿತವಾಗಿ ಬಂದ ಅವರನ್ನು ಮಜ್ಜಿಗೆ ಕೊಟ್ಟು ಸತ್ಕರಿಸಿದರು. ಹನುಮಂತಯ್ಯನವರು ತಾವು ಬಂದ ಕಾರಣವನ್ನು ಹೇಳಿ 'ಈಗ ವಿಧಾನಸೌಧ ಕಟ್ಟಿಸಬೇಕೆಂದಿದ್ದೇನೆ. ನೀವು ಚದರಬಿಲ್ಲೆ ಲೆಕ್ಕದಲ್ಲಿ ಇಟ್ಟಿಗೆಯನ್ನು ಮಾಡಿಕೊಡುವಂತೆ ಆರ್ಡರ್ ಕೊಡಿಸಬೇಕೆಂದಿದ್ದೇನೆ ಎಂದರು. ಆದರೆ ತಮ್ಮಲ್ಲಿ ಚದರಬಿಲ್ಲೆ ಅಚ್ಚು ಇಲ್ಲವೆಂದಾಗ, ಅದನ್ನು ಮಾಡಿಸಿ ಅದರ ಖರ್ಚು ಕೊಡುತ್ತೇವೆಂದು ಹೇಳಿ ಹನುಮಂತಯ್ಯನವರು ಹೋದರು. ಅದರಂತೆ ಇಟ್ಟಿಗೆ ಸರಬರಾಜು ಮಾಡಿ ಬಂದ ಹಣವನ್ನು ಕೂಡಿಸಿಟ್ಟು ಮಾಡಿದ್ದ ಸಾಲವನ್ನು ತೀರಿಸುತ್ತಾ ಬಂದರು. ಅಲ್ಲದೆ ಅನಾಥ ಬಾಲಕಿಯ ವಿವಾಹ ಮಾಡಿದರು. ಕಳ್ಳತನ ಮಾಡಿದ ಕಳ್ಳರನ್ನು ಪೊಲೀಸರು ರಾಯರ ಎದುರು ಕರೆತಂದು ಗುರುತಿಸಲು ಕೇಳಿದರೆ, ಕತ್ತಲಾಗಿತ್ತು, ಅದರಿಂದ ಕಳ್ಳರನ್ನು ಗುರುತಿಸಲು ಸಾಧ್ಯವಾಗದು ಎಂದು ಕೋರ್ಟಿನಲ್ಲಿ ಸಾಕ್ಷಿ ಹೇಳದೆ ಮಾನವೀಯತೆಯನ್ನು ಮೆರೆದು ಮನೆಗೆ ಬಂದ ರಾಯರನ್ನು ಕಳ್ಳರ ಬಗ್ಗೆ ಸಾಕ್ಷಿ ಹೇಳಬೇಕಾಗಿತ್ತು ಎಂದು ಕೋಪದಿಂದ ನುಡಿದ ಹೆಂಡತಿಯನ್ನು ಸಮಾಧಾನಿಸಿದರು.

ಬಡತನದಲ್ಲಿ ಬೆಳೆದು ಸ್ವಂತ ಪರಿಶ್ರಮದಲ್ಲಿ ಪ್ರಾಮಾಣಿಕ ದುಡಿಮೆಯಿಂದ ಬಂದ ಆದಾಯವನ್ನು ತಮ್ಮ ಜೀವನ ನಿರ್ವಹಣೆಗೆ ಎಷ್ಟು ಬೇಕೊ ಅಷ್ಟನ್ನು ಬಿಟ್ಟು ಉದ್ಯಮದ ಆದಾಯವನ್ನೆಲ್ಲಾ ಜನಸೇವೆಗಾಗಿ ಮೀಸಲಿಟ್ಟರು. ಕುಶಲ ಕರ್ಮಿಗಳು ಮತ್ತು ದೈವಭಕ್ತರಾದ, ಜನಸೇವಾಪರಾಯಣರೂ ಆದ ಜೈಮುನಿರಾಯರು ಶಾಲೆ, ದೇವಸ್ಥಾನ. ಜೈಮುನಿ ಆಶ್ರಮ, ಸಾರ್ವಜನಿಕ ರಸ್ತೆಗಳನ್ನು ನಿರ್ಮಿಸಿದರು. ದಾಸರಹಳ್ಳಿಗೆ ಬೀದಿ ದೀಪ ಹಾಕಿಸಿದರು. ಸಿಟಿ ಮಾರ್ಕೆಟ್‌ನಿಂದ ಜೈಮುನಿರಾವ್ ಸರ್ಕಲ್‌ವರೆಗೆ ಬಿಟಿಎಸ್ ಬಸ್ ಬರುವಂತೆ

ವ್ಯವಸ್ಥೆ ಮಾಡಿದರು. ಬಡವರಿಗೆ ಆಶ್ರಯ ನೀಡಿದರು. ಅಗ್ರಹಾರ ದಾಸರಹಳ್ಳಿಯ ಅಭಿವೃದ್ಧಿಗೆ ಮತ್ತು ಅಲ್ಲಿಯ ಜನರ ಪ್ರಗತಿಗೆ ಶ್ರಮಿಸಿದರು. ಅಂದಿನ ಅಗ್ರಹಾರ ದಾಸರ ಹಳ್ಳಿಯ ಪ್ರವೇಶದ್ವಾರಕ್ಕೆ ಅವರ ನೆನಪಿಗಾಗಿ ನಗರ ಸಭೆ ಜೈಮುನಿರಾಯರ ಸರ್ಕಲ್ ಎಂಬ ಹೆಸರನ್ನ ಇರಿಸಿದೆ.

ಕಡೆಯದಾಗಿ ಕೆಂಚೇನಹಳ್ಳಿಯಲ್ಲಿರುವ ರಾಜರಾಜೇಶ್ವರಿ ದೇವಸ್ಥಾನಕ್ಕೆ ಜಾಗವನ್ನು ಕೊಟ್ಟವರು ರಾಯರ ಹೆಂಡತಿ ಉಮಾಬಾಯಿವರು. ಅವರ ತಂದೆ ತಮ್ಮ ಐದು ಜನ ಹೆಣ್ಣು ಮಕ್ಕಳಿಗೆ ಎರಡೆರಡು ಎಕರೆ ಜಮೀನು ಕೊಟ್ಟಿದ್ದರು. ಉಮಾಬಾಯಿಯವರು ತಮಗೆ ಕೊಟ್ಟಿದ್ದ ಎರಡು ಎಕರೆ ಜಮೀನನ್ನು ತಿರುಚ್ಚಿ ಸ್ವಾಮಿಯವರು ದೇವಸ್ಥಾನವನ್ನು ಕಟ್ಟುವುದಕ್ಕೆ ಆ ಜಾಗ ಬೇಕೆಂದು ಕೇಳಿದಾಗ ಪತ್ರಕ್ಕೆ ಸಹಿ ಹಾಕಿ ಕೊಟ್ಟು ಬಂದರು. ತಿರುಚ್ಚಿಸ್ವಾಮಿಗಳು ಒಂದು ಎಕರೆಗೆ ೧೩,೦೦೦ ಸಾವಿರದಂತೆ ಎರಡು ಎಕರೆಗೆ ೨೬,೦೦೦ ರೂಗಳನ್ನು ಉಮಾಬಾಯಿಯ ತಂಗಿ ಧರ್ಮಾಬಾಯಿ ಕೈಲಿ ಕೊಟ್ಟರು. ಆದರೆ ಆ ಹಣ ಉಮಾಬಾಯಿಗೆ ಸೇರಲಿಲ್ಲ. ೧೯೭೦ರಲ್ಲಿ ಪ್ರಾರಂಭವಾದ ಈ ದೇವಸ್ಥಾನ ಇಂದು ಬೃಹತ್ತಾಗಿ ಬೆಳೆದು ಭಕ್ತರಿಂದ ಪೂಜೆಗೊಳ್ಳುತ್ತಿದೆ. ಅಂದಿನ ಕೆಂಚೇನಹಳ್ಳಿ ಇಂದು ರಾಜರಾಜೇಶ್ವರಿ ನಗರವಾಗಿ ರೂಪು ಗೊಂಡಿದೆ. ಉಮಾಬಾಯಿ ಇದನ್ನು ನೋಡಿ ಸಂತೋಷಪಡು ತ್ತಿದ್ದರು. ದೇವಸ್ಥಾನಕ್ಕೆ ಪ್ರತಿ ತಿಂಗಳು ಜೈಮುನಿರಾಯರು ತಪ್ಪದೆ ಒಂದು ಪಲ್ಲ ಅಕ್ಕಿಯನ್ನು ಕಳಿಸುತ್ತಿದ್ದರು. ಆಂಜನೇಯಸ್ವಾಮಿ ಪೂಜಾ ಕಾರ್ಯಗಳಿಗೆ ತಿಂಗಳೊಂದಕ್ಕೆ ಸುಮಾರು ೭೮ ರೂಪಾಯಿಗಳ ವರಮಾನ ಬರುವಂತೆ ಮಾಡಿರುವರು. ಲವಂಗಭಾರತಿಸ್ವಾಮಿ ಮಠಕ್ಕೆ ಆರಾಧನೆಗೆ ತರಕಾರಿ ಹಣ್ಣುಗಳನ್ನು, ರಾಮಕೃಷ್ಣಾಶ್ರಮಕ್ಕೆ ತಿಂಗಳಿಗೆ ಒಂದು ಪಲ್ಲ ಅಕ್ಕಿಯನ್ನು, ಹೀಗೆ ಹತ್ತು ಹಲವಾರು ಸೇವಾಕಾರ್ಯ ಗಳನ್ನು ಮಾಡುತ್ತಾ ಕೆರೆಯ ನೀರನು ಕೆರಗೆ ಚೆಲ್ಲುವಂತೆ ತಾವು ಶ್ರಮಪಟ್ಟು ಸಂಪಾದಿಸಿದ್ದನ್ನು ದಾನ ಮತ್ತು ಧರ್ಮ ಕಾರ್ಯಗಳಿಗೆ ಬಳಸಿ ಸಾರ್ಥಕ ಜೀವನ ನಡೆಸಿದರು. ಮನಾಚೆ ಶ್ಲೋಕಗಳನ್ನು ರಚಿಸಿ ಸಾಹಿತ್ಯ ಸೇವೆ ಮಾಡಿದ ರಾಯರಿಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಂದಿನ ಅಧ್ಯಕ್ಷರಾದ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಕೊಂಡಾಡಿದ್ದಾರೆ. ರಾಯರಿಗೆ ೭೦ ವರ್ಷ ತುಂಬಿದ ಸಂದರ್ಭದಲ್ಲಿ, ೧೯೬೯ರಲ್ಲಿ ದಾಸರಹಳ್ಳಿಯ ಗ್ರಾಮಸ್ಥರು, ಹಳ್ಳಿಯ ಪ್ರಮುಖರು, ಸ್ನೇಹಿತರು, ಮಠಾಧೀಶರು, ಹಿರಿಯರು, ಕಿರಿಯರು ಸೇರಿ ಸತ್ಕಾರ ಸಮಾರಂಭವನ್ನು ಏರ್ಪಡಿಸಿ ಈ ಸಮಾರಂಭಕ್ಕೆ ಶ್ರೀ ಕೆಂಗಲ್ ಹನುಮಂತಯ್ಯನವರನ್ನು ಕರೆಸಿ ಅವರಿಂದ 'ಪರೋಪಕಾರಿ ಆರ್. ಜೈಮುನಿರಾವ್ ಜಾದವ್' ಎಂದು ಹೆಸರಿಸಿದ ಬಿನ್ನವತ್ತಳೆಯನ್ನು ಅರ್ಪಿಸಿ ಗೌರವಿಸಿದರು. ಉತ್ತರ ಭಾರತ ಯಾತ್ರೆ ಮುಗಿಸಿ ಬಂದ ರಾಯರು ತಮ್ಮ ಅನುಭವಗಳನ್ನು ಕಥಾ ರೂಪದಲ್ಲಿ ತಮ್ಮ ಅಭಿಮಾನಿಗಳಿಗೆ ಉಣಬಡಿಸಿದ್ದಾರೆ. ಜೀವನದಲ್ಲಿ ಇನ್ನೂ ಹಲವಾರು ಸೇವಾ ಕಾರ್ಯಗಳ ಕನಸುಗಳು ಸಾಧ್ಯವಾಗಲಿಲ್ಲವೆಂದು ಹೇಳಿ ಕೊಂಡಿದ್ದಾರೆ. ತಮ್ಮ ತಾಯಿ ಹೇಳಿದ್ದಂತೆ ಆಸ್ತಿಯೆಲ್ಲವನ್ನು ಮಕ್ಕಳಿಗೆ ಹಂಚಿಕೊಟ್ಟು ಮನೆಯಿಂದ ಹೊರನಡೆದಿದ್ದ ಗಂಡುಮಕ್ಕಳನ್ನು ಮನೆಗೆ ಕರತಂದು ನೆಮ್ಮದಿಯಿಂದ ಬದುಕುತ್ತಿದ್ದ ರಾಯರು ಅವರ ೮೨ನೆಯ ವಯಸ್ಸಿನಲ್ಲಿ ೧೯೮೧ ಮೇ ೩೦ರ ಶನಿವಾರ ಬೆಳಗ್ಗೆ ೧೧.೩೦ಕ್ಕೆ ಭಗವಂತನಲ್ಲಿ ಲೀನವಾದರು.

ಬಡತನದಲ್ಲಿ ಬೆಳೆದು ಸ್ವಂತ ಪರಿಶ್ರಮದಲ್ಲಿ ಪ್ರಾಮಾಣಿಕ ದುಡಿಮೆಯಿಂದ ಬಂದ ಆದಾಯವನ್ನು ತಮ್ಮ ಜೀವನ ನಿರ್ವಹಣೆಗೆ ಎಷ್ಟು ಬೇಕೊ ಅಷ್ಟನ್ನು ಬಿಟ್ಟು ಉದ್ಯಮದ ಆದಾಯವನ್ನೆಲ್ಲಾ ಜನಸೇವೆಗಾಗಿ ಮೀಸಲಿಟ್ಟರು. ಕುಶಲ ಕರ್ಮಿಗಳು ಮತ್ತು ದೈವಭಕ್ತರಾದ, ಜನಸೇವಾಪರಾಯಣರೂ ಆದ ಜೈಮುನಿರಾಯರು ಶಾಲೆ, ದೇವಸ್ಥಾನ. ಆಶ್ರಮಗಳನ್ನು, ಸಾರ್ವಜನಿಕ ರಸ್ತೆಗಳನ್ನು ನಿರ್ಮಿಸಿದರು. ಬಸ್ ವ್ಯವಸ್ಥೆ ಮಾಡಿದರು. ಬಡವರಿಗೆ ಆಶ್ರಯ ನೀಡಿದರು. ಅಗ್ರಹಾರ ದಾಸರಹಳ್ಳಿಯ ಅಭಿವೃದ್ಧಿಗೆ ಮತ್ತು ಅಲ್ಲಿಯ ಜನರ ಪ್ರಗತಿಗೆ ಶ್ರಮಿಸಿದರು. ಅಂದಿನ ಅಗ್ರಹಾರ ದಾಸರಹಳ್ಳಿಯ ಪ್ರವೇಶ ದ್ವಾರಕ್ಕೆ ಅವರ ನೆನಪಿಗಾಗಿ ನಗರ ಸಭೆ ಜೈಮುನಿರಾಯರ ಸರ್ಕಲ್ ಎಂಬ ಹೆಸರನ್ನು ಇರಿಸಿದೆ.

[ಸಲಹೆ, ಸೂಚನೆ ನೀಡಿದ ಪ್ರೊ. ಜಿ. ಅಶ್ವತ್ಥನಾರಾಯಣ ಅವರಿಗೆ ಕೃತಜ್ಞತೆಗಳು.]



## ಆಧಾರಸೂಚಿ

೧. ಜನಸೇವಾ ಪಾರಾಯಣ ಆರ್. ಜೈಮುನಿರಾವ್ ಜಾದವ್, ಲೇಖಕಿ ಎನ್. ಮೀರಾಬಾಯಿ, ಪ್ರ. ಮೀರಾ ಪ್ರಕಾಶನ, ಬೆಂ. ೨೦೧೧.



# ಕ್ರುಂಬೀಗಲ್ ಮತ್ತು ಮೈಸೂರು ಸಂಬಂಧ

**ಡಾ. ಜೆ.ವಿ. ಗಾಯತ್ರಿ**

'ಜಿ.ಹೆಚ್. ಕ್ರುಂಬೀಗಲ್‌ರವರು ಮೈಸೂರು ಮಹಾರಾಜರ ಸರ್ಕಾರದಲ್ಲಿ ವಾಸ್ತುಶಿಲ್ಪಿಗಳಾಗಿ ನಗರ ಯೋಜಕರಾಗಿ ಹಾಗೂ ತೋಟಗಾರಿಕೆ ಇಲಾಖೆಯ ಮುಖ್ಯಸ್ಥರಾಗಿ ಭಾರತದಲ್ಲಿ ೫೦ ವರ್ಷಗಳಿಗೂ ಹೆಚ್ಚಿನ ಅದ್ವಿತೀಯ ಸೇವೆ ಸಲ್ಲಿಸಿದವರು. ಮೂಲತಃ ಜರ್ಮನ್ ದೇಶದವರಾಗಿದ್ದು ಬ್ರಿಟಿಷ್ ಮಹಿಳೆಯನ್ನು ವಿವಾಹವಾಗಿದ್ದ ಇವರು ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ವಿಶೇಷವಾಗಿ ಲಾಲ್‌ಬಾಗ್ ಮತ್ತು ಮೈಸೂರಿನ ಅರಮನೆಯ ಉದ್ಯಾನವನದ ಯೋಜನೆ ಮತ್ತು ಆಲಂಕಾರಿಕ ದೀಪಗಳ ವ್ಯವಸ್ಥೆಯ ಕಾರ್ಯಗಳಲ್ಲಿ ಶ್ರಮಿಸಿದವರು. ಮೈಸೂರು ರಾಜ್ಯದ ಪಟ್ಟಣಗಳ ಯೋಜನೆಯಲ್ಲಿ ಇವರ ಕೊಡುಗೆ ಅಪಾರವಾದುದು. ಇವರ ಸ್ಮರಣಾರ್ಥ ಬೆಂಗಳೂರಿನಲ್ಲಿ ಬಸವನಗುಡಿ ಮಾರ್ಗವಾಗಿ ಲಾಲ್‌ಬಾಗ್‌ಗೆ ಹೋಗುವ ಮಾರ್ಗಕ್ಕೆ 'ಕ್ರುಂಬೀಗಲ್ ರಸ್ತೆ' ಎಂಬ ಹೆಸರನ್ನು ಇಡಲಾಗಿದೆ. ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಇವರು ನಿವೃತ್ತರಾದ ನಂತರವೂ, ಇವರ 'ಸ್ಥಾನವನ್ನು ಬೇರೆ ಯಾರೂ ತುಂಬಲು ಸಾಧ್ಯವಿಲ್ಲ' ಎಂದು ಪ್ರಶಂಸಿಸುತ್ತಾ ಇವರ ಸೇವೆಯನ್ನು ರೂ.೨೫೦/-ರ ಭತ್ಯೆಯ ಮೇಲೆ ಹಲವಾರು ವರ್ಷಗಳು ಮುಂದುವರೆಸುತ್ತಾರೆ; ಬೆಂಗಳೂರಿನಲ್ಲಿ ಅರಮನೆಯ ಭವ್ಯವಾದ ಕಟ್ಟಡ 'ಗ್ರಾನೈಟ್ ಕ್ಯಾಸೆಲ್' ನಲ್ಲಿ ಇವರ ಕುಟುಂಬ ತಂಗಲು ಅನುವು ಮಾಡಿಕೊಡುತ್ತಾರೆ. ಆದರೆ ಜಿ.ಹೆಚ್. ಕ್ರುಂಬೀಗಲ್‌ರವರು ವಿಶ್ವಯುದ್ಧಗಳ ಸಂದರ್ಭಗಳಲ್ಲಿ ಜರ್ಮನ್ ದೇಶದ ಪ್ರಜೆಯಾಗಿದ್ದುದರ ಕಾರಣ ಬ್ರಿಟಿಷ್ ಸರ್ಕಾರದ ಅನುಮಾನಕ್ಕೆ ಗುರಿಯಾಗುವ ಪ್ರಸಂಗ ಬರುತ್ತದೆ.

ಗುಸ್ತವ್ ಹರ್ಮನ್ ಕ್ರುಂಬೀಗಲ್‌ರವರು ೧೮ ಡಿಸೆಂಬರ್ ೧೮೭೫ರಂದು ಜರ್ಮನಿಯ ಡ್ರೆಸ್‌ಡನ್ ಬಳಿಯ ಲೋಹಮೆನ್ ಎಂಬಲ್ಲಿ ಜನಿಸಿದರು. ತಮ್ಮ ಪ್ರಾರಂಭಿಕ ವಿದ್ಯಾಭ್ಯಾಸವನ್ನು ವಿಲ್ಸ್‌ಫ್ರೆಡ್ ಮತ್ತು ಡ್ರೆಸ್‌ಡೆನ್‌ನಲ್ಲಿ ಮುಗಿಸಿ ನಂತರ ತೋಟಗಾರಿಕೆ ಮತ್ತು ಭೂ ವಾಸ್ತುಶಿಲ್ಪ (Landscape architecture) ದಲ್ಲಿ ಪರಿಣತಿ ಪಡೆದರು. ನಂತರ ಲಂಡನ್ನಿನ ಕ್ಯೂ ಉದ್ಯಾನವನದಲ್ಲಿ ೫ ವರ್ಷಗಳ ಕಾಲ ಕಾರ್ಯನಿರ್ವಹಿಸಿ ಮುಂದೆ ೧೮೯೩ರಲ್ಲಿ ಭಾರತಕ್ಕೆ ಒಂದು ಬರೋಡಾ ಮಹಾರಾಜರ ಬಟಾನಿಕಲ್ ಗಾರ್ಡನ್‌ನ ಆಗಿ ಕೆಲಸಕ್ಕೆ ಸೇರಿದರು. ಇವರು ಕ್ಯೂ ಗಾರ್ಡನ್‌ನಲ್ಲಿ 'ಕ್ಯೂ ಗಿಲ್ಡ್‌ನ್ನು ಸ್ಥಾಪಿಸಿದರು.

ಕೆಲವು ವರ್ಷಗಳ ನಂತರ ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಇವರನ್ನು ಮೈಸೂರು ರಾಜ್ಯದಲ್ಲಿ ಸೇವೆ ಸಲ್ಲಿಸಲು ಆಹ್ವಾನಿಸಿದರು. ಅದರಂತೆ ೧೯೦೮ರಲ್ಲಿ ಲಾಲ್‌ಬಾಗ್ ಸೂಪರಿಂಟೆಂಡೆಂಟ್‌ರಾದ ಜಾನ್ ಕ್ಯಾಮೆರಾನ್‌ರ ನಿವೃತ್ತಿಯ ನಂತರ ಇವರು ನೇಮಕಗೊಂಡರು. ಮೈಸೂರು ಸರ್ಕಾರದ ರಾಜ್ಯದ ವಿವಿಧ ಉದ್ಯಾನವನಗಳು, ತೋಟಗಳು ಮತ್ತು ಗಿರಿಧಾಮಗಳು ಹಾಗೂ ತೋಟಗಾರಿಕೆ ಸಿಬ್ಬಂದಿಗಳನ್ನು ಒಗ್ಗೂಡಿಸಿ ಸರ್ಕಾರಿ ತೋಟಗಳ ಇಲಾಖೆಯನ್ನು ಮಾಡಿ ಅದಕ್ಕೆ ಕ್ರುಂಬೀಗಲ್‌ರನ್ನು ಸೂಪರಿಂಟೆಂಡೆಂಟ್‌ರಾಗಿಯೂ ನಂತರ ತೋಟಗಾರಿಕಾ ನಿರ್ದೇಶಕರಾಗಿಯೂ ಸ್ಥಾನಪನ್ನಗೊಳಿಸಲಾಯಿತು. ಕ್ರುಂಬೀಗಲ್‌ರವರು ತೋಟಗಾರಿಕೆಯನ್ನು ಅತ್ಯಂತ ಸುಂದರವಾಗಿಯೂ ಲಾಭದಾಯಕವಾಗಿಯೂ ಅಭಿವೃದ್ಧಿಗೊಳಿಸಿದರು. ಅನೇಕ ವರ್ಣರಂಜಿತ ಹೂಗಿಡಗಳ ತಳಿಗಳನ್ನು ದೇಶ ವಿದೇಶಗಳಿಂದ ತರಿಸಿ ಹಾಕಿಸಿದರಲ್ಲದೆ ಮೈಸೂರು ರಾಜ್ಯದ ಪ್ರಖ್ಯಾತ ಕೃಷ್ಣರಾಜಸಾಗರದ ಬೃಂದಾವನ ಉದ್ಯಾನವನ ಮುಂತಾದ ಉದ್ಯಾನವನಗಳನ್ನೂ ಅಭಿವೃದ್ಧಿಗೊಳಿಸಿದುದಲ್ಲದೆ ಮೈಸೂರು ತೋಟಗಾರಿಕೆ ಸಂಘವನ್ನು ೧೯೧೨ರಲ್ಲಿ ಸ್ಥಾಪಿಸಿದರು. ಇವರ ಕಾಲದಲ್ಲಿ ಫಲಪುಷ್ಪ ಪ್ರದರ್ಶನವನ್ನು ಏರ್ಪಡಿಸಿದ್ದುದು, ಆರ್ಥಿಕವಾಗಿ, ಅನುಕೂಲವಾಗುವಂತೆ ಗಿಡಮರಗಳನ್ನು ಬೆಳೆಸುವುದು, ಲಾಲ್‌ಬಾಗ್‌ನಲ್ಲಿ 'ಬ್ಯೂರೋ ಆಫ್ ಎಕನಾಮಿಕ್ ಪ್ಲಾಂಟ್ಸ್' ಮತ್ತು ತೋಟಗಾರಿಕೆ ತರಬೇತಿ

* # ೧೨೨೧, 'ಪವಿತ್ರ', ೩ನೇ ಮೈನ್, ೮ನೇ ಕ್ರಾಸ್, ವಿವೇಕಾನಂದನಗರ, ಮೈಸೂರು-೫೭೦೦೦೭.

ಶಾಲೆಯನ್ನು ದೇಶದಲ್ಲಿ ಪ್ರಥಮ ಬಾರಿಗೆ 'ಕ್ಯೂ' ಮಾದರಿಯಲ್ಲಿ ಪ್ರಾರಂಭಿಸಿದ್ದುದು, 'ರೋಮ್ ಬ್ಯೂಟಿ' ಎಂಬ ಸೇಬಿನ ತಳಿಯನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸಲು ಮಾಡಿದ ಪ್ರಯತ್ನಗಳಿಂದಾಗಿ ಕ್ರುಂಬೀಗಲ್‌ರವರು ರಾಜ್ಯಕ್ಕೆ ನೀಡಿದ ಕೊಡುಗೆ ಅಪಾರ. ಇಂದಿಗೂ ಲಾಲ್‌ಬಾಗ್‌ನಲ್ಲಿ ಕ್ರುಂಬೀಗಲ್‌ರು ದಾನಮಾಡಿರುವ 'ರೋಲಿಂಗ್ ಷೀಲ್ಡ್' ಅತ್ಯುತ್ತಮವಾಗಿ ಹೂ ಜೋಡಣೆ ಮಾಡಿದ ಅಭ್ಯರ್ಥಿಗೆ ಸಲ್ಲುತ್ತದೆ.

ಮೈಸೂರು ಪ್ರಾಣಿ ಸಂಗ್ರಹಾಲಯದ ಉದ್ಯಾನವನ, ಕೆಮ್ಮಣ್ಣುಗುಂಡಿಯ ಗುಲಾಬಿ ತೋಟ ಮತ್ತು ಊಟಿಯ ಭೂ ವಾಸ್ತುಶಿಲ್ಪ ವಿನ್ಯಾಸ, ಕರ್ಜನ್ ಉದ್ಯಾನವನ, ಗಾರ್ಡನ್‌ಗಳು ಕ್ರುಂಬೀಗಲ್‌ರವರ ಭೂ ವಾಸ್ತುಶಿಲ್ಪ ವಿನ್ಯಾಸ, ಉದ್ಯಾನವನ ಅಭಿವೃದ್ಧಿ ಮತ್ತು ತೋಟಗಾರಿಕಾ ಕುಶಲತೆಯ ಕುರುಹುಗಳಾಗಿ ಇಂದಿಗೂ ಉಳಿದಿವೆ.

ಬೆಂಗಳೂರು 'ಉದ್ಯಾನನಗರಿ' ಎಂದು ಕರೆಸಿಕೊಳ್ಳಲು ಕಾರಣರಾದವರು ಕ್ರುಂಬೀಗಲ್‌ರವರು. ೮ನೇ ಫೆಬ್ರವರಿ ೧೯೫೮ರಲ್ಲಿ ಬೆಂಗಳೂರಿನ ಗ್ರಾನೈಟ್ ಕ್ಯಾಸೆಲ್‌ನಲ್ಲಿ ನಿಧನರಾದ ಕ್ರುಂಬೀಗಲ್‌ರವರು ಬೆಂಗಳೂರನ್ನು ಮರ, ಗಿಡಗಳು, ಹೂ ತೋಟಗಳಿಂದ ತುಂಬಿದರು. ಗುಲ್ ಮೊಹರ್, ಜಕರಂದ ಇಂದಿನ ಮೆಟ್ರೋ ರೈಲು, ರಸ್ತೆ ಅಗಲೀಕರಣಗಳ ಮಧ್ಯೆಯೂ ಬೆಂಗಳೂರಿನಲ್ಲಿ ಉಳಿದಿರುವುದು ಅತ್ಯಂತ ಸಂತೋಷಕರ ಸಂಗತಿ. ವಿಶೇಷವಾದ ಹೂ ಗಿಡಗಳನ್ನು ಲಂಡನ್, ಮುಂತಾದ ದೇಶಗಳಿಂದ ತರಿಸಿ ಅವುಗಳ ಹೂಗಳು ಸರಣಿಯಂತೆ ಅರಳುವ ಪರಿಕಲ್ಪನೆಯನ್ನು ಇವರು ಜಾರಿಗೆ ತಂದರು.

ಊಟಿಯಲ್ಲಿದ್ದ ಮಹಾರಾಜ ಫರ್ನ್‌ಹಿಲ್ ಅರಮನೆಯ ತೋಟದ ಉಸ್ತುವಾರಿಯನ್ನೂ ಕ್ರುಂಬೀಗಲ್‌ರವರು ಮಾಡಿದರು. ಅಲಂಕಾರಿಕ ಹೊಸ ವಿಧದ ಗಿಡಗಳ ಮತ್ತು ಫಲಪುಷ್ಪ ಗಿಡಗಳನ್ನು ತರಿಸಿ ನೆಟ್ಟರು. ಕುಂಡಗಳಲ್ಲಿ ಕಸಿ ಮಾಡಿ ಬೆಳೆಸುವ ವಿಧಾನಕ್ಕೆ ಹೆಚ್ಚು ಒತ್ತುಕೊಡಲಾಯಿತು. ವಿವಿಧ ವರ್ಣಗಳಲ್ಲಿ ನರ್ಸರಿಯನ್ನು ನಿರ್ವಹಣೆ ಮಾಡಲಾಯಿತು.

### ತೋಟಗಾರಿಕೆ ತರಬೇತಿ ಸಂಸ್ಥೆ

ಈಗ ಲಾಲ್‌ಬಾಗ್‌ನಲ್ಲಿರುವ ಆಡಳಿತ ವಿಭಾಗದ ಕಟ್ಟಡವು ತೋಟಗಾರಿಕೆ ತರಬೇತಿ ಸಂಸ್ಥೆಯನ್ನು ಪ್ರಾರಂಭಿಸುವ ಉದ್ದೇಶದಿಂದ ಕ್ರುಂಬೀಗಲ್‌ರ ಕಾಲದಲ್ಲಿ ಕಟ್ಟಲಾಯಿತು, ಇಲ್ಲಿ ಗ್ರಂಥಾಲಯ, ಬ್ಯೂರೋ ಆಫ್ ಎಕನಾಮಿಕ್ ಬಾಟನಿ, ಹರ್ಬೇರಿಯಮ್, ಪ್ರಾಕೃತಿಕ ಇತಿಹಾಸ ಸಂಗ್ರಹಾಲಯ, ಪ್ರಯೋಗಾಲಯ ಮತ್ತು ಉಪನ್ಯಾಸ ಕೊಠಡಿಗಳನ್ನು ಅಳವಡಿಸಲು ಕ್ರುಂಬೀಗಲ್‌ರವರು ಯೋಜಿಸಿದ್ದರು. ಗ್ರಂಥಾಲಯವು ಮಾಸಪತ್ರಿಕೆಗಳು, ನಿಯತಕಾಲಿಕೆಗಳನ್ನು ಒಳಗೊಂಡಿತ್ತು.

ಕ್ರುಂಬೀಗಲ್‌ರವರು ಈ ಬಗ್ಗೆ ವರದಿ ನೀಡಿದ್ದು ವರದಿಯ ಉದ್ಧೃತ ಬಾಗ ಹೀಗಿದೆ:

'The institute will be situated on sloping ground so that the front elevation has high plinth terrace is located between the projecting wings and this is high enough to provide below for stone work rooms, for all the sections thus saving cost of separate building being more convenient. I attach a rough sketch of the ground plan to show general arrangement of rooms. I would have liked to provide in place of entrance hall really a large public lecture hall but refrain on account of expenses, perhaps a generous patron of floriculture will come forward with Rs. 10,000/- to include this desirable feature before we start the building.'

ಕಟ್ಟಡದ ಛಾವಣಿ ಮೊದಲು ಗ್ಲಾಸ್‌ನದಾಗಿದ್ದು ಮುಂದೆ ಇದಕ್ಕೆ ಜಿಂಕ್ ಷೀಟ್‌ನ್ನು ಹಾಕಲಾಯಿತು. ಮುಂದೆ ಈ ಕಟ್ಟಡವು ಕ್ರುಂಬೀಗಲ್‌ರ ಕಛೇರಿಯಾಗಿ ಉಪಯೋಗಿಸಲ್ಪಟ್ಟಿತು.

### ವಿಶ್ವ ಮಹಾಯುದ್ಧ

ಕ್ರುಂಬೀಗಲ್‌ರವರು ವಿಶ್ವ ಮಹಾಯುದ್ಧದ ಸಂದರ್ಭದಲ್ಲಿ (೧೯೩೯) ಜರ್ಮನ್ ದೇಶೀಯರಾದ್ದರಿಂದ ಅಹಮದ್ ನಗರ ಕ್ಯಾಂಪ್‌ನಲ್ಲಿ ಅಜ್ಞಾತವಾಸದ ಅನುಭವಪಡಬೇಕಾಗುತ್ತದೆ. ಅಲ್ಲಿನ ಕ್ಯಾಂಪ್ ಕಮಾಂಡೆಂಟ್‌ರವರು ಮೈಸೂರಿಗೆ ಸಂಬಂಧಿಸಿದ ಡ್ರಾಯಿಂಗ್‌ಗಳನ್ನು ಇವರು ಮಾಡಲು ಅನುವು ಮಾಡಿರುತ್ತಾರೆ.

ಇದಕ್ಕೂ ಮೊದಲು ೧೯೧೯ರಲ್ಲಿ ಇವರನ್ನು ಜರ್ಮನಿಗೆ ಕಳುಹಿಸಬೇಕೆಂಬ ವಿಚಾರ ಬ್ರಿಟಿಷ್ ಸರ್ಕಾರದ ಗಮನದಲ್ಲಿತ್ತು. ಆ ಸಂದರ್ಭದಲ್ಲಿ ಕ್ರುಂಬೀಗಲ್‌ರ ಪತ್ನಿ ತಾನು ಇಂಗ್ಲಿಷ್ ಪ್ರಜೆಯಾಗಿದ್ದು ತಮ್ಮ ಪರಿವಾರ ಜರ್ಮನಿಗೆ ಹಿಂತಿರುಗಿಸಿದಲ್ಲಿ ತಮ್ಮ ಮೂವರು ಹೆಣ್ಣು ಮಕ್ಕಳು ಮತ್ತು ತಮಗೆ ಆ ದೇಶದಲ್ಲಿ ಮನೆ, ಕೆಲಸ – ಏನು ಇರುವುದಿಲ್ಲವಾದ್ದರಿಂದ ಹಾಗೂ ತಮ್ಮ ಪತಿ ಇಂಗ್ಲೆಂಡ್‌ನಲ್ಲಿ ವಿದ್ಯಾಭ್ಯಾಸ ಮಾಡಿ ಮೈಸೂರು ರಾಜ್ಯದಲ್ಲಿ ಸೇವೆ ಸಲ್ಲಿಸುತ್ತಿರುವುದರಿಂದ ಬೆಂಗಳೂರಿನಲ್ಲಿಯೇ ಮುಂದುವರೆಸಬೇಕೆಂದು ವೈಸರಾಯ

ರಿಗೆ ಶಿಫಾರಸು ಮಾಡುವಂತೆ ಮಹಾರಾಜರನ್ನು ಕೋರುತ್ತಾರೆ. ಮಹಾರಾಜರ ಶಿಫಾರಸಿನ ಮೇರೆಗೆ ಇದು ತಪ್ಪುತ್ತದೆ.

### ಗ್ರಾನೈಟ್ ಕ್ಯಾಸಲ್‌ನಲ್ಲಿ ವಾಸ

ಜಿ.ಹೆಚ್. ಕ್ರುಂಬೀಗಲ್‌ರವರು ಮೊದಲು ಲಾಲ್‌ಬಾಗ್ ವಸತಿ ಗೃಹದಲ್ಲಿಯೂ ನಂತರ ರೆಸಿಡೆನ್ಸಿ ರಸ್ತೆಯ ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದರು. ಇವರ ನಿವೃತ್ತಿಯ ನಂತರ 'ಗ್ರಾನೈಟ್ ಕ್ಯಾಸಲ್'ನ್ನು ಉಚಿತವಾಗಿ ಅರಮನೆಯಿಂದ ನೀಡಲಾಗಿದ್ದು ಅಲ್ಲಿ ನೆಲಸಿದ್ದರು. ಅದನ್ನು ತಮಗೆ ಮಾರುವಂತೆ ಕೋರಿದ್ದರು; ಮಹಾರಾಜರು ಅದಕ್ಕೆ ಒಪ್ಪದೆ ಆ ಭವನವನ್ನು ಕ್ರುಂಬೀಗಲ್‌ರವರ ವಾಸಕ್ಕೆ ಅವರ ಜೀವಿತದ ವರೆಗೂ ನೀಡಿದ್ದರು. ಈ ಬಗ್ಗೆ ಒಮ್ಮೆ ಮಹಾರಾಜರಿಗೆ ಪ್ರಸ್ತಾವನೆಯನ್ನು ಸಲ್ಲಿಸಿ "ಆ ಭವನದ ಛಾವಣಿಯಲ್ಲಿ ಕೆಲವು ಕಡೆ ಮಳೆ ನೀರು ಸೋರುತ್ತಿದ್ದು, ಹಾಲ್ ಮತ್ತು ಟೀ ರೂಂನಲ್ಲಿ ಮಳೆ ಇರಚಲು ಬರುವುದರಿಂದ ಅದನ್ನು ದುರಸ್ಥಿ ಮಾಡಿಕೊಂಡು ಉಪಯೋಗಿಸುವುದಾಗಿ ತಿಳಿಸುತ್ತಾ, ದುರಸ್ಥಿಗಾಗಿ ರೂ.೧೮,೦೦೦/- ಖರ್ಚು ಮಾಡಿರುವುದರಿಂದ ಅದನ್ನು ಖರೀದಿಸದೇ ಇದ್ದಲ್ಲಿ ತಮ್ಮ ಕುಟುಂಬವು ತಮ್ಮ ಮರಣಾನಂತರ ಮನೆ ಇಲ್ಲದೆ ಹೋಗುವುದಲ್ಲದೆ ತಾವು ಖರ್ಚು ಮಾಡಿರುವ ರೂ. ೧೮,೦೦೦/- ಗಳು ಸಹ ತಮ್ಮ ಆದಾಯದಲ್ಲಿ ಕಡಿಮೆ ಆಗುವುದರಿಂದ ಅವರ ಜೀವನಕ್ಕೆ ಕಷ್ಟವಾಗುವುದೆಂದು" ಮನವಿ ಮಾಡುತ್ತಾರೆ.

ಕ್ರುಂಬೀಗಲ್‌ರವರ ಮರಣಾನಂತರ ಅವರ ಪತ್ನಿ ಅದೇ ಭವನದಲ್ಲಿ ತಮ್ಮ ಚರಾಸ್ತಿಯನ್ನು ಮಾರುವವರೆವಿಗೂ ವಾಸಿಸಲು ಅವಕಾಶ ಕೊಡಬೇಕೆಂದು ಕೇಳುತ್ತಾರೆ. ಆದರೆ ಅರಮನೆಯಿಂದ 'ಗ್ರಾನೈಟ್ ಕ್ಯಾಸಲ್' ನ್ನು ಮಾರಿರುವುದರಿಂದ ಮನೆ ಬಿಡಬೇಕೆಂದು ಏಪ್ರಿಲ್ ೧೯೩೬ರಲ್ಲಿ ತಿಳಿಸುತ್ತಾರೆ.

### ಸೇವೆಯ ಮುಂದುವರಿಕೆ

ಮಹಾರಾಜರು ಅವರ ನಿವೃತ್ತಿಯ ನಂತರದ ಅವರ ಸೇವೆಯನ್ನು ಮುಂದುವರೆಸುವ ಬಗ್ಗೆ ೮ನೇ ಫೆಬ್ರವರಿ ೧೯೨೨ರಲ್ಲಿ ಆಪ್ತ ಕಾರ್ಯದರ್ಶಿ ಮಿರ್ಜಾ ಇಸ್ಮಾಯಿಲ್‌ರು ಮಥಾನ್‌ರಿಗೆ ಬರೆದ ಪತ್ರದಲ್ಲಿ ಅವರ ಸೇವೆಯನ್ನು ಹೀಗೆಂದು ಉಲ್ಲೇಖಿಸುತ್ತಾರೆ.

'Mr. Krumbiegal is one of those officers whom it would not be easy to replace. His Highness hopes to retain him in service so long as he is physically fit and able to discharge his duties with that zeal and energy which he has hitherto displayed in a striking manner. His Highness entertains no doubt that the Dewan will agree with him in this view.'

ಮೈಸೂರು ಅರಮನೆ ಕರಿಕಲ್ಲು ತೊಟ್ಟಿ ದ್ವಾರದ ಕಾವಲು ಕೊಠಡಿ ಮತ್ತು ಗೋಪುರಗಳ ಅಲಂಕರಣ ಕಾರ್ಯವನ್ನು ವಿನ್ಯಾಸಗೊಳಿಸಿದ ಕಾರ್ಯ, ಮೈಸೂರಿನ ಚೆಲುವಾಂಬ ಉದ್ಯಾನವನಕ್ಕೆ ಜಾಗದ ಆಯ್ಕೆ, ಕೆಮ್ಮಣ್ಣುಗುಂಡಿ ಅರಮನೆ ಉದ್ಯಾನವನಗಳಿಗೆ ಹೂ ಗಿಡಗಳ ಆಯ್ಕೆ, ಚಾಮುಂಡಿ ಗೆಸ್ಟ್ ಹೌಸ್‌ನ ಕಾರ್ಯಗಳ ನಿರ್ವಹಣೆ, ಮೈಸೂರಿನ ಮಿರ್ಜಾ ರಸ್ತೆಯ ನಿಷಾದ್ ಬಾಗ್‌ನ ಪರ್ಗೋಲಾ ದ್ವಾರಗಳ ವಿನ್ಯಾಸ, ವಸಂತಮಹಲ್, ಬೇಸಿಗೆ ಅರಮನೆ ತೋಟಗಳ ವಿನ್ಯಾಸ, ಜೇಮ್ಸ್ ಗಾರ್ಡನ್ ಹೂದೋಟ, ಕೂಚ್ ಬಿಹಾರ್ ತೋಟದ ವಿನ್ಯಾಸಗಳಲ್ಲಿ ಇವರ ಸಲಹೆಗಳು ಸಹಕಾರಿಯಾಗಿದೆ.

ಬೆಂಗಳೂರಿನ ಜಯಮಹಲ್ ಪ್ರದೇಶದಲ್ಲಿ ಖಾಸಗಿ ಬಂಗಲೆಗಳ ನಿವೇಶನವನ್ನು ಯೋಜಿಸಿರುವುದರಲ್ಲೂ ಕ್ರುಂಬೀಗಲ್ ಪಾತ್ರ ದೊಡ್ಡದು.

ಇವರು 'The Horticulture' ಎಂಬ ಪತ್ರಿಕೆಯನ್ನು ಪ್ರಾರಂಭಿಸಿ ಅದರ ಸಂಸ್ಥಾಪಕ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದು ಇಂದಿಗೂ ಆ ಪತ್ರಿಕೆ ಪ್ರಕಟವಾಗುತ್ತಿದೆ. ಇವರು ಮಿಥಿಕ್ ಸೊಸೈಟಿಯ ಸ್ಥಾಪಕ ಸದಸ್ಯರಾಗಿಯೂ ಖಜಾಂಚಿಯಾಗಿಯೂ ಅನೇಕ ವರ್ಷಗಳು ಸೇವೆ ಸಲ್ಲಿಸಿದರು. ಅಲ್ಲದೆ ಮಿಥಿಕ್ ಸೊಸೈಟಿಗೆ ರೂ.೧,೦೦೦/- ಗಳ ದೇಣಿಗೆಯನ್ನು ನೀಡಿದ್ದಲ್ಲದೆ ಅನೇಕ ಲೇಖನಗಳನ್ನು ಮಿಥಿಕ್ ಸೊಸೈಟಿ ಜರ್ನಲ್‌ನಲ್ಲಿ ಬರೆದಿರುತ್ತಾರೆ.

ಕ್ರುಂಬೀಗಲ್‌ರಂತಹ ಮಹಾನ್ ತೋಟಗಾರಿಕಾ ವಾಸ್ತುಶಿಲ್ಪಿಯ ಕೊಡುಗೆಯನ್ನು ಬೆಂಗಳೂರಿನ ಕೆಲವು ಚಿತ್ರ ಕಲಾವಿದರು ನೆನೆಯುತ್ತಾ ಏಪ್ರಿಲ್ ೧೬ ರಿಂದ ೩೦, ೨೦೧೧ರ ವರೆಗೆ ಬೆಂಗಳೂರಿನ ಇಂದಿರಾ ನಗರದ ಗೋಥೆ ಸಂಸ್ಥೆಯಲ್ಲಿ ಕ್ರುಂಬೀಗಲ್‌ರ ಸ್ಮರಣಾರ್ಥ ಮರ ಗಿಡಗಳ ಚಿತ್ರ ಕಲಾ ಪ್ರದರ್ಶನ ಏರ್ಪಡಿಸಿದ್ದರು. ದೃಶ್ಯ ಕಲಾವಿದರಾದ ಸುರೇಶ್ ಜಯರಾಮ್‌ರವರು ಈ ಪ್ರದರ್ಶನವನ್ನು ಏರ್ಪಡಿಸಿದ್ದು ಇದರಲ್ಲಿ ಬಿ.ಜೆ. ಶ್ಯಾಮಲಾ, ಮಧು, ದಿಲೀಪ್ ದ ಕುನ್ಹಾರವರು ತಮ್ಮ ಚಿತ್ರಗಳ ಮೂಲಕ ಕ್ರುಂಬೀಗಲ್‌ರವರ ಕಾರ್ಯದ ವಿಶ್ಲೇಷಣೆಯನ್ನು ಮೂಡಿಸುತ್ತಾ ಬೆಂಗಳೂರು ನಗರದ ಹಸರೀಕರಣಕ್ಕೆ ವೀಕ್ಷಕರಿಗೆ ಪ್ರೇರಣೆಯನ್ನು ನೀಡಿದರು.

'City under Siege' ಎಂಬ ಈ ಕಲಾ ಪ್ರದರ್ಶನದಲ್ಲಿ ಕಡಿದ ಮರಗಳ ಕೊಂಬೆ, ಬ್ಯಾಂಡೇಜ್ ಹಾಕಿದ ಮರದ

ರೆಂಬೆಗಳು ಮುಂತಾದವುಗಳನ್ನು ಪ್ರದರ್ಶಿಸಲಾಗಿದ್ದು ಮರೆಯಾಗುತ್ತಿರುವ ಬೆಂಗಳೂರಿನ ಮರಗಿಡಗಳನ್ನು ಇಲ್ಲಿ ನೆನಪಿಗೆ ತರಲಾಗಿತ್ತು.

ವಿದ್ಯುಚ್ಛಕ್ತಿ ತಂತಿ ಕಂಬಗಳಿಂದ ಮರ ಕಡಿಯುವ ಬಗ್ಗೆ ಕ್ರುಂಬೀಗಲ್‌ರವರು ವಿರೋಧ ವ್ಯಕ್ತಪಡಿಸುತ್ತಾ

"The wanton tree butchery that is going on is towh under the electric light is barbaity and a poor certificate for our claim to enlightenmen and aesthetic semse".

ಮತ್ತೊಂದು ವಿಶೇಷವಾದ ಸಂಗತಿಯೆಂದರೆ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್‌ರೊಂದಿಗೆ ಕ್ರುಂಬೀಗಲ್‌ರವರು ಹಸ್ತಾಲಾಘವ ನೀಡುವ ವಿಶೇಷ ಸವಲತ್ತು ಪಡೆದಿದ್ದರು.

ಹೀಗೆ ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಕ್ರುಂಬೀಗಲ್‌ರೊಂದಿಗೆ ಸ್ನೇಹ ಪೂರ್ವಕ ಸಂಬಂಧ ಹೊಂದಿದ್ದು ಅನೇಕ ದಾಖಲೆಗಳಿಂದ ತಿಳಿದು ಬರುತ್ತದೆ. ಮೈಸೂರು, ಬೆಂಗಳೂರು ಮತ್ತು ರಾಜ್ಯದ ಅನೇಕ ನಗರಗಳ ಭೂ ವಿನ್ಯಾಸ ಮಾಡಿ ನಗರಗಳ ಅಲಂಕರಣ ಕಾರ್ಯ ಕೈಗೊಂಡ ಮಹಾನ್ ಭೂ ವಾಸ್ತುಶಿಲ್ಪಿ ಕ್ರುಂಬೀಗಲ್ ರವರ ಸೇವೆ ಚಿರಸ್ಮರಣೀಯ.



## ಆಧಾರಸೂಚಿ


೧. Glass House, *The jewel of Lalbagh,* Mysore Horticultural Society, Lalbagh, Bangalore, 1991.

೨. *Artists pay tribute to Bangalore's Landscaping pioneer*, Maragathawalli Inba Muthaiah.

೩. *A Guide to the Records in the Divisional Archives Office,* Mysore, Part I- Page 54.

೪. *"Artistic Structures in Lalbagh"*- S. Narayanaswamy (in) The Lalbagh, April – December 1989, pp. 51-52.

೫. *Bangalore Palace File,* Nos. 15/1922, 5/1929, 13/1919 and 4/1960.

೬ G.H. Krumbiegal (1865- 1956) whatever he touched he adorned', Bangalore, 2010.

There is an oil painting of Krumbiegal in the collection of the Mysore palace. A statue of him was also commissioned by the maharaja.

೯೪

# ಬೆಂಗಳೂರಿನಲ್ಲಿ ಠಾಗೂರರು

ವೇಮಗಲ್ ಸೋಮಶೇಖರ್*

ನಮ್ಮದೇಶದ ಸಾಹಿತ್ಯಸಂಸ್ಕೃತಿಗಳ ಸಂಬಂಧದಲ್ಲಿ ನೋಬಲ್ ಪಾರಿತೋಷಕವನ್ನು ಪಡೆದು ಅಂತರ ರಾಷ್ಟ್ರೀಯ ಖ್ಯಾತಿಗಳಿಸಿದ್ದ ರವೀಂದ್ರನಾಥ ಠಾಗೂರರು ೧೯೧೯ರಲ್ಲಿ ಶಾಂತಿನಿಕೇತನಕ್ಕಾಗಿ ಹಣಸಂಗ್ರಹ ಮಾಡುವ ಉದ್ದೇಶದಿಂದ ದಕ್ಷಿಣ ಭಾರತದಲ್ಲಿ ಸಂಚಾರ ಮಾಡುತ್ತಿದ್ದರು. ಆ ಸಮಯದಲ್ಲಿ ಬೆಂಗಳೂರು ನಗರದಲ್ಲಿ ಪ್ರಸಿದ್ಧ ಸಂಸ್ಥೆಯಾಗಿದ್ದ ಅಮೆಚೂರ್ ಡ್ರಮಾಟಿಕ್ ಅಸೋಸಿಯೇಷನ್ (ಎ.ಡಿ.ಎ.) ಅವರು ೧೯೧೯ನೇ ಜನವರಿ ೧೩ ಸೋಮವಾರದಿಂದ ಒಂದು ವಾರಕಾಲ ಅಖಿಲ ಭಾರತ ಲಲಿತಕಲಾ ಮಹೋತ್ಸವವನ್ನು ನಡೆಸಲು ಏರ್ಪಾಟುಮಾಡಿದರು. ಆಗ್ಗೆ ಎ.ಡಿ.ಎ. ಅಧ್ಯಕ್ಷರಾಗಿ ಮೈಸೂರು ಸರ್ಕಾರದಲ್ಲಿ ಹಣಕಾಸಿನ ಕಂಟ್ರೋಲರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದ ಬಂಗಾಲಿಯವರಾದ ಜ್ಞಾನ ಶರಣ ಚಕ್ರವರ್ತಿ ಮತ್ತು ಠಾಗೂರರ ಸಂಬಂಧವಿಟ್ಟು ಕೊಂಡಿದ್ದ ಐರಿಶ್ ದೇಶದ ಸಾಹಿತಿಗಳೂ ಹಾಗೂ ಚಿತ್ರಕಲಾವಿದರೂ ಆಗಿ ಮೈಸೂರಿನಲ್ಲಿದ್ದ ಡಾ॥ ಜೇಮ್ಸ್‌ಕಜಿನ್ಸ್ ಅವರು ಠಾಗೂರರನ್ನು ಆಹ್ವಾನಿಸಿದರು. ಈ ಉತ್ಸವಕ್ಕಾಗಿ ಸಿಟಿ ಮಾರುಕಟ್ಟೆ ಮುಂಭಾಗದಲ್ಲಿನ ಈಗ ಅಪ್ಸರ ಥಿಯೇಟರ್ ಇರುವ ಮೈದಾನದಲ್ಲಿ ಬಹು ಅದ್ದೂರಿಯಾಗಿಯೂ ವ್ಯವಸ್ಥಿತ ವಾಗಿಯೂ ನಡೆಯುಲು ವಿಶಾಲವಾದ ಸುಂದರ ಮಂಟಪವನ್ನು ನಿರ್ಮಿಸಿದ್ದರು. ಈ ಉತ್ಸವದಲ್ಲಿ ಭಾರತದ ಇತರೆ ನಗರಗಳಿಂದ ಕಲಾತಂಡಗಳು ಆಗಮಿಸಿ ಭಾಗಿಯಾದ್ದವು.



ಬೆಂಗಳೂರಿನಲ್ಲಿ ಟೋಪಿ ಧರಿಸಿದ್ದ ಠಾಗೂರರು

ಠಾಗೂರರು ಈ ಉತ್ಸವ ನಡೆಯವುದಕ್ಕೆ ಒಂದಿವಸ ಮುಂಚಿತವಾಗಿ ಅಂದರೆ ೧೨ರಂದು ಸಂಜೆ ಮದರಾಸಿನಿಂದ ಇಲ್ಲಿಗೆ ಆಗಮಿಸಿದರು. ಅಂದಿನ ದಿನಗಳಲ್ಲಿ ಈ ಮಹೋತ್ಸವದ ಸಂಭ್ರಮ ದಕ್ಷಿಣ ಭಾರತದ ಒಂದು ಮೈಲಿಗಲ್ಲಾಗಿತ್ತು. ಉತ್ಸವದ ಅಂಗವಾಗಿ ಕಲಾ ಪ್ರದರ್ಶನ, ಲಲಿತಕಲಾ ಸಮ್ಮೇಳನ, ನಾಟಕ ಸ್ಪರ್ಧೆ, ವಿವಿಧ ವಿನೋದಾವಳಿ ಮುಂತಾದ ಹಲವಾರು ಕಾರ್ಯಕ್ರಮಗಳು ನಡೆಯಿತು. ಲಲಿತಕಲಾ ಪ್ರದರ್ಶನವನ್ನು ಮಂಟಪದ ಹಿಂದೆ ಆಗತಾನೆ ನಿರ್ಮಿಸಿದ್ದ ಎಸ್.ಎಲ್.ಎನ್. ಪ್ರೌಢಶಾಲೆಯಲ್ಲಿ ಏರ್ಪಾಟು ಮಾಡಲಾಗಿತ್ತು. ಈ ಕಲಾ ಪ್ರದರ್ಶನದ ಹೊಣೆಯನ್ನು ತಿರುಮಲೆ ತಾತಾಚಾರ್ಯ ಶರ್ಮರು ವಹಿಸಿಕೊಂಡಿದ್ದರು. ಈ ಪ್ರದರ್ಶನದಲ್ಲಿ ಶಾಂತಿನಿಕೇತನ ಕಲಾವಿದರ ತೈಲ ಮತ್ತು ವರ್ಣಚಿತ್ರಗಳೂ, ಹಾಗೂ ಮೈಸೂರು ಅರಮನೆಯಿಂದ ಬಂದಿದ್ದ ಅಮೂಲ್ಯ ಕಲಾಕೃತಿಗಳು ಪ್ರದರ್ಶಿತವಾಗಿತ್ತು. ಠಾಗೂರರನ್ನು ಕಾಣಬೇಕೆಂದೇ ಆಗ್ಗೆ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ

* # ೧೩೦. 'ದೀಪ' ೩ನೇ ಅಡ್ಡರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು – ೫೬೦೦೧೯.



**ಠಾಗೂರರ ಅಧ್ಯಕ್ಷತೆಯಲ್ಲಿ ಅಖಿಲ ಭಾರತ ಲಲಿತಕಲಾ ಪ್ರದರ್ಶನ ಮಹೋತ್ಸವ, ಬೆಂಗಳೂರು**

ವ್ಯಾಸಂಗ ಮಾಡುತ್ತಿದ್ದ ವಿ. ಸೀತಾರಾಮಯ್ಯ ಅವರು ಮೈಸೂರಿನಿಂದ ಬೆಂಗಳೂರಿಗೆ ರೈಲಿನಲ್ಲಿ ನೂರಾರು ವಿದ್ಯಾರ್ಥಿಗಳ ಜೊತೆ ಆಗಮಿಸಿದ್ದರು.

ಉತ್ಸವದ ಪ್ರಾರಂಭದಿವಸ ಸಂಜೆ ೫.೩೦ ಗಂಟೆಗೆ ಸುಮಾರು ಐದು ಸಾವಿರ ಜನ ಕಿಕ್ಕಿರಿದು ಮಂಟಪದಲ್ಲಿ ಸೇರಿದ್ದಾರೆ. ಸುಮಾರು ನಾಲ್ಕು ಗಂಟೆಯಿಂದ ವಾಸುದೇವಾ ಚಾರ್ಯರಿಂದ ಗಾಯನ ಕಾರ್ಯಕ್ರಮ ನಡೆಯುತ್ತಿದೆ. ಸೇರಿದ್ದ ಜನಗಳಿಗೆ ಠಾಗೂರರನ್ನು ಯಾವಾಗ ನೋಡುವೆಯೋ ಎಂಬ ಕಾತುರದಿಂದ ಆಗಾಗ್ಗೆ ಹಿಂದಕ್ಕೆ ನೋಡುತ್ತಿದ್ದಾರೆ. ಗಾಯನ ಕೇಳಲು ಜನಗಳಿಗೆ ಇಷ್ಟವಾಗಲಿಲ್ಲ. ಕ್ರಮೇಣ ಅಸಹನೆಯಿಂದ ವರ್ತಿಸಿದ ಜನ ಗದ್ದಲಕ್ಕೆ ಕಾರಣರಾಗುತ್ತಾರೆ. ಸಹನೆ ಮೀರಿದ ಜನರನ್ನು ಸಮಾಧಾನಗೊಳಿಸಲು ಬಳ್ಳಾರಿ ರಾಘವಾಚಾರ್ಯರು ತಮ್ಮ ನಟನ ಚಾತುರ್ಯವನ್ನೆಲ್ಲಾ ಉಪಯೋಗಿಸಿದರು. ಆದರೂ ಜನ ಸಮಾಧಾನರಾಗಲಿಲ್ಲ. ಈ ದೃಷ್ಯವನ್ನು ಕಂಡ ಟಿ.ಪಿ.ಕೈಲಾಸಂ ವೇದಿಕೆಗೆ ಆಗಮಿಸಿ ಇಂಗ್ಲಿಷ್ ಮಟ್ಟಿನಲ್ಲಿ ಕನ್ನಡ ಹಾಡುಗಳನ್ನು ಹಾಡಿದರು. ನೆರೆದಿದ್ದವರು ಕೈಲಾಸಂರನ್ನು ಕಂಡಿದ್ದೇ ಪ್ರಥಮಬಾರಿ. ಅವರಾಡಿದ ಹಾಡುಗಳು ಜನಕ್ಕೆ ಹೊಸದಾಗಿತ್ತು. ಸದ್ದು ಅಡಗಿತು. ಕೈಲಾಸಂ ಮುಂದುವರಿಸುತ್ತಾ ಹಾಸ್ಯದ ಚಟಾಕಿಗಳನ್ನು ಹಾರಿಸಿದರು. ಹೊಟ್ಟೆಹುಣ್ಣಾಗುವಂತೆ ಜನ ನಗುತ್ತಿದ್ದಂತೆಯೇ ವಿಶ್ವಕವಿ ಠಾಗೂರರು ಕಾರಿನಲ್ಲಿ ಆಗಮಿಸಿದರು. ವೇದಿಕೆಯಿಂದಲೇ ಗುರುದೇವರನ್ನು ಕಂಡ ಕೈಲಾಸಂ

'May I announce to you ladies and Gentleman of this distinguished gathering, the arrival at this moment of the Poet laureate of India Sir Ravindranatha Tagore' ಎಂದು ಸ್ವಾಗತಿಸಿದರು. ಟೋಪಿ ಮತ್ತು ನಿಲುವಂಗಿಯನ್ನು ಧರಿಸಿದ್ದ ಗುರುವರ್ಯರು ಕೈಮುಗಿದು ಕೊಂಡೇ ವೇದಿಕೆಗೆ ಆಗಮಿಸಿದರು. ಪ್ರಾಚೀನ ಋಷಿಯೋರ್ವರನ್ನು ಕಂಡ ತಕ್ಷಣ ಪಾದಕ್ಕೆರಗುವ ಹಾಗೆ ನೋಡುತ್ತಿದ್ದ ಜನ ಮೂಖವಿಸ್ಮಿತರಾದರು. ಸಭೆಯಲ್ಲಿದ್ದ ಇಂಗ್ಲೆಂಡಿನ ಕೆಲವರು Biscuit coloured Indian ಎಂದು ತಮ್ಮತಮ್ಮಲ್ಲಿ ಆಡಿಕೊಳ್ಳುತ್ತಿದ್ದರು. ಕುಳಿತೊಡನೆ ಮೇಲಿನಿಂದ ಪುಷ್ಪ ವೃಷ್ಟಿಯಾಯಿತು.

ವಾಸುದೇವಾಚಾರ್ಯರಿಂದ 'ವಾತಾಪಿಗಣಪತಿಂಭಜೆ' ಪ್ರಾರ್ಥನೆ ಆಗುತ್ತಿದೆ. ಗಾಯನವನ್ನು ಆಲಿಸುತ್ತಾ ತಲ್ಲೀನರಾಗಿದ್ದ

ಠಾಗೂರರನ್ನು ನೋಡಿ ಅದಕ್ಕೆ ಮುಂಚೆ ಅದೇ ಕೃತಿಗೆ ಚಪ್ಪಾಳೆ ತಟ್ಟಿ 'ನಿಲ್ಲಿಸಿ' ಎಂದಿದ್ದ ಸಭಿಕರು ಠಾಗೂರರ ಮುಖಮುದ್ರೆಯನ್ನೇ ನೋಡುತ್ತಾ ಅವರಂತೆಯೇ ಮೈಮರೆತಿದ್ದರು. ಪ್ರಾರ್ಥನೆ ಮುಗಿಯಿತು. ನಂತರ ರಾಘವಾಚಾರ್ಯರ ಮಗಳು ಮತ್ತು ಕೈಲಾಸಂ ಠಾಗೂರರ ಕವನಗಳನ್ನು ಹಾಡಿ ನಿವೇದಿಸಿದರು. ಆ ಸಮಯದಲ್ಲಿ ಠಾಗೂರರ ಕಣ್ಣಲ್ಲಿ ನೀರು ಚಿಮ್ಮಿತ್ತು. ರೇಷ್ಮೆ ಎಳೆಗಳ ನವುರನ್ನೂ, ಕಾಂತಿಯನ್ನು ಮೀರಿ ಹೊಳೆಯುತ್ತಿದ್ದ ಅವರ ಗಡ್ಡ ಅತ್ತಿಂದತ್ತ ಭಾವಾವೇಶಾದಿಂದ ತೂಗಾಡುತ್ತಿತ್ತು.

ಈ ಆನಂದಕ್ಕೆ ಶಿಖರವಿಟ್ಟಂತೆ ಆಗ ವಿದ್ಯಾ ಇಲಾಖೆಯ ಅಧಿಕಾರಿಣಿಯಾಗಿದ್ದ ಶ್ರೀರಂಗಮ್ಮನವರು ತಮ್ಮ ನಾಲ್ವರು ಶಿಷ್ಯರೊಂದಿಗೆ ವೀಣೆಯನ್ನು ನುಡಿಸಿದರು. ಕಣ್ಣು ಮುಚ್ಚಿ ಆಲಿಸುತ್ತಿದ್ದ ಠಾಗೂರರು 'ಪ್ಲೀಸ್ ಕಂಟಿನ್ಯೂ' ಎಂದರು. ಮತ್ತೆ ಹತ್ತು ನಿಮಿಷ ಆಲಿಸುತ್ತಿದ್ದಂತೆಯೇ ಎರಡು ನೂತನ ಕವನ ಸೃಷ್ಟಿಗೆ ತೊಡಗಿದರು. ತರುವಾಯ 'Message of the Forest' ಎಂಬ ವಿಷಯದ ಮೇಲೆ ಸುಮಾರು ಒಂದು ಕಾಲುಗಂಟೆ ಭಾಷಣ ಮಾಡಿದರು. ಎಲ್ಲೋ ವೇದಗಳ ಕಾಲದಲ್ಲಿ ಮಹರ್ಷಿಯೊಬ್ಬರ ಮಂತ್ರೋಪದೇಶವನ್ನು ತಪೋವನದ ಆಶ್ರಮವೊಂದರ ಮುಂದೆ ಕುಳಿತು ಆಲಿಸುತ್ತಿದ್ದೇವೆಯೋ ಎಂಬಂತೆ ಆಭಾಷಣ ಭಾಸವಾಗಿತ್ತಂತೆ ನಂತರ ಕರತಾಡನ, ಹಾರಗಳ ಸಮರ್ಪಣೆ, ಮುಕ್ತಯ ಗಾನವಾಯಿತು. ಸನಿಹದಲ್ಲಿದ್ದ ಕೆಲವರು ಪಾದಗಳಿಗೆರಲು ನಗೆಮಾಗದಿಂದ ಆಶೀರ್ವದಿಸಿ ತಮ್ಮ ನಿವಾಸಕ್ಕೆ ತೆರಳಿದರು.




ಬಾಲಬ್ರೂಯಿ ಕಟ್ಟಡದಲ್ಲಿರುವ ಫಲಕ

ಮರುದಿವಸ ಬೆಳಗ್ಗೆ ಬೆಂಗಳೂರಿನ ವಿದ್ಯಾರ್ಥಿ ಸಮುದಾಯ ಲಾಲ್‌ಬಾಗ್‌ನ ಗಾಜಿನ ಮನೆಯಲ್ಲಿ ಗುರುದೇವರಿಗೆ ಸತ್ಕಾರ ಕೂಟವನ್ನು ಏರ್ಪಡಿಸಿದ್ದರು. ಪ್ರಕೃತಿ ಪ್ರಿಯರಾಗಿದ್ದ ಠಾಗೂರರು ಗಾಜಿನ ಮನೆಯನ್ನು ನಿರಾಕರಿಸಿ 'ಮರಗಳ ಕೆಳಗೆ ಏರ್ಪಡಿಸಿ' ಎಂದರು. ನಂತರ ಲಾಲ್‌ಬಾಗ್ ಪ್ರವೇಶಿಸುತ್ತಿದ್ದಂತೆಯೇ ಇರುವ 'ಜಾವಾಪಿಗ್' ಮರಗಳ ಕೆಳಗೆ 'The Mothers Prayer' ಎಂಬ ಕಿರುನಾಟಕ ಸನ್ನಿವೇಶವನ್ನು ಓದಿದರು. "ಕವಿವಾಣಿಯ ಅಂದಿನ ಪ್ರಭಾವ ಹುಡುಗರಾದ ನಮಗೆ ಯಾವುದೋ ಬೇರೆ ಪ್ರಪಂಚದ ಸಂಪರ್ಕವನ್ನು ತಂದುಕೊಟ್ಟಿತು" ಎಂದು ಆ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದ ವಿ.ಸೀತಾರಾಮಯ್ಯನವರು ತಮ್ಮ ಸ್ಮೃತಿ ಚಿತ್ರಸಂಪುಂಟದಲ್ಲಿ ದಾಖಲಿಸಿದ್ದಾರೆ. ಮಾಸ್ತಿಯವರೂ ಅಂದಿನ ಸಭೆಗೆ ಹೋಗಿದ್ದರು.

ಗುರುದೇವರನ್ನು ಇಲ್ಲಿನ ಕೆಲ ನಾಗರಿಕರು ಅವರವರ ಗೃಹಗಳಿಗೆ ಕರೆದೊಯ್ದು ಸತ್ಕರಿಸಿದುದೂ ಉಂಟು. ಇಂತಹವರಲ್ಲಿ ಬಹುಹಿಂದಿನಿಂದ ಠಾಗೂರರಪರಿಚಯವಿದ್ದ ಸುಲ್ತಾನಪೇಟೆಯ ಬಿ.ವಿ. ಸುಬ್ಬರಾಯರೂ ಒಬ್ಬರು. ಠಾಗೂರರು ಅವರ ಬಂಗಲೆಗೆ (ಮೂರನೆ ದಿವಸ) ಆಗಮಿಸಿದಾಗ ಜನವೋಜನ. ಗುರುದೇವರಿಗೆ ಸಿ.ಎಫ್. ಆಂಡ್ರೂಸ್ ಅವರು ಆಪ್ತಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಬ್ರಿಟಿಷ್ ಮಿಲಿಟರಿ ಅಧಿಕಾರಿಪಟ್ಟದಲ್ಲಿದ್ದು ಬೆಂಗಳೂರಿಗೆ ಬಂದಿದ್ದ ಸೈನಿಕರೂ ಕೂಡ ಗುರುದೇವರನ್ನು ಕಾಣಲು ಆಂಡ್ರೂಸ್‌ರ ಮೂಲಕ ಪರವಾನಗಿ ಪಡೆದುಕೊಂಡು ಬಂದಿದ್ದರು. ಗುರುದೇವರು ಬಂದೊಡನೆ ಸ್ವಾಗತಿಸಿದ ಸುಬ್ಬರಾಯರ ಸಂಸಾರ ನಮಿಸಿ ತಮ್ಮ ಎಳೆಯ ಮಗುವನ್ನು ಗುರುದೇವರ ಚರಣಗಳ ಮೇಲಿರಿಸಿ ಆಶೀರ್ವದಿಸಬೇಕೆಂದು ವಿನಂತಿಸಿದರು. 'ಚಿರಂಜೀವಿಯ ಹೆಸರೇನು?' 'ನಾಮಕರಣ ವಿನ್ನೂ ಆಗಿಲ್ಲ, ತಮ್ಮಿಂದಲೇ ಆಗಬೇಕು' "ಓ ! ಸರಿ ನಾರಾಯಣ, ಉತ್ತಮ ಕಲಾವಿದನಾಗಿ ಬೆಳೆಯಲಿ ಮಗು!" ಎಂದು ಹಾರೈಸಿ ತಂದೆಯ ಕೈಲಿತ್ತರು. (ಆ ಮಗುವೇ ಮುಂದಕ್ಕೆ ರವಿ ಕಲಾವಿದರ ಸಂಸ್ಥೆಯಲ್ಲಿ ಉತ್ತಮ ನಾಟಕ ಕಲಾವಿದನಾಗಿ ಪ್ರಸಿದ್ಧ ಪಡೆದಿದ್ದ ಬಿ.ಎಸ್. ನಾರಾಯಣ್.) ನಂತರ ಉತ್ಸವದ ಮಂಟಪದಲ್ಲಿ ಮೊದಲದಿವಸ ಕೇಳಿದ್ದ ರಂಗಮ್ಮನವರ ವೀಣಾವಾದನ ಠಾಗೂರರ ಆಸೆಯಂತೆ ಇಲ್ಲಿಯೂ ನಡೆಯಿತು. ಸುಮಾರು ಎರಡು ಗಂಟೆ ಕಾಲ ನಡೆದ ವೀಣಾವಾದನ ಶ್ರುತಿಯಲ್ಲಿ ಗುರುದೇವರು ಪೂರ್ಣವಾಗಿ ಅಡಗಿಹೋಗಿದ್ದರು. ಮುಂದಿನ ಕಾರ್ಯಕ್ರಮಕ್ಕೆ ತಡವಾಗಿ ಹೊರಟರು.

ಕೊಲಿಜಿಯೇಟ್ ಹೈಸ್ಕೂಲಿನ (ಈಗಿನ ಕಾಲೇಜು) ವಿದ್ಯಾರ್ಥಿಗಳು ತಮ್ಮ ಶಾಲೆಗೆ ಠಾಗೂರರನ್ನು ಆಹ್ವಾನಿಸಿದರು. ಶಾಂತಿನಿಕೇತನಕ್ಕೆ ನಿಮ್ಮ ಕಾಣಿಕೆಯೇನು? ಕೊಡುತ್ತೇವೆ ಎಂದು ಒಪ್ಪಿಕೊಂಡ ವಿದ್ಯಾರ್ಥಿಗಳು ಎಲ್ಲರಿಂದ ಒಂದಾಣೆಯಿಂದ ನಾಲ್ಕಾಣೆಯವರೆಗೆ ವಸೂಲು ಮಾಡಿದರು. ಗುರುದೇವರು ಬೆಂಗಳೂರಿಗೆ ಬಂದ ನಾಲ್ಕನೇ ದಿವಸವಾದ ಅಂದು ಬೆಳಗ್ಗೆ ಹೈಸ್ಕೂಲಿಗೆ ಬರುವ ಹೊತಿಗೆ ಸಭಾಂಗಣ ತುಂಬಿ ಹೋಗಿತ್ತು. ವಿದ್ಯಾರ್ಥಿಗಳ ಶಿಸ್ತಿನ ವರ್ತನೆ ಗುರುದೇವರಿಗೆ ಮೆಚ್ಚಿಗೆ

ಯಾಯಿತು. "ಭಾರತದ ಮಕ್ಕಳಾಗಿ ಪರೋಪಕಾರ ಜೀವನ ನಡೆಸಿರಿ" ಎಂಬರ್ಥಬರುವ ಭಾಷಣವನ್ನು ಸರಳವಾಗಿ ಮೂರು ನಿಮಿಷಗಳ ಕಾಲವಾಡಿದರು. ಅಮೃತ ಮಯವಾಗಿದ್ದ ಭಾಷಣ ಕೇಳಿದ ವಿದ್ಯಾರ್ಥಿವೃಂದಕ್ಕೆ ಬಹು ಹೆಮ್ಮೆಯಾಯಿತಂತೆ. ಕೊನೆಯಲ್ಲಿ ಶಾಲೆಯ ಹೆಬ್ಬಾಗಿಲಿನಲ್ಲಿ ವಸೂಲಿ ಮಾಡಿದ ಹಣವನ್ನು ಕಾಣಿಕೆಯಾಗಿ ಅರ್ಪಿಸಿದರು.

ಗುರುದೇವರು ದಿನಬಿಟ್ಟುದಿನ ಮಹೋತ್ಸವದಲ್ಲಿ ಭಾಗಿಯಾಗುತ್ತಿದ್ದರು. ಪ್ರತಿದಿನ ನಾಟಕ ಕಲೆಗೆ ಸಂಬಂಧಿಸಿದ ಅನೇಕ ಪ್ರಸಂಗಗಳು (ಮುಖ್ಯವಾಗಿ ಕೈಲಾಸಂ ಅವರ ಪ್ರಸಂಗಗಳು) ಭಾಷಣ, ಚರ್ಚೆ, ವಿಚಾರ ಸಂಕಿರಣ ಮುಂತಾದ ಕಾರ್ಯಕ್ರಮಗಳು ನಡೆದವು. ಒಂದು ದಿನ ಮೈಸೂರು ನಾಗಮ್ಮ ಎಂಬಾಕೆ ಮಾಡಿದ ಗಮಕ ವಾಚನ ಕಾರ್ಯಕ್ರಮ ಬಹುಚನ್ನಾಗಿ ನಡೆಯಿತು. ಮತ್ತೊಂದು ದಿವಸ ವೀರಕೇಸರಿ ಸೀತಾರಾಮಶಾಸ್ತ್ರಿಗಳು ಗುರುದೇವರನ್ನು ಶಂಕರ ಮಠಕ್ಕೆ ಕರೆತಂದು ಅಲ್ಲಿನ ಕಾರ್ಯಕಲಾಪಗಳನ್ನು ಪರಿಚಯಿಸಿದರು. ಕೊನೆಯಲ್ಲಿ ಠಾಗೂರರು "ನಾನು ದೇಶದಲ್ಲೆಲ್ಲಾ ಸುತ್ತಿದ್ದೇನೆ ಆದರೆ ನನ್ನಾ ಕಲ್ಪನೆಯ ಗುರುಕುಲ ಕಂಡಿದ್ದು ಈ ಶಂಕರ ಮಠದಲ್ಲೇ" ಎಂದು ಉದ್ಗರಿಸಿದರು. ಸಂಸ್ಕೃತ ವಿದ್ವಾಂಸರಾಗಿದ್ದ ಸೀತಾರಾಮಶಾಸ್ತ್ರಿಗಳು ಶಂಕರ ಮಠದ ಆಡಳಿತ ವ್ಯವಸ್ಥೆಯ ಹೊಣೆಗಾರಿಕೆ ಯನ್ನು ಆಗ್ಗೆ ವಹಿಸಿಕೊಂಡಿದ್ದರು.

ಈ ಉತ್ಸವ ನಡೆಯುತ್ತಿದ್ದ ಸಮಯದಲ್ಲಿ ಕಲಾಸಿಪಾಳ್ಯದ ರತ್ನಾವಳಿ ನಾಟಕ ಥಿಯೇಟರಿನಲ್ಲಿ ಪ್ರತಿದಿವಸ ರಾತ್ರಿ ವರದಾಚಾರ್ಯರ ಶಾಕುಂತಲ ನಾಟಕ ನಡೆಯುತ್ತಿತ್ತು. ಅರ್ಧಗಂಟೆ ಮಾತ್ರ ನಾಟಕವನ್ನು ನೋಡುತ್ತೇನೆ ಎಂದು ಬಂದ ಗುರುದೇವರು ಪೂರ್ತಿ ನಾಟಕವನ್ನು ನೋಡಿ ಕೊನೆಯಲ್ಲಿ "ಇಂದು ವರದಾ ಚಾರ್ಯರ ನಟನೆಯನ್ನು ನೋಡದೆ ಹೋಗಿದ್ದರೆ ನಾನು ನನ್ನ ಜೀವಮಾನದಲ್ಲಿ ಅಮೂಲ್ಯವೆನಿಸುವ ಅನುಭವವನ್ನೇ ಖಂಡಿತವಾಗಿಯೂ ಕಳೆದುಕೊಳ್ಳುತ್ತಿದ್ದೆ" ಎಂದರು. ಕೊನೆಯಲ್ಲಿ ಎರಡು ದಿವಸ ಠಾಗೂರರು ಬೇಲೂರು, ಹಳೇಬೀಡು ಪ್ರವಾಸ ಹೋಗಿದ್ದರೆಂದು ತಿಳಿದುಬರುತ್ತದೆ. ಇವರು ಬರೆದಿರುವ 'ಶೇಷರ್ ಕಬಿತಾ' ಎಂಬ ಕಾಂದಬರಿ ಇಲ್ಲಿದ್ದಾಗಲೇ ಬರೆದರು.

ಒಟ್ಟಿನಲ್ಲಿ ರವೀಂದ್ರರು ಇಲ್ಲಿದ್ದಷ್ಟು ದಿವಸ ಸ್ವಲ್ಪವೂ ಪುರುಸೊತ್ತಿಲ್ಲದಂತೆ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ೧೮ರಂದು ರಾತ್ರಿ ಮೈಸೂರಿಗೆ ತೆರಳಿ ನಂತರ ಊಟಿ ಮತ್ತು ಇತರ ಕಡೆ ೪೫ ದಿವಸಗಳ ಪ್ರವಾಸ ಮಾಡಿನಂತರ ಮಾರ್ಚ್ ೮ರಂದು ಎರಡನೆ ಸಲ ಬೆಂಗಳೂರಿಗೆ ಆಗಮಿಸಿ ೯ರಂದು ಸಂಜೆ ಮಿಥಿಕ್ ಸೊಸೈಟಿಯಲ್ಲಿ ಯುವರಾಜ ನರಸಿಂಹರಾಜ ಒಡೆಯರ್ ಅವರ ಅಧ್ಯಕ್ಷತೆಯಲ್ಲಿ 'Folk Religious of India' ಎಂಬ ವಿಷಯದ ಬಗ್ಗೆ ಭಾಷಣ ಮಾಡಿ ಅಂದು ರಾತ್ರಿಯೇ ಮದರಾಸಿನತ್ತ ಪ್ರಯಾಣ ಬೆಳಸಿದರು.

ಬಾಲಬ್ರೂಯಿ ಕಟ್ಟಡದಲ್ಲಿ "Rabindra Nata Tagore Stayed Here In 1919" ಎಂದು ಫಲಕ ಹಾಕಲಾಗಿದೆ.

[ಈ ಲೇಖನ ಬರೆಯಲು ಪ್ರೇರಣೆ ನೀಡಿದ ಡಾ॥ ಅ.ಲ. ನರಸಿಂಹನ್ ಮತ್ತು ಜಿ.ಕೆ. ದೇವರಾಜಸ್ವಾಮಿ ಅವರಿಗೆ ನನ್ನ ಕೃತಜ್ಞತೆಗಳು.]

## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ಸುಬ್ಬಣ್ಣ, ಎಸ್.ಎಸ್. ೨೦೧೦, **ನ್ಯಾಯಮೂರ್ತಿ ನಿಟ್ಟೂರು,** ಉಲುಚುಕಮ್ಮೆ ಬ್ರಾಹ್ಮಣ ಮಹಾಸಭ. ಬೆಂಗಳೂರು

೨. ಕೃಷ್ಣಯ್ಯ, ಎಮ್.ಎಚ್. (ರಚನೆ) ೨೦೦೩. **ನಿಟ್ಟೂರು ಶ್ರೀನಿವಾಸರಾಯರು ನೂರರ ನೆನಪು,** ಪ್ರಿಸಮ್ ಬುಕ್ಸ್‌ಪ್ರೈ.ಲಿ. ಬೆಂಗಳೂರು

೩. ತಿರುಮಲೆ ತಾತಾಚಾರ್ಯಶರ್ಮ, ೨೦೦೨, **ನನ್ನ ಜೀವನ ಮತ್ತು ಧ್ಯೇಯ,** ನವನೀತ ಪ್ರಕಾಶನ, ಬೆಂಗಳೂರು.

೪. ರಾಧಾಕೃಷ್ಣ, ಬಿ.ಪಿ. ೧೯೯೭. **ಸಾರ್ಥಕ ಬದುಕು,** (ವಿ.ಸೀ. ಜೀವನ ಮತ್ತು ಸಾಧನೆ) ವಿ.ಸೀ. ಸಂಪದ, ಬೆಂಗಳೂರು.

೫. ಕೇಶವರಾವ್, ಬಿ.ಎಸ್. ೨೦೦೧, **ಮರೆಯಲಾಗದವರು,** ಆದಿತ್ಯ ಪ್ರಕಾಶನ, ಬೆಂಗಳೂರು.

೬ ಡಾ॥ ನಾಯಕ್, ಹಾ.ಮಾ. (ಪ್ರ. ಸಂ), ೧೯೭೯, **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೭. ಪಾರ್ವತಿ, ಎಚ್.ಎಸ್. ೧೯೭೨, **'ಭಾರತಿ ತಿರುಮಲೆ ರಾಜಮ್ಮ ಅಭಿನಂದನ ಗ್ರಂಥ',** ತಿರುಮಲೆ ರಾಜಮ್ಮ ಅಭಿನಂದನಾ ಸಮಿತಿ, ಬೆಂಗಳೂರು.

೮. **ಎ.ಡಿ.ಎ. ಶತಮಾನೋತ್ಸವ ಸ್ಮರಣ ಸಂಚಿಕೆ,** ೨೦೦೯. ಬೆಂಗಳೂರು.

೯. ರಾಮಸ್ವಾಮಿ ಎಸ್.ಆರ್. ೧೯೯೮, **ದೀವಟಿಕೆಗಳು,** ಸಾಹಿತ್ಯ ಸಿಂಧು ಪ್ರಕಾಶನ, ಬೆಂಗಳೂರು, ೧೯೯೭.

೧೦. **ವಿ. ಸೀತಾರಾಮಯ್ಯ ಸ್ಮೃತಿ ಚಿತ್ರ ಸಂಪುಟ,** ವಿಸೀ ಸಂಪದ (ವಿ.ಸೀ. ಸಂಸ್ಮರಣ ವೇದಿಕೆ) ಬೆಂಗಳೂರು

೧೧. **ಮೈಸೂರು ಸ್ಟಾರ್,** ಕನ್ನಡ ವಾರಪತ್ರಿಕೆ. ೧೯೧೮ ಡಿಸೆಂಬರ್ ೨೯, ಮತ್ತು ೧೯೧೯ ಮಾರ್ಚ್ ೧೩ ಸಂಪಾದಕರು: ಯಜಮಾನ್ ವೀರಸಂಗಪ್ಪನವರು.

೧೨. Anjali, *A tribute to Tagore, Rabindra Shanti mla,* 1961. Bangalore.

೧೩. *Lal Bagh Annual Reports.* 1920.

೧೪. *Q.J.M.S.* Vol-9, 1918-19 (1-4) Mythic Society.

೧೫. *A Centenary Volume, Rabindranatuh Tagore,* 1861-1961. Sahitya Akademy, New delhi. 1961.




# ಪ್ರೊಫೆಸರ್ ಎಲ್.ಕೆ. ಅನಂತಕೃಷ್ಣ ಐಯರ್ (೧೮೬೧-೧೯೩೭)

ಡಾ. ಬಿ. ಲೀಲಾ*

'ಮಾನವಶಾಸ್ತ್ರ ಮನುಕುಲದ ಸಂಸ್ಕೃತಿಯನ್ನು ಅಭ್ಯಸಿಸುವುದಾದರೆ ಇದು ಇತಿಹಾಸಕ್ಕಿಂತ ಭಿನ್ನವೇ ಎಂಬ ಪ್ರಶ್ನೆ ಏಳುವುದು ಸಹಜ. ಯಾಕೆಂದರೆ ಇತಿಹಾಸ ಕೂಡ ಸಂಸ್ಕೃತಿಯ ಬೆಳವಣಿಗೆ, ಅವನತಿ ಇವುಗಳ ಸಾರವನ್ನು ಅಭ್ಯಸಿಸುವುದರಿಂದ ಇವೆರಡರ ಸಂಬಂಧ ಒಂದಕ್ಕೊಂದು ಬೆಸೆದಿದೆ ಮತ್ತು ಇವುಗಳನ್ನು ಸೂಕ್ಷ್ಮವಾಗಿ ಅವಲೋಕಿಸ ಬೇಕಾಗುತ್ತದೆ.

ಜನಗಣತಿ ಮತ್ತು ದೇಶವಿಚಾರ ಕೋಶ ಕ್ರೋಢೀಕರಣ ಮಾಡುವಾಗ ಬ್ರಿಟೀಷ್ ಮುತ್ಸುದ್ದಿಗಳು ಭಾರತದ ಜನರನ್ನು ತಮ್ಮ ಸಹಾಯಕ್ಕಾಗಿ ನೇಮಿಸಿಕೊಂಡರು. ಇದಲ್ಲದೆ ಭಾರತದ ಪ್ರತಿಯೊಂದು ಪ್ರಾಂತದಲ್ಲೂ ಈ ಕೆಲಸ ಕೈಗೊಂಡಿದ್ದರಿಂದ ಹಲವಾರು ಪ್ರಾಜ್ಞರಿಗೆ ಅವಕಾಶ ಸಿಕ್ಕಿತು. ಅಂತಹವರಲ್ಲಿ ಪ್ರೊಫೆಸರ್ ಎಲ್.ಕೆ. ಅನಂತಕೃಷ್ಣ ಐಯರ್ ಒಬ್ಬರು.

ದಕ್ಷಿಣ ಭಾರತದ ಬುಡಕಟ್ಟಿನ ಹಲವಾರು ಆಯಾಮ ಗಳನ್ನು ಅವರು ಗುರುತಿಸಿದರು. ಮತ್ತು ೧೯೨೦ರಲ್ಲಿ ಕಲಕತ್ತಾ ವಿಶ್ವವಿದ್ಯಾನಿಲಯದ ಮೊದಲ ಮಾನವ ಶಾಸ್ತ್ರದ ಪ್ರಾಧ್ಯಾಪಕ ರಾದರು ಮತ್ತು ಹಲವಾರು ಪ್ರತಿಭಾವಂತರ ವಿದ್ಯಾರ್ಥಿಗಳ ತಂಡವನ್ನೇ ನಿರ್ಮಿಸಿದರು. ಬುಡಕಟ್ಟಿನ ಭಾಷೆ, ಪ್ರತಿ ಹಂತ ದಲ್ಲೂ ವಿಮರ್ಶಿಸಿ, ಹಲವಾರು ವಿದ್ಯಾರ್ಥಿಗಳಿಗೆ ಮಾರ್ಗ ದರ್ಶಕರಾದರು. ಇವರ ಸಂಶೋಧನೆಯಿಂದ ಮಾನವಶಾಸ್ತ್ರ ಸಂಶೋಧನೆಗೆ ಒಂದು ಹೊಸ ರೂಪ ನಿಶ್ಚಳವಾಯಿತು.

ಇದೀಗ ಕವಿ ರವೀಂದ್ರನಾಥ ಟಾಗೋರ್‌ರವರ ೧೫೦ನೇ ವರುಷದ ವರ್ಧಂತಿ ಉತ್ಸವ ನಡೆದಿದೆ. ಟಾಗೋರ್ ರವರ ಶತಮಾನೋತ್ಸವವನ್ನು (೧೯೬೧) ಆಚರಿಸಿದಾಗ, ಟಾಗೋರ್‌ರವರನ್ನು ಹತ್ತಿರದಿಂದ ಬಲ್ಲ೧ ಎಲ್.ಕೆ. ಅನಂತ ಕೃಷ್ಣ ಐಯರ್‌ರವರ ಶತಾಬ್ಧಿಯನ್ನು ಆಚರಿಸಬೇಕೆಂದು, ೧೯೬೨ರಲ್ಲಿ ಮದ್ರಾಸ್ ಸೋಷಿಯಲ್ ಸೈನ್ಸ್ ಅಸೋಸಿ ಯೇಷನ್ ಮತ್ತು ರಾಯಲ್ ಆಂತ್ರೊಪಲಾಜಿಕಲ್ ಇನ್ಸಿಟ್ಯೂಟ್ ಆಫ್ ಗ್ರೇಟ್ ಬ್ರಿಟನ್ ಸಂಸ್ಥೆ ಕೂಡಿ ಜಂಟಿಯಾಗಿ ಆಚರಿಸಿತು. ಇದೀಗ ಅವರಿಗೆ ೧೫೦ ವರುಷವಾಗಿದೆ. ಸಮಾಜ ವಿಜ್ಞಾನಕ್ಕೆ ಮತ್ತು ಮುಖ್ಯವಾಗಿ ಮಾನವಶಾಸ್ತ್ರಕ್ಕೆ ತಮ್ಮ ಜೀವನವನ್ನು ಮುಡುಪಾಗಿಟ್ಟ ಮತ್ತು ತಮ್ಮ ಮೇರುಕೃತಿ "The Mysore Tribes and Castes.Vol-I-IV" ಪುಸ್ತಕದಿಂದ ಚಿರಪರಿಚಿತ ರಾದ ಪ್ರೊಫೆಸರ್ ದಿವಾನ್ ಬಹದ್ದೂರ್. ಎಲ್.ಕೆ. ಅನಂತಕೃಷ್ಣ ಐಯರ್ ಅವರನ್ನು ನೆನಪಿಸುವುದು ಕರ್ತವ್ಯವಾಗಿದೆ.

ದಿವಾನ್ ಬಹದ್ದೂರ್ ಡಾ॥ ಎಲ್.ಕೆ. ಅನಂತಕೃಷ್ಣ ಐಯರ್ ೧೮೬೧ ರಲ್ಲಿ ಪಾಲಘಾಟ್ ಲಕ್ಷ್ಮೀನಾರಾಯಣ ಪುರದಲ್ಲಿ (ಈಗಿನ ಕೇರಳ ರಾಜ್ಯ) ಹುಟ್ಟಿದರು. ಅವರ ತಂದೆ ಎಲ್.ಎನ್. ಕೃಷ್ಣೈಯರ್ ಅವರ ಮೊದಲನೆಯ ಮಗ ವೈದೀಕ ಮನೆತನದಲ್ಲಿ ಹುಟ್ಟಿದ್ದರೂ ಆಂಗ್ಲಭಾಷೆಯ ಪ್ರಭಾವ ಅವರ ಮೇಲಿತ್ತು. ಎಸ್.ಎಸ್.ಎಲ್.ಸಿ. ಪಾಸಾದ ಮೇಲೆ Zamorin College ಸೇರಿ, ಬಿ.ಎ. ಡಿಗ್ರಿಗೆ ಮದ್ರಾಸ್ ಕ್ರಿಶ್ಚಿಯನ್ ಕಾಲೇಜ್ ಸೇರಿದರು. ಪ್ರಿನ್ಸಿಪಾಲರಾದ ವಿಲಿಯಮ್ ಮಿಲ್ಲರ ಇವರ ಮೇಲೆ ಪ್ರಭಾವ ಬೀರಿದರು. ದೊಡ್ಡ ಕುಟುಂಬದ ಹೊಣೆ ಹೊತ್ತ ಅನಂತಕೃಷ್ಣ ಐಯರ್ ೧೮೮೯-೭೦ ರೆವಿನ್ಯು ಆಫೀಸಿನಲ್ಲಿ ಕೆಲಸ ಮಾಡಿದರು. ೧೮೯೦-೯೭ ವಿಕ್ಟೋರಿಯಾ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕೆಲಮಾಡಿ ಉಪಧ್ಯಾಯ ವೃತ್ತಿಯೊಂದಿಗೆ, ಕೊಚ್ಚಿನ್ ಸರ್ಕಾರ ವಹಿಸಿದ 'ಸರ್ಕಾರಿ ಮ್ಯೂಸಿಯಮ್ ಮತ್ತು Zoological garden Trichur ಇವುಗಳ ರಚನಾತ್ಮಕ ಕೆಲಸವನ್ನು ಮುಗಿಸಿದರು. ೧೯೦೪, ೧೯೦೬, ಮತ್ತು ೧೯೦೮ ಸರ್ಕಾರದ ಪರವಾಗಿ ಮೂರು ಹೊತ್ತಿಗೆಗಳು ಹೊರಬಂದವು. ೧೯೨೦ ರಲ್ಲಿ ಸರ್ಕಾರದಿಂದ ನಿವೃತ್ತಿ ಹೊಂದಿದರು. ಕೊಚ್ಚಿನ್ ಸರ್ಕಾರ, ಅವರು ಮನುಕುಲಶಾಸ್ತ್ರಕ್ಕೆ ಕೊಟ್ಟ ಕೊಡುಗೆಯನ್ನು ಮೆಚ್ಚಿತು. ೧೯೨೧ರಲ್ಲಿ ಬ್ರಿಟೀಷ್ ಸರ್ಕಾರ 'ರಾವ್‌ಬಹದ್ದೂರ್', ಪ್ರಶಸ್ತಿ ಇತ್ತು ಗೌರವಿಸಿತು.

* ಫ್ಲಾಟ್ ೪೩, ಶ್ಯಾಮಲ, ೧ನೇ ಮಹಡಿ, (ಡಾನ್ ಬೋಸ್ಕೊ ಹೈಸ್ಕೂಲ್ ಹಿಂಭಾಗ), ಮಾತುಂಗಾ, ಮುಂಬಯಿ- ೪೦೦೦೧೯.



ಇದೇ ಅವಧಿಯಲ್ಲಿ ಮೈಸೂರು ಸರ್ಕಾರ ಅವರನ್ನು 'ಮನುಕುಲಶಾಸ್ತ್ರದ ಸಮೀಕ್ಷೆ' ಮಾಡಲು ಆಹ್ವಾನಿಸಿತು. ಇದರಿಂದ ಅವರು ತಮಗೆ ಬಿಡುವಿದ್ದಾಗ ಮೈಸೂರಿನ ಕ್ಷೇತ್ರಕಾರ್ಯಕ್ಕೆ ಹೋಗಲೇ ಬೇಕಾಗಿತ್ತು. ಮೈಸೂರಿನ ಸಮೀಕ್ಷೆ ಜವಾಬ್ದಾರಿ ಮೊದಲು ಹೊತ್ತವರು ಎಚ್.ವಿ. ನಂಜುಡಯ್ಯನವರು ಅವರ ಅಕಾಲಿಕ ಮರಣದಿಂದ (೧೯೨೦) ಸ್ಥಗಿತವಾಗಿದ್ದ ಕೆಲಸವನ್ನು ಎಲ್.ಕೆ. ಅನಂತಕೃಷ್ಣ ಐಯರ್ ಅವರಿಗೆ ವಹಿಸಲಾಯ್ತು. ಇದರಿಂದ ಬಿಡುವು ಸಿಕ್ಕಾಗಲೆಲ್ಲಾ ಮೈಸೂರಿನ ಕ್ಷೇತ್ರಕಾರ್ಯಕ್ಕೆ ಹೋಗಲೇ ಬೇಕಾಗಿತ್ತು. ಐಯ್ಯರ್ ಅವರ ವಿರಾಮವಾದ ದಿನಗಳು ಮೈಸೂರಿನ ಕ್ಷೇತ್ರಕಾರ್ಯಕ್ಕೆ ಮೀಸಲಾಯಿತು. ೧೯೩೩ರಲ್ಲಿ ಎಲ್.ಕೆ. ಅನಂತಕೃಷ್ಣ ಐಯರ್ ಕಲಕತ್ತಾ ವಿಶ್ವವಿದ್ಯಾನಿಲಯ ದಿಂದ ನಿವೃತ್ತರಾದರು. ಅಷ್ಟುಹೊತ್ತಿಗೆ ಐಯ್ಯರ್‌ರವರು ಒಂದು ಪ್ರತಿಭಾವಂತ ವಿದ್ಯಾರ್ಥಿ ತಂಡವನ್ನು ತಯಾರು ಮಾಡಿದ್ದರು. ಅವರಿಗೆ ಕಲಕತ್ತೆಯಲ್ಲಿ ಒದಗಿಸಿದ್ದ ಅನುಕೂಲ ದಿಂದ ಸಾಕಷ್ಟು ನೆಮ್ಮದಿ ಸಿಕ್ಕಿತ್ತು. ತಮ್ಮ ಹುಟ್ಟೂರಾದ ಪಾಲಘಾಟ್‌ನಲ್ಲಿ ಒಂದು ಅತ್ಯುತ್ತಮವಾದ ತಾಣ ಮತ್ತು ಮನಸ್ಸಿಗೆ ಒಪ್ಪುವ ಗ್ರಂಥಾಲಯ ತಯಾರಿತ್ತು.

ಎಲ್.ಕೆ. ಅನಂತಕೃಷ್ಣ ಐಯರ್ ಮಾನವಶಾಸ್ತ್ರವನ್ನು ಮತ್ತು ಅದರ ಭೋಧನೆಯನ್ನು ಕೈಗೊಂಡಾಗ ಅದಿನ್ನೂ ಬೆಳಕಿಗೆ ಬಂದಿರಲಿಲ್ಲ. ಈ ಅನಧಿಕೃತ ಆಸ್ಕೆಯನ್ನು ಜೀವನೋಪಾಯದ ಸದುಪಯೋಗಕ್ಕೆ ಆರಿಸಿದ ಹಲವೇ ಜನರಲ್ಲಿ ಐಯರ್ ಕೂಡ ಒಬ್ಬರು. ೨೧ನೇ ಶತಮಾನದಲ್ಲಿ ಮಾನವಶಾಸ್ತ್ರ ಪ್ರಸಿದ್ಧವಾಗಿ ವಿಶ್ವವಿದ್ಯಾನಿಲಯಗಳಲ್ಲಿ ಮಾನ್ಯತೆ ಪಡೆದಿದೆ. ಆದ್ದರಿಂದಲೇ "ಸೂರ್ಯನಂತೆ ಬೆಳಗಿದವರೆಂದು"[೨] ಎಲ್.ಜಿ. ಅನಂತಕೃಷ್ಣ ಐಯರ್‌ರವರನ್ನು ವಿದ್ವಾಂಸರು ಗುರುತಿಸುತ್ತಾರೆ. ಪ್ರಸಿದ್ಧ ಸಾಮಾಜಿಕಶಾಸ್ತ್ರದ ಪ್ರೊಫೆಸರ್ ಎಮ್.ಎನ್. ಶ್ರೀನಿವಾಸ್‌ರ ಪ್ರಕಾರ "ಆಂತ್ರಪಾಲಜಿಯನ್ನು ಅನಂತರಾಪಾಲಜಿ ಎಂದು. ಹಾಸ್ಯಕ್ಕೆ ಕರೆಯುವುದುಂಟು".

ಕಲಕತ್ತಾದಲ್ಲಿ ವೈಸ್‌ಚಾನ್ಸಲರ್ ಆಗಿದ್ದ ಅಶುತೋಷ ಮುಖರ್ಜಿಯವರು ೧೯೧೪ರ ಇಂಡಿಯನ್ ಸೈನ್ಸ್ ಕಾಂಗ್ರೆಸ್ ಸಮಾವೇಶದಲಿ ಅನಂತಕೃಷ್ಣ ಐಯರ್ ರವರನ್ನು ಕಂಡಿದ್ದರು ಮತ್ತು ತಮ್ಮ ವಿಶ್ವವಿದ್ಯಾನಿಲಯಕ್ಕೆ ಮೊದಲು ಆಹ್ವಾನಿಸಿ, ಆಮೇಲೆ ಅವರನ್ನು ಕಲ್ಕತ್ತಾ ವಿಶ್ವವಿದ್ಯಾನಿಲಯ, **ಮಾನವಶಾಸ್ತ್ರ**ದ ಮೊದಲನೆಯ ಪ್ರಾಧ್ಯಾಪಕರನ್ನಾಗಿ ನೇಮಿಸಿದರು. ಮುಂದಿನ ೧೨ ವರುಷಗಳು ಅನಂತಕೃಷ್ಣ ಐಯರ್ ಕಲಕತ್ತಾ ವಿಶ್ವವಿದ್ಯಾನಿಲಯದಲ್ಲಿದ್ದು ತಮ್ಮ ಕ್ಷೇತ್ರಕಾರ್ಯವನ್ನು ಮುಂದುವರಿಸಿದರು.

೧೯೦೦ರಲ್ಲಿ ಮನುಕುಲಶಾಸ್ತ್ರಕ್ಕೆ ಕಾಲಟ್ಟ ಐಯರ್ ಮೂರು ದಶಕಗಳ ಕಾಲ ವಿರಾಜಿಸಿದರು. ತಮ್ಮ ಕ್ಷೇತ್ರಕಾರ್ಯದಿಂದ ಎಲ್ಲರ ಮೆಚ್ಚಿಗೆ ಗಳಿಸಿದರು.

ಆಂಗ್ಲ ಭಾಷೆಯ ಮೇಲೆ ಹಿಡಿತವಿದ್ದ ಐಯ್ಯರ್ ಅವರು ಅಧಿಕಾರ ವರ್ಗದವರೊಡನೆ ಸುಲಭವಾಗಿ ಬೆರೆಯಬಲ್ಲವರಾಗಿದ್ದರು. ಮೈಸೂರಿನ ಸಾಮಾಜಿಕ ಸುಧಾರಣೆಯಲ್ಲಿ ಪಾಲ್ಗೊಂಡವರೆಲ್ಲಾ ಆಂಗ್ಲವಿದ್ಯೆಯ ಪರಿಣಾಮಕ್ಕೆ ಒಳಗಾದವರು. ಹೀಗೆ ಮೊದಲ್ಲಿ ಸಾಮಾಜಿಕ ಮತ್ತು ರಾಜಕೀಯ ತಿಕ್ಕಾಟ ಅಷ್ಟಾಗಿ ತೋರುವದಿಲ್ಲ. ಮೈಸೂರು ೧೯೦೨ರಲ್ಲೇ ಮಾದರಿ ಸಂಸ್ಥಾನ ಎನ್ನಿಸಿ ಸಾಮಾಜಿಕ ಸುಧಾರಣೆಯಲ್ಲಿ ಕೈಯಾಡಿಸಿ ಸಫಲವಾಗಿತ್ತು.

### ಎಲ್.ಕೆ. ಅನಂತಕೃಷ್ಣ ಐಯರ್ ಅವರ ಕೃತಿಗಳು

ಈಗ ಎಲ್.ಕೆ. ಅನಂತಕೃಷ್ಣ ಐಯರ್‌ರವರ ಬರವಣಿಗೆ ಬಗ್ಗೆ ಹೇಳುವುದಾದರೆ, ೧೯೦೮–೧೨ ರಚಿಸಿದ Castes and Tribes of Cochin in 2 volumes. ಮನುಕುಲಶಾಸ್ತ್ರದ ಮೇರು ಕೃತಿಗಳೆಂದು ಪ್ರಸಿದ್ಧವಾಗಿ ಪ್ರಪಂಚದ ಎಲ್ಲಾ ಕಡೆಯಿಂದ ಅಭಿನಂದನೆಯನ್ನು ಗಳಿಸಿತು. London Times May 20, 1910 ಪತ್ರಿಕೆ ತನ್ನ ಅಭಿಪ್ರಾಯವನ್ನು ಹೀಗೆ ಬರೆಯಿತು "ಸಂಪ್ರದಾಯದ ಮೂಲ ಶಿಷ್ಟಾಚಾರದ ವಿಧಿಗಳು, ನಂಬಿಕೆಗಳು, ಕಸುಬುಗಳು ಇವೆಲ್ಲವನ್ನೂ ವಿವರವಾಗಿ ಚರ್ಚಿಸಿದ್ದಲ್ಲದೆ, ೨೦ ಜಾತಿ ವಿವರಣೆ ಮತ್ತು ೪೪ ಪೋಟೊಗಳು, ಅತ್ಯಂತ ಸುಂದರವಾಗಿ ತೆಗಿದಿದ್ದು, ಪುಸ್ತಕದ ಗುಣಮಟ್ಟ ಹೆಚ್ಚಿದೆ. ಪ್ರತಿಯೊಬ್ಬ ಮಾನವ ಶಾಸ್ತ್ರ ವಿದ್ಯಾರ್ಥಿ ಓದಲೇಬೇಕಾದ ಪುಸ್ತಕ ಎಂದು ಉದ್ಗರಿಸಿತು.

Castes and Tribes of Cochin (in 2 Vols) ಬರೆಯುವಾಗ ಅವರು ಕೈಗೊಂಡ ಕ್ಷೇತ್ರಕಾರ್ಯ ಅಪಾರ. ಅವರಿಗೆ ಸ್ಥಳೀಯ ಭಾಷೆಯ ಪರಿಚಯ ಚೆನ್ನಾಗಿತ್ತು. ಆದರೆ ಮೈಸೂರಿನ ಜವಾಬ್ದಾರಿ ಒಪ್ಪಿದ ಮೇಲೆ ತಮಗೆ ಕೊಟ್ಟ ಹೊತ್ತಿಗೆಗಳ ಆಧಾರವನ್ನು ಇಟ್ಟುಕೊಂಡು ಅವರು ಪುಸ್ತಕದ ಬರವಣಿಗೆಯಲ್ಲಿ ತೊಡಗಲಿಲ್ಲ.

ಅವರು ತಮ್ಮ ಹಿಂದಿನವರ ಸಮೀಕ್ಷೆಯ ಪದ್ಧತಿಯಲ್ಲಿ ಹಲವು ಬದಲಾವಣೆ ಮಾಡಿದರು. ಮತ್ತು ಸುಲಭವಾಗಿ ಅರ್ಥವಾಗುವಂತೆ ಬರೆದರು. ಐಯರ್‌ರವರು ಹಲವು ವಿಷಯಗಳಲ್ಲಿ H.H. Risley ಅವರ ಅನುಕರಣೆ ಮಾಡಲಿಲ್ಲ.

(a) ಸ್ಥಳೀಯ ಸ್ವಯಂ ಆಡಳಿತ ಸರ್ಕಾರದ ಅಧಿಕಾರಿಗಳಿಗೆ ಮೊದಲು ಲಿಖಿತ ಪತ್ರ ಕಳುಹಿಸುವುದು.

(b) ಸ್ಥಳೀಯ ನಾಗರೀಕ ಪ್ರಜಗಳ ದೈಹಿಕ ಅಳತೆ ವೀಕ್ಷಣೆ. ಇವರೆಡರಿಂದಲೂ ಐಯರ್ ದೂರ ಸರಿದರು.

ಮಾನವನ ಚಟುವಟಿಕೆಗಳನ್ನು ಅಭ್ಯಾಸ ಮಾಡುವುದಕ್ಕೆ ಉಪಯೋಗಿಸುವ ಯಂತ್ರವನ್ನು ನಿರಾಕರಿಸಿದರು. ಸಮಕಾಲೀನರಾದ ಹೆಚ್.ಹೆಚ್. ರಿಸ್ಲಿ ಮತ್ತು ಎಡ್ಗರ್ ತರ್ಸ್ಟನ್‌ರವರು ಇದರ ಮೇಲೆ ಇಟ್ಟಿದ್ದ ನಂಬಿಕೆ ಅಪಾರ ಇಬ್ಬರೂ ಸರ್ಕಾರದ ಅಧಿಕಾರಿಗಳಾದ್ದರಿಂದ ಜನರನ್ನು ಒತ್ತಡ ಹೇರಿ ಒಪ್ಪಿಸಬಹುದೆಂಬ ನಂಬಿಕೆ ಅವರಿಗಿತ್ತು.

ಆರ್ಯ, ದ್ರಾವಿಡ ಇವುಗಳ ವ್ಯತ್ಯಾಸ ಕಂಡು ಹಿಡಿಯಲು ಉಪಯೋಗಿಸಿದ Nasal Index ಮನುಷ್ಯನಲ್ಲಿದ್ದ ಸ್ಥಿತಿ ಅಳತೆ ಮಾಡಲು ಉಪಯೋಗಿಸಿದ ತಂತ್ರ ಮದ್ರಾಸಿನಲ್ಲಿ ಪರಿಚಿತವಾದ ಪದ್ಧತಿಯಾಗಿತ್ತು. ಐಯರ್ ತಾವೇ ರೂಪಿಸಿದ ೧೪ ಮುಖ್ಯಗುಣಗಳನ್ನು ಮಾನದಂಡವಾಗಿ ಉಪಯೋಗಿಸಿದರು.

### Mysore castes and Tribes vol I-IV. (with index)

೧೯೦೩ರಲ್ಲೇ ಮನುಕುಲದ ಸಮೀಕ್ಷೆ ಮೈಸೂರಿನಲ್ಲಿ ಆರಂಭವಾಗಿದ್ದು ದಿವಾನ್ ಬಹದ್ದೂರ್ ಎಚ್.ವಿ. ನಂಜುಂಡಯ್ಯ ಅದರ ಮುಖ್ಯಸ್ತರಾಗಿದ್ದರು. ೧೬–೧೭ ವರುಷ ಸಮೀಕ್ಷಗೆ ಕೆಲಸಮಾಡಿದ್ದರು. ೩೪ ಹೊತ್ತಿಗೆಗಳು ಪ್ರಕಟವಾಗಿದ್ದವು. ೫೦ ಹೊತ್ತಿಗೆಗೆ ವಸ್ತು ಸಂಗ್ರಹಣೆ ಮಾಡಿದ್ದರು. ಅವರ ಅಕಾಲಿಕ ಮರಣದಿಂದಾಗಿ (೧೯೨೦) ಕೆಲಸ ಸ್ಥಗಿತವಾಗಿತ್ತು. ಮೈಸೂರು ಮಹಾರಾಜರ ಅಣತಿಯ[1] ಮೇಲೆ (Order no G 11079-GM dated 193-22-9 dated 7/Aug/1224) ಪ್ರೊಫೆಸರ್ ಎಲ್.ಕೆ. ಅನಂತಕೃಷ್ಣ ಐಯರ್‌ಗೆ ಸಮೀಕ್ಷೆಯ ಕೆಲಸ ವಹಿಸಲಾಯ್ತು. ಮತ್ತು ದಿವಾನ್ ಬಹದ್ದೂರ್ ಎಚ್.ವಿ. ನಂಜುಂಡಯ್ಯನವರ ಹೊತ್ತಿಗೆಗಳನ್ನು ಮತ್ತು ವಸ್ತು ಸಂಗ್ರಹಣೆಯನ್ನು ಐಯರ್ ರವರಿಗೆ ವಹಿಸಿಕೊಡಲಾಯ್ತು. ಮೊದಲು ೩೪ ಹೊತ್ತಿಗೆಗಳನ್ನು ಪರಿಷ್ಕರಿಸಿ ಅದನ್ನು ಮುದ್ರಣ ಮಾಡಲಾಯ್ತು. ಮಿಕ್ಕ ವಸ್ತು ಸಂಗ್ರಹಣೆ ಅಸ್ಖಲಿಕ ಲೇಖನಗಳಿಂದ ಮುಖ್ಯವಾದದ್ದನ್ನು ಉಪಯೋಗಿಸಲಾಯ್ತು. ಹಲವು ಟಿಪ್ಪಣಿಗಳು ಎಚ್.ವಿ. ನಂಜುಡಯ್ಯನವರು ಪೆನ್ಸಿಲಿನಿಂದ ಬರೆದದ್ದು, ಅವುಗಳ ಲಿಖಿತರೂಪ ಬಹು ಅಸ್ಪಷ್ಟವಾಗಿದ್ದರಿಂದ ಅವನ್ನು ಪುನಃ ಪರಿಶೀಲಿಸಬೇಕಾಯ್ತು. ಇದಕ್ಕಾಗಿ ಐಯರ್ ರವರು ಬಹಳ ಕಷ್ಟಪಡಬೇಕಾಯ್ತು. ಹೀಗಾಗಿ ಮೈಸೂರು ಮಹಾರಾಜರ ಪರವಾನಗಿ ಪಡೆದು ತಮಗೆ ಹಲವು ಸೌಕರ್ಯಗಳ ಅನಿವಾರ್ಯತೆಯನ್ನು ವಿವರಿಸಿ, ತಮಗೆ ಸೌಕರ್ಯ ಒದಗಿಸಲು ವಿನಂತಿಸಿಕೊಂಡರು. ಪರಿಷ್ಕರಣೆಯಾದ ಹಲವು ಹೊಸ ಸಂಗತಿಗಳನ್ನು ಬೆಳಕಿಗೆ ತಂದರು. ಅವು ಸುಮಾರು ೭೦೦ರಷ್ಟಿವೆ.

**Mysore castes and Tribes vol I-IV. (Appendices index)**

ಮೇಲ್ನೋಟಕ್ಕೆ ಎಲ್ಲಾ ಪುಸ್ತಕದಂತೆ ಒಂದು ವಿನ್ಯಾಸವನ್ನು ಹೊಂದಿದ್ದರೂ, ಹಲವಾರು ಉತ್ತಮ ಪ್ರಬಂಧಗಳನ್ನು ಹೊಂದಿದೆ. ಐಯರ್‌ರವರು ಆ ಕಾಲದಲ್ಲಿ ಹಲವಾರು ಮಾನವಶಾಸ್ತ್ರ ವಿಜ್ಞಾನ ಪದ್ಧತಿಯನ್ನು ಅಳವಡಿಸಿದ್ದು ಅದರ ಫಲಿತಾಂಶ ಕಂಡು ಬಂದಿದೆ. ಐಯರ್ ತಮ್ಮ ಮುನ್ನುಡಿಯಲ್ಲಿ ತಾವು ಈ ಪುಸ್ತಕವನ್ನು ಯಾಕೆ ಬರೆಯಬೇಕಾಯಿತೆಂದು ಸ್ಪಷ್ಟೀಕರಿಸಿದ್ದಾರೆ. ಈ ಪುಸ್ತಕ ಪದವೀಪೂರ್ವ ಮತ್ತು ಪಧವೀಧರರನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಬರೆಯ ಬೇಕಾಯಿತೆಂದೂ, ಇದಕ್ಕೆ ಕಾರಣ "ಮನಶಾಸ್ತ್ರದ ಬಗ್ಗೆ ಸಂದರ್ಭ ಸೂಚಿಗಳು ಆಗ ಒಂದೂ ಇದ್ದಿಲ್ಲ", ಹಾಗಾಗಿ ವಿದ್ಯಾರ್ಥಿಗಳಿಗೆ ಏನು ಓದಬೇಕೆಂದು ಗೊತ್ತಿರಲಿಲ್ಲ.

ಪುಸ್ತಕದ ಜಾತಿ, ಮತ ವಿಭಾಗದಲ್ಲಿ, ಆಚಾರ, ವಿಚಾರದ ಜೊತೆ ಹೊಸತನ್ನು ಸೇರಿಸಿದೆ. ಅದೂ ಅಲ್ಲದೆ ಆ ಕಾಲದ ಮಾನವಶಾಸ್ತ್ರ ಹೆಸರಾಂತ ವಿದ್ವಾಂಸರಾದ Breslau, (Germany) ವಿಶ್ವವಿದ್ಯಾನಿಲಯದ Baron von- Eickstedt L.K. Anantha Krishna Iyer. (Director of ethnographic museum and prolessor of Anthropology) Racial History of India (ಭಾರತದ ಮಾನವ ಜನಾಂಗ ಚರಿತ್ರೆ) ಬರೆದಿದ್ದಾರೆ. ಮತ್ತೊಂದು ಅಧ್ಯಾಯದಲ್ಲಿ F.J. Richardsರವರು 'Cultural Geography of Mysore' ಬರೆದಿದ್ದಾರೆ. ಈ ಎರಡೂ ಪ್ರಬಂಧಗಳು ಸುಧೀರ್ಗವಾಗಿದ್ದು ಪುಸ್ತಕದ ಗುಣಮಟ್ಟವನ್ನು ಏರಿಸಿದೆ. Vol-Iರಲ್ಲಿ Sylvain Levi, (ಪ್ಯಾರಿಸ್ ವಿಶ್ವವಿದ್ಯಾನಿಲಯದ ಇಂಡಾಲಜಿ ಪ್ರೊಫೆಸರ್) ಬರೆದಿರುವ ಪ್ರಾಸ್ತಾವಿಕ ಟಿಪ್ಪಣಿಯಲ್ಲಿ ಬಹಳಷ್ಟು ಉಪಯುಕ್ತವಾದ ವಿಚಾರಗಳನ್ನು ಚರ್ಚಿಸಿದೆ.

ಮಾನವ ಕುಲಗಳ ವಿಚಾರಣೆ ಮತ್ತು ಚಟುವಟಿಕೆಗಳನ್ನು ಅಭ್ಯಾಸಮಾಡುವ ಒಂದೂ ಅವಲೋಕನ ಗ್ರಂಥ ಇರದಿದ್ದ ಕಾಲದಲ್ಲಿ ಈ ಗ್ರಂಥಗಳು ಆಕರ ಗ್ರಂಥಗಳಾಗಿವೆ. ಅದೂ ಅಲ್ಲದೆ ಇದರಲ್ಲಿರುವ ಜಾತಿ, ಸಿದ್ಧಾಂತ ವಿವರಗಳು ಆ ಕಾಲದ ಸಮಕಾಲೀನ ಸಿದ್ಧಾಂತಗಳನ್ನು ತುಲನಾತ್ಮಕವಾಗಿ ನೀಡಿದೆ.

ಮೈಸೂರಿನ ಕ್ಷೇತ್ರಕಾರ್ಯ ಸುಮಾರು ಹತ್ತು ವರುಷ ಕೈಗೊಂಡ ಐಯರ್ ತಾವು ಬರೆದ ಹೊಸ ವಿಷಯಗಳನ್ನು Group 2. ನಲ್ಲಿ Notes on Triber and Castes, ಮತ್ತು Group 3. ನಲ್ಲಿ New Tribes and Castes ನಲ್ಲಿ ಸೇರಿಸಿದ್ದಾರೆ. ಅದೂ ಅಲ್ಲದೆ ಹಲವು (Criminal Tribes) ಕೂಡ ಇವರ ಅವಗಾಹನೆಗಾಗಿ ಬಂದಿದೆ. ಹೀಗಾಗಿ ಏಳುನೂರು ಪುಟ ಹೊಸದಾಗಿ ಸೇರಿಸಿದೆ.

ಮೈಸೂರಿನ ಕೆಲಸ ಕೈಗೊಂಡಾಗ ಉತ್ತಮ ವಾತಾವರಣವಿತ್ತು. ಮಹಾರಾಜರ ಪ್ರೋತ್ಸಾಹ ವೈಸ್‌ಛಾನ್ಸಲರ್ ಬ್ರಜೇಂದ್ರನಾಥ ನೀಲ್‌ರವರಂತ ಮುತ್ಸುದ್ಧಿಯವರ ಪ್ರೇರಣೆ ಮತ್ತು ದಿವಾನ್ ಮಿರ್ಜಾ ಇಸ್ಮಯಿಲ್‌ರವರ ಪ್ರೋತ್ಸಾಹ, ಇವರೆಲ್ಲರ ಬೆಂಬಲ ಐಯರ್‌ಗೆ ಇತ್ತು. ಈ ಪುಸ್ತಕದಲ್ಲಿ ಯಾವುದಾದರೂ ವಿಷಯ ಅಭ್ಯಾಸ ಮಾಡಬೇಕಾದಾಗ ಆ ವಿಷಯಕ್ಕೆ ಸಂಬಂಧಪಟ್ಟ ಎಲ್ಲಾ ಮಾಹಿತಿ ಒಂದೇ ಕಡೆ ಜೋಡಿಸಿದೆ.

ಹೀಗೆ ನಾಲ್ಕೂ ಗ್ರಂಥಗಳಲ್ಲಿ ಅತ್ಯಂತ ಉಪಯುಕ್ತ ಮಾಹಿತಿ ದೊರೆಯುತ್ತದೆ. ಅದೂ ಅಲ್ಲದೆ ಅಚ್ಚುಕಟ್ಟಾದ ಅನುಬಂಧ ಮತ್ತು ಸೂಚಿಯನ್ನು ಐದನೆಯ ಗ್ರಂಥದಲ್ಲಿ ಕೊಟ್ಟಿರುವದು ಹೆಚ್ಚುಗಾರಿಕೆ.

**ಐಯರ್ ಅವರ ಕೆಲಸದ ವೈಖರಿ**

ಪ್ರೊಫೆಸರ್ ಎಲ್.ಕೆ. ಅನಂತಕೃಷ್ಣ ಐಯರ್ ಮರಿ ಮೊಮ್ಮಗಳು ಬರೆದಿರುವ ಪ್ರಬಂಧದಿಂದ[೨] ನಮಗೆ ಐಯರ್ ರವರ ಕೆಲಸದ ವಿವರ ಸಿಗುತ್ತದೆ. ಕ್ಷೇತ್ರಕಾರ್ಯಕ್ಕೆ ಐಯರ್ ರವರು ಹೊರಟರೆ ಅವರು (T.B.) travellers Bungvatow ಅಥವಾ Circuit house ನಲ್ಲಿ ಇರುತ್ತಿದ್ದು ಅವರ ಜೊತೆಗೆ ರೆವಿನ್ಯೂ ಅಧಿಕಾರಿ ಇರುತ್ತಿದ್ದ, ತಾವೇ ಖುದ್ದು ಹಳ್ಳಿವರ ಪರಿಚಯ ಮಾಡಿಕೊಳ್ಳುತ್ತಿದ್ದರು. ಜಾತಿ, ಬುಡಕಟ್ಟುಗಳ ಸ್ಥೂಲ ಪರಿಚಯ ಮಾಡಿಕೊಂಡಿರುತ್ತಿದ್ದರು. ತಾವು ಯಾರನ್ನು ಭೇಟಿ ಮಾಡುವರೋ ಅವರ ಸೂಕ್ಷ್ಮ ಪರಿಚಯವಿರುತ್ತಿದ್ದು, ಮತ್ತು ಮುಖ್ಯಸ್ತನ, ಆಚಾರ ವಿಚಾರದ ಪರಿಚಯ ತಿಳಿದು ಕೊಂಡಿರುವರು. ಗುಂಪಿನ ಯಜಮಾನ ನನ್ನು ಭೇಟಿ ಮಾಡಿ, ಇತರರನ್ನು ಸಂಪರ್ಕಿಸಿ ವಿಷಯ ಸಂಗ್ರಹಿಸಿ ಅಲ್ಲಿ ಸಿಕ್ಕ ಫೋಟೋವನ್ನು ಖುದ್ದಾಗಿ ತೆಗೆಯುವರು. ಹಲವೊಮ್ಮೆ ಹೆಚ್ಚು ವಿಚಾರ ಸಂಗ್ರಹಿಸಬೇಕಾದರೆ ಸಾಕಷ್ಟು ಸಮಯ ತೆಗೆದುಕೊಳ್ಳುವರು. ಊಟ ಮುಗಿಸಿ, ಸ್ನಾನ ಗೃಹವನ್ನು ಕತ್ತಲೆಮಾಡಿ ತಾವು ತೆಗೆದ ಚಿತ್ರಗಳನ್ನು ಬೆಳ್ಳಗೆ ಮಾಡಿ ಒಣಗಿಸಲು, ಮಧ್ಯರಾತ್ರಿವರೆಗೂ ಕೆಲಸಮಾಡುತ್ತಿದ್ದರು. ವೈಜ್ಞಾನಿಕ ರೀತಿಯಲ್ಲಿ ಕೆಲಸ ಮಾಡಿ ಮುಗಿಸುತ್ತಿದ್ದರು. ಐಯ್ಯರ್‌ರವರು ಖುದ್ದು ತಾವೇ ಫೋಟೋ ತೆಗೆಯುವದನ್ನು ಗಮನಿಸಿದಾಗ ಇವರ ಸಮಕಾಲೀನ ಮಾನವಶಾಸ್ತ್ರಜ್ಞ, Edward Thurston ರವರಿಗೆ ಸದಾಕಾಲ ಕೆ. ರಂಗಾಚಾರಿ ಎಂಬ ಸಹಾಯಕ ಇದ್ದುದನ್ನು ಇಲ್ಲಿ ನೆನಪಿಸಬಹುದು ಐಯರ್‌ರವರು ತೆಗೆದ ಫೋಟೋಗಳು, ದೃಷ್ಟಾಂತ, ಅತ್ಯಂತ ಸಮಯೋಜಿತವಾಗಿದ್ದು ಅದು ಕಾಡಿರಲಿ, ಹಳ್ಳಿ ಇರಲಿ, ಅಥವಾ ಬಂಜಾರಿಗಳು ಹಾಕುವ ವಡವೆ ಇರಲಿ, ಬೆಸ್ತ ಹಿಡಿಯುವ ಮೀನಿನ ಬಲೆಯಿರಲಿ ಅತ್ಯಂತ ಕಲಾತ್ಮಕವಾಗಿದೆ.

ಐಯರ್‌ರವರ ಫೋಟೊ ಆಸಕ್ತಿ ಅಪಾರ. ಸೋಮಾರಿತನದ ನೆರಳೂ ಸೊಂಕದ ಐಯರ್ ಆಯಾ ದಿವಸ ತೆಗೆದ ಫೋಟೋ ಆಯಾ ದಿವಸವೇ ತಯಾರಾಗುವಂತೆ ಮತ್ತು ತಪ್ಪನ್ನು ಕೂಡಲೆ ಸರಿಪಡಿಸುವಂತೆ ಶ್ರಮ ವಹಿಸುತ್ತಿದ್ದರು. ಇದು ಅವರ ವೃತ್ತಿಯ ಕಠೋರ ನಿಯಮವಾಗಿತ್ತು.

೧೯೩೪ರಲ್ಲಿ ಐಯರ್‌ರವರು ಐದುತಿಂಗಳ ಕಾಲ ವಿದೇಶ ಪ್ರಯಾಣ ಕೈಗೊಂಡರು. ಮತ್ತು ಯೂರೋಪ್ ವಾಸದಲ್ಲಿ ಹಲವಾರು ಉಪನ್ಯಾಸಗಳನ್ನು ಕೊಟ್ಟರು. ರೋಮ್ ವಿಶ್ವವಿದ್ಯಾನಿಲಯದಲ್ಲಿ 'Black magic in India' ಮತ್ತು ಆಕ್ಸಫರ್ಡ ವಿಶ್ವವಿದ್ಯಾನಿಲಯದಲ್ಲಿ 'South Indian Culture' ಬಗ್ಗೆ ಮತ್ತು International Congress of Anthropological and ethnological Sciences Society, July 30, 1934 ರಲ್ಲಿ Agricultural Basis of Religion in India' ಪ್ರಬಂಧ ಮಂಡಿಸಿದರು. ಹೀಗೆ ಹಲವಾರು ವಿದ್ವತ್‌ಪೂರ್ಣ ಭಾಷಣಗಳನ್ನು, Lantern Slide ಉಪಯೋಗಿಸಿ ನಡೆಸಿಕೊಟ್ಟರು. June 12th 1934. ರಲ್ಲಿ ASiatic Society, ಉತ್ತಮ ಭಾಷಣ ಕೊಟ್ಟಾಗ "ಸಭಾಂಗಣ ತುಂಬಿತ್ತು. ಮತ್ತು ನೇತಾಜಿ ಸುಭಾಷ್ ಚಂದ್ರಬೋಸ್ ಉಪಸ್ಥಿತರಿದ್ದರು.[೫]

ಐಯರ್ ಅವರಿಗೆ ಸಂದ ಗೌರವಗಳು ಹಲವಾರು. ಆದರೆ ಇಲ್ಲಿ ಮುಖ್ಯವಾದವನ್ನು ಹೆಸರಿಸಿದೆ. Indian Science Congress ಮೊದಲನೆ ಸದಸ್ಯತ್ವ. ಪ್ರತಿವರ್ಷ ಸಮಾವೇಶನದಲ್ಲಿ ಪಾಲ್ಗೊಳ್ಳುತ್ತಿದ್ದರು. Mumbai (Bombay Anthropological Society ಮೆಂಬರ್, ಬೆಂಗಳೂರು Mythic Society Journal ಗೆ 1928 ರಲ್ಲಿ ಬರೆದ ಪ್ರಬಂಧ 'Anthropometry of the Kanikars of Travancore Vol 18, No 3 1928, P.210-211) ಪ್ರಕಟಗೊಂಡಿದೆ.

ಡಾ|| ಎಲ್.ಕೆ. ಅನಂತಕೃಷ್ಣ ಐಯರ್ ತಮ್ಮ ಯೂರೋಪ್ ಪ್ರವಾಸ ಮುಗಿಸಿ ಭಾರತಕ್ಕೆ ಬಂದ ತಕ್ಷಣ ಕೈಗೊಂಡ ಕೆಲಸ Mysore Tribes and Castes ಪುಸ್ತಕಕ್ಕೆ Index (ಸೂಚಿ) ಮತ್ತು Appendix (ಅನಬಂಧ) ತಯಾರಿಸಿದ್ದು. ಕೂರ್ಗ ಬಗ್ಗೆ ಅಪಾರ ಮಾಹಿತಿ ಸಂಗ್ರಹಿಸಿದ್ದ ಐಯರ್ ಕೂರ್ಗನ ಅಧ್ಯಯನದಲ್ಲಿ ತೊಡಗಿದ್ದರು. ಫ್ರಾನ್ಸ್ ದೇಶದಿಂದ ಬಂದಿದ್ದ Prof. Lidco-Siriami ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ್ದರು. ಆದರೆ ಪ್ರೊ|| ಐಯರ್‌ರವರ ಅಕಾಲ ಮರಣದಿಂದ (೧೯೩೭) ಕೊಡಗಿನ ಬಗ್ಗೆ ಅವರು ಕೈಗೊಂಡಿದ್ದ ಅಪಾರ ಕೆಲಸ ಸ್ತಗಿತವಾಯಿತು. ಆದರೆ ಅವರ ಮಗ ಪ್ರೊ|| L.A.Krishna Iyer ಪ್ರೊ|| ಎಲ್.ಕೆ. ಅನಂತಕೃಷ್ಣ ಐಯರ್ ಬಿಟ್ಟು ಹೋದ ಅಪಾರ ಟಿಪ್ಪಣಿಗಳ ಸದುಪಯೋಗ ಮಾಡಿ ಮತ್ತು ಅದಕ್ಕೆ ತಮ್ಮ ಹೊಸ ಕಲ್ಪನೆ ವಿಚಾರವನ್ನು ಒಳಗೊಂಡ 'The coorg Tribes and Castes with Illustration' ಪುಸ್ತಕ ೧೯೪೮ ರಲ್ಲಿ ಹೊರಬಂತು. ಎಲ್.ಎ. ಕೃಷ್ಣ ಐಯರ್ ಮದ್ರಾಸ ವಿಶ್ವವಿದ್ಯಾನಿಲಯದಲ್ಲಿ ಆಂತ್ರಪಾಲಜಿ ವಿಷಯದ ಮುಖ್ಯಸ್ತರು. ಈ ಪುಸ್ತಕ ಕೂರ್ಗ ಬಗ್ಗೆ ಅಭ್ಯಾಸ ಮಾಡುವವರಿಗೆ ಅತ್ಯಂತ ಉಪಯೋಗಕರವಾಗಿದೆ. ಪ್ರಸಿದ್ಧ ಮನುಕುಲ ತಜ್ಞ R.E. Enthoren, Bombay Castes and Tribes. ಪ್ರಾಸ್ತಾವಿಕವಾಗಿ ಪುಸ್ತಕದ ಬಗ್ಗೆ ಬರೆದಿರುವರು. ಕೂರ್ಗ ಜನಾಂಗದಲ್ಲಿ ಬರುವ ಅತಿ ಸೂಕ್ಷ್ಮ ವಿಚಾರ, ಮತ್ತು ಪುರಾಣದಲ್ಲಿ ಬರುವ ಹಲವು ವಿಶ್ಲೇಷಣಗಳು ಮತ್ತು ಕುರುಬರು, ಬಂಟರು, ಗೌಡರು ವಕ್ಕಲಿಗರು, ಸಾವಿನಕ್ರಿಯೆ, ಹಬ್ಬಗಳು ವಿಷಯಗಳನ್ನೆಲ್ಲಾ ಸುಧೀರ್ಗವಾಗಿ ಚರ್ಚಿಸಿದೆ. ಮುನ್ನುಡಿಯನ್ನು ಪ್ರೊಫೆಸರ್ ಎಲ್.ಎ. ಕೃಷ್ಣ ಐಯರ್[೬] ಬರೆದಿದ್ದಾರೆ. ಒಟ್ಟಿನಲ್ಲಿ ಪುಸ್ತಕ, ಕೊಡಗಿನ ಸಾಮಾಜಿಕ, ಸಾಂಸ್ಕೃತಿಕ ಜೀವನವನ್ನು ವಿವರವಾಗಿ, ಕಲಾತ್ಮಕವಾಗಿ ಕೊಟ್ಟಿದೆ.

ಪ್ರೊಫೆಸರ್ ಎಲ್.ಕೆ. ಅನಂತಕೃಷ್ಣ ಐಯರ್" ಮಾನವ ವಿಜ್ಞಾನದ ಮಾಹಿತಿ ಸಂಗ್ರಹಕ್ಕೆ ಕೈಗೊಂಡಾಗ ಅವರಿಗೆ ಅದರ ಅನುಭವ ಹೆಚ್ಚಿಗೆ ಇರಲಿಲ್ಲ.[೭] ತಮ್ಮ ಹುದ್ದೆಯನ್ನು ಅವರು ಒಂದು ಗೌರವಾನ್ವಿತ ಹುದ್ದೆಯಾಗಿ ಸ್ವೀಕರಿಸಿದರು ವಾರದ ಕೊನೆಯಲ್ಲಿ ಸಾಮಾನ್ಯವಾಗಿ ಕ್ಷೇತ್ರಯಾತ್ರೆಯನ್ನು ಕೈಗೊಳ್ಳುತ್ತಿದ್ದರು. ಮತ್ತು ರಾತ್ರಿ ಹೊತ್ತು ಬರೆಯುತ್ತಿದ್ದರು. ತಮ್ಮ ಕ್ಷೇತ್ರದಲ್ಲಿ ಪರಿಣಿತ ಹೊಂದಿದ್ದ ಐಯರ್ ಯೋರೋಪ್ ಯಾತ್ರೆ ಕೈಗೊಂಡಾಗ ಒಬ್ಬ ಪರಿಣಿತ ಅಧಿಕಾರಯುಕ್ತ, ಭಾಷಣಕಾರರಾಗಿದ್ದರು. ಮತ್ತು ಅವರ ವಾಗ್ ವೈಖರಿಯನ್ನು ಪಾಶ್ಚಾತ್ಯ ವಿದ್ವಾಂಸರು ಗುರುತಿಸಿದ್ದರು.

ಮಧ್ಯಮ ವರ್ಗದವರ ನಾಗರೀಕತೆಯ ಮೆಟ್ಟಲಿಗೇರಿದ ಐಯರ್ ಮೇಲೆ ಪಾಶ್ಚಾತ್ಯ ಪರಿಣಾಮ ಇದ್ದರೂ, ಅವರದೇ ಆದ ನಿಲುವಿತ್ತು ಮತ್ತು ವರ್ಚಸಿತ್ತು.[೮] ಐಯರ್‌ರವರು ಮುಂದಿನ ಪೀಳಿಗೆಗೆ ಮಾರ್ಗದರ್ಶಿಯಾದರೂ ವಸಾಹತು ಶಾಹಿಗಳು ಸ್ಥಳೀಯರನ್ನು ನಾಗರೀಕರನ್ನಾಗಿ ಮಾಡುವ ಉದ್ದೇಶ ಬುದ್ಧಿಗೆ ನಿಲುಕುವದಾದರೂ ಎಲ್ಲಾ ನಿರ್ಣಯ ಶಕ್ತಿಯನ್ನೂ ತಮ್ಮ ನರಕುಲ ವೀಕ್ಷಣೆ, ಸಮೀಕ್ಷೆ ಕೈಗೊಂಡವರು ಸ್ಥಳೀಯ ಭಾಷೆಗಳ ಮೇಲೆ ಹಿಡಿತವಿಲ್ಲದವರೆಂಬ ಉದ್ಗಾರ ಕೇಳಿಬಂತು; ಆದ್ದರಿಂದ ಸ್ಥಳೀಯ ಭಾಷೆಯ ಪರಿಣಿತಿ ಪಡೆದಿದ್ದ ಮತ್ತು ಆಂಗ್ಲ ಭಾಷೆಯ ಪ್ರಭುತ್ವವಿದ್ಧ ಪುರೋಗಾಮಿ ಪ್ರೊ|| ಐಯರ್‌ರವರ ಸದುಪಯೋಗ ಪಡೆದವರು ಹಲವಾರು ಮಂದಿ "ಸ್ಮಾಶಾನದಲ್ಲಿ ಶವಸಂಸ್ಕಾರವಿಧಿ ಐಯರ್‌ರವರಿಗಿಂತ ಯಾರು ವಿವರಣೆ ಕೊಡಲು ಸಾಧ್ಯವಿಲ್ಲ. ಭಾರತದ ಅಸಂಖ್ಯಾತ ಆಚಾರ ವಿಚಾರಗಳನ್ನು ಒಂದು ಸ್ಥಳೀಯ

ಮಾನವ ವಿಜ್ಞಾನಿ ಮಾತ್ರ ವಿವರಿಸಬಲ್ಲ ಎಂಬ ತಿಳುವಳಿಕೆ ಬಂದಿದೆ ಎಂದು ಆ ಕಾಲದ ಪ್ರಸಿದ್ಧ ಪತ್ರಿಕೆ (Indian Patriot, 27 Jan. 1913) ಬರೆಯಿತು. ಯಾವುದೇ ಸಾಮಾಜಿಕ, ಸಂಸ್ಕೃತಿಯ ಅಧ್ಯಯನ ಒಂದು ಗುಂಪಿನ ಮತ್ತು ವ್ಯಕ್ತಿಯ ಪೂರ್ಣ ಅಧ್ಯಯನವಾಗುವದಿಲ್ಲ. ವ್ಯಕ್ತಿ ತನ್ನ ಸುತ್ತ ಮತ್ತು ಇರುವ ಸಾಮಾಜಿಕ ಸನ್ನಿವೇಶ, ಪರಿಸರ ಸಂದರ್ಭ ಮತ್ತು ಆಗುತ್ತಿರುವ ಬದಲಾವಣೆ, ಪರಿವರ್ತನೆ ಇವುಗಳ ಸುತ್ತ ತನ್ನ ವಿದ್ವತ್ತನ್ನು ವಿಸ್ತರಿಸಿ ತನ್ನ ಸುತ್ತ ಇರುವ ಬೆಂಬಲಿಗರಿಗೆ ಮತ್ತು ವಿಶ್ವಾಸಾರ್ಹರಿಗೆ ಹೇಗೆ ಅರ್ಥೈಸುವನು ಎಂಬುದು ಮುಖ್ಯವಾಗುತ್ತೆ. ಪ್ರೊಫೆಸರ್ ಐಯರ್ ತಮ್ಮ ಸುತ್ತಲಿದ್ದ ಪರಿವಾರದೊಂದಿಗೆ ಬೆರೆತು ತಮ್ಮದೇ ಆದ ಸ್ಥಾನವನ್ನು ಸೃಷ್ಟಿಸಿದ್ದರು. ಹಳೆಯ ಸಿದ್ಧಾಂತಗಳನ್ನು ಅವರು ರೂಢಿಸಿಕೊಂಡಿದ್ದರೂ ಅವರಿಗೆ ಪಾಶ್ಚಾತ್ಯರ ಸಂಪರ್ಕವಿದ್ದು, ಮಾನವ ಶಾಸ್ತ್ರಕ್ಕೆ ಪಾಶ್ಚಾತ್ಯರೇ ಮಾದರಿ ಎಂದು ತಿಳಿದಿದ್ದ ಭಾರತೀಯರಿಗೆ ಇವರು ಸ್ಥಳೀಯರಾಗಿ ಮಾರ್ಗದರ್ಶಿಯಾದರು. ನಾಯರ್, ಕ್ರಿಶ್ಚಿಯನ್, ನಂಬೂದ್ರಿ, ಅಧ್ಯಯನ ನಡೆಸಿದರು. ಹಲವಾರು ವಿದ್ವಾಂಸರು ಅವರ ಸಂಶೋಧನೆಯಿಂದ ಲಾಭಹೊಂದಿ ಬುಡಕಟ್ಟಿನ ಜಾತಿಯ ಸಂಶೋಧನೆಯಲ್ಲಿ ತೊಡಗಿರುವರು. ಮಾನವಶಾಸ್ತ್ರದ ಮುಂದುವರಿದ ಸಂಶೋಧನೆಯಲ್ಲಿ ತೊಡಗಿರುವರು. ಸಾಮಾಜಿಕ, ಸಾಂಸ್ಕೃತಿಕ, ಸಮಾಜಶಾಸ್ತ್ರ ಹೆಚ್ಚಿನ ಪ್ರಾಮುಖ್ಯತೆ ಪಡೆದವು. ಪ್ರಖ್ಯಾತ ಸಾಮಾಜಿಕಶಾಸ್ತ್ರಜ್ಞ ಎಮ್.ಎನ್. ಶ್ರೀನಿವಾಸ್ ಪ್ರೊ ಅನಂತಕೃಷ್ಣ ಐಯರ್‌ರವರಿಂದ ಸ್ಫೂರ್ತಿಪಡೆದಿದ್ದಾಗಿಯೂ ಮತ್ತು ಅವರ ಪುಸ್ತಕಗಳಿಂದ ಉಪಯೋಗ ಪಡೆದಿದ್ದಾಗಿ ತಿಳಿಸಿರುವರು ಅದೂ ಅಲ್ಲದೆ ತಮ್ಮ ಮೊದಲನೆ ಪುಸ್ತಕ 'Marriage and Family in mysore' ಬರೆಯುವಾಗ್ ಪ್ರೊ॥ ಐಯರ್‌ರವರ 'Mysore Tribes and Castes' ಪುಸ್ತಕದಿಂದ ಹಲವಾರು ಮಾಹಿತಿಯನ್ನು ಸಂಗ್ರಹಿಸಿದ್ದಾಗಿ ತಿಳಿಸಿರುವರು.

ಪ್ರೊ॥ ಎಲ್.ಕೆ. ಅನಂತಕೃಷ್ಣ ಐಯರ್ ತಮ್ಮ ಧೈರ್ಯ ಶ್ರದ್ಧೆಯಿಂದ ಮನುಕುಲಶಾಸ್ತ್ರವನ್ನು ವ್ಯಕ್ತಿಯನ್ನಾಗಿ ಆರಿಸಿದಂತಕತೆಯಾದರು ಎಂಬುದಾಗಿ ಎಮ್.ಎನ್. ಶ್ರೀನಿವಾಸ್‌ರವರ ಹೇಳಿಕೆ ಸಮಂಜಸವಾಗಿದೆ.

ಪ್ರೊ॥ ಎಲ್.ಕೆ. ಅನಂತಕೃಷ್ಣ ಐಯರ್ ನೆನಪಿನಲ್ಲಿ ೧೯೭೮-೭೯ ಪಾಲ್‌ಘೌಟ್‌ನಲ್ಲಿ ಒಂದು ಅಂತರರಾಷ್ಟ್ರೀಯ ಸಂಘ ಮಾನವಶಾಸ್ತ ಕಲಿಕೆಗಾಗಿ ಸ್ಥಾಪಿತವಾಗಿದೆ ಇದು ಮಾನವ ಸಂಶೋಧನೆಗೆ ಸಹಾಯವಾಗಿದೆ. ಎಚ್ಚರಿಕೆಯಿಂದ ಸಂಗ್ರಹಿಸಿದ ಮಾಹಿತಿ, ಅತ್ಯಂತ ನಿಖರವಾಗಿ ದಾಖಲಾಗಿದೆ. ಹೀಗಾಗಿ ಕೇರಳ ಮತ್ತು ಮೈಸೂರು ಮಾನವಶಾಸ್ತ್ರ ಅಭ್ಯಾಸ ಮಾಡುವ ಮುಖ್ಯ ಸ್ಥಳವಾಗಿ ಹಲವಾರು ವಿದ್ವಾಂಸರನ್ನು ಆಕರ್ಷಿಸುತ್ತಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Bala Ratnam, A Name to remember: Anantha Krishna Blazes a trial (in) Anthropology on the march. Recent studies of Indion Beliefs, Attitudes Madras. 1963, P. 17 and social institutions, Madras, P. 13, 1962.

೨. ಅದೇ.

೩. Preface to *Mysore Castes and Tribes,* P. I-ix, Mysore 1935.

೪. Kalpana Ram; *Anthropology as An anthropology;* L.K. Anantha Krishna Iyer (in) Patricia Ubarai and others. ed. Colonial Anthropology and the Native Anthropologist as pioneer, 2007, P. 64 -106.

೫. L.A. Ramdas, *Man in India,* vol. 66, No. 4, December 1986, P. 288.

೬ L.A. Krishna Iyer, *The Coorg Tribes and Castes with illustrations,* Madras, Gordon pren, 1948.

೭. B.Joardar, *Anthropology in the making the Indian Experience,* New Delhi, Inter India publication, 2006, P. 241.

೮. Kalapana Ram, *Anthropology as An anthropology ;* L.K. Anantha Krishna Iyer (in) Patricia Ubarai and others. ed. Colonial Anthropology and the Native Anthropologist as pioneer 2007, P. 64 -106.

೯. L.K. Balaratnam; Anantha Krishna's Contribution to Anthropological Literature (in) man in India, vol. 60, No. 4 Dec 1986, P. 301.



# ಎಮ್. ಶ್ರೀನಿವಾಸ ಅಯ್ಯಂಗಾರ್ ಮತ್ತು ಪತ್ರಿಕೋದ್ಯಮ

ಡಾ. ಲಕ್ಷ್ಮಿದೇವಿ ಎಸ್.ಎ.*

'ಭಾರತದಲ್ಲಿ ಪತ್ರಿಕೋದ್ಯಮ ಹುಟ್ಟಿದ ಅನೇಕ ದಶಕಗಳ ನಂತರ ಕರ್ನಾಟಕದಲ್ಲಿ ಪತ್ರಿಕೋದ್ಯಮ ಜನ್ಮತಾಳಿತು. ಕರ್ನಾಟಕದ ಪತ್ರಿಕೋದ್ಯಮಕ್ಕೆ ೧೬೯ ವರ್ಷಗಳ ಸುದೀರ್ಘ ಇತಿಹಾಸವಿದೆ. ಪ್ರಥಮದಲ್ಲಿ ಧರ್ಮ ಪ್ರಚಾರ, ಆನಂತರ ಕನ್ನಡ ನಾಡು ಮತ್ತು ನುಡಿಯ ಏಳ್ಗೆ – ಈ ಉದ್ದೇಶಗಳನ್ನಿಟ್ಟು ಕೊಂಡು ಪತ್ರಿಕೆಗಳು ಪ್ರಾರಂಭವಾದವು. ಕರ್ನಾಟಕದ ಪತ್ರಿಕೆಗಳು ಭಾರತದ ಇತರ ಭಾಷೆಗಳ ಪತ್ರಿಕೆಗಳಂತೆಯೇ ಇಲ್ಲಿಯ ಜನಜೀವನದ ವಿವಿಧ ಮುಖಗಳ ಪ್ರತಿಬಿಂಬವಾಗಿವೆ.

ಮಂಗಳೂರಿನಲ್ಲಿ ೧೮೪೩ ಜುಲೈ ೧ರಂದು ಪ್ರಕಟವಾದ 'ಮಂಗಳೂರು ಸಮಾಚಾರ' ಎಂಬುದೇ ಪ್ರಥಮ ಕನ್ನಡ ಪತ್ರಿಕೆ. ಕ್ರೈಸ್ತಮತ ಪ್ರಚಾರ ಈ ಪತ್ರಿಕೆಯ ಮುಖ್ಯೋದ್ದೇಶ; ಹರ್ಮನ್ ಮೋಗ್ಲಿಂಗ್ ಇದರ ಸಂಪಾದಕ. ೧೮೬೦ರ ದಶಕದ ಕೊನೆಯ ಸರಿಸುಮಾರಿಗೆ ಕರ್ನಾಟಕದಲ್ಲಿ ಹೊಸ ರೀತಿಯ ಪತ್ರಿಕೋದ್ಯಮ ಚಟುವಟಿಕೆ ಕಾಣಿಸಿಕೊಂಡಿತು. ಪತ್ರಿಕೆಗಳು, ಸಾರ್ವಜನಿಕ ವಿಷಯಗಳ ಬಗ್ಗೆ ಅದರಲ್ಲೂ ವಿಶೇಷವಾಗಿ ರಾಷ್ಟ್ರೀಯ ರಾಜಕೀಯ ಘಟನಾವಳಿಗಳ ಬಗ್ಗೆ ವಿಶ್ಲೇಷಣೆ ಮಾಡುವುದನ್ನು ಆರಂಭಿಸಿದವು. ಕೆಲ ಪತ್ರಿಕೆಗಳು ನಿರ್ಭಯವಾದ ಧೋರಣೆಯಿಂದ ಆಗಿನ ಸರ್ಕಾರದ ರೀತಿ ನೀತಿಗಳನ್ನು ಟೀಕಿಸುತ್ತಿದ್ದರಲ್ಲದೆ ಜನಾಭಿಪ್ರಾಯವನ್ನು ರೂಪಿಸುವಲ್ಲಿ ಪತ್ರಿಕೆಯನ್ನು ಒಂದು ಪ್ರಧಾನ ಮಾಧ್ಯಮವಾಗಿ ಬಳಸಿದರು. ಮೈಸೂರಿನಲ್ಲಿ ಮೈಸೂರೇತರರಿಗೆ ಹೆಚ್ಚಿನ ಉದ್ಯೋಗಾವಕಾಶಗಳಿದ್ದುದನ್ನು ವಿರೋಧಿಸಿ, ಮೈಸೂರಿಗರ ಪರವಾಗಿ ಹೋರಾಟ ನಡೆಸಿದುದಲ್ಲದೆ, ಜನಸಾಮಾನ್ಯರ ಒಳಿತಿಗೆ ಸಂಭಂದಿಸಿದಂತೆ ನಾನಾ ವಿಚಾರಗಳನ್ನು ಪ್ರಕಟಿಸುತ್ತಿದ್ದು, ಅನೇಕ ಪತ್ರಿಕೆಗಳ ಲೇಖನಗಳು ಆಗ ಪ್ರಭಾವಶಾಲಿಯಾಗಿದ್ದವು. ದೇಶದ ಬೇರೆ ಬೇರೆ ಭಾಗಗಳಲ್ಲಿ ಪ್ರಾರಂಭವಾಗುತ್ತಿದ್ದ ಕಾಲದಲ್ಲೆ ಕರ್ನಾಟಕದಲ್ಲಿ ರಾಷ್ಟ್ರವಾದಿ ರಾಜಕೀಯ ಪತ್ರಿಕೋದ್ಯಮ ಆರಂಭವಾಯಿತೆನ್ನಬಹುದು.

ಹಿತಬೋಧಿನಿ, ವಿದ್ಯಾದಾಯಿನಿ, ಸಾಧ್ವಿ, ಸಂಪದಭ್ಯುದಯ, ಗ್ರಾಮ ಜೀವನ ಮುಂತಾದ ಕನ್ನಡ ಪತ್ರಿಕೆಗಳನ್ನು ವೆಲ್ತ್ ಆಫ್ ಮೈಸೂರು, ಮೈಸೂರ್ ಪೇಟ್ರಿಯೇಟ್, ನೇಚರ್ ಕೇರ್ ಮುಂತಾದ ಇಂಗ್ಲೀಷ್ ಪತ್ರಿಕೆಗಳನ್ನು ನಡೆಸಿದ್ದ ಅತ್ಯಂತ ಮಹತ್ವಾಕಾಂಕ್ಷೆಯ ಪತ್ರಕೋದ್ಯಮಿ ಆಗಿದ್ದ ಎಮ್. ವೆಂಕಟಕೃಷ್ಣಯ್ಯ (೧೮೪೪ – ೧೯೩೩) ನವರು ಪಳಗಿಸಿದ ಇಬ್ಬರು ತರುಣ ಸಹೋದರರೇ ಎಮ್. ಗೋಪಾಲ ಅಯ್ಯಂಗಾರ್ ಮತ್ತು ಎಮ್. ಶ್ರೀನಿವಾಸ ಅಯ್ಯಂಗಾರ್.

ಶ್ರೀ ಎಮ್. ಶ್ರೀನಿವಾಸ ಅಯ್ಯಂಗಾರರು ಒಬ್ಬ ದೊಡ್ಡ ಪತ್ರಿಕೋದ್ಯಮಿ, ಮೈಸೂರಿನ ಒಬ್ಬ ದೊಡ್ಡ ದೇಶಭಕ್ತರಾಗಿದ್ದರು. ಉತ್ತಮ ತತ್ವ ಮತ್ತು ಅತ್ಯುತ್ತಮ ಗುಣಮಟ್ಟದ ಪತ್ರಿಕೋದ್ಯಮಿ. ತಮ್ಮ ಲೇಖನಿಯನ್ನು ಕೌಶಲ್ಯ ಮತ್ತು ಹರಿತವಾಗಿ ಬಳಸಿ, ಉದಾತ್ತ ಸೇವೆಗಾಗಿ ಮೀಸಲಿಟ್ಟವರು. 'ವಿಕ್ಟೋರಿಯಾ – ಕ್ರಾಸ್' ಎಂಬ ಪದವಿಯನ್ನು ಹೆಗಲೇರಿಸಿಕೊಂಡವರು. ಒಂದು ದಶಕಕ್ಕೂ ಹೆಚ್ಚು ಕಾಲ ಮೈಸೂರಿನ ಮಣ್ಣಿನ ಮಗನಾಗಿ ಎರಡು ನಿಯ ಕಾಲಿಕೆಗಳನ್ನು ಅಸಾಧಾರಣ ಸ್ವಾತಂತ್ರ್ಯ ಮತ್ತು ದಕ್ಷತೆಯಿಂದ ನಡೆಸಿದ್ದರು. ಇವರು ನಡೆಸುತ್ತಿದ್ದ ಸಾಪ್ತಾಹಿಕ ಪತ್ರಿಕೆ, 'ಮೈಸೂರ್ ಸ್ಟ್ಯಾಂಡರ್ಡ್' ಮತ್ತು ಕನ್ನಡದ ಸಪ್ತಾಹಿಕ ಪತ್ರಿಕೆ 'ನಡೆಗನ್ನಡಿ' (೧೮೯೫ ರಲ್ಲಿ) ಆರಂಭವಾದದ್ದು) ಜನಪ್ರಿಯತೆ ಮತ್ತು ಶಕ್ತಿಯಲ್ಲಿ ಇವುಗಳಲ್ಲಿ ಪ್ರತಿಸ್ಪರ್ಧಿಯಾಗುವ ಯಾವ ಪತ್ರಿಕೆಗಳು ಇರಲಿಲ್ಲ.

ಶ್ರೀನಿವಾಸ ಅಯ್ಯಂಗಾರರ ದೇಶಾಭಿಮಾನ, ಭಾಷಾಶುದ್ಧಿ, ಸಾಹಿತ್ಯದ ಗುಣ, ಸುದ್ದಿಯ ಪ್ರಾಶಸ್ತ್ಯ, ವಿಚಾರ ಪೂರ್ಣ ಲೇಖನ, ಕಥೆ, ವ್ಯಂಗ್ಯ ಮುಂತಾದವನ್ನೆಲ್ಲ ಒಳಗೊಂಡು ಹೊರಬರುತ್ತಿದ್ದ ಇವರ ಪತ್ರಿಕೆಗಳು ಅದ್ಭುತವಾದವುಗಳು. ಸುದ್ದಿಯ ನಿಖರ ನಿರೂಪಣೆ, ವಿಚಾರ ವೈವಿಧ್ಯ, ಜ್ಞಾನ ಪ್ರಸಾರ ಜೊತೆಗೆ ಸಾಹಿತ್ಯ ಪೋಷಣೆ, ಹೇಗೆಂದರೆ ಕನ್ನಡ ನಡೆಗನ್ನಡಿ–ಕನ್ನಡದ ಗದ್ಯಭಾಗವನ್ನು ಪ್ರಕಟಿಸಿ, ಐತಿಹಾಸಿಕ ಪ್ರಜ್ಞೆ ಜನರಲ್ಲಿ ಉಂಟು ಮಾಡುವಲ್ಲಿ

* ಇತಿಹಾಸ ವಿಭಾಗ, ವಿ.ವಿ.ಎನ್. ಕಾಲೇಜು, ಬಸವನಗುಡಿ, ಬೆಂಗಳೂರು–೫೬೦೦೦೪.

ಹೆಸರುವಾಸಿಯಾಯಿತು. ಇವರ ಪತ್ರಿಕೆಗಳು ಆಧುನಿಕ ಕಾಲದ ಅಗತ್ಯಕ್ಕೆ ಭಾರತೀಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಿಂತನೆಗಳನ್ನು ಅಳವಡಿಸಲು ಪ್ರಯತ್ನಿಸಿದವು.

ಅಲ್ಲದೆ ಇವರ ಪತ್ರಿಕೆಗಳು ಜನರ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲೂ ಪ್ರಮುಖ ಪಾತ್ರವಹಿಸಿವೆ. ಈ ಪತ್ರಿಕೆಗಳು ಸ್ವಾತಂತ್ರ ಚಳುವಳಿಗೆ ತಮ್ಮ ಸಂಪೂರ್ಣ ಬೆಂಬಲ ನೀಡಿದ್ದಲ್ಲದೆ, ಕರ್ನಾಟಕದಲ್ಲಿ ಭಾವನಾತ್ಮಕ ಅಖಂಡತೆಗೆ ಪ್ರೋತ್ಸಾಹ ನೀಡಿತು. ಜೊತೆಗೆ ಪ್ರಗತಿಪರ ಚಿಂತನೆಗಳನ್ನು ಪ್ರಸಾರ ಮಾಡುವಲ್ಲಿ ಇವುಗಳ ಪಾತ್ರ ಬಹುಮುಖ್ಯ.

ದೇಶಿಯ ರಾಜರುಗಳ ಮೇಲೆ ಈಸ್ಟ್ ಇಂಡಿಯಾ ಕಂಪೆನಿ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿದ ಬಳಿಕ ಪರಮಾಧಿಕಾರವೆಂಬ ಪರಿಭಾಷೆ ಜಾರಿಗೆ ತಂದರು. ಕಾರಣ ಪೂರ್ವಕ ಚಿಂತನೆಯ ಫಲವಾಗಿ ಇದು ಮೂಡಿ ಬರದೆ, ರಾಜಕೀಯ ಅಗತ್ಯ ಹಾಗೂ ಆಡಳಿತಾತ್ಮಕ ಅನಿವಾರ್ಯತೆಯ ಫಲವಾಗಿ ಹುಟ್ಟಿದ್ದುದಾಗಿದೆ.

ನೇರವಾದ ಬ್ರಿಟೀಷ್ ಆಡಳಿತಕ್ಕೆ ಸಂಭಂದಿಸಿದ ವಲಯಗಳಲ್ಲಿನ ವೃತ್ತ ಪತ್ರಿಕೆಗಳು ಬ್ರಿಟೀಷ್ ಭಾರತೀಯ ಕಾನೂನು ಪದ್ಧತಿಗೆ ಒಳಪಟ್ಟರೆ, ಮೈಸೂರು ಸಂಸ್ಥಾನದಲ್ಲಿ ಮಾತ್ರ ದ್ವಂದ್ವ ಪರಿಶೀಲನೆಯಲ್ಲಿ ಕೆಲಸ ಮಾಡಬೇಕಾದ ಪರಿಸ್ಥಿತಿ ಒದಗಿತ್ತು. ರಾಜ್ಯದಲ್ಲಿ ರೂಪುಗೊಂಡಿದ್ದ ನಿಯಮಗಳು ಹಾಗೂ ಈ ರಾಜ್ಯಕ್ಕೆಂದೇ ವಿಶೇಷವಾಗಿ ಸಿದ್ದವಾದ ಹಾಗೂ ಬ್ರಿಟೀಷ್ ಭಾರತೀಯ ನಿಯಮಗಳು ಎರಡೂ ಸೇರಿ ಪತ್ರಿಕಾ ಸ್ವಾತಂತ್ರಯವನ್ನು ಕಡಿತಗೊಳಿಸಿತ್ತು.

ಮೈಸೂರಿನ ಶಾಸನಾತ್ಮಕ ಮಂಡಳಿಯ ಮೊದಲ ಸದಸ್ಯರಾದ ಟಿ. ಆನಂದರಾವ್. ಆಗಸ್ಟ್ ೫, ೧೯೦೮ರಲ್ಲಿ ಸರ್ಕಾರ ಜಾರಿಗೆ ತರುವ ಕಾಯ್ದೆಯ ಉದ್ದೇಶವನ್ನು ಬಹಿರಂಗಗೊಳಿಸಿದರು. ಈ ಹಿಂದೆ ಪತ್ರಿಕೆಗಳು ಸರ್ಕಾರದ ಕಾರ್ಯವನ್ನು ತಪ್ಪು ವರದಿ ಮಾಡುವುದರ ಮೂಲಕ ಗಣನೀಯ ಹಾನಿವುಂಟು ಮಾಡಿದ್ದು, ಅಂತಹ ಪತ್ರಿಕೆಗಳ ಪ್ರಕಟನೆಯನ್ನು ನಿಯಂತ್ರಣಕ್ಕೆ ತರುವುದೇ ಸರ್ಕಾರದ ಉದ್ದೇಶವೆಂದರು.

ಈ ೧೯೦೮ ಕಾಯ್ದೆ ಅಪರಾಧವನ್ನು ಶಿಕ್ಷಾತ್ಮಕ ನಿಟ್ಟಿನಲ್ಲಿ ಬಿಟ್ಟು, ನಿವಾರಣೆ ನಿಟ್ಟಿಗೆ ವ್ಯಾಖ್ಯಾನ ನೀಡಿದಂತಿದೆ. ಮೈಸೂರಿನ ಪತ್ರಿನಿಧಿ ಸಭೆಯಲ್ಲಿ ಜಮೀನ್ದಾರಿ ಕುಲೀನರನ್ನು ಪ್ರತಿನಿಧಿಸುವ ಗ್ರಾಮೀಣ ಮೈಸೂರಿನ ಅನೇಕ ಸದಸ್ಯರು ಮಹಾರಾಜ ಮತ್ತು ದಿವಾನರನ್ನು ಅನುಮೋದಿಸುತ್ತಿದ್ದರು. ಸಾಮಾನ್ಯ ರೈತರಿಗೂ ಈ ವಿಷಯದಲ್ಲಿ ದೂರು ಇರಲಿಲ್ಲ. ಇದಕ್ಕೆ ವಿರುದ್ಧವಾಗಿ ನಗರ ಪ್ರದೇಶಗಳಾದ ಬೆಂಗಳೂರು, ಶಿವಮೊಗ್ಗ, ಮೈಸೂರಿನ ಸದಸ್ಯರುಗಳು, ಕಾನೂನು ವೃತ್ತಿಯಲ್ಲಿದ್ದವರು, ವಿಚಾರಣೆಯಲ್ಲಿ, ನ್ಯಾಯ ನೀಡುವಲ್ಲಿ ಸ್ವಾಭಾವಿಕ ಅಪಾಯಗಳು ಎದುರಾಗಬಹುದೆಂದರು. ಬೆಂಗಳೂರಿನ ಸುಬ್ಬಣ್ಣ, ಶಿವಮೊಗ್ಗದ ಸೀತಾರಾಮಯ್ಯ, ಕೋಲಾರದ ಭೀಮ್‌ರಾವ್ ಮುಂತಾದ ವಕೀಲರು ಈ ಕಾಯ್ದೆಯನ್ನು ಹಿಂತೆಗೆದುಕೊಳ್ಳುವಂತೆ ಕೇಳಿದರು. ಆದರೆ ಇವರ ಸಂಖ್ಯೆ ಕಡಿಮೆ ಇದ್ದಿತ್ತು. ಹಾಗಾಗಿ ಈ ಕಠೋರವಾದ ಡ್ರಾಕೋನಿಯನ್ ಕಾಯ್ದೆ ೧೧ನೇ ಅಕ್ಟೋಬರ್ ೧೯೦೮ರಲ್ಲಿ ಜಾರಿಗೆ ಬಂದಿತು. ಹಾಗಾಗಿ ಮೈಸೂರು ಪ್ರತಿನಿಧಿ ಸಭೆಯ ಚರಿತ್ರೆಯಲ್ಲಿ ಈ ದಿನ ಕರಾಳ ದಿನವಾಗಿ ಮಾರ್ಪಟ್ಟಿತ್ತು. ಈ ಕಾಯ್ದೆಯ ಸ್ವರೂಪ ನೋಡಿದಲ್ಲಿ ಕೇವಲ ಮುನ್ನೆಚ್ಚರಿಕೆಯ ಸ್ವರೂಪ ಹೊಂದಿದ್ದು, ಸ್ವತಂತ್ರ ಪತ್ರಿಕೋದ್ಯಮ ಬೆಳವಣಿಗೆಯನ್ನು ಅವಸರದಲ್ಲಿ ಮೊಟಕುಗೊಳಿಸುವಲ್ಲಿ ಹೆಚ್ಚು ಪರಿಣಾಮಕಾರಿಯಾಗಿದೆ ಎನ್ನಬಹುದು.

ಅಧಿಕೃತವಾದ ಚರ್ಚೆ ಮತ್ತು ಚಿಂತನೆಯ ಮೂಲಕ ಈ ಬಗೆಯ ದೋಷಪೂರಿತ ಪತ್ರಿಕಾ ಕಾನೂನುಗಳು ಅನುಷ್ಠಾನಕ್ಕೆ ತಂದ ಉದ್ದೇಶವೆಂದರೆ ಮೈಸೂರು ಪತ್ರಿಕೆಗಳು ಪರಮಾಧಿಕಾರಕ್ಕೆ ಅವಿಧೇಯ ರೀತಿಯಲ್ಲಿ ಬರೆಯ ತೊಡಗಿದ್ದು, ಪರಮಾಧಿಕಾರದ ಒತ್ತಡದಿಂದಾಗಿಯೇ ಈ ಕಾನೂನನ್ನು ಜಾರಿಗೊಳಿಸಲಾಗಿತ್ತು.

'ಭಾರತಿ', 'ದಿ ಮೈಸೂರು ಹೆರಾಲ್ಡ್', 'ವೃತ್ತಾಂತ ಚಿಂತಾಮಣಿ', 'ಮೈಸೂರು ಸ್ಟಾಂಡರ್ಡ್', 'ನಡೆಗನ್ನಡಿ' ಮುಂತಾದ ಅನೇಕ ಪತ್ರಿಕೆಗಳು ಈ ಕಾನೂನನ್ನು ಪ್ರತಿಭಟಿಸಿದವು. ಅದರಲ್ಲೂ ಶ್ರೀನಿವಾಸ ಅಯ್ಯಂಗಾರರ 'ನಡೆಗನ್ನಡಿ' ಇದರ ಮೂಲಕ ಪತ್ರಿಕೋದ್ಯಮವನ್ನು ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ಇವರು ನಡೆಸತೊಡಗಿದ ಪತ್ರಿಕೆ ಜನಹಿತ ಪ್ರತಿಪಾದನೆ ಮಾಡಿದ ತಪ್ಪಿಗಾಗಿ ಸರ್ಕಾರದ ಆಗ್ರಹಕ್ಕೆ ತುತ್ತಾಯಿತು. ೧೯೦೮ರ ಈ ಕಾಯ್ದೆಯಿಂದಾಗಿ ಪತ್ರಿಕೆಗಳಿಗೆ ಈ ಹಿಂದೆ ಇದ್ದ ಅಷ್ಟಿಷ್ಟು ಸ್ವಾತಂತ್ರ್ಯವೂ ಇಲ್ಲವಾಯಿತು. ಈ ಕಾಲದಲ್ಲಿ ಆರಂಭವಾದ ಅನೇಕ ಪತ್ರಿಕೆಗಳು ಪ್ರೋತ್ಸಾಹದ ಅಭಾವದಿಂದಲೂ, ಕಾಯ್ದೆಯ ಫಲವಾಗಿಯೂ ಬಾಲಾರಿಷ್ಟಕ್ಕೆ ತುತ್ತಾದವು.

ಈ ಕಾಯ್ದೆಯ ಮೊದಲ ಬಲಿಪಶುವಾದವರು ಚನ್ನಪಟ್ಟಣದ ಸುಭಾಶಿನಿ ಪತ್ರಿಕೆಯ ಎಸ್.ಎಸ್. ಶರ್ಮನ್ ಎಂಬುವರು. ನಡೆಗನ್ನಡಿಯ ಎಮ್. ಶ್ರೀನಿವಾಸ್ ಅಯ್ಯಂಗಾರ್ ಗಡಿಪಾರಾದ ಮತ್ತೋರ್ವ ಬಲಿಪಶು. ಮಹರಾಜರ ಹಾಜರಿಯಲ್ಲಿ ಜನರು ರಾಷ್ಟ್ರೀಯ ರಾಜಕೀಯದತ್ತ ಚಿಂತನೆ ನಡೆಸುವುದಕ್ಕೆ ಪ್ರೋತ್ಸಾಹ

ದೊರಕಲಿಲ್ಲ. ಈ ಕಾಯ್ದೆ ಜಾರಿ ಬಂದ ನಂತರ ೨೯/೮/೧೯೦೮ ರಂದು ತಮ್ಮ ಪತ್ರಿಕೆಯಲ್ಲಿ ಈ ರೀತಿ ಹೇಳಿಕೆಕೊಟ್ಟರು "ಹೊಸ ವೃತ್ತ ಪತ್ರಿಕಾ ಶಾಸನ ಆಚರಣೆಗೆ ಬಂತು. ಮೈಸೂರು ದೇಶದಲ್ಲಿ ಪ್ರಾಮಾಣಿಕತೆಯಿಂದ, ಆತ್ಮಗೌರವದಿಂದ ಪತ್ರಿಕೆಗಳನ್ನು ಇನ್ನು ಮುಂದುವರೆಸುವುದು ಸಾಧ್ಯವಿಲ್ಲ. ಪತ್ರಿಕೆಗಳು ಸುಖಜೀವನ ನಡೆಸಬೇಕಾದರೆ ರಾಜಕೀಯ ವಿಚಾರಗಳ ಚರ್ಚೆಯ ಗೋಜಿಗೆ ಹೋಗಬಾರದು, ಇಲ್ಲವೇ ಸರ್ಕಾರದ ಅಧಿಕಾರಿಗಳ ಮುಖಸ್ತೋತ್ರ ಮಾಡುತ್ತಿರಬೇಕು. ಈಗಿನ ಪರಿಸ್ಥಿತಿಯಲ್ಲಿ ಪತ್ರಿಕೆಗಳ ಮೂಲಕ ಜನರಿಗೆ ರಾಜಕೀಯ ವಿಚಾರಗಳಲ್ಲಿ ಶಿಕ್ಷಣವಾಗಬೇಕು ಇದೇ ಮುಖ್ಯವಾದ ಸಾಧನ. ರಾಜಕೀಯ ವಿಚಾರಗಳ ಚರ್ಚೆ ಮಾಡದ ಪತ್ರಿಕೆಯಿಂದೇನೂ ಪ್ರಯೋಜನವಿಲ್ಲ. ದೀರ್ಘ ಕಾಲದಿಂದ ನಡೆದು ಬರುತ್ತಿರುವ ಹೆರಾಲ್ಡ್ ಮತ್ತು ಚಿಂತಾಮಣಿ ಪತ್ರಿಕೆಗಳನ್ನು ನಿಲ್ಲಿಸಬೇಕಾದ ಅವಶ್ಯಕತೆ ಕಂಡು ಬಂದಾಗ 'ನಡೆಗನ್ನಡಿ' ಮುಂದುವರೆಸಿದ ಸಾಹಸ ಮಾಡುವುದಿಲ್ಲ."

ಇದು ಏನೆ ಇದ್ದಾಗ್ಯು ಶ್ರೀನಿವಾಸ ಅಯ್ಯಂಗಾರ್‌ರು ಸದಾ ಸಾರ್ವಜನಿಕ ಹಿತಾಸಕ್ತಿಯ ಜಾಗರೂಕತನದ ಮತ್ತು ದಿಟ್ಟತನದ ಸರ್ವ ಶ್ರೇಷ್ಠ ವ್ಯಕ್ತಿ, ಅಧಿಕಾರಗಳ ಪ್ರೇರಣೆಗೆ ಒಳಗಾದವರಲ್ಲ. ಸ್ವಾತಂತ್ರ್ಯದ ಪ್ರೀತಿಯನ್ನು ಪತ್ರಿಕೆಯನ್ನು ರದ್ದುಗೊಳಿಸುವುದರ ಮೂಲಕ ತೋರಿಸಿದರು. ತಮಗೆ ತಾವೇ ಆತ್ಮಬಲಿ ಮಾಡಿಕೊಂಡಿದ್ದು ಇವರ ಪತ್ರಿಕೆಗಳು. ಆನಂತರ ಲಾಹೋರಿಗೆ ಪಯಣಿಸಿ ಅಲ್ಲಿನ ಟ್ರಿಬ್ಯುನಲ್ ಪತ್ರಿಕೆಯ ಕಛೇರಿಯಲ್ಲಿ ಆಶ್ರಯ ಪಡೆದರು. ಇವರಿಗೆ ಪಂಜಾಬ್ ಮತ್ತು ಅಲ್ಲಿನ ಜನ, ಸಂಪ್ರದಾಯ ಬಹಳ ಮೆಚ್ಚುಗೆ. ಇವರ ಧೃಡ ನಿಲವು ಮೆಚ್ಚುವಂತಹುದು. ಟ್ರಿಬ್ಯುನಲ್ ಪತ್ರಿಕೆಗೂ, ಅದರ ಮುಖ್ಯಸ್ಥ ಕಾಳಿನಾಥರಾಯ್‌ರಿಗೂ ಇವರು ವಿಧೇಯತೆ, ಉತ್ಸಾಹ, ಸ್ಥಿಮಿತತೆಯ (ಸೊಬಿರಿಟಿ) ಮೌಲ್ಯ ನೀಡಿದರು.

ಇವರು ಒಬ್ಬ ಉತ್ತಮ, ಉನ್ನತ ರಾಜಕೀಯ ಪತ್ರಿಕೋದ್ಯಮಿ, ಅಲ್ಲದೆ ಸಾಮಾಜಿಕ ಸುಧಾರಕರು ಆಗಿದ್ದರು. ಜಾನ್ ಸ್ಟಾರ್ಟ್ ಮಿಲ್ ರ ವಿದ್ಯಾರ್ಥಿ. ಮಿಲ್‌ರ "ಎಸ್‌ಎ. ಆನ್ ಲಿಬರ್ಟಿ" ಮೇಲೆ ಸಂಪಾದಕೀಯ ಮಾಡಿದ್ದರು. ನಮ್ಮ ದೇಶದ ಸಾಮಾಜಿಕ ಮತ್ತು ರಾಷ್ಟ್ರೀಯ ಸಮಸ್ಯೆಗಳಿಗೆ ವೈಚಾರಿಕತೆಯ ಉಪಯೋಗ ತಿಳಿಸಿದರು. ಪ್ರತಿಕೋದ್ಯಮ ಕೇವಲ ಜೀವನ ನಿರ್ವಹಣೆ ಮಾತ್ರವಲ್ಲ ಅದು ಅವರ ಪ್ರತಿಜ್ಞೆ ಮತ್ತು ಜೀವಿತದ ಧ್ಯೇಯವಾಗಿತ್ತು. ಇವರು ಸಾರ್ವಜನಿಕ ವಾಗ್ಮಿಯಲ್ಲ. ಎಲೆಮರೆ ಕಾಯಿಯಂತೆ ಪ್ರಭಾವ ಬೀರಿ, ಸ್ನೇಹಿತರೊಂದಿಗೆ ಬಹಳ ವಿಶ್ವಾಸ ಹೊಂದಿದ್ದರು. ಯುವ ಉತ್ಕಾಂಕ್ಷಿಗಳಿಗೆ ಪ್ರೋತ್ಸಾಹ ಮತ್ತು ಮಾರ್ಗದರ್ಶನ ನೀಡುತ್ತಿದ್ದರು. ಔದಾರ್ಯ, ವಿನಯಶೀಲತೆಗೂ ಹೆಸರುವಾಸಿ.

ಪ್ರಾಮಾಣಿಕ ನಿಷ್ಠೆಯಿಂದ ನಿರ್ಭಿತ ಸಂಪಾದಕರಾಗಿ ನಿರ್ಭೀತ ಪತ್ರಿಕೆಗೆ ಸೇವೆ ಸಲ್ಲಿಸಿದ್ದರು. ಪತ್ರಿಕೆಗಳನ್ನು ದಕ್ಷ ಮತ್ತು ಸಮರ್ಥ ರೀತಿಯಲ್ಲಿ ಕೊಂಡೋಯ್ದರು. ಒಬ್ಬ ಸುಸಂಸ್ಕೃತ ವ್ಯಕ್ತಿಯಾದ ಇವರು ಸದಾ ಮೈಸೂರಿನ ಅಭಿವೃದ್ಧಿ ಮತ್ತು ಪ್ರಗತಿಗಾಗಿ ಹಾತೊರೆಯುತ್ತಿದ್ದರು. ಅನೇಕ ಪ್ರಲೋಭನೆಗಳಿದ್ದಾಗ್ಯೂ, ಇವರು ಪತ್ರಿಕೋದ್ಯಮವನ್ನು ದುರುಪಯೋಗ ಮಾಡಲಿಲ್ಲ. ಲಾಹೋರ್‌ಗೆ ಗಡಿಪಾರಾಗಿ, ಪತ್ರಿಕಾ ವೃತ್ತಿ ಸ್ವಾತಂತ್ರ್ಯ ನಿರ್ಭಿತ ಜೀವನ ನಡೆಸಲು ಹಿತಕರವಾದ ವಾತಾವರಣ ಕಂಡುಕೊಂಡ ಅತ್ಯಂತ ಹೆಸರುವಾಸಿಯಾದ ಪತ್ರಿಕೋದ್ಯಮಿ ಆದರು ಶ್ರೀನಿವಾಸ ಅಯ್ಯಂಗಾರರು.



## ಆಧಾರಸೂಚಿ


೧. Dr. S. U. Kamat, **'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು'** Mysore Geetha House, 1980.

೨. *Mysore Residency - 1891*, file No. 269, Karnataka State Archives, Bangalore.

೩. K.R. Iqbal Ahmad, *'Glimses of Journalism'* ಪ್ರಿಯದರ್ಶಿನಿ ಸಾಹಿತ್ಯ ಪ್ರಕಾಶನ, 1992

೪. 18-6-1904, **ನಡೆಗನ್ನಡಿ.**

೫. 22-9-1890, **ಕರ್ನಾಟಕ ಪ್ರಕಾಶಿಕ,** ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ದಾಖಲೆಗಳು.

೬. **ಕರ್ನಾಟಕ,** ಕನ್ನಡ ವಿಷಯ ವಿಶ್ವಕೋಶ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, 1979.



# ಕರ್ನಾಟಕದಲ್ಲಿ ರೆವರೆಂಡ್ ಅರ್ಲ ಆರ್ನೆಟ್ಟ ಸೀಮೆಂಡ್ಸರವರ ಮಿಷನರಿ ಕೆಲಸ

ಡಾ. ಕವಿತಾ ಸಿ. ಮಕ್ವಾನ*

ಭಾರತ ದೇಶದಲ್ಲಿ ಅನೇಕ ಧರ್ಮಗಳ ಉಗಮ ಹಾಗೂ ಆಗಮನಗಳು ಆಗಿವೆ. ಇತಿಹಾಸದ ಪುಟಗಳನ್ನು ತಿರುವಿ ನೋಡಿದಾಗ ನಮಗೆ ತಿಳಿಯುವದೇನೆಂದರೆ ಅನೇಕ ಪಾಶ್ಚಿಮಾತ್ಯರು ಭಾರತದ ಕಡೆಗೆ ತಮ್ಮ ಧರ್ಮಪ್ರಚಾರಕ್ಕಾಗಿ ತಮ್ಮ ನಿಲುವನ್ನು ಇತ್ತ ಹರಸಿದರು. ಅಂತಹ ಒಂದು ಧರ್ಮದಲ್ಲಿ ಕ್ರೈಸ್ತ ಧರ್ಮವು ಕೂಡಾ ಒಂದಾಗಿದೆ.

ದಕ್ಷಿಣ ಭಾರತದ ಇತಿಹಾಸದಲ್ಲಿ ಕ್ರೈಸ್ತ ಧರ್ಮದ ಆಗಮನ ಅದರ ಪ್ರಭಾವದ ಬಗ್ಗೆ ಅನೇಕ ಸಂಶೋಧನೆಗಳು ನಡೆದಿವೆ ಹಾಗೂ ನಡೆಯುತ್ತಲಿವೆ. ಕರ್ನಾಟಕದಲ್ಲಿ, ಮೆಥೋಡಿಸ್ಟ ಕ್ರೈಸ್ತರಿಗೆ ಕ್ರಿ.ಶ. ೧೯೧೯-೧೯೮೮ ರ ವರೆಗೆ ಅಪಾರವಾದ ಸೇವೆಯನ್ನು ಸಲ್ಲಿಸಿದ ವ್ಯಕ್ತಿಯೆಂದರೆ ರೆವರೆಂಡ ಅರ್ಲ ಆರ್ನೆಟ್ಟ ಸೀಮೆಂಡ್ಸರವರು. ಮೆಥೋಡಿಸ್ಟ ಕ್ರೈಸ್ತರು ದಕ್ಷಿಣ ಭಾರತದ ವಾರ್ಷಿಕ ಸಮ್ಮೇಳನದಲ್ಲಿ, ಅಕ್ಟೋಬರ್ ೧೭, ೧೯೭೬ ರಲ್ಲಿ ಇವರನ್ನು -"ಶತಮಾನದ ಮಿಷನರಿ" (೧೮೭೬-೧೯೭೬)ಯೆಂದು ಘೋಷಿಸಲಾಯಿತು. ಕರ್ನಾಟಕದಲ್ಲಿ ಸೀಮೆಂಡ್ಸರವರ ಮಿಷನರಿ ಕಾರ್ಯ ಸುಮಾರು ೩೮ ವರ್ಷಗಳಾಗಿತ್ತು.ಅವರನ್ನು ಎಲ್ಲರೂ ಪ್ರೀತಿಯಿಂದ "ತಾತಾ ಸೀಮೆಂಡ್ಸ" ಅಂದರೆ "ಅಜ್ಜ" ಯೆಂದೇ ಕರೆಯುತಿದ್ದರು. ಚಿಕ್ಕ ಮಕ್ಕಳಿಂದ ಹಿಡಿದು ಹಿರಿಯರವರೆಗೂ ಈ ಹೆಸರಿನಿಂದ ಚಿರಪರಚಿತರಾಗಿದ್ದರು.

ರೆ. ಇ.ಎ. ಸೀಮೆಂಡ್ಸರವರು ಮೂಲತಃ ಅಮೆರಿಕಾ ದೇಶದವರು. ಇವರು ಜನಿಸಿದ್ದು ಅಕ್ಟೋಬರ್ ೫, ೧೮೯೧, ಲೆಕ್ಸಿಂಗ್ಟನ್ ಎಂಬ ಊರಲ್ಲಿ, ಕೆಂಟಕ್ಕಿ ಎಂಬ ರಾಜ್ಯದಲ್ಲಿ( ಅಮೇರಿಕಾ). ತಂದೆಯ ಹೆಸರು ಜಾನ್. ಎಲ್. ಸೀಮೆಂಡ್ಸ ಹಾಗೂ ತಾಯಿಯ ಹೆಸರು ಜೆನ್ನಿ ಕೇಪಹಾರ್ಟ. ಈ ದಂಪತಿಗಳಿಗೆ ಎರಡನೇ ಮಗನಾಗಿ ಜನ್ಮ ತಾಳಿದರು. ಮೂಲತಃ ಇವರು ಸಿವಿಲ್ ಎಂಜಿನಿಯರಿಂಗ್ ಪದವೀಧರರಾಗಿದ್ದರು. ಸಿನ್ನಸಿನ್ನಾಟಿ ವಿಶ್ವವಿದ್ಯಾಲಯದಿಂದ ೧೯೧೬ ರಲ್ಲಿ ಪದವಿಯನ್ನು ಅತ್ಯುನ್ನತ ಅಂಕಗಳನ್ನು ಪಡೆದು ಪಾಸಾಗಿದ್ದರು. ಅಮೇರಿಕಾದಲ್ಲಿ ಹಲವಾರು ಪ್ರದೇಶಗಳಲ್ಲಿ ಇವರು ಕೆಲಸ ನಿರ್ವಹಿಸಿದ್ದರು. ಉದಾ: ಇಲ್ಲಿನೋವಾ, ಕ್ಲೀವಲ್ಯಾಂಡ(ಒಹಿಓ) ಇತ್ಯಾದಿ ಸ್ಥಳಗಳಲ್ಲಿ. ಆರ್ನೆಟರ್ರ ವಿವಾಹವು ಒಬ್ಬ ಸುಂದರ ಯುವತಿಯ ಯಿವೊನ್ನೆ ಶೀಲ್ಡ ಯೆಂಬವಳ ಜೊತೆಗೆ ಫೆಬ್ರವರಿ ೨೨, ೧೯೧೫ ರಲ್ಲಿ ಜರುಗಿತು. ಇದೊಂದು ಪ್ರೇಮ ವಿವಾಹವಾಗಿತ್ತು. ಈಕೆ ಒಬ್ಬ ಒಳ್ಳೇ ಗಾಯಕಿ, ಹಾಗೂ ಒಂದು ಒಳ್ಳೆ ಶ್ರೀಮಂತ ಸುಸಂಕೃತ ಕುಟುಂಬದಿಂದ ಬಂದಿದ್ದವಳಾಗಿದ್ದಳು. ಈ ದಂಪತಿಗೆ ಎರಡು ಗಂಡು ಮಕ್ಕಳು ಜಾನ್ ಮತ್ತು ಡೇವಿಡ್. ರೆವರೆಂಡ ಅರ್ಲ ಆರ್ನೆಟ್ಟ ಸೀಮೆಂಡ್ಸರವರಿಗೆ, ಮನದಾಳದಲ್ಲಿ- ಭಾರತದ ಕಡೆಗೆ ತನ್ನ ಸೇವೆ ಅಗತ್ಯವಾಗಿದೆ ಎನ್ನಿಸುತಿತ್ತು. ಭಾರತದಲ್ಲಿರುವ ಮೆಥೋಡಿಸ್ಟ ಕ್ರೈಸ್ತರಿಗೆ ತಮ್ಮ ಅಲ್ಪ ಸೇವೆಯನ್ನು ನೀಡಲು ನಿರ್ಧರಿಸಿದರು. ಅವರಿಗೆ ಮುಖ್ಯವಾಗಿ ದೀನ ದಲಿತರ ಸೇವೆ ಹಾಗೂ ಜನರನ್ನು ದೇವರ ಮಾರ್ಗದರ್ಶನದಲ್ಲಿ ನಡೆಸಬೇಕೆಂದು ನಿಲುವು ಹೊಂದಿದ್ದರು. ಅದರಂತೆ ಅವರ ಜೀವನದಲ್ಲಿ ಒಂದು ದೊಡ್ಡ ಮಾರ್ಪಾಟಾಯಿತು. ಇವರ ಸೋದರ ಮಾವನಾದ ಜಾನ್ ಎಂಬುವವರು ಸೀಮಂಡ್ಸರವರಿಗೆ ಒಂದು ದಿವಸ ಕ್ರಿಸ್ತನ ವಾಕ್ಯೋಪದೇಶ, ಮತ್ತು ಅತನು ಕ್ರೂಜೆಯ ಮೇಲೆ ಪ್ರಾಣತ್ಯಾಗ ಮಾಡಿದ್ದುದರ ವಿಷಯದ ಬಗ್ಗೆ ಗಾಢವಾಗಿ ಯೋಚಿಸಲು ಹಾಗೂ ಅವರಿಗೆ ದೇವರ ಮಾರ್ಗವನ್ನು ಅನುಸರಿಸುವಂತೆ ಪ್ರೇರಣೆ ನೀಡಿದರು.

ಅದೇ ಸಮಯದಲ್ಲಿ ಸೀಮೆಂಡ್ಸರವರು ಅಲ್ಲಿ ನಡೆಯುತ್ತಿರುವ "ಸೈಕಾರ" ಎಂಬ ಸಭೆಯಲ್ಲಿ ಪಾಲ್ಗೊಂಡಿದ್ದರು. ಅಲ್ಲಿ ಮೂವರು ಪ್ರಮುಖ ಪ್ರಸಂಗಿಗಳು ಅಥವಾ ಸುವಾರ್ತಾ ಸೇವಕರು ಉಪಸ್ಥಿತರಿದ್ದರು, ಅವರೆಂದರೆ ಜೋಸೆಫ ಹೆಚ್ ಸ್ಮಿತ್, ಜೆ.ಎಲ್. ಬ್ರಾಷರ್, ಹಾಗೂ ಹೆಚ್.ಸಿ. ಮಾರಿಸನ್

* ೨೮೭, ೩ನೇ ಕ್ರಾಸ್, ಗಾರ್ಡನ್ ವಿಲ್ಲಾಸ್, ಸುಗಂಧರಾಜ ರಸ್ತೆ, ಮಾರುತಿನಗರ ಬಸ್ ನಿಲ್ದಾಣದ ಬಳಿ, ನಾಗರಬಾವಿ ಮುಖ್ಯರಸ್ತೆ ಬೆಂಗಳೂರು-೫೬೦೦೭೨.



ಇವರುಗಳು ದೇವರ ವಾಕ್ಯದ ಉಪದೇಶ ಕೇಳಿದ ನಂತರ, ಸೀಮೆಂಡ್ಸರವರು "ಭಾರತದಲ್ಲಿಯೇ ನನ್ನ ಸೇವೆ" ಎಂದು ನಿರ್ಧಾರ ಮಾಡಿದರು.

ನ್ಯೂಯಾರ್ಕನ ರೈಲ್ವೇ ಕೇಂದ್ರ ಇಲಾಖೆಯಲ್ಲಿ ಒಂದು ಒಳ್ಳೆ ಉದ್ಯೋಗ ಮಾಡುತಿದ್ದರೂ, ಅದೇನೋ ಅವರ ಮನಸ್ಸಿನಲ್ಲಿ ಯಾವಾಗಲು ಕೊರೆಯುವಂತಹ ಕಾತುರ, ಸಳೆತ ಭಾರತದಲ್ಲಿರುವ ದೀನ ದಲಿತರ ಸೇವೆ, ಮತ್ತು ಅನೇಕ ಜನರನ್ನು ದೇವರ ಮಾರ್ಗದಲ್ಲಿ ನಡೆಸಬೇಕೆಂಬ ಹಂಬಲ ಇವರದಾಗಿತ್ತು. ಹೀಗಾಗಿ ತಮ್ಮ ಪತ್ನಿ ಹಾಗೂ ಮಗನೊಂದಿಗೆ ಆಗಸ್ಟ್ ೨೩, ೧೯೧೯ ರಂದು ಅಮೇರಿಕಾ ದಿಂದ ಹೊರಟು, ಭಾರತದ ಕಡೆಗೆ ಪ್ರಯಾಣ ಬೆಳೆಸಿದರು. ಭಾರತದಲ್ಲಿ ಅವರು ಮೊದಲು ಬಂದು ತಲುಪಿದ್ದು ಮದ್ರಾಸ (ಚೆನ್ನೈ) ನಲ್ಲಿ, ಅಲ್ಲಿಂದ ಇವರು ನೇರವಾಗಿ ಕೋಲಾರ ಪಟ್ಟಣಕ್ಕೆ ಬಂದು ತಲುಪಿದರು. ಅವರಿಗೆ ತಂಗಲು ಕೋಲಾರಿನ ಮಿಶನ ಕಾಂಪೌಂಡಿನ ಒಂದು ಬಂಗಲೆಯಲ್ಲಿ ವ್ಯವಸ್ಥೆ ಮಾಡಲಾಗಿತ್ತು.

ಬೆಂಗಳೂರಿನ ಮೆಥೋಡಿಸ್ಟ್ ಚರ್ಚಿನ ರಿಚ್ಮಂಡ್ ಟೌನ್, ಬಿಷಪ್‌ರಾಗಿದ್ದ ರೆ.ಜೆ.ಇ. ರಾಬಿನ್‌ಸನ್ ಎಂಬವರು, ಸೀಮಂಡ್ಸ್ ಮತ್ತು ಕುಟುಂಬದವರನ್ನು ಭೇಟಿಯಾಗಲು ತಾವೇ ಸ್ವತಃ ಬೆಂಗಳೂರಿನಿಂದ ಕೋಲಾರಕ್ಕೆ ಹೋದರು. ಇಲ್ಲಿಂದ ಆರ್ನೆಟ್ಟರ ಆಧ್ಯಾತ್ಮಿಕ ಪಯಣ ಪ್ರಾರಂಭವಾಯಿತು.

ತಾತಾ ಸೀಮಂಡ್ಸ್ ರವರ ಕಾರ್ಯನಿಷ್ಠತೆ, ವೈಖರತೆ, ಸೇವೆ, ಉದಾರತನ ಹಾಗೂ ಅವರ ಸ್ಮಾರಕಗಳ ಕಟ್ಟುವಿಕೆಯ. ಶೈಲಿ ಎಲ್ಲವೂ, ಜನರ ಮನಸೋಲುವಂತೆ, ಮಾಡಿದವು, ಹೀಗಾಗಿ ಇವರು "ಒಬ್ಬ ದೇವರ ತಂತ್ರಜ್ಞಾನಾಗಿ" ಕರ್ನಾಟಕ ದಲ್ಲಿ ಸುಮಾರು ೧೮೪ ಶಾಲಾ ಕಟ್ಟಡಗಳನ್ನೊಳಗೊಂಡಂತೆ, ಚರ್ಚುಗಳನ್ನು, ಆಸ್ಪತ್ರೆಯನ್ನು, ಡಾರ್ಮಿಟರಿ ಹಾಗೂ ಪಾದ್ರಿಗಳ ಮನೆಗಳನ್ನು ಕಟ್ಟಿದರು. ಹಣದ ಕೊರತೆ ಇದ್ದರೂ ಅದನ್ನು ಕೆಲವು ಭಕ್ತರಿಂದ ಕಾಣಿಕೆಗಳ ಮೂಲಕ ಮತ್ತು ವಿದೇಶದಿಂದ ಕೂಡಾ ಹಣವನ್ನು ತರಿಸಿ, ಈ ಕಟ್ಟಡಗಳ ನಿರ್ಮಾಣ ಮಾಡಿದರು. ಆದುದ್ದರಿಂದ ಇವರನ್ನು "ತಂತ್ರಜ್ಞಾನದ ಮಿಷನರಿ" ಎಂದು ಮೆಥೋಡಿಸ್ಟ್ ಸಭೆ ಬಿರುದು ನೀಡಿತು.

ಜನವರಿ ೨೪, ೧೯೨೨, ಬೀದರನ ಮೆಥೋಢಿಸ್ಟ್ ಚರ್ಚಿಗೆ ಇವರು ಜಿಲ್ಲಾ ಮೇಲ್ವಿಚಾರಕರಾಗಿ ಮೆಥೋಡಿಸ್ಟ್ ಸಭೆಯಿಂಥ ನೇಮಕಗೊಂಡರು. ಈ ಜಿಲ್ಲೆಯ ಜನತೆಗೆ ಇವರು ನೀಡಿರುವ ಒಂದು ಸುಂದರ ಚರ್ಚ್ ಎಂದರೆ ಸೇಂಟ ಪೌಲ್ಸ್ ಮೆಥೋಡಿಸ್ಟ್ ಚರ್ಚ, ೧೯೨೨-೧೯೨೫, ರವರೆಗೂ ಈ ಕಟ್ಟಡದ ನಿರ್ಮಾಣ ಮಾಡಿದರು. ಗುಲ್ಬರ್ಗಾದಲ್ಲಿರುವ ಕ್ರೈಸ್ತ ಮೆಥೋಡಿಸ್ಟ್ ಚರ್ಚ್ (೧೯೫೫) ರಾಯಚೂರು ಹಾಗೂ ಯೆಲ್ಲೇರಿ ಮತ್ತು ಯಾದಗಿರಿ ವಿವಿಧ ಸ್ಥಳಗಳಲ್ಲಿ ಮತ್ತು ಜಿಲ್ಲೆಗಳಲ್ಲಿ ಇವರು ಚರ್ಚ್‌ಗಳ ನಿರ್ಮಾಣ ಮಾಡಿದರು.

ಬೆಂಗಳೂರು ಹಾಗೂ ಕೋಲಾರನಲ್ಲಿ ಅವರು ಶೈಕ್ಷಣಿಕ ಕೇಂದ್ರಕ್ಕೆ ಅಪಾರ ಕೊಡುಗೆ ನೀಡಿದರು. ಬೆಂಗಳೂರಿನಲ್ಲಿರುವ ಬಾಲ್ಡ್ವಿನ್ಸ್ ಬಾಲಕರ ಮತ್ತು ಬಾಲಕಿಯರ ಶಾಲೆಗಳ ಕಟ್ಟಡಗಳನ್ನು ನಿರ್ಮಾಣ ಕಾರ್ಯವನ್ನು ಸೀಮಂಡ್ಸ್‌ರವರೇ ನಿರ್ವಹಿಸಿದರು. ಕೋಲಾರದಲ್ಲಿ ಎಲ್ಲೆನ್ ಥೋಬರ್ನ್ ಕೋವೆನ್ ಹಾಸ್ಪಿಟಲ್, ಇಂಡಸ್ಟ್ರೀಯಲ್ ಟ್ರೈನಿಂಗ್ ಸ್ಕೂಲ್, ಬಾಲಕ ಮತ್ತು ಬಾಲಕಿಯರ ವಸತಿ ಶಾಲೆ ಹಾಗೂ ಅಖಿಲ ಭಾರತ ಟ್ಯಾಬ್ಲೆಟ್ ಇಂಡಸ್ಟ್ರೀ, ಯಾದಗಿರಿಯ ಹೋಲ್ಸಟ್ಟನ್ ಹಾಸ್ಪಿಟಲ್ ಇವೆಲ್ಲವದರ ನಿರ್ವಹಣೆ ಮತ್ತು ಕಟ್ಟಡಗಳ ನಿರ್ಮಾಣ ತಾತಾ ಸೀಮಂಡ್ಸ್‌ರವರದ್ದಾಗಿತು.

ಕೋಲಾರದಲ್ಲಿ ಆರ್ಥಿಕವಾಗಿ ಹಿಂದುಳಿದ ರೈತರಿಗೆ ಕೃಷಿ ಉಪಕರಣಗಳಲ್ಲಿ ಒಂದು ಹೊಸ ಮಾದರಿಯ "ಕಬ್ಬಿಣದ ನೇಗಿಲನ್ನು" ರೈತರಿಗೆ ಪರಿಚಯಿಸಿದರು, ಮರದ ತುಂಡು ಹಾಗೂ ಜೋಡು ಎತ್ತಿನ ಸಹಾಯದಿಂದ ಎಳೆಯುತ್ತಿದ್ದ ನೇಗಿಲನ್ನು ಹೊಸ ಮಾದರಿಯಲ್ಲಿ ರೈತರಿಗೆ ಪರಿಚಯಿಸಿದರು.

ಈ ಉಪಕರಣ ಬಹಳ ಕಡಿಮೆ ಬೆಲೆಯಲ್ಲಿ ದೊರೆಯುವಂತೆ ಕೃಷಿಕರಿಗೆ ಸಹಾಯ ಮಾಡಿದರು. ಈ ದಿಶೆಯಲ್ಲಿ ಬೆಳೆಗಳ ಉತ್ಪನ್ನ ಆಧಿಕವಾಯಿತು. ಮತ್ತು ಕೃಷಿಕರ ಆರ್ಥಿಕ ಜೀವನವು ಆ ಜಿಲ್ಲೆಯಲ್ಲಿ ಸುಧಾರಿಸಲ್ಪಟ್ಟಿತು.


ಗುಲ್ಬರ್ಗದಲ್ಲಿರುವ ಚರ್ಚ್

ಭಾರತೀಯ ಧಾರ್ಮಿಕ ವಿಚಾರಧಾರೆಗಳ ಬಗ್ಗೆ ಆಳವಾಗಿ ಅಭ್ಯಸಿಸಿದ ತಾತಾ ಅವರಿಗೆ, ಹಿಂದೂ ಧರ್ಮ ದವರು ಆನೇಕ ಹಬ್ಬಗಳಲ್ಲಿ, ಜಾತ್ರೆಗಳಲ್ಲಿ ಉದಾ: ಕುಂಭ ಮೇಳ, ಗಂಗಸಾಗರ ಮೇಳ, ಪುಷ್ಕರಕಾಮೇಳ ಇತ್ಯಾದಿ ಜಾತ್ರೆಗಳಲ್ಲಿ ಸಾವಿರಾರು ಜನರು ಸೇರುವಂತೆ, ಇಸ್ಲಾಂ ಧರ್ಮದವರು, ಅಜ್ಮೀರಿನಲ್ಲಿರುವ ಖ್ವಾಜಾ ಮೊಹಿನುದ್ದೀನ ಚಿಸ್ತಿ ಸಮಾಧಿಗೆ ಭೇಟಿ ಕೊಡುವುದರ, ಹಾಗೂ ಕರ್ನಾಟಕದಲ್ಲಿನ ಗುಲ್ಬರ್ಗಾದ ಖ್ವಾಜಾ ಬಂದೇ ನವಾಜರ ದರ್ಗಾಕ್ಕೆ ದೇಶ ವಿದೇಶಗಳಿಂದ ಸಾವಿರಾರು ಜನರು ಸೇರುತ್ತಿದ್ದರಿಂದ ಮಥೋಡಿಸ್ಟ್ ಕ್ರೈಸ್ತರು ಒಂದು ಕಡೆ ಸೇರಿ ದೇವರನ್ನು ಆರಾಧಿಸುವಂತೆ, "ಧಾರೂರ್ ಜಾತ್ರೆಯನ್ನು" ಆರಂಭಿಸಿದರು.

ಧಾರೂರು ಎಂಬ ಸ್ಥಳ ಬೀದರ್ ಮತ್ತು ವಿಕಾರಾಬಾದ ಮಧ್ಯದಲ್ಲಿರುವ (ಹೈದರಾಬಾದ-ಕರ್ನಾಟಕ ಪ್ರದೇಶಕ್ಕೆ) ಸೇರಿದ್ದ ಒಂದು ಚಿಕ್ಕ ಗ್ರಾಮವಾಗಿದೆ. ಇಲ್ಲಿ ಸೀಮಂಡ್ಸರವರು ಇನ್ನೊಬ್ಬ ಕ್ರೈಸ್ತ ಮಿಷನರಿಯಾಗಿದ್ದ ರೆ.ಎಂ.ಡಿ. ರಾಸ ಎಂಬುವವರ ಜೊತೆಗೂಡಿ ಮಥೋಡಿಸ್ಟ ಕ್ರೈಸ್ತರಿಗೂ ಈ ಸ್ಥಳದಲ್ಲಿ ಜಾತ್ರೆ ಯನ್ನು(ಮೇಳ) ಏರ್ಪಡಿಸಿದರು.ಇಲ್ಲಿ ಸಾವಿರಾರು ಕ್ರಿಸ್ಚಿಯನ್ನರು ಹಾಗೂ ಇತರ ಜಾತಿಗೆ ಸೇರಿದ ಜನರು ಬಂದು ಸೇರುತ್ತಾರೆ. ಈ ಜಾತ್ರೆಯ ಸಮಯದಲ್ಲಿ ಅನೇಕರು ಮರಗಳ ಅಡಿಗಳಲ್ಲಿ, ಅಥವಾ ಗುಡಾರಗಳನ್ನು ಹಾಕಿಕೊಂಡುದೇವರನ್ನು ಆರಾಧಿಸಲು ಹಾಗೂ ಸುವಾರ್ತೆಯನ್ನು ಕೇಳಲು ಬರುತ್ತಾರೆ. ಇಲ್ಲಿ ಸಂಗೀತ, ಭಜನೆ, ದೇವರ ವಾಕ್ಯೋಪದೇಶ ನಡೆಯುತ್ತದೆ. ಈ ಜಾತ್ರೆಯು ದಿನದಿಂದ ದಿನಕ್ಕೆ ಪ್ರಸಿದ್ಧಿ ಪಡೆಯಿತು. ೧೯೨೩ ರಲ್ಲಿ ಈ ಜಾತ್ರೆಯನ್ನು ಆರಂಭಿಸಲಾಯಿತು. ಈ ಜಾತ್ರೆಯು ಈಗಲೂ ಪ್ರತಿ ವರ್ಷ ನವೆಂಬರ ತಿಂಗಳಿನ ದಿನಾಂಕ ೧೪ ರಿಂದ ೨೩ ರವರಗೆ ಏರ್ಪಡಿಸಲಾಗುತ್ತದೆ. ಇದೊಂದು ಕಾಡು ಪ್ರದೇಶವಾಗಿದ್ದು, ವಿಕಾರಾಬಾದ ಹಾಗೂ ತಾಂಡೂರು ಸ್ಥಳಗಳ ಮಧ್ಯ ಇದೆ ಸಾವಿರಾರು ಜನರು ಇಲ್ಲಿ ಬಸ್ಸಿನ ಮುಖಾಂತರ, ರೈಲು, ಕಾರು ಹಾಗೂ ಬಂಡಿಗಳಲ್ಲಿ ಇಲ್ಲಿಗೆ ಪ್ರಯಾಣ ಮಾಡುತ್ತಾರೆ. ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ೧೯೨೪-೨೫ರಲ್ಲಿ ಹೈದ್ರಾಬಾದ್-ಕರ್ನಾಟಕ ಅಂದರೆ ಬೀದರ್, ಗುಲ್ಬರ್ಗಾ, ರಾಯಚೂರ್ ಪ್ರದೇಶಗಳು ಹೈದ್ರಾಬಾದಿನ ನಿಜಾಮ ಮೀರ್ ಓಸ್ಮಾನ್ ಆಲಿಖಾನ್ ಬಹ್ಹಾದ್ದೂರನ ಆಡಳಿತಕೊಳ್ಳಪಟ್ಟಿದ್ದವು. ೧೭೦೭ ರಲ್ಲಿ ಮೊಗಲ್ ದೊರೆ ಔರಂಗಜೇಬನ ಮರಣದ ನಂತರ ದಕ್ಷಿಣ ಭಾರತದಲ್ಲಿ ತಲೆ ಎತ್ತಿದ ಸ್ವಾತಂತ್ರ್ಯವನ್ನು ಘೋಷಿಸಿಕೊಂಡಿದ್ದ "ಆಸಫ್‌ಝಾಹಿ" ಮನೆತನಕ್ಕೆ ನಿಜಾಮನು ಸೇರಿದ್ದವ ನಾಗಿದ್ದನು. ಇದೇ ಸಮಯದಲ್ಲಿ ರೆ.ಇ.ಎ. ಸೀಮಂಡ್ಸ್ ರವರನ್ನು ಬೀದರ್ ಜಿಲ್ಲೆಗೆ ಚರ್ಚಿನ ಮೇಲ್ವಿಚಾರಕರಾಗಿ ನೇಮಕಗೊಳಿಸಲಾಗಿತ್ತು

ಮುಸ್ಲಿಂಮರ ದಬ್ಬಾಳಿಕೆ, ವಿರೋಧತ್ವ, ಧರ್ಮಾಂಧತ್ವ ಇವೆಲ್ಲದರ ನಡುವೆಯೂ ತಾತಾ ಸೀಮಂಡ್ಸ್‌ರವರು ತಮ್ಮ ಮಿಷನರಿ ಕಾರ್ಯವನ್ನು ಮುಂದುವರೆಸಿದರು. ಬೀದರ್ ಜಿಲ್ಲೆಯಲ್ಲಿರುವ "ಕಾಮಟಾನ್" ಸುಮಾರು ೮ ಮೈಲಿ ದೂರದಲ್ಲಿರುವ ಎಂಬ ಹಳ್ಳಿಯಲ್ಲಿ ಬಹಳ ಪರಿಶ್ರಮಪಟ್ಟು, ದೇವರ ವಾಕ್ಯವನ್ನು ದೀನ ದಲಿತರಿಗ ಸಾರಿ ಹೇಳಿದರು. ಅಲ್ಲಿ ಸುಮಾರು ೧೫೦ ದಲಿತರು ದೀಕ್ಷಾಸ್ನಾನ ಪಡೆದು, ಚರ್ಚಿನ ಸದಸ್ಯರಾಗಿದ್ದರು. ೧೯೪೭ರಲ್ಲಿ ಅಲ್ಲಿ ಒಂದು ಚರ್ಚನ್ನು ಕಟ್ಟಿಸಲಾಯಿತು.

ಕಾಮಟಾನ ಎಂಬ ಹಳ್ಳಿಯಲ್ಲಿ ಒಂದು ತರಬೇತಿ ಶಾಲೆಯನ್ನು ಕೆಲವು ಮಿಷನರಿಗಳಿಂದ ತೆರೆಯಲ್ಪಟ್ಟಿತು. ಈ

ಶಾಲೆಯು ಎಲ್ಲಾ ಗ್ರಾಮಸ್ಥರಿಗೂ ಹಾಗೂ ಹೊಸದಾಗಿ ಕ್ರೈಸ್ತ ಧರ್ಮಕ್ಕೆ ಪರಿವರ್ತನೆಗೊಂಡಂತಹ ಕ್ರೈಸ್ತರಿಗೂ ಅನುಕೂಲ ಮಾಡಿಕೊಟ್ಟಿತ್ತು. ಈ ಶಾಲೆಯಲ್ಲಿ ಇ.ಎ. ಸೀಮಂಡ್ಸ್‌ರವರು ಒಬ್ಬ ತರಬೇತುದಾರರಾಗಿ ಹಾಗೂ ಸುವಾರ್ತಿಕರಾಗಿ ಕೆಲಸ ನಿರ್ವಹಿಸುತ್ತಿದ್ದರು.

ಮೆಥೋಡಿಸ್ಟ್ ಚರ್ಚ, ಅದು ಕ್ರಿಸ್ತನ ಆಜ್ಞಾ ವಿಧಿ ವಿಧಾನಗಳನ್ನು ಕಟ್ಟುನಿಟ್ಟಾಗಿ ಮತ್ತು ಶಿಸ್ತಿನಿಂದ ನಿರ್ವಹಿಸುತ್ತದೆ. ಇದು ಪ್ರೊಟೆಸ್ಟೆಂಟ್ ಚರ್ಚಿನ ಒಂದು ಶ್ರೇಷ್ಠ ಅಂಗವಾಗಿದೆ. ಇದರ ಇತಿಹಾಸ, ನೋಡುವುದಾದರೆ ಇಂಗ್ಲೆಂಡಿನ ಚರ್ಚಿನೊಂದಿಗೆ ಇದರ ಮೂಲ ತಿಳಿಯಬಹುದು.ಇದರ ಸಂಸ್ಥಾಪಕರು " ಜಾನ್ ವೆಸ್ಲಿ" ಇವರು ಇಂಗ್ಲೆಂಡ ದೇಶದವರು. ಇವರ ಮಾರ್ಗದರ್ಶನ ಹಾಗೂ ನಾಯಕತ್ವದಲ್ಲಿ ಜಗತ್ತಿನಾದ್ಯಂತ ಮಥೋಢಿಸ್ಟ್ ಚರ್ಚುಗಳು ಬೆಳೆಯತೊಡಗಿದವು.

ರೆ. ಸೀಮಂಡ್ಸ್‌ರವರು ಭಾರತದಲ್ಲಿ ಸುಮಾರು ೩೮ ವರ್ಷಗಳ ಕಾಲ ತಮ್ಮ ಮಿಷನರಿ ಸೇವೆ ಸಲ್ಲಿಸಿದರು. (೧೯೧೯-೧೯೫೭) ಇವರಿಗೆ ಆಸ್ಬರಿ ಥಿಯೋಲಾಜಿಕಲ್ ಸೆಮಿನರಿ ಯಿಂದ "ಡಾಕ್ಟರ್ ಆಫ್ ಡಿವಿನಿಟಿ" ಎಂಬ ಗೌರವ ಡಾಕ್ಟರೇಟ್ ಪದವಿ ದೊರೆಯಿತು. ಹೀಗಾಗಿ ಅವರನ್ನು ಡಾ॥ ಇ.ಎ. ಸೀಮಂಡ್ಸ್ ಎಂತಲೂ ಕರೆಯಲಾಗುತ್ತಿತ್ತು.

ಧಾರೂರು ಜಾತ್ರೆಯ ನಿಮಿತ್ತವಾಗಿ ಭಾರತೀಯ ಬೈಬಲ್ ಸೊಸೈಟಿಯವರು ತಾತನವರಿಗೆ " ಜಾನ್ ಹ್ಯಾಂಡ್ಸ್ ಮೆಮೊರಿಯಲ್ ಅವಾರ್ಡ್" ಎಂಬ ಸ್ವರ್ಣ ಪದಕವನ್ನು ನೀಡಿ ೧೯೮೫ರಲ್ಲಿ ಗೌರವಿಸಲಾಯಿತು. ಭಾರತದಲ್ಲಿ ಚರ್ಚುಗಳಿಗೆ ಇವರು ಸಲ್ಲಿಸಿದ ಅಪರಮಿತವಾದ ಸೇವೆಗೆ ಇದನ್ನು ನೀಡಲಾಗಿತ್ತು. ಅವರಿಗೆ ಅಪಾರವಾದ ಪ್ರಶಸ್ತಿಗಳು ಹಾಗೂ ಗೌರವಗಳು ದೊರೆತಿದ್ದವು. ಸೆಪ್ಟೆಂಬರ್ ೨೪, ೧೯೮೧ರಲ್ಲಿ ನೆಚ್ಚಿನ ಮಡದಿಯ ಸಾವು ತಾತನವರಿಗೆ ಬರಸಿಡಿಲಿನಂತೆ ಎರಗಿತ್ತು. ಆಗ ಅವರಿಗೆ ೮೭ ವರ್ಷ, ಜೀವನದಲ್ಲಿ ಒಂಟಿತನ, ಬೇಸರ, ಅನಾರೋಗ್ಯ ಕಾಡಲಾರಂಭಿಸಿದವು. ಸುಮಾರು ೬೬ ವರ್ಷಗಳ ದಾಂಪತ್ಯ ಜೀವನವನ್ನು ನಡೆಸಿದ ಸಂಗಾತಿಯನ್ನು ಕಳೆದುಕೊಂಡಿದ್ದುದರ ನೋವು ಮತ್ತು ಆಯಾಸ ಅವರ ಮನಸ್ಸಿನಿಂದ ಮಾಸಲಿಲ್ಲ. ಕೆಲವು ದಿವಸ ಅಮೇರಿಕಾಕ್ಕೆ ಹೋಗಿ ಮತ್ತೆ ಭಾರತಕ್ಕೆ ಮರಳಿ ಬಂದರು. ಆದರೆ ಅನಾರೋಗ್ಯ ಅವರನ್ನು ಪೀಡಿಸಲಾರಂಭಿಸಿತು. ಅವರಿಗೆ ತಾಳಲಾರದ ಹೊಟ್ಟೆನೋವು ಕಾಣಿಸಿಕೊಂಡಿತು. ಈ ನೋವಿನಿಂದ ಹಾಸಿಗೆ ಹಿಡಿದರು. ಅವರ ಹಿರಿಯ ಮಗನಾದ ಜಾನ್ ತಂದೆಯನ್ನು ಕೋಲಾರಿನ ಇ.ಟಿ.ಸಿ.ಎಂ. ಆಸ್ಪತ್ರೆಗೆ ಸೇರಿಸಿದರು. ಆದರೆ ತಾತನವರ ದೇಹಸ್ಥಿತಿ ಹದಗೆಟ್ಟಿದುದರಿಂದ ಅವರನ್ನು ವೆಲ್ಲೂರಿನ, ಕ್ರಿಶ್ಚಿಯನ್ ಮೆಡಿಕಲ್ ಕಾಲೇಜಿಗೆ ಹೆಚ್ಚಿನ ಚಿಕಿತ್ಸೆಗಾಗಿ ಕೊಂಡೊಯ್ಯಲಾಯಿತು. ಆದರೆ ಅಲ್ಲಿ ವಿಧಿ ಇವರನ್ನು ಕೈಬೀಸಿ ಕರೆಯುತ್ತಿತ್ತು. ದುರಾದೃಷ್ಟವಶಾತ್ ಫೆಬ್ರವರಿ ೨೫,೧೯೮೪ರ ಬೆಳಗಿನ ಜಾವ ೪.೩೦ರ ಸಮಯದಲ್ಲಿ ತಾತಾ ಸೀಮಂಡ್ಸ್‌ರವರು ಇಹಲೋಕ ತ್ಯಜಿಸಿದರು, ಅವರ ಪಾರ್ಥಿವ ಶರೀರವನ್ನು ರಿಚ್ಮಂಡ್ ಟೌನ್ ಮೆಥೋಡಿಸ್ಟ್ ಚರ್ಚಿನ ಬೆಂಗಳೂರಿನ ಸಮಾಧಿಯಲ್ಲಿ ಫೆಬ್ರವರಿ ೨೭,೧೯೮೪ರಂದು ಮಾಡಲಾಯಿತು.

ತಾತಾ ಯಾವಾಗಲೂ ಹೇಳುತ್ತಿದ್ದ ಮಾತೇನೆಂದರೆ : "ಒಂದು ವೇಳೆ ನಾನು ಭಾರತದಲ್ಲಿ ಸತ್ತರೆ ಸ್ವರ್ಗವು ನನಗೆ ಅಮೇರಿಕಾಕ್ಕಿಂತ ಹತ್ತಿರವಾದಂತೆ"



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಅಬ್ರಹಾಂ ಸಿ.ಇ. **ರೀಡಿಂಗ್ಸ್ ಇನ್ ಕಲ್ಚರಲ್ ಹೆರಿಟೇಜ್ ಇನ್ ಇಂಡಿಯಾ,** ಬಿ.ವಿ.ಬಿ. ೬ನೇ ಎಡಿಷನ್.

೨. ಆಗೂರ್ ಸಿ.ಎಂ. **ಚರ್ಚ ಹಿಸ್ಟರಿ ಆಫ್ ಟ್ರಾವಂಕೂರ್,** ಏಷಿಯನ್ ಎಜುಕೇಷನಲ್ ಸರ್ವಿಸಸ್, ನ್ಯೂಡೆಲ್ಲಿ.

೩. ಬೈಬಲ್‌ನಿಂದ ಆಯ್ದುಕೊಂಡ ಭಾಗ, ಅಪೊಸ್ತಲರ ಕೃತ್ಯಗಳು, ೧೭ನೇ ಅಧ್ಯಾಯ.

೪. **ದಿ ಬುಕ್ ಆಫ್ ಡಿಸಿಪ್ಲಿನ್,** ಮಥೋಡಿಸ್ಟ್ ಚರ್ಚ ಇನ್ ಇಂಡಿಯಾ.

೫. ಆರ್ನೆಟರ್ ದಿನಚರಿಯಿಂದ ಆಯ್ದ ಭಾಗಗಳು

೬. **ಆಫಿಸಿಯಲ್ ಜರ್ನಲ್ ಆಫ್ಟಿ ಪೋರ್ತ ಸೆಷನ್,** ಸೌತ್ ಇಂಡಿಯಾ, ರೀಜನಲ್. ಕಾನಫರೆನ್ಸ ಆಫ ದಿ ಮಥೋಡಿಸ್ಟ್ ಚರ್ಚ ಇನ್ ಇಂಡಿಯಾ, ಬೆಂಗಳೂರು-೧೯೮೪.

೭. ಲಿಲಿಯನ್ ಸ್ಟ್ಯಾನ್ಲಿ, **ಮೂನ್ ಆನ್ ಅರ್ಥ,** ವೆಲ್ಲೂರ್.

೮. ಸೀಮಂಡ್ಸ್ ಜೆ.ಟಿ., **ಇಂಜಿನಿಯರ್ಡ್ ಫಾರ್ ಗ್ಲೋರಿ.**

೯. ಸೀಮಂಡ್ಸ್ ಜೆ.ಟಿ., **ಸಂತೋಷದ ತುದಿಗಾಲಿನ ಮೇಲೆ.**

೧೦. ಪಿ. ಥೋಮಸ್, **ಫೆಸ್ಟಿವಲ್ಸ್ ಅಂಡ್ ಹಾಲಿಡೇಸ್ ಆಫ್ ಇಂಡಿಯಾ.**



# ಸಹಕಾರಿ ಕ್ಷೇತ್ರದ ಪಿತಾಮಹ ಶ್ರೀ ಸಿದ್ಧನಗೌಡ ಪಾಟೀಲರ ಕೊಡುಗೆಗಳು

**ಪ್ರೊ. ಶಕುಂತಲಾ ಸಿಂಧೂರ***

**ಧಾ**ರವಾಡ ಜಿಲ್ಲೆಯ ಅವಿಭಾಜ್ಯ ಅಂಗವಾಗಿದ್ದ ಗದಗ ಈಗ ಸ್ವತಂತ್ರ ಜಿಲ್ಲೆಯಾಗಿ ರೂಪುಗೊಂಡಿದೆ. ಪುರಾತನ ನಗರ ಕೃತಪುರ ಇಂದು ಗದಗ-ಬೆಟಗೇರಿ ನಾಮಾಂಕಿತ ರೂಪ ತಾಳಿರುವ ನೂತನ ಜಿಲ್ಲಾ ಕೇಂದ್ರವೆನಿಸಿದೆ. ಗದಗ ಜಿಲ್ಲೆ ಸಹಕಾರ ಕ್ಷೇತ್ರದ ಗಂಗೋತ್ರಿ.

೧೯೦೪ರಲ್ಲಿ ಸಹಕಾರ ಕಾಯ್ದೆ ರಚನೆಯಾದಾಗ ಸರ್. ಜೆ. ಮೆಕ್ಯಾನಿಯಲ್ ಇವರು ಮೊದಲ ರಿಜಿಸ್ಟ್ರಾರ್‌ರಾಗಿ ನಿಯುಕ್ತರಾಗಿ ಸಹಕಾರ ಸಂಘಗಳ ನೋಂದಣಿಗಾಗಿ ಭಾರತದ ಉದ್ದಗಲ ಸಂಚರಿಸಿದರೂ ಸಂಘದ ನೋಂದಣಿಗೆ ಎಲ್ಲಿಯೂ ಸರಿಯಾದ ಪ್ರತಿಕ್ರಿಯೆ ಬಾರದಿದ್ದಾಗ ಕಣಗಿನಹಾಳದಲ್ಲಿ ಸಹಕಾರ ಚಳವಳಿಯ ಪ್ರಾರಂಭದ ಪ್ರತಿಕ್ರಿಯೆಗೆ ಅಮೋಘ ಆಹ್ವಾನ ಲಭಿಸಿತು. ಅಂದಿನ ಧಾರವಾಡ ಜಿಲ್ಲೆಯ ಗದಗ ತಾಲ್ಲೂಕಿನ ಕುಗ್ರಾಮ ಕಣಗಿನಹಾಳದ ಸಾಮಾನ್ಯ ರೈತ ದಿ. ಸಿದ್ದನಗೌಡ, ಸಣ್ಣರಾಮನಗೌಡ ಪಾಟೀಲರ ಸಂಘಟನಾ ಸಾಮರ್ಥ್ಯ ಮುಂದಾಲೋಚನೆಯಿಂದಾಗಿ ಈ ಹಳ್ಳಿಯಲ್ಲಿ ೮-೫-೧೯೦೫ರಂದು ಸೋಮವಾರ ಬೆಳಗ್ಗೆ ಕಣಗಿನಹಾಳನ ಕೃಷಿಯಲ್ಲಿನ ಸಹಕಾರ ಸಂಘ ನೋಂದಣಿಯಾದದ್ದು ಭಾರತದಲ್ಲಿ ಸಹಕಾರ ಚಳುವಳಿಗೆ ನಾಂದಿ ಹಾಡಿತು.

ಏಷ್ಯಾ ಖಂಡದಲ್ಲಿಯೇ ಪ್ರಥಮವಾಗಿ ಕಣಗಿನ ಹಾಳದಲ್ಲಿ ಪ್ರಾರಂಭವಾದ ಈ ಕೃಷಿ ಪತ್ತಿನ ಸಹಕಾರ ಸಂಘ ಈಗ ಕೃಷಿ ಪತ್ತಿನ ಸಹಕಾರಿ ಬ್ಯಾಂಕ್ ಆಗಿ ಮಾರ್ಪಟ್ಟು ೨೦೦೫ಕ್ಕೆ ನೂರು ವಸಂತಗಳನ್ನು ಕಂಡು ಇಂದಿನ ಸಹಕಾರಿಗಳಿಗೆ ಪ್ರೇರಣೆಯ ಪ್ರತೀಕವಾದ ಈ ಗ್ರಾಮದಲ್ಲಿಯೇ ಸಹಕಾರ ಶತಮಾನೋತ್ಸವದ ಉದ್ಘಾಟನೆ ದಿ. ೮-೫-೨೦೦೫ರಂದು ಜರುಗಿದ್ದು ಇತಿಹಾಸ ಪುನರಾವರ್ತನೆ.

"ಪರರ ನೋವು ನನ್ನ ನೋವು ಅವರ ನಲಿವು ನನ್ನ ನಲಿವು" ಎಂದು ಭಾವಿಸಿ ಅದನ್ನೇ ಜೀವಮಂತ್ರವಾಗಿ ಸ್ವೀಕರಿಸಿ ಅನುಷ್ಠಾನಗೊಳಿಸಿದ ಮಹಾಮಹಿಮ-ಸಹಕಾರಿ ಪಿತಾಮಹರೆಂದೇ ಖ್ಯಾತರಾದ ಶ್ರೀ ಸಿದ್ದನಗೌಡರು ಏಷಿಯಾ ಖಂಡದಲ್ಲೂ ಮೊದಲು ಎನಿಸುವ ಸಹಕಾರಿ ಸಂಘ ವೊಂದನ್ನು ಕಟ್ಟಿ ೧೯-೨೦ನೆಯ ಶತಮಾನದಲ್ಲಿ ಅನನ್ಯ ಕತೃತ್ವ ಶಕ್ತಿ ತೋರಿದ ಅದ್ವಿತೀಯ ವ್ಯಕ್ತಿತ್ವವುಳ್ಳವರು.

೧೯೦೪ರ ಸಹಕಾರಿ ಚಳುವಳಿ ಭಾರತದಲ್ಲಿ ಜಾರಿಗೆ ಬಂದ ಕೂಡಲೆ ಅದರನ್ವಯ ಪ್ರಪ್ರಥಮವಾಗಿ ಸಹಕಾರ ಸಂಸ್ಥೆ ಪ್ರಾರಂಭಿಸಿರುವ ಶ್ರೀ ಸಿದ್ದನಗೌಡ ಪಾಟೀಲರು ಅಂದು ಬಿತ್ತಿದ ಬೀಜ ಇಂದು ಹೆಮ್ಮರವಾಗಿ ಬೆಳೆದು ಇಡೀ ದೇಶದಾದ್ಯಂತ ಕೋಟ್ಯಾನುಗಟ್ಟಲೆ ಜನರ ಬದುಕಿಗೆ ಸಮೃದ್ಧ ಫಲವನ್ನು ನೀಡುತ್ತಲಿದೆ, ಸಿದ್ದನಗೌಡರ ದೂರದರ್ಶಿತ್ವ, ಪ್ರಜಾಪ್ರೇಮ, ಪರೋಪಕಾರಿ ಗುಣ, ಭೂತಾನುಕಂಪ, ವ್ಯಾವಹಾರಿಕ ಜಾಣ್ಮೆ, ತಾರ್ಕಿಕ ಮನೋಭಾವ, ನಾಯಕತ್ವಗುಣ ಸರ್ವರಿಗೂ ಸ್ಫೂರ್ತಿಯ ಸೆಲೆಯಂತಿರುವವು. ಗದಗ ಜಗದ್ಗುರು ತೋಂಟದಾರ್ಯ ಮಠದ ೧೭ನೆಯ ಜಗದ್ಗುರು ಗಳವರಿಂದ ಲಿಂಗದೀಕ್ಷೆ ಸ್ವೀಕರಿಸಿರುವ ಶ್ರೀಯುತರದು ಶರಣರ ಬದುಕು. ದಿನನಿತ್ಯ ಮಾಳಿಗೆ ಹತ್ತಿ ನಿಂತು ಯಾರ ಮನೆಯಲ್ಲಿ ಹೊಗೆ ಏಳುವುದಿಲ್ಲವೋ ಅವರನ್ನು ಕರೆಯಿಸಿ ವಿಚಾರಿಸಿ ಅನ್ನದಾಸೋಹ ನಿರಂತರ ನಡೆಸುತ್ತಿರುವ ಮಾನವೀಯತೆಯ ಸಾಕಾರ ಸ್ವರೂಪರು ಶ್ರೀ ಸಿದ್ದನಗೌಡರು. ಕಾಯಕಕ್ಕೆ ಪ್ರೇರೇಪಿಸುತ್ತಾ ಜಾತಿ-ಮತಗಳನ್ನು ಎಣಿಸದೆ, ಮೇಲು-ಕೀಳು ಲೆಕ್ಕಿಸದೆ 'ಇವ ನಮ್ಮವ ಇವ ನಮ್ಮವ' ಎಂದು ಸರ್ವರನ್ನು ಸಮ ಪ್ರೀತಿಯಿಂದ ಕಂಡವರು.

ಆರ್ಥಿಕ ಸಬಲತೆಗೆ ನಾಂದಿ ಹಾಡಿದ ಸಹಕಾರಿ ಮಹರ್ಷಿ ಸಿದ್ದನಗೌಡ ಪಾಟೀಲರು ಪ್ರಾತಃಸ್ಮರಣೀಯರ ಇತಿಹಾಸದ ಪುಟಗಳಲ್ಲಿ ಹುದುಗಿಹೋಗಿದ್ದರೂ ಸ್ಪಷ್ಟವಾಗಿ ಗೋಚರಿಸುತ್ತಲಿರುವದಕ್ಕೆ ನಿದರ್ಶನಗಳೆಂದರೆ ಶ್ರೀಯುತರು

* ಕನ್ನಡ ಪ್ರಾಧ್ಯಾಪಕರು, ಕೆಎಲ್‌ಇ ಸಂಸ್ಥೆಯ ಜಗದ್ಗುರು ತೋಂಟದಾರ್ಯ ಪದವಿ ಕಾಲೇಜು, ಗದಗ-೫೮೨೧೦೧.

ಸಮಾಜದ ಅಭ್ಯುದಯಕ್ಕೆ ಅರ್ಪಿಸಿರುವ ಅಪಾರ ಕೊಡುಗೆಗಳು ಸಾಕ್ಷಿಯಾಗಿರುತ್ತವೆ.

ಮಹಾತ್ಮಾಗಾಂಧೀಜಿಯವರು ಹೇಳಿರುವ 'ಆರ್ಥಿಕ ಸ್ವಾತಂತ್ರ್ಯಕ್ಕೆ ಸಹಕಾರವೇ ಹೆಬ್ಬಾಗಿಲು' ಎನ್ನುವ ಮಾತು ಮತ್ತು ದೇಶದ ಮೊದಲ ಪ್ರಧಾನಿ ಪಂ. ಜವಾಹರಲಾಲ ನೆಹರೂ ಅವರು ನುಡಿದ 'ನಾನು ಸಹಕಾರಿ ಚಳುವಳಿಯಿಂದ ಭಾರತವನ್ನು ಬಲಯುತಗೊಳಿಸಲಿಚ್ಚಿಸುತ್ತೇನೆ' ಎಂಬ ನುಡಿಮುತ್ತುಗಳು ಇಂತಹ ಪ್ರಯೋಜನಕಾರಿ ತತ್ವ ನೀಡಿದ ವ್ಯಕ್ತಿ ಸಿದ್ದನಗೌಡರದು ದೇಶದ ಇತಿಹಾಸದಲ್ಲಿ ಅಚ್ಚಳಿಯದ ಹೆಸರು.

ಸಿದ್ದನಗೌಡರು ತೋರಿದ ಸಹಕಾರಿ ತತ್ವದ ತಳಹದಿಯ ಮೇಲೆ ಸಾಕಷ್ಟು ಸಹಕಾರಿ ಸಂಘಗಳನ್ನು ಸ್ಥಾಪಿಸಿದ ಅನೇಕರು ಈ ನಾಡಿನಲ್ಲಿ ಮಿಂಚಿದ್ದಾರೆ. ಅಷ್ಟೇ ಅಲ್ಲದೆ ಅವರು ಸಹಕಾರಿ ರಂಗದ ಪ್ರಮುಖರೆನಿಸಿದ್ದಾರೆ. ಆದರೆ ಎನಿಸಿಕೊಂಡ ಸಿದ್ದನಗೌಡರು ಮಾತ್ರ ಸಹಕಾರಿ ಕ್ಷೇತ್ರದವರನ್ನು ಬಿಟ್ಟರೆ ಇನ್ನುಳಿದವರಿಗೆ ಅಷ್ಟಾಗಿ ಪರಿಚಯ ಕೂಡಾ ಇಲ್ಲವೆಂಬುದು ವಾಸ್ತವಿಕ ಸಂಗತಿ. ಸಹಕಾರಿ ಪಿತಾಮಹ ಸಿದ್ದನಗೌಡರು ಕೊಟ್ಟ ಸಹಕಾರಿ ತತ್ವದ ಲಾಭ ಮತ್ತು ಕೀರ್ತಿ ಪಡೆದ ನೂರಾರು ಜನ ಅದೇ ಕೀರ್ತಿಯಿಂದ ಏನೆಲ್ಲ ಸೌಲಭ್ಯ ಪಡೆದು ಮಿಂಚಿದ್ದಾರೆ. ಮಿಂಚುತ್ತಿದ್ದಾರೆ. ಆದರೆ ಸಹಕಾರಿ ಚಳುವಳಿಗೆ ನಾಂದಿ ಹಾಡಿದ ಸಿದ್ದನಗೌಡರನ್ನು ಪ್ರಪಂಚಕ್ಕೆ ಪರಿಚಯಿಸುವಲ್ಲಿ ಜನಾಂಗದ ಸ್ವಾಭಿಮಾನದ ಕೊರತೆ. ಕುರುಬ ಜನಾಂಗಕ್ಕೆ ಸೇರಿದವರಾದ ಶ್ರೀಯುತರು ಏಷ್ಯಾ ಖಂಡದಲ್ಲಿಯೇ ಪ್ರಪ್ರಥಮ ಸಹಕಾರಿ ಸಂಘ ಸ್ಥಾಪಿಸಿದರೂ ಅವರ ಹೆಸರು ಯಾವ ಪ್ರಮಾಣದಲ್ಲಿ ಬೆಳೆಯಬೇಕಾಗಿತ್ತೊ ಬೆಳೆಯಲಿಲ್ಲ. ಕುರುಬ ಸಮಾಜದ ನಾಯಕರ ಇಚ್ಛಾಶಕ್ತಿ ಜೊತೆಗೆ ಆಸಕ್ತಿಯ ಕೊರತೆಯೂ ಕಾರಣವಾಗಿರಬಹುದು.

ಕಣಗಿನಹಾಳ ಸಹಕಾರಿ ತತ್ವದ ಜನ್ಮಸ್ಥಳವಾದರೆ, ಸಿದ್ದನಗೌಡ ಪಾಟೀಲರು ಸಹಕಾರಿ ತತ್ವ ಪ್ರಸಾರದ ಹರಿಕಾರರು, ಶುಭಕಾರ್ಯಗಳೆಲ್ಲ ಕುರುಬರಿಂದ ಮಾತಾಡಿಸುವ ಉತ್ತರ ಕರ್ನಾಟಕದ ಸಂಪ್ರದಾಯದಂತೆ ಕುರುಬ ಜನಾಂಗದ ಪ್ರಾಬಲ್ಯವಿರುವ ಹಾಗೂ ಕುರುಬರೇ ಗೌಡರಾಗಿರುವ ಗ್ರಾಮ ಕಣಗಿನಹಾಳವಾಗಿದ್ದರಿಂದ ಶ್ರೀ ಸಿದ್ದನಗೌಡ ಪಾಟೀಲರ ಅಧ್ಯಕ್ಷತೆಯಲ್ಲಿ ಕಣಗಿನಹಾಳ ಗ್ರಾಮ ಪತ್ತಿನ ಸಹಕಾರ ಸಂಘ ೮-೫-೧೯೦೫ರಂದು ವಿದ್ಯುಕ್ತವಾಗಿ ಪ್ರಾರಂಭವಾಯಿತು. ಮುಂದಿನ ಎರಡು ದಿನಗಳಲ್ಲಿ ಕ್ರಮವಾಗಿ ಹಿರೇಹಂದಿಗೋಳ ಹಾಗೂ ಹುಲಕೋಟಿಗಳಲ್ಲಿ ಪತ್ತಿನ ಸಹಕಾರ ಸಂಘಗಳು ಸ್ಥಾಪನೆಗೊಂಡವು. ಹೆಚ್ಚು ಕಡಿಮೆ ಏಕಕಾಲದಲ್ಲಿ ಮೂರು ಪತ್ತಿನ ಸಹಕಾರಿ ಸಂಘಗಳು ಸ್ಥಾಪನೆಗೊಂಡಿದ್ದರೂ ಕೂಡಾ ಶ್ರೀ ಸಿದ್ದನಗೌಡರ ಅಧ್ಯಕ್ಷತೆಯ ಕಣಗಿನಹಾಳ ಗ್ರಾಮ ಪತ್ತಿನ ಸಹಕಾರ ಸಂಘ ಭಾರತದ ಮೊಟ್ಟಮೊದಲ ಪತ್ತಿನ ಸಹಕಾರ ಸಂಘವಾಗಿದ್ದು, ಕಣಗಿನಹಾಳ ಗ್ರಾಮ ಸಹಕಾರ ಚಳುವಳಿಯ ಜನ್ಮಸ್ಥಳವಾಗಿರುವದು. ಗದಗ 'ಸಹಕಾರ ಕಾಶಿ' ಎಂದು ಜನಪ್ರಿಯತೆ ಪಡೆದಿದೆ. ಗದಗ ಜಿಲ್ಲೆಯಲ್ಲಿ ಸಹಕಾರ ಚಳವಳಿಯು ಸಣ್ಣ ಪ್ರಮಾಣದ ಸಹಕಾರ ಸಂಘಗಳಿಂದ ಬೆಳವಣಿಗೆ ಹೊಂದಿ ದೊಡ್ಡದಾದ ಸಹಕಾರಿ ಕೈಗಾರಿಕಾ ಮಿಲ್ಲುಗಳನ್ನು ಸ್ಥಾಪಿಸುವತ್ತ ಪ್ರಗತಿ ಸಾಧಿಸಿದೆ.

ದಿನಾಂಕ : ೩೧-೩-೨೦೦೫ಕ್ಕೆ ಇದ್ದಂತೆ ಜಿಲ್ಲೆಯಲ್ಲಿ ವಿವಿಧ ೮೫೮ ಸಹಕಾರ ಸಂಘಗಳಿವೆ. ಇವುಗಳಲ್ಲಿ ೬೪೩ ಸಂಘಗಳು ಕಾರ್ಯನಿರತವಾಗಿದ್ದು, ೨೪ ಸ್ಥಗಿತಗೊಂಡಿದ್ದು ೧೯೧ ಸಮಾಪನೆಯಲ್ಲಿವೆ. ೨೭೨ ಸಹಕಾರಿ ಸಂಘಗಳು ಲಾಭದಲ್ಲಿದ್ದು ೫೯೩ ಸಹಕಾರ ಸಂಘಗಳು ಹಾನಿ ಅನುಭವಿಸುತ್ತಿವೆ.

ದಿನಾಂಕ : ೮-೫-೧೯೦೫ರಂದು ದೇಶದಲ್ಲಿ ಒಂದು ಸಹಕಾರ ಸಂಘವಿದ್ದರೆ ಅದರ ಫಲಶೃತಿಯಾಗಿ ಇಂದು ದೇಶದಲ್ಲಿ ೫ ಲಕ್ಷ ೫೦ ಸಾವಿರ ಸಹಕಾರ ಸಂಘಗಳಿರುತ್ತವೆ. ಇವುಗಳಲ್ಲಿ ೨೩ ಕೋಟಿ ಸದಸ್ಯರಿದ್ದಾರೆ. ಇಂದು ಸಹಕಾರ ಚಳುವಳಿಯು ಬೃಹದಾಕಾರವಾಗಿ ಬೆಳೆದಿದೆಯಲ್ಲದೆ ರಾಷ್ಟ್ರವ್ಯಾಪಿಯಾಗಿದೆ. ರಾಷ್ಟ್ರದಲ್ಲಿ ಪ್ರಾಥಮಿಕ ಸಹಕಾರ ಸಂಘಗಳಿಂದ ರಾಷ್ಟ್ರಮಟ್ಟದ ಸಹಕಾರ ಸಂಘಗಳಿದ್ದು, ಜಗತ್ಪ್ರಸಿದ್ಧವಾದ ಅಮೂಲ್, ಇಫ್ಕೋ, ಕ್ರಿಬ್ಕೊಗಳಂತಹ ಸಹಕಾರ ಸಂಸ್ಥೆಗಳು ಸಹಕಾರ ರಂಗದಲ್ಲಿ ಪ್ರಸಿದ್ಧವಾಗಿವೆ. ಅಲ್ಲದೆ ಅಪೆಕ್ಸ್ ಬ್ಯಾಂಕ್ ಹಾಗೂ ಪಟ್ಟಣ ಸಹಕಾರಿ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಲಿವೆ. ಇಂದು ಭಾರತ ದೇಶದ ಸಹಕಾರ ಆಂದೋಲನೆಯು ಸರಕಾರಕ್ಕೆ ಸಮಾನಾಂತರ ಕಾರ್ಯನಿರ್ವಹಿಸುತ್ತಲಿದೆ. ಏಷ್ಯಾ ಖಂಡದಲ್ಲಿಯೇ ಭಾರತ ಸಹಕಾರ ಆಂದೋಲನೆಯು ಮುಂಚೂಣಿಯಲ್ಲಿದೆ.

ರಾಷ್ಟ್ರದ ಆರ್ಥಿಕ ಪ್ರಗತಿಯಲ್ಲಿ ತನ್ನದೇ ಆದ ಕೊರತೆಯನ್ನು ನೀಡಿ ಭಾರತ ಸಹಕಾರ ಆಂದೋಲನೆಯ ಮೂಲಕ ಸಹಕಾರ ಸಾಲ, ಮಾರಟ, ಗ್ರಾಹಕ ಚಟುವಟಿಕೆ, ಹೈನ್ಯೋದ್ಯಮ, ರಾಸಾಯನಿಕ ಗೊಬ್ಬರ, ಜವಳಿ ಹಾಗೂ ಯೋಜನೆಗೆ ೧೯೦೪ರಿಂದ ಮಹತ್ವ ಲಭಿಸಿದ್ದು ಅಂದಿನ ಪ್ರಧಾನಮಂತ್ರಿಗಳಾದ ದಿ. ಜವಾಹರಲಾಲ ನೆಹರೂರವರು ಗ್ರಾಮಕ್ಕೆ ಒಂದು ಶಾಲೆ ಹಾಗೂ ಒಂದು ಸಹಕಾರ ಸಂಘ ಇರಬೇಕೆಂಬ ಆಕಾಂಕ್ಷೆಯಂತೆ ಸಾಕಷ್ಟು ಸಂಖ್ಯೆಯಲ್ಲಿ ಸಹಕಾರ ಸಂಘಗಳು ಸ್ಥಾಪನೆಯಾಗಿದ್ದು ತನ್ನ ಸದಸ್ಯರಿಗೆ ಸೇವೆಯನ್ನು ಸಲ್ಲಿಸುತ್ತಲಿವೆ. ಮೂಲ ಕೃಷಿ ಪತ್ತಿಗೆ ಸ್ಥಾಪನೆಯಾದ ಸಹಕಾರ

ಸಂಘಗಳು ಮಾನವ ಅವಶ್ಯಕತೆಗೆ ಅನುಗುಣವಗಿ ವಿವಿಧ ಸಹಕಾರ ಸಂಘಗಳು ಸ್ಥಾಪನೆಯಾಗಿದ್ದು ತನ್ನ ಸದಸ್ಯರಿಗೆ ಉತ್ತಮವಾದ ಸೇವೆಯನ್ನು ಸಲ್ಲಿಸಿದ್ದು ಸಹಕಾರದಿಂದ ದೇಶ ಯಶಸ್ವಿಯಾಗಿದೆ.

ಸಿದ್ದನಗೌಡರು ಬ್ರಿಟಿಷ್ ಅಧಿಕಾರಿಗಳನ್ನು ಕಾಡಿಬೇಡಿ ತಮ್ಮ ಊರಿಗೆ ಶಾಲೆಯನ್ನು ಮಂಜೂರು ಮಾಡಿಸಿದರು. ಈ ಶಾಲೆಯ ಸಿದ್ದನಗೌಡರ ಪ್ರಯತ್ನದ ಫಲವಾಗಿ ೧೧-೮-೧೮೮೮ರಲ್ಲಿ ಆರಂಭವಾಯಿತು. ತದನಂತರ ೧೯೦೩ರಲ್ಲಿ ಸಿದ್ದನಗೌಡರ ಸತತ ಪ್ರಯತ್ನದ ಫಲವಾಗಿ ಗ್ರಾಮದಲ್ಲಿ ೭ನೇ ತರಗತಿವರೆಗೆ ಶಾಲೆ ಆರಂಭವಾಯಿತು.

ಸಿದ್ದನಗೌಡರು ತಮ್ಮ ಅಜ್ಜ ರಾಮನಗೌಡರ ಕಾಲದಿಂದ ಮೈಲಾರಲಿಂಗನ ಭಕ್ತರು ಅಜ್ಜ ರಾಮನಗೌಡರು ತಮಗೆ ಬಂದ ಹೊಲದಲ್ಲಿ ಕೃಷಿ ಚಟುವಟಿಕೆ ಮಾಡುವಾಗ ಕುಂಟಿಯ ಕುಳಕ್ಕೆ ಕಲ್ಲೊಂದು ಸಿಕ್ಕಿತು. ಅದನ್ನು ಸಂಪೂರ್ಣ ಹೊರ ತೆಗೆದಾಗ ಅದರಲ್ಲಿನ ಕೆತ್ತನೆಯ ರೂಪ ಆಶ್ಚರ್ಯಗೊಳಿಸಿತು. ನಂತರ ಅದು ಮೈಲಾರಲಿಂಗನ ಚಿತ್ರ ಎಂಬುದು ಪತ್ತೆಯಾಯಿತು.

ಸಿದ್ದನಗೌಡರು ಸಕ್ರಮ್ಮರನ್ನು ಬಾಳ ಸಂಗಾತಿಯಾಗಿ ಸ್ವೀಕರಿಸುವ ಮೂಲಕ ಸಂತೋಷದ ಬದುಕಿನ ಬಂಡಿಯಲ್ಲಿ ಪಯಣಿಸತೊಡಗಿದರು. ಮಾರೆಪ್ಪ-ಮುದ್ದಪ್ಪ ಎಂಬ ಅವಳಿ-ಜವಳಿ ಮಕ್ಕಳೊಂದಿಗೆ ೧೩ ಮಕ್ಕಳಿಗೆ ಜನ್ಮ ನೀಡಿದ ದಂಪತಿಗಳಿಗೆ ವಿಧಿಯಾಟ ಎಂಬಂತೆ ಉಳಿದಿದ್ದು ೩ ಜನ ಗಂಡು ಹಾಗೂ ಓರ್ವ ಹೆಣ್ಣು ಮಗಳು ಮಾತ್ರ. ಈ ಮಕ್ಕಳೊಂದಿಗೆ ಕೇವಲ ತಮ್ಮ ಕುಟುಂಬ ಎನ್ನುವ ಮಟ್ಟಿಗೆ ಯಾವಾಗಲೂ ಚಿಂತಿಸಿದವರಲ್ಲ ಇಡೀ ಗ್ರಾಮವನ್ನೇ ತಮ್ಮ ಕುಟುಂಬ ಎಂದು ತಿಳಿದುಕೊಳ್ಳುವ ಮೂಲಕ ಗ್ರಾಮದ ಎಲ್ಲದರಲ್ಲಿಯೂ ದಂಪತಿಗಳ ಸೇವೆ ನಿರಂತರವಾಗಿತ್ತು.

'ಗ್ರಾಮದ ಅಭಿವೃದ್ಧಿಯೇ ದೇಶದ ಅಭಿವೃದ್ಧಿ' ಎಂಬಂತೆ ಗ್ರಾಮದ ಪ್ರಗತಿಯಾಗಲು ಗ್ರಾಮೀಣ ಅನುಭಾವಿಗಳು ಹೇಳುವಂತೆ 'ಊರಾಗ ಹೊಳಿ ಹಾದಿರಬೇಕು ಇಲ್ಲಾ ಹಳಿ ಹಾದಿರಬೇಕು' ಎನ್ನುವ ಮಾತು ಸಿದ್ದನಗೌಡರ ಮನದಲ್ಲಿ ಗುನುಗುಸುತ್ತಿತ್ತು. ಕಣಗಿನಹಾಳ ಗ್ರಾಮಕ್ಕೆ ಹೊಳಿ ತರಲು ಸಾಧ್ಯವಿರಲಿಲ್ಲ. ಆದ್ದರಿಂದ ಪಕ್ಕದಲ್ಲಿಯೇ ಹಾದುಹೋಗಿದ್ದ ಗದಗ-ಗುಂತಕಲ್ ರೇಲ್ವೆ ಮಾರ್ಗವನ್ನು ದಿನವು ಕಾಣುತ್ತಿದ್ದ ಸಿದ್ದನಗೌಡರಿಗೆ ರೇಲ್ವೆ ಹಳಿ ತರುವ ಕನಸನ್ನು ನನಸಾಗಿಸಿದರು.

ಸಿದ್ದನಗೌಡರು ಸಹಕಾರಿ ಸಂಘ ಸ್ಥಾಪಿಸಿದ ಸಂದರ್ಭದಲ್ಲಿ ಸಾಹುಕಾರರ ಬಡ್ಡಿಯ ಹಾವಳಿಯು ತಾಂಡವ ವಾಡುತ್ತಿತ್ತು. ಆಗರ್ಭ ಶ್ರೀಮಂತರು ತಮ್ಮಲ್ಲಿದ್ದ ಹಣವನ್ನು ಬಡವರಿಗೆ ಮತ್ತು ರೈತರಿಗೆ ಬಡ್ಡಿರೂಪದಲ್ಲಿ ನೀಡಿ ಬಡವರು ಹಾಗೂ ರೈತ ಸಮುದಾಯವನ್ನು ಶೋಷಣೆ ಮಾಡುತ್ತಿದ್ದ ಕಾಲವದು. ಹೀಗಾಗಿ ಇಂತಹ ಸಹಕಾರಿ ಸಂಘಗಳು ಜಾರಿಗೆ ಬಂದರೆ ಬಡವರು ಹಾಗೂ ರೈತರು ಆರ್ಥಿಕವಾಗಿ ಸದೃಢವಾಗುವ ಮೂಲಕ ತಮ್ಮ ಬಡ್ಡಿ ವ್ಯವಹಾರಗಳಿಗೆ ಕಡಿವಾಣ ಬೀಳುತ್ತದೆ ಎಂದುಕೊಂಡು ಸಹಕಾರಿ ಸಂಘ ಮಾಡುವಲ್ಲಿ ಹಿಂದೇಟು ಹಾಕಿದ್ದರು.

ತಾವು ಕೂಡಾ ಶ್ರೀಮಂತರಾಗಿ ದಲಾಲಿ ಅಂಗಡಿಯ ಮಾಲೀಕರಾಗಿದ್ದ ಸಿದ್ದನಗೌಡರಿಗೆ ಗ್ರಾಮವನ್ನು ಅಭಿವೃದ್ಧಿ ಮಾಡುವ ಗ್ರಾಮದ ಎಲ್ಲರನ್ನು ಉದ್ಧರಿಸುವ ಮಹತ್ವಾಕಾಂಕ್ಷೆಯೊಂದಿಗೆ ಕಣಗಿನಹಾಳ ಗ್ರಾಮವು ಮಾದರಿಯಾಗುವ ಮೂಲಕ ನಾಡಿನ ಜನತೆಗೆ ಏನನ್ನಾದರೂ ಕೊಡಬೇಕೆಂಬ ಮಹತ್ತರವಾದ ಉದ್ದೇಶದೊಂದಿಗೆ ಶ್ರೀಮಂತರು ಬಡ್ಡಿ ರೂಪದಲ್ಲಿ ಜನರನ್ನು ಶೋಷಿಸುತ್ತಿದ್ದುದನ್ನು ತಪ್ಪಿಸುವ ಲೆಕ್ಕಾಚಾರದಲ್ಲಿ ಮೊದಲ ಸಹಕಾರಿ ಸಂಘದ ಸ್ಥಾಪನೆಗೆ ಮುಂದಾದರು. ಇಂತಹ ಬಡ್ಡಿ ವ್ಯವಹಾರದ ಕಾಲದಲ್ಲಿ ಸಂಘ ಸ್ಥಾಪಿಸಿದ ಸಿದ್ದನಗೌಡರನ್ನು ಶ್ರೀಮಂತರು ಗದಗ ನಗರಕ್ಕೆ ಬಂದಾಗ ಪರೋಕ್ಷವಾಗಿ ಸಾಕಷ್ಟು ನಿಂದಿಸುತ್ತಿದ್ದರು. ಅಲ್ಲದೆ ಬೇರೆಯವರನ್ನು ಹಚ್ಚಿ ಬೈಯಿಸುವ ಕೆಲಸವನ್ನೂ ಮಾಡಿದರಂತೆ. ಒಂದು ದಿನ ಬೈಗುಳಗಳನ್ನು ಸ್ವತಃ ಕೇಳಿದ ಸಿದ್ದನಗೌಡರ ಪತ್ನಿ ಸಕ್ರಮ್ಮನವರು 'ಯಾಕ ಬೇಕಾಗಿತ್ತು ನಿಮ್ಮ ಸಹಕಾರಿ ಸಂಘ ಮಾಡೋದು, ಹಿಂಗ ಮಂದಿ ಕಡೀಂದ ಬೈಯಿಸಿಕೊಳ್ಳಾಕನು' ಅಂತಾ ಮನನೊಂದು ಹೇಳಿದಾಗ 'ನೋಡು ನಾನು ಮಾಡಿದ ಸಹಕಾರಿ ಸಂಘದ ಸಲುವಾಗಿ ಎಷ್ಟು ಜನರು ಎಷ್ಟು ಬೈಗುಳ ಬೈತಾರಲ್ಲ ಅಷ್ಟ ಲಕ್ಷ ಜನ್ರ ಉದ್ಧಾರ ಆಕ್ಕೈತಿ', ಎಂದು ಹೇಳುವ ಮೂಲಕ ಸಿದ್ದನಗೌಡರು ತಮ್ಮ ಪತ್ನಿಗೆ ಸಮಾಧಾನಗೈದಿದ್ದರು. ಅಂದು ಪತ್ನಿಯನ್ನು ಸಮಾಧಾನ ಮಾಡಲು ಹೇಳಿದ ಸಿದ್ದನಗೌಡರ ಮಾತು ಇಂದು ಸತ್ಯವಾಗಿ ನಮ್ಮ ಕಣ್ಮುಂದಿದೆ. ಏಕೆಂದರೆ ಇಂದು ದೇಶದಲ್ಲಿ ೫ ಲಕ್ಷ ೫೦ ಸಾವಿರ ಸಹಕಾರಿ ಸಂಘಗಳಿದ್ದು ೨೦ ಕೋಟಿ ೪೦ ಲಕ್ಷ ಸದಸ್ಯರಿದ್ದಾರೆ. ಇನ್ನು ರಾಜ್ಯದಲ್ಲಿ ೩೩,೩೯೪ಳ ಸಹಕಾರಿ ಸಂಘಗಳಿದ್ದು ೨ ಲಕ್ಷ ೯ ಸಾವಿರ ಸದಸ್ಯರಿದ್ದಾರೆ. ಅಂದರೆ ಅಂದು ಸಿದ್ದನಗೌಡರನ್ನು ಎಷ್ಟು ಜನ ಬೈದಿದ್ದಾರೆಯೋ ಅವರೆಲ್ಲರ ಹರಕೆಯ ಫಲವಾಗಿ ಇಂದು ಲಕ್ಷಾಂತರ ಸಂಘಗಳ ಮೂಲಕ ಕೋಟ್ಯಾಂತರ ಜನರಿಗೆ ಸಹಕಾರಿಯಾದ ಸಹಕಾರವು ದೇಶದ ಅವಿಭಾಜ್ಯ ಅಂಗವಾಗಿ ಕಾರ್ಯಗೈಯುತ್ತಿದೆ. ಹಿಂದೆ ಹಣ ನೀಡಿ ಬೈಸಿಕೊಳ್ಳುತ್ತಿದ್ದರಂತೆ ಅಂದರೆ ಬೈಗುಳಕ್ಕೆ ಅಷ್ಟು

ಮಹತ್ವವಿದೆ ಎಂಬುದು ಸಿದ್ದನಗೌಡರು ಹೇಳಿದ ಮಾತಿನ ಮೂಲಕ ಇನ್ನಷ್ಟು ಸಾಬೀತಾಗಿದೆ.

ಪೂಜ್ಯ ಜಗದ್ಗುರು ಶ್ರೀ ಗುರುಬಸವ ಮಹಾಸ್ವಾಮಿಗಳು ಕಲಿತವರಾಗಿರಲಿಲ್ಲ. ಆದ್ದರಿಂದ ಗದಗಿನ ಕೆಲವು ಪ್ರಮುಖರು ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಕೂಡಿಕೊಂಡು ಇಂಥ ದೊಡ್ಡ ಮಠಕ್ಕೆ ಕಲಿಯದ ಗುರುಬಸವ ಸ್ವಾಮಿಗಳಿಂದ ಏನೂ ಪ್ರಗತಿ ಸಾಧ್ಯವಿಲ್ಲ. ಅದಕ್ಕಾಗಿ ಅವರನ್ನು ತೆಗೆದು ಕಾಶಿಯಿಂದ ಯಾರನ್ನಾದರೂ ಒಳ್ಳೇ ಪಂಡತಿ ಸ್ವಾಮಿಗಳನ್ನು ತಂದು ಪೀಠಕ್ಕೆ ಕೂಡಿಸಿದರಾಯಿತೆಂದು ಸಂಚು ಹೂಡಿದರು. ಇದನ್ನರಿತ ಸಿದ್ದನಗೌಡರು ನೇರವಾಗಿ ಮಠಕ್ಕೆ ಬಂದು ಸ್ವಾಮೀಜಿಯವರನ್ನು ಕಂಡು ನಾನು ನಿಮ್ಮ ಶಿಶು ಮಗ ಆಕ್ತೇನಿ ನೀವು ನನಗೆ ದೀಕ್ಷೆ ಕೊಡಬೇಕು ಅಂತ ಕೇಳಿಕೊಂಡರು. ಪೂಜ್ಯರಿಂದ ದೀಕ್ಷೆ ಪಡೆದ ನಂತರ ಗುರುಬಸವ ಜಗದ್ಗುರುಗಳನ್ನು ಬದಲಿ ಮಾಡಬೇಕು ಎಂದವರ ಮುಂದೆ ಮುದ್ದಾನು ಹೋಗಿ ದೀಕ್ಷೆ ಮಾಡಿಸಿಕೊಂಡ ಗುಂಡಗಡಗಿ ಮುಂದೆ ಮಾಡಿಕೊಂಡು ಕುಳಿತುಕೊಳ್ಳುತ್ತಿದ್ದರು. ಆಗ ಅವರು 'ನೀವು ಕುರುಬರು ನೀವು ಗುಂಡಗಡಗಿ ಹಾಕೋದಿಲ್ಲ ಅಂತಾದರಾಗ ನೀವು ಯಾಕ ಗುಂಡಗಡಗಿ ಹಾಕೀರೀ' ಅಂತಾ ಕೇಳಿದ ಕೂಡಲೇ ಸಿದ್ದನಗೌಡರು ಕುರುಬರು ಹಾಕೋದಿಲ್ಲ ಖರೇ, ಆದ್ರ ಗುರುಬಸವ ಮಹಾಸ್ವಾಮಿಗಳು ಮಹಾದಯಾಳು ಅದಾರಂತೆ ತಿಳ್ದು ಅವರ ದಯಾಳು ಗಣಕ್ಕ ಅವರ ಶಿಶುಮಗ ಆಗೇನಿ', ಎಂದು ಉತ್ತರಿಸಿ ಅವರ ತಲೆಯಲ್ಲಿ ಹುಳ ಬಿಟ್ಟು ಬರುತ್ತಿದ್ದರು. ಹೀಗೆ ಸಿದ್ದನಗೌಡರ ಮಾತು ಕೇಳಿದ ಸ್ವಾಮಿಗಳನ್ನು ಬದಲಿ ಮಾಡೋ ಜನರು ಗುರುಬಸವ ಸ್ವಾಮಿಗಳು ದಯಾಳು ಅದಾರಂತ ಕುರುಬರ ಮನುಷ್ಯಾ ದೀಕ್ಷಾ ತಗೊಂಡಾನು ಅಂದ ಮ್ಯಾಲೆ ನಾವು ಬಿಟ್ಟರ ಸರಿ ಕಾಣೋದಿಲ್ಲ. ಮತ್ತೆ ಕಲಿತವರ್‍ನ ತಂದಿರಾ ಏನ್ ಮಾಡೋದ ಐತಿ ಇವರೇ ಇರ್‍ಲಿ ಅಂತ ಗುರುಬಸವ ಸ್ವಾಮಿಗಳನ್ನು ಬದಲಿಸುವ ಯತ್ನ ನಡೆಸಿದ ವ್ಯಕ್ತಿಗಳು ಸಿದ್ದನಗೌಡರ ತಾತ್ವಿಕ ತಂತ್ರಕ್ಕೆ ಪರಿವರ್ತನೆ ಯಾದರು. ಹೀಗೆ ಯಾರಲ್ಲಿ ಏನೇನು ಶಕ್ತಿ ಇರುತ್ತದೆಂಬುದನ್ನು ತಿಳಿದುಕೊಳ್ಳುವ ಯುಕ್ತಿ ಬೇಕೇ ಹೊರತು ಮೇಲ್ನೋಟಕ್ಕೆ ಆ ವ್ಯಕ್ತಿ ಹೀಗೆ ಎಂದು ತಿಳಿದುಕೊಳ್ಳುವದು ತಪ್ಪು ಎಂಬುದನ್ನು ಈ ನಿದರ್ಶನ ಸ್ಪಷ್ಟಪಡಿಸುತ್ತದೆ.

ಆಗಿನ ಕಾಲದಲ್ಲಿ ಆಸ್ಪತ್ರೆಗಳು ಇಲ್ಲದಿರುವದರಿಂದ ಗ್ರಾಮದ ಜನತೆ ತಮ್ಮ ಆರೋಗ್ಯದ ತೊಂದರೆಗಳಿಗೆ ದೂರದ ಆಯುರ್ವೇದ ವೈದ್ಯರನ್ನು ಹುಡುಕಿಕೊಂಡು ಹೋಗ ಬೇಕಾಗಿತ್ತು. ಹೀಗಾಗಿ ಕಣಗಿನಹಾಳದ ಜನರು ತಮ್ಮ ಆರೋಗ್ಯದ ತೊಂದರೆಗಳಿಗೆ ದೂರದ ನರೇಗಲ್ಲ ಗ್ರಾಮದ ವೈದ್ಯ ಬಾಳಪ್ಪ ಎಂಬುವರ ಹತ್ತಿರಕ್ಕೆ ಎತ್ತು ಚಕ್ಕಡಿ ಕಟ್ಟಿಕೊಂಡು ಹೋಗಿ ಚಿಕಿತ್ಸೆ ಪಡೆದು ಬರುತ್ತಿದ್ದರು. ಇದನ್ನು ಕಂಡ ಸಿದ್ದನಗೌಡರ ಮನಸ್ಸಿಗೆ ತುಂಬಾ ನೋವಾಗಿ ನಮ್ಮೂರಿನ ಜನರಿಗೆ ನಮ್ಮೂರಾಗ ಚಿಕಿತ್ಸೆ ಸಿಗುವಂತಾಗಬೇಕೆಂದು ವಿಚಾರಿಸಿ ಅತ್ಯುಪಯುಕ್ತವಾದ ಆಯುರ್ವೇದ ಗ್ರಂಥ ಅಧ್ಯಯನಗೈದು ನಂತರ ನರೇಗಲ್ಲಿನ ವೈದ್ಯ ಬಾಳಪ್ಪನವರ ಹತ್ತಿರ ಹೋಗಿ ಯಾವ್ಯಾವ ರೋಗಕ್ಕೆ ಏನೇನು ಔಷಧ ಕೊಡಬೇಕೆಂದು ಮೇಲಿಂದ ಮೇಲೆ ತಿಳಿದುಕೊಂಡು ಬಂದ ಸಿದ್ದನಗೌಡರು ಗ್ರಾಮದಲ್ಲಿ ಉಚಿತ ಚಿಕಿತ್ಸೆ ಕೊಡಲಾರಂಭಿಸಿ ದರು. ನಂತರದ ದಿಗನಳಲ್ಲಿ ಕೆಲವು ರೋಗ ನಿವಾರಣೆಯಾಗ ದಿರಲು ಇನ್ನಿತರ ಕೆಲಸಕ್ಕೆ ಶಹರಕ್ಕೆ ತಾವು ಹೋದಾಗ ಅಲ್ಲಿನ ವೈದ್ಯರನ್ನು ಕಂಡು ಅವರಿಂದ ಆ ಚಿಕಿತ್ಸೆಗೆ ಬೇಕಾದ ವಸ್ತುಗಳನ್ನು ತಂದು ಆಯಾ ರೋಗದ ವ್ಯಕ್ತಿಗಳನ್ನು ಗುಣಪಡಿಸಲಾರಂಭಿಸಿದರು. ಅದೂ ಕೆಲವೊಮ್ಮೆ ಕೈಮೀರಿದಾಗ ತಮ್ಮ ಎತ್ತು ಚಕ್ಕಡಿ ಕಟ್ಟಿಕೊಂಡು ರೋಗಿಯನ್ನು ಕರೆದು ಕೊಂಡು ವೈದ್ಯ ಬಾಳಪ್ಪನ ಹತ್ತಿರ ನರೇಗಲ್ಲಿಗೆ ಹೋಗಿ ತೋರಿಸಿಕೊಂಡು ಬರುತ್ತಿದ್ದರು. ಹೀಗಾಗಿ ಊರಲ್ಲಿ ಸಿದ್ದನ ಗೌಡರು ಪ್ರಾತಃ ಸ್ಮರಣೀಯರೆನಿಸಿ ಹೃದಯ ವೈಶಾಲ್ಯವುಳ್ಳವ ರಾಗಿದ್ದರು.

'ಕೆಲಸ ಮಾಡುವವರಿಗೆ ಪ್ರೋತ್ಸಾಹ ಕೊಡಬೇಕು ಹೊರತು ಅವರನ್ನು ಅವಮಾನ ಮಾಡಬಾರದು', ಅನ್ನೋದು ಸಿದ್ದನಗೌಡರ ತತ್ವವಾಗಿತ್ತು. ಒಂದು ದಿನ ಸಿದನಗೌಡರು ವಿವಿಧ ಗಿಡಮೂಲಿಕೆಗಳನ್ನು ತಂದು ಅವುಗಳನ್ನು ಅರೆದು ಔಷಧ ಸಿದ್ದ ಮಾಡಿಕೊಳ್ಳುವುದಕ್ಕೆ ಗೆಳೆಯರೊಂದಿಗೆ ಕುಳಿತು ಗುಳಿಗಿ ಮಾಡುತ್ತಿದ್ದರು. ಈ ವೇಳೆಯಲ್ಲಿ ೭ ವರ್ಷದ ಮೊಮ್ಮಗ ಲಿಂಗನಗೌಡರು ಬಂದು ಗುಳಿಗಿ ಮಾಡಲಾರಂಭಿಸಿದರು. ಸಿದ್ದನಗೌಡ ಸ್ನೇಹಿತರು ಲಿಂಗನಗೌಡರಿಗೆ 'ಗುಳಿಗೆ ಸಣ್ಣವು ದೊಡ್ಡವು ಆಕ್ಕಾವು ಮಾಡಬ್ಯಾಡ' ಅಂತ ಬೆದರಿಸಿದರು. ಆಗ ಸಿದ್ದನಗೌಡರು 'ಅಂವಾ ಕರೀದ ಬಂಗ ಗುಳಿಗಿ ಮಾಡಕ್ಹತ್ತಾನು, ಅಂತದ್ರಾಗ ಕೆಲಸ ಮಾಡೊವರಿಗೆ ಪ್ರೋತ್ಸಾಹ ಕೊಡಬೇಕು ಹೊರತು ಅಪಮಾನ ಮಾಡೋದಿಲ್ಲ. ಸಣ್ಣವು ದೊಡ್ಡವು ಆದ್ರ ಏನಾತು ಸಣ್ಣವಾದ್ರ ಸಣ್ಣವರಿಗೆ ಕೊಡಾಕ ಬರತಾವು' ಅಂತ ಮೊಮ್ಮಗನ ಕೆಲಸ ಮಾಡುವುದಕ್ಕೆ ಹುರಿದುಂಬಿಸಿದರು. ಎಲ್ಲರನ್ನೂ ಸಮನಾಗಿ ನೋಡುವ ದೊಡ್ಡ ವ್ಯಕ್ತಿತ್ವದ ದೊಡ್ಡ ವ್ಯಕ್ತಿಯಾಗಿ ಕೆಲಸ ಮಾಡುವವರನ್ನು ಪ್ರೋತ್ಸಾಹಿಸುತ್ತಿದ್ದರು.

ತಮ್ಮ ಕಾಯಕ ಜೀವನದ ಜೊತೆಗೆ ಬೇರೆಯವರಿಗೂ ಕಾಯಕ ಸಿದ್ಧಾಂತವನ್ನು ಕಲಿಸಿದ್ದರು.

ಆಗಾಗ ಊರಿಗೆ ಬರುತ್ತಿದ್ದ ಅಲ್ಲಿಖಾನಪ್ಪ ಎಂಬುವವನು ಗಾದಿ ಮತ್ತು ತಲೆದಿಂಬುಗಳನ್ನು ಹಾಕುವ ಕಾಯಕದ ವ್ಯಕ್ತಿಯನ್ನು ಕರೆದು ಏನಪ್ಪಾ ಹೆಂಗ ನಡದೈತಿ ನಿನ್ನ ಉದ್ಯೋಗವೆಂದು ವಿಚಾರಿಸಲು ಅದಕ್ಕೆ ಅವನು "ಏನ್ ಬಿಡ್ರಿ ಗೌಡ್ರ ಮದುವೆ ಇದ್ದಾಗ ಮಾತ್ರ ಕೆಲ್ಸ ಇರತೈತಿ ಉಳಿದ ದಿನದಾಗ ಊಟಕ್ಕೂ ತ್ರಾಸ ಐತ್ರಿ" ಎನ್ನಲು ಆಗ ಗೌಡರು "ನೋಡು ಅಲ್ಲಿಖಾನಪ್ಪ ಹಂಜಿ ಮಾಡು" ಎಂದು ಹೇಳಿದರು. ಗೌಡ ಮಾರ್ಗದರ್ಶನದಂತೆ ಅಳ್ಳಿ ತೆಗೆದುಕೊಂಡು ಹಂಜಿ ಮಾಡಲಾರಂಭಿಸಿದನು. ಈ ಹಂಜಿ ಉಪಯೋಗದ ಬಗ್ಗೆ ತಿಳಿಸಿದ ಗೌಡರು ಚರಕಾ ಖರೀದಿಸಿದರು. ಓಣಿಯಲ್ಲಿದ್ದ ಮಹಿಳೆಯರಿಗೆ 'ನೀವು ಊಟ ಆದ ಮ್ಯಾಲೆ ಚರಕ ನೂಲರಿ ನೂಲುದು ಆಕ್ಕೈತಿ ನಿಮ್ಮ ಹರಟೆ ಮಾತು ಸಾಗತಾವು ಅಲ್ಲದೇ ಇದರಿಂದ ಮನೆತನಕ ಆರ್ಥಿಕ ಸಹಾಯವೂ ಸಿಗತೈತಿ ಎಂದು ನುಡಿದರು. ಮಹಿಳೆಯರು ನಮಗ ಜೋಲೋತಂಗ ನೂಲಾಕ ಬರೋದಿಲ್ಲ ಎನ್ನಲು ಹೆಂಗೆ ಬೇಕಾದ್ರೂ ನೂಲರೀ ನಾನೇನು ಬಟ್ಟೆ ಮಾಡಸಬೇಕಂತಿಲ್ಲ. ಗುಡಾರ ಮಾಡಸತೇನಿ ಅತೀ ದಪ್ಪಾತು ಅಂದ್ರ ಹಗ್ಗ ಮಾಡಸತೇನಿ ನೀವು ಕೆಲಸಾ ಮಾಡ್ರಿ ಅಂತ ಸಿದ್ದನಗೌಡರು ಅಲ್ಲಿಖಾನಪ್ಪಗ ಹೊಸ ಉದ್ಯೋಗ ದೊರಕಿಸಿಕೊಟ್ಟು ಓಣಿಯೊಳಗಿನ ಹೆಣ್ಮಕ್ಕಳಿಗೆ ಉದ್ಯೋಗದಲ್ಲಿ ಅಭಿರುಚಿ ಬೆಳಸಿದರು.

ಮನೆಯ ಉಪಯೋಗಕ್ಕೆ ಸಿದ್ದನಗೌಡರ ಧರ್ಮಪತ್ನಿ ಸಕ್ರಮ್ಮನವರು ಗಾಣದಿಂದ ಎಣ್ಣೆ ತರುತ್ತಿದ್ದರು. ಇದನ್ನು ಕಂಡ ಸಿದ್ದನಗೌಡರು ಪತ್ನಿಗೆ "ಗಾಣದಿಂದ ಎಣ್ಣೆ ತರುವುದು ಬೇಡ ಗಾಣದಿಂದ ತರುವ ಎಣ್ಣೆ ಅಷ್ಟು ಶುದ್ಧವಾಗಿ ಇರುವುದಿಲ್ಲ ಅದು ಆರೋಗ್ಯಕ್ಕೆ ಅಷ್ಟು ಒಳ್ಳೆಯದಲ್ಲ" ಮನೆಯಲ್ಲಿಯೇ ಕುಸುಬಿ ಎಣ್ಣೆ ತಯಾರಿಸಲು ತಿಳಿಸಿದರು. 'ಮನೆಯಲ್ಲಿ ಬೆಳೆಯುವ ಕುಸುಬಿಯನ್ನು ಹುರಿದು ಮನೆಯಲ್ಲಿಯೇ ಎಣ್ಣೆ ತಯಾರಿಸುವುದರಿಂದ ಶುದ್ಧವಾದ, ಆರೋಗ್ಯಕ್ಕೆ ಉತ್ತಮವಾದ ಎಣ್ಣೆ ಸಿಗುತ್ತದೆಯಲ್ಲದೆ ತುಪ್ಪದಂತಹ ಎಣ್ಣೆ ಯಾವ ಖರ್ಚು ಇಲ್ಲದೆ ಮನೆಯಲ್ಲಿಯೇ ಸಿಗುತ್ತದೆ ಎಂದು ಹೇಳಿ ಸಕ್ರಮ್ಮನವರಿಂದ ಮನೆಯಲ್ಲಿಯೇ ಎಣ್ಣೆಯನ್ನು ತಯಾರಿಸಲು ಪ್ರೇರೇಪಿಸಿದರು. ನಂತರದ ದಿನಗಳಲ್ಲಿ ಓಣಿಯಲ್ಲಿನ ಎಲ್ಲ ಮನೆಗಳಲ್ಲಿನ ಸ್ತ್ರೀಯರಿಗೆ ತಿಳಿಹೇಳಿದ ಸಿದ್ದನಗೌಡರು ನೀವು ಮನೆಯೊಳ್ಗೆ ಎಣ್ಣೆ ತಯಾರು ಮಾಡ್ರಿ ಇದರಿಂದ ಗಾಣದಾಗಿಂದ ತರೋ ಎಣ್ಣೆ ರೊಕ್ಕ ಉಳಿತಾವು ಮತ್ತ ಮನಿಯೊಳ್ಗ ಶುದ್ಧವಾದ ಎಣ್ಣೆ ತಯಾರು ಆದಂಗೂ ಅಕ್ಕೈತಿ ಆರೋಗ್ಯಾನೂ ಶುದ್ಧವಾಗಿ ಇರತೈತಿ ಅಂತ ತಿಳಿಸಿ ಎಲ್ಲರಿಂದಲೂ ಮನೆಯಲ್ಲಿಯೇ ಎಣ್ಣೆ ಮಾಡಿಸುವುದಕ್ಕೆ ಆರಂಭಿಸಿದರು.

ಗ್ರಾಮದಲ್ಲಿ ಬರಗಾಲ ಕಾಣಿಸುವ ಸ್ಥಿತಿಗತಿ ಅರಿತ ಸಿದ್ದನಗೌಡರು ಗ್ರಾಮದ ಸುತ್ತಮುತ್ತಲಿನ ಶ್ರೀಮಂತರನ್ನು ಒಂದೆಡೆ ಸೇರಿಸಿ ನೋಡ್ರಿ ಏನಾದರೂ ಕಾಮಗಾರಿ ಮಾಡಿಸೋಣ ದುಡಿಯುವ ಕೈಗಳಿಗೆ ಕೆಲಸ ಕೊಡೋಣ ಯಾಕಂದ್ರ ಬರಗಾಲದಲ್ಲಿ ಅವರಿಗೂ ಕೆಲಸವಿಲ್ಲದೇ ಹೊಟ್ಟೆ ತುಂಬಿಸಿಕೊಳ್ಳೋದು ಕಷ್ಟ ಅಕ್ಕೈತಿ, ಇಲ್ಲದಿದ್ರ ಅವರು ಹಸಿವಿಗಾಗಿ ಮಾಡು ಕೆಲಸಕ್ಕೆ ಮುಂದಾಗ್ತಾರ. ಅವರು ಕಳ್ಳತನಕ್ಕ ಮುಂದಾದ್ರ ಅವರು ಎಷ್ಟು ತಪ್ಪುಗಾರರೊ ಅಷ್ಟೇ ತಪ್ಪು ನಮ್ಮಿಂದಾದಂತಾಗ್ತದೆ" ಎಂದು ತಿಳಿಹೇಳುತ್ತಿದ್ದರು. ನಾವು ರೊಕ್ಕ ಇದ್ದವರು ರೊಕ್ಕ ಇಟಗೊಂಡು ಕುಂತ್ರ ಏನೂ ಆಗೋದಿಲ್ಲ. ಇದ್ದ ರೊಕ್ಕ ಖರ್ಚು ಮಾಡಿ ಕೆಲಸ ಕೊಟ್ರ ದುಡಿಯುವವರಿಗೆ ಅನ್ನ ಹಾಕಿದಂಗ ಆಕ್ಕೈತಿ ಅಂತ ಹೇಳಿ ಎಲ್ಲ ಶ್ರೀಮಂತರ ಮನವೊಲಿಸಿ ನಟ್ಟು ಕಡಿಯೋದು, ಕರ್ಕಿ ತಗಿಯೋದು, ಬದುವು ಹಾಕೋದರಿಂದ ಹಿಡಿದು ಉಳಿದೆಲ್ಲ ಅವಶ್ಯವಿದ್ದ ಕೆಲಸ ಮಾಡಿಸುತ್ತಿದ್ದರು.

ದೇವಿ ಹೊಸೂರಿನಲ್ಲಿದ್ದ ಒಕ್ಕಲುತನ ಶಾಲೆಗೆ ತಮ್ಮ ಮಗನೊಂದಿಗೆ ಬಡರೈತನ ಮಗನನ್ನು ಕಳಿಸಿದ್ದರು. ಸಿದ್ದನಗೌಡರು ತಡಿಯಲ್ಲಪ್ಪಗ ಸಾಲಿ ಕಲಿಸಿದ್ರು ಹೊಲದಾಗ ದುಡಿಯೋದ ತಪ್ಪಲಿಲ್ಲ ಎಂದು ಗ್ರಾಮೀಣರು ನುಡಿದಾಗ ಯಲ್ಲಪ್ಪನನ್ನು ತಮ್ಮ ವಖಾರದಲ್ಲಿ ಕಾರಕೂನ ಕೆಲಸಕ್ಕೆ ನೇಮಿಸಿದರು. ಅಲ್ಲದೆ ಅಶಕ್ತನೂ ಜಾಣನೂ ಆದ ತಳವಾರ ಹೆಜ್ಜಿ ಫಕೀರಪ್ಪನಿಗೆ ತಿಳಿಹೇಳಿ ತಮ್ಮ ಹೊಲದ ಕೆಲಸಗಳ ಉಸ್ತುವಾರಿ ವಹಿಸಿದ್ದರಿಂದ ಮನೆ ಮಗನಿಗಿಂತ ಹೆಚ್ಚಾಗಿ ಪ್ರಾಮಾಣಿಕವಾಗಿ ಅವನು ದುಡಿಯುವಂತಾಯಿತು. ನಿರುದ್ಯೋಗಿಯಾಗಿ ಅನ್ನಕ್ಕೆ ಗತಿಯಿಲ್ಲದಂತಹ ಮಾದರ ಭೀಮಪ್ಪನನ್ನು ಕರೆದು ಜಾತಿ ಭೇದವೆಣಿಸದೆ ತಮ್ಮ ಮನೆಯಲ್ಲಿ ಸಂಬಳದ ಕೆಲಸಕ್ಕೆ ಸೇರಿಸಿಕೊಂಡು ಅನ್ನದಾತರೆನಿಸಿದರು. ತೊಡಲು ಅಂಗಿಯಿಲ್ಲದ ಬರೀ ಮೈಯಲ್ಲಿದ್ದ ತಡಿ ತಿರಕಪ್ಪನಿಗೆ ತಾವು ತೊಟ್ಟಿರುವ ಅಂಗಿಯನ್ನೇ ಅವನಿಗೆ ತೊಡಿಸಿ ಬರೀ ಮೈಯಿಂದ ಮನೆಗೆ ಬಂದ ಉದಾರಿಗಳು ಸಿದ್ದನಗೌಡರು. ಊರಿನ ಜನ ಉಪವಾಸವಿರುವುದನ್ನರಿತು ಅವರನ್ನು ಕರೆಯಿಸಿ ದವಸ ಧಾನ್ಯ ಕೊಟ್ಟು ಕಳಿಸಲಾರಂಭಿಸಿದಾಗ 'ಇದ್ನ ಹೆಂಗ್ ತಿರ್ರೋದ್ರಿ ಎಪ್ಪ' ಅಂತ ಬಡವರು ಕೇಳಿದಾಗ 'ನಿಮ್ಗ ಯಾವಾಗ ಆಕ್ಕೈತಿ ಆವಾಗ ನಮ್ಮ ಹೊಲದಾಗ ಕೆಲಸ ಮಾಡಿ ಮುಚ್ಚಿಸಹೋಗ್ರಿ' ಎಂದು ಹೇಳಿಕಳಿಸುತ್ತಿದ್ದ ಸಿದ್ದನಗೌಡರು ಮನೆಗೆದ್ದು ಮಾರುಗೆಲ್ಲು ಎಂಬ ತತ್ವ ಪರಿಪಾಲಕರಾಗಿದ್ದರಲ್ಲದೆ ಗ್ರಾಮೋದ್ಧಾರವೇ ದೇಶೋದ್ಧಾರ ವೆಂಬ ತತ್ವಾರಾಧಕರಾಗಿದ್ದರು.

ಈ ಆದರ್ಶ ಮಹಾನುಭಾವ ಶ್ರೀ ಸಿದ್ದನಗೌಡರು ಕಣಗಿನಹಾಳ ಗ್ರಾಮದ ಕುರುಬ ಜನಾಂಗಕ್ಕೆ ಸೇರಿದ ಗೌಡರ ಮನೆತನದ ಶ್ರೀ ಸಣ್ಣರಾಮೇಗೌಡ ಮತ್ತು ಶ್ರೀಮತಿ ನೀಲಮ್ಮನವರ ಸುಪುತ್ರರು. ೨೫-೫-೧೮೪೫ನೇ ಗುರುವಾರ ದಿವಸ ಕಣಗಿನಹಾಳದಲ್ಲಿಯೇ ಜನಿಸಿದರು. ಗೌಡಕಿ ಮನೆತನದಲ್ಲಿ ಹುಟ್ಟಿದ ಸಿದ್ದನಗೌಡರು ಸುಖದಸುಪ್ಪತ್ತಿಗೆಯಲ್ಲಿ ಸಮೃದ್ಧ ಜೀವನ ಸಾಗಿಸಿದರು. ಕಣಗಿನಹಾಳ ಗ್ರಾಮದಲ್ಲಿ ಪ್ರಾಥಮಿಕ ಶಿಕ್ಷಣ ಪೂರೈಸಿದ ಶ್ರೀಯುತರು ಏಕೈಕ ಸುಪುತ್ರ ರಾಗಿದ್ದರಿಂದ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಮುಂದುವರೆಯದೇ ಸುಮಾರು ೪೦೦ ಎಕರೆ ಭೂಮಿಯನ್ನು ಹೊಂದಿರುವುದ ರಿಂದ ಭೂಸಾಗುವಳಿ ಕಾಯಕದಲ್ಲಿ ನಿರತರಾಗಿ ಕೃಷಿಯಲ್ಲಿ ಖುಷಿ ಕಂಡುಂಡ ದಿಟ್ಟ ಸ್ವಭಾವದ ಶ್ರೀಯುತರು ಜಾಣರೂ ಪರೋಪಕಾರಿಗಳೂ ಆಗಿದ್ದರು. ಇವೆಲ್ಲವುಗಳೊಂದಿಗೆ ವಂಶಪಾರಂಪರ್ಯವಾಗಿ ಬಂದ ಗೌಡಕಿಯ ಅಧಿಕಾರವಿತ್ತು. ಅದರೊಂದಿಗೆ ಗ್ರಮದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನರ ಸೇವೆ ಮಾಡುತ್ತ ಊರ ಜನರ ಕಣ್ಮಣಿಯಾಗಿದ್ದರು.

ಭಾರತದಲ್ಲಿಯೇ ಸಹಕಾರಿ ಆಂದೋಲನವನ್ನು ಕಾಯ್ದೆ ಪ್ರಕಾರ ೨೫-೩-೧೯೦೪ರಂದು ಆಗಿನ ಮುಂಬೈ ಪ್ರೆಸಿಡೆನ್ಸಿ ಶಾಸನ ಸಭೆಯಲ್ಲಿ ಈ ಕಾಯ್ದೆಗೆ ಗೊತ್ತುವಳಿಯನ್ನು ಸ್ವೀಕರಿಸಿ ಅನುಮತಿಯನ್ನು ಕೊಟ್ಟಿತಲ್ಲದೇ ಭಾರತದ ಪ್ರಪ್ರಥಮ ಕೋ-ಆಪರೇಟಿವ್ ರಿಜಿಸ್ಟ್ರಾರ್ ಎಂದು ಸರ್ ಜೆ. ಮೆಕ್ಯಾನಿಯಲ್ ಅವರನ್ನು ನೇಮಿಸಿತು. ಹೀಗೆ ನೇಮಕೊಂಡ ನಂತರ ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸಂಘಟಿಸಲು ಭಾರತದ ತುಂಬೆಲ್ಲ ಪೂರ್ಣ ಪ್ರವಾಸ ಕೈಗೊಂಡು ಇಂತಹ ಸಂಘಗಳನ್ನು ಸ್ಥಾಪಿಸಲು ಮನವಿ ಮಾಡಿಕೊಂಡರು. ಜನರನ್ನು ಹುರಿದುಂಬಿಸಿದರು. ಆದರೆ ಜನರ ಸಹಕಾರ ಮೆಕಾನಿಯಲ್ ರಿಗೆ ಸಿಗಲಿಲ್ಲ. ಏಕೆಂದರೆ ಬ್ರಿಟೀಷರು ಹೀಗೆ ಪ್ರಯತ್ನಿಸುತ್ತಿರು ವಾಗ ಇದರಲ್ಲಿ ಅವರ ಕುಯುಕ್ತಿಯುತ ಚಾಣಾಕ್ಷತನ ವೇನಾದರೂ ಇರಬೇಕೆಂದು ಭಯಭೀತರಾದ ಜನ ಹಿಂಜರಿದರು. ಆದ್ದರಿಂದ ಅವರ ಕನಸು ನನಸಾಗಲಿಲ್ಲ. ಆದರೆ ಬ್ರಿಟಿಷರು ಹಠವಾದಿಗಳು, ಹಿಡಿದ ಕೆಲಸ ಮಾಡುವುದರಲ್ಲಿ ನಿಸ್ಸೀಮರು ಹೀಗಾಗಿ ಸೂರ್ಯ ಮುಳುಗದ ಸಾಮ್ರಾಜ್ಯವನ್ನು ಅವರು ಸ್ಥಾಪಿಸಿದ್ದರು.

ಈ ಚಿಂತನೆಯಲ್ಲಿ ಸರ್ ಜೆ. ಮೆಕ್ಯಾನಿಯಲ್‌ರವರು ಆಂಗ್ಲ ವ್ಯಕ್ತಿಯಾಗಿದ್ದರೂ ಕೂಡಾ ತಮ್ಮ ನಿಯಮದ ಪ್ರಕಾರ ಈ ಪ್ರಯತ್ನವನ್ನು ಕೈಬಿಡದೇ ಆಗಿನ ಮೈಸೂರು ರಾಜ್ಯದ ಅದರಲ್ಲಿಯೂ ಉತ್ತರ ಮುಂಬೈ ಪ್ರಾಂತದ ಇಂಗ್ರೇಜಿ ಸ್ಥಳಕ್ಕೆ ಕಾಲಿಟ್ಟರು. ಅಲ್ಲದೆ ಸರ್ ಜೆ. ಮೆಕ್ಯಾನಿಯುಲ್‌ರು ಧಾರವಾಡ ಜಿಲ್ಲೆಯ ಆ್ಯಕ್ಟಿಂಗ್ ಕಲರೆಕ್ಟರ್ ಹಾಗೂ ಕೋ-ಆಪರೇಟಿವ್ ರಿಜಿಸ್ಟ್ರಾರ್ ಕೂಡಾ ಇದ್ದಾಗ ಈ ಗ್ರಾಮದ ಶ್ರೀ ಸಿದ್ದನಗೌಡರು ಈ ಅಧಿಕಾರಿಯನ್ನು ಸಾರ್ವಜನಿಕ ಕೆಲಸದ ನಿಮಿತ್ತ ಸಂಪರ್ಕಿಸಿದರು. ಆ ವೇಳೆಯಲ್ಲಿ ಶ್ರೀ ಸಿದ್ದನಗೌಡರು ಮತ್ತು ಸರ್. ಜೆ. ಮೆಕ್ಯಾನಿಯಲ್‌ರ ನಡುವಣ ಸಂಬಂಧ ತೀರಾ ಸನಿಹವಾದಾಗ ತಮ್ಮಿಂದ ಈಡೇರಿಸಲಾಗದ ಪ್ರಯತ್ನದ ವಿವರಣೆಯನ್ನು ಶ್ರೀ ಸಿದ್ದನಗೌಡರೊಂದಿಗೆ ಪ್ರಸ್ತಾಪಿಸಿದರು. ಆಗಿನ ಕಾಲದಲ್ಲಿ ಶ್ರೀ ಸಿದ್ದನಗೌಡರು ಈ ವಿಷಯದ ಪ್ರಯೋಜನವನ್ನು ಅರ್ಥೈಸಿಕೊಂಡು ಇಡೀ ರೈತರಿಗೆ, ಜನರಿಗೆ ಇದರಿಂದಾಗುವ ಅನುಕೂಲತೆಗಳನ್ನು ಅರಿತುಕೊಂಡು ಈ ವಿಷಯದ ಬಗ್ಗೆ ಶ್ರೀ ಸಿದ್ದನಗೌಡರು ಕೃಷಿ ಪತ್ತಿನ ಸಹಕಾರ ಸಂಘಗಳನ್ನು ಸ್ಥಾಪಿಸುವ ಬಗ್ಗೆ ಪ್ರಸ್ತಾಪಿಸುವ ಮನೆಯನ್ನು ಸರ. ಜೆ. ಮೆಕ್ಯಾನಿಯಲ್‌ರವರ ವಿನಂತಿಯ ಮೇರೆಗೆ ಆ ಕಾರ್ಯವನ್ನು ತಾನು ಕಣಗಿನಹಾಳ ಗ್ರಾಮದ ಹಿರಿಯರೊಡ ಗೂಡಿ ಮಾಡುವುದಾಗಿ ಆಶ್ವಾಸನೆ ಕೊಟ್ಟು ಧಾರವಾಡದಿಂದ ಕಣಗಿನಹಾಳಕ್ಕೆ ಮರಳಿದ ಸಿದ್ದನಗೌಡರು ಊರಿನ ಪ್ರಮುಖ ಹಿರಿಯರನ್ನು ಕೂಡಿಸಿಕೊಂಡು ಸಭೆ ಕರೆದ ಐತಿಹಾಸಿಕ ಪ್ರಸಿದ್ಧವಾದ ಕೃಷಿ ಪತ್ತಿನ ಸಹಕಾರಿ ಸಂಘವನ್ನು ಕಣಗಿನ ಹಾಳದಲ್ಲಿ ಸ್ಥಾಪಿಸುವ ನಿರ್ಧಾರವನ್ನು ತೆಗೆದುಕೊಂಡರು.

ಊರಿನ ಪ್ರಮುಖರೆನಿಸಿದ ೧೨ ಜನರಿಂದ ೨ ಸಾವಿರ ರೂಪಾಯಿಗಳನ್ನು ಪ್ರಾಥಮಿಕ ಶೇರು ಅಥವಾ ಠೇವು ಅಂತಾ ಸಂಗ್ರಹಿಸಿ ಸಂಘದ ಸ್ಥಾಪನೆಯನ್ನು ಮಾಡಿಕೊಡಲು ಸರ್ ಜೆ. ಮೆಕ್ಯಾನಿಯಲ್‌ರವರಿಗೆ ಕೇಳಿಕೊಂಡರು.

ಈ ಮಹತ್ವದಾಯಕ ಕಾರ್ಯಕ್ಕೆ ಹೆಜ್ಜೆ ಇಟ್ಟ ಶ್ರೀ ಸಿದ್ದನಗೌಡರು ಅದರ ಜೊತೆಗೆ ಊರಿನ ಪ್ರಮುಖ ಕೆಲವು ಬೇಡಿಕೆಗಳ ಬಗ್ಗೆಯೂ ಅವರು ಸರ್. ಜೆ. ಮೆಕ್ಯಾನಿಯಲ್‌ರ ಜೊತೆ ಕರಾರುಗಳನ್ನು ಮಾಡಿಕೊಂಡರು. ಅವುಗಳೆಂದರೆ ಗ್ರಾಮದ ಜನತೆಗೆ ಕುಡಿಯುವ ನೀರಿನ ತೊಂದರೆ ಹಾಗೂ ಕಣಗಿನಹಾಳ ಗ್ರಾಮದ ಪಕ್ಕದಲ್ಲಿಯೇ ಗದಗ-ಗುಂತಕಲ್ ರೇಲ್ವೆ ಮಾರ್ಗ ಹಾಯ್ದು ಹೋಗಿದ್ದು ಕಣಗಿನಹಾಳ ಗ್ರಾಮಕ್ಕೆ ರೇಲ್ವೆ ಸ್ಟೇಶನ್ ಬೇಕೆಂದು ಬೇಡಿಕೆ ಮುಂದಿಟ್ಟರು. ಆ ಪ್ರಕಾರವಾಗಿ ಮೆಕ್ಯಾನಿಯಲ್‌ರವರು ಧಾರವಾಡದಿಂದ ಗದಗಕ್ಕೆ ಬಂದರು. ಆದರೆ ಅಂದಿನ ದಿನಮಾನದಲ್ಲಿ ಗದಗದಿಂದ ಕಣಗಿನಹಾಳಕ್ಕೆ ಬರಲು ಯಾವುದೇ ವಾಹನ ಸೌಕರ್ಯ ವಿಲ್ಲದ್ದರಿಂದ ಆಗಿನ ಕಾಲದ ಗದಗನ ಶ್ರೀಮಂತರಾದ ಶ್ರೀ ರಾವ್‌ಸಾಹೇಬ ಮಲ್ಲೇಶಪ್ಪ ಮಾನ್ವಿಯವರ ಕುದುರೆ ಬಂಡಿಯಲ್ಲಿ (ಸಾರೋಟ) ಕಣಗಿನಹಾಳ ಗ್ರಾಮಕ್ಕೆ ಬಂದರು.

ಶ್ರೀ ಸಿದ್ದನಗೌಡರ ಪ್ರಯತ್ನದ ಫಲವಾಗಿ ಅದೇ ದಿವಸ ಅಂದರೆ ದಿನಾಂಕ : ೬-೦೫-೧೯೦೫ನೇ ಶನಿವಾರದಂದು

ಬಾವಿ ತೋಡುವ ಗುದ್ದಲಿ ಪೂಜೆ ನೆರವೇರಿಸಿ ಅದೇ ದಿವಸ ರೇಲ್ವೆ ನಿಲ್ದಾಣದ ಸ್ಥಾಪನೆಯನ್ನು ಶ್ರೀ ಸಿದ್ದನಗೌಡರ ಜಮೀನಿನಲ್ಲಿಯೇ ಉದ್ಘಾಟಿಸಿದರು. ಇಂದು ಅವರು ಕಟ್ಟಿಸಿದ ಬಾವಿ ಅಜರಾಮರವಾಗಿ ಭವ್ಯ ಕಟ್ಟಡದಿಂದ ಊರಿನ ಜನತೆಗೆ ಸದಾ ಕುಡಿಯುವ ನೀರನ್ನು ಒದಗಿಸುತ್ತಲಿದೆ. ರೈಲ್ವೆ ಸ್ಟೇಶನ್ ಪ್ರಸಿದ್ಧಿಯನ್ನು ಪಡೆದು ಜನತೆಯ ಜೀವಾಳವಾಗಿದೆ. ಈ ಎರಡು ಕಾರ್ಯಗಳನ್ನು ಪೂರೈಸಿ ಅಂದು ಊರಿನಲ್ಲಿಯೇ ವಾಸ್ತವ್ಯ ಹೂಡಿ ಸಿದ್ದನಗೌಡರು ಮತ್ತು ಅವರ ಸಂಗಡಿಗರ ಜೊತೆಗೆ ಊರಿನ ಬಗ್ಗೆ ಚರ್ಚಿಸಿ ಕಣಗಿನಹಾಳ ಜನರ ಒಗ್ಗೂಡಿಕೆ ಮತ್ತು ಉತ್ಸಾಹ ಕಂಡು ಮೆಕ್ಯಾನಿಯಲ್‌ರವರು ದಿನಾಂಕ : ೮-೫-೧೯೦೫ನೇ ಸೋಮವಾರ ಮುಂಜಾನೆ ೯-೫ ಗಂಟೆಗೆ ಐತಿಹಾಸಿಕ ದಾಖಲೆಯುಳ್ಳ ಕಣಗಿನಹಾಳ ಕೃಷಿ ಪತ್ತಿನ ಸಹಕಾರಿ ಸಂಘವನ್ನು ಭಾರತದಲ್ಲಿಯೇ ಪ್ರಪ್ರಥಮವಾಗಿ ನೊಂದಾಯಿಸಿಕೊಟ್ಟರು.

ಈ ಸಂಘದ ಪ್ರಪ್ರಥಮ ಸಂಸ್ಥಾಪಕ ಅಧ್ಯಕ್ಷರೆಂದು ಶ್ರೀ ಸಿದ್ದನಗೌಡ ಪಾಟೀಲರನ್ನು ನೇಮಿಸಲಾಯಿತು. ೧೨ ಜನ ಸದಸ್ಯರಾಗಿ ಸಂಘವು ಕಾರ್ಯಾರಂಭಿಸಿತು. ಈ ಸಮಯದಲ್ಲಿ ಸಂಘದ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸಲು ಶ್ರೀ ಅಡಿವೆಪ್ಪ ತಿಮ್ಮಪ್ಪ ಕುರಟ್ಟಿಕರ್ ಮುಖ್ಯೋಪಾಧ್ಯಾಯರನ್ನು ವಿನಂತಿಸಿಕೊಂಡಾಗ ಅವರು ಅನಿವಾರ್ಯ ಕಾರಣಗಳಿಂದ ಈ ಹುದ್ದೆ ನಿಭಾಯಿಸಲು ನಿರಾಕರಿಸಿದರು. ಆಗ ಸಂಸ್ಥಾಪಕ ಅಧ್ಯಕ್ಷರಾದ ಶ್ರೀ ಸಿದ್ದನಗೌಡರೇ ಸ್ವತಃ ಸಂಘದ ಕಾರ್ಯದರ್ಶಿಯ ಕಾರ್ಯವನ್ನು ಸಹ ನಿರ್ವಹಿಸಿ ಸಂಘದ ಸಂಸ್ಥಾಪಕರು ಪ್ರಥಮ ಅಧ್ಯಕ್ಷರು ಹಾಗೂ ಪ್ರಥಮ ಕಾರ್ಯದರ್ಶಿಗಳು ಎಂಬ ಹಿರಿಮೆಗೆ ಪಾತ್ರರಾದರು.

ಸಂಘವು ಪ್ರಪ್ರಥಮವಾಗಿ ಸರ್ವ ಸದಸ್ರಯ ಸಭೆಯನ್ನು ದಿನಾಂಕ : ೧೭-೫-೧೯೦೫ರಲ್ಲಿ ೧೨ ಜನ ಸದಸ್ಯರೊಂದಿಗೆ ಪುನಃ ೧೯ ಜನರನ್ನು ಸದಸ್ಯರನ್ನಾಗಿಸಿಕೊಂಡು ನಂತರ ३೧ಕ್ಕೇರಿದ ಸಂಖ್ಯೆಯು ಅಲ್ಲಿಂದ ಇಲ್ಲಿಯವರೆಗೆ ಅನೇಕ ಪ್ರಗತಿಪರ ಹಿರಿಯ ರೈತರನ್ನು ಸದಸ್ಯರನ್ನಾಗಿಸಿಕೊಂಡು ಬೆಳೆಯುತ್ತಲಿರುವ ಈ ಸಂಘವು ಈಗ ಸಹಸ್ರ ಸದಸ್ಯರನ್ನೊಳಗೊಂಡಿದೆ.

ಶ್ರೀ ಸಿದ್ದನಗೌಡರು ಪ್ರತಿಯೊಬ್ಬ ಅಧ್ಯಕ್ಷರ ಹೆಗಲಿಗೆ ಹೆಗಲು ಕೊಟ್ಟು ಸಂಘವನ್ನು ಪ್ರಗತಿ ಪಥದತ್ತ ನಡೆಯಿಸಿಕೊಂಡು ಬಂದರು. ಕಣಗಿನಹಾಳ ರೈತರ ಶೇಲ್ಕೆ ಸಹಕಾರ ಸಂಘವು ಆಗ ೨ ಸಾವಿರ ರೂ.ಗಳ ಶೇರು ಮೊತ್ತದಿಂದ ಪ್ರಾರಂಭವಾಗಿ ३೧-३-೨೦೦೪ರ ವರೆಗೆ ३,೦೬,३೫, ೫೪೭.೫೧ ಜಮಾ ಖರ್ಚನ್ನು ಹೊಂದಿರುತ್ತದೆ. ಇದು ಬ್ಯಾಂಕಿನ ಅಭಿವೃದ್ಧಿಯನ್ನು ತೋರಿಸುತ್ತದೆ.

ಸಹಕಾರಿ ಆಂದೋಲನದ ಸಂಸ್ಥಾಪಕರಾದ ಶ್ರೀ ಸಿದ್ದನಗೌಡರು ತಮ್ಮ ಜೀವಿತಾವಧಿಯವರೆಗೂ ಸಹಕಾರಕ್ಕೆ ತಮ್ಮ ಮುಕ್ತ ಅಭಯಹಸ್ತವನ್ನು ಚಾಚಿ ಅಮೂಲ್ಯ ಸೇವೆಯನ್ನು ಭಾರತದ ರೈತರಿಗೆ ಒದಗಿಸಿಕೊಟ್ಟು ೧೭-೭-೧೯३३ ಗುರುವಾರದಂದು ಕೈಲಾಸವಾಸಿಯಾರು.

ಈ ಸಂಘದ ವ್ಯವಹಾರವು ಸಾಂಪ್ರದಾಯಿಕವಾಗಿ ಹಲವಾರು ಉದ್ದೇಶಗಳಿಂದ ಕೂಡಿದ್ದು ದಿನಾಂಕ : ೮-೫-೧೯೫೪ರಂದು ಸಹಕಾರ ಇಲಾಖೆಯ ಆದೇಶದ ಮೇರೆಗೆ ಕಣಗಿನಹಾಳ ದೊಡ್ಡ ಪ್ರಮಾಣದ ಪ್ರಾಥಮಿಕ ಪತ್ತಿನ ವ್ಯವಸಾಯ ಸೇವಾ ಸಹಕಾರಿ ಸಂಘ ನಿಯಮಿತ ಎಂದು ತನ್ನ ಪೋಟ್ ನಿಯಮವನ್ನು ಬದಲಾವಣೆ ಮಾಡಿಕೊಂಡಿತು. ಅಂದಿನಿಂದ ಸಂಘವು ರೈತ ಸದಸ್ಯರಿಗೆ ವಿವಿಧ ನಿಯಮವನ್ನು ಬದಲಾವಣೆ ಮಾಡಿಕೊಂಡಿತು. ಅಂದಿನಿಂದ ಸಂಘವು ರೈತ ಸದಸ್ಯರಿಗೆ ವಿವಿಧ ಪ್ರಕಾರದ ಸಾಲಗಳನ್ನು ಒದಿಸುತ್ತಾ ಬಂದಿದೆ. ಸಂಘದ ಬಂಡವಾಳವು ದಿನದಿಂದ ದಿನಕ್ಕೆ ವೃದ್ಧಿಯಾಗುತ್ತಲಿದ್ದು ಸದಸ್ಯ ಶೇರುವಂತಿಗೆಯನ್ನು ವರ್ಧಿಸಲಾಗಿದೆ.

ಸಂಘವು ಖಾಯಂ ಆಗಿ ನೆಲೆಗೊಳ್ಳಲು ಗ್ರಾಮದಲ್ಲಿಯೇ ಗೋಡೌನ್ ಕಟ್ಟಡದ ಸಲುವಾಗಿ ೯೫ ಅಡಿ ಉದ್ದ, ೫೫ ಅಡಿ ಅಗಲವಿದ್ದ ಗ್ರಾಮದಿಂದ ನೀರಲಗಿ ಗ್ರಾಮಕ್ಕೆ ಹೋಗುವ ಮಾರ್ಗದ ಬದಿಯಲ್ಲಿ ಖರೀದಿ ಹಿಡಿದು ಸದರಿ ಸ್ಥಳದಲ್ಲಿ ಸುಸಜ್ಜಿತವಾದ ಗೋಡೌನ್ ಕಟ್ಟಡವನ್ನು ಹೊಂದಿದ್ದು ಈ ಕಟ್ಟಡದ ಉದ್ಘಾಟನೆಯು ೧೫-೮-೧೯೬೫ರಂದು ನೆರವೇರಿತು.

ದಿನಾಂಕ : ೮-೫-೧೯೫೫ರಂದು ಆಗಿನ ಮುಂಬೈ ರಾಜ್ಯದ ಮಾಜಿ ಮಂತ್ರಿಗಳಾದ ಹಾಗೂ ಸಹಕಾರಿ ಧುರೀಣರಾದ ಶ್ರೀ ವಿ.ಎಲ್. ಮೆಹತಾ ಇವರ ಘನ ಅಧ್ಯಕ್ಷತೆಯಲ್ಲಿ ಸಂಘವು ಅತ್ಯಂತ ವಿಜೃಂಭಣೆಯಿಂದ ಸುವರ್ಣ ಮಹೋತ್ಸವವನ್ನು ದಿನಾಂಕ : ೧-೧೧-೧೯೮೦ರಂದು ಬೆಳ್ಳಿ ಹಬ್ಬವನ್ನು ಹಾಗೂ ೮-೫-೨೦೦೫ರಂದು ಶತಮಾನೋತ್ಸವವನ್ನು ವೈಭವೋಪೇತವಾಗಿ ಆಚರಿಸಿತು. ಒಟ್ಟು ೫೮ ಜನ ಅಧ್ಯಕ್ಷರ ಆಡಳಿತದಲ್ಲಿ ಮುನ್ನಡೆಯುತ್ತಿರುವ ಈ ಸಂಘವು ತನ್ನ ಹೆಸರನ್ನು ಬದಲಾವಣೆ ಮಾಡುವ ಪ್ರಸಂಗದಿಂದಾಗಿ ಸರಕಾರವು ಸಹಕಾರ ಸಂಘಗಳ ಏಕೀಕರಣ ಕಾಯ್ದೆ ಮೇರೆಗೆ ದಿನಾಂಕ : ೨೫-೧೦-೧೯೯೧ರಂದು ಕಣಗಿನಹಾಳ ವ್ಯವಸಾಯ ಸೇವಾ ಸಹಕಾರಿ ಸಂಘ ನಿಯಮಿತ ಎಂದು ಸಮಗ್ರ ಪೋಟ್ ನಿಯಮದ ಪ್ರಕಾರ ಪರಿವರ್ತನೆಯಾಯಿತು.

ಮಾನ್ಯಶ್ರೀ ಎಂ.ಆರ್. ರಂಗನಾಥ ವ್ಯವಸ್ಥಾಪಕ ನಿರ್ದೇಶಕರು ಕೆಸಿಸಿ ಬ್ಯಾಂಕ್ ಧಾರವಾಡ ಇವರು ಸಂಘಕ್ಕೆ ದಿನಾಂಕ : ೨೩-೭-೧೯೯೪ರಂದು ಭೇಟಿಯಿತ್ತು ಸಂಘವು ವಸೂಲಿ ಮಾಡಿದ ಪ್ರಗತಿಯನ್ನು ನಿರೀಕ್ಷಿಸಿ ಸಂತಸಪಟ್ಟು ಈ ಸಹಕಾರಿ ಸಂಘಕ್ಕೆ ನನ್ನ ಬ್ಯಾಂಕಿನ ವತಿಯಿಂದ ಸಮಗ್ರ ಗ್ರಾಮದ ಜನರಿಗೆ ಸಕಾಲಕ್ಕೆ ಸಾಲ ಕೊಡಿಸುವ ಬಗ್ಗೆ ಹಂತಹಂತವಾಗಿ ಕೊಡಿಸುವ ಬಗ್ಗೆ ಭರವಸೆಯಿತ್ತರಲ್ಲದೆ ಪ್ರಪ್ರಥಮ ಸಹಕಾರಿ ಮೂಲ ಪುರುಷರಾದ ಶ್ರೀ ಸಿದ್ದನಗೌಡರ ಭಾವಚಿತ್ರದ ಮುಂದೆ ಸದಾ ನಂದಾದೀಪ ಬೆಳಗಿಸುವ ಯೋಜನೆಯನ್ನು ತಂದು ಜ್ಯೋತಿ ಬೆಳಗುತ್ತಲಿರುವಂತೆ ಮಾಡಿದರು.

ಹೀಗೆ ಸಂಘವು ಶ್ರೇಯೋಭಿವೃದ್ಧಿ ಸಾಧಿಸುತ್ತಲಿರಲು ಮತ್ತೊಮ್ಮೆ ತನ್ನ ಹೆಸರನ್ನು ಬದಲಾಯಿಸುವ ಸನ್ನಿವೇಶ ಒದಗಿತು. ಸರಕಾರವು ದಿನಾಂಕ : ೩೧-೧-೧೯೯೮ರಂದು ಕಣಗಿನಹಾಳ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್ ನಿ. ಎಂದು ಸಮಗ್ರ ಪೋಟ್ ನಿಯುಮದ ಪ್ರಕಾರ ಬದಲಾವಣೆಯಾಯಿತು. ಈ ಸಂಘವು ಬ್ಯಾಂಕ್ ಆಗಿ ಪರಿವರ್ತನೆಯಾದ ನಂತರ ಬ್ಯಾಂಕಿನ ಉಳಿತಾಯ, ಮುದ್ದತಿ, ಪಿಗ್ಮಿ ಠೇವಣಿಗಳು ಹೆಚ್ಚಿನ ಪ್ರಮಾಣದಲ್ಲಿ ಕ್ರೋಢೀಕರಿಸಲು ಅನುಕೂಲ ಪರಿಸ್ಥಿತಿ ಒದಗಿಸುವ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಅಂದಿನ ಸಹಕಾರ ಸಚಿವರಾದ ಸನ್ಮಾನ್ಯ ಶ್ರೀ ಎಸ್.ಎಸ್. ಪಾಟೀಲರ ಪ್ರೋತ್ಸಾಹ ಪರಿಶ್ರಮದಿಂದ ಇಂದಿಗೆ ಶ್ರೇಷ್ಠವಾದ ಕಛೇರಿ ಕಟ್ಟಡ ಹಾಗೂ ವ್ಯಾಪಾರಿ ಮಳಿಗೆಗಳನ್ನು ಹೊಂದಿರುತ್ತದೆ.

ಶ್ರೀ ಸಿದ್ದನಗೌಡರಿಂದ ಪ್ರಾರಂಭವಾದ ಸಹಕಾರಿ ಸಂಘವು ಇಂದು ಸಹಕಾರಿ ಬ್ಯಾಂಕ್ ಆಗಿ ಬೆಳೆದಿರುತ್ತದೆ. ಕರ್ನಾಟಕ ರಾಜ್ಯದ ಸಹಕಾರಿ ಸಚಿವರಾದ ಸನ್ಮಾನ್ಯ ಶ್ರೀ ಆರ್.ವಿ. ದೇಶಪಾಂಡೆಯವರ ಕಾಳಜಿ, ಪ್ರಯತ್ನದ ಫಲವಾಗಿ ಮತ್ತು ಕರ್ನಾಟಕ ರಾಜ್ಯದ ಉಪಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರಾದ ಸನ್ಮಾನ್ಯ ಶ್ರೀ ಸಿದ್ದರಾಮಯ್ಯನವರ ಹಣಕಾಸಿನ ನೆರವು ಮತ್ತು ಪ್ರೀತಿಯಿಂದ ಹಾಗೂ ಕರ್ನಾಟಕ ರಾಜ್ಯದ ಜನಪ್ರಿಯ ಮುಖ್ಯಮಂತ್ರಿಗಳಾದ ಸನ್ಮಾನ್ಯಶ್ರೀ ಎನ್. ಧರ್ಮಸಿಂಗ್‌ರವರ ದಕ್ಷ ಕಾರ್ಯವೆಖರಿ ಹಾಗೂ ಪ್ರೋತ್ಸಾಹ ದಿಂದ ಸುವರ್ಣಾಕ್ಷರಗಳಿಂದ ಬರೆದಿಡುವಂತಹ ಶತಮಾನೋತ್ಸವವನ್ನು ಆಚರಿಸಿಕೊಂಡಿರುವ ಈ ಪುಟ್ಟ ಗ್ರಾಮವನ್ನೇ ರಾಜ್ಯ ಸರ್ಕಾರ ದತ್ತಕ ತೆಗೆದುಕೊಂಡು ಹಿಂದುಳಿದ ಗ್ರಾಮವನ್ನು ನಂದನವನ ಮಾಡುವ ಮುಖೇನ ಸಿದ್ದನಗೌಡರ ಆತ್ಮಕ್ಕೆ ಮತ್ತು ಅವರು ಬೆಳಗಿಸಿದ ಸಹಕಾರಿ ಜ್ಯೋತಿಗೆ ಕೊಟ್ಟ ಉದಾತ್ತ ಗೌರವಯುತ ಭರವಸೆ ಮಾತ್ರ ಇಂದಿಗೂ ಆಶ್ವಾಸನೆಯಾಗಿಯೇ ಉಳಿದುರುವುದು ನಾಗರಿಕರಿಗೆ ಹತಾಶೆಯುಂಟು ಮಾಡಿದೆ. ಯಾವುದೇ ಸರ್ಕಾರವಿರಲಿ ಈ ಆಶ್ವಾಸನೆ ಈಡೇರಿಸುವ ಸಂಕಲ್ಪ ಕೈಗೊಂಡರೆ ಸಹಕಾರಿ ಪಿತಾಮಹ ಅಪೂರ್ವ ಮಹರ್ಷಿಯ ಕಾರ್ಯವೈಖರಿಗೆ ಸ್ಫೂರ್ತಿಯ ಸೆಲೆ ಲಭಿಸಿದಂತಾಗುತ್ತದೆ ಯಲ್ಲವೆ !?






# ಇಪ್ಪತ್ತನೇ ಶತಮಾನದ ಉತ್ತರಾರ್ಧ ಕಾಲದ ಕರ್ನಾಟಕದ ಮೂವರು ಇತಿಹಾಸಕಾರರು

**ಕೆ.ಜಿ. ವಸಂತ ಮಾಧವ***

ಇಪ್ಪತ್ತನೆಯ ಶತಮಾನದ ಅವಧಿಯಲ್ಲಿ ಮೂರು ಪ್ರಮುಖ ಘಟನೆಗಳು ನಡೆಯಿತು. ಈ ಘಟನೆಗಳು ಯಾವುದೆಂದರೆ, ಕನ್ನಡ ನಾಡಿನ ಶಾಸನಗಳ ಸಂಶೋಧನೆ, ಭಾರತದ ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣದ ಚಳುವಳಿ ಇವುಗಳೆಲ್ಲಾ ಆಗಿನ ಕಾಲದ ಇತಿಹಾಸದ ಅಧ್ಯಯನಕಾರರಲ್ಲಿ ಪ್ರಭಾವ ಬೀರಿತು. ಈ ಸುಳಿಯಲ್ಲಿ ಕನ್ನಡ ನಾಡಿನ ಇತಿಹಾಸಕಾರರು ಸಿಕ್ಕಿ ಅದರ ವರ್ಚಸ್ಸಿನಿಂದ ಇವರು ಕನ್ನಡ ಇತಿಹಾಸವನ್ನು ಬರೆದವರು. ಇಂತಹವರಲ್ಲಿ ಗಮನಿಸಬೇಕಾದ ಇತಿಹಾಸಕಾರರು ಡಾ. ಪಾಂಡುರಂಗ ದೇಸಾಯಿ (೧೯೧೦–೧೯೭೪) ಬಿ.ಎಸ್. ದೀಕ್ಷಿತ್ (೧೯೧೧–೨೦೦೪) ಮತ್ತು ಎಸ್. ಶಾಸ್ತ್ರಿಯವರು (೧೯೩೭–೧೯೯೧) ಇವರ ಬರವಣಿಗೆಗಳು ಯಾವ ರೀತಿಯಲ್ಲಿ ಕರ್ನಾಟಕ ಇತಿಹಾಸಕ್ಕೆ ಹೊಸ ಆಯಾಮ ನೀಡಿದೆ ಎಂಬುದನ್ನು ಈ ಲೇಖನದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

## ಡಾ. ಪಾಂಡುರಂಗ ದೇಸಾಯಿ

ಇವರು ಶಾಸನತಜ್ಞರು, ಇತಿಹಾಸ ಚಿಂತಕರು ಮತ್ತು ಐತಿಹಾಸಿಕ ಕಾದಂಬರಿಗಳನ್ನು ಕನ್ನಡದಲ್ಲಿ ಬರೆದವರು. ಇವರ ಬರಹಗಳನ್ನು ವೀಕ್ಷಿಸಿದಾಗ ಇವರು ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಅಗ್ರಸ್ಥಾನ ವಹಿಸಿದ ಆಲೂರು ವೆಂಕಟರಾಯರ ಏಜನ್ಸಿಗೆ ಒಳಗಾಗಿ ಕನ್ನಡ ನಾಡಿನ ಇತಿಹಾಸ ಶಾಸ್ತ್ರಜ್ಞರನ್ನು ಸಂಶೋಧಿಸಿ ಅರ್ಥೈಸಿ ಮತ್ತು ಜ್ಞಾನ ನೀಡುವ ಲವಲವಿಕೆಯನ್ನು ಹೊಂದಿದ್ದರು. ಈ ಹಿನ್ನೆಲೆಯಿಂದ ಕನ್ನಡ ನಾಡಿನ ಶಾಸನಗಳನ್ನು ಪತ್ತೆಹಚ್ಚಿ ಓದಿ ಮತ್ತು ಅವುಗಳನ್ನು ಪ್ರಕಟಿಸುವುದರಲ್ಲಿ  ತೀವ್ರ ಆಸಕ್ತಿ ಮೂಡಿಸಿದ್ದರು. ಇವರ ಶಾಸನ ಅಧ್ಯಯನವು ಫ್ಲೀಟ್, ಡಿಸಿ ಸರಕಾರ ಮತ್ತು ಕೆ.ಎಸ್. ದೀಕ್ಷಿತ್‌ರಿಂದ ಪ್ರಭಾವಿತವಾಗಿ ಶಾಸನ ಸಂಶೋಧನ ಅವುಗಳ ಅಧ್ಯಯನ ಮತ್ತು ಬರವಣಿಗೆಗಳಲ್ಲಿ ದೇಸಾಯಿವರು ತಲ್ಲೀನರಾಗಿದ್ದರು.

ಕರ್ನಾಟಕ ಇತಿಹಾಸದ ದಿಗಂತದಲ್ಲಿ ಡಾ. ಪಾ.ಭಂ. ದೇಸಾಯಿಯವರು ಕಾಣಿಸಿಕೊಂಡಿದ್ದು ೧೯೩೦ರಲ್ಲಿ ಆ ವರ್ಷವೇ ಇವರೇ ಇತಿಹಾಸ ಗ್ರಂಥ ವಿಜಯನಗರ ಇತಿಹಾಸ ಬೆಳಕಿಗೆ ಬಂತು. ಇದು ಸಂಶೋಧನೆಯೊಂದಿಗೆ ವಿಚಾರ ಪೂರಿತ ಗ್ರಂಥವಾಗಿದೆ. ಇದು ಉತ್ತಮ ಶೈಲಿಯಲ್ಲಿ ಕನ್ನಡದಲ್ಲೇ ಬರೆದ ಕಾರಣ ಕನ್ನಡಿಗರಿಗೆ ವಿಜಯನಗರದ ಭವ್ಯ ಇತಿಹಾಸ ತಿಳಿಯುವಂತೆ ಆಯಿತು. ಈ ಗ್ರಂಥದಲ್ಲಿ ಉಪಯೋಗಿಸಿದ ಕನ್ನಡ ಶಬ್ದಗಳು ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿತು. ಹೊಸ ಆಕರಗಳನ್ನು ಆಧರಿಸಿ ಬರೆದ ಈ ಗ್ರಂಥವು ವಿಜಯನಗದ ಸಂಗತಿಗಳನ್ನು ಬೆಳಕಿಗೆ ತಂದಿತು. ಇದರೊಂದಿಗೆ ವಿಜಯನಗರದ ಇತಿಹಾಸದಲ್ಲಿದ್ದ ತಪ್ಪು ಅಭಿಪ್ರಾಯಗಳು ನಿವಾರಿಸಲು ಬಹಳ ಉಪಯುಕ್ತವಾಯಿತು. ಇವರ ಇನ್ನೊಂದು ಕನ್ನಡ ಕೃತಿ **ಮಿಂಚಿದ ಮಹಿಳೆ** (೧೯೩೯ರಲ್ಲಿ ಪ್ರಕಟವಾಯಿತು) ಈ ಗ್ರಂಥದಲ್ಲಿ ಡಾ. ದೇಸಾಯಿಯವರು ಕನ್ನಡ ಮಹಿಳೆಯರನ್ನು ಇತಿಹಾಸ ರಣರಂಗದಲ್ಲಿ ತಂದರು. ೧೯೪೦ರಲ್ಲಿ ಕನ್ನಡ ನಾಡಿನ ಸಾಮಾಜಿಕ ಮತ್ತು ಆಧುನಿಕ ಇತಿಹಾಸ ಹೇಗಿದ್ದಿತು ಎಂದು ಪರಿಚಯಿಸುವ ಗ್ರಂಥವು ಬೆಳಕಿಗೆ ಬಂದಿತು. ಈ ಗ್ರಂಥವೇ ಕನ್ನಡ ನಾಡಿನ ಇತಿಹಾಸದ ಭಾಗ. ಇದು ಕನ್ನಡ ನಾಡಿನ ಇತಿಹಾಸಕ್ಕೆ ಅಧ್ಯಯನದಲ್ಲಿ ಅಧಿಕಾರ ಮತ್ತು ಸಾಮಾಜಿಕ ಸಂಗತಿಗಳನ್ನು ತಿಳಿಯುವ ಅವಕಾಶ ಒದಗಿತು. ಇದು ಪ್ರಥಮವಾಗಿ ಕನ್ನಡ ಭಾಷೆಯ ಗ್ರಂಥ. **ಕರ್ನಾಟಕದ ಕಲಚೂರ್ಯ**ರೆಂಬ ಮತ್ತೊಂದು ಗ್ರಂಥವನ್ನು ಕನ್ನಡದಲ್ಲಿ ಡಾ. ದೇಸಾಯಿಯವರು ಬರೆದರು. ಇದು ೧೯೫೧ರಲ್ಲಿ ಬೆಳಕಿಗೆ ಬಂತು. ಈ ಚಿಕ್ಕ ಗ್ರಂಥವು ಶಾಸನ ಮತ್ತು ವಿಮರ್ಶಾತ್ಮಕತೆಯನ್ನೊಳಗೊಂಡಿದೆ.

* ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾಡೆಮಿ, ಬಿಎಂಶ್ರೀ ಕಲಾ ಭವನ ಆವರಣ, ೩ನೇ ಮುಖ್ಯರಸ್ತೆ,
ನರಸಿಂಹರಾಜ ಕಾಲೋನಿ, ಬೆಂಗಳೂರು–೫೬೦೦೧೯.

ಡಾ. ದೇಸಾಯಿವರ ಆಂಗ್ಲ ಗ್ರಂಥಗಳಲ್ಲಿ ಪ್ರಸಿದ್ಧ ವಾದುದು *Jainism in South India and some Jaina Epigraphs (1957)* ಈ ಗ್ರಂಥವು ಜೈನರಿಗೆ ಸಂಬಂಧಿಸಿದ ಹಲವಾರು ಹೊಸ ಶಾಸನಗಳ ಮಾಹಿತಿಗಳು ಇದೆ. ಇದರಲ್ಲಿರುವ ಹೆಚ್ಚಿನ ಶಾಸನಗಳನ್ನು ಡಾ. ದೇಸಾಯಿಯವರು ಸ್ವತಃ ಓದಿ ಅರ್ಥೈಸಿ ಮತ್ತು ವಿಮರ್ಶಿಸಿದ್ದಾರೆ. ಈ ಗ್ರಂಥವು ಅಂತಾರಾಷ್ಟ್ರೀಯ ಮಟ್ಟದಲ್ಲೂ ಪ್ರಕಟಣೆ ಪಡೆಯಿತು. ಬ್ರಿಟನ್ನಿನ ರಾಯಲ್ ಏಷಿಯಾಟಿಕ್ ಸೊಸೈಟಿ ಜರ್ನಲ್‌ನಲ್ಲಿ ಈ ಗ್ರಂಥದ ಕುರಿತಾಗಿ ಉತ್ತಮ ವಿಮರ್ಶೆ ಪ್ರಕಟವಾಯಿತು. ಈ ಗ್ರಂಥದ ಉನ್ನತ ಮಟ್ಟದ ಸಂಶೋಧನಕ್ಕೆ ಮೆಚ್ಚಿ ಕರ್ನಾಟಕ ವಿಶ್ವವಿದ್ಯಾಲಯವು ಡಿ.ಲಿಟ್ ನೀಡಿತು. (೧೯೬೨) ಈ ವಿಶ್ವವಿದ್ಯಾಲಯದಿಂದ ಪ್ರಥಮವಾಗಿ ಡಿ.ಲಿಟ್ ಪದವಿ ಪಡೆದವರು ದೇಸಾಯಿಯವರೆ.

ಡಾ. ಪಾಂಡುರಂಗ ದೇಸಾಯಿಯವರ ಸಂಶೋಧನಾ ಮಟ್ಟ ಉತ್ತುಂಗ ಶಿಖರಕ್ಕೆ ಏರಿಸಿದ್ದು ಇವರು ಬರೆದ ಬಸವೇಶ್ವರ ಮತ್ತು ಅವನ ಕಾಲ *(Basavana and his times, 1968)* ಅತ್ಯಂತ ಗಮನಿಸುವ ಸಂಗತಿಯೆಂದರೆ ಬಸವೇಶ್ವರರಿಗೆ ಸಂಬಂಧಿಸಿದ ಎಲ್ಲಾ ಆಕರಗಳ ಅಧ್ಯಯನ ವಿಶ್ಲೇಷಣೆ ಮತ್ತು ಅವುಗಳ ವಿಮರ್ಶೆ ಇವುಗಳು ಈ ಗ್ರಂಥದಲ್ಲಿ ಅಡಕವಾಗಿದೆ.

**ಶಾಸನಗಳ ಅಧ್ಯಯನ**

ಪಿ.ಬಿ. ದೇಸಾಯಿಯವರ ಶಾಸನಗಳನ್ನು ಸಂಶೋಧಿಸಿ, ಅವುಗಳನ್ನು ವಿಮರ್ಶಿಸಿ ಹಲವಾರು ಹೊಸ ಮಾಹಿತಿಗಳನ್ನು ಕನ್ನಡ ಸಾಂಸ್ಕೃತಿಕ ಇತಿಹಾಸಕ್ಕೆ ನೀಡಿದ್ದಾರೆ. ಇವರ ಶಾಸನದ ಅಧ್ಯನಕ್ಕೆ ಪ್ರೇರಕರು ಸರಕಾರ ಕೆ.ಎಸ್. ದೇಶಪಾಂಡೆ ಮತ್ತು ವಿ.ಎಸ್. ಸುಕರ್‌ಕರನ ಹೈದರಾಬಾದು ಕರ್ನಾಟಕದಲ್ಲಿಯ ಹೆಚ್ಚಿನ ಶಾಸನಗಳನ್ನು ಪತ್ತೆಹಚ್ಚಿ ಸ್ವತಃ ಓದಿ ಮತ್ತು ವ್ಯಾಖ್ಯಾನಿಸಿದ್ದಾರೆ. ಇವರು ಸಂಶೋಧಿದ ಹೆಚ್ಚಿನ ಶಾಸನಗಳು Ephigraphia Indica, Journal & India History ಶಿವಾನುಭವ ಇತ್ಯಾದಿ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಪ್ರಸಿದ್ಧ ವಿದ್ಯಾಕೇಂದ್ರ ವಾಗಿದ್ದ ಕುಕನೂರು ಶಾಸನಗಳನ್ನು ಸ್ವತಃ ಓದಿ ಅವುಗಳಲ್ಲಿರುವ ಐತಿಹಾಸಿಕ ಸಂಗತಿಗಳನ್ನು ಬೆಳಕಿಗೆ ದೇಸಾಯಿಯವರು ತಂದಿದ್ದಾರೆ. ಒಟ್ಟು ೪೦೦ಕ್ಕೂ ಹೆಚ್ಚಿನ ಶಾಸನಗಳ ಕುರಿತಾದ ಲೇಖನ ಬರೆದಿದ್ದಾರೆ. ಕರಾವಳಿ ಕರ್ನಾಟಕಕ್ಕೆ ಸಂಬಂಧಿಸಿದ ಗೋಕರ್ಣ ತಾಂಬ್ರಪಟ ಹಿರಿಗುತ್ತಿ ತಾಂಬ್ರಪಟ, ಸೊಂದಾನಿಸಿಧಿ ಕಲ್ಲ ಶಾಸನ ಮತ್ತು ಇಲ್ಲಿಯೇ ಸಿಕ್ಕಿದ ಯಾಗ ಮತ್ತು ತಾಂಮ್ರಶಾಸನ ಸದಾಶಿವಘಡ ತಾಂಮ್ರ ಶಾಸನ ಇವುಗಳೆಲ್ಲಾ ಬೆಳಕಿಗೆ ತಂದಿದ್ದಾರೆ.[೪] ಈ ಎಲ್ಲಾ ಶಾಸನಗಳು ಕರಾವಳಿಯಲ್ಲಿ ಸಿಕ್ಕಿದ ದೃಷ್ಟಿಯಿಂದ ಮುಖ್ಯವಾಗಿವೆ.

ಪ್ರಾಚೀನ ಕರ್ನಾಟಕದ ಶ್ರೇಷ್ಠ ನ್ಯಾಯಶಾಸ್ತ್ರ ಪರಿಣಿತ ವಿಜ್ಞಾನೇಶ್ವರನನ್ನು ಆಧುನಿಕ ಜಗತ್ತಿಗೆ ಪರಿಚಯಿಸಿದ ಶ್ರೇಯಸ್ಸು ಡಾ. ಪಿ.ಬಿ. ದೇಸಾಯಿವರಿಗೆ ಸಲ್ಲುತ್ತದೆ.

ಮರ್ತೂರಿನಲ್ಲಿ ದೊರೆತ ಶಾಸನದ ವಿವರವನ್ನು ೧೯೩೭ರಲ್ಲಿ ಇವರು ಬೆಳಕಿಗೆ ತಂದರು.[೫]

ಶಾಸನಗಳ ಆಧಾರದಿಂದ ಕುಮಾರವ್ಯಾಸನ ಹುಟ್ಟೂರು ಕೋಳಿಗವಾಡವು ಪ್ರಾಚೀನ ಬೌದ್ಧ ವಿದ್ಯಾ ಕೇಂದ್ರವಾಗಿತ್ತೆಂದು ಇವರು ಪತ್ತೆಹಚ್ಚಿದರು. ಇದರೊಂದಿಗೆ ಸನ್ನತಿಯು ಮೊಟ್ಟ ಮೊದಲ ಅಧ್ಯಯನದಲ್ಲೇ ಅದು ಪ್ರಮುಖ. ಬೌದ್ಧ ನೆಲೆಯಾಗಿತ್ತೆಂದು ಕಂಡುಹಿಡಿದಿದ್ದರು.

ಸ್ಥಳನಾಮಗಳ ಅಧ್ಯಯನದಲ್ಲೂ ಡಾ. ಪಾಂಡುರಂಗ ದೇಸಾಯಿಯವರು ಆದಿ ಪ್ರವರ್ತಕರು. ಕೊಪ್ಪಳ ಪ್ರಾಚೀನ ಕೊಪ್ಪಣ ನಗರ ಗುಲಬರ್ಗಾ (ಕಲಬುರ್ಗಿ) ಕಲಂಬರಗೆ, ಧಾರವಾಡ ದ್ವಾರನಾಡ ಎಂದು ಆಯಾಯ ಊರುಗಳ ಹೆಸರುಗಳ ಉತ್ಪತ್ತಿಯೆಂದು ಅರ್ಥೈಸಿದ್ದಾರೆ.[೬]

ಪಾಂಡುರಂಗ ದೇಸಾಯಿಯವರು ಕೆಲವು ಮೌಲಿಕ ಲೇಖನವನ್ನು ಬರೆದಿದ್ದಾರೆ. ಪಂಡರಾಪುರದ ವಿಠಲ ಮೂಲತಃ ಶೈವ ದೇವತೆ. ಮಹಾರಾಷ್ಟ್ರ ಪ್ರಸಿದ್ಧ 'ವಾರಕಂ' ಸಂಪ್ರದಾಯದ ಮೂಲ ಮೈಲಾರ ಲಿಂಗ ಮೂಲದಲ್ಲಿದೆ ಎಂಬ ಅವಧೂತದ ಸಂಗತಿಗಳ ಸಂಶೋಧನೆಯನ್ನು ಇವರು ನೀಡಿದ್ದಾರೆ.[೭]

ಇವರು ಬರೆದ **ಕನ್ನಡ ನಾಡಿನ ಶಾಸನಗಳು** ೧೯೬೧ ವು ಅಮೂಲ್ಯವಾಗಿದ್ದು ಇದು ಹಲವಾರು ಬಾರಿ ಮುದ್ರಣಗೊಂಡಿದೆ.

ಡಾ. ಪಾಂಡುರಂಗ ದೇಸಾಯಿಯವರು **ಕನ್ನಡ ನಾಡಿನ ಇತಿಹಾಸವು** ಶಕ್ತಿಯುತ ಪ್ರೇರಕವೆಂದು ಪ್ರತಿಪಾದಿಸಿದ್ದಾರೆ. ಇದಕ್ಕೆ ಇವರು ನೀಡಿದ ಉದಾಹರಣೆ ಕನ್ನಡ ನಾಡಿನ ಅರಸರು ಬಲಿಷ್ಠವಾದ ರಾಜ್ಯಗಳನ್ನು ಸ್ಥಾಪಿಸಲಿಲ್ಲ. ಕನ್ನಡ ಸಂಸ್ಕೃತಿಯನ್ನು ಬೆಳಸಿದ್ದರು. ಇವರೊಂದಿಗೆ ತಾವು ಸ್ಥಾಪಿಸಿದ ರಾಜ್ಯಗಳ ಸ್ಥಳೀಯ ಸಂಸ್ಕೃತಿಯನ್ನು ಬಲಿಷ್ಠ ಮಾಡಿದ್ದಾರೆ.

ಶಾಸನಗಳಲ್ಲಿ ತಿಳಿಸಿದ ಗಹನ ಸಂಗತಿಗಳನ್ನು ಸಾಮಾನ್ಯ ಜನರಿಗೆ ಸುಲಭವಾಗುವಂತೆ ವಿವೇಚಿಸುವ ಪ್ರಯತ್ನವನ್ನು ಡಾ. ಪಾಂಡುರಂಗ ದೇಸಾಯಿಯವರು ಮಾಡಿ ಇದರಲ್ಲಿ ಯಶಸ್ಸು ಗಳಿಸಿದ್ದಾರೆ. ಶಾಸನಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡ ಕನ್ನಡ ಸಾಹಿತ್ಯವನ್ನು ಸಂಪತ್ತು ಗೊಳಿಸಿದ್ದಾರೆ.

ಒಟ್ಟಿನಲ್ಲಿ ಶಾಸನಗಳಲ್ಲಿರುವ ನಿಗೂಢ ಸಂಗತಿಗಳನ್ನು ಬೆಳಕಿಗೆ ತಂದು ಕನ್ನಡ ಇತಿಹಾಸ ಮತ್ತು ಸಾಹಿತ್ಯ ಕ್ಷೇತ್ರಗಳನ್ನು ವಿಶಾಲಗೊಳಿಸಿದ ಕೀರ್ತಿ ದಿ. ಡಾ. ಪಾಂಡುರಂಗ ದೇಸಾಯಿ ಅವರಿಗೆ ಸಲ್ಲುತ್ತದೆ.

**ದೀಕ್ಷಿತ್ ಜಿ.ಎಸ್.**

ದಿ. ಗಿರಿಧರ ಶ್ರೀಧರ ದೀಕ್ಷಿತರು (ಜಿ.ಎಸ್.) ದಕ್ಷಿಣ ಭಾರತದ ಇತಿಹಾಸಕಾರರಲ್ಲಿ ಪ್ರಮುಖರು. ನುರಿತ ಅಧ್ಯಾಪಕ ಮತ್ತು ಸಂಶೋಧಕರಾಗಿ ಇತಿಹಾಸ ರಂಗದಲ್ಲಿ ಅಗ್ರಸ್ಥಾನ ಪಡೆದ ಗೌರವಾನ್ವಿತರು. ಶಿಸ್ತುಬದ್ಧ ಜೀವನದಲ್ಲಿ ಅಳವಡಿಸಿಕೊಂಡ ಇವರು ವಿದ್ಯಾರ್ಥಿಗಳಿಗೆ ಆದರ್ಶ ಗುರುಗಳಾಗಿದ್ದರು. ಶಿಕ್ಷಕ ವೃತ್ತಿಯುಲ್ಲಿ ಅತ್ಯಂತ ನಿಷ್ಠರರಾಗಿದ್ದುಕೊಂಡು ಪಾಠಗಳನ್ನು ಕ್ಲಿಪ್ತ ಸಮಯದಲ್ಲಿ ಮುಗಿಸುತ್ತಿದ್ದರು. ಪಾಠ ಬೋಧನೆಯಲ್ಲಿ ಇವರು ಅನುಸರಿಸುತ್ತಿದ್ದುದ್ದು ಸರಳ ವಾಕ್ಯ ಮತ್ತು ಸ್ಪಷ್ಟವಾದ ವಿಚಾರಲಹರಿ. ಇವರು ಮೆಚ್ಚಿಕೊಂಡಿದ್ದು ವಿಚಾರ ಪ್ರಿಯತೆ. ಪ್ರಚಾರ ಪ್ರಿಯತೆಯಲ್ಲ. ನುರಿತ ಮತ್ತು ಆದರ್ಶ ಅಧ್ಯಾಪಕರಲ್ಲಿರುವ ಒಂದು ಪ್ರಮುಖ ಗುಣ ದೀಕ್ಷಿತರಲ್ಲಿದ್ದಿತು. ವಿದ್ಯಾರ್ಥಿಗಳ ಯೋಗ್ಯತೆಗಳನ್ನು ಅಳೆದುಕೊಳ್ಳುವ ಗ್ರಹಣಶಕ್ತಿ ಇದನ್ನು ತಿಳಿದ ನಂತರವೇ ದೀಕ್ಷಿತರು ಅರ್ಹ ಮತ್ತು ವಿಷಯದಲ್ಲಿ ಆಸಕ್ತಿ ಇದ್ದ ಶಿಷ್ಯರಿಗೆ ನಿರಂತರ ಪ್ರೋತ್ಸಾಹ ನೀಡುತ್ತಿದ್ದರು. ಇದರೊಂದಿಗೆ ವಿಷಯಗಳಿಗೆ ಸಂಬಂಧವಿರುವ ಸಂಗತಿಗಳನ್ನು ಶಿಷ್ಯರಿಗೆ ಇವರು ಆಗಿಂದಾಗ್ಗೆ ತಿಳಿಸುತ್ತಿದ್ದರು. ಅಗತ್ಯವಿದ್ದಲ್ಲಿ ತಾವೇ ಆಕರಗಳನ್ನು ನೀಡುತ್ತಿದ್ದರು. ವ್ಯಕ್ತಿಯ ತೇಜೋವಧೆ ನಿಂದನೆ ಮತ್ತು ಕೆಟ್ಟ ಮಾತುಗಳಿಂದ ದೀಕ್ಷಿತರು ದೂರವಾಗಿರುತ್ತಿದ್ದರು. ಇವುಗಳಲ್ಲಿ ನಿರತರಾಗಿದ್ದವರನ್ನು ಇವರು ದೂರ ಇಡುತ್ತಿದ್ದರು. ಈ ಗುಣಗಳು ದೀಕ್ಷಿತರಲ್ಲಿ ಇದ್ದುದ್ದರಿಂದ ಇವರ ಘನತೆ ಏರಿದೆ. ನನ್ನ ದೃಷ್ಟಿಯಲ್ಲಿ ನಡೆದಾಡುವ ದೇವತೆ.

ದಕ್ಷಿಣ ಭಾರತದ ಇತಿಹಾಸ ಅಧ್ಯಯನಕ್ಕೆ ತನ್ನದೇ ಆದ ರೀತಿಯಲ್ಲಿ ದೀಕ್ಷಿತರು ಕೊಡುಗೆ ನೀಡಿದ್ದಾರೆ. ಅಧ್ಯಾಪನ ಮತ್ತು ಅಧ್ಯಯನದಲ್ಲಿ ನಿರತರಾದ ಇವರು ಭಾರತೀಯ ಮತ್ತು ಹೊರ ದೇಶಗಳ ವಿಶ್ವವಿದ್ಯಾಲಯಗಳಲ್ಲಿ ಹೆಸರು ಗಳಿಸಿದ್ದಾರೆ. ಇವರ ಮಾರ್ಗದರ್ಶನದಲ್ಲಿ ವಿದ್ಯಾರ್ಥಿಗಳು ಪಿಎಚ್.ಡಿ. ಡಿಗ್ರಿ ಪಡೆದಿದ್ದಾರೆ. ಸಂಶೋಧನೆ ಮತ್ತು ಅಧ್ಯಾಪಕರಲ್ಲಿರುವ ಉತ್ತಮ ಗುಣಗಳು ದೀಕ್ಷಿತರಲ್ಲಿ ಇದ್ದಿತು. ನಿರಂತರ ಅಧ್ಯಯನದೊಂದಿಗೆ ವಿಷಯದಲ್ಲಿ ಶ್ರದ್ಧೆ ಮತ್ತು ಅಮಿತ ಆಸಕ್ತಿ ಇವರಲ್ಲಿದ್ದಿತು. ಉತ್ತಮ ಉದಾಹರಣೆ ಕರ್ನಾಟಕ ಇತಿಹಾಸ ಅಕಾಡೆಮಿ ಸ್ಥಾಪಿಸಿದರಲ್ಲದೆ ಅದು ಚಲಿಸುವಂತೆ ಮಾಡಿದ್ದು. ಈ ಸಂಸ್ಥೆಯ ಏಳಿಗೆಯಲ್ಲಿ ಡಾ. ದೀಕ್ಷಿತರು ಸಹಭಾಗಿಗಳಾಗಿದ್ದರು. ಇವರು ಸಂಸ್ಥೆಯ ಬೆಳವಣಿಗೆಯಲ್ಲಿ ನಿರಂತರ ಆಸಕ್ತಿ ತೋರಿಸಿದ್ದರಿಂದ ಈ ಸಂಸ್ಥೆ ಇವರ ಜೀವಿತ ಕಾಲದಲ್ಲಿ ೧೯ ಸಮ್ಮೇಳನಗಳನ್ನು ಯಶಸ್ವಿಯಾಗಿ ನಡೆಸಿತು.

ಭಾರತೀಯ ಇತಿಹಾಸ ಸಂಶೋಧನ ಸಂಸ್ಥೆಯಲ್ಲೂ ದೀಕ್ಷಿತರು ಗಣ್ಯ ಪಾತ್ರ ವಹಿಸಿದ್ದರು. ಈ ಸಂಸ್ಥೆಗಳೊಂದಿಗೆ ದೀಕ್ಷಿತರ ಸಂಪರ್ಕ ನಿಕಟವಾಗಿತ್ತು. ಒಟ್ಟಿನಲ್ಲಿ ಡಾ. ದೀಕ್ಷಿತರು ಸಂಶೋಧನೆಯೊಂದಿಗೆ ಸಂಶೋಧನಾ ಸಂಘಟಿತರಾಗಿದ್ದರು. ಈ ರೀತಿ ಇರುವ ಇತಿಹಾಸ ತಜ್ಞರು ಬಹಳ ವಿರಳ.

**ಸಂಶೋಧನಾ ಲಹರಿ**

ಪ್ರಾಚೀನ **ಕರ್ನಾಟಕದ ಸ್ಥಳೀಯ ಆಡಳಿತ** ಗ್ರಂಥವು ದೀಕ್ಷಿತರಿಗೆ ಪಿಎಚ್.ಡಿ. ಡಿಗ್ರಿ ತಂದುಕೊಟ್ಟಿತು. (೧೯೬೨) ಇದಲ್ಲದೆ **ಕೃಷ್ಣದೇವರಾಯ, ಪ್ರಾಚೀನ ಕರ್ನಾಟಕದ ಶಿಕ್ಷಣದ ಇತಿಹಾಸ ಮತ್ತು ನೀರಾವರಿಯ ಇತಿಹಾಸದಲ್ಲೂ** ಹಲವಾರು ಕುತೂಹಲ ಸಂಗತಿಗಳನ್ನು ಬೆಳಕಿಗೆ ತಂದರು. ಡಾ. ಶ್ರೀನಿವಾಸರಿತ್ತಿ ಅವರೊಂದಿಗೆ ಸಹಕರಿಸಿ ಸೋಮದೇವ ಸೂರಿ ಬರೆದ ಗ್ರಂಥ ನೀತಿವಾಕ್ಯಾಮೃತ ಗ್ರಂಥವನ್ನು ಸಂಪಾದಿಸಿದ ಕೀರ್ತಿ ದೀಕ್ಷಿತರಿಗೆ ಸಲ್ಲುತ್ತದೆ. ಇವರು ಸಂಪಾದಿಸಿ ವಾಖ್ಯಾನಿಸಿ ಮತ್ತು ವಿಮರ್ಶಿಸಿದ ಈ ಗ್ರಂಥವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿದೆ.

ಇತಿಹಾಸ ಸಮ್ಮೇಳನದಲ್ಲಿ ಅಧ್ಯಕ್ಷರಾಗಿ ಮಾಡಿದ ಭಾಷಣ ವಿಚಾರ ಪ್ರಚೋದಿತವಾಗಿತ್ತು. ಹೊಸ ಸಂಗತಿಗಳು ಈ ಭಾಷಣದಲ್ಲಿ ಮೂಡಿಬಂದವು.

ಕೃಷ್ಣದೇವರಾಯನ ಕುರಿತಾಗಿ ಅಧಿಕೃತವಾಗಿ ಮಾತಾಡುವ ವಿದ್ವಾಂಸರಲ್ಲಿ ಡಾ. ದೀಕ್ಷಿತರನ್ನು ಮೀರಿಸುವರು ಯಾರೂ ಇರಲಿಲ್ಲ. ಇದರ ಕುರಿತಾಗಿ ಕೆಲವು ವಿದ್ವಾಂಸರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಪ್ರಶ್ನಿಸಿ ಅದಕ್ಕೆ ಸರಿಯಾದ ಉತ್ತರ ನೀಡಿದರು ದೀಕ್ಷಿತರು. ಇವರು ೧೯೩೯ರಲ್ಲಿ ಬರೆದ ಕೃಷ್ಣದೇವರಾಯನ ಕಾಲದ ಆರ್ಥಿಕ ಸ್ಥಿತಿ ಲೇಖನ ಉನ್ನತ ಮಟ್ಟದ ಸಂಶೋಧನಾ ಲೇಖನ. ಕೃಷ್ಣದೇವರಾಯನು ತುಳುವನಾಗಿದ್ದು ಕನ್ನಡಿಗನೆಂದು ದೀಕ್ಷಿತರು ಖಚಿತಪಡಿಸಿದರು. ಇದಕ್ಕೆ ಇವರು ಕೊಟ್ಟ ಆಧಾರ ಟೊಮಿಪೇರಿ (Tome Piere) ಪ್ರವಾಸ ಕಥನ ಸುಮಾ ಒರಿಯಂಟಲ್ ಈ ಬರಹ ಕನ್ನಡಿಗರಿಗೆ ಕನ್ನಡದಲ್ಲಿ ತಿಳಿಸಿದವರು ದೀಕ್ಷಿತರೆ ಮೊದಲಿಗರು. ಕೃಷ್ಣದೇವರಾಯರು ಕನ್ನಡಿಗನಲ್ಲದೆ ಕನ್ನಡಭಾಷೆ ಮತ್ತು ಸಂಸ್ಕೃತಿಗೂ ಇವನು ಪ್ರೋತ್ಸಾಹ ನೀಡಿದ್ದನೆಂದು ಶ್ರೀಯುತರು ತಿಳಿಸಿದ್ದಾರೆ. ಇದಕ್ಕೆ ಉದಾಹರಣೆ ತಿಮ್ಮಣ ಕವಿಗೆ

ಕುಮಾರವ್ಯಾಸ ಬರೆಯದೇ ಬಿಟ್ಟ ಹನ್ನೊಂದರಿಂದ ಹದಿನೆಂಟು ಪರ್ವ ಭಾರತವನ್ನು ಬರೆಯಲು ಪ್ರೋತ್ಸಾಹ ನೀಡಿದರು. ಇದಲ್ಲದೆ ಚಾಟು ವಿಠಲದಾಸ, ಲಕ್ಷ್ಮೀಶ ಮತ್ತು ಕನಕದಾಸರು ಮತ್ತು ವ್ಯಾಸರಾಯರು ಕೃಷ್ಣದೇವ ರಾಯನಿಂದ ಪ್ರೋತ್ಸಾಹ ಪಡೆದುದಲ್ಲದೇ ಈ ಅರಸ ಇವರಿಗೆಲ್ಲಾ ಸ್ಫೂರ್ತಿದಾಯಕನಾಗಿದ್ದಾನೆಂದು ದೀಕ್ಷಿತರು ಅಭಿಪ್ರಾಯ ವ್ಯಕ್ತಪಡಿಸಿದ್ದು ಗಮನಾರ್ಹ. ಇವನ ಪ್ರೋತ್ಸಾಹದಿಂದ ಕನ್ನಡ ಸಾಹಿತ್ಯದಲ್ಲಿ ಭಾಗವತ ಸಾಹಿತ್ಯದ ಸುವರ್ಣ ಯುಗ ವಾಯಿತು.[೯]

ಕರ್ಮವೀರ (ಹುಬ್ಬಳ್ಳಿ ದೀಪಾವಳಿ ವಿಶೇಷಾಂಕ ೨೦೦೯) ೯-೧೨ ಈ ಲೇಖನ ಡಾ. ದೀಕ್ಷಿತರ ಪತ್ರ ಇದು ವರ್ಷ ೬ ನಂತರ ಪ್ರಕಟವಾಯಿತು ಇದನ್ನು ದಿ. ಶ್ರೀನಿವಾಸ ಹಾವನೂರ್ ಈ ಲೇಖನವನ್ನು ನೀಡಿದ್ದಾರೆ.[೧೦]

ದಿ. ದೀಕ್ಷಿತರು ಪ್ರಾಚೀನ ಕರ್ನಾಟಕದ ಶಿಕ್ಷಣ ವ್ಯವಸ್ಥೆಯಲ್ಲೂ ಆಸಕ್ತಿ ವಹಿಸಿ ಇದರಲ್ಲಿರುವ ಅಪೂರ್ವ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಇವುಗಳಲ್ಲಿ ಮುಖ್ಯವಾದುದಾವುದೆಂದರೆ ಪ್ರಾಚೀನ ಕರ್ನಾಟಕದಲ್ಲಿ ಶಿಕ್ಷಣ ಕ್ರಮದಲ್ಲಿ ದೈಹಿಕ ಶಿಕ್ಷಣವು ಶಿಕ್ಷಣದ ವ್ಯಾಪ್ತಿಯಲ್ಲಿ ಒಳಗಾಗಿತ್ತು. ಇದು ಶಿಕ್ಷಣದ ಅವಿಭಾಜ್ಯ ಅಂಗವಾಗಿತ್ತು. ಇದರೊಂದಿಗೆ ಸಾಲೆ, ಮಠ, ಅಗ್ರಹಾರ ಮತ್ತು ಬ್ರಹ್ಮಪುರಿಗಳ ಸಂಘಟನೆ, ಆಡಳಿತ ಮತ್ತು ವ್ಯವಸ್ಥೆ ಕುರಿತಾಗಿ ವಿದ್ವತ್ ಪೂರಿತ ವಿವರಗಳನ್ನು ನೀಡಿದ್ದರು.[೧೧] ಇವರು ಬರೆದಿರುವ ಈ ಚಿಕ್ಕ ಹೊತ್ತಿಗೆಯಲ್ಲಿ ಉಪಯೋಗಿಸಿದ ವಿಷಯಕ್ಕೆ ಸಂಬಂಧಿಸಿದ ದಾಖಲೆಗಳು ಹಲವಾರು ಇವೆ. ಶಾಸನಗಳು, ಸಾಹಿತ್ಯ ಕೃತಿಗಳಾದ ಗೋವೈದ್ಯ ಮಾನಸೊಲ್ಲಾಸ ಮತ್ತು ರತ್ನಮಾಲ ಗಳನ್ನು ಉಪಯೋಗಿಸಿಕೊಂಡು ಶಿಕ್ಷಣ ಕ್ಷೇತ್ರದ ಅಧ್ಯಯನಕ್ಕೆ ಹೊಸ ಆಯಾಮ ನೀಡಿದ್ದಾರೆ.[೧೨] ದಿ. ಜಿ.ಎಸ್. ದೀಕ್ಷಿತರು ಕೆಲವು ಇತಿಹಾಸ ಸಮ್ಮೇಳನದ ಅಧ್ಯಕ್ಷರಾಗಿ ವಿಚಾರಪೂರಿತ ಭಾಷಣಗಳನ್ನು ಮಾಡಿದ್ದಾರೆ. ಈ ಭಾಷೆಗಳಲ್ಲಿ ಹೊಸ ಸಂಗತಿಗಳನ್ನು ಬೆಳಕಿಗೆ ತಂದಿದ್ದಾರೆ. ಇವರು ದಕ್ಷಿಣ ಭಾರತದ ಇತಿಹಾಸ ಸಮ್ಮೇಳನದ ಸಾಂಸ್ಕೃತಿಕ ಇತಿಹಾಸ ವಿಭಾಗದ ಅಧ್ಯಕ್ಷರಾಗಿ ದಿಕ್ಷೀತರು ಭರತನ ನಾಟ್ಯ ಶಾಸ್ತ್ರದಿಂದ ಸೂದ್ರಕನವರೆಗೆ ನಾಟ್ಯಶಾಸ್ತ್ರ ಬೆಳೆದು ಬಂದ ವಿವರಗಳನ್ನು ವಿಶ್ಲೇಷಿಸಿದ್ದಾರೆ.[೧೩] ಇದೇ ಸಮ್ಮೇಳನ ನಾಲ್ಕನೆ ವಾರ್ಷಿಕ ಸಮ್ಮೇಳನದಲ್ಲಿ ದಕ್ಷಿಣ ಭಾರತ ಇತಿಹಾಸ ಅಧ್ಯಯನಿಸುವಲ್ಲಿ ಚೀನಿ ಭಾಷೆಯಲ್ಲಿ ಭಾರತ ಇತಿಹಾಸಕ್ಕೆ ಸಂಬಂಧಿಸಿರುವ ಹಲವಾರು ಚೀನಿ ದಾಖಲೆಗಳಿವೆ ಎಂದು ತಿಳಿಸಿ ಅವುಗಳನ್ನು ಗಂಭೀರವಾಗಿ ಅಧ್ಯಯನ ನಡೆಸಬೇಕೆಂದು ವಿದ್ಯಾರ್ಥಿಗಳಿಗೆ ಸೂಚಿಸಿದರು. ಇದಲ್ಲದೆ ಲಕ್ಕಣ ದಂಡೇಶನ ಶಿವತತ್ತ್ವ ಚಿಂತಾಮಣಿ ಕಾವ್ಯದಲ್ಲಿ ತಿಳಿಸಿರುವ ದಕ್ಷಿಣ ಭಾರತ ಭೌಗೋಲಿಕ ಮತ್ತು ವ್ಯಾಪಾರ ಕೇಂದ್ರಗಳ ವಿವರವನ್ನು ದೀಕ್ಷಿತರು ತಿಳಿಸಿದ್ದರು. ಇವೆಲ್ಲಾ ದಕ್ಷಿಣ ಭಾರತದ ಆರ್ಥಿಕ ಇತಿಹಾಸ ದೃಷ್ಟಿಯಿಂದ ಗಮನಿಸುವಂತಿದೆ. ದೀಕ್ಷಿತರು ಟಿಪ್ಪಣಿಸಿದ ಶಿವತತ್ತ್ವ ರತ್ನಾಕರ ಲೇಖನ[೧೪]ವು ಆಗಿನ ಕಾಲದಲ್ಲಿ ಕರ್ನಾಟಕದ ವಿಜ್ಞಾನದ ಸ್ಥಿತಿಗತಿಯನ್ನು ತಿಳಿಯಲು ಬಹಳ ಉಪಯುಕ್ತವಾಗಿದೆ.

ಪ್ರೊ. ದೀಕ್ಷಿತರು ಪ್ರಾಚೀನ ಕರ್ನಾಟಕದ ಸ್ಥಳೀಯ ಆಡಳಿತದ ಬಗ್ಗೆ ಆಳವಾದ ಅಧ್ಯಯನ ಮಾಡಿ ತಮ್ಮದೇ ಆದ ಅಭಿಪ್ರಾಯಗಳನ್ನು ತಿಳಿಸಿದ್ದುದ್ದನ್ನು ಮರೆಯಲಾಗದ ಸಂಗತಿ. ಇದಲ್ಲದೇ ಪ್ರಾಚೀನ ಕರ್ನಾಟಕದ ನೀರಾವರಿ ವ್ಯವಸ್ಥೆ ಬಗ್ಗೆ ಮಹತ್ವವಾದ ಅಧ್ಯಯನ ಮಾಡಿದ್ದರು. ಇವರು ತಮ್ಮ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿ ನೀರಿನ ಸಮಸ್ಯೆಗೆ ಪರಿಹಾರ ಸೂಚಿಸಿದ್ದರು. ಈ ಸೂಚನೆಯಲ್ಲಿ ಗಮನಾರ್ಹ ವಾದುದು ಕೆರೆಗಳ ನಿರ್ಮಾಣ ಮತ್ತು ಅವುಗಳ ದುರಸ್ತಿ, ಕೊಳವೆ ಬಾವಿ ರಚನೆ ಮತ್ತು ಕೆರೆ ಮತ್ತು ನೀರಾಶ್ರಯಗಳನ್ನು ಸಂರಕ್ಷಿಸುವುದು. ಇವುಗಳೊಂದಿಗೆ ಕಾಡುಗಳನ್ನು ಬೆಳೆಸಿ ಇಲ್ಲಿರುವ ಜಲ, ಜಂತುಗಳ ಮತ್ತು ಪಕ್ಷಿಗಳ ಸಂರಕ್ಷಣೆ, ಮೀನುಗಾರಿಕೆ ಬೆಳವಣಿಗೆ ಈ ಮಾರ್ಗಗಳನ್ನು ಅನುಸರಿಸಿದಲ್ಲಿ ಅಂತರ್ಜಲ ಹೆಚ್ಚುವುದು. ಇವುಗಳನ್ನೆಲ್ಲಾ ಇತಿಹಾಸದ ಹಿನ್ನೆಲೆಯಿಂದ ದೀಕ್ಷಿತರು ಪರಿಶೀಲಿಸಿದರು.[೧೫] ಹದಿನಾಲ್ಕು ಪ್ರಮುಖ ಇತಿಹಾಸ ಗ್ರಂಥಗಳನ್ನು ವಿಮರ್ಶಿಸಿದ್ದು ಇವುಗಳು ಇತಿಹಾಸ ನಿಯತಕಾಲಿಕ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಈ ವಿಮರ್ಶಾತ್ಮಕ ಲೇಖನಗಳು ವಿದ್ವಾಂಸರಿಂದ ಪ್ರಶಂಸೆ ಪಡೆದಿವೆ.

ಸಂಶೋಧನೆಗೆ ಪ್ರೋತ್ಸಾಹ ಮತ್ತು ಇವುಗಳ ಸುಸಂಘಟಿತರಾಗಿದ್ದು, ಕರ್ನಾಟಕ ಇತಿಹಾಸ ಅಧ್ಯಯನಕ್ಕೆ ಉನ್ನತ ಮಟ್ಟದ ಸೇವೆ ಸಲ್ಲಿಸಿ ಹೊಸ ಮತ್ತು ಮೌಲೀಕವಾದ ಸಂಗತಿಗಳ ಕಡೆಗೆ ಗಮನವಿಟ್ಟು ಇವುಗಳ ಸಂಶೋಧನೆಗೆ ಪ್ರೇರಕ ಶಕ್ತಿಯಾಗಿದ್ದರು ಡಾ. ಜಿ.ಎಸ್. ದೀಕ್ಷಿತರು.

**ಡಾ. ಬಿ.ಎಸ್. ಶಾಸ್ತ್ರಿ[೧೬]**

ಮಧ್ಯಕಾಲೀನ ಕರ್ನಾಟಕ ಇತಿಹಾಸ ಅಧ್ಯಯನಕ್ಕೆ ಹೊಸ ಆಕರಗಳನ್ನು ಬೆಳಕಿಗೆ ತಂದವರು ಬಿ. ಸೀತಾರಾಮ ಶಾಸ್ತ್ರಿಯವರು[೧೭] (ಬಿ.ಎಸ್. ಶಾಸ್ತಿ) ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಎಂ.ಎ. ಡಿಗ್ರಿ ಪಡೆದು ಅಲ್ಲಿಯ ಕಾಲೇಜು ಮತ್ತು ಗೋವೆಯ ಕಾಲೇಜಿನಲ್ಲಿ ಚರಿತ್ರೆ ಅಧ್ಯಾಪಕರಾಗಿ ಮತ್ತು ಬೊಂಬಾಯಿ ವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರವಾದ ಪಣಜಿಯಲ್ಲಿ ಪ್ರಾಧ್ಯಾಪಕರಾಗಿ ೧೯೮೧ರವರೆಗೆ ಸೇವೆ ಸಲ್ಲಿಸಿದವರು. ಇವರು ತಮ್ಮ ಸೇವಾ ಅವಧಿಯಲ್ಲಿ

ಪೋರ್ಚುಗೀಜ ದಾಖಲೆಗಳನ್ನು ಪತ್ತೆಹಚ್ಚಿ ಅವುಗಳನ್ನು ಅತ್ಯಂತ ಆಸಕ್ತಿಯಿಂದ ಅಧ್ಯಯನಿಸಿ, ವಿಶ್ಲೇಷಿಸಿ ಅವುಗಳ ಮಾಹಿತಿಗಳನ್ನು ಕನ್ನಡ ಇತಿಹಾಸಕ್ಕೆ ನೀಡಿದರು.

ಬಿ.ಎಸ್. ಶಾಸ್ತ್ರಿಯವರ ಪಿಎಚ್.ಡಿ ಸಂಶೋಧನ ವಿಷಯ ಹೆಸರಾಂತ Pantugus is Kanar 1498-1763 ಹೆಸರಾಂತ ಗೋವಾದ ಇತಿಹಾಸ ತಜ್ಞ ಪಿ.ಎಸ್. ಪಿಸ್ಸುಲೇನಕರ್ (P.S.S. Pissulenkar) ನೇತೃತ್ವದಲ್ಲಿ ಸಂಶೋಧನೆ ಆರಂಭಿಸಿ ಇನ್ನೊಬ್ಬ ಪ್ರಸಿದ್ಧ ಇತಿಹಾಸಕಾರ ಜಿ.ಎಂ. ಮೊರೈಯಿರ್‌ರ ಮುಖಾಂತರ ತಮ್ಮ ಸಂಶೋಧನೆ ಯನ್ನು ೧೯೬೯ರಲ್ಲಿ ಅಂತ್ಯಗೊಳಿಸಿದರು. ಅಂದಿನಿಂದ ೧೯೯೧ರವರೆಗೆ ಡಾ. ಶಾಸ್ತ್ರಿಯವರು ನಿರಂತರ ಸಂಶೋಧನಾ ರಂಗದ ಮುಂಚೂಣಿಯಲ್ಲಿದ್ದರು ಇವರ ಸಂಶೋಧನಾ ಫಲವಾಗಿ ದಕ್ಷಿಣ ಭಾರತದಲ್ಲಿನ ಅನೇಕ ಅಪೂರ್ವ ಸಂಗತಿಗಳು ಬೆಳಕಿಗೆ ಬಂದು ಇದು ಇಲ್ಲಿನ ಇತಿಹಾಸಕ್ಕೆ ಹೊಸ ದಾರಿಯನ್ನು ತೋರಿಸಿತು. ಪೋರ್ಚುಗೀಸ ದಾಖಲೆಯ ಹಿನ್ನೆಲೆಯಲ್ಲಿ ಇವರು ಬೆಳಕಿಗೆ ತಂದ ಹಲವಾರು ಮಾಹಿತಿಗಳು ಕರ್ನಾಟಕದ ಇತಿಹಾಸ ಮುಖ್ಯವಾಗಿ ಕರಾವಳಿ ಕರ್ನಾಟಕ ಶ್ರೀಮಂತಗೊಳಿಸಿತು. ಇದು ಶಾಸ್ತ್ರಿಯವರು ಇತಿಹಾಸಕ್ಕೆ ನೀಡಿದ ಮರೆಯಲಾಗದ ಕಾಣಿಕೆ. ೧೯೭೨ರಲ್ಲಿ ಇವರು **ಕೆಳದಿ ಅರಸರು ಮತ್ತು ಪೋರ್ಚುಗೀಸರು** ಎಂಬ ಇವರ ಪುಸ್ತಕವನ್ನು ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿದರು. ಸಣ್ಣ ಅರಸು ಮನೆತನವಾದ ಕೆಳದಿ ಅರಸರ ಇತಿಹಾಸವನ್ನು ತಿಳಿಯುವಲ್ಲಿ ಈ ಗ್ರಂಥ ಬಹಳ ಉಪಯುಕ್ತವಾಗಿದೆ. ನಮಗೆ ಇದುವರೆಗೆ ತಿಳಿಯದೆ ಇದ್ದ ಸಂಗತಿಗಳು ಈ ಪುಸ್ತಕದಲ್ಲಿವೆ. ಈ ಗ್ರಂಥದಿಂದ ಕೆಳದಿ ಅರಸರು ಗುರುತಿಸಲ್ಪಡುವ ಪ್ರಬಲ ರಾಜಕೀಯ ಶಕ್ತಿ ಆ ಕಾಲದಲ್ಲಾಗಿದ್ದರೆಂದು ಈ ಪುಸ್ತಿಕೆಯಿಂದ ತಿಳಿದುಬರುತ್ತದೆ. ಸಣ್ಣ ಗ್ರಂಥವಾಗಿದ್ದರೂ ಉತ್ತಮ ಸಂಶೋಧನಾ ಗ್ರಂಥವೆಂದು ಪರಿಗಣಿಸಲ್ಪಟ್ಟಿದೆ.

೧೯೮೧ರಲ್ಲಿ ಇವರು ಬರೆದ ಗ್ರಂಥ Studies in Indo Portuguse Relations ನಿಖರ ಆಕರಗಳನ್ನೊಳ ಗೊಂಡ ಉತ್ತಮ ಸಂಶೋಧನಾ ಗ್ರಂಥವಾಗಿದೆ. ಇದರಲ್ಲಿ ದಕ್ಷಿಣ ಭಾರತದಲ್ಲಿ ಪೋರ್ಚುಗೀಸರು ನಡೆಸಿದ ಚಟುವಟಿಕೆ ಕೆಳದಿ ನಾಯಕರು, ಮರಾಠರು ಮತ್ತು ಪೋರ್ಚುಗೀಸರ ಸಂಬಂಧ ಕರಾವಳಿ ಕರ್ನಾಟಕದಲ್ಲಿ ಕೆಲವು ಅಪೂರ್ವ ಪೋರ್ಚುಗೀಸ ರಾಜರುಗಳ ವಿಮರ್ಶಾತ್ಮಕ ಪರಿಚಯ ಗಳನ್ನೊಳಗೊಂಡಿದೆ. ಇದರೊಂದಿಗೆ ಪೋರ್ಚುಗೀಸರು ಕನ್ನಡದ ಕರಾವಳಿಯಲ್ಲಿ ನಡೆಸಿದ ವ್ಯಾಪಾರ-ವಾಣಿಜ್ಯ ಮತ್ತು ಧಾರ್ಮಿಕ ಚಟುವಟಿಕೆ ಗಳೂ ಇವೆ.

ಹೈದರ ಮತ್ತು ಪೋರ್ಚುಗೀಸರ ಸಂಬಂಧ ಕುರಿತಾಗಿ ಶಾಸ್ತ್ರಿಯವರು ಒಂದು ಸಣ್ಣ ಪುಸ್ತಕದಲ್ಲಿ ಬರೆದಿದ್ದರು. ಇದು ೧೯೮೫ರಲ್ಲಿ ಪ್ರಕಟವಾಯಿತು. ಹಲವಾರು ಅಪ್ರಕಟಿತ ಪೋರ್ಚುಗೀಸ ದಾಖಲೆಗಳ ಆಧಾರದಿಂದ ದಿ. ಶಾಸ್ತ್ರಿಯವರು ಪೋರ್ಚುಗೀಸರು ಹೈದರನೊಂದಿಗೆ ಅನುಚಿತ ವರ್ತನೆ ತೋರಿಸಿದ್ದರು. ಹೀಗಿದ್ದರೂ ಹೈದರನು ಪೋರ್ಚುಗೀಸರಿಗೆ ತನ್ನ ರಾಜ್ಯದ ಕರಾವಳಿಯ ತೀರಗಳಲ್ಲಿ ವ್ಯಾಪಾರ ಮಾಡಿಕೊಳ್ಳಲು ೧೭೭೬ರ ವರೆಗೆ ಅನುಮತಿ ನೀಡಿದ್ದನು. ಶಾಸ್ತ್ರಿಯವರ ಅಭಿಪ್ರಾಯದಂತೆ 'ಹೈದರನು ತಾನಾಗಿಯೇ ಪೋರ್ಚುಗೀಸರ ಸ್ನೇಹ ಕೋರಿದ್ದನು. ಇದನ್ನು ಪೋರ್ಚುಗೀಸರು ತುಂಬಾ ಹೆಮ್ಮೆಪಟ್ಟರು.[೨೧]

ಕರಾವಳಿ ಕರ್ನಾಟಕಕ್ಕೆ ಸಂಬಂಧಿಸಿದ ಗಮನಾರ್ಹ ಶಾಸ್ತ್ರಿಯವರ ಲೇಖನ A glimhsa of is 5040-Economics conditions of the port towns of coastal Karnataka in its six teenth and its svent centuries as discribes is some contemporar portugqes sourcess. ಇದು ೨ನೇ ಕರ್ನಾಟಕ ಇತಿಹಾಸ ಸಮ್ಮೇಳನದಲ್ಲಿ ಶಾಸ್ತ್ರಿಯವರು ಮಂಡಿಸಿದ್ದನ್ನು ೧೯೮೭ರಲ್ಲಿ ಈ ಸಮ್ಮೇಳನದ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾಗಿದೆ. ಈ ಲೇಖನದಿಂದ ಕರಾವಳಿಯ ರೇವುಗಳು ಉತ್ತಮ ವ್ಯಾಪಾರ ನಡೆಸಿಕೊಳ್ಳುವ ಸಾಮರ್ಥ್ಯವೆ ಇದ್ದುದಲ್ಲದೆ, ಇವುಗಳ ಸಾಗರೋತ್ತರ ವ್ಯಾಪಾರ ನಡೆಸುತ್ತಿದ್ದವು. ಸಂಪದ್‌ಭರಿತ ಕರಾವಳಿ ಕರ್ನಾಟಕದ ಮೇಲೆ ಪೋರ್ಚುಗೀಸ್ ಆಗಿಂದಾಗ್ಗೆ ದುಂಡಾವೃತ್ತಿ ಆಕ್ರಮಣ ನಡೆಸುತ್ತಿದ್ದರು. ಇವುಗಳು ಇಲ್ಲಿನ ಸಾಮಾಜಿಕ ಮತ್ತು ಆರ್ಥಿಕ ಜೀವನಗಳನ್ನು ಬುಡಮೇಲಾಗಿ ಮಾಡುವಷ್ಟು ಸಮರ್ಥ ಹೊಂದಿದ್ದವು.[೨೨] ಆದರೆ ಇವುಗಳು ಎಷ್ಟು ಕಾಲ ಪರಿಣಾಮ ಬೀರಿದ್ದುವು ಎಂದು ತಿಳಿಯುವುದು ಕಷ್ಟವಾಗುತ್ತದೆ. ಇದಕ್ಕೆ ಕಾರಣ ಇವುಗಳನ್ನು ನಿರ್ಣಯಿಸಿ ಅಭಿಪ್ರಾಯ ನೀಡಲು ಪೋರ್ಚುಗೀಸು ದಾಖಲೆ ಸಹಾಯಕ ವಾಗುವುದಿಲ್ಲ.

ಶಾಸ್ತ್ರಿಯವರ ಅರಬ ಪೋರ್ಚುಗೀಸರ ವ್ಯಾಪಾರಗಳ ಪ್ರತಿಸ್ಪರ್ಧೆ ಸೊಂದಾ-ಪೋರ್ಚುಗೀಸರ ಸಂಬಂಧಗಳ ಕುರಿತಾಗಿ ಪ್ರಬಂಧಗಳನ್ನು ಸಮ್ಮೇಳನಗಳಲ್ಲಿ ಮಂಡಿಸಿದ್ದರು. ಆದಿಲ್‌ಶಾಹಿ-ಪೋರ್ಚುಗೀಸರ ಸಂಬಂಧಗಳನ್ನು ಕುರಿತಾಗಿ ಸಂಶೋಧನೆ ಮಾಡಿ ICHR ಗೆ ಸಮರ್ಪಿಸಿದ್ದರು. ಆದರೆ ಇದು ಬೆಳಕು ಕಾಣುವ ಮೊದಲೇ ಶ್ರೀಯುತರು ಅಕಸ್ಮಾತ್ (೮.೬.೧೯೯೧) ನಿಧನ ಹೊಂದಿದ್ದರು.

ಡಾ. ಪಿ.ಬಿ. ದೇಸಾಯಿಯವರು ಶಾಸನ ಮತ್ತು ಭಾಷೆಯ ಶೈಲಿಯಿಂದ, ಡಾ. ದೀಕ್ಷಿತರು ವೈಶಾಲ್ಯ ಮತ್ತು

ಸಂಘಟನೆ ಮುಖಾಂತರ ಮತ್ತು ಡಾ. ಬಿ.ಎಸ್. ಶಾಸ್ತ್ರಿಯವರು ಹೊಸ ಆಕರಗಳನ್ನು ಬೆಳಕಿಗೆ ತಂದು ಅವುಗಳನ್ನು ಸರಳ ಶೈಲಿಯಲ್ಲಿ ವಿವರ ನೀಡುವ ಮುಖಾಂತರ ಕರ್ನಾಟಕ ಇತಿಹಾಸ ಅಧ್ಯಯನವನ್ನು ಫಲಭರಿತವಾಗಿ ಮಾಡಿದ. ಈ ವಿದ್ವಾಂಸರುಗಳು ಕರ್ನಾಟಕ ಇತಿಹಾಸ ಅಧ್ಯಯನಕ್ಕೆ ಕೊಡುಗೆಗಳು ಅಜರಾಮರವಾಗಿವೆ.



## ಆಧಾರಸೂಚಿ ಮತ್ತು ಅಡಿಟಿಪ್ಪಣಿಗಳು


೧. ಶ್ರೀನಿವಾಸ ರಿತ್ತಿ, QJMS, Dec 1983, ಪುಟ ೧೯೧ (೧೯೧೬).

೨. ಶ್ರೀನಿವಾಸ ದೇಸಾಯಿ ಪಿ. **ನನ್ನ ತಂದೆ ಪಿ.ಬಿ. ದೇಸಾಯಿ,** ಸಂಯುಕ್ತ ಕರ್ನಾಟಕ, ೨೮-೮-೨೦೧೦, ಪುಟ ೫.

೩. QJMS Dec 1989, ಪುಟ ೨೦೦.

೪. ಶ್ರೀನಿವಾಸ ರಿತ್ತಿ, ಬಿ.ಆರ್. ಗೋಪಾಲ (ಸಂ). Studies in Indian History and culture (Dharwad (1972), ಪುಟ ೫೭೧.

೫. ಶ್ರೀನಿವಾಸ ಸರಮಾರಕರ್ ವಿಜ್ಞಾನೇಶ್ವರ ಮಿತಾಕ್ಷರ (ಗುಲಬರ್ಗಾ ೨೦೦೭), ಪುಟ ೧೯.

೬ ಡಾ. ಜೋತ್ಸ್ನಾ ಕಾಮತ್, ಡಾ. ಪಾಂಡುರಂಗ ಭೀಮರಾವ್ ದೇಸಾಯಿ, 'ಇತಿಹಾಸ ದರ್ಪಣ, (ಬೆಂಗಳೂರು ಜುಲೈ-ಸೆಪ್ಟೆಂಬರ್, ೨೦೧೧), ಪು ಟ ೩೦-೩೧.

೭. ಅದೇ.

೮. ಇವರ ಶೈಕ್ಷಣಿಕ ಸಾಧನೆಗೆ ನೋಡಿ QJMS, Dec 2005.

೯. ವಿಜಯನಗರ ಅಧ್ಯಯನ ೧, ಸಂಖ್ಯೆ ೧೪, ಪುಟ ೮೫-೮೭.

೧೦. ಜಿ.ಎಸ್. ದೀಕ್ಷಿತ್ 'ಕೃಷ್ಣ ದೇವರಾಯ ಮತ್ತು ಕನ್ನಡ ಸಂಸ್ಕೃತಿ'. ಕರ್ಮವೀರ, (ಹುಬ್ಬಳ್ಳಿ ದೀಪಾವಳಿ ವಿಶೇಷಾಂಕ ೨೦೦೯) ೯-೧೨. ಈ ಲೇಖನ ಡಾ. ದೀಕ್ಷಿತರು ಸತ್ತ ಐದು ವರ್ಷದ ನಂತರ ಪ್ರಕಟವಾಯಿತು. ದಿ. ಶ್ರೀನಿವಾಸ ಹಾವನೂರು ಈ ಲೇಖನವನ್ನು ನೀಡಿದ್ದಾರೆ.

೧೧. ದೀಕ್ಷಿತ್ ಜಿ.ಎಸ್. **ಪ್ರಾಚೀನ ಕರ್ನಾಟಕದ ಶಿಕ್ಷಣ** (ಧಾರವಾಡ ೧೯೭೦), ಇದೇ ಚಿಕ್ಕ ಹೊತ್ತಿಗೆಯಲ್ಲಿ ವಿಚಿತ್ರವಾದ ಚಂಡಾಟ (ಗಾಲ್ಫ್ ಆಡುತ್ತಿದ್ದರೆಂದೂ ಶಾಸನ ಆಧಾರದಿಂದ ದೀಕ್ಷಿತ್ ತಿಳಿಸಿದ್ದಾರೆ. ಇದು ಗಮನಾರ್ಹ ಸಂಗತಿ. ದೀಕ್ಷಿತ ಅದೇ ಚಿತ್ರಗ್ರಂಥ, ಪುಟ ೪೫-೪೬.

೧೨. ಅದೇ ಗ್ರಂಥ.

೧೩. Proceding of South Indian history, (Madurai 1982), P. 38-41.

೧೪. ಅದೇ 1984 (Timfort) P. 28-30.

೧೫. Indian Journal of History of Science (Hydrabad 1970). pp. 1-12.

೧೬. ಇತಿಹಾಸ ದರ್ಶನ, ಸಂಪುಟ ೧೨/೧೯೯೭, ಪುಟ I-IX.

೧೭. ಡಾ. ಬಿ.ಎಸ್. ಶಾಸ್ತ್ರಿಯವರ ಹೆಚ್ಚಿನ ವಿವರ QJMS. LXXXII 3-4, ಪುಟ ೪೩-೫೪.

೧೮. ಈ Ph.D ಪ್ರಬಂಧವು ಡಾ. ಶಾಸ್ತ್ರಿಯವರು ನಿಧನರಾದ ೯ ವರ್ಷಗಳ ನಂತರ ಪ್ರಕಟವಾಯಿತು. ಇದರ ಶೀರ್ಷಿಕೆ Goa-Kanara Portugal Delhi, 2001 ಇದನ್ನು ಪ್ರಕಟಿಸಿದವರ **ಸೋಮೆಯ ಪೊವಿಯರ (xavirs)** ಸಂಶೋಧನಾ ಸಂಸ್ಥೆಯವರು.

೧೯. ಬಿ.ಆರ್. ಗೋಪಾಲರ ಗ್ರಂಥದ ವಿಮರ್ಶೆ, ನೋಡಿ ಮಾನವೀಕ ಕರ್ಣಾಟಕ ಮೈಸೂರು ೧೯೭೩, ಸಂಪುಗ ೨, ಸಂಚಿಕೆ ೨.

೨೦. ಇದರ ಪುಟ ೧೨೦-೧೨೧ ವಿಮರ್ಶೆ, QJMS, p. 46 Indica (Bombay) Septemer 198 Vol. 18 No. 2, P. 142.

೨೧. Portugese paltios with Hydr ali (Betra goa 1984), ಪುಟ ೫೫.

೨೨. Studies in Karnataka History and culture Mysore 1987), ಪುಟ 95-103.

೨೩. ಅದೇ., ಪುಟ ೧೦೨.



# ಕರ್ನಾಟಕದಲ್ಲಿ ಗಾಂಧೀಜಿಯವರ ಪಾನನಿರೋಧ ಚಳುವಳಿ ಒಂದು ಅಧ್ಯಯನ

**ಶಿವಕುಮಾರ ಎ.* ಡಾ. ಎಸ್. ನಾಗರತ್ನಮ್ಮ****

**ಗಾಂ**ಧೀಜಿಯವರು ಭಾರತದ ರಾಷ್ಟ್ರೀಯ ಹೋರಾಟ ವೇದಿಕೆಯ ಮೇಲೆ ಕಾಣಿಸಿಕೊಂಡು, ದೇಶವನ್ನು ಪರರ ದಾಸ್ಯದಿಂದ ವಿಮುಕ್ತಿಗೊಳಿಸುವುದಷ್ಟೇ ಅಲ್ಲದೆ, ರಾಷ್ಟ್ರ ನಿರ್ಮಾಣದ ಉದ್ದೇಶವನ್ನು ಹೊಂದಿದ್ದರು. ತಮ್ಮ ಹೋರಾಟದ ಜೊತೆ ಜೊತೆಯುಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡು, ಅವುಗಳ ಯಶಸ್ಸಿಗೆ ನಿರಂತರವಾಗಿ ಶ್ರಮಿಸಿದರು.[೧] ಮುಂದೆ ಶಾಶ್ವತವಾದ ಹೊಸ ಸಮಾಜವನ್ನು ಕಟ್ಟುವ ವಿಷಯವೇ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳ ಮೂಲ ಉದ್ದೇಶವಾಗಿತ್ತು.[೨] ಹಾಗೂ ಹಳ್ಳಿಗಳಲ್ಲಿನ ಬಡಜನರ ಉದ್ದಾರಕ್ಕೋಸ್ಕರ [ಅವರ ದಿನನಿತ್ಯದ ಹಸಿವನ್ನು ನೀಗಿಸುವುದಕ್ಕೋಸ್ಕರ] ಮತ್ತು ಅವರ ಬದುಕನ್ನು ಹಸನಾಗಿಸಲು ಗಾಂಧೀಜಿಯವರು ಈ ರಚನಾತ್ಮಕ ಕಾರ್ಯಕ್ರಮಗಳನ್ನು ಜಾರಿಗೆ ತಂದರು.

ಗಾಂಧೀಜಿಯವರ ಈ ಉದ್ದೇಶವನ್ನು ಅಖಿಲ ಭಾರತ ಕಾಂಗ್ರೆಸ್ ಸಹ ಒಪ್ಪಿಕೊಂಡಿದ್ದಿತು. ಆದ್ದರಿಂದಲೇ ಗಾಂಧೀಜಿಯವರು ಕಾಂಗ್ರೆಸ್‌ನ ಕಾರ್ಯಕ್ರಮಗಳ ಪಟ್ಟಿಯಲ್ಲಿ ಈ ರಚನಾತ್ಮಕ ಕಾರ್ಯಕ್ರಮಗಳನ್ನು ಸೇರಿಸಿದ್ದರು. ಅವುಗಳೆಂದರೆ ಸ್ವದೇಶಿ, ಖಾದಿ ಗ್ರಾಮೋದ್ಯೋಗಗಳು, ಪಾನನಿರೋಧ, ಅಸ್ಪೃಶ್ಯತಾ ನಿವಾರಣೆ, ಗೋಸಂರಕ್ಷಣೆ, ಹಿಂದೂ–ಮುಸ್ಲಿಂ ಐಕ್ಯತೆ, ರಾಷ್ಟ್ರೀಯ ಶಿಕ್ಷಣ, ಮಹಿಳೆಯರ ಏಳಿಗೆ, ಆರೋಗ್ಯ ಮತ್ತು ನೈರ್ಮಲ್ಯ, ಹಿಂದಿ ಪ್ರಚಾರ ಇಂತಹ ದೇಶ ನಿರ್ಮಾಣದ ಕಾರ್ಯಕ್ರಮಗಳನ್ನು ಗಾಂಧೀಜಿಯವರು ರೂಪಿಸಿದರು.[೩]

೧೯೧೮ರ ವರೆಗೂ ಶಾಸನಬದ್ಧ ಚಟುವಟಿಕೆಗಳಲ್ಲಿ ತೊಡಗಿದ್ದ ಕಾಂಗ್ರೆಸ್ ಮಹಾತ್ಮಗಾಂಧೀಜಿಯವರ ನೇತೃತ್ವದಲ್ಲಿ ಅಸಹಕಾರ ಚಳುವಳಿಯ ಮಾರ್ಗವನ್ನು ಹಿಡಿಯಿತು. ಕರ್ನಾಟಕದಲ್ಲಿಯೂ ಸಹ ಜನತೆ ಗಾಂಧೀಜಿಯವರ ಪ್ರಭಾವಕ್ಕೆ ಮಣಿಯಲಾರಂಭಿಸಿದರು. ೧೯೨೦ರ ನಾಗಪುರ ಕಾಂಗ್ರೆಸ್ ಅಧಿವೇಶನ ದೇಶದಾದ್ಯಂತ ಬ್ರಿಟಿಷರ ವಿರುದ್ಧ ಅಸಹಕಾರ ಚಳುವಳಿಗೆ ತನ್ನ ಒಪ್ಪಿಗೆಯನ್ನಿತ್ತು, ಅಸಹಕಾರ ಚಳುವಳಿಯ ಭಾಗವಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಳ್ಳಲು ಕರೆ ನೀಡಿತು.

ಯಾವ ಮನುಷ್ಯ ಇಂದು ತನಗೆ ದಿಕ್ಕು ದೆಸೆಯಿಲ್ಲದೆ ಸಮಾಜದ ಕೊನೆಯಲ್ಲಿ ಉಳಿದಿದ್ದಾನೆಯೋ ಆತನ ಬಗ್ಗೆ ನಾವು ಯೋಚಿಸದ ಹೊರತು ನಮ್ಮ ಸಮಾಜದಲ್ಲಿ ಸರಿಸಮಾನತ್ವವನ್ನು ಕಾಣಲು ಸಾಧ್ಯವಿಲ್ಲ. ಆದ್ದರಿಂದ ನಾವುಗಳು ಈ ಸಮಾಜದಲ್ಲಿರುವ ಅಂಗವಿಕಲರೂ ಹಾಗೂ ಅಸಹಾಯಕರ ಪುರೋಭಿವೃದ್ಧಿಯವರೆಗೂ ಯೋಚನೆ ಮಾಡಬೇಕಾಗಿದೆ. ಸಮಾಜದ ಇಂತಹ ಕಟ್ಟಕಡೆಯ ಮನುಷ್ಯರ ಉದ್ದಾರವಾಗುವುದೇ ನಮ್ಮ ಗುಡಿಯಾಗಿರಬೇಕು. ಅದು ನಮ್ಮ ಧ್ಯೇಯವು ಸಹ ಆಗಿರಬೇಕು. ಕೇವಲ ಶಕ್ತಿವಂತರು ಮಾತ್ರ ಉದ್ಧಾರವಾಗದೆ ಬಲಹೀನರು ಮತ್ತು ದುರ್ಬಲರನ್ನು ಸಹ ಶಕ್ತಿವಂತರು ತಮ್ಮ ಜೊತೆಯಲ್ಲಿ ಸೇರಿಸಿಕೊಳ್ಳಬೇಕಾಗಿದೆ. ಆದ್ದರಿಂದ ಅಖಿಲ ಭಾರತ ಕಾಂಗ್ರೆಸ್ ಸಂಘಟನೆಯೆಂಬುದು ಜನತಾ ಸಂಘಟನೆಯಾಗಬೇಕೆಂಬುದು ಗಾಂಧೀಜಿಯವರ ಮಹದಾಸೆಯಾಗಿತ್ತು. ಈ ಮಹದಾಸೆಯ ಕಾರ್ಯಗತಕ್ಕಾಗಿ ರಚನಾತ್ಮಕ ಕಾರ್ಯಕ್ರಮಗಳನ್ನನುಸರಿಸಲು ಜನತೆಗೆ ಕರೆ ನೀಡಿದರು ಎಂದರೆ ತಪ್ಪಾಗಲಾರದು.

ಒಂದು ಉನ್ನತ ನಾಗರೀಕತೆಯನ್ನು ಸ್ಥಾಪನೆ ಮಾಡಬೇಕಾದರೆ ನೂರಾರು ವರ್ಷಗಳಾಗುತ್ತದೆ ಎನ್ನಬಹುದು. ಗಾಂಧೀಜಿಯವರು ಹೇಳಿದ ಎಲ್ಲಾ ರಚನಾತ್ಮಕ ಕಾರ್ಯಕ್ರಮಗಳು ಇಂದಿಗೂ ಕಾರ್ಯಗತವಾಗುತ್ತವೆ ಎಂದು ನಾವು ಹೇಳಲಾಗದು. ಇಂದು ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳು ವಿಪರೀತವಾಗಿರಬಹುದು ಆದರೆ ನಾವು ಈ ವಿಚಾರವನ್ನು ಆದಷ್ಟು ಅಭ್ಯಾಸ ಮಾಡುತ್ತಾ ನಮ್ಮ ಜನಗಳನ್ನು ವಿಕಾಸಗೊಳಿಸುತ್ತಾ ಗಾಂಧೀಜಿಯವರ ಈ ರಚನಾತ್ಮಕ

* ಸಂಶೋಧನಾ ವಿದ್ಯಾರ್ಥಿ, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ–೫೬೦೦೫೬.
** ಸಹ ಪ್ರಾಧ್ಯಾಪಕರು, ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ–೫೬೦೦೫೬.

ಕಾರ್ಯಕ್ರಮಗಳನ್ನು ಬೆಳೆಸಬೇಕು. ಅವುಗಳು ಇಂದಿನ ದಿನಗಳಲ್ಲಿ ಅಷ್ಟೊಂದು ಪ್ರಗತಿದಾಯಕವಾಗಿ ನಡೆಯುತ್ತಿಲ್ಲವಾದರೂ ಇಂದಿಲ್ಲಾ ನಾಳೆಯಾದರೂ ಒಂದು ಒಳ್ಳೆಯ ಸಮಾಜ ಸೃಷ್ಟಿಯಾಗುವುದಕ್ಕೋಸ್ಕರ ಮನುಷ್ಯ ಆ ಪ್ರಯತ್ನ ಮಾಡುತ್ತಾನೆ. ಅದಕ್ಕಾಗಿ ಗಾಂಧೀಜಿಯಂತಹ ಅನೇಕರು ಬಂದು ಮಾರ್ಗದರ್ಶನ ಕೊಡಬಹುದು. ಈ ದೃಷ್ಟಿಯಿಂದ ನಾವು ಆದಷ್ಟು ಮಟ್ಟಿಗೆ ಗಾಂಧೀಜಿಯವರು ಹಾಕಿಕೊಟ್ಟಂತಹ ಈ ರಚನಾತ್ಮಕ ಕಾರ್ಯಕ್ರಮಗಳನ್ನು ಮುಂದುವರೆಸಿಕೊಂಡು ಹೋಗಲು ಪ್ರಯತ್ನಿಸಬೇಕು.

**ಪಾನನಿರೋಧ ಚಳುವಳಿ :** ಗಾಂಧೀಜಿಯವರು ಅಭಿಪ್ರಾಯಪಟ್ಟಿರುವಂತೆ "ಅಸ್ಪೃಶ್ಯತೆಯ ಆಚರಣೆ ಮತ್ತು ಮದ್ಯಪಾನ ಸೇವನೆ ಒಂದು ರಾಷ್ಟ್ರದ ಅಭಿವೃದ್ದಿಗೆ ಇರುವ ಮಹಾ ತಡೆಗೋಡೆಗಳು" ಎಂದು ಅಭಿಪ್ರಾಯಪಟ್ಟಿದ್ದಾರೆ. ಪಾನನಿರೋಧವು ರಚನಾತ್ಮಕ ಕಾರ್ಯಕ್ರಮಗಳಲ್ಲಿ ಬಹಳ ಪ್ರಮುಖವಾದದ್ದು, ಇದು ಭಾರತದ ದುಷ್ಟ ಪದ್ಧತಿಗಳಲ್ಲಿ ಒಂದು ಎಂದು ಹೇಳಬಹುದು. ಗಾಂಧೀಜಿಯವರ ದೃಷ್ಟಿಯಲ್ಲಿ 'ಮದ್ಯಪಾನ ಸೇವನೆಯು ವ್ಯಭಿಚಾರಕ್ಕಿಂತಲೂ ಹೇಯವಾದದ್ದು, ಮದ್ಯಪಾನ ವ್ಯಸನಕ್ಕೆ ತುತ್ತಾದ ರಾಷ್ಟ್ರಕ್ಕೆ ಆತ್ಮನಾಶವಲ್ಲದೆ ಅನ್ಯಗತಿ ಇಲ್ಲ.[೪] ಮದ್ಯ ಮತ್ತು ಮಾದಕ ಪದಾರ್ಥಗಳು ಪಿಶಾಚಿಯ ಎರಡು ಕೈಗಳು. ಇವುಗಳು ಮನುಷ್ಯನನ್ನು ಅಸಹಾಯಕ, ಗುಲಾಮನನ್ನಾಗಿ, ಬುದ್ಧಿಭ್ರಷ್ಟರನ್ನಾಗಿ ಮತ್ತು ಪ್ರಜ್ಞಾಹೀನರನ್ನಾಗಿಯೂ ಮಾಡುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿ ಇದರ ಸಂಪೂರ್ಣ ನಿರ್ಮೂಲನೆಗೆ ಕಾರ್ಯಪ್ರವೃತ್ತರಾದರು.

ಪಾನನಿರೋಧದಿಂದ ಒಂದು ಬಲಿಷ್ಠ ಸದೃಢ ಸಮಾಜವನ್ನು ನಿರ್ಮಿಸಬಹುದು. ಹರಿಜನರ ಅಭಿವೃದ್ಧಿಯಲ್ಲಿ ಪಾನನಿರೋಧ ಬಹಳ ಪ್ರಮುಖವಾದ ಅಂಶವಾಗಿದೆ. ಇವರುಗಳು ತಮ್ಮ ದುಡಿತದ ಬಹಳಷ್ಟು ಹಣವನ್ನು ಮದ್ಯಸೇವನೆಗೆ ವೆಚ್ಚ ಮಾಡುತ್ತಾರೆ. ಮಿಲಿಯನ್‌ಗಟ್ಟಲೆ ಜನ ಹಸಿವು, ಬಡತನದ ಜೀನವನ್ನು ಅನುಭವಿಸುತ್ತಾರೆ.[೫] ಈ ಕಾರಣಕ್ಕಾಗಿ ಗಾಂಧೀಜಿಯವರು ಪಾನನಿರೋಧ ಜಾರಿಗೆ ತರುವಂತೆ ಕಾಂಗ್ರೆಸ್‌ಅನ್ನು ಒತ್ತಾಯಿಸುತ್ತಿದ್ದರು. ಈ ಕಾರಣದಿಂದ ಕಾಂಗ್ರೆಸ್ ಪಾನನಿರೋಧವನ್ನು ತನ್ನ ಕಾರ್ಯಕ್ರಮಗಳಲ್ಲಿ ಸೇರಿಸಿಕೊಂಡಿತು.[೬] ೧೯೨೧–೨೨ರ ಅಸಹಕಾರ ಚಳುವಳಿ ಸಂದರ್ಭಕ್ಕೆ ಪಾನನಿರೋಧದ ಪರ ತೀವ್ರತರ ಹೋರಾಟಗಳು ನಡೆದವು. ಮದ್ಯಪಾನದಿಂದ ಸರ್ಕಾರಕ್ಕೆ ದೊರೆಯುವ ಆದಾಯ ಅತ್ಯಂತ ಕೀಳುಮಟ್ಟದ ಆದಾಯವಾಗಿರುತ್ತದೆ. ಅಂತಹ ಆದಾಯದಿಂದ ರಾಷ್ಟ್ರದ ಪ್ರಗತಿಗೆ ಮತ್ತು ರಾಷ್ಟ್ರದ ಶಿಕ್ಷಣಕ್ಕೆ ಇದರಿಂದ ಬಂದಂತಹ ಹಣವನ್ನು ತೊಡಗಿಸುವುದು ಬಹಳ ಕೀಳುಮಟ್ಟದ ರಾಜಕಾರಣವಾಗುತ್ತದೆ ಹಾಗೂ ಅದು ಅಷ್ಟೊಂದು ಸೂಕ್ತವಲ್ಲ ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿದೆ.

ಯುವ ಜನಾಂಗ ಅತ್ಯಂತ ಅತಂತ್ರ ಸ್ಥಿತಿ ತಲುಪುತ್ತಿರುವುದಕ್ಕೆ ಮದ್ಯಪಾನವೇ ಕಾರಣವಾಗಿದೆ ಎಂದು ತಿಳಿದ ಕಾಂಗ್ರೆಸ್‌ನ ಕಾರ್ಯಕರ್ತರು ಪಾನನಿರೋಧ ಪೂರ್ವ ಕಾಲದಲ್ಲೇ ತಿಲಕರು ಕರ್ನಾಟಕದ ಬೆಳಗಾವಿಯಲ್ಲಿ ಪಾನನಿರೋಧಕ್ಕೆ ಕರೆ ನೀಡಿದಾಗ, ಗೋವಿಂದರಾವ್ ಯಾಳಗಿ ಮತ್ತು ಜೋಷಿ ಕರ್ನಾಟಕದಲ್ಲಿ ಪ್ರಥಮವಾಗಿ ಪಾನನಿರೋಧ ಚಳುವಳಿಯನ್ನು ನಡೆಸಿ, ದಂಡ ಕೊಡದೆ ಜೈಲು ಶಿಕ್ಷೆಯನ್ನು ಅನುಭವಿಸಿದರು.

ಅನಂತರ ಕರ್ನಾಟಕದಲ್ಲಿ ಪಾನನಿರೋಧ ಚಳುವಳಿಯ ಚಟುವಟಿಕೆಗಳನ್ನು ವ್ಯಾಪಕವಾಗಿ ಕಾಣಬಹುದು. ಅಸಹಕಾರ ಚಳುವಳಿಯಲ್ಲೇ ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದರ ಮೂಲಕ ಪಾನನಿರೋಧ ಚಳುವಳಿಯನ್ನು ಗುರುತಿಸಬಹುದು. ತದನಂತರ ೧೯೩೧ರಲ್ಲಿ ಕರ್ನಾಟಕದಲ್ಲಿ ಪಾನನಿರೋಧ ಚಳುವಳಿ ಭರದಿಂದ ಸಾಗಿತು. ಕಾರಣ ಮದ್ಯಸೇವನೆಯಿಂದ ಮಾನವನ ಆರ್ಥಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಜೀವನದ ಪ್ರಗತಿಯನ್ನು ಕಾಣುವುದಕ್ಕೆ ಸಾಧ್ಯವಿಲ್ಲ ಎಂಬುದನ್ನು ಮೈಸೂರಿನ ಎಂ. ನಂಜುಂಡಪ್ಪ, ಸಿ. ಲಿಂಗೇಗೌಡ, ಬಸಪ್ಪಶೆಟ್ಟಿ ಮತ್ತು ದೊಡ್ಡಯ್ಯ ಮತ್ತಿತರರು ಪಾನನಿರೋಧವನ್ನು ಜಾರಿಗೆ ತರಲು ಮೈಸೂರು ಸರ್ಕಾರವನ್ನು ಒತ್ತಾಯಿಸುತ್ತಿದ್ದರು. ೧೯೨೮ರ ನಂತರ ಅಸೆಂಬ್ಲಿ ಮತ್ತು ಕೌನ್ಸಿಲ್‌ಗಳಲ್ಲಿ ಪಾನನಿರೋಧ ಪ್ರಶ್ನೆಯು ಚರ್ಚೆಯ ವಿಷಯವಾಯಿತು. ಈ ವಿಚಾರಕ್ಕೆ ಪ್ರತಿಕ್ರಿಯಿಸಿದ ದಿವಾನರು 'ಸಾರ್ವಜನಿಕರು ಮದ್ಯಸೇವನೆಯನ್ನು ತ್ಯಜಿಸಲು ಸಿದ್ದರಾಗಿದ್ದರೆ, ಸರ್ಕಾರಕ್ಕೆ ಅದರಿಂದ ಎಷ್ಟೇ ಆದಾಯ ಇದ್ದರೂ ಕಳೆದುಕೊಳ್ಳಲು ಸಿದ್ದವಾಗಿದೆ.[೮] ಎಂಬುದನ್ನು ತಿಳಿಸುವುದರ ಮೂಲಕ ಪಾನನಿರೋಧಕ್ಕೆ ತಮ್ಮ ಬೆಂಬಲವನ್ನು ಸೂಚಿಸಿದರು.

ಬಳ್ಳಾರಿ ಜಿಲ್ಲೆಯಲ್ಲಿ ೧೯೨೯ರಲ್ಲಿ 'ಮದ್ಯ ನಿಷೇದ ಸಮಿತಿ' ಪ್ರಾರಂಭವಾಗಿ ಟೇಕೂರು ಸುಬ್ರಮಣ್ಯಂ ಅವರು ಇದರ ಕಾರ್ಯದರ್ಶಿಯಾಗಿದ್ದರು.[೯] ಇವರು ಸಂಸ್ಥೆಯ ಮೂಲಕ ಅಮಲು ವಸ್ತುಗಳ ನಿಷೇಧ ಚಳುವಳಿಯನ್ನು ನಡೆಸಿದರು. ಪಾನ ಪ್ರತಿಬಂಧಕ ಆಂದೋಲನದಲ್ಲಿ ಮುಂಚೂಣಿಯಲ್ಲಿದ್ದ ಅಂದಿನ ಮದ್ರಾಸ್ ಸರ್ಕಾರವು ಈ ಮದ್ಯನಿಷೇಧ ಸಮಿತಿಗೆ ಧನಸಹಾಯವನ್ನು ಸಹ ನೀಡಿತು.

ಟಿ.ಬಿ. ಕೇಶವರಾಯರು ಸಹ ಹರಪ್ಪನಹಳ್ಳಿಯನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಪಾನನಿರೋಧ ಚಳುವಳಿಯನ್ನು ಹಮ್ಮಿಕೊಂಡರು.[೧೦] ಅಲ್ಲಿನ ನೆರೆಹೊರೆಯ

ಮದ್ಯದ ಅಂಗಡಿಗಳನ್ನು ಮುಚ್ಚಿಸಿದರು. ಈ ಚಳುವಳಿಯು ೧೯೩೦ರ ಸಂದರ್ಭದಲ್ಲಿ ಸೇಂದಿ ಗಿಡ ಅಥವಾ ಈಚಲು ಗಿಡಗಳನ್ನು ಕಡಿಯುವ ಮೂಲಕ ಅರಣ್ಯ ಸತ್ಯಾಗ್ರಹವನ್ನು ನಡೆಸಿ ಆ ಮೂಲಕ ಚಳುವಳಿಯು ತೀವ್ರ ಸ್ವರೂಪವನ್ನು ಪಡೆಯುವಂತೆ ಮಾಡಿದರು. ಈ ಚಳುವಳಿಯು ಮೊದಲು ಬಾಂಬೆ-ಕರ್ನಾಟಕದಲ್ಲಿ ಪ್ರಾರಂಭವಾಗಿ, ಬಳ್ಳಾರಿ, ಬಿಜಾಪುರ, ಬೆಳಗಾಂ ಮತ್ತು ಧಾರವಾಡ ಮತ್ತಿತರ ಸ್ಥಳಗಳಲ್ಲಿ ವ್ಯಾಪಕವಾಗಿ ಹರಡಿತು.[೧೧]

ಏಪ್ರಿಲ್ ೧೯೩೧ರಲ್ಲಿ ಸರ್ಕಾರವು ಬೆಂಗಳೂರಿನ ಟಿಪ್ಪು ಅರಮನೆಯಲ್ಲಿ ಸೇಂದಿ ಗುತ್ತಿಗೆಗೆ ಹರಾಜನ್ನು ಏರ್ಪಡಿಸಿದಾಗ, ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಮತ್ತು ಮೈಸೂರಿನ ಪಾನನಿರೋಧ ಸಂಘ, ಅರಮನೆಯ ಮುಂದೆ ಪಿಕೆಟಿಂಗ್ ನಡೆಸಲು ಮುಂದಾದಾಗ, ಸರ್ಕಾರ ಬಿಗಿಬಂದೋಬಸ್ತ್‌ನ್ನು ಮಾಡಿತು.[೧೨]

೧೯೩೧ರಲ್ಲಿ ತುಮಕೂರು ಜಿಲ್ಲೆಯಲ್ಲಿ ನಡೆದ ಪಾನನಿರೋಧ ಚಳುವಳಿಯು ಮೈಸೂರು ಸಂಸ್ಥಾನದಲ್ಲಿಯೇ ಒಂದ ಮೈಲಿಗಲ್ಲಾಗಿದೆ. ತುಮಕೂರು ಹತ್ತಿರದ ಎಲ್ಲಾಪುರದ ಹೆಂಡದಂಗಡಿಯ ಮುಂದೆ ಕಾಂಗ್ರೆಸ್ ಪ್ರಮುಖರಾದ ಬಿ.ಸಿ. ನಂಜುಂಡಯ್ಯ ಮತ್ತು ಎಂ.ಎನ್. ವಿಠೋಬರಾವ್ ಮುಂತಾದವರು ಪಿಕೆಟಿಂಗ್ ಮಾಡುವುದರ ಮೂಲಕ ಕುಡಿಯುವವರ ಸಂಖ್ಯೆಯನ್ನು ಕಡಿಮೆಗೊಳಿಸಿದರು. ಇದರ ಪ್ರತಿಫಲವಾಗಿ ಸತ್ಯಾಗ್ರಹಿಗಳು ಅಂಗಡಿಯ ಮಾಲೀಕರಿಂದ ಹಲವು ರೀತಿಯ ತೊಂದರೆಯುನ್ನು ಅನುಭವಿಸ ಬೇಕಾಯಿತು.[೧೩]

ಜಿಲ್ಲಾ ಕಾಂಗ್ರೆಸ್ ಕಮಿಟಿಗಳು ಸಾರ್ವಜನಿಕ ಸಭೆಗಳನ್ನು ವ್ಯವಸ್ಥೆ ಮಾಡಿ, ಕೆಲವು ಪ್ರಮುಖ ಕಾಂಗ್ರೆಸ್ಸಿಗರನ್ನು ಆಹ್ವಾನಿಸಿ ಮದ್ಯಪಾನ ಕುರಿತು ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಇಂತಹ ಹಲವು ಸಂದರ್ಭಗಳಲ್ಲಿ, ಮದ್ಯ ಗುತ್ತಿಗೆದಾರರ ವಿರೋಧವನ್ನು ಎದುರಿಸಬೇಕಾಯಿತು. ಈ ಚಳುವಳಿಯು ಸಹ ಇತರ ರಚನಾತ್ಮಕ ಕಾರ್ಯಗಳಂತೆ ಕ್ಲಿಷ್ಟವಾದ ಕಾರ್ಯವೆಂದೇ ಹೇಳಬಹುದು.

೧೯೩೦ರ ಸಂದರ್ಭದಲ್ಲಿ ಕೊಡಗಿನಲ್ಲಿಯೂ ಪಾನ ನಿರೋಧ ಚಳುವಳಿ ತೀವ್ರವಾಯಿತು. ವಿರಾಜಪೇಟೆಯಲ್ಲಿ ಸತ್ಯಾಗ್ರಹ ಶಿಬಿರವನ್ನು ಸಂಘಟಿಸಿದರು.[೧೪] ಪೊನ್ನಪ್ಪನವರ ಅಧ್ಯಕ್ಷತೆಯಲ್ಲಿ, ಮಡಿಕೇರಿಯಲ್ಲಿ ಸಭೆಯಾಗಿ, ಪಾನನಿರೋಧ ಚಳುವಳಿಗೆ ಚಾಲನೆ ದೊರೆಯಿತು. ಹಾಗೆಯೇ ಬೆಳ್ಳಿಯಪ್ಪ, ಹೆಚ್.ಆರ್. ಕೃಷ್ಣಯ್ಯ, ಕೋಳಿವಾಡ ಕರುಂಬಯ್ಯ, ಕೆ.ಪಿ. ಚಿಣ್ಣಪ್ಪ ಮತ್ತು ಅಬ್ದುಲ್ ಗಫಾರ್ ಖಾನ್ ಮುಂತಾದವರ ಮುಂದಾಳತ್ವದಲ್ಲಿ ಪ್ರಚಾರ ಸಭೆಗಳಾದವು.[೧೫] ದಿನಾಂಕ ೩೦-೫-೧೯೩೦ರಂದು ಬೆಳ್ಳಿಯುಪ್ಪ ಕೊಡಗಿನ ಜಿಲ್ಲಾ ಕಮೀಷನರ್‌ಗೆ ಮದ್ಯಪಾನದಿಂದ ಆಗುವ ಮಾರಕ ಪರಿಸ್ಥಿತಿಯ ಬಗ್ಗೆ ಕೋರಿಕೆ ಪತ್ರವನ್ನು ಸಲ್ಲಿಸಿದರು. ಆದರೆ ಸರ್ಕಾರ ಈ ಪತ್ರದ ಕಡೆ ಗಮನ ಹರಿಸಲಿಲ್ಲ. ಆದಕಾರಣ ಪೊನ್ನಂಪೇಟೆಯಲ್ಲಿ ದಿನಾಂಕ ೧೦-೬-೧೯೩೦ರಂದು ಬೆಳ್ಳಿಯಪ್ಪನವರ ನೇತೃತ್ವದಲ್ಲಿ ಈ ಚಳುವಳಿಯನ್ನು ಹಮ್ಮಿಕೊಳ್ಳಲಾಯಿತು.[೧೬] ಅಮ್ಮತಿ, ಶ್ರೀಮಂಗಲ, ಕುಟ್ಟ ಮತ್ತು ಹುದಿಕೇರಿಗಳಲ್ಲಿ ಶಿಬಿರಗಳನ್ನು ಪ್ರಾರಂಭಿಸಿ, ಮದ್ಯದಂಗಡಿಗಳ ಮುಂದೆ ಪಿಕೆಟಿಂಗ್ ಮಾಡಲಾಯಿತು. ಬೆಳ್ಳಿಯಪ್ಪ ತಮ್ಮ ದಸ್ತಗಿರಿ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಮುಷ್ಕರ ಪ್ರಾರಂಭಿಸಲು ಕರೆ ನೀಡಿದರು.[೧೭] ಇದರಿಂದಾಗಿ ಕ್ರಮೇಣ ಕೊಡಗಿನಲ್ಲಿ ಮದ್ಯ ಸೇವಿಸುವವರ ಪ್ರಮಾಣ ಕಡಿಮೆಯಾಯಿತು.[೧೮]

ಮೈಸೂರು ಡಿಸ್ಟ್ರಿಕ್ಟ್ ಕಾಂಗ್ರೆಸ್ ಕಮಿಟಿಯ ದಿನಾಂಕ ೧೦ ಜುಲೈ ೧೯೩೦ರಂದು ಚಾಮರಾಜಪೇಟೆಯಲ್ಲಿ ಸಾರ್ವಜನಿಕ ಸಭೆಗಳನ್ನು ಏರ್ಪಡಿಸಿತ್ತು. ಸಭೆಗೆ ಆಗಮಿಸಿದ್ದ ಹೆಚ್.ಸಿ. ದಾಸಪ್ಪನವರು ಕುಡಿತಕ್ಕೆ ಹೆಚ್ಚು ಹೆಚ್ಚು ಹಣ ಖರ್ಚು ಮಾಡಿ ಪೋಲು ಮಾಡುವುದರಿಂದ ಬಹಳ ಕೆಟ್ಟ ಪರಿಣಾಮವನ್ನುಂಟು ಮಾಡುತ್ತದೆ.[೧೯] ಈಗ ಮದ್ಯಪಾನವನ್ನು ನಾಶಪಡಿಸುವುದು ಒಂದೇ ಮಾರ್ಗ ಎಂದು ಮಾತನಾಡಿದರು. ಬೆಂಗಳೂರು ನಗರ ಕಾಂಗ್ರೆಸ್ ದಿನಾಂಕ : ೨೭ ಸೆಪ್ಟೆಂಬರ್ ೧೯೩೮ರಂದು 'ಮದ್ಯಪಾನ ವಿರೋಧ' ದಿನವನ್ನು ಆಚರಿಸಿತು.

ಮೈಸೂರು ಕಾಂಗ್ರೆಸ್ ಅಧಿವೇಶನದಲ್ಲಿ ಅಂಗೀಕೃತವಾದ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರಲು ರಾಜ್ಯದಾದ್ಯಂತ ದಿನಾಂಕ : ೧೭-೫-೧೯೪೭ರಿಂದ ೨೩-೫-೧೯೪೭ರ ವರೆಗೂ ಮೈಸೂರು ಕಾಂಗ್ರೆಸ್ ಸಪ್ತಾಹವನ್ನು ಆಚರಿಸ ಬೇಕೆಂದು ಕಾಂಗ್ರೆಸ್ ನಿರ್ಧರಿಸಿತು.[೨೦] ಈ ನಿರ್ಧಾರದಂತೆ ಮೇ ೨೨, ೧೯೪೭ರಂದು 'ಕರ್ನಾಟಕದಾದ್ಯಂತ ಪಾನನಿರೋಧ ಚಳುವಳಿಯನ್ನು ಹಮ್ಮಿಕೊಳ್ಳಲಾಯಿತು'. ಪಾನನಿರೋಧಕ್ಕೆ ಹರಿಜನರನ್ನು ಸಹಕರಿಸುವಂತೆ ಕೋರಿ, ಕೆಲವೆಡೆ ಅವರಿಂದ ಮದ್ಯಪಾನ ಮಾಡದಿರುವ ಹಾಗೆ ಪ್ರತಿಜ್ಞೆಯನ್ನು ಮಾಡಿಸಿದರು.[೨೧]

ಮೈಸೂರು ಸರ್ಕಾರವು ಪ್ರಯೋಗಾತ್ಮಕವಾಗಿ ಅಫೀಮು ಮತ್ತು ಮದ್ಯ ನಿಷೇಧವನ್ನು ಜಾರಿಗೆ ತಂದಿತು. ಚನ್ನಪಟ್ಟಣದಲ್ಲಿ ಮದ್ಯದ ಅಂಗಡಿಗಳನ್ನಾಗಲಿ ಅಥವಾ ಅಫೀಮು ಅಂಗಡಿಗಳನ್ನಾಗಲಿ ತೆರೆಯುವಂತಿರಲಿಲ್ಲ. ಎಂದು ಸರ್ಕಾರ ಜುಲೈ ೧-೧೯೪೧ರಂದು ಆಜ್ಞೆಯನ್ನು ಹೊರಡಿಸಿತು.[೨೨] ಹೀಗೆ ಸರ್ಕಾರದ ಪ್ರಯತ್ನಗಳು, ಪ್ರಯೋಗಾತ್ಮಕ

ವಾಗಿದ್ದವೆ ಹೊರತು ಪರಿಣಾಮಕಾರಿಯಾಗಿರಲಿಲ್ಲ. ಸರ್ಕಾರವೇ ಆರ್ಥಿಕ ನಷ್ಟವನ್ನು ಅನುಭವಿಸಬೇಕಾಯಿತು.

ಕಾಲಕ್ರಮೇಣ ಪಾನನಿರೋಧ ಬಿಗಿಯಿಂದಾಗಿ ಸರ್ಕಾರದ ಆದಾಯದಲ್ಲಿ ಬಹಳಷ್ಟು ಏರುಪೇರಾಯಿತು. ಅದೇ ಸಂದರ್ಭದಲ್ಲಿ ಕಳ್ಳಭಟ್ಟಿಯ ಉತ್ಪಾದನೆ ಹೆಚ್ಚಾಯಿತು. ಇದರಿಂದಾಗಿ ಸರ್ಕಾರಕ್ಕೆ ಬರುವ ಆದಾಯ ಕಡಿಮೆಯಾಯಿತೇ ಹೊರತು ಕುಡಿಯುವವರ ಸಂಖ್ಯೆ ಕಡಿಮೆಯಾಗಲಿಲ್ಲ.

ಇದನ್ನು ಗಮನಕ್ಕೆ ತೆಗೆದುಕೊಂಡ ಸರ್ಕಾರ 'ಕರ್ನಾಟಕ ಪಾನನಿರೋಧ ಅಧಿನಿಯಮ'ವನ್ನು ಸಡಿಲಗೊಳಿಸಿತು. ೧೯೭೧ರಲ್ಲಿ ಕರ್ನಾಟಕ ಸರ್ಕಾರವು 'ಪಾನ ಸಂಯಮ ಮಂಡಳಿ'ಯನ್ನು ಸ್ಥಾಪಿಸಿತು. 'ಈ ಸಂಸ್ಥೆಯು ಕುಡಿತದಿಂದಾಗುವ ದುಷ್ಪರಿಣಾಮಗಳ ಬಗ್ಗೆ ವಿಷಯಗಳನ್ನು ಸೇರಿಸಿ, ವಿದ್ಯಾರ್ಥಿ ದೆಸೆಯಿಂದಲೇ ಅರಿವು ಮೂಡಿಸಿ, ಈ ದುಷ್ಪರಿಣಾಮಗಳನ್ನು ಮೊಳಕೆಯಲ್ಲೇ ಚಿವುಟವಂತಹ ಪ್ರಯತ್ನಗಳನ್ನು ಮಾಡುವ ಉದ್ದೇಶದಿಂದ ಕಾರ್ಯ ನಿರ್ವಹಿಸಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಮೌಲಾನಾ ಅಬ್ದುಲ್ ಕಲಾಂ ಆಜಾದ್ (ಸಂ), **ಗಾಂಧಿಯನ್ ಔಟ್‌ಲುಕ್ ಅಂಡ್ ಟೆಕ್ನಿಕ್ಸ್** (ದೆಹಲಿ, ೧೯೫೩), ಪುಟ ೩೪೯.

೨. ಮೋ.ಕ. ಗಾಂಧಿ, **ಖಾದಿ ಗ್ರಾಮೋದ್ಯೋಗ,** (ಅನು) ವಿ.ಟಿ. ಭಟ್ಟ, (ಬೆಂಗಳೂರು-೧೯೬೮), ಪುಟ ೫೧.

೩. ಮೋ.ಕ. ಗಾಂಧಿ, **ಕನ್‌ಸ್ಟ್ರಕ್ಟೀವ್ ಪ್ರೋಗ್ರಾಮ್ಸ್ ಇಟ್ಸ್ ಮೀನಿಂಗ್ ಅಂಡ್ ಪ್ಲೇಸ್** (ಅಹಮದಾಬಾದ್, ೧೯೬೩), ಪುಟ ೧೨೬.

೪. ಸಿದ್ದವ್ವನಹಳ್ಳಿ ಕೃಷ್ಣಶರ್ಮ, ಸಂ. **ಗಾಂಧಿ ಮತ್ತು ಕರ್ನಾಟಕ,** ಮೈಸೂರು-೧೯೬೮, ಪುಟ ೩೬.

೫. **ಸಂಯುಕ್ತ ಕರ್ನಾಟಕ,** ಗಾಂಧಿ ಶತಾಬ್ದ ಸಂಚಿಕೆ, ಅಕ್ಟೋಬರ್, ೧೯೬೯.

೬. ಭರತನ ಕುಮಾರಪ್ಪ ವೈ. **ಪ್ರಾಹಿಭಿಷನ್,** ಅಹಮದಾಬಾದ್, ೧೯೫೨, ಪುಟ ೨೫.

೭. ಜಿ.ಓ. ನಂ. ೨೧೯೬, ದಿನಾಂಕ : ೫-೯-೧೯೩೮, ಡೆವಲಪ್‌ಮೆಂಟ್ ರಿಪೋರ್ಟ್ ಬಿ.ಎನ್.ಎ.

೮. ಆರ್ನಲ್ಡ್ ಡಿ. ಕಾಂಗೆಸ್ ಇನ್ ತಮಿಳುನಾಡು ಎ ನ್ಯಾಷನಾಲಿಸ್ಟ್ ಪಾಲಿಟಿಕ್ಸ್ ಇನ್ ಸೌತ್ ಇಂಡಿಯಾ ೧೯೧೯-೧೯೩೭, ನ್ಯೂ ಡೆಲ್ಲಿ-೧೯೭೭, ಪುಟ ೬೮.

೯. ಸೂರ್ಯನಾಥ ಕಾಮತ್, ಸಂ. **ಭಾರತದ ಗ್ಯಾಸೆಟಿಯರ್, ಧಾರವಾಡ ಜಿಲ್ಲೆ,** ಬೆಂಗಳೂರು, ೧೯೯೫, ಪುಟ ೨೦.

೧೦. **ವಿಶ್ವ ಕರ್ನಾಟಕ** ೨೭, ಅಕ್ಟೋಬರ್ ೧೯೨೯, ಕ.ರಾ.ಪ. ಬೆಂಗಳೂರು.

೧೧. ಹಿರೇಮಠ ವೀರಭದ್ರಯ್ಯ, **ಹರಪ್ಪನಹಳ್ಳಿ ತಾಲ್ಲೂಕು ಸ್ವಾತಂತ್ರ್ಯ ಹೋರಾಟಗಾರರು,** ಹರಪ್ಪನಹಳ್ಳಿ-೧೯೯೮, ಪುಟ ೬೨.

೧೨. ಟಿ.ಬಿ. ಕೇಶವರಾವ್, ಸಂಗ್ರಹ : ಫೈಲ್ ನಂ. ೧೧, ಕ.ರಾ.ಪ. ಬೆಂಗಳೂರು, ಬಳ್ಳಾರಿ ಜಿಲ್ಲೆಯಲ್ಲಿ ೮೦,೦೦೦ ಸೇಂದಿ ಗಿಡಗಳನ್ನು, ಬಿಜಾಪುರ ಜಿಲ್ಲೆಯಲ್ಲಿ ೧೦,೦೦೦, ಧಾರವಾಡದಲ್ಲಿ ೭೦,೦೦೦ ಸೇಂದಿ ಗಿಡಗಳನ್ನು ಕತ್ತರಿಸಲಾಯಿತು.

೧೩. **ವಿಶ್ವ ಕರ್ನಾಟಕ,** ೧೭ ಏಪ್ರಿಲ್, ೧೯೩೧, ಕ.ರಾ.ಪ., ಬೆಂಗಳೂರು.

೧೪. **ವಿಶ್ವ ಕರ್ನಾಟಕ,** ೨೫ ಮೇ, ೧೯೩೧, ಕ.ರಾ.ಪ., ಬೆಂಗಳೂರು.

೧೫. ಸೂರ್ಯನಾಥ ಕಾಮತ್, ಸಂ, **ಭಾರತದ ಗ್ಯಾಸೆಟಿಯರ್, ಕೊಡಗು,** ಬೆಂಗಳೂರು-೧೯೯೫, ಪುಟ ೧೧೬.

೧೬. ಮುತ್ತಣ್ಣ ಎಂ.ಎಂ. ಸಂಗ್ರಹ, ಕ.ರಾ.ಪ., ಬೆಂಗಳೂರು.

೧೭. ಗಣಪತಿ ಬಿ.ಡಿ., ಸ್ವಾತಂತ್ರ್ಯದ ಹೋರಾಟ, **ಕೊಡಗಿನ ಕಥೆ,** ಪುಟ ೪೨.

೧೮. ಲೋಕಪಾವನಿ, ಮಡಿಕೇರಿ, ೨೩-೯-೧೯೩೦, **ಕೊಡಗು ಪತ್ರಿಕೆ** ವರದಿಯಂತೆ ೧೯೨೯ರಲ್ಲಿ ೨೭೪೨ ಗ್ಯಾಲನ್ ಸಾರಾಯಿ ಖರ್ಚಾಗಿದ್ದರೆ ೧೯೩೦ರಲ್ಲಿ ಕೇವಲ ೨೨೯ ಗ್ಯಾಲನ್‌ಗಳಿಗೆ ಇಳಿಮುಖವಾಗಿತ್ತು.

೧೯. ಮೈಸೂರು ಜಿಲ್ಲಾ ಕಾಂಗ್ರೆಸ್ ಕಮಿಟಿ, ದಿನಾಂಕ : ೧೦-೭-೧೯೩೮ ರಿಂದ ೧-೧೦-೧೯೩೮.

೨೦. ಶಂಕರ ಎನ್.ಡಿ. ಸಂಗ್ರಹ, ಕ.ರಾ.ಪ., ಬೆಂಗಳೂರು.

೨೧. ಮೈಸೂರು ಕಾಂಗ್ರೆಸ್ ಸಪ್ತಾಹ ವರದಿ, ಮೈಸೂರು ಕಾಂಗ್ರೆಸ್, ದಿನಾಂಕ : ೨-೧-೧೯೩೯ ರಿಂದ ೨೯-೬-೧೯೩೯, ಕ.ರಾ.ಪ., ಬೆಂಗಳೂರು.

೨೨. **ಕಂಠೀರವ ದಿನಪತ್ರಿಕೆ,** ದಿನಾಂಕ : ೨೮-೩-೧೯೪೧, ಕ.ರಾ.ಪ., ಬೆಂಗಳೂರು.

೨೩. **ನವಜೀವನ,** ದಿನಾಂಕ : ೮-೧೦-೧೯೫೧, ಕ.ರಾ.ಪ., ಬೆಂಗಳೂರು, ಪುಟ ೫.



# ಕುರುಬರ ಪ್ರಸಾದ ನಿಲಯಗಳು : ಒಂದು ಚಾರಿತ್ರಿಕ ನೋಟ

**ಡಾ. ಅನ್ನಪೂರ್ಣ ಗೋಸ್ವಾಳ***

**ಮುಂ**ದುವರಿದ ಜನಾಂಗಗಳು ಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ನೀಡಿದ್ದವು. ವೈದಿಕ ವೀರಶೈವ ಸಮಾಜದಲ್ಲಿ ಹೆಚ್ಚಿನ ಕಾಳಜಿ ತಳೆಯಲಾಗಿತ್ತು. ಹಿಂದುಳಿದ ಸಮಾಜಗಳು ಆರ್ಥಿಕ, ಸಾಮಜಿಕ ಮತ್ತು ಶೈಕ್ಷಣಿಕ ಪ್ರಗತಿಯ ಕೊರತೆಯಿಂದಾಗಿ ಅಂಧಃಕಾರದಲ್ಲಿ ಮುಳುಗಿದ್ದವು. ಇಂಥ ಸಂದರ್ಭದಲ್ಲಿ ಶಿಕ್ಷಣದ ಸೂಕ್ಷ್ಮಗಾಳಿ ಬೀಸತೊಡಗಿತು.

ಕಳೆದ ಶತಮಾನದ ಆರಂಭದಲ್ಲಿ ಸಮುದಾಯಗಳ ಸರ್ವಾಂಗೀಣ ಅಭಿವೃದ್ಧಿ ಹಾಗೂ ಜನಜಾಗೃತಿಗಾಗಿ ಅನೇಕ ವಿದಾಯಕ ಕಾರ್ಯಕ್ರಮಗಳು ಹುಟ್ಟಿಕೊಂಡವು. ಆಯಾ ಸಮುದಾಯಗಳ ಧಾರ್ಮಿಕ, ಸಾಮಾಜಿಕ, ಆರ್ಥಿಕ ಪ್ರಗತಿಗಾಗಿ ಮಹಾಸಭೆ ಸಮ್ಮೇಳನಗಳನ್ನು ಆಯೋಜಿಸಿ, ಅನೇಕ ಸಂಘ, ಸಂಸ್ಥೆ ಪ್ರಸಾದ ನಿಲಯಗಳನ್ನು ಸಮಾಜದ ಸರ್ವಾಂಗೀಣ ಅಭಿವೃದ್ಧಿಗಾಗಿ ಸ್ಥಾಪನೆ ಮಾಡಿದುದನ್ನು ಕಾಣುತ್ತೇವೆ.

ಹಾಲುಮತ ಸಮುದಾಯದ ಜಾಗೃತಿಯು ೨೦ನೆಯ ಶತಮಾನದಿಂದ ಆದಿಯಾಯಿತೆಂದು ಹೇಳಬಹುದು. ೧೯೧೦ರಲ್ಲಿ ಲಕ್ಷ್ಮೇಶ್ವರದಲ್ಲಿ ಹಾಲುಮತ ಧಾರ್ಮಿಕ ಹಾಗೂ ವಿದ್ಯಾವರ್ಧಕ ೧ನೆಯ ಮಹಾಸಭೆಯನ್ನು ನೆರವೇರಿಸಿ ಸವಾಜದಲ್ಲಿ ಒಂದು ರೀತಿಯ ಕ್ರಾಂತಿಯನ್ನು ಆರಂಭಿಸಲಾಯಿತು. ೧೯೨೦ರಲ್ಲಿ ನಲವಡಿಯಲ್ಲಿ ಕರ್ನಾಟಕ ಕುರುಬರ ೧ನೆಯ ಪರಿಷತ್ತು ನಡೆದು ಕರ್ನಾಟಕ ಕುರುಬರ ಸಂಘ ಮತ್ತು ಮುಂಬಯಿ ಕರ್ನಾಟಕ ಹಾಲುಮತ ಸಹಕಾರಿ ಸಂಘಗಳು ಸ್ಥಾಪಿಸಲ್ಪಟ್ಟವು. ಇದರಿಂದ ಸವಾಜ ಸುಧಾರಣೆಯ ಕಾರ್ಯವು ತೀವ್ರತೆಯಿಂದ ನಡೆಯಿತು. ೧೯೨೦ ನವಂಬರಿನಲ್ಲಿ ಜೇವೂರಿ ಕ್ಷೇತ್ರದಲ್ಲಿ ಅಖಿಲ ಭಾರತ ಕುರುಬರ ೧ನೆಯ ಪರಿಷತ್ತು, ೧೯೨೨ರಲ್ಲಿ ಅಮಳನೇರದಲ್ಲಿ (ಖಾನದೇಶ) ಅಖಿಲ ಭಾರತ ಕುರುಬರ ೨ನೆಯ ಪರಿಷತ್ತು, ೧೯೨೩ ಏಪ್ರಿಲ್‌ನಲ್ಲಿ ಹುಲ್ಲೂರಿನಲ್ಲಿ ೨ನೆಯ ಹಾಲುಮತ ಧಾರ್ಮಿಕ ಹಾಗೂ ವಿದ್ಯಾವರ್ಧಕ ಮಹಾಸಭೆ, ೧೯೨೪ರಲ್ಲಿ ಬಂಕಾಪುರದಲ್ಲಿ ಕರ್ನಾಟಕ ಕುರುಬರ ೨ನೆಯ ಪರಿಷತ್ತು ನಡೆದವು. ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿಯಲ್ಲಿ ಕುರುಬರ ಸಂಘದ ಸ್ಥಾಪನೆಗಾಗಿ ಕುರುಬರ ಸಂಘದ ಜನರಲ್ ಸೆಕ್ರೆಟರಿಯಾಗಿದ್ದ ನೀಲಗಿರಿ ಸಂಜೀವಯ್ಯನವರ ಅಧ್ಯಕ್ಷತೆಯಲ್ಲಿ ೧೯೨೬ ಮೇ ೧೩ರಂದು ಪೂರ್ವ ಭಾವಿಯಾಗಿ ಸಭೆಯನ್ನು ಆಯೋಜಿಸಲಾಗಿತ್ತು. ಇವುಗಳಿಂದ ಜಾಗೃತಗೊಂಡು ಹಾಲುಮತ ಸಮಾಜದ ಕಲ್ಪನೆ, ಸಮಾಜಿಕ ಪರಿಸ್ಥಿತಿಗಳು ಪರಿಚಯಗೊಂಡು ಸಭೆಗಳಲ್ಲಿ ಹಾಲುಮತ ಬೋರ್ಡಿಂಗ್ ಸ್ಥಾಪಿಸಬೇಕೆಂಬ ಠರಾವುಗಳಾದವು.

ಈ ಹಿನ್ನೆಲೆಯಲ್ಲಿ ಶೈಕ್ಷಣಿಕ ಅಭಿವೃದ್ಧಿಗಾಗಿ ವಿದ್ಯಾರ್ಥಿಗಳ ಜ್ಞಾನರ್ಜನೆಗಾಗಿ ಪ್ರಸಾದ ನಿಲಯಗಳು ಪ್ರಾರಂಭಗೊಂಡವು. ೧೯೨೬ರಲ್ಲಿ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನಲ್ಲಿ ಅಮೋಘಸಿದ್ದಾರ್ಯ ಕುರುಬರ ಬೋರ್ಡಿಂಗ್, ೧೯೩೦ ರಲ್ಲಿ ಬೆಂಗಳೂರಿನಲ್ಲಿ ಕುರುಬರ ವಿದ್ಯಾರ್ಥಿ ನಿಲಯ, ೧೯೪೦ರಲ್ಲಿ ನಂಜನಗೂಡಿನಲ್ಲಿ ಶ್ರೀ ಕನಕದಾಸ ಸಾರ್ವಜನಿಕ ವಿದ್ಯಾರ್ಥಿ ನಿಲಯ, ೧೯೪೬ರಲ್ಲಿ ಬೆಳಗಾವಿಯ ಅಖಿಲ ಕರ್ನಾಟಕ ಕುರುಬರ ಫ್ರೀ ಬೋರ್ಡಿಂಗ್, ೧೯೪೭ರಲ್ಲಿ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಬಟ್ಟೂರು ಗ್ರಾಮದ ಕುರುಬ ವಿದ್ಯಾರ್ಥಿಗಳ ಧರ್ಮಾರ್ಥ ಬೋರ್ಡಿಂಗ್ ಹೀಗೆ ನಾಡಿನಾದ್ಯಂತ ಪ್ರಸಾದ ನಿಲಯಗಳು ಆರಂಭಗೊಂಡವು. ಇಂಥ ಕುರುಬರ ಪ್ರಸಾದ ನಿಲಯಗಳ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನ ಇಲ್ಲಿದೆ.

### ಅಮೋಘಸಿದ್ಧಾರ್ಯ ಕುರುಬರ ಬೋರ್ಡಿಂಗ (೧೯೨೬)

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಿಂಗಾಪುರ ಗ್ರಾಮದಲ್ಲಿ ೧೯೨೬ ಜೂನ್ ೭ರಂದು 'ಅಮೋಘಸಿದ್ಧಾರ್ಯ ಕುರುಬರ ಬೋರ್ಡಿಂಗ್' ಸ್ಥಾಪನೆಯಾಯಿತು. ಇದು ಹಾಲುಮತದ ಮೊಟ್ಟ ಮೊದಲ ಪ್ರಸಾದ ನಿಲಯವಾಗಿದೆ. ಬೇರೆ ಬೇರೆ ಸ್ಥಳಗಳಿಂದ ಸಮಾಜ ಬಾಂಧವರು, ತರುಣರು,

* C/o ರೇವಣ್ಣ ಸಿದ್ದೇಶ್ವರ ಜನರಲ್ ಸ್ಟೋರ್ಸ್, ರಾಮಾ ಟಾಕೀಸ್ ಹತ್ತಿರ, ಹೊಸಪೇಟೆ, ಬಳ್ಳಾರಿ ಜಿಲ್ಲೆ-೫೮೩೨೦೧.

ಆಸಕ್ತರು, ಉತ್ಸಾಹಿಗಳು ಸೇರಿದ್ದರು. ವೇ ಸಿದ್ಧಯ್ಯನವರ ಅಮೋಗಿ ಹುಲ್ಲೂರು ಹಸ್ತದಿಂದ ಬೋರ್ಡಿಂಗ್ ಪ್ರಾರಂಭದ ಸಮಾರಂಭ ವಿಜೃಂಭಣೆಯಿಂದ ನಡೆಯಿತು. ಅವರು ಅಂದಿನ ತಮ್ಮ ದೀರ್ಘವಾದ ಭಾಷಣದಲ್ಲಿ "ಕಾಡಾಗಿದ್ದ ಹಾಲುಮತ ಸಮಾಜದ ಮನೋಭೂಮಿಕೆಯನ್ನು ಬಹು ದಿವಸಗಳಿಂದ ಹದಮಾಡಿ ಬಿತ್ತಿದ ಫಲವು ಈಗ ದೊರೆಯಹತ್ತಿದ್ದನ್ನು ನೋಡಿದರೆ ಯಾರಿಗೆ ಆನಂದವಾಗಲಿಕ್ಕಿಲ್ಲ? ಯಾರು ಧನ್ಯವಾದಗಳನ್ನು ಮಾಡಲಿಕ್ಕಿಲ್ಲ? ಅಂತೇ ಈ ದಿವಸವು ಹಾಲುಮತ ಇತಿಹಾಸದಲ್ಲಿ ಮಹತ್ವದ್ದಾಗಿದೆಯೆಂದು ನಾನು ಅಭಿಮಾನದಿಂದ ಹೇಳುವೆನು. ನಮಗೂ ಜ್ಞಾನವುಂಟು, ಧರ್ಮವುಂಟು, ಇತಿಹಾಸವುಂಟು, ವಾಂಙ್ಮಯವುಂಟು, ಶಕ್ತಿಯುಂಟು, ಸಂಘಟನೆಯುಂಟು, ನಮ್ಮ ಪೂರ್ವಜರು ಮಹಾಮಹಾಕಾರ್ಯಗಳನ್ನು ಮಾಡಿ ನಮ್ಮ ಸಮಾಜದ ಗೌರವ ಕಾಯ್ದಿರುವರು.... ಜನಾಂಗವು ಮುಂದುವರಿಯ ಬೇಕಾದರೆ ಶಿಕ್ಷಣವೇ ತಳಹದಿಯಾಗಿರುವುದು.... ಪ್ರತಿಯೊಬ್ಬರಲ್ಲಿ ಸಮಾಜಾಭಿಮಾನವು ಉಕ್ಕುತಿರಲೆಂದೂ ಈ ಕಾರ್ಯದಲ್ಲಿ ಶ್ರೀ ರೇವಣಸಿದ್ದೇಶ್ವರರ ಪೂರ್ಣ ಅನುಗ್ರಹವಿರಲೆಂದು ಆಶಿಸಿ ಈ ನನ್ನ ಭಾಷಣ ಮುಗಿಸುವೆನು" ಎಂದು ಜನಾಂಗದ ಏಳುಬೀಳುಗಳ ಕುರಿತು ಮಾತನಾಡಿದರು.

ಹೀಗೆ ಪ್ರಾರಂಭವಾದ ಪ್ರಸಾದ ನಿಲಯದಲ್ಲಿ ಇಂಗ್ಲಿಷ್ ಕಲಿಯುವ ಹಾಗೂ ತಲಾಠಿ ಕುಲಕರ್ಣಿ ಪರೀಕ್ಷೆಗಾಗಿ ಸಮುದಾಯದ ವಿದ್ಯಾರ್ಥಿಗಳಲ್ಲದೆ ಇನ್ನಿತರ ಕಬ್ಬೇರ ತಳವಾದ ಮೊದಲಾದ ಹಿಂದುಳಿದ ಬಡವಿದ್ಯಾರ್ಥಿಗಳ ಕಲಿಕೆ ಹಾಗೂ ವಸತಿ ವ್ಯವಸ್ಥೆಗೆ ಅವಕಾಶ ಕಲ್ಪಿಸಿದ್ದನ್ನು ಡಾ. ಎಫ್.ಟಿ. ಹಳ್ಳಿಕೇರಿ ಅವರು ಶೋಧಿಸಿದ ವರದಿಯಿಂದ ತಿಳಿಯಬಹುದು. ಅಲ್ಲದೆ ಲಿಂಗಾಪುರ ಗ್ರಾಮಗಳ ಕುರುಬ ಸಮಾಜದವರು ದವಸ – ಧಾನ್ಯ, ಹಣದ ರೂಪದಲ್ಲಿ ಈ ಬೋರ್ಡಿಂಗ್‌ಗೆ ದಾನ ನೀಡಿದ ವಿವರಗಳು ಕುತೂಹಲಕಾರಿಯಾಗಿವೆ. ಹಣ ಮತ್ತು ಭತ್ತ ನೀಡಿದ ಮಹನೀಯರ ಸಹಕಾರವನ್ನು ವರದಿಗಳಲ್ಲಿ ಸ್ಮರಿಸಲಾಗಿದೆ.

ವಿದ್ಯಾರ್ಥಿಗಳ ಜ್ಞಾನಾಭಿವೃದ್ಧಿಗಾಗಿ ಬೋರ್ಡಿಂಗ್‌ನಲ್ಲಿ ಪ್ರತಿಭಾನುವಾರ ಮತ್ತು ಹಬ್ಬದ ದಿನಗಳಂದು ವಿದ್ಯಾರ್ಥಿಗಳು ಸಾಮಾಜಿಕ ವಿಷಯ ಕುರಿತು ಸಭೆ, ಚರ್ಚೆ, ವ್ಯಾಖ್ಯಾನ ಕೊಡುವದು, ಹಾಲುಮತ ವಿಷಯವಾಗಿ ಪೌರಾಣಿಕ ಹಾಗೂ ಐತಿಹಾಸಿಕ ಸಂಗತಿ ತಿಳಿಯುವ, ಪ್ರಸಿದ್ಧ ಪುರುಷರ ಚರಿತ್ರೆ ಓದುವ, ಸ್ಫೂರ್ತಿದಾಯಕ ಸಾಮಾಜಿಕ ವಿಷಯಗಳ ಲೇಖನಗಳನ್ನು ಬರೆದು ಸಂಸ್ಥೆಗೆ ಕಳುಹಿಸುವಂಥಹ ವಿಭಿನ್ನ ವಿಚಾರಗಳ ಮೂಲಕ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಿ ಪ್ರಗತಿ ಸಾಧಿಸಲು ಪ್ರಯತ್ನಿಸಲಾಗುತ್ತಿತ್ತು.

**ಕುರುಬರ ಸಂಘ (೧೯೩೦)**

ಬೆಂಗಳೂರಿನಲ್ಲಿ ೧೯೩೦ರಲ್ಲಿ ಕುರುಬರ ವಿದ್ಯಾರ್ಥಿ ನಿಲಯ ಪ್ರಾರಂಭವಾಯಿತು. ೫೦ ಜನರ ಕಾರ್ಯಕಾರಿ ಸಮಿತಿ ರಚಿಸಲಾಗಿತ್ತು. ಚಾಮರಾಜಪೇಟೆಯ ೧ನೆಯ ರಸ್ತೆಯ ಒಂದು ಬಾಡಿಗೆ ಕಟ್ಟಡದಲ್ಲಿ ವಿದ್ಯಾರ್ಥಿನಿಲಯವನ್ನು ಆರಂಭಿಸಲಾಯಿತು. ಈ ಕಟ್ಟಡಕ್ಕಾಗಿ ಅನೇಕ ದಾನಿಗಳು ಆಗಿನ ಕಾಲದಲ್ಲೇ ಸಾವಿರ ರೂಪಾಯಿಗಳಂತೆ ಹಣವನ್ನು ಕೊಟ್ಟಿದ್ದಾರೆ. ೧೯೩೭ರಲ್ಲಿ ಕಲಾಸಿಪಾಳ್ಯದಿಂದ ವಿದ್ಯಾರ್ಥಿ ನಿಲಯುವನ್ನು ಗಾಂಧಿನಗರದ ಬಾಡಿಗೆ ಕಟ್ಟಡಕ್ಕೆ ಸ್ಥಳಾಂತರಿಸಲಾಯಿತು. ಈ ಬಾಡಿಗೆ ಕಟ್ಟಡವೇ ಇಂದಿನ ಸಂಘದ ಭವ್ಯಕಟ್ಟಡ ನಿರ್ಮಾಣಕ್ಕೆ ನಾಂದಿಯಾಗಿದೆ. ೧೧.೧೧.೧೯೪೦ರಲ್ಲಿ ಅಂದಿನ ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್‌ರ ಸಿಫಾರಸಿನ ಮೇರೆಗೆ ಸಂಘಕ್ಕೆ ನಿವೇಶನ ಮಂಜೂರಾಯಿತು. ೧೯೪೧ ರಂದು ಕಟ್ಟಡ ನಿರ್ಮಾಣದ ಉಪಸಮಿತಿಯನ್ನು ರಚಿಸಿ ೧೯೪೨ರಲ್ಲಿ ದಿವಾನ ಮಾಧವರಾವ ಅವರಿಂದ ಕಟ್ಟಡದ ಶಂಕಸ್ಥಾಪನೆ ಮಾಡಲಾಯಿತು.೧೫.೧೦.೧೯೫೭ರಂದು ನಂಜನಗೂಡಿನಲ್ಲಿ ಸಂಘದ ಸರ್ವ ಸದಸ್ಯರ ಸಭೆಯನ್ನು ಕರೆದು 'ಕುರುಬರ ಸಂಘ'ದ ಹೆಸರನ್ನು 'ಮೈಸೂರು ಪ್ರದೇಶದ ಕುರುಬರ ಸಂಘ' ಎಂದು ಪರಿವರ್ತಿಸಲಾಯಿತು. ಬಡ ಹಾಗೂ ಪ್ರತಿಭಾವಂತ ಜನಾಂಗದ ವಿದ್ಯಾರ್ಥಿಗಳಿಗೆ ೧೯೫೮-೫೯ರ ಸಾಲಿನಲ್ಲಿ ೫೦೦ರೂ ಸಹಾಯಧನ ಕೊಡಲು ಆರಂಭಿಸಿದರು. ಅದು ಇಂದು ೮-೧೦ ಸಾವಿರಕ್ಕೆ ಏರಿದೆ. ಹಲವಾರು ಕಾರಣಗಳಿಂದ ವಿದ್ಯಾರ್ಥಿ ನಿಲಯದ ಬಡ ವಿದ್ಯಾರ್ಥಿಗಳಿಗೆ ಪೂರ್ಣವಾಗಿ ಉಚಿತ ಭೋಜನ ವ್ಯವಸ್ಥೆ ಮಾಡುವ ಗುರಿಯನ್ನು ಮುಟ್ಟಲಾಗಿಲ್ಲ. ನಾಡಗೌಡರ ಸಮಿತಿ ವರದಿ ಪ್ರಕಾರ ಈ ಜನಾಂಗದ ವಿದ್ಯಾಭ್ಯಾಸ ೧೯೬೨ರಲ್ಲಿ ಶೇಕಡಾ ಐದರಷ್ಟಿತ್ತು. ಇದು ಮತದ ಶೈಕ್ಷಣಿಕ ಪ್ರಗತಿಯು ನಿಧಾನಗತಿಯನ್ನು ಸೂಚಿಸುತ್ತದೆ. ಈ ಸಂಘಕ್ಕೆ ಆರ್. ನಾಗನಗೌಡರು, ಟಿ. ಮರಿಯಪ್ಪ ಮೊದಲಾದ ಅನೇಕ ಗಣ್ಯರು ದುಡಿದು ಅದರ ಕೀರ್ತಿ, ಸೇವಾಕ್ಷೇತ್ರಗಳನ್ನು ವಿಸ್ತರಿಸಲು ಕಾರಣರಾಗಿದ್ದಾರೆ.

ಜಾತಿ-ಭೇದಗಳಿಲ್ಲದೆ ಎಲ್ಲ ಜನಾಂಗಗಳ ವಿದ್ಯಾರ್ಥಿಗಳಿಗೆ ಹಾಸ್ಟೆಲಿನಲ್ಲಿ ಅವಕಾಶ ಕೊಟ್ಟು ವಿದ್ಯಾಭ್ಯಾಸ ಹರಡುವ ಮತ್ತು ಇತರ ಜನಾಂಗಗಳೊಂದಿಗೆ ಸೋದರತೆ ಮತ್ತು ಐಕ್ಯತೆಯನ್ನು ಸಾಧಿಸುತ್ತಿರುವುದು ಹೆಮ್ಮೆಯ ವಿಷಯವಾಗಿದೆ.

**ಶ್ರೀ ಕನಕದಾಸ ಸಾರ್ವಜನಿಕ ವಿದ್ಯಾರ್ಥಿ ನಿಲಯ (೧೯೪೦)**

ಶ್ರೀ ಕನಕದಾಸ ಸಾರ್ವಜನಿಕ ವಿದ್ಯಾರ್ಥಿ ನಿಲಯ ನಂಜನಗೂಡಿನಲ್ಲಿ ೧೯೪೦ರಲ್ಲಿ ಎನ್. ರಾಚಯ್ಯನವರಿಂದ

ಆರಂಭಗೊಂಡಿತ್ತು. ಹಳ್ಳಿಯ ಮಕ್ಕಳು ಪ್ರೌಢಶಾಲೆ ಕಲಿಯಲು ನಂಜನಗೂಡಿಗೆ ಬರಬೇಕಿತ್ತು. ಕೆಲವು ವಿದ್ಯಾರ್ಥಿಗಳು ಮಧ್ಯಾಹ್ನದ ಊಟದ ಡಬ್ಬಿಗಳನ್ನು ರಾಚಯ್ಯನವರ ಬಾಳೆಹಣ್ಣಿನ ಅಂಗಡಿಯಲ್ಲಿ ಇಡುತ್ತಿದ್ದರು. ಮಕ್ಕಳು ವಿದ್ಯಾರ್ಜನೆಗಾಗಿ ಪಡುತ್ತಿದ್ದ ಬವಣೆಯನ್ನು ಗಮನಿಸಿ ದೃಢ ಸಂಕಲ್ಪ ಮಾಡಿ ೧೦ ವಿದ್ಯಾರ್ಥಿಗಳಿಗೆ ಊಟವಸತಿ ಸೌಲಭ್ಯ ಕಲ್ಪಿಸಿದರು.

ಹೀಗೆ ಕನಕದಾಸ ವಿದ್ಯಾರ್ಥಿ ನಿಲಯ ಸ್ಥಾಪನೆಗೊಂಡಿತು. ಅದೇ ನಿಲಯ ನಂತರ ನೂರಾರು ವಿದ್ಯಾರ್ಥಿಗಳಿಗೆ ಆಶ್ರಯ ತಾಣವಾಯಿತು. ೧೯೫೨ ಅಕ್ಟೋಬರ ೧೦ರ ಬೆಳಗಿನ ಜಾವ ರಾಚಯ್ಯನವರು ಕಂಡ ಕನಸಿನಲ್ಲಿ ಅಂದಿನ ಪ್ರಧಾನಿ ಜವಾಹರಲಾಲ್ ನೆಹರುರವರಿಗೆ ೨೦,೦೦೦ ರೂ.ಗಳನ್ನು ವಿದ್ಯಾರ್ಥಿ ನಿಲಯದ ಅಭಿವೃದ್ಧಿಗಾಗಿ ಕಾಣಿಕೆ ನೀಡುವ ಮಾತು ಕೊಟ್ಟಿದ್ದರು. ಅಂದೇ ಬೆಳಿಗ್ಗೆ ತಮ್ಮ ಮಾತನ್ನು ಅನುಷ್ಠಾನಕ್ಕೆ ತಂದು ತಮ್ಮ ಕನಸಿನ ವಾಗ್ದಾನದಂತೆ ನಡೆದುಕೊಂಡರು. ಹೀಗೆ ರಾಚಯ್ಯನವರ ಹೆಮ್ಮೆಯ ಕನಕದಾಸ ವಿದ್ಯಾರ್ಥಿ ನಿಲಯ ನಿರ್ಮಾಣ ವಾಯಿತು. ಅಲ್ಲದೇ ಅದು ಗ್ರಾಮಾಂತರದಿಂದ ಬರುತ್ತಿದ್ದ ಅನೇಕ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ನೀಡುವ ನ್ಯಾಯಾಲಯವಾಯಿತು. ಅದರ ಸರ್ವತೋಮುಖ ಬೆಳವಣಿಗೆಗಾಗಿ ೧೯೫೨ರಲ್ಲಿ ಶ್ರೀ ಕನಕದಾಸ ಸಾರ್ವಜನಿಕ ವಿದ್ಯಾರ್ಥಿನಿಲಯ ಟ್ರಸ್ಟನ್ನು ಸ್ಥಾಪಿಸಲಾಯಿತು. ನಿಲಯದಲ್ಲಿ ಶಿಸ್ತು, ನೀತಿ, ನಿಯಮಗಳಿಂದ ದಿನಚರಿಯನ್ನು ರೂಪಿಸಲಾಗಿತ್ತು. ಅಂದು ನಂಜನಗೂಡು ಪಟ್ಟಣದಲ್ಲಿ ಸಾರ್ವಜನಿಕ ವಾಚನಾಲಯ ಇರಲಿಲ್ಲ. ಕಾರಣ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಇತರರಿಗೂ ಅದು ಜ್ಞಾನ ಮಂದಿರವಾಯಿತು. ನಿಲಯದಲ್ಲಿ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳನ್ನು ಪ್ರಾರಂಭಿಸಿದರು. ಹೀಗೆ ಗ್ರಾಮಾಂತರ ಮತ್ತು ಪಟ್ಟಣಗಳ ಮಕ್ಕಳಿಗೆ ಊಟ ವಸತಿ ಶಿಕ್ಷಣ ಎಲ್ಲವೂ ಒಂದೇ ನೆಲೆಯಲ್ಲಿ ದೊರಕುವಂತಾಯಿತು. ನಂತರ ಶಾಲೆಯ ನಿರ್ವಹಣೆಗಾಗಿ ಕನಕದಾಸ ವಿದ್ಯಾರ್ಥಿ ನಿಲಯದ ಟ್ರಸ್ಟಿನ ಅಂಗ ಸಂಸ್ಥೆಯಾಗಿ 'ಕನಕದಾಸ ವಿದ್ಯಾ ಸಂಸ್ಥೆ'ಯು ರಚನೆಯಾಯಿತು. ವಿದ್ಯಾರ್ಥಿ ನಿಲಯ ಸುಗಮವಾಗಿ ನಡೆಯಲು ಮತ್ತು ಜನಾಂಗ ಸಂಘಟನೆಯ ಉದ್ದೇಶದಿಂದ ೧೯೬೯ರಲ್ಲಿ ಕುರುಬರ ಸಂಘವನ್ನು ಸ್ಥಾಪಿಸಲಾಯಿತು.

**೪. ದಿ ಅಖಿಲ ಕರ್ನಾಟಕ ಫ್ರೀ ಬೋರ್ಡಿಂಗ್ (೧೯೪೫)**

ಬೆಳಗಾವಿ ಜಿಲ್ಲೆಯ ಅಕ್ಕೋಳ ಗ್ರಾಮದಲ್ಲಿ ಹಾಲುಮತ ಸಮಾಜದ ಘನೋದ್ದೇಶ ಮತ್ತು ಸಮಾಜ ಬಾಂಧವರ ಸತತ ಆರು ತಿಂಗಳ ಪ್ರಯತ್ನದ ಫಲವಾಗಿ ೧.೮.೧೯೪೫ರಂದು "ಬೆಳಗಾವಿಯ ಅಖಿಲ ಕರ್ನಾಟಕ ಫ್ರೀ ಬೋರ್ಡಿಂಗ್" ಎಂಬ ಪ್ರಸಾದ ನಿಲಯವನ್ನು ಮಲ್ಲಪ್ಪ ಸಿದ್ದಪ್ಪ ಖಿಲಾರಿ ಅವರ ಅಮೃತ ಹಸ್ತದಿಂದ ಸ್ಥಾಪನೆ ಮಾಡಲಾಯಿತು. ಗ್ರಾಮಾಂತರ ಪ್ರದೇಶದ ಮಕ್ಕಳ ಉಚ್ಚವಟ್ಟದ ವ್ಯಾಸಂಗಕ್ಕಾಗಿ ಊಟ ವಸತಿಯು ಸೌಕರ್ಯವನ್ನು ಉಚಿತವಾಗಿ ಒದಗಿಸಲಾಗುತ್ತಿತ್ತು. ಈ ಬೋರ್ಡಿಂಗ್ ೧೮.೯.೧೯೫೨ರಂದು 'ವಿಜಯನಗರ ವಿದ್ಯಾರ್ಥಿಗಳ ಪ್ರಸಾದ ನಿಲಯ' ಎಂಬ ಹೆಸರಿನಿಂದ ಪುನಃ ಕರೆಯಲಾಯಿತು. ವಿದ್ಯಾರ್ಥಿ ನಿಲಯದ ಟ್ರಸ್ಟ ಕಾರ್ಯಕಾರಿ ಮಂಡಳಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರ, ವಕೀಲ ಎನ್.ಬಿ. ದಳವಾಯಿ ಅವರು ಅಧ್ಯಕ್ಷರಾಗಿ, ಜಿ.ಎಸ್.ಬೆಳವಡಿ ಹಿರೆಕುಂಬಿ ಉಪಾಧ್ಯಕ್ಷರಾಗಿದ್ದರು. ಹೀಗೆ ಅನೇಕ ದೇಶಾಭಿಮಾನಿಗಳು, ಶಿಕ್ಷಣಾಭಿಮಾನಿಗಳು ಈ ಸಂಸ್ಥೆಯ ಶ್ರೇಯೋಭಿವೃದ್ಧಿಗಾಗಿ ಅಹೋರಾತ್ರಿ ದುಡಿದು ಈ ಪ್ರಸಾದ ನಿಲಯಕ್ಕೆ ಒಂದು ಮೂರ್ತ ಸ್ವರೂಪವನ್ನು ತಂದುಕೊಟ್ಟರು.

ಕಡಿದಾಳ ಮಂಜಪ್ಪ, ಬಿ.ಡಿ.ಜತ್ತಿ, ಕೆ.ಎಫ್.ಪಾಟೀಲ, ಟಿ.ಮರಿಯಪ್ಪ ಮತ್ತು ಬೆಳಗಾವಿಯ ಡೆಪ್ಯುಟಿ ಕಮೀಷನರ ಸಚ್ಚಿದಾನಂದಮೂರ್ತಿ ಮೊದಲಾದವರ ಸಹಕಾರದಿಂದ ೧೯೬೦ರಲ್ಲಿ ಉಳವಿಯ ಚೆನ್ನಬಸವಣ್ಣದ ಜಾತ್ರೆಯ ಸಂದರ್ಭದಲ್ಲಿ ಸದಸ್ಯರಿಂದ ನಿರ್ಣಯ ತೆಗೆದುಕೊಳ್ಳಲಾಯಿತು. ೧೯೬೧ರಲ್ಲಿ ೫ ಎಕರೆ ಜಮೀನನ್ನು ಕಡಿಮೆ ಬೆಲೆಯಲ್ಲಿ ಖರೀದಿಸಿದರು. ೬.೪.೧೯೬೨ರಂದು ಮೈಸೂರು ರಾಜ್ಯದ ಮುಖ್ಯ ಮಂತ್ರಿಗಳಾದ ಎಸ್..ಆರ್.. ಕಂಠಿ ಅವರ ಅಮೃತ ಹಸ್ತದಿಂದ ವೆಂಕಟರೆಡ್ಡಿ ಹುಲಿ ಅವರ ಅಧ್ಯಕ್ಷತೆಯಲ್ಲಿ ಕಟ್ಟಡದ ಅಡಿಪಾಯ ಹಾಕಲಾಯಿತು. ಈ ಸಂಸ್ಥೆ ೧೯೬೫ರ ವರೆಗೆ ಬಾಡಿಗೆ ಕಟ್ಟಡದಲ್ಲಿ ನಡೆದು ನಂತರ ಸ್ವಂತ ಕಟ್ಟಡವನ್ನು ಹೊಂದಿತು. ಈ ಸಂಸ್ಥೆಗಾಗಿ ವಕೀಲ ಎನ್.ಬಿ.ದಳವಾಯಿ ಅವರ ಅಧ್ಯಕ್ಷತೆಯಲ್ಲಿ ಸರಕಾರದಿಂದ ೧,೬೫,೦೦೦ ರೂ.ಗಳಷ್ಟು ಅನುದಾನ ಸಂಗ್ರಹಿಸಲಾಯಿತು.

ಒಟ್ಟಾರೆ ೧೯೪೫ರಿಂದ ೧೯೫೨ರವರೆಗೆ ಈ ಸಂಸ್ಥೆಯ ಲಾಲನೆ, ಪಾಲನೆ, ಪೋಷ ಮಾಡಿ ಬೆಳಸಿ ಸರ್ವತೋಮುಖ ಬೆಳವಣಿಗೆಗೆ ಪ್ರಾರಂಭದಲ್ಲಿ ಕಾರಣರಾದ ಎನ್.ಬಿ.ದಳವಾಯಿ ಅವರನ್ನು ಈ ಸಂಸ್ಥೆ ಮರೆಯಲಾರದು. ಹೀಗೆ ಅಂದು ಸಸಿಯಾಗಿ ನೆಟ್ಟಿದ್ದು ಇಂದು ಹೆಮ್ಮರವಾಗಿ ಬೆಳೆದಿದೆ. ಅನೇಕ ವಿದ್ಯಾರ್ಥಿಗಳಿಗೆ ಆಶ್ರಯ ತಾಣವಾಗಿದೆ.

**೫. ಕುರುಬ ವಿದ್ಯಾರ್ಥಿಗಳ ಧರ್ಮಾರ್ಥ ಬೋರ್ಡಿಂಗ್ (೧೯೪೭)**

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಬಟ್ಟೂರ ಗ್ರಾಮದಲ್ಲಿ ೧೯೪೭ರಲ್ಲಿ ಕುರುಬರ ಬಡ ಆಸಕ್ತ ಅನಾಥ

ವಿದ್ಯಾರ್ಥಿಗಳಿಗಾಗಿ ಪ್ರಸಾದ ನಿಲಯ ಆರಂಭವಾಯಿತು. ಬಟ್ಟೂರಿನ ಪ್ರಾಥಮಿಕ ಶಾಲೆಯಲ್ಲಿ ೨೦ ವಿದ್ಯಾರ್ಥಿಗಳು ಮತ್ತು ಲಕ್ಷ್ಮೇಶ್ವರದ ಹೈಸ್ಕೂಲಿನ ೫ ವಿದ್ಯಾರ್ಥಿಗಳು ಪ್ರಾರಂಭದಲ್ಲಿ ಸೌಲಭ್ಯ ಪಡೆದರು. ಈ ಬೋರ್ಡಿಂಗಗಾಗಿ ಅನೇಕ ಮಹನೀಯರು ಧಾನ್ಯದ ರೂಪದಲ್ಲಿ ಸೇವೆ ಸಲ್ಲಿಸಿದರು. ಪ್ರಸಾದ ನಿಲಯದಲ್ಲಿ ವಾಚನಾಲಯ, ಔಷಧೋಪಚಾರ, ಉಪನ್ಯಾಸಗಳನ್ನು ಏರ್ಪಡಿಸಿ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿಸಲಾಗುತ್ತಿತ್ತು. ಹೀಗೆ ಪ್ರಸಾದ ನಿಲಯಗಳಲ್ಲಿ ಕಲಿತ ಅನೇಕರು ಇಂದು ಸಾಹಿತ್ಯಿಕ, ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಕ್ಷೇತ್ರಗಳಲ್ಲಿ ಎತ್ತರದ ಸಾಧನೆ ಮಾಡಿದ್ದಾರೆ.

[ಆಕರಗಳನ್ನು ನೀಡಿ ಸಹಕರಿಸಿದ ಡಾ. ಎಫ್.ಟಿ. ಹಳ್ಳಿಕೇರಿ ಅವರಿಗೆ ಕೃತಜ್ಞತೆಗಳು.]



## ಆಧಾರಸೂಚಿ


೧. **ಹಾಲುಮತ ಮಹಾಸಭೆ ಭಾಷಣಗಳು ಮತ್ತು ವರದಿಗಳು,** ಡಾ. ಎಫ್.ಟಿ. ಹಳ್ಳಿಕೇರಿ, ೨೦೦೯.

೨. **ದಾಸೋಹ,** ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೩. **ಪಾವನ,** ಶ್ರೀ ಕಾಗಿನೆಲೆ ಮಹಾಸಂಸ್ಥಾನ, ಕನಕ ಗುರು ಪೀಠದ ಸ್ಥಾಪನೆಯ ಸಂಸ್ಮರಣ ಸಂಚಿಕೆ, ಪುಟ ೧೧೯, ೧೯೨.

೪. ದಳವಾಯಿ, ಪ್ರೊ. ಸಿದ್ದಣ್ಣ ಬಿ. ಉತ್ನಾಳ

೫. **ಕವಲುದಾರಿಯಲ್ಲಿ ಕರ್ನಾಟಕದ ಕುರುಬ ಜನಾಂಗ,** ಪುಟ ೧೨೭, ಪ್ರೊ. ಒಡೆಯರ್ ಡಿ. ಹೆಗ್ಗಡೆ, ೨೦೦೩.



# ಶ್ರೀ ಚಾಮುಂಡೇಶ್ವರಿ ನಾಟಕ ಸಭೆ ಪ್ರಾರಂಭ ಹಾಗೂ ಅಂತ್ಯ

**ಎಂ. ನರಸಿಂಹಮೂರ್ತಿ***

"ಶ್ರೀ ಚಾಮುಂಡೇಶ್ವರಿ ನಾಟಕ ಸಭೆ" ಎಂಬ ನಾಟಕ ಕಂಪನಿ ಸುಮಾರು ೧೯೨೦-೨೧ರ ಸಮಯದಲ್ಲಿ ಮೈಸೂರಿನಲ್ಲಿ ಪ್ರಾರಂಭವಾಯಿತು. ಇದನ್ನು ಪ್ರಾರಂಭಿಸಿದವರು 'ಗೋಪಾರಾಜೇ ಅರಸ್'ರವರು. ಇವರು ಮೈಸರೂ ಅರಸರ ಹತ್ತಿರದ ಸಂಬಂಧಿಯಾಗಿದ್ದು ಮಹಾರಾಜರಿಗೆ AD Camp Body gourd ಆಗಿದ್ದರು.

ಮಹಾರಾಜರು ದರ್ಬಾರಿಗೆ ಬರುವ ಸಮಯದಲ್ಲಿ ಅವರ ಹಸ್ತವನ್ನು, ನೇಮಿಸಿದ ವ್ಯಕ್ತಿ (ಆಸ್ಥಾನದಲ್ಲಿ ಪ್ರಮುಖರಾಗಿರಬೇಕು) ತಮ್ಮ ಕೈಯಲ್ಲಿ ಹಿಡಿದುಕೊಂಡು ಸಿಂಹಾಸನದ ಬಳಿಗೆ ಕರೆದೊಯ್ಯುವುದು ಸಂಪ್ರದಾಯ. ಇದಕ್ಕೆ 'ಹಸ್ತಲಾಘವ' ಎಂದು ಕರೆಯುತ್ತಾರೆ. ಸಿಂಹಾಸನದಲ್ಲಿ ಮಹಾರಾಜರು ಕುಳಿತ ಮೇಲೆ ಅವರ ಹಿಂದೆ ಹೋಗಿ ನಿಲ್ಲುವುದು ಈ ಎರಡು ಕಾರ್ಯವನ್ನು 'ಸರ್ದಾರ್ ಗೋಪಾಲರಾಜೇ ಅರಸ್' ಮಾಡುತ್ತಿದ್ದರು.

ಕುಸ್ತಿ ಸ್ಪರ್ಧೆ ನಡೆಸುವುದು, ಉತ್ತಮ ನಾಟಕಗಳನ್ನು ತಮ್ಮ ಕಂಪನಿಯ ಮೂಲಕ ಪ್ರದರ್ಶಿಸುವುದು ಇವುಗಳಲ್ಲಿ ಅತ್ಯಂತ ಆಸಕ್ತಿ ಹೊಂದಿದ್ದ ಗೋಪಾಲರಾಜೇ ಅರಸ್‌ರವರು ಈ ಎರಡು ಕಲೆಗಳನ್ನು ಬೆಳೆಸಲು ಬಹಳವಾಗಿ ಶ್ರಮಿಸಿದರು.

ನಾಟಕಕ್ಕೆ ಆಸಕ್ತಿ ತೋರುವವರು ಬೇಕು, ಕಲಾವಿದರಿಗೆ ಅನುಕೂಲವಾಗಬೇಕು, ನಾಟಕರಂಗ ಬೆಳೆಯಬೇಕು ಇದು ಅವರ ಉದ್ದೇಶವಾಗಿತ್ತು. ಇದಕ್ಕಾಗಿ ಮೈಸೂರಿನ ಸಂತೆಪೇಟೆ ವರ್ತಕರನ್ನೆಲ್ಲಾ ಸೇರಿಸಿದರು. ನಾಟಕ ಕಂಪನಿ ಮಾಡುವ ಉದ್ದೇಶ ಕಾರ್ಯಕ್ರಮ ನಡೆಸುವ ರೀತಿ ಎಲ್ಲವನ್ನು ವಿವರಿಸಿ ಅವರೆಲ್ಲರ ಸಹಕಾರ ತೆಗೆದುಕೊಂಡು ನಾಟಕ ಕಂಪನಿ (ಶ್ರೀ ಚಾಮುಂಡೇಶ್ವರಿ ನಾಟಕ ಸಭೆ) ಪ್ರಾರಂಭಿಸಿ ಹಲವಾರು ನಾಟಕಗಳು ಪ್ರದರ್ಶನವಾಗಲು ಕಾರಣರಾಗಿದ್ದರು. ಈ ಕಂಪನಿಯಲ್ಲಿ ಹಲವಾರು ಪ್ರತಿಭಾನ್ವಿತ ನಟ, ನಟಿಯರು ಇದ್ದರು. ಮುಖ್ಯರಾದವರು ಸುಬ್ಬಣ್ಣ, ಆಸ್ಥಾನದ ಸಂಗೀತ ವಿದ್ವಾನ್ ಬಿ. ರಾಚಪ್ಪನವರು, ನಾಗೇಂದ್ರರಾಯರು.

ನಂತರ ಈ ಕಂಪನಿ 'ಧರ್ಮರತ್ನಾಕರ ಎಂದೇ ಪ್ರಸಿದ್ಧರಾಗಿದ್ದ ನಂದಿ ಬಸಪ್ಪ ಹಾಗೂ ಮಳವಳ್ಳಿ ಸುಂದರಮ್ಮನವರ ಆಡಳಿತಕ್ಕೆ ಹೋಯಿತು. ಈ ಕಂಪನಿ ಕೆಲ ಕಾಲ ನಡೆದು ನಿಂತು ಹೋಯಿತು.

ಹಿಂದೆ ನಡೆಸಿಕೊಂಡು ಬಂದಂತೆ ಬರುವ ಉತ್ಪತ್ತಿಯನ್ನು ನಟ, ನಟಿಯರಿಗೆ ಹಂಚದೆ ಅವರಿಗೆ ಮಾಹೆಯಾನ ವೇತನ ವ್ಯವಸ್ಥೆ ಮಾಡಿದುದಾಗಿ ಪ್ರಕಟಿತ ಪತ್ರದ ಮುಖೇನ ತಿಳಿದುಬರುತ್ತದೆ.

ಇದಾದ ಬಹಳ ವರ್ಷಗಳ ನಂತರ ೧೯೫೫ರ ಸಮಯದಲ್ಲಿ ಹಿಂದಿನ ಶ್ರೀ ಚಾಮುಂಡೇಶ್ವರಿ ಕಂಪನಿಯಲ್ಲಿ ಹೆಸರಾಂತ ನಟರಾಗಿದ್ದ ಬಸವರಾಜುರವರ ಸಹೋದರರ ನೇತೃತ್ವದಲ್ಲಿ 'ಶ್ರೀ ಚಾಮುಂಡೇಶ್ವರಿ ಸಂಗೀತ ನಾಟಕ ಮಂಡಲಿ' ಎಂಬ ನಾಮಾಂಕಿತದಲ್ಲಿ ಕಂಪನಿ ಮತ್ತೆ ಪ್ರಾರಂಭವಾಯಿತು. ಇದಕ್ಕೆ ತಿಗುಳರ ಪೇಟೆಯಲ್ಲಿದ್ದ ಪ್ರೊ. ಅಣ್ಣಯ್ಯಪ್ಪನವರ ಸಹಕಾರವಿತ್ತು.

ಆ ಸಮಯದಲ್ಲಿ ಪ್ರೊ. ಅಣ್ಣಯ್ಯಪ್ಪನವರು ಅತ್ಯಂತ ಶ್ರೀಮಂತಿಕೆಯ ನಾಟಕದ ಸೆಟ್‌ಗಳನ್ನು ಹೊಂದಿದ್ದರು. ಆ ಸಮಯದಲ್ಲೇ ಈ ಎಲ್ಲಾ ಸೆಟ್‌ಗಳಿಗೆ ೭೫೦೦ ರೂ.ಗಳು ಖರ್ಚಾಗಿತ್ತೆಂದು ಪತ್ರದ ಮುಖೇನ ತಿಳಿದುಬರುತ್ತದೆ.

'ಶ್ರೀ ಚಾಮುಂಡೇಶ್ವರಿ ಸಂಗೀತ ನಾಟಕ ಮಂಡಲಿ'ಯ ಮೂಲಕ ಆಸ್ಥಾನ ವಿದ್ವಾನ್ ಬೆಳ್ಳಾವೆ ನರಹರಿ ಶಾಸ್ತ್ರಿಗಳ ವಿರಚಿತ 'ದಶಾವತಾರ' ನಾಟಕವನ್ನು ಬೆಂಗಳೂರಿನ ಸುಭಾಷ್ ನಗರ ಕೆರೆಯ ಆವರಣದಲ್ಲಿ (ಕೆಂಪೇಗೌಡ ಬಸ್ಟಾಂಡ್) ಪ್ರದರ್ಶಿಸಲಾಗಿತ್ತು. ದಶಾವತಾರ ನಾಟಕದ ಉದ್ಘಾಟನೆಯನ್ನು ಆಗಿನ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರು ಮಾಡಿದ್ದರು.

ಈ ನಾಟಕದ ಸೆಟ್‌ಗಳನ್ನು ನೋಡಲೆಂದೇ ಜನ ಮುಗಿಬಿದ್ದು ಬರುತ್ತಿದ್ದರು. ಕೆಲವು ನಾಟಕಗಳನ್ನು ಪ್ರದರ್ಶಿಸಿದ ಈ ಕಂಪನಿ ನಂತರದ ದಿನಗಳಲ್ಲಿ ನಿಂತೇ ಹೋಯಿತು.

* # ೨೫೦/ಐ, ೨ನೇ 'ಸಿ' ಮುಖ್ಯರಸ್ತೆ, ಹೇಮಾವತಿ ರಸ್ತೆ, ಗಿರಿನಗರ, ಬೆಂಗಳೂರು-೫೬೦೦೮೫.

|| ಶುಭ ಮಸ್ತು ||

ಮೈಸೂರು ಸಂಸ್ಥಾನದ ಮುಖ್ಯ ಮಂತ್ರಿಗಳಾದ

ಶ್ರೀ ಕೆ. ಹನುಮಂತಯ್ಯ ಬಿ. ಎ., ಎಲ್‌ಎಲ್. ಬಿ., ರವರು

ಮೈಸೂರು ಶ್ರೀ ಚಾಮುಂಡೇಶ್ವರಿ ಸಂಗೀತ ನಾಟಕ ಮಂಡಳಿಯವರ

# ದ ಶಾ ವ ತಾ ರ

ಎಂಬ ನಾಟಕ ಉದ್ಘಾಟನಾ ಸಮಾರಂಭವನ್ನು

ಬೆಂಗಳೂರಿನ ತಮ್ಮ ಸ್ವಂತ ಶ್ರೀ ಲಕ್ಷ್ಮೀ ಥಿಯೇಟರಿನಲ್ಲಿ ೧೯-೫-೫೬ ನೇ ಶನಿವಾರ

ನೆರವೇರಿಸಿದಾಗ್ಗೆ ಮಂಡಳಿಯ ಪರವಾಗಿ ಸಮರ್ಪಿಸಿದ

# ಬಿ ನ್ನ ವ ತ್ತ ಳೆ

**ಮಾನ್ಯ ಮುಖ್ಯ ಮಂತ್ರಿಗಳೇ,**

ಮೈಸೂರು ಶ್ರೀ ಚಾಮುಂಡೇಶ್ವರಿ ಸಂಗೀತ ನಾಟಕ ಮಂಡಳಿಯ ವ್ಯವಸ್ಥಾಪಕರಾದ ನಾವು ತಮಗೆ ಈ ಶುಭ ಸಮಯದಲ್ಲಿ ಹೃತ್ಪೂರ್ವಕವಾದ ಸುಸ್ವಾಗತವನ್ನು ಬಯಸುತ್ತೇವೆ. ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆ ನಮಗಾಗಿ ಸ್ವಲ್ಪ ಅವಕಾಶವನ್ನು ಕಲ್ಪಿಸಿಕೊಂಡು ನಮ್ಮ ಮಂಡಳಿಯ ನಾಟಕ ಮಹೋತ್ಸವದ ಉದ್ಘಾಟನೆಯನ್ನು ತಾವೇ ನಡೆಯಿಸಬೇಕೆಂಬ ನಮ್ಮ ಪ್ರಾರ್ಥನೆಗೆ ಸಮ್ಮತಿಸಿ ಇಂದು ಇಲ್ಲಿಗೆ ದಯಮಾಡಿಸಿದ್ದೀರಿ. ಇದು ತಮಗೆ ನಾಟಕ ಕಲೆಯ ಮೇಲೆ ಇರುವ ಅಪಾರ ಪ್ರೇಮ ವಾತ್ಸಲ್ಯಗಳನ್ನು ತೋರ್ಪಡಿಸುತ್ತದೆ.

ತಾವು ಮೈಸೂರು ಸರ್ಕಾರದ ಮುಖ್ಯ ಮಂತ್ರಿ ಪದವಿಗೆ ಬಂದಿರುವುದು ನಮ್ಮ ನಾಡಿನ ಭಾಗ್ಯವೆಂದು ಮುಖ್ಯವಾಗಿ, ನಾಡಿನ ಕಲಾವಿದರ ಉನ್ನತಿಗೆ ಅಂಕುರಾರ್ಪಣವಾಗಿದೆ. ತಾವು ಈ ಪದವಿಯನ್ನು ಅಲಂಕರಿಸಿದ ಮೇಲೆ ದೇಶಾಭಿಮಾನದಿಂದಲೂ, ಪ್ರಜಾವಾತ್ಸಲ್ಯದಿಂದಲೂ ಅನೇಕ ದೊಡ್ಡ ಕೆಲಸಗಳು ನಡೆದಿವೆ.

ಮುಖ್ಯವಾಗಿ ಆಹಾರ ಧಾನ್ಯಗಳ ನಿಯಂತ್ರಣವನ್ನು ತೆಗೆದುಹಾಕಿ ಪ್ರಜೆಗಳಿಗೆ ದೊಡ್ಡ ಉಪಕಾರ ಮಾಡಿದ್ದೀರಿ. ಇಡೀ ಭಾರತಕ್ಕೇ ಅಲಂಕಾರ ಪ್ರಾಯವಾದ ಭವ್ಯ ಸೌಧಗಳಲ್ಲೊಂದಾದ "ವಿಧಾನ ಸೌಧ" ನಿರ್ಮಾಣವನ್ನು ಕೈಗೊಂಡು ಕೀರ್ತಿಧ್ವಜವನ್ನು ಹಾರಿಸಿದ್ದೀರಿ. ಇದು ಮಹತ್ತರವಾದ ಕಾರ್ಯವೆಂಬುದು ಮುಂದಿನ ಬೃಹತ್ ಕರ್ನಾಟಕದಲ್ಲಿ ಇತಿಹಾಸಪ್ರಸಿದ್ಧವಾಗುತ್ತದೆ ಹಿಂದಿನ ಕಾಲಗಳಲ್ಲಿ ರಾಜಾಶ್ರಯದಲ್ಲಿ ಬೆಳೆದು ನಶಿಸಿಹೋಗಿದ್ದ ನಾಟ್ಯಕಲೆ, ಸಂಗೀತ, ನಾಟಕ, ಗ್ರಂಥಪ್ರಕಟಣೆ ಇವುಗಳಿಗೆ ಉತ್ತೇಜನಕೊಡುವುದಕ್ಕಾಗಿ ಸಂಸ್ಕೃತಿಪ್ರಚಾರ ಎಂಬ ಯೋಜನೆಯನ್ನು ಕೈಗೊಂಡು ಇಡೀ ಕನ್ನಡ ನಾಡಿನಲ್ಲಿ ಕೀರ್ತಿ ಹೊಂದಿರುವಿರಿ. ಈ ಏರ್ಪಾಡಿನಿಂದ ದೇಶೋನ್ನತಿ ಸಾಧನೆಗೆ ಸಹಾಯವಾಗುವುದರಲ್ಲಿ ಸಂಶಯವಿಲ್ಲ. ಎಷ್ಟೇ ಎಡರು ತೊಡರುಗಳಿದ್ದರೂ ತಾವು ಧೈರ್ಯದಿಂದ ಇವನ್ನು ಮುಂದುವರಿಸುತ್ತಿರುವುದು ಹೆಮ್ಮೆಯ ಸಂಗತಿ.

ಸುಮಾರು 35 ವರುಷಗಳ ಹಿಂದೆ ಶ್ರೀ ಚಾಮುಂಡೇಶ್ವರಿ ಕರ್ನಾಟಕ ನಾಟಕ ಸಭಾ, ಲಿಮಿಟೆಡ್ ಎಂಬ ಹೆಸರಿನ ನಾಟಕ ಸಂಘವು ದಿವಂಗತ ಸರ್ದಾರ್ ಗೋಪಾಲರಾಜ ಅರಸ್‌ರವರ ನೇತೃತ್ವದಲ್ಲಿ ಮೈಸೂರು ಸಂತೇಪೇಟೆ ಪ್ರಮುಖ ವರ್ತಕರುಗಳಿಂದ ಏರ್ಪಾಟಾಯಿತು. ಆಗ ದಿವಂಗತ ಸುಬ್ಬಣ್ಣನವರು ಮತ್ತು ದಿವಂಗತ ಆಸ್ಥಾನ ಸಂಗೀತ ವಿದ್ವಾನ್ ಶ್ರೀ ಬಿ. ದೇವೇಂದ್ರಪ್ಪನವರು ಮತ್ತು ಮಾ॥ ರಾ॥ ನಾಗೇಂದ್ರರಾವ್ ಮೊದಲಾದವರ ಆಡಳಿತದಲ್ಲಿ ಅದು ಕೆಲವುಕಾಲ ನಡೆಯಿತು. ಅನಂತರ ಧರ್ಮರತ್ನಾಕರ ಕೆ. ನಂದಿಬಸಪ್ಪನವರು ಮತ್ತು ಮಳವಳ್ಳಿ ಶ್ರೀಮತಿ ಸುಂದರಮ್ಮನವರು ಇವರ ಆಡಳಿತಕ್ಕೆ ಬಂದು, ಹಿಂದಿನಂತೆ ಉತ್ಪತ್ತಿಯನ್ನು ನಟ, ನಟಿಯರಿಗೆ ಹಂಚದೆ ಅವರಿಗೆ ಮಾಹೆಯಾನ ವೇತನವನ್ನು ಏರ್ಪಡಿಸಲಾಯಿತು. ಅನಂತರ ಕೆಲವುಕಾಲ ಇವರುಗಳ ಆಡಳಿತದಲ್ಲಿ ನಡೆದು ಕಾರಣಾಂತರದಿಂದ ಆ ಸಂಘವು ನಿಂತುಹೋಯಿತು.

ಬೆಂಗಳೂರು ನಗರದಲ್ಲಿ ನಾಟಕಕಲೆಗಳಿಗೆ ಬೇಕಾದಂತ ಉಡುಪುಗಳು, ಸೀನರಿಗಳು ಇವುಗಳ ತಯಾರಿಕೆಗೆ ಸುಮಾರು 40 ವರುಷಗಳಿಂದಲೂ ತಮ್ಮ ತನು, ಮನ ಧನಗಳನ್ನು ಅರ್ಪಿಸಿ, ನಷ್ಟಹೊಂದಿದ್ದರೂ ಸಹ ಧೈರ್ಯಗೆಡದ ಮುನ್ನುಗ್ಗುತ್ತಿರುವ ಪ್ರೈಲ್ವಾನ್ ಟಿ. ಅಣ್ಣಯ್ಯಪ್ಪನವರ ಸಹಕಾರದಿಂದಲೂ ಮತ್ತು ಹಿಂದಿನ ಶ್ರೀ ಚಾಮುಂಡೇಶ್ವರಿ ಕಂಪೆನಿಯ ಪ್ರಖ್ಯಾತ ನಟರಾದ ಶ್ರೀ ಬಸವರಾಜು ಪಮೋದರವರ ನೇತೃತ್ವದಲ್ಲಿ ಶ್ರೀ ಚಾಮುಂಡೇಶ್ವರಿ ಸಂಗೀತ ನಾಟಕ ಮಂಡಲಿ ಎಂಬ ಹೆಸರಿನಲ್ಲಿ ಈಗ ಏರ್ಪಾಟಾಗಿದೆ. ಈಗ್ಗೆ ನಾಲ್ಕು ವರ್ಷಗಳ ಹಿಂದೆಯೇ ಮುದ್ರಣವಾಗಿದ್ದ ಆಸ್ಥಾನ ವಿದ್ವಾನ್ ಕರ್ನಾಟಕ ಕವಿಕೇಸರಿ ಶ್ರೀ ವರ್ಮಾ ಬೆಳ್ಳಾವೆ ನರಹರಿಶಾಸ್ತ್ರಿಗಳಿಂದ ವಿರಚಿತವಾದ "ದ ಶಾ ವ ತಾ ರ" ಎಂಬ ನಾಟಕವನ್ನು ರಂಗಕ್ಕೆ ತರಬೇಕೆಂದು ನಮಗೆ ಮನಸ್ಸುಂಟಾಗಿ ತಮಗೆ ಆಹ್ವಾನವನ್ನು ಸಲ್ಲಿಸಿದ್ದಾಯಿತು.

ತಾವು ನಮ್ಮ ಈ ಆಹ್ವಾನವನ್ನು ಗೌರವಿಸಿ ತಮ್ಮ ಇತರ ಕಾರ್ಯಗಳನ್ನು ಒತ್ತಟ್ಟಿಗಿಟ್ಟು ದಶಾವತಾರ ನಾಟಕದ ಉದ್ಘಾಟನ ಮಹೋತ್ಸವವನ್ನು ನಡೆಯಿಸಲು ದಯಮಾಡಿಸಿದ್ದಕ್ಕಾಗಿ ತಮಗೆ ಮಂಡಳಿಯವರು ತುಂಬಾ ಕೃತಜ್ಞರಾಗಿರುತ್ತಾರೆ. ತಮಗೆ ಶತೋಽಸ್ಮತಿ [illegible] ಕೀರ್ತಿವಂತ ಭಾಗಗಳನ್ನು ದಯಪಾಲಿಸಬೇಕು ಶ್ರೀ ಚಾಮುಂಡೇಶ್ವರಿಯನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇವೆ.

ಬೆಂಗಳೂರು

[illegible] ಶ್ರೀ ಚಾಮುಂಡೇಶ್ವರಿ ಸಂಗೀತ ನಾಟಕ ಮಂಡಳಿಯವರು [illegible]

ಅಮೋಘ ಪ್ರಾರಂಭ ! ಅಪೂರ್ವ ಅವಕಾಶ !!

# ಶ್ರೀ ಚಾಮುಂಡೇಶ್ವರೀ ನಾಟಕ ಮಂಡಳಿ,

ಮೈಸೂರು.



ಇಡೀ ಕರ್ನಾಟಕದಲ್ಲೇ ಎಲ್ಲೂ ಇಲ್ಲದಂತಹ ಅತ್ಯುತ್ತಮ ಭವ್ಯ

## ರಂಗಮಂಟಪ.

ಇವರು

ಕೃಷ್ಣರಾಜನಗರದ ಬಸ್‌ಸ್ಟ್ಯಾಂಡ್ ಬಳಿ ಹಾಕಿರುವ ಸಿ. ಎಸ್. ಎ.

ಥಿಯೇಟರಿನಲ್ಲಿ

ದಿವಂಗತ ಪೈಲ್ವಾನ್ ಟಿ. ಅಣ್ಣಯ್ಯಪ್ಪನವರ ಪರಿಶ್ರಮದಿಂದ 75 ಸಹಸ್ರ ರೂಪಾಯಿ ಖರ್ಚಿನಿಂದ ತಯಾರಿಸಲ್ಪಟ್ಟ

ಇದುವರೆವಿಗೂ ಕೃಷ್ಣರಾಜನಗರದಲ್ಲಿ ಮಹನೀಯರುಗಳು ನೋಡದಿದ್ದ ನೂತನ ರಂಗಸಜ್ಜಿಕೆಯೊಡನೆಯೂ, ಹೊಸರೀತಿ ಕಲಾವಿದರೊಡನೆಯೂ

## ತಾ|| 26-1-59 ನೇ ಸೋಮವಾರದಿಂದ

**ಪ್ರತಿದಿನ ರಾತ್ರಿ 10-30 ಘಂಟೆಗೆ**

ನವೀನ

# ಶ್ರೀ ಕೃಷ್ಣಲೀಲಾ

ಎಂಬ ಪೌರಾಣಿಕ ನಾಟಕವನ್ನು ಪ್ರಾರಂಭಿಸುತ್ತಾರೆ.

ಮಹಾಜನಗಳು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

ಈ ನಾಟಕದಲ್ಲಿ ತಾವು ನೋಡಲೇಬೇಕಾದ ಅದ್ಭುತ ದೃಶ್ಯಗಳು !!

ಕ್ಷೀರಸಾಗರ, ಕಾರಾಗೃಹದ ಬೀಗವು ತಾನಾಗಿಯೇ ಒಡೆಯುವಿಕೆ ಮಳೆ ಗುಡುಗು ಮಿಂಚುಗಳ ಆರ್ಭಟ ಕಾಳಿಂಗಮರ್ದನದೃಶ್ಯ, ಕಂಸನ ಕತ್ತಿಯು ತಾನಾಗಿಯೇ ಹತ್ತಿ ಉರಿಯುವುದು, ತಲೆಯು ಅಂತರಿಕ್ಷಕ್ಕೆ ಹಾರುವುದು. ಮುಂತಾದ ಅದ್ಭುತ ದೃಶ್ಯಗಳನ್ನು ನೋಡಲು ತಪ್ಪಬೇಡಿ.





ನವೀನ

# ಶ್ರೀ ಕೃಷ್ಣಲೀಲಾ



ಶ್ರೀ ಸಿ. ಬಸವರಾಜ್‌ರವರು

ಶ್ರೀ ಅಭಿನಯಶಿಖಾಮಣಿ ಎಂ. ಸುಬ್ಬರಾಯರು

ಶ್ರೀ ಸಂಗೀತ ವಿದ್ವಾನ್ ಹೊಳಲಿ ಸುಬ್ರಹ್ಮಣ್ಯಶಾಸ್ತ್ರಿಗಳು

ಶ್ರೀ ಹಾಸ್ಯಪಟು ಶ್ರೀ ರಾಮರಾಜೆಅರಸ್

ಶ್ರೀ ನಟಭಯಂಕರ ಶಿವರಾಮಯ್ಯ

ಸಿ. ಎಂ. ಮುನಿಯಪ್ಪ, ಪರಮಮೂರ್ತಿ, ಬಂಗೇರ, ಕೃಷ್ಣಮೂರ್ತಿ, ಪಿ. ಆ., ನಾಮಕಾರ್

ಶ್ರೀಮತಿಗಳಾದ ಕಲಾದೇವಿ. ಆರ್ ನಾಗರತ್ನಮ್ಮ ; ಕುಮಾರಿ ಚಂದ್ರಮ್ಮ ಶಾರದಮ್ಮ, ಬೇಜನಿಮಗಲ, ಪಾರ್ವತಿ ಮುಂತಾದವರು ಮುಖ್ಯಪಾತ್ರಗಳನ್ನು ವಹಿಸುವರು

ಟಿಕೇಟ್ ದರ:– 3-00, 2-00, 1-00, 0 50 ನಯಾಪೈಸಾ.

ವಿ. ಸೂ:– ಸರ್ವರೂ ಕಂಪನಿಯ ನಿಯಮಗಳಿಗೆ ಅನುಸರಿಸಿ ನಡೆಯಬೇಕಾಗಿ ಪ್ರಾರ್ಥನೆ.

ಪ್ರೊ|| ಅರೇಗೌಡಪ್ಪ
(ಪೈಲ್ವಾನ್ ಟಿ. ಅಣ್ಣಯ್ಯಪ್ಪನವರ ಮೊಮ್ಮಗ)

ಮ್ಯಾನೇಜಿಂಗ್ ಪ್ರೊಪ್ರೈಟರ್ಸ್
ಎ. ಲಕ್ಷ್ಮಣ್, ಸಿ. ಬಸವರಾಜ್



# ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಪ್ರವಾಸಗಳು ರಾಜ್ಯಾಭಿವೃದ್ಧಿಯಲ್ಲಿ ಅವುಗಳ ಪ್ರಭಾವ

**ಡಾ. ಮಹಾದೇವಿ***

ಕ್ರಿ.ಶ. ೧೯೦೨–೧೯೪೦ರ ಅವಧಿಯಲ್ಲಿ ಮೈಸೂರು ಸಂಸ್ಥಾನದ ಆಡಳಿತದ ಚುಕ್ಕಾಣಿಯನ್ನುಹಿಡಿದು ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಮೈಸೂರು ಸಂಸ್ಥಾನವನ್ನು ಒಂದು **'ಮಾದರಿ–ರಾಜ್ಯ'**ವನ್ನಾಗಿ ಪರಿವರ್ತಿಸಿದ ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಬಾಲ್ಯದಿಂದ ತಮ್ಮ ಕೊನೆಯ ದಿನಗಳವರೆಗೂ ದೇಶವಿದೇಶಗಳಲ್ಲಿ ಅನೇಕ ಪ್ರವಾಸಗಳನ್ನು ಕೈಗೊಂಡಿದ್ದರು. **'ದೇಶ ಸುತ್ತು–ಕೋಶ ಓದು'** ಎಂಬ ನಾಣ್ಣುಡಿಯಂತೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಕೈಗೊಂಡ ಪ್ರವಾಸಗಳು ರಾಜ್ಯಾಭಿವೃದ್ಧಿಯಲ್ಲಿ ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಮಹತ್ವವನ್ನು ಪಡೆದುಕೊಂಡಿವೆ. ನಾಲ್ವಡಿ ಕೃಷ್ಣರಾಜ ಒಡೆಯರ ಈ ಪ್ರವಾಸಗಳು ಚಾರಿತ್ರಿಕವಾದುವೂ ಆಗಿರುವುದರಿಂದ ಅವುಗಳಿಂದ ರಾಜ್ಯದಲ್ಲುಂಟಾದ ಅಭಿವೃದ್ಧಿ ಕಾರ್ಯಗಳನ್ನು ಮತ್ತು ನಾಲ್ವಡಿಯವರ ವ್ಯಕ್ತಿತ್ವ ಮತ್ತು ದೃಷ್ಟಿಕೋನಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

ನಾಲ್ವಡಿಯವರು ಕೂಡ ವಿವಿಧ ಉದ್ದೇಶಗಳನ್ನಿರಿಸಿಕೊಂಡು ಅದರಲ್ಲೂ ಮುಖ್ಯವಾಗಿ ಶೈಕ್ಷಣಿಕ, ಧಾರ್ಮಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕಾರಣಗಳಿಗಾಗಿ ಪ್ರವಾಸಗಳನ್ನು ಕೈಗೊಂಡಿದ್ದರು. ಅವರು ರಾಜ್ಯದಲ್ಲಿ ಪ್ರಜೆಗಳ ಸಮಸ್ಯೆಗಳನ್ನು ತಿಳಿದುಕೊಳ್ಳಲು ಸ್ಥಳೀಯ ಪ್ರವಾಸಗಳನ್ನೂ, ಭಾರತದಲ್ಲಿ ಹಾಗೂ ವಿದೇಶಗಳಲ್ಲಿ ಹಲವಾರು ಬಾರಿ ಸಂಚರಿಸಿ ತಮ್ಮ ಅನುಭವವನ್ನು ಶ್ರೀಮಂತಗೊಳಿಸಿಕೊಂಡರು. ಅವರ ಪ್ರವಾಸದ ಉದ್ದೇಶ ಹಾಗೂ ಅವರ ಪ್ರತಿಕ್ರಿಯೆ ಮತ್ತು ಫಲಿತಾಂಶಗಳನ್ನು ವಿಶ್ಲೇಷಿಸಿ ಅವುಗಳು ಹೇಗೆ ನಾಲ್ವಡಿಯವರ ಆಡಳಿತದ ವೈಖರಿಯನ್ನು ಸೂಚಿಸುವುದೆಂಬುದನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಒಂದು ಗಮನಾರ್ಹ ಅಂಶವೆಂದರೆ ಅವರು ಕೈಗೊಂಡ **ಪ್ರಾಂತೀಯ, ದೇಶೀಯ ಹಾಗೂ ವಿದೇಶಿ ಪ್ರವಾಸಗಳು.** ಈ ಪ್ರವಾಸಗಳಿಂದ ಅವುಗಳ ಸಾಮಾಜಿಕ, ಧಾರ್ಮಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಮಹತ್ವ ಹಾಗೂ ಅವುಗಳಿಂದಾದ ಪ್ರಭಾವ ಮತ್ತು ಪರಿಣಾಮಗಳನ್ನು ಪರಿಶೀಲಿಸುವುದೇ ಈ ಲೇಖನದ ಉದ್ದೇಶ. ಇದರಿಂದ ನಾಲ್ವಡಿಯರ ವ್ಯಕ್ತಿತ್ವ ಮತ್ತು ದೃಷ್ಟಿಕೋನ, ಸಮದರ್ಶಿತ್ವ, ಧರ್ಮಪ್ರಿಯತೆ, ನ್ಯಾಯ–ನಿಷ್ಠತೆ, ಪ್ರಜಾವಾತ್ಸಲ್ಯ ಮತ್ತು ಅದರಿಂದ ಉಂಟಾದ ರಾಜ್ಯಾಭಿವೃದ್ಧಿ ಕಾರ್ಯಗಳು ಮೊದಲಾದವುಗಳನ್ನು ತಿಳಿಯಲು ಸಾಧ್ಯವಾಗುತ್ತದೆ.

## I. ನಾಲ್ವಡಿಯವರ ಪ್ರಾಂತೀಯ ಪ್ರವಾಸಗಳು

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಸಾಧನೆ ಬಹುಮುಖಿಯಾದ್ದದು. ಇವರ ಕಾಲದಲ್ಲಿ ಮೈಸೂರು ಸಂಸ್ಥಾನ ಸರ್ವತೋಮುಖ ಬೆಳವಣಿಗೆಗೆ ಕಾರಣವಾಯಿತು. ತಮ್ಮ ಕಾಲಾವಧಿಯಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕ್ರಾಂತಿಕಾರಿ ಯೋಜನೆಗಳನ್ನು ಜಾರಿಗೆ ತಂದು ಅಂದು ಭಾರತದಲ್ಲಿದ್ದ ೬೩೫ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವೇ ಅಗ್ರಸ್ಥಾನ ಪಡೆಯುವಂತೆ ಮಾಡಿದ ಕೀರ್ತಿ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಸಲ್ಲುತ್ತದೆ. ಶ್ರೀ ನಾಲ್ವಡಿಯವರು ರಾಜನೀತಿ ನೈಪುಣ್ಯತೆಯ ಜೊತೆಗೆ, ರಾಜ್ಯದ

* ಸಹ ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿದ್ಯಾಲಯ, ಮೈಸೂರು–೫೭೦೦೦೬.

ಜನರ ಸ್ಥಿತಿಗತಿಗಳನ್ನು ಪರಿಚಯ ಮಾಡಿಕೊಳ್ಳುವ ಸಲುವಾಗಿ ನಾಡಿನಾದ್ಯಂತ ಅನೇಕ ವಿಸ್ತಾರವಾದ ಪ್ರವಾಸಗಳನ್ನು ಕೈಗೊಂಡರು. ಮೊದಲನೆಯದಾಗಿ, ಕ್ರಿ.ಶ. ೧೮೯೮ರಲ್ಲಿ ಅವರು ಶಿವಮೊಗ್ಗ, ಕಡೂರು ಮತ್ತು ಹಾಸನ ಪ್ರದೇಶಗಳಿಗೆ ಪ್ರವಾಸ ಕೈಗೊಂಡರು. ಈ ಸಂದರ್ಭದಲ್ಲಿ ಅಲ್ಲಿನ ನಗರ ಮತ್ತು ಗ್ರಾಮಾಂತರ ಪ್ರದೇಶಗಳ ಜನರನ್ನು ಸಂಪರ್ಕಿಸಿ ಅವರ ಕಷ್ಟಸುಖಗಳನ್ನು ಮನನ ಮಾಡಿಕೊಂಡರು. ಅದಕ್ಕೆ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸಿದರು.

ಕ್ರಿ.ಶ. ೧೮೯೯ರಲ್ಲಿ ತುಮಕೂರು ಮತ್ತು ಮೈಸೂರು ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡು ಆ ಭಾಗದ ಗಣ್ಯವ್ಯಕ್ತಿಗಳು ಮತ್ತು ಅಧಿಕಾರಿಗಳನ್ನು ಪರಿಚಯ ಮಾಡಿಕೊಂಡುದಲ್ಲದೆ, ಅಲ್ಲಿಯ ಜನರ ಸ್ಥಿತಿಗತಿಗಳನ್ನು ಅರಿತುಕೊಂಡರು. ಪ್ರಜೆಗಳ ಕಷ್ಟಸುಖಗಳನ್ನು ತಾವೇ ಸಾಕ್ಷಾತ್ತಾಗಿ ತಿಳಿದು, ಪ್ರಜೆಗಳಿಗೆ ಏನು ಬೇಕೆಂಬುದನ್ನು ಮನಗಂಡಿದ್ದರು. ಈ ರೀತಿಯಲ್ಲಿ ಪಡೆದ ಅನುಭವದಿಂದ ಮುಂದೆ ರಾಜ್ಯದಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಮೊದಲೇ ಗುರುತಿಸಿ ಅವುಗಳನ್ನು ಪರಿಹರಿಸಲು ಶಕ್ತರಾಗುತ್ತಿದ್ದರು.

ಸಂಸ್ಥಾನದ ಸ್ಥಿತಿಗತಿಗಳನ್ನು ಖುದ್ದಾಗಿ ತಿಳಿಯಲು ನಾಲ್ವಡಿಯವರು ಆಗಾಗ್ಗೆ ಸಂಸ್ಥಾನದೊಳಗೆ ಸಂಚಾರ ಮಾಡುತ್ತಿದ್ದರು. ಹಳ್ಳಿಗಳ ಹೊಲಗದ್ದೆಗಳ ಮೇಲೆ ಸಾಮಾನ್ಯ ಜನರಂತೆಯೇ ನಡೆಯುತ್ತ, ರೈತರೊಡನೇ ಮಿಳಿತವಾಗಿ ಸ್ನೇಹಮಯಿಯಾಗಿ ಮಾತನಾಡುತ್ತ ತಾವು ಯಾರೆಂಬುದರ ಸೂಚನೆಯನ್ನೂ ಅವರಿಗೆ ತಿಳಿಸದೆ, ರೈತರ ಕಷ್ಟ ಸುಖಗಳನ್ನು ವಿಚಾರಿಸಿ, ಸಾಧ್ಯವಾದರೇ ಅಲ್ಲಿಯೇ ಪರಿಹಾರಗಳನ್ನು ಒದಗಿಸುತ್ತಿದ್ದರು. ಅಂತದೊಂದು ಘಟನೆ ಕ್ರಿ.ಶ. ೧೯೦೧ನೇ ಇಸವಿಯಲ್ಲಿ ನಡೆಯಿತು. ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಮೈಸೂರು ಗ್ರಾಮಾಂತರ ಪ್ರದೇಶಗಳಿಗೆ ಪ್ರವಾಸ ಕೈಗೊಂಡರು. ಒಂದು ಗ್ರಾಮದ ಚಾವಡಿಗೆ ಆಗಮಿಸಿ, ಅಲ್ಲಿದ್ದ ಒಬ್ಬ ರೈತನನ್ನು ಕರೆದು, ಅವನು ತನ್ನ ಪಟ್ಟೆಯನ್ನು ತರುವಂತೆ ಆದೇಶವಿತ್ತರು. ರೈತನು ಇವರಾರೆಂದು ತಿಳಿಯದೆ, ಬಹುಶಃ ಇವರು ರೆವಿನ್ಯೂ ಇಲಾಖೆಯ ಅಧಿಕಾರಿಗಳಲೊಬ್ಬರಿರ ಬೇಕೆಂದು ತಿಳಿದು ತನ್ನ ಪಟ್ಟಪುಸ್ತಕವನ್ನು ತಂದು ತೋರಿಸಿ, ತಾನು ಪೂರ್ತಿಯಾಗಿ ಕಂದಾಯವನ್ನು ಪಾವತಿ ಮಾಡಿದ್ದರೂ ಶಾನುಭೋಗರು ಕಡಿಮೆ ಮೊತ್ತವನ್ನು ಪಟ್ಟೆಯಲ್ಲಿ ಕಾಣಿಸಿ ಅನ್ಯಾಯ ಮಾಡಿರುವುದಾಗಿಯೂ, ತಾನು ಎಷ್ಟು ಕೇಳಿ ಕೊಂಡರೂ ಪಟ್ಟೆಯನ್ನು ತಿದ್ದಿ ಸರಿಪಡಿಸಿಕೊಡುತ್ತಿಲ್ಲವೆಂದು ನಾಲ್ವಡಿಯವರಲ್ಲಿ ಬಿನ್ನವಿಸಿಕೊಂಡನು. ತಕ್ಷಣವೇ ಕಾರ್ಯ ಪ್ರವೃತ್ತರಾದ ಕೃಷ್ಣರಾಜರು ಆ ಚಾವಡಿಯ ಶಾನುಭೋಗನನ್ನು ಕರೆಸಿ, ಸಮಸ್ತ ಲೆಕ್ಕ ಪತ್ರಗಳನ್ನು ತರುವಂತೆ ಆಜ್ಞೆ ಮಾಡಿದರು.

ಶಾನುಭೋಗನಿಗೆ ಅವರಾರೆಂದು ತಿಳಿಯದಿದ್ದರೂ, ಈ ಮೊದಲೇ ವದಂತಿಯಿದ್ದಂತೆ ಹಳೆಯ ಅಮಲ್ದಾರರಿಗೆ ವರ್ಗವಾಗಿ ಹೊಸ ಅಮಲ್ದಾರರು ಬಂದಿರಬೇಕೆಂದು ಭಾವಿಸಿ ಶಾನುಭೋಗನು ಖಾತೆ, ಖಿರ್ದಿ ಮೊದಲಾದ ಲೆಕ್ಕದ ಪುಸ್ತಕ ಗಳನ್ನು ತಂದು ನಾಲ್ವಡಿಯವರಿಗೆ ಒಪ್ಪಿಸಿದನು. ಆ ಪುಸ್ತಕದ ಲೆಕ್ಕವನ್ನು ಪರಿಶೀಲಿಸಿದಾಗ ರೈತನು ಸಂದಾಯ ಮಾಡಿರುವ ಕಂದಾಯವನ್ನು ಸೇರಿಸಿರಲಿಲ್ಲ. ಕೂಡಲೇ ಶಾನುಭೋಗನಿಗೆ ಎಚ್ಚರಿಕೆಯನ್ನು ನೀಡಿ ರೈತನಿಗೆ ನ್ಯಾಯ ದೊರಕಿಸಿ ಕೊಟ್ಟುದಲ್ಲದೆ, ಇನ್ನು ಮುಂದೆ ಇಂತಹ ತಪ್ಪುಗಳನ್ನು ಮಾಡದಂತೆ ಎಚ್ಚರಿಸಿದರು. ಗ್ರಾಮ ಲೆಕ್ಕಗಳನ್ನು ಪರಿಶೀಲಿಸುವು ದರಲ್ಲೂ ಅದ್ಭುತ ಜ್ಞಾನಶಕ್ತಿಯನ್ನು ಹೊಂದಿದ್ದ ನಾಲ್ವಡಿ ಯವರು ಇಂತಹ ಅನೇಕ ಕ್ರಮಗಳನ್ನು ಅನುಸರಿಸುವ ಮೂಲಕ ರೈತರ ಶೋಷಣೆಯನ್ನು ತಪ್ಪಿಸುತ್ತಿದ್ದರು.

ಈ ರೀತಿಯಲ್ಲಿಯೇ ಹಾಸನ ಜಿಲ್ಲೆಯ ಪ್ರವಾಸ ದಲ್ಲಿದ್ದಾಗ ಜಿಲ್ಲೆಯ ಡಿಸ್ಪೆನ್ಸರಿಯೊಂದಕ್ಕೆ ಹೋಗಿ, ಅಲ್ಲಿ ಇಂಜೆಕ್ಷನ್ ನೀಡಲು ಇಟ್ಟಿದ್ದ ಉಪಕರಣ ತುಕ್ಕು ಹಿಡಿದಿದ್ದು ದನ್ನು ಗಮನಿಸಿ ಇದರಲ್ಲಿ ಹೇಗೆ ಚಿಕಿತ್ಸೆಯನ್ನು ಮಾಡುತ್ತಿರೆಂದು ಅಲ್ಲಿದ್ದ ವೈದ್ಯರನ್ನು ಪ್ರಶ್ನಿಸಿದರು. ವೈದ್ಯರು ಅವುಗಳನ್ನು ದೃಷ್ಟಿಸಿ ನೋಡಿ, ಇದನ್ನು ಕುದಿಯುವ ನೀರಲ್ಲಿಟ್ಟು ಹೊರಕ್ಕೆ ತೆಗೆದು ಔಷಧ ದ್ರವವನ್ನು ಸೂಜಿಯ ಮೂಲಕ ಒಳಕ್ಕೆ ಸೆಳೆದುಕೊಂಡು ಸೂಜಿಯ ಮೊನೆಯನ್ನು ತೋಳಿಗೆ ಚುಚ್ಚಿ ಔಷಧವನ್ನು ರಕ್ತಕ್ಕೆ ಸೇರಿಸಿದರಾಯಿತು ಎಂದನು. ಇದನ್ನು ಕೇಳಿ ಆಶ್ಚರ್ಯ ಚಕಿತರಾದ ನಾಲ್ವಡಿಯವರು ರೋಗಿಯ ದೇಹಕ್ಕೆ ಔಷಧ ಸೇರುವ ಮುನ್ನ, ಸೂಜಿಯ ತುಕ್ಕು ರಕ್ತದೊಳಕೆ ವ್ಯಾಪಿಸಿ ರೋಗಿಯ ಪ್ರಾಣ ಹೋಗಿರು ತ್ತದೆಂದು ಎಚ್ಚರಿಸಿ, ತುಕ್ಕು ಹಿಡಿದು ಅಪ್ರಯೋಜಕವಾಗಿ ಪರಿಣಮಿಸಿದ್ದ ಆ ಸೂಜಿಯನ್ನು ಹೊರಗೆ ಎಸೆದು, ವೈಜ್ಞಾನಿಕ ಮಾದರಿ ಯಲ್ಲಿಯೇ ಪ್ರಜೆಗಳಿಗೆ ಔಷಧೋಪಚಾರ ಮಾಡಬೇಕೆಂದು ವೈದ್ಯರಿಗೆ ಬುದ್ಧಿ ಹೇಳಿದರು.

ಅಜ್ಞಾನವು ಜನರ ದುಃಖ ಪರಂಪರೆಗಳಿಗೆ ಮೂಲ ಕಾರಣವೆಂದು ಬಲವಾಗಿ ನಂಬಿದ್ದ ನಾಲ್ವಡಿಯವರು

ಸಂಸ್ಥಾನದಲ್ಲಿ ವಿದ್ಯಾಭ್ಯಾಸವು ಸಾರ್ವತ್ರಿಕವಾಗಿ ಹರಡುವಂತೆ ತಮ್ಮ ಪ್ರಜಾ ವರ್ಗಕ್ಕೆ ಸದ್ವಿದ್ಯಾ ಶಿಕ್ಷಣವನ್ನು ನೀಡಲು ಅನೇಕ ಕ್ರಮಗಳನ್ನು ಕೈಗೊಂಡರು.

ಪಾಠಶಾಲೆಯೊಂದಕ್ಕೆ ಭೇಟಿ ನೀಡಿ ಆ ಶಾಲೆಯ ಉಪಾಧ್ಯಾಯರೊಬ್ಬರು ಭೂಗೋಳ ಪಾಠ ಮಾಡುತ್ತಿದ್ದು, ಭೂಪಟದಲ್ಲಿ ನಗರ ಮತ್ತು ನದಿಗಳು ಹರಿಯುವ ಸ್ಥಳಗಳನ್ನು ವಿದ್ಯಾರ್ಥಿಗಳಿಗೆ ತೋರಿಸಲು ವಿಫಲರಾದರು. ನಾಲ್ವಡಿಯವರು ಅವುಗಳನ್ನು ತೋರಿಸಿ, ಹಿಂದಿನ ದಿನವೇ ಭೂಪಟ ನೋಡಿ, ಮಾರನೆಯ ದಿನ ಪಾಠ ಹೇಳಬೇಕೆಂದು ಉಪಾಧ್ಯಾಯರಿಗೆ ಸಲಹೆ ನೀಡಿದರು. ಹಾಗೆಯೇ ವಿದ್ಯಾರ್ಥಿಗಳ ಜ್ಞಾನ ಮಟ್ಟವನ್ನು ಅರಿಯಲು ಭೂಪಟದ ಸಹಾಯವಿಲ್ಲದೆ ದಿಕ್ಕುಗಳನ್ನು ತೋರಿಸುವಂತೆ ಕೇಳಿದಾಗ ವಿದ್ಯಾರ್ಥಿಯೊಬ್ಬ ಸೂರ್ಯ ಹುಟ್ಟುವ ದಿಕ್ಕು ಪೂರ್ವ, ಮುಳುಗುವ ದಿಕ್ಕು ಪಶ್ಚಿಮ ಎಂತಲೂ, ಆಕಾಶದ ಕಡೆಗೆ ಕೈತೋರಿಸಿ ಅದು ಉತ್ತರವೆಂದೂ, ನೆಲದ ಕಡೆಗೆ ಕೈ ತೋರಿಸಿ ಅದು ದಕ್ಷಿಣವೆಂದು ಭೂಪಟದಲ್ಲಿ ತೋರಿಸಿದ ಕ್ರಮದಲ್ಲಿ ಹೇಳಿದನು. ಇದನ್ನು ಕೇಳಿ ಆಶ್ಚರ್ಯಚಕಿತರಾದ ಮಹಾರಾಜರು ಮಕ್ಕಳಿಗೆ ಪುಸ್ತಕದ ಪಾಠಗಳನ್ನು ಕಲಿಸುವಾಗ ನೈಜತೆಯೊಂದಿಗೆ ಸರಿಯಾದ ಕ್ರಮಗಳನ್ನನುಸರಿಸಿ ವಿದ್ಯಾರ್ಥಿಗಳಿಗೆ ಉತ್ತಮ ಶಿಕ್ಷಣ ನೀಡಬೇಕೆಂದು ಸೂಚಿಸಿದರು. ನಾಲ್ವಡಿಯವರು ಸಮಸ್ತ ವಿಚಾರಗಳಲ್ಲೂ ಜ್ಞಾನಾನುಭವಿಗಳಾಗಿದ್ದುದರಿಂದ ಸಂಸ್ಥಾನದಲ್ಲಿ ನಡೆಯುವ ಎಲ್ಲ ಅಭಿವೃದ್ಧಿ ಕಾರ್ಯಗಳನ್ನು ಕಾರ್ಯಶ್ರದ್ಧತೆಯಿಂದ ಮುನ್ನಡೆಸುತ್ತಿದ್ದರು. ಹೀಗೆ ಇಂತಹ ಅನೇಕ ಸ್ಥಳೀಯ ಪ್ರವಾಸಗಳನ್ನು ಕೈಗೊಂಡು ಜನರ ಮತ್ತು ಪಶುಪಕ್ಷಿಗಳ ಸಂಕಷ್ಟಗಳನ್ನು ಖುದ್ದಾಗಿ ಹೋಗಿ ನೋಡಿ ಅವುಗಳನ್ನು ಪರಿಹರಿಸಲು ಪ್ರಯತ್ನಿಸುತ್ತಿದ್ದರು.

ಅವರು ರಾಜಧಾನಿಯಿಂದ ಹೊರಗೆ ಉಳಿಯಬೇಕಾಗುತ್ತಿತ್ತು. ಆದಷ್ಟು ಅಲ್ಪ ಸಮಯದಲ್ಲಿ ತಮ್ಮ ಪ್ರವಾಸವನ್ನು ಮುಗಿಸಿ ಮೈಸೂರಿಗೆ ಹಿಂತಿರುಗುವುದು ಅವಶ್ಯವಾಗುತ್ತಿತ್ತು. ಒಮ್ಮೆ ತಮ್ಮ ಪ್ರವಾಸದಲ್ಲಿ ಹೆಚ್ಚು ಸಮಯವಿಲ್ಲದಿದ್ದುದರ ಬಗ್ಗೆ ಅವರು ವಿವರಿಸಿದ್ದು ಹೀಗೆ; "ನಾವು ಇಲ್ಲಿ ಅಲ್ಪ ಕಾಲವಿದ್ದರೂ ನಮ್ಮ ವಶದಲ್ಲಿರುವ ಈ ಕಾಲವನ್ನು ಸಾರ್ಥಕವಾದ ರೀತಿಯಲ್ಲಿ ಉಪಯೋಗಿಸಬೇಕೆಂದಿದ್ದೇನೆ. ನಾವು ಇಲ್ಲಿ ಸ್ವಲ್ಪಕಾಲವಿದ್ದರೂ ನಿಮ್ಮಲ್ಲಿಯೇ ಆಗಲಿ ನಿಮ್ಮ ಕೆಲಸಗಳಲ್ಲಿಯೇ ಆಗಲಿ ನಮಗೆ ಶ್ರದ್ಧೆಯಿಲ್ಲವೆಂದು ನೀವು ಖಂಡಿತ ತಿಳಿಯಕೂಡದು".

೧೯೦೩ರಲ್ಲಿ ರಾಬರ್ಟ್‌ಸನ್ ಪೇಟೆಗೆ ಭೇಟಿ ನೀಡಿದಾಗ ಸಾಕ್ಷಾತ್ತಾಗಿಯೇ ಭೇಟಿ ನೀಡುವ ಅವಕಾಶ ಸಿಕ್ಕಿತೆಂದು ಸಮಾಧಾನ ಪಡುತ್ತಾರೆ. ೧೯೦೭ರಲ್ಲಿ ಮಳವಳ್ಳಿಗೆ ಭೇಟಿ ನೀಡಿದಾಗ ಅವರು ಹೇಳಿದ್ದು, "ನಾವು ಮಳವಳ್ಳಿಗೆ ಬಂದುದು ಇದೇ ಮೊದಲನೆಯ ಸಲವಲ್ಲವಾದರೂ ಈ ಊರಿಗೂ ಈ ತಾಲ್ಲೂಕಿಗೂ ಪದೇ ಪದೇ ಬರುವ ಸಂದರ್ಭ ಪದೇ ಪದೇ ಒದಗಬಹುದೆಂದು ನಿರೀಕ್ಷಿಸುತ್ತೇವೆ" ಎಂದಿದ್ದಾರೆ.

ಹೀಗೆ ಮಹಾರಾಜರು ರಾಜ್ಯದ ಮೂಲೆಮೂಲೆಗೂ ಭೇಟಿ ನೀಡಿ ಜನರ ಸ್ಥಿತಿಗತಿಗಳನ್ನು ವಿಚಾರಿಸಿ ಅವರಿಗೆ ಪರಿಹಾರ ದೊರಕಿಸಲು ಪ್ರಾಮಾಣಿಕವಾಗಿ ಪ್ರಯತ್ನ ನಡೆಸುತ್ತಿದ್ದರು. ಆದರೆ ಸ್ಥಳೀಯರು ಅವಾಸ್ತವಿಕವಾದ ದುರ್ಬಲವಾದ ಯೋಜನೆ ಕಾಮಗಾರಿಗಳನ್ನು ತಮ್ಮ ಮುಂದಿಟ್ಟಾಗ ಅವು ಸಾಧ್ಯವಾಗದೆಂದು ತಿಳಿಸಲು ಹಿಂಜರಿಯು ತ್ತಿರಲಿಲ್ಲ. ಒಮ್ಮೆ ಮಳವಳ್ಳಿಯ ನೀರಾವರಿ ಕಾಲುವೆಯ ನಾಗರಿಕರ ಬೇಡಿಕೆ ಸಧ್ಯಕ್ಕೆ ಸಾಧ್ಯವಾಗದೆಂಬ ವಿಷಯವನ್ನು ಅವರು ಖಡಾಖಂಡಿತವಾಗಿ ತಿಳಿಸಿದರು.

೧೯೦೭ರಲ್ಲಿ ಕೋಲಾರ ಜಿಲ್ಲೆಯ ಮುಳಬಾಗಿಲು, ಚಿಂತಾಮಣಿ ಶ್ರೀನಿವಾಸಪುರ ಮೊದಲಾದ ಕಡೆ ಸಂಚರಿಸಿದಾಗ ಅಲ್ಲಿನ ಕೆರೆಗಳನ್ನು ದುರಸ್ತಿಗೊಳಿಸಿಕೊಡಬೇಕೆಂದು ಸ್ಥಳೀಯರು ಮನವಿ ಸಲ್ಲಿಸಿದರು. ಆಗ ಮಹಾರಾಜರು ಕೆರೆಗಳ ರಚನೆ ಒಳಹರಿವು ಹೊರಹರಿವು ಮೊದಲಾದ ಸೂಕ್ಷ್ಮ ವಿವರಗಳನ್ನು ಚರ್ಚಿಸುತ್ತಾರೆ. ಆ ಕೆರೆಗಳಿಂದ ನೀರು ಬರುವ ಸಾಧ್ಯಾಸಾಧ್ಯತೆಯನ್ನು ವಿಶ್ಲೇಷಿಸಿ ಅವರಿಗೆ ಸೂಕ್ತ ಸಲಹೆ ನೀಡುತ್ತಾರೆ. ಇದೇ ರೀತಿಯಲ್ಲಿ ಬೌರಿಂಗ್‌ಪೇಟೆಯಲ್ಲಿ ಗಣಿ ಉದ್ಯಮದ ಬಗ್ಗೆ ಅಲ್ಲಿಗೆ ರೈಲು ಹಾಕುವ ಬಗ್ಗೆ ಚಿತ್ರದುರ್ಗಕ್ಕೆ ಹೋದಾಗ ಅಲ್ಲಿನ ವ್ಯಾಪಾರದ ಬಗ್ಗೆ ಪ್ರತಿಯೊಂದು ಭಾಗದ ವಿಶೇಷ ಸ್ಥಿತಿ ಮತ್ತು ಸಮಸ್ಯೆಗಳನ್ನು ಪ್ರಸ್ತಾಪಿಸಿ ಅದಕ್ಕೆ ಪರಿಹಾರ ನೀಡಲು ಪ್ರಯತ್ನಿಸಿದರು.

## II. ನಾಲ್ವಡಿಯವರ ದೇಶೀಯ ಪ್ರವಾಸಗಳು

ದೇಶವಿದೇಶಗಳ ಪ್ರವಾಸಗಳನ್ನು ಕೈಗೊಂಡು ಬೇರೆ ರಾಜ್ಯಗಳಿಗೂ ತಮ್ಮ ರಾಜ್ಯದ ಅಭಿವೃದ್ಧಿಗೂ ಇರುವ

ಬದಲಾವಣೆಗಳನ್ನು ಗುರುತಿಸಿ, ಆ ಮೂಲಕ ತಮ್ಮ ಸಂಸ್ಥಾನ ಅಭಿವೃದ್ಧಿ ಸಾಧಿಸಲು ಬಯಸುತ್ತಿದ್ದ ನಾಲ್ವಡಿ ಕೃಷ್ಣರಾಜ ಒಡೆಯರು ಭಾರತದ ಅನೇಕ ರಾಜ್ಯಗಳಿಗೆ ಪ್ರವಾಸಗಳನ್ನು ಕೈಗೊಂಡಿದ್ದರು. ಅವರು ದೆಹಲಿ, ಉತ್ತರ ಭಾರತದ ಇತರ ಅನೇಕ ರಾಜ್ಯಗಳು; ಅವುಗಳಲ್ಲಿ ಮುಖ್ಯವಾಗಿ, ಕಾಶ್ಮೀರ, ಕಲ್ಕತ, ಬರೋಡ, ಪೂನ, ಮುಂಬಯಿ, ಮದ್ರಾಸ್ ಮೊದಲಾದ ಭಾಗಗಳಲ್ಲಿ ಪ್ರವಾಸ ಕೈಗೊಂಡಿದ್ದರು. ಭಾರತದಲ್ಲಿ ಸಂಚರಿಸಲು ರಾಜಕೀಯ ಕಾರಣಗಳಲ್ಲದೆ ಧಾರ್ಮಿಕ ಕೇಂದ್ರಗಳಿಗೆ, ದೇವಾಲಯಗಳಿಗೆ ಹಾಗೂ ಸಭೆ ಸಮಾರಂಭಗಳಲ್ಲಿ ಭಾಗವಿಸುವುದು ಮುಖ್ಯ ಕಾರಣ ಗಳಾಗಿದ್ದವು.

## ನಾಲ್ವಡಿಯವರ ದೆಹಲಿ ಪ್ರವಾಸ (೧೯೦೩)

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ರಾಜ್ಯಭಾರ ಕ್ರಮದ ಅಧಿಕಾರವನ್ನು ಪಡೆದ ಮರುವರ್ಷ ಅಂದರೆ ಕ್ರಿಶ. ೧೯೦೩, ಜನವರಿ ೧ ರಂದು ಭಾರತದ ಅಂದಿನ ವೈಸ್‌ರಾಯಿಯ ಆಹ್ವಾನದ ಮೇರೆಗೆ ಏಳನೇ ಏಡ್ವರ್ಡ್ ಭಾರತದ ಸಾರ್ವಭೌಮರಾದುದರ ಗೌರವಾರ್ಥವಾಗಿ ದೆಹಲಿಯಲ್ಲಿ ಪುಣೆ ಮತ್ತು ಮುಂಬಯಿಗಳ ಮೂಲಕ ನಡೆದ ದರ್ಬಾರಿಗೆ ಪ್ರವಾಸ ಕೈಗೊಂಡಿದ್ದರು. ಈ ಪ್ರವಾಸದ ಅನುಭವದ ಮೂಲಕವೇ ಮಹಾರಾಜರು ಮೈಸೂರು ಸಂಸ್ಥಾನಕ್ಕೆ ಮೊಟ್ಟಮೊದಲು ಮೋಟಾರು ಕಾರುಗಳನ್ನು ತರಿಸಿದುದು ಎಂದು ತಿಳಿದುಬರುತ್ತದೆ.

ದೆಹಲಿಯ ಈ ದರ್ಬಾರಿನಲ್ಲಿ ಭಾರತದ ವಿವಿಧ ರಾಜ್ಯ ಮತ್ತು ಪ್ರಾಂತ್ಯಗಳ ರಾಜಮಹಾರಾಜರುಗಳು, ಬ್ರಿಟೀಷ್ ಅಧಿಕಾರಿಗಳು ಅತ್ಯಂತ ಆಡಂಬರ ವಸ್ತ್ರಭೂಷಣಗಳನ್ನು ಧರಿಸಿ ತಮ್ಮ ರಾಜವೈಭವ ಮೆರೆದರೆ; ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಅವರೆಲ್ಲರಿಗಿಂತ ಭಿನ್ನವಾದ ರೀತಿಯಲ್ಲಿ ಆಡಂಬರವಿಲ್ಲದ ಸರಳವಾದ ರಾಜಧಿರಿಸುಗಳನ್ನು ಧರಿಸಿ ತಮ್ಮ ಸಂಸ್ಥಾನದ ಹಣವನ್ನು ತಮ್ಮ ಶೃಂಗಾರಕ್ಕೆ ಬಳಸಿ ದುರುಪಯೋಗ ಮಾಡುವುದಕ್ಕಿಂತ, ಅದನ್ನು ಪ್ರಜೆಗಳ ಪ್ರಯೋಜನಕ್ಕಾಗಿ ವ್ಯಯ ಮಾಡುವುದನ್ನು ಬಿಟ್ಟು ಅನವಶ್ಯಕವಾದ ವೆಚ್ಚಗಳಿಗಾಗಿ ವಿನಿಯೋಗಿಸಬಾರದೆಂದು ಅಲ್ಲಿ ನೆರೆದಿದ್ದವರಿಗೆ ಹೇಳುವ ಮೂಲಕ ಸಂಸ್ಥಾನದ ಮೇಲೆ ಅವರಿಗಿದ್ದ ಭಾವನಾತ್ಮಕ ಸಂಬಂಧಗಳು ಎಂಥದು ಎಂಬುದನ್ನು ನಮಗೆ ಕಾಣುವಂತೆ ಮಾಡುತ್ತಾರೆ. ನಾಲ್ವಡಿಯವರು ಇಂತಹ ವಿಶೇಷ ಗುಣಗಳನ್ನು, ಹೃದಯ ವೈಶಾಲ್ಯ ವಿಶೇಷತೆಗಳನ್ನು ಕಂಡ ನಾಲ್ವಡಿಯವರ ಆಸ್ಥಾನದಲ್ಲಿ ಪಟ್ಟಣಾಭಿವೃದ್ಧಿ ಅಧಿಕಾರಿಯಾದ **Shri M.A. Sreenivasan-Incharge Officer of Chamundi Extension in Mysore, During Sri Nalvadi Krishnaraj Wodeyar** ಅವರು ಹೀಗೆ ಹೇಳುತ್ತಾರೆ. **"I recall my meetings with the Maharaja of quiet a few states, major and minor-Baroda and Indore, Bikaner, Patiala and Jodhpur, Travancore, Bharatpur, Alwar Bhavnagar, Navnagar, Kapurthala, Kolhapur, Sangli, Dewas and the Nawabs of Bhopal and Rampur. I mention these names only to say this: I met none among them who could bear comparison with Maharaja Sri Krishnaraja Wodeyar. None so constitutional, none so devout, so compassionate, none so devoted to the welfare of the state and its people as he was".**

This is not to say that there were not among them rulers that were good, Patriotic, benevolent and beloved of their subjects. **"It is that Sri Krishnaraja Wodeyar was exceptional a living example of the kingly Dharma. I say this not as a Mysorean, but with all the impartiality and objectivity I can claim"[14].** (Dasara Cultural Festivities 1981 Souvenir PP 84-88). ಎಂಬ ಮಾತುಗಳನ್ನು ಹೇಳುವ ಮೂಲಕ, ಭಾರತದ ಇತರ ರಾಜರುಗಳಿಗೂ, ಮೈಸೂರು ಸಂಸ್ಥಾನದ ಮಹಾರಾಜ ರಾದ ಶ್ರೀ ನಾಲ್ವಡಿಯವರ ನಡುವಿನ ವಿಶೇಷತೆಯನ್ನು ಮೆಚ್ಚುತ್ತಾರೆ.

ಇದೇ ಸಂದರ್ಭದಲ್ಲಿ ಮಹಾರಾಜರವರು ಹರಿದ್ವಾರ ಗಳಂತಹ ಧಾರ್ಮಿಕ ಪುಣ್ಯಕ್ಷೇತ್ರಗಳನ್ನು ಆಗ್ರಾಗಳಂತಹ ಐತಿಹಾಸಿಕ ಸ್ಥಳಗಳನ್ನು ಸಂದರ್ಶಿಸಿ ಅಲ್ಲಿಯ ಧಾರ್ಮಿಕ ಪಾವಿತ್ರತೆಯನ್ನೂ ಮತ್ತು ಕಲೆಯ ವೈಶಿಷ್ಯತೆಗಳನ್ನು ಗುರುತಿಸಿ ತಮ್ಮ ಸಂಸ್ಥಾನದಲ್ಲೂ ಅಂತಹ ಪುಣ್ಯಕ್ಷೇತ್ರಗಳ ಪುನರುದ್ಧಾರ ಮತ್ತು ಕಟ್ಟಡಗಳ ನಿರ್ಮಾಣಗಳನ್ನು ಕೈಗೊಳ್ಳಲು ತಮ್ಮ ಈ ಪ್ರವಾಸದ ಅನುಭವಗಳನ್ನು ಬಳಸಿಕೊಂಡರು. (ಆಳಿದ ಮಹಾಸ್ವಾಮಿಯವರು, ಪು. ೨೨೨-೨೨೩)

### ಮದ್ರಾಸಿನ ಪ್ರವಾಸ (೧೯೦೫)

೧೯೦೫ರಲ್ಲಿ ಮದರಾಸಿನಲ್ಲಿದ್ದ ಗೌರ್ವನರ್ ಜನರಲ್ ರವರನ್ನು ಕಾಣುವ ಸಲುವಾಗಿ ಪ್ರಯಾಣ ಬೆಳೆಸಿದ್ದರು. ಈ ಸಂದರ್ಭದಲ್ಲಿ ಮಹಾರಾಜ ಶ್ರೀ ಕೃಷ್ಣರಾಜ ಒಡೆಯರು ಮದ್ರಾಸಿನ ಸಮುದ್ರ ತೀರದಲ್ಲಿ ಸಂಜೆಯ ವೇಳೆ ಗಾಳಿ ಸವಾರಿಗೆಂದು ಹೊರಟಾಗ ಸಾಮಾನ್ಯರಂತಿದ್ದು, ತಮಗೆ ಪರಿಚಯವಿದ್ದ ಮೈಸೂರು ಸಂಸ್ಥಾನದ ಪ್ರಜೆಗಳೊಂದಿಗೆ ಮಾತನಾಡುತ್ತಿದ್ದುದನ್ನು ಮದರಾಸಿನ ಜನರು ಗಮನಿಸಿ, ಮೈಸೂರು ಮಹಾರಾಜರ ಪ್ರಜಾಪ್ರೇಮ ಸರಳತೆಯೂ ಸದ್ಗುಣ, ಘನತೆ ಗಾಂಭೀರ್ಯ, ಸ್ನೇಹ ಪ್ರವೃತ್ತಿಗಳನ್ನು ಗಮನಿಸಿ ಅವರನ್ನು ಗುಣಗಾನ ಮಾಡಿದರು. ನಾಲ್ವಡಿಯವರ ವಿಶಿಷ್ಟ ಸದ್ಗುಣಗಳನ್ನು ಅವರು ಮೆಚ್ಚಿದರು. ಇವು ನಾಲ್ವಡಿಯರ ಮೇಲೆ ಗೌರವಾದರಗಳು ಹೆಚ್ಚಾಗಿ ಅವರೊಡನೆ ಮಾತನಾಡಲು ಮದ್ರಾಸಿನ ಪ್ರಜೆಗಳು ಸಹ ಮುಂದಾಗುತ್ತಿದ್ದರು ಎಂಬುದಾಗಿ ಸರ್ ಇವ್ಯಾನ್ ಮೇಕಾನಕಿ ಎಂಬ ಬ್ರಿಟೀಷ್ ಬರಹಗಾರ ಬರೆಯುತ್ತಾನೆ. (ಅದೇ, ಪು. ೨೨೬)

### ಉತ್ತರ ಭಾರತ ಪ್ರವಾಸ (೧೯೧೧)

೧೯೧೧ರಲ್ಲಿ ಜನವರಿ ತಿಂಗಳಲ್ಲಿ ನಾಲ್ವಡಿಯವರು ಎರಡು ಬಾರಿ ಉತ್ತರ ಭಾರತದ ಸಂಚಾರ ಕೈಗೊಂಡರು ಭಾರತದ ಯಾವ ಭಾಗದಲ್ಲೂ ಎಂದೂ ನಡೆಯದಂತಹ ವಿಶೇಷವಾದ ವಸ್ತುಪ್ರದರ್ಶನನವೊಂದು **ಪ್ರಯಾಗದಲ್ಲಿ** ನಡೆಯಿತು. ಇದನ್ನು ವಿಕ್ಷೀಸಲು ದೇಶದ ವಿವಿಧ ಭಾಗಗಳಿಂದ ರಾಜಮಹಾರಾಜರು ಮತ್ತು ರಾಜಪ್ರತಿನಿಧಿಗಳು ಭಾಗವಹಿಸಿದ್ದರು. ಇದರಲ್ಲಿ ನಾಲ್ವಡಿ ಕೃಷ್ಣರಾಜ ಪಡೆಯರು ಭಾಗವಹಿಸಿದ್ದರು. ನಾಲ್ವಡಿಯವರು ಪ್ರಯಾಗದಲ್ಲಿ ನಡೆದ ಈ ವಸ್ತು ಪ್ರದರ್ಶನವನ್ನು ವೀಕ್ಷಿಸಿದ ತರುವಾಯ ಮತ್ತೊಂದು ವಿಶಿಷ್ಟವಾದ ವಸ್ತುಪ್ರದರ್ಶನವನ್ನೇರ್ಪಡಿಸಿ, ಅಲ್ಲಿಗೆ ಮೈಸೂರಿನಲ್ಲಿ ತಯಾರಿಸಿದ ಗುಡಿ ಕೈಗಾರಿಕೆಗಳ ವಸ್ತುಗಳನ್ನು ಅಲ್ಲಿ ಪ್ರದರ್ಶನಕ್ಕಿಡಬೇಕು ಎಂಬ ಉದ್ದೇಶದಿಂದ ಮುಂಬಯಿ ಮಾರ್ಗವಾಗಿ ಪ್ರಯಾಗಕ್ಕೆ ಪ್ರವಾಸ ಕೈಗೊಂಡರು. ಪ್ರಯಾಗದಿಂದ ಮೈಸೂರು ನಗರಕ್ಕೆ ಹಿಂತಿರುಗಿದ ನಂತರ ಮೈಸೂರಿನಲ್ಲೂ ವಿಶೇಷವಾದ ಪ್ರಮಾಣದಲ್ಲಿ 'ವ್ಯವಸಾಯ ಮತ್ತು ಕೈಗಾರಿಕೆಗಳ ವಸ್ತು ಪ್ರದರ್ಶನ'ಗಳನ್ನು ಏರ್ಪಡಿಸಿದರು. ಮುಂದೆ ದಸರಾ ಉತ್ಸವದ ಸಂದರ್ಭದಲ್ಲಿ ಇಂತಹ ವಸ್ತುಪ್ರದರ್ಶನಗಳನ್ನು ಏರ್ಪಡಿಸಲು ಆರಂಭಿಸಿದರು. ಇದರಿಂದ ಮುಂದೆ ಸಂಸ್ಥಾನದ ಆದಾಯವು ಹೆಚ್ಚಾಯಿತು.

ಕ್ರಿ.ಶ. ೧೯೧೧ರ ಡಿಸೆಂಬರ್ ತಿಂಗಳ ೧೧ರಲ್ಲಿ ನಾಲ್ವಡಿಯವರು ಐದನೇ ಜಾರ್ಜ್ ಚಕ್ರವರ್ತಿಯವರ ಮತ್ತು ಮೇರಿ ಚಕ್ರವರ್ತಿನಿಯವರ ಕಿರೀಟಧಾರಣಾ ಮಹೋತ್ಸವ ಪ್ರಯುಕ್ತ ದರ್ಬಾರಿಗಾಗಿ ದೆಹಲಿ ಪ್ರವಾಸ ಕೈಗೊಂಡರು. ಆ ಸಂದರ್ಭದಲ್ಲಿ ಮೈಸೂರಿನಿಂದ ಹಲವಾರು ಉತ್ಸಾಹಿಗಳು ಈ ಉತ್ಸವ ವೀಕ್ಷಿಸಲು ದೆಹಲಿಗೆ ಆಗಮಿಸಿದರಾದರೂ, ಉಳಿದುಕೊಳ್ಳಲು ಜಾಗವಿಲ್ಲದೆ ಪರಿತಪಿಸುವ ವಿಚಾರವನ್ನು ತಿಳಿದ ಮಹಾರಾಜರು, ತಮ್ಮ ಪ್ರಜೆಗಳು ಅವರು ಅಲ್ಲಿದ್ದಷ್ಟು ಕಾಲವೂ ಯಾವುದೇ ಅನಾನುಕೂಲ ಅನುಭವಿಸದಂತೆ, ವಸತಿ ಮತ್ತು ಆಹಾರದ ವ್ಯವಸ್ಥೆ ಮಾಡಿದರು. ಇದು ತಾವು ಎಲ್ಲೇ ಇರಲಿ ತಮ್ಮ ಪ್ರಜೆಗಳು ತೊಂದರೆಗೊಳಗಾಗಬಾರೆಂದು ಭಾವಿಸಿ, ಮೇಲಿನಂತೆ ಕ್ರಮಕೈಗೊಂಡರು. ಇದರಿಂದ ಜನರ ಸಮಸ್ಯೆಗಳಿಗೆ ನಾಲ್ವಡಿಯವರು ಹೇಗೆ ಸ್ಪಂದಿಸುತ್ತಿದ್ದರೆಂಬುದನ್ನು ತೋರಿಸುತ್ತದೆ.

ದೆಹಲಿಯಿಂದ ಲಾಹೋರು, ಅಮೃತಸರ, ಹರಿದ್ವಾರ, ಗಯಾ ಮುಂತಾದ ಪುಣ್ಯಕ್ಷೇತ್ರಗಳಿಗೂ ಸಂದರ್ಶಿಸಿದರು. ಆ ಬಳಿಕ ಕಲ್ಕತಾ ನಗರಕ್ಕೆ ಆಗಮಿಸಿ ಪದ್ಧತಿಗನುಸಾರ ಕಾಳೀಘಟ್ಟದಲ್ಲಿರುವ ಶ್ರೀ ಚಾಮರಾಜೇಂದ್ರ ಒಡೆಯರವರ ಶಿಲಾ ಬೃಂದಾವನದ ಬಳಿ ಸೇವೆ, ಸಂತರ್ಪಣೆಯನ್ನು ನಡೆಸಿದರು. ಅದರ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದವರಿಗೆ ಕೆಲವು ಸೌಲಭ್ಯಗಳನ್ನು ಒದಗಿಸಿಕೊಡುವ ಮೂಲಕ ತಮ್ಮ ರಾಜಧರ್ಮವನ್ನು ಮೆರೆದರು. (ಶಿಂಗ್ರಯ್ಯ: ಪು. ೨೨)

### ಕಾಶೀಯಾತ್ರೆ (೧೯೧೮)

ನಾಲ್ವಡಿ ಕೃಷ್ಣರಾಜ ಒಡೆಯರು ಹಿಮಾಚಲ ಪರ್ಯಂತವಾಗಿರುವ ಸಮಸ್ತ ಪುಣ್ಯ ಕ್ಷೇತ್ರಗಳಿಗೂ ಅನೇಕ ಬಾರಿ ಯಾತ್ರೆಗಳನ್ನು ಕೈಗೊಂಡು ಧಾರ್ಮಿಕ ಸಂಪ್ರದಾಯಗಳನ್ನು ಮುಂದುವರಿಸಿದರು. **೧೯೧೮ರಲ್ಲಿ ಕಾಶ್ಮೀರ ಪ್ರವಾಸ: ಕ್ರಿ.ಶ.** ೧೯೧೮, ಜುಲೈ ೩ರಂದು ಕಾಶ್ಮೀರ ಸಂಸ್ಥಾನದ ರಾಜಧಾನಿ ಶ್ರೀನಗರಕ್ಕೆ ತೆರಳಿದರು. ಅಲ್ಲಿಯ ಮಹಾರಾಜರ 'ಭಸ್ಮಷಾಹಿ' ಅರಮನೆಯಲ್ಲಿ ತಮ್ಮವಾಸ್ತವ್ಯ ಹೂಡಿದ್ದರು. ಆ ಸಂದರ್ಭದಲ್ಲಿ **ಮೊದಲನೆಯದಾಗಿ** ಕಾಶ್ಮೀರ ಸಂಸ್ಥಾನದ ರೇಷ್ಮೆ ಕಾರ್ಖಾನೆಯವರು ರೋಗ ರಹಿತವಾದ ರೇಷ್ಮೆ ಬಿತ್ತನೆ ಮೊಟ್ಟೆಗಳನ್ನು ರೈತರಿಗೆ ಒದಗಿಸುವ ಏರ್ಪಾಡು

ಮಾಡಿದ್ದುದನ್ನು ಗಮನಿಸಿದ ನಾಲ್ವಡಿಯವರು ಅದನ್ನು ಕಂಡು ವಿಸ್ಮಯಪಟ್ಟು, ಮೈಸೂರು ಸಂಸ್ಥಾನದಲ್ಲಿಯೂ ಅದೇ ರೀತಿಯ ಏರ್ಪಾಡು ಮಾಡಿ, ರೇಷ್ಮೆ ಕೈಗಾರಿಕೆಗೆ ಉತ್ತೇಜನ ಕೊಟ್ಟರು.

**ಎರಡನೆಯದಾಗಿ** ಕಾಶ್ಮೀರ ಸಂಸ್ಥಾನದ ಸೌಂದರ್ಯವನ್ನು ವೀಕ್ಷಿಸಿ, ಅಲ್ಲಿನ ವಿಧವಿಧವಾದ ಉದ್ಯಾನವನಗಳು, ಫಲಪುಷ್ಪಗಳು ಮೊಗಲ್ ಚಕ್ರವರ್ತಿಗಳ ಕಾಲದ ಉದ್ಯಾನವನ ಗಳಿಂದ ಶೋಭಿಸುತ್ತ ರಮಣೀಯವಾದ ಗಿರಿದುರ್ಗಗಳಿಂದ ಹಾಗೂ ನದಿಗಳಿಂದ ಕಂಗೊಳಿಸುವುದನ್ನು ವೀಕ್ಷಿಸಿ, ಅದರ ಮಾದರಿಯಲ್ಲಿಯೇ ಕೆ.ಆರ್.ಎಸ್.ನಲ್ಲಿ ಫಲಪುಷ್ಪಗಳ ತೋಟವನ್ನು ಬೆಳೆಸಲು ಉತ್ತೇಜನ ನೀಡಿದರು.

### ಕೈಲಾಸ ಶಿಖರ ಯಾತ್ರೆ (೧೯೩೧)

ನಾಲ್ವಡಿಯವರು ನೆರವೇರಿಸಿದ ಯಾತ್ರೆಗಳಲೆಲ್ಲಾ ಕೈಲಾಸ ಶಿಖರ ದರ್ಶನ ಯಾತ್ರೆಯು ಧಾರ್ಮಿಕವಾಗಿ ಅತ್ಯಂತ ಪ್ರಮುಖವಾದುದೆನ್ನಲಾಗಿದೆ. ಇದು ಕ್ರಿ.ಶ. ೧೯೩೧ ಜೂನ್ ೨೭ ರಂದು ಪ್ರಾರಂಭಗೊಂಡಿತು. ಅಲ್ಲಿಂದ ಅವರು ಮಾನಸ ಸರೋವರಕ್ಕೆ ಪ್ರಯಾಣ ಮಾಡಿದರು. ಧಾರ್ಮಿಕ ದೃಷ್ಟಿಯಿಂದ ಮಾನಸ ಸರೋವರ ಪ್ರವಾಸ ಮಾಡುವುದು ಹಿಂದಿನಿಂದಲೂ ಪ್ರಸಿದ್ಧಿ ಪಡೆದುಕೊಂಡು ಬಂದಿದೆ.

ಕೈಲಾಸವು ಧಾರ್ಮಿಕ ಕಾರಣಗಳು ಮಾತ್ರವಲ್ಲದೆ, ನೈಸರ್ಗಿಕ, ಭೌಗೋಳಿಕ ಅಂಶಗಳಿಗೂ ಪ್ರಸಿದ್ಧವಾದುದು. ಅಸಾಧಾರಣವಾದ ಚಳಿ, ಗಾಳಿ, ಹಿಮಗಳಿಂದ ಒಮ್ಮೊಮ್ಮೆ ಜೀವಕ್ಕೆ ಅಪಾಯವನ್ನುಂಟು ಮಾಡುವ ಪರಿಸ್ಥಿತಿಯಲ್ಲಿಯೂ, ನಾಲ್ವಡಿಯವರು ಅಲ್ಲಿನ ಪ್ರಾಕೃತಿಕ ವೈಶಿಷ್ಟ್ಯಗಳನ್ನೂ, ಕೈಲಾಸ ಶಿಖರದ, ಘನ–ಗಾಂಭೀರ್ಯ ದೃಶ್ಯಗಳನ್ನು ನೋಡುವುದಕ್ಕಾಗಿ ಈ ಯಾತ್ರೆಯನ್ನು ಕೈಗೊಂಡರೆನ್ನಲಾಗಿದೆ. ಅಲ್ಲಿಗೆ ಹೋದಾಗ "ಪರಮಾತ್ಮನ ಸಾನ್ನಿಧ್ಯವೇ ಇರುವಂತೆ ತೋರಿ ಆನಂದಾನು ಭವವಾಗುವಂತೆ ಅಗೋಚರ ಶಕ್ತಿಯೊಂದು ಕೈಲಾಸ ಶೈಲದ ಸುತ್ತಲೂ ತುಂಬಿದೆ" ಎಂದು ಅವರು ತಮ್ಮ ಅನುಭವವನ್ನು ಇತರರಿಗೆ ಹೇಳುವ ಮೂಲಕ ಧಾರ್ಮಿಕ ಯಾತ್ರೆಗಳಿಗೆ ರಾಜ್ಯದ ಜನರನ್ನು ಹೋಗುವಂತೆ ಉರಿದುಂಬಿಸುತ್ತಿದ್ದರು.

ತಮ್ಮ ತೀರ್ಥಯಾತ್ರೆಯ ಸಂದರ್ಭದಲ್ಲಿ ನಾಲ್ವಡಿ ಯವರು "ತಮ್ಮ ಆರಾಧನೆಯಿಂದ ಒದಗುವ ಪುಣ್ಯವು ತಮ್ಮ ಪ್ರಜೆಗಳಿಗೆ ಲಭಿಸಲೆಂದು ಬೇಡಿಕೆಯನ್ನು ಸಲ್ಲಿಸಿದ್ದು ಗಮನಾರ್ಹವಾದುದು"

## III. ನಾಲ್ವಡಿ ಕೃಷ್ಣರಾಜ ಒಡೆಯರ ವಿದೇಶಿ ಪ್ರವಾಸಗಳು

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಜೀವಿತ ಕಾಲದಲ್ಲಿ ತಮ್ಮ ಸ್ವಹಿತಸಾಧನೆ ಮತ್ತು ಮೈಸೂರು ಸಂಸ್ಥಾನದ ಅಭಿವೃದ್ಧಿ ಹಾಗೂ ಪ್ರಜೆಗಳ ಅನುಕೂಲಕ್ಕಾಗಿ ಅನೇಕ ವಿದೇಶಿಯಾತ್ರೆಗಳನ್ನು ಕೈಗೊಂಡು, ಆ ಮೂಲಕ ತಾವು ಪ್ರತ್ಯಕ್ಷವಾಗಿ ನೋಡಿದ ಅನೇಕ ಹೊಸ ಹೊಸ ವಿಚಾರಗಳನ್ನು ಅನುಭವಗಳನ್ನು ಸಂಸ್ಥಾನದ ಅಭ್ಯುದಯಕ್ಕೆ ತೊಡಗಿಸಿದರು. ಅವರು ಬರ್ಮಾ, ಜಪಾನ್, ಯುರೋಪ್ ಖಂಡ; ಅದರಲ್ಲಿ ಮುಖ್ಯವಾಗಿ ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ, ನೆದರ್‌ಲ್ಯಾಂಡ್, ಸ್ವಿಡ್ಜರ್‌ಲ್ಯಾಂಡ್‌ನ ಅನೇಕ ಪಟ್ಟಣ ಮತ್ತು ನಗರಗಳಲ್ಲಿ ಸಂಚರಿಸಿ ಅಲ್ಲಿನ ಅಭಿವೃದ್ಧಿ ಕ್ರಮಗಳನ್ನು ಮೈಸೂರು ಸಂಸ್ಥಾನದಲ್ಲಿ ಸಾಧ್ಯವಾಗುವಷ್ಟರ ಮಟ್ಟಿಗೆ ಅಳವಡಿಸಿ 'ಮಾದರಿ ರಾಜ್ಯ'ವನ್ನಾಗಿ ಮಾಡುವಲ್ಲಿ ಯಶಸ್ವಿಯಾಗಿದ್ದಾರೆನ್ನಬಹುದು.

### ಜನವರಿಯಲ್ಲಿ ನಾಲ್ವಡಿಯರ ಬರ್ಮಾ ಪ್ರವಾಸ (೧೯೦೧)

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಅಧಿಕಾರದ ಗದ್ದುಗೆ ಹಿಡಿಯುವ ಒಂದು ವರ್ಷದ ಹಿಂದೆಯೇ ಬರ್ಮಾ ದೇಶಕ್ಕೆ ಪ್ರಯಾಣ ಬೆಳೆಸಿದರು. (ಜಬಿಂಗ್ಲಾ ಎಂಬ ಜಹಜನ್ನೇರಿ)

ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಬರ್ಮಾದೇಶದ ರಾಜಪ್ರತಿನಿಧಿಗಳು ನೀಡಿದ ವಿಜ್ಞಾಪನಾ ಪತ್ರಿಕೆಯಲ್ಲಿ "ಮೈಸೂರು ಸಂಸ್ಥಾನವು ಇತರ ಸಮಸ್ತ ಸಂಸ್ಥಾನಗಳಿಗಿಂತ ಹೆಚ್ಚಾಗಿ ಪುರೋಭಿವೃದ್ಧಿ ಹೊಂದಿದ್ದು, ಜಾತಿ ಜನಾಂಗ ಭೇದವಿಲ್ಲದೆ ಸಮಸ್ತ ಪ್ರಜೆಗಳಿಗೂ ಸಮಾನವಾದ ಪ್ರೋತ್ಸಾಹ ಕೊಟ್ಟಿರುವ" ಹಾಗೂ "ಪ್ರಪಂಚದಲ್ಲಿ ಅತ್ಯಂತ ನಾಗರಿಕವೆನಿಸಿದ್ದ ಜನಾಂಗಗಳವರು ಅನುಸರಿಸುತ್ತಿದ್ದ ಅತ್ಯುತ್ತಮವಾದ ಕಾರ್ಯನಿಯಮಗಳು ಆಚರಣೆಯಲ್ಲಿದ್ದ ಸುಖವಾಸವೆಂದೂ" ಮುಂದುವರಿದು "ಮೈಸೂರು ಸಂಸ್ಥಾನವು ಭರತ ಖಂಡದ ರಮಣೀಯವಾದ ಉದ್ಯಾನ ವೆಂದು ವರ್ಣಿತವಾಗಿದೆ" ಮುಂದೆ ಅದು ಸದ್ಯದಲ್ಲಿಯೇ ಅದರ ಅಧಿಕಾರ ಸ್ವೀಕರಿಸ ಲಿರುವ ಶ್ರೀಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಮತ್ತಷ್ಟು ಪುರೋಭಿವೃದ್ಧಿ ಹೊಂದಲಿದ್ದು, ಮಹಾರಾಜರು ತಮ್ಮ ಪೂರ್ವಜರಿಗಿಂತಲೂ ಹೆಚ್ಚಿನ ಖ್ಯಾತಿಯನ್ನು ಗಳಿಸುವರು" ಎಂಬುದಾಗಿ ಹಾರೈಸುವ ಮೂಲಕ ನಾಲ್ವಡಿಯವರ ಅಭಿವೃದ್ಧಿಯ ಮುಂದಾಲೋಚನೆಯ ಗುಣಗಳನ್ನು ಗಮನಿಸಿ ಹೊಗಳಲಾಗಿದೆ.

ನಾಲ್ವಡಿಯವರು ಬರ್ಮಾ ಪ್ರವಾಸದ ಸಂದರ್ಭದಲ್ಲಿ ಮಾಂಡಲೆ, ಮಿಚಿನಾ, ಭಾಮೋ, ಪ್ರೋಮ್ ಮೊದಲಾದ ನಗರಗಳನ್ನು ಸಂದರ್ಶಿಸಿ, ಅಲ್ಲಿನ ಜನರ ಆಚಾರ, ಸಂಸ್ಕೃತಿ, ಅತಿಥ್ಯ ವಿಚಾರಗಳನ್ನು ಗಮನಿಸಿ ಪ್ರಭಾವಿತರಾದರು. ಮಾಣಿಕ್ಯದ ಗಣಿಗಳಿಗೆ ಹೆಸರಾಗಿದ್ದ **'ಮೋಗಾಕ್'** ಎಂಬ ನಗರವನ್ನು ಸಂದರ್ಶಿಸಿ ಅಲ್ಲಿ ಗಣಿಗಳ ವಿವರಗಳನ್ನು ಪಡೆದುಕೊಂಡು ಮದರಾಸಿನ ಮೂಲಕ ಮೈಸೂರಿಗೆ ಹಿಂತಿರುಗಿದರು.

ನಾಲ್ವಡಿಯವರು ತಮ್ಮ ಬರ್ಮಾ ಪ್ರವಾಸದಲ್ಲಿ ತಾವು ಕಣ್ಣಾರೆ ಕಂಡು ವಿಸ್ಮಯಗೊಂಡ ಅಲ್ಲಿನ ಬೌದ್ಧದೇವಾಲಯಗಳನ್ನು, ಸೀಮೆಎಣ್ಣೆ ಬುಗ್ಗೆಗಳು ಉಕ್ಕುವ ಪ್ರದೇಶಗಳನ್ನು, ಗಗನ ಚುಂಬಿ ವೃಕ್ಷಗಳಿಂದ ಆವೃತಗೊಂಡಿದ್ದ ಕಾನನಗಳನ್ನೂ ನೋಡಿ ಆಕರ್ಷಿತಗೊಂಡು ಅಂತಹ ಆಕರ್ಷಕ ಪ್ರವಾಸ ತಾಳಗಳನ್ನು ಮೈಸೂರಿನಲ್ಲೂ ಸ್ಥಾಪಿಸಲು ಪ್ರಯತ್ನಪಟ್ಟರು. ಅದರ ಫಲವಾಗಿಯೇ ಇಂದು ಪ್ರವಾಸಿಗರ ಆಕರ್ಷಕ ತಾಣವಾಗಿರುವ ಕೆ.ಆರ್.ಎಸ್.ನಂತಹ ಸುಂದರ ತೋಟಗಳು ನಿರ್ಮಾಣವಾಗಲು ಕಾರಣವಾದವು ಎನ್ನಬಹುದು.

ಬರ್ಮಾ ಪ್ರವಾಸದಲ್ಲಿದ್ದಾಗ ನಾಲ್ವಡಿಯವರು ಕಂಡ ಇತರ ವಿಸ್ಮಯಗಳೆಂದರೆ, ಬರ್ಮಾ ಸ್ತ್ರೀಯರು ವ್ಯಾಪಾರ ವಹಿವಾಟುಗಳಲ್ಲಿ ಉದ್ಯುಕ್ತವಾಗಿ ವಿಶೇಷ ಸ್ವಾತಂತ್ರ್ಯದಿಂದ ವ್ಯವಹರಿಸುತ್ತಿದ್ದುದು. ಅದನ್ನು ಕಂಡು ಅವರು ಬಹು ವಿಸ್ಮಯಗೊಂಡರು. ಏಕೆಂದರೆ ಬರ್ಮಾದಲ್ಲಿ ಸ್ತ್ರೀಯರಿಗಾಗಿ ಪ್ರತ್ಯೇಕವಾಗಿ ರೈಲು ಬೋಗಿಗಳನ್ನು ಮೀಸಲಿರಿಸಿರಲಿಲ್ಲ ಅಥವಾ ಮೀಸಲಿರಿಸಿದ್ದ ಅಂತಹ ಬೋಗಿಗಳಲ್ಲಿ ಪ್ರಯಾಣ ಮಾಡಲು ಇಚ್ಛಿಸದ ಸ್ತ್ರೀಯರು, ಪುರುಷರೊಡನೆ ಪ್ರಯಾಣ ಮಾಡಲು ನಮಗೆ ಯಾವ ಹೆದರಿಕೆಯೂ ಇಲ್ಲವೆಂದೂ ಹೇಳುವ ಮೂಲಕ ಅವರಲ್ಲಿದ್ದ ಧೈರ್ಯ ಮತ್ತು ಬದಲಾವಣೆಯ ಮನೋದೃಷ್ಟಿಯನ್ನು ಮಹಾರಾಜರು ಸ್ವತಃ ನೋಡುವ ಮೂಲಕ ತಮ್ಮ ಸಂಸ್ಥಾನದ ಸ್ತ್ರೀಯರಲ್ಲೂ ಅದೇ ಬಗೆಯ ಧೈರ್ಯ ಸಾಹಸಗಳನ್ನು ಬೆಳೆಸಿಕೊಳ್ಳುವ ನಿಟ್ಟಿನಲ್ಲಿ ಅವರ ಅಭಿವೃದ್ಧಿ ಕೆಲಸಗಳನ್ನು ಕೈಗೆತ್ತಿಗೊಂಡರು. ಬರ್ಮಾದ ಗೋಟಿಕ್‌ಗಾರ್ಜ ರೈಲ್ವೆ ಸೇತುವೆ. ಆ ರೈಲ್ವೇ ಸೇತುವೆಗೆ ಅಳವಡಿಸಿರುವ ಸ್ತಂಭಗಳನ್ನು ನಿರ್ಮಿಸುವುದೇ ಸಾಧ್ಯವಿಲ್ಲದ ೬೦೦ ಅಡಿಗಳ ಆಳದ ಕಮರಿಗೆ, ಮೇಲ್ಭಾಗದಲ್ಲಿ ಸ್ತಂಭವೇ ಇಲ್ಲದೆ ಕಟ್ಟಿರುವ ಆ ಸೇತುವೆಯ ಶಿಲ್ಪಕಲಾ ಕೌಶಲ್ಯವನ್ನೂ, ಹಾಗೂ ಅದರ ಮೇಲೆ ಸಂಚರಿಸುತ್ತಿದ್ದ ರೈಲುಗಳ ಸಂಚಾರದ ತಾಂತ್ರಿಕತೆಯನ್ನು ಸಾಧ್ಯವಾದ ಕಡೆ ಮೈಸೂರು ಸಂಸ್ಥಾನದಲ್ಲೂ ಅಳವಡಿಸಿಕೊಳ್ಳಲು ಪ್ರೇರೇಪಣೆ ನೀಡಿದವು.

ಅಭಿವೃದ್ಧಿಶೀಲ ವಿಸ್ಮಯಗಳನ್ನು ಅಳವಡಿಸಿಕೊಳ್ಳುವುದಕ್ಕಷ್ಟೇ ತಮ್ಮನ್ನು ಮೀಸಲಿರಿಸಲಿಚ್ಛಿಸದ ನಾಲ್ವಡೀ ಕೃಷ್ಣರಾಜರು, ಬಾಲ್ಯದಿಂದಲೂ ಪಾರಂಪರ್ಯವಾಗಿ ಅನುಸರಿಸಿಕೊಂಡು ಬಂದಿದ್ದ ಪ್ರಾಣಿದಯೆ ನೀತಿಯನ್ನು ಅನುಸರಿಸಲು ಬರ್ಮಾದ ಪ್ರವಾಸದಲ್ಲಿದ್ದಾಗ ಅವಕಾಶವೊಂದು ಅವರಿಗೆ ದೊರಕಿತು. ಬರ್ಮಾ ಸೈನಿಕರ ಆಹಾರಕ್ಕೆಂದು ಬಿಟ್ಟಿದ್ದ ಬಿಳಿ ಮೇಕೆಯೊಂದು ಹೇಗೋ ಮಹಾರಾಜರ ಹಿಂದೆ ಹಿಂದೆ ಬರಲಾರಂಭಿಸಿದಾಗ ಅದನ್ನು ಯಾತಕ್ಕಾಗಿ ಸೈನಿಕರ ಶಿಬಿರದಲ್ಲಿಡಲಾಗಿದೆ ಎಂಬುದರ ಬಗೆಗೆ ವಿವರ ಪಡೆದುಕೊಂಡು ನಂತರ ಅದನ್ನು ಸೈನಿಕರಿಂದ ಕ್ರಯಕ್ಕೆ ಕೊಂಡು, ಮೈಸೂರಿಗೆ ತಂದ ಮೇಲೆ ಅದಕ್ಕೆ ಪ್ರೀತಿಯಿಂದ ಆದರಿಸಿ, ಮೈದಡವಿ ಮೇವನ್ನು ಹಾಕಿ ಸಲುಹುತ್ತಿದ್ದರಲ್ಲದೆ; ಅದರ ಪ್ರಭಾವದಿಂದ ಮೈಸೂರು ಸಂಸ್ಥಾನದಲ್ಲಿ ಪ್ರಾಣಿದಯಾ ಸಂಘವನ್ನು ಸ್ಥಾಪಿಸಿ, ಪ್ರಾಣಿಗಳನ್ನು ರಕ್ಷಿಸುವ ಕೆಲಸವನ್ನು ಪ್ರಾರಂಭಿಸಿದರೆಂಬ ಅಂಶ ಬೆಳಕಿಗೆ ಬರುತ್ತದೆ.

## ಜಪಾನ್ ಪ್ರವಾಸದ ಸಿದ್ಧತೆ (೧೯೦೮)

ಕ್ರಿ.ಶ. ೧೯೦೮ರ ಹೊತ್ತಿಗೆ ಜಪಾನ್ ದೇಶ ಅದ್ಭುತವಾದ ಪುರೋಭಿವೃದ್ಧಿ ಸಾಧಿಸಿದ್ದಿತು. ಜಗತ್ತಿನ ಅನೇಕ ದೇಶಗಳು ಹತ್ತಾರು ಶತಮಾನಗಳಲ್ಲಿ ಸಾಧಿಸುವುದಕ್ಕಾಗದಷ್ಟು ಅಭ್ಯುದಯವನ್ನು ಕೇವಲ ಐವತ್ತು ವರ್ಷಗಳಲ್ಲಿ ಜಪಾನ್ ಅತ್ಯಾಧುನಿಕ ಅಭಿವೃದ್ಧಿ ಸಾಧಿಸಿದ್ದ ದೇಶವೆಂದು ಖ್ಯಾತಿಗಳಿಸಿದ್ದಿತು. ಅದು ೧೮೬೭ನೆಯ ಇಸವಿಯಲ್ಲಿ ಬರುತ್ತಿದ್ದ ಹುಟ್ಟುವಳಿಯ ಆರರಷ್ಟು ಹೆಚ್ಚಿನ ಹುಟ್ಟುವಳಿಯು ೧೯೦೮ರಲ್ಲಿ ಜಪಾನಿನಲ್ಲಿ ಬರುತ್ತಿತ್ತು. ಇದರಿಂದ ಆಕರ್ಷಣೆಗೆ ಒಳಗಾದ ರಾಜಕುಮಾರ ಶ್ರೀ ನಾಲ್ವಡಿಯವರು, ಜಪಾನ್ ದೇಶದ ಈ ಅಭಿವೃದ್ಧಿ ಸಾಧನೆಯ ವಿವರಗಳನ್ನೆಲ್ಲ ಪ್ರತ್ಯೇಕ್ಷವಾಗಿ ಪರಿಶೀಲಿಸಿ ಸಾಧ್ಯವಾದಷ್ಟು ಅಲ್ಲಿಯ ವ್ಯವಸ್ಥೆಗಳನ್ನು ಮೈಸೂರು ಸಂಸ್ಥಾನದಲ್ಲಿ ಆಚರಣೆಗೆ ತಂದು ಸಂಸ್ಥಾನದ ಅಭಿವೃದ್ಧಿಯನ್ನು ಸಾಧಿಸುವ ಸಲುವಾಗಿ ೧೯೦೮ರಲ್ಲಿ ಜಪಾನಿಗೆ ಪ್ರಯಾಣ ಬೆಳೆಸಲು ಉದ್ದೇಶಿಸಿದ್ದರು. ಆದರೆ ಅದೇ ವರ್ಷ ಸಂಸ್ಥಾನದಲ್ಲಿ ಅನಾವೃಷ್ಟಿಯ ಪರಿಣಾಮ ಕ್ಷಾಮ ಸಂಭವಿಸಿ ಜನರು ಸಾಕಷ್ಟು

ಸಂಕಟದಲ್ಲಿದ್ದಾಗ, ಆ ಸನ್ನಿವೇಶದಲ್ಲಿ ಸಂಸ್ಥಾನವನ್ನು ಬಿಟ್ಟು ಜಪಾನಿಗೆ ತೆರಳುವುದು ಉಚಿತವಲ್ಲವೆಂದು ನಿರ್ಧರಿಸಿ ಜಪಾನ್ ಪ್ರಯಾಣವನ್ನು ತಮ್ಮ ಸಹೋದರ ಯವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರಿಗೆ ವಹಿಸಿ ತಾವು ಸಂಸ್ಥಾನದಲ್ಲಿ ಉಂಟಾಗಿದ್ದ ಕ್ಷಾಮ ನಿವಾರಣ ಕ್ರಮಗಳು ಹಾಗೂ ಪ್ರಜೆಗಳ ರಕ್ಷಣೆಯತ್ತ ಗಮನ ಹರಿಸಿದರು.

ಶ್ರೀ ನಾಲ್ವಡಿಯವರು ಮಹಾರಾಜರಾಗಿ ತಾವೊಬ್ಬರೇ ವಿದೇಶ ಯಾತ್ರೆಗಳನ್ನು ಕೈಗೊಳ್ಳದೆ ಸಂಸ್ಥಾನದ ಅಭಿವೃದ್ಧಿ ದೃಷ್ಟಿಯಿಂದ ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರನ್ನು ಕ್ರಿ.ಶ. ೧೯೧೩ರಲ್ಲಿ ಯುರೋಪ್ ದೇಶಗಳಿಗೆ ಪ್ರವಾಸಕ್ಕೆ ಕಳುಹಿಸಿದರು.

ಜಪಾನಿನ ಗ್ಲಾಸ್ಗೊ ನಗರಕ್ಕೆ ಭೇಟಿ ನೀಡಿದ ಯುವರಾಜ ಕಂಠೀರವ ನರಸರಾಜ ಒಡೆಯರು ಅಲ್ಲಿನ ಆಡಳಿತ ನಿರ್ವಹಣೆಗೆ ಸಂಬಂಧಪಟ್ಟ ಅತ್ಯಂತ ಗಹನವಾದ ವಿಚಾರಗಳನ್ನೂ, ಹಾಗೂ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿ ರಾಜ್ಯಕ್ಕೆ ಒದಗಿಸುವ ಏರ್ಪಾಡುಗಳನ್ನೂ, ಮತ್ತು ನಗರದ ಕಲ್ಮಶ ಜಲವನ್ನು ಸುಗಮ ವಾಗಿ ಹೊರ ಸಾಗಿಸಿ ಅನಾರೋಗ್ಯಕ್ಕೆ ಕಾರಣವಾಗದಂತೆ ನೈರ್ಮಲ್ಯಕ್ಕೆ ಹೆಚ್ಚಿನ ಗಮನ ನೀಡುವ ಕಾರ್ಯಗಳ ವ್ಯವಸ್ಥೆ ಮಾಡುವ ಏರ್ಪಾಡುಗಳನ್ನು ತಿಳಿದುಕೊಂಡು ಅದನ್ನು ಮೈಸೂರು ಸಂಸ್ಥಾನದ ನಗರಗಳಲ್ಲಿ ಅಳವಡಿಸಲು ನೆರವಾದರು.

## ನಾಲ್ವಡಿಯವರ ಯುರೋಪು ಖಂಡದ ಪ್ರವಾಸಗಳು (೧೯೩೬ ರಿಂದ ೧೯೩೯)

ಶ್ರೀ ನಾಲ್ವಡಿ ಕೃಷ್ಣರಾಜರು ಕ್ರಿ.ಶ. ೧೯೩೬, ಜೂನ್ ೨೧ರಂದು ಅನಾರೋಗ್ಯದಿಂದ ಬಳಲುತ್ತಿದ್ದಾಗ ಆರೋಗ್ಯ ತಪಾಸಣೆಗಾಗಿ ಯುರೋಪು ಖಂಡದ ಪ್ರವಾಸವನ್ನು ಕೈಗೊಂಡರು. ಆ ಸಂದರ್ಭದಲ್ಲಿ ಅವರು ತಮ್ಮ ಆ ಪ್ರವಾಸ ವನ್ನು ಮೈಸೂರು ಸಂಸ್ಥಾನದ ಅಭ್ಯುದಯ ಸಾಧನೆಗೆ ಸಹಾಯಕವಾಗುವ ಹಲವಾರು ವಿಷಯಗಳನ್ನು ಸಂಗ್ರಹಿಸಿ ಅದನ್ನು ಸಂಸ್ಥಾನದಲ್ಲಿ ಅಳವಡಿಸಿದರು.

೧೯೩೯ ಜುಲೈ ೧೦ರಂದು ಪ್ಯಾರಿಸ್ ನಗರಕ್ಕೆ ಆಗಮಿಸಿದ ಮಹಾರಾಜರು ಜುಲೈ ೧೫ರವರೆಗೂ ಅಲ್ಲೇ ಉಳಿದಿದ್ದು, ಪ್ಯಾರಿಸ್ ನಗರದ ಸಂಪೂರ್ಣ ವಿಕ್ಷಣೆ ಮಾಡಿದರು. ಪ್ಯಾರಿಸ್ ನಗರದಲ್ಲಿದ್ದ ಭವ್ಯಕಟ್ಟಡಗಳನ್ನು ಅವುಗಳ ಶೈಲಿಯನ್ನು, ಸ್ಮಾರಕಗಳನ್ನು, ಸೊಗಸಾದ ಇತರ ದೃಶ್ಯಗಳನ್ನು, ವರ್ಸೈಲ್ಸ್ ಅರಮನೆಯ ಭವ್ಯತೆಯನ್ನು, ಚಿತ್ರಶಾಲೆಗಳನ್ನು ವೀಕ್ಷಿಸಿ ಆಕರ್ಷಿತಗೊಂಡರು.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಧನಿಕರಲ್ಲಿ ಧನಿಕರಾದ ಮಹಾರಾಜರೆನಿಸಿದರೂ, ಇಂಗ್ಲೆಂಡ್‌ನಲ್ಲಿ ಬಡವರ ಮನೆಗಳಿಗೆ ಭೇಟಿ ನೀಡಿ ಅವರ ಸ್ಥಿತಿಗೂ, ಮೈಸೂರು ಸಂಸ್ಥಾನದ ಬಡವರ ಸ್ಥಿತಿಗೂ ಪರಸ್ಪರ ತಾರತಮ್ಯ ಗಳೇನೆಂಬುದನ್ನು ಪ್ರತ್ಯಕ್ಷವಾಗಿ ಕಾಣಲು ದೊರೆತ ಅವಕಾಶ ಗಳೆನ್ನೆಲ್ಲ ಉಪಯೋಗಿಸಿಕೊಂಡು ಆಮೂಲಕ ಮೈಸೂರು ಸಂಸ್ಥಾನದಲ್ಲಿ ಅನೇಕ ಸುಧಾರಣಾಭಿವೃದ್ಧಿ ಕ್ರಮಗಳನ್ನು ಕೈಗೊಳ್ಳಲು ಕಾರಣವಾಯಿತು. ಅವರಿಗೆ ತಮ್ಮ ರಾಜ್ಯದ ರೈತರ ಬಗೆಗೆ ಇದ್ದ ಕಾಳಜಿ ಎಂತಹದು ಎಂಬುದನ್ನು ಇದರಿಂದ ತಿಳಿಯಬಹುದಾಗಿದೆ.

ಅವರು ಇಂಗ್ಲೆಂಡಿನ ವ್ಯವಸಾಯ ಕ್ಷೇತ್ರಗಳನ್ನೂ ವ್ಯವಸಾಯಗಾರರ ಮನೆಗಳನ್ನೂ ಪರಿಶೀಲಿಸಿ ಅಲ್ಲಿಯ ನದರ್ಶನಗಳಿಂದ ಸ್ವದೇಶದ ಸ್ಥಿತಿಯನ್ನು ಉತ್ತಮ ಪಡಿಸುವ ಯೋಚನೆ ಮಾಡಿದರು. ಈ ದೂರದರ್ಶಿತ್ವ ಕಾರ್ಯಗಳನ್ನು ಲಂಡನ್ನಿನ ಸಂಜೆಪತ್ರಿಕೆಯೊಂದು ಪ್ರಕಟಿಸಿತು. ಲಂಡನ್ನಿನ 'ಸ್ಟಾರ್' ಪತ್ರಿಕೆ (ಜುಲೈ ೧೭, ೧೯೩೬)

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಯಾವ ದೇಶದಲ್ಲಾಗಲಿ ಅಥವಾ ಯಾವ ಕಾಲದಲ್ಲಾಗಲಿ ಇದ್ದವರಲ್ಲಿ ಅತ್ಯಂತ ಶ್ರೇಷ್ಠರೆಂದೂ ಅವರ ಸರಳತೆಯನ್ನು ಸಜ್ಜನಿಕೆಯನ್ನು ಜನಾನುರಾಗಿ ನಡವಳಿಕೆಯನ್ನು ಕುರಿತು ಶ್ಲಾಘಿಸಿತು.

ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಲಂಡನ್ನಿನ ಪ್ರವಾಸದಲ್ಲಿದ್ದಾಗ, ಅಲ್ಲಿಯ ಕಟ್ಟಡ ಶೈಲಿಯ ವಿಧಾನಗಳನ್ನೂ ಕಟ್ಟಡಗಳಲ್ಲಿರುವ ಶೈಲಿಗಳನ್ನು ಅಲ್ಲಿನ ಟ್ಯೂಬ್ ರೈಲ್ವೆ ವ್ಯವಸ್ಥೆಯನ್ನು ಅಲ್ಲಿನ ಜನರ ಶಿಸ್ತಿನ ಜೀವನ ಕ್ರಮಗಳನ್ನು, ಅಂಗಡಿ ವ್ಯಾಪಾರ ಚಟುವಟಿಕೆಗಳ ಕ್ರಮಗಳು ಬೆಲೆ ನಿರ್ಣಯಗಳು, ಜನರು ಅನುಸರಿಸುತ್ತಿದ್ದ ರಸ್ತೆಯ ನಿಯಮ ಗಳು, ಅಲ್ಲಿನ ಮೋಟಾರು ಕಾರು ಮತ್ತು ಬಸ್ಸುಗಳ ಸೌಕರ್ಯ ಗಳ ಬಗೆಗೆ ದೀರ್ಘವಾಗಿ ವಿವರಣೆ ಪಡೆದುಕೊಂಡು, ಅವುಗಳನ್ನು ಮೈಸೂರು ಸಂಸ್ಥಾನದಲ್ಲಿ ಅನುಷ್ಠಾನಗೊಳಿಸಲು ಪ್ರಯತ್ನಿಸಿದರು.

ಲಂಡನ್ನಿನ ಯಶಸ್ವಿ ಪ್ರವಾಸದ ನಂತರ ಶ್ರೀ ನಾಲ್ವಡಿ ಯವರು ೧೯೩೯ ಆಗಸ್ಟ್ ೧೯ರಂದು ಜರ್ಮನಿಗೆ ಪ್ರವಾಸ

ಹೊರಟರು. ಅಲ್ಲಿ ಬರ್ಲಿನ್ ನಗರದಲ್ಲಿದ್ದ ಕೈಸರ್ ಚಕ್ರವರ್ತಿಯ ಅರಮನೆ, ಪ್ರಾಣಿ ಶಾಲೆಗಳು, ನರ್ತನ ಮತ್ತು ವ್ಯಾಯಾಮ ಶಾಲೆಗಳು ಇತ್ಯಾದಿಗಳನ್ನು ವೀಕ್ಷಿಸಿದರು.

ಅಲ್ಲಿಂದ ಸ್ವಿಡ್ಜರ್ಲೆಂಡಿಗೆ ಪ್ರಯಾಣ ಮಾಡಿದರು. ಸ್ವಿಡ್ಜರ್ಲೆಂಡಿನಲ್ಲಿ ದೊಡ್ಡ ಪರ್ವತಗಳನ್ನು ಕೊರೆದು ಸುರಂಗ ಮಾರ್ಗಗಳನ್ನು ಮಾಡಿ ಅಲ್ಲಿ ರೈಲು ಓಡಾಡಲು ವ್ಯವಸ್ಥೆಗೊಳಿಸಿರುವ ವಿಧಾನಗಳನ್ನು, ಆ ದೇಶದ ವ್ಯವಸಾಯ ಪದ್ಧತಿ ಮತ್ತು ಕೈಗಾರಿಕೆಗಳ ಬೆಳವಣಿಗೆಗಳನ್ನು ಅಲ್ಲಿನ ಜಲಪಾತಗಳಲ್ಲಿ ವಿದ್ಯುಚ್ಛಕ್ತಿಯ ಉತ್ಪಾದನೆ ಕ್ರಮವನ್ನು ತಿಳಿದುಕೊಂಡು ತಮ್ಮ ಸಂಸ್ಥಾನದಲ್ಲಿ ಅದೇ ಮಾದರಿಯ ಅಭಿವೃದ್ಧಿ ಕ್ರಮಗಳನ್ನು ಕೈಗೊಂಡರು.

ಹೀಗೆ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ಸ್ವಹಿತವನ್ನು, ಸಂಸ್ಥಾನದ ಹಿತವನ್ನು ಮನಸ್ಸಿನಲ್ಲಿಟ್ಟುಕೊಂಡು ಯೂರೋಪಿನ ಪ್ರವಾಸಗೊಂಡು, ಅಲ್ಲಿನ ಅನೇಕ ಹೊಸ ಹೊಸ ವಿಚಾರಗಳನ್ನು ಅನುಭವನ್ನು ಮುಂದೆ ಸಂಸ್ಥಾನದ ಅಭ್ಯುದಯಕ್ಕೆ ತೊಡಗಿಸಿದರು. ಪರಿಣಾಮವಾಗಿ ಹೊಸ ಹೊಸ ಕೈಗಾರಿಕೆಗಳ ಸ್ಥಾಪನೆ, ಉದ್ಯಾನವನಗಳ ರಚನೆ, ಸಂಚಾರ ಸೌಕರ್ಯಗಳಿಗೆ ಚಾಲನೆ, ಉಬ್ಬು ಚಿತ್ರಗಳ ಕೆತ್ತನೆ ಕೆಲಸಗಳನ್ನು ಸಂಸ್ಥಾನದಲ್ಲಿ ಪ್ರಾರಂಭಿಸಲು ಕ್ರಮಗಳನ್ನು ಕೈಗೊಳ್ಳುವ ಮೂಲಕ ಮೈಸೂರು ಸಂಸ್ಥಾನದ ಪುರೋಭಿವೃದ್ಧಿಯನ್ನು ಸಾಧಿಸಿದರು.



## ಆಧಾರಸೂಚಿ


೧. Ramanna H.S., *South India as seen by Forgin Travallers,* (an Unpublished Thieses).

೨. ನಾಗೇಗೌಡ, **ಪ್ರವಾಸಿ ಕಂಡ ಇಂಡಿಯಾ,** ಸಂ. ೧, ಮೈಸೂರು, ಪ್ರಾಸ್ತಾವಿಕ ನುಡಿ, ಪುಟ i, II.

೩. *QJMS*, Vol. XXXI-1-3 and 4, Jan-April 1940-1941, *Sri Krishnaraja Memorial Number.*

೪. ಸಿ.ಕೆ. ವೆಂಕಟರಾಮಯ್ಯ, **ಆಳಿದ ಮಹಾಸ್ವಾಮಿಯವರು,** ಬೆಂಗಳೂರು, ೧೯೪೧.

೫. ಎಂ. ಶಿಂಗ್ರಯ್ಯ., **ಶ್ರೀ ಚಾಮರಾಜೇಂದ್ರ ಒಡೆಯರ ಚರಿತ್ರೆ,** ಬೆಂಗಳೂರು, ೧೯೨೬.

೬ *Dasara Cultural Festivites 1981,* Sovenior.

೭. ಬಿ. ರಾಮಕೃಷ್ಣರಾವ್., **ಶ್ರೀಮನ್ ಮಹಾರಾಜರ ವಂಶಾವಳಿ,** ಮೈಸೂರು, ೧೯೨೨.



**ಗುಲ್ಬರ್ಗಾ ಜಿಲ್ಲೆ ಸನ್ನತಿಯಲ್ಲಿನ ಅಶೋಕ ಚಕ್ರವರ್ತಿಯ ಉಬ್ಬು ಶಿಲ್ಪ ಮತ್ತು ಶಾಸನ**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ).

ಬಿ.ಎಂ.ಶ್ರೀ. ಕಲಾಭವನ ಆವರಣ, ೩ನೇ ಮುಖ್ಯರಸ್ತೆ, ನರಸಿಂಹರಾಜಾ ಕಾಲೋನಿ
ಬೆಂಗಳೂರು – ೫೬೦ ೦೧೯

## ೨೦೧೧ನೆಯ ಸಾಲಿನ ವಾರ್ಷಿಕ ವರದಿ

ಪ್ರಿಯ ಸದಸ್ಯ ಬಂಧುಗಳೇ,

ಕರ್ನಾಟಕ ಇತಿಹಾಸ ಅಕಾದೆಮಿಯ ೨೬ನೆಯ ವಾರ್ಷಿಕ ಸಮ್ಮೇಳನಕ್ಕಾಗಿ ನಾವೆಲ್ಲಾ ಶೃಂಗೇರಿಯ ಶ್ರೀ ಶಾರದಾ ಪೀಠದ ಸಭಾಂಗಣದಲ್ಲಿ ಸಮಾವೇಶಗೊಂಡಿದ್ದೇವೆ. ಕಳೆದ ಎರಡೂವರೆ ದಶಕಗಳಿಂದ ಅಕಾದೆಮಿಯ ಅಭ್ಯುದಯದಲ್ಲಿ ನಿರಂತರವಾಗಿ ಸಹಕರಿಸುತ್ತಾ ಬಂದಿರುವ ಎಲ್ಲರಿಗೂ ಅನಂತ ಧನ್ಯವಾದಗಳು. ಕಳೆದ ೨೫ ಸಮ್ಮೇಳನಗಳಿಗೆ ಆಶ್ರಯ ನೀಡಿ ಅಕಾದೆಮಿಯನ್ನು ಪೋಷಿಸಿರುವ ಎಲ್ಲಾ ಸಂಘ ಸಂಸ್ಥೆ ಹಾಗೂ ಧರ್ಮಪೀಠಗಳಿಗೆ ಅಕಾದೆಮಿಯು ಕೃತಜ್ಞವಾಗಿದೆ.

**ಐತಿಹಾಸಿಕ ಪರಂಪರೆ ಉಳಿಸಿ – ೨೦೧೧**

೨೦೧೧ರ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಉದ್ಘಾಟನಾ ಸಮಾರಂಭವನ್ನು ೧೬–೮–೨೦೧೧ರ ಮಂಗಳವಾರದಂದು ಮಧ್ಯಾಹ್ನ ४.३೦ ಗಂಟೆಗೆ ಬೆಂಗಳೂರಿನ ವಿಶ್ವೇಶ್ವರಪುರದಲ್ಲಿರುವ ಜೈನ್ ಮಹಾವಿದ್ಯಾಲಯದ ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ವರ್ಷವೂ ಎಂದಿನಂತೆ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮಕ್ಕೆ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಆರ್ಥಿಕ ಸಹಯೋಗ ದೊರೆತಿತ್ತು. ಡಾ. ಕೂ.ಸ. ಅಪರ್ಣ ಮತ್ತು ಸಂಗಡಿಗರ ಪ್ರಾರ್ಥನೆ ಹಾಗೂ ಲಾವಣಿ ಗಾಯನದೊಂದಿಗೆ ಕಾರ್ಯಕ್ರಮವು ಆರಂಭವಾಯಿತು. ಅಕಾದೆಮಿಯ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ಅವರು ಸಭೆಗೆ ಸ್ವಾಗತ ಕೋರಿ ಪ್ರಾಸ್ತಾವಿಕ ಭಾಷಣ ಮಾಡಿದರು. ಕರ್ನಾಟಕ ಸರ್ಕಾರದ ವಿಶ್ರಾಂತ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಪಿ.ಬಿ. ಜೋಷಿ, ಭಾ.ಆ.ಸೇ., ಅವರು ೨೦೧೧ರ ಸಾಲಿನ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹವನ್ನು ಜ್ಯೋತಿ ಬೆಳಗಿಸುವ ಮೂಲಕ ವಿಧಿವತ್ತಾಗಿ ಉದ್ಘಾಟಿಸಿ, ನಾಡು–ನುಡಿ, ಸಂಸ್ಕೃತಿಗಳ ಸಂರಕ್ಷಣೆಯ ಬಗ್ಗೆ ಚಿಂತನಾಶೀಲ ಮಾತುಗಳನ್ನು ಆಡಿದರು. ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ – ವಾರ್ತಾ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀಯುತ ರಮೇಶ ಬಿ. ಝಳಕಿ ಭಾ.ಆ.ಸೇ., ಅವರ ಅನುಪಸ್ಥಿತಿಯಲ್ಲಿ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರಾದ ಡಾ. ಆರ್. ಗೋಪಾಲ್ ಅವರು, ಈ ಸಂದರ್ಭಕ್ಕೆಂದೇ ಕಲಾವಿದ ಶ್ರೀ ಸುಭಾಷ್ ಕಮ್ಮಾರ್ ಅವರು ಅಕಾದೆಮಿಗಾಗಿ ಸಿದ್ಧಪಡಿಸಿದ್ದ ವಿಶೇಷ ಭಿತ್ತಿಚಿತ್ರ ವಿನ್ಯಾಸವನ್ನು ಅನಾವರಣ ಮಾಡಿ, ಚಾರಿತ್ರಿಕ ದಾಖಲೆಗಳನ್ನು ರಕ್ಷಿಸಿ, ಮುಂದಿನ ಪೀಳಿಗೆಗೆ ಉಳಿಸಿಕೊಡಬೇಕಾದ ಅಂಶವನ್ನು ಸಭೆಗೆ ಮನವರಿಕೆ ಮಾಡಿಕೊಟ್ಟರು.

ಕರ್ನಾಟಕ ಇತಿಹಾಸ ಅಕಾದೆಮಿಯ ಬೆಂಗಳೂರು ನಗರ ಘಟಕವು ಡಾ. ಇಂದಿರಾಹೆಗ್ಡೆ ಅವರ ಅಧ್ಯಕ್ಷತೆಯಲ್ಲಿ, ಎಂದಿನಂತೆ ಬೆಂಗಳೂರು ನಗರದ ಪ್ರೌಢಶಾಲೆ, ಪದವಿ–ಪೂರ್ವ, ಹಾಗೂ ಪದವಿ ಕಾಲೇಜುಗಳ ವ್ಯಾಸಂಗಾರ್ಥಿಗಳಿಗೆ ಏರ್ಪಡಿಸಿದ್ದ ಪ್ರಬಂಧ ಹಾಗೂ ಭಾಷಣ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ, ಶ್ರೀ ದಯಾನಂದಸಾಗರ್ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಗಾಳಿಸ್ವಾಮಿ ಅವರು ಬಹುಮಾನ ಹಾಗೂ ಪ್ರಶಸ್ತಿ ಪತ್ರಗಳನ್ನು ನೀಡಿದರು. ತಮ್ಮ ಮಗ ದಿ.ಅಂಗದ್‌ನ ಸ್ಮರಣಾರ್ಥ ಪರ್ಯಾಯ ಪಾರಿತೋಷಕವನ್ನೂ ಪ್ರಾಯೋಜಿಸಿರುವ ಶ್ರೀಯುತರು ವಿಜೇತರಿಗೆ ವೈಯಕ್ತಿಕ ಬಹುಮಾನಗಳನ್ನೂ ಪ್ರದಾನ ಮಾಡಿದರು. ಈ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದ ಅಕಾದೆಮಿಯ ಗೌರವಾಧ್ಯಕ್ಷರಾದ ಡಾ. ಸೂರ್ಯನಾಥ ಯು. ಕಾಮತ್ ಸಭೆಯನ್ನು ಉದ್ದೇಶಿಸಿ ಅಧ್ಯಕ್ಷ ಭಾಷಣ ಮಾಡಿದರು. ಆನಂತರ ಪಾರಿತೋಷಕಗಳನ್ನು ಪ್ರಾಯೋಜಿಸಿದ ಪ್ರಾಯೋಜಕರಿಗೆ ಗೌರವಾದರವನ್ನೂ, ಸ್ಪರ್ಧಾಕಾರ್ಯಕ್ರಮಗಳಲ್ಲಿ ಸಹಕರಿಸಿದ ಸ್ವಯಂಸೇವಕರಿಗೆ ಸ್ಮರಣಿಕೆಗಳನ್ನು ಬೆಂಗಳೂರು ನಗರ ಘಟಕದ ವತಿಯಿಂದ ನೀಡಿ ಗೌರವಿಸಲಾಯಿತು.

ಅಕಾದೆಮಿಯ **ಐತಿಹಾಸಿಕ ಪರಂಪರೆ ಉಳಿಸಿ** ಕಾರ್ಯಕ್ರಮಕ್ಕೆ ಸ್ಥಳಾವಕಾಶ ನೀಡಿದ ಜೈನ್ ಮಹಾವಿದ್ಯಾಲಯದ ಆಡಳಿತ ವರ್ಗಕ್ಕೆ ಅಕಾದೆಮಿಯು ಕೃತಜ್ಞತೆ ಸಲ್ಲಿಸಿತು. ಶ್ರೀ ಆರ್. ಶಶಿಧರ್ ಕಾರ್ಯಕ್ರಮ ನಿರೂಪಣೆ ಮಾಡಿದರು. ಈ ಕಾರ್ಯಕ್ರಮವು ಯಶಸ್ವಿಯಾಗುವಲ್ಲಿ ಸಹಕರಿಸಿದ ಸರ್ವರಿಗೂ ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ರಾಜೇಂದ್ರಪ್ಪ ಅವರು ವಂದನೆ ಅರ್ಪಿಸುವುದರೊಂದಿಗೆ ಕಾರ್ಯಕ್ರಮವು ಮುಕ್ತಾಯಗೊಂಡಿತು.

ಬೆಂಗಳೂರು ನಗರದಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ವತಿಯಿಂದ ರಾಜ್ಯಮಟ್ಟದಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ' ಕಾರ್ಯಕ್ರಮವು ಉದ್ಘಾಟನೆಗೊಂಡು, ಸದರಿ ವರ್ಷದ ವಿಶೇಷ ಭಿತ್ತಿಪತ್ರಗಳ ಅನಾವರಣವಾದ ನಂತರ, ರಾಜ್ಯದಾದ್ಯಂತ ವಿವಿಧ ಸ್ಥಳಗಳಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮಗಳು ನಡೆದಿವೆ. ಅಕಾದೆಮಿಯ ಸದಸ್ಯರ ಅಪೇಕ್ಷೆಯಂತೆ ಅಗತ್ಯವಿರುವ ಭಿತ್ತಿಪತ್ರ, ಸಂಬಂಧಿತ ಸಾಹಿತ್ಯ ಹಾಗೂ ಪ್ರಚಾರ ಪತ್ರಗಳನ್ನು ಸದಸ್ಯರಿಗೆ ಮುಂದಾಗಿ ಕಳುಹಿಸಲಾಗಿತ್ತು. ಆ ಪ್ರಕಾರ ಅಕಾದೆಮಿಯ ಸದಸ್ಯರು, ಇತಿಹಾಸ ಆಸಕ್ತರು ಹಾಗೂ ಸಂಘ–ಸಂಸ್ಥೆಗಳು ನಾಡಿನಾದ್ಯಂತ ವರ್ಷದುದ್ದಕ್ಕೂ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ಹಮ್ಮಿಕೊಂಡು ಆಚರಿಸಿದ ಕಾರ್ಯಕ್ರಮಗಳ ವಿವರವನ್ನಿಲ್ಲಿ ಸಂಕ್ಷಿಪ್ತವಾಗಿ ವರದಿ ಮಾಡಲಾಗಿದೆ.

# 'ಐತಿಹಾಸಿಕ ಪರಂಪರೆ ಉಳಿಸಿ'– ೨೦೧೨ನೇ ಸಾಲಿನ ವರದಿ : ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| ೧. | ೧೫.೦೮.೧೧ | ಬಂಗಾಡಿ ಅರಮನೆ | ಸರ್ವಶ್ರೀ<br>ಬಿ. ರವಿರಾಜ ಬಲ್ಲಾಳರು<br>(ಬಂಗಾಡಿ ಅರಮನೆ) | ಸರ್ವಶ್ರೀ<br>ಬಿ. ಭುಜಬಲಿ<br>ಯಶೋಧರ ಬಲ್ಲಾಳ<br>ಡಾ. ವೈ. ಉಮಾನಾಥ ಶೆಣೈ<br>ಪ್ರೊ. ಪ್ರಮೋದ್‌ಕುಮಾರ್ | **ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ–೨೦೧೧**<br>ಕಾರ್ಯಕ್ರಮಗಳ ಉದ್ಘಾಟನೆ |
| ೨. | ೧೬.೦೮.೧೧ | ಶ್ರೀ ಧ.ಮಂ. ಕಾಲೇಜು | 'ನಮ್ಮ ಸಾಮಾಜಿಕ ಪರಂಪರೆ' ಪ್ರಬಂಧ ರಚನಾ ಸ್ಪರ್ಧೆ | ಡಾ. ವೈ. ಉಮಾನಾಥ ಶೆಣೈ | ಪದವಿ ಪೂರ್ವ ಕಾಲೇಜಿನ ಎಲ್ಲಾ ವಿದ್ಯಾರ್ಥಿಗಳು ಭಾಗವಹಿಸಿದ್ದರು. |
| ೩. | ೧೭.೦೮.೧೧ | ಶ್ರೀ ಧ.ಮಂ. ಕಾಲೇಜು | ಸ್ಮಾರಕ ಚಿತ್ರ ರಚನಾ ಸ್ಪರ್ಧೆ | ಡಾ. ವೈ. ಉಮಾನಾಥ ಶೆಣೈ | ಪದವಿ ಪೂರ್ವ ಕಾಲೇಜಿನ ಎಲ್ಲಾ ವಿದ್ಯಾರ್ಥಿಗಳು ಭಾಗವಹಿಸಿದ್ದರು. |
| ೪. | ೧೮.೦೮.೧೧ | ಶ್ರೀ ಧ.ಮಂ. ಕಾಲೇಜು | 'ನಮ್ಮ ಶಿಲ್ಪಕಲಾ ಪರಂಪರೆ' ಭಾಷಣ ಸ್ಪರ್ಧೆ<br>ಡಾ. ವೈ. ಉಮಾನಾಥ ಶೆಣೈ | ಡಾ. ಎ. ಪುಂಡಲೀಕ | ಪದವಿ ಪೂರ್ವ ಕಾಲೇಜಿನ ಎಲ್ಲಾ ವಿದ್ಯಾರ್ಥಿಗಳು ಭಾಗವಹಿಸಿದ್ದರು. |
| ೫. | ೧೯.೦೮.೧೧ | ಶ್ರೀ ಧ.ಮಂ. ಕಾಲೇಜು | ಅಧ್ಯಕ್ಷರು, ತುಳುಸಂಘ | ಪ್ರೊ. ಪ್ರಮೋದ್‌ಕುಮಾರ್ | ಪಾರಂಪರಿಕ ತುಳುಗೀತ ಗಾಯನ ಸ್ಪರ್ಧೆ |
| ೬ | ೨೦.೦೮.೧೧ | ಅಳದಂಗಡಿ ಅರಮನೆ | ಡಾ. ಬಿ. ಯಶೋವರ್ಮ<br>ಶ್ರೀ ಧ.ಮಂ. ಕಾಲೇಜು | ಡಾ. ಪದ್ಮಪ್ರಸಾದ್ ಅಜಿಲರು<br>ಅಳದಂಗಡಿ ಅರಮನೆ | ಸ್ಮಾರಕ ಭೇಟಿ ಮತ್ತು ಸಮಾರೋಪ ಕಾರ್ಯಕ್ರಮ, ೩೦ ವಿದ್ಯಾರ್ಥಿಗಳು ಮತ್ತು ಸಾರ್ವಜನಿಕರು ಭಾಗವಹಿಸಿದ್ದರು. |
| ೭. | ೨೧.೦೮.೧೧ | ಯುವಕಮಂಡಲ (ರಿ)<br>ಎಲ್ಲೂರು | ಭುವನೇಂದ್ರರಾವ್ ಎಲ್ಲೂರು<br>ಉದ್ಘಾಟನೆ: ಡಾ. ಜಗದೀಶಶೆಟ್ಟಿ<br>ಇತಿಹಾಸ ವಿಭಾಗದ ಮುಖ್ಯಸ್ಥರು<br>ಪೂರ್ಣಪ್ರಜ್ಞ ಮಹಾವಿದ್ಯಾಲಯ<br>ಉಡುಪಿ | ಪ್ರಫುಲ್ಲಶೆಟ್ಟಿ<br>ಆಡಳಿತ ಮೋಕ್ತೇಸರರು<br>ಶ್ರೀ ರಾಘವೇಂದ್ರರಾವ್<br>ಮ್ಯಾನೇಜರ್ | ಶ್ರೀ ವಿಶ್ವೇಶ್ವರ ದೇವಸ್ಥಾನ |
| ೮. | ೨೧.೦೮.೧೧ | ಯುವಕಮಂಡಲ (ರಿ)<br>ಎಲ್ಲೂರು | ಡಾ. ಜಗದೀಶಶೆಟ್ಟಿ<br>ಬಿ. ಸೀತಾರಾಮ್ ಭಟ್ | ಶ್ರೀಧರಭಟ್ | ಉಪನ್ಯಾಸ ಮತ್ತು ಪ್ರಾತ್ಯಕ್ಷಿಕೆ |
| ೯. | ೨೩–೮–೧೧ | ಎಸ್.ಜೆ.ಎಂ.ವಿ. ಮಹಾಂತ ವಿದ್ಯಾಲಯ, ಧಾರವಾಡ | ಡಾ. ಎಸ್.ಕೆ. ಮೇಲಾಕಾರ<br>ಪ್ರಾಚಾರ್ಯ<br>ಎನ್.ಆರ್. ಬಾಳಿಕಾಯಿ | ಡಾ. ಎಸ್.ಎಂ. ನಾಗಭೂಷಣ<br>ಡಾ. ಎಸ್.ಎಂ. ನಾಗಭೂಷಣ<br>ನಸೀಮುಲ್ಲಾ, ರೂಪ<br>ದಾಕ್ಷಾಯಣಿ ವಿರಕ್ತಮಠ | ಇತಿಹಾಸ ಸಂಘ ಉದ್ಘಾಟನೆ<br>ಐತಿಹಾಸಿಕ ಮಹತ್ವ ವಿಚಾರಗಳ ಬಗ್ಗೆ ಉಪನ್ಯಾಸಗಳು. |

| ಕ್ರ.ಸಂ. | ದಿನಾಂಕ | ಸ್ಥಳ | ಅಧ್ಯಕ್ಷತೆ/ಉದ್ಘಾಟನೆ | ಮುಖ್ಯ ಅತಿಥಿಗಳು/ಉಪನ್ಯಾಸಕರು | ಇತರ ವಿಷಯಗಳು |
|---|---|---|---|---|---|
| ೧೦. | ೩೦-೩-೧೨ | ಗ.ಸ.ಜ.ಗಿ., ಪ.ಪೂ. ಕಾಲೇಜು ಹುಲಕೋಟಿ | ಪ್ರಾ. ವಿ.ವೈ. ಹರ್ಲಾಪುರ<br>ಶ್ರೀ ಡಿ.ಬಿ. ಓದುಗೌಡ | ಪ್ರೊ. ಕೆ.ಎಂ. ಗರಗ | ಐತಿಹಾಸಿಕ ಪರಂಪರೆ ಉಳಿಸಿ ಹಾಗೂ ವಿಚಾರ ಸಂಕಿರಣ ಕಾರ್ಯಕ್ರಮ |
| ೧೧. | ೨೫-೪-೧೨ | ಇತಿಹಾಸ ಅಕಾಡೆಮಿ ಘಟಕ, ಬೆಳಗಾವಿ | ಡಾ. ಎಸ್.ವಿ. ವೆಂಕಟೇಶಯ್ಯ<br>ಡಾ. ವಿ.ಆಯ್. ಪಾಟೀಲ | ಶ್ರೀ ಮ.ನಿ.ಪ್ರ.ಸ. ಬಡವಲಿಂಗ<br>ಶ್ರೀ ನಾಗರಾಜ ಈ. ದೇಸಾಯಿ | ವೈಭವದ ಸರ್ವಾಧ್ಯಕ್ಷರ ಮೆರವಣಿಗೆ, ಕರ್ನಾಟಕ ಮೆರವಣಿಗೆ, ಕರ್ನಾಟಕ ಇತಿಹಾಸ ಸಂಸ್ಕೃತಿ ಕುರಿತ |
| ೧೨. | ೨೬-೪-೧೨ | ಕೆ.ಆರ್.ಸಿ. ಶಿಕ್ಷಣ ಸಂಸ್ಥೆ ಬೈಲಹೊಂಗಲ ಸರ್ದಾರ್ ವಿ.ಜಿ. ದೇಸಾಯಿ ಫೌಂಡೇಷನ್, ಚಚಡಿ | ಡಾ. ದೇವರಕೊಂಡಾರೆಡ್ಡಿ | ಡಾ. ಶಾಂತಿನಾಥ ದಿಬ್ಬದ | ವಿವಿಧ ವಿಷಯಗಳ ಮೂರು ಗೋಷ್ಠಿಗಳು ಸಮಾರೋಪ ಸಮಾರಂಭದಲ್ಲಿ ಎಸ್.ಕೆ. ಜೋಷಿ ಮುಖ್ಯ ಅತಿಥಿಗಳು ಹಾಗೂ ಪ್ರೊ. ಸಿ.ವಿ. ಜ್ಯೋತಿ ಭಾಗವಹಿಸಿದ್ದರು. |
| ೧೩. | | ಶ್ರೀ ಎಸ್.ಆರ್.ನರಸಾಪುರ<br>ಶ್ರೀ ಎಂ.ಬಿ. ಶಿರೂರ<br>ವಾಣಿಜ್ಯ ಮಹಾವಿದ್ಯಾಲಯ, ಬಾಗಲಕೋಟೆ | ಡಾ. ಹನುಮಾಕ್ಷಿ ಗೋಗಿ<br>ಜಿ.ಡಿ. ಯಾದವಾಡ | ಎಸ್.ಆರ್. ಮಿರ್ಜಿ<br>ಡಾ. ಡಿ.ಜಿ. ಕುಲಕರ್ಣಿ<br>ಡಾ. ವಿ.ಡಿ. ಕುಲಕರ್ಣಿ<br>ವಿ.ವೈ. ಕವಲೇಕರ್<br>ಡಾ. ಎಂ.ಜಿ. ದೀಕ್ಷಿತ್ | ಹನುಮಂತ ತಾಸಗಾಂವ ಮುಂತಾದವರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.<br>ಐತಿಹಾಸಿಕ ಪರಂಪರೆ ಉಳಿಸಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. |

## ಇಪ್ಪತ್ತೈದನೆಯ ವಾರ್ಷಿಕ ಸಮ್ಮೇಳನ

ಕರ್ನಾಟಕ ಇತಿಹಾಸ ಅಕಾದೆಮಿಯು, ಬೆಂಗಳೂರಿನ "ದಿ ಮಿಥಿಕ್ ಸೊಸೈಟಿ", ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಫ್ಯಾಮಿಲಿ (ಬಿ.ಆರ್.ಆರ್. ಫ್ಯಾಮಿಲಿ) ಸೇವಾ ಟ್ರಸ್ಟ್, ಹಾಗೂ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಸಹಯೋಗದೊಂದಿಗೆ, ೨೦೧೧ರ ಸೆಪ್ಟೆಂಬರ್ ೯ರಿಂದ ಸೆಪ್ಟೆಂಬರ್ ೧೧ರವರೆಗೆ ಮೂರು ದಿನಗಳ ಕಾಲ ಹಮ್ಮಿಕೊಂಡಿದ್ದ ೨೫ ನೆಯ ವಾರ್ಷಿಕ (ರಜತ ಮಹೋತ್ಸವ ವರ್ಷ) ಸಮ್ಮೇಳನಕ್ಕೆ ಬೆಂಗಳೂರಿನ ಬಿ.ಆರ್.ಆರ್. ಫ್ಯಾಮಿಲಿ ಟ್ರಸ್ಟ್ ಅವರು ಉತ್ತಮ ಊಟೋಪಚಾರ ಆತಿಥ್ಯ ನೀಡಿತ್ತು.

**ಉದ್ಘಾಟನಾ ಸಮಾರಂಭ:** ದಿನಾಂಕ: ೦೯.೦೯.೨೦೧೧ರ ಬೆಳಿಗ್ಗೆ ೧೦.೩೦ಕ್ಕೆ ನಾಡೋಜ ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಜ್ಯೋತಿ ಬೆಳಗಿಸಿ, ಸಮ್ಮೇಳನವನ್ನು ಉದ್ಘಾಟಿಸಿ ಉದ್ಘಾಟನಾ ಭಾಷಣವನ್ನು ಮಾಡಿದರು. ಡಾ. ಎಂ.ಜಿ. ನಾಗರಾಜ್ ಹಾಗೂ ಡಾ. ಪಿ.ವಿ. ಕೃಷ್ಣಮೂರ್ತಿ ಸಂಪಾದಿತ **ಇತಿಹಾಸ ದರ್ಶನ**ದ ೨೬ನೆಯ ವಾರ್ಷಿಕ ಸಂಚಿಕೆಯನ್ನು ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಡಾ. ಎಸ್.ವಿ. ವೆಂಕಟೇಶಯ್ಯ ಬಿಡುಗಡೆ ಮಾಡಿ ಮಾತನಾಡಿದರು. ಮಿಥಿಕ್ ಸೊಸೈಟಿಯ ಅಧ್ಯಕ್ಷರಾದ ಡಾ. ಎಂ.ಕೆ.ಎಲ್.ಎನ್. ಶಾಸ್ತ್ರಿ ಅವರು, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯನ್ನು ಶಾಸನ ತಜ್ಞರಾದ ಶ್ರೀ ಮಹಮದ್ ಷರೀಫ್ ಅವರಿಗೆ ಪ್ರದಾನ ಮಾಡಿದರು. ಆ ಸಂದರ್ಭದಲ್ಲಿ ಡಾ. ಪಿ.ವಿ. ಕೃಷ್ಣಮೂರ್ತಿ ಸನ್ಮಾನಿತರ ಕಿರುಪರಿಚಯವನ್ನು ಸಭೆಗೆ ಮಾಡಿಕೊಟ್ಟರು. ಇದೇ ಸಂದರ್ಭದಲ್ಲಿ ೧) *South India: An Expedition into the Past* (ಡಾ. ಜಿ.ಎಸ್. ದೀಕ್ಷಿತ್‌ರ ಆಂಗ್ಲ ಲೇಖನಗಳ ಸಂಗ್ರಹ), ೨) **ಇತಿಹಾಸ ದರ್ಶನ ಲೇಖಕ-ಲೇಖನ ಸೂಚಿ** (ಡಾ. ಪಿ.ವಿ. ಕೃಷ್ಣಮೂರ್ತಿ (ಸಂ), ಹಾಗೂ ೩) **ಹಾಲುಮತ ಸಂಸ್ಕೃತಿ** (ಲೇ: ಡಾ. ಎಫ್.ಟಿ. ಹಳ್ಳಿಕೇರಿ) ಗ್ರಂಥಗಳನ್ನು ಡಾ. ಸೂರ್ಯನಾಥ ಯು. ಕಾಮತ್, ಹಾಗೂ ಶ್ರೀ ಎಂ.ಬಿ. ಪಾಟೀಲ್ ಬಿಡುಗಡೆ ಮಾಡಿದರು. ಡಾ. ಬೆಂ.ಶಾ. ಶ್ಯಾಮಲಾ ರತ್ನಕುಮಾರಿಯವರು ಸಿದ್ಧಪಡಿಸಿದ್ದ **ಬೆಂಗಳೂರು ಇತಿಹಾಸಕ್ಕೆ** ಸಂಬಂಧಿಸಿದಂತೆ ಅಕಾದೆಮಿಯು ಹಿಂದೆ ಆಯೋಜಿಸಿದ್ದ ವಿಚಾರ ಸಂಕಿರಣವೊಂದರ ಲೇಖನಗಳನ್ನು ಒಳಗೊಂಡ ಸಿ.ಡಿ.ಯನ್ನೂ ಲೋಕಾರ್ಪಣೆ ಮಾಡಲಾಯಿತು. ಈ ಸಂದರ್ಭದಲ್ಲಿ ವೇದಿಕೆಯನ್ನಲಂಕರಿಸಿದ್ದ ನಿಕಟಪೂರ್ವ ಸಮ್ಮೇಳನಾಧ್ಯಕ್ಷರಾದ ಡಾ. ಎಂ.ಎಸ್. ಕೃಷ್ಣಮೂರ್ತಿ ಅವರು ಮಾತನಾಡಿದರು.

ಸಮ್ಮೇಳನಾಧ್ಯಕ್ಷರಾದ ಡಾ. ಎಚ್.ಎಸ್. ಗೋಪಾಲರಾವ್ ಅವರ ಕಿರುಪರಿಚಯವನ್ನು ಕಾರ್ಯದರ್ಶಿ ಡಾ. ಡಿ. ಎನ್. ಯೋಗೀಶ್ವರಪ್ಪ ಸಭೆಗೆ ಮಾಡಿಕೊಟ್ಟ ನಂತರ, ಅಕಾದೆಮಿಯ ೨೫ನೆಯ ಸಮ್ಮೇಳನದ ಸರ್ವಾಧ್ಯಕ್ಷ ಪದವಿಯ ಗೌರವಕ್ಕೆ ಪಾತ್ರರಾಗಿದ್ದ ಸಾಹಿತಿಗಳೂ ಸಂಶೋಧಕರೂ ಹಾಗೂ ಕರ್ನಾಟಕ ಇತಿಹಾಸ ಅಕಾದೆಮಿಯ ಪ್ರಧಾನ ಕಾರ್ಯದರ್ಶಿಗಳಾಗಿ ಸುದೀರ್ಘ ಕಾಲ ಸೇವೆ ಸಲ್ಲಿಸಿದ್ದ ಡಾ. ಎಚ್.ಎಸ್. ಗೋಪಾಲರಾವ್ ಅವರು, ಕರ್ನಾಟಕದ ಚಾರಿತ್ರಿಕ ಮಹತ್ವದ ಬಗ್ಗೆ ಮಾತನಾಡುತ್ತಾ ಆಗಬೇಕಾಗಿರುವ ಸಂಶೋಧನೆಗಳ ಬಗ್ಗೆ ಬೆಳಕು ಚೆಲ್ಲಿದರು. ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಅಕಾದೆಮಿಯ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ವಹಿಸಿದ್ದರು. ಉದ್ಘಾಟನಾ ಸಮಾರಂಭದಲ್ಲಿ ಹಿಂದಿನ ಸಮ್ಮೇಳನದ ನಂತರ ಪಿಎಚ್.ಡಿ./ಡಿ.ಲಿಟ್. ಪದವಿ ಗೌರವಕ್ಕೆ ಪಾತ್ರರಾದವರಿಗೆ ಡಾ. ಎಂ.ಕೆ.ಎಲ್.ಎನ್. ಶಾಸ್ತ್ರೀ ಸನ್ಮಾನಿಸಿದರು. ಡಾ. ನೀ.ಕೃ. ರಾಮಶೇಷನ್ ಪ್ರಾರ್ಥನೆಯೊಂದಿಗೆ ಈ ಸಮಾರಂಭವು ಆರಂಭಗೊಂಡು, ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ರಾಜೇಂದ್ರಪ್ಪ ಸ್ವಾಗತ ಕೋರಿದರೆ, ಡಾ. ಬಿ. ರಾಜಶೇಖರಪ್ಪ ವಂದನೆ ಸಲ್ಲಿಸಿದ್ದು, ಡಾ. ಎಸ್.ಕೆ. ಮೇಲಕಾರ್ ಈ ಕಾರ್ಯಕ್ರಮದ ನಿರ್ವಹಣೆ ಮಾಡಿದರು.

**೨೫ನೆಯ ಸಮ್ಮೇಳನದಲ್ಲಿ ನಡೆದ ಗೋಷ್ಠಿಗಳು:** ಮೂರು ದಿನ ನಡೆದ ಈ ಸಮ್ಮೇಳನದಲ್ಲಿ ೯-೯-೨೦೧೧ರ ಮಧ್ಯಾಹ್ನ ೨ ಗಂಟೆಯಿಂದ ೧೧-೯-೨೦೧೧ರ ಮಧ್ಯಾಹ್ನ ೪-೩೦ ಗಂಟೆಯವರೆಗೆ ಮಿಥಿಕ್ ಸೊಸೈಟಿಯ ಎರಡೂ ಸಭಾಂಗಣದಲ್ಲಿ ನಡೆದ ೨೦ ಸಮಾನಂತರ ಗೋಷ್ಠಿಗಳಲ್ಲಿ ಒಟ್ಟು ೧೪೮ ಸಂಪ್ರಬಂಧಗಳು ಮಂಡನೆಯಾದವು. ಈ ಗೋಷ್ಠಿಗಳ ಅಧ್ಯಕ್ಷತೆಯನ್ನು ಕ್ರಮವಾಗಿ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ಬಿ. ರಾಜಶೇಖರಪ್ಪ, ಡಾ. ಎ.ಕೆ. ಶಾಸ್ತ್ರಿ, ಡಾ. ವಸುಂಧರಾ ಫಿಲಿಯೋಜಾ, ಡಾ. ಪುಂಡಿಕಾಯ್ ಗಣಪಯ್ಯ ಭಟ್, ಡಾ. ಎಫ್.ಟಿ. ಹಳ್ಳಿಕೇರಿ, ಡಾ. ಎಚ್. ಚಂದ್ರಶೇಖರ್, ಡಾ. ಪಿ.ಎನ್. ನರಸಿಂಹಮೂರ್ತಿ, ಡಾ. ಎಸ್.ಕೆ. ಜೋಷಿ, ಡಾ. ವೈ. ಉಮಾನಾಥ ಶೆಣೈ, ಶ್ರೀಮತಿ ಹನುಮಾಕ್ಷಿ ಗೋಗಿ, ಡಾ. ಸ್ಮಿತಾ ಸುರೇಬಾನಕರ್, ಡಾ. ಡಿ.ಎನ್. ಯೋಗೀಶ್ವರಪ್ಪ, ಡಾ. ಅ.ಲ. ನರಸಿಂಹನ್, ಶ್ರೀ ಎಂ.ಬಿ. ಪಾಟೀಲ್, ಡಾ. ಜಗದೀಶ ಶೆಟ್ಟಿ, ಡಾ. ಎಸ್.ಎಲ್. ಶ್ರೀನಿವಾಸಮೂರ್ತಿ, ಡಾ. ಎಂ.ಜಿ. ನಾಗರಾಜ್, ಡಾ. ಬಿ. ಲೀಲಾ, ಹಾಗೂ ಡಾ. ಸಿ.ಆರ್.

**ಪಿಎಚ್‌ಡಿ ಮತ್ತು ಡಿ.ಲಿಟ್ ಪದವಿ ಪಡೆದ ಸನ್ಮಾನಿತರು**

| ಕ್ರ. ಸಂ. | ಪಿಎಚ್.ಡಿ./ಡಿ.ಲಿಟ್ ಪದವಿ ಪಡೆದವರ ಹೆಸರು | ಮಾರ್ಗದರ್ಶಕರ ಹೆಸರು | ವಿಷಯ | ವಿಶ್ವವಿದ್ಯಾಲಯ |
|---|---|---|---|---|
| ೧ | ಶ್ರೀ ಶಂಭುಲಿಂಗ ಎಸ್. ವಾಣಿ | | ಶಿಕ್ಷಣ ವಾಸ್ತುಶಿಲ್ಪ: ಗುಲಬರ್ಗಾ ಜಿಲ್ಲೆ | ಕ.ವಿ.ವಿ. ಹಂಪಿ |
| ೨ | ಶ್ರೀ ಶ್ರೀಧರ್ | ಡಾ. ಮುನಿರಾಜಪ್ಪ | ತುಮಕೂರು ಜಿಲ್ಲೆಯ ಕೆರೆ ನೀರಾವರಿ ಇತಿಹಾಸ | ಬೆಂಗಳೂರು ವಿ.ವಿ. |
| ೩ | ಶ್ರೀರವೀಂದ್ರನಾಥ್‌ಆರ್.ವಿ. | ಡಾ. ಅಶ್ವತ್ಥನಾರಾಯಣ | ರಾಜಕೀಯ, ಆಡಳಿತ ಮತ್ತು ಕೆ.ಸಿ. ರೆಡ್ಡಿ – ಒಂದು ಅಧ್ಯಯನ (೧೯೦೨–೭೬) | ಬೆಂಗಳೂರು ವಿ.ವಿ. |
| ೪ | ಶ್ರೀ ವೀರೇಶ್ ಎನ್.ಎಸ್. | ಡಾ.ಕಲವೀರ ಮನ್ವಾಚಾರ್ | ಶಾಸನ ಮತ್ತು ಕನ್ನಡ ಸಾಹಿತ್ಯ ಕೃತಿಗಳಲ್ಲಿ ಹಂಪಿ ಪರಿಸರದ ವೀರಶೈವ ಧರ್ಮ | ಕ.ವಿ.ವಿ. ಹಂಪಿ |
| ೫ | ಶ್ರೀ ಲಿಂಗದಹಳ್ಳಿ ಹಾಲಪ್ಪ | ಡಾ. ಬಿ.ಎಂ. ಪುಟ್ಟಯ್ಯ | ಕನ್ನಡ ಕಥನ ಸಾಹಿತ್ಯ: ಗ್ರಾಮ–ನಗರಗಳ ದ್ವಂದ್ವಾತ್ಮಕತೆ | ಕ.ವಿ.ವಿ. ಹಂಪಿ |
| ೬ | ಶ್ರೀಮತಿ ಲಕ್ಷ್ಮೀ ವಿ. | ಡಾ. ಎಸ್. ನಾಗರಾಜು | ತುಳುನಾಡಿನ ನಾಗಬ್ರಹ್ಮ ಮತ್ತು ಕಂಬಳ–ಒಂದು ವಿಶ್ಲೇಷಣಾತ್ಮಕ ಅಧ್ಯಯನ | ಕ.ವಿ.ವಿ. ಹಂಪಿ |
| ೭ | ಶ್ರೀ ಅಂಗಡಿ ನಿಂಗಪ್ಪ ಮಹಾದೇವಪ್ಪ | ಡಾ. ಎಸ್.ಸಿ. ಪಾಟೀಲ | ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ – ಒಂದು ಅಧ್ಯಯನ | ಕ.ವಿ.ವಿ. ಹಂಪಿ |
| ೮ | ಶ್ರೀ ಎಸ್.ಎಚ್. ಕೆಂಪಯ್ಯ ರಾಜ | ಡಾ. ಎಸ್.ಎನ್. ಶಿವರುದ್ರಸ್ವಾಮಿ | ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ | ಬೆಂಗಳೂರು ವಿ.ವಿ. |
| ೯ | ಶ್ರೀ ನಾಯಕರ ಹುಲುಗಪ್ಪ | ಡಾ. ಕಲವೀರ ಮನ್ವಾಚಾರ್ | ಕನ್ನಡ ಶಾಸನಗಳಲ್ಲಿ ಪುರಾಣ ಪರಿಕಲ್ಪನೆ | ಕ.ವಿ.ವಿ. ಹಂಪಿ |
| ೧೦ | ಶ್ರೀ ನಿರಂಜನ ರಾ.ನ. | ಡಾ. ದೇವರಕೊಂಡಾರೆಡ್ಡಿ | ಕುಕ್ಕಲನಾಡು–ಶಾಸನಗಳು ಮತ್ತು ದೇವಾಲಯಗಳ ಹಿನ್ನೆಲೆಯಲ್ಲಿ ಅಧ್ಯಯನ | ಕ.ವಿ.ವಿ. ಹಂಪಿ |
| ೧೧ | ಶ್ರೀ ನಟರಾಜ್ ಆರ್. | ಡಾ. ಅಶೋಕ ರಂಜಿರೇ | ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಾಂಸ್ಕೃತಿಕ ಹುಡುಕಾಟಗಳು | ಕ.ವಿ.ವಿ. ಹಂಪಿ |
| ೧೨ | ಶ್ರೀ ನಯಿಮೂರು ರೆಹಮಾನ್ | ಡಾ. ವೈ.ಎಚ್. ನಾಯಕವಾಡಿ | Muslim Response to Socio-Political Changes in Princely Mysore (1881-1947) | ಕ.ವಿ.ವಿ. ಹಂಪಿ |

ಶ್ಯಾಮಲಾ ಅವರು ವಹಿಸಿದ್ದರು. ಈ ಗೋಷ್ಠಿಗಳ ನಿರ್ವಹಣೆಯನ್ನು ಕ್ರಮವಾಗಿ ಡಾ. ಅಮರೇಶ ಯತಗಲ್, ಶ್ರೀ ಆರ್. ಶಶಿಧರ್, ಡಾ. ಮುತ್ತುರಾಜು, ಡಾ. ಛಲವಾದಿ, ಡಾ. ಶ್ರೀಶೈಲ ಬಿರಾದಾರ್, ಡಾ. ಶಿವತಾರಕ್, ಡಾ. ತಮಿಳ್ ಸೆಲ್ವಿ, ಶ್ರೀ ಆದಪ್ಪ ಪಾಸೋಡಿ, ಸುಂಕಂ ಗೋವರ್ಧನ್, ಡಾ. ಡಿ.ಎಂ. ನಾಗರಾಜ್, ಡಾ. ಶ್ಯಾಮಲಾ ರತ್ನಕುಮಾರಿ ಡಾ. ಜಯಮ್ಮ ಕರಿಯಣ್ಣ, ಡಾ. ಶಕುಂತಲ ಸಿಂಧೂರ, ಶ್ರೀಮತಿ ಡಿ. ಸ್ಮಿತಾರೆಡ್ಡಿ, ಶ್ರೀ ಜಯದೇವಪ್ಪ ಜೈನಕೇರಿ, ಡಾ. ಉಷಾರಾಣಿ, ಡಾ. ಎಂ.ಎನ್. ನರೇಗಲ್, ಶ್ರೀ ಕೃ.ಸ. ಪಾಂಡುರಂಗ, ಡಾ. ವಿ. ನಾಗರಾಜ್, ಹಾಗೂ ಡಾ. ಎನ್. ನಂದೀಶ್ವರ್ ಯಶಸ್ವಿಯಾಗಿ ನಿರ್ವಹಿಸಿದರು. ಇವರಿಲ್ಲರಿಗೂ ಧನ್ಯವಾದಗಳು.

**ಸಮಾರೋಪ ಸಮಾರಂಭ:** ದಿನಾಂಕ ೧೧–೯–೨೦೧೧ ರಂದು ಸಂಜೆ ಐದು ಗಂಟೆಗೆ ಸಮಾರೋಪ ಸಮಾರಂಭವು ಅಕಾದೆಮಿಯ ಸದಸ್ಯರಾದ ಡಾ. ಬಿ.ಆರ್. ಭಾರತಿ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಕಾರ್ಯದರ್ಶಿ ಡಾ. ಪಿ.ವಿ. ಕೃಷ್ಣಮೂರ್ತಿ ಆರಂಭದಲ್ಲಿ ಸ್ವಾಗತ ಕೋರಿದರು. ಪ್ರತಿನಿಧಿಗಳ ಪರವಾಗಿ ಮಾತನಾಡಿದ ಶ್ರೀಮತಿ ಹನುಮಾಕ್ಷಿ ಗೋಗಿ, ಡಾ. ಇಂದಿರಾ ಹೆಗ್ಡೆ ಹಾಗೂ ಡಾ. ಬಿ. ನಂಜುಂಡಸ್ವಾಮಿ ತಮ್ಮ ಸದಭಿಪ್ರಾಯ ವ್ಯಕ್ತಪಡಿಸಿ ಆಶ್ರಯದಾತರಿಗೆ ಕೃತಜ್ಞತೆ

ಸಲ್ಲಿಸಿದರು. ಈ ಸಮ್ಮೇಳನಕ್ಕೆ ಉತ್ತಮ ಊಟೋಪಚಾರದ ಆತಿಥ್ಯ ನೀಡಿದ ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಫ್ಯಾಮಿಲಿ (ಬಿ.ಆರ್.ಆರ್. ಫ್ಯಾಮಿಲಿ) ಸೇವಾ ಟ್ರಸ್ಟ್‌ನ ಶ್ರೀ ಅಶೋಕುಮಾರ್ ಅವರಿಗೆ ಹಾಗೂ ಸಂಪೂರ್ಣ ಸಹಕಾರ ನೀಡಿದ ಮಿಥಿಕ್ ಸೊಸೈಟಿಯ ಪ್ರಧಾನ ಕಾರ್ಯದರ್ಶಿ ಡಾ. ಎಂ.ಜಿ. ನಾಗರಾಜ್ ಅವರಿಗೂ ಅಕಾದೆಮಿಯ ಪರವಾಗಿ ಸನ್ಮಾನಿಸಿ ಗೌರವಾಧ್ಯಕ್ಷ ಡಾ. ಸೂರ್ಯನಾಥ ಕಾಮತ್ ಮಾತನಾಡಿದರು. ಸಮ್ಮೇಳನಾಧ್ಯಕ್ಷ ಡಾ. ಎಚ್.ಎಸ್. ಗೋಪಾಲರಾವ್ ಅವರು ಸಮ್ಮೇಳನ ಯಶಸ್ವಿಯಾಗಿರುವುದಕ್ಕೆ ಹರ್ಷ ವ್ಯಕ್ತಪಡಿಸುತ್ತಾ, ೨೫ ವಸಂತ ಪೂರೈಸಿರುವ ಅಕಾದೆಮಿಯ ಜವಾಬ್ದಾರಿ ಹೆಚ್ಚಾಗಿದ್ದು, ಅದನ್ನು ಸಮರ್ಥಿಸುವ ಹೊಣೆ ನಮ್ಮೆಲ್ಲರದಾಗಿದೆ ಎಂದು ಅಭಿಪ್ರಾಯಪಟ್ಟರು. ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಪ್ರಭಾರಿ ನಿರ್ದೇಶಕರಾದ ಶ್ರೀ ಸಿದ್ಧನಗೌಡರ ಅವರು ಸಮಾರೋಪ ಭಾಷಣ ಮಾಡಿದರು. ಅಕಾದೆಮಿಯ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ಸಭೆಯನ್ನು ಉದ್ದೇಶಿಸಿ ಅಧ್ಯಕ್ಷೀಯ ಭಾಷಣ ಮಾಡಿದರು. ಡಾ. ಬಿ.ಎಸ್. ಸಿದ್ಧಲಿಂಗಮ್ಮ ಕಾರ್ಯಕ್ರಮದ ನಿರೂಪಕರಾಗಿದ್ದರು. ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ರಾಜೇಂದ್ರಪ್ಪ ಮಾತನಾಡಿ, ಈ ಸಮ್ಮೇಳನವು ಯಶಸ್ವಿಯಾಗುವಲ್ಲಿ ಸಹಕರಿಸಿರುವ ಸರ್ವರಿಗೂ ವಂದನಾರ್ಪಣೆ ಮಾಡುವುದರೊಂದಿಗೆ ೨೫ನೇ ವಾರ್ಷಿಕ ಸಮ್ಮೇಳನವು ಮುಕ್ತಾಯಗೊಂಡಿತು.

**ವಿಚಾರ ಸಂಕಿರಣ**

**ಅಕಾದೆಮಿಯು ಪ್ರಸಕ್ತ ಸಾಲಿನಲ್ಲಿ ಎರಡು ವಿಚಾರ ಸಂಕಿರಣಗಳನ್ನು ಹಮ್ಮಿಕೊಂಡಿದ್ದು ವಿಶೇಷ ಅಂಶವಾಗಿದೆ. ಮೊದಲನೆಯ ವಿಚಾರ ಸಂಕಿರಣವನ್ನು ದಿನಾಂಕ ೧೭-೮-೨೦೧೧ ರಂದು ಹಾಗೂ ಎರಡನೆಯ ವಿಚಾರ ಸಂಕಿರಣವನ್ನು ದಿನಾಂಕ ೨೫ - ೨೬ ಮಾರ್ಚ್ ೨೦೧೨ ರಂದು ಆಯೋಜಿಸಲಾಗಿತ್ತು.**

***ವಿಚಾರ ಸಂಕಿರಣ- ೧ :* "ಕರ್ನಾಟಕದಲ್ಲಿ ಪುರಾತತ್ತ್ವ ಅಧ್ಯಯನ, ಹಿನ್ನೋಟ-ಮುನ್ನೋಟ"**

ಅಕಾದೆಮಿಯ ವತಿಯಿಂದ, "ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ"ದ ಭಾಗವಾಗಿ "ಕರ್ನಾಟಕದಲ್ಲಿ ಪುರಾತತ್ತ್ವ ಅಧ್ಯಯನ ಹಿನ್ನೋಟ-ಮುನ್ನೋಟ" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಒಂದು ದಿನದ ವಿಚಾರ ಸಂಕಿರಣವನ್ನು ದಿನಾಂಕ ೧೭-೮-೨೦೧೧ರ ಬುಧವಾರದಂದು ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಅಂದು ಪೂರ್ವಾಹ್ನ ಡಾ. ಸೂರ್ಯನಾಥ ಯು. ಕಾಮತ್ ಅವರ ಅಧ್ಯಕ್ಷತೆಯಲ್ಲಿ ನಡೆದ ಮೊದಲ ಗೋಷ್ಠಿಯಲ್ಲಿ "ಶಾಸನಗಳ ಅಧ್ಯಯನ" ಕುರಿತು ಶ್ರೀ ಎಸ್. ರಾಜೇಂದ್ರಪ್ಪ, ಹಾಗೂ "ಪುರಾತತ್ತ್ವ ಅಧ್ಯಯನ" ಕುರಿತು ಡಾ. ಎಸ್.ವಿ. ವೆಂಕಟೇಶಯ್ಯ ಸಂಪ್ರಬಂಧ ಮಂಡಿಸಿದರು. ಅಂದು ಅಪರಾಹ್ನ, ಡಾ. ಎಂ.ಜಿ. ನಾಗರಾಜ್ ಅವರ ಅಧ್ಯಕ್ಷತೆಯಲ್ಲಿ ನಡೆದ ಗೋಷ್ಠಿಯಲ್ಲಿ, "ಉತ್ತರ ಕರ್ನಾಟಕದ ದೇವಾಲಯಗಳ ಸಂರಕ್ಷಣೆ" ಕುರಿತು ಡಾ. ಎಸ್.ವಿ. ವೆಂಕಟೇಶಯ್ಯ; "ದಕ್ಷಿಣ ಕರ್ನಾಟಕದ ದೇವಾಲಯಗಳ ಸಂರಕ್ಷಣೆ" ಬಗ್ಗೆ ಶ್ರೀ ಜಿ.ಎಸ್. ನರಸಿಂಹನ್ ಹಾಗೂ 'ವಿಶ್ವ ಪರಂಪರೆ ತಾಣ ಹಂಪಿಯ ಸಂರಕ್ಷಣೆ ಮತ್ತು ಸವಾಲುಗಳು' ಎಂಬ ವಿಷಯದ ಬಗೆ ಎಂ.ವಿ. ವಿಶ್ವೇಶ್ವರ ಅವರು ಸಂಪ್ರಬಂಧ ಮಂಡಿಸಿದರು. ಈ ವಿಚಾರ ಸಂಕಿರಣಕ್ಕೆ, ಆರಂಭದಲ್ಲಿ ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ರಾಜೇಂದ್ರಪ್ಪ ಸ್ವಾಗತ ಕೋರಿದರೆ, ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ವಂದನೆ ಸಲ್ಲಿಸಿದರು.

***ವಿಚಾರ ಸಂಕಿರಣ ೨ :* "ಕರ್ನಾಟಕದ ಕೋಟೆಗಳು - ಪರಂಪರೆ, ವಸ್ತುಸ್ಥಿತಿ"**

ಕಾರ್ಯಕಾರಿ ಸಮಿತಿಯ ನಿರ್ಣಯದಂತೆ ದಿನಾಂಕ ೨೫ ಹಾಗೂ ೨೬ ಮಾರ್ಚ್ ೨೦೧೨ರಂದು ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಸಹಯೋಗದೊಂದಿಗೆ, "ಕರ್ನಾಟಕದ ಕೋಟೆಗಳು-ಪರಂಪರೆ, ವಸ್ತುಸ್ಥಿತಿ" ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಎರಡು ದಿನಗಳ ವಿಚಾರ ಸಂಕಿರಣವನ್ನು ಕನ್ನಡ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಅಕಾದೆಮಿಯ ವತಿಯಿಂದ ಹಮ್ಮಿಕೊಳ್ಳಲಾಗಿತ್ತು. ಈ ವಿಚಾರ ಸಂಕಿರಣಕ್ಕೆ ಸರ್ವಾಧ್ಯಕ್ಷರಾಗಿದ್ದ ಡಾ. ಎಸ್.ಕೆ ಜೋಶಿ ಅವರು ವಿಚಾರ ಸಂಕಿರಣವನ್ನು ಉದ್ಘಾಟಿಸಿ ಭಾಷಣ ಮಾಡಿದರು. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರಾದ ಶ್ರೀ ಕೆ.ಆರ್. ರಾಮಕೃಷ್ಣ ಅವರು ಸಭೆಯನ್ನು ಉದ್ದೇಶಿಸಿ ಆಶಯ ಭಾಷಣ ಮಾಡಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಭಾರತೀಯ ಪುರಾತತ್ತ್ವ ಸರ್ವೇಕ್ಷಣ ಇಲಾಖೆಯ ಡಾ. ಎಸ್.ವಿ. ವೆಂಕಟೇಶಯ್ಯ ನಾಡಿನ ಕೋಟೆಗಳ ಬಗ್ಗೆ ಮಾತನಾಡಿದರು. ಈ ವಿಚಾರ ಸಂಕಿರಣದ ಹಿನ್ನೆಲೆಯಲ್ಲಿ, ಶ್ರೀ ಸುಂಕಂ ಗೋವರ್ಧನ ಅವರು, ಅಕಾದೆಮಿಯ ಕೋರಿಕೆಯಂತೆ ಸಿದ್ಧಪಡಿಸಿದ **"ಕನ್ನಡ ನಾಡಿನ ಪ್ರಮುಖ ಕೋಟೆಗಳು"**

ಕೃತಿಯನ್ನು ಡಾ. ಸೂರ್ಯನಾಥ ಯು. ಕಾಮತ್ ಅವರು ಬಿಡುಗಡೆ ಮಾಡಿ ಮಾತನಾಡಿದರು. ಡಾ. ದೇವರಕೊಂಡಾರೆಡ್ಡಿ ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಪ್ರಧಾನ ಕಾರ್ಯದರ್ಶಿ ಸಭೆಗೆ ಸ್ವಾಗತ ಕೋರಿದರು. ಅಂತಿಮವಾಗಿ ಡಾ. ಪಿ.ವಿ. ಕೃಷ್ಣಮೂರ್ತಿ ವಂದಿಸಿದರು. ಈ ವಿಚಾರ ಸಂಕಿರಣದಲ್ಲಿ ಒಟ್ಟು ನಾಲ್ಕು ಗೋಷ್ಠಿಗಳು ನಡೆದು ಸುಮಾರು ೧೪ ಪ್ರಬಂಧಗಳು ಮಂಡಿಸಲ್ಪಟ್ಟವು. ದಿನಾಂಕ ೨೬ ರಂದು ಮಧ್ಯಾಹ್ನ ನಡೆದ ಸಮಾರೋಪ ಸಮಾರಂಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಬಸವರಾಜು, ಭಾ.ಆ.ಸೇ., ಅವರು ಸಮಾರೋಪ ಭಾಷಣ ಮಾಡಿದರು. **ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ** ಆಯುಕ್ತರಾದ ಶ್ರೀ ಕೆ.ಆರ್. ರಾಮಕೃಷ್ಣ ಅವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಯಾಗಿದ್ದ ಡಾ. ಸೂರ್ಯನಾಥ ಯು. ಕಾಮತ್ ಭಾಷಣವನ್ನು ಮಾಡಿದರು. ಆರಂಭದಲ್ಲಿ ಡಾ. ಮನೋಜ್ ಪ್ರಾರ್ಥನೆ ಮಾಡಿದರೆ, ಶ್ರೀ ಶಶಿಧರ್ ಕಾರ್ಯಕ್ರಮ ನಿರೂಪಣೆ ಮಾಡಿದರು. ಪ್ರಧಾನ ಕಾರ್ಯದರ್ಶಿ ಎಸ್. ರಾಜೇಂದ್ರಪ್ಪ ಸಭೆಗೆ ವಂದನಾರ್ಪಣೆ ಸಲ್ಲಿಸುತ್ತಾ, **ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಹಿಂದಿನ** ಆಯುಕ್ತರಾದ ಶ್ರೀಮತಿ ನೀಲಾ ಮಂಜುನಾಥ್ ಅವರ ಸಹಕಾರವನ್ನು ಸ್ಮರಿಸುವುದರ ಜೊತೆಗೆ ವಿಚಾರ ಸಂಕಿರಣವು ಯಶಸ್ವಿಯಾಗಲು ನೆರವಾಗಿರುವ ಸರ್ವರಿಗೂ ವಂದಿಸುವುದರೊಂದಿಗೆ ವಿಚಾರ ಸಂಕಿರಣವು ಮುಕ್ತಾಯವಾಯಿತು.

**೨೦೧೧ನೆಯ ಸಾಲಿನ ವಾರ್ಷಿಕ ವರದಿ**

ದಿನಾಂಕ ೧೦-೦೯-೨೦೧೧ರ ಶನಿವಾರದಂದು ಸಂಜೆ ೬-೩೦ ಗಂಟೆಗೆ, ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ, ಬೆಂಗಳೂರಿನ ದಿ ಮಿಥಿಕ್ ಸೊಸೈಟಿಯ ಶತಮಾನೋತ್ಸವ ಭವನದಲ್ಲಿ, ಆ ಮೊದಲೇ ಸರ್ವಸದಸ್ಯರಿಗೂ ಪತ್ರಮುಖೇನ ತಿಳಿಸಿದ್ದ ಪ್ರಕಾರ, ಅಕಾದೆಮಿಯ ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸರ್ವಸದಸ್ಯರ ಸಭೆಯ ನಡವಳಿಕೆಗಳು ಈ ಕೆಳಕಂಡಂತಿವೆ.

ಸಭೆಯಲ್ಲಿ ೧೦೯ ಸದಸ್ಯರು ಹಾಜರಿದ್ದರು. ಸರ್ವಸದಸ್ಯರ ಸಭೆಯ ತಿಳುವಳಿಕೆ ಪತ್ರವನ್ನು ಅಂಚೆಯ ಮೂಲಕ ಎಲ್ಲ ಸದಸ್ಯರಿಗೂ ಮೊದಲೇ ಕಳುಹಿಸಲಾಗಿತ್ತು. ವರದಿಯನ್ನು ಪ್ರಧಾನ ಕಾರ್ಯದರ್ಶಿ ಶ್ರೀ ಎಸ್. ರಾಜೇಂದ್ರಪ್ಪ ವಾಚಿಸಿದರು. ಅಧ್ಯಕ್ಷರಾದ ಡಾ. ದೇವರಕೊಂಡಾರೆಡ್ಡಿ ಅವರು ಸಭೆಯನ್ನು ಆರಂಭಿಸಲು ಹಾಜರಿದ್ದ ಸದಸ್ಯರ ಅನುಮತಿ ಕೋರಿದರು. ಸರ್ವಸದಸ್ಯರ ಸಭೆಯ ಆರಂಭಕ್ಕೆ ಅನುಮೋದನೆ ನೀಡಬಹುದೆಂಬ ಡಾ. ಎಸ್.ಕೆ. ಮೇಲಕಾರ ಅವರ ಸೂಚನೆಯನ್ನು ಡಾ. ಎಸ್.ಕೆ. ಜೋಷಿ ಅನುಮೋದಿಸಿದರು. ಸರ್ವಸದಸ್ಯರೂ ಸಭೆಯ ಆರಂಭಕ್ಕೆ ಒಮ್ಮತದಿಂದ ಅನುಮೋದನೆ ನೀಡಿದರು.

ಸರ್ವಸದಸ್ಯರ ಸಭೆಯು ಶ್ರೀ ಶಶಿಧರ್ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ಆನಂತರ ಸಭೆಯಲ್ಲಿ ಹಾಜರಿದ್ದ ಎಲ್ಲ ಸದಸ್ಯರನ್ನೂ ಡಾ. ಬಿ. ರಾಜಶೇಖರಪ್ಪ ಸ್ವಾಗತಿಸಿದರು.

**ಶ್ರದ್ಧಾಂಜಲಿ ಅರ್ಪಣೆ**

ಕಳೆದ ಸರ್ವಸದಸ್ಯರ ಸಭೆಯ ನಂತರ ಈವರೆಗೆ ನಿಧನರಾಗಿರುವ ಅಕಾದೆಮಿಯ ಸದಸ್ಯರ ಹಾಗೂ ಗಣ್ಯರ ನಿಧನಕ್ಕಾಗಿ ಸಭೆಯು ಒಂದು ನಿಮಿಷ ಮೌನಾಚರಣೆಯ ಮೂಲಕ ಶ್ರದ್ಧಾಂಜಲಿ ಅರ್ಪಿಸಿತು. ಶ್ರದ್ಧಾಂಜಲಿಗೆ ಪಾತ್ರರಾದವರ ಹೆಸರುಗಳು ಈ ಕೆಳಕಂಡಂತಿವೆ:

**ಕರ್ನಾಟಕ ಇತಿಹಾಸ ಅಕಾದೆಮಿಯ ದಿವಂಗತ ಸದಸ್ಯರು:** ೧) ಎಂ.ಪಿ. ಪ್ರಕಾಶ್ ೨) ಪಾಸ್ತೆ, ೩) ಎನ್.ಎಸ್. ದಕ್ಷಿಣಮೂರ್ತಿ, ೪). ನಾಗಪ್ಪ ಜಿ.ಆರ್., ೫) ಶಿವಾನಂದ ಮೂರ್ತಿ, ೭) ನಟರಾಜ್.

**ಸದಸ್ಯರೇತರ ಗಣ್ಯರು;** ೧) ಡಾ. ರಾಮಶರಣ್ ಶರ್ಮ, ೨) ಡಾ. ಭೀಮಸೇನ್ ಜೋಷಿ, ೩) ಬಸವರಾಜ ಗುಡಗೇರಿ, ೪) ವಿ.ಎಸ್. ಕೃಷ್ಣ ಅಯ್ಯರ್ ೫) ಡಾ. ಲಿಂಗದೇವರು ಹಳೇಮನೆ.

## ೨೦೧೧ನೆಯ ಸಾಲಿನ ವಾರ್ಷಿಕ ವರದಿ ಮಂಡನೆ ಹಾಗೂ ಅನುಮೋದನೆ

೨೦೧೧ನೆಯ ಸಾಲಿನ ವಾರ್ಷಿಕ ವರದಿಯನ್ನು ಪ್ರಧಾನ ಕಾರ್ಯದರ್ಶಿ ಎಸ್. ರಾಜೇಂದ್ರಪ್ಪ ಮಂಡಿಸಿದರು. ವಾರ್ಷಿಕ ವರದಿಯ ಮುದ್ರಿತ ಪ್ರತಿಗಳನ್ನು ಸಭೆಯ ಆರಂಭದಲ್ಲೇ ಹಾಜರಿದ್ದ ಎಲ್ಲ ಸದಸ್ಯರಿಗೂ ವಿತರಿಸಲಾಗಿತ್ತು. ಆ ಕಾರಣ ಅದರ ವಾಚನದ ಅವಶ್ಯಕತೆ ಇಲ್ಲವೆಂದು ಹಾಜರಿದ್ದ ಸದಸ್ಯರೆಲ್ಲ ಘೋಷಿಸಿದರು. ೨೦೧೧ನೆಯ ಸಾಲಿನ ವರದಿಯನ್ನು ಸ್ವೀಕರಿಸಬಹುದೆಂಬ ಬೆಂಗಳೂರಿನ ಶ್ರೀ ಎಂ.ಬಿ. ಪಾಟೀಲ ಅವರ ಸೂಚನೆಯನ್ನು ಬೆಂಗಳೂರಿನ ಶ್ರೀ ಎಂ.ಆರ್. ಚಂದ್ರಶೇಖರ್ ಅನುಮೋದಿಸಿದರು.

## ೨೦೧೧ನೆಯ ಸಾಲಿನ ಪರಿಶೋಧಿತ ಲೆಕ್ಕ ಪತ್ರ ಮಂಡನೆ ಹಾಗೂ ಅನುಮೋದನೆ

೨೦೧೧ನೆಯ ಸಾಲಿನ ವರದಿಯ ಜೊತೆಗೆ ೨೦೧೧ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಮುದ್ರಿತ ಪ್ರತಿಗಳನ್ನು ಸದಸ್ಯರಿಗೆ ನೀಡಲಾಗಿತ್ತು. ಅದನ್ನು ಕೋಶಾಧಿಕಾರಿ ಡಾ. ತುಳಸಿರಾಮ ನಾಯಕ್ ಮಂಡಿಸಿದರು. ಅಕಾದೆಮಿಯ ಆಯ-ವ್ಯಯದ ಬಗ್ಗೆ ಶ್ರೀ ತಾರಾನಾಥ, ಶ್ರೀ ಎಸ್. ಸುಮತೀಂದ್ರ ನಾಡಿಗ್, ಡಾ. ಎಚ್. ಚಂದ್ರಶೇಖರ್, ಡಾ. ಬಾಲಕೃಷ್ಣ ಹೆಗ್ಡೆ ಮುಂತಾದವರು ಮಾತನಾಡಿ ಸಲಹೆ ಸೂಚನೆಗಳನ್ನು ನೀಡಿದರು. ೨೫ನೆಯ ವಾರ್ಷಿಕ ಸಮ್ಮೇಳನದ ಸಂದರ್ಭದಲ್ಲಿ ಜಾಹಿರಾತುಗಳ ಮೂಲಕ ದೇಣಿಗೆ ಸಂಗ್ರಹಿಸಿ ಸದಸ್ಯರ ಲೇಖನಗಳನ್ನೊಳಗೊಂಡ ಸ್ಮರಣ ಸಂಚಿಕೆಯೊಂದನ್ನು ವಿಶೇಷ ಸಂಚಿಕೆಯಾಗಿ ಹೊರತರಬಹುದಾಗಿತ್ತೆಂದು ಅಭಿಪ್ರಾಯಪಟ್ಟರು. ಆಗ ಮಾತನಾಡಿದ ಡಾ. ಕಾಮತರು ಈ ಯೋಚನೆ ನಮಗೂ ಇತ್ತು. ಆದರೆ ಸಮಯಾಭಾವದಿಂದಾಗಿ ಮಾಡಲಾಗಿಲ್ಲ, ಜಾಹಿರಾತುಗಳ ಸಂಗ್ರಹ, ಆರ್ಥಿಕ ದೃಷ್ಟಿಯಿಂದ ಆಕರ್ಷಕವೆನಿಸಿದರೂ ಸಂಚಿಕೆಯ ಗುಣಮಟ್ಟಕ್ಕೆ ಹಿನ್ನಡೆ ಉಂಟಾಗುತ್ತದೆ. ಆ ಕಾರಣ ಅಕಾದೆಮಿಯು ಅದಕ್ಕೆ ಪರ್ಯಾಯ ವ್ಯವಸ್ಥೆ ಮಾಡಿಕೊಳ್ಳುವುದು ಸೂಕ್ತವೆಂದು ಅಭಿಪ್ರಾಯಪಟ್ಟರು.

ಅಕಾದೆಮಿಯ ಬೆಳವಣಿಗೆಗೆ ಆರ್ಥಿಕ ಕೊರತೆಗಳೆಂದೂ ಅಡ್ಡಿಯಾಗಿಲ್ಲ. ಅಕಾದೆಮಿಯ ಒಂದನೇ, ೧೨ನೇ ಹಾಗೂ ೨೫ನೇ ಸಮ್ಮೇಳನಗಳನ್ನು ಬೆಂಗಳೂರಿನಲ್ಲೇ ಮಾಡಿದ್ದೇವೆ. ದಾನಿಗಳಿಂದಾಗಿ ಎಲ್ಲವೂ ಯಶಸ್ವಿಯಾಗಿವೆ ಎಂದೂ ಡಾ. ಕಾಮತರು ಸಭೆಗೆ ತಿಳಿಸಿದರು. ೨೦೧೧ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳನ್ನು ಒಪ್ಪಬಹುದೆಂಬ ಸೂಚನೆಯನ್ನು ಡಾ. ಎಚ್. ಚಂದ್ರಶೇಖರ್ ನೀಡಿದರು. ಆ ಸೂಚನೆಯನ್ನು ಡಾ. ಕೆ.ಆರ್. ಗಣೇಶ್ ಅನುಮೋದಿಸಿದರು.

## ೨೦೧೧-೧೨ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳ ಮಂಡನೆ ಹಾಗೂ ಅನುಮೋದನೆ

೨೦೧೧ನೆಯ ಸಾಲಿನ ಪರಿಶೋಧಿತ ಲೆಕ್ಕಪತ್ರಗಳ ಜೊತೆಗೆ ೨೦೧೧-೧೨ನೆಯ ಸಾಲಿನ ಮುಂಗಡ ಲೆಕ್ಕಪತ್ರಗಳ ಪ್ರತಿಗಳನ್ನೂ ಸದಸ್ಯರಿಗೆ ನೀಡಲಾಗಿತ್ತು. ಅದನ್ನು ಡಾ. ತುಳಸಿರಾಮ ನಾಯಕ್ ಮಂಡಿಸಿದರು. ೨೦೧೧ರ ಖೋತಾ ಬಜೆಟನ್ನು ಹೇಗೆ ಸರಿದೂಗಿಸುವುದೆಂಬುದರ ಬಗ್ಗೆ ಬಹಳ ಚರ್ಚೆಯಾಯಿತು. ಆಗ ಮಾತನಾಡಿದ ಶ್ರೀ ಎಂ.ಬಿ. ಪಾಟೀಲರು ಕಾರ್ಪೊರೇಟ್ ನಿಧಿಯಿಂದ ಅದನ್ನು ಸರಿದೂಗಿಸಬಹುದೆಂದೂ, ಅದಕ್ಕೆ ಸರ್ವಸದಸ್ಯರ ಸಭೆ ಅನುಮೋದನೆ ನೀಡಬೇಕಾಗುತ್ತದೆಂದು ಅಭಿಪ್ರಾಯಪಟ್ಟರು. ೨೦೧೧ನೆಯ ಸಾಲಿನ ಮುಂಗಡ ಬಜೆಟ್‌ನ್ನು ಒಪ್ಪಬಹುದೆಂದು ಡಾ. ಪಿ.ಎನ್. ನರಸಿಂಹಮೂರ್ತಿ ಸೂಚಿಸಿದರು. ಆ ಸೂಚನೆಯನ್ನು ಶ್ರೀ ಎಂ.ಎನ್. ಪ್ರಭಾಕರ್ ಅನುಮೋದಿಸಿದರು. ಸರ್ವಸದಸ್ಯರ ಅನುಮೋದನೆಯೂ ದೊರೆಯಿತು.

## ಆರ್ಥಿಕ ವರ್ಷದ ಮಾರ್ಪಾಡಿಗಾಗಿ ಠರಾವು ಮಂಡನೆ ಹಾಗೂ ಅನುಮೋದನೆ

ಈವರೆಗೆ ಜನವರಿ-ಡಿಸೆಂಬರ್ ಅವಧಿಯನ್ನು ಅಕಾದೆಮಿಯ ಆರ್ಥಿಕ ವರ್ಷಾವಧಿ ಎಂದು ಪರಿಗಣಿಸಲಾಗುತ್ತಿತ್ತು. ಆದರೆ, ಈ ಸಾಲಿನಿಂದ ಅಕಾದೆಮಿಯ ಆರ್ಥಿಕ ವರ್ಷವನ್ನು ಏಪ್ರಿಲ್-ಮಾರ್ಚ್ ಅವಧಿಗೆ ಪರಿಗಣಿಸಬೇಕೆಂದು ಲೆಕ್ಕಪರಿಶೋಧಕರು ಸೂಚಿಸಿದ್ದು, ಇದರಿಂದಾಗಿ ಪ್ರಸ್ತುತ ಸಾಲಿನಲ್ಲಿ ೧೨ಕ್ಕೆ ಬದಲು ೧೫ ತಿಂಗಳನ್ನು ಲೆಕ್ಕಾಚಾರಕ್ಕೆ ಪರಿಗಣಿಸಬೇಕಾಗುತ್ತದೆ. ಆದರೆ ಮುಂದಿನ ವರ್ಷದಿಂದ ಏಪ್ರಿಲ್ ಒಂದರಿಂದ ಮಾರ್ಚ್ ೩೧ರ ಅವಧಿಯು ಅಕಾದೆಮಿಯ ಲೆಕ್ಕಪತ್ರ ವ್ಯವಹಾರದ ಆರ್ಥಿಕ ವರ್ಷಾವಧಿಯಾಗಲಿದೆಯೆಂದು ತಿಳಿಸಿದ್ದರು. ಅಲ್ಲದೇ, ಈ ಸಂಬಂಧ ಠರಾವೊಂದನ್ನು ಅಕಾದೆಮಿಯ ಸರ್ವಸದಸ್ಯರ ಸಭೆಯಲ್ಲಿಟ್ಟು, ಸರ್ವಸದಸ್ಯರ ಅನುಮೋದನೆ ಪಡೆದ ನಂತರ ಇದನ್ನು ಅನುಷ್ಠಾನಕ್ಕೆ ತರಬಹುದೆಂದು ಸೂಚಿಸಿದ್ದರು. ಅದರಂತೆ ಈ ಅಂಶವನ್ನು ಸರ್ವಸದಸ್ಯರ ಸಭೆಯ ಗಮನಕ್ಕೆ ತರಲಾಯಿತು. ಈ

ವಿಚಾರವನ್ನು ಆಲಿಸಿದ ಸಭೆಯು ಅದರಂತೆ ಆರ್ಥಿಕ ವರ್ಷದ ಲೆಕ್ಕಾಚಾರಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಠರಾವನ್ನು ಸರ್ವಾನುಮತದಿಂದ ಅಂಗೀಕರಿಸಿತು.

**ಠರಾವು ಸ್ವೀಕಾರ**

**ಲೆಕ್ಕಪರಿಶೋಧಕರು ಸೂಚಿಸಿರುವಂತೆ ಅಕಾಡೆಮಿಯ ಆರ್ಥಿಕ ವರ್ಷಾವಧಿಯನ್ನು ಇನ್ನು ಮುಂದೆ ಜನವರಿ ಒಂದರಿಂದ ೩೧ ಡಿಸೆಂಬರ್‌ಗೆ ಬದಲಾಗಿ ಏಪ್ರಿಲ್ ಒಂದರಿಂದ ಮಾರ್ಚ್ ೩೧ಕ್ಕೆ ಎಂದು ಪರಿಗಣಿಸಬೇಕು. ಇದರಿಂದಾಗಿ ೨೦೧೧ ರ ಸಾಲಿನಲ್ಲಿ ೧೫ ತಿಂಗಳ (ಜನವರಿ ೨೦೧೦–ಮಾರ್ಚ್ ೨೦೧೧) ಲೆಕ್ಕಾಚಾರವನ್ನು ಮಾಡಬೇಕಾಗುತ್ತದೆ. ಆನಂತರ ಮುಂದಿನ ವರ್ಷದಿಂದ ಅಕಾಡೆಮಿಯ ಆರ್ಥಿಕ ವರ್ಷವನ್ನು ಏಪ್ರಿಲ್ ೨೦೧೧ ಮಾರ್ಚ್ ೨೦೧೨ ಎಂದು ಪರಿಗಣಿಸಬೇಕೆಂಬ ಠರಾವನ್ನು ಈ ಸರ್ವಸದಸ್ಯರ ಸಭೆಯು ಸರ್ವಾನುಮತದಿಂದ ಅಂಗೀಕರಿಸುತ್ತದೆ.**

ಎಂಬ ಈ ಠರಾವನ್ನು ಒಪ್ಪಬಹುದೆಂಬ ಡಾ. ಎಚ್. ಚಂದ್ರಶೇಖರ್ ಅವರ ಸೂಚನೆಯನ್ನು ಡಾ. ಬಾಲಕೃಷ್ಣ ಹೆಗ್ಡೆ ಅನುಮೋದಿಸಿದರು. ಅದಕ್ಕೆ ಸರ್ವಸದಸ್ಯರೂ ಸಹಮತ ವ್ಯಕ್ತಪಡಿಸಿದರು.

**೨೦೧೧ನೆಯ ಸಾಲಿಗೆ ಆಡಿಟರ್ ನೇಮಕ**

ಈವರೆಗೆ ಅಕಾದೆಮಿಯ ಲೆಕ್ಕಪತ್ರಗಳನ್ನು ಪರಿಶೋಧಿಸಿ ಕೊಟ್ಟಿರುವ ಶ್ರೀ ಕೆ.ವಿ. ಆಚಾರ್ಯ ಅಂಡ್ ಕಂಪೆನಿ, ಬೆಂಗಳೂರು ಅವರನ್ನೇ ೨೦೧೧ನೆಯ ಸಾಲಿನ ಲೆಕ್ಕಪತ್ರಗಳ ಪರಿಶೋಧನೆಗೆ ಸೂಕ್ತ ಸಂಭಾವನೆಯನ್ನು ನೀಡಿ ನೇಮಿಸಿಕೊಳ್ಳಬಹುದೆಂಬ ಡಾ. ಬಾಲಕೃಷ್ಣ ಹೆಗ್ಡೆ ಸೂಚಿಸಿದರು. ಆ ಸೂಚನೆಯನ್ನು ಶ್ರೀ ಶಶಿಧರ್ ಅನುಮೋದಿಸಿದರು. ಸರ್ವಸದಸ್ಯರೂ ಇದನ್ನು ಅನುಮೋದಿಸಿದರು.

**ಇತರೆ ಠರಾವುಗಳ ಮಂಡನೆ**

**ಬೇಗೂರು (ಬೆಂಗಳೂರು ಜಿಲ್ಲೆ) ಸೇರಿದಂತೆ ನಾಡಿನ ವಿವಿಧೆಡೆಯಲ್ಲಿರುವ ಅರಕ್ಷಿತ ಪ್ರಾಚೀನ ಸ್ಮಾರಕಗಳನ್ನು ಜೀರ್ಣೋದ್ಧಾರ–ದುರಸ್ತಿಯ ಹೆಸರಿನಲ್ಲಿ ಸ್ಥಳೀಯ ಸಮಿತಿ, ವ್ಯಕ್ತಿಗಳು ಮನಸ್ಸೋ ಇಚ್ಛೆ ಮಾರ್ಪಡಿಸುತ್ತಿದ್ದು, ಹಾಗೆ ಮಾಡುವಲ್ಲಿ ಸ್ಮಾರಕಗಳ ಮೂಲಸ್ವರೂಪವನ್ನು ಉಳಿಸಿಕೊಳ್ಳದೆ ಪರಿಸರವನ್ನು ಸಾಕಷ್ಟು ಹದಗೆಡಿಸಲಾಗುತ್ತಿದೆ. ಇದು ನಿಲ್ಲಬೇಕು ಎಂದು ಸರ್ವಸದಸ್ಯರ ಈ ಸಭೆಯು ಒತ್ತಾಯಿಸುತ್ತದೆ.**

ಎಂಬ ಈ ಠರಾವನ್ನು ಅಂಗೀಕರಿಸಬೇಕೆಂಬ ಶ್ರೀ ಸುಂ.ಕಂ. ಗೋವರ್ಧನ್ ಅವರ ಸೂಚನೆಯನ್ನು ಶ್ರೀ ಜಿ.ಕೆ. ದೇವರಾಜಸ್ವಾಮಿ ಅನುಮೋದಿಸಿದರು. ಸರ್ವಸದಸ್ಯರು ಇದಕ್ಕೆ ದನಿಗೂಡಿಸಿದರು.

ಆಗ ಮಾತನಾಡಿದ ಡಾ. ಎಚ್. ಚಂದ್ರಶೇಖರ ತಮ್ಮ ಅನುಭವವನ್ನು ಹಂಚಿಕೊಳ್ಳುತ್ತಾ ಸಾರ್ವಜನಿಕ ಹಿತಾಸಕ್ತಿ ಕಟ್ಲೆ ಹಾಕುವ ಮೂಲಕ ಇದನ್ನು ತಡೆಗಟ್ಟಬಹುದೆಂದು ತಿಳಿಸಿದರು. ಚರ್ಚೆ ಮುಂದುವರಿದು, ಡಾ. ಎಸ್.ಕೆ. ಮೇಲಕಾರ ಅವರು, ಗಣಿ ಉದ್ಯಮದಿಂದಾಗಿ ಶಿಲಾಯುಗ ನೆಲೆಗಳೂ ಸೇರಿದಂತೆ ಸ್ಮಾರಕಗಳು ನಾಶವಾಗುತ್ತಿವೆ. ಇದು ತುರ್ತು ನಿಲ್ಲಬೇಕಿದೆ ಎಂದು ಅಭಿಪ್ರಾಯಪಟ್ಟರು. ಮುಜರಾಯಿ ಇಲಾಖೆಯ ನಿಯಂತ್ರಣದಲ್ಲಿ ಸಾವಿರಾರು ದೇವಾಲಯಗಳಿವೆ. ಅವುಗಳೂ ಈ ಬಗೆಯ ಜೀರ್ಣೋದ್ಧಾರಕ್ಕೆ ಬಲಿಯಾಗುತ್ತಿವೆ. ಅದನ್ನು ತುರ್ತಾಗಿ ನಿಯಂತ್ರಿಸಬೇಕಿದೆ ಎಂದು ಡಾ. ಬಾಲಕೃಷ್ಣ ಹೆಗ್ಡೆ ಸಭೆಗೆ ತಿಳಿಸಿದರು. ಆಗ ಮಾತನಾಡಿದ ಡಾ. ಕಾಮತರು ಪ್ರಾಚೀನ ಸ್ಮಾರಕಗಳ ಸಂರಕ್ಷಣೆಯಾಗಬೇಕಿದೆ. ಈ ನಿಟ್ಟಿನಲ್ಲಿ ಕೋಟೆಗಳ ರಕ್ಷಣೆಗೆ ವಿಶೇಷ ಪ್ರಾಧಿಕಾರವೊಂದರ ರಚನೆಯ ಅಗತ್ಯವಿದೆ ಎಂದು ಸೂಚಿಸಿದರು. ಇದನ್ನು ಸರ್ವಸದಸ್ಯರ ಸಭೆಯು ಸ್ವಾಗತಿಸಿತು. ಅದರಂತೆ ಠರಾವನ್ನೂ ಅಂಗೀಕರಿಸಿತು. ಆ ಪ್ರಕಾರ

**ನಾಡಿನಲ್ಲಿರುವ ಪ್ರಾಚೀನ ಕೋಟೆಗಳು ಅನಧೀಕೃತ ಒತ್ತುವರಿಗೆ ಬಲಿಯಾಗುತ್ತಿವೆ, ಅವುಗಳ ರಕ್ಷಣೆಗಾಗಿ ಪ್ರತ್ಯೇಕ ಕೋಟೆ ಪ್ರಾಧಿಕಾರವನ್ನು ರಚಿಸುವಂತೆ ಈ ಮೂಲಕ ಸರ್ವಸದಸ್ಯರ ಸಭೆಯು ಸರ್ಕಾರವನ್ನು ಒತ್ತಾಯಿಸುತ್ತದೆ** ಎಂಬ ಈ ಠರಾವನ್ನು ಸಭೆಯು ಅಂಗೀಕರಿಸಿತು.

ಇತಿಹಾಸ ದರ್ಶನ ಸಂಚಿಕೆಗೆ ಈಗ ಐ.ಎಸ್.ಬಿ.ಎನ್., ಸಂಖ್ಯೆ ಲಭಿಸಿದೆ. ಇದು ಸ್ವಾಗತಾರ್ಹ ವಿಚಾರ. ಸಮ್ಮೇಳನದಲ್ಲಿ ಪ್ರಬಂಧಗಳೂ ಗಣನೀಯವಾಗಿ ಹೆಚ್ಚುತ್ತಿವೆ. ಈ ಹಿನ್ನೆಲೆಯಲ್ಲಿ ಗುಣಮಟ್ಟ ಕಾಯ್ದುಕೊಳ್ಳುವ ದೃಷ್ಟಿಯಿಂದ ಸೂಕ್ತ ಕ್ರಮ

ಕೈಗೊಳ್ಳಬೇಕೆಂದು ಶ್ರೀಮತಿ ಹನುಮಾಕ್ಷಿ ಗೋಗಿ ಸಭೆಗೆ ತಿಳಿಸಿದರು. ಈ ಚರ್ಚೆಯಲ್ಲಿ ಇನ್ನಷ್ಟು ಸದಸ್ಯರು ಭಾಗವಹಿಸಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಈ ನಿಟ್ಟಿನಲ್ಲಿ ಸೂಕ್ತ ತೀರ್ಮಾನ ಕೈಗೊಳ್ಳಲಾಗುವುದೆಂದು ಡಾ. ಕಾಮತರು ಸಭೆಗೆ ತಿಳಿಸಿದರು.

**ಅಕಾದೆಮಿಯ ೨೬ನೇ ವಾರ್ಷಿಕ ಸಮ್ಮೇಳನ**

ಅಕಾದೆಮಿಯ ೨೬ನೇ ವಾರ್ಷಿಕ ಸಮ್ಮೇಳನವನ್ನು ಆಯೋಜಿಸಲು ತಿಪಟೂರಿನಿಂದ ಆಹ್ವಾನವಿದೆ ಎಂದು ಡಾ. ಕಾಮತ್ ಹೇಳಿದರಾದರೂ, ಅಧಿಕೃತವಾಗಿ ಆಹ್ವಾನ ಬರಬೇಕಿದೆ ಎಂದು ಸಭೆಗೆ ತಿಳಿಸಿದರು. ಶೃಂಗೇರಿಯಿಂದ ಬಹಳ ಹಿಂದಿನಿಂದಲೂ ಆಹ್ವಾನವಿದೆ. ಮುಂದಿನ ದಿನಗಳಲ್ಲಿ ಇದನ್ನು ತೀರ್ಮಾನಿಸುವಲ್ಲಿ ಸೂಕ್ತ ಕ್ರಮ ಕೈಗೊಳ್ಳುವುದಾಗಿ ಡಾ. ಕಾಮತ್ ಸಭೆಗೆ ತಿಳಿಸಿದರು.

**ಸದಸ್ಯರಿಂದ ದೇಣಿಗೆ**

೨೫ನೆಯ ಸಮ್ಮೇಳನದ ಸರ್ವಸದಸ್ಯರ ಸಭೆಯಲ್ಲಿ ವಿವಿಧ ಸದಸ್ಯರು ನೀಡಿದ ಒಟ್ಟು ದೇಣಿಗೆ ೨೫,೦೦೬ ರೂಪಾಯಿಗಳಲ್ಲಿ ರೂ. ೨೦,೦೦೦ ಚೆಕ್ ಹಾಗೂ ನಗದು ರೂಪದಲ್ಲಿ ಸಂಗ್ರಹವಾಗಿದ್ದು, ದೇಣಿಗೆ ನೀಡಿದ ಸದಸ್ಯರ ವಿವರ ಕೆಳಕಂಡಂತಿದೆ; ೧) ಪ್ರೊ. ಮಲ್ಲಿಕಾರ್ಜುನಪ್ಪ, ದಾವಣಗೆರೆ – ರೂ. ೧,೦೦೦/, ೨) ಡಾ. ಸಿ.ಆರ್. ಶ್ಯಾಮಲಾ, ಮುಂಬಯಿ – ರೂ. ೫,೦೦೦/–, ೩) ಡಾ. ಬಿಆರ್. ಭಾರತಿ, ಬೆಂಗಳೂರು – ರೂ. ೧೦೦೧/–, ೪) ಡಾ. ಜಯಮ್ಮ ಕರಿಯಣ್ಣ, ಬೆಂಗಳೂರು – ರೂ. ೧೦೦೦/–, ೫) ಶ್ರೀ ಎಂ. ಲೋಕೇಶ್, ಬೆಂಗಳೂರು – ರೂ. ೫,೦೦೦/–, ೬) ಶ್ರೀ ವೆಂಕಟೇಶಮೂರ್ತಿ, ಬೆಂಗಳೂರು – ರೂ. ೫೦೧/–, ೭) ಶ್ರೀ ಕೆ. ತಿಮ್ಮೇಗೌಡ, ಬೆಂಗಳೂರು – ರೂ. ೫೦೧/–, ೮) ಡಾ. ಕೆ.ಅರ್. ಗಣೇಶ್, ಬೆಂಗಳೂರು – ರೂ. ೧,೦೦೦/–, ೯) ಡಾ. ಎ.ಕೆ. ಶಾಸ್ತ್ರಿ, ಬೇಂಗಳೂರು – ರೂ. ೫,೦೦೦/ – ಹಾಗೂ ೧೦) ಡಾ. ಬೆಂ.ಶಾ. ಶ್ಯಾಮಲಾರತ್ನಕುಮಾರಿ, ಬೆಂಗಳೂರು – ರೂ. ೫,೦೦೦/– ಈ ಎಲ್ಲರಿಗೂ ಅಕಾದೆಮಿಯು ಕೃತಜ್ಞತೆ ಸಲ್ಲಿಸುತ್ತದೆ.

**ಅಧ್ಯಕ್ಷರ ಭಾಷಣ**

ಸರ್ವಸದಸ್ಯರ ಸಭೆಯ ಅಧ್ಯಕ್ಷತೆ ವಹಿಸಿದ್ದ ಡಾ. ದೇವರಕೊಂಡಾರೆಡ್ಡಿ ಅವರು ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನವನ್ನು ನಡೆಸಲು ಆರ್ಥಿಕ ನೆರವನ್ನು ನೀಡಿರುವ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಸ್ಥಳಾವಕಾಶ ಕಲ್ಪಿಸಿ, ಎಲ್ಲಾ ರೀತಿಯಲ್ಲಿ ಸಹಕರಿಸಿರುವ ದಿ ಮಿಥಿಕ್ ಸೊಸೈಟಿ, ಹಾಗೂ ಊಟೋಪಚಾರ ಒದಗಿಸಿರುವ ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಸೇವಾ ಟ್ರಸ್ಟ್‌ನ ಶ್ರೀ ಅಶೋಕ ಕುಮಾರ್‌ರವರಿಗೂ ವಂದನೆ ಸಲ್ಲಿಸಿದರು. ೨೫ನೆಯ ಸಮ್ಮೇಳನವು ಯಶಸ್ವಿಯಾಗುವಲ್ಲಿ ಸಹಕರಿಸಿದ ಎಲ್ಲಾ ಗಣ್ಯರಿಗೆ ಧನ್ಯವಾದಗಳನ್ನು ಕೋರುತ್ತಾ, ಅಕಾದೆಮಿಯ ಪ್ರಗತಿಗೆ ಸದಸ್ಯರ ಸಹಕಾರವೇ ಮುಖ್ಯ ಎಂದು ತಿಳಿಸುತ್ತಾ ಮುಂದೆಯೂ ಸಹಕಾರ ನೀಡುವಂತೆ ಕೋರಿದರು.

**ಕೃತಜ್ಞತೆ**

ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ, ಎಲ್ಲ ಸದಸ್ಯರಿಗೂ ಸಂತೋಷವಾಗುವಂತೆ ಸಮರ್ಥವಾಗಿ ಸಮ್ಮೇಳನವನ್ನು ನಡೆಸುವಲ್ಲಿ ಸಹಕರಿಸಿರುವ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ದಿ ಮಿಥಿಕ್ ಸೊಸೈಟಿ, ಹಾಗೂ ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಸೇವಾ ಟ್ರಸ್ಟ್‌ನ ಶ್ರೀ ಅಶೋಕ ಕುಮಾರ್‌ರವರಿಗೂ, ಗೌರವಪೂರ್ವಕ ಅಭಿನಂದನೆ ಸಲ್ಲಿಸಲಾಯಿತು. ಆಶ್ರಯ ನೀಡಿದ ಮತ್ತು ಸಹಕರಿಸಿದ ಎಲ್ಲರಿಗೂ, ಸಭೆಯಲ್ಲಿ ಹಾಜರಿದ್ದ ಅಕಾದೆಮಿಯ ಸದಸ್ಯರಿಗೂ, ಸಭೆಯ ಕಾರ್ಯಕ್ರಮವನ್ನು ನಿರೂಪಿಸಿದ ಡಾ. ಬಿ.ಜಿ. ಸಿದ್ದಲಿಂಗಮ್ಮ ಅವರಿಗೂ ಕಾರ್ಯದರ್ಶಿಗಳಾದ ಶ್ರೀ ಎಸ್. ರಾಜೇಂದ್ರಪ್ಪ ಧನ್ಯವಾದ ಸಲ್ಲಿಸುವುದರೊಂದಿಗೆ ಸರ್ವಸದಸ್ಯರ ಸಭೆಯು ಮುಕ್ತಾಯವಾಯಿತು.

**೨೦೧೧ರ ಸಾಲಿನ ಕಾರ್ಯಕಾರೀ ಸಮಿತಿಯ ಸಭೆಗಳು**

೨೦೧೧ರ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರಿ ಸಮಿತಿಯ ಸಭೆಯು ಒಟ್ಟು ನಾಲ್ಕು ಬಾರಿ (೧೦–೯– ೨೦೧೧, ೧೩–೧–೨೦೧೨, ೨೭–೮–೨೦೧೨, ಹಾಗೂ ೦೫–೯–೨೦೧೨) ನಡೆದಿದೆ. ಸದಸ್ಯರು ಕಾರ್ಯಕಾರಿ ಸಮಿತಿಯ

ಸಭೆಗಳಲ್ಲಿ ಖುದ್ದು ಹಾಜರಿದ್ದು ಅಥವಾ ಪತ್ರದ ಮೂಲಕ ಇಲ್ಲವೇ ದೂರವಾಣಿ, ಎಸ್.ಎಂ.ಎಸ್. ವಿದ್ಯುನ್ಮಾನ ಟಪಾಲು ಮೂಲಕ ಸೂಚನೆ, ಒಪ್ಪಿಗೆಗಳನ್ನು ನೀಡಿ ಅಕಾದೆಮಿಯ ಯಶಸ್ಸಿಗೆ ಸಹಕರಿಸುತ್ತಿದ್ದಾರೆ. ಅದಕ್ಕಾಗಿ ಅವರಿಗೆ ಧನ್ಯವಾದಗಳು.

**ಅಕಾದೆಮಿಯ ಸದಸ್ಯಬಲ**

ಈ ಸಮ್ಮೇಳನದ ಆರಂಭದ ವೇಳೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ಸದಸ್ಯತ್ವ ಬಲ ಈ ಕೆಳಕಂಡಂತಿದೆ.

| ಆಜೀವ | ಸಾಮಾನ್ಯ | ಸಂಸ್ಥೆ | ಒಟ್ಟು |
|---|---|---|---|
| ೧೬೦೪ | ೩ | ೪೯ | ೧೬೫೬ |

**ಅಕಾದೆಮಿಯ ಜಿಲ್ಲಾ ಘಟಕಗಳು**

**ಬೆಂಗಳೂರು ನಗರ ಜಿಲ್ಲಾ ಘಟಕ:** ಡಾ. ಇಂದಿರಾ ಹೆಗ್ಡೆ ಅವರ ಅಧ್ಯಕ್ಷತೆಯಲ್ಲಿ ಹಾಗೂ ಆರ್. ಶಶಿಧರ್ ಪ್ರಧಾನ ಕಾರ್ಯದರ್ಶಿತ್ವದಲ್ಲಿ ಬೆಂಗಳೂರು ಘಟಕವು ಕಾರ್ಯ ನಿರ್ವಹಿಸುತ್ತಿದ್ದು, ಎಂದಿನಂತೆ ಈ ವರ್ಷವೂ ಕೂಡ ಅದು ಬೆಂಗಳೂರು ನಗರದ ಪ್ರೌಢಶಾಲೆ, ಪದವಿಪೂರ್ವ ಹಾಗೂ ಪದವಿ ಕಾಲೇಜುಗಳಲ್ಲಿ ವ್ಯಾಸಂಗಾರ್ಥಿಗಳಿಗೆ ಪ್ರಬಂಧ ಹಾಗೂ ಭಾಷಣ ಸ್ಪರ್ಧೆಗಳನ್ನು ಏರ್ಪಡಿಸಿ ಬಹುಮಾನ ಪಾರಿತೋಷಕಗಳನ್ನು ನೀಡಿ ಪ್ರೋತ್ಸಾಹಿಸುತ್ತಿದೆ. ಈ ಸ್ಪರ್ಧೆಗಳಿಗಾಗಿ ಡಾ. ಜಿ.ಎಸ್. ದೀಕ್ಷಿತ್, ಡಾ. ಸೂರ್ಯನಾಥ ಕಾಮತ್, ಶ್ರೀ ಅಂಗದ್, ಶ್ರೀಮತಿ ಎ.ವಿ. ವರಮಹಾಲಕ್ಷ್ಮೀ ಮತ್ತು ಶ್ರೀ ಬಿ. ರಾಮಣ್ಣ ಹಾಗೂ ಶ್ರೀಮತಿ ಇಂದಿರಾ ಅವರ ಹೆಸರಿನಲ್ಲಿ ಪರ್ಯಾಯ ಪಾರಿತೋಷಕಗಳನ್ನು ನೀಡಲಾಗುತ್ತಿದೆ. ಶ್ರೀ ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಶ್ರೀ ಗಾಳಿಸ್ವಾಮಿ ಅವರು ಶ್ರೀ ಅಂಗದ್ ಸ್ಮಾರಕ ಪರ್ಯಾಯ ಪಾರಿತೋಷಕದ ಜೊತೆಗೆ ಎಲ್ಲ ಸ್ಪರ್ಧೆಗಳ ಬಹುಮಾನ ವಿಜೇತರಿಗೆ ನಗದು ಬಹುಮಾನಗಳನ್ನು ಪ್ರಾಯೋಜಿಸಿ, ಸಹಕರಿಸುತ್ತಿದ್ದಾರೆ.




೨೦೧೧-೧೧ ಹಾಗೂ ೨೦೧೧-೧೨ಕ್ಕೆ ಹೊಸ ಕಾರ್ಯಕಾರಿ ಸಮಿತಿಯನ್ನು ಬೆಂಗಳೂರು ಘಟಕವು ರಚಿಸಿಕೊಂಡಿದ್ದು, ಡಾ. ಇಂದಿರಾ ಹೆಗ್ಡೆ ಅಧ್ಯಕ್ಷರಾಗಿ ಶ್ರೀ ಆರ್. ಶಶಿಧರ್, ಪ್ರಧಾನ ಕಾರ್ಯದರ್ಶಿಗಳಾಗಿ ಸರ್ವಾನುಮತದಿಂದ ಆಯ್ಕೆಯಾಗಿದ್ದರು. ಬೆ.ಪು. ನಿರಂಜನ, ಶ್ರೀ ವೇಮಗಲ್ ಸೋಮಶೇಖರ್, ಶ್ರೀ ಆರ್. ವೆಂಕಟೇಶಮೂರ್ತಿ, ಶ್ರೀಮತಿ ಎಸ್.ವೈ. ನಿರ್ಮಲಾ, ಡಾ. ಕರುಣಾ ವಿಜಯೇಂದ್ರ, ಶ್ರೀಮತಿ ಸ್ಮಿತಾರೆಡ್ಡಿ, ಡಾ. ಟಿ.ವಿ. ನಾಗರಾಜ್, ಶ್ರೀ ಸುಂಕಂ. ಗೋವರ್ಧನ್, ಶ್ರೀ ವೇ.ಸು. ಮೂರ್ತಿ, ಶ್ರೀ ಕೃಷ್ಣಯ್ಯ ಹಾಗೂ ಶ್ರೀ ಎಂ. ಲೋಕೇಶ್, ಶ್ರೀ ಎಂ.ಆರ್. ಚಂದ್ರಶೇಖರ್, ಶ್ರೀ ಎಂ. ಭಾಗ್ಯರೇಖಾ, ಡಾ. ಬೆಂ.ಶಾ. ಶ್ಯಾಮಲಾ ರತ್ನಕುಮಾರಿ, ಡಾ. ಹರಿಹರ ಶ್ರೀನಿವಾಸ್, ಶ್ರೀ ಜಿ.ಕೆ. ದೇವರಾಜಸ್ವಾಮಿ, ಶ್ರೀ ಬಿ.ಎನ್. ಗುರುಪ್ರಸಾದ್ ಕಾರ್ಯಕಾರಿ ಸಮಿತಿಯ ಸದಸ್ಯರಿದ್ದು, ಘಟಕವು ಕ್ರಿಯಾಶೀಲವಾಗಿ ಕಾರ್ಯ ನಿರ್ವಹಿಸುತ್ತಿದೆ.



ಬೆಂಗಳೂರು ನಗರ ಜಿಲ್ಲಾ ಘಟಕವು ಬೆಂಗಳೂರು ಪುರೋಭಿವೃದ್ಧಿಗೆ ಶ್ರಮಿಸಿದ ಮಹನೀಯರ ಬಗ್ಗೆ ಉಪನ್ಯಾಸ ಕಾರ್ಯಕ್ರಮಗಳನ್ನು ಆಯೋಜಿಸಿತ್ತು. ಜೂನ್ ೨, ೨೦೧೧ರಂದು ಬಸವನಗುಡಿಯ ಮಹಿಳಾ ಸೇವಾ ಸಮಾಜದಲ್ಲಿ ಸ್ಮಿತಾ ರೆಡ್ಡಿಯವರು ಶ್ರೀಮತಿ ಕಮಲಮ್ಮ ದಾಸಪ್ಪನವರ ಬಗ್ಗೆ ಮಾತನಾಡಿದರು. ಬೆಂಗಳೂರು ಜಿಲ್ಲಾ ಘಟಕವೂ "ಐತಿಹಾಸಿಕ ಪರಂಪರೆ ಉಳಿಸಿ ಆಂದೋಲನ"ವನ್ನು ಹೆಚ್ಚು ಪರಿಣಾಮಕಾರಿಯಾಗಿಸಲೂ ವಿಶೇಷವಾಗಿ ಆಸ್ಥೆವಹಿಸಿ. ಅಂತರ ಪ್ರೌಢಶಾಲೆ ಮತ್ತು ಅಂತರ ಕಾಲೇಜು ಪ್ರಬಂಧ ಮತ್ತು ಭಾಷಣ ಸ್ಪರ್ಧೆ ಕುರಿತಾಗಿ ಬೆಂಗಳೂರಿನ ಶಾಲಾ-ಕಾಲೇಜುಗಳಲ್ಲಿ ಪ್ರಚಾರ ನೀಡಿತು. ಸ್ಪರ್ಧಾ ಕಾರ್ಯಕ್ರಮಗಳನ್ನು ಬೆಂಗಳೂರಿನ ಚಾಮರಾಜಪೇಟೆಯಲ್ಲಿರುವ ಶ್ರೀ ಚಾಮರಾಜೇಂದ್ರ ಸಂಸ್ಕೃತ ಕಾಲೇಜಿನಲ್ಲಿ ದಿನಾಂಕ ೩೦-೭-೨೦೧೧ರಂದು ಪ್ರೌಢಶಾಲೆಗಳಿಗಾಗಿಯೂ ೩೧-೭-೨೦೧೧ರಂದು ಕಾಲೇಜು ವಿದ್ಯಾರ್ಥಿಗಳಿಗಾಗಿಯೂ ನಡೆಯಿತು. ಪ್ರೌಢಶಾಲಾ ವಿಭಾಗದಲ್ಲಿ ಪ್ರಬಂಧ ಸ್ಪರ್ಧೆಗೆ ೧೨೨ ವಿದ್ಯಾರ್ಥಿಗಳು ಮತ್ತು ಭಾಷಣ ಸ್ಪರ್ಧೆಗೆ ೮೮ ವಿದ್ಯಾರ್ಥಿಗಳು ಭಾಗವಹಿಸಿದ್ದು ಒಟ್ಟಾರೆಯಾಗಿ ೨೨ ಶಾಲೆಗಳಿಂದ ೨೧೦ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಕಾಲೇಜು ವಿಭಾಗದಲ್ಲಿ ಪ್ರಬಂಧ ಸ್ಪರ್ಧೆಗೆ ೯೨ ವಿದ್ಯಾರ್ಥಿಗಳು ಮತ್ತು ಭಾಷಣ ಸ್ಪರ್ಧೆಗೆ ೪೨ ವಿದ್ಯಾರ್ಥಿಗಳು ಭಾಗವಹಿಸಿದ್ದು ಒಟ್ಟಾರೆಯಾಗಿ ೨೩ ಕಾಲೇಜುಗಳಿಂದ ೧೩೮ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಕಳೆದ ವರ್ಷಕ್ಕಿಂತ ಈ ಬಾರಿ ಶೇ.೪೫ ಹೆಚ್ಚು ವಿದ್ಯಾರ್ಥಿಗಳು ಭಾಗವಹಿಸಿದ್ದು ವಿಶೇಷವಾಗಿತ್ತು.



**ಹೊಸಪೇಟೆ ತಾಲ್ಲೂಕು ಘಟಕ:** ಡಾ. ಕೆ.ಎಂ. ಸುರೇಶ್, ಡಾ. ಎಂ. ಕೊಟ್ರೇಶ್, ಡಾ. ಟಿ. ಮಂಜುನಾಥ್, ಡಾ. ಕೆ. ರವೀಂದ್ರನಾಥ ಮತ್ತಿತರ ಸ್ನೇಹಿತರೊಡಗೂಡಿ ಬೇರೆ ಬೇರೆ ಸ್ಥಳಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹಗಳನ್ನು ಎಂದಿನಂತೆ ನಡೆಸಿಕೊಂಡು ಬರುತ್ತಿದೆ.

**ಉಡುಪಿ ಜಿಲ್ಲಾ ಘಟಕ:** ಡಾ. ಜಗದೀಶ್ ಶೆಟ್ಟಿ ಅವರ ಅಧ್ಯಕ್ಷತೆಯಲ್ಲಿ ಸ್ಥಳೀಯವಾಗಿ ಶಾಲಾ ಕಾಲೇಜುಗಳಲ್ಲಿ ಐ.ಪ.ಉ. ಕಾರ್ಯಕ್ರಮಗಳನ್ನು ಆಯೋಜಿಸಿ ಐತಿಹಾಸಿಕ ಅರಿವನ್ನು ಜಾಗೃತಗೊಳಿಸುವ ಕೆಲಸವನ್ನು ಮಾಡುತ್ತಿದೆ. ಬೆಂಗಳೂರಿನಿಂದ ಬಂದಿದ್ದ ಇತಿಹಾಸ ಅಕಾದೆಮಿಯ ಸದಸ್ಯರನ್ನು ಬಾರಕೂರಿಗೆ ಕರೆಯೊಯ್ದು ಮಾರ್ಗದರ್ಶನ ನೀಡಲಾಗಿತ್ತು.

**ಶಿವಮೊಗ್ಗ ಜಿಲ್ಲಾ ಘಟಕ:** ಬೆಕ್ಕಿನ ಕಲ್ಮಠದ ಸ್ವಾಮೀಜಿಯವರ ಪೋಷಣೆಯಲ್ಲಿ ಶ್ರೀ ಎಚ್.ಎಂ. ಚಂದ್ರಶೇಖರಪ್ಪ (ಅಧ್ಯಕ್ಷರು), ಶ್ರೀ ಜಯದೇವಪ್ಪ ಜೈನಕೇರಿ (ಪ್ರಧಾನ ಕಾರ್ಯದರ್ಶಿ), ಡಾ. ಎಸ್.ಜಿ. ಸಾಮಕ್, ಡಾ. ಬಿ. ಜಗದೀಶ್, ಡಾ. ಕೆಳದಿ ವೆಂಕಟೇಶ್ ಜೋಯಿಸ್, ಡಾ. ಕೆಳದಿ ಗುಂಡಾಜೋಯಿಸ್, ಡಾ. ಜಿ.ಪಿ. ಕಲ್ಲಾಪುರ ಮುಂತಾದವರ ಸಹಭಾಗಿತ್ವದಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಗಳ ಜೊತೆಗೆ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ನಡೆಸಿಕೊಂಡು ಬರುತ್ತಿದೆ.

**ಮೈಸೂರು ಜಿಲ್ಲಾ ಘಟಕ(ಮಂಡ್ಯ ಜಿಲ್ಲೆಯೂ ಸೇರಿ):** ಈ ಘಟಕವು ಕಾರ್ಯಾರಂಭ ಮಾಡಿದ್ದು, ಪ್ರೊ. ಚಂದ್ರರಾಜೇ ಅರಸ್ ಅವರ ಗೌರವಾಧ್ಯಕ್ಷತೆಯಲ್ಲಿ ಡಾ. ಎಚ್.ಎಸ್. ಉಷಾರಾಣಿ (ಕಾರ್ಯಾಧ್ಯಕ್ಷೆ), ಶ್ರೀ ತೈಲೂರು ವೆಂಕಟಕೃಷ್ಣ, ಡಾ. ಬಿ.ಪಿ. ಇಂದಿರಾ, ಡಾ. ಎಸ್. ಸದಾಶಿವ (ಉಪಾಧ್ಯಕ್ಷ), ಡಾ. ಬಿ.ವಿ. ಸುಧಾರಾಣಿ (ಪ್ರಧಾನ ಕಾರ್ಯದರ್ಶಿ), ಶ್ರೀ ಎಚ್.ಡಿ. ಹರೀಶ್ ಹಾಗೂ ಪ್ರೊ. ನಯೀಂ ಉರ್ ರೆಹಮಾನ್ (ಸಹ ಕಾರ್ಯದರ್ಶಿಗಳು) ಹಾಗೂ ಬಿ.ಎಸ್. ಸುಭದ್ರ ಖಜಾಂಚಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇತಿಹಾಸ ಕಾರ್ಯಾಗಾರ ಮಾಸಿಕ ಉಪನ್ಯಾಸ, ಐತಿಹಾಸಿಕ ಸ್ಥಳಗಳಿಗೆ ಪ್ರವಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಚಾರಿತ್ರಿಕ ಅರಿವನ್ನು ಮೂಡಿಸಲು ಶ್ರಮಿಸುತ್ತಿದೆ.

**ಬೆಳಗಾವಿ ಜಿಲ್ಲಾ ಘಟಕ;** ಡಾ. ಸ್ಮಿತಾ ಸುರೇಬಾನಕರ್, ಶ್ರೀ ಬಿ.ಆಯ್. ಚಿನಗೋಡಿ, ಡಾ. ಎಚ್.ಬಿ. ಕೋಲಕಾರ, ಡಾ. ಬಿ.ಆರ್. ಹಂದೂರು, ಶ್ರೀ ಮಂಜುನಾಥ ಹದ್ಲಿ ಮುಂತಾದವರ ನೇತೃತ್ವ ಮತ್ತು ಚಚಡಿಯ ಸರ್ಕಾರ ವ್ಹಿ.ಜಿ. ದೇಸಾಯಿ ಫೌಂಡೇಶನ್ ಅಧ್ಯಕ್ಷ ಶ್ರೀ ನಾಗರಾಜ ಈಶಪ್ಪನಾಯಕ ದೇಸಾಯಿ ಅವರ ಸಹಕಾರದೊಂದಿಗೆ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ.





ಬೆಳಗಾವಿ ಜಿಲ್ಲೆಯ ಬೈಲಹೊಂಗಲದಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿಯ ೨೫ನೆಯ ವರ್ಷಾಚರಣೆಯ ಸ್ಮರಣಾರ್ಹ ಇತಿಹಾಸ ಅಕಾಡೆಮಿಯ ಜಿಲ್ಲಾ ಘಟಕವು, ಕೆ.ಆರ್. ಸಿ. ಶಿಕ್ಷಣ ಸಂಸ್ಥೆಯ ಪದವಿ–ಪೂರ್ವ ಮಹಾವಿದ್ಯಾಲಯ ಹಾಗೂ ಸರ್ದಾರ ವಿ. ಜಿ. ದೇಸಾಯಿ ಫೌಂಡೇಶನ್ (ರಿ) ಚಚಡಿ ಇವರ ಸಂಯುಕ್ತಾಶ್ರಯದಲ್ಲಿ ಪ್ರಪ್ರಥಮ ಬಾರಿಗೆ ರಾಜ್ಯ ಮಟ್ಟದ "ಇತಿಹಾಸ ಮತ್ತು ಸಂಸ್ಕೃತಿ ಸಮ್ಮೇಳನ–೨೦೧೨" ಅನ್ನು ಏಪ್ರೀಲ್ ೨೫–೨೬ ರಂದು ಆಯೋಜಿಸಿತ್ತು. ದಿನಾಂಕ ೨೫ ರಂದು ಬೈಲಹೊಂಗಲದ ಚೆನ್ನಮ್ಮ ಪ್ರತಿಮೆಗೆ ಮಾಲಾರ್ಪಣೆ ಮಾಡಿ, ಡೊಳ್ಳು, ಭಜನೆ, ಹಲಗೆ, ಕರಡಿ ಮಜಲು, ಸಂಬಾಳ ವಾದನಗಳೊಂದಿಗೆ ಮೆರವಣಿಗೆಯನ್ನು ಬೈಲಹೊಂಗಲದ ರುದ್ರಾಕ್ಷಿ ಮಠದ ಪರಮ ಪೂಜ್ಯ ಶ್ರೀ ಮ.ನಿ.ಪ್ರ.ಸ್ವ ಬಸವಲಿಂಗ ಮಹಾಸ್ವಾಮಿಗಳು ಉದ್ಘಾಟಿಸಿದರು. ಮೆರವಣಿಗೆಯು "ಒಕ್ಕುಂದ"ದ ಶ್ರೀ ಕಲ್ಲೇಶ್ವರ ದೇವಸ್ಥಾನದ ಸ್ಥಬ್ಧ ಚಿತ್ರ ಹಾಗೂ ವಾದ್ಯ ಮೇಳಗಳೊಂದಿಗೆ ವಿಜೃಂಭಿಸಿತು. ಪ್ರಾಚೀನ ಕಾಲದ ನಾಣ್ಯ, ನೋಟು, ಸ್ಟಾಂಪುಗಳನ್ನು ಭರತಕುಮಾರ ಸುಣಗಾರ, ರೇಣುಕಾ ಮಾರ್ಕಂಡೇಯರವರ ಪ್ರದರ್ಶನವನ್ನು, ಸರ್ದಾರ ವಿ. ಜಿ. ದೇಸಾಯಿ ಫೌಂಡೇಶನ್ ಸಂಗ್ರಹಿಸಿದ ಯುದ್ಧ ಸಂಬಂಧಿತ ಶಸ್ತ್ರಾಸ್ತ್ರಗಳ ಪ್ರದರ್ಶನವನ್ನು, ಖ್ಯಾತ ಚಿತ್ರ ಕಲಾವಿದರಾದ ಬಿ. ಮಾರುತಿಯವರ ಇತಿಹಾಸ ಸಂಬಂಧಿತ ಕಲಾತ್ಮಕ ಭಾವಚಿತ್ರಗಳ ಪ್ರದರ್ಶನವನ್ನು ಹಾಗೂ ಶಿವಾನಂದ ಕಂಬಾರ ಮಣ್ಣಿನಿಂದ ತಯಾರಿಸಿದ ಜಾನಪದ ಕಲಾಕೃತಿಗಳ ಪ್ರದರ್ಶನವನ್ನು, ಸನ್ಮಾನ್ಯ ಶ್ರೀ ನಾಗರಾಜ ಈ. ದೇಸಾಯಿ ಉದ್ಘಾಟಿಸಿದರು.

ದಿನಾಂಕ ೨೬ ರಂದು ನಡೆದ ಸಮ್ಮೇಳನದ ಉದ್ಘಾಟನಾ ಸಮಾರಂಭದಲ್ಲಿ ಭಾರತೀಯ ಪುರಾತತ್ತ್ವ ಸರ್ವೇಕ್ಷಣ ಇಲಾಖೆಯ ಡಾ. ಎಸ್. ವಿ. ವೆಂಕಟೇಶಯ್ಯ, ಸಮ್ಮೇಳನದ ಸರ್ವಾಧ್ಯಕ್ಷ ಸ್ಥಾನ ವಹಿಸಿದ್ದರು. ಕೆ.ಆರ್.ಸಿ. ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಡಾ. ವಿಶ್ವನಾಥ ಆಯ್. ಪಾಟೀಲ, ಉದ್ಘಾಟಿಸಿದರು. ಸಮ್ಮೇಳನದ ಸವಿನೆನಪಿಗಾಗಿ "ಪ್ರಾಚ್ಯನಿಧಿ" ಎಂಬ ಸಂಸ್ಮರಣ ಗ್ರಂಥವನ್ನು ಧಾರವಾಡದ ಪ್ರಾಚೀನ ಭಾರತದ ಇತಿಹಾಸ ವಿಭಾಗದ ಡಾ. ಶ್ರೀನಿವಾಸ ಪಾಡಿಗಾರ ಬಿಡುಗಡೆ ಮಾಡಿದರು. ಬೆಳಗಾವಿಯ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರಾಯೋಜಕತ್ವದಲ್ಲಿ ಮೂರು ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಯಿತು. ಮೊದಲ ಗೋಷ್ಠಿಯಲ್ಲಿ ಧಾರವಾಡದ ಕನ್ನಡ ಅಧ್ಯಯನ ಪೀಠದ ಪ್ರಾಧ್ಯಾಪಕರಾದ ಡಾ. ಶ್ರೀಮತಿ ಶಾಂತಾ ಇಮ್ರಾಪೂರ "ಜನಪದ ಸಾಹಿತ್ಯದಲ್ಲಿ ಮಹಿಳೆಯರು" ಎಂಬ ವಿಷಯದ ಮೇಲೆ, ಡಾ. ಶ್ರೀಮತಿ ಕರುಣಾ ವಿಜಯೇಂದ್ರ "ಕರ್ನಾಟಕ ನೃತ್ಯ ಪರಂಪರೆ" ಕುರಿತು, ಹಾಗೂ ಕನ್ನಡ ವಿ.ವಿ. ಹಸ್ತ ಪ್ರತಿ ವಿಭಾಗದ ಪ್ರಾಧ್ಯಾಪಕರಾದ ಡಾ. ಎಸ್. ಎಸ್. ಅಂಗಡಿ "ಹಸ್ತ ಪ್ರತಿಗಳು– ಭಾಷೆ ಮತ್ತು ಸಂಸ್ಕೃತಿ" ಎಂಬ ವಿಷಯದ ಮೇಲೆ ಪ್ರಬಂಧ ಮಂಡಿಸಿದರು.

ಈ ಗೋಷ್ಠಿಯ ಅಧ್ಯಕ್ಷತೆಯನ್ನು ವಹಿಸಿದ ಡಾ. ದೇವರಕೊಂಡಾರೆಡ್ಡಿ "ಶಾಸನಗಳಲ್ಲಿ ಸಂಸ್ಕೃತಿ" ಎಂಬ ಪ್ರಬಂಧವನ್ನು ಮಂಡಿಸಿ ಗೋಷ್ಠಿಯನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. "ದೃಶ್ಯ-ಶ್ರವ್ಯ ಮಾಧ್ಯಮದಲ್ಲಿ ಸಾಂಸ್ಕೃತಿಕ ಪರಂಪರೆ" ಎಂಬ ಮೂರನೇ ಗೋಷ್ಠಿಯಲ್ಲಿ, ಚಿತ್ರಕಲಾವಿದರಾದ ಶ್ರೀ ಸುಭಾಷ್ ಎಂ. ಕಮ್ಮಾರ್ "ಶಿಲ್ಪಗಳಲ್ಲಿ ರೇಖಾ ಲಾಲಿತ್ಯ" ಎಂಬ ವಿಷಯ ಕುರಿತಾಗಿ, ಬೆಳಗಾವಿಯ ಸಾಫ್ಟ್‌ವೇರ್ ಇಂಜಿನಿಯರ್ ಶ್ರೀ ಮಂಜುನಾಥ ಹದ್ಲಿಯವರು "ಸಾಂಸ್ಕೃತಿಕ ಪರಂಪರೆ ಸಂರಕ್ಷಣೆಯಲ್ಲಿ ತಂತ್ರಜ್ಞಾನದ ಪಾತ್ರ" ದ ಕುರಿತಾಗಿ ಪ್ರಬಂಧವನ್ನು ಮಂಡಿಸಿದರು. ಇದೇ ಸಂದರ್ಭದಲ್ಲಿ ಇತಿಹಾಸ ಸಂಶೋಧಕರನ್ನು, ಸಂಘಟಕರನ್ನು, ಸಾಧಕರನ್ನು, ಬೆಳಗಾವಿ ಜಿಲ್ಲಾ ಘಟಕದ ಪರವಾಗಿ ಸನ್ಮಾನಿಸಲಾಯಿತು. ಪುರಾತತ್ವಜ್ಞ ಡಾ. ಎಸ್.ಕೆ. ಜೋಶಿ ಸಮಾರೋಪ ಭಾಷಣ ಮಾಡಿದರು. ಕಾರ್ಯಕ್ರಮದಲ್ಲಿ ಬೆಳಗಾವಿ ಜಿಲ್ಲಾ ಘಟಕದ ಪದಾಧಿಕಾರಿಗಳು, ಕೆ. ಆರ್.ಸಿ. ಕಾಲೇಜಿನ ಪ್ರಾಧ್ಯಾಪಕರು, ವಿದ್ಯಾರ್ಥಿಗಳು, ಸುತ್ತಮುತ್ತಲಿನ ಡಿ.ಎಡ್ ಕಾಲೇಜಿನ ೫೦೦ ಕ್ಕೂ ಹೆಚ್ಚು ಪ್ರಶಿಕ್ಷಣಾರ್ಥಿಗಳು, ಉಪನ್ಯಾಸಕರು, ಹಾಗೂ ವಿಶೇಷ ಆಹ್ವಾನಿತರು, ಇತಿಹಾಸಕ್ತರು ಆಗಮಿಸಿ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು




**ಕೃತಜ್ಞತೆ**

ಕರ್ನಾಟಕ ಇತಿಹಾಸ ಅಕಾದೆಮಿಯನ್ನು ಸೋದರ ಸಂಸ್ಥೆ ಎಂಬಂತೆ ಪರಿಗಣಿಸಿ ಸಹಕರಿಸುತ್ತಾ ಬಂದಿರುವ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು, ಅಧಿಕಾರಿಗಳು ಹಾಗೂ ಸಿಬ್ಬಂದಿ; ಅಕಾದೆಮಿಯ ವಾರ್ಷಿಕ ಸಮ್ಮೇಳನ ಸಂದರ್ಭದಲ್ಲಿ ವಸ್ತು ಪ್ರದರ್ಶನ ಏರ್ಪಡಿಸಿ ಸಹಕರಿಸುತ್ತಿರುವ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗ; ೨೦೧೧ರ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮದ ಉದ್ಘಾಟನಾ ಸಮಾರಂಭಕ್ಕೆ ಆಶ್ರಯ ನೀಡಿ ಸಹಕರಿಸಿರುವ ಬೆಂಗಳೂರಿನ ಜೈನ್ ಮಹಾವಿದ್ಯಾಲಯದ ಆಡಳಿತ ಮಂಡಳಿ, ಅಧಿಕಾರಿ ಹಾಗೂ ಸಿಬ್ಬಂದಿ ವರ್ಗ, ಬೆಂಗಳೂರಿನ ದಿ ಮಿಥಿಕ್ ಸೊಸೈಟಿಯ ಪದಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗ, ಬಿ.ಎಂ.ಶ್ರೀ ಪ್ರತಿಷ್ಠಾನದ ಪದಾಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗ; ಶ್ರೀ ಬೈಸಾನಿ ರುಕ್ಮಣಮ್ಮ ರತ್ನಂಶೆಟ್ಟಿ ಕುಟುಂಬದ ಸೇವಾ ಟ್ರಸ್ಟ್‌ನ ಶ್ರೀ ಅಶೋಕ್‌ಕುಮಾರ್, ವಾಗ್ದೇವಿ ಮುದ್ರಣಾಲಯದ ಶ್ರೀ ಪ್ರಭು ಮತ್ತು ಸಿಬ್ಬಂದಿ ವರ್ಗ; ಶ್ರೀ ದಯಾನಂದ ಸಾಗರ್ ಶಿಕ್ಷಣ ಸಂಸ್ಥೆಗಳ ಕಾರ್ಯದರ್ಶಿ ಶ್ರೀ ಗಾಳಿಸ್ವಾಮಿ, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಗೆ ದತ್ತಿ ನೀಡಿರುವ ಡಾ. ಬಾ.ರಾ. ಗೋಪಾಲ್ ಕುಟುಂಬ ವರ್ಗ, ಸಮ್ಮೇಳನಾಧ್ಯಕ್ಷರ ಗೌರವ ಸ್ಮರಣ ಫಲಕವನ್ನು ಪ್ರಾಯೋಜಿಸಿರುವ

ಶ್ರೀ ಕೆ. ಅಭಿಶಂಕರ ಕುಟುಂಬವರ್ಗ, ಡಾ. ಬಾ.ರಾ. ಗೋಪಾಲ್ ಪ್ರಶಸ್ತಿಯ ಸ್ಮರಣ ಫಲಕವನ್ನು ಪ್ರಾಯೋಜಿಸುತ್ತಾ ಬಂದಿರುವ ಶ್ರೀ ವೇಮಗಲ್ ಸೋಮಶೇಖರ್, ಇತಿಹಾಸ ದರ್ಶನ ವಾರ್ಷಿಕ ಸಂಚಿಕೆಯ ಮುದ್ರಣಕ್ಕೆ ಆಶೀರ್ವಾದ ಪೂರ್ವಕವಾಗಿ ಪ್ರತಿ ವರ್ಷದಂತೆ ಈ ವರ್ಷವೂ ರೂ. ೨೫.೦೦೦ (ರೂ. ಇಪ್ಪತ್ತೈದು ಸಾವಿರ) ನೆರವು ನೀಡಿರುವ ಬಾಳೇಹೊನ್ನೂರಿನ ಶ್ರೀಮದ್ರಂಭಾಪುರಿ ಮಹಾಸಂಸ್ಥಾನದ ಜ. ಶ್ರೀ. ಪ್ರಸನ್ನ ರೇಣುಕ ವೀರಸೋಮೇಶ್ವರರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮೀಜಿ ಅವರಿಗೆ ಅಕಾದೆಮಿಯ ೨೫ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿ ಸಮ್ಮೇಳನದ ಯಶಸ್ಸಿಗೆ ಕಾರಣರಾಗಿರುವ ಸರ್ವರಿಗೂ: ಅಕಾದೆಮಿಯ 'ಇತಿಹಾಸ ದರ್ಶನ' ೨೬ನೆಯ ಸಂಪುಟ (ಬೆಂಗಳೂರಿನಲ್ಲಿ ಜರುಗಿದ ೨೫ನೆಯ ಸಮ್ಮೇಳನದ್ದು)ವನ್ನು ಸಂಪಾದಿಸಿಕೊಟ್ಟಿರುವ ಸಂಪಾದಕದ್ವಯರಾದ ಡಾ. ಎಂ.ಜಿ. ನಾಗರಾಜ್ ಹಾಗೂ ಡಾ. ಪಿ.ವಿ. ಕೃಷ್ಣಮೂರ್ತಿ ಅವರಿಗೂ, ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರು ಹಾಗೂ ಸಿಬ್ಬಂದಿ ವರ್ಗದವರಿಗೆ ಅಕಾದೆಮಿಯು ಆಭಾರಿಯಾಗಿದೆ.

ಕಾರ್ಯಕಾರಿ ಸಮಿತಿಯ ಅನುಮತಿ ಮೇರೆಗೆ

**ಡಾ. ದೇವರಕೊಂಡಾರೆಡ್ಡಿ**
ಅಧ್ಯಕ್ಷರು

**ಡಾ ಎಂ.ಜಿ. ನಾಗರಾಜ್, ಡಾ. ಬಿ. ರಾಜಶೇಖರಪ್ಪ**
ಉಪಾಧ್ಯಕ್ಷರುಗಳು

**ಎಸ್. ರಾಜೇಂದ್ರಪ್ಪ**
ಪ್ರಧಾನ ಕಾರ್ಯದರ್ಶಿ

**ಡಾ. ತುಳಸಿರಾಮನಾಯಕ**
ಕೋಶಾಧಿಕಾರಿ

**ಡಾ. ಪಿ.ವಿ. ಕೃಷ್ಣಮೂರ್ತಿ, ಡಾ. ಡಿ.ಎಸ್.ಯೋಗೀಶ್ವರಪ್ಪ**
ಕಾರ್ಯದರ್ಶಿಗಳು



**ಐತಿಹಾಸಿಕ ಪರಂಪರೆ ಕಾರ್ಯಕ್ರಮ ಬಾಗಲಕೋಟೆ**




**ಐತಿಹಾಸಿಕ ಪರಂಪರೆ ಕಾರ್ಯಕ್ರಮ ಬೀದರ್**



**ಐತಿಹಾಸಿಕ ಪರಂಪರೆ ಕಾರ್ಯಕ್ರಮ ಗದಗ ಜಿಲ್ಲಾ ಘಟಕ**



**ಐತಿಹಾಸಿಕ ಪರಂಪರೆ ಕಾರ್ಯಕ್ರಮ ಉಡುಪಿ**

ಕರ್ನಾಟಕ ಇತಿಹಾಸ ಅಕಾದೆಮಿ (ರಿ)



# ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ



- ಹಳೆಯ ಕೆರೆಗಳ ನಿರ್ಲಕ್ಷ್ಯ ತಂದಿತು ನಮಗೆ ದುರ್ಭಿಕ್ಷ
- ಪ್ರಾಚೀನ ಶಾಸನಗಳ ನಾಶ ಇತಿಹಾಸ ಪುರುಷನಿಗೆ ಪಾಶ
- ಕೋಟೆ ಕೊತ್ತಲದ ಕಲ್ಲು ಕಿತ್ತರೆ ಪ್ರಾಚೀನ ಪರಂಪರೆಯ ಪಂಚಾಂಗ ಕಿತ್ತಂತೆ



ನೆರವು : ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ

೨೦೧೧-೧೨

ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ ಭಿತ್ತಿ ಪತ್ರ





ಅಶೋಕನ ಶಿಲ್ಪಗಳು, ಸನ್ನತಿ. ಕೃಪೆ : ಎ.ಎಸ್.ಐ.

ISBN-978-81-921255-2-7




ಲಕ್ಷ್ಮೀ ಮುದ್ರಣಾಲಯ LAKSHMI MUDRANALAYA 080-26613123